

# ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ವಿಭವ ಸಂವತ್ಸರದ ವರದಿ

೧೯೨೯

ಶ್ರೀಃ

ಕರ್ಣಾಟಕ ಸಾಹಿತ್ಯ ಪರಿಷತ್ತು

---

# ವಿಭವ ಸಂವತ್ಸರದ ವರದಿ

---

೧. ಕಳೆದ ವರ್ಷ ನಿಜಾಂ ಕರ್ಣಾಟಕಕ್ಕೆ ಸೇರಿದ ಕಲ್ಬುರ್ಗಿಯಲ್ಲಿ ನೆರೆದಿದ್ದ ಹದಿನಾಲ್ಕನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಸದಸ್ಯರಿಗೂ ಸಮ್ಮೇಳನದ ಕೊನೆಯ ದಿವಸ ನಡೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ಕೂಡಿದ್ದ ಸದಸ್ಯರಿಗೂ ಅರ್ಪಿಸಿದ ಪರಿಷತ್ತಿನ ಪ್ರಭವ ಸಂವತ್ಸರದ ವರದಿಯ ಆದಿ ಭಾಗದಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಳನವು ಇಡೀ ಕರ್ಣಾಟಕದ ಯಾವ ಯಾವ ಪ್ರಾಂತಗಳಲ್ಲಿ ಅಂದಿನ ವರೆಗೆ ಎಷ್ಟೆಷ್ಟು ಸಾರಿ ಸೇರಿದ್ದಿತೆಂಬುದನ್ನು ತಿಳಿಸುವ ಸಂದರ್ಭದಲ್ಲಿ ಈ ಪ್ರಕಾರ, ಎಂದರೆ—

“ಕರ್ಣಾಟಕ ಸಾಹಿತ್ಯ ಸಮ್ಮೇಳನವು ಇದುವರೆಗೆ ಮೈಸೂರು ಸಂಸ್ಥಾನದಲ್ಲಿ ಏಳು ಸಲವೂ, ಮುಂಬಯಿ ಕರ್ಣಾಟಕದಲ್ಲಿ ಮೂರು ಬಾರಿಯೂ, ಮದರಾಸು ಕರ್ಣಾಟಕದಲ್ಲಿ ಮೂರಾವೃತ್ತಿಯೂ ಕೂಡಿರುತ್ತದೆ. ನಿಜಾಂ ಕರ್ಣಾಟಕ, ಮುಂಬಯಿ ಉತ್ತರ ಕನ್ನಡ ಜಿಲ್ಲೆ, ಕೊಡಗು ಸೀಮೆ—ಈ ಪ್ರಾಂತಗಳಲ್ಲಿ ಸಮ್ಮೇಳನವು ಕೂಡಲು ಇದುವರೆಗೆ ಅವಕಾಶ ದೊರೆಯಲಿಲ್ಲ. ಈ ಸಾರಿ ನಮ್ಮ ಪುಣ್ಯೋದಯದಿಂದ ನಿಜಾಂ ಕರ್ಣಾಟಕದ ಕಲ್ಬುರ್ಗಿಯ ಕರ್ಣಾಟಕ ಸಂಘದವರು ಪರಿಷತ್ತಿಗೆ ಆಹ್ವಾನವನ್ನು ಕೊಟ್ಟು ಈ ಸಮ್ಮೇಳನವನ್ನು ನಡೆಯಿಸುವ ಕಾರ್ಯವನ್ನು ಕೈಕೊಂಡುದಕ್ಕಾಗಿ ಪರಿಷತ್ತು ಆ ಸಂಘದವರನ್ನು ಬಹಳವಾಗಿ ಕೊಂಡಾಡಿ ಅವರಿಗೆ ಧನ್ಯವಾದಗಳನ್ನು ಅರ್ಪಿಸುತ್ತದೆ. ಮುಂದಣ ಎರಡು ವರುಷಗಳಲ್ಲಿ ಸಮ್ಮೇಳನವು ಉಳಿದಿರುವ ಮುಂಬಯಿ ಉತ್ತರ ಕನ್ನಡ ಜಿಲ್ಲೆಯಲ್ಲಿಯೂ, ಕೊಡಗು ಸೀಮೆಯಲ್ಲಿಯೂ, ಅಲ್ಲಿಯ ಕರ್ಣಾಟಕ ಭಾಷಾಭಿಮಾನಿಗಳ ಉತ್ಸಾಹೌದಾರ್ಯಗಳಿಂದ, ನಡೆಯುವ ಪಕ್ಷಕ್ಕೆ ಕರ್ಣಾಟಕ ಮಂಡಲದ ಮುಖ್ಯ ಪ್ರದೇಶಗಳಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಪರ್ಯಟನವು ಒಂದು ಸಾರಿ ಮುಗಿದಂತಾಗುವುದು” ಎಂದು ವಿಜ್ಞಾಪಿಸಿಕೊಂಡೆವಷ್ಟೆ! ಈ ಸಾರಿ ಕರ್ಣಾಟಕ ಸಾಹಿತ್ಯ ಸಮ್ಮೇಳನವನ್ನು ಕೊಡಗು ಪ್ರಾಂತಕ್ಕೆ ರಾಜಧಾನಿಯಾದ ಮಡಿಕೇರಿಯಲ್ಲಿ ನೆರೆಯಿಸಬೇಕೆಂದು ಅಲ್ಲಿಯ ಪ್ರಮುಖರು ಕೆಲವರು ಮಾಡಿದ ಪ್ರಯತ್ನವು ಹಲವು ಕಾರಣಗಳಿಂದ ಫಲಿಸಲಿಲ್ಲ. ಮುಂಬಯಿ ಉತ್ತರ ಕನ್ನಡ ಜಿಲ್ಲೆಯಿಂದ ಆಹ್ವಾನವಾವುದೂ ಬರಲಿಲ್ಲ. ಅಷ್ಟೇನೂ ದೊಡ್ಡದಲ್ಲದ

ಪರಿಷತ್ತಿನ ಸದಸ್ಯರ ಪಟ್ಟಿಯನ್ನು ಪರಿಶೀಲಿಸಿ ನೋಡಿದರೆ ಅಲ್ಲಿಯ ಭಾಷಾಭಿಮಾನಿಗಳಾರೂ ಪರಿಷತ್ತಿನ ಸದಸ್ಯರಾಗದೆಯಿರುವ ಶೋಚನೀಯ ವಿಷಯವು ಹೊರಪಡುವುದು. ಇದಕ್ಕೇನು ಕಾರಣವೋ ನಾವರಿಯೆವು. ಒಂದು ವೇಳೆ ಪರಿಷತ್ತಿನ ಕೂಗು ಅಷ್ಟು ದೂರ ವ್ಯಾಪಿಸದೋ ಏನೋ! ಸಂದರ್ಭಗಳೆಲ್ಲವೂ ಈ ಬಗೆಯಲ್ಲಿ ಆಶೆಯನ್ನು ಹುಟ್ಟಿಸದವುಗಳಾಗಿಯೂ, ಕ್ಷಿತಿಜವು ಮಂಕಾಗಿಯೂ ಇರಲು, ಬೆಳಗಾಂವಿಯ ಕಡೆಯಿಂದ ಬೆಳಕಿನ ಕಿರಣ ಬಂದುದು ಪರಿಷತ್ತಿನ ಭಾಗ್ಯೋದಯ. ೧೯೨೫ನೆಯ ಇಸವಿಯಲ್ಲಿ ಬೆಳಗಾಂವಿಯ ಮಹಾಜನರು ಹನ್ನೊಂದನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನವನ್ನು ತಮ್ಮ ಸ್ಥಳದಲ್ಲಿ ಕೂಡಿಸಿ ಮೇಲಕ್ಕೆತ್ತಿದ್ದ ಕೀರ್ತಿಧ್ವಜವನ್ನು, ಅವರು ಮರಳಿ ಅದೇ ಸ್ಥಳದಲ್ಲಿ ಇಷ್ಟು ಬೇಗನೆ ಹದಿನೈದನೆಯ ಸಮ್ಮೇಳನವನ್ನು ಕೂಡಿಸಿರುವುದರಿಂದ, ಮತ್ತಷ್ಟು ಮೇಲಕ್ಕೆತ್ತಿ ನಿಲ್ಲಿಸಿ ಕರ್ಣಾಟಕ ಭಾಷಾ ಸೇವೆಯಲ್ಲಿಯೂ ಇಡೀ ಕರ್ಣಾಟಕದ ಸರ್ವತೋಮುಖವಾದ ಏಳಿಗೆಯಲ್ಲಿಯೂ ತಮಗಿರುವ ಉತ್ಸಾಹವನ್ನು ಕಾರ್ಯತಃ ಪ್ರದರ್ಶಿಸಿದುದಕ್ಕಾಗಿ ಆ ಮಹಾಜನಗಳಿಗೆ ಅವ್ಯಾಜವಾದ ಅಭಿನಂದನಗಳನ್ನು ಅರ್ಪಿಸುವುದು ಪರಿಷತ್ತಿನ ಪ್ರಥಮ ಕರ್ತವ್ಯ. ಸಾಹಿತ್ಯ ಸಮ್ಮೇಳನದೊಡನೆ ನಡೆಯಿಸಬೇಕೆಂದಿರುವ ಇತರ ಎಲ್ಲ ಪರಿಷತ್ತುಗಳೂ ಪೂರ್ಣವಾಗಿ ಯಶಸ್ವಿಯಾಗಲೆಂಬುದು ಪರಿಷತ್ತಿನ ಆಶಂಸೆ.

ಮಹನೀಯರೇ, ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾಗಿ ಈ ಮೇ ತಿಂಗಳಿಗೆ ೧೪ ವರ್ಷಗಳಾದುವು. ಮನುಷ್ಯನ ಜೀವಮಾನದೊಡನೆ ಹೋಲಿಸಿ ನೋಡಿದರೆ ೧೪ ವಯಸ್ಸಿಗೆ ಹುಡುಗ ಹುಡುಗಿಯರಿಗೆ ಎಳಜೌವನವು ತಲೆದೋರುವಂತೆ ಪರಿಷತ್ತಿಗೆ ಯೌವನೋದಯ ಕಾಲವು ಪ್ರಾಪ್ತವಾಗಿರಬೇಕಷ್ಟೆ! ಆದರೆ ಪರಿಷತ್ತಿಗೆ ಪ್ರತಿ ವರ್ಷವೂ ವಯಸ್ಸು ಹೆಚ್ಚುತ್ತ ಹೋದರೂ ಅದಕ್ಕೆ ತಕ್ಕ ಪೋಷಣೆ ಸಾಲದೆ ಅದು ಇನ್ನೂ ಶೈಶವಾವಸ್ಥೆಯಲ್ಲೇ ಇರುವುದೆಂಬ ನೀಲಾಂಬರೀ ರಾಗವನ್ನು ತಮ್ಮ ಮುಂದೆ ಪ್ರತಿ ವರ್ಷವೂ ಆಲಾಪನೆ ಮಾಡುವ ಸಂದರ್ಭವು ಒದಗಿರುವುದು ಅತಿ ಶೋಚನೀಯವಾದುದು. ಪರಿಷತ್ತಿನ ದಾರ್ಢ್ಯಕ್ಕೂ ಅದರ ಬೆಳವಣಿಗೆಗೂ ಅದರ ಸದಸ್ಯರ ಪಟ್ಟಿಯು ಉದ್ದವೇ ಗುರುತು. ನಾವು ತಮಗೆ ಹಿಂದಣ ವರ್ಷಗಳ ವರದಿಗಳಲ್ಲಿ ಅರಿಕೆಮಾಡಿಕೊಂಡಂತೆ ಆ ಪಟ್ಟಿ ಬೆಳೆದಷ್ಟೂ ಅದರ ದಾರ್ಢ್ಯವು ಹೆಚ್ಚು, ಮೊಟಕಾದಷ್ಟೂ ಕಡಿಮೆ. ಅಕ್ಷಯ ಸಂವತ್ಸರದ ವರದಿಯಲ್ಲಿ, ''ಪರಿಷತ್ತಿನ ಸದಸ್ಯರ ಪಟ್ಟಿಯು ಒಂದು ಮೈಲಿಯಷ್ಟು ಬೆಳೆಯಬೇಕು; ಆಗ ನಮಗೆ ತೃಪ್ತಿ'' ಎಂದು ತಮಗೆ ವಿಜ್ಞಾಪಿಸಿದೆವು. ಅಕ್ಷಯ ಸಂವತ್ಸರಾಂತದಲ್ಲಿ ಸದಸ್ಯರ ಸಂಖ್ಯೆ ೧೪೮; ಅದು ಪ್ರಭವ ಸಂವತ್ಸರಾಂತದಲ್ಲಿ ೧೪೫ಕ್ಕೆ ಇಳಿಯಿತು; ವಿಭವ ಸಂವತ್ಸರಾಂತದಲ್ಲಿಯೂ ಅಷ್ಟಕ್ಕೇ ನಿಂತಿರುವುದು. ಪಟ್ಟಿಯು ಬೆಳೆಯುವ ಚಿಹ್ನೆಗಳೇ ತೋರವು. ಈ ಕೊರತೆಯನ್ನು ನಿವಾರಣೆ ಮಾಡಿ ಪರಿಷತ್ತು ಯಾವ ಕಾರ್ಯವನ್ನು ನೆರವೇರಿಸಲು ಸ್ಥಾಪಿತವಾಯಿತೋ ಅದನ್ನು ಅದು ಲೋಪವಿಲ್ಲದೆ ನಡೆಯಿಸುವಂತೆ ಮಾಡುವುದು ಇಡೀ ಕರ್ಣಾಟಕದ ಕರ್ತವ್ಯವೆಂಬುದನ್ನು ನಾವು ಮರಳಿ ಮರಳಿ ಒತ್ತಿ ಒತ್ತಿ ಹೇಳುತ್ತೇವೆ.

ಮುಂದಣ ವರ್ಷಗಳಲ್ಲಿ ಪರಿಷತ್ತು ತಮ್ಮ ಮುಂದೆ ಈ ನೀಲಾಂಬರೀ ರಾಗವನ್ನು ಬಿಟ್ಟು ಹರ್ಷೋತ್ಕರ್ಷವನ್ನುಂಟುಮಾಡುವ ಕಲ್ಯಾಣೀ ರಾಗದ ಆಲಾಪನೆಯನ್ನು ಮಾಡಲು ಸಮರ್ಥವಾಗುವುದೆಂದು ಬಯಸೋಣ.

ಮೈಸೂರು ಸರ್ಕಾರದಿಂದ ಪರಿಷತ್ತಿಗೆ ಸಲ್ಲುತ್ತಿರುವ ೧೨೫ ರೂಪಾಯಿಗಳ ಮಾಸಾಶನವನ್ನು ಹೆಚ್ಚಿಸಿ ಕನಿಷ್ಠ ಪಕ್ಷ ವರ್ಷಕ್ಕೆ ೨,೦೦೦ ರೂಪಾಯಿಗಳ ವರ್ಷಾಶನವನ್ನು ಸದ್ಯಕ್ಕೆ ಐದು ವರ್ಷಗಳ ಕಾಲ ನಡೆಯಿಸಿಕೊಡಬೇಕೆಂದು ಪರಿಷತ್ತು ಬಿನ್ನಹ ಮಾಡಿಕೊಂಡಿರುವುದಾಗಿ ಕಳೆದ ವರ್ಷದ ವರದಿಯಲ್ಲಿ ತಮಗೆ ಅರಿಕೆಮಾಡಿದೆವಷ್ಟೆ. ಘನಹೊಂದಿದ ಸರ್ಕಾರದವರು ಉದಾರ ಭಾವದಿಂದ ೧೨೫ ರೂಪಾಯಿಗಳ ಮಾಸಾಶನವನ್ನು ೧೫೦ಕ್ಕೆ ಹೆಚ್ಚಿಸಿ ವರ್ಷಕ್ಕೆ ೧,೮೦೦ ರೂಪಾಯಿಗಳನ್ನು ಮೂರು ವರ್ಷಗಳಿಗೆ ಮುಂಜೂರು ಮಾಡಿರುತ್ತಾರೆಂಬ ವಿಷಯವನ್ನು ತಮಗೆ ತಿಳಿಯಪಡಿಸಲು ನಮಗೆ ಸಂತೋಷ. ಪರಿಷತ್ತಿನ ಅಸ್ತಿತ್ವಕ್ಕೆ ಘನಹೊಂದಿದ ಮೈಸೂರು ಶ್ರೀಮನ್ಮಹಾರಾಜರವರೂ, ಶ್ರೀಮದ್ಯುವರಾಜರವರೂ, ಮೈಸೂರು ಸರ್ಕಾರದವರೂ ಕಾರಣರೆಂದರೆ ಅತ್ಯುಕ್ತಿಯಾಗಲಾರದು. ಅವರುಗಳ ಉದಾರ ಸಾಹಾಯ್ಯವಿಲ್ಲದಿದ್ದರೆ ಪರಿಷತ್ತು ಇಷ್ಟು ದಿವಸ ಉಳಿಯುತ್ತಿರಲಿಲ್ಲ. ಅವರುಗಳ ಸಹಾನುಭೂತಿಯನ್ನೂ ಉತ್ಸಾಹವನ್ನೂ ಔದಾರ್ಯವನ್ನೂ ಎಷ್ಟು ಕೊಂಡಾಡಿದರೂ ಕೊಂಚವೇ. ಅವರುಗಳ ಸಾಹಾಯ್ಯವನ್ನು ನೆನೆದು ಪರಿಷತ್ತೂ ಈ ಸಮ್ಮೇಳನವೂ ಈ ಸಂದರ್ಭದಲ್ಲಿ ಚಿರ ಕೃತಜ್ಞತಾ ಭಾವವನ್ನು ತೋರ್ಪಡಿಸುವುದು ಕರ್ತವ್ಯವಾಗಿದೆ.

**೨. ಕಾರ್ಯನಿರ್ವಾಹಕ ಮಂಡಲಿ.**—ಕಳೆದ ವರ್ಷದ (೧೯೨೮) ಜೂನ್ ತಿಂಗಳಲ್ಲಿ ಕಲ್ಬುರ್ಗಿಯಲ್ಲಿ ನೆರೆದಿದ್ದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಕೊನೆಯ ದಿವಸ ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ಕೆಳಗೆ ಕಂಡಂತೆ ವಿಭವ ಮತ್ತು ಶುಕ್ಲ ಸಂವತ್ಸರಗಳಿಗೆ ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಿಗಳನ್ನು ಚುನಾಯಿಸಲಾಯಿತು :—

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರಾದ ಶ್ರೀ ಕಂಠೀರವ ನರಸಿಂಹ ರಾಜ ಒಡೆಯರ್ ಬಹಾದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರೇ ಉದಾರ ಮನಸ್ಸಿನಿಂದ ಅಧ್ಯಕ್ಷ ಪದವಿಯನ್ನು ಮುಂದೆಯೂ ಅಲಂಕರಿಸಬೇಕೆಂದು ವಾರ್ಷಿಕಾಧಿವೇಶನದಲ್ಲಿ ನೆರೆದಿದ್ದ ಸದಸ್ಯರು ಪ್ರಾರ್ಥಿಸಿಕೊಳ್ಳತಕ್ಕುದೆಂಬ ಸೂಚನೆಯು ಸರ್ವಾನುಮತದಿಂದ ಅಂಗೀಕೃತವಾಯಿತು.

**ಉಪಾಧ್ಯಕ್ಷರು.**—ರಾಜಸಭಾಭೂಷಣ, ವಿದ್ಯಾಭೂಷಣ, ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ.

**ಗೌ॥ ಕಾರ್ಯದರ್ಶಿಯವರು.**— ಮ॥ ರಾ॥ ಸಂಗಪುರಂ ವೆಂಕಟೇಶ ಅಯ್ಯಂಗಾರ್ಯರು, ಬಿ.ಎ.

**ಗೌ॥ ಕೋಶಾಧ್ಯಕ್ಷರು.**—ಮ॥ ರಾ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ.

ಇದಾದನಂತರ ವಿಭವ ಸಂವತ್ಸರಕ್ಕೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರುಗಳನ್ನು ಚುನಾಯಿಸಲಾಯಿತು. ಆಯಾ ಪ್ರಾಂತಕ್ಕೆ ಆಯಾ

ಪ್ರಾಂತದ ಸದಸ್ಯರುಗಳಿಂದ ಚುನಾಯಿಸಲ್ಪಟ್ಟ ಸದಸ್ಯರುಗಳ ಹೆಸರನ್ನು ಕೆಳಗೆ ಕೊಟ್ಟಿದೆ:—

## ಮೈಸೂರು ಪ್ರಾಂತಕ್ಕೆ

೧. ಮ॥ ರಾ॥ ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. (ಬೆಂಗಳೂರು)
೨. ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. ,,
೩. ,, ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಮೈಸೂರು)
೪. ,, ತಿರುಮಲೆ ತಾತಾಚಾರ್ಯ ಶರ್ಮರು (ಬೆಂಗಳೂರು)
೫. ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. ,,
೬. ರಾವ್ ಬಹದ್ದೂರ್ ಡಾಕ್ಟರ್ ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ. ,,
೭. ಮ॥ ರಾ॥ ಕೆ. ಸಂಪದ್ಗಿರಿರಾಯರು, ಎಂ.ಎ. ,,
೮. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೯. ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವ್ ಬಹದ್ದೂರ್ ಮ॥ ರಾ॥ ನರಸಿಂಹಾಚಾರ್ಯರು, ಎಂ.ಎ. (ಬೆಂಗಳೂರು)
೧೦. ರಾಜ ಕವಿ ಭೂಷಣ ಮ॥ ರಾ॥ ಎಚ್. ಲಿಂಗರಾಜ ಅರಸಿನವರು (ಮೈಸೂರು)
೧೧. ಮ॥ ರಾ॥ ಬಿ. ಐ. ಶಾಮರಾಯರು (ಬೆಂಗಳೂರು)
೧೨. ,, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ. (ಮೈಸೂರು)

## ಮುಂಬಯಿ ಪ್ರಾಂತಕ್ಕೆ

೧. ಮ॥ ರಾ॥ ಕೌಜಲಗಿ ಶ್ರೀನಿವಾಸರಾಯರು, ಬಿ.ಎ., ಎಲ್ಎಲ್.ಬಿ. (ಬಿಜಾಪುರ)
೨. ರಾವ್ ಸಾಹೆಬ್ ಮ॥ ರಾ॥ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್ಎಲ್.ಬಿ. (ಬಿಜಾಪುರ)
೩. ಮ॥ ರಾ॥ ಎಚ್. ಚೆನ್ನಕೇಶವಯ್ಯಂಗಾರ್ಯರು (ಧಾರವಾಡ)
೪. ,, ಎ. ಬಿ. ಆಲೂರ್, ಬಿ.ಎ., ಎಲ್ಎಲ್.ಬಿ. ,,
೫. ,, ಕೃಷ್ಣರಾವ್ ಹನುಮಂತರಾವ್ ಮುದವೇಡಕರ್ (ಬೆಳಗಾಂವಿ)
೬. ,, ನಾರಾಯಣ ಶ್ರೀನಿವಾಸ ರಾಜಪುರೋಹಿತರು (ಧಾರವಾಡ)
೭. ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. ,,
೮. ,, ಕೃಷ್ಣರಾವ್ ಗೋವಿಂದ ಗೆಜ್ಜಿ, ಬಿ.ಎ., ಎಲ್ಎಲ್.ಬಿ. (ಬೆಳಗಾಂವಿ)
೯. ,, ಪಂಡಿತ ಕೇಶವಶರ್ಮಾ ಗಲಗಲಿ (ಬಿಜಾಪುರ)

## ಮದರಾಸು ಪ್ರಾಂತಕ್ಕೆ

ಇಲ್ಲಿಯ ಸದಸ್ಯರು ಯಾರೂ ವಾರ್ಷಿಕಾಧಿವೇಶನಕ್ಕೆ ಬಂದಿರಲಿಲ್ಲವಾದುದರಿಂದ ಕಳೆದ ವರ್ಷವಿದ್ದ ಸದಸ್ಯರುಗಳೇ ವಿಭವ ಸಂವತ್ಸರಕ್ಕೂ ಇರತಕ್ಕುದೆಂಬ ಸಭಾಪತಿಗಳ ಸೂಚನೆಯನ್ನು ಸರ್ವರೂ ಅಂಗೀಕರಿಸಿದರು :—

೧. ಮ॥ ರಾ॥ ಬೆನಗಲ್ ರಾಮರಾಯರು, ಎಂ.ಎ., ಎಲ್ಎಲ್.ಬಿ. (ಮದರಾಸು)

೨. ,, ಎನ್. ರಾಜಗೋಪಾಲ ಕೃಷ್ಣರಾಯರು (ಉಡಿಪಿ)

೩. ,, ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. (ಬಳ್ಳಾರಿ)

೪. ,, ಕೆ. ಟಿ. ಶ್ರೀನಿವಾಸಾಚಾರ್ಯರು, ಬಿ.ಎ., ಎಲ್ಎಲ್.ಬಿ. (ಬಳ್ಳಾರಿ)

೫. ,, ಸಿ. ವೆಂಕೋಬಾಚಾರ್ಯರು, ಎಂ.ಎ., ಎಲ್ಎಲ್.ಬಿ. (ಬಳ್ಳಾರಿ)

## ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ

೧. ಮ॥ ರಾ॥ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)

೨. ,, ಗಂಗಾಧರಪ್ಪ ಸಂಗಪ್ಪ ಸಾಬೋಜಿ (ಥಲಕವಾಡಿ)

## ಹೈದರಾಬಾದು ಸಂಸ್ಥಾನಕ್ಕೆ

೧. ಮ॥ ರಾ॥ ಕೃಷ್ಣರಾವ್ ಕಪಟರಾಳ್ (ಗುಲ್ಬರ್ಗ)

೨. ,, ರಾಘವೇಂದ್ರರಾವ್ ಚಾಕಲಬ್ಬಿ (ಕೊಪ್ಪಳ)

## ಕೊಡಗಿಗೆ

೧. ಮ॥ ರಾ॥ ಎನ್. ಆರ್. ಸುಬ್ಬಣ್ಣಯ್ಯನವರು (ನಿಡತ)

**೩. ಅಧಿವೇಶನಗಳು.**—ಈ ವರ್ಷ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನಗಳು ೭. (೧೯೨೮ನೆಯ ಏಪ್ರಿಲ್ ೨೨, ಜೂನ್ ೩, ಆಗಸ್ಟು ೧೯, ನವೆಂಬರು ೧೮, ಡಿಸೆಂಬರ್ ೩೦, ೧೯೨೯ನೆಯ ಫೆಬ್ರುವರಿ ೧೭, ಮಾರ್ಚಿ ೨೪.) ಈ ಅಧಿವೇಶನಗಳಿಗೆ ಬಂದಿದ್ದ ಸದಸ್ಯರ ಹೆಸರು ಮತ್ತು ಅಧಿವೇಶನಗಳ ಸಂಖ್ಯೆ:—

ಉಪಾಧ್ಯಕ್ಷರು ೧, ಗೌರವ ಕಾರ್ಯದರ್ಶಿಗಳು ೭, ಗೌರವ ಕೋಶಾಧ್ಯಕ್ಷರು ೫, ರಾವ್ ಬಹಾದ್ದೂರ್ ಡಾಕ್ಟರ್ ಸಿ. ಬಿ. ರಾಮರಾಯರು ೬, ಮ॥ರಾ॥ ಟಿ. ಅಪ್ಪೂರಾಯರು ೬, ಮ॥ ರಾ॥ ಕೆ. ಸಂಪದ್ಗಿರಿರಾಯರು ೫, ಮ॥ ರಾ॥ ಟಿ. ಎಸ್. ವೆಂಕಣಯ್ಯನವರು ೩, ಮ॥ ರಾ॥ ಬಿ. ಐ. ಶಾಮರಾಯರು ೨, ಮ॥ ರಾ॥ ಎ. ಆರ್. ಕೃಷ್ಣಶಾಸ್ತ್ರಿಗಳು ೨, ಮ॥ ರಾ॥ ಸಿ. ಕೆ. ವೆಂಕಟರಾಮಯ್ಯನವರು ೧, ಮ॥ ರಾ॥ ಟಿ. ಎಸ್. ಚಿಕ್ಕೋಡಿಯವರು ೧, ಮ॥ ರಾ॥ ಕೆ. ಎಚ್. ಮುಂದಪೇಡಕರರು ೧, ಮ॥ ರಾ॥ ಕೃಷ್ಣರಾವ್ ಕಪಟಾಳರು ೧, ಮ॥ ರಾ॥ ಪಿ. ಜಿ. ಆಲೂರರವರು ೧, ಮ॥ ರಾ॥ ಎನ್. ರಾಜಗೋಪಾಲ ಕೃಷ್ಣರಾಯರು ೧, ಮ॥ ರಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರರವರು ೧, ಮ॥ ರಾ॥ ಕೆ. ಟಿ. ಶ್ರೀನಿವಾಸಾಚಾರ್ಯರು ೧.

**೪. ಸದಸ್ಯರು.**—ವಿಭವ ಸಂವತ್ಸರಾಂತದಲ್ಲಿದ್ದ ಸದಸ್ಯರ ಸಂಖ್ಯೆ ಮೊದಲಾದುವು:—

| ತರಗತಿ | ಸದಸ್ಯರ ಸಂಖ್ಯೆ | ಈ ವರ್ಷ ವಸೂಲಾದ ಚಂದಾ ಹಣ ರೂ. ಆ. ಪೈ. | ಬಾಕಿ ಬರಬೇಕಾದ ಚಂದಾ ಹಣ ರೂ. ಆ. ಪೈ. |
|---|---|---|---|
| * ಪ್ರದಾತೃಗಳು | (೧) | .. | ೫೦೦—೦—೦ |
| ಸಹಾಯಕರು | ೫ | ೨೫—೦—೦ | ೧೨೦—೦—೦ |
| ಆಜೀವ ಸದಸ್ಯರು | ೭೮ | ೧೫೧—೦—೦ | ೩೦೫–೧೨—೦ |
| ಸಾಧಾರಣ ಸದಸ್ಯರು | ೬೨ | ೨೩೬—೦—೦ | ೫೦೦—೦—೦ |
| ಒಟ್ಟು | ೧೪೫ | ೪೧೨—೦—೦ | ೧,೪೨೫–೧೨—೦ |

ವಿಭವ ಸಂವತ್ಸರದಲ್ಲಿ ಆಜೀವ ಸದಸ್ಯರೊಬ್ಬರು ದೈವಾಧೀನರಾದರು; ಇಬ್ಬರು ಬಿಟ್ಟುಬಿಟ್ಟರು; ಮೂವರು ಹೊಸದಾಗಿ ಸೇರಿದರು. ಸಾಧಾರಣ ಸದಸ್ಯರುಗಳಲ್ಲಿ ಒಬ್ಬರು ದೈವಾಧೀನರಾದರು. ಚಂದಾ ಬಾಕಿಯು ಮೂರು ವರ್ಷಗಳಿಂದ ಬಾರದೆ ಇದ್ದುದರಿಂದ ಹತ್ತು ಜನರ ಹೆಸರುಗಳನ್ನು ವಜಾಮಾಡಲಾಯಿತು. ಈ ವರ್ಷದಲ್ಲಿ ಆ ತರಗತಿಗೆ ಹನ್ನೊಂದು ಜನರು ಹೊಸದಾಗಿ ಸೇರಿದರು. ಪರಿಷತ್ತಿನ ಸದಸ್ಯರ ಸಂಖ್ಯೆಯು ವರ್ಷಾರಂಭದಲ್ಲಿ ಎಷ್ಟು ಇದ್ದಿತೋ ಅಷ್ಟೇ ವರ್ಷಾಂತದಲ್ಲಿಯೂ ಇದೆ.

**೫. ಸಂಪಾದಕ ಮಂಡಲಿ.**—ವಿಭವ ಸಂವತ್ಸರಕ್ಕೆ ಪರಿಷತ್ತಿನ ಸಂಪಾದಕ ಮಂಡಲಿಗೆ, ೧೯೨೮ನೆಯ ಆಗಸ್ಟು ೧೯ನೆಯ ತಾರೀಖಿನಲ್ಲಿ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನದಲ್ಲಿ, ಈ ಕೆಳಗೆ ಕಂಡ ಸಭ್ಯರನ್ನು ಚುನಾಯಿಸಲಾಯಿತು:—

| | | | |
|---|---|---|---|
| ೧. | ಮ॥ ರಾ॥ | ತಿರುಮಲೆ ತಾತಾಚಾರ್ಯ ಶರ್ಮರವರು | (ಬೆಂಗಳೂರು) |
| ೨. | ,, | ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. | ,, |
| ೩. | ,, | ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ. | ,, |
| ೪. | ,, | ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. | ,, |
| ೫. | ,, | ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ. | ,, |
| ೬. | ,, | ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ. | ,, |
| ೭. | ,, | ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. | (ಮೈಸೂರು) |
| ೮. | ,, | ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. | (ಧಾರವಾಡ) |
| ೯. | ,, | ಆರ್ಕಾಟು ಭೀಮಾಚಾರ್ಯರು, ಎಂ.ಎ., ಎಲ್.ಟಿ. | (ಬಳ್ಳಾರಿ) |

ಸಂಪಾದಕ ಮಂಡಲಿಯು ೧೯೨೮ನೆಯ ಇಸವಿ ನವೆಂಬರು ೧೮, ನವೆಂಬರು ೨೧ ಮತ್ತು ೧೯೨೯ನೆಯ ಫೆಬ್ರುವರಿ ೪—ಈ ತಾರೀಖುಗಳಲ್ಲಿ ಸೇರಿದ್ದಿತು.

**೬. ಪರಿಷತ್ತಿನ ವಾಙ್ಮಯ ಕಾರ್ಯ ವಿಚಾರ.**—

(೧) **ಪರಿಷತ್ಪತ್ರಿಕೆ.**—ಇದನ್ನು ಸಕಾಲದಲ್ಲಿ ಹೊರಡಿಸುವ ಪ್ರಯತ್ನವು ಲೇಖನಗಳ ಅಭಾವದಿಂದ ಸಫಲವಾಗಲಿಲ್ಲ. ಏಪ್ರಿಲ್ ಸಂಚಿಕೆಯನ್ನು ೧೩–೬–೨೮ರಲ್ಲಿಯೂ, ಜೂಲೈ ಸಂಚಿಕೆಯನ್ನು ೧–೧೨–೨೮ರಲ್ಲಿಯೂ, ಅಕ್ಟೋಬರು

* ಇವರು ಸಾಧಾರಣ ಸದಸ್ಯರಾಗಿಯೂ ಇರುವರು.

ಸಂಚಿಕೆಯನ್ನು ೨-೪-೨೯ರಲ್ಲಿಯೂ ಪ್ರಕಟಿಸಲಾಯಿತು. ೧೯೨೯ನೆಯ ಜನವರಿ ಸಂಚಿಕೆಯು ಅಚ್ಚಿನಲ್ಲಿದೆ.

ಪರಿಷತ್ಪತ್ರಿಕೆಯನ್ನು ಸಕಾಲದಲ್ಲಿ ಹೊರಡಿಸುವುದಕ್ಕಾಗಿ ಲೇಖನಗಳನ್ನು ಮುಂದಾಗಿಯೇ ಶೇಖರಿಸುವುದಕ್ಕೂ ಇತರ ವಿಷಯಗಳಲ್ಲಿ ಗೌರವ ಕಾರ್ಯದರ್ಶಿಯವರಿಗೆ ಸಾಹಾಯ್ಯಮಾಡುವುದಕ್ಕೂ ಸಂಪಾದಕ ಮಂಡಲಿಯವರು ಪರಿಷತ್ತಿಗೆ ಸಹಾಯ ಕಾರ್ಯದರ್ಶಿಯೊಬ್ಬರನ್ನು ನಿಯಮಿಸಬೇಕೆಂದು ಕಾರ್ಯನಿರ್ವಾಹಕ ಮಂಡಲಿಗೆ ಶಿಫಾರಸುಮಾಡಲು, ಅವರು ಈ ಸೂಚನೆಯನ್ನು ಅಂಗೀಕರಿಸಿ ಸಹಾಯ ಕಾರ್ಯದರ್ಶಿಯೊಬ್ಬರನ್ನು ನಿಯಮಿಸತಕ್ಕುದೆಂದು ತೀರ್ಮಾನಮಾಡಿದ್ದಾರೆ. ಈ ಸ್ಥಾನಕ್ಕಾಗಿ ದರಖಾಸ್ತುಗಳು ಬಂದಿವೆ. ಅವನ್ನು ಪರಿಶೀಲಿಸಿ ಆ ಸ್ಥಾನಕ್ಕೆ ಯೋಗ್ಯರಾದವರೊಬ್ಬರನ್ನು ಕ್ಷಿಪ್ರದಲ್ಲಿಯೇ ನಿಯಮಿಸಲಾಗುತ್ತದೆ.

(೨) **ಪಂಪಭಾರತ.**—ಈ ಗ್ರಂಥದ ಮೂಲವು ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಎರಡು ಭಾಗಗಳಲ್ಲಿ ಪ್ರಕಟವಾಗಿರುವ ವಿಷಯವನ್ನು ಹಿಂದಣ ವರದಿಯಲ್ಲಿಯೇ ತಿಳಿಸಿರುವೆವು. ವಚನರೂಪದ ಕಥೆಯು ಮುದ್ರಣವಾಗುತ್ತಿದೆ. ನಿಘಂಟು ಸಿದ್ಧವಾಗಿದೆ; ಆದರೆ ಇದನ್ನು ಪಂಡಿತರುಗಳ ಸಾಹಾಯ್ಯದಿಂದ ಪರಿಶೋಧಿಸಿದ ಹೊರತು ಮುದ್ರಣಮಾಡಲಾಗುವುದಿಲ್ಲ. ಈ ಕೆಲಸವನ್ನು ಇಷ್ಟರಲ್ಲಿಯೇ ಮಾಡಬೇಕೆಂದಿರುವೆವು.

(೩) **ಪಂಪರಾಮಾಯಣದ ಚತುರ್ಥಾಶ್ವಾಸ**ವನ್ನು ಮೈಸೂರು ವಿಶ್ವವಿದ್ಯಾನಿಲಯದ 'ಇಂಟರ್‌ಮಿಾಡಿಯೆಟ್' ಪರೀಕ್ಷೆಗೆ ಹೋಗುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಟಿಪ್ಪಣದೊಡನೆ ಪ್ರಕಟಮಾಡಲಾಯಿತು. ಮೂಲವನ್ನು ಪುನರ್ಮುದ್ರಣ ಮಾಡಲು ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಅಧ್ಯಕ್ಷರು ಅನುಮತಿ ಕೊಟ್ಟುದಕ್ಕಾಗಿ ಅವರಿಗೆ ನಾವು ಕೃತಜ್ಞರಾಗಿರುತ್ತೇವೆ.

(೪) **ಚಾವುಂಡರಾಯ ಪುರಾಣ.**—೧೯೧೮ನೆಯ ಇಸವಿಯಲ್ಲಿ ಮೊದಲು ಪ್ರಕಟಪಡಿಸಿದ ಈ ಗ್ರಂಥದ ಆದಿಪುರಾಣ ಭಾಗದಲ್ಲಿ ಮುದ್ರಣದ ತಪ್ಪುಗಳು ಅನೇಕವಿದ್ದುದರಿಂದಲೂ, ಪುಸ್ತಕದ ಮುದ್ರಣವೂ ಆಕಾರ ಮೊದಲಾದುವೂ ನೋಡುವುದಕ್ಕೆ ಅಂದವಾಗಿಲ್ಲದಿದ್ದುದರಿಂದಲೂ ಇದರ ದ್ವಿತೀಯ ಮುದ್ರಣವನ್ನು ತಪ್ಪುಗಳಿಲ್ಲದಂತೆಯೂ ಅಂದವಾಗಿಯೂ ಮಾಡಿ ಪ್ರಕಟಿಸಲಾಯಿತು. ಇದರ ಬೆಲೆಯನ್ನು ಹಿಂದಣಂತೆಯೇ ಒಂದು ರೂಪಾಯಿಯೆಂದು ಗೊತ್ತುಮಾಡಿರುವೆವು.

**೭. ವಾಚನಮಂದಿರ.**—ಈ ಮಂದಿರದ ವಾಚಕರ ಸರಾಸರಿ ಸಂಖ್ಯೆಯು ದಿನದಿನಕ್ಕೆ ಹೆಚ್ಚುತ್ತಲಿದೆ. ಇದರಿಂದ ಶಂಕರಪುರ, ಬಸವನಗುಡಿ—ಈ ಪ್ರಾಂತಗಳಲ್ಲಿರುವ ವಿದ್ಯಾರ್ಥಿಗಳಿಗೂ ಪೆನ್‌ಷನ್ ನೌಕರರಿಗೂ ವಿಶೇಷ ಉಪಯೋಗವಾಗುತ್ತಲಿದೆ.

ಈ ವಾಚನಮಂದಿರದಲ್ಲಿ ವಾಚಕರಿಗೆ ದೊರೆಯುವ ಪತ್ರಿಕೆಗಳು:—

**ಕನ್ನಡ.**—ಕಂಠೀರವ, ಕರ್ಣಾಟಕ ವೃತ್ತ, ಕರ್ಮವೀರ, ಕೊಡಗು, ಕನ್ನಡಿಗ, ಕರ್ಣಾಟಕ ವೈಭವ, ಪ್ರಾರ್ಥನಾ, ರಾಜಹಂಸ,

ರಾಷ್ಟ್ರಬಂಧು, ಶ್ರೀ ಧನ್ವಂತರೀ, ಸ್ವದೇಶಾಭಿಮಾನಿ, ವಿಶ್ವ ಕರ್ಣಾಟಕ, ವಿಶ್ವಬಂಧು, ವೃತ್ತಾಂತ ಪತ್ರಿಕೆ, ಒಕ್ಕಲಿಗನೂ ಒಕ್ಕಲಿತನವೂ, ಕನ್ನಡ ಸಹಕಾರ, ಕಾದಂಬರೀ ಸಂಗ್ರಹ, ಕರ್ಣಾಟಕ ಕೇಸರಿ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಜಯ ಕರ್ಣಾಟಕ, ದೇಶೀಯ ವಿದ್ಯಾಶಾಲಾ ಪತ್ರಿಕೆ, ಪ್ರೇಮ, ಪ್ರಬುದ್ಧ ಕರ್ಣಾಟಕ, ರಂಗಭೂಮಿ, ಮಕ್ಕಳ ಪುಸ್ತಕ, ಸುಧಾರಕ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕ ಸಂಘದ ಪತ್ರಿಕೆ.

**ತೆಲುಗು.**—ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ, ಸುಭಾಷಿ, ರತ್ನಗಿರಿ.

**ಮರಾಠಿ.**—ವಿವಿಧ ಜ್ಞಾನ ವಿಸ್ತಾರ.

**ಇಂಗ್ಲೀಷು.**—Swarajya, Hindu, The Evening Mail, Mysore Gazette, Karnataka, Indian Antiquary, Modern Review, School Folk (Tumkur), The Volunteer, Quarterly Journal of the Mythic Society, The Andhra Historical Research Institute Magazine.

**೮. ಹೋದ ಸಮ್ಮೇಳನದ ನಿರ್ಣಯಗಳ ವಿಷಯವಾಗಿ ನಡೆಯಿಸಿದ ಕಾರ್ಯಕ್ರಮ.—**

**ನಿರ್ಣಯ ೩** (೧).—ನಿಜಾಂ ಕರ್ಣಾಟಕದಲ್ಲಿರುವ ಗುಲ್ಬರ್ಗ, ರಾಯಚೂರು, ಬೀದರ ಮುಂತಾದ ಜಿಲ್ಲೆಗಳು ಕನ್ನಡ ಜಿಲ್ಲೆಗಳಾದುದರಿಂದ ಆ ಭಾಗಗಳಲ್ಲಿರುವ ಕೋರ್ಟು ಕಚೇರಿಗಳ ಭಾಷೆಯು ಕನ್ನಡವಿರಬೇಕೆಂದು ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ಪ್ರಾರ್ಥಿಸುತ್ತದೆ.

ಇದನ್ನು ನಿಜಾಂ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ಇದುವರೆಗೆ ಯಾವ ಪ್ರತ್ಯುತ್ತರವೂ ಬಂದಿರುವುದಿಲ್ಲ.

(೨) ಪೋಸ್ಟಾಫೀಸಿನ ಮನಿಯಾರ್ಡರು ಫಾರಂ ಮುಂತಾದುವುಗಳು ಕನ್ನಡದಲ್ಲಿಯೂ ಇರುವಂತೆ ಏರ್ಪಾಡು ಮಾಡಬೇಕೆಂದು ಆಯಾ ಅಧಿಕಾರಿಗಳನ್ನು ಈ ಸಮ್ಮೇಳನವು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

ಈ ಠರಾವನ್ನು ಮದರಾಸು, ಮುಂಬಯಿ ಪೋಸ್ಟು ಮಾಸ್ಟರು ಜನರಲ್‌ಗಳಿಗೂ ಹೈದರಾಬಾದು ಸಂಸ್ಥಾನದ ಮುಖ್ಯ ಕಾರ್ಯದರ್ಶಿಯವರಿಗೂ ಕಳುಹಿಸಲಾಯಿತು. ಜನಗಳಿಗೆ ಸಾಮಾನ್ಯವಾಗಿ ಬೇಕಾದ ಮನಿಯಾರ್ಡರು ಫಾರಂ ಮತ್ತು ಇತರ ಫಾರಮ್ಮುಗಳು ಇದಕ್ಕೆ ಮೊದಲೇ ಅಚ್ಚಾಗಿ ಕನ್ನಡ ಮಾತನಾಡುವ ಡಿಸ್ಟ್ರಿಕ್ಟುಗಳ ಪೋಸ್ಟಾಫೀಸುಗಳಿಗೆ ಅವನ್ನು ಕಳುಹಿಸಿಕೊಟ್ಟಿರುವುದಾಗಿ ಮುಂಬಯಿ ಪೋಸ್ಟು ಮಾಸ್ಟರು ಜನರಲ್ ಅವರು ತಿಳಿಯಪಡಿಸಿರುತ್ತಾರೆ.

ಮನಿಯಾರ್ಡರು ಫಾರಮ್ಮು ಇದಕ್ಕೆ ಮೊದಲೇ ಕನ್ನಡದಲ್ಲಿ ಅಚ್ಚಾಗಿರುವುದೆಂದೂ ಇನ್ನಾವ ಇತರ ಫಾರಂಗಳು ಕನ್ನಡದಲ್ಲಿ ಅಚ್ಚಾಗಬೇಕೆಂದು ತಮ್ಮ ಅಭಿ

ಪ್ರಾಯಶ್ಚಿತವೋ ಅದನ್ನು ತಿಳಿಸಬೇಕೆಂದೂ ಮದರಾಸು ಪೋಸ್ಟು ಮಾಸ್ಟರು ಜನರಲ್ ಅವರು ಬರೆದಿರುತ್ತಾರೆ.

(೩) ರೈಲ್ವೆ ಸ್ಟೇಷನ್ನುಗಳ ಹೆಸರು ಮುಂತಾದುವುಗಳು ಕನ್ನಡದಲ್ಲಿರುವಂತೆ ವಿನಂತಿಮಾಡಿಕೊಳ್ಳತಕ್ಕದ್ದು.

ಇದನ್ನು ಮದರಾಸ್ ಸದರ್ನ್ ಮಹಾರಾಷ್ಟ್ರ ರೈಲ್ವೆ ಕಂಪೆನಿ ಟ್ರಾಫಿಕ್ ಮ್ಯಾನೇಜರವರಿಗೆ ಕಳುಹಿಸಿದುದಕ್ಕೆ ಅವರು ಈ ರೈಲ್ವೆಯ ಎಲ್ಲ ಸ್ಟೇಷನ್ನುಗಳಲ್ಲಿಯೂ ಕನ್ನಡದ ಟೈಂಟೇಬಲ್‌ಗಳನ್ನು ಪ್ರದರ್ಶಿಸಲು ಸಾಧ್ಯವಿಲ್ಲವೆಂದೂ ಕನ್ನಡ ಪ್ರಾಂತಗಳ ಸ್ಟೇಷನ್ನುಗಳಲ್ಲಿ ಕನ್ನಡದ ರೇಟ್ ಟೇಬಲ್ ಷೀಟುಗಳನ್ನು ಹಾಕಿದೆ ಎಂದೂ ಉತ್ತರ ಕೊಟ್ಟಿರುತ್ತಾರೆ.

**ನಿರ್ಣಯ ೪.**—ನಿಜಾಂ ಕರ್ಣಾಟಕದ ಎಲ್ಲ ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಣವೂ ಕನ್ನಡ ಬಾಲಕರ ಮಾತೃಭಾಷೆಯಲ್ಲದ ಭಾಷೆಗಳಲ್ಲಿ ನಡೆಯುತ್ತಿರುವುದರಿಂದ ಶಿಕ್ಷಣ ಪ್ರಗತಿಯು ಅತಿಶಯವಾಗಿ ಕುಂಠಿತವಾಗುತ್ತದೆ. ಆದುದರಿಂದ ಆ ಪ್ರಾಥಮಿಕ ಶಿಕ್ಷಣವೆಲ್ಲವೂ ಕನ್ನಡದಲ್ಲಿಯೇ ಇರಬೇಕೆಂದೂ ಮುಂದೆ ಅದು ಅವ್ಯಾಹತವಾಗಿ ಸಾಗುವಂತೆ ಏರ್ಪಾಡುಮಾಡಲ್ಪಡಬೇಕೆಂದೂ ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ವಿನಯ ಪೂರ್ವಕವಾಗಿ ಪ್ರಾರ್ಥಿಸುತ್ತದೆ.

ಈ ಠೀರ್ಮಾನವನ್ನು ನಿಜಾಂ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ಯಾವ ಪ್ರತ್ಯುತ್ತರವೂ ಬಂದಿರುವುದಿಲ್ಲ.

**ನಿರ್ಣಯ ೫.**—ನಿಜಾಂ ಕರ್ಣಾಟಕದ ಕಲ್ಬುರ್ಗಿ, ಬೀದರ ಮುಂತಾದ ಜಿಲ್ಲೆಗಳಲ್ಲಿ ಗ್ರಾಮಸ್ಥರ ದಪ್ತರಗಳು ಮರಾಠಿಯಲ್ಲಿರುವುದರಿಂದ ಕನ್ನಡ ಪ್ರಾಥಮಿಕ ಶಿಕ್ಷಣಕ್ಕೆ ಬಹಳ ತೊಂದರೆಯಾಗಿರುವುದು. ಆದಕಾರಣ ಆ ಭಾಗಗಳಲ್ಲಿಯೂ ಗ್ರಾಮಸ್ಥರ ದಪ್ತರಗಳು ಕನ್ನಡದಲ್ಲಿಯೇ ಇರುವಂತೆ ನಿಜಾಂ ಸರ್ಕಾರದವರು ಅಪ್ಪಣೆಕೊಡಿಸಿ ತೀವ್ರ ಜಾರಿಯಲ್ಲಿ ತರಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಈ ಠೀರ್ಮಾನವನ್ನು ನಿಜಾಂ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ಪ್ರತ್ಯುತ್ತರವಾವುದೂ ಬಂದಿರುವುದಿಲ್ಲ.

**ನಿರ್ಣಯ ೬.**—೧೯೨೦ನೆಯ ಮೇ ತಿಂಗಳಲ್ಲಿ ನಡೆದ ಬಳ್ಳಾರಿಯ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಮಂಜೂರಾದ ಈ ಕೆಳಗಣ ನಿರ್ಣಯವನ್ನು ಪುನಃ ಮಂಜೂರು ಮಾಡಿ ಆ ನಿರ್ಣಯವನ್ನು ತೀವ್ರವೇ ಜಾರಿಯಲ್ಲಿ ತರಬೇಕೆಂದು ಈ ಸಮ್ಮೇಳನವು ಮತ್ತೆ ಆ ನಿಜಾಂ ಸರ್ಕಾರವನ್ನು ಪ್ರಾರ್ಥಿಸುತ್ತದೆ:—

೧ (ಕ) ನಿಜಾಂ ಸರ್ಕಾರದವರು ತಮ್ಮ ರಾಜ್ಯದಲ್ಲಿರುವ ಮತ್ತು ಮುಂದೆ ಸ್ಥಾಪಿಸಲ್ಪಡುವ ಖಾಸಗಿ ಶಾಲೆಗಳನ್ನು ಸರ್ಕಾರಿ ಅಪ್ಪಣೆಯನ್ನು ಪಡೆಯದೆ ನಡೆಯಿಸಬಾರದೆಂಬುದಾಗಿ ಕೊಟ್ಟಿರುವ ಹುಕುಮಿನಿಂದ ಪ್ರಸ್ತುತ ಕೊಡಲ್ಪಡುವ ದೇಶ ಭಾಷೆಯ ಶಿಕ್ಷಣಕ್ಕೆ ಹಾನಿಯುಂಟಾಗುವುದಲ್ಲದೆ ಅತಿ ವಿರಳವಾದ ಕನ್ನಡ

ಮತ್ತು ಇತರ ದೇಶಭಾಷೆಯ ಪ್ರಾಥಮಿಕ ಶಿಕ್ಷಣವು ತಪ್ಪಿಹೋದಂತಾಗಿ ಜನತೆಯ ಸ್ವಾಭಾವಿಕವಾದ ಹಕ್ಕಿಗೂ ಕೂಡ ಬಾಧೆ ಬರುತ್ತದೆ. ಆದುದರಿಂದ ಆದಷ್ಟು ತೀವ್ರವಾಗಿ ಸದರಿ ಹುಕುಮನ್ನು ರದ್ದುಪಡಿಸುವ ವಿಷಯದಲ್ಲಿ ನಿಜಾಂ ಸರ್ಕಾರಕ್ಕೆ ಈ ಸಮ್ಮೇಳನವು ಶಿಫಾರಸು ಮಾಡುತ್ತದೆ.

ಇದನ್ನು ನಿಜಾಂ ಸರ್ಕಾರದ ವಿದ್ಯಾಭ್ಯಾಸದ ಡೈರೆಕ್ಟರವರಿಗೆ ಕಳುಹಿಸಿ ಕೊಡಲು, ಅವರು ಈ ಪ್ರಕಾರ ಉತ್ತರವನ್ನು ದಯಪಾಲಿಸಿರುತ್ತಾರೆ:—

ಈಗಿರುವ ಖಾಸಗಿ ಶಾಲೆಗಳನ್ನು ನಡೆಯಿಸಕೂಡದೆಂದಾಗಲಿ ಹೊಸ ಶಾಲೆಗಳನ್ನು ಸ್ಥಾಪಿಸಕೂಡದೆಂದಾಗಲಿ ಯಾವ ಹುಕುಮೂ ಜಾರಿಯಲ್ಲಿಲ್ಲ. ಆದರೆ ಹುಕುಂ ಪ್ರಕಾರ ಈ ಖಾಸಗಿ ಶಾಲೆಗಳು ವಿದ್ಯಾ ಖಾತೆಯ ಪದ್ಧತಿಗನುಸಾರವಾಗಿ ಅನುಮತಿಯನ್ನು ಪಡೆಯಬೇಕು. ಎಲ್ಲ ನಾಗರಿಕ ದೇಶಗಳಲ್ಲಿಯೂ ಈ ಪ್ರಕಾರ ನಡೆಯುತ್ತಿದೆ. ಖಾಸಗಿ ಶಾಲೆಗಳನ್ನು ಸ್ಥಾಪಿಸುವ ವಿಷಯದಲ್ಲಿ ಈ ಖಾತೆಯ ಯಾವ ವಿಧವಾದ ಆಕ್ಷೇಪವೂ ಇರುವುದಿಲ್ಲ. ಮುಂದಾಗಿಯೇ ರೆಜಿಸ್ಟರು ಮಾಡಿದಲ್ಲಿ ವಿದ್ಯಾ ಖಾತೆಯು ಸರ್ವ ಪ್ರಕಾರದಲ್ಲಿಯೂ ಅವುಗಳಿಗೆ ಪ್ರೋತ್ಸಾಹನನ್ನು ಕೊಡುವುದು.

(ಖ) ಮುಂಬಯಿ, ಮೈಸೂರು ಮತ್ತು ಬಂಗಾಲ ವಿಶ್ವವಿದ್ಯಾಲಯದಂತೆ ಪ್ರವೇಶ ಪರೀಕ್ಷೆಯ ವರೆಗೆ ಉರ್ದು ಹೊರತಾಗಿ ಬೋಧ ಭಾಷೆಯು ಕರ್ಣಾಟಕ ಭಾಗದಲ್ಲಿ ಕನ್ನಡವೇ ಆಗಿರುವಂತೆ ಮಾಡುವುದನ್ನು ಕುರಿತು ವ್ಯವಸ್ಥೆ ಮಾಡುವುದಕ್ಕೆ ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಈ ಸಮ್ಮೇಳನವು ವಿನಂತಿಮಾಡುತ್ತದೆ.

ಈ ತೀರ್ಮಾನವನ್ನು ವಿಶ್ವವಿದ್ಯಾಲಯದ ರೆಜಿಸ್ಟ್ರಾರ್ ಅವರಿಗೆ ತಿಳುಹಿಸಲಾಯಿತು. ಅವರು ಈ ವಿಷಯವನ್ನು ನಿಜಾಂ ಸರ್ಕಾರದ ವಿದ್ಯಾ ಖಾತೆಯ ಡೈರೆಕ್ಟರಿಗೆ ವಿಜ್ಞಾಪಿಸಿಕೊಳ್ಳಬಹುದೆಂದು ಉತ್ತರವನ್ನಿತ್ತರು. ಅದೇ ಪ್ರಕಾರ ಅವರಿಗೆ ಅದನ್ನು ಕಳುಹಿಸಲಾಯಿತು ; ಪ್ರತ್ಯುತ್ತರನಾವುದೂ ಬಂದಿರುವುದಿಲ್ಲ.

**ನಿರ್ಣಯ ೭.**—ಕಲ್ಬುರ್ಗಿ ಮತ್ತು ಬಿದರೆ ಜಿಲ್ಲೆಗಳಲ್ಲಿಯ ವರ್ತಕರೂ ಸಾರ್ವಜನಿಕ ಸಂಸ್ಥೆಗಳೂ ಕನ್ನಡ ಭಾಷೆಗೆ ಪ್ರಾಧಾನ್ಯವನ್ನು ಕೊಡಬೇಕೆಂದೂ ಲೆಕ್ಕಪತ್ರ ಮುಂತಾದುವುಗಳನ್ನು ಕನ್ನಡದಲ್ಲಿಯೇ ಇಡಬೇಕೆಂದೂ ಈ ಸಮ್ಮೇಳನವು ಅವರುಗಳನ್ನು ಪ್ರಾರ್ಥಿಸುತ್ತದೆ.

ಈ ನಿರ್ಣಯವನ್ನು ಅಚ್ಚುಮಾಡಿಸಿ ಅದರ ಎರಡು ಸಾವಿರ ಪ್ರತಿಗಳನ್ನು ಮೇಲೆ ಕಂಡ ಜಿಲ್ಲೆಗಳಲ್ಲಿ ಹಂಚಲು ಏರ್ಪಡಿಸಿದುದಾಯಿತು.

**ನಿರ್ಣಯ ೮.**—ನಿಜಾಂ ಕರ್ಣಾಟಕದಲ್ಲಿರುವ ಎಷ್ಟೋ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡ ಶಿಕ್ಷಣದ ವ್ಯವಸ್ಥೆಯಿಲ್ಲದಿರುವುದರಿಂದ ಆ ಸಂಸ್ಥೆಗಳ ಚಾಲಕರು ತೀವ್ರವೇ ಕನ್ನಡ ಶಿಕ್ಷಣವನ್ನು ಕೊಡುವ ವ್ಯವಸ್ಥೆ ಮಾಡಬೇಕೆಂದು ಈ ಸಮ್ಮೇಳನವು ಅವರಿಗೆ ಸೂಚಿಸುತ್ತದೆ.

ಇದನ್ನು ಕಲ್ಬುರ್ಗಿ, ರಾಯಚೂರು, ಬಿದರೆ—ಈ ಡಿಸ್ಟ್ರಿಕ್ಟ್ ಬೋರ್ಡು ಪ್ರೆಸಿಡೆಂಟರುಗಳಿಗೆ ಕಳುಹಿಸಲಾಯಿತು.

**ನಿರ್ಣಯ ೯.**—ನಿಜಾಂ ಸರ್ಕಾರದಲ್ಲಿ ಕರ್ಣಾಟಕ ಇತಿಹಾಸಕ್ಕೆ ಮುಖ್ಯ ಸಾಮಗ್ರಿಗಳಾಗಿರುವ ಶಿಲಾಶಾಸನಗಳು ಹೇರಳವಾಗಿಯೂ ಮಹತ್ವವುಳ್ಳವು

ಗಳಾಗಿಯೂ ಇರುವುದರಿಂದ ನಿಜಾಂ ಸರ್ಕಾರದವರು, ಮೈಸೂರು ಮತ್ತು ಬ್ರಿಟಿಷ್ ಸರ್ಕಾರಗಳು ವ್ಯವಸ್ಥೆ ಮಾಡಿರುವಂತೆಯೇ, ಇಲ್ಲಿಯ ಕರ್ಣಾಟಕ ಜಿಲ್ಲೆಗಳಲ್ಲಿ ಶಿಲಾ ಲಿಪಿಗಳ ಸಂಶೋಧನ ಕಾರ್ಯವನ್ನು ತೀವ್ರವೇ ಪ್ರಾರಂಭಿಸಿ ಯಾವತ್ತು ಸಂಸ್ಥಾನದ ಶಿಲಾ ಲಿಪಿಗಳ ಅಚ್ಚನ್ನು ತೆಗೆದುಕೊಂಡು ಮುದ್ರಿಸ ಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

**ನಿರ್ಣಯ ೧೦.**—ನಿಜಾಂ ಸಂಸ್ಥಾನದಲ್ಲಿ ಕೈ ಬರೆಹದ ಅಸಂಖ್ಯಾತ ಗ್ರಂಥಗಳು ದೊರೆಯುವುದರಿಂದ ಅವುಗಳನ್ನು ಸಂಗ್ರಹಿಸಬೇಕೆಂದು ನಿಜಾಂ ಸರ್ಕಾರವನ್ನು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಇವೆರಡನ್ನೂ ನಿಜಾಂ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಕಳಿಹಿಸಲು, ಅವರು ಅವುಗಳನ್ನು ನಿಜಾಂ ಸರ್ಕಾರದ ಶಾಸನ ಇಲಾಖಾಧ್ಯಕ್ಷರಿಗೆ ರವಾನಿಸಿದರು. ಅವರಿಂದ ಈ ಪ್ರಕಾರವಾಗಿ ಉತ್ತರ ಬಂದಿರುತ್ತದೆ:—

"ಪುರಾತನ ಕೈಬರೆಹದ ಪುಸ್ತಕಗಳನ್ನು ಶೇಖರಿಸಿ ಅವುಗಳನ್ನು ಕಾಪಾಡುವುದಕ್ಕಾಗಿ ಹೈದರಾಬಾದಿನಲ್ಲಿ ಸರ್ವ ವಸ್ತು ಪ್ರದರ್ಶನ ಶಾಲೆಯೊಂದು ಸ್ಥಾಪಿತವಾಗಿ ಅಂತಹ ಪುಸ್ತಕಗಳನ್ನು ಕ್ರಮವಾಗಿ ಹುಡುಕಿ ಶೇಖರಿಸುವ ಪ್ರಯತ್ನವು ನಡೆಯುತ್ತಿದೆ.

"ಹಳಗನ್ನಡ, ತೆಲುಗು ಮತ್ತು ಮರಾಠಿ ಶಾಸನಗಳ ವಿಷಯದಲ್ಲಿ ಶಾಸನ ಇಲಾಖೆಯು ಇಂಡಿಯಾ ಸರ್ಕಾರದ ಶಾಸನ ಇಲಾಖೆಯ ಮಾರ್ಗವನ್ನನುಸರಿಸಿ ಅವುಗಳನ್ನು ಅಚ್ಚು ತೆಗೆದುಕೊಂಡು ಮುದ್ರಿಸಿ ಪ್ರಕಟಮಾಡುತ್ತಲಿದೆ.

"ಕಲ್ಬುರ್ಗಿ ಜಿಲ್ಲೆಯಲ್ಲಿರುವ ನಾಗೈ ಶಾಸನಗಳನ್ನು ಕುರಿತ ಹೈದರಾಬಾದು ಶಾಸನಾವಳಿಯ ಆನೆಯ ಪ್ರಬಂಧ(Monograph)ದ ಒಂದು ಪ್ರತಿಯನ್ನು ಕಳುಹಿಸಿರುತ್ತದೆ. ಅದರಿಂದ ನಾವು ಈ ಮಾರ್ಗದಲ್ಲಿ ನಡೆಯಿಸುತ್ತಿರುವ ಕಾರ್ಯವು ವಿದಿತವಾಗುವುದು."

**ನಿರ್ಣಯ ೧೧.**—ಜಮಖಂಡಿ ಸಂಸ್ಥಾನದ ಅಧಿಪತಿಗಳು ತಮ್ಮ ಸಂಸ್ಥಾನದಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸಿರುವುದಕ್ಕೋಸ್ಕರ ಈ ಸಮ್ಮೇಳನವು ಆ ಅಧಿಪತಿಗಳನ್ನು ಅಭಿನಂದಿಸುತ್ತದೆ; ಆದರೆ ಈಗಿರುವ ಶಾಲೆಗಳು ಸಾಕಾದಷ್ಟು ಇಲ್ಲದಿರುವುದರಿಂದ ಈ ಶಾಲೆಗಳನ್ನು ಹೆಚ್ಚಿಸಬೇಕೆಂದೂ, ಈ ಸಂಸ್ಥಾನದಲ್ಲಿ ಈಗಿರುವ ಕನ್ನಡ ಶಾಲೆಗಳನ್ನು ಕೂಡ ತೆಗೆದುಹಾಕಬೇಕೆಂಬ ಆಲೋಚನೆ ನಡೆದು ಅದರಿಂದ ಅಲ್ಲಿರುವ ಪ್ರಜೆಗಳಿಗೆ ಅಂಜಿಕೆಯುಂಟಾಗಿರುತ್ತೆಂದು ತಿಳಿದುಬಂದಿರುವುದರಿಂದ ಆ ಪ್ರಕಾರವಾದ ಆಲೋಚನೆ ನಡೆದಿದ್ದರೆ ಅದನ್ನು ಸರ್ವಥಾ ಬಿಟ್ಟುಕೊಡಬೇಕೆಂದೂ ಮತ್ತು ಆ ಪ್ರಕಾರದ ಆಶ್ವಾಸನವನ್ನು ಕೊಟ್ಟು ಪ್ರಜೆಗಳ ಅಂಜಿಕೆಯನ್ನು ದೂರಮಾಡಬೇಕೆಂದೂ ಈ ಸಮ್ಮೇಳನವು ಅವರಿಗೆ ವಿಜ್ಞಾಪಿಸುತ್ತದೆ.

ಈ ಠರಾವನ್ನು ಜಮಖಂಡಿ ಸಂಸ್ಥಾನದ ಪ್ರಧಾನ ಮಂತ್ರಿಗಳಿಗೆ ಕಳುಹಿಸಿದುದಾಯಿತು; ಪ್ರತ್ಯುತ್ತರವಾವುದೂ ಇದುವರೆಗೆ ಬಂದಿರುವುದಿಲ್ಲ.

**ನಿರ್ಣಯ ೧೨.**—ಉತ್ತರ ಕರ್ನಾಟಕದಲ್ಲಿರುವ ಕೊಲ್ಹಾಪುರ, ರಾಮದುರ್ಗ, ಮಿರಜ (ಜೂನಿಯರ್ ಮತ್ತು ಸೀನಿಯರ್), ಸಾಂಗಲಿ, ಕುರಂದವಾಡ (ಜೂನಿಯರ್ ಮತ್ತು ಸೀನಿಯರ್), ಔಂಧ, ಅಕ್ಕಲಕೋಟೆ, ಜತ್ತ, ಮುಧೋಳ, ಜಮಖಂಡಿ ಮುಂತಾದ ಸಂಸ್ಥಾನಗಳಲ್ಲಿಯ ಕನ್ನಡ ಭಾಗಗಳ ಪ್ರಜೆಗಳ ಅನುಕೂಲ್ಯಕ್ಕೋಸ್ಕರ ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕೆಂದೂ ಕೋರ್ಟು ಕಚೇರಿಗಳಲ್ಲಿ ಕನ್ನಡ ಭಾಷೆಗೆ ಅವಕಾಶ ಕೊಡಬೇಕೆಂದೂ ಈ ಸಮ್ಮೇಳನವು ವಿಜ್ಞಾಪಿಸುತ್ತದೆ.

**ಇದನ್ನು ಆಯಾ ಸಂಸ್ಥಾನಗಳ ಮುಖ್ಯಾಧಿಕಾರಿಗಳಿಗೆ ಕಳುಹಿಸಲಾಯಿತು ; ಪ್ರತ್ಯುತ್ತರವಾವುದೂ ಬಂದಿರುವುದಿಲ್ಲ.**

**ನಿರ್ಣಯ ೧೩.**—ಮೇಲಣ ೧೧ ಮತ್ತು ೧೨ನೆಯ ನಿರ್ಣಯಗಳ ವಿಷಯವಾಗಿ ಆಯಾ ಸಂಸ್ಥಾನಗಳಿಗೆ ಹೋಗಿ ಪ್ರಯತ್ನಿಸುವುದಕ್ಕೆ ಕೆಳಗೆ ಬರೆದ ಗೃಹಸ್ಥರದೊಂದು ಉಪಮಂಡಲವನ್ನು ಈ ಸಮ್ಮೇಳನವು ನಿಯಮಿಸುತ್ತದೆ:—

೧. ದಿವಾನ್ ಬಹಾದ್ದೂರ್ ಮ॥ ರಾ॥ ಶ್ರೀನಿವಾಸರಾವ್ ಕೊದ್ದ
೨. ರಾವ್ ಸಾಹೆಬ್ ಮ॥ ರಾ॥ ಪಿ. ಜಿ. ಹಳಕಟ್ಟಿ
೩. ಮ॥ ರಾ॥ ಹನುಮಂತರಾವ್ ಕೌಜಲಗಿ
೪. ,, ಮುದವೇಡಕರ್ ಕೃಷ್ಣರಾಯರು
೫. ,, ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ
೬. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಗೌ॥ ಕಾರ್ಯದರ್ಶಿಯವರು

**ಈ ಉಪಮಂಡಲವು ಕಳೆದ ವರುಷ ಯಾವ ಪ್ರಯತ್ನವನ್ನು ಮಾಡಲೂ ಸಾಧ್ಯವಾಗಲಿಲ್ಲವೆಂಬುದು ಶೋಚನೀಯವಾದ ವಿಷಯ.**

**ನಿರ್ಣಯ ೧೪.**—ಕನ್ನಡ ಪ್ರಾಂತವಾದ ಬಳ್ಳಾರಿ ಜಿಲ್ಲೆಯನ್ನು ಆಂಧ್ರ ವಿಶ್ವವಿದ್ಯಾಲಯಕ್ಕೆ ಸೇರಿಸಿದುದನ್ನು ಈ ಸಮ್ಮೇಳನವು ಪುನಃ ತೀಕ್ಷ್ಣವಾಗಿ ನಿಷೇಧಿಸಿ ಆ ಜಿಲ್ಲೆಯನ್ನು ತೀವ್ರವೇ ಆಂಧ್ರ ವಿಶ್ವವಿದ್ಯಾಲಯದಿಂದ ಬೇರ್ಪಡಿಸುವುದು ಅತ್ಯಾವಶ್ಯಕವೆಂದು ಮದರಾಸು ಸರ್ಕಾರವನ್ನು ಪ್ರಾರ್ಥಿಸುತ್ತದೆ; ಮತ್ತು ಈ ವಿಷಯದಲ್ಲಿ ಡಾ॥ ನಾಗಣ್ಣಗೌಡರು ಮದರಾಸು ನ್ಯಾಯವಿಧಾಯಕ ಸಭೆಯಲ್ಲಿ ತಂದಿರುವ ಬಿಲ್ಲನ್ನು ಕರ್ಣಾಟಕದ ಪ್ರತಿನಿಧಿಗಳು ಶ್ರದ್ಧಾಪೂರ್ವಕವಾಗಿ ಸಮರ್ಥಿಸಬೇಕೆಂದೂ ಪ್ರಾರ್ಥಿಸುತ್ತದೆ.

**ಇದನ್ನು ಮದರಾಸು ಸರ್ಕಾರದ ಕಾರ್ಯದರ್ಶಿಯವರಿಗೆ ಕಳುಹಿಸಲು, ನಮ್ಮ ಪತ್ರವು ಅವರ ಹಸ್ತಗತವಾಗಿರುವುದೆಂದು ಮಾತ್ರ ತಿಳಿಸಿದ್ದಾರೆ.**

**ನಿರ್ಣಯ ೧೫.**—೧೯೨೦ನೆಯ ಮೇ ತಿಂಗಳಲ್ಲಿ ಬಳ್ಳಾರಿಯಲ್ಲಿ ಕೂಡಿದ ಸಾಹಿತ್ಯ ಸಮ್ಮೇಳನದಲ್ಲಿ ಮುಂಜೂರು ಮಾಡಿದ ಎರಡನೆಯ ಸಂಖ್ಯೆಯ ನಿರ್ಣಯವನ್ನು ಈ ಸಮ್ಮೇಳನವು ಮತ್ತೆ ಮುಂಜೂರು ಮಾಡುತ್ತದೆ:—

"ಬಳ್ಳಾರಿಯು ಕನ್ನಡ ಜಿಲ್ಲೆಯಾಗಿರುವುದರಿಂದ ಇಲ್ಲಿಯ ಕೋರ್ಟು ಕಚೇರಿಗಳಲ್ಲಿ ಇದುವರೆಗೂ ಕನ್ನಡವನ್ನು ಸರ್ಕಾರದವರು ವ್ಯವಹಾರದಲ್ಲಿ ತಾರದೆ ಇರುವುದು ಅನ್ಯಾಯವಾಗಿರುವ ಕಾರಣ ಆದಷ್ಟು ತೀವ್ರದಲ್ಲಿ ಈ

ಜಿಲ್ಲೆಯ ತಾಲ್ಲೂಕುಗಳಲ್ಲೆಲ್ಲ ಕನ್ನಡವನ್ನು ಉಪಯೋಗಿಸುವಂತೆ ಸರ್ಕಾರದವರು ಮಾಡತಕ್ಕದ್ದು; ಇದಕ್ಕೆ ಸಂಬಂಧಿಸಿದ ಫಾರಮುಗಳನ್ನೂ ನೋಟೀಸುಗಳನ್ನೂ ಕನ್ನಡದಲ್ಲೇ ಪ್ರಕಟಿಸತಕ್ಕದ್ದು; ಅಲ್ಲದೆ, ಪ್ರೈಮರಿ ಸ್ಕೂಲುಗಳನ್ನು ಸ್ಥಾಪಿಸಿ, ಕನ್ನಡವನ್ನೇ ಪ್ರಧಾನವಾಗಿ ಕಲಿಸಲು ಸರ್ಕಾರದವರೂ ಲೋಕಲ್ ಬೋರ್ಡಿನವರೂ ಮ್ಯುನಿಸಿಪಾಲಿಟಿಯವರೂ ಪ್ರಾರಂಭ ಮಾಡತಕ್ಕದ್ದು.

ಇನ್ನು ಮದರಾಸು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಕಳುಹಿಸಿದುದಾಯಿತು. ನಿರ್ಣಯವು ಬಂದು ಸೇರಿರುವುದೆಂದು ಮಾತ್ರ ಅಪ್ಪಣೆ ಕೊಟ್ಟಿರುತ್ತಾರೆ.

**ನಿರ್ಣಯ ೧೯.**—ಅಖಿಲ ಕರ್ಣಾಟಕಕ್ಕೆ ಒಂದೇ ತೆರದ ಕ್ರಮಿಕ ಪುಸ್ತಕಗಳಿರುವುದು ಆವಶ್ಯಕವಿರುವುದರಿಂದ ಮೈಸೂರು, ಹೈದರಾಬಾದು ಮತ್ತು ಬ್ರಿಟಿಷ್ ಸರ್ಕಾರದವರು ಕೂಡಿ ಒಂದು ಕಮಿಟಿಯನ್ನು ಏರ್ಪಡಿಸಿ, ಆ ಪ್ರಕಾರದ ಕ್ರಮಿಕ ಪುಸ್ತಕಗಳನ್ನು ಸಿದ್ಧಪಡಿಸಬೇಕೆಂದು ಈ ಸಮ್ಮೇಳನವು ಕೇಳಿಕೊಳ್ಳುತ್ತದೆ.

ಇದನ್ನು ಮುಂಬಯಿ, ಮದರಾಸು, ಮೈಸೂರು ಸರ್ಕಾರಗಳಿಗೆ ಕಳುಹಿಸಿದುದಾಯಿತು. ಮುಂಬಯಿ ಮತ್ತು ಮದರಾಸು ಸರ್ಕಾರಗಳಿಂದ ನಮ್ಮ ಪತ್ರವು ತಲಪಿರುವುದೆಂದೂ, ಮೈಸೂರು ಸರ್ಕಾರದಿಂದ ಈ ವಿಷಯವನ್ನು ಬೋರ್ಡ್ ಆಫ್ ಎಜ್ಯುಕೇಷನ್ ಅವರ ಲಕ್ಷ್ಯಕ್ಕೆ ತಂದಿರುವುದೆಂದೂ ಪತ್ರಗಳು ಬಂದಿವೆ.

**ನಿರ್ಣಯ ೨೦.**—ಮೈಸೂರು, ಮದರಾಸು, ಮುಂಬಯಿ ಸರ್ಕಾರಗಳ ಕನ್ನಡ ಶಾಲೆಗಳಲ್ಲಿ ಈಗ ಬಳಸುತ್ತಿರುವ ಬೇರೆ ಬೇರೆ ಬಾಲಬೋಧೆಗಳನ್ನು ಕ್ರೋಡೀಕರಿಸಿ ಭಾಷೆ, ವಿಷಯ ಪ್ರತಿಪಾದನೆ ಮುಂತಾದುವು ಒಂದೇ ರೂಪವಾಗಿ ಇರುವಂತೆ ಪರಿಷ್ಕರಿಸಿ ಅಖಿಲ ಕರ್ಣಾಟಕದಲ್ಲಿ ಒಂದೇ ಬಾಲಬೋಧೆಯನ್ನು ಪ್ರಚಾರಕ್ಕೆ ತರುವ ಉದ್ದೇಶದಿಂದ ಕರ್ಣಾಟಕ ಸಾಹಿತ್ಯ ಪರಿಷತ್ತಿನವರು, ಸಮ್ಮೇಳನದಲ್ಲಿ ಗೊತ್ತಾದ ಪಂಡಿತ ಮಂಡಲಿಯ ಸಹಾಯವನ್ನು ಪಡೆದು, ಮುಂದಿನ ಸಮ್ಮೇಳನದೊಳಗಾಗಿ ಪುಸ್ತಕವನ್ನು ಸಿದ್ಧಪಡಿಸಿ ಆಯಾ ಸರ್ಕಾರಗಳ ಅಪ್ಪಣೆಯನ್ನು ಪಡೆಯುವುದರ ಮೂಲಕ ಈ ಕಾರ್ಯವನ್ನು ಸಫಲಗೊಳಿಸಬೇಕೆಂದು ಈ ಸಮ್ಮೇಳನವು ನಿರ್ಧರಿಸುತ್ತದೆ.

ಈ ನಿರ್ಣಯದಲ್ಲಿ ಉಕ್ತವಾಗಿರುವ ಪಂಡಿತ ಮಂಡಲಿಯ ಪ್ರತಿಯೊಬ್ಬ ಸದಸ್ಯರಿಗೂ ಮೈಸೂರು, ಮುಂಬಯಿ, ಮದರಾಸು—ಈ ಪ್ರಾಂತಗಳಲ್ಲಿ ಪಠ್ಯಪುಸ್ತಕವಾಗಿಟ್ಟಿರುವ ಬಾಲಬೋಧೆಗಳ ಒಂದೊಂದು ಪ್ರತಿಯನ್ನು ಕಳುಹಿಸಿದುದಾಯಿತು. ಕೆಲವರು ಆಯಾ ಪುಸ್ತಕಗಳ ವಿಷಯದಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿರುವರು; ಇನ್ನೂ ಕೆಲವರು ತಿಳಿಸಿಲ್ಲ. ಎಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಪತ್ರದ್ವಾರಾ ತಿಳಿಸಿದನಂತರ ಸಭೆ ಸೇರಿಸಿ ವಿಷಯ ವ್ಯವಸ್ಥೆ ಮಾಡಲಾಗುತ್ತದೆ. ಇದಕ್ಕೆ ಸ್ವಲ್ಪ ಕಾಲವು ಆವಶ್ಯಕ.

**ನಿರ್ಣಯ ೨೧.**—ಕರ್ಣಾಟಕದಲ್ಲಿರುವ ಮರಾಠಿ, ತೆಲುಗು, ತಮಿಳು ಮತ್ತು ಉರ್ದು ಶಾಲೆಗಳಲ್ಲಿರುವ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯ ಜ್ಞಾನವಿರುವುದು ಅವಶ್ಯವಿರುವುದರಿಂದಲೂ, ಆ ಪ್ರಕಾರದ ಜ್ಞಾನವು ಪರಸ್ಪರ ಸ್ನೇಹಭಾವ

ವನ್ನು ಬೆಳೆಯಿಸುವುದಕ್ಕೆ ಸಾಧಕವಾದುದರಿಂದಲೂ ಕರ್ಣಾಟಕ ಸ್ಥಾನಿಕ ಸಂಸ್ಥೆಗಳು ಆ ಶಾಲೆಗಳಲ್ಲಿ ಕನ್ನಡ ಭಾಷೆಯನ್ನು ಕಲಿಸುವ ಏರ್ಪಾಡು ಮಾಡಬೇಕೆಂದು ಈ ಸಮ್ಮೇಳನವು ಕೇಳಿಕೊಳ್ಳುತ್ತದೆ.

ಈ ನಿರ್ಣಯವನ್ನು ಧಾರವಾಡ, ಬೆಳಗಾಂವಿ, ಬಿಜಾಪುರ, ಕಲ್ಬುರ್ಗಿ, ರಾಯಚೂರು, ಮಂಗಳೂರು, ಉತ್ತರ ಕನ್ನಡ, ಬಳ್ಳಾರಿ, ಅನಂತಪುರ—ಈ ಜಿಲ್ಲೆಗಳಲ್ಲಿಯ ಡಿಸ್ಟ್ರಿಕ್ಟ ಬೋರ್ಡುಗಳಿಗೆ ಕಳುಹಿಸಿದುದಾಯಿತು.

**ನಿರ್ಣಯ ೨೨.**—ಮುಂಬಯಿ ಕರ್ಣಾಟಕದಲ್ಲಿಯ ವರ್ನಾಕ್ಯುಲರ್ ಸ್ಕೂಲ್ ಫೈನಲ್ ಪರೀಕ್ಷೆಗೆ ಬಹು ವರ್ಷಗಳಿಂದಲೂ ಒಂದೇ ಪಠ್ಯಪುಸ್ತಕವನ್ನು ನೇಮಿಸುತ್ತಿರುವುದು ಕರ್ಣಾಟಕ ಸಾಹಿತ್ಯ ಜ್ಞಾನ ವಿಕಾಸಕ್ಕೆ ಅವಕಾಶವನ್ನು ತಪ್ಪಿಸುವುದಾದ ಕಾರಣ ಪ್ರತಿ ವರ್ಷವೂ ಬದಲಾಯಿಸಿ ಬೇರೆ ಬೇರೆ ಪುಸ್ತಕಗಳನ್ನು ಇಡಬೇಕೆಂದು ಈ ಸಮ್ಮೇಳನವು ಮುಂಬಯಿ ಸರ್ಕಾರವನ್ನೂ ಸ್ಥಾನಿಕ ಸರ್ಕಾರವನ್ನೂ ಕೇಳಿಕೊಳ್ಳುತ್ತದೆ.

ಇದನ್ನು ಮುಂಬಯಿ ಸರ್ಕಾರಕ್ಕೆ ಕಳುಹಿಸಲು, ಅವರು ಪತ್ರವು ತಲುಪಿರುವುದೆಂದು ಮಾತ್ರ ತಿಳಿಸಿದ್ದಾರೆ.

**ನಿರ್ಣಯ ೨೩.**—ಅಖಿಲ ಕರ್ಣಾಟಕಕ್ಕೆ ಒಂದೇ ವಿಶ್ವವಿದ್ಯಾಲಯವಿರುವುದು ಕರ್ಣಾಟಕದ ದೃಷ್ಟಿಯಿಂದ ಹಿತಕರವಾಗಿರುವುದರಿಂದ ಮೈಸೂರು, ಬ್ರಿಟಿಷ್ ಮತ್ತು ಹೈದರಾಬಾದು ಸರ್ಕಾರದವರು ಕೂಡಿ ಆ ಪ್ರಕಾರದ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಎತ್ತುಗಡೆಯನ್ನು ಮಾಡಬೇಕೆಂದು ಈ ಸಮ್ಮೇಳನವು ವಿಜ್ಞಾಪಿಸುತ್ತದೆ.

ಈ ಠರಾವನ್ನು ಘನಹೊಂದಿದ ವೈಸರಾಯಿಯವರ ಪ್ರಧಾನ ಕಾರ್ಯದರ್ಶಿಯವರಿಗೂ, ಮೈಸೂರು ಮತ್ತು ಹೈದರಾಬಾದು ಸಂಸ್ಥಾನಗಳಿಗೂ ಕಳುಹಿಸಿದುದಾಯಿತು. ಇಂಡಿಯಾ ಸರ್ಕಾರದಿಂದಲೂ ಹೈದರಾಬಾದು ಸರ್ಕಾರದಿಂದಲೂ ಯಾವ ಪ್ರತ್ಯುತ್ತರವೂ ಬಂದಿರುವುದಿಲ್ಲ. ಮೈಸೂರು ಸರ್ಕಾರದವರು ಮಾತ್ರ ಈ ನಿರ್ಣಯದ ನಕಲನ್ನು ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಕಳುಹಿಸಲಾಗಿದೆ ಎಂದು ತಿಳಿಸಿದ್ದಾರೆ.

**ನಿರ್ಣಯ ೨೪.**—ಮೈಸೂರು, ಮದರಾಸು ಇಲಾಖೆಗಳಲ್ಲಿರುವ ಕನ್ನಡ ಪಂಡಿತ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಬಂದವರನ್ನು ಮುಂಬಯಿ, ನಿಜಾಂ ಇಲಾಖೆಗಳಲ್ಲಿರುವ ಹೈಸ್ಕೂಲು ಮುಂತಾದುವುಗಳಲ್ಲಿ ನೇಮಿಸಿಕೊಂಡು ಅವರ ಪಾಂಡಿತ್ಯದ ಲಾಭವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡುವುದು ಇಷ್ಟವಾಗಿರುವುದರಿಂದ ಈ ಎರಡೂ ಸರ್ಕಾರದವರು ಆ ಪ್ರಕಾರ ನೇಮಿಸಿಕೊಳ್ಳಬೇಕೆಂದು ಈ ಸಮ್ಮೇಳನವು ಮುಂಬಯಿ, ನಿಜಾಂ ಸರ್ಕಾರದವರನ್ನು ಕೇಳಿಕೊಳ್ಳುತ್ತದೆ.

ಮುಂಬಯಿ ಸರ್ಕಾರದ ವಿದ್ಯಾ ಖಾತೆಯವರು ನಮ್ಮ ಪತ್ರವು ತಲುಪಿರುವುದೆಂದು ತಿಳಿಸಿದ್ದಾರೆ.

**ನಿರ್ಣಯ ೨೫.**—ಕೊಪ್ಪಳ ಜಿಲ್ಲೆಯಲ್ಲಿ ಮೊದಲು ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ಕೊಡುತ್ತಿದ್ದುದನ್ನು ನಿಲ್ಲಿಸಿಬಿಟ್ಟಿರುವುದರಿಂದ ಪುನಃ ಉಚಿತ

ಶಿಕ್ಷಣವನ್ನೇ ಪ್ರಾರಂಭಿಸಬೇಕೆಂದು ನವಾಬ್ ಸಾಲಾರ್ ಜಂಗ್ ಬಹಾದ್ದೂರರವ ರನ್ನು ಈ ಸಮ್ಮೇಳನವು ಪ್ರಾರ್ಥಿಸಿಕೊಳ್ಳುತ್ತದೆ.

ಇದನ್ನು ನವಾಬ್ ಸಾಲಾರ್ ಜಂಗ್ ಬಹಾದ್ದೂರರವರಿಗೆ ಕಳುಹಿಸಲಾಯಿತು; ಯಾವ ಉತ್ತರವೂ ಬಂದಿರುವುದಿಲ್ಲ.

**ನಿರ್ಣಯ ೨೬.**—ಕರ್ಣಾಟಕವು ವಿಶಿಷ್ಟವಾದ ನುಡಿಯ ಸಂಸ್ಕೃತಿಯ ನಾಡಾಗಿರುವುದರಿಂದ ಮುಂಬಯಿ ಸರ್ಕಾರದವರು ದಕ್ಷಿಣ ಮಹಾರಾಷ್ಟ್ರವೆಂಬ ಅನನ್ವರ್ಥಕವಾದ ಹೆಸರನ್ನು ತೆಗೆದುಹಾಕಿ ಮುಂಬಯಿ ಕರ್ಣಾಟಕವೆಂಬ ಹೆಸ ರನ್ನು ಕೊಡಬೇಕೆಂದು ಈ ಸಮ್ಮೇಳನವು ಮುಂಬಯಿ ಸರ್ಕಾರಕ್ಕೆ ಬಿನ್ನವಿಸುತ್ತದೆ.

ಮುಂಬಯಿ ಸರ್ಕಾರದವರು ಈ ನಿರ್ಣಯವನ್ನೊಳಕೊಂಡ ಪತ್ರವು ತಲಪಿರು ವುದೆಂದು ಮಾತ್ರ ತಿಳಿಸಿದ್ದಾರೆ.

**೯. ಆಯ ವ್ಯಯ.**—ಇದರ ಪಟ್ಟಿಯನ್ನು ೧೮-೧೯ನೆಯ ಪುಟಗಳಲ್ಲಿ ಕೊಟ್ಟಿದೆ. ಸಂವತ್ಸರಾದಿಯಲ್ಲಿ ನಮ್ಮಲ್ಲಿದ್ದ ಮೊಬಲಗು ರೂ. ೧೩,೧೯೬-೮-೪. ಈ ವರ್ಷ ವಸೂಲಾದದ್ದು ರೂ. ೬,೬೬೩-೧೪-೬; ಈ ವರ್ಷ ಪರಿಷತ್ತಿನಿಂದ ವೆಚ್ಚವಾದ ಮೊಬಲಗು ೩,೫೬೯-೯-೩. ಆಯಕ್ಕಿಂತಲೂ ವ್ಯಯವು ರೂ. ೩,೦೯೪-೫-೩ ಕಡಿಮೆಯಾಗಿದೆ. ಇದರಲ್ಲಿ ರೂ. ೩,೦೦೦ ಶ್ರೀಮದ್ಯುವರಾಜ ರಿಂದ ಕಟ್ಟಡದ ಫಂಡಿಗಾಗಿ ಬಂದ ಸಹಾಯ ದ್ರವ್ಯವಾಗಿರುತ್ತದೆ.

ಈ ವರ್ಷದ ನಮ್ಮ ಲೆಕ್ಕದ ಪಟ್ಟಿಗಳನ್ನು ಪರಿಶೀಲಿಸಿಕೊಟ್ಟುದಕ್ಕಾಗಿ ಬೆಂಗಳೂರಿನಲ್ಲಿರುವ ಮೈಸೂರು ಸರ್ಕಾರದ ಕನ್ನಡ ಟ್ರಾನ್ಸ್ಲೇಟರಾದ ಮ॥ರಾ॥ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್ಎಲ್.ಬಿ. ಅವರಿಗೆ ಪರಿಷತ್ತು ವಂದನೆ ಗಳನ್ನು ಅರ್ಪಿಸುತ್ತದೆ.

**೧೦. ಪರಿಷತ್ತಿನ ಕಟ್ಟಡ.**—ಕಳೆದ ವರುಷದ ವರದಿಯಲ್ಲಿ ಪರಿಷತ್ತಿನ ಕಟ್ಟಡದ ವಿಚಾರವನ್ನು ಅರಿಕೆಮಾಡಿದ ಸಂದರ್ಭದಲ್ಲಿ, "ಇನ್ನು ಕೆಲವು ತಿಂಗ ಳೊಳಗಾಗಿಯೇ ಕಟ್ಟಡದ ಕಾರ್ಯವು ಪ್ರಾರಂಭವಾಗುವುದೆಂದು ಪರಿಷತ್ತು ಹಾರೈಸುತ್ತದೆ" ಎಂದು ವಿಜ್ಞಾಪಿಸಿಕೊಂಡೆವು. ಕಟ್ಟಡದ ನಕಾಶೆಯೂ ಅದಕ್ಕೆ ತಗಲುವ ಖರ್ಚಿನ ಅಂದಾಜು ಪಟ್ಟಿಯೂ ಮೈಸೂರು ಸರ್ಕಾರದ ಎನ್‌ಜಿನಿಯರು ಗಳಿಂದ ತಯಾರಾಗಿವೆ. ಅವನ್ನು ಪರಿಷತ್ತಿನ ಅಧ್ಯಕ್ಷರಾದ ಮೈಸೂರು ಸಂಸ್ಥಾ ನದ ಯುವರಾಜರು ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹಾದ್ದೂರ್, ಜಿ.ಸಿ.ಐ.ಇ. ಅವರು ಒಪ್ಪಿರುತ್ತಾರೆ. ಕಟ್ಟಡದ ಖರ್ಚಿನ ಅಂದಾಜು ಸುಮಾರು ಮೂವತ್ತು ಸಾವಿರ ರೂಪಾಯಿಗಳು. ಘನಹೊಂದಿದ ಮೈಸೂರು ಸರ್ಕಾರ ದವರು ಪರಿಷತ್ತಿನ ಕಟ್ಟಡಕ್ಕಾಗಿ ಬೆಂಗಳೂರು ಕಣ್ಣಾಸ್ಪತ್ರೆಯ ಮುಂದೆ ಹಾರ್ಡಿಂಜ್ ರಸ್ತೆಯ ಪಕ್ಕದಲ್ಲಿ ಅತ್ಯುದಾರ ಭಾವದಿಂದ ದಯಪಾಲಿಸಿರುವ ನಿವೇಶನವು ಮಧ್ಯವರ್ತಿಯಾಗಿರುವುದಲ್ಲದೆ ವಿಸ್ತಾರವಾಗಿಯೂ ಇರುತ್ತದೆ. ಇದಲ್ಲದೆ, ಅವರು ಕಟ್ಟಡಕ್ಕಾಗಿ ಹದಿನಾಲ್ಕು ಸಾವಿರ ರೂಪಾಯಿಗಳನ್ನು ದಯ ಪಾಲಿಸಿದ್ದಾರೆ. ಪರಿಷತ್ತಿನ ಏಳಿಗೆಯ ವಿಷಯದಲ್ಲಿ ಘನಹೊಂದಿದ ಮೈಸೂರು ಸರ್ಕಾರದವರು ತೋರಿಸುತ್ತಿರುವ ಸಹಾನುಭೂತಿಯೂ ಸಾಹಾಯ್ಯವೂ ಚಿರ ಸ್ಮರಣೀಯವಾದುವು. ಪರಿಷತ್ತಿನ ಸದಸ್ಯರು ಬೆಂಗಳೂರಿಗೆ ಬಂದಲ್ಲಿ ಅವರು

ಪರಿಷನ್ಮಂದಿರದಲ್ಲಿ ಉಳಿದುಕೊಳ್ಳುವುದಕ್ಕೆ ಅನುಕೂಲ್ಯಗಳನ್ನು ಕಲ್ಪಿಸಿಕೊಡ ಲಾಗುವುದು. ಪರಿಷನ್ಮಂದಿರವು ಪೂರೈಸಿರುವುದೆಂಬ ಸಂಗತಿಯನ್ನು ಮುಂದಣ ವಾರ್ಷಿಕಾಧಿವೇಶನದಲ್ಲಿ ಅರಿಕೆಮಾಡಲು ಸಾಧ್ಯವಾಗುವುದೆಂದು ನಾವು ನಂಬಿದ್ದೇವೆ.

೧೧. **ಉಪಸಂಹಾರ.**—ಪರಿಷತ್ತಿನಂತಹ ಸಂಸ್ಥೆಯು ಮಾಡತಕ್ಕ ಕಾರ್ಯಗಳು ಅನೇಕವಾಗಿರುವುದು ತಮ್ಮೆಲ್ಲರಿಗೂ ವೇದ್ಯವಾದ ವಿಷಯವೇ. ಅವುಗಳಲ್ಲಿ ಕೆಲವನ್ನಾದರೂ ಪರಿಷತ್ತು ತನ್ನ ಉಪಪತ್ತಿಗೆ ತಕ್ಕಂತೆ ಅದು ಹುಟ್ಟಿದ ಮೊದಲು ಈಗ ಹದಿನಾಲ್ಕು ವರ್ಷಗಳಿಂದ ಮಾಡಿರುವುದೆಂಬುದು ನಮ್ಮ ಅಭಿಪ್ರಾಯ. ಈ ವರದಿಯ ಪ್ರಾರಂಭದಲ್ಲಿ ತಮಗೆ ಅರಿಕೆಮಾಡಿಕೊಂಡಂತೆ ದ್ರವ್ಯಾಭಾವದಿಂದ ಹೆಚ್ಚು ಕೆಲಸಗಳನ್ನು ಮಾಡಲು ಪರಿಷತ್ತು ಸಮರ್ಥವಾಗಿಲ್ಲ. ಕರ್ಣಾಟಕದ ಗ್ರಂಥಕರ್ತರನೇಕರು ಪರಿಷತ್ತಿನಿಂದ ದ್ರವ್ಯ ಸಹಾಯವನ್ನು ಬಯಸುತ್ತಾರೆ; ಸಾಧ್ಯವಾದ ಸಾಹಾಯ್ಯವನ್ನು ಪರಿಷತ್ತು ಮಾಡುತ್ತಲಿದೆ. ಅವರು ಸಾಹಾಯ್ಯವನ್ನು ಬಯಸುವುದೇನೋ ಸಹಜ. ಖಜಾನೆಯೊಂದು ಪರಿಷತ್ತಿನವರ ವಶವಾಗಿದ್ದಲ್ಲಿ ಇಲ್ಲ ಎಂದು ಹೇಳದೆ ಯೋಗ್ಯರಾದವರಿಗೆಲ್ಲ ಸಾಹಾಯ್ಯಮಾಡಬಹುದು. ಗ್ರಂಥಕರ್ತರ ಅವಸ್ಥೆಯು ಶೋಚನೀಯವಾದುದು. ಸಾಲಮಾಡಿ ಪುಸ್ತಕವನ್ನು ಅಚ್ಚುಹಾಕಿದರೆ ಕೊಂಡುಕೊಳ್ಳುವವರಿಲ್ಲ. ಅಕ್ಷರಜ್ಞ ರಲ್ಲಿ ಇಂಗ್ಲೀಷು ಅಭ್ಯಾಸಮಾಡಿದವರಿಗೆ ಕನ್ನಡದಲ್ಲೇನಿರುವುದೆಂಬ ಅಸಡ್ಡೆ. ಕನ್ನಡ ಪುಸ್ತಕಗಳನ್ನು ಸುಮ್ಮನೆ ಕೊಟ್ಟರೂ ಓದುವವರಿಲ್ಲ. ಕನ್ನಡ ಭಾಷೆಯ ಅವಸ್ಥೆ ಈ ಪರಿ. ಸಾಮಾನ್ಯರಿಗಾದರೋ ಈಗಿರುವ ಸ್ಥಿತಿಯಲ್ಲಿಯೇ ತೃಪ್ತಿ. ಒಬ್ಬರು ಆಂಗ್ಲೇಯ ಗ್ರಂಥಕಾರರು ಇದನ್ನು 'Pathetic Contentment' (ಹೃದಯದ್ರಾವಕ ತೃಪ್ತಿ) ಎಂದು ಕರೆಯುತ್ತಾರೆ. ಈಗಿರುವುದಕ್ಕಿಂತ ಸಕಲ ವಿಷಯಗಳಲ್ಲಿಯೂ ಮೇಲಾಗಬೇಕೆಂಬ ಆಲೋಚನೆಯೂ ಆಶೆಯೂ ಹುಟ್ಟದೆ ಇರುವುದು ಅತ್ಯಂತ ಶೋಚನೀಯವಾದ ವಿಷಯ. ಸಾಮಾನ್ಯರು ಎಂದರೆ, ಕರ್ಣಾಟಕದ ರೈತರೂ, ವ್ಯಾಪಾರಗಾರರೂ, ಕಸಬುದಾರರೂ—ಇವರುಗಳಲ್ಲಿ ಭಾಷಾ ಪ್ರೇಮವುಂಟಾಗುವ ಪರ್ಯಂತ ಕರ್ಣಾಟಕ ಭಾಷಾ ಸೇವೆಯ ಏಳಿಗೆಯ ಗತಿ ಮಂದ. ಈ ವಿಷಯದಲ್ಲಿ ಪರಿಷತ್ತು ಪ್ರಚಾರ ಕಾರ್ಯವನ್ನು ತೀವ್ರವಾಗಿ ನಡೆಯಿಸಬೇಕಾಗಿರುತ್ತದೆ. ಇದಕ್ಕೆ ಧನ ಬೇಕು. ಎಲ್ಲಿ ಹೋದರೂ ಎಲ್ಲೆಲ್ಲಿ ಸುತ್ತಿಕೊಂಡುಬಂದರೂ ಧನಕ್ಕೇ ನಾವು ಒರಬೇಕಾಗುವುದು. ಈ ಕೊರತೆ ಯನ್ನು ನಿವಾರಣೆಮಾಡುವುದು ಹೇಗೆಂಬುದನ್ನು ಪರಿಷತ್ತಿನ ಸದಸ್ಯರೆಲ್ಲರೂ ಆಲೋಚಿಸಿ ವ್ಯವಸ್ಥೆಮಾಡತಕ್ಕದ್ದು. ಪರಿಷತ್ತಿಗೆ ಪೋಷಣೆಸಾಲದೆಂದು ಪ್ರತಿ ವರ್ಷವೂ ನಾವು ತಮ್ಮ ಮುಂದೆ ಒಂದೇ ರಾಗವನ್ನು ಹಾಡುತ್ತಲಿದ್ದೇವೆ. ಇದು ತಮಗೆ ಇಷ್ಟವೇ? ಇದು ತಮಗೆ ರುಚಿಸುವುದೆ?

ಇಂತು, ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯಿಂದ ಆಜ್ಞಪ್ತನಾಗಿ ಬಿನ್ನವಿಸುವ ತಮ್ಮ ಸೇವಕ,

**ನಂಗಪುರಂ ವೆಂಕಟೇಶಯ್ಯಂಗಾರ್,**
ಗೌರವ ಕಾರ್ಯದರ್ಶಿ.

# ಕರ್ಣಾಟಕ ಸಾಹಿತ್ಯ ಪರಿಷತ್ತು

## ಆಸ್ತಿ ಋಣಗಳ ಪಟ್ಟಿ

### ೧೯೨೯ನೆಯ ಏಪ್ರಿಲ್ ೧ನೆಯ ತಾರೀಖಿನಲ್ಲಿದ್ದಂತೆ

| ಆಸ್ತಿ | ರೂ. ಆ. ಪೈ. | ಋಣ | ರೂ. ಆ. ಪೈ. |
|---|---|---|---|
| ಪುಸ್ತಕ ವ್ಯಾಪಾರಿಗಳಿಂದ | ೨೧-೧೪-೦ | ಸಿಬ್ಬಂದಿಯ ವೆಚ್ಚ | ೫೮-೦-೦ |
| ಇತರರಿಂದ | ೨೦-೧೩-೦ | ದೀಪದ ವೆಚ್ಚ | ೩-೪-೬ |
| ಸರ್ಕಾರದ ಗ್ರಾಂಟು | ೧೫೦—೦-೦ | ಸಹಾಯಕರ ಮತ್ತು ಆಜೀವ ಸದಸ್ಯರಚಂದಾ ವೊಬಲಗು | ೪,೩೨೯-೪-೦ |
| ಒರಬಹುದಾದ ಚಂದಾ ವೊಬಲಗು | ೧,೯೫೦—೦-೦ | | |
| ಡಿಪಾಜಿಟ್ಟುಗಳು | ೧೬,೨೧೧-೧೩-೦ | | |
| ನಗದು ಹಣ | ೭೯—೦-೭ | ಕಟ್ಟಡದ ಹಣ | ೮,೦೦೦-೦-೦ |
| ಡಿಪಾಜಿಟ್ಟುಗಳ ಬಡ್ಡಿ (ಸುಮಾರು) | ೧೦೦—೦-೦ | ಗ್ರಂಥ ಮುದ್ರಣದ ಹಣ | ೨,೫೦೦-೦-೦ |
| ಕೈಯಲ್ಲಿರುವ ಅಚ್ಚಿನ ಕಾಗದ (ಸುಮಾರು) | ೧೦—೦-೦ | ಋಣಕ್ಕಿಂತಲೂ ಆಸ್ತಿಯ ಹೆಚ್ಚು | ೧೦,೨೫೩-೦-೧ |
| ಕೈಯಲ್ಲಿರುವ ಪುಸ್ತಕಗಳ ಬೆಲೆ (ಸುಮಾರು) | ೧,೪೫೦—೦-೦ | | |
| ಪುಸ್ತಕ ಭಾಂಡಾಗಾರ (ಸುಮಾರು) | ೩,೮೫೦—೦-೦ | | |
| ಸಾಮಾನುಗಳು ವಗೈರೆ (ಸುಮಾರು) | ೧,೨೦೦—೦-೦ | | |
| ಆರಾ ಲೈಬ್ರೆರಿಯ ಪಂಪ ಭಾರತಕ್ಕಾಗಿ ಡಿಪಾಜಿಟ್ಟು | ೧೦೦—೦-೦ | | |
| ಒಟ್ಟು ರೂ. .. | ೨೫,೧೪೩—೮-೭ | ಒಟ್ಟು ರೂ. .. | ೨೫,೧೪೩-೮-೭ |

**ಕರ್ಣಾಟಕ ಸಾಹಿತ್ಯ**

ವಿಭವ ಸಂವತ್ಸರದ

## ಆಯ

| | | ರೂ. ಆ. ಪೈ. |
|---|---|---|
| ೧. | ಹೋದ ವರ್ಷದ ಶಿಲ್ಕು .. | ೧೩,೧೯೬–೮–೪ |
| ೨. | ತಿಂಗಳುಗಟ್ಟಲೆ ಸರ್ಕಾರದಿಂದ ಬಂದ ಸಹಾಯ ದ್ರವ್ಯ | ೧,೭೦೦–೦–೦ |
| ೩. | ಪರಿಷತ್ತಿನ ಸದಸ್ಯರಿಂದ ಬಂದ ಚಂದಾ ಹಣ .. | ೪೧೨–೦–೦ |
| ೪. | ಪರಿಷತ್ಪತ್ರಿಕೆಯ ಚಂದಾ ಹಣ .. .. | ೧೬೫–೦–೦ |
| ೫. | ಪರಿಷತ್ತಿನ ಪುಸ್ತಕಗಳ ಮಾರಾಟದಿಂದ ಬಂದ ಹಣ | ೫೬೩–೧–೬ |
| ೬. | ಡಿಪಾಜಿಟ್ಟುಗಳ ಮೇಲೆ ಬಂದ ಬಡ್ಡಿ .. | ೭೩೫–೩–೦ |
| ೭. | ಮುಂಗಡ ಕೊಟ್ಟ ಹಣ ವಾಪಸು ಬಂದದ್ದು .. | ೪೦–೦–೦ |
| ೮. | ಅಂಚೆಯ ಹಾಸಲು ವಸೂಲಾದದ್ದು .. | ೧೨–೭–೬ |
| ೯. | ಕೊಠಡಿಯ ಬಾಡಿಗೆ .. .. | ೨೪–೦–೦ |
| ೧೦. | ಕಟ್ಟಡದ ಫಂಡಿಗಾಗಿ (ಶ್ರೀಮದ್ಯುವರಾಜರವರಿಂದ) | ೩,೦೦೦–೦–೦ |
| ೧೧. | ಇತರ ಚಿಲ್ಲರೆಯ ಬಾಬುಗಳು .. .. | ೧೨–೨–೬ |
| | ಒಟ್ಟು .. | ೧೯,೮೬೦–೬–೧೦ |

I have gone through the accounts and I certify that the above statments of Receipts and Expenses are correct.

(Sd.) C. K. VENKATARAMAYYA, M.A., LL.B.
*Auditor*

**ಪರಿಷತ್ತು, ಬೆಂಗಳೂರು**

ಆಯ ವ್ಯಯದ ಪಟ್ಟಿ

## ವ್ಯಯ

| | | ರೂ. ಆ. ಪೈ. |
|---|---|---|
| ೧. | ಪರಿಷತ್ತಿನ ಆಫೀಸಿನ ಸಿಬ್ಬಂದಿಗಾಗಿ .. | ೬೮೯—೨—೦ |
| ೨. | ಪರಿಷನ್ಮಂದಿರದ ಬಾಡಿಗೆ .. .. | ೩೬೦—೦—೦ |
| ೩. | ದೀಪದ ವೆಚ್ಚ .. .. .. | ೩೯—೬—೦ |
| ೪. | ಬರೆವಣಿಗೆಯ ಸಾಮುಗ್ರಿ ಮತ್ತು ಇತರ ಸಾದಿಲ್ವಾರು | ೪೦—೯—೦ |
| ೫. | ಅಂಚೆಯ ಮತ್ತು ಟೆಲಿಗ್ರಾಫು ಹಾಸಲು .. | ೧೬೨–೧೧—೩ |
| ೬. | ಕಾಗದ, ಮುದ್ರಣ ಮತ್ತು ಬೈಂಡಿಗಾಗಿ .. | ೭೧೬–೧೪—೦ |
| ೭. | ಪುಸ್ತಕ ಭಾಂಡಾಗಾರಕ್ಕಾಗಿ .. .. | ೫೦೯—೨—೦ |
| ೮. | ವಾಚನ ಮಂದಿರದ ಪತ್ರಿಕೆಗಳ ಚಂದಾ ಮೊಬಲಗು | ೧೨೩—೦—೦ |
| ೯. | ಮರದ ಸಾಮಾನಿಗೆ ಮುಂಗಡವಾಗಿ ಕೊಟ್ಟಿರುವುದು | ೧೦೦—೦—೦ |
| ೧೦. | ಸಮ್ಮೇಳನಗಳ ವೆಚ್ಚ .. .. | ೪೧೭—೭—೦ |
| ೧೧. | ಪ್ರಚಾರ ಕಾರ್ಯಕ್ಕೆ ವೆಚ್ಚ .. .. | ೫೦—೦—೦ |
| ೧೨. | ಸಾಹಿತ್ಯ ಸೇವೆಗಾಗಿ ಬಹುಮಾನಗಳು .. | ೧೫೦—೦—೦ |
| ೧೩. | ಪರಿಷತ್ಪತ್ರಿಕೆಯ ಹಳೆಯ ಸಂಚಿಕೆಗಳನ್ನು ಕೊಂಡದ್ದು | ೧೨—೪—೦ |
| ೧೪. | ಮಾರಾಟಕ್ಕಾಗಿ ಕೊಂಡ ಪುಸ್ತಕಗಳ ಬೆಲೆ .. | ೧೧೨—೮—೦ |
| ೧೫. | ಪಂಪ ಭಾರತದ ಕಾರ್ಯಕ್ಕಾಗಿ ವೆಚ್ಚ .. | ೬೦—೮—೦ |
| ೧೬. | ಇತರ ಚಿಲ್ಲರೆಯ ವೆಚ್ಚಗಳು .. .. | ೨೬—೨—೦ |
| | ಒಟ್ಟು .. | ೩,೫೬೯—೯—೩ |
| | * ಶಿಲ್ಕು ನಿಂತಿರುವುದು .. | ೧೬,೨೯೦–೧೩—೭ |
| | ಒಟ್ಟು .. | ೧೯,೮೬೦—೬–೧೦ |

* ಶಿಲ್ಕಿಗೆ ತಪಸೀಲು :—

| | |
|---|---|
| ಬೆಂಗಳೂರು ಸಿಟಿ ಕೋ॥ ಸೊಸೈಟಿಯಲ್ಲಿ | |
| ಫಿ॥ ಡಿಪಾಜಿಟ್ಟು | ೧೫,೫೦೦—೦—೦ |
| ಸೇವಿಂಗ್ಸು ಬ್ಯಾಂಕು ಡಿ॥ | ೭೧೧–೧೩—೦ |
| ಗೌ॥ ಕಾರ್ಯದರ್ಶಿಯವರ ಬಳಿ ಸಗದು | ೭೯—೦—೭ |
| ಒಟ್ಟು ರೂ. | ೧೬,೨೯೦—೧೩—೭ |

(Sd.) N. VENKATESA IYENGAR, B.A.
*Honorary Secretary*

(Sd.) B. VENKATANARANAPPA, M.A.
*Honorary Treasurer*

# ಪರಿಶಿಷ್ಟ

## ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಸದಸ್ಯರ ಪಟ್ಟಿ

(೧೯೩೯ನೆಯ ಇಸವಿ ಏಪ್ರಿಲ್ ಮೊದಲನೆಯ ತಾರೀಖಿನಲ್ಲಿದ್ದಂತೆ)

---

### ಪ್ರದಾತೃಗಳು

*‡೧. ರಾಜಸಭಾಭೂಷಣ ಮ|| ರಾ|| ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ., ರಿ|| ಛೀಫ್ ಎಂಜನಿಯರ್, ಬೆಂಗಳೂರು.

### ಸಹಾಯಕರು

*೨. ಮ|| ರಾ|| ಕೃಷ್ಣಾಜೀ ಗೋವಿಂದ ಗೆಜ್ಜ, ಬಿ.ಎ., ಎಲ್‌ಎಲ್.ಬಿ., ವಕೀಲ್ ಬೆಳಗಾಂವಿ.

೩. ಮ|| ರಾ|| ನಾರಾಯಣಸ್ವಾಮಿರಾವ್ ಲೋಕೂರ, ಬೆಳಗಾಂವಿ.

೪. ರಾಜಸಭಾಭೂಷಣ ದಿವಾನ್ ಬಹಾದ್ದೂರ್ ಸರ್ ಕೆ. ಪಿ. ಪುಟ್ಟಣ್ಣಸೆಟ್ಟರು ಸಿ.ಐ.ಇ., ರಿ|| ಕೌನ್ಸಿಲರ್, ಬೆಂಗಳೂರು.

೫. ಮ|| ರಾ|| ಶೇಷಗಿರಿ ತಿರುಮಲರಾವ್ ದಾತಾರ, ಬಿ.ಎ., ಎಲ್‌ಎಲ್.ಬಿ., ವಕೀಲ್, ಬೆಳಗಾಂವಿ.

೬. ಮ|| ರಾ|| ಶ್ರೀನಿವಾಸರಾವ್ ಕೌಜಲಗಿ, ಬಿ.ಎ., ಎಲ್‌ಎಲ್.ಬಿ., ಬಿಜಾಪುರ.

### ಆಜೀವ ಸದಸ್ಯರು

(ಮೈಸೂರು ದೇಶದ ಸದಸ್ಯರು)

ಮ|| ರಾ|| ಗಳಾದ

೭. ಎಸ್. ಎನ್. ಅಪ್ಪಣ್ಣಯ್ಯಂಗಾರ್ಯರು, ಬಿ.ಎ., ಬಿ.ಎಲ್., ಟ್ರೆಜರಿ ಆಫಿಸರು, ಚಿಕ್ಕಮಗಳೂರು.

೮. ಪಿ. ಅಪ್ಪಾಜೀರಾಯರು, ಬಿ.ಎಸ್‌ಸಿ., 11/B. ಆರ್ಪತಿ ಲೇನ್, ಬೌ ಬಜಾರ್, ಕಲ್ಕತ್ತ.

*೯. ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಬೆಂಗಳೂರು.

೧೦. ಡಿ. ಆದೆಪ್ಪನವರು, ಸಾಹುಕಾರರು, 'ಚೂಡಾಮಣಿ', ಬಸವನಗುಡಿ, ಬೆಂಗಳೂರು.

೧೧. ಮಾಗಡಿ ಕರಣಿಕ ಕೃಷ್ಣಮೂರ್ತಿರಾಯರು, ಜಹಗೀರ್ದಾರರು, ಬಸವನಗುಡಿ, ಬೆಂಗಳೂರು.

೧೨. ಸಿ. ಕೃಷ್ಣರಾಯರು, ಬಿ.ಎ., ವಿದ್ಯಾಭ್ಯಾಸದ ಇಲಾಖೆಯ ರಿ|| ಡೆ|| ಇನ್|| ಜನರಲ್, ತುಮಕೂರು.

---

* ಈ ಗುರುತು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರನ್ನು ತೋರಿಸುತ್ತದೆ.

‡ ಇವರು ಸಾಮಾನ್ಯ ಸದಸ್ಯರಾಗಿಯೂ ಇರುವರು.

ಮ|| ರಾ|| ಗಳಾದ

೧೩. ಎ. ಕೇಶವಯ್ಯನವರು, ರಿ|| ಸ್ಕೂಲ್ ಮಾಸ್ಟರು, ಚಿಕ್ಕಬಳ್ಳಾಪುರ.

೧೪. ಡಿ. ಕೊಂಗಾಡಿಯಪ್ಪನವರು, ರಿ|| ಹೆ|| ಮಾಸ್ಟರ್, ದೊಡ್ಡಬಳ್ಳಾಪುರ.

೧೫. ಎಂ. ಎನ್. ಗೋಪಾಲರಾಯರು, ಎಲೆಕ್ಟ್ರಿಕಲ್ ಡಿಪಾರ್ಟ್‌ಮೆಂಟು, ಮಲ್ಲೇಶ್ವರ, ಬೆಂಗಳೂರು.

೧೬. ವಿ. ಆರ್. ತ್ಯಾಗರಾಜ ಅಯ್ಯರವರು, ಎಂ.ಎ., ರಿಟೈರ್ಡ್ ಎಕ್ಸೈಜ್ ಕಮಿಷನರ್, ಬೆಂಗಳೂರು.

೧೭. ವೈ. ನರಸಿಂಗರಾಯರು, ಬಿ.ಎ., ಬಿ.ಎಲ್., ಡೈರೆಕ್ಟರು, ಗಂಧದ ಎಣ್ಣೆಯ ಕಾರ್ಖಾನೆ, ಬೆಂಗಳೂರು.

೧೮. ಸಿ. ಆರ್. ನರಸಿಂಹಯ್ಯಂಗಾರ್ಯರು, ಬಿ.ಎ., ಜಿಯಾಲೊಜಿಸ್ಟ್, ಕಡಕೊಳ (ಮೈಸೂರು).

*೧೯. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರು, ಎಂ.ಎ., ರಿ|| ಡೈರೆಕ್ಟರು, ಶಾಸನದ ಇಲಾಖೆ, ಮಲ್ಲೇಶ್ವರ, ಬೆಂಗಳೂರು.

೨೦. ಬಿ. ನರಹರಿ ಶಾಸ್ತ್ರಿಗಳು, ಹೆ|| ಮಾಸ್ಟರ್ ಬಸವನಗುಡಿ, ಬೆಂಗಳೂರು.

೨೧. ಎಂ. ಎಸ್. ಪುಟ್ಟಣ್ಣನವರು, ಬಿ.ಎ., ರಿ|| ಅಮಲ್ದಾರರು, ಬಸವನಗುಡಿ.

೨೨. ಡಿ. ಕೆ. ಭಾರದ್ವಾಜರು, ವಿದ್ಯಾಭೂಷಣ, ಬಸವನಗುಡಿ.

೨೩. ವೈ. ಕೆ. ರಾಮಚಂದ್ರರಾಯರು, ಬಿ.ಎ., ಎಲ್.ಸಿ.ಇ., ಎಂಜನಿಯರು, ಮೈಸೂರು ರೈಲ್ವೆ, ಶಿವಮೊಗ್ಗ.

೨೪. ರಾವ್ ಸಾಹೆಬ್ ಎಂ. ರಾಮರಾಯರು, ರಿ|| ಫಾರೆಸ್ಟ್ ಆಫಿಸರ್, ಬಸವನಗುಡಿ.

೨೫. ಎಂ. ಎ. ರಾಮಾನುಜಯ್ಯಂಗಾರ್ಯರು, ''ಕಾವ್ಯಕಲಾನಿಧಿ''ಯ ಸಂಪಾದಕರು, ಮೈಸೂರು.

೨೬. ವೀಣೆ ರಂಗಸ್ವಾಮಯ್ಯಂಗಾರ್ಯರು, ಜಮೀನ್‌ದಾರರು, ಶ್ರೀರಂಗಪಟ್ಟಣ.

*೨೭. ರಾಜಕವಿಭೂಷಣ ಎಚ್. ಲಿಂಗರಾಜ ಅರಸಿನವರು, ಅರಮನೆಯ ಮುಜರಾಯಿ ಬಕ್ಷಿ, ಮೈಸೂರು.

೨೮. ಎಚ್. ಕೆ. ವೀರಬಸವಯ್ಯನವರು, ಬಿ.ಎ., ಬಿ.ಎಲ್., ಸ್ಪೆಷಲ್ ಮ್ಯಾಜಿಸ್ಟ್ರೇಟ್, ಕೋಲಾರ.

೨೯. ಎಂ. ವೆಂಕಟಕೃಷ್ಣಯ್ಯನವರು, ''ಸಾಧ್ವೀ'' ಸಂಪಾದಕರು, ಮೈಸೂರು.

*೩೦. ಬಿ. ವೆಂಕಟನಾರಾಯಣಪ್ಪನವರು, ಎಂ.ಎ., ರಿ|| ಕಾಲೇಜು ಪ್ರೊ|| ಬಸವನಗುಡಿ.

೩೧. ಹಲಕೂರು ವೆಂಕಟರಮಣಯ್ಯನವರು, ವಿದ್ಯಾನಿಧಿ, ಹಲಕೂರು (ಕೋಲಾರ ಡಿ||).

*೩೨. ಎ. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., ರಿ|| ಮಿಟಿಯೊರೊಲಾಜಿಕಲ್ ರಿಪೋರ್ಟರು, ಚಾಮರಾಜಪೇಟೆ, ಬೆಂಗಳೂರು.

೩೩. ಬಿ. ವೆಂಕಟೇಶಾಚಾರ್ಯರು, ಎಂ.ಎ., ಪ್ರೊಫೆಸರ್ ಸೆಂಟ್ರಲ್ ಕಾಲೇಜು, ಬೆಂಗಳೂರು.

೩೪. ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್., ಡಿಸ್ಟ್ರಿಕ್ಟ್ ಜಡ್ಜ್, ಮೈಸೂರು.

*೩೫. ಬಿ. ಎಮ್. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಯೂನಿವರ್ಸಿಟಿ ರೆಜಿಸ್ಟ್ರಾರ್, ಮೈಸೂರು.

ಮ|| ರಾ|| ಗಳಾದ

೩೬. ಕೆ. ಶ್ರೀನರಸಿಂಹಯ್ಯನವರು, ಎಂ.ಎ., ಎಲ್.ಟಿ., ವಿದ್ಯಾಭ್ಯಾಸದ ಇಲಾಖಾ ಡೆಪ್ಯುಟಿ ಡೈರೆಕ್ಟರು, ಮೈಸೂರು.

೩೭. ಟಿ. ಶ್ರೀನಿವಾಸರಾಘವಾಚಾರ್ಯರು, ರಿ|| ಕನ್ನಡ ಪಂಡಿತರು, ಟ್ರೈನಿಂಗ್ ಕಾಲೇಜು, ಮೈಸೂರು.

೩೮. ಎಂ. ಶ್ರೀನಿವಾಸರಾಯರು, ಬಿ.ಎ., ರಿ|| ಸರ್ಕಲ್ ಇನ್ಸ್ಪೆಕ್ಟರು, ಮೈಸೂರು.

*೩೯. ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಕನ್ನಡ ಪ್ರೊಫೆಸರು, ಮೈಸೂರು.

(ಮುಂಬಯಿ ಪ್ರಾಂತದ ಸದಸ್ಯರು)

೪೦. ಅಣ್ಣಾರಾವ್ ಬಿ. ಲತ್ತೆ, ಪ್ಲೀಡರ್, ಬೆಳಗಾಂವಿ.

*೪೧. ವಿ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ., "ಜಯಕರ್ನಾಟಕ"ದ ಸಂಪಾದಕರು, ಧಾರವಾಡ.

*೪೨. ಗಂಗಾಧರಪ್ಪ ಸಂಗಪ್ಪ ಸಾಬೋಜಿ, ವರ್ತಕರು, ಥಳಕವಾಡಿ (ಬೆಳಗಾಂ ಡಿ||).

*೪೩. ಎಚ್. ಚೆನ್ನಕೇಶವಯ್ಯಂಗಾರ್ಯರು, ಕರ್ನಾಟಕ ಕಾಲೇಜು, ಧಾರವಾಡ.

೪೪. ಆರ್. ಎ. ಜಹಗೀರ್‌ದಾರ್, ಎಂ.ಎ., ಎಲ್‌ಎಲ್.ಬಿ., ಹೈಕೋರ್ಟು ವಕೀಲರು, ಮುಂಬಯಿ.

೪೫. ರಾವ್ ಬಹಾದ್ದೂರ್ ವಿ. ಬಿ. ಜೋಶಿ, ಬಿ.ಎ., ರಿ|| ಪ್ರಿನ್ಸಿಪಾಲ್, ಟ್ರೈನಿಂಗ್ ಕಾಲೇಜು, ಧಾರವಾಡ.

೪೬. ಎನ್. ಆರ್. ದೇಶಪಾಂಡೆ, ಬಿ.ಎ., ಎಲ್‌ಎಲ್.ಬಿ., ಪ್ಲೀಡರು, ಧಾರವಾಡ.

೪೭. ರಾ. ಹ. ದೇಶಪಾಂಡೆ, ಎಂ.ಎ., ಮಾಳಮಡ್ಡಿ, ಧಾರವಾಡ.

೪೮. ವಿ. ಬಿ. ಧಾರವಾರಕರ್, ಬಿ.ಎ., ಕಾಮನಕಟ್ಟೆ, ಧಾರವಾಡ.

೪೯. ನಾರಾಯಣ ಗುರುರಾವ್ ಜೋಷಿ, ಬಿ.ಎ., ಎಲ್‌ಎಲ್.ಬಿ., ವಕೀಲ್, ಬೆಳಗಾಂವಿ.

೫೦. ನಾರಾಯಣ ತಿರುಮಲರಾವ್ ದಾತಾರ, ವಕೀಲ್, ಬೆಳಗಾಂವಿ.

*೫೧. ನಾರಾಯಣ ಶ್ರೀನಿವಾಸ ರಾಜಪುರೋಹಿತರು, ಶುಕ್ರವಾರ ಪೇಟೆ, ಧಾರವಾಡ.

೫೨. ಆರ್. ಬಿ. ಪೋತುದಾರ್, ಗಿಬ್‌ಟೌನ್, ಧಾರವಾಡ.

೫೩. ಬಿ. ಬಿ. ಬಾಗಿ, ಲೆಕ್ಚರರ್, ಕರ್ನಾಟಕ ಕಾಲೇಜು, ಧಾರವಾಡ.

೫೪. ಬಿ. ಎಸ್. ಬೆಟ್ಟಗೇರಿ, ಸೇರಗಲ್ಲಿ, ಬೆಳಗಾಂವಿ.

೫೫. ವಿ. ಎನ್. ಮುಗದಾಳ್, ಬಿ.ಎ., ಅಸಿಸ್ಟೆಂಟು ಎಜ್ಯುಕೇಷನಲ್ ಇನ್ಸ್ಪೆಕ್ಟರು, ಬೆಳಗಾಂವಿ.

೫೬. ರಾವ್ ಬಹಾದ್ದೂರ್ ಕೆಂಭಾವಿ ರಾಘವೇಂದ್ರರಾಯರು, ಪ್ಲೀಡರು, ಬಿಜಾಪುರ.

೫೭. ವೆಂಕಟೇಶ ತಿರಕೋ ಕುಲಕರಣಿ ಗಳಗನಾಥರು, ಹಾವೇರಿ.

೫೮. ಶ್ರೀನಿವಾಸ ಪಾಂಡುರಂಗ ಕೋಟೀ, ರೇಂಜು ಫಾರೆಸ್ಟು ಆಫಿಸರ್, ಪಾಟಣ (ಬೆಳಗಾಂ ಡಿ||).

೫೯. ಶ್ರೀನಿವಾಸ ರಾಜೇರಾವ ಮಂಗಳವೇಡೆ, ಪತ್ರಿಕಾಕರ್ತರು, ಬಾಗಲಕೋಟೆ.

೬೦. ಸಣ್ಣಪ್ಪನಾಯಿಕ ರಾಮಚಂದ್ರನಾಯಿಕ ಪಡಕೂಟ, ಹಲಸಿಗೆ (ಬೆಳಗಾಂ ಡಿ||).

*೬೧. ರಾವ್ ಸಾಹೆಬ್ ಪಿ.ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ., ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಪ್ಲೀಡರ್, ಬಿಜಾಪುರ.

ಮ|| ರಾ|| ಗಳಾದ

೬೨. ಷಣ್ಮುಖಪ್ಪ ನಿಂಗಪ್ಪ ಅಂಗಡಿ, ಬಿ.ಎ., ಎಲ್‌ಎಲ್.ಬಿ., ಎಂ.ಎಲ್.ಸಿ., ವಕೀಲ್, ಬೆಳಗಾಂವಿ.

೬೩. ಪಂಡಿತಪ್ಪ ರಾಯಪ್ಪ ಚಿಕ್ಕೋಡಿ, ಪ್ರೆಸಿಡೆಂಟ್, ಡಿ|| ಲೋ|| ಬೋರ್ಡ್, ಬೆಳಗಾಂವಿ.

(ಉತ್ತರ ಕರ್ಣಾಟಕ ಸಂಸ್ಥಾನಗಳ ಸದಸ್ಯರು)

ಮ|| ರಾ|| ಗಳಾದ

೬೪. ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ, ವರ್ತಕರು, ಬನಹಟ್ಟಿ (ಬೆಳಗಾಂ ಡಿ||).

*೬೫. ರಾಮಚಂದ್ರ ಶಂಕರ ಮಂಗಸೂಲಿ, ಶಿರಹಟ್ಟಿ (ಧಾರವಾಡ ಡಿ||).

(ಹೈದರಾಬಾದು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೬೬. ಬಿ ವಿ. ಕೃಷ್ಣಯ್ಯಂಗಾರ್ಯರು, ಎ|| ಎಂಜನಿಯರ್, ಐ.ಬಿ., ನಲಗೊಂದ, ಹೈದರಾಬಾದು.

೬೭. ಜಿ. ಗಿರಿರಾಯರು, ಹೈಕೋರ್ಟು ಜಡ್ಜರು, ರೆಸಿಡೆನ್ಸೀ, ಹೈದರಾಬಾದು.

೬೮. ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ, ಕೊಪ್ಪಳ.

*೬೯. ರಾಘವೇಂದ್ರರಾವ್ ಚಾಕಲಬ್ಬಿ, ವಕೀಲರು, ಕೊಪ್ಪಳ.

೭೦. ಟಿ. ಆರ್. ರಾಮರಾಯರು, ಬಿ.ಎ., ಕನ್ನಡ ಪ್ರೊಫೆಸರ್, ಹೈದರಾಬಾದು.

೭೧. ಎಂ. ಎಸ್. ಲಕ್ಷ್ಮೀನಾರಾಯಣರಾಯರು, ಬಿ.ಎ , ಎಲ್‌ಎಲ್.ಬಿ., ಹೈಕೋರ್ಟು ವಕೀಲರು, ಹೈದರಾಬಾದು.

೭೨. ಕೆ. ವೆಂಕಟರಾಯರು, ಕೋ-ಆಪರೆಟಿವ್ ಸೊಸೈಟಿಗಳ ಇನ್‌ಸ್ಪೆಕ್ಟರು, C/o ಕೆ. ರಾಮರಾಯರು, ಆಬಕಾರಿ ಕಂಟ್ರಾಕ್ಟರು, ಷಂಷಾಬಾದ್, ಪರಿಘ, ಹೈದರಾಬಾದು.

೭೩. ಶಂಕರರಾವ್ ಗೋಪಾಲರಾಯರು, ಮನ್ಸಬ್ದಾರ್, ಗುಲ್ಬರ್ಗ.

(ಮದರಾಸು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೭೪ ಆರ್. ತಾತಾಚಾರ್ಯರು, ಎಂ.ಎ., ಎಲ್.ಟಿ., ಡಿಸ್ಟ್ರಿಕ್ಟ ಎಜ್ಯುಕೇಷನಲ್ ಆಫಿಸರು, ವೆಸ್ಟ ಗೋದಾವರಿ, ಮಚಲೀಬಂದರು.

*೭೫. ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್., ಹೈಕೋರ್ಟು ವಕೀಲರು, ಬಳ್ಳಾರಿ.

*೭೬. ಎಚ್. ರಾಜಗೋಪಾಲಕೃಷ್ಣರಾಯರು, ಜಮೀನ್‌ದಾರರು ಮತ್ತು ಪತ್ರಿಕಾ ಕರ್ತರು, ಉಡಿಪಿ.

*೭೭. ಬಿ. ರಾಮರಾಯರು, ಎಂ.ಎ., ಎಲ್‌ಎಲ್.ಬಿ., ಸೀನಿಯರ್ ಟ್ರಾನ್ಸ್‌ಲೇಟರ್, ಮದರಾಸು.

೭೮. ಪತ್ತಿಕೊಂಡ ವೆಂಗಣ್ಣನವರು, ವರ್ತಕರು, ಹೊಸಪೇಟೆ.

(ಸದಸ್ಯತ್ವಕ್ಕೆ ದರಖಾಸ್ತು ಕಳುಹಿಸದಿರುವವರು)

ಮ|| ರಾ|| ಗಳಾದ

೭೯. ಜಾವಳಿ ಗಣೇಶರಾಯರು, ಜಾವಳಿ (ಕಡೂರು ಡಿಸ್ಟ್ರಿಕ್ಟು).

೮೦. ತಿಮ್ಮೇಗೌಡರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

ಮ॥ ರಾ॥ ಗಳಾದ

೮೧. ಪುರದಪ್ಪನವರು, ಪಟೇಲರು, ಶಿವನೆ (ಕಡೂರು ಡಿಸ್ಟ್ರಿಕ್ಟ್).

೮೨. ರಾಮಚಂದ್ರ ವೆಂಕಟೇಶ ಗೊಂಬಿ, ಪಬ್ಲಿಕ್ ಹೆಲ್ತ್ ಆ॥ ಎಸ್.ಆರ್.ಡಿ. ಬೆಳಗಾಂವಿ.

೮೩. ರಾಮಸ್ವಾಮಯ್ಯನವರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೮೪. ಹನುಮಾಚೋಯಿಯವರು, ಕಂಟ್ರಾಕ್ಟರು, ಲಕ್ಕವಳ್ಳಿ (ಕಡೂರು ಡಿಸ್ಟ್ರಿಕ್ಟ್).

## ಸಾಮಾನ್ಯ ಸದಸ್ಯರು

### (ಮೈಸೂರು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

*೮೫. ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ., ನ್ಯಾಷನಲ್ ಹೈಸ್ಕೂಲು, ಬೆಂಗಳೂರು.

*೮೬. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಬೆಂಗಳೂರು.

೮೭. ಬೇಲೂರು ಕೇಶವದಾಸರು, ಕೀರ್ತನಕಾರರು, ಮೈಸೂರು.

೮೮. ಪಿ. ಎಸ್. ಗೋವಿಂದರಾಯರು, ರಿ॥ ಡೆ॥ ಕನ್ಸರ್‌ವೇಟರ್, ನಜರಾಬಾದ್, ಮೈಸೂರು.

೮೯. ಎಂ. ಚಿನ್ನಕೃಷ್ಣಯ್ಯನವರು, ಕನ್ನಡ ಪಂಡಿತರು, ಹೈಸ್ಕೂಲ್, ಕೋಲಾರ.

*೯೦. ತಿರುಮಲೆ ತಾತಾಚಾರ್ಯ ಶರ್ಮರು, ''ವಿಶ್ವಕರ್ಣಾಟಕ''ದ ಸಂಪಾದಕರು, ಬೆಂಗಳೂರು.

೯೧. ಕೆ. ದುಗ್ಗಪ್ಪಯ್ಯನವರು, ಶೇಕದಾರರು, ಹೊಸೂರು ಹೋಬಳಿ, ಷಿಕಾರಿಪುರ (ಶಿವಮೊಗ್ಗ ಡಿ॥).

೯೨. ಎನ್. ನರಸಿಂಹಮೂರ್ತಿಯವರು, ಎಂ.ಎ., ಬಿ.ಎಲ್., ಯೂನಿವರ್ಸಿಟಿ ಲೈಬ್ರೇರಿಯನ್, ಮೈಸೂರು.

೯೩. ಎಸ್. ಕೆ. ನರಸಿಂಹಯ್ಯನವರು, ವರ್ತಕರು, ಶಂಕರಪುರ, ಬೆಂಗಳೂರು.

೯೪. ಕೆ. ನಂಜುಂಡಶಾಸ್ತ್ರಿಗಳು, ಕರ್ಣಾಟಕ ಸಾಹಿತ್ಯ ಪರಿಷತ್ಪಂಡಿತರು, ಬಸವನಗುಡಿ.

೯೫. ಪಿ. ಪದ್ಮನಾಭಯ್ಯನವರು, ಹೆಡ್ ಮಾಸ್ಟರ್, ಸೂಲಿಕುಂಟೆ (ಕೋಲಾರ ಡಿ॥).

೯೬. ಡಿ. ಕೆ. ದಾರಾಷಾ, ಬಿ.ಎ., ರಿ॥ ಸೂಪರಿನ್‌ಟೆಂಡೆಂಟರು, ರೆವಿನ್ಯೂ ಸರ್ವೆ, ಮೈಸೂರು.

೯೭. ಬಿ. ಪುಟ್ಟಯ್ಯನವರು, ಬಿ.ಎ., ಸೂಪರಿನ್‌ಟೆಂಡೆಂಟರು, ಗೌ॥ ಪ್ರೆಸ್, ಬೆಂಗಳೂರು.

*೯೮. ರಾವ್ ಬಹಾದ್ದೂರ್ ಡಾ॥ ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ., ಬಸವನಗುಡಿ.

೯೯. ಬಿ. ವಿ. ಲಕ್ಷ್ಮಣರಾಯರು, ರಿ॥ ಅ॥ ಕವಿಾಷನರು, ಶಂಕರಪುರ, ಬೆಂಗಳೂರು.

೧೦೦. ಕೆ. ಲಕ್ಷ್ಮೀನರಸಿಂಹಯ್ಯನವರು, ಪೋಸ್ಟುಮಾಸ್ಟರು, ಬರೋಡ.

೧೦೧. ಸಿ. ವಾಸುದೇವಯ್ಯನವರು, ವಿದ್ಯಾಭ್ಯಾಸದ ಇಲಾಖೆಯ ರಿ॥ ಅಸಿಸ್ಟೆಂಟರು, ಮಲ್ಲೇಶ್ವರ, ಬೆಂಗಳೂರು.

೧೦೨. ಎಂ. ವೆಂಕಟನಾರಣಪ್ಪನವರು, ಬಿ.ಎ., ಕಬ್ಬಿಣದ ಕಾರ್ಖಾನೆ, ಭದ್ರಾವತಿ.

*೧೦೩. ಸಿ. ವೆಂಕಟರಮಣ ಶಾಸ್ತ್ರಿಗಳು, ''ಕಾದಂಬರೀ ಸಂಗ್ರಹ''ದ ಸಂಪಾದಕರು, ಚಾಮರಾಜನಗರ.

ಮ॥ ರಾ॥ ಗಳಾದ

೧೦೪. ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ., ಸೀನಿಯರ್ ಅ॥ ಕಮಿಷನರು, ಮೈಸೂರು.

೧೦೫. ಶ್ರೀಮತಿ ಶಲ್ಲಮ್ಮನವರು, ಪರಿಮಳ ವಿಲಾಸ ಬುಕ್ ಡಿಪೋ, ಮೈಸೂರು.

*೧೦೬. ಬಿ. ಐ. ಶಾಮರಾಯರು, ರಿ॥ ಫಾರೆಸ್ಟ್ ಆಫಿಸರ್, ಬಸವನಗುಡಿ.

೧೦೭. ರಾಜಕಾರ್ಯ ಪ್ರಸಕ್ತ ರಾವ್ ಬಹಾದ್ದೂರ್ ಎಂ. ಶಾಮರಾಯರು, ಎಂ.ಎ., ವಿದ್ಯಾಭ್ಯಾಸದ ರಿ॥ ಇ॥ ಜನರಲ್, ಚಾಮರಾಜಪೇಟೆ, ಬೆಂಗಳೂರು.

೧೦೮. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಸ್ಕೂ॥ ಅ॥ ಇನ್ಸ್‌ಪೆಕ್ಟರ್, ಮಂಡ್ಯ.

೧೦೯. ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್., ಅಡ್ವೊಕೇಟ್, ಬಸವನಗುಡಿ.

೧೧೦. ತಿರುಮಲೆ ಶ್ರೀನಿವಾಸಾಚಾರ್ಯರು, ಹೆ॥ ಕ್ಲಾ॥ ಸ್ಪೆಷಲ್ ಕೋರ್ಟು, ಹಾಸನ.

೧೧೧. ಸಿ. ಶೇಷಾಚಾರ್ಯರು, ಎಂ.ಎ., ಮಿಟಿಯೊರೊಲಾಜಿಕಲ್ ರಿಪೋರ್ಟರು, ಬಸವನಗುಡಿ.

೧೧೨. ವಿ. ಸೀತಾರಾಮಯ್ಯನವರು, ಎಂ.ಎ., ಇಂಟರ್‌ಮೀಡಿಯೆಟ್ ಕಾಲೇಜು, ಚಾಮರಾಜಪೇಟೆ, ಬೆಂಗಳೂರು.

೧೧೩. ಬಿ. ಸುಬ್ಬರಾಯರು, ಎಲೆಕ್ಟ್ರಿಕಲ್ ಡಿಪಾರ್ಟಮೆಂಟು, ಬಸವನಗುಡಿ.

೧೧೪. ಸಿ. ಸುಬ್ಬರಾಯರು, ಎಂ.ಎ., ಸ್ಟೇಟು ಕಮಿಷನರು, ಬೆಂಗಳೂರು.

*೧೧೫. ಕೆ. ಸಂಪದ್ಗಿರಿರಾಯರು, ಎಂ.ಎ., ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.

೧೧೬. ಎಚ್. ಹನುಮಂತಯ್ಯನವರು, ಸ್ಕೂ॥ ಹೆ॥ ಮಾ॥ ಹೆಸರುಘಟ್ಟ (ಬೆಂಗಳೂರು ತಾ॥).

೧೧೭. ಎಚ್. ಹನುಮಂತರಾಯರು, ಹೈಸ್ಕೂಲು ರಿ॥ ಕನ್ನಡ ಪಂಡಿತರು, ಚಿತ್ರದುರ್ಗ.

೧೧೮. ಎಸ್. ಹಿರಿಯಣ್ಣಯ್ಯನವರು, ಎಂ.ಎ., ಬಿ.ಎಲ್., ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್, ಬೆಂಗಳೂರು.

೧೧೯. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಗ॥ ಕನ್ನಡ ಟ್ರಾನ್ಸ್ಲೇಟರ್, ವಿಶ್ವೇಶ್ವರಪುರ, ಬೆಂಗಳೂರು.

೧೨೦. ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ., ಹೆ॥ ಮಾ॥ ಆರ್ಯನ್ ಸ್ಕೂಲ್, ಬಳೇಪೇಟೆ, ಬೆಂಗಳೂರು.

(ಮುಂಬಯಿ ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

೧೨೧. ಕೆ. ಜಿ. ಕುಂದಣಗಾರ, ಎಂ.ಎ., ಕನ್ನಡ ಪ್ರೊ॥ ಕರ್ಣಾಟಕ ಕಾಲೇಜು, ಕೊಲ್ಹಾಪುರ.

*೧೨೨. ಪಂಡಿತ ಕೇಶವಶರ್ಮಾ ಗಲಗಲಿ, ಗಲಗಲಿ (ಬಿಜಾಪುರ ಡಿ॥).

*೧೨೩. ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ., ಧಾರವಾಡ.

೧೨೪. ರಾವ್‌ಜಿ ಬಾಲಕೃಷ್ಣ ಕುಲಕರಣಿ, ಅ॥ ಮಾಡಲ್ ಇಂ॥ ಸ್ಕೂಲ್, ಬೆಳಗಾಂವಿ.

೧೨೫. ಜಿ. ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್‌ಎಲ್.ಬಿ., ಹೈ॥ ವಕೀಲ್, ಹುಬ್ಬಳ್ಳಿ.

೧೨೬. ಆರ್. ಎನ್. ಮುಧಕಟ್ಟಿ, ಬಿ.ಎ., ಮಾಮಲತ್‌ದಾರರು, ಖಾನಾಪುರ (ಬೆಳಗಾಂ ಡಿ॥).

*೧೨೭. ಕೃ. ಹ. ಮುದವೇಡಕರ್, "ಕರ್ನಾಟಕ ವೃತ್ತ"ದ ಸಂಪಾದಕರು, ಬೆಳಗಾಂವಿ.

೧೨೮. ಎನ್. ಕೆ. ಹುಯಿಲ್‌ಗೋಳ್, ಬಿ.ಎ., ಎಲ್‌ಎಲ್.ಬಿ., ಪ್ಲೀಡರ್, ಗದಗ.

## (ಮದರಾಸು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೧೨೯. ರಾವ್ ಬಹಾದ್ದೂರ್ ಎಚ್. ನಾರಾಯಣರಾಯರು, ಎಂ.ಎ., ರಿ|| ಪ್ರೊಫೆಸರ್, 'ಶಂಕರಬಾಗ್', ಕೀಲ್ಪಾಕ್, ಮದರಾಸು.

೧೩೦. ಉಳ್ಳಾಳ ಮಂಗೇಶರಾಯರು, ಹೆ|| ಮಾ|| ಟ್ರೈನಿಂಗ್ ಸ್ಕೂಲ್, ಮಂಗಳೂರು.

೧೩೧. ಐ. ವಸುಪಾಲಪ್ಪನವರು, ವರ್ತಕರು, ಹರಪನಹಳ್ಳಿ (ಬಳ್ಳಾರಿ ಡಿ||).

*೧೩೨. ಪಿ. ವೆಂಕೋಬಾಚಾರ್ಯರು, ಎಂ.ಎ., ಎಲ್‌ಎಲ್.ಬಿ., ವಕೀಲರು, ಬಳ್ಳಾರಿ.

*೧೩೩. ಕೆ. ಟಿ. ಶ್ರೀನಿವಾಸಾಚಾರ್ಯರು, ಬಿ.ಎ., ಎಲ್‌ಎಲ್.ಬಿ., ವಕೀಲರು, ಬಳ್ಳಾರಿ.

೧೩೪. ಡಿ. ಎಸ್. ಹನುಮಂತರಾಯರು, ಬಿ.ಎ., ಪ್ಲೀಡರು, ಬಳ್ಳಾರಿ.

## (ಕೊಡಗಿನ ಸದಸ್ಯರು)

ಮ|| ರಾ|| ಗಳಾದ

೧೩೫. ಬಿ.ಎಸ್. ಕೃಷ್ಣಮೂರ್ತಿಗಳು, ಶ್ರೀ ಕಾವೇರೀ ಪ್ರಿಂ|| ವರ್ಕ್ಸ್ ಮ್ಯಾನೇಜರ್, ಮಡಿಕೇರಿ.

೧೩೬. ಸಿ. ಎಸ್. ವೆಂಕಪ್ಪಯ್ಯನವರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಮಡಿಕೇರಿ.

*೧೩೭. ಎಸ್. ಆರ್. ಸುಬ್ಬಣ್ಣಯ್ಯನವರು, ಕಾಫೀ ಪ್ಲಾಂಟರು, ನಿಡತ (ಕೊಡಗು).

೧೩೮. ಎಂ. ಎಸ್. ಸುಬ್ಬರಾಯರು, ಸ್ಕೂ|| ಮಾ|| ನಾಪೋಕ್ಲು (ಕೊಡಗು).

## (ಹೈದರಾಬಾದು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

*೧೩೯. ಕೃಷ್ಣರಾವ್ ಕಪಟರಾಳ್, ಪ್ಲೀಡರ್, ಗುಲ್ಬರ್ಗ.

೧೪೦. ಡಿ|| ಕೆ. ನಾನಪ್ಪ ದೇಸಾಯಿ, ಸುರಪುರ (ಹೈದರಾಬಾದು).

೧೪೧. ಭೀಮಾಚಾರ್ಯ ಕೃಷ್ಣಾಚಾರ್ಯ, ವಕೀಲರು, ಜವರಗಿ (ಗುಲ್ಬರ್ಗ ಡಿ||).

೧೪೨. ಭೀಮಾಚಾರ್ಯ ಗೋವಿಂದಾಚಾರ್ಯ ಚಿಮಲೀಕರ್, ಗೌಳಿಗುಡ್ಡ, ಹೈದರಾಬಾದು.

೧೪೩. ಎಂ. ಸಿ. ರಂಗಯ್ಯಂಗಾರ್ಯರು, ಅಸಿಸ್ಟೆಂಟು ಸೂ|| ಪಿ. ಡಬ್ಲ್ಯು, ಹೈದರಾಬಾದು.

೧೪೪. ಕೆ. ವೀರಪ್ಪ, ಕ್ಲಾರ್ಕ್, ಮಹಬೂಬ್‌ಸಾಹಿ ಮಿಲ್ಸ್, ಗುಲ್ಬರ್ಗ.

೧೪೫. ಹಳ್ಳೇರಾಯ ಕಕ್ಕೇರಿ, ಬಿ.ಎ., ಸ್ಕೂಲ್ಮಾಸ್ಟರು, ಉಸ್ಮಾನಾಬಾದ್ (ಹೈದರಾಬಾದು).

---

1511—29. ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ.

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೪] ಶುಕ್ಲ ಸಂ॥ ಚೈತ್ರ ಮಾಸ [ಸಂಚಿಕೆ ೧

## ಶಾಸನ ಪದ್ಯಮಂಜರಿಯ ಅನುಬಂಧ

[ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವ್ ಬಹಾದೂರ್
ಮ॥ ರಾ॥ ಆರ್. ನರಸಿಂಹಾಚಾರ್ಯ, ಎಂ.ಎ., ಅವರಿಂದ ಬರೆದು ಬಂದುದು]

---

### ರೋಣ ಶಾಸನ, 1022

(ಎಪಿಗ್ರಾಫಿಯಾ ಇಂಡಿಕ, XIX, 222)

ಇದರಲ್ಲಿ ಚಾಳುಕ್ಯ ರಾಜನಾದ ೧ನೆಯ ಜಗದೇಕಮಲ್ಲ ಜಯಸಿಂಹನ ಆಳಿಕೆಯಲ್ಲಿ ಸಂಕಿಮಯ್ಯನು ರೋಣದಲ್ಲಿ ಮೂಲಸ್ಥಾನ ದೇವಸ್ಥಾನವನ್ನು ಕಟ್ಟಿಸಿದಂತೆಯೂ ಅವನ ಸಹೋದರನಾದ ಮಾಚಿಮಯ್ಯನು ಸತ್ರವನ್ನು ಕಟ್ಟಿಸಿ ಬಾವಿಯನ್ನು ತೋಡಿಸಿದಂತೆಯೂ ಹೇಳಿದೆ.

ರೋಣ

ಶ್ರೀರಮಣೀಪ್ರಿಯ(ನಿಲಯು)।
ದ್ವಾರಾವತಿಗಂ ಸುರೇಂದ್ರನಮರಾವತಿಗಂ ॥
ಸಾರಂ ಧರಣೀ ವನಿತೆಯ।
ಹಾರಂ ಶ್ರೀ ರೋಣಮೊಪ್ಪುಗುಂ ವಸುಮತಿಯೊಳ್ ॥

ಆಯ್ತವರ್ಮನ ಮಗ ಸಂಕಿಮಯ್ಯ

ಆತಂಗೆ ಸುಜನ ಜನ ವಿ।
ಖ್ಯಾತಂಗೆ ಜಗಜ್ಜನೈಕ ನುತ ಚರಿತಂ ನಿ॥
ರ್ಧೂತಾಘ ನಿಚಯನುರ್ವೀ।
ಖ್ಯಾತಂ ಶ್ರೀ ಸಂಕಿಮಯ್ಯನಾದಂ ತನಯಂ ॥

ಕ್ಷಿತಿ ವಳಯಂ ಬಣ್ಣಿಸಲು |
ನ್ನತಿಯುಂ ಮಾಡಿಸಿದನೆಸೆವಿನಂ ರೋಣದೊಳು ||
ನ್ನತಮೆನೆ ಮೂಲಸ್ಥಾನಾ |
ಯತನಮನಾ ಸಂಕಿಮಯ್ಯನೆನೆ ಪೊಗಲ್ದಿದರಾರ್ ||

ಮಾಚಿಮಯ್ಯ

ಒಡಲಂ ತಾಂ ಸುಚರಿತ್ರದೊಳ್ ಧನಮನುದ್ಯದ್ದಾನದೊಳ್ ನನ್ನಿಯಂ |
ನುಡಿಯೊಳ್ ಭಕ್ತಿಯನೆಯ್ದೆ ತಂದೆಯೊಳುದಗ್ರಂ ಚಿತ್ತಮಂ ಸಂತತಂ ||
ಮೃಡಪಾದಾಬ್ಜದೊಳಾವಗಂ ಬಸನಮಂ ಸದ್ಧರ್ಮದೊಳ್ ತಾಳ್ದಿದಂ |
ಗಡದೇವಣ್ಣಿಪೆನಣ್ಣ ಸಚ್ಚರಿತಮಂ ಶ್ರೀ ಮಾಚಿಮಯ್ಯಾಂಕನಾ ||

ಜಗತೀ ಜನ ಹಿತಮಂ ವಿಬು |
ಧಗೆಣಾಗ್ರಣಿ ಮಾಚಿಮಯ್ಯನುರ್ವೀ ವಳಯಂ ||
ಪೊಗಲ್ದಿರಲ್ ರೋಣದ ಮಣಿಯರ |
ನೆಗಲ್ದಿರ್ದ್ದಾರಮೆಯೊಳಗೆ ಬಾವಿಯುಂ ತೋಡಿಸಿದಂ ||

## ಗದಗು ಶಾಸನ, 1037

(ಎಪಿಗ್ರಾಫಿಯಾ ಇಂಡಿಕ, XIX, 217)

ಇದರಲ್ಲಿ ಚಾಳುಕ್ಯರಾಜನಾದ ೧ನೆಯ ಜಗದೇಕಮಲ್ಲ ಜಯಸಿಂಹನ ಆಳಿಕೆಯಲ್ಲಿ ದಾವೋದರ ಸೆಟ್ಟಿ ಊರೊಡೆಯ ಮದ್ದಿಮಯ್ಯನಿಂದ ಭೂಮಿಯನ್ನು ಕೊಂಡು ತ್ರೈಪುರುಷ ದೇವರಿಗೆ ಬಿಟ್ಟಂತೆ ಹೇಳಿದೆ.

ದಾವೋದರ ಸೆಟ್ಟಿ

ಶ್ರೀಕಾಂತಾ ಕಮನೀಯಮಾದುದು ವಿಶಾಲೋರಸ್ಥಲಂ ತನ್ನ ವಾಕ್ |
ಶ್ರೀಕಾಂತಾ ಕಮನೀಯಮಾದುದು ಮುಖಾಂಭೋಜಾತಮುದ್ಯಜ್ಜಯ ||
ಶ್ರೀಕಾಂತಾ ಕಮನೀಯಮಾದುದು ಭುಜಾ ದಂಡಂ ದಿಗಂತಂ ಯಶಃ |
ಶ್ರೀಕಾಂತಾ ಕಮನೀಯಮಾದುದದರಿಂದೇಂ ದಾಮನುದ್ದಾಮನೋ ||

ಸುರರಾಜೇಂದ್ರ ಮದೇಭ ಮಸ್ತಕದೊಳಾ ದಿಗ್ದಂತಿ ದಂತಂಗಳೊಳ್ |
ಹರನುಗ್ರಾಸಿಯೊಳಿಂದ್ರಕೀಲ ತಟದೊಳ್ ನೀರೇಜ ಪುತ್ರಾಂಡದೊಳ್ ||
ವರ ನಾಗಾಲಯದೊಳ್ ಮುರಾರಿಯ ಗೃಹೋದ್ಯದ್ದ್ವಾರ ಬಂಧಂಗಳೊಳ್ |
ಬರೆದಳ್ ವಾಗ್ವಧು ದಾವಲಂ ಶುಚಿ ಮಹಾ ದಾನಾಢ್ಯನೆಂಬಂಕಮಂ ||

ಸುರ ರಾಜಾದ್ರೀಂದ್ರ ಹೇಮಾಚಲ ಮಲಯ ನಗೋಪಾಂತ ವಲ್ಲೀ ವನಾಭ್ಯಂ |
ತರದೊಳ್ ನಾನಾ ವಿನೋದಂಗಳೊಳೆ ನೆಲಸಿ ವಿದ್ಯಾಧರ ಸ್ತ್ರೀಯರುಂ ಮೇಣ್ ||
ಸುರ ಕಾಂತಾನೀಕಮುಂ ಪನ್ನಗ ಯುವತಿಯರುಂ ಪಾಡುವರ್ ಕೂಡೆ ದಾವೋ |
ದರ ಕೀರ್ತಿಶ್ರೀಯನೆಂದಂದದರಿ ಮಹಿಮೆಯಂ ಬಣ್ಣಿಸಲ್ಕಾರ್ಪನಾವಂ ||

ವೊಳೆವೋಯ್ತುರ್ಕಜನಿಂ ಪಸುರ್ವುವಡೆದತ್ತಾ ವಿಕ್ರಮಾದಿತ್ಯ ಭೂ।
ತಳ ನಾಥಾಗ್ರಣಿಯಿಂದೆ ಮತ್ತೆ ತಳೆರಾಯ್ತುತ್ತಂ ಹರಿಶ್ಚಂದ್ರನಿಂ ॥
ನಳನಿಂ ಪೂತುದು ಚಾರುದತ್ತ ವಿಭುವಿಂದಂ ಕಾತುದೀ ಭೂರಿ ಭೂ।
ತಳದೊಳ್ ದಾಮನಿನಗ್ಗಳಂ ಫಲಿತಮಾಯ್ತಿತ್ತಾ ದಾನಕಲ್ಪದ್ರುಮಂ ॥

## ನಾಗಾಯಿ ಶಾಸನ B, 1058

(ಹೈದರಾಬಾದ್ ಆರ್ಕಿಯೊಲಾಜಿಕಲ್ ಸೀರೀಸ್ 8, ಪುಟ 5)

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ದಂಡನಾಯಕ ಮಧುಸೂದನನು ನಾಗವಾವಿಯಲ್ಲಿ ತ್ರೈಪುರುಷ, ಮಧುಸೂದನ, ರಾಮೇಶ್ವರ ಎಂಬ ದೇವಸ್ಥಾನಗಳನ್ನು ಕಟ್ಟಿಸಿ ಒಂದು ಪಾಠಶಾಲೆಯನ್ನೂ ಸ್ಥಾಪಿಸಿ ಅದರಲ್ಲಿ ೨೦೦ ವಿದ್ಯಾರ್ಥಿಗಳು ವೇದವನ್ನು ಕಲಿವಂತೆಯೂ, ೫೨ ವಿದ್ಯಾರ್ಥಿಗಳು ಶಾಸ್ತ್ರವನ್ನು ಎಂದರೆ, ಭಾಟ್ಟದರ್ಶನ, ನ್ಯಾಯ, ಪ್ರಾಭಾಕರ ಇವುಗಳನ್ನು ಕಲಿವಂತೆಯೂ, ೬ ಉಪಾಧ್ಯಾಯರುಗಳನ್ನೂ, ೬ ಸರಸ್ವತೀ ಭಾಂಡಾರಿಕರನ್ನೂ (Librarians) ಏರ್ಪಡಿಸಿ ಇವೆಲ್ಲಕ್ಕೂ ತಕ್ಕಷ್ಟು ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ತ್ರಿಮೂರ್ತಿಗಳು

ಶ್ರೀರಮಣೀ ಮನೋರಮಣ ವಾಗ್ರಮಣೀ ರಮಣಾದ್ರಿ ರಾಜಪು।
ತ್ರೀರಮಣೀ ಮನೋರಮಣ ರೂಪದೆ ಸತ್ವ ರಜಸ್ತಮೋಗುಣಾ ॥
ಧಾರತೆಯಿಂ ಜಗತ್ಸ್ಥಿತಿ ಸಮುದ್ಭವ ಸಂಹೃತಿ ಹೇತುವಾದ ನೀ।
ರೇರುಹನಾಭ ನೀರಜ ಸಮುದ್ಭವ ಶಂಕರರೀಗಭೀಷ್ಟಮಂ ॥

### ಬ್ರಹ್ಮ

ಅವರೊಳಗೆ ಸಕಳ ಭುವನೋ।
ದ್ಭವ ಕಾರಣಮೆನಿಸಿ ನೆಗೞ್ದನಾದಿಬ್ರಹ್ಮಂ ॥
ದಿವಿಜ ಮುನಿ ಜನ ವಿನುತ ಪ।
ದ್ಮವಿಷ್ಟರಂ ತರುಣ ತರಣಿ ಕಿರಣಚ್ಛಾಯಂ ॥

### ಚಾಳುಕ್ಯವಂಶ

ಕಮನೀಯಮದು ಸದಾನಂ।
ದಮನಂದಂ ಸತ್ಕದಂಬಮಕದಂಬಂ ಸ ॥
ರ್ವ ಮಹೀಗುಪ್ತಮಗುಪ್ತಂ।
ಸಮಸ್ತ ವಂಶಾವತಂಸಮಂತಾ ವಂಶಂ ॥

### ಚಾಳುಕ್ಯ ರಾಜರು

ಪಲರಾ ವಂಶಜರವನೀ।
ತಲಮಂ ಪಾಲಿಸಿದರಳವಿನದಟಿನ ಬಾಹಾ ॥

ಬಲದ ಕಲಿತನದ ಚಾಗದ।
ನೆಲೆಯೆನಿಸಿದುದಾರ ವೀರ ಗುಣಗಣ ನಿಳಯರ್ ||

## ಕುಂತಳದೇಶ

ಅನುಪಮುರವನಿಪರನ್ಯಾ।
ವನಿಪ ಶ್ರೀ ಕುಂತಳಕ್ಕೆ ಕೆಯ್ನಾಡಿ ನಿಜಾ ||
ವನಿಗೆ ತೆಗೆಯುಲ್ ತದೀಯಾ।
ವನಿ ಕುಂತಳ ವಿಷಯಮೆನಿಸಿ ಪೆಸರ್ವೆತ್ತೆಸೆಗುಂ ||

## ಜಯಸಿಂಹ

ವಸಧಿ ಪರಿವೃತ ಸಮಸ್ತಾ।
ವನಿ ತಳದೊಳ್ ದಂಡ ಸಾಧ್ಯಮಲ್ಲದೆ ತಾನಾಂ ||
ಪನಿತುವರಮರಿಯರಿಲ್ಲೆಂ।
ಬಿನೆಗಂ ಜಯಸಿಂಹದೇವನಾಳ್ದಂ ನೆಲನಂ ||

## ರಾಯನಾರಾಯಣ (ತ್ರೈಲೋಕ್ಯಮಲ್ಲ)

ಪುಸಿಯಱಿಯದ ನುಡಿ ಲೋಭದ।
ದೆಸೆಯಱಿಯದ ಚಾಗಮನ್ಯ ವನಿತಾ ಜನದೊಳ್ ||
ಸುಸಿಲಱಿಯದ ಶೌಚಂ ಭಯ।
ರಸಮಱಿಯದ ಗಂಡು ರಾಯನಾರಾಯಣನಾ ||

ಆದಟನಳುರ್ಕೆಯುಂ ನೃಪನ ಸಾಹಸಮುಂ ಧರೆಗಾನದಿಂತುಟೆ,
ನ್ನದೊಡವೆ ತಾವೆ ಪೇೞಿವೆ ವಿರೋಧಿಯ ಪೆಂಡಿರ ಕಂಕಣಂಗಳಿ ||
ಲ್ಲದ ಕರಮಾರವಿಲ್ಲದುರಮುಂಜನಮಿಲ್ಲದ ಕಣ್ಗಳೋಲೆಯಿ।
ಲ್ಲದ ಕಿವಿ ಕಾಂಚಿಯಿಲ್ಲದುಡೆ ನೂಪುರಮಿಲ್ಲದ ಪಾದ ಪಲ್ಲವಂ ||

## ಕಾಳಿದಾಸ ದಂಡನಾಯಕ

ಸಲೆ ಸತ್ಯಕ್ಕೆ ಮೊದಲ್ ಚಲಕ್ಕೆ ನೆಲೆ ಧರ್ಮಕ್ಕಾರ್ಮಮಾಯಕ್ಕಗುಂ।
ದಲೆ ಭೀರಕ್ಕೆ ತವರ್ ಗುಣಕ್ಕೆ ಕಣಿ ಪೆಂಪಿಂಗಿರ್ಕೆ ಚಾಗಕ್ಕೆ ತಾ ||
ಯ್ವೊಲನಣ್ಮಿಂಗೆಡೆ ಮಾಂತನಕ್ಕೆ ಗುಱಿ ಚಾತುರ್ಯಕ್ಕೆ ಬೀಡಿಕ್ಕೆ ಕೀ।
ರ್ತಿ ಲತಾ ವಲ್ಲಿಗಡರ್ಪು ತಾನೆನಿಸಿದಂ ಸಂಗ್ರಾಮ ಕಂಠೀರವಂ ||

ತೆರೆಯಿಂ ಕುಂಬುವ ಭೈತ್ರಮುಂ ಭರದೆ ಬಿಱುಗಂಡಿಕ್ಕೆ ಬಲ್ಪಿಂದೆ ಸಂ।
ವರಿಪಂತುರ್ವಿನೆ ಸಿಂಹಭೂಪತಿಗೆ ಮಾ ಸಾಮಂತರುಂ ಮಂಡಳೇ ||
ಶ್ವರರುಂ ತಪ್ಪೆ ಕಲ್ತಿಲ್ದ ರಾಜ್ಯ ಭರಮುಂ ಕೆಯ್ಕೊಂಡು ಬಲ್ಪಿಂ ಸಮು।
ದ್ಧರಿಸಿರ್ದನ್ನತಿ ಕಾಳಿದಾಸ ವಿಭುವಿಂಗಕ್ಕುಂ ಪೆಱಿಂಗಕ್ಕುಮೇ ||

ಅದಿರದ ರಾಜಕಂ ತಿಱಿದ ಮಂಡಲಮೇಱಿದ ಕೋಂಟೆ ಸಾಧ್ಯಮಾ।
ಗದ ದೆಸೆ ಕಪ್ಪವೀಯದಿದಿರೆಂದುದನೆನ್ನದ ಭೂಪರಾಳ್ದಿಡಂ ||

ಗದ ಪಗೆ ಕೆಯ್ಯನಾನದಭಿಮಾನಿ ಶರಣ್ಬುಗದನ್ಯರಿಸ್ತು ಕಾ।
ಣದ ನೃಪರಿಲ್ಲದೇನೆಸಕಮಚ್ಚರಿಯಾದುದೊ ಕಾಲಿದಾಸನಾ ॥

ಮಧುಸೂದನ

ನೆಗೞ್ದಿರ್ದೀೞಿಂ ಕುಳಶೈಲದೊಳ್ ಸುರಗಿರೀಂದ್ರಂ ಪೆಂಪನಾಳ್ದಂತೆ ಭೂ।
ರಿ ಗಭೀರಾಬ್ಧಿಗಳೀೞಿೞ್ತೊಳ್ ಮಹಿಮೆಯಿಂ ದುಗ್ಧಾಬ್ಧಿ ಪೆತ್ತಂತೆ ತ॥
ನ್ನ ಗುಣಂ ಧಾತ್ರಿಗೆ ಭೂಷಣಂಗಳೆನೆ ತಮ್ಮುತ್ತೀೞ್ವರೊಳ್ ತಾನೆ ದಲ್।
ಮಿಗಿಲೆಂಬಂತಿರೆ ಮೈಮೆಯಂ ಮಧುವ ದಂಡಾಧೀಶ್ವರಂ ತಾಳ್ದಿದಂ ॥

ಅವನೀನಾಥರ್ಕಳೊಳ್ ಸಂದವನಿ ವಲಯಮಂ ಸಾರ್ವಭೌಮತ್ವದಿಂದಾ।
ಳ್ದವರಾರಾರೆಂಬ ಪೇೞ್ಸಿಂ ಹರಿ ರಘುತನಯಂ ಕೌರವಂ ರಾಯ ಕಂಠೀ ॥
ರವನೆಂಬೀ ನಾಲ್ವರಿಂತೀ ನೆಗೞ್ದವನಿಪರೊಳ್ ಸ್ವಾಮಿ ಸಂಪತ್ತಿಯಂ ಪೆ।
ತ್ತವರುಂ ನಾಲ್ವರ್ ಗರುತ್ಮಂ ಪವನಜನಿನಜಂ ದಂಡನಾಥ ತ್ರಿನೇತ್ರಂ ॥

ಪೊಡವಿಯೊಳಗೆಲ್ಲಿ ನೋೞ್ಪೊಡ।
ಮಿಡದಾರಮೆ ಕುಡದ ದಾನಮಿಕ್ಕದ ಸತ್ರಂ ॥
ಪಡಿ ಸಲಿಸದ ದೇವಾಲಯ।
ಮಿಡದೞಿವಂಟಗೆ ಪೊಗೞಲಳವೆ ಮಧುಸೂದನನಂ ॥

## ಚಿಕ್ಕಮಗಳೂರು ತಾಲ್ಲೂಕು ಗೌತಮೇಶ್ವರ ಗ್ರಾಮದ ಶಾಸನ, 1065

(ಮೈಸೂರು ಶಾಸನದ ಇಲಾಖೆಯ ೧೯೨೭ನೆಯ ವರ್ಷದ ವರದಿ, ಶಾಸನ ಸಂಖ್ಯೆ ೩೪)

ಇದರಲ್ಲಿ ವಾಮನಭಟ್ಟನು ತನ್ನ ಗದ್ದೆಯಲ್ಲಿ ಮೇದ ಎತ್ತನ್ನು ಹೊಡೆದು ಕೊಂದ ಪಾಪ ನಿವಾರಣೆಗೋಸ್ಕರ ಸ್ವಯಂಭುದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಂಬೂದ್ವೀಪದೊಳದು ತಾಂ।
ಗಂಭೀರತೆವೆರಸು ನೆಗೞ್ದ ಕೈಕೇಶ್ವರದೊಳ್ ॥
ಶಂಭು ನೆಲಸಿರ್ಪನದಱಿಂ।
ದಿಂಬಾಗಿರೆ ಕೂರ್ದವಳ್ಳಿಯೆಸೆವುದು ಗ್ರಾಮಂ ॥

ಶಿವ ನಿಳಯದಿಂದೆ ಪೊಱಮ।
ಟ್ಟು ವೇಗದಿಂ ಪೋಗಿ ವಾಮನಯ್ಯನ ಕೆಯ್ಯಂ ॥
ಕ್ರಮದಿಂದೆ ಮೇವ ವೃಷಭನ।
ನವಯವದಿಂ ಪೋಗಿ ಕಂಡು ಕಡುಮೂರ್ಖತೆಯಿಂ ॥

ಮೆಱೆಕೋಲ ಕಳೆದುಕೊಳ್ಳುತೆ।
ಬಱಿಸಿಡಿಲೆಱಪಂತೆ ಬಂದು ವಾಮನಭಟ್ಟಂ ॥
ಕಱುಪಿಂದಮೆಯ್ದೆ ಪೊಯ್ಯಲ್।
ಕಱೆಕಂಠ ಶರಣ್ಣ ಎಂದು ಬೀೞ್ದುದು ವೃಷಭಂ ॥

ಅತ್ತಲ್ ವೃಷಭನ ಪ್ರಾಣಂ|
ಮತ್ತೆನಿಸದೆ ಪೋದುದಮರ ವಾಸಮನೆಯ್ದಲ್ ||
ಇತ್ತಲ್ ದೇಹಂ ಬಿಱಿತ್ತಿಡೆ|
ಯೆತ್ತಿನ ಮಣ್ಣೆಂಬುದಾದುದಂದಿಂದಿತ್ತಲ್ ||

ಪರಿಕಿಸದಾ ಪಾರ್ವ ನಡೆದು|
ಪರಮಾರ್ಥಂ ಕೊಂದಳಿಂತು ಮುಂಗುರೆಯಂ ತಾ ||
ನೆರಡಿಲ್ಲದೆಂಬ ನಾಱಿನ್ನುಡಿ|
ಪೊರೆದುದಿದರ್ಕೆಂದೊಡಂದು ಮಱುಗುತೆ ಮನದೊಳ್ ||

ಊರ ಮಹಾಜನಮೆಲ್ಲಮು|
ನೋರಂತಿರೆ ನೆರಹಿ ತಂದು ವಾಮನಭಟ್ಟಂ ||
ಪಾರದೆ ಸ್ವಯಂಭು ದೇವರ್ಗೆ|
ಧಾರೆಯನೆಱೆದಿತ್ತನೆರಡುವಡ್ಡದ ಕೆಯ್ಯಂ ||

## ನಾಗಾಯಿ ಶಾಸನ C, 1085

(ಹೈದರಾಬಾದ್ ಆರ್ಕಿಯೊಲಾಜಿಕಲ್ ಸೀರೀಸ್ 8, ಪುಟ 24)

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ದಂಡನಾಯಕ ಕಾಳಿದಾಸನು ನಾಗವಾವಿಯ ಮಧುಸೂದನ ದೇವಸ್ಥಾನಕ್ಕೂ ಅಲ್ಲಿಯ ಕೆಲಸದವರಿಗೂ ದೊರೆಯಿಂದಲೂ ಅಹಿಹಯ ವಂಶದ ಲೋಕರಸನಿಂದಲೂ ಭೂಮಿಯನ್ನು ಪಡೆದು ಬಿಟ್ಟಂತೆ ಹೇಳಿದೆ.

ಮಧುಸೂದನನ ಮಗ ಕಾಳಿದಾಸ

ವಿಧುಕೀರ್ತಿ ದಂಡನಾಯಕ|
ಮಧುಸೂದನನಗ್ರಸೂನು ಸಾಹಿತ್ಯ ಕಳಾ ||
ನಿಧಿ ವಿಕ್ರಮ ತ್ರಿವಿಕ್ರಮ|
ನಧರೀಕೃತ ಮನುಚರಿತ್ರನಾಹವ ಮಲ್ಲಂ ||
ಸಾಧಿಸಿದಂ ನೆಲನಂ ಹಿಮ|
ಭೂಧರದಿಂ ಸೇತುವರೆಗಮುದಯದಿನಪರಾಂ ||
ಭೋಧಿವರಂ ನಿಜಪತಿಗೆ ಯ|
ಶೋಧವಳಂ ಕಾಳಿದಾಸ ದಂಡಾಧೀಶಂ ||

ಕೇವಣದೊಳ್ ನಾಯಕ ಮಣಿ|
ತೀವಿರ್ಪವೊಲುಭಯ ರಾಯ ಬೆಂಕೊಳ್ವ ಧರಿ ||
ತ್ರೀ ವಲ್ಲಭನರಮನೆಯೊಳ್ |
ತೀವಿರ್ದಂ ಕಾಳಿದಾಸ ದಂಡಾಧೀಶಂ. ||

### ಅಹಿಹಯ ವಂಶದ ಲೋಕನೃಪ

**ಶ್ರೀಮದಹಿಹಯ ಕುಳಾಂಬರ।**
**ಸೋಮಂ ಸಂಗ್ರಾಮ ರಾಮನುದ್ಧತ ಭೀಮಂ ॥**
**ಭೀಮಭುಜಂ ಜಯಲಕ್ಷ್ಮೀ।**
**ಧಾಮಂ ವಿನಮಿತ ಸಮಸ್ತ ಲೋಕಂ ಲೋಕಂ ॥**

**ಅವನವನತ ಭೂಭುವನಂ।**
**ಭವ ಭವ ವಿಕ್ರಮನತುಲ್ಯ ಸಾಹಸನಮೃತಾ ॥**
**ರ್ಣವ ತಾರ ಹಾರ ಹರ ಹಾ।**
**ಸ ವಿಶುದ್ಧ ಸ್ಫಟಿಕ ಕೀರ್ತಿ ಕೀರ್ತಿ ವಿಳಾಸಂ ॥**

## ಬನವಾಸಿ ಶಾಸನ, ಸು. 1100

(ಎಪಿಗ್ರಾಫಿಯಾ ಇಂಡಿಕಾ, XVI, 355)

ಈ ಅಸಮಗ್ರ ಶಾಸನವು ಚಾಳುಕ್ಯ ರಾಜನಾದ ತ್ರಿಭುವನಮಲ್ಲನ ಸಾಮಂತ ಕಾದಂಬ ರಾಜನಾದ ಕೀರ್ತಿದೇವನ ಸೇನಾನಾಯಕ ಕೀರ್ತಿಗನ ಸ್ತುತಿಯಲ್ಲಿ ಮುಗಿದಿದೆ.

### ಶಿವ ಸ್ತುತಿ

**ಸುರರಾಜಾರ್ಚಿತ ಪಾದಪದ್ಮ ಯುಗಳಂ ಗಂಗಾ ಸಮುತ್ತುಂಗ ಭಂ।**
**ಗುರ ಕಲ್ಲೋಲ ವಿಲೋಲ ಬಾಲ ಹರಿಣಾಂಕಾಲಂಕೃತೋದ್ಯಜ್ಜಟಾ ॥**
**ಭರನುರ್ವೀಧರ ಪುತ್ರಿಕಾ ಕಲಿತ ದೇಹಾರ್ಧಂ ಮೃಡಂ ಕೀರ್ತಿ ಶಂ।**
**ಕರದೇವಂ ನಿನಗೀಗೆ ಕೀರ್ತಿಗ ಯಶಃ ಶ್ರೀಯಂ ಜಯಶ್ರೀಯುಮಂ ॥**

### ಬ್ರಹ್ಮನ ಮಾನಸ ಪುತ್ರರು

**ಶ್ರೀವರನೆಸೆವುದರದ ಪೊಂ।**
**ದಾವರೆಯುರಲೊಳಗೆ ಕಮಲ ವನಮಲರ್ದುದಿದೇಂ ॥**
**ಭಾವಿಸೆ ಚೋದ್ಯಮೊ ತಾನೆನ।**
**ಲಾವನ ಮುಖ ಕಮಲಮಲರ್ದು ರಂಜಿಸುತಿರ್ಕುಂ ॥**

**ಆ ದೇವನ ಮನದೊಳ್ ಮು।**
**ನ್ನಾ ದೇವಂ ಪಿಂಗೆ ಮಂಗಳಾವಹರೊಗೆದರ್ ॥**
**ದೇದೀಪ್ಯಮಾನ ದೀಪ್ತ್ಯಾ।**
**ಚ್ಛಾದಿತ ದಿಕ್ಚಕ್ರಮಮಲ ಗುಣಗಣ ನಿಲಯರ್ ॥**

### ತ್ರಿಭುವನಮಲ್ಲ ವಿಕ್ರಮಾದಿತ್ಯ

**ಅನತಕ್ಷ್ಮಾಪಾಲರಂ ತರ್ಜಿಸಿ ಕವರ್ದುಕೊಳಲ್ಕೊಟ್ಟ ಬೆಟ್ಟಾದ ಪೊನ್ ಬೆ।**
**ಟ್ಟಸೆ ವರ್ಕುಂ ನೋಡ ಪೊಂಬೆಟ್ಟಮೊಳೆಸೆ ಬಿತ್ತಿಕಂ ಕಾಂಚನ ದ್ವೀಪಮಾಯ್ತು ॥**

ಲ್ತಿನೆ ಜಂಬೂದ್ವೀಪವಮರ್ಥಾರ್ಥಿಗಮನಭಿಮತಾರ್ಥಾರ್ಥಿಗಂ ಸೂಸಿ ವಿದ್ವ।
ಜ್ಜನ ಸಂಸ್ತುತ್ಯಂ ಯಶೋರಾಶಿಯನೊದವಿಸಿದಂ ವಿಕ್ರಮಾದಿತ್ಯದೇವಂ ॥

ಕಾದಂಬ ಜಯಸಿಂಹ

ಆ ನೃಪ ಮೇರುಗೆ ಮೇರುವ।
ಸಾನುವಿನೊಳ್ ಸಿಂಹಮೊಗೆದ ತೆಱದಿಂದೊಗೆದಂ ॥
ಪೀನ ಭುಜಂ ಜಯಸಿಂಹ ಮ।
ಹೀ ಸಾಥಂ ವೈರಿ ಗಜಘಟಾ ನಿರ್ದಳನಂ ॥

ಕಾದಂಬ ತೈಲಪ

ಹಿಮಕೃಚ್ಛೇಖರ ವಂಶ ಸಂಭವರೊಳೆಲ್ಲಂ ಸಂದ ತನ್ನಾರ್ಪು ತ।
ನ್ನ ಮಹತ್ತ್ವಂ ಬಗೆಗೊಂಡ ತನ್ನದಟು ತನ್ನಾಜ್ಞಾಫಲಂ ತನ್ನ ದು ॥
ರ್ದಮ ಬಾಹಾ ಬಲದೇೞ್ಗೆ ತನ್ನಱಿವು ತನ್ನೊಂದುದ್ಯಮಂ ತನ್ನ ಕೀ।
ರ್ತಿ ಮಹೀಚಕ್ರದೊಳೊಪ್ಪೆ ತೈಲಪ ನೃಪಂ ಪೆತ್ತಂ ಮಹೈಶ್ವರ್ಯಮಂ ॥

ಕೀರ್ತಿದೇವ

ಮದನಂ ನೋಡಿ ಕದಂಬ ಮನ್ಮಥನ ರೂಪಂ ಲಜ್ಜೆಯಿಂ ರೂಪುದೋ।
ಱದೆ ದಲ್ ಮೆಯ್ಗರೆದಂ ಬೆಳರ್ತು ನೃಪ ಚಂದ್ರಾಲೋಕದಿಂ ಕಂದಿ ಕುಂ॥
ದಿದನಲ್ತೇ ಹಿಮರಶ್ಮಿ ಮಂಡಲಿಕ ದೇವೇಂದ್ರಂ ಗಡೆನ್ನಿಂ ಗುಣಾ।
ಸ್ಪದನೆಂದೀಕ್ಷಿಸಲಾದನಲ್ಲನೆ ಸಹಸ್ರಾಕ್ಷಂ ಸಹಸ್ರೇಕ್ಷಣಂ ॥

ಕೀರ್ತಿಗ

ಧುರದೊಳಿದಿರ್ಚಿ ನಿಲ್ವ ಕನಸನ್ನೆಗಮಿರ್ಕೆಮ ಕಾಲ ತಕ್ಕು ಬಿ।
ಳ್ದಿರಳೆಯ ಪಿಂಡನಂಡಲೆಯೆ ಮುಳ್ಗಿಡು ಲೊಂಚುಗೊಳಲ್ಕೆ ಚುರ್ಚುತಾ ॥
ವರಿಸಿದ ಶಂಕೆ ಭೋಂಕೆನೆ ನೆೞಿಳ್ಗಗಿದುಟ್ಟುದನಿಕ್ಕಿ ಬೆಚ್ಚರಂ।
ಸರಿಯದೆ ಕೀರ್ತಿಗಂಗಿದಿರನಾಂಪಸುಹೃದ್ಬಲಮುಂಟೆ ಯುದ್ಧದೊಳ್ ॥
ಇಂದೆತ್ತಲ್ ಪರಿಯಿಟ್ಟು ಸುಟ್ಟನೊದಗಿಲ್ಲೆಂದಳ್ಕೆ ಕೋಪಾಗ್ನಿ ಕಾ।
ಯ್ದಿಂದಾರಂ ಗಡ ತೂಂತಿದಂ ಜವನ ಬಾಯೊಳ್ ಸೂಸೆ ಕರ್ನೆತ್ತರಾ॥
ರ್ಪಿಂದಾರಂ ಬಿಡೆ ಬೀಸಿ ಕೊಂದನಱಿತೆಯೊಳ್ ಪೇೞಿತೆಂದಸುಂಗೊಂಡು ನಿ।
ಚ್ಚಂ ದಲ್ ಕೀರ್ತಿಗನೇೞ್ಗೆಗಳ್ಕಿ ಸುಗಿಗುಂ ವಿದ್ವಿಷ್ಟ ಭೂಮಂಡಳಂ ॥

## ಎಮ್ಮನೂರು ಶಾಸನ, 1149

(ಮೈಸೂರು ಶಾಸನದ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ 79)

ಇದರಲ್ಲಿ ಚಾಳುಕ್ಯ ರಾಜನಾದ ೩ನೆಯ ಜಗದೇಕಮಲ್ಲನ ಆಳಿಕೆಯಲ್ಲಿ ಕಳಚುರ್ಯ ವಂಶದ ವಿಜಯಾದಿತ್ಯನ ಸಾಮಂತನಾದ ಬಮ್ಮಯ್ಯನು ಬನವಸೆನಾಡನ್ನು ಆಳುತ್ತಿರಲು ಕಾಮುಗಾವುಂಡನು ಎಮ್ಮನೂರ ರಾಮೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಜಯಾದಿತ್ಯ

ಪರಭೂಪಾಳಕರಂ ಪಳಂಚಲೆದು ದೋರ್ವಿಕ್ರಾಂತದಿಂ ತ್ಯಾಗದಿಂ।
ನೆರೆದರ್ಥಿಪ್ರಕರಕ್ಕೆ ಮಾಡಿ ಮುದಮಂ ಕಾರುಣ್ಯದಿಂ ಕಾದು ತ॥
ಚ್ಛರಣಾಯಾತರನಾತ್ಮ ಸತ್ಯಗುಣದಿಂ ಮರ್ಯ್ಯಾದೆಯಿಂದಾಳ್ವನಾ।
ದರದಿಂ ಕುಂತಳ ಚಕ್ರವರ್ತಿ ವಿಜಯಾದಿತ್ಯಂ ಮಹೀಚಕ್ರಮಂ॥

### ಬಮ್ಮಯ್ಯ

ನೆಗೞ್ತೆ ಜಯಂ ಪೊಗೞ್ತೆ ಜಗಂ।
ಮಿಗೆ ತನ್ನಳವನುಱ್ತೆ ಬಮ್ಮಯಂ ಪಾಲಿಸುವಂ॥
ನೆಗೞ್ದೀ ಬನವಸೆ ನಾಡಂ।
ದಿಗಿಭಂಬರ ಮೆಯ್ದೆ ಕೀರ್ತಿ ಲತೆಯುಂ ಶ್ರೀಯುಂ॥

### ಎಮ್ಮನೂರು

ಬನವಸೆ ದೇಶದೊಳ್ ನೆಗೞ್ದ ನಾಗರ ಖಂಡಮೆ ಸಾರವಾದುದಾ।
ಜನಪದದೊಳ್ ವಿರಾಜಿಸುವ ಕೆಯ್ವೊಲದಿಂ ವನದಿಂ ತಟಾಕದಿಂ॥
ವನರುಹ ಷಂಡದಿಂ ಬಳಸಿ ನಾಡೆ ಮನಂಗೊಳಿಪೆಮ್ಮನೂರಿಳಾ।
ಜನ ಜನಿತಾನುರಾಗ ವಿಭವೋದಯಮಕ್ಷತ ಸೌಖ್ಯ ಸಂಪದಂ॥

### ಕಾಮುಗಾವುಂಡ

ಜಳನಿಧಿಯೊಳ್ ಹಿಮಧಾಮಂ।
ಕುಳಗಿರಿಯೊಳ್ ಸಿಂಹವೊಗೆವವೋಲೊಗೆದಂ ನಿ॥
ರ್ಮಳ ಕೀರ್ತಿ ಕೇತಿಸೆಟ್ಟಿಗೆ।
ಲಳಿತಾಕೃತಿಯೆಮ್ಮನೂರ ಕಾಮುಗವುಂಡಂ॥

ಧರ್ಮದ ಕಣಿ ಸತ್ಯದ ನಿಧಿ।
ಪೆರ್ಮೆಯ ನೆಲೆ ಭೋಗದಾಗರಂ ವಿಜಯ ಶ್ರೀ॥
ಗಾರ್ಮಂ ಕಾಮುಗವುಂಡಂ।
ನಿರ್ಮಳತರ ಕೀರ್ತಿ ವಿಕ್ರಮಾಳಂಕಾರಂ॥

ಮಂಗಳಮಂ ಮಾಡುಗೆ ಜಯ।
ಸಿಂಗ ನೃಪಂಗೆ ನೆಗೞ್ದಿಮ್ಮನೂರೊಡೆಯಂ ದೇ॥
ವಂ ಗುಣನಿಧಿ ಕಾಮುಗವುಂ।
ಡಂಗಿಂತೀ ನೆಲನುಮಿನನುವುಳ್ಳನ್ನೆವರಂ॥

## ರೋಣ ಶಾಸನ, 1179

(ಎಪಿಗ್ರಾಫಿಯಾ ಇಂಡಿಕ, XIX, 226)

ಇದರಲ್ಲಿ ಕಳಚುರ್ಯ ರಾಜನಾದ ಸಂಕಮನ ಆಳಿಕೆಯಲ್ಲಿ ಸಿಂದವಂಶದ ವಿಕ್ರಮಾದಿತ್ಯನು ಬಾಚೆಯ ಸಾಹಣಿಯ ಪ್ರಾರ್ಥನೆಯಿಂದ ಚಾಮೇಶ್ವರ ಮಾಳೇಶ್ವರ ದೇವಸ್ಥಾನಗಳಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

## ಸಮುದ್ರ

ಸ್ವಸ್ತಿ ಸಮಸ್ತ ಭೂವಳಯ ವೇಷ್ಟಿತಮುಜ್ವಳ ಮೌಕ್ತಿಕಾದಿ ಸ।
ದ್ವಸ್ತು ವಿಕೀರ್ಣಮುಚ್ಚಳಿತ ತುಂಗ ತರಂಗ ಸಹಸ್ರ ಮಾಳಿಕಾ॥
ನ್ಯಸ್ತ ವಿಯತ್ತಳಂ ಸೊಗಯಿಸಿರ್ಪುದು ಭಾವಿಸಿ ನೋಡೆ ನಾಡೆ ಲೋ।
ಕಸ್ತುತಮಾಗಿ ಮತ್ಸ್ಯ ಮಕರೋತ್ಕರ ಸಂಸ್ಥಿತ ಘೂರ್ಣಿತಾರ್ಣವಂ॥

ಜಳ ಹಸ್ತಿವ್ರಾತ ಹಸ್ತಾಹತಿಯಿನೊಗೆದು ನುಣ್ಮುತ್ತುಗಳ್ ಸೂಸೆ ತೀರ।
ಸ್ಥಳಿಯೊಳ್ ಮೆಯ್ವೆರ್ಚಿ ಮೇಗಣ್ಗೊಗೆದು ತೆರಳೆ ನೂಂಕುತ್ತೆ ಶುಭ್ರಾಭ್ರಮಂ ನಿ॥
ರ್ಮಳ ಕಲ್ಲೋಲೌಘದಿಂದಂ ಗಗನ ತಳಕೆ ತೂಂತಿಟ್ಟವೋಲೀಕ್ಷಿಸಲ್ ಕಂ।
ಗೊಳಿಕುಂ ಭೂಗೋಳವಂ ಸುತ್ತಿಱಿದತುಳತರಧ್ವಾನಮಂಭೋ ನಿಧಾನಂ॥

## ಮೇರು ಪರ್ವತ

ಸುರಕಾಂತಾ ರತ ಕೂಜಿತ ಪ್ರತಿರವ ಪ್ರೋಜ್ಜೃಂಭಿತಂ ಕಿನ್ನರೀ।
ವರ ಗೀತಾರವ ಮೋಹಿತ ದ್ವಿಪ ಕುಳಂ ಸಿದ್ಧಾಂಗನಾ ಪಾದ ಪಂ॥
ಕರುಹ ಪ್ರಾಂಚಿತ ಕುಂಕುಮಸ್ಥಗಿತ ಚಂಚಚ್ಚಂದ್ರಕಾಂತೋಪಲಂ।
ಕರವೊಪ್ಪಿರ್ಪುದು ರತ್ನಕೂಟ ರಮಣೀಯಂ ಮೇರು ಧಾತ್ರೀಧರಂ॥

## ಕುಂತಳ ದೇಶ

ಪೊಲನೆಲ್ಲಂ ಗಂಧಶಾಲಿಪ್ರಕರ ಪರಿವೃತಂ ನಂದನಶ್ರೇಣಿಯೆಲ್ಲಂ।
ಫಲಭಾರಾನಮ್ರ ಚೂತಾವನಿಜ ವಲಯಿತಂ ದೀರ್ಘಿಕಾನೀಕವೆಲ್ಲಂ॥
ದಲಿತಾಂಭೋಜಾತ ರೇಣುಸ್ಥಗಿತ ಲಲಿತಮೂರೂರ್ಗಳೆಲ್ಲಂ ಪ್ರಜಾ ಸಂ।
ಕುಲ ಗೋಧಾನ್ಯ ಪ್ರಕೀರ್ಣಾಂಚಿತಮೆನೆಸೆಗುಂ ಕುಂತಳೋರ್ವೀ ವಿಳಾಸಂ॥

## ಕುಂತಳ ಮಧ್ಯ ದೇಶ

ಪಲವುಂ ಗ್ರಾಮಂಗಳಿಂ ಪತ್ತನ ನಿಕರದೆ ಸಂವಾಹನವ್ರಾತದಿಂ ಪೇ।
ಶಲ ಖೇಡವ್ಯೂಹದಿಂ ಖರ್ವಡ ನಗರ ಮಡಂಬೌಘದಿಂ ಕೂಡೆ ಚೆಲ್ವಂ॥
ತಳೆದ ದ್ರೋಣಾಮುಖಶ್ರೇಣಿಯಿನೆಸೆವ ನದೀ ಜಾಲದಿಂ ಭೂರಿ ಭೂಮಂ।
ಡಳದೊಳ್ ಕಣ್ಗೆಡ್ಡಮಾಗಿರ್ಪುದು ರುಚಿರತೆಯಿಂ ಮಧ್ಯದೇಶಂ ವಿಶೇಷಂ॥

## ಸಂಕಮ ದೇವ

ತತ್ಕುಂತಳಾಧಿಪತಿ ಭಾ।
ಸ್ವತ್ಕೀರ್ತಿ ವಿಲಾಸನುದ್ಧತಾರಾತಿ ಮಹೀ॥
ಭೃತ್ಕುಲಿಶ ದಂಡನದಟ ಚ।
ಮತ್ಕಾರಂ ಶೌರ್ಯಶಾಲಿ ಸಂಕಮ ದೇವಂ॥

ಬಳವದ್ವಿದ್ವಿಷ್ಟ ಭೂಪಾಳಕರನುಱಿದೆ ಕಿಱ್ತಿಕ್ಕಿ ತದ್ರಾಜ್ಯ ಚಿಹ್ನಂ।
ಗಳನುದ್ಯದ್ದೇಶ ಕೋಶಂಗಳನವಯವದಿಂ ಕೊಂಡು ಸಲ್ಲೀಲೆಯಿಂದಂ॥
ಜಳಧಿವ್ರಾವೇಷ್ಟಿತೋರ್ವೀ ವಳಯಮನಿತುಮುಂ ತಾಳ್ದಿದಂ ತನ್ನ ದೋರ್ಮಂ।
ಡಳದೊಳ್ ನಿಶ್ಶಂಕ ಲಂಕೇಶ್ವರನಮಳ ಯಶಂ ಸಂಕಮಕ್ಷೋಣಿಪಾಳಂ॥

### ಸಿಂದ ವಂಶದ ಆಚುಗಿ

ಮಱೆಯಂ ಸಾಧಿಸಿ ಡಾಹಳಾಧಿಪತಿಯಂ ಬೆಂಕೊಂಡು ವಿಕ್ಕಿರ್ದ ದೋ।
ರ್ಬಲದಿಂದುಪ್ಪಿನ ಕಟ್ಟೆಯಂ ಕವರ್ದು ಸಂಗ್ರಾಮಾಗ್ರದೊಳ್ ಸಂದ ಮೆ॥
ಯ್ಗಲಿಯಾಗಿರ್ದ ಕಡಾರಗಂಗನನಗುರ್ವುರ್ವೇಱೆ ವಿನಂ ಕೊಂದು ಭೂ।
ತಲದೊಳ್ ತಾನೆಸೆದಿರ್ದನಾಚುಗಿ ನೃಪಾಲಂ ಸಿಂದ ವಂಶೋತ್ತಮಂ॥

### ಪೆರ್ಮಾಡಿ ದೇವ

ಘನ ಬಾಹಾ ಬಳದಿಂದೆ ಹೊಯ್ಸಳನ ಮತ್ತೇಭಂಗಳಂ ವಸ್ತು ವಾ।
ಹನಮಂ ಕೊಂಡತಿಧೀರನಂ ತೊಱೆಹನಂ ಬೆಂಕೊಂಡು ತೂಳ್ದಿಯ್ಪು ಮು॥
ಟ್ಟಿ ನೆರಂಬಾರದೆ ಕಟ್ಟಿ ತಂದು ಚಲದಿಂ ಚಾಳುಕ್ಯರಾಯಂಗೆ ಕೊ।
ಟ್ಟನನೂನ ಪ್ರಬಳ ಪ್ರತಾಪ ವಿಭವಂ ಪೆರ್ಮಾಡಿ ಭೂಪಾಳಕಂ॥

### ಚಾವುಂಡ ಭೂಪ

ವರ ಹೋಮಾಗ್ನಿಯ ವಾಜಿ ಮಾಂಸಮನಲಂಪಿಂ ಮೆಲ್ವ ಮಾತಂಗ ಭೀ।
ಕರ ಕುಂಭಸ್ಥಿತ ರಕ್ತಪಾನಮನರುತ್ತಾನಂದದಿಂ ಪೀರ್ವ ನಿ॥
ಷ್ಠುರ ನಿಸ್ತ್ರಿಂಶ ನಿಜಾಸಿಯೊಳ್ ನೆರೆದು ದೇವೀ ಸಂಗರಂ ಸಾಧಿಪರ್।
ಧುರದೊಳ್ ಚಿತ್ರಮಿದಲ್ತೆ ಶತ್ರು ಮಹಿಪರ್ ಚಾವುಂಡ ಭೂಪಾಳನಿಂ॥

ಕುಲಶೈಲಂ ರಜತಾದ್ರಿಯಂ ಜಲಧಿ ದುಗ್ಧಾಂಭೋಧಿಯಂ ವಾಹಿನೀ।
ಕುಲಮಿಂದ್ರಾಪಗೆಯಂ ತಮಾಲ ತರು ಕಲ್ಪೋರ್ವೀಜಮಂ ವಿಷ್ಣು ನಿ॥
ರ್ಮಲ ಗಂಗಾಧರನಂದವಂ ನೆಱೆತೆಯೆ ಪೋಲ್ತಿರ್ಪನ್ನೆಗಂ ಪರ್ವಿತು।
ಜ್ವಲ ಕೀರ್ತಿದ್ಯುತಿ ಲೀಲೆಯಿಂ ತ್ರಿಜಗಮಂ ಚಾವುಂಡ ಭೂಪಾಲನಾ॥

### ವಿಕ್ರಮಾದಿತ್ಯ

ಪ್ರಜೆಯಂ ಪಾಲಿಸಿ ಧರ್ಮಮಂ ನಿಲಿಸಿ ಶಿಷ್ಟವ್ರಾತಮಂ ಕಾದರಿ।
ವ್ರಜಮಂ ಸೋದು ನಿರಂತರಂ ವಿಪುಳ ಲಕ್ಷ್ಮೀಧಾಮನಾದಂ ಮಹೀ॥
ಭುಜ ಚೂಡಾಮಣಿ ಸಿಂದವಂಶ್ಯನಜಿತಂ ಶ್ರೀ ವಿಕ್ರಮಾದಿತ್ಯನಾ।
ಪ್ತಜನೋದ್ಯನ್ನಿಧಿ ಮಂಡಳೇಶ ತಿಲಕಂ ಚಾವುಂಡದೇವಾತ್ಮಜಂ॥

### ಬಾಚೆಯ ಸಾಹಣಿ

ಸತ್ಯ ಪರಾಕ್ರಮಂ ಪರಹಿತವ್ರತಿಯೆಂತೆಱೆಕಾಟಿ ವಿಕ್ರಮಾ।
ದಿತ್ಯನ ಬೀಡಿನೊಳ್ ನೆಗೞ್ದಿನಂತೆ ಜಗನ್ನುತ ವೀರ ವಿಕ್ರಮಾ॥
ದಿತ್ಯನ ಬೀಡಿನೊಳ್ ನೆಗೞ್ದಿನೀ ಸುಭಟಾಗ್ರಣಿಯೆಂದು ಬಣ್ಣಿಕುಂ।
ಭೃತ್ಯ ನಿಧಾನನಂ ನೆಗೞ್ದ ಬಾಚೆಯ ಸಾಹಣಿಯಂ ಜಗಜ್ಜನಂ॥

## ಶಾಡಪತ್ರಿ ರಾಮೇಶ್ವರ ದೇವಸ್ಥಾನದ ಶಾಸನ, 1199

(ದಕ್ಷಿಣ ಇಂಡಿಯಾ ಶಾಸನಗಳು, IV, ಸಂಖ್ಯೆ 798)

ಇದರಲ್ಲಿ ಮಹಾಮಂಡಲೇಶ್ವರ ಉದಯಾದಿತ್ಯದೇವನು ತನ್ನ ರಾಜಧಾನಿ ತಾಟಿಪಾರಪುರದಲ್ಲಿರುವ ಚಂದ್ರನಾಥ ಪಾರ್ಶ್ವನಾಥ ದೇವರ ಬಸದಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಜಂಬೂದ್ವೀಪ

ನವ ರತ್ನ ಭರಿತ ಜಳಚರ।
ನಿವಹ ಪರಿಕ್ಷುಭಿತ ಬಹಳ ಕಲ್ಲೋಳ ರವ ॥
ಪ್ರವಿಘೂರ್ಣಮಾನ ಲವಣಾ।
ರ್ಣವ ಪರಿವೃತಮೆನಿಪುದುಂಟು ಜಂಬೂದ್ವೀಪಂ ॥

ತಾಟಿಪಾರ ಪುರ

ಆ ಜನಪದಕ್ಕೆ ತಲೆ ಸಲೆ।
ರಾಜಾಶ್ರಯಮೆನಿಸಿ ತಾಟಿಪಾ(ರ) ಪುರಂ ವಿ ॥
ಭ್ರಾಜಿಸುಗುಮಮರ ಪನ್ನಗ।
ರಾಜ ಪುರಕ್ಕೆಣೆಯೆನಿಪ್ಪ ಮಹಿಮೋನ್ನತಿಯಿಂ ॥

ಪೆನ್ನೆ ನಿಸರ್ಗದಿಂದೆವಲಿಬನ್ನೆ (?)ಯನೂನ ಜಳಪ್ರವಾಹ ಸಂ
ಪನ್ನೆ ನದೀ ನದ ಪ್ರಕರದೊಳ್ ಕಡು ಚೆನ್ನೆ ತಟೀ ಮಹೀರುಹೋ ॥
ತ್ಪನ್ನ ಫಳಾವಿಪನ್ನೆ ನಿಜ ನಿರ್ಮಳಿನೋದಕದಿಂ ಪ್ರಸನ್ನೆಯಿಂ।
ದುನ್ನತಿವೆತ್ತು ತೋರ್ಪ ನದಿ ತತ್ಪುರಮಂ ಬಳಸಿರ್ಪುದೆತ್ತಲುಂ ॥

ಫಳ ಪುಷ್ಪೋಪೇತ ನಾನಾ ತರು ಲತೆಗಳಿನುತ್ಫುಲ್ಲ ನೀರೇಜ ಷಂಡಂ।
ಗಳಿನತ್ಯುದ್ದಂಡ ಕೂಜತ್ಪಿಕ ಶುಕ ಕುಳದಿಂ ಗಂಧಶಾಳೀಯ ವಪ್ರಾ ॥
ವಳಿಯಿಂ ಪುಂಡ್ರೇಕ್ಷು ವಾಟಂಗಳಿನುಪವನದಿಂ ಪೂರ್ಣ ವಾಪೀ ತಟಾಕಂ
ಗಳಿನಾಶಾ ಮಂಡಳಂ ತತ್ಪುರವರದ ಬಹಿರ್ಭಾಗದೊಳ್ ನಾಡೆ ರಮ್ಯಂ ॥

ವಿಳಸದ್ಬ್ರಹ್ಮ ಪುರಂಗಳಿಂ ವಿವಿಧ ಕೂಟೋತ್ತುಂಗ ದೇವಾಲಯಂ।
ಗಳಿನತ್ಯಾಯತ ರಮ್ಯ ಹರ್ಮ್ಯ ತತಿಯಿಂ ನಾನಾ ಸ್ಫುರದ್ರತ್ನ ಸಂ ॥
ಕುಳ ರಾಜ ದ್ವಿಪಣಿ ಸ್ಥಳಂಗಳಿನನೇಕಾಕೀರ್ಣ ಪಣ್ಯಾಂಗನೋ।
ಜ್ಜ್ವಳ ಸೌಧಂಗಳಿನಾವಗಂ ಸೊಗಯಿಸಿರ್ಕುಂ ತತ್ಪುರಾಭ್ಯಂತರಂ ॥

ಸೋಮಿ ದೇವ

ಅರಿಭೂಭೃತ್ಕುಂಭಿ ಕುಂಭಸ್ಥಳ ವಿಗಳಿತ ರಕ್ತಾರ್ದ್ರ ಮುಕ್ತಾಫಳಾಳಿ।
ಸ್ಫುರಿತೋದ್ಯದ್ರಂಗವಲ್ಲೀ ವಿಳಸಿತ ರಣರಂಗಾಂಗಣೋದ್ವೃತ್ತ ಬಾಹಾ ॥
ಪರಿಘಾವಿರ್ಭೂತ ವೈಕುರ್ವಣ ವಿವಿಧ ಭುಜ ಪ್ರೇತ ಭೇತಾಳ ಭೂತೋ।
ದ್ಧುರತಾ ಜೇಗೀಯಮಾನಾರ್ಜಿತ ನಿಜ ವಿಜಯಂ ಸೋಮಿದೇವಕ್ಷಿತೀಶಂ ॥

## ಉದಯಾದಿತ್ಯ

ಮುದವದ್ವೈರಿನೃಪಾಳ ಸೈನ್ಯ ತಿಮಿರ ಪ್ರಧ್ವಂಸನಂಗೆಯ್ದು ಪೆ।
ರ್ಚಿದ ರಾಗಂ ನಿಜ ಮಂಡಳಕ್ಕೆಸೆಯೆ ದಿಕ್ಚಕ್ರಾಂತಮಂ ತನ್ನ ತೇ ॥
ಜದಗುರ್ವಿಂ ಸಮುದಿಱಿತ್ತುಮಭ್ಯುದಯಮಂ ಕೈಕೊಂಡ ಸಯ್ಪಿಂದಮಿಂ।
ತುದಯಾದಿತ್ಯ ಕುಮಾರನಪ್ರತಿಹತೋದಗ್ರ ಪ್ರತಾಪೋದಯಂ ॥

ಪ್ರತ್ಯರ್ಥಿ ನೃಪತಿ ಬಳ ತಿಮಿ।
ರಾತ್ಯಯಮಂ ಮಾಡ್ಪಿ ತೇಜದಿಂ ಸೋಮಿನೃಪಾ ॥
ಪತ್ಯನೆನಿಸಿದ ಕುಮಾರಂ।
ಪ್ರತ್ಯಕ್ಷಂ ತಾನೆ ನೋಡಿತ್ತೊಪ್ಪಿಡುದಯಾದಿತ್ಯಂ ॥

ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಕಾನೀನನಂ ದಾನದೊಳ್।
ಹರಿಯುಂ ವಿಕ್ರಮ ಶಕ್ತಿಯೊಳ್ ಯಮಜನಂ ಸತ್ಯೋಕ್ತಿಯೊಳ್ ತೀವ್ರ ಭಾ ॥
ಸ್ಕರನಂ ತೇಜದೊಳಂಬುಜಪ್ರಭವನಂ ಚಾತುರ್ಯದೊಳ್ ಹೇಮ ಭೂ।
ಧರಮಂ ಧೈರ್ಯದೊಳೆಯ್ದೆ ಪೋಲ್ವನುದಯಾದಿತ್ಯೋರ್ವರಾವಲ್ಲಭಂ ॥

ಉದಯಾದಿತ್ಯ ಕುಮಾರಂ।
ಕದನದೊಳಿದಿರಾದ ಮುದವದಹಿತ ಮಹೀಭೃ ॥
ತ್ಸುದತಿಯರ ವದನ ವನಜ।
ಕ್ಕದವಱಿಲಂ ಮಾಡುವಂದಮಿದು ಬಿಸವಂದಂ ॥

## ಅವನ ಹೆಂಡತಿ ರಾಜಲದೇವಿ

ಆ ನೃಪನ ವನಿತೆ ಸಕಲ ಕ।
ಲಾನಿಧಿ ಸೌಭಾಗ್ಯ ಭೋಗಭಾಗಿನಿ ಶಶಿ ಬಿಂ ॥
ಬಾನನೆ ರಾಜಲದೇವಿ ಯ।
ಶೋನಂದನ ವನ ವಸಂತಲಕ್ಷ್ಮಿಯೆನಿಪ್ಪಳ್ ॥

## ಬಾಹುಬಲಿ ವ್ರತಿ

ಅಲ್ಲಿ ನೆಗಱ್ತೆವೆತ್ತ ಯತಿ ಸಂಕುಳದೊಳ್ ಪಿರಿದುಂ ಪ್ರಸಿದ್ಧರೆಂ।
ದೆಲ್ಲರುಮೆಯ್ದೆ ಕೂರ್ತು ಪರಿಕೀರ್ತಿಸೆ ಬಾಹುಬಲಿವ್ರತೀಂದ್ರರು ॥
ತ್ಫುಲ್ಲ ಸರೋಜನೇತ್ರರನವದ್ಯ ಚರಿತ್ರರಮೋಘ ಸಂಭವಾ।
ಪಲ್ಲತಿಕಾ ಲವಿತ್ರರೆನೆ ವರ್ತಿಸಿದರ್ ವಸುಧಾತಳಾಗ್ರದೊಳ್ ॥

## ಅಮರಾವತಿ ಶಾಸನ, 1206

(ದಕ್ಷಿಣ ಇಂಡಿಯಾ ಶಾಸನಗಳು, IV, ಸಂಖ್ಯೆ 558)

ಇದರಲ್ಲಿ ಹೊಯ್ಸಳ ರಾಜನಾದ ೧ನೆಯ ಬಲ್ಲಾಳನ ಸೇನಾಧಿಪ ದಾಮ ದಂಡನಾಯಕನು ಹಂಜೇರ ನೊಣಂಬೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ದಾಮದಂಡ ನಾಯಕನ ವಂಶಾವಳಿ

ಕರಮೊಪ್ಪಿರ್ಪುದು ಧಾತ್ರಿಯೊಳ್ ಕರಡಿಕಲ್ ನಾಡಂತದರ್ಕಾಸ್ಪದಂ।
ತಿರೆ ಶೋಭಿಪ್ಪುದು ನಂದವಾಡಿಗೆಯೆನಿಪ್ಪೊಂದಗ್ರಹಾರಂ ಧರಾ ||
ಮರ ಮುಖ್ಯಂ ನರಸಿಂಹದೇವ ಘಳಿಸಂ ತಾನಲ್ಲಿ ಪೆಂಪುಳ್ಳನಾ।
ಪುರುಷಂಗಾದ ತನೂಭವಂ ಬಹುಕಳಾ ಲಕ್ಷ್ಮೀಧರಂ ಶ್ರೀಧರಂ ||

ನೆಗಳ್ದಿರ್ಪ್ಪ ಶ್ರೀಧರದೇವನೆಂಬಧಿಕ ಪುಣ್ಯಂಗಾದ ಪುತ್ರಂ ಸಮ।
ಸ್ತ ಗುಣವ್ರಾತ ಸಮೇತನಪ್ಪ ಮಹದೇವಂ ತನ್ಮಹಾದೇವ ಮಂ ||
ತ್ರಿಗೆ ಕಂಜೋದರ ಮೂರ್ತಿಯಪ್ಪ ಮಗನಾದಂ ಮಲ್ಲಿದೇವಂ ಬಳಿ।
ಕ್ಕೊಗೆದಂ ಮಲ್ಲರಸಂಗೆ ಬೆಟ್ಟರಸನೆಂಬೀ ನಂದನಂ ನಲ್ಮೆಯಿಂ ||

### ಬೆಟ್ಟರಸನ ಮಗ ದಾಮ

ಮಾಧವದಂಡನಾಥನನುಜಂ ವಿಭುಕೇಶವ ಮಲ್ಲಿದೇವ ದಂ।
ಡಾಧಿಪರಗ್ರಜಂ ನೆಗಳ್ದಿ ಮಾಣಿಕಪೇವನ ತಂದೆ ಮಾಯಿದೇ ||
ವೀ ಧವನೊಳ್ಪುವೆತ್ತೆಸೆವ ಲಕ್ಷ್ಮಿಯ ನಂದನನೆಂದು ಬಣ್ಣಿಕುಂ।
ಶ್ರೀಧರಮೂರ್ತಿಯಂ ವಿಶದ ಕೀರ್ತಿಯನೀ ಧರೆ ದಾಮರಾಜನಂ ||

## ಶಿಕಾರಿಪುರ ತಾಲ್ಲೂಕು ಗುತ್ತನಹಳ್ಳಿಯ ವೀರಗಲ್ಲು, 1257

(ಮೈಸೂರು ಶಾಸನದ ಇಲಾಖೆಯ 1927 ನೆಯ ವರ್ಷದ ವರದಿ, ಶಾಸನ ಸಂಖ್ಯೆ 136)

ಇದರಲ್ಲಿ ಬನವಾಸಿಪುರವರಾಧೀಶ್ವರ ವೀರರಾಮದೇವರಸನ ಆಳಿಕೆಯಲ್ಲಿ ರಾಮುಗವುಡನು ಕುರುಗೋಳಿನಲ್ಲಿ ಕಾದಿ ಮಡಿದನೆಂದು ಹೇಳಿದೆ.

ಪೊಳೆವ ಸಿಡಿಲಂತೆ ಜವನಂ।
ತಳವಡಿಸುವ ಕಾಲಮೃತ್ಯುವೆಂಬಂತದಟಿಂ ||
ದಳವಿಯೊಳಿ ಪೊಯ್ಪು ನಾಗಳ್।
ಕುಲ ದೀಪಕನೆನಿಪ ರಾಮುಗವುಡಂ ಪಲರಂ ||

ಸುರಿದರ್ ಪೂವಿನ ಮಳೆಯಿಂ।
ಸುರ ದುಂದುಭಿಯೊಡನೆ ಶಂಖ ಕಹಳಾ ರವಮುಂ ||
ಬೆರಸು ಸುರಾಂಗನೆಯರ್ ತಾಂ।
ಪಿರಿಯನನಾ ರಾಮುಗವುಡನಂ ದಿವಕುಯ್ದರ್ ||

## ಕಡೂರು ತಾಲ್ಲೂಕು ಸಕ್ಕರೆಪಟ್ಟಣದ ಶಾಸನ, ಸು. 1360

(ಮೈಸೂರು ಶಾಸನದ ಇಲಾಖೆಯ 1927 ನೆಯ ವರ್ಷದ ವರದಿ, ಶಾಸನ ಸಂಖ್ಯೆ 48)

ಇದರಲ್ಲಿ (ವಿಜಯನಗರದ ರಾಜನಾದ ೧ನೆಯ ಬುಕ್ಕನ ಆಳಿಕೆಯಲ್ಲಿ) ಹೊಸಪಟ್ಟಣದ ವೈಶ್ಯ ಮಾಯಣ್ಣನು ಲಕ್ಷ್ಮೀಸೇನ ಭಟ್ಟಾರಕರ ನಿಷಿಧಿಯನ್ನು ಪ್ರತಿಷ್ಠೆ ಮಾಡಿದನೆಂದು ಹೇಳಿದೆ.

ಮಾಯಣ್ಣ

ದ್ವೀಪಿ ಪಟಾಕ ನಾಮ ನಗರೀಪತಿ ಶಂಖ ಜಿನೇಂದ್ರ ಚಂದ್ರಮ।
ಶ್ರೀಪದ ಪಂಕಜಾಳಿ ವಿಮಳಾಮರ ಕೀರ್ತಿ ಮುನೀಂದ್ರ ಪಾದ ಸೇ ॥
ವಾ ಪರಿಪಕ್ವ ಬುದ್ಧಿ ಬಳಿಗಾಱಿ ಸಮಾಹ್ವಯ ವಂಶ ಪದ್ಮ ತಾ।
ರಾ ಪತಿ ರಂಜಿಪಂ ಸ್ವಜನ ಕಂಜ ನಭೋಮಣಿ ವೈಶ್ಯ ಮಾಯಣಂ ॥

ಗುಣ ತುಂಗಂ ಹೊಲ್ಲರಾಜಂ ಪಿತೃ ಗುಣವತಿ ದೇಮಾಂಬಿ ತನ್ನಂಬೆಯುದ್ಯ।
ದ್ಗುಣರತ್ನಂ ನಾಗರಾಜಂ ಪರಿಕಿಪೊಡೆ ಪಿತೃವ್ಯಂ ಗುಣೈಕಾಶ್ರಯಂ ಮಾ ॥
ಕಣನಾತ್ಮೀಯಾನುಜಂ ತಾನೆನಿಪಗಣಿತ ಸಾಭಾಗ್ಯದಿಂ ಭಾಗ್ಯದಿಂ ಧಾ।
ರಿಣಿಯೊಳ್ ವಿಖ್ಯಾತಿವೆತ್ತಂ ಜಿನ ಸಮಯ ಸರಸ್ಸಾರಸಂ ಮಾಯಣಾರ್ಯಂ ॥

ನಿರುತಂ ಲೋಕೈಕ ಮಿತ್ರಂ ಪ್ರಚುರತರ ಕಲಾ ವಲ್ಲಭಂ ವಂದಿ ವೃಂದೋ।
ತ್ಕರ ಪುಷ್ಯತ್ಕಲ್ಪ ಭೂಜಂ ಬುಧ ನುತ ಚರಿತಂ ವಾಗ್ವರಂ ಕಾವ್ಯಗೋಷ್ಠೀ ॥
ಸರಸಂ ವಿದ್ವಿಷ್ಟ ಶೈಲಾಶನಿ ಸುರ. . . . . . . . . . . . .ಮಾನಕೇತೂ।
ದ್ಧರ ರೂಪಂ ಸದ್ಗುಣೋದ್ಯದ್ಗ್ರಹಮಯನೆನಲಾಶ್ಚರ್ಯಮಾ ಮಾಯಣಾರ್ಯಂ ॥

## ಗೇರಸೊಪ್ಪೆ ಶಾಸನ, 1392

(ಮೈಸೂರು ಶಾಸನ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ 109)

ಇದರಲ್ಲಿ ಯೋಜಣಸೆಟ್ಟಿಯ ಹೆಂಡತಿ ರಾಮಕ್ಕನು ಸಂನ್ಯಸನ ವಿಧಿಯಿಂದ ಸತ್ತಂತೆ ಹೇಳಿದೆ.

ಪತಿಭಕ್ತೆ ಶೀಲವತಿ ಭೂ।
ನುತ ಚಾರು ಚರಿತ್ರ ಸಕಳ ಜೀವ ದಯಾಪರೆ ॥
ಸತತ ಚತುರ್ವಿಧ ದಾನದೊ।
ಳತಿ ನಿಪುಣತೆಯಿಂದಮೆಸೆವಳೀ ರಾಮಕ್ಕಂ ॥

ಕಮಳಾಕರದೊಳ್ ಕಮಳಿನಿ।
ಕಮಳದೊಳಂ ಕಮಳೆ ಪುಟ್ಟುವಂತಿರೆ ನಾಗಮ ॥
ನಮಳಾನ್ವಯದೊಳ್ ರಾಮಕ।
ವಿಮಳ ಗುಣಾಭರಣೆ ಪುಟ್ಟಿದಳ್ ಕಲಿಯುಗದೊಳ್ ॥

## ಗೇರಸೊಪ್ಪೆ ಶಾಸನ, (?) 1404

(ಮೈಸೂರು ಶಾಸನದ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ 110)

ಇದರಲ್ಲಿ ಹೈವಣರಸನ ಹೆಂಡತಿ ಶಾಂತಲದೇವಿ ಸಂನ್ಯಸನ ವಿಧಿಯಿಂದ ಸತ್ತಂತೆ ಹೇಳಿದೆ.

ಅರಸಪ್ಪೊಡೆಯರ ತನುಭವೆ।
ವರಗುಣೆ ಬೊಮ್ಮಕ್ಕನಾಕೆಯಾತ್ಮಜೆ ಶಾಂತ ॥

ಕ್ಕರಸಿಯುಂ ಪರಮನ ಪದಮಂ।
ಸ್ಮರಿಯಿಸಿ ಸುರ ಲೋಕವೆಯ್ದಿ ಸುಖದಿಂದಿರ್ದಳ್ ||

ಅರುಹಂತನ ಪಾದಾಂಬುಜಮಂ।
ಸ್ಮರಿಯಿಸುತಂ ಪಂಚ ಪದವ ನಾಲಗೆ ವೊಳಗು ||
ಚ್ಚರಿಸುತ ಶಾಂತಕ್ಕರಸಿಯುಂ।
ಶರೀರಮಂ ತೊಱೆದಿದು ಪತ್ತು ದಿನದೊಳ್ ಸಂದಳ್ ||

ವರ ವತ್ಸರ ತಾರಣದೊಳ್।
ಸುರುಚಿರ ಫಾಲ್ಗುಣದ ಶುದ್ಧ ಪಾಡಿವ ತಿಥಿಯೊಳ್ ||
ಹರಿದಶ್ವ ದಿನದಿ ಶಾಂತ।
ಕ್ಕರಸಿಯುಂ ಸ್ವರ್ಗಸ್ಥೆಯಾದಳಾಕೆ ನಿಮಿತ್ತಂ ||

ಮಾಡಿಸಿದ ನಿಧಿಯ ಕಲ್ಲಿಂಗೆ ಮಂಗಳ ಮಹಾ.

## ಗೇರಸೊಪ್ಪೆ ಶಾಸನ, 1421

(ಮೈಸೂರು ಶಾಸನದ ಇಲಾಖೆಯ 1928ನೆಯ ವರ್ಷದ ವರದಿ, ಶಾಸನ ಸಂಖ್ಯೆ 105)

ಇದರಲ್ಲಿ ಪದ್ಮಣ್ಣರಸನು ಪಾರ್ಶ್ವ ಜಿನಾಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಹೈವನೃಪ

ಆ ಹೊನ್ನ ಬರಸಿಯರಸಂ।
ಶ್ರೀ ಹೈವನೃಪಂ ಜಿನಕ್ರಮಾಂಬುಜ ಭೃಂಗಂ ||
ಬಾಹುಬಲ ನಿರ್ಜಿತಾರಿ ಸ।
ಮೂಹಂ ಸಾಹಸ ಸಮುದ್ರನಭಿನವ ಕಾಮಂ ||

### ಕೇಶವ ಭೂಪ

ಸುರಲೋಕದ ಸುರತರುವಿನ।
ಗುರು ಫಲಮಂ ಮೆಲ್ದು ತೃಪ್ತಿಯಿಲ್ಲದೆ ಸುರರುಂ ||
ಧರೆಯೊಳ್ ಭೂಸುರರಾದರ್।
ವರ ಕೇಶವಭೂಪ ಕಲ್ಪಭೂಜ ಸ್ಪೃಹೆಯಿಂ ||

### ಪದ್ಮಣರಸ

ಧರೆಯೊಳಿರುಂದೂರೊಳ್ ಭೂ।
ಸುರ ನುತ ಕಲ್ಲರಸನನುಜೆ ತಂಗಲೆ ದೇವಿಗೆ ||
ವರನೆನಿಪ ಹೈವೆಯರಸನ।
ವರ ಪುತ್ರಂ ಪದ್ಮಣರಸ ಜಿನಪದ ಭಕ್ತಂ ||

# ಕವಿತಾ ಲಕ್ಷ್ಮೀಧರ ಮತ್ತು ಕವೀಂದ್ರಾಭರಣ ಮಧುರ

ಬಳ್ಳಾರಿ ಜಿಲ್ಲೆಯ ಕಾಮಲಾಪುರಕ್ಕೂ ಹಂಪೆಗೂ ಮಧ್ಯೇ ಕೃಷ್ಣದೇವರ ದೇವಾಲಯವೊಂದುಂಟು. ಅದರ ಸಮೀಪದಲ್ಲೇ ಒಂದು ಕಲ್ಲು ಮಂಟಪವುಂಟು. ಅದರಲ್ಲೊಂದು [1]ಶಿಲಾಶಾಸನ ಫಲಕವಿದೆ. ಆ ಶಾಸನವಿದೆಯೆಂಬುದು ಮದರಾಸಿನ ಪ್ರಾಚ್ಯಸಂಶೋಧನ ಶಾಖೆಯವರಿಗೆ ೪೦ ವರ್ಷಗಳ ಹಿಂದೆಯೇ ಗೊತ್ತಾಯಿತು. ಆದರೆ ಕನ್ನಡಿಗರ ದುರದೃಷ್ಟದಿಂದ ಆ ಶಾಸನ ಸಾಹಿತ್ಯವು ೧೯೨೪ರವರೆಗೆ ಬೆಳಕಿಗೇ ಬರಲಿಲ್ಲ. ಆ ವರ್ಷ ಭರತಖಂಡದ ಪ್ರಾಚ್ಯ ಸಂಶೋಧನ ಶಾಖಾಧಿಕಾರಿಗಳಾದ ಸರ್ ಜಾನ್ ಮಾರ್ಷಲ್‌ರವರ ಕೃಪೆಯಿಂದ ಈ ಶಾಸನದ ವಿಚಾರವಾಗಿ ಅದೇ ಶಾಖೆಯವರಿಂದ ಪ್ರಕಟಿಸಲ್ಪಟ್ಟ "[2]ಶಿಲಾಶಾಸನಗಳಲ್ಲಿ ಕಂಡ ಕರ್ಣಾಟಕ ಕವಿಗಳು" ಎಂಬ ಪುಸ್ತಕದಲ್ಲಿ ಒಂದು ಲೇಖನವನ್ನು ಬರೆದೆನು. ಅನಂತರ ಕೀರ್ತಿಶೇಷರಾದ ರಾವ್ ಬಹದ್ದೂರ್ ಹೊಸಕೋಟೆ ಕೃಷ್ಣಶಾಸ್ತ್ರಿಗಳವರಿಂದ ಸಂಪಾದಿತವಾಗಿ ಪ್ರಕಟಿಸಲ್ಪಟ್ಟಿರುವ "[3]ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್" ಎಂಬ ಗ್ರಂಥದಲ್ಲಿ ಈ ಶಾಸನ ಪಾಠವು ಸಂಪೂರ್ಣವಾಗಿಯೂ, ನಿರ್ದುಷ್ಟವಾಗಿಯೂ ಕೊಡಲ್ಪಟ್ಟಿದೆ.

ಮೊಟ್ಟಮೊದಲು ಈ ಶಾಸನವನ್ನು ವಿಭಜಿಸಿ, ವಸ್ತುವೇನೆಂಬುದನ್ನು ನೋಡೋಣ.

ಪದ್ಯಗಳು ೧ರಿಂದ ೮ರ ವರೆಗೆ:—ಮಂಗಳಾಚರಣ ಶ್ಲೋಕ ಮುಂತಾದ ಪೀಠಿಕಾ ಪ್ರಸಂಗ.

ಪದ್ಯಗಳು ೯ರಿಂದ ೧೩ರ ವರೆಗೆ:—ವಿಜಯನಗರ ಸಾಮ್ರಾಜ್ಯದ ಮೊದಲನೆಯ ಮನೆತನವಾದ ಸಂಗಮ ವಂಶ ಪರಂಪರೆ.

ಪದ್ಯಗಳು ೧೪ರಿಂದ ೧೬ರ ವರೆಗೆ:—'ಸಾರ್ವಭೌಮೋನ್ನತಿಯೊಳೆಸೆದ' ದೇವರಾಯ.

ಪದ್ಯಗಳು ೧೭ರಿಂದ ೨೨ರ ವರೆಗೆ:—ಶಾಸನಪತಿಯಾದ ಲಕ್ಷ್ಮೀಧರಾಮಾತ್ಯನ ವಂಶಾವಳಿ.

ಪದ್ಯಗಳು ೨೩ರಿಂದ ೪೧, ೪೭ರಿಂದ ೪೯ ಮತ್ತು ೫೬:—ಲಕ್ಷ್ಮಣಾಮಾತ್ಯನ ಕೀರ್ತಿಪ್ರತಾಪ.

೪೧ ಪದ್ಯದಿಂದ ೮೬ ಪದ್ಯದ ವರೆಗೆ:—ಮಹಾಗಣನಾಥನ ಪ್ರತಿಷ್ಠೆ. ದಾನ ಧರ್ಮಗಳು.

1. No. 38 of the "Madras Epigraphical Report" for 1889.
2. No. 13, "Memoirs of the Archaeological Survey of India," pp. 15 18.
3. No. 267, "South Indian Inscriptions," Vol. IV.

ಪದ್ಯಗಳು ೫೦ರಿಂದ ೫೨ರ ವರೆಗೆ:—ಲಕ್ಷ್ಮೀಧರನ ಸತೀಮಣಿಯರು.
ಪದ್ಯಗಳು ೫೩ರಿಂದ ೫೫ರ ವರೆಗೆ:—ಲಕ್ಷ್ಮೀಧರನ ಮಕ್ಕಳು.
ಪದ್ಯಗಳು ೫೬ರಿಂದ ೫೯ರ ವರೆಗೆ:—ಶಾಸನ ಕವಿಯಾದ ಮಧುರ.
ಪದ್ಯ ೬೦:—ಶಾಸನ ವಾಕ್ಯ.

ಪ್ರಧಾನ ಲಕ್ಷ್ಮೀಧರನು ಒಂದು ರಾತ್ರಿ ಸುಖವಾಗಿ ನಿದ್ರೆಹೋಗುತ್ತಿದ್ದಾನೆ. ಆಗ ಮಹಾವಿನಾಯಕನು ಬಂದು—

ಪಂಪಾಕ್ಷೇತ್ರಂ ಸೊಗಯಿಪ್ಪುದದಱ ಪೂರ್ವ ದಿಗ್ಭಾಗದೆ ಮಾಲ್ಯವತ್ಪರ್ವತದ
ತೆಂಕವಕ್ಕದೊಳೊಂದು ಮಹಾ ಗುಹೆಯುಂಟದಕೃತ್ರಿಮ ದಿವ್ಯಾಗಾರಮದಱೊಳೆನ್ನಂ
ಸುಪ್ರತಿಷ್ಠೆಗೆಯ್ವುದು—

ಎಂದು ನಿರೂಪಿಸಿದನು. ಮಹಾಪ್ರಸಾದವೆಂದು ಕೈಕೊಂಡು ಲಕ್ಷ್ಮೀಧರನು ಶಕ ೧೩೩೨ನೆಯ ವಿರೋಧಿ ಸಂವತ್ಸರದ ಫಾಲ್ಗುಣ ಪ್ರಥಮ ವಾಸರ ಗುರುವಾರದಂದು "ಸಮಸ್ತೋತ್ಸವಮುಣ್ಮೆ ಪೊಣ್ಮಿರೆ ಮಹಾ ಗಣನಾಥನ ಪ್ರತಿಷ್ಠೆಯಂ" ಮಾಡಿದನೆಂಬುದೇ ಶಾಸನ ವಸ್ತು.

ಆಗ ಆಳುತ್ತಿದ್ದ ಅರಸನು ವಿಜಯನಗರ ಸಾಮ್ರಾಜ್ಯದ ಸಂಗಮ ವಂಶೀಯನಾದ [4]ದೇವರಾಯ. ಅವನಾಳಿಕೆಯ ಕೀರ್ತಿ ದುಗ್ಧವನ್ನಿದೋ ಸವಿಯಿರಿ:—

ಸಲೆ ನಾನಾ ಸಸ್ಯ ಸಂಪತ್ತಿಯನೊದವಿಸಿ ಸಂತುಷ್ಟಿಯಂ ದಾನ ಧಾರಾ।
ಜಲದಿಂ ಸಂತಾಪಮಂ ತಳ್ಗಿಸಿ ವಿತತ ಸಿತಚ್ಛತ್ರ ಸುಚ್ಛಾಯೆಗೊಯ್ದು ॥
ಜ್ವಲಿತಾಜ್ಞಾ ದಾಮದಿಂದಂ ನಿಯಮಿಸಿ ನಿಜ ದೋಸ್ತಂಭದೊಳ್ ಕಟ್ಟಿ ಗೋಮಂ।
ಡಲಮಂ ಸತ್ಕೀರ್ತಿ ದುಗ್ಧಂಗಱೆದನಱಿಕೆಯಿಂ ದೇವರಾಜಾವನೀಂದ್ರಂ ॥

ಜಯವಧುವು "ಅತ್ತಿತ್ತಡಿಯಿಡದೆ" ಸದಾ ದೇವರಾಯ ಭೂವಲ್ಲಭನ "ಬಾಳ ಬಾಯೊಳ್ ನಡೆವಳ"ಂತೆ!

'ಕನ್ನಡಿಗ ಕುಲಕೆ ರನ್ನದ ಕನ್ನಡಿ'ಯೆನಿಸಿದ [5]ಲಕ್ಷ್ಮೀಧರದೇವನು ದೇವರಾಯನ ಮಂತ್ರಿ. ಅವನೇನು ಸಾಮಾನ್ಯನಲ್ಲ.—

ಪೊಗಳಲ್ ಪೊಂಪುಳಿಯೋದ ಪೆಂಪಿನ ಯಶೋ ಲಕ್ಷ್ಮೀಧರಂ ಬಲ್ಲವ।
ರ್ಬಗೆಗೊಳ್ವಿಂಪಿನ ಸೊಂಪುವೆತ್ತ ಕವಿತಾ ಲಕ್ಷ್ಮೀಧರಂ ರಾಜ ನೀ ॥
ತಿಗೆ ನೇರ್ಪಾದ ಮಹಾ ಪ್ರಧಾನ ಪದವೀ ಲಕ್ಷ್ಮೀಧರಂ ಧಾತ್ರಿಯೊಳ್।
ನೆಗಳ್ದಂ ನಿರ್ಮಲ ರಾಮಚಂದ್ರ ತನಯಂ ಸನ್ಮಂತ್ರಿ ಲಕ್ಷ್ಮೀಧರಂ ॥

4. ಶಾಸನದಲ್ಲಿ ಸಂಗಮ ವಂಶಾವಳಿಯನ್ನು ಕೊಡುವಾಗ ಬುಕ್ಕರಾಯನ ಮಗ, ಆತನ ಮಗ ಪ್ರತಾಪ ಹರಿಹರಭೂಪ, ಆತನ ಮಗ ಪ್ರೌಢಪ್ರತಾಪ ದೇವರಾಯ ಎಂಬುದಾಗಿ ಹೇಳಿದೆ. ಶಾಸನದ ಉಕ್ತವಾಗಿರುವ ಕಾಲಮಾನದಿಂದ ಈತನು ಇಮ್ಮಡಿ ದೇವರಾಯನೆಂದೇ ನಾವು ತಿಳಿಯಬೇಕಾಗುತ್ತದೆ.

5. ಈತನ ಹೆಸರು ಇನ್ನೂ ಇತರ ಶಾಸನಗಳಲ್ಲೂ ಕಾಣಬರುತ್ತದೆ. ಅಲ್ಲದೆ, ಈತನು ವಿಜಯನಗರ ಸಾಮ್ರಾಜ್ಯದ ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಮಾಂಡಲಿಕನಾಗಿದ್ದಂತೆ ಸ್ಪಷ್ಟವಾಗುತ್ತದೆ.

ಲಕ್ಷ್ಮೀಧರನ ತಂದೆ ⁶ರಾಮರಸ, ತಾಯಿ ಸಿಂಗಲೆ. ಈ ಸಿಂಗಲೆಯಾದರೂ ಯಾರೆನ್ನುವಿರಿ?—'ಆದಿಪ್ರಧಾನ'ರಾದ ಮಾಧರಸ ಸಾಯಣರ ತಂಗಿ.

ಈ ಮಾದರಸನು ಅದ್ವೈತಾಚಾರ್ಯನಾದ ⁷ಮಾಧವಾಚಾರ್ಯನೆಂಬುದರಲ್ಲಿ ಏನೇನೂ ಸಂಶಯವಿಲ್ಲ. ಈ ಶಾಸನದಿಂದ ವಿದ್ಯಾರಣ್ಯರ ವಿಚಾರದಲ್ಲಿದ್ದ ಒಂದೆರಡು ಸಂಶಯಗಳು ಸಂಪೂರ್ಣವಾಗಿ ಪರಿಹಾರವಾದುವಾದ ಕಾರಣ ಇದರ ಬೆಲೆಯು ಅಮೂಲ್ಯವಾದುದಾಗಿರುತ್ತದೆ.

ಇದೇ ವಿಚಾರದ ಕೆಲವು ಸಂಗತಿಗಳನ್ನು, ಸುಮಾರು ೧೭೩೦ನೆಯ ಇಸವಿಯಲ್ಲಿದ್ದ ಲಕ್ಷ್ಮಣಶಾಸ್ತ್ರಿಯೆಂಬಾತನು, ಶೃಂಗೇರಿಯ ಆಗಿನ ಗುರುಗಳಾಗಿದ್ದ ಸಚ್ಚಿದಾನಂದ ಭಾರತಿಗಳ ಅನುಜ್ಞೆಯ ಮೇರೆಗೆ ಬರೆದ 'ಗುರುವಂಶ ಮಹಾಕಾವ್ಯ'ವೆಂಬ ಗ್ರಂಥದಿಂದ ಸಂಗ್ರಹಿಸಿ ಕೊಟ್ಟಿದೆ:—

> ಓರಂಗಲ್ಲಿನಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದನು. ಅವನಿಗಿಬ್ಬರು ಗಂಡು ಮಕ್ಕಳು. ಕಿರಿಯವನಿಗೇಕೋ ವೈರಾಗ್ಯ ಹುಟ್ಟಿ, ಅವನು ಮನೆಬಿಟ್ಟು, ತೀರ್ಥಯಾತ್ರೆ ಹೊರಟು, ಕಡೆಗೆ ಶೃಂಗೇರಿಗೆ ಬಂದನು; ವಿದ್ಯಾಶಂಕರರ ಕೃಪೆಗೆ ಪಾತ್ರನಾಗಿ ಆಶ್ರಮ ಸ್ವೀಕಾರ ಮಾಡಿದನು. ಆಗ ಅವನ ಹೆಸರು 'ಭಾರತೀಕೃಷ್ಣತೀರ್ಥ' ಎಂದಾಯಿತು. ಈ ಭಾರತೀ ಕೃಷ್ಣತೀರ್ಥರು ವಿದ್ಯಾಶಂಕರರ ಅನಂತರ ಶೃಂಗೇರಿ ಪೀಠವನ್ನು ಹತ್ತಿದರು.
>
> ತಮ್ಮ ಎಲ್ಲಿಗೆ ಹೋದನೋ, ಏನಾದನೋ ತಿಳಿಯಬೇಕೆಂಬಾತುರದಿಂದ ಅಣ್ಣನು ಅವನನ್ನು ಹುಡುಕಲಿಕ್ಕಾರಂಭಿಸಿ, ದೇಶದೇಶಗಳನ್ನೆಲ್ಲ ತಿರುಗಿ ಕಡೆಗೆ ಶೃಂಗೇರಿಗೆ ಬಂದಿಳಿದನು; ಅಲ್ಲಿ ತಮ್ಮನು ಸಂನ್ಯಾಸಾಶ್ರಮದಲ್ಲಿದ್ದುದನ್ನು ಕಂಡನು. ವಿದ್ಯಾಶಂಕರರು ಇವನ ಪಾಂಡಿತ್ಯಕ್ಕೆ ಬೆರಗಾಗಿ ಸನ್ನಿಧಿಗಾಕರ್ಷಿಸಿದರು; ಕೊಂಚ ಕಾಲದಲ್ಲೇ ಅವನಿಗೂ ಯತ್ಯಾಶ್ರಮವೇ ಗಂಟುಬಿದ್ದಿತು. ವಿದ್ಯಾಶಂಕರರೇ ಕೃಪೆಮಾಡಿ ಅವನಿಗೆ ಉಪದೇಶವಿತ್ತು 'ವಿದ್ಯಾರಣ್ಯ'ರೆಂದು ಹೆಸರು ಕೊಟ್ಟರು. ವಿದ್ಯಾರಣ್ಯರು ತಮ್ಮ 'ವೇದಭಾಷ್ಯ'ವೇ ಮುಂತಾದ ಮಹಾ ಗ್ರಂಥಗಳನ್ನೆಲ್ಲ ವಿದ್ಯಾಶಂಕರರಿಗೆ ತೋರಿಸಿದರು; 'ಭರತಖಂಡದ ಪಂಡಿತಮಾನ್ಯರ ಅಭಿಪ್ರಾಯಗಳನ್ನು ಪಡೆಯಬೇಕು' ಎಂದರು ವಿದ್ಯಾಶಂಕರರು. ಇದಕ್ಕಾಗಿ 'ವೇದಭಾಷ್ಯ'ದೊಂದಿಗೆ ವಿದ್ಯಾರಣ್ಯರು ಕಾಶಿ ಮುಂತಾದ ಕ್ಷೇತ್ರಗಳಿಗೆಲ್ಲ ಹೋದರು; ಮಹಾ ಮಹಾ ಪಂಡಿತರೆಲ್ಲ ಆ ಭಾಷ್ಯಕ್ಕೆ ಒಪ್ಪಿಗೆಯ, ಮೆಚ್ಚುಗೆಯ ಮುದ್ರೆಯನ್ನೊತ್ತಿದರು.
>
> ವಿದ್ಯಾರಣ್ಯರು ಪೂರ್ವಾಶ್ರಮದಲ್ಲಿದ್ದಾಗ ಅವರ ಬುದ್ಧಿಯು ಕೊಂಚ 'ಮಟ್ಟ'; ಅವರನ್ನು ಕಂಡು ಎಲ್ಲರೂ ಹಾಸ್ಯಮಾಡುತ್ತಿದ್ದರು. ಒಂದು ಅವರು ಆತ್ಮಹತ್ಯೆಗೂ ಅಣಿಯಾಗಿದ್ದರು; ಆದರೆ ಯಾರೋ ಮಹಾ ತಾಯಿಯು ಅವನಿಗೆ ಬುದ್ಧಿ ಹೇಳಿ

6. ಈ ರಾಮರಸನ ಹೆಸರು ಇದುವರೆಗೆ ಯಾವ ಶಾಸನದಲ್ಲೂ ಉಕ್ತವಾಗಿಲ್ಲ.

7. Another minister of Devarāya who was related on his maternal side to the Advaita teacher Mādhavācharya was Lakshmana or Lakshmidhara.
Archl. Surv. of Ind. Annual Report for 1907-8, p. 245.

ಕಾಪಾಡಿದಳಂತೆ! ಅಂದಿನ ಬುದ್ಧಿ ಸಂಪಾದನೆಗಾಗಿ ಆತನು ಶಾರದಾ ದೇವಿಯ ಆರಾಧನೆ ಮಾಡಿ ಆಕೆಯ ಪ್ರಸಾದವನ್ನು ಪಡೆದನಂತೆ.

ಈ ಕಾಲದಲ್ಲಿ ಹಂಪೆ ಮತ್ತು ಅದರ ಸುತ್ತಮುತ್ತಣ ಪ್ರಾಂತಕ್ಕೆ (ಯದು ವಂಶಕ್ಕೆ ಸೇರಿದ) ಸಂಗಮನೆಂಬವನು ಅರಸನಾಗಿ ಆಳುತ್ತಿದ್ದನು. ಅವನಿಗೆ ಹರಿಹರ, ಕಂಪ, ಬುಕ್ಕ, ಮಾರ, ಮುದ್ದಪ ಎಂಬೈವರು ಮಕ್ಕಳಿದ್ದರು. ಹರಿಹರ, ಬುಕ್ಕ—ಇವರಿಬ್ಬರೂ ಓರಂಗಲ್ಲು ವೀರರುದ್ರನ ಆಸ್ಥಾನ ಭಂಡಾರಿಗಳಾಗಿದ್ದರು. ದೆಹಲಿ ಸುಲ್ತಾನರ ಧಾಳಿಯಿಂದ ವೀರರುದ್ರನೂ, ಅವನ ಅನಂತರ ರಾಮನಾಥನೂ, ಸಿಂಹಾಸನ ಚ್ಯುತರಾದ ಮೇಲೆ ಹರಿಹರ ಬುಕ್ಕರಿಬ್ಬರೂ ಸುಲ್ತಾನನ ದಂಡನಾಯಕನ ಸೆರೆಯಾಳಾದರು. ಅವನು ಅವರಿಬ್ಬರನ್ನು ತನ್ನ ಕೋಟೆಯಲ್ಲಿ ಬಂಧಿಸಿದನು. ಆದರೇನು? ಅವರಿಬ್ಬರೂ ಸೆರೆಮನೆಯಿಂದ ತಪ್ಪಿಸಿಕೊಂಡರು; ಮತ್ತೆ ಶತ್ರುಗಳ ಕೈಗೆ ಬಿದ್ದರು; ದೆಹಲಿಯ ಸುಲ್ತಾನನ ಮುಂದೆ ಬಂದಿಗಳಿಬ್ಬರೂ ನಿಂತರು. ಸುಲ್ತಾನನು ಇವರ ಶೌರ್ಯ ಪ್ರತಾಪಗಳನ್ನು ಕಂಡು ಹಿಗ್ಗಿ, ''ಹೋಗಿ, ನಿಮ್ಮನ್ನು ಬಿಡುಗಡೆ ಮಾಡಿದ್ದೇನೆ; ನಿಮ್ಮರಸುತನವು ನಿಮ್ಮದೇ ಆಗಿರಲಿ'' ಎಂದನು. ಇವರಿಬ್ಬರೂ ಕೃಷ್ಣಾ ನದಿಯನ್ನು ದಾಟಿ ಬಳ್ಳಾಳರಾಯನನ್ನು ಎದುರಿಸಿದರು; ಆದರೆ ರಣಾಂಗಣದಲ್ಲಿ ಸೋತು, ಪ್ರಾಣಸಂರಕ್ಷಣೆಗಾಗಿ ಓಡಿದರು; ಅಲ್ಪ ಕಾಲದಲ್ಲೇ ಗರಿಗಟ್ಟಿಕೊಂಡು, ಸೈನ್ಯ ಬಲವನ್ನು ಹೆಚ್ಚಿಸಿಕೊಂಡು, ಹಂಪೆಯ ಬಳಿಗೆ ಬಂದರು; ಅಲ್ಲಿ ವಿದ್ಯಾರಣ್ಯರನ್ನು ಕಂಡರು; ಅವರ ಕೃಪಾ ಕಟಾಕ್ಷಕ್ಕೆ ಪಾತ್ರರಾದರು; ಅನಂತರ ಬಳ್ಳಾಳನ ಮೇಲೆ ಯುದ್ಧ ಸನ್ನದ್ಧರಾಗಿ, ರಣಭೂಮಿಯಲ್ಲಿ ಕಾದು, ವಿಜಯಶ್ರೀಯನ್ನು ಒಲಿಸಿದರು; ರಾಜ್ಯವನ್ನು ಕಟ್ಟಿದರು.

ಈ ಮಧ್ಯೇ ಹರಿಹರನ ಮಂತ್ರಿಗಳಾದ ಮಾಧವ, ಸಾಯಣರೆಂಬಿಬ್ಬರು ವಿದ್ಯಾರಣ್ಯರ ದರ್ಶನಕ್ಕಾಗಿ ಬಂದರು; ಸಂತಾನವಾಗುವಂತೆ ಅನುಗ್ರಹಿಸಬೇಕೆಂದವರನ್ನು ಬೇಡಿದರು. ಅವರು, ''ನಿಮಗೆ ಯಾರಿಗೂ ಮಕ್ಕಳಾಗುವ ಹಾಗಿಲ್ಲ; ನನ್ನ ವೇದ ಭಾಷ್ಯ ಮುಂತಾದ ಗ್ರಂಥಗಳನ್ನೆಲ್ಲ ನಿಮ್ಮ ಹೆಸರಿನಲ್ಲಿ ಪ್ರಕಟಿಸಿದರೆ ಆಗ ನಿಮಗೆ ಗಂಡು ಸಂತಾನವಾಗುವುದು'' ಎಂದರು; ಮಾಧವ ಸಾಯಣರು 'ಅಸ್ತು' ಎಂದರು; ವಿದ್ಯಾರಣ್ಯರ ಗ್ರಂಥಗಳನ್ನು ಪ್ರಕಟಿಸಿದರು. ಅವುಗಳಿಗೇ ಈಗ ಮಾಧವೀಯ, ಸಾಯಣೀಯಗಳೆಂದು ಹೆಸರು.

ವಿದ್ಯಾರಣ್ಯರ ಸಲಹೆಯ ಪ್ರಕಾರ ಹರಿಹರ ಬುಕ್ಕರು ಸೈನ್ಯವನ್ನು ಬಲಪಡಿಸಿಕೊಂಡು, ಯುದ್ಧದಲ್ಲಿ ಹೊಯಿಸಳ ಬಳ್ಳಾಳರನ್ನು ಸೋಲಿಸಿ, ಹೊಸ ನಗರವೊಂದನ್ನು (ಶಕ ವರ್ಷ ೧೨೫೮ನೆಯ ಧಾತೃ ಸಂವತ್ಸರ ವೈಶಾಖ ಶುದ್ಧ ಸಪ್ತಮೀ ಭಾನುವಾರ ಭರಣೀ ನಕ್ಷತ್ರದಲ್ಲಿ) ಕಟ್ಟಿ, ಅದಕ್ಕೆ ವಿಜಯನಗರವೆಂದು ಹೆಸರಿಟ್ಟರು.

ಹೊಸ ನಗರದಲ್ಲಿ ಹರಿಹರನಿಗೆ ಪಟ್ಟಬಂಧೋತ್ಸವ ಮಾಡುವ ಕಾಲದಲ್ಲಿ ವಿದ್ಯಾರಣ್ಯರು ರಾಜನಿಂದ ಅನೇಕರಿಗೆ ಪಂಡಿತ ಬಹುಮಾನ ಮಾಡಿಸಿದರು; ಸುವರ್ಣ ವೃಷ್ಟಿಯನ್ನು ಸುರಿಸಿ, ಭಂಡಾರವನ್ನು ತುಂಬಿದರು; ತಮ್ಮ ಮಂತ್ರ ಬಲದಿಂದ ಪರಿಚಾರಿನ ಮೂಕ ಮಗನಿಗೆ ಬಾಯಿ ಬರುವಂತೆ ಮಾಡಿದರು.

ಎರಡನೆಯ ಸಾರಿ ವಿದ್ಯಾರಣ್ಯರು ಕಾಶಿಗೆ ಹೋಗಿ ಎರಡು ಮಠಗಳನ್ನು ಸ್ಥಾಪಿಸಿದರು. ವಿದ್ಯಾರಣ್ಯರ ಇಚ್ಛಾನುಸಾರ ಹರಿಹರನು ಶೃಂಗೇರಿ ಮಠಕ್ಕೆ ಸಾಕಾದಷ್ಟು ಭೂದಾನಗಳನ್ನು ಮಾಡಿ ಆ ಸುದ್ದಿಯನ್ನು ತನ್ನ ತಮ್ಮ ಮಾರಪ್ಪನಿಂದ ಶೃಂಗೇರಿಗೆ ಕಳುಹಿಸಿದನು. ಬುಕ್ಕನಿಗೇನೋ ಕೆಟ್ಟ ವ್ಯಾಧಿಯಿದ್ದಿತಂತೆ. ವಿದ್ಯಾರಣ್ಯರು ಆ ವ್ಯಾಧಿಯನ್ನು ಗುಣಪಡಿಸಿದರು. ಈ ಕಾಲದಲ್ಲೇ ಶೃಂಗೇರಿಯ ವಿದ್ಯಾಶಂಕರ ದೇವಾಲಯವು ಕಟ್ಟಲ್ಪಟ್ಟಿದು. ಶೃಂಗೇರಿಗೆ ಬರಬೇಕೆಂದು ಒಂದು ಪ್ರಾರ್ಥನಾ ಪತ್ರಿಕೆಯು ಕಾಶಿಯಲ್ಲಿದ್ದ ವಿದ್ಯಾರಣ್ಯರಿಗೆ ಹೋಯಿತು. ಈ ಮಧ್ಯೇ ಭಾರತೀಕೃಷ್ಣತೀರ್ಥರೂ ಕಾಲವಶರಾದರು. ಕೂಡಲೇ ವಿದ್ಯಾರಣ್ಯರು ಶೃಂಗೇರಿ ಪೀಠವನ್ನು ಹತ್ತಿದರು. ಅದೇ ಸಮಯದಲ್ಲೇ ವಿಜಯನಗರದಲ್ಲಿ ಬುಕ್ಕನು ಕಾಲವಾದನು. ವಿದ್ಯಾರಣ್ಯರು ವಿಜಯನಗರಿಗೆ ಬಂದು ಬುಕ್ಕನ ಮಗನಾದ ಎರಡನೆಯ ಹರಿಹರನನ್ನು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿದರು. ಮಠಕ್ಕೆ ನಾನಾ ದಾನಗಳನ್ನೂ ಬಿರುದುಗಳನ್ನೂ ಅರಸನಿಂದ ಪ್ರತಿಗ್ರಹ ಮಾಡಿ ವಿದ್ಯಾರಣ್ಯರು ಶೃಂಗೇರಿಗೆ ಹಿಂದಿರುಗಿದರು; ಆಳುವ ಅರಸನೂ ಅವರೊಂದಿಗೆ ಬಂದನು. ಆಗ ಭಾರತೀ ಕೃಷ್ಣತೀರ್ಥರ ದೇವಾಲಯವೂ ಶೃಂಗಪುರ, ವಿದ್ಯಾರಣ್ಯಪುರವೆಂಬೆರಡು ಅಗ್ರಹಾರಗಳೂ ಕಟ್ಟಲ್ಪಟ್ಟುವು; ವಿದ್ಯಾ ಸಂಪನ್ನರಾದ ಬ್ರಾಹ್ಮಣರಿಗೆ ಅನೇಕ ವೃತ್ತಿಗಳು ದಾನವಾಗಿ ಕೊಡಲ್ಪಟ್ಟುವು. ವಿದ್ಯಾರಣ್ಯರ ಅನಂತರ ಚಂದ್ರಶೇಖರ ಭಾರತಿಗಳು ಪೀಠಕ್ಕೆ ಬಂದರು.

[Mysore Archæological Report for the year 1928, pp. 15-17.]

ವಿದ್ಯಾರಣ್ಯರು ಆಂಧ್ರರೆಂದು ಕೆಲವರೂ ತಮಿಳರೆಂದು ಹಲವರೂ ಕನ್ನಡಿಗರೆಂದು ಮತ್ತೆ ಕೆಲವರೂ ವಾದಿಸಿ ವಾದಿಸಿ, ಬರೆದು ಬರೆದು ಬೇಸತ್ತರು. ಲಕ್ಷ್ಮೀಧರನು ವಿದ್ಯಾರಣ್ಯರ ತಂಗಿಯ ಮಗ. ಅವನನ್ನು ಕುರಿತು ಈ ಶಾಸನವು—

ಕನ್ನಡಿಗ ಕುಲಕೆ ರನ್ನದ।
ಕನ್ನಡಿಯೆನೆ ವಿಶ್ವ ವಿದಿತ ವೃತ್ತ ಶ್ರೀ ಸಂ ॥
ಪನ್ನಂ ಲಕ್ಷ್ಮೀಧರದೇ।
ವನ್ನಿರ್ಮಲನಾಗಿ ಸೆಗಳ್ದನೊಳಗಂ ಪೊಱಗಂ ॥

ಎಂದು ಹೇಳುತ್ತದೆ. ಎಂದಮೇಲೆ ಲಕ್ಷ್ಮೀಧರನ ಸೋದರ ಮಾವನು ಕನ್ನಡಿಗನೋ ಆಂಧ್ರನೋ ತಮಿಳನೋ ಎಂಬ ವಾದಕ್ಕಿನ್ನು ಅವಕಾಶವೇ ಇಲ್ಲವಾಯಿತು.

ಶಾಸನ ಪತಿಯಾದ ಲಕ್ಷ್ಮೀಧರನು ದೇವರಾಯನ ಮಹಾ ಪ್ರಧಾನನಾಗಿದ್ದನೆಂಬುದನ್ನು ತಿಳಿದೆವು. ಅಷ್ಟೇ ಅಲ್ಲ,—

...................[8]ಉಪಧಾ ಸಂಶುದ್ಧಿಯಿಂ ಬುದ್ಧಿಯಿಂ।
ಗುಣದಿಂ ಗೌರವದಿಂ ಪೊದಳ್ದೆಸೆವ ಮುದ್ರಾಮಾತ್ಯ ಯೋಗಂಧರಾ।
ಯಣ ಚಾಣಕ್ಯ ಸುಮಂತ್ರರೊಳ್ದೊರೆಗೆವಂದಂ ಮಂತ್ರಿ ಲಕ್ಷ್ಮೀಧರಂ ॥

8. Compare 'Chāṇakya's Arthaśāstra.'

ಈ ಪದ್ಯದಿಂದ ಲಕ್ಷ್ಮೀಧರನ ರಾಜನೀತಿಯು ಎಲ್ಲಿಯು ವಿಶದವಾಗುತ್ತದೆ. ಇಲ್ಲಿ ಕವಿಯು ಸೂಕ್ಷ್ಮವಾಗಿ ಒಂದೊಂದೇ ವಿಶೇಷಣದಿಂದ ರಾಜನೀತಿ ವಿಶಾರದ ರೆನಿಸಿದ ಯೌಗಂಧರಾಯಣ, ಚಾಣಕ್ಯ, ಸುಮಂತ್ರ ಮೊದಲಾದವರ ವೈಶಿಷ್ಟ್ಯ ವನ್ನು ಹೇಗೆ ತೋರಿಸಿರುವನೆಂಬುದನ್ನು ವಾಚಕರು ಮರೆಯಬಾರದು. ಹೀಗೆಯೇ, ಪ್ರಖ್ಯಾತ ಐತಿಹಾಸಿಕ ಮತ್ತು ಪೌರಾಣಿಕ ಪಾತ್ರಗಳ ಗುಣ ಗೌರವಗಳನ್ನು ಬೆಲೆಗಟ್ಟಲು ಈ ಶಾಸನ ಕವಿಯು ಒಳ್ಳೆಯ ಒರೆಗಲ್ಲನ್ನು ನಮಗೆ ಒದಗಿಸುತ್ತಾನೆ. ಇನ್ನೊಂದು ಉದಾಹರಣೆಯನ್ನು ನೋಡಿ:—

ಆ ಮೆಱೆತೆವೈವರೊಳಾಂತಂ |
ಶ್ರೀಮದ್ಭೀಮ ಪ್ರತಾಪನರ್ಜುನ ಕೀರ್ತಿ ||
ಪ್ರೇಮಂ ಲಕ್ಷ್ಮೀಧರ. . . . . . . . . . . .

ಪುರಾಣ ಪಾತ್ರಗಳಾದ ಭೀಮಾರ್ಜುನರ ಪಾತ್ರ ಪರಿಚಯಕ್ಕೆ ಇದೆಷ್ಟು ಸಹಕಾರಿ ಯಾಗಿದೆಯೆಂಬುದನ್ನು ನೀವೇ ಯೋಚಿಸಿರಿ. ಭೀಮನು ‘ಪ್ರತಾಪಿ’, ಅರ್ಜುನನು ‘ಕೀರ್ತಿಪ್ರೇಮಿ.’

ಲಕ್ಷ್ಮೀಧರನ ವಿಚಾರವಲ್ಲವೆ ನಾವೀಗ ಮಾಡುತ್ತಿದ್ದುದು! ಶಾಸನ ಸಾಹಿತ್ಯವೇ ವಾಚಕರ ಮುಂದಿರುವಾಗ ಅದನ್ನು ನೀರಸ ಮಾಡಿ ತೋರಿಸುವುದು ಅನ್ಯಾಯವಾದರೂ ಶಾಸನ ಕವಿಯು—

ಪುಸಿದಾನರ್ಜಿಸುವರ್ಥವೇಂ ಮುಗಿದ ಕಯ್ಯೊಳ್ ಪೇಳಲೇ ವಂದಿ ವಾ|.
ದಿಸದಿರ್ವಂಶ ವಿಶುದ್ಧಿಯೊಳ್ವಿಭವದೊಳ್ವಿಖ್ಯಾತಿಯೊಳ್ನೀತಿಯೊಳ್ ||
ಜಸದೊಳ್ಜಾಣ್ಮೆಯೊಳತ್ಯುದಾತ್ತ ಗುಣದೊಳ್ ಗಾಂಭೀರ್ಯದೊಳ್ ಕೂರ್ತು ಲ|
ಕ್ಷಿಸೆ ಲಕ್ಷ್ಮೀಧರನಲ್ಲಿದುಂಟೆ. . . . . . . . . . . . . . . .

ಧರಣೀಚಕ್ರಂ ಮನಂಗೊಳ್ವುದಯಮುದು ತಮಸ್ತೋಮವಲ್ಲಾತನಾತ್ಮಾ |
ಚರಣಂ ಸನ್ಮಾರ್ಗಮುದ್ಯೋತಿಸುವ ರುಚಿ ಸದಾ ಲೋಕಮುರ್ವೀಳ್ವ ತೇಜಃ ||
ಸ್ಫುರಣಂ ನಿತ್ಯಾನುರಾಗಕ್ಕೆಡೆಗುಡಲೆಸೆವೀ ಪೆರ್ಮೆಯಿಂ

ಎಂಬೆರಡು ಪದ್ಯಗಳನ್ನಾದರೂ ಎತ್ತಿ ಬರೆಯದೆ ವಿಧಿಯಿಲ್ಲ. ಲಕ್ಷ್ಮೀಧರನು ರಾಜನೀತಿ ವಿಶಾರದನು ಮಾತ್ರವಲ್ಲ, ‘ಸತ್ಕವೀಂದ್ರ,’ ‘ಕವಿತಾ ಕಲ್ಪವಲ್ಲೀ ವಿತಾನ,’ ‘ಕವಿರಾಜ ಲಕ್ಷ್ಮಣ,’ ‘ಕವಿತಾ ಲಕ್ಷ್ಮೀಧರ’ ಎಂಬುದಾಗಿ ಶಾಸನ ಕವಿಯಿಂದ ಹೊಗಳಲ್ಪಟ್ಟಿದ್ದಾನೆ. ‘ವಿದ್ವಜ್ಜನಂ ಬಾಪುರೆ ಬಾಪೆಂದೆತ್ತಿಕೊಂಡಾಡು’ವರಂತೆ ಲಕ್ಷ್ಮೀಧರನನ್ನು! ಆದರೆ ಇದುವರೆಗೆ ಸಾಹಿತ್ಯ ಲೋಕದಲ್ಲಿ ಇವನ ಹೆಸರು ಬಂದಿಲ್ಲ. ಇವನಿಂದ ರಚಿತವಾದುದೆಂದು ಕಾಣಬರುವ ಗ್ರಂಥವೊಂದಾದರೂ ಕಣ್ಣಿಗೆ ಬಿದ್ದಿಲ್ಲ. ಆದರೂ—

ಸಾರ ಶ್ರೀ ನೀತಿವಾಕ್ಯಾಮೃತ ಪರಿಚಯದೊಳ್ಪುಟ್ಟಿ ಮೆಯ್ಯುಂದವಾನಂ|
ದಾರಾಮಾಸನ್ನ ರಾಮಾಯಣದೊಳಮುರ್ದು ತಳ್ತಾವಗಂ ಕೃಷ್ಣಲೀಲಾ ||

ಧಾರಂ ತಾನಾಗಿ ನಾನಾ ಫಲಮನಿಳೆಗೆ ಬೀರಿತ್ತು ಸಂಸಾರ ಸೌಖ್ಯಾ।
ಕಾರಂ ಸನ್ಮಂತ್ರಿ ಲಕ್ಷ್ಮೀಧರನುರು ಕವಿತಾ ಕಲ್ಪವಲ್ಲೀ ವಿತಾನಂ ॥

ಎಂಬ ಪದ್ಯದಲ್ಲಿ ಸೂಚಿತವಾಗಿರುವ [9] 'ನೀತಿವಾಕ್ಯಾಮೃತ'ವೆಂಬುದೊಂದು ರಾಜನೀತಿ ಸಂಬಂಧವಾದ ಗ್ರಂಥವಾಗಿರಬೇಕೆಂದೂ, 'ಆನಂದರಾಮಾಯಣ'ವೆಂಬುದು ತನ್ನ ಕುಲ ಗುರುಗಳ ಹೆಸರಿನಲ್ಲಿ ಬರೆದ ಕಾವ್ಯವಿರಬೇಕೆಂದೂ, 'ಕೃಷ್ಣಲೀಲೆ'ಯೆಂಬುದೂ ಸಹ ಒಂದು ಕಾವ್ಯವಾಗಿಯೇ ಇರಬೇಕೆಂದೂ ಊಹಿಸಲು ಕಾರಣಗಳಿವೆ. 'ನಾನಾ ಫಲಮನಿಳೆಗೆ ಬೀಱಿತ್ತು' ಎಂಬ ಪಾದವು ಈ ಊಹೆಗೆ ಬಲ ಕೊಡುತ್ತದೆ.

ಹೆಚ್ಚೇನು? ವಿದ್ಯಾರಣ್ಯರ ಸೋದರಳಿಯನೀ ಶಾಸನ ವಸ್ತು ನಾಯಕನು: ಎಂದ ಮೇಲೆ ಆತನ ಪ್ರತಿಭೆಯನ್ನು ಕುರಿತು ಹೆಚ್ಚು ಹೇಳಲೇಕೆ ಎಂಬುದಾಗಿ ಸುಲಭವಾಗಿ ಹೇಳಬಹುದು. ಪಾರಂಪರ್ಯವಾಗಿ ಬಂದ ಪ್ರತಿಭಾಂಕುರವೀತನಲ್ಲಿದ್ದಿರಬಹುದಾದರೂ ಈ ಲಕ್ಷ್ಮೀಧರನನ್ನು ರೂಪಿಸಿದವಳು ಆತನ ತಾಯಿ ಸಿಂಗಲೆ:

ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ।
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಗೆಯ್ ನಂಬಿದ ॥
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆ ಎನುತ್ತಿಂತೆಲ್ಲಮಂ ಪಿಂದೆ ತಾ।
ಯೆಱೆದಳ್ಪಾಲೆಱೆವಂದು ತೊಟ್ಟಿ ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಕೇಳಿದಿರಲ್ಲವೆ ತಾಯ ಮಡುಲೇ ಲಕ್ಷ್ಮೀಧರನ ವಿಶ್ವವಿದ್ಯಾನಿಲಯವೆಂಬುದನ್ನು!

ಕವಿಯು ಲಕ್ಷ್ಮೀಧರನನ್ನು 'ಪತಿಹಿತಾರ್ಥಾಗಮ' ಚಕ್ರವರ್ತಿಯೆಂದೂ

ನೆಲದೊಳ್ ಪತಿ ಹಿತರಾವೆಂ।
ದುಲಿವರ ನಾಲಗೆಯನಲುಗಲೀಯದೆ ಬಲು ಸಂ ॥
ಕಲೆಯಾದುದು ಮುಂ ಕೀರ್ತಿಯ।
ಕಲೆ ಮೂಜಗವಱಿಯೆ ಮಂತ್ರಿ ಲಕ್ಷ್ಮೀಧರನಾ ॥

ಎಂದೂ ವರ್ಣಿಸಿ, ಆತನ ಸ್ವಾಮಿಭಕ್ತಿಗೊಂದು ಉದಾಹರಣೆಯನ್ನು (ಪದ್ಯಗಳು ೩೭–೩೮) ಕೊಟ್ಟಿದ್ದಾನೆ. ಘಾತುಕರು ಕೆಲವರು ಒಮ್ಮೆ ಸಂಧಾನ ನಡೆಯಿಸಿ ದೇವರಾಯ ಮಹಾರಾಯನನ್ನು [10] ಕೊಲ್ಲಬೇಕೆಂದು ನಿಶ್ಚಯಮಾಡಿ ಚೆನ್ನಾಗಿ

9. ಸಂಸ್ಕೃತದಲ್ಲಿ 'ನೀತಿವಾಕ್ಯಾಮೃತ'ವೆಂಬುದೊಂದು ಗ್ರಂಥವಿದೆ. ಇದನ್ನು ಮುಂಬಯಿ ನಿರ್ಣಯಸಾಗರ ಸಂಸ್ಥೆಯವರು ಪ್ರಕಟಿಸಿದ್ದಾರೆ. ಆದರೆ ಲಕ್ಷ್ಮೀಧರ ಕೃತ ಕಾವ್ಯಕ್ಕೂ ಇದಕ್ಕೂ ಸಂಬಂಧವಿದೆಯೆಂದು ಹೇಳಲಾಗದು.

10. ಈ ಶಾಸನದಲ್ಲಿ ದೇವರಾಯನಿಗೆ ಇಂತಹ ಆಪತ್ತು ಸಂಭವಿಸಿತೆಂದು ಹೇಳಿದೆಯಷ್ಟೆ. ಇದಕ್ಕೆ ಬಲಕೊಡುವಂತೆ ದಕ್ಷಿಣ ಕನ್ನಡ ಜಿಲ್ಲೆಯ ಬಾರಕೂರು ಗ್ರಾಮದಲ್ಲಿ ಚೌಳಿಕೆರೆಯ ಗಣಪತಿ ದೇವಾಲಯದಲ್ಲಿ ದೊರೆತ ಒಂದು ಶಾಸನದಿಂದ (No. 145 of 1901, 'Madras Epigraphical Report') ಇಮ್ಮಡಿ ದೇವರಾಯನಿಗೆ [illegible] ಒಂದು ವಿಪತ್ತು [illegible] ಆ ಕಂಟಕ ನಿಷ್ಕಂಟಕವಾಗಲಿಕ್ಕಾಗಿ ದಾನ ಧರ್ಮಗಳನ್ನು ಮಾಡಿರುವ ಹಾಗೂ ತಿಳಿದುಬರುತ್ತದೆ.

ಸಾಮರ್ಖಂಡದ ಸುಲ್ತಾನ್ ಷಹರುಖ್ ಎಂಬಾತನ ರಾಯಭಾರಿ ಅಬ್ದುರ್ ರಜಾಕ್ ಎಂಬವನು ಇಮ್ಮಡಿ ದೇವರಾಯನ ಆಳಿಕೆಯ ಕಾಲದಲ್ಲಿ ವಿಜಯನಗರಕ್ಕೆ ಬಂದಿದ್ದನು. ಕ್ರಿಸ್ತ ಶಕ ೧೪೪೨-೪೩ನೆಯ ವರ್ಷ ದೇವರಾಯನ ತಮ್ಮನೇ ಅಣ್ಣನನ್ನು ಕೊಲ್ಲುವ [illegible] ನಡೆಯಿಸಿದನೆಂದು ಅವನು ಹೇಳು

ಮಸೆದ ಆಯುಧಗಳನ್ನು ಹಿಡಿದು ರಾಜದ್ವಾರವನ್ನು ಮುತ್ತಿದರು. ಈ ಒಳಸಂಚನ್ನು ತಿಳಿದ ಲಕ್ಷ್ಮೀಧರನು ಶತ್ರು ಬಲವನ್ನು ಲೆಕ್ಕಿಸದೆ "ತನ್ನ ಪತಿಕಾರ್ಯವೆ ಕಾರ್ಯವೆನುತ್ತೆ" ನುಗ್ಗಿ ಸಾಹಸದಿಂದ ವಂಚಕರನ್ನು ಮಟ್ಟಹಾಕಿ ತನ್ನೊಡೆಯನನ್ನು ಕಾಪಾಡಿದನು.

ಇನ್ನು, ಶಾಸನ ಕವಿಯನ್ನು ಕುರಿತೊಂದೆರಡು ಮಾತುಗಳನ್ನು ಹೇಳಬೇಕಾಗಿದೆ. "ಕವೀಂದ್ರಾಭರಣ ಮಧುರ"ನು "ಪಿಂಗದೆ ಲಕ್ಷ್ಮೀಧರ ಸಚಿವಂಗಾಚಂದ್ರಾರ್ಕವೊದವಿದಾಯುಂ ಶ್ರೀಯುಂ ಸಂಗತಿವಡೆದಿರೆ ಒರೆದಂ ಮಂಗಳಮಂ" ಎಂದು ಶಾಸನಾಂತ್ಯದಲ್ಲಿದೆ.

[11]ಕವಿಚರಿತೆಯಲ್ಲಿ ಒಬ್ಬ ಮಧುರನು ಧರ್ಮನಾಥಪುರಾಣ, ಗುಮ್ಮಟಾಷ್ಟಕ ಇತ್ಯಾದಿ ಗ್ರಂಥಗಳನ್ನು ಬರೆದಿರುವಂತೆ ಕವಿಚರಿತಕಾರರು ಬರೆದಿದ್ದಾರೆ. "ಇವನು ಜೈನಮತದವನು, ವಾಜಿವಂಶಕ್ಕೆ ಸೇರಿದವನು, ಭಾರದ್ವಾಜ ಗೋತ್ರದವನು; ಇವನ ತಂದೆ ವಿಷ್ಣು, ತಾಯಿ ನಾಗಾಂಬಿಕೆ; ಬುಕ್ಕರಾಯನ ಸುತ ಹರಿಹರ ರಾಯನ ಪ್ರಧಾನನಾದ ಮುದ್ದದಂಡೇಶ್ವರನು ಇವನ ಪೋಷಕನು. 'ಭೂನಾಥಾಸ್ಥಾನ ಚೂಡಾಮಣಿ ಮಧುರ ಕವೀಂದ್ರಂ' ಎಂಬುದರಿಂದ ಇವನು ಹರಿಹರನ ಆಸ್ಥಾನ ಕವಿಯಾಗಿದ್ದಿರಬೇಕು. ಈತನಿಗೆ ಕಲಾ ವಿಲಾಸ, ಕವಿರಾಜ ಕಲಾ ವಿಲಾಸ, ಕವಿ ಮಾಧವ, ಮಧುರ, ಮಾಧವ, ಸರಸ ಕವಿ ರಸಾಲ ವಸಂತ, ಭಾರತೀ ಮಾನಸ ಕೇಳೀ ರಾಜಹಂಸ, ವಿಶ್ವವಿದ್ಯಾ ಸಮುದಯ, ಸುಮನಸ್ಸಂಚರ ಚಂಚರೀಕ ಎಂಬ ಬಿರುದುಗಳಿದ್ದಂತೆಯೂ ಕವಿಚರಿತೆಯಿಂದ ಸ್ಪಷ್ಟವಾಗುತ್ತದೆ. ಈ ಶಾಸನದಿಂದ 'ಕವೀಂದ್ರಾಭರಣ ಮಧುರ'ನಿಗೆ ದೇವರಾಯನ ಮಹಾ ಪ್ರಧಾನ ಲಕ್ಷ್ಮೀಧರನು 'ಸುಕ್ಷೇತ್ರ ಹಸ್ತ್ಯಶ್ವ ಭೂಷಾದಿಗಳಂ' ಕೊಟ್ಟು ಅವನನ್ನು ಬಹು ಅಕ್ಕರತೆಯಿಂದ ಪೋಷಿಸುತ್ತಿದ್ದನೆಂದು ತಿಳಿದುಬರುತ್ತದೆ.

ಹರಿಹರರಾಯನ ಪ್ರಧಾನ ಮುದ್ದದಂಡೇಶನಿಂದ ಪೋಷಿತನಾದ ಕವಿಚರಿತೆಯ ಮಧುರನಿಗೂ, ದೇವರಾಯನ ಪ್ರಧಾನನಾದ ಲಕ್ಷ್ಮೀಧರನಿಂದ ಪೋಷಿತನಾದ ಈ ಶಾಸನದ ಮಧುರನಿಗೂ ಏನು ಸಂಬಂಧವುಂಟೆಂದು ವಾಚಕರು ಕೇಳಬಹುದು. ಈ ಶಾಸನಾಂತ್ಯದಲ್ಲಿ ಮಧುರನು ತನ್ನನ್ನು ಕುರಿತು ಹೀಗೆ ಬರೆದುಕೊಂಡಿರುವನು :—

ವೃ || ಗಣಿದಂಗೊಳ್ವೊಡೆ ಮಿಕ್ಕಿನಕ್ಕರದ ಮಾಣಂತಿರ್ಕೆ ತನ್ನಾಣೆ ಘೋ |
ಷಣೆ ಸಲ್ಗುಂ ಸುಕವೀಂದ್ರ ವೃಂದ ಸಭೆಯೊಳ್ ತಾನೆಂದೊಡಮ್ಮಮ್ಮ ಧಾ ||

---

ಪ್ರಾ. ಸೆ. ನಮಗೆ ತಿಳಿದಿರುವ ಮಟ್ಟಿಗೆ ಇಮ್ಮಡಿ ದೇವರಾಯನಿಗಿದ್ದವನು ತ್ರೀಗಿರಿ, ಅಥವಾ ಪ್ರತಾಪದೇವರಾಯನೆಂಬ ತಮ್ಮನೊಬ್ಬನೆ. ಎಂದಮೇಲೆ ಇಮ್ಮಡಿ ದೇವರಾಯನ ಜೀವದ ಮೇಲೆ ಕೈಮಾಡಿದವನು ಶ್ರೀಗಿರಿಯೆಂದೇ ಸದ್ಯಕ್ಕೆ ಊಹಿಸಬೇಕಾಗಿದೆ.

(Madras Epigraphical Report for 1906, Page 64, para 46.)

11. "Memoirs of the Archæological Survey of India", No. 13, p. 15.

ರಿಣಿಯೊಳ್ ಕೇಳ್ದಱಿೞಿಯಾ ಜಡಾ ಮಧುರನಂ ನಿರ್ಣೀತ ಕರ್ಣಾಟ ಲ।
ಕ್ಷ್ಮ್ಮಣ • ಪಾದಸರೋಜನಂ ಪ್ರವಿಲಸದ್ಧಾತ್ರೀ ಮುಖಾಂಭೋಜನಂ ॥

'ಕವಿಚರಿತೆಯು' ಮಧುರನು ತನ್ನ ಕವಿತಾ ಚಾತುರಿಯನ್ನೂ ಗುಣಾದಿಗಳನ್ನೂ ಹೇಳಿಕೊಳ್ಳುತ್ತ ಹೀಗೆ ಬರೆದಿರುವನು :—

ವೃ ॥ ಗಣಿದಂ ಗೊಳ್ಳೊಡೆ ಮಿಕ್ಕಿ ನಕ್ಕರದ ಮಾತಂತಿರ್ಕೆ ತನ್ನಾಣೆ ಘೋ।
ಷಣೆ ಸಲ್ಗುಂ ಸುಕವೀಂದ್ರವೃಂದ ಸಭೆಯೊಳ್ ತಾನೆಂದೊಡಮ್ಮಮ್ಮ ಧಾ ॥
ರಿಣಿಯೊಳ್ ಕೇಳ್ದಱಿೞಿಯಾ ಜಡಾ ಮಧುರನಂ ನಿರ್ಣೀತ ಕರ್ಣಾಟ ಲ।
ಕ್ಷಣ ಭಾಷಾ ಕವಿರಾಜನಂ ಪ್ರವಿಲಸದ್ವಾಣೀ ಮುಖಾಂಭೋಜನಂ ॥

ಈ ವೃತ್ತವನ್ನು [12]ಕವಿಚರಿತಕಾರರು ಉದಾಹರಿಸಿರುವರು. ಪಾಠಕರು ಈ ಎರಡು ವೃತ್ತಗಳನ್ನೂ ಕೊಂಚ ಪರೀಕ್ಷಿಸಿದ್ದೇ ಆದರೆ ಎರಡೂ ಒಂದೇ ಎಂಬುದಾಗಿ ಹೇಳದಿರರು. ವೃತ್ತಗಳ ನಾಲ್ಕನೆಯ ಪಾದದ ಹೊರತು ಮಿಕ್ಕವುಗಳು ಎರಡರಲ್ಲೂ ಒಂದೇ. ನಾಲ್ಕನೆಯ ಪಾದವು ಕವಿಚರಿತೆಯ ಪ್ರಕಾರ—

.................ನಿರ್ಣೀತ ಕರ್ಣಾಟ ಲ।
ಕ್ಷಣ ಭಾಷಾ ಕವಿರಾಜನಂ ಪ್ರವಿಲಸದ್ವಾಣೀ ಮುಖಾಂಭೋಜನಂ ॥

ಎಂಬುದು. ಶಾಸನ ಪಾಠದ ಪ್ರಕಾರ—

......................ನಿರ್ಣೀತ ಕರ್ಣಾಟ ಲ।
ಕ್ಷ್ಮ್ಮಣ ಪಾದ ಸರೋಜನಂ ಪ್ರವಿಲಸದ್ಧಾತ್ರೀ ಮುಖಾಂಭೋಜನಂ ॥

ಆಗಿರುತ್ತದೆ.

ಮೊದಲನೆಯ ಪಾಠದಲ್ಲಿ ಮಧುರನು ತನ್ನ ಕವಿತಾ ಚಾತುರ್ಯವನ್ನು ಹೇಳುತ್ತ, 'ಕರ್ಣಾಟ ಲಕ್ಷಣ ಭಾಷಾ ಕವಿರಾಜನಂ ಪ್ರವಿಲಸದ್ವಾಣೀ ಮುಖಾಂಭೋಜನಂ' ಎಂಬುದಾಗಿ ಹೇಳಿಕೊಂಡಿರುವನು. ಎರಡನೆಯ ಪಾಠದಲ್ಲಿ ಅದೇ ರೀತಿ ತನ್ನ ಗುಣಾದಿಗಳನ್ನೂ ಕವಿತಾ ಚಾತುರ್ಯವನ್ನೂ ಹೇಳಿ ತನ್ನ ಪೋಷಕನು ಪ್ರಧಾನ ಲಕ್ಷ್ಮೀಧರನಾಗಿದ್ದುದರಿಂದ, 'ಲಕ್ಷ್ಮ್ಮಣ ಪಾದ ಸರೋಜನಂ ಪ್ರವಿಲಸದ್ಧಾತ್ರೀ ಮುಖಾಂಭೋಜನಂ' ಎಂಬುದಾಗಿ ಹೇಳಿರುವನು. ಆದುದರಿಂದ 'ಕರ್ಣಾಟ ಲಕ್ಷಣ ಭಾಷಾ ಕವಿರಾಜ'ನೂ, 'ನಿರ್ಣೀತ ಕರ್ಣಾಟ ಲಕ್ಷ್ಮ್ಮಣ ಪಾದಸರೋಜ'ನೂ ಇಬ್ಬರೂ ಒಂದೇ. ಮಧುರನು ಮುದ್ದದಂಡೇಶನ ಪೋಷಣೆಗೆ ಸೇರಿದ್ದುದು ಮಾತ್ರವೇ ಅಲ್ಲದೆ ಲಕ್ಷ್ಮೀಧರನ ಉದಾರಾಶ್ರಯಕ್ಕೂ ಪಾತ್ರನಾಗಿದ್ದನೆಂಬಂಶವು ಸ್ಪಷ್ಟವಾಯಿತು. 'ಭೂನಾಥಾಸ್ಥಾನಚೂಡಾಮಣಿ ಮಧುರ ಕವೀಂದ್ರಂ' ಎಂಬುದಾಗಿ ಹೇಳಿಕೊಂಡಿರುವುದರಿಂದಲೂ, ಈ ಶಾಸನದಲ್ಲಿ ದೇವರಾಯನ ವಂಶಾವಳಿಯನ್ನು ಹೇಳುತ್ತ—

ವೃ ॥ ಆ ಭೂಮಿಪಾಲ ಪುಣ್ಯಾಂಕುರಮದು ಪುರುಷಾಕಾರದಿಂ ಪುಟ್ಟಿದಂತಾ।
ಶಾ ಭಾಗ ಪ್ರಸ್ಫುರತ್ಪಾವನ ಯಶನಶನಿ ಪ್ರೌಢ ಬಾಹು ಪ್ರತಾಪಂ ॥

12. ಕರ್ಣಾಟಕ ಕವಿಚರಿತೆ, ಪ್ರಥಮ ಸಂಪುಟ, ಪುಟ ೩೪೬—೩೫೧.

ಸೌಭಾಗ್ಯ ಶ್ರೀನಿವಾಸಂ ಜನಿಯಿಸಿ ಸಕಲ ಕ್ಷತ್ರ ಚೂಡಾಧಿರೂಢಾ।
ಜ್ಞಾ ಭಾರಂ ಸಾರ್ವಭೌಮೋನ್ನತಿಯೊಳೆಸಗಿದಂ ದೇವರಾಜಾವನೀಂದ್ರಂ ॥

ಸಲೆ ನಾನಾ ಸಸ್ಯ ಸಂಪತ್ತಿಯನೊದವಿಸಿ ಸಂತುಷ್ಟಿಯಂ ದಾನ ಧಾರಾ।
ಜಲದಿಂ ಸಂತಾಪಮಂ ತಳ್ಗಿಸಿ ವಿತತ ಸಿತಚ್ಛತ್ರಸುಚ್ಛಾಯೆಗೊಯ್ದು ॥
ಜ್ವಲಿಪಾಜ್ಞಾ ದಾಮದಿಂದಂ ನಿಯಮಿಸಿ ನಿಜ ದೋಸ್ತಂಭದೊಳ್ಕಟ್ಟಿ ಗೋಮಂ।
ಡಲಮಂ ಸತ್ಕೀರ್ತಿ ದುಗ್ಧಂಗಱಿತದನಱಿಕೆಯಿಂ ದೇವರಾಜಾವನೀಂದ್ರಂ ॥

ಎಂದನೇಕ ವಿಧವಾಗಿ ಸ್ತೋತ್ರ ಮಾಡಿರುವುದರಿಂದಲೂ ಮಧುರನು ದೇವ ರಾಯನ ಆಸ್ಥಾನ ಕವಿಯಾಗಿಯೂ ಇದ್ದನೆಂದು ಹೇಳಬಹುದು.

ಈ ಶಾಸನವೇ ಒಂದು ಪುಟ್ಟ ಕಾವ್ಯದಂತಿದೆ. ಅದನ್ನೋದುವವರಿಗೆ ನಿಜ ವಾಗಿ 'ಮಧುರನ ಮಾತುಗಳೇಂ ಸವಿಯೊ' ಎಂದೆನ್ನಿಸುತ್ತದೆ. ಮಂಗಳಾಚರಣ ಶ್ಲೋಕದಲ್ಲೇ (ಪದ್ಯ ೨) ಒಂದು ಹೊಸತನವಿದೆ. 'ಸಲೆ ನಾನಾ ಸಸ್ಯ' (ಪದ್ಯ ೧೪) ಎಂಬ ವೃತ್ತದ ವಸ್ತುವನ್ನೂ ಆ ಚಿತ್ರವನ್ನೂ, ಆ ಚಿತ್ರವನ್ನು ರೂಪಿಸಿರುವ ಮಾರ್ಗವೈಶಿಷ್ಟ್ಯವನ್ನೂ ಸಾಹಿತಿಗಳು ಅನುಭವಿಸಬಲ್ಲರಲ್ಲದೆ ಸಾಮಾನ್ಯರೇನು ಸುಖಪಟ್ಟಾರು! 'ಕೆಱೆಯುಂ ಕಟ್ಟಿಸು' (ಪದ್ಯ ೨೬) ಎಂಬ ವೃತ್ತವು ಮಧು ರನ ಪ್ರತಿಭಾ ಹೃದಯವನ್ನು ಬಯಲುಮಾಡುತ್ತದೆ.

ಮಧುರನು ರೂಪಕ ಲಕ್ಷಣ ಪ್ರಧಾನ ಕವಿಯೆಂಬುದಕ್ಕೆ ಏನೇನೂ ಅಡ್ಡಿ ಯಿಲ್ಲ.—

.....................ಲಕ್ಷ್ಮೀಧರಂಗಾರ್।
ಸಮರೆಂದಾನಳ್ಕಱಿಂ ಕೇಳ್ದೊಡೆ ಬಿಡು ಪೊಸತೇಂ ॥
.................ಪೋಗಿಯುಂ ಬಂದು ಕಲ್ಪ।
ದ್ರುಮಮೊಂದಂ ಪೇಱ್ವಿ ಮತ್ತುಳ್ಳೆಡೆ ನುಡಿ ಜಗತೀಚಕ್ರದೊಳ್..॥—(ಪದ್ಯ ೩೦)

............ಮುನಿದ ಕಯ್ಯೊಳ್ ಪೇಳೆಲೇ ವಂದಿ ವಾ।
ದಿಸದಿರ್.........................॥ —(ಪದ್ಯ ೩೧)

ಮುಂತಾದ ಉದಾಹರಣೆಗಳೇ ಸಾಕು. ರಸ, ಭಾವ ನಿರೂಪಣದಲ್ಲಿ ಮಧುರನು ಉತ್ತಮ ಶ್ರೇಣಿಯ ಕವಿ ಕೂಟಕ್ಕೇ ಸೇರತಕ್ಕವನು. ಸಂಪ್ರದಾಯವು ಹಳೆಯ ದಾದರೂ ಇವನ ನಿರೂಪಣ ಮಾರ್ಗವು ನವೀನವಾದುದು, ಬಂಧವು ಸವಿಯಾ ದುದು. 'ಪೂವಿನ ಬಿಲ್ಲನೇಱಿಸುವ' (ಪದ್ಯ ೩೩), 'ತನುವಂ ಮನ್ಮಥ' (ಪದ್ಯ ೪೬), 'ಶ್ರೀಮತ್ಸಿಂದೂರ' (ಪದ್ಯ ೨) ಮುಂತಾದ ಪದ್ಯಗಳವನ ಕವಿತಾ ಚಾತುರ್ಯಕ್ಕೆ ಉದಾಹರಣೆಗಳು.

ಮಧುರನಿಗೆ ತನ್ನಲ್ಲಿದ್ದ ಶಕ್ತಿಯ ಅರಿವು ಚೆನ್ನಾಗಿದ್ದಿತು. ಅದು ಅವನಿಗೆ ಒಣ ಹೆಮ್ಮೆಯನ್ನುಂಟುಮಾಡಲಿಲ್ಲ; ಗಾಂಭೀರ್ಯವನ್ನೂ ಧೈರ್ಯವನ್ನೂ ಆತ್ಮವಿಶ್ವಾಸವನ್ನೂ ಉಂಟುಮಾಡಿದ್ದಿತು. ಹಾಗಿಲ್ಲವಾದರೆ—

..................ಸುಕವೀಂದ್ರ ವೃಂದ ಸಭೆಯೊಳ್ ।
..................ತಾನೆಂದೊಡಮ್ಮಮ್ಮ ಧಾ ॥
ರಿಣಿಯೊಳ್ ಕೇಳ್ದರುಂಯಾ ಜಡಾ ಮಧುರನಂ.... ।

ಎಂದು ಹೇಳುವುದಕ್ಕೆ ಎದೆಯಿರುತ್ತಿದ್ದಿತೆ?

---

## *ಶಾಸನ ಪಾಠ

ಶ್ಲೋ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ೧ ॥

ಸ್ರ॥ ಶ್ರೀಮತ್ಸಿಂದೂರ ಬಂಧಾರುಣ ಬಿದು ನವ ಸಂಧ್ಯಾಂಬುದಂ ಪುಷ್ಕರ ಪ್ರೋ ।
ದ್ದಾಮಾಂಭಶ್ಶೀಕರಂ ತಳ್ತುಡುಗಣಮುರು ದಂಷ್ಟ್ರಾಂಕುರಂ ಬಾಲ ಚಂದ್ರಂ ॥
ಪೋ ಮಾತೇನೆಂಬ ನೇರ್ಪಿಂ ನಭಮುನಣಕಿಪಂತಿರ್ದ ನಿತ್ಯೋನ್ನಮತ್ತೇ ।
ಜೋಮೂರ್ತಿ [1]ಶ್ರೀ ಮಹೇಭಾನನನನವರತಂ ಕೂರ್ತು ರಕ್ಷಿಕ್ಕೆ ನಿಮ್ಮಂ ॥ ೨ ॥

---

* No. 267, "South Indian Inscriptions", Vol. IV., pp. 61-66.

1. ಈ ಪದ್ಯದಲ್ಲಿ 'ಶ್ರೀಮಹೇಭಾನನ'ನೆಂದು ಹೇಳಿದೆ. ಇದೇ ಶಾಸನದಲ್ಲೇ 'ಮಹಾಗಣಪತಿ' (ಪದ್ಯ ೩), 'ಬೀಜಪೂರ ಸಮುಚಿತಾಯುಧ ವಿಶೇಷ ವಿಲಸಿತ ದಶ ಭುಜಾ ದಂಡಂ', 'ಮಹಾ ವಿನಾಯಕಂ' (ವಚನ ೪೧), 'ಮಹಾ ಶಕ್ತಿ ಹೇರಂಬ' (ಪದ್ಯ ೪೫), 'ಮಹಾ ಗಣನಾಥ' (ಪದ್ಯ ೪೬) ಮುಂತಾದ ಹೆಸರುಗಳೂ ಕಾಣಬರುತ್ತವೆ. ಗಣಪತಿಗಳಲ್ಲಿ ೧೬ ಬಗೆಯುಂಟು—ಬಾಲಗಣಪತಿ, ತರುಣ ಗಣಪತಿ, ಭಕ್ತಿ ಗಣಪತಿ, ವೀರ ಗಣಪತಿ, ಶಕ್ತಿ ಗಣಪತಿ, ಹೇರಂಬ, ಪ್ರಸನ್ನ ಗಣಪತಿ, ಧ್ವಜ ಗಣಪತಿ, ಉನ್ಮತ್ತೋಚ್ಛಿಷ್ಟ ಗಣಪತಿ, ವಿಘ್ನರಾಜ ಗಣಪತಿ, ಭುವನೇಶ ಗಣಪತಿ, ನೃತ್ಯ ಗಣಪತಿ, ಹರಿದ್ರಾ ಗಣಪತಿ, ಭಾಳಚಂದ್ರ ಗಣಪತಿ, ಶೂರ್ಪಕರ್ಣ ಗಣಪತಿ ಮತ್ತು ಏಕದಂತ ಗಣಪತಿ. ಇವೊಂದೊಂದಕ್ಕೂ ವಿಶಿಷ್ಟ ಲಕ್ಷಣಗಳುಂಟು. ಶಕ್ತಿ ಗಣಪತಿಯಲ್ಲಿ ಮತ್ತೆ ಲಕ್ಷ್ಮೀ ಗಣಪತಿ, ಉಚ್ಛಿಷ್ಟ ಗಣಪತಿ, ಮಹಾ ಗಣಪತಿ, ಊರ್ಧ್ವ ಗಣಪತಿ, ಪಿಂಗಳಗಣಪತಿ ಎಂದು ಐದು ಬಗೆ. ಶಾಸನದ ಆರಾಧ್ಯ ದೇವತೆಯು ಈ ಗುಂಪಿಗೆ ಸೇರಿದುದು. ಆದುದರಿಂದ ಅವುಗಳ ಲಕ್ಷಣಗಳನ್ನು ಸಂಕ್ಷೇಪವಾಗಿ ಸೂಚಿಸುವುದು ಅನುಚಿತವಲ್ಲ.—

೧. ಲಕ್ಷ್ಮೀ ಗಣಪತಿ—೮ ಕೈಗಳು, ಆ ಕೈಗಳಲ್ಲಿ ಗಿಣಿ, ದಾಳಿಂಬ, ಕಮಲ, ರತ್ನ ಖಚಿತ ಕಲಶ, ಅಂಕುಶ, ಪಾಶ, ಕಲ್ಪಕ ಲತಾ ಮತ್ತು ಬಾಣ ಲತೆಯ ಮೊಗ್ಗೆ (ಕ್ರಿಯಾ ಕ್ರಮ ದ್ಯೋತಿ).
ಮೂರು ಕಣ್ಣು, ದಂತ, ಚಕ್ರ, ಅಭಯ ಮುದ್ರೆ, ಲಕ್ಷ್ಮಿಯನ್ನಾಲಿಂಗಿಸಿರುವಿಕೆ, ಬಂಗಾರದ ಮೈಬಣ್ಣ (ಮಂತ್ರ ಮಹೋದಧಿ).

೨. ಉಚ್ಛಿಷ್ಟ ಗಣಪತಿ—ಕೈಗಳಲ್ಲಿ ಕಮಲ, ದಾಳಿಂಬ, ವೀಣಾ, ಬತ್ತ ಮತ್ತು ಅಕ್ಷಮಾಲಾ (ಕ್ರಿಯಾ ಕ್ರಮ ದ್ಯೋತಿ).
ಕೆಂಬಣ್ಣ, ಪದ್ಮಾಸನ, ನಗ್ನ ದೇವಿಯೊಂದಿಗೆ (ಮಂತ್ರ ಮಹಾರ್ಣವ).

೩. ಮಹಾ ಗಣಪತಿ—೧೦ ಕೈಗಳು, ಕಮಲ ದಾಳಿಂಬ, ರತ್ನ ಕಲಶ, ಗದಾ, ಮುರಿದ ದಂತ, ಕಬ್ಬು, ಬತ್ತದ ತೆನೆ, ಪಾಶ, ಕೆಂಪು ಬಣ್ಣ. ಬಿಳಿಯ ಬಣ್ಣದ ಶಕ್ತಿಯು ತೊಡೆಯ ಮೇಲೆ ಕುಳಿತಿರುವಳು. ಆಕೆಯ ಕೈಯಲ್ಲಿ ಕಮಲವಿರುವುದು. (೪೧ನೆಯ ಪದ್ಯವಾದ ಮೇಲೆ ಬರುವ ವಚನದೊಂದಿಗಿದನ್ನು ಹೋಲಿಸಿರಿ.)

೪. ಊರ್ಧ್ವ ಗಣಪತಿ—೫ ಕೈಗಳಲ್ಲಿ ಕಲ್ಹಾರ ಪುಷ್ಪ, ಶಾಲಿ ಕಣ, ಕಬ್ಬು ಬಿಲ್ಲು, ಬಾಣ ಮತ್ತು ದಂತ ಇರಬೇಕು. ಎಡ ಕೈಯಲ್ಲಿ ತೊಡೆಯ ಮೇಲಿರುವ ಶಕ್ತಿಯನ್ನು ಆಲಿಂಗಿಸಿರಬೇಕು. ಬಣ್ಣ ಹೇಮ ಹಳದಿ, ಶಕ್ತಿಯು ವಿದ್ಯುಲ್ಲತೆಯಂತಿರಬೇಕು.

೫. ಪಿಂಗಳ ಗಣಪತಿ—೬ ಕೈಗಳು; ಮಾವಿನಹಣ್ಣು, ಕಲ್ಪಕ ಪುಷ್ಪಗುಚ್ಛ, ಕಬ್ಬು, ಬತ್ತದ ತೆನೆ, ಮೋದಕ ಮತ್ತು ಪರಶು; ಪಕ್ಕದಲ್ಲಿ ಲಕ್ಷ್ಮಿ.

ಚಂ॥ ತಣಿಯೆ ಸದಾಳಿಯಂ ಪೊರೆವ ದಾನ ಗುಣಂ ಪರಿಪೂರ್ಣ ಭದ್ರ ಲ।
ಕ್ಷಣಮುಳವಟ್ಟ ಶಕ್ತಿ ಸುಮನಸ್ಸ್ತುತಮಾದನವದ್ಯ ವಿದ್ಯೆ ಸಂ ॥
ದಣಿಯುರಮಾವನೊಳ್ ನೆಗೆಳ್ದುದೆನ್ನವೊಲಿಂದು ಮುದಂ ಮಿಗಲ್ಕೆಹಾ।
ಗಣಪತಿ ಕೂರ್ಮೆಯಿಂ ಕುಡುಗೆ ಲಕ್ಷ್ಮಣಮಂತ್ರಿಗಭೀಷ್ಟಸಿದ್ಧಿಯಂ ॥ ೩ ॥

ಕಂ॥ ಘೋರ ಭವ ಭಯ ನಿದಾಘದಿ।
ನೋರಂತಳವಳಿದು ಬಂದವರ್ಗೊಳ್ಪಂ ಭಾ ॥
ಗೀರಥಿ ಜನಿಯಿಸಿದಾನಂ।
ದಾರಾಮ ಪದಂಗಳೀವುದೊಂದಚ್ಚರಿಯೇ ॥ ೪ ॥

ಶ್ರೀ ಲಕ್ಷ್ಮೀಧರ ಗುರುಪದ।
ನಾಳೀಕ ನವೀನ ಗಂಧದೊಳ್ ಬಗೆದಂದಾ ॥
ಲೋಲತೆಯನುಳಿದ ಮನುಜ ಮ।
ದಾಳಿಗೆ ಸೊಗಯಿಪುದೆ ಜಡ ಪದಾಂಬುಜ ಸಂಗಂ ॥ ೫ ॥

ಪೊಂಬೆಟ್ಟಮೆ ಪೊಸ ಕೇಸರ।
ಮೆಂಬವೊಲಳವಟ್ಟ ಕುವಲಯಂ ಕುವಲಯದಂ॥
ತಿಂಬಾಗಿರೆ ತನ್ನಯ ತುದಿ।
ಗೊಂಬಿನೊಳಂಬುಧಿಯೊಳೆಸೆದನಾದಿ ವರಾಹಂ ॥ ೬ ॥

ಸ್ರ॥ ಆ ಮಾಯಾ ಪೋತ್ರಿ ಧಾತ್ರೀಭರಮನಜಿಸಿ ತುಳ್ಕಾಡಿದಂದಾರ್ದಮರ್ತ್ಯ।
ಸ್ತೋಮಂ ಮಂಥಾದ್ರಿಯಂ ಮನ್ನಿಸದೊದೆಗಡೆದಂದಿಂಬುಗೊಂಡೋ ವದಂಬಿಂ ॥
ರಾಮಂ ಕೈವೋಗದೆಚ್ಚಂದಳಪಳಿಯದೆ ಗಾಂಭಿರ್ಯ ಧಾಮಂ ತಿತಿಕ್ಷಾ।
ಸೀಮಂ ಭೂಮಂಡಲಕ್ಕಾಭರಣಮೆನಿಸಿದಂ ಭೂರಿ ಭದ್ರಂ ಸಮುದ್ರಂ ॥ ೭ ॥

ಉ॥ ಅಂತೆಸೆವಂಬು ರಾಶಿಯ ಮಗಳ್ ಸಿರಿ ತನ್ನಯ ರಾಣಿಯಾಗಲೋ।
ರಂತಿರಸಂತ ತಳ್ಪತಳದೊಳ್ ನಿಜ ಲೀಲೆಯನಿಂಬುಗೊಂಡು ನಿ ॥
ಶ್ಚಿಂತೆಯಿನಿರ್ದ ನೀರರುಹ ನಾಭಿಯ ನಾಭಿ ಸರೋಜದೊಳ್ ಜಗ।
ತ್ಕಾಂತಸಲಂಪಿನಿಂದೊಗೆದಸೂರ್ಜಿತ ಶಾಸನನಂಬುಜಾಸನಂ ॥ ೮ ॥

ಕಂ॥ ಸರಸಿಜ ಭವಾತ್ರಿ ವಿಧು ಬುಧ।
ಪುರೂರವಾಯುಃ ಕ್ಷಿತೀಶ ನಹುಷ ಯಯಾತ್ಯಾ ॥
ದ್ಯರನುಕ್ರಮದಿಂ ಯದು ಧರೆ।
ಗರಸೆನಿಸಿದನಾದುದಾತನಿಂ ಯದು ವಂಶಂ ॥ ೯ ॥

ಸ್ರ॥ ಶ್ರೀಮತ್ಸೋಮಾನ್ವಯಕ್ಕುದ್ಭವಿಸಿದ ಯದುವಂಶಾವನೀಪಾಲರೊಳ್ ನಿ।
ಸ್ಸೀಮ ಶ್ರೀ ಸಂಗಮ ಕ್ಷ್ಮಾಪತಿ ದೊರೆವಡೆದಂ ತತ್ತನೂಜಂ ಸಮಸ್ತೋ ॥

ರ್ಗೀ ಮಾನ್ಯಂ ರೂಢಿವೆತ್ತಂ ಹರಿಹರನದಟಿಂ ತನ್ನರೇಂದ್ರಾನುಜಂ ಸು।
ತ್ರಾಮೋದ್ದಾಮ ಪ್ರತಾಪಂ ತಳೆದನಖಿಳ ಭೂಚಕ್ರಮಂ ಬುಕ್ಕರಾಯಂ
॥ ೧೦ ॥

ಕಂ॥ ಆತಂಗೆ ಜನಿಸಿದಂ ವಿ।
ಖ್ಯಾತಂ ನಳ ನಹುಷ ನೃಗ ಭಗೀರಥರೊರೆಗೇ ॥
ಮಾತೊ ಸರಿ ವಿಗಿಲೆನಲ್ಧ।
ರ್ಮಾತತ ರೂಪಂ ಪ್ರತಾಪ ಹರಿಹರ ಭೂಪಂ ॥ ೧೧ ॥

ದಾನವ ಮರ್ದನನಂತಿರೆ।
ಮಾನಾಗದೆ ಪಂದಿಯಾಗದಪ್ರತಿ ರೂಪಂ ॥
ತಾನಾ ಪ್ರತಾಪ ಹರಿಹರ।
ನೇನುದ್ಧರಿಸಿದನೊ ವೇದಮಂ ಮೇದಿನಿಯಂ ॥ ೧೨ ॥

ಸ್ರ॥ ಆ ಭೂಮೀಪಾಲ ಪುಣ್ಯಾಂಕುರಮದು ಪುರುಷಾಕಾರದಿಂ ಪುಟ್ಟಿದಂತಾ।
ಶಾ ಭಾಗ ಪ್ರಸ್ಫುರತ್ಪಾವನ ಯಶನಶನಿ ಪ್ರೌಢ ಬಾಹು ಪ್ರತಾಪಂ ॥
ಸೌಭಾಗ್ಯ ಶ್ರೀನಿವಾಸಂ ಜನಿಯಿಸಿ ಸಕಲ ಕ್ಷತ್ರ ಚೂಡಾಧಿರೂಢಾ।
ಜ್ಞಾ ಭಾರಂ ಸಾರ್ವಭೌಮೋನ್ನತಿಯೊಳೆಸಗಿದಂ ದೇವರಾಜಾವನೀಂದ್ರಂ
॥ ೧೩ ॥

ಮ॥ ಸ್ರ॥ ಸಲೆ ನಾನಾ ಸಸ್ಯ ಸಂಪತ್ತಿಯನೊದವಿಸಿ ಸಂತುಷ್ಟಿಯಂ ದಾನ ಧಾರಾ।
ಜಲದಿಂ ಸಂತಾಪಮಂ ತಳ್ಗಿಸಿ ವಿತತ ಸಿತಚ್ಛತ್ರ ಸುಚ್ಛಾಯೆಗೊಯ್ದು ॥
ಜ್ವಲಿಪಾಜ್ಞಾ ದಾಮದಿಂದಂ ನಿಯಮಿಸಿ ನಿಜ ದೋಸ್ತಂಭದೊಳ್ ಕಟ್ಟಿ ಗೋಮಂ।
ಡಲಮಂ ಸತ್ಕೀರ್ತಿ ದುಗ್ಧಂಗಱೆದನಱೆಕೆಯಿಂ ದೇವರಾಜಾವನೀಂದ್ರಂ
॥ ೧೪ ॥

ಮ॥ ಮುಱಿವಾತೇಂ ಪಗೆಗೊಂಡ ಪಾರ್ಥಿವರನತ್ಯುಗ್ರಾಜಿಯೊಳ್ಕಾಯ್ದು ತ।
ಳ್ತಿಱೆವಾಗಳ್ ನೆಗಳ್ದುಟ್ಟವಂಜಿರಸು ಭೇತಾಳಾಳಿ ಬೆನ್ನೆತ್ತರಿಂ ॥
ಸುಱೆದಿರ್ಪಾಮಿದ ಕೈಗಳಿಂ ಕಡೆವರಂ ದಿಗ್ಭಿತ್ತಿಯೊಳ್ ಕೂಡಿ ಚ।
ಟ್ಟಿಱೆದಂತಿರ್ದಪುದಪ್ರತರ್ಕ್ಯತರ ತೇಜಂ ದೇವರಾಜೇಂದ್ರನಾ ॥ ೧೫ ॥

ಕಂ॥ ಪೊಡಕರಿಪ ಗಂಡ ಗುಣದು।
ಗ್ಗಡಮೆಂತುಟೊ ಬಿಡದೆ ಜಡಿಯೆ ಜಯ ವಧುವತ್ತಿ ॥
ತ್ತಡಿಯಿಡದೆ ಬಾಳ ಬಾಯೊಳ್।
ನಡೆವಳ್ ಶ್ರೀ ದೇವರಾಯ ಭೂವಲ್ಲಭನ ॥ ೧೬ ॥

ಆ ದೇವರಾಯ ಭೂಪನ।
ಯಾದವ ವಂಶ ಪ್ರದೀಪನನ್ವಯದೊಳ್ಸಂ ॥
ದಾದಿ ಪ್ರಧಾನರೀ ಧರೆ।
ಗಾದವರ್ಮಾದರಸ ಸಾಯಣಾಖ್ಯರ್ ಮುಖ್ಯರ್ ॥ ೧೭ ॥

ಉ॥ ತೋಡದ ಬಾವಿಯಿಲ್ಲ ಮರಕಟ್ಟದ ಪೆರ್ಗೆಱೆಯಿಲ್ಲ ಲೀಲೆಯಿಂ।
ಮಾಡದ ದೇವತಾಭವನವಿಲ್ಲೊಲವಿಂ ಬಿಡದಗ್ರಹಾರವಿ ॥
ಲ್ಲಾಡಲದೇನೊ ಭೂಭುವನ ಭುಂಭುಕವಾದುದು ಕೀರ್ತಿ ಭಾವು ನಾ।
ಪಾಡಿಯೆ ಸೈಪು ಮಾಪರಸ ಸಾಯಣರೆಂಬ ಮಹಾ ಪ್ರಧಾನರಾ ॥ ೧೮ ॥

ಕಂ॥ ಅವರಂ ಬಲಭದ್ರಾಚ್ಯುತ।
ರಿವರೆನೆ ಜನವವರ ತಂಗಿ ಸಿಂಗಲೆ ಭುವನ ॥
ಸ್ತವನೀಯ ಚರಿತೆ ಸಂತತ।
ಮವನೀತಳದೊಳ್ ಸುಭದ್ರೆಯೆನಿಪುದು ಪಿರಿದೇ ॥ ೧೯ ॥

ಉ॥ ಆ ತರುಣೀ ಶಿಖಾಮಣಿಗೆ ವಲ್ಲಭನಾರೆನೆ ವಿಷ್ಣುವೃದ್ಧ ವಿ।
ಖ್ಯಾತ ಪವಿತ್ರ ಗೋತ್ರದೊಳೆ ಗೋಸನೆವೆತ್ತೊಗೆದಂ ಜಗಜ್ಜನ ॥
ಪ್ರೀತಿಕರಂ ಗುಣಾಕರನಲಂಕೃತ ಭೂಭುವನಂ ಬುಧಾಳಿ ಲೀ।
ಲಾತಿಶಯೈಕ ತಾಮರಸನೆಂದೆನೆ ರಾಮರಸಂ ಧರಿತ್ರಿಯೊಳ್ ॥ ೨೦ ॥

ಚಂ॥ ಅನಿಮಿಷ ನಂದನಕ್ಕಮರ ಭೂರುಹ ಪಂಚಕವಿಾಶ್ವರಂಗೆ ನೆ।
ಟ್ಟನೆ ಮುಖ ಪಂಚಕಂ ನೃಪ ನಯಾಭಿಮತಕ್ಕಮರ್ದಂಗ ಪಂಚಕಂ ॥
ಜನಿಯಿಸಿ ಲೋಕ ರೂಢಿವಡೆದಂತೆ ಸಮಸ್ತ ಜನಂ ಮನಂಗೊಳಲ್।
ಜನಿಸಿದುದಾ ಗುಣೈಕನಿಧಿ ರಾಮರಸಂಗೆ ತನೂಜ ಪಂಚಕಂ ॥ ೨೧ ॥

ಕಂ॥ ಕ್ರಮದಿಂ ಲಕ್ಷ್ಮೀಧರ ಜೆ।
ಸ್ನ ಮಂತ್ರಿ ಬುಕ್ಕಣ್ಣ ಮಾಧವಂ ಪೆರ್ಗಡೆಯೆಂ ॥
ದಮರ್ದಿರೆ ನಾಮಂ ನೆಗಳ್ದರ್।
ಸಮನಿಸಿ ಸಿಂಗಾಂಬಿಕಾ ಪವಿತ್ರೋದರದೊಳ್ ॥ ೨೨ ॥
ಆ ಮೆಱೆವೈವರೊಳಾಂತಂ।
ಶ್ರೀಮದ್ಭೀಮ ಪ್ರತಾಪನರ್ಜುನ ಕೀರ್ತಿ ॥
ಪ್ರೇಮಂ ಲಕ್ಷ್ಮೀಧರನೆನ।
ಲೀ ಮಹಿಯೊಳ್ ಧರ್ಮಸಂಭವ ಪ್ರಾಭವಮಂ ॥ ೨೩ ॥
ಕನ್ನಡಿಗ ಕುಲಕೆ ರನ್ನದ।
ಕನ್ನಡಿಯೆನೆ ವಿಶ್ವ ವಿದಿತ ವೃತ್ತ ಶ್ರೀಸಂ ॥
ಪನ್ನಂ ಲಕ್ಷ್ಮೀಧರ ದೇ।
ವನ್ನಿರ್ಮಲನಾಗಿ ನೆಗಳ್ದನೊಳಗಂ ಪೊಱಗಂ ॥ ೨೪ ॥

ಸ್ರ॥ ಶ್ರೀರಾಮಂ ತಂದೆ ದೇವೋತ್ತಮ ದಶರಥ ರಾಮಂ ಮನೋದೈವಮಾನಂ[1]।
ದಾರಾಮಂ ರೂಢಿವೆತ್ತಗ್ಗದ ಕುಲಗುರುವೆಂದಂದೆ ಪೋಷಿಪ್ಪುದೇನಿ ॥

1. ಸಂಗಮ ಮಂತ್ರೀಯರಿಗೆ ಆನಂದರಾಮರೆಂಬವರು ಕುಲಗುರುಗಳೆಂದು ಪ್ರತೀತಿಯಿದೆ. ಶಾಸನಾಧಾರವದಕ್ಕಿದೇ ಮೊದಲು.

ನ್ನಾರಂ ಸಿಂಗಾಂಬಿಕಾ ಮಂಗಳ ಜಠರ ಸುಧಾ ವಾರ್ಧಿ ಸಂಜಾತನಂ ತಾ।
ನಾ ರಾಮಂ ಲಕ್ಷ್ಮಣಾಮಾತ್ಯನೆ ಸಕಲ ಜಗಜ್ಜಾತ ಚೇತೋಭಿರಾಮಂ
॥ ೨೫ ॥

ಮ॥ ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ।
ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ ॥
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆಸುತ್ತಿಂತೆಲ್ಲಮಂ ಪಿಂದೆ ತಾ।
ಯೆಱೆದಳ್ ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾ
.ತ್ಯನಾ ॥ ೨೬ ॥

ಕಂ॥ ಕಯ್ಯೆಂದೊಡೆ ಮಂದಾರದ।
ಕಯ್ಯುಂ ಮಂತ್ರೀಂದ್ರ ಲಕ್ಷ್ಮಣಾಂಕನ ಕಯ್ಯುಂ ॥
ಕಯ್ಯಲ್ಲದುಳಿದ ಮನುಜರ।
ಕಯ್ಯೆಂಬುವು ಮರುಳ ಕೈಗಳೇತಱ ಕೈಗಳ್ ॥ ೨೭ ॥

ಚಂ॥ ಒಡವೆಯನೋವಿ ನೋಡಿ ಬಿಡಲಾಱದೆ ಚರ್ಮಮನೆಲ್ಪನೊಳ್ಪವೆ।
ತ್ತೊಡಲನಗಲ್ಚಿ ಕೊಟ್ಟಳಿದರಂತಕಟಾ ಸಚಿವೇಂದ್ರ ಲಕ್ಷ್ಮಣಂ ॥
ಪೊಡವಿಯೊಳಂದೆ ಪುಟ್ಟಿಸಡೆ ವಂದಿಗಳಿಷ್ಟಮನಿತ್ತು ಜೀವಮಂ।
ಪಡೆಯನೆ ಸೂತ ಜಾತನ ದಧೀಚಿಯ ಖೇಚರ ಚಕ್ರವರ್ತಿಯಾ ॥ ೨೮ ॥

ಕಂ॥ ಮಾತೇನೊ ದೇವರಾಯಂ।
ಗಾತಂ ಸನ್ಮಂತ್ರಿಯೆನಿಸಿ ನೆಗಳ್ದಿರೆ ವಿಬುಧ ॥
ಪ್ರೀತಿ ಮಿಗೆ ನಿಖಿಳ ವಿದ್ಯಾ।
ನೀತಿಗೆ ಗುರುವೆನ್ನದಿರ್ಪರೇ ಲಕ್ಷ್ಮಣನಂ ॥ ೨೯ ॥

ಮ॥ಸ್ರ॥ ಸುಮನೋ ವಿನ್ಯಾಸದಿಂ ವಿಶ್ರುತ ವಿಬುಧ ಜನಾನೂನ ಸನ್ಮಾನ ದಾನ।
ಕ್ರಮದಿಂದೀ ರಾಮಚಂದ್ರಾತ್ಮಜ ಸಚಿವ ಶಿರೋರತ್ನ ಲಕ್ಷ್ಮೀಧರಂಗಾರ್॥
ಸಮರೆಂದಾನಕ್ಕಱಿಂ ಕೇಳ್ವೊಡೆ ಜಡು ಪೊಸತೇಂ ಪೋಗಿಯುಂ ಬಂದು
ಕಲ್ಪ।
ದ್ರುಮಮೊಂದುಂ ಪೇೞಿಸ್ವಿ ಮತ್ತುಳ್ಳೆಡೆ ಸುಡಿ ಜಗತೀಚಕ್ರದೊಳ್
ಸತ್ಕವೀಂದ್ರಾ ॥ ೩೦ ॥

ಮ॥ ಪುಸಿದಾಸರ್ಚಿಸುಪರ್ಥವೇಂ ಮುಗಿವ ಕಯ್ಯೊಳ್ ಪೇಳಲೇ ವಂದಿ ವಾ।
ದಿಸದಿರ್ ವಂಶ ವಿಶುದ್ಧಿಯೊಳ್ ವಿಭವದೊಳ್ ವಿಖ್ಯಾತಿಯೊಳ್ ನೀತಿಯೊಳ್॥
ಜಸದೊಳ್ ಚಾಣ್ಕ್ರಿಯೊಳತ್ಯುದಾರ ಗುಣದೊಳ್ ಗಾಂಭೀರ್ಯದೊಳ್
ಕೂರ್ತು ಲ।
ಕ್ಷಿಸೆ ಲಕ್ಷ್ಮೀಧರನಲ್ಲದುಂಟೆ ಸಭೆಯೊಳ್ ಶ್ರೀ ದೇವರಾಜೇಂದ್ರನಾ ॥ ೩೧ ॥

ಮ॥ಸ್ರ॥ ಧರಣೀಚಕ್ರಂ ಸುಸಂಗೋಳ್ಪ್ರದಯಮುರು ತನುಸ್ತೋಮಮಳ್ಕಾಡು
ವಾತ್ಮಾ।

ಚರಣಂ ಸನ್ಮಾರ್ಗಮುದ್ಯೋತಿಸುವ ರುಚಿ ಸದಾಲೋಕಮುರ್ವೀಳ್ವ ತೇಜಃ||
ಸ್ಫುರಣಂ ನಿತ್ಯಾನುರಾಗಕ್ಕೆಡೆಗುಡಲೆಸೆವೀ ಪರ್ವ್ವಯಿಂ ದೇವ ಭೂಭೃ|
ದ್ವರ ಪಾದಾಸನ್ನನೇನುನ್ನತಿ ವಡೆದನೊ ಲಕ್ಷ್ಮೀಧರಾಮಾತ್ಯ ಮಿತ್ರಂ || ೩೨ ||

ಉ|| ಪೂವಿನ ಬಿಲ್ಲನೇಱಿಸುವ ಬಂಡ ಬಸಂತನನಾಸೆ ಮಾಡುವಿ|
ಮ್ಮಾವಿನರಲ್ಗಳಂಬನಸಗೆಯ್ವೆಳದಿಂಗಳ ಪಂಗುಗೊಳ್ವ ಬ||
ಲ್ಪೇವುದೆನುತ್ತೆ ಚಿತ್ತಭವನಾವನ ಮೆಯ್ವಳಿಗೊಂಡು ಕಂಡ ಕಾಂ|
ತಾವಳಿಯುಂ ಮರಳ್ಚುವನೆಸಲ್ ಸೊಬಗೆಂತುಟೊ ಲಕ್ಷ್ಮಣಾಂಕನಾ || ೩೩ ||

ಸ್ರ|| ಸಾರ ಶ್ರೀ ನೀತಿವಾಕ್ಯಾಮೃತ ಪರಿಸರದೊಳ್ ಪುಟ್ಟಿ ಮೆಯ್ಗುಂದದಾಸಂ|
ದಾರಾಮಾಸನ್ನ ರಾಮಾಯಣದೊಳಮುರ್ದ್ದು ತಳ್ತಾವಗಂ ಕೃಷ್ಣಲೀಲಾ||
ಧಾರಂ ತಾನಾಗಿ ನಾನಾ ಫಲಮನಿಳೆಗೆ ಬೀಱುತ್ತು ಸಂಸಾರ ಸೌಖ್ಯಾ|
ಕಾರಂ ಸನ್ಮಂತ್ರಿ ಲಕ್ಷ್ಮೀಧರನುರು ಕವಿತಾಕಲ್ಪವಲ್ಲೀ ವಿತಾನಂ || ೩೪ ||

ಮ|| ಪದೆಪಿಂದಂ ಕವಿರಾಜ ಲಕ್ಷ್ಮಣನ ಕಾವ್ಯಾಲಾಪಮಂ ಕೂರ್ತು ಕೇ|
ಳದೆ ಮುಂ ಪೋದರೆ ಪಾದವೊಮ್ಮೆ ಕಿವಿಗೊಟ್ಟೆತ್ತಾನುಮಾರ್ಕೈದು ಸಂ||
ಮುದದಿಂ ಸ್ಮೈತಿರದೋರು ದೂತಿಯರ ಮಾತಂ ಮಿಱಿ ಕಣ್ಗೊಂಡು ನೋ|
ಡಿದ ಪೆಣ್ಗಳ್ ಪುದಿದಿರ್ದ್ದ ಪೂಗಣೆಯ ಪುಣ್ಣಿಂದಂಣಿ ಪುಯ್ಯಲ್ಚರೇ || ೩೫ ||

ಕಂ|| ಓದಿ ಪರ ವಂಚನಂಗೆ|
ಯ್ವೋದುಗಳಂತಿರ್ಕೆ ಲಕ್ಷ್ಮಣಾಮಾತ್ಯನವೋ||
ಲಾದರಿಸಿ ಸಚಿವರಾದವ|
ರೋದುವುದೋರಂತೆ ಪತಿ ಹಿತಾರ್ಥಾಗಮಮಂ || ೩೬ ||

ಸ್ರ|| ಸ್ವಾಮಿದ್ರೋಹರ್ಕಲಂಬರ್ಮಸಗಿ ಮಸೆದ ಬಾಳ್ಗೊಂಡು ಚಂಡ ಪ್ರತಾಪೋ|
ದ್ದಾಮ ಶ್ರೀದೇವ ಭೂವಲ್ಲಭನ ಗೃಹ ಮಹಾದ್ವಾರಮಂ ಮುತ್ತೆ ಮತ್ತೆ||
ನ್ನೇವಾತೀ ಮಾತಿನಿಂ ಮುನ್ನುಱಿಬಿ ತಱಿಚಿ ನೂಱಿಂಕಮಂ ಸ್ವಾಮಿಕಾರ್ಯ|
ಕ್ಕಾಮೆಂದುರ್ವೀಳ್ವರುತ್ಸಾಹಮನದಟಲೆದಂ ಲೋಕದೊಳ್ ಲಕ್ಷ್ಮಣಾಂಕಂ || ೩೭ ||

ಚಂ|| ಕೆಲ ಬಲನಂ ವಿಚಾರಿಸದೆ ಬಂದ ಭಟರ್ ಬಲವಂತರೆಂದೆನು|
ತ್ತಲಸದೆ ನಿಂದು ತನ್ನ ಪತಿ ಕಾರ್ಯಮೆ ಕಾರ್ಯಮೆನುತ್ತೆ ಪೊಣ್ಬು ಮೆ||
ಯ್ಗಲಿ ತಲೆನುಟ್ಟವೀರ್ವಡೆದ ಮುಂದಲೆಯೊಂದೆ ಜಗಜ್ಜನಕ್ಕೆ ಮೂ|
ದಲೆಯೆನಿಸಿತ್ತದೇವೆಱಗೊ ಲಕ್ಷ್ಮಣ ಮಂತ್ರಿಯ ಸಂದ ಸಾಹಸಂ || ೩೮ ||

ಕಂ|| ನೆಲದೊಳ್ ಪತಿ ಹಿತರಾವೆಂ|
ದುಲಿವರ ನಾಲಗೆಯನಲುಗಲೀಯದೆ ಬಲು ಸಂ||

ಕಲೆಯಾದುದು ಮುಂ ಕೀರ್ತಿಯು।
ಕಲೆ ಮೂಜಗವಱಿಯೆ ಮಂತ್ರಿ ಲಕ್ಷ್ಮೀಧರನಾ ‖ ೩೯ ‖

ಕಂ‖ ಆರಾನುಂ ದಾನೋದಕ।
ಧಾರೆಯುನೊಸೆದಾಂಪರವನಿಸುರರೊಳ್ಪಿರಗಂ ‖
ಪಾರದೆ ಲಕ್ಷ್ಮಣಸಂತಸಿ।
ಧಾರೆಯುನಾಂಪವರ್ಗಳುಂಟೆ ವಸುಧಾ ತಳದೊಳ್ ‖ ೪೦ ‖

ಮ‖ ಗಣನಾ ಮಾತ್ರಮೆ ದೇವರಾಯ ನರನಾಥಾಸ್ಥಾನದೊಳ್ ಮಾನವಾ।
ಗ್ರಣಿಗಳ್ ಸೃತಿ ವಿಚಾರಿಪಾಗಳುಪಧಾ ಸಂಶುದ್ಧಿಯಿಂ ಬುದ್ಧಿಯಿಂ‖
ಗುಣದಿಂ ಗೌರವದಿಂ ಪೊದಳ್ದೆಸೆವ ಮುದ್ರಾಮಾತ್ಯ ಯೋಗಂಧರಾ।
ಯಣ ಚಾಣಕ್ಯ ಸುಮಂತ್ರರೊಳ್ದೊರೆಗೆ ವಂದಂ ಮಂತ್ರಿ ಲಕ್ಷ್ಮೀಧರಂ‖೪೧‖

ವ‖ ಆ ಮಹಾಪ್ರಧಾನ ಲಕ್ಷ್ಮೀಧರನೊಂದು ರಾತ್ರಿಯೊಳ್ ಸುಖ ಸುಪ್ತಿಯು ಸಪ್ಪುಗೆಯ್ದಿರ್ಪಿನಂ ಸ್ವಪ್ನದೊಳಪ್ರತಿಮ ತೇಜನಖಿಳ ಚರಾಚರ ಜನನ ಬೀಜಂ ಬೀಜಾಪೂರ ಸಮುಚಿತಾಯುಧ ವಿಶೇಷ ವಿಲಸಿತ ದಶ ಭುಜಾ ದಂಡಂ ಖಂಡೇಂದು ಮಂಡಿತ ಮಣಿ ಮಕುಟ ಮಹನೀಯ ಶಿಖಂಡಂ ಗಂಡಸ್ಥಳ ಗಳಿತ ಮದ ಮದಿರಾ ಪ್ರಮತ್ತ ಮಧುಕರ ಝೇಂಕಾರ ಮುಖ ರಿತ ನಿಖಿಲ ದಿಗ್ವಲಯಂ ವಲಯಾಂಗದಾಂಗುಲೀಯಕಾದಿ ಭೂಷಣ ವಿಭೂಷಿತ ಸರ್ವಾಂಗನಂಗೀಕೃತ ಭುಜಂಗ ಪರಿವೃಢ ಪ್ರಾಲಂಬಂ ಲಂಬೋದರ ಕಲಿತ ಕಾಕೋದರ ಫಣಾ ಮಣಿ ಮರೀಚಿ ನಿರಾಕೃತ ನಾಭೀ ಕುಹರ ವಿಹರದಪಾರಾಂಧಕಾರಂ ಕನಕ ಕಟಿಸೂತ್ರ ವಿಚಿತ್ರಿತ ಜಘನ ಮಂಡಲಂ ವೀರ ಕಟಕ ನೂಪುರ ಪುರಸ್ಕೃತ ಪದ ಸರೋಜ ಸನಾಥಂ ಯಥೋಚಿತ ದಿಶಾ ನಿಷಣ್ಣ ನಿಜ ನಿಜ ಶಕ್ತಿಯುಕ್ತ ಹರಿ ಹರ ವರಾಹ ಕುಸುಮ ಸಾಯಕಂ ಸೇವಕ ಜನ ಮನೋರಥ ದಾಯಕಂ ಸಕಲ ಲೋಕೈಕನಾಯಕಂ ಮಹಾ ವಿನಾಯಕಂ ಬಂದೆಲೆ ಲಕ್ಷ್ಮೀಧರಾ !—

ಮ‖ ಲವಣಾಂಭೋನಿಧಿ ತಳ್ತು ಸುತ್ತಿಱಿದ ಜಂಬೂದ್ವೀಪ ಮಧ್ಯಸ್ಥಮೇ।
ರುವ ತೆಂಕಲ್ ಭರತಾವನೀತಳದೊಳುಂಟಾಹ್ಲಾದಕಂ ಪುಣ್ಯ ಸಂ ‖
ಭವ ಸದ್ಮಂ ಹರಿ ಪದ್ಮಗರ್ಭ ಮುಖ ಲೇಖಾನೀಕ ಲೀಲಾ ಮಹೋ।
ತ್ಸವ ಗೇಹಂ ಪರಿಭೂತ ಮೋಹಮಮಲಂ ಧಾಮಂ ವಿರೂಪಾಕ್ಷನಾ ‖ ೪೨ ‖

ವ‖ ಅಲ್ಲಿ—

ಕಂ‖ ಎಡದ ಮಡದಿಗೆ ಬಿಗುರ್ತಾ।
ಜಡೆವೆಲ್ಱಿಗೊಂಡಮರ ನದಿಯುದೇ ಸೊಬಗೆನೆ ನೇ ‖
ರ್ಪಡೆ ತುಂಗಭದ್ರೆ ದೇವನೆ।
ಬಿಡದಡಸಿದ ವಾಮ ಭಾಗದೊಳ್ ಸೊಗಯಿಸುಗುಂ ‖ ೪೩ ‖

ಕಂ|| ಜಲಮಮೃತಮಯಂ ಸೊಗಯಿಪ।
ಜಲ ವಿಹಗಂ ಪರಮ ಹಂಸಮಯಮೆಂದುಂ ತ ||
ಜ್ಜಲಚರಮನಿಮಿಷಮಯಮೆನ।
ಲೆಲೆ ಬಣ್ಣಿಪನಾವನದಱ ತೀರದ ಸಿರಿಯಂ || ೪೪ ||

ವ|| ಆ ಪಾವನ ನದೀ ಪಯಃಪಾನ ಪರಿಣತ ಪಙ್ಕಿಲ ತೃಣ ನಾಳಿಕೇರ ಚೂತ ಮಾತುಳುಂಗ ರಂಭಾ ಜಂಬೀರ ಪೂಗ ನಾಗಕೇಸರಾದಿ ಭೂಜಾತ ಜಾತಿ ಕೇತಕೀ ಮುಖ ನಿಖಿಲ ಕುಸುಮ ಸುಗಂಧ ಬಂಧುರ ಗಂಧಶಾಳಿ ಪಾಳೀ ಪರಿಕಳಿತ ಕಳಹಂಸ ಶುಕ ಪಿಕ ಶಿಖಾವಳ ಕೇಕೀ ವಿಳಾಸ ವಿಚಿತ್ರಂ ಸಕಲ ಭುವನ ಪವಿತ್ರಂ ದುರಿತ ಲತಾ ಲವಿತ್ರಂ ಭವಾಂಬುಧಿ ಬಹಿತ್ರಂ ವಾರಾಣಸೀ ಶ್ರೀ ಪರ್ವತಾದಿ ಸಿದ್ಧ ಸ್ಥಾನ ಮಣಿ ಗಣ ಮಾಲಾ ಸೂತ್ರಂ ಪಂಪಾ ಕ್ಷೇತ್ರಂ ಸೊಗಯಿಪ್ಪುದದಱ ಪೂರ್ವ ದಿಗ್ಭಾಗದೆ ಮಾಲ್ಯವತ್ಪರ್ವತದ ತೆಂಕಪಕ್ಕದೊಳೊಂದು ಮಹಾ ಗುಹೆಯುಂಟದಕೃತ್ರಿಮ ದಿವ್ಯಾಗಾರ ಮದಱೊಳೆನ್ನಂ ಸುಪ್ರತಿಷ್ಠೆಗೆಯ್ವುದೆಂದು ನಿರೂಪಿಸೆ ಮಹಾಪ್ರಸಾದ ವೆಂದು ಕೈಕೊಂಡು—

ಸ್ರ|| ಆ ಸನ್ಮಂತ್ರೀಂದ್ರ ಲಕ್ಷ್ಮೀಧರಸಮರ ಗುರು ಶ್ರೀ ವಿರೂಪಾಕ್ಷ ಲೀಲಾ।
ವಾಸಂ ತಾನಾದ ಪಂಪಾಪುರ ಪರಿಸರದೀ ಮಾಲ್ಯವದ್ಭೂಧ್ರದೊಳ್ ನಾ||
ನಾ ಸಿದ್ಧಿ ಶ್ರೀಯನೀಯಲ್ ನೆಲೆಗೊಳಿಸಿ ಮಹಾ ಶಕ್ತಿ ಹೇರಂಬನಂ ವಿ।
ಶ್ವಾಸಂ ಪೆರ್ಚುತ್ತೆ ಭಕ್ತಿ ಪ್ರಭವ ವಿಭವದಿಂ ಧಾತ್ರಿಯೊಳ್ ಕೀರ್ತಿವೆತ್ತಂ || ೪೫ ||

ಉ|| ತತ್ಸಮಯಕ್ಕೆ ದೃಕ್ಪ್ರರ ಶಿಖೀಂದು ಶಶಾಂಕಮಿರಲ್ ವಿರೋಧಿ ಸಂ।
ವತ್ಸರ ಫಾಲ್ಗುನ ಪ್ರಥಮ ವಾಸರದೊಳ್ ಗುರುವಾರಮೊಂದೆ ವಿ ||
ದ್ವತ್ಸಭೆ ಬಣ್ಣಿಪಂತೆಸಗಿದಂ ಸಚಿವಾಗ್ರಣಿ ಲಕ್ಷ್ಮಣಂ ಸಮು।
ತ್ಸೋತ್ಸವಮುಣ್ಮೆ ಪೊಣ್ಮೆ ಮಹಾ ಗಣನಾಥ ನವ ಪ್ರತಿಷ್ಠೆಯಂ ||೪೬||

ವ|| ಅಂತಾ ಪ್ರತಿಷ್ಠೆಯಂ ನಿಷ್ಠೆಯಿಂ ಮಾಡಿ ಮತ್ತಮದಱ ಕೊತ್ತಿನೊಳ್ ತಾನೆ ಕಟ್ಟಿಸಿದ ಕೆಯ್ಯುಮನಲ್ಲಿಟ್ಟು ತೆಂಗು ಕೌಂಗು ಮಾವು ಮಾದಳೆ ಅತ್ತಿ ಜಂಬು ನಂಜೆ ಕಂಕೇಲ್ಲಿ ನೆಲ್ಲಿ ಬಾಳೆ ರಸಾಳೆ ದಾಳಿಂಬಂ ಮೊದಲಾದ ಫಲ ತರುಗಳಿಂ ಪಲವುಂ ಪೂಗಿಡುಗಳಿಂ ಬೆಳಂಗುವ ಧರ್ಮ ತೋಂಟಮುಂ ಕನ್ನಡಿಯ ಕೆಱೆಯು ಕೆಳಗೆ ಮಾಱುಗೊಂಡ ಮಣ್ಣುವಿನ ಖಂ|| ಹತ್ತು ಕೊಳಗದ ಗದ್ದೆಯುಂ ದೇವರ ಅಂಗ ರಂಗ ಭೋಗಕ್ಕೆ ಧಾರಾ ಪೂರ್ವಕಂ ಕೊಟ್ಟು ಧೂಪ ದೀಪ ನೀರಾಜನಂ ಮುಂತಾದ ವಿವಿಧೋಪಕರಣಂಗಳುಂ ಮಂಗಳ ಮಕುಟಮುಂ ಸುವರ್ಣ ಕರ್ಣತಾಳಮುಂ ರಜತ ರಸನಾದಿ ಶರೀರ ಪರಿಷ್ಕಾರಮುಂ ದೇವಿಯರ್ಗೆ ಸರ್ವಾಭರಣಮುಂ ಸಮರ್ಪಿಸಿ ಸಕಲ ಭುವನಂ ಪೊಗಳೆ ಪುಣ್ಯಕೀರ್ತಿಯನುಪಾರ್ಜಿಸಿ—

ಮ॥ಸ್ರ॥ ಗುರು ದೈವಂ ಮೆಚ್ಚೆ ನಿಚ್ಚಂ ಬಗೆ ದಣಿವ ಮನೋಭಕ್ತಿ ವಿದ್ವಜ್ಜನಂ ಬಾ।
ಪುರೆ ಬಾಪೆಂದೆತ್ತಿಕೊಂಡಾಡುವ ವಿವಿಧ ಕಳಾ ಪ್ರೌಢಿ ವಂದಿಬ್ರಜಂ ಕಂ॥
ಡಿರದಿಷ್ಟಾರ್ಥಂಗಳಂ ಕೊಂಡಡರೆ ಪೊಗಳ್ವ ವಿಶ್ರಾಣನಂ ವಿಶ್ವ ವಂದ್ಯಂ।
ಚರಿತಂ ತಾನಾಗಲೇಸುನ್ನತಿವಡೆದನೊ ಲಕ್ಷ್ಮೀಧರಾಮಾತ್ಯವರ್ಯಂ ॥ ೪೭ ॥

ಕಂ॥ ಅವನಿಯುನಾಕ್ರಮಿಪುದು ದಾ।
ನ ವಿಚಿತ್ರಂ ಲೋಕವಱಿಯೆ ಶುಚಿಯೆನಿಸಿರ್ದುಂ ॥
ಶಿವನುಟ್ಟ ಸೀರೆಯುಂ ಪಿಡಿ।
ದವಗಡಿಪಳ್ ಕೀರ್ತಿಲಕ್ಷ್ಮಿ ಲಕ್ಷ್ಮೀಧರನಾ ॥ ೪೮ ॥

ಮ॥ ಪೊಗಳಲ್ ಪೊಂಬುಳಿಯೋದ ಪೆಂಪಿನ ಯಶೋ ಲಕ್ಷ್ಮೀಧರಂ ಬಲ್ಲವ।
ರ್ಗಗೆಗೊಳ್ವಿಂಪಿನ ಸೊಂಪುವೆತ್ತ ಕವಿತಾ ಲಕ್ಷ್ಮೀಧರಂ ರಾಜ ನೀ ॥
ತಿಗೆ ಸೇರ್ಪಾದ ಮಹಾ ಪ್ರಧಾನ ಪದವೀ ಲಕ್ಷ್ಮೀಧರಂ ಧಾತ್ರಿಯೊಳ್ ।
ನೆಗಳ್ದಂ ನಿರ್ಮಲ ರಾಮಚಂದ್ರ ತನಯಂ ಸನ್ಮಂತ್ರಿ ಲಕ್ಷ್ಮೀಧರಂ ॥೪೯॥

ಕಂ॥ ಧರೆ ಪೊಗಳ್ವಿನಮಾ ಲಕ್ಷ್ಮೀ।
ಧರಂಗೆ ದೇವಕಿಯುಮೆಸೆವ ಸೋಮಲೆಯುಂ ಗೈ ॥
ನೆರದರಸಿಯರಾದರ್ ಗೂ।
ರ್ಜರಸಿಯರಾದಂತೆ ಹರಿಗೆ ಸಿರಿಯುಂ ಧರೆಯುಂ ॥ ೫೦ ॥

ವ॥ ಆ ಇರ್ವರೊಳ್—

ಕಂ॥ ಪಿರಿಯಳೆನೆ ಸಂದ ಪೆರ್ಮೆಯು।
ಪಿರಿಯಳ್ ಸೌಭಾಗ್ಯದಿಂದೆ ಪಿರಿಯಳ್ ಗುಣದಿಂ ॥
ಪಿರಿಯಳ್ ಪಾತಿವ್ರತ್ಯದೆ।
ಪಿರಿಯಳೆನಲ್ ಪಿರಿಯಳಮಮ ದೇವಕಿ ನೆಗಳ್ದಳ್ ॥ ೫೧ ॥

ಉ॥ ಪೂವಿನಮಾಲೆ ತುಂಬಿದಿರುಳೀಶನ ಜೂಟಕೆ ಚಂದ್ರಲೇಖೆ ಲ।
ಕ್ಷ್ಮೀವರನೊಳ್ಳುರಕ್ಕೆ ವನಮಾಲೆ ಸಮಂತಮರ್ದಂತೆ ವಿಶ್ವಧಾ ॥
ತ್ರೀ ವಿನುತ ಪ್ರಸಿದ್ಧ ಗುಣ ಲಕ್ಷ್ಮಣ ಮಂತ್ರಿಗೆ ತಾನೆ ಸತ್ಕಳಾ।
ಭಾವಕಿ ಸೇಸೆವೆತ್ತೆಸೆದ ದೇವಕಿ ವಲ್ಲಭೆಯಾದಳಾಪಗಂ ॥ ೫೨ ॥

ಆ ನೆಗಳ್ದೊಳ್ಪುವೆತ್ತೆಸೆವ ದೇವಕಿ ದೇವಕಿಯೆಂತು ಸರ್ವ ಧಾತ್ರಿ ಸ।
ನ್ಮಾನಿತ ರಾಮಕೃಷ್ಣ ಯುಗಮಂ ಪಡೆದಳ್ ಪಡೆದಳ್ ದಲಂತೆ ಪ ॥
ದ್ಮಾಸನದೊಳ್ಪುವಿನಾ ಕುವಲಯಾಂಗದ ನೇಪುರ್ವೊಡಂಬಡಲ್ಕೆ ತೇ।
ಜೋನಿಧಿ ಭಾನುವಂ ವಿಬುಧ ಸೇವ್ಯ ಕಳಾನಿಧಿ ರಾಮಚಂದ್ರನಂ ॥ ೫೩ ॥

. . . . . . . . . . . . . . .ಗುರುವೆನೆ ರೂಢಿವೆತ್ತ ಲಕ್ಷ್ಮೀಧರನಂ ॥ ೫೪ ॥
. . . . . . . . . .ಆಚಂದ್ರಾರ್ಕವಾಗಿ ನಾಗಜೀಯಗೆ ಕೊಟ್ಟರು ॥

ಕಂ॥ ವೀರಾವತಮೆಸೆವಂತಿರೆ।
ಚಾರು ಚಮತ್ಕಾರದಿಂದೆ ವಿಬುಧ ಜನಂ ಕೈ॥
ದೋರಿಸೆ ಲಕ್ಷ್ಮಣ ಮಂತ್ರಿ ಕು।
ಮಾರ ಚತುಷ್ಟಯದಿನೆಸೆದನವನೀ ತಳದೊಳ್ ॥ ೪೪ ॥

ಮ॥ ತನುವಂ ಮನ್ಮಥ ಸೌಮ್ಯ ಭಾವನೊಳಕೆಯ್ವಾಲ್ ಸಂದನ ಶ್ರೀಮುಖಂ।
ತನಗಾಸಂಪಮನೀಯೆ ವಿಕ್ರಮ ಜಯಂಗಳ್ಮೇಳೊಳಿಂಬಾಗೆ ನೆ ॥
ಟ್ಟನೆ ಸಾಧಾರಣಮಲ್ಲದೀಶ್ವರ ಪದಾಬ್ಜಂ ಪಾರ್ಥಿವ ಶ್ರೀಯುಸೀ।
ಯೆ ನಯಂಬೆತ್ತುದು ಕೀರ್ತಿ ದುಂದುಭಿ ನಿನಾದಂ ಲಕ್ಷ್ಮಣಾಪಾತ್ಮನಾ ॥ ೪೬ ॥

ಕಂ॥ ಪಿಂಗದೆ ಲಕ್ಷ್ಮೀಧರ ಸಚಿ।
ವಂಗಾಚಂದ್ರಾರ್ಕವೊದವಿದಾಯುಂ ಶ್ರೀಯುಂ ॥
ಸಂಗತಿವಡೆದಿರೆ ಬರೆದಂ।
ಮಂಗಳಮಯುವಾಗೆ ಮಧುರನೀ ಶಾಸನಮಂ ॥ ೪೭ ॥

ಮ॥ಸ್ರ॥ ಬಗೆಗೊಳ್ವಂತಿರ್ವರಂ ಮೆಚ್ಚಿಸಿದ ಸುಕವಿ ಸುಕ್ಷೇತ್ರ ಹಸ್ತ್ಯಶ್ವ ಭೂಷಾ।
ದಿಗಳಂ ಮುಂ ಪೆತ್ತೊಡಂ ಭೂಭರದೊಳಣಿಯದೀ ಲೋಕಮೆಂದೆಂಬು · ದು ॥
· ಗಮುಂ ಪೇಳಲ್ ಕವೀಂದ್ರಾಭರಣ ಮಧುರನಂ ಮಾನ್ಯಸಂ ಮಾಡಿ ತನ್ನಿಂ।
ಮಿಗಿಲೆಂಬಂತಳ್ಕಱಿಂ. . . . ನವನಿಯೊಳ್ ಮಂತ್ರಿ ಲಕ್ಷ್ಮೀಧರಾಂಕಂ॥೪೮॥

ಮ॥ ಗಣಿದಂಗೊಳ್ಪಿಡೆ ಮಿಕ್ಕಿಸಕ್ಕರದ ಮಾತಂತಿರ್ಕೆ ತನ್ನಾಣೆ ಘೋ।
ಷಣೆ ಸಲ್ಗುಂ ಸುಕವೀಂದ್ರ ವೃಂದ ಸಭೆಯೊಳ್ ತಾನೆಂದೊಡಮ್ಮಮ್ಮ ಧಾ॥
ರಿಣಿಯೊಳ್ಕೇಳ್ದಱಿಯಾ ಜಡಾ ಮಧುರಸಂ ನಿರ್ನೀತ ಕರ್ಣಾಟ [1]ಲ।
ಕ್ಷ್ಮಣ ಪಾದ ಸರೋಜಸಂ ಪ್ರವಿಲಸದ್ಧಾತ್ರೀಮುಖಾಂಭೋಜಸಂ ॥ ೪೯ ॥

ಕಂ॥ ಈ ಸಿದ್ಧ ಶಾಸನಂ ಕೈ।
ಲಾಸಂ ಹಿಮಗಿರಿ ಸುಮೇರು ವಾರಾಶಿ ನಿಲಂ॥
ನೇಸಱ್ ನೆಗಳ್ವಿನಮೆಂದುಂ।
ನಾಸದೆ ಮಸುಳಿಸದೆ ನಿಲ್ಕೆ ನಿಃಪ್ರತ್ಯೂಹಂ ॥ ೫೦ ॥

ಪರಿಹರದ ಧರಣೋಜನ ಬರಹ ॥

**ತಿರುಮಲೆ ತಾತಾಚಾರ್ಯ ಶರ್ಮ.**

---

1. ಇಲ್ಲಿ 'ಲಕ್ಷ್ಮಣ ಪಾದ ಸರೋಜಸಂ' ಎಂಬುದು ಛಂದಸ್ಸಿಗೆ ವಿರುದ್ಧವಾಗಿದೆ. ತಿನ್ನುವಲ್ಲಿ 'ಲಕ್ಷ್ಮಣ ಪಾದೈಕ ಸರೋಜಸಂ' ಎಂದು ತಿದ್ದಿಕೊಳ್ಳಬೇಕಾದೀತು.—[ಸೊ. ಕೃಷ್ಣಶಾಸ್ತ್ರಿ.]

# ಗೋಪ ಕವಿ

'ನಂದಿ ಮಾಹಾತ್ಮ್ಯ'ವೆಂಬ ಕನ್ನಡ ಕಾವ್ಯವನ್ನು ಬರೆದ ಗೋವಿಂದ, ಅಥವಾ ಗೋಪ ಕವಿಯು ನಮ್ಮೂರಿನವನು. ಇವನು ಆಗಿಹೋಗಿ ಇನ್ನೂರು ವರ್ಷಗಳು ಕಳೆದುಹೋಗಿದ್ದರೂ ಮೊನ್ನೆ ಮೊನ್ನೆಯ ವರೆಗೆ ಇವನ ಸಮಾಚಾರವೇ ನಮಗೆ ಗೊತ್ತಿರಲಿಲ್ಲ. ನಮ್ಮ ಮೋರೆಯ ಮೇಲೆ ಗೆಳೆಯನ ಕರಿ ಚುಕ್ಕಿಯೊಂದಿದ್ದರೆ ಕನ್ನಡಿಯನ್ನಾದರೂ ನೋಡಬೇಕು, ಇಲ್ಲವಾದರೆ ಎರಡನೆಯವರಾರಾದರೂ ಹೇಳಬೇಕು; ಅನಂತರ ನಾವು ಆ ಚುಕ್ಕಿಯನ್ನು ಕೈಯಿಟ್ಟು ಗುರುತಿಸಿ ಎಡಕ್ಕಿದೆಯೋ ಬಲಕ್ಕಿದೆಯೋ ಎಂದು ಪರೀಕ್ಷಿಸುವುದುಂಟು; ಹಾಗೆಯೇ, ನಮ್ಮೂರ ಕವಿಯ ಬಗ್ಗೆ ನಮಗೆ ಜ್ಞಾನೋದಯವಾದದ್ದು. ವಿಜಾಪುರದಲ್ಲಿ ಒಮ್ಮೆ ನಾನು ಶ್ರೀಮಾನ್ ಆರ್. ನರಸಿಂಹಾಚಾರ್ಯರ ಕವಿಚರಿತೆಯ ದ್ವಿತೀಯ ಸಂಪುಟವನ್ನು ಓದುತ್ತಿದ್ದೆನು. ಆಗ ಎಲ್ಲಿಯೋ ನಡುವೆ ಆಕಸ್ಮಿಕವಾಗಿ ನಮ್ಮೂರ ಹೆಸರು ನನ್ನ ಕಣ್ಣಿಗೆ ಬಿತ್ತು. ನನ್ನನ್ನು ಎಲ್ಲ ಜನರೂ 'ಭೂಯಾರ' ಎಂದು ಕರೆಯುತ್ತಿದ್ದುದರಿಂದ ಕಾವ್ಯ ಬರೆಯದೆ ಕವಿಚರಿತೆಯಲ್ಲಿ ನನ್ನ ನಾಮನಿರ್ದೇಶವು ಬಂದಿತೋ ಏನೋ ಎಂದು ನಾನು ನೋಡುವಷ್ಟರಲ್ಲಿ ನಮ್ಮೂರಲ್ಲಿ ಈ ಗೋವಿಂದ ಕವಿಯು ಹುಟ್ಟಿ ಬೆಳೆದು ದೊಡ್ಡದೊಂದು ಕಾವ್ಯವನ್ನು ಬರೆದು ಹೋಗಿರುವನೆಂದು ತಿಳಿಯಿತು. ಅದರಿಂದ ತೀರ ನೀರಸವೆಂದು ನಮ್ಮೂರನ್ನು ಹಳಿಯುತ್ತಿದ್ದ ನಾನು ರಸಿಕನೊಬ್ಬನಾದರೂ ಪೂರ್ವದಲ್ಲಿದ್ದನೆಂಬ ಅಭಿಮಾನದಿಂದ ಊರಿಗೆ ಲಗುಬಗೆಯಿಂದ ಹೋದೆನು. ಆದರೆ ಅಲ್ಲಿ ಕೂಡ ಈ ಕವಿಯ ವಿಷಯವು ಯಾರಿಗೂ ಗೊತ್ತಿರಲೇ ಇಲ್ಲ. 'ನಮ್ಮೂರಲ್ಲಿ ಒಬ್ಬ ಕವಿಯಿದ್ದನಂತೆ' ಎಂದು ನಾನು ಹೆಮ್ಮೆಯಿಂದ ಹೇಳಿದರೆ ಅನೇಕರು, "ಕವಿ! ಛೇ, ಕವಿಯೆಂಬವನು ಈ ಊರಲ್ಲಿ ಇರಲೇ ಇಲ್ಲ" ಎಂದು ಸಾಧಿಸಿದರು. ಆದರೂ ನಾನು ನನ್ನ ಪ್ರಯತ್ನಗಳನ್ನು ಬಿಡದೆ ಶ್ರೇಷ್ಠ ವೈದಿಕರಿಗೂ ಜ್ಯೋತಿಷಿಗಳಿಗೂ ಮೊದಲು ನೆಲೆಯಾದ ನಮ್ಮೂರಲ್ಲಿ ನನ್ನ ಚಿಕಿತ್ಸೆಯನ್ನು ನಡೆಸಿಯೇ ನಡೆಸಿದೆನು. ಇದರಿಂದ ಅನೇಕ ಸಂಗತಿಗಳು ನನಗೆ ಅರಿಕೆಯಾಗಿವೆ. ಅವನ್ನೂ ನಂದಿ ಮಾಹಾತ್ಮ್ಯದ ಪ್ರಥಮ ಸಂಪುಟವನ್ನೂ ಓದಿ ದೊರೆವ ಸಾಮಗ್ರಿಗಳನ್ನು ಕೂಡಿಸಿ ಈ ಕವಿಯ ಸಾಧ್ಯವಿದ್ದ ವೃತ್ತಾಂತವನ್ನು ಇಲ್ಲಿ ಕೊಡಬೇಕೆಂದಿರುವೆನು.

ಈ ವರೆಗೆ ಕವಿಚರಿತೆಯ ದ್ವಿತೀಯ ಸಂಪುಟ(ಪು. ೩೯೪–೭)ದಲ್ಲಿ ಶ್ರೀಮಾನ್ ಆರ್. ನರಸಿಂಹಾಚಾರ್ಯರೂ, ಹಾಗೂ ನಂದಿ ಮಾಹಾತ್ಮ್ಯದ ಪೀಠಿಕೆಯಲ್ಲಿ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರವರೂ ಗೋವಿಂದ ಕವಿಯ ಬಗ್ಗೆ ಲಭ್ಯಾಂಶಗಳನ್ನು ಬರೆದಿರುವರು. ಆದರೆ ಅವು ಅಪೂರ್ಣವಾಗಿರುವುದಲ್ಲದೆ ಕೆಲವು ಮಾತುಗಳು ತಪ್ಪಾಗಿರುವವು. ಆದುದರಿಂದ ಕನ್ನಡ ನುಡಿಯ ಅದ್ಭುತ ಸೇವೆ

ನೂಡಿ ಕನ್ನಡಿಗರೆಲ್ಲರನ್ನೂ ಎಂದಿಗೂ ಮರೆಯುದ ಋಣದಲ್ಲಿರಿಸಿದ ಆ ಮಹರ್ಷಿಯರಿಗೆ ಅಭಿವಂದಿಸಿ ನಾನು ಸೂಚಿಸುವ ಅಂಶಗಳು ಸರಿಗಂಡರೆ ಸ್ವೀಕರಿಸಬೇಕೆಂದು ಅವರಲ್ಲಿ ಬೇಡಿಕೊಳ್ಳುತ್ತೇನೆ. ಉಳಿದ ಸಾಹಿತ್ಯ ಪ್ರಿಯರೂ ಇತಿಹಾಸ ಶೋಧಕರೂ ಇತ್ತ ನೋಡಿದರೆ ನಾನು ಇನ್ನಿಷ್ಟು ಕೃತಾರ್ಥನಾಗುವೆನು.

ಗೋವಿಂದ ಕವಿಯ ಊರು **ಬೇಡ**ಬುಯ್ಯರವೆಂದು ಕವಿಚರಿತೆಯಲ್ಲಿ ಉಕ್ತವಾಗಿದೆ. ಅದು ಮುದ್ರಣ ದೋಷವಿದ್ದರೂ ಇರಬಹುದು. ಏನಿದ್ದರೂ, ಮುಂದಿನ ಆವೃತ್ತಿಯಲ್ಲಿ **ಖೇಡ**ಬುಯ್ಯರ ಎಂದು ತಿದ್ದುಪಡಿಯಾಗಬೇಕು. ಬೇಡಬುಯ್ಯರವೆನ್ನುವುದರಿಂದ ನಮ್ಮೂರು ಬೇಡರ ಊರೆಂದು ಅರ್ಥವಾಗುತ್ತದೆ. ಇದ್ದ ಸ್ಥಿತಿಯನ್ನು ನೋಡಿದರೆ ನಮ್ಮೂರಿಗೆ ಬ್ರಾಹ್ಮಣ ಬುಯ್ಯರವೆನ್ನಬಹುದು. ಏಕೆಂದರೆ ಆದ್ಯರ ಮನೆತನದ ಬ್ರಹ್ಮವೃಂದವೇ ಇಲ್ಲಿ ಹೆಚ್ಚಾಗಿ ಇರುತ್ತದೆ. ನಂದಿ ಮಾಹಾತ್ಮ್ಯದ ಪೀಠಿಕೆಯಲ್ಲಿ, ಹಾಗೂ ಒಂದನೆಯ ಪದ್ಯದಲ್ಲಿ, ಸ್ಪಷ್ಟವಾಗಿ ಖೇಡಬುಯ್ಯರ ಎಂದು ಉಲ್ಲೇಖಿತವಾಗಿದೆ. ಆದರೆ ಅಲ್ಲಿಯೂ ಒಂದೆರಡು ಊಹೆಗಳು ತಪ್ಪಾಗಿವೆ: "'ಭೀಮರಥೀ ತೀರ' ಎಂಬುದರಿಂದ ಒಂದು ವೇಳೆ ಷೋಲಾಪುರ ಜಿಲ್ಲೆಯೇ ಈತನ ದೇಶವಾಗಿರಬಹುದು; ಬುಯ್ಯರವೆಂಬುದು ಆ ಜಿಲ್ಲೆಯಲ್ಲಿ ಪ್ರಸಿದ್ಧವಾದ ಈಗಿನ 'ಬಾರ್ಸಿ' ಎಂಬ ಗ್ರಾಮವಾಗಿ ಇದ್ದರೂ ಇರಬಹುದು...." ಎಂದು ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರವರು ವಿಧಾನಿಸಿರುವರು. ಅವರು ನಕ್ಷೆಯನ್ನು ಮುಂದಿಟ್ಟುಕೊಂಡು ಭೀಮರಥಿಯ ದಂಡೆಯಲ್ಲಿ ಬಕಾರವು ಆದಿಯಲ್ಲಿರುವ ಊರನ್ನು ಹುಡುಕುತ್ತ ಹೋಗಿ ಕಡೆಗೆ ಬಾರ್ಸಿಯನ್ನು ಕಂಡಿರುವಂತೆ ತೋರುತ್ತದೆ. ಆದರೆ ಬೇರೆಡೆಗೆ ವಿಜಾಪುರ ಜಿಲ್ಲೆಯ ಇಡೀ ತಾಲುಕಿನಲ್ಲಿ ನಮ್ಮ ಗ್ರಾಮವಿರಲಿಕ್ಕೆ ಅವರ ಸಾದೃಶ್ಯ ಪ್ರಮಾಣವು ಸರಿಯಾಗುವುದಿಲ್ಲ. ಬಾರ್ಸಿಯು ಸದ್ಯಕ್ಕೆ ಆಗಲಿ, ಇನ್ನೂರು ವರ್ಷಗಳ ಹಿಂದಾಗಲಿ, ಹೆಚ್ಚು ಕಡಿಮೆ ಮರಾಠಿಯನ್ನಾಡುವ ಜನರ ಹಳ್ಳಿಯೇ. ಅಲ್ಲಿ ನಮ್ಮೂರ ಕವಿಯು ಹುಟ್ಟಿರಲಾರನು. ನಮ್ಮೂರು ಮೊದಲು ಷೋಲಾಪುರ ಜಿಲ್ಲೆಯ ಆಡಳತೆಯಲ್ಲಿದ್ದಿತು. ಈಗ ಅದು ವಿಜಾಪುರ ಜಿಲ್ಲೆಗೆ ಸೇರಿದೆ. ಆದರೂ ಮರಾಠೀ ಸೀಮೆಯು ಹತ್ತಿರದಲ್ಲಿದ್ದ ಮೂಲಕ ಹಾಗೂ ಮೊದಲಿನ ಆಧಿಪತ್ಯದ ವರ್ಚಸ್ಸು ಎಷ್ಟೋ ಮಟ್ಟಿಗೆ ಹಾಗೆಯೇ ಉಳಿದಿರುವ ಮೂಲಕ ನಮ್ಮ ಕೆಲವು ಬಳಕೆಯ ಶಬ್ದಗಳೂ ಮಾತಿನ ಬಲವೂ ಉಚ್ಚಾರಣ ಶೈಲಿಯೂ ಮರಾಠಿಯವೇ ಇರುತ್ತವೆ. ಇವುಗಳ ಪರಿಣಾಮವು ಗೋವಿಂದ ಕವಿಯನ್ನು ಹೇಗೆ ಅಂಟಿಕೊಂಡಿತೆಂಬುದನ್ನು ಮುಂದೆ ವಿವರಿಸುವೆನು. ಬಾರ್ಸಿಯು ಪಂಢರಾಪುರಕ್ಕೆ ಬುಯ್ಯರಕ್ಕಿಂತ ಸಮೀಪದಲ್ಲಿದ್ದರೂ ಅದೊಂದೇ ಕಾರಣದಿಂದ ಅದು ಕವಿಯ ಹುಟ್ಟೂರು ಆಗದು. ಕವಿಯು ಅನೇಕ ತೀರ್ಥಗಳನ್ನು ತಿರುಗಿರುವನೆಂದು ನಮಗೆ ತಿಳಿಯುವುದರಿಂದ ಅವನು ಪಂಢರಾಪುರಕ್ಕೂ ಒಮ್ಮೆಯಾಗಲಿ ಅನೇಕ ಸಲ ಆಗಲಿ ಹೋಗಿರಬಹುದು. ಆದುದರಿಂದ 'ಶ್ರೀ ಮದನಗೋಪಾಲಕನ

ಕರುಣದಿಂ' ಎಂದು ಅವನು ಹೇಳಿರುವ ಮಾತಿಗೆ ಯಾವ ಬಾಧೆಯೂ ಬರುವ ಸಂಭವವಿಲ್ಲ. ಇನ್ನು, ನಮ್ಮೂರ ಮುಂದೆಯೂ ಭೀಮರಥಿಯು ಹರಿಯುವುದೆಂದು ಬೇರೆ ಹೇಳುವ ಕಾರಣವಿಲ್ಲ. ಅಗರಖೇಡ, ಬುಯ್ಯರ, ಮಣ್ಣೂರ— ಇವೆಲ್ಲ ಈ ಭೀಮರಥೀ ತೀರದಲ್ಲಿಯೇ ಇರುತ್ತವೆ. ಖೇಡವೆಂದರೆ ಮರಾಠಿಯಲ್ಲಿ ಹಳ್ಳಿಯೆಂದು ಅರ್ಥವಾಗುವುದರಿಂದ ಮೊದಮೊದಲು ನಮ್ಮೂರಿಗೆ ಖೇಡ ಬುಯ್ಯರವೆನ್ನುತ್ತಿರಬಹುದು. ಈಗ ಮಾತ್ರ ಬುಯ್ಯರವೆಂದಿಷ್ಟೇ ಕರೆಯುತ್ತೇವೆ. ಈ ಬುಯ್ಯರವೆಂಬ ಹೆಸರು ಹೇಗೆ ಬಂದಿತೋ ತಿಳಿಯದು. ಒಮ್ಮೊಮ್ಮೆ 'ಭೀಮರಥೀ ತೀರ, ಅಥವಾ ಭೀಮಾ ತೀರವು ಹೋಗಿ 'ಬುಯ್ಯರ'ವಾಗಿರಬಹುದೆಂದೆನಿಸುತ್ತದೆ. ಆದರೆ ಇದಕ್ಕೆ ಆಪ್ತ ವಾಕ್ಯದ ಆಧಾರವಾಗಲಿ ಶಿಲಾ ಶಾಸನದ ಆಧಾರವಾಗಲಿ ಎಳ್ಳಷ್ಟು ಇಲ್ಲ. ಈಗಿನ ಬಾರ್ಸಿಯು ಬುಯ್ಯರೆನ್ನುವುದರಲ್ಲಿ ಇನ್ನೊಂದು ಆಗದ ವಿಷಯವೇನೆಂದರೆ, ಬಾರ್ಸಿಯ ಮುಂದೆ ಭೀಮಾನದಿಯು ಹರಿಯುವುದೇ ಇಲ್ಲ. ನಕ್ಷೆಯಲ್ಲಿ ಒಂದೆರಡು ಬೆಟ್ಟಿನ ಅಂತರದ ಮೇಲೆ ಬಾರ್ಸಿಯಿದ್ದರೂ ಪ್ರತ್ಯಕ್ಷವಾಗಿ ಆ ಹಳ್ಳಿಯು ಭೀಮಾ ನದಿಗೆ ಏನೂ ಹತ್ತಿರುವುದಿಲ್ಲ. ಇನ್ನು, ನಾನು ಸ್ವತಂತ್ರವಾಗಿ ಸಂಗ್ರಹಿಸಿದ ಸಂಗತಿಗಳು ಅನೇಕವಾಗಿವೆ.

ಕವಿಯು ತನ್ನ ಚರಿತ್ರೆಯ ಕೆಲವಂಶವನ್ನು 'ನಂದಿ ಮಾಹಾತ್ಮ್ಯದ ೧ನೆಯ ಸಂಧಿಯಲ್ಲಿ (೨೯ನೆಯ ಪದ್ಯ) ಹೇಳಿದುದರಿಂದ ಅದು ಬಹಳ ಉಪಯುಕ್ತವಾಗಿದೆ. ತಾನು 'ಕರಣಿಕ ಜೋತಿಯಾತ್ಮಭವನು..........ಗೋವಿಂದನೆಂಬೊರ್ವಂ' ಎಂದು ಹೇಳಿಕೊಂಡಿದ್ದಾನೆ; 'ವಿಶ್ವಾಮಿತ್ರ ಗೋತ್ರಜಂ' ಎಂದೂ ಹೇಳಿದ್ದಾನೆ. ಇವೆರಡು ಮಾತುಗಳನ್ನು ಮೂಲವಾಗಿಟ್ಟುಕೊಂಡು ವಿಶ್ವಾಮಿತ್ರ ಗೋತ್ರದ ಕುಲಕರ್ಣಿ ಯಾರಿರಬಹುದೆಂದು ನಾನು ಹುಡುಕುತ್ತಿರಲು ಈ ಊರಲ್ಲಿರುವ ಒಂದೇ ಒಂದು ಕುಲಕರ್ಣಿ ಮನೆತನವು ವಿಶ್ವಾಮಿತ್ರ ಗೋತ್ರದವರದೇ ಎಂದು ತಿಳಿಯಿತು. ಎಂದ ಕೂಡಲೆ ಈ ಕುಲಕರ್ಣಿಯನ್ನು ಕಂಡು ನಿಮ್ಮ ಮನೆತನದಲ್ಲಿ ಗೋವಿಂದ ಕವಿಯೆಂಬವನು ಆಗಿಹೋದನೇ? ಎಂದು ಕೇಳಲಾಗಿ, ಅಹುದೆಂದು ಅವನು ತನ್ನ ಮನೆತನದ ಎಷ್ಟೋ ಸಾದ್ಯಂತ ಸಮಾಚಾರಗಳನ್ನು ಹೇಳಿದನು. ಅವುಗಳೇನೆಂದರೆ, ಈ ಮನೆತನವು ಮೊದಲಿನಿಂದ ಸ್ಮಾರ್ತವಿದ್ದು ಕೆಲಕಾಲ ಹಿಂದೆ ವೈಷ್ಣವವಾದುದು. ಅಂತೆ ಈಗಿರುವ ಕರಣಿಕನು ವೈಷ್ಣವನಾಗಿರುವನು. ಮೊಟ್ಟಮೊದಲು ಕರಣಿಕ ಜೋತಿಯ ಮಕ್ಕಳು ಗೋವಿಂದಪ್ಪ, ಹಾಗೂ ಇನ್ನೊಬ್ಬ, ಹೀಗೆ ಇದ್ದರಂತೆ. ಗೋವಿಂದಪ್ಪನು ಆಜನ್ಮ ಬ್ರಹ್ಮಚಾರಿಯಾಗಿ ತೀರ್ಥಯಾತ್ರೆಗೆ ಹೋದಕಾರಣ ಅವನ ಮಕ್ಕಳು ಮೊಮ್ಮಕ್ಕಳು ಯಾರೂ ಇಲ್ಲ. ಆದರೆ ಇನ್ನೊಬ್ಬನು ಮಾತ್ರ ಸಂಸಾರಿಯಾಗಿದ್ದುದರಿಂದ ಅವನ ಸಂತತಿಯು ನಡೆಯಿತು. ಈಗಿರುವವನು ಆತನಿಂದ ಹನ್ನೆರಡನೆಯ ತಲೆಯವನಂತೆ. ಈ ಬಗ್ಗೆ ಮನೆಯಲ್ಲಿ ಒಂದು ವಂಶಾವಳಿಯು ಇರುವುದೆಂದೂ ಅದನ್ನು ಶೋಧಿಸಿ ಕೊಡುವೆನೆಂದೂ ಕುಲಕರ್ಣಿಯು ಹೇಳಿರುವನು. ಅನಂತರ

ತಿಳಿಯುವ ಸಂಗತಿಗಳನ್ನು ಆಗ ಕೊಡುವೆನು. ಇನ್ನು ಗೋವಿಂದಪ್ಪನು ಅಗರ ಖೇಡದ ಒಬ್ಬ ಸಂನ್ಯಾಸಿಯ ಹತ್ತಿರ ವಿದ್ಯೆ ಕಲಿತು ಅವನಲ್ಲಿಯೇ ಸಂನ್ಯಾಸ ದೀಕ್ಷೆ ತೆಗೆದುಕೊಂಡು ಅಲ್ಲಿಯ ಶಂಕರಲಿಂಗ ಗುಡಿಯಲ್ಲಿ ಎಷ್ಟೋ ದಿನಗಳ ವರೆಗೆ ಇದ್ದ ನಂತೆ. ನಮ್ಮೂರಿಂದ ಒಂದು ಹರದಾರಿಯಮೇಲೆ ಒಂದು ದಿಣ್ಣೆಯಿದೆ; ಅದನ್ನು ಈಗಲೂ 'ಗೋವಿಂದನ ಮರಡಿ'ಯೆನ್ನುತ್ತಾರೆ. ಅಲ್ಲಿ ಅರ್ಧ ಕಡೆದು ಬಿಟ್ಟ ಬಸವಣ್ಣನ ಕಲ್ಲಿನ ಮೂರ್ತಿಯೊಂದಿದೆ. ಆ ಮರಡಿಯು ದೊಡ್ಡದಿದ್ದು ಈಗ ಕಲ್ಲ ಹೊಲವಾಗಿದೆ. ಇಲ್ಲಿ ಗವಿಯೊಂದು ಇದ್ದಿತೆಂದು ಹೇಳುತ್ತಾರೆ. ಆದರೆ ಸದ್ಯಕ್ಕೆ ಆ ಗವಿಯ ಗುರುತು ಇಲ್ಲ. ಗೋವಿಂದ ಕವಿಯು ಅಗರಖೇಡದಿಂದ ಬಂದು ಇಲ್ಲಿಯೂ ಬಹು ಕಾಲ ಇದ್ದನೆಂದು ಊಹಿಸಬಹುದಾಗಿದೆ. ಇಲ್ಲಿಂದ ತೀರ್ಥ ಪರ್ಯಟನಕ್ಕೆ ಹೊರಟು ಪಂಢರಪುರ, ಕಾಶಿ ಮುಂತಾದ ಉತ್ತರದ ಯಾತ್ರಾ ಸ್ಥಳ ಗಳನ್ನು ತೀರಿಸಿಕೊಂಡು ಅವನು ಪುನಃ ದಕ್ಷಿಣಮಾರ್ಗವಾಗಿ ತೆರಳಿದಂತೆ ಗ್ರಂಥಸ್ಥ ಪದ್ಯಗಳಿಂದ ಅನುಮಾನಮಾಡಲಿಕ್ಕೆ ಬರುತ್ತದೆ. ಕೂಷ್ಮಾಂಡ ಗಣನಾಯಕನು ಹತ್ತನೆಯ ಸಂಧಿಯ ೬, ೭, ೮ನೆಯ ಪದ್ಯಗಳಲ್ಲಿ ಹೇಳಿದ ಹಾಗೆ ಕವಿಯು ನಿರ್ದೇಶಿ ಸಿದ ಎಲ್ಲ ದೇಶಗಳನ್ನೂ ತಿರುಗಿರದಿದ್ದರೂ ಮುಂದೆ ವಿಸ್ತಾರವಾಗಿ ವರ್ಣಿಸಿದ ಕಾಶೀಪುರ, ಲಂಕಾಪುರ, ಕಾಂಚೀಪುರ—ಇವುಗಳ ಮೇಲಿಂದ ಕವಿಯು ಅಲ್ಲಲ್ಲಿಗೆ ಸ್ವತಃ ಹೋಗಿರಬಹುದೆಂದು ತಿಳಿಯತಕ್ಕುದಾಗಿದೆ. ಅಂತು, ಕವಿಯು ಪ್ರವಾಸಿಕ ನೆಂಬುದಕ್ಕೂ ಕಾಶೀ, ಲಂಕಾ, ಕಾಂಚೀಪುರಗಳು ಅವನಿಗೆ ಹೆಚ್ಚು ಸೇರಿಕೆ ಯಾದುವೆಂಬುದಕ್ಕೂ ಸಾಕಾದಷ್ಟು ಆಧಾರಗಳಿವೆ. ಅದರಲ್ಲಿ ಕಾಂಚೀಪುರದಲ್ಲಿ ಎಷ್ಟೋ ವರ್ಷಗಳ ವರೆಗೆ ಅವನು ನೆಲಸಿರಬಹುದೆಂಬುದಕ್ಕೆ ಅವನ ವರ್ಣನೆಯ ವಿಸ್ತಾರವೂ ಆಪ್ಯತೆಯೂ ಕಾರಣಗಳಾಗಿವೆ. ಒಂದೇ ಒಂದು ಪದ್ಯವನ್ನು ಪರಿಕಿಸಲಾಗಿ ಕಾಂಚೀಪುರದ ವಿಷಯವಾಗಿದ್ದ ಅವನ ಸಹಜ ಪ್ರೀತಿಯು ವ್ಯಕ್ತ ವಾಗುತ್ತದೆ:—

ಸಿರಿಗೆ ನೆಲೆಯಾಗಿ ಮಂಗಳಕೆ ಮಂದಿರವಾಗಿ।
ಪರಮ ತೋಷಕ್ಕೆ ಪುಟ್ಟಿಡೆಯಾಗಿ ಸೌಭಾಗ್ಯ।
ಕುರು ಭವನವಾಗಿ ಮಿಗೆ ಧರ್ಮಾರ್ಥ ಕಾಮ ಮೋಕ್ಷಾಮೃತಂ ಸಂಭವಿಸಿದ ॥
ಶರನಿಧಿಯದಾಗಿ ಕಾಮಾಕ್ಷಿಯೆನಿಪ ಶಕ್ತಿಗೆ।
ಸ್ಥಿರ ನೆಲೆಯದಾಗಿ ಬ್ರಾಹ್ಮರಿಗೆ ಬಿಡದಿಯುಮಾಗಿ।
ವರದರಾಜಂಗೆ ಸೈಪಾಗಿ ಮೆಱೆದುದು ಕಾಂಚಿ ಭೂಸತಿಯ ಕಾಂಚಿಯಂತೆ ॥

ಮುಂದೆ ೧೬–೧೭ ಪದ್ಯಗಳಲ್ಲಿ ಕವಿಯು 'ವರದರಾಜನಿರ್ಪ ಕಾಂಚೀಪುರ ದೊಳು' ಎಂದು ಪುನಃಪುನಃ ಕೊನೆಯಲ್ಲಿ ಹೇಳುತ್ತ ಕಾಂಚೀ ಕೃಷ್ಣಮೂರ್ತಿ ಯನ್ನು ಅತ್ಯಂತ ಭಕ್ತ್ಯುತ್ಸಾಹದಿಂದ ವರ್ಣಿಸುತ್ತಾನೆ. ಉದಾ.—

ಆವನಡಿಯುಂಗುಟದ ಕೊನೆಗೊಗೆದ ಗಂಗೆ ಭುವ।
ನಾವಳಿಯ ಪಾವನಂಗೈದುದು ವಿಚಾರಿಸುವೊ।
ಡಾವನ ಸುನಾಭ್ಯಂಬುಜದಿ ಜನಿಸಿದಾ ಸುತನಿನಾದುದು ಸಮಸ್ತ ಲೋಕಂ ॥

ಆವನಕ್ಷಿದ್ವಯದೊಳಿರುಳು ಪಗಲಾಣ್ಮರ ಪ್ರ।
ಭಾವಮುಣ್ಮಿದುದಾವನರಸಿಯಿಂ ಸಕಲ ಜಗ।
ತೀ ವಲಯದೈಶ್ವರ್ಯಮಾದುದಾ ದೇವಾದಿದೇವ ನೆಲಸಿರ್ಪನಿಲ್ಲಿ ॥ ೪೭ ॥

ಇದರಂತೆ—

ಹೊಕ್ಕಳೊಳ್ ಮಗನ ಪೆತ್ತವರುಂಟೆ ತನು ರೋಮ।
ದಿಕ್ಕೆಯೊಳನಂತ ಶತಕೋಟಿ ಬ್ರಹ್ಮಾಂಡಂಗ।
ಳಕ್ಕಜಮೆನಲ್ ತಾಳ್ದರುಂಟೆ ಬಾಯಿಂದಗ್ನಿಪುರುಷನಂ ಪಡೆದರುಂಟೆ ॥
ಕಕ್ಕಸದ ಬಿಸದುರಿಯನುಗುಳ್ವ ಪಾವಂ ತಂದು।
ಪಕ್ಕೆಗೈದವರುಂಟೆ ಯತಿಮಹಾತ್ಮರು ನೆನೆದ।
ರಕ್ಕು ದುರ್ಲಭ ಸುಲಭಮೆಂಬ ಚಿತ್ರಂದೋರ್ಪ ಹರಿಯಿರ್ಪನಾ ಪುರದೊಳು ॥ ೫೦ ॥

ಇವೆರಡು ಪದ್ಯಗಳೂ ಕಂಚಿಯ ಕೃಷ್ಣಮೂರ್ತಿಯನ್ನು ನೋಡಿ ಸಲಿದ ಕವಿಯ ಬಾಯಿಂದಲೇ ಬಂದಿರಬಹುದು. 'ಶತಕೋಟಿ ಸೂರ್ಯಾಭ ನಿರ್ಲೋಭ ನಂದ **ಗೋಪ ವಿನುತ**' ಎಂಬಲ್ಲಿ ತಾನು ಮಾಡುವ ನುತಿಯನ್ನೂ ಗೋಪ ಕವಿಯು ಸೂಚಿಸಿರುವಂತೆ ತೋರುತ್ತದೆ.

ಗೋವಿಂದ ಕವಿಯು ಸ್ಮಾರ್ತನೇ ಎಂದು ನಿಶ್ಚಿತವಾಗಿ ಹೇಳಬಹುದು. ಅವನ ವಂಶಿಕನ ಆಧಾರವನ್ನು ಬಿಟ್ಟರೂ ಅವನ ಕಾವ್ಯದ ಆಧಾರವು ಇದಕ್ಕೆ ಸಾಕು. ಸ್ಮಾರ್ತನಲ್ಲದವನು ನಂದಿ ಮಾಹಾತ್ಮ್ಯವನ್ನು ಬರೆಯಲಾರನು. ಇದಲ್ಲದೆ ತನ್ನ ಕಾವ್ಯದ ಪ್ರತಿಯೊಂದು ಸಂಧಿಯಲ್ಲಿ ಪ್ರಥಮ ಪದ್ಯವನ್ನು ನಂದೀಶನ ಸ್ತುತಿಗಾಗಿ ಇಟ್ಟಿರುವನು. ಹಾಗೂ ನಿಯತವಾಗಿ ಅಂಥ ಪದ್ಯಗಳಲ್ಲಿ 'ನಂದೀಶ ರಕ್ಷಿಸು ಸತತಂ', ಇಲ್ಲವೆ 'ನಂದೀಶ ಪಾಹಿ ಸತತಂ' ಎಂದು ಬೇಡಿಕೊಳ್ಳುವನು. ಸಂಧಿಯ ಕೊನೆಯ ಪದ್ಯಗಳಲ್ಲಿ ಇದರಂತೆ ನಂದೀಶ್ವರನ ಹೆಸರನ್ನು ತರುವನು. ಇದೂ ಅಲ್ಲದೆ, ಷಡಕ್ಷರಿಯು ರಾಜಶೇಖರದಲ್ಲಿ ಧರ್ಮವತೀಪುರವನ್ನು ಬಣ್ಣಿಸುವಾಗ, "ಶಿವಪದ ಪದ್ಮಮಂ ಪಡೆದು ಪೂಜಿಪ ಶೈವಪುರಾಣಮಂ ಮಹೋತ್ಸವದಿ ನೊರಲ್ಬು ಕೇಳ್ದ......" (೨–೯೩) ಎಂಬುದಾಗಿ ತನ್ನ ಮತದ ಮೇಲ್ಮೆಯನ್ನು ತೋರಿಸಿದಂತೆ ಸ್ಮಾರ್ತನಾದ ಗೋವಿಂದ ಕವಿಯು, "ಓರಂತೆ ನಿರ್ಮಿಸಿದ ಬೊಮ್ಮ ನೆನೆ **ಶೈವಶಾ। ಸ್ತ್ರೋರು ಪದ್ಧತಿಗೆ ತವರ್ಮನೆಯೆನಲ್** ಮೆರೆದುದು **ಪು**।ರಾಣ ಯೋಗಶಾಲೆ......" (೪–೨೪) ಎಂಬುದಾಗಿ ಶಿವಾಲಯದ ಉಪವನವನ್ನು ವರ್ಣಿಸಿ ತನ್ನ ಮತ ಪ್ರವೃತ್ತಿಯನ್ನು ನಿಚ್ಚಳವಾಗಿ ತೋರಿಸಿರುವನು. ಆದರೆ ಗೋತ್ರಾದಿಗಳನ್ನು ಕೊಡುವುದರಿಂದಲೂ ವಂಶಾವಳಿಯ ಆಧಾರದ ಮೇಲ ನಿಂದಲೂ ಇವನು ವೀರಶೈವನಲ್ಲವೆಂಬುದು ಸಿದ್ಧವಾಗುತ್ತದೆ. ಆದರೆ, ಷಡಕ್ಷರಿಯ ಕಾವ್ಯವನ್ನು ಪಾತ್ರ ಇವನು ಪೂರ್ವತಃ ಓದಿಕೊಂಡಿರಬಹುದೆಂಬುದಕ್ಕೆ ಕೆಲವು ಹೇತುಗಳು ದೊರೆಯುತ್ತವೆ. ಅವನ್ನು ಕಾಲ ನಿರ್ಣಯದಲ್ಲಿ ಚರ್ಚಿಸುವೆನು.

**ಗೋವಿಂದ ಕವಿಯ ಕಾಲನಿರ್ಣಯ**—"ಕರ್ಣಾಟಕ ಕವಿಗಳಲ್ಲಿ ಕೇಶಿರಾಜ, ಪಂಪ, ಭಲ್ಲಟರನ್ನು ಮೊದಲನೆಯ ಸಂಧಿಯಲ್ಲಿ ಸ್ಮರಿಸಿ ಆಧುನಿಕರಲ್ಲಿ ಯಾರನ್ನೂ ಸ್ಮರಿಸಿಲ್ಲವಾದುದರಿಂದಲೂ, ಸಂದಿ ಮಾಹಾತ್ಮ್ಯ ಗ್ರಂಥದ ಶೈಲಿಯು ಲಕ್ಷ್ಮೀಶನ ಜೈಮಿನಿ ಭಾರತದ (ಕ್ರಿ. ಶ. ೧೭ನೆಯ ಶತಮಾನ) ಶೈಲಿಯ ಛಾಯೆಯಾಗಿರುವುದರಿಂದಲೂ, ಅಭಿಪ್ರಾಯವೂ ಅದರಿಂದ ತೆಗೆದಂತೆ ಇರುವುದರಿಂದಲೂ, ಈ ಗ್ರಂಥವು ೧೭೪೯ರಲ್ಲಿ ಶ್ರೀರಂಗಪಟ್ಟಣದಲ್ಲಿ ಸಿಕ್ಕಿದುದರಿಂದಲೂ ಈ ಕವಿಯು ೧೭ನೆಯ ಶತಮಾನದ ಅಂತ್ಯಭಾಗದಲ್ಲಿ ಇದ್ದನೆಂದು" ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರವರು ಬರೆದುದುಂಟು. ಅದರಂತೆ, "ಪೂರ್ವ ಕವಿಗಳಲ್ಲಿ ಕುಮಾರ ವ್ಯಾಸನನ್ನು (ಸು. ೧೪೩೦) ಸ್ತುತಿಸಿರುವುದರಿಂದ ಅವನಿಗಿಂತ ಈಚೆಯವನೆಂಬುದು ವ್ಯಕ್ತವಾಗಿದೆ; ಸುಮಾರು ೧೬೫೦ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ" ಎಂದು ಕವಿಚರಿತೆಯಲ್ಲಿ ಬರೆದಿದೆ. ಇವೆರಡೂ ನಿರ್ಣಯಗಳು ಹೆಚ್ಚುಕಡಿಮೆ ಒಂದೇ ಕಾಲಾವಧಿಯನ್ನು ಸೂಚಿಸುತ್ತವೆ. ಆದರೆ, ಮೊದಲನೆಯದರಲ್ಲಿ ಗೋವಿಂದ ಕವಿಯು ಮಾಡಿದ ಲಕ್ಷ್ಮೀಶನ ಸ್ಪಷ್ಟವಾದ ಉಲ್ಲೇಖವನ್ನು ಲಕ್ಷ್ಯಕ್ಕೆ ತಂದಿಲ್ಲ. ಎರಡನೆಯದರಲ್ಲಿ ೧೬೫೦ರ ಊಹೆಗೆ ಕಾರಣಗಳನ್ನು ಕೊಟ್ಟಿಲ್ಲ. ನಮ್ಮ ನಿದರ್ಶನಕ್ಕೆ ಬಂದಿರುವ ಹೊಸ ಸಂಗತಿಗಳನ್ನು ಕಾಣಿಸಿ ನಾವು ನಮ್ಮ ನಿರ್ಣಯವನ್ನು ಕೊಡುವೆವು.—

೧ನೆಯ ಸಂಧಿಯ ೧೪ನೆಯ ಪದ್ಯದಲ್ಲಿ ಕವಿಯು ಒಂಬತ್ತು ಸಂಸ್ಕೃತ ಕರ್ಣಾಟಕ ಕವಿಗಳನ್ನು ನೆನೆದಿರುವನು:—

ಜನಮಿತ್ರ ಕಾಳಿದಾಸನ ಕಲಾನಿಧಿ ಮಯೂ।
ರನ ಮಂಗಳ ಚರಿತ್ರ ಮಲುಹಣನ ಸೌಮ್ಯ ಬಾ।
ಣನ ಚತುರ ಸಂಜೀವ ರತ್ನ (?) ಭೋಜನ ಕವೀಶ್ವರ ಕೇಶಿರಾಜನೊಲ್ದ ॥
ಘನಶಬ್ದ ಶೌರಿ ಪಂಪನ ಭೋಗಿ ಭಲ್ಲಟನ।
ವಿನುತ ಸತ್ಕೇತು ಶುಕ ರೂಪನಡಿದಾವರೆಯ।
ನೆನೆದುಪಕ್ರಮಿಸೆ ಕೃತಿಗವರೊಳ್ ನವಗ್ರಹಂ ಬಲವಂದು ಪೆಂಪೀಯುವೇ ॥

ಇಲ್ಲಿ ಶ್ಲೇಷದಿಂದ ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು—ಈ ನವ ಗ್ರಹಗಳು ಧ್ವನಿತವಾಗುತ್ತವೆ. ಇಲ್ಲಿ ಪ್ರಕೃತಕ್ಕೆ ಬೇಕಾಗಿರುವ ಕವಿಯೆಂದರೆ ಶುಕರೂಪ, ಎಂದರೆ ಶುಕನ ಅಪರ ರೂಪವಿದ್ದಂತೆ ಇರುವ ಕುಮಾರವ್ಯಾಸನೆಂಬುದು ಸ್ಪಷ್ಟವಿದೆ. ಇದರಿಂದ, ೧೫ನೆಯ ಶತಮಾನದ ಮಧ್ಯದಲ್ಲಿದ್ದ ಕುಮಾರವ್ಯಾಸನ ಬಹು ಈಚೆಗೆ ಗೋವಿಂದ ಕವಿಯು ಇರಲಿಕ್ಕೆ ಬೇಕು; ಏಕೆಂದರೆ, ಕೇಶಿರಾಜ, ಪಂಪ, ಭಲ್ಲಟ ಮೊದಲಾದ ಹಳೆಯ ಕವಿಗಳ ಮಾಲಿಕೆಗೆ ಅವನನ್ನು ಸೇರಿಸಿರುವನು. ಇನ್ನು, ಮುಂದಿನ ಪದ್ಯದಲ್ಲಿ ಮತ್ತೆ ಮೂರು ನಾಲ್ಕು ಮಂದಿ ಕನ್ನಡದ ಸುಕವಿಗಳನ್ನು ಗೋವಿಂದ ಕವಿಯು ಉಲ್ಲೇಖಿಸಿರುವನು:—

ಚತುರಾಸ್ಯ ರುದ್ರ ಲಕ್ಷ್ಮೀಪತಿಯನಂತರು।
ನ್ನತ ಸತ್ಯಲೋಕ ಕುಕ್ಷಿಲ ಕೀಲಾಲ ನಿಧಿ।
ವಿತಳವಮಂ ಸಾರಲೆಮ್ಮ ಶ್ರೀವರಾರೆಂದು ಸುಕವೀಂದ್ರಾಭಿಧಾನಮಾಂತು ॥
ಕೃತಿ ಕರ್ತರೆನಿಸಿ ವಿಶ್ರುತರಾಗೆ ಲೋಕದೊಳ್।
ನುತಿಸದವರಾರ್ ಮನೋ ಮುದದಿಂದ ಕಾವ್ಯ ಪ।
ದ್ಧತಿಯೊಳಾನಭಿವಂದನಂಗೈದು ಮುಂದೆ ಸಂದರ್ಭಮಂ *ಸಾಗಿಪೆಂ ॥

ಇಲ್ಲಿಯೂ ಕೂಡ ಬ್ರಹ್ಮ ರುದ್ರ ವಿಷ್ಣು—ಈ ಮೂವರ ಅರ್ಥವೂ ಬರುವಂತೆ ಶ್ಲೇಷವನ್ನಿಟ್ಟು ಚತುರಾಸ್ಯ, ರುದ್ರ, ಲಕ್ಷ್ಮೀಪತಿ—ಹೀಗೆ ಮೂರು ಜನ ಕವಿಗಳನ್ನು ಹೆಸರೆತ್ತಿ ಹೇಳಿರುವನು. ಇವುಗಳಲ್ಲಿ ಸು. ೧೪೫೦ರಲ್ಲಿದ್ದ ಚತುರಾಸ್ಯ ಬೊಮ್ಮರಸನೇ ಚತುರಾಸ್ಯನು. ಇವನ ನಿಘಂಟುವನ್ನು ನಮ್ಮ ಗೋವಿಂದ ಕವಿಯು ಓದಿ ತನ್ನ ಕನ್ನಡದ ವಾಕ್ ಸಂಪತ್ತನ್ನು ಪಡೆದಿರಬಹುದು. ರುದ್ರನು ಸು. ೧೬೫೦ರಲ್ಲಿದ್ದ ವೀರಶೈವ ಕವಿಯು. ಇವನು ಶ್ರೀರಂಗಪಟ್ಟಣದವನೆಂದು ಊಹೆಯಾಗಿದೆ. ಅದು ನಿಜವಿದ್ದಲ್ಲಿ ಗೋವಿಂದ ಕವಿಯು ಯಾತ್ರೆಗಾಗಿ ಹೊರಟು ಶ್ರೀರಂಗಪಟ್ಟಣಕ್ಕೆ ಬಂದಾಗ ಈ ಕವಿಯ ವಿಷಯವು ಗೊತ್ತಾಗಿರಬಹುದು; ಅಥವಾ, ಅವನ ಸಮಕಾಲೀನನಾಗಿದ್ದರೂ ಇರಬಹುದು. ಇನ್ನು, ಯಾತ್ರೆಯೊಂದರ ನಲುವಾಗಿ ಲಕ್ಷ್ಮೀಪತಿಯೆಂದು ಕರೆದಿರುವ ಕವಿಯು ಲಕ್ಷ್ಮೀಶನೇ ಸರಿ. ಇವನ ಕಾಲವು ಸು. ೧೭೦೦ ಎಂದು ಗೃಹೀತವಾಗಿದೆ. ಅಂತೂ, ಕುಮಾರವ್ಯಾಸನೊಬ್ಬನನ್ನಲ್ಲದೆ ೧೭ನೆಯ ಶತಮಾನದ ರುದ್ರ ಲಕ್ಷ್ಮೀಶರಿಗೆ ಅಭಿವಂದಿಸಿದ ಗೋವಿಂದ ಕವಿಯು ಅವರ ಸಮಕಾಲೀನನಾಗಲಿ ಅರ್ವಾಚೀನನಾಗಲಿ ಇರಲಿಕ್ಕೆ ಬೇಕು. ಇದಲ್ಲದೆ, ಸು. ೧೬೫೫ರಲ್ಲಿದ್ದ ಷಡಕ್ಷರದೇವನ ರಾಜಶೇಖರಕ್ಕೆ ನಂದಿ ಮಾಹಾತ್ಮ್ಯದಲ್ಲಿ ಹೋಲಿಕೆಗಳೂ ಉಂಟು. ಉದಾಹರಣಾರ್ಥವಾಗಿ, ಷಡಕ್ಷರನಂತೆ ಗೋವಿಂದ ಕವಿಯು ಮೊಟ್ಟಮೊದಲು ಸಮುದ್ರವನ್ನೂ ಮೇರು ಪರ್ವತವನ್ನೂ ಬಗೆ ಬಗೆಯಾಗಿ ಬಣ್ಣಿಸಿರುವನು. ೩ನೆಯ ಸಂಧಿ ೧೬ರಲ್ಲಿ, "ಹಿಂತಾಲದಿಂ ತಾಲದಿಂ ಜಂಬು ಜಂಬೀರದಿಂದ...." ಎಂದು ಮುಂತಾಗಿರುವ ವನ ವೃಕ್ಷ ವರ್ಣನೆಯು ರಾಜಶೇಖರವಿಳಾಸದ ೨ನೆಯ ಆಶ್ವಾಸ ೩೩ನೆಯ ಪುಟದಲ್ಲಿಯ ಗದ್ಯಕ್ಕೆ ಹೋಲುತ್ತದೆ. ೫-೫೨ರಲ್ಲಿಯ 'ಹೀರ ಪಟೀರ ಸನ್ನಿಭ'ವೆಂಬುದು 'ರಾಜಶೇಖರ'ದ ೧-೬೬ರಲ್ಲಿರುವ 'ಕ್ಷೀರ ಪಟೀರ ಹೀರ ಘನಸಾರ' ಇತ್ಯಾದಿಯ ಛಾಯೆಯಾಗಿದೆ. ೧೧-೨೨ರಲ್ಲಿಯ "ಸ್ರಗ್ಮಂಡಿತ ಸುವಕ್ಷ ದಕ್ಷ ವೈಪಕ್ಷ ಯಕ್ಷೇಶ ಮಿತ್ರ"—ಇದಾದರೂ 'ಸಕ್ಷಮ ದಕ್ಷ ಶಿಕ್ಷಣ'ದ ಪಡಿನೆಳಲಾಗಿದೆ. ಇವೆಲ್ಲವೂ ರಾಜಶೇಖರವಿಳಾಸವನ್ನು ಓದದೆ ಗೋಪ ಕವಿಗೆ ಬಂದಿರುವ ಹಾಗಿಲ್ಲ. "ಶ್ರೀವಿಷ್ಣು ಮದನಗೋಪಾಲ ಲೀಲಾವಾತ್ಸಲ್ಯದಿಂ ಚಿತ್ರದಿಂ ಸರಸ ಕವಿತೆಯ ಪೇಳಿಸಿದ ಸ್ವತಂತ್ರದೊಳು" ತಾನು ಕಸ್ತೂರಿ [illegible] ಓದಿಕೊಂಡವ

* 'ಸಾಗಿಸಿದಪೆಂ' ಎಂದಿರಬೇಕೆಂದು ತೋರುವುದು.—ಸಂ.; ಕ.ಸಾ.ಪ.ಪ.

ಸಲ್ಲವೆಂದು ೧-೧೩, ೧೮ರಲ್ಲಿ ಸ್ಪಷ್ಟವಾಗಿ ಉಸುರಿದ್ದಾನೆ. ಸಂಸ್ಕೃತದಲ್ಲಿ ವಿಶೇಷ ವ್ಯಾಸಂಗ ಮಾಡಿ ಮುಂದೆ ತಾನು ನಿರ್ದೇಶಿಸಿದ ಕೆಲವು ಕನ್ನಡ ಕವಿಗಳ ಗ್ರಂಥ ಗಳನ್ನಿಷ್ಟೇ ಇವನು ಪರಿಶೀಲಿಸಿರಬಹುದು. ಅಂತೆ **'ದೇಶೀಯು** ದುಷ್ಕರ ಪ್ರಾಸ **ನೇಮಂ'** ಎಂದು ಕನ್ನಡದ ಪ್ರಾಸಕ್ಕೆ ಹೆದರಿದಂತೆ ತೋರಿರುವನು. ಇಷ್ಟಾದರೂ ನಾವು ಗೋಪ ಕವಿಯನ್ನು ೧೭ನೆಯ ಶತಮಾನದ ಒಳಹೊರಗೆ ಇಡಲಿಕ್ಕೆ ಒಂದೆರಡು ಸಬಲ ಕಾರಣಗಳುಂಟು. ಏನೆಂದರೆ, ಈಗಿದ್ದ ಭುಯ್ಯಾರದ ಕರಣಿಕನು ಗೋವಿಂದನಿಂದ ೧೩ನೆಯ ತಲೆಯವನೆಂದಮೇಲೆ ಗೋವಿಂದನು ಸುಮಾರು ೩೫೦ ವರ್ಷಗಳ ಪೂರ್ವದಲ್ಲಿಯಾದರೂ ಕನಿಷ್ಠಕ್ಕೆ ಇರಬೇಕು: ಎಂದರೆ, ೧೬೫೦ರಿಂದ ೧೭೦೦ರ ಮಧ್ಯಕಾಲವು ಇದರಿಂದ ಸೂಚಿತವಾಗುವದು. ಇದೂ ಅಲ್ಲದೆ ಭುಯ್ಯಾರ, ಅಗರಖೇಡ ಮುಂತಾದ ಕೆಲವು ಹಳ್ಳಿಗಳು ಸುಮಾರು ೨೦೦ ವರ್ಷ ಗಳಿಂದ ವೈಷ್ಣವ ಆದ್ಯ ಆಚಾರ್ಯರಿಗೆ ದತ್ತಿಗಳಾಗಿ ಬಂದಿದ್ದುದರಿಂದಲೂ, ಆಗಿ ನಿಂದ ನಡೆದುಬಂದ ಕರಣಿಕ ವಂಶವು ೧೭ನೆಯ ಶತಮಾನದ ಅಂತ್ಯ ಅಥವಾ, ೧೮ರ ಆದಿ—ಇಷ್ಟರಲ್ಲಿಯೇ ಆರಂಭವಾಗಿರಬೇಕು. ಅಂತೂ, ಮಥಿತಾರ್ಥವೇನೆಂದರೆ, ಸು. ೧೬೫೦ ಎನ್ನುವುದಕ್ಕಿಂತ ಸು. ೧೭೦೦ ಅಥವಾ, ಸು. ೧೭೨೫ ಎನ್ನುವುದ ರಿಂದ ಗೋವಿಂದನ ಕಾಲವು ಲಕ್ಷ್ಮೀಶ ಷಡಕ್ಷರರ ಸಮಕಾಲದಲ್ಲಾಗಲಿ ಅನಂತರ ವಾಗಲಿ ನಿಂತು, 'ಸುಮಾರು' ಆದರೂ ಸಮಂಜಸವಾಗುತ್ತದೆ.

ಇನ್ನು, ನಮ್ಮೂರ ಕವಿಯೆಂದು ಇಷ್ಟು ನಾನು ಕಷ್ಟಪಟ್ಟು ಬರೆದುದೇನೋ ಸರಿ; ಆದರೆ ಇದಿಷ್ಟಕ್ಕೇ ಮುಗಿಯಲಿಲ್ಲ. ಈ ಕವಿಯು ನಮ್ಮೂರಲ್ಲದೆ ಎಲ್ಲರ ಹೃದಯದ ಊರ ಕವಿಯಾಗುವ ಪ್ರತಿಭೆಯುಳ್ಳವನೆಂಬುದು ಮಹತ್ತ್ವದ ಸಂಗತಿ ಯಾಗಿದೆ. ಇವನು ಕೊಟ್ಟಿರುವ ಕವಿಯ ವ್ಯಾಖ್ಯೆಯು ಅತ್ಯದ್ಭುತವಾಗಿದೆ:—

ತನುವಿಲ್ಲದಲ್ಲಿ ಪ್ರಾಣಪ್ರತಿಷ್ಠೆಯ ಕಟ್ಟಿ।
ಯನುಗೊಳಿಸಿದಾರು ರಸಸ್ಥಾಪನೆಯ ಭಿತ್ತಿಯೊಂ।
ದಿನಿಸಿಲ್ಲದತಿ ಚಿತ್ರಮಂ ರೂಪುದೋರದೆಡೆಯೊಳ್ ಪಲವಲಂಕಾರಮಂ ||
ಮನೆಯಿಲ್ಲದರ್ಥ ಸಂಚಿತವನುಂ ಮೇರೆಯಿರ।
ದನುಪಮ ಕ್ರಿಯೆಗಳಂ ನಡೆಯಿಸ ಕವೀಶ್ವರರ।
ಘನತೆಯಂ ಬಣ್ಣಿಸುವರಾರಾನೆ ಹೋದುದೇ ಬೀದಿಯಲ್ಲವೆ
ಜಗದೊಳು || ೧-೧೬ ||

ಷೇಕ್ಸ್ಪಿಯರ ಕವಿಯ The poet in fine frenzy rolling, gives to airy nothing a local habitation and a name" ಎಂಬ ಮಾತಿಗೆ ಸದೃಶವಾದ ಕವಿ ಕಲ್ಪನೆಯು ಮೇಲಿನ ಕವಿತೆಯಲ್ಲಿದೆ. ಕವೀಶ್ವರರು ತುಳಿದ ಹಾದಿಯೇ ಹಾದಿಯಾಗುವುದೆಂಬುದಕ್ಕೆ ಕೊಟ್ಟ, "ಆನೆ ಪೋದುದೆ ಬೀದಿಯಲ್ಲವೆ ಜಗದೊಳು" ಎಂಬ ದೃಷ್ಟಾಂತವು ಉತ್ಕೃಷ್ಟವಾಗಿದೆ. ಇಂಥ ಕವಿಯು ಹೆಚ್ಚು ವ್ಯುತ್ಪನ್ನ ನಾಗಿದ್ದಿಲ್ಲವೆಂಬುದಕ್ಕೆ 'ಮನದೆಗೊಂಡು, ದುಷ್ಕರ ಪ್ರಾಸ ನೇಮಂ, ಸಾರಂಗ

ನಡೆಯು ಒಪ್ಪುಗೊಂಬುದು' ಮುಂತಾದ ಅಶುದ್ಧ ಪ್ರಯೋಗಗಳೂ, 'ಸವಾ ಲಕ್ಷ್ಯ, ಬರಾಬರಿ, ವಳಾವಳಿ, ಧಕ್ಕಡೆಯ ತನ' ಮುಂತಾದ ಮರಾಠೀ ಶಬ್ದಗಳೂ ಸಾಕ್ಷಿಯಾಗಿವೆ. ಮದನಗೋಪಾಲಕನ ಕೇವಲ ಕರುಣೆಯಿಂದ ಬರೆದ ಈ ಕಾವ್ಯವು ಸಾಮಯಿಕ ವರ್ಣನೆಗಳಿಂದ ತುಂಬಿದ್ದರೂ ಸಹಜ ಪ್ರತಿಭೆಯ ಪ್ರವಾಹವುಳ್ಳುದಾಗಿದೆ. ಜೈಮಿನಿ ಭಾರತದಲ್ಲಿ ಬಂದಿರುವ ಒಂದೆರಡು ಅಲಂಕಾರಗಳು ಗೋಪಿಂದ ಕವಿಗೆ ವಿಶೇಷ ಪ್ರಿಯವಾಗಿದ್ದುದರಿಂದ ಅವು ಮೇಲಿಂದ ಮೇಲೆ ಬರುತ್ತವೆ. ೧೨–೧೧ರಲ್ಲಿ ಆಂಡಯ್ಯನ ಅನುಕರಣವು ಇದ್ದಹಾಗೆ ಅಚ್ಚಗನ್ನಡ, ತದ್ಭವಗಳು ವಿಪುಳವಾಗಿ ಬಂದಿವೆ. ತಾನು ಹೇಳಿದ ಕವಿಯ ತತ್ತ್ವವನ್ನು ತಾನೇ ಹೇಗೆ ಆಚರಣೆಯಲ್ಲಿ ತಂದಿರುವನೆಂಬುದಕ್ಕೆ ಒಂದು ಪದ್ಯವನ್ನು ಉದಾಹರಿಸಿ ಈ ಚರಿತ್ರವನ್ನು ಮುಗಿಸುವೆನು:—

**ರಸವೆ ರಂಜಿಸುವಂತೆ ಚೆಲ್ವೆ ಚೈತನ್ಯವಾಂ।**
**ತೆಸೆವಂತೆ ಚೋದ್ಯಮೇ ಹೃದ್ಯಮಪ್ಪಂತೆ ಭಾ।**
**ವಿಸಲಲಂಕಾರವಾಕಾರಮಾಂತಂತೆ ಕಲ ರುತಿಯೆ ಮಾತಾಡುವಂತೆ ॥**
**ಒಸೆದು ಚಾತುರ್ಯಮೇ ಚಾರುತನವೆತ್ತು ಶೋ।**
**ಭಿಸುವಂತೆ ಕಲೆಯೆ ಕಾಲ್ದಳೆದು ನಡೆವಂತೆ ಸವಿ।**
**ಯೊಸೆದು ಸಾಲಿಡುವಂತೆ ವನಿತೆಯರ್ ನಡೆತಂದರುಪವನಕೆ ವಹಿಲದಿಂದ ॥**

**ಕೇಸಣ್ಣ ಜಹಾಗೀರದಾರ, ಭೂಯಾರ***
ಗೆಳೆಯರ ಗುಂಪು.

---

* ಈ ಬರೆಹವನ್ನು ಬರೆಯುವದಕ್ಕೆ ನನ್ನ ಗೆಳೆಯರಾದ ಮುಗಳಿ ರಂಗರಾಯರೂ, ಬೇಂದ್ರೆ ದತ್ತರಾಯರೂ ಬಹಳ ನೆರವಾದರೆಂದು ನಾನಿಲ್ಲಿ ಹೇಳದಿರಲಾರೆನು.—ಲೇ.

# ತ್ರಿವಲ್ಲುವರ್ ಮತ್ತು ಅವನ ಧರ್ಮ

ತ್ರಿವಲ್ಲುವರನಿಂದ ಬರೆಯಲ್ಪಟ್ಟ ತ್ರಿಕುರಲ ಗ್ರಂಥವು ಮಾನವ ವಿಚಾರವನ್ನು ಬೋಧಿಸುವ ಸರ್ವೋತ್ತಮವಾದ ಒಂದು ಗ್ರಂಥವಾಗಿದೆ. ಈ ಗ್ರಂಥದಲ್ಲಿ ಗ್ರಂಥಕರ್ತನು ತಮಿಳು ದೇಶಕ್ಕೆ ಸಂಬಂಧಪಟ್ಟ ಆಚಾರ ವಿಚಾರಾದಿ ವಿಷಯಗಳನ್ನು ಬಹಳ ಉತ್ತಮ ರೀತಿಯಲ್ಲಿ ವರ್ಣಿಸಿರುತ್ತಾನೆ. ಶೂದ್ರ ಜಾತಿಗೆ ಸೇರಿದ ಮಲಯಪುರದ ನಿವಾಸಿಯಾದ ಈ ತ್ರಿವಲ್ಲುವರನು ಆಚಾರ ಧರ್ಮದ ಮಹತ್ವ ಮತ್ತು ಶಕ್ತಿಯ ವಿಷಯದಲ್ಲಿ ಮಾಡಿರುವ ವರ್ಣನೆಗಿಂತಲೂ ಪ್ರಪಂಚದ ಯಾವ ಧರ್ಮಸಂಸ್ಥಾಪಕನ ಉಪದೇಶವೂ ಅಧಿಕ ಪ್ರಭಾವಯುಕ್ತವೂ ಏವಂ ಶಕ್ತಿಪ್ರದವೂ ಆಗಿ ಕಾಣುವುದಿಲ್ಲವೆಂದೂ, ಇವನಿಂದ ವರ್ಣಿಸಲ್ಪಟ್ಟ ಸೂಕ್ಷ್ಮ ತತ್ತ್ವಕ್ಕಿಂತಲೂ ಅಧಿಕ ಸೂಕ್ಷ್ಮವಾದ ತತ್ತ್ವವು ಭೀಷ್ಮ ಅಥವಾ, ಕೌಟಿಲ್ಯ, ಕಾಮಂದ ಅಥವಾ ರಾಮದಾಸ, ವಿಷ್ಣುಶರ್ಮ ಅಥವಾ, ಮಾಯಿಕೆಬಿಲ್—ಇವರಿಂದಲೂ ವರ್ಣಿಸಲ್ಪಟ್ಟಿಲ್ಲವೆಂದೂ, ವ್ಯಾವಹಾರಿಕ ಚಾತುರ್ಯವನ್ನು ಇವನು ಬೋಧಿಸಿರುವಷ್ಟು "ಬೆಚಾರೆ ರಿಚಾರ್ಡ"ನು ಬೋಧಿಸಿಲ್ಲವೆಂದೂ, ಪ್ರೇಮಿಯ ಹೃದಯ ಮತ್ತು ಅದರ ನಾನಾ ವಿಧವಾದ ವ್ಯಾಪಾರಗಳನ್ನು ಇವನು ಪ್ರಕಟ ಮಾಡಿರುವುದಕ್ಕಿಂತಲೂ ಅಧಿಕವಾಗಿ ಕಾಳಿದಾಸ ಅಥವಾ, ಷೇಕ್ಸ್‌ಪಿಯರನು ಪ್ರಕಟಮಾಡಿಲ್ಲವೆಂದೂ ಈ ಗ್ರಂಥದ ಸಂಬಂಧವಾಗಿ ಬಿ. ಬಿ. ಅಯ್ಯರರ ಕಥನವಾಗಿದೆ. ಇದೇ ಗ್ರಂಥದ ವಿಷಯದಲ್ಲಿ ಸಿ. ರಾಜಗೋಪಾಲಾಚಾರ್ಯರು ಈ ಪ್ರಕಾರವಾಗಿ ಬರೆದಿರುತ್ತಾರೆ:—"ತ್ರಿಕುಲರ ವಿವೇಕವು ಶುಭ ಸಂಸ್ಕಾರ ಮತ್ತು ಮಾನವ ಪ್ರಕೃತಿಯ ವ್ಯಾವಹಾರಿಕ ಜ್ಞಾನದ ಗಣಿಯಾಗಿದೆ. ಮಾನವ ಚರಿತ್ರೆ ತಥಾ ದುರ್ಬಲತೆಯ ಮೂಲ ಕಾರಣವನ್ನು ವಿಚಾರಮಾಡಿ ಸರ್ವೋಚ್ಚವಾದ ಆಧ್ಯಾತ್ಮಿಕ ರಹಸ್ಯವನ್ನು ಪ್ರತಿಪಾದನೆ ಮಾಡಿರುವುದೇ ಈ ಅದ್ಭುತ ಗ್ರಂಥದಲ್ಲಿರುವ ವಿಶಿಷ್ಟತೆಯು." ಅಸ್ತು; ಉಲ್ಲಿಖಿತ ಮಾನ್ಯ ವಿದ್ವಾಂಸರ ಈ ಶುಭ ಸಮ್ಮತಿಯಿಂದ ಪಾಠಕರು ಸ್ವಯಂ ಈ ಗ್ರಂಥದ ಮಹತ್ವ ಮತ್ತು ಗೌರವವನ್ನು ತಿಳಿದುಕೊಳ್ಳದಿರಲಾರರು. ತ್ರಿವಲ್ಲುವರನು ಯಾವ ಧರ್ಮದ ಉಪಾಸಕನಾಗಿದ್ದನೆಂಬುದನ್ನು ಕಂಡುಹಿಡಿಯುವುದೇ ಈ ನನ್ನ ಲೇಖದ ಉದ್ದೇಶವಾಗಿದೆ. ಪರಂತು, ಇದೊಂದು ವಿವಾದಾಪನ್ನವಾದ ವಿಷಯವು. ಇದುವರೆಗೂ ಯಾವನೊಬ್ಬ ವಿದ್ವಾಂಸನೂ ಈ ವಿಷಯವನ್ನು ನಿರ್ಣಯಮಾಡಲಾರದೆ ಹೋದನು. ಹೀಗಿರುವಾಗ ನನ್ನ ಈ ತುಚ್ಛ ಪ್ರಯತ್ನವು ಕೇವಲ ಧೃಷ್ಟತಾ ಪೂರ್ಣವಾದುದೆಂದು ನಾನೇ ಹೇಳಿಕೊಳ್ಳಬೇಕಾಗಿದೆ. ಈ ಗ್ರಂಥದ ಹಿಂದಿ ಅನುವಾದಕರಾದ ಶ್ರೀಯುತ ಕ್ಷೇಮಾನಂದ ರಾಹಕರು ತಮ್ಮ ಪ್ರಾಕ್ಕಥನದಲ್ಲಿ, "ತ್ರಿವಲ್ಲುವರನು ಯಾವ ವಿಶಿಷ್ಟ ಸಂಪ್ರದಾಯಕ್ಕೆ ಸೇರಿದವನೆಂದು ಕಂಡುಹಿಡಿಯುವುದು ಕಠಿನವಾದ ಸಮಸ್ಯೆ

ಯೆಂದೂ, ಶೈವ, ವೈಷ್ಣವ, ಜೈನ, ಬೌದ್ಧ—ಇವರೆಲ್ಲರೂ ಅವನನ್ನು ತಮ್ಮ ತಮ್ಮ ಧರ್ಮಾನುಯಾಯಿಯಾಗಿದ್ದನೆಂದು ಸಿದ್ಧಮಾಡುವುದಕ್ಕೇ ಚೇಷ್ಟೆಮಾಡುತ್ತಿದ್ದಾರೆಂದೂ, ಪ್ರತ್ಯೇಕ ಸಂಪ್ರದಾಯಗಳ ಕೆಲವು ಮಾತುಗಳು ಈ ಗ್ರಂಥದಲ್ಲಿ ಸಿಕ್ಕುವುದಾದರೂ ಇದರಿಂದಲೇ ಅವನು ಇವುಗಳಲ್ಲಿ ಯಾವುದಾದರೊಂದು ಸಂಪ್ರದಾಯದ ಪೂರ್ಣಶಃ ಅನುಯಾಯಿಯಾಗಿದ್ದನೆಂದು ಹೇಳುವುದಕ್ಕಾಗುವುದಿಲ್ಲವೆಂದೂ, ಈ ಗ್ರಂಥದಲ್ಲಿ ಕೆಲವು ಮಾತುಗಳು ಯಾವುದಾದರೊಂದು ಮತಕ್ಕೆ ಅನುಕೂಲವಾಗಿ ದೊರೆತರೂ ಕೆಲವು ಮಾತುಗಳು ಅದೇ ಮತಕ್ಕೆ ಪ್ರತಿಕೂಲವಾಗಿಯೂ ದೊರೆಯುತ್ತವೆಂದೂ, ಅತ ಏವ ತ್ರಿವಲ್ಲುವರನು ಒಬ್ಬ ಉದಾರ ಧರ್ಮನಿಷ್ಠ ಪುರುಷನಾಗಿದ್ದು ತನ್ನನ್ನು ಯಾವುದೊಂದೂ ಮತಾಂತರದ ಬಂಧನಕ್ಕೊಳಪಡಿಸದೆ ಒಬ್ಬ ಸತ್ಯನಿಷ್ಠನಾದ ರತ್ನಪರೀಕ್ಷಕನಂತೆ ಎಲ್ಲಿ ಯಾವ ದಿವ್ಯ ರತ್ನವು ಪ್ರಾಪ್ತವಾಗುತ್ತಿದ್ದಿತೋ ಅದನ್ನು ಅಲ್ಲಿಂದ ಗ್ರಹಣ ಮಾಡಿ ತನ್ನ ರತ್ನ ಭಂಡಾರವನ್ನು ವೃದ್ಧಿಗೊಳಿಸುತ್ತಿದ್ದನೆಂದೂ ತಿಳಿದುಬರುತ್ತದೆಂದೂ'' ಅಭಿಪ್ರಾಯಪಟ್ಟಿರುತ್ತಾರೆ. ಇವರ ಈ ಅಭಿಪ್ರಾಯವು ವಿದ್ವತ್ತಾಪೂರ್ಣವಾಗಿಯೂ ವಿಚಾರಾರ್ಹವಾಗಿಯೂ ತೋರುತ್ತದೆ. ಆದುದರಿಂದ ಈ ವಿಷಯದಲ್ಲಿ ವಿಶೇಷವಾದ ಅನ್ವೇಷಣವನ್ನು ಮಾಡಬೇಕಾದುದು ಸಂಪೂರ್ಣ ತತ್ತ್ವಾನ್ವೇಷಿಗಳಾದ ಪ್ರೌಢ ವಿದ್ವಾಂಸರ ಪರಮ ಕರ್ತವ್ಯವಾಗಿದೆ. ಪರ್ಯಾಪ್ತ ಪ್ರಮಾಣಗಳು ದೊರೆತ ಹೊರತು ಇದರ ತಥ್ಯಾಂಶವನ್ನು ಕಂಡುಹಿಡಿಯುವುದು ಸುಲಭವಲ್ಲ. ಅಸ್ತು; ಪ್ರಕೃತ ನಾನು ಅನ್ವೇಷಣಾರ್ಥಿಗಳಾದ ವಿದ್ವಾಂಸರಿಗೆ ಯತ್ಕಿಂಚಿತ್ಸಹಾಯವಾಗಲೆಂಬ ಲಕ್ಷ್ಯದಿಂದ ಈ ಅಮೂಲ್ಯವಾದ ಲೋಕೋಪಕಾರಿ ಗ್ರಂಥದಲ್ಲಿ ಸಿಕ್ಕುವ ಜೈನ ಧರ್ಮ ಸಂಬಂಧವಾದ ಕೆಲವು ಮಾತುಗಳನ್ನು ವಿದ್ವಾಂಸರ ಮುಂದಿಡಬೇಕೆಂದಿರುವೆನು. ಅವು ಇವು:—

(೧) ಅಷ್ಟಗುಣಗಳಿಂದ ಅಭಿಭೂತ ಯುಕ್ತನಾದ ಪರಬ್ರಹ್ಮನ ಚರಣ ಕಮಲಗಳಲ್ಲಿ ಮಸ್ತಕವನ್ನು ತಗ್ಗಿಸದ ಮನುಷ್ಯನು ತನ್ನ ಗುಣವನ್ನು ಗ್ರಹಣ ಮಾಡಲು ಶಕ್ತಿಯಿಲ್ಲದ ಇಂದ್ರಿಯಕ್ಕೆ ತುಲ್ಯನು. (ತಾಮಿಲ್ ವೇದ, ಪು. ೬೦)

(ಸೂಚನೆ.—ಕುರಲ್ ಗ್ರಂಥದ ಹಿಂದಿ ಭಾಷಾಂತರಕ್ಕೆ "ತಾಮಿಲ್ ವೇದ"ವೆಂದು ಹೆಸರಿಟ್ಟಿರುವರು.)

ಉಲ್ಲಿಖಿತ ಈಶ್ವರ ಸ್ತುತಿಯಲ್ಲಿ ಗ್ರಂಥಕರ್ತನಿಂದ ಪರಬ್ರಹ್ಮನಿಗೆ ಕೊಡಲ್ಪಟ್ಟ, "ಅಷ್ಟಗುಣಗಳಿಂದ ಯುಕ್ತನಾದ" ಎಂಬ ವಿಶೇಷಣವನ್ನು ಪಾಠಕರು ಪ್ರಾಕೃತ, ಸಂಸ್ಕೃತ, ಕನ್ನಡ ಮೊದಲಾದ ಜೈನ ಗ್ರಂಥಗಳಲ್ಲಿ ಅನೇಕತ್ರ ನೋಡಿರಬೇಕು. ಜೈನರಲ್ಲಿಯೇ ಇದು ಪ್ರಸಿದ್ಧವಾಗಿದೆಯೆಂದು ನನ್ನ ನಂಬಿಕೆ. ಜೈನೇತರ ಗ್ರಂಥಗಳಲ್ಲಿ ಇದುವರೆಗೆ ನನಗೆ ಎಲ್ಲಿಯೂ ಪರಬ್ರಹ್ಮನಿಗೆ ಈ ವಿಶೇಷಣವು ದೊರೆಯದಿದ್ದುದರಿಂದ ಹಾಗೆಯೇ ನಂಬಬೇಕಾಗುವುದು. ನೋಡಿ:—

ಅಟ್ಠವಿಹ ಕಮ್ಮ ವಿಯುಲಾ ಸೀದೀಭೂದಾ ಣಿರಂಜಣಾ ಣಿಚ್ಚಾ ।
ಅಟ್ಠಗುಣಾ ಕಿದಕಿಚ್ಚಾ ಲೋಯಗ್ಗ ಣಿವಾಸಿನೋ ಸಿದ್ಧಾ ॥

ಅರ್ಥ:—ಜ್ಞಾನಾವರಣಾದಿ ಅಷ್ಟ ಕರ್ಮಗಳಿಂದ ರಹಿತನೂ, ಅನಂತ ಸುಖ ರೂಪವಾದ ಅಮೃತಾನುಭವದಿಂದ ಶಾಂತಿಮಯನೂ, ನವೀನ ಕರ್ಮ ಬಂಧನಕ್ಕೆ ಕಾರಣಭೂತವಾದ ಮಿಥ್ಯಾದರ್ಶನಾದಿ ಭಾವಕರ್ಮ ರೂಪವಾದ ಅಂಜನದಿಂದ ರಹಿತನೂ, ನಿತ್ಯನೂ, ಜ್ಞಾನ, ದರ್ಶನ, ಸುಖ, ವೀರ್ಯ, ಅವ್ಯಾಬಾಧ, ಅವಗಾಹನ, ಸೂಕ್ಷ್ಮತ್ವ, ಅಗುರು ಲಘು—ಈ ಎಂಟು ವಿಧವಾದ ಮುಖ್ಯ ಗುಣಗಳಿಂದ ಯುಕ್ತನೂ ಆದ ಪರಬ್ರಹ್ಮನೇ ಸಿದ್ಧ ಪರಮೇಷ್ಠಿಯು. (ಗೋಮಟ ಸಾರ)

(೨) "ಕ್ಲೇಶವು ದಯಾಳು ಪುರುಷನಿಗಾಗಿ ಅಲ್ಲ. ವಾಯುವೇಷ್ಟಿತವಾದ ಪೃಥ್ವಿಯೇ ಇದಕ್ಕೆ ಸಾಕ್ಷಿಯಾಗಿದೆ." (ತಾಮಿಲ್ ವೇದ, ಪು. ೧೧೬)

ಯಾವ ಅನ್ಯ ಧರ್ಮದಲ್ಲಿಯೂ ಪೃಥ್ವಿಯು ಆಲಂಬನ ಯಾ ಆಧಾರ ವಾಯುವೆಂದು ಒಪ್ಪಲಿಲ್ಲವಾಗಿ ನನ್ನ ಅನುಭವ. ಅತಃ ಉಲ್ಲಿಖಿತ ಈ ಸಿದ್ಧಾಂತವು ಜೈನರದೆಂದೇ ನನ್ನ ಅಭಿಪ್ರಾಯವು. ಏಕೆಂದರೆ—ಜೈನರು ಘನೋದಧಿ, ಘನವಾತ, ತನುವಾತ—ಈ ವಾಯು ತ್ರಯಗಳೇ ಪೃಥ್ವಿಯ ಆಧಾರವೆಂದು ಹೇಳುತ್ತಾರೆ.

(ಸರ್ವಾರ್ಥಸಿದ್ಧಿ, ಪು. ೧೧೩)

(೩) "ಒಳ್ಳೆ ಮಾರ್ಗವು ಯಾವುದು ? ಯಾವುದರಲ್ಲಿ ಸೂಕ್ಷ್ಮದಿಂದ ಸೂಕ್ಷ್ಮವಾದ ಪ್ರಾಣಿಯನ್ನು ರಕ್ಷಿಸುವುದು ಧರ್ಮವೆಂಬ ದೃಢವಾದ ಉದ್ದೇಶವು ಗರ್ಭಿತವಾಗಿದೆಯೋ ಅದೇ ಮಾರ್ಗವು ಒಳ್ಳೆ ಮಾರ್ಗ." (ತಾಮಿಲ್ ವೇದ, ಪು. ೧೨೮)

ಸಾಮಾನ್ಯವಾಗಿ ಅಹಿಂಸಾ ತತ್ತ್ವವನ್ನು ಎಲ್ಲಾ ಧರ್ಮಾವಲಂಬಿಗಳೂ ಒಪ್ಪುತ್ತಾರೆ. ಪರಂತು, ಜೈನ ಧರ್ಮದಲ್ಲಿ ಈ ಅಹಿಂಸಾ ತತ್ತ್ವದ ವಿವೇಚನೆಯು ಬಹಳ ಸೂಕ್ಷ್ಮ ರೀತಿಯಲ್ಲಿ ಮಾಡಲ್ಪಟ್ಟಿದೆ. ಪ್ರಾಯಃ, ಜೈನ ಶಾಸ್ತ್ರಗಳ ಬೇರೆ ಬೇರೆ ಪುಟಗಳಲ್ಲಿ ಈ ಸಿದ್ಧಾಂತವು ವರ್ಣಿಸಲ್ಪಟ್ಟಿದೆ. ಸುಜ್ಞ ಪಾಠಕರಿಗೆ ಇದೇ ಧರ್ಮದಲ್ಲಿ ಅಹಿಂಸಾ ತತ್ತ್ವದ ಪರಾಕಾಷ್ಠತೆಯು ನೋಡುವುದಕ್ಕೆ ಸಿಕ್ಕುವುದು. ಜೈನರೇ ಅಲ್ಲ; ಪಂಡಿತ ಬಾಲಗಂಗಾಧರ ತಿಲಕರಂತಹ ನಿಷ್ಪಕ್ಷಪಾತಿ ಜೈನೇತರ ವಿದ್ವಾಂಸರೂ ಈ ಮಾತನ್ನು ಒಪ್ಪಿರುತ್ತಾರೆ. ಅತಃ ಪೂರ್ವೋಕ್ತ ಈ ಸೂಕ್ಷ್ಮ ಸಿದ್ಧಾಂತವು ಅವಶ್ಯವಾಗಿ ಜೈನರದೇ ಆಗಿರಬೇಕೆಂದು ನನ್ನ ಊಹೆ.

"ತಮ್ಮಲ್ಲಿ ಯಾವ ವಸ್ತುವನ್ನೂ ಇಟ್ಟುಕೊಳ್ಳದಿರುವುದೇ ವ್ರತಧಾರಿಗಳ ನಿಯಮವು. ಒಂದು ಪರಿತ್ಯಕ್ತ ವಸ್ತುವನ್ನು ತನ್ನಲ್ಲಿಟ್ಟುಕೊಳ್ಳುವುದು ಪುನಃ ತನ್ನನ್ನು ಆ ಬಂಧನದಲ್ಲಿ ಸಿಕ್ಕಿಸುವುದೆಂದು ತಿಳಿ." (ತಾಮಿಲ್ ವೇದ, ಪು. ೧೩೨)

ಯಾವನಾದರೂ ದಿಗಂಬರ ಜೈನಮುನಿಯನ್ನು ಎಂದಾದರೂ ಒಂದು ಬಾರಿ ನೋಡಿರುವ ಪಕ್ಷದಲ್ಲಿ ಅವನಿಗೆ ತ್ರಿವಲ್ಲುವರನ ಈ ಗೂಢ ಸಿದ್ಧಾಂತವು ಜೈನರದೆಂದು ಖಂಡಿತವಾಗಿಯೂ ತಿಳಿಯದಿರಲಾರದು. ದಿಗಂಬರ ಜೈನಮುನಿಗಳು

ಒಂದು ಲಂಗೋಟಿಯನ್ನು ತಮ್ಮಲ್ಲಿಟ್ಟುಕೊಳ್ಳುವುದೂ ಬಂಧನಕ್ಕೆ ಜಡವೆಂದು ತಿಳಿಯುತ್ತಾರೆ. ಆದುದರಿಂದಲೇ ಅವರು ಒಂದು ಜಲಪಾತ್ರೆ ಮತ್ತು ಪಿಂಛಿ (ಮಾರ್ಜನ)ಯ ಹೊರತು ಏನನ್ನೂ ತಮ್ಮಲ್ಲಿಟ್ಟುಕೊಳ್ಳುವುದಿಲ್ಲ.

ಪಾಠಕರಿಗೆ ಜೈನಧರ್ಮದ ಸಂಬಂಧವಾಗಿ ತಾಮಿಲ್ ವೇದದಲ್ಲಿ ಪೂರ್ವೋಕ್ತ ಕತಿಪಯ ಪ್ರಮಾಣಗಳ ಹೊರತು ಸರ್ವಸಾಮಾನ್ಯವಾದ ಎಷ್ಟೋ ಮಾತುಗಳು ನೋಡುವುದಕ್ಕೆ ಸಿಕ್ಕುವುವು. ಕುರಲ್ (ತಾಮಿಲ್ ವೇದವು) ದಿಗಂಬರಾಚಾರ್ಯರಾದ ಕುಂದಕುಂದರಿಂದ ರಚಿಸಲ್ಪಟ್ಟುದೆಂದು ಶ್ರೀಮತಿ ಎನಿಬೆಸೆಂಟ್, ಸ್ವಾಮಿ ಶುದ್ಧಾನಂದ ಭಾರತಿ ಮೊದಲಾದ ಹಲವು ಮಾನ್ಯ ವಿದ್ವಾಂಸರ ಮತವಾಗಿದೆ. ಅಸ್ತು; ಇದರ ಪೂರ್ಣ ನಿರ್ಣಯವು ಗಹನಾನ್ವೇಷಣದ ಉಪರಾಂತವೇ ಆಗಬಲ್ಲುದೆಂದು ನಾನು ಮೊದಲೇ ತಿಳಿಸಿರುತ್ತೇನೆ. ಅತಃ ಮಾನ್ಯ ವಿದ್ವಾಂಸರ ಧ್ಯಾನವನ್ನು ಈ ಕಡೆಗೆ ಎಳೆಯುವುದೇ ಈ ಲೇಖನದ ಉದ್ದೇಶವಾಗಿದೆ.

**ಕೆ. ಭುಜಬಲಿಶಾಸ್ತ್ರೀ, ಆರಾ.**

# ಅನ್ಯೋಕ್ತಿ ಪದ್ಯಗಳು

ಆವುದಿದು ನಿರ್ನಿಮಿತ್ತ ದ।
ಯಾ ವಶನುರು ಪಂಚಮ ಸ್ವರಾಮೃತ ರಸದಿಂ ॥
ತೀವುಗುಮೆನ್ನಯ ಕಿವಿಯಂ।
ಬೇವಸವೊಂದಿರ್ಪುದಂ ನರಿಯ ಕೂರುಲಿಯಿಂ ॥ ೧ ॥

ಎಲೆ ಕೋಗಿಲೆಯಾಣ್ಮನೆ ಮಂ।
ಗಲಮಕ್ಕೆಮ ನಿನಗೆ ನೀನದೇಂ ಗೆಯ್ದಪಯೋ ॥
ಕಲ ರವಮಂ ಕೇಳ್ದಿಲ್ಲರು।
ಮೊಲವಿಂದಾನಂದ ರಸದೊಳೋಲಾಡಿದಪರ್ ॥ ೨ ॥

ಎಲೆ ಎಲೆ ಕೋಕಿಲಾಧಿಪತಿ ನೀನುಪಕಾರಮನೊಲ್ಲದಿಂತು ಕ।
ಟ್ಬೊಲವಿನೊಳೆಯ್ದೆ ಗೆಯ್ದ ಸುಕೃತಂ ನೆಲೆವೆರ್ಚುಗುಮೆಂಬಿನಂ ಜಸಂ ॥
ಕಲ ರವಮಂ ಪೊದಟ್ಬಿ ಪಲವಂದದೆ ಗೆಯ್ವಯುದಾವುದಂ ಪುಗು।
ತ್ತಲಸದೆ ತಾಂ ರಸಾಲಮದು ಪೆರ್ಚುಗೆ ಬಾಲಿಶ್ಗಿ ತಳಿರ್ಗಳೇಳ್ಗೆಯಿಂ ॥ ೩ ॥

ಕಾಡೊಳ್ ಜಲಜಂತುಗಳಾ।
ಬೀಡೊಳ್ ಪಿಕ ಕೊರಲ ನೋವನೇಕಾಂತಪಯೋ ॥
ಆಡುಂಬೊಲ ಪೂದೋಂಟದೆ।
ಪಾಡುತೆ ಕಿವಿ ಸೋಲೆ ಸೊಗದೆ ನಲಿಸು ರಸಿಕರಂ ॥ ೪ ॥

ರಸಾಲಂ ಪ್ರಖ್ಯಾತಂ ಕಲ ವಿಹಗ ನಾದಕ್ಕೆಡೆಯೆನು।
ತ್ತೆ ಸಂಭ್ರಾನ್ತಂ ಹಂಸಂ ದಿವದಿನಿಲಿಿತರ್ಕಂ ಸಕುತುಕಂ ॥
ಅಸಹ್ಯಾರಾವಂ ದೈವದೆ ತೊಲಗಿತಾ ಕಾಗೆ ಪಿಕ ನೀಂ।
ರಸಾಲಕ್ಕೀಗಳ್ ಖ್ಯಾತಿಯನೆಸಗತಕ್ಕನ್ತು ಸಮಯಂ ॥ ೫ ॥

ಕಿವಿಯೊಡೆವಂತೆ ಕರ್ರುನುರೆ ಕೂಗುವ ಕಾಗೆಗವೊಲ್ದು ಕೇಳ್ವರಾ।
ಕಿವಿ ಸಲೆ ಸೋಲೆ ಪಂಚಮೆನೆ ಪಂಚಮದಿಂಚರಮಂ ಕುಕಿಲ್ದು ಪಾ॥
ಡುವೆನಗಮುಕ್ಕಟಿನ್ತು ವನ ವೃತ್ತಿಯನೊರ್ತೆಜಿದಿಂದೆ ವೇಧಸಂ।
ನವೆನವೆಸುತ್ತೆ ಶೋಕಿಸಪಿರಪ್ಪು ನೆಗಟ್ಬಿನವೆಲ್ಲಿ ಯೋಗ್ಯನುಂ ॥ ೬ ॥

ಎಲೆ ಎಲೆ ಪಕ್ಕಿಗಳೇ ನೀ।
ಮುಲಿಯದಿರಿಂ ಬರಿದೆ ಪಶುಗಳೇ ಬಾಯ್ಮುಚ್ಚಿಂ ॥
ಕಲ ರವ ರಸಿಕರೆ ಕಿವಿಗೊ।
ಟ್ಬೊಲವಿಂ ಕೇಳ್ವುದು ಕುಕಿಲ್ವುದೀ ತರುಣ ಪಿಕಂ ॥ ೭ ॥

ಎಲೆ ನೀಂ ಕೋಗಿಲೆಯಾಣ್ಮ ಕಾಗೆಯೊಲವಂ ಪೊರ್ದಲ್ಕೆ ಸಂದರ್ಪೆಯೋ।
ಉಲಿಯನ್ತಾದೊಡೆ ಕಾಗೆಯುನ್ತೆ ವಿರಸಾರಾವಂಗಳಂ ಕರ್ರನು ॥
ತ್ತುಲಿಯಲ್ಬಲ್ಲದೊಡಯ್ಯ ನಿನ್ನ ಸರಸಾಲಾಪಂಗಳಂ ಮಾಣ್ಬು ಕೂ।
ಗಿಲಿಜಾಗಾತ್ಮ ವಿರುದ್ಧ ನಾದಮುನಿಸಂ ಕೇಳ್ದೋಡಿಕುಂ ಕಾಗೆಗಳ್ ॥ ೮ ॥

ತಳಿರ್ಗಳ್ಬಲ್ಲು ಬೆಳರ್ತುದ ಸೊಂಪುಗಿಡೆ ಪೂಗೊಂಚಲ್ಕಳಲ್ಬುತ್ತಿ ಕಂ।
ಪಱಿಯಲ್ ತೊಟ್ಟುಗಳನ್ನು ಬಟ್ಟಬಯಲಾಗಲ್ಕಂಚರಂಗೆಯ್ದು ಪ ॥
ಲ್ಲಳಿವಿಂತುಂ ಮಱಿಯಾಗೆ ಬಳ್ಳಿಗಳ ತಂಡಂ ಕಂದಿ ಕುಂದಲ್ಕೆ ಕೋ।
ಗಿಲೆ ದುವಸ್ಮಾಸವೆ ಸೋಡಿ ವ್ಯೆಮಱಿವುದಿನ್ನೇನಪ್ಪುದೋ ಅಕ್ಕಟಾ ॥ ೯ ॥

ಆವುದು ಸಂತಸಂಗೊಳಿಸುಗುಂ ನಿನಗೊಲ್ದುರೆ ಪಣ್ದಳಿರ್ಗಳಿಂ।
ತೀವಿತು ನಾಡೆ ನಿನ್ನ ಮಧುರಾರವ ಕೀರ್ತಿಯದೇಗಳೆಲ್ಲಿಯುಂ ॥
ಪೂವಿನ ಸೊಂಪಿನಾಗರಮೆನಿಪ್ಪ ವಸಂತಮುದಾಗಿ ಪೋದುದಿ।
ನ್ನೇವುದು ಪೇೞಿ ನೀನುಸಿಕನಿರ್ಪುದೆ ಲೇಸೆಲೆ ಕೋಕಿಲಾಗ್ರಣೀ ॥ ೧೦ ॥

**ಪಂಡಿತ ಶ್ರೀನಿವಾಸರಾಘವಾಚಾರ್ಯ.**

---

# ಗ್ರಂಥ ವಿಮರ್ಶೆ

## ೧. ಶ್ರೀ ಪ್ರಸನ್ನವೆಂಕಟರ ಭಾಗವತ

(ದಶಮಸ್ಕಂಧ, ಪೂರ್ವಾರ್ಧ)

ಪ್ರಕಾಶಕರು.—ಕರ್ಮವೀರ ಪುಸ್ತಕಾಲಯದ ಒಡೆಯರು, ಧಾರವಾಡ.

ಬೆಲೆ ರೂ. ೧.

ಈ ಗ್ರಂಥವು ಭಾಗವತ ೧೦ನೆಯ ಸ್ಕಂಧದ ಕನ್ನಡ ಪರಿವರ್ತನೆ. ಕಥೆಯು ಕೃಷ್ಣಲೀಲೆಗೂ ಮಾಹಾತ್ಮ್ಯಕ್ಕೂ ಸಂಬಂಧಪಟ್ಟುದು. ಕನ್ನಡಿಸಿದವರು ಶ್ರೀ ಪ್ರಸನ್ನವೆಂಕಟದಾಸರು. ಇದನ್ನು ಸಂಸ್ಕರಿಸಿರುವವರೂ ಇದಕ್ಕೆ ಪ್ರಸ್ತಾವನೆಯನ್ನು ಬರೆದಿರುವವರೂ ಕನ್ನಡನಾಡಿನಲ್ಲಿ ಹೆಸರುಗೊಂಡಿರುವ ಶ್ರದ್ಧಾಳುಗಳು.

ಇದರಲ್ಲಿ ಪದ್ಯ ಭಾಗಕ್ಕಿಂತ ಕೀರ್ತನಾ ಭಾಗವು ಹೆಚ್ಚಾಗಿದೆ. ಕೀರ್ತನೆಗಳು ಅರ್ಧ ಭಕ್ತಿ ಸಂಗೀತಗಳಿಗೂ, ಅರ್ಧ ಸಾಹಿತ್ಯಕ್ಕೂ ಸೇರಿದವು. ರಾಗದ ಜೊತೆಗೆ ಸೇರಿದರೆ ಅತಿ ಕರ್ಕಶವಾದ ಸಾಹಿತ್ಯಕ್ಕೂ ಮೋಹಕತೆ ಬರುವುದು; ಕ್ರಮಲೇಶವೂ ಇಲ್ಲದ ಮಾತಿನ ಹೊರೆಗಳನ್ನು ರಾಗದಲ್ಲಿ ಎಳೆದು ಹಿಡಿದು ಹೊಂದಿಸಿಕೊಂಡು ಜನರಂಜನೆಯಾಗುವಂತೆ ಹೇಳಬಹುದು. ಆದರೆ ಹಾಡುಗಳ ಸಾಹಿತ್ಯವನ್ನು ಬರೆದಿಟ್ಟಮೇಲೆ ಆದಕ್ಕೆ ಬೇರೆ ರೀತಿ ಬೆಲೆ ಕಟ್ಟಬೇಕಾದೀತು. ಈ ಕೀರ್ತನೆಗಳ ರಚನೆಯ ವಿಷಯವಾಗಿ ನಾವೇನೂ ಇಲ್ಲಿ ಹೇಳುವುದಿಲ್ಲ; ಹಾಡುವಾಗ ಅವು ಇಂಪಾಗಿಯೇ ಇದ್ದಾವು.

ಇಲ್ಲಿಯ ಷಟ್ಪದಿ ವೃತ್ತಗಳನ್ನು ನೋಡಿದರೆ ಅವು ಅನೇಕ ಕಡೆ ಎರಡು ಕಾಲಿನಲ್ಲಿಯೂ ಕುಂಟುತ್ತಿರುವಂತೆಯೂ, ಅಲ್ಲಲ್ಲಿ ಗಂಟಲು ಕಟ್ಟಿ ಉಸಿರಾಡಲು ಕಷ್ಟಪಡುತ್ತಿರುವಂತೆಯೂ ಕಾಣುತ್ತವೆ. ೧೮೯ನೆಯ ಪುಟದಲ್ಲಿಯ ಸ್ರಗ್ಧರೆಯನ್ನಾಗಲಿ,

> . . . . . . . . . . . . . . . . . .ಪಾ।
> ವನ್ನವನು ಮಾಡಿದನು ಯಶೋದೆ ನಂ।
> ದನ್ನ ಪುಣ್ಯದ ಫಲವು ಶಿರಿ ಪರಸನ್ನ ವೆಂಕಟೇಶಾ ॥

ಎಂಬ ಷಟ್ಪದಿಯ ಭಾಗವನ್ನಾಗಲಿ, ೪ನೆಯ ಕೀರ್ತನೆಯ ಮೊದಲ ಭಾಗವನ್ನಾಗಲಿ ಓದಿದವರು ಈ ಸ್ಥಿತಿಯನ್ನು ಅರಿಯಬಲ್ಲರು. ಕೀರ್ತನೆಗಳಿಗೆ ಅಲ್ಲಲ್ಲಿ ಟಿಪ್ಪಣಿ ಬರೆದಿರುವವರು "ದಾಸರು ಭಾವೋದ್ರೇಕದಲ್ಲಿ ಛಂದಸ್ಸನ್ನು ಲಕ್ಷಿಸುತ್ತಿರುವದಿಲ್ಲ" ಎಂದು ಹೇಳಿರುವುದರಿಂದ ನಾವು ಇವಕ್ಕೆ [illegible]ಗಳಿಗೆ ನಿಯಮ ನಿರ್ಬಂಧಗಳ ಅಳತೆಯನ್ನು ಹಾಕಹೋಗುವದು ಸರಿಯಲ್ಲ.

ಶ್ರೀ ಕೃಷ್ಣನ ಲೀಲೆಗಳೆಲ್ಲ ದೈವಿಕವೇ ಆಗಿರಬೇಕೆಂಬ ನಂಬಿಕೆಯು ನಮ್ಮಲ್ಲಿ ಸಾವಿರಾರು ವರ್ಷಗಳಿಂದ ಬಂದಿದೆ. ಆದುದರಿಂದ ರಾಸಕ್ರೀಡೆ ಮೊದಲಾದೆಡೆ ಗಳಲ್ಲಿ ತೋರುವ ಆಭಾಸಗಳು ಭಕ್ತರ ಕಣ್ಣಿಗೆ ಕಾಣಿಸುವುದಿಲ್ಲ. ಭಕ್ತಿಯಿಂದ ಎಲ್ಲವೂ ಪಾವನವೇ ಅಲ್ಲವೆ? ಭಾಗವತರಲ್ಲಿ ಕೆಲವು 'ನರಮನುಷ್ಯರಿಗೆ' ಭಾರತದ ಶ್ರೀ ಕೃಷ್ಣನನ್ನು ಕಂಡರೆ ಹೆಚ್ಚು ಭಕ್ತಿ, ಹೆಚ್ಚು ವಿಶ್ವಾಸ; ಅಕ್ಷಯ ವಸ್ತ್ರ ದಾನಮಾಡಿ ಸತಿಯ ಮಾನವನ್ನು ಕಾಪಾಡಿದ ಕೃಷ್ಣನು ಗೋಪೀ ವಸ್ತ್ರಾಪ ಹರಣಮಾಡುವುದನ್ನೂ, ಹಸಿಹಸಿಯಾಗಿ ಕ್ರೀಡಿಸುವುದನ್ನೂ,

> ಎಳೆ ಹಾವಿನ ಮರಿಗಳ ತಂಡಬಳೆರ।
> ಗಳಕಿಕ್ಕುವ ನೀವಿಯೊಳು ಬಿಡುವ ಮಂ ॥
> ಗಳ ಮೂರುತಿ ಹೆಂಗಳು ವಸನಂಗಳ।
> ಕಳೆದು ನಿಲ್ಲಲು ಹರಿ ಕಳಕಳ ನಗುವ ॥

ಎಂಬ ವರ್ಣನೆಯಲ್ಲಿ ವಿಚಿತ್ರವಾದ ರಸಿಕ ವೃತ್ತಿಯ ಪ್ರದರ್ಶನೆಮಾಡುತ್ತಿರು ವುದನ್ನೂ ನೋಡಿ ಸಹಿಸಲಾರರು; "ಸ್ವಪತ್ನಿ ವಿಯೋಗ ಗೋಪರ್ಗೆ ತೋರದು ಪ್ರೇರಿಸೆ ಮಾಧವ" ಎಂಬೆಡೆ ತೋರುವ ಗೋಪರ ಸುಖ ಸರಳತೆ ಯನ್ನು ನೋಡಿ ಅವರು ಸುಖಪಡರು. ಆದರೆ ಪ್ರಸ್ತಾವನೆಯಲ್ಲಿ ಶ್ರೀ ಆಲೂರ ವೆಂಕಟರಾಯರು ಬರೆದಿರುವಂತೆ, "ಭಾಗವತವು ಭಕ್ತಿಯ ಕಣಿಯು ... ಗೋಪಿ ಯರ..ಭಕ್ತಿಯೆಂದರೆ ಅಸಂಪ್ರಜ್ಞಾತ ಸಮಾಧಿಸ್ಥರ ಯೋಗವೃತ್ತಿ..ನಾರದರೂ ಕೂಡ... (ಆ)..ಭಕ್ತಿಯ ರಹಸ್ಯವನ್ನು ಚೆನ್ನಾಗಿ ಅರಿಯುವುದಿಲ್ಲ..ಮಿಕ್ಕವರ ಪಾಡೇನು?" ಎಂದು ಹೇಳಿ ನಮ್ಮ ಬಾಯಿಗಳಿಗೆ ಬೀಗಹಾಕಿರುವರು.

ಕೈ ಬರೆಹದ ಪ್ರತಿಯಲ್ಲಿ ತಪ್ಪುಗಳನ್ನು ತಿದ್ದಿರುವ ಮಹನೀಯರು ಇನ್ನಷ್ಟು ತಿದ್ದಿದ್ದರೂ ಕೆಲವೆಡೆ ಈ ಪುಸ್ತಕವು ಹೆಚ್ಚು ಶುದ್ಧವಾಗುತ್ತಿದ್ದಿತೆಂದು ನಮಗೆ ತೋರುತ್ತದೆ. 'ಅಂಧಃಕಾರ, ಉಲ್ಲಾಸ, ಬೆಂಣೆ, ಕಾಂತಿಮೈಯ್ಯಳ' ಮುಂತಾದ ಶಬ್ದರೂಪಗಳ ಕಡೆಗೂ ಹೆಚ್ಚು ಗಮನ ಹರಿಸಬಹುದಾಗಿದ್ದಿತೆಂದೂ ತೋರುತ್ತದೆ.

ಆದರೂ, ಭಾಗವತರೆಲ್ಲರೂ ಈ ಪುಸ್ತಕವನ್ನು ಕೊಂಡು ಓದಿ ತಣಿಯುವ ರೆಂದು ನಂಬಿದ್ದೇವೆ.

ವಿ. ಸೀ.

---

## ೨. ಮಗುವಿನ ಕೂಗು

ಬರೆದವರು.—ಶ್ರೀ ಹೊಯಿಸಳ.

ಪ್ರಕಾಶಕರು.—ಕೃಷ್ಣಾ ಕಂಪನಿ, ಬಳೇಪೇಟೆ, ಬೆಂಗಳೂರು ನಗರ.

ಕ್ರೌನ್ ಚತುಷ್ಪತ್ರ ಪುಟಗಳು ೨೬.

ಕಿರಿಯರಿಗಾಗಿಯೇ ಬರೆದ ಪುಸ್ತಕವಿದೊಂದು. ಇದರಲ್ಲಿ ಬೇರೆ ಬೇರೆ ವಿಷಯಗಳನ್ನು ಕುರಿತು ಬರೆದ ಇಪ್ಪತ್ತೊಂದು ಕವಿತೆಗಳಿವೆ. "ಕರುನಾಡ ಕಳುಹಿದನು" ಎಂದು ಜೊಂಜೆಗೆ ಪುಟ್ಟ ಕಂದಯ್ಯಗೆ ಪಿರಿಯಣ್ಣ ಹೊಯಿಸಳ ಕಳುಹಿದನು" ಎಂದು

ಗ್ರಂಥಕರ್ತರು ಪುಸ್ತಕದ ಕೊನೆಯಲ್ಲಿ ಹೇಳಿರುವರು. ಚಿಕ್ಕ ಮಕ್ಕಳಿಗೆ ತಕ್ಕುವಾದ ಪುಸ್ತಕಗಳು ಕನ್ನಡ ವಾಙ್ಮಯದಲ್ಲಿ ಇದುವರೆಗೂ ಅಷ್ಟೊಂದು ಹೆಚ್ಚಾಗಿಲ್ಲ; ಇಲ್ಲವೇ ಇಲ್ಲವೆಂದು ಹೇಳಿದರೂ ಸಲ್ಲಬಹುದು. ಶ್ರೀ ಹೊಯಿಸಳರಂತಹ ರಸಿಕರು, ಅನುಭವಿಗಳು ಇದನ್ನು ಬರೆದು ಅಂದವಾಗಿ ಅಚ್ಚು ಹಾಕಿಸಿ ಮಕ್ಕಳ ಸಾಹಿತ್ಯದ ಬೆಳವಣಿಗೆಗೆ ಹೊಸ ದಾರಿಯನ್ನು ತೋರಿಸಿಕೊಟ್ಟುದು ಅಭಿನಂದನೀಯವಾದ ಸಂಗತಿ.

ಚಿಕ್ಕ ಮಕ್ಕಳ ಶಿಕ್ಷಣ ಕ್ರಮವು ಯಾವ ಬಗೆಯದಿರಬೇಕೆಂಬ ವಿಷಯದಲ್ಲಿ ದೇಶ ವಿದೇಶಗಳಲ್ಲಿಯ ಶಿಕ್ಷಣ ಕಲಾ ಕೋವಿದರನೇಕರು ವಿಚಾರಮಾಡಿ ನೋಡಿರುವರು. "ಮಕ್ಕಳಿಗೆ ಎಳೆಯತನದಲ್ಲಿಯೆ ಅವರ ಮನವನೆಳೆಯುವಂತಹ ಹಾಡು, ಕತೆ ಹಾಡು, ಕವಿತೆಗಳನ್ನು ಕಲಿಸಲು ಮೊದಲುಮಾಡಬೇಕು; ಪದ್ಯಪಾಠದಿಂದಲೆ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಬೇಕು. ಇದರಿಂದ ಮಕ್ಕಳ ಸ್ಮರಣ ಶಕ್ತಿಯೂ ಮನನ ಶಕ್ತಿಯೂ ಬಳೆಯುವುದು; ಇನ್ನಿತರ ವಿಷಯಗಳ ಕಡೆಗೆ ಅವರ ಮನವನೊಲೆಯಿಸಲು ಸುಲಭವಾಗುವುದು" ಎಂದು ಮೊದಲಾಗಿ ಬಹು ಜನ ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಈ ಅಭಿಪ್ರಾಯವನ್ನು ಅನುಸರಿಸಿಯೆ ಅನೇಕ ಕಡೆಗೆ ಮಕ್ಕಳ ಶಿಕ್ಷಣ ಕ್ರಮವು ಸಾಗಿರುವುದು. ಇಂತಹ ಶಿಕ್ಷಣ ಕ್ರಮಕ್ಕೆ ಸಾಧಕವಾಗುವಂತಹ ಮಕ್ಕಳ ಸಾಹಿತ್ಯವೂ ದಿನ ದಿನಕ್ಕೆ ಬಳೆಯುತ್ತಲಿದೆ. ಇದರಿಂದ ಹೆಚ್ಚಿನ ಅನುಕೂಲತೆಯುಂಟೆಂಬುದೂ ಜನರ ಅನುಭವಕ್ಕೆ ಹೆಚ್ಚು ಹೆಚ್ಚಾಗಿ ಬರಲು ತೊಡಗಿದೆ. 'ಮಗುವಿನ ಕೂಗಾ'ದರೂ ಈ ತೆರದ ಕೆಲಸಕ್ಕೆಂದೇ ಮುಂದುವರಿದುದಾಗಿದೆ.

ಮಕ್ಕಳಿಗಾಗಿಯೆ ಇದ್ದ ಹಾಡು, ಕವಿತೆ, ಕತೆಗಳು ಕನ್ನಡ ನಾಡಿಗೇನೂ ಹೊಸವಲ್ಲ. ಮಕ್ಕಳಿಗೆ ಮಾತು ಮೂಡಿತೆಂದರೆ ಆಯಿತು; ಅವರ ಆಟದೊಡನೆ ಊಟದೊಡನೆ ನೋಟದೊಡನೆ ಹಾಡು ಕವಿತೆಗಳನ್ನು ಕಲಿಸುವ ರೂಢಿಯು ನಮ್ಮವರಲ್ಲಿ ಅದೆಷ್ಟೋ ದಿನಗಳಿಂದ ನಡೆದುಕೊಂಡು ಬಂದಿದೆ. ಆದರೆ ನಮ್ಮ ಮೊದಲಿಗರಲ್ಲಿ ಇಂತಿಂತಹ ಲಕ್ಷಣಗಳಿಂದ ಕೂಡಿರುವ ಪುಸ್ತಕಗಳೆ ಸಾಹಿತ್ಯದಲ್ಲಿ ಸೇರತಕ್ಕವುಗಳೆಂಬ ನಿರ್ಬಂಧವಿದ್ದುದರಿಂದ ಮಕ್ಕಳಿಗಾಗಿಯೆ ಬರೆದ ಹಾಡು ಕತೆಗಳ ಪುಸ್ತಕಗಳು ನಮ್ಮ ಹಳೆಯ ಸಾಹಿತ್ಯದಲ್ಲಿ ಸಿಕ್ಕಲಾರವು. ಆದರೂ ಪರಂಪರೆಯನ್ನು ಕಾಯ್ದುಕೊಳ್ಳುವುದರಲ್ಲಿ ಅಸಮಾನರೆನಿಸಿದ ನಮ್ಮ ನಾಡಿಗರ ಬಾಯಲ್ಲಿ ಮಾತ್ರ ಮಕ್ಕಳ ಸಾಹಿತ್ಯವು ಇದುವರೆಗೂ ಉಳಿದುಕೊಂಡು ಬಂದಿದೆ. ಈಗಲೊ ಕಾಲವು ಮಾರ್ಪಟ್ಟಿದೆ: "ಸಾಹಿತ್ಯ" ಎಂಬ ಶಬ್ದಕ್ಕೆ ವಿಶೇಷತರದ ವ್ಯಾಪಕಾರ್ಥವು ಬಂದುಬಿಟ್ಟಿದೆ; ಯಾವ ನಿರ್ಬಂಧವೂ ಇಲ್ಲದೆ ವಿವಿಧ ವಿಷಯಗಳೂ ಸಾಹಿತ್ಯ ಕ್ಷೇತ್ರದಲ್ಲಿ ಸೇರಿಕೊಳ್ಳಲು ಅವಕಾಶವುಂಟಾಗಿದೆ. ಆದುದರಿಂದ ನಾವೀಗ ಕೈಮುಚ್ಚಿ ಕುಳಿತುಕೊಂಡರೆ ನಡೆಯುವಂತಿಲ್ಲ. ನಮ್ಮ ಸಾಹಿತ್ಯದಲ್ಲಿ ವೈವಿಧ್ಯವನ್ನು ಹೆಚ್ಚಿಸಲು ಸೊಂಟ ಕಟ್ಟಬೇಕಾಗಿದೆ; ಪರಂಪರೆಯಿಂದ ಬಂದ

ಜನರ ಬಾಯಲ್ಲಿಯೇ ಇದ್ದ ಮಕ್ಕಳ ಸಾಹಿತ್ಯವನ್ನು ಸಂಗ್ರಹಿಸಿ ಅಚ್ಚುಹಾಕಿಸ ಬೇಕಾಗಿದೆ. ಮಕ್ಕಳಿಗಾಗಿಯೆ ಇರುವ ಹೊಸಹೊಸ ಸಾಹಿತ್ಯವನ್ನು ಹುಟ್ಟಿಸ ಬೇಕಾಗಿದೆ. ಶ್ರೀ ಹೊಯಿಸಳರು ಈ ಪುಸ್ತಕವನ್ನು ರಚಿಸಿ ಮಕ್ಕಳಿಗೊಂದು ಸವಿಯೂಟವನ್ನು ಒದಗಿಸಿಕೊಟ್ಟುದಕ್ಕಾಗಿ ನಾವೆಲ್ಲ ಸಂತೋಷಪಡಬೇಕಾಗಿದೆ; ಸಂತೋಷಪಟ್ಟು ಇನ್ನೂ ಇಂತಹ ಹಲವು ಗ್ರಂಥಗಳನ್ನು ರಚಿಸುವಂತೆ ಗ್ರಂಥ ಕರ್ತೃವನ್ನು ಹುರಿಗೊಳಿಸಬೇಕಾಗಿದೆ.

ಮಕ್ಕಳಿಗೆ ಸಲ್ಲುವಂತಹ ಗ್ರಂಥಗಳನ್ನು ಬರೆಯುವ ಕೆಲಸವು ಅಷ್ಟೊಂದು ಸುಲಭವಾದುದಲ್ಲ; ಸಾಮಾನ್ಯರಿಂದ ಅದು ಆಗುವ ಕೆಲಸವೂ ಅಲ್ಲ; ಅದಕ್ಕೆ ವಿಶೇಷತರದ ಲೋಕಾನುಭವವು ಬೇಕು; ಮಕ್ಕಳ ಮನವನ್ನರಿಯುವ ಬುದ್ಧಿ ಕೌಶಲವು ಬೇಕು; ಅವರ ಬಗೆಯನ್ನೆ ಜೊಂಪೆಯನ್ನಾಗಿ ಮಾಡಿ ಮುಂದಿಡು ವಂತಹ ಕಲೆಯು ಬೇಕು; ಅವರ ಎದೆಯೊಳಗನ್ನು ಕಂಡುಹಿಡಿಯುವ ಒಳಗಣ್ಣು ಬೇಕು; ಕಿವಿ ಮನಗಳನ್ನು ಕುಣಿಸುವಂತಹ ಛಂದಸ್ಸು ತಾಳಗಳ ಪರಿಚಯವು ಬೇಕು. ಸುಲಭವಾಗಿ ತಿಳಿಯುವ ಬಳಕೆಯ ನುಡಿಯ ಬಲ್ಲತನ ಬೇಕು. ಇವೆಲ್ಲವೂ ಇಲ್ಲದೆ ಮಕ್ಕಳಿಗಾಗಿ ಕವಿತೆ, ಹಾಡು, ಕತೆಗಳನ್ನು ಬರೆಯಲು ತೊಡಗಿದರೆ ಅವು ಕಿರಿಯರಿಗೆ ತಿಳಿಯುವಂತಿಲ್ಲ, ಹಿರಿಯರ ಮನಕ್ಕೆ ಹಿಡಿಯುವಂತಿಲ್ಲ; ಹೀಗಾಗುವ ಸಂಭವವುಂಟು.

ಅರ್ಥದ ಚಮತ್ಕೃತಿಗಿಂತಲೂ ಭಾವದ ಬೆಡಗಿಗಿಂತಲೂ ನಾದದ ಮಾಧು ರ್ಯವು ಮಕ್ಕಳ ಮನವನ್ನು ಬೇಗನೆ ಸೆಳೆಯುವುದು. ಪುಂಗಿಯ ನಾದಕ್ಕೆ ನಾಗರ ಹಾವು ಮನ ಸೋತು ತಲೆದೂಗಿ ಹೆಡೆದಾಡಿಸುವಂತೆ ಪ್ರಾಸಾನುಪ್ರಾಸ ಗಳಿಗೂ ಪದ ಮೈತ್ರಿಗೂ ಶಬ್ದ ಸಂಗೀತಕ್ಕೂ ಮಕ್ಕಳು ಬಲು ಬೇಗ ಮರುಳಾಗು ವರು; ಅವರಾಗ ಅರ್ಥವನ್ನರಿತುಕೊಳ್ಳುವ ತಂಟೆಗೆ ಹೋಗರು; ಬಗೆಯ ಬೆಡ ಗನ್ನು ಕಾಣಲು ಬಯಸರು. ಪರಂಪರೆಯಿಂದ ಬಂದ ನಮ್ಮ ಮಕ್ಕಳ ಹಾಡು ಕವಿತೆಗಳೆಲ್ಲವನ್ನೂ ಪರೀಕ್ಷಿಸಿ ನೋಡಿದಲ್ಲಿ ಈ ಮಾತು ಒಡೆದು ಕಂಡುಬರುವುದು. ಉದಾಹರಣೆಗಾಗಿ ಕೆಳಗೆ ಕೊಟ್ಟಿರುವ ಹಾಡನ್ನು ನೋಡಬಹುದು :—

ಭಲ್ಲೇ ಭಲ್ಲೇ ರಾವುತಾ! ರಾವುತಾ!
ರಾವ್ತನ ಕಾಲಿಗೆಸೆದಂಬು ಎಸೆದಂಬು
ಎಸೆದಂಬ್ ತೆಗೆ ಮಲ್ಲೀ ಮಲ್ಲೀ
ಮಲ್ಲೀ ಕಾಲಿಗೆ ಪಿಲ್ಲೀ ಪಿಲ್ಲೀ
    ಪಿಲ್ಲೀ ಹೋಯಿತಮ್ಮಾ!
    ಬಿಲ್ಲಿ ಸಿಕ್ಕಿತಮ್ಮಾ!
ಆರೇನಾಡಿಗ್ಹೋದೆ ಸೇರು ಕೊಬ್ರಿ ತಂದೆ
ಚಿಟ್ಟ ಚಿಟ್ಟಿ ಮುರಿದೆ ಚಿಗರಿ ಬಾಯ್ಗೆ ಕೊಟ್ಟೆ
    ಹತ್ತೀ ಕೋಲ್ ಹನುಮನ ಕೋಲ್
    ತಕ್ಕೋ ನಿನ್ನಾ ಮುತ್ತಿನ ಕೋಲ್

ಇದೊಂದು ಆಡುವಾಗ ಹೇಳುವ ಚಿಕ್ಕ ಮಕ್ಕಳ ಹಾಡು. ಇಲ್ಲಿ ಎಲ್ಲಿಯವನೋ ಒಬ್ಬ ರಾವುತ; 'ಭಲೆ ಭಲೆ' ಎಂದು ಆತನ ಬೆನ್ನ ತಟ್ಟಿದುದಾಯಿತು; ಆತನ ಕಾಲಲ್ಲಿ ನೆಟ್ಟ ಅಂಬನ್ನು ಕೀಳಲು ಯಾವಳೋ ಒಬ್ಬ ಮಲ್ಲಿಯನ್ನು ಕರೆದುದಾಯಿತು; ಕೂಡಲೆ, ಪಾಪ! ಮಲ್ಲಿಯ ಕಾಲಿನ ಪಿಲ್ಲಿ(ಆಭರಣ)ಯು ಹೋಯಿತು; ಪಿಲ್ಲಿಯನ್ನು ಹುಡುಕಲು ಹೋದರೆ ಜಲ್ಲಿ(ದುಡ್ಡು)ಯೊಂದು ಸಿಕ್ಕಿತು; ಜಲ್ಲಿಯನ್ನು ತೆಗೆದುಕೊಂಡು ಆರೇ ನಾಡಿ(ಮಹಾರಾಷ್ಟ್ರ)ಗೆ ಹೋಗಿ ಸೇರು ಕೊಬ್ರ ತಂದು ತಾನು ತಿನ್ನದೆ, ಸಾಕಿದ ಚಿಗರಿ(ಜಿಂಕೆ)ಯ ಬಾಯ್ಗೆ ಕೊಟ್ಟು ತಿನ್ನಿಸಿಯೂ ಆಯಿತು: ಒಂದಕ್ಕೊಂದು ವಿಚಿತ್ರವಾದ ಸಂಬಂಧ; ಎದೆಯನ್ನರಳಿಸುವಂತಹ ಭಾವವೂ ಇಲ್ಲ. ಆದರೆ ಇದರಲ್ಲಿರುವ ಛಂದಸ್ಸಿನ ಕುಣಿತಕ್ಕಾಗಿಯೂ ಶಬ್ದಗಳ ಹಾರಿಕೆಗಾಗಿಯೂ ಅರ್ಥದ ಸ್ಪಷ್ಟತೆಗಾಗಿಯೂ ಮಕ್ಕಳು ಇದನ್ನು ಕೇಳಿದೊಡನೆಯೆ ಮೆಚ್ಚುವರು, ಹಾಡಿ ಹಾಡಿ ಹಿಗ್ಗುವರು. ಮಕ್ಕಳ ಸಲುವಾಗಿ ಇದ್ದ ಮೊದಲಿನ ಗೀತೆಗಳೆಲ್ಲ ಹೀಗೆಯೆ ಒಂದೊಂದು ಬಗೆಯ ಸೊಗಸಿನಿಂದ ತುಂಬಿರುವುವು. ಅವುಗಳನ್ನೆಲ್ಲ ಯಾರು ಯಾರು ಯಾವ ಯಾವ ಕಾಲದಲ್ಲಿ ರಚಿಸಿರಬಹುದೆಂಬುದನ್ನು ಹೇಳಲು ಬರುವಂತಿಲ್ಲ. ಆದರೆ ಆ ಗೀತೆಗಳನ್ನು ನೋಡಿದಲ್ಲಿ ಅವುಗಳ ಕರ್ತೃಗಳು ಮಕ್ಕಳ ಮನವನ್ನು ಚೆನ್ನಾಗಿ ಅರಿತುಕೊಂಡಿದ್ದರೆಂಬುದು ನಿರ್ವಿವಾದವಾದ ಸಂಗತಿ.

'ಮಗುವಿನ ಕೂಗು' ಪುಸ್ತಕದಲ್ಲಿಯ 'ನಾಯಿ,' 'ಗಜ್ಜುಗದಾಟ,' 'ಲಚ್ಚಿಯ ಹೃದ,' 'ಆಚಾರ್ರು, ತಟ್ಟು,' 'ಜಾಂಬುವಂತ'—ಇವೆಲ್ಲ ಕವಿತೆಗಳೂ ಹಳೆಯ ಕವಿತೆಗಳ ದಾರಿಯಿಂದಲೆ ಹೊರಟಂತಹವು. ಆದುದರಿಂದ ಮಕ್ಕಳು ಇವುಗಳನ್ನು ಅಕ್ಕರೆಯಿಂದ ಕಲಿತುಕೊಳ್ಳಬಹುದು. ಹೊಸ ಬಗೆಯವಾದರೂ ಎಳಸಾದ ಭಾವಗಳನ್ನು ಬಣ್ಣಿಸಿದ 'ಮಗುವಿನ ಕೂಗು,' 'ಹುಡುಗರು,' 'ನಂಗೊತ್ತಿಲ್ಲ,' 'ಕತ್ತೆ,' 'ಡಾಢಿವಿಶಾ ಡಾಮ ಢಂ ಢಂ'—ಈ ಕವಿತೆಗಳನ್ನು ಕೇಳಿಯೂ ಕಿರಿಯರು ಆನಂದಿಸಬಹುದು. ಆದರೆ 'ಬುದ್ಧಿವಂತ,' 'ನಾವೆಲ್ಲರು ಒಂದೆ,' 'ಮುತ್ತಿನ ಸೆಟ್ಟಿ,' 'ಜನುಮ ದಿನ,' 'ರೋಜೀ ಬಾಬು' ಮೊದಲಾದ ಕವಿತೆಗಳು ಮಕ್ಕಳ ಮನವನ್ನು ಅದೆಷ್ಟು ಮಟ್ಟಿಗೆ ಹಿಡಿಯಬಹುದು ಎಂಬುದನ್ನು ಹೇಳಲು ಬಾರದು. ಇನ್ನು, 'ಪ್ರತುಮೆ,' 'ಬೀಸಣಿಗೆ,' 'ದೂರ,' 'ಕರೆ,' 'ಆದಿತ್ಯವಾರ' ಮೊದಲಾದ ಕವಿತೆಗಳು ಮಕ್ಕಳ ಭಾವನಾ ಶಕ್ತಿಯ ಮೇರೆಯನ್ನು ಏರಿದುವುಗಳೆಂದು ಹೇಳಿದರೆ ತಪ್ಪಾಗಿ ತೋರದು. ಇವುಗಳಲ್ಲಿ ಬಲಿತ ಭಾವದ ಮನುಷ್ಯನು ತನ್ನ ಎಳೆಯತನದ ಭಾವನೆಗಳನ್ನು ನೆನೆದುಕೊಂಡು ಬರೆದಿರುವನೆಂಬುದು ಕಂಡುಬರಬಹುದಾಗಿದೆ.

ಛಂದೋರೀತಿಯಿಂದ ನೋಡಿದಲ್ಲಿ ಈ ಪುಸ್ತಕದಲ್ಲಿಯ ಒಂದೆರಡು ಕವಿತೆಗಳನ್ನು ಬಿಟ್ಟು ಇನ್ನುಳಿದುವುಗಳೆಲ್ಲವೂ ಮಕ್ಕಳ ಮನಸ್ಸನ್ನೆಳೆಯುವ ಧಾಟಿಯಲ್ಲಿಯೇ ಇವೆ; ಎಲ್ಲವೂ ಹೊಸ ಬಗೆಯ ವೃತ್ತಗಳು. ಅವುಗಳಲ್ಲೆಲ್ಲ

ನಾದದ ಮಾಧುರ್ಯವಿದೆ, ಶಬ್ದದ ಸಂಗೀತವಿದೆ. ಪದಗಳ ಕುಣಿತವಿದೆ, ಕವಿತೆಗಳಲ್ಲಿ ಉಪಯೋಗಿಸಿದ ಭಾಷೆಯೆಲ್ಲವೂ ಹೊಸಗನ್ನಡ; ಅದರಲ್ಲಿಯೂ ಹೆಚ್ಚಾಗಿ ಬಳಕೆಯ ಭಾಷೆಯೇ ಇದೆ. ಆದರೆ ಅರ್ಥವನ್ನು ಸ್ಫುಟವಾಗಿ ಕಾಣಿಸದಂತಹ ಭಾಷೆಯ ತೊಡಕುಗಳು ಅನೇಕ ಕಡೆಗೆ ಇವೆ: ಉದಾಹರಣೆಗಾಗಿ ಇಲ್ಲಿ ಕೆಲವು ಪದ್ಯಭಾಗಗಳನ್ನು ಕೊಡುವೆನು. ಮಕ್ಕಳಿಗೆ ಇವುಗಳ ಅರ್ಥವು ಸುಲಭವಾಗಿ ಆಗಬಹುದೇ?

೧. ಧನಿ ಧನಿ ಭೇದಿಸಿ ಪೇಳುವನವ್ವ (ಪುಟ ೨)

೨. ಆಶೆಯು ಸುಡುತಿದೆ ಕಾಯುತಿದೆ
ದೋಷದೃಕ್ಕೆಂಬಿವು ಬೇಯುತಿವೆ
ಮೋಸಕಿಚ್ಚೆಂಬಿವು ಹಾರುತಿವೆ
ದೇಶದೊಳಂತರ ದೇಶದೊಳು (ಪುಟ ೧೦)

೩. ಹರಿಗೊಲವನು ತೊರೆಯು ಹಂಸೆ (ಪುಟ ೧೬)

೪. ಕನಸಲೆಂದು ಕಾಣದ ಕಿನಸು ಸೊಗಸು ನೆಕ್ಕಲು
ಕಣಕಣೆನುತಲಾಡುವ ಧಣಿಯು ಮಗಳ ಕೈಗಳು (ಪುಟ ೧೮)

೫. ನೀ ಕೇಳು ಕಂದಯ್ಯ ಇಂದಿನೀ ದಿವಸ
ಸಾಕುವನು ನಿಮ್ಮನ್ನು ಪುಟ್ಟಹನು ಕಂದ (ಪುಟ ೨೧)

೬. ಬಾಲ ಶಾಲೆಗಡರದೆ ಕಾಲನಿಟ್ಟು ನೀರಲಿ
ಬಾಳನೆಂದ ಜೋಡಲಿ ಹಾಳು ರೋಗವುಂಬನು (ಪುಟ ೧೬)

ಇವೇ ಮೊದಲಾದುವುಗಳಲ್ಲದೆ 'ಮುತ್ತಿನ ಸೆಟ್ಟಿ,' 'ರೋಜೀಬಾಬು' ಎಂಬುವು ಕಿರಿ ಹಾಡುಗಳಾದರೂ ಅವುಗಳ ಅರ್ಥವನ್ನು ಕಂಡುಹಿಡಿಯಲು ಎಂತೆಂತಹವರಿಗೂ ಕೊಂಚ ತಲೆಯನ್ನು ಕೆರೆದುಕೊಳ್ಳಬೇಕಾಗುವುದು.

'ಪ್ರತುಮೆ' ಎಂಬ ಕವಿತೆಯಲ್ಲಿ (ಪುಟ ೭)—



ಸಕ್ಕರೆ ಕಜ್ಜೂರ ದ್ರಾಕ್ಷಿ ಫುಟಾಣಿ
ಮಿಕ್ಕಿಹ ಸಿಹಿ ಸುಖದಿನಿಸೆಲ್ಲವೆಲ್ಲ
ಸೊಕ್ಕಿದ ಸಿಂಗಿಯ ಹಾಲೊಳು ಕಲಸಿ
ಅಕ್ಕರ ಮಕ್ಕಳ ಮಿದ್ದು ಮಾಡುವರೈ

ಇದರಲ್ಲಿಯ 'ಸಿಂಗಿ' ಎಂಬುದಕ್ಕೆ ಅರ್ಥವೇನಿರಬಹುದು? ಸಿಂಹಿಣಿಯೆಂಬುದರ ತದ್ಭವವಿರಬಹುದೋ? ಸಿಂಗಿಯೆಂದು ಕನ್ನಡದಲ್ಲಿ ವಿಷಕ್ಕೆ ಹೇಳುವರು; ಅದೇನೂ ಇರಲಿಕ್ಕಿಲ್ಲ. ಸಿಂಹಿಣಿಯೆಂದೇ ಇಟ್ಟುಕೊಂಡಲ್ಲಿ ಅದರ ಹಾಲಲ್ಲಿ ಕಲಸುವುದರ ಔಚಿತ್ಯವೇನೋ ಸರಿಯಾಗಿ ತಿಳಿಯದು. 'ಹಾಟಕಿನಾ ಹಾವು ಢಂ ಢಂ' ಎಂಬ ಪದ್ಯಗಳಲ್ಲಿಯ "ಭಾಪ್ರ"(?)ದ "ಶ್ರೀ ಗಣಾಧೀಶನು" ಪ್ರಾಸದ ಅನುಕೂಲತೆಗಾಗಿಯೆ "ಉರುಟು ಕಡುಬ" ತೆಗೆದುಕೊಂಡು ಬಂದನೋ ಏನೋ?

ಅಲ್ಲದೆ "ಟುರುಪುಟು ಪುರುಸೂರು ಶ್ರಾವಣೇಧಾರಸಂತು" ಎಂಬ ಅದೇ ಪದ್ಯದ ಭಾಗವು ಅರ್ಥಕ್ಕಾಗಿ ಹಿರಿಯರನ್ನೂ ಸಹ ವೇಳೆ ಹಿಡಿದು ನಿಲ್ಲಿಸುವುದು. 'ರೋಜೀ ಬಾಬು' (ಪುಟ ೨೩) ಎಂಬ ಕವಿತೆಯಲ್ಲಿ "ಬಳ್ಳಿಬಳ್ಳಿ ಕೀರ್ತಿಯ ಕೊಳ್ಳೆ ಯಿಟ್ಟನಾತನು" ಎಂದಿದೆ. ಕೀರ್ತಿಯ ಸುಲಿಗೆ ಮಾಡಿ ಸೆಳೆದು ತಂದಿದ್ದರೆ ಅದು ತನ್ನ ಪತ್ತಿರದಲ್ಲಿಯೆ ಉಳಿದು ಕೀರ್ತಿಸಂಪನ್ನನಾಗಬಹುದು. ಇದು ತಿಳಿಯದೆ ರೋಜೀ ಬಾಬುವು ಕೀರ್ತಿಯ ಕೊಳ್ಳೆಯಿಟ್ಟು ಬಿಟ್ಟನೋ ಏನೋ! ಕೊಳ್ಳೆಯಿಟ್ಟ ಮೇಲೆ ಕೀರ್ತಿ ದೊರೆಯುವ ಬಗೆ ಹೇಗೆ? 'ದೂರ' (ಪುಟ ೨೪) ಎಂಬ ಕವಿತೆ ಯಲ್ಲಿ ಮಗುವು ತಾಯಿಗೆ, "ಮರದ ಪೂಥಳಿಯಾಗು ಇರಿಸುವೆ ಕಿಸೆಯೊಳಗೆ" ಎಂದು ಹೇಳುವನು. ಇಲ್ಲಿ "ಪೂಥಳಿ" ಎಂಬ ಪದಕ್ಕೆ ಬೇಗನೆ ಅರ್ಥವೇ ಆಗು ವುದಿಲ್ಲ; ಸಾಲದುದಕ್ಕೆ "ಮರದ" ಎಂದು ಹಿಂದೆ ಇರುವುದರಿಂದ "ಮರದ ಹೂ ತಳಿರು" ಎಂದು ಅರ್ಥವಿರಬಹುದೇನೋ ಎಂಬುದಾಗಿ ಕಲ್ಪನೆ ಬರುವಂತಿದೆ; "ಮರದ ಪುತ್ಥಳಿ" (ಮರದ ಬೊಂಬೆ) ಎಂದು ಬರೆದಿದ್ದರೆ ಅರ್ಥವೂ ಸುಲಭ ವಾಗುತಿದ್ದತು, ಛಂದಸ್ಸಿಗೂ ತೊಂದರೆ ಬರುತಿರಲಿಲ್ಲ. ಈ ತೆರದ ಅನೌಚಿತ್ಯ ಗಳಿಗೂ ಅಲ್ಲಲ್ಲಿ ಎಡೆದೊರೆತಿದೆ.

ಮಕ್ಕಳಿಗೆಂದು ಬರೆಯುವ ಗ್ರಂಥಗಳ ಭಾಷೆಯು ತಿಳಿಯಾಗಿಯೂ ಬಳಕೆಯ ದಾಗಿಯೂ ಇರಬೇಕು. ಆದರೆ ಹೊಸ ಹೊಸ ಶಬ್ದಗಳ ಪರಿಚಯಮಾಡಿಕೊಡ ಬೇಕಾಗಿದ್ದಲ್ಲಿ, ಅವುಗಳ ಶುದ್ಧ ರೂಪಗಳನ್ನೇ ಉಪಯೋಗಿಸುವುದು ಉಚಿತ ವೆಂದು ತೋರುವುದು; ಸಾಧುವಾದ ಪದಪ್ರಯೋಗಗಳನ್ನು ಮಾಡುವುದೇ ಸರಿಯೆಂದೆನಿಸುವುದು. ಪ್ರಾಯಶಃ ಈ ಕವಿತೆಗಳ ಭಾಷೆಯು ಈ ರೀತಿಯನ್ನು ಅನುಸರಿಸಿಯೇ ಇರುವುದಾದರೂ 'ತಿರಕಪ್ಪ,' 'ಆಚಿಗೆ,' 'ಬಡಿಕೆ,' 'ಆಚಾರ್ರ ತಟ್ಟನು,' 'ಬಾಸಕೆ,' 'ಕುಂತಿತು,' 'ಪುಸ್ತ್ತಕ' ಮೊದಲಾದ ಪದಗಳು ಸಾಧುವಾದುವುಗಳಲ್ಲವೆಂದೇ ಹೇಳಬೇಕಾಗುವುದು. 'ವೈಥೂರ್ಯ' (ಪುಟ ೬), 'ಧಣಿದು' (ಪುಟ ೧೧), ಫೌಳಿ (ಪುಟ ೧೭), 'ಸೃಷ್ಠಿ' (ಪುಟ ೧೮), 'ಮಧುಮಗ' (ಪುಟ ೨೧)—ಈ ಪದಗಳಲ್ಲೆಲ್ಲ ಅದೇತಕ್ಕೋ ಅಲ್ಪಪ್ರಾಣದ ಸ್ಥಳವನ್ನು ಮಹಾ ಪ್ರಾಣವು ಕಿತ್ತುಕೊಂಡುಬಿಟ್ಟಿದೆ.

ಮಕ್ಕಳಿಗಾಗಿ ಹೊರಡುವ ಗ್ರಂಥಗಳು ಎಲ್ಲ ಮೆಯ್ಯಿಂದಲೂ ಅಂದವಾಗಿರ ಬೇಕೆಂಬ ಭಾವನೆಯಿಂದ ಈ ಗ್ರಂಥದಲ್ಲಿದ್ದ 'ತಪ್ಪುಗಳೇನೋ' ಎಂಬ ಸಂದೇ ಹಕ್ಕೆ ಆಸ್ಪದಕೊಡುವ ಕೆಲವು ಮಾತುಗಳನ್ನಿಲ್ಲಿ ನಸು ಹೆಚ್ಚಾಗಿ ಎತ್ತಿ ತೋರಿಸ ಲಾಗಿದೆ. ಆದರೆ ತಪ್ಪುಗಳಿಗಿಂತ ಅದೆಷ್ಟೋ ಮಡಿ ಹೆಚ್ಚಾಗಿ ಇರುವ ಒಪ್ಪು ಗಳುಂಟಿದರಲ್ಲಿ. ಆದುದರಿಂದಲೆ ಮಕ್ಕಳ ಕೈಯಲ್ಲಿ ಕೊಡಲು ತಕ್ಕುದೂ ಆಗಿದೆ ಇದು. ಕನ್ನಡಿಗರೆಲ್ಲರೂ ಈ ಪುಸ್ತಕವನ್ನು ಪಡೆದು ತಮ್ಮ ಕಿರಿಯರಿಗೆ ಕೈಗಾಣಿಕೆ ಕೊಡಲಿ, ಶ್ರೀ ಹೊಯಿಸಳರು ಇನ್ನೂ ಹೆಚ್ಚು ಹೆಚ್ಚಾಗಿ ಇಂತಹ ಪುಸ್ತಕಗಳನ್ನು ಬರೆದು ಮಕ್ಕಳ ಸಾಹಿತ್ಯವನ್ನು ಬಳೆಯಿಸಲಿ ಎಂಬುದೇ ನಮ್ಮ ಬಗೆಯ ಹಾರಯಿಕೆ.

**ಬೆಟಗೇರಿ ಕೃಷ್ಣಶರ್ಮಾ.**

## ೩. ನವಜೀವನ

ಮಾಸ ಪತ್ರಿಕೆ

ಪ್ರಕಾಶಕರು.—ಬಿ. ಸಿ. ಪುರಾಣಿಕರು, ಬಬಲೇಶ್ವರ.

ಡೆಮ್ಮೈ ಅಷ್ಟಪತ್ರ ೪೩+೪; ಹಿತಚಿಂತಕ ಪ್ರಿಂಟಿಂಗ ಪ್ರೆಸ್, ಬಿಜಾಪುರ

ವರ್ಷ ೧, ಸಂಚಿಕೆ ೨: ಡಿಸೆಂಬರು ೧೯೩೮

ವಾರ್ಷಿಕ ಚಂದಾ ರೂ. ೨-೧೨-೦.

ಈ ಮಾಸಪತ್ರಿಕೆಯ ಸಂಪಾದಕರು ಈ ಸಂಚಿಕೆಯ ಮುನ್ನುಡಿಯಲ್ಲಿ "ನಿದ್ರಾದೇವಿಯ" ವಶರಾಗಿರುವ "ಜನರನ್ನು ಎಚ್ಚರಿಸಿ ಆಧುನಿಕ ಪರಿಸ್ಥಿತಿಯ ಪರಿಚಯವನ್ನು ಮಾಡಿಕೊಟ್ಟು ಹೆಗ್ಗುರಿಯನ್ನು ಸಾಧಿಸಲಿಕ್ಕೆ ಹಾದಿ ಹಿಡಿದ ಹಿರಿಯಾಳುಗಳ ಹೆಜ್ಜೆಗುಂಟ ನಡೆಯಿರೆಂದೂ ಅವರೊಡನೆ ಸಂಗಡಿಗನಾಗಿ ನಡೆಯುವದೂ ಎಚ್ಚೆತ್ತ ಬಾಂಧವರಿಗೆಲ್ಲ ಹೊಸ ದಿನದ ಹೊಸ ಹಾದಿಯನ್ನು ತೋರಿಸಲಿಕ್ಕೆ ಪ್ರಯತ್ನಮಾಡುವದೂ ಕರ್ನಾಟಕದಲ್ಲಿ 'ನವಜೀವನ'ವನ್ನು ತುಂಬಿ ನವ ಕರ್ನಾಟಕವನ್ನುಂಟುಮಾಡುವದೇ" ತಮ್ಮ ಹೆಗ್ಗುರಿಯಾಗಿದೆಯೆಂದೂ, "ಹೊಸಗನ್ನಡದ ಹೊಸ ರುಚಿಯು" ಸೇರದಿರುವ "ಜನರೊಲವನ್ನು ಹೊಸಗನ್ನಡದ ಕಡೆಗೊಲಿಸಿ ಎಲ್ಲರಲ್ಲಿಯೂ ನಾಡನುಡಿಯ ಸಲುವಾಗಿ ಅಭಿರುಚಿಯನ್ನು ಹುಟ್ಟಿಸು"ವದು ತಮ್ಮ "ಹಂಬಲದ ಹವಣಿಕೆಯಾಗಿದೆ" ಎಂದೂ, "ಐತಿಹಾಸಿಕ ವಿಷಯಗಳ ವಿವೇಚನೆಯಿಂದ ಇತಿಹಾಸ ಪ್ರಿಯರಿಗೂ, ರಾಷ್ಟ್ರೀಯ ಪಕ್ಷದವರಿಗೂ,........ಧಾರ್ಮಿಕ ಚಲನ ವಲನಗಳನ್ನು ಮಾರ್ಮಿಕ ರೀತಿಯಿಂದ ಪರಿಶೀಲಿಸಿ ಜನರ ಮುಂದಿಡುವದರಿಂದ ಧಾರ್ಮಿಕರಿಗೂ, ನೀತಿಬೋಧಕ ಸಣ್ಣ ದೊಡ್ಡ ಕಥೆ ಕಾದಂಬರಿಗಳನ್ನು ಕೊಡುವದರಿಂದ ನೀತಿವಂತರಿಗೂ ಬರಹಗಾರರಿಗೂ, ಇದೇ ಅರಳಿದ ಕವಿತಾ ಕುಸುಮಗಳನಾಯ್ದಿಡುವದರಿಂದ........ರಸಿಕರಿಗೂ, ಕೃಷಿಕರ್ಮ, ಹಳ್ಳಿಯ ಪರಿಸ್ಥಿತಿ ಮೊದಲಾದ ವಿಷಯಗಳನ್ನು ಮುಂದಿಡುವದರಿಂದ ನಮ್ಮ ಹಳ್ಳಿಯ ಬಂಧುಗಳಿಗೂ. ಇದರಂತೆಯೇ ಸರ್ವರಿಗೂ ಉಪಯೋಗವಾದೀತೆಂದು 'ತಮ್ಮ' ದೃಢವಾದ ನಂಬಿಗೆಯಿದೆ" ಎಂದೂ ಹೇಳುತ್ತಾರೆ. ಇಷ್ಟು ವಿಷಯಗಳನ್ನು ತಿಳಿಸಬೇಕೆಂದು ಸಂಕಲ್ಪಮಾಡಿಕೊಂಡಿರುವ ಈ ಸಂಪಾದಕರ ಉತ್ಸಾಹವು ಸ್ತೋತ್ರಾರ್ಹವಾದುದೇ ಸರಿ.

ಪ್ರಕೃತ ಸಂಚಿಕೆಯಲ್ಲಿ ಗೋರಕ್ಷಣೆಯ ವಿಷಯವಾದ ಲೇಖನದ ಮೊದಲನೆಯ ಭಾಗವೂ, ಲೋಕಲ ಬೋರ್ಡುಗಳ ಕರ್ತವ್ಯ ವಿಷಯವಾದ ಲೇಖನವೂ, ಕಲಚೂರ್ಯರ ವಿಷಯವಾದ ಲೇಖನದ ಮೊದಲನೆಯ ಭಾಗವೂ, 'ಸುಗುಣನ ಮರಣ'ದ ಉದ್ಗಾರಗಳುಳ್ಳ ಲೇಖನವೂ, ಭಾರತೀಯ ಸ್ತ್ರೀಯರ ದುರ್ದೈವದ ವಿಷಯವಾದ ಲೇಖನವೂ, ಹಳ್ಳಿಯ ಒಕ್ಕಲಿಗರು ಸುಧಾರಿಸಬೇಕಾದರೆ ಏನುಮಾಡಬೇಕೆಂಬ ಲೇಖನವೂ, ಕೆಲವು ಹೊಸ ಮಾದರಿಯ ಕವಿತೆಗಳೂ, ಬಿಡಿನುಡಿಗಳೂ,

'ಚಂದ್ರಗಿರಿ' ಎಂಬ ಐತಿಹಾಸಿಕ ನಾಟಕದ ಒಂದು ಭಾಗವೂ ಇವೆ. ಲಾಲಾ ಲಜಪತರಾಯರ ಭಾವಚಿತ್ರವೊಂದಿದೆ.

ಕನ್ನಡ ನಾಡಿನಲ್ಲಿ ಇಂತಹ ಪತ್ರಿಕೆಗಳು ದಿನ ದಿನಕ್ಕೆ ಹೆಚ್ಚುತ್ತಿರುವುದು ಸಂತೋಷಕರವಾದ ಸಂಗತಿಯೇ ಸರಿ. ಇವು ಜನರ ಜ್ಞಾನಾರ್ಜನೆಗೂ ದೇಶ ಸೇವಾ ತತ್ಪರತೆಗೂ ನೆರವಾಗಲಿ ಎಂಬುದೇ ನಮ್ಮ ಹಾರೈಕೆ. **ಬೆ. ವೆಂ.**

---

## ೪. ರತ್ನಗಿರಿ

ಮಾಸ ಪತ್ರಿಕೆ

ಸಂಪಾದಕರು.—ಕನ್ನೆಲ್ಲಿ ಮುನಿರೆಡ್ಡಿಯವರು, ಹೊಸೂರು.

ಡೆಮ್ಮೈ ಅಷ್ಟಪತ್ರ ೩೨; ಬೆಂಗಳೂರು ವ್ಯಾಯಾಮ ಮುದ್ರಣಾಲಯದಲ್ಲಿ ಮುದ್ರಿತವಾಗಿದೆ

**ಸಂಪುಟ ೧, ಸಂಚಿಕೆ ೧: ಜನವರಿ ೧೯೩೨**

**ವಾರ್ಷಿಕ ಚಂದಾ ರೂ. ೨.**

ಈ ಮಾಸ ಪತ್ರಿಕೆಯು "ರಡ್ಡಿಗಳಿಗಾಗಿ, ರಡ್ಡಿಗಳಿಂದಲೇ, ರಡ್ಡಿ ಸಂಘದ ಮೂಲಕ ಪ್ರಚುರಪಡಿಸಲ್ಪಡುತ್ತದೆ"; "ದೇಶೋನ್ನತಿ ಸಮಾಜೋನ್ನತಿಗಳನ್ನು ದೃಷ್ಟಿಪಥದಲ್ಲಿಟ್ಟುಕೊಂಡು ಮುಂದುವರಿದಿರು"ವಂತೆ ತಿಳಿಸಿದೆ. ಇದು "ಸಚಿತ್ರ ಮಾಸಪತ್ರಿಕೆ"ಯೆಂದು ತಿಳಿಸಿರುವುದಾದರೂ ಮೊದಲನೆಯ ಪುಟದಲ್ಲಿ ಸರಸ್ವತಿಯ ಚಿತ್ರವೊಂದು ವಿನಾ ಮತ್ತಾವ ಚಿತ್ರವೂ ಇರುವುದಿಲ್ಲ; ಮುಂದಣ ಸಂಚಿಕೆಗಳಲ್ಲಿ ಬರಬಹುದೇನೊ!

ಪ್ರಕೃತ ಸಂಚಿಕೆಯಲ್ಲಿ, ರತ್ನಗಿರಿ ಸಂದೇಶ, ಸ್ವವಿಷಯ, ರಡ್ಡಿಗಳು ಸೂರ್ಯ ವಂಶದ ಕ್ಷತ್ರಿಯರು, ಅಖಿಲ ಭಾರತ ರೆಡ್ಡಿ ಮಹಾಸಭೆಯು, ಮಹಾತ್ಮಾ ವೇಮಾ ರೆಡ್ಡಿ, ರೆಡ್ಡಿವಂಶ ಪೂರ್ವೋತ್ತರ, ಮುಂಬೈ ಕರ್ನಾಟಕ ರಡ್ಡಿ ವಿ. ಸಾ. ಸಂಘ ವೃತ್ತಾಂತ, ಪ್ರಥಮ ರಡ್ಡಿ ಕವಿಯು, ಜಾತಿ ನಿರ್ಣಯ—ಎಂಬ ಲೇಖನಗಳಿವೆ.

ಈ ಪತ್ರಿಕೆಯು ರೆಡ್ಡಿಗಳಿಗೆ ಮಾತ್ರವಲ್ಲದೆ ಇತರರಿಗೂ ಉಪಯೋಗವಾಗಿ ಎಲ್ಲ ಪಂಗಡದವರಲ್ಲಿಯೂ ಮೈತ್ರೀಭಾವವನ್ನುಂಟುಮಾಡಲು ಪ್ರಯತ್ನಿಸುವು ದೆಂದು ಹಾರೈಸುತ್ತೇವೆ.

**ಬೆ. ವೆಂ.**

---

## ೫. ನಿಂದಾ ಪ್ರಭಾವ ನಾಟಕ

## ಅಥವಾ, "ಮುದುಕ ಗಂಡ ಚಿಕ್ಕ ಹೆಂಡತಿ" ನಾಟಕ

ಲೇಖಕರು.—ಗ. ಹು. ಹೊನ್ನಾಪುರ ಮಠ, ಧಾರವಾಡ.

ಕ್ರೌ೯ ಅಷ್ಟಪತ್ರ ಪುಟಗಳು ೧೫೧; ಶ್ರೀ ವಾಗ್ದೇವೀ ಗ್ರಂಥಮಾಲೆ, ಧಾರವಾಡ; ಪುಷ್ಪ ೫

**ಸುಧಾರಿಸಿದ ಎರಡನೆಯ ಆವೃತ್ತಿ**: ೧೯೩೪; ಬೆಲೆ ೧೨ ಆಣೆ.

ಇದು ಷೆರಿಡನ್ ಕವಿಯಿಂದ ಇಂಗ್ಲಿಷಿನಲ್ಲಿ ರಚಿತವಾದ 'ಸ್ಕೂಲ್ ಫಾರ್ ಸ್ಕ್ಯಾಂಡಲ್' ಎಂಬ ನಾಟಕದ ಅನುವಾದ. ಇದರಲ್ಲಿ, "ದುಷ್ಟರು ಶಿಷ್ಟರನ್ನು

ಹೇಗೆ ನಿಂದಿಸುತ್ತಾರೆ; ಮುಪ್ಪಿನ ಕಾಲದಲ್ಲಿ ಲಗ್ನಮಾಡಿಕೊಂಡ ಗೃಹಸ್ಥರು ಎಷ್ಟು ದುಃಖವನ್ನೂ ಅವಮರ್ಯಾದೆಯನ್ನೂ ಅನುಭೋಗಿಸುತ್ತಾರೆ; ತರುಣರು ದುಷ್ಟ ಸಂಗತಿಯಿಂದ ದುರ್ವ್ಯಸನಗಳನ್ನು ಕಲಿತು, ತಮ್ಮಲ್ಲಿದ್ದ ಹಣವನ್ನು ಹಾಳುಮಾಡಿಕೊಂಡು, ಸಾವುಕಾರರ ಹತ್ತರ ಸಾಲಮಾಡಿ ಕಷ್ಟಕ್ಕೆ ಹೇಗೆ ಗುರಿಯಾಗುತ್ತಾರೆ; ಧರ್ಮಿಷ್ಠರಾದ ಆಪ್ತ ಬಾಂಧವರು ಅವರನ್ನು ಹೇಗೆ ಸನ್ಮಾರ್ಗಕ್ಕೆ ತರುತ್ತಾರೆ; ಉದ್ಯೋಗವಿಲ್ಲದ ಮತ್ತು ಮರ್ಯಾದೆಗೆಟ್ಟ ಜನರು ಪರ ನಿಂದೆಯನ್ನು ಮಾಡುತ್ತ ಹೇಗೆ ಕಾಲಕ್ರಮಣ ಮಾಡುತ್ತಾರೆ; ಅನುಭವವಿಲ್ಲದ ಹೆಂಗಸರನ್ನು ದುಷ್ಟ ಜನರು ಹೇಗೆ ಮೋಸಗೊಳಿಸುತ್ತಾರೆ; ಪ್ರಾಮಾಣಿಕ ಸೇವಕರು ತಮ್ಮ ಧನಿಯರ ಹಿತವನ್ನು ಮಾಡಲಿಕ್ಕೆ ಹೇಗೆ ತತ್ಪರರಿರುತ್ತಾರೆ" —ಎಂಬಿವೇ ಮೊದಲಾದ ಸಂಗತಿಗಳು ವಿವೇಚಿಸಲ್ಪಟ್ಟಿರುತ್ತವೆ. ಆದರೆ ಇಷ್ಟು ಸಂಗತಿಗಳಿದ್ದರೂ ಅನುವಾದಕರು ಎರಡನೆಯ ಸಂಗತಿಯನ್ನೇ ಮುಂದು ಮಾಡಿಕೊಂಡು ಈ ನಾಟಕಕ್ಕೆ "ಮುದುಕ ಗಂಡ ಚಿಕ್ಕ ಹೆಂಡತಿ" ಎಂಬ ವಿಕಲ್ಪ ನಾಮಧೇಯವನ್ನಿಟ್ಟಿದ್ದಾರೆ. ಕಾವ್ಯಗಳ ಹೆಸರಿಡುವುದೇನು ಸುಲಭವಲ್ಲ; ಅವು ತುರಾಯಿ ಕಟ್ಟಿದಂತೆ, ಅಂದವಾಗಿ ಪುಟ್ಟದಾಗಿ ವಯೋರೂಪ ಸಂದರ್ಭಗಳಿಗೆ ಉಚಿತವಾಗಿ, ಹಿಡಿತಕ್ಕೆ ಸಿಕ್ಕುವುದಾಗಿ ಇರಬೇಕು. ಆದುದರಿಂದ ಮೂಲದ ಹೆಸರನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು ಹೊರಟರೆ "ನಿಂದಾಪ್ರಭಾವ ನಾಟಕ"ವೆಂಬುದು ಅತೃಪ್ತಿಕರವಾಗಿಯೂ, "ಮುದುಕ ಗಂಡ ಚಿಕ್ಕ ಹೆಂಡತಿ" ಎಂಬುದು ಅದಕ್ಕಿಂತ ಅತೃಪ್ತಿಕರವಾಗಿಯೂ ಇದೆ; ಇವೆಲ್ಲಕ್ಕಿಂತ ಮೊದಲನೆಯ ಮುದ್ರಣದಲ್ಲಿದ್ದ "ನಿಂದಕರ ನಡೆವಳಿ" ಎಂಬುದೇ ಉತ್ತಮವಾಗಿದ್ದಂತೆ ತೋರುತ್ತದೆ. ಮೂಲಕಾರನು ಇಟ್ಟ ಹೆಸರಿನಲ್ಲಿ ಬೇಕೆಂದು ಪ್ರಾಸವನ್ನು ಹಾಕಿರುವಂತಿದೆ; ಅದರಲ್ಲೊಂದು ಬಗೆಯಿದೆ. ಮ॥ ಕೈಲಾಸಂ ಇವರು ತಮ್ಮ ಸಾಮಾಜಿಕ ನಾಟಕಗಳಿಗೆ ಇಟ್ಟಿರುವ ಹೆಸರುಗಳನ್ನು ನೋಡಿದರೂ ಇದು ವ್ಯಕ್ತವಾಗುವುದು ;—"ಬಂಡ್ವಾಳವಿಲ್ಲದ ಬಡಾಯಿ," "ಬೆಂಡೋಲೆ ಫಂಡು," "ಹಾರ್ವ ಕೆಟ್ಟದ್ದು ಹೊನ್ನಿಂದ"—ಇತ್ಯಾದಿ.

ಈ ನಾಟಕದ ವಸ್ತು ಪಾತ್ರ ರಸ ವಿವೇಚನೆ ಮಾಡುತ್ತ ಹೋದರೆ, ಅದು ಷೆರಿಡನ್ ಕವಿಯ ಗ್ರಂಥದ ವಿಮರ್ಶೆಯಾಗುತ್ತದೆ; ಅದು ನಮ್ಮ ಪ್ರಕೃತ ವಾದ ಉದ್ದೇಶವಲ್ಲವಾದುದರಿಂದ ಆ ಭಾಗವನ್ನು ಬಿಟ್ಟುಬಿಡುವೆವು. ವಿಷಯವು ಸಾಮಾಜಿಕವಾಗಿದೆ; ಇಂಗ್ಲಿಷ್ ಸಂಸ್ಕೃತಿ ಸಂಪ್ರದಾಯಗಳೂ ನಮ್ಮ ಸಂಸ್ಕೃತಿ ಸಂಪ್ರದಾಯಗಳೂ ಭಿನ್ನವಾಗಿರುವುದರಿಂದ ಇಂಗ್ಲಿಷ್ ಸಾಮಾಜಿಕ ಗ್ರಂಥಗಳನ್ನು ಅಕ್ಷರಶಃ ಭಾಷಾಂತರಮಾಡುವುದು ಅಸಾಧ್ಯ; ನಮ್ಮ ಸಮಾಜಕ್ಕೆ ಸರಿಹೊಂದಿಸಿಕೊಂಡು ಅನುವಾದಮಾಡುವುದೂ ಕಷ್ಟ; ಆದುದ ರಿಂದ ಮ॥ ಹೊನ್ನಾಪುರಮಠರೂ ಈ ನಾಟಕದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ— ಗಂಡು ಪಾತ್ರವನ್ನು ಹೆಣ್ಣು ಮಾಡಿದ್ದಾರೆ; ಸಮಾಜ ಸುಧಾರಕರನ್ನು ತಂದುಹಾಕಿದ್ದಾರೆ; ಆದರೂ ಇದರಲ್ಲಿ ಬರತಕ್ಕ ಗಂಡಸರು

ಹೆಂಗಸರ ಧಾರಾಳವಾದ ಮಾತು ಕಥೆ ವ್ಯವಹಾರಗಳು, ಪ್ರೌಢ ವಿಧವಾ ವಿವಾಹಗಳು, ನಿಂತ ಕಡೆ ಒಂದು ಕ್ಷಣದಲ್ಲಿ ಮದುವೆ, ಈ ಮದುವೆಯಲ್ಲಿ ಓಡಾಡಿ ಆಳಿಗೆ ದಣಿವು–ಇವೆಲ್ಲ ಹೊಸದಾಗಿ ಹಿಂದೂ ಧರ್ಮಕ್ಕೆ ಸೇರಿ, ಸೀರೆ ಪಂಚೆಗಳನ್ನುಟ್ಟಿರುವ ಯೂರೋಪಿಯನ್ನರಂತಿವೆ. ಮೂಲದಲ್ಲಿ ತಿಳಿಯಾಗಿ ಕಲ ಕಲನೆ ಪ್ರವಹಿಸುವ ಸಂಭಾಷಣೆಗಳೂ ಹಾಸ್ಯವೂ ಅನುವಾದದಲ್ಲಿ ಹೆತ್ತುಕೊಂಡಿವೆ; ಕೆಲವು ಕಡೆಯಲ್ಲಿ ಅನಾವಶ್ಯಕವಾಗಿ ಹರಡಿ ಗಂಭೀರದ ಮೇರೆಯನ್ನು ಮೀರಿವೆ. ಮೊದಲನೆಯ ಅಂಕದಿಂದ ಕೆಲವು ಉದಾಹರಣೆಗಳು:—

(೧) ಇಂಗ್ಲಿಷ್ ನಾಟಕವು ಹೀಗೆ ಮೊದಲಾಗುತ್ತದೆ:—

Lady Sneer.—The paragraphs, you say, Mr. Snake, were all inserted ?

ಇದಕ್ಕೆ ಬದಲಾಗಿ 'ನಿಂದಾ ಪ್ರಭಾವ ನಾಟಕ'ದಲ್ಲಿ ನಿಂದಾ ದೇವಿಯ ಒಂದು ಸ್ತೋತ್ರವಿದೆ. ನಮ್ಮ ಕನ್ನಡ ಪ್ರಬಂಧ ಪುಸ್ತಕ ಉಪನ್ಯಾಸಾದಿಗಳಲ್ಲಿ —ನಡೆವಳಿಯಲ್ಲಿ ಹೇಗಾದರೂ ಇರಲಿ—ಬಲು ಧರ್ಮ ಕರ್ಮ ವೇದಾಂತಗಳು ಬರುತ್ತವೆ. "ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ............" "ಸಮಸ್ತ ಸೃಷ್ಟಿಯಲ್ಲಿಯೂ ಮಾನವ ಜನ್ಮವೇ ಶ್ರೇಷ್ಠವು............" ಇಂಥ ವಾಕ್ಯಗಳು ನೂರಕ್ಕೆ ತೊಂಬತ್ತು ಕಡೆ ಕಂಡುಬರುತ್ತವೆ. ಇಂಥ ವೇದಾಂತ ಬುದ್ಬುದಗಳು ಕಾವ್ಯಕ್ಕೆ ಜೀವನ ಪ್ರಾಣವಲ್ಲ. ಮೂಲವು ಕತ್ತಲೆಯಲ್ಲಿ ಹರಿತವಾದ ಚೂರಿಯನ್ನು ಮುಂದುಮಾಡಿ ನುಗ್ಗಿದಂತಿದೆ; ಭಾಷಾಂತರವು ಅದರಿಂದ ಅತೃಪ್ತಿಪಟ್ಟು ಅದನ್ನು ಅಲಂಕಾರಮಾಡಲೆಳಸಿ ತುದಿಗೆ ಒಂದು ನಿಂಬೆಯ ಕಾಯನ್ನು ಚುಚ್ಚಿ ಹಿಡಿದುಕೊಂಡು ಬರುವಂತಿದೆ.

(೨)........as many close confinements ಎಂಬುದಕ್ಕೆ ಕನ್ನಡದಲ್ಲಿ, "ಕೆಲವು ಬಾಲ ವಿಧವೆಯರನ್ನು ಜಾರ ಕರ್ಮಕ್ಕೆ ಹಚ್ಚಿ ಆಚಾರ ಕರ್ಮದಿಂದ ಗರ್ಭಿಣಿಯಾದವರನ್ನು ಗುಪ್ತ ಪ್ರಸೂತಿ ಮಾಡಿಸಿ ಶಿಶುಹತ್ಯೆ ಮಾಡಿಸಿದಳು!" ಎಂದಿದೆ. ಇದು ಅನಾವಶ್ಯಕವಾದ ವಿಸ್ತಾರದಿಂದ ಹದಗೆಟ್ಟಿದೆ.

(೩) Wounded myself...... ಎಂಬುದಕ್ಕೆ "ನನ್ನ ಮಾನಭಂಗವನ್ನು ಸಹ ಮಾಡಿದರು" ಎಂಬುದೂ ಹೀಗೆಯೇ. ಈ ಮಾತನ್ನು ಹೇಳುವವಳು ಹೆಂಗಸು!

(೪) Rowley.—What can have happened since yesterday ?

Sir Peter.—A good question to a married man !

ರಾಮ.—ನೀವು ನಿನ್ನೆಯಿಂದ ಯಾಕೆ ಚಿಂತೆಯಲ್ಲಿರುತ್ತೀರಿ?

ಶ್ರೀಪತರಾವ.—ವೃದ್ಧಾಪ್ಯದಲ್ಲಿ ವಿವಾಹಮಾಡಿಕೊಂಡ ಮನುಷ್ಯನಿಗೆ ಒಳ್ಳೆಯ ಪ್ರಶ್ನೆಮಾಡಿದೆ !

ಇಲ್ಲಿ ಇಂಗ್ಲಿಷಿನ ವಾಕ್ಯಗಳಲ್ಲಿ ಬೇಕಾದಷ್ಟು ವ್ಯಂಗ್ಯವಾದ ಕುಹಕವಿದೆ; ಕನ್ನಡ ವಾಕ್ಯಗಳಲ್ಲಿ ಏನು ಹಾಸ್ಯವಿದೆಯೋ, ಶ್ರೀಪತರಾಯನ ಆಶ್ಚರ್ಯತಾನೇ ಏಕೋ ಗೊತ್ತಾಗುವುದಿಲ್ಲ.

ಪ್ರಕೃತ ಗ್ರಂಥವು "ಅನುವಾದ"ವೇ ಹೊರತು "ಭಾಷಾಂತರ"ವಲ್ಲ ವೆಂದು ಸಮಾಧಾನಮಾಡಿಕೊಳ್ಳಬಹುದು. ಆದರೆ ಅನುವಾದವು ಮೂಲದ ಉತ್ತಮಾಂಶಗಳನ್ನು ತುಂಬಿಕೊಳ್ಳದಿದ್ದರೆ ಕೃಶವಾಗಿಹೋಗುವುದು.

ಭಾಷೆಯು ಸಾಮಾನ್ಯವಾಗಿ ಧಾರವಾಡ ಪ್ರಾಂತದಲ್ಲಿ ರೂಢವಾದುದಾಗಿದೆ; ಪ್ರತಿಯೊಬ್ಬರೂ ಅವರವರ ಮಾತಿನಲ್ಲಿ ಬರೆಯುವುದು ಸಹಜವಾದರೂ, ಬಹು ಮಟ್ಟಿಗೆ ಪ್ರಾಂತಿಕ ವೈಲಕ್ಷಣ್ಯ ರಹಿತವಾದ ಮ॥ ಗಳಾದ ಕುರುಡಿ, ಗಳಗನಾಥ ಮುಂತಾದವರ ಗ್ರಂಥಗಳು ಹೆಚ್ಚು ಆದರಣೀಯವಾಗಿರುವಂತೆ ತೋರುತ್ತದೆ. ಧಾರವಾಡದ ಮಾತೆಂದರೇನು? ಅದರ ವೈಲಕ್ಷಣ್ಯಗಳೇನು? ಅವುಗಳು ತಪ್ಪೇ ಸರಿಯೇ? ಏಕೆ? ಅವುಗಳನ್ನು ಪ್ರಯೋಗಿಸುವುದು ಅಥವಾ, ಬಿಡುವುದು ಯುಕ್ತವೇ ಅಯುಕ್ತವೇ ?—ಎಂಬುದು ದೀರ್ಘ ವಿಚಾರ.

ಪ್ರಾಂತಿಕ ಭಾಷೆಯ ವೈಲಕ್ಷಣ್ಯ, ಸ್ವಭಾಷೆಯ ಮಮತೆ ಎಂದು ಎಷ್ಟು ಸಮಾಧಾನಮಾಡಿಕೊಂಡರೂ, ಶ್ರೀಪತರಾಯ, ನಿಂದ್ಯಾತ್ಮಕ, ಪಾಪಭೀರಳು, ಗನ್ನೇದ್ದು, ಅಂಕು, ಮನೋಲ್ಲಾಸ, ತೃಪ್ತಬಡಿಸಿ ಮುಂತಾದ ಹಲವು ಶಬ್ದರೂಪಗಳು ಕಾಲಿಗೆ ಗಾಜು ಹೊಕ್ಕಂತಾಗುತ್ತವೆ.

ಈಚೆಗೆ ಸಾಮಾಜಿಕ ನಾಟಕಗಳಲ್ಲಿ ನೈಸರ್ಗಿಕತೆ ಇರಬೇಕೆಂದು ಎಲ್ಲಾ ಕಟ್ಟುಗಳನ್ನೂ ಹರಿದು ಒಗೆಯುತ್ತಿರುವ ಒಂದು ಭಾವನೆ ಬರುತ್ತಿದೆ. "ವಸ್ತ್ರಾದಿ ಜಾರಿದ್ದೆಲ್ಲಾ ಪರಸೆ", "ನವಿಲು ಕುಣಿದದ್ದೆಲ್ಲಾ ಕುಣಿತ." ಆದರೆ ಜನರೆಲ್ಲಾ ವಸ್ತ್ರಾದಿಗಳಲ್ಲ, ಹಕ್ಕಿಗಳೆಲ್ಲಾ ನವಿಲುಗಳಲ್ಲ. ಈ ಮಾತನ್ನು ನೋಡಿ:—

"ಪ್ರಾಣಸಂಕಟಾಂಗ ನಾಬಹುತಪಾರೆ ರೂಪೇದ ಮುದ್ದರ್ ಮಾಡ್ಯಾಲ್
......ನಮ್ಮ ಹಂತ್ಯಾಕ್ ಒಬ್ಬಾಕಿ ಬಲಕುಂಡ್ ಕೇಳಬೇಕ್........
ಇದು ಚಾಲಿ ನಿಮ್ಮ ಮುಲಖದಾಗ್ ಬಹುರ್ ಅದಾವ್......ನಗ್ನಾ
ಯಿತ ಮುಂದಿ ಉಪ್ಪರ್ ನಿನ್ನ ಕಣ್ಣುಹ್ಯಾಂಗ ಇಲ್ಲಾ!"..........

ಇದು ಯಾವ ದೇವರಿಗೆ ಪ್ರೀತಿ!

ಇದು ಮುಂಬಯಿಯ ಆಡುವ ಮಾತು, ಅನುಭವದ ಸರಿಯೆನ್ನಬಹುದು; ಅಷ್ಟೇ ಅಲ್ಲ, ಸ್ತ್ರೀ ಹೇಗೆ ಬರೆದರೂ ತಪ್ಪು ಎನ್ನಬಹುದು; ಅದೇ ತರ್ಕದ ಮೇಲೆ, ಸಂಸ್ಕೃತ ನಾಟಕದಲ್ಲಿರುವಂತೆ ಹೆಂಗಸರ ಗಂಡಸರ ಮಾತಿಗೆ ವ್ಯತ್ಯಾಸವಿರಬೇಕು, ಕ್ರೈಸ್ತ ಆನೇಕ ನಾಟಕಗಳಲ್ಲಿರುವಂತೆ ಕನ್ನಡ ಇಂಗ್ಲಿಷ್ ಮಾತುಗಳ ಬೆರಕೆ

ಇರಬೇಕು, ಜವಾನನಾದ ರಾಮನು ಅವಿದ್ಯಾವಂತನಾದುದರಿಂದ ಗ್ರಾಮ್ಯವನ್ನಾಡಬೇಕು, ಮುದುಕನ ಕೈ ನಡುಗುವಂತೆ ಅವನ ಮಾತುಗಳೂ ಒಳ್ಳಿ ಒಳ್ಳಿಯಾಗಬೇಕು! ಹೀಗಾದರೆ ಓದುವವರ ಗತಿಯೇನು? ನಾಟಕವನ್ನಾಡುವಾಗ ನೈಸರ್ಗಿಕತೆಗಾಗಿ ಹೇಗೆ ಬೇಕಾದರೆ ಹಾಗೆ ಉಚ್ಚರಿಸಲಿ; ನಾಟ್ಯಾಚಾರ್ಯನು ಅದಕ್ಕೆ ತಕ್ಕ ರಂಗಪ್ರತಿಯನ್ನೋ. ಗ್ರಾಮೋಫೋನ್ ತಟ್ಟೆಗಳನ್ನೋ ಮಾಡಿಡಲಿ! ದೃಶ್ಯವಲ್ಲ, ಪಠ್ಯವೆಂದು—ಜನರು ಓದುವುದಕ್ಕೆಂದು—ಬರೆಯುವಾಗ ಎಷ್ಟೇ ಅನೈಸರ್ಗಿಕವಾಗಲಿ—ಈ ಹುಚ್ಚು ಇಳಿದರೆ, ಓದುವವರು ಉಳಿದುಕೊಂಡಾರು!

**ಎ. ಆರ್. ಕೃ.**

---

## ೬. ಅದ್ಭುತ ಪ್ರೇಮ

ಲೇಖಕರು.—ಗ. ಹು. ಹೊನ್ನಾಪುರಮಠ, ವಕೀಲರು, ಧಾರವಾಡ.

**ಗ್ರಂಥಕರ್ತರೇ ಇದನ್ನು ಪ್ರಕಟಿಸಿದ್ದಾರೆ; ಕ್ರಯ ೧೨ ಆಣೆಗಳು.**

ಅಕ್ಬರ ಚಕ್ರವರ್ತಿಯ ಕಾಲದಲ್ಲಿ ನಡೆದ ಕೆಲವು ಸಂಗತಿಗಳ ಆಧಾರದ ಮೇಲೆ ಗ್ರಂಥಕರ್ತರು ಈ ಪುಸ್ತಕವನ್ನು ಬರೆದಿದ್ದಾರೆ. ಅಕ್ಬರ ಚಕ್ರವರ್ತಿಯು ಫೈಜಿಯೆಂಬ ಮುಸಲ್ಮಾನ ಯುವಕನನ್ನು ಹಿಂದೂಜನರ ಆಚಾರ ವಿಚಾರಗಳನ್ನು ತಿಳಿದುಕೊಂಡು ಸಂಸ್ಕೃತ ಸಾಹಿತ್ಯವನ್ನು ವ್ಯಾಸಂಗಮಾಡಿಕೊಂಡು ಬರಲು ಕಳುಹಿಸಿದ್ದನು. ಫೈಜಿಯು ಹಿಂದೂ ವೇಷವನ್ನು ಧರಿಸಿ ಒಬ್ಬ ತಪಸ್ವಿಯ ಆಶ್ರಮಕ್ಕೆ ಬಂದು, ಮಹೇಶನೆಂಬ ಹೆಸರಿನಿಂದ ವ್ಯಾಸಂಗಕ್ಕೆ ಪ್ರಾರಂಭ ಮಾಡಿದನು. ಕಾಲಕ್ರಮದಲ್ಲಿ ತಪಸ್ವಿಯ ಮೊಮ್ಮಗಳಾದ ಸುಶೀಲೆಯು ಅವನಲ್ಲಿ ಅನುರಕ್ತಳಾದಳು. ಈ ಪ್ರೇಮದ ಪರಿಣಾಮವು "ಅನೀತಿಕಾರಕವಾಗಬಹುದೆಂಬ ಭಯದಿಂದ" ಫೈಜಿಯು ಸುಶೀಲೆಯ ಆಸೆಗೆ ಅವಕಾಶ ತಪ್ಪುವಂತೆ ಆಶ್ರಮವನ್ನು ಬಿಟ್ಟು ಹೊರಟುಹೋದನು; ಅಲ್ಲದೆ, ಅವನು ತನ್ನ ನಿಜ ಸ್ಥಿತಿಯನ್ನು ತಪಸ್ವಿಗೆ ತಿಳಿಸಿ ಹೊರಟುಹೋದನು. ಅಂಬರದ ರಾಣನಾದ ಮಾನಸಿಂಹನು ಮುಂದೆ ಅಕ್ಬರನ ಪರವಾಗಿ ಶಕ್ತಿಘಡಕ್ಕೆ ಮುತ್ತಿಗೆ ಹಾಕಿದಾಗ ಇತರರೊಡನೆ ಸುಶೀಲೆಯೂ ಸೆರೆ ಸಿಕ್ಕಿದಳು. ಮಾನಸಿಂಹನು ಅವಳನ್ನು ಮದುವೆಯಾದನು. ಸುಶೀಲೆಯು ಅವನ ಪಟ್ಟದ ರಾಣಿಯಾಗುವುದರಲ್ಲಿದ್ದಳು. ಅಷ್ಟರಲ್ಲೇ ಫೈಜಿಯು ಅವಳ ದರ್ಶನಾಕಾಂಕ್ಷಿಯಾಗಿ ಬಂದನು. ರಾತ್ರಿಯ ವೇಳೆ ಅವರಿಬ್ಬರೂ ಏಕಾಂತವಾಗಿ ಮಾತನಾಡುತ್ತಿದ್ದುದು ರಾಣಿಯಾದ ಕಮಲಕುಮಾರಿಯ ಸಂಚಿನಿಂದ ರಾಣನ ಕಣ್ಣಿಗೆ ಬಿದ್ದಿತು. ಅವನು ಸುಶೀಲೆಯನ್ನು ಅಂತಃಪುರದಿಂದ ಹೊರಗೆ ಹಾಕಿದನು. ಪತಿಯಿಂದ ಪರಿತ್ಯಕ್ತಳಾದ ಆಕೆಯು ಕೊಳಕ್ಕೆ ಬಿದ್ದಳು. ಫೈಜಿಯು ಅವಳನ್ನು ನೀರಿನಿಂದ ಮೇಲಕ್ಕೆ ತಂದು ಅವಳಿಗೆ ಜೀವ ದಾನ ಮಾಡಿದನು. ಆ ಬಳಿಕ ಅವಳು ತನ್ನ ತಾತನ ಬಳಿಗೆ ಸೇರಬೇಕಾಯಿತು. ತಪಸ್ವಿಯು ರೋಗಗ್ರಸ್ತನಾದ

ಅವಳನ್ನು ಒಂದು ಗುಹೆಯಲ್ಲಿಟ್ಟು ಸೋಡಿಕೊಳ್ಳುತ್ತಿದ್ದನು. ಅತ್ತ ಫೈಜಿಯು ಬ್ರಾಹ್ಮಣ ವೇಷವನ್ನು ಧರಿಸಿ, ಮಾನಸಿಂಹನಿಗೆ ಹೆಸರಿಲ್ಲದ ಕಾಗದವನ್ನು ಬರೆದು, ಸ್ಥಳ ನಿರ್ದೇಶಮಾಡಿ, ಅಲ್ಲಿಗೆ ರಾಣನು ಬಂದು ದ್ವಂದ್ವಯುದ್ಧಮಾಡಬೇಕೆಂದು ಕೋರಿದನು. ರಾಣನು ಅಲ್ಲಿಗೆ ಹೋದನು. ಸುಶೀಲೆಯು ದೇಹವು ಕಲುಷಿತ ವಾಗಿರಲಿಲ್ಲವೆಂಬುದೂ, ವೇಷಧಾರಿಯಾದ ಮಹೇಶನು ತನ್ನ ಮಿತ್ರನಾದ ಫೈಜಿ ಯೆಂಬುದೂ ಮಾನಸಿಂಹನಿಗೆ ಗೊತ್ತಾದುವು. ಮಾನಸಿಂಹನು ತಾನು ಸುಶೀಲೆ ಯಲ್ಲಿ ಅಪರಾಧಿಯೆಂಬುದನ್ನು ಮನಗಂಡು, ಅವಳನ್ನು ನೋಡಲು ಗುಹೆಗೆ ಹೋದನು. ಅವಳ ರೋಗವು ಗುಣವಾಗುತ್ತ ಬಂದಂತೆ ತೋರಿತು. ಆ ಬಳಿಕ ಅವಳನ್ನು ಪಟ್ಟಮಹಿಷಿಯಂತೆ ಯಥೋಚಿತವಾದ ಆಟ್ಟಹಾಸದಿಂದ ರಾಜಧಾನಿಗೆ ಕರೆದೊಯ್ಯಲು ಆನೆ ಕುದುರೆಗಳೇ ಮುಂತಾದವುಗಳನ್ನೂ ಸೈನ್ಯವನ್ನೂ ತರು ವುದಕ್ಕಾಗಿ ಮಾನಸಿಂಹನು ಹೊರಟುಹೋದನು. ಆತನು ಹಿಂದಿರುಗಿ ಬರುವ ವೇಳೆಗೆ ಸುಶೀಲೆಯು ಮೃತ್ಯುಶಯ್ಯೆಯಲ್ಲಿ ಮಲಗಿದ್ದಳು; ಮಾನಸಿಂಹನೊಡನೆ ಅವಳು ಅತಿ ಕಷ್ಟದಿಂದ ಮಾತನಾಡಿ ಒಡನೆಯೇ ದೇಹವನ್ನು ಬಿಟ್ಟಳು. ಮಾನ ಸಿಂಹನು ದುಃಖಿತನಾಗಿ ಅವಳ ಮೃತ ಕಳೇಬರವನ್ನು ರಾಜಧಾನಿಗೆ ಸಾಗಿಸಿ ಕೊಂಡು ಹೋಗಿ ಅದಕ್ಕೆ ಅಗ್ನಿ ಸಂಸ್ಕಾರಮಾಡಿಸಿದನು. ಅಲ್ಲದೆ, ಅವನು ಸುಶೀಲೆಯ ಚಿತಾಭಸ್ಮವನ್ನೊಂದು ಚಿನ್ನದ ಪಾತ್ರೆಯಲ್ಲಿಡಿಸಿ, ಹಿರಣ್ಯ ಮಂದಿರ ದೊಳಗೆ ಅದನ್ನು ಭೂಸ್ಥಾಪನೆಮಾಡಿಸಿ, ಆ ಮಂದಿರದ ಮೇಲೆ ಸುಶೀಲೆಯ ಸುವರ್ಣ ಪ್ರತಿಮೆಯನ್ನು ಸ್ಥಾಪಿಸಿದನು. ಇದಿಷ್ಟೂ ಈ ಐತಿಹಾಸಿಕ ಕಾದಂಬರಿಯ ಕಥಾ ವಿಷಯ.

ಈ ಗ್ರಂಥಕರ್ತರು ಶ್ರೀರಾಮದಾಸ ಸ್ವಾಮಿ ಚರಿತ್ರ, ನೀತಿಮಂಜರಿ,
ಬಾಲ ಭಾರತ, ಸಾವಿತ್ರೀ ಚರಿತ ಮುಂತಾದ ಅನೇಕ ಪುಸ್ತಕಗಳನ್ನು ಬರೆದಿ
ದ್ದಾರೆ. ಈ ಮೂಲಕ ಅವರು ಸಾಹಿತ್ಯ ಸೇವೆಮಾಡಿರುವುದು ಸ್ತುತ್ಯವಾಗಿದೆ.
ಪ್ರಸಕ್ತ ಗ್ರಂಥವಾದ 'ಅದ್ಭುತ ಪ್ರೇಮ'ದಲ್ಲಿಯ ಘಟನೆಗಳು ಓತಪ್ರೋತವೆನಿಸಿ
ಸಮ್ಮಿಳಿತವಾಗಿ ಸೇರಿಲ್ಲ. ಗ್ರಂಥದ ಆದಿ ಭಾಗದಲ್ಲಿ ಚಿತ್ರಿತವಾಗಿರುವ ಮಹೇಶ
ಸುಶೀಲೆಯರ ಪ್ರೇಮವು ಕಚ ಮತ್ತು ದೇವಯಾನಿ—ಇವರಿರ್ವರ ಅನುರಾಗ
ದಂತಿರಲೆಂಬ ಆಶಯದಿಂದ ಕಲ್ಪಿಸಲ್ಪಟ್ಟಿರುವಂತೆ ತೋರುತ್ತದೆ. ಗ್ರಂಥಕರ್ತರು
ಇದನ್ನೇ ಅದ್ಭುತ ಪ್ರೇಮವೆಂದು ಭಾವಿಸಿರುವರೋ ಅಥವಾ, ಸುಶೀಲೆಯು
ಮುಂದೆ ಮಾನಸಿಂಹನನ್ನು ಪ್ರೀತಿಸಿ ಅವನ ದೆಸೆಯಿಂದಲೇ ಮೃತ್ಯುಶಯ್ಯೆಯಲ್ಲಿ
ಮಲಗಿ, ಅವನಿಗೆ ಪ್ರಿಯ ವಚನಗಳನ್ನು ಹೇಳಿ ಪ್ರಾಣವನ್ನು ಬಿಡುವುದನ್ನು
ಅದ್ಭುತ ಪ್ರೇಮವೆಂದು ಕರೆದಿರುವರೋ ತಿಳಿಯದು. ಮಹೇಶನನ್ನು ತನ್ನ
ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಸುಶೀಲೆಯು ಒಮ್ಮಿಂದೊಮ್ಮೆಗೇ
ಮಾನಸಿಂಹನನ್ನೂ ಅದೇ ರೀತಿ ಪ್ರೀತಿಸುವಳು; ಒಬ್ಬನಿಗೆ ಅರ್ಪಿಸಿದ್ದ ಹೃದಯ
ವನ್ನು ಸ್ವಲ್ಪ ಕಾಲದ ಬಳಿಕ ಮತ್ತೊಬ್ಬನಿಗೆ ಸಮರ್ಪಿಸುವಳು. ಇದನ್ನು ನೋಡಿ

ವಾಚಕರ ಮನಸ್ಸಿಗೆ ಅನಿರ್ವಚನೀಯವಾದ ಏನೋ ಒಂದು ಬಗೆಯ ಹಿಂಸೆಯುಂಟಾಗುವುದು. ಬ್ರಾಹ್ಮಣ ವೇಷಧಾರಿಯಾಗಿ ಬಂದಿದ್ದ ಫೈಜಿಯು "ಗೌಪ್ಯಸ್ಫೋಟನ"ವನ್ನು ಅವನಿಂಪಲೇ ಕೇಳುವ ವರೆಗೂ ಒಂದು ದಿನವೂ ಆದರ ವಿಷಯವಾಗಿ ಸಂಶಯಪಡದೆ ಇದ್ದ ತಪಸ್ವಿಯ ಧೀಶಕ್ತಿಯ ವಿಷಯದಲ್ಲಿ ನಮಗೆ ಗೌರವವೇ ಹುಟ್ಟುವುದಿಲ್ಲ. ಸುಶೀಲೆಯು ಮಹೇಶನಲ್ಲಿ ಅನುರಕ್ತಳಾಗಿದ್ದು ಆ ಬಳಿಕ ಅಂಬರೇಶ್ವರನನ್ನು ವರಿಸಿದುದು ತಪಸ್ವಿಗೆ ಸಮ್ಮತವಾಗಿರುವುದನ್ನು ನೋಡಿ ನಮಗೆ ಆತನಲ್ಲಿ ಅಸಮಾಧಾನವೇ ಉಂಟಾಗುವುದು. ಒಮ್ಮೆ ಫೈಜಿಯನ್ನು ಕುರಿತು, "ಅಂದ ಬಳಿಕ ನೀವು ಈಗ ನನ್ನಕಿಂತಲು ಹೆಚ್ಚು ಸೌಂದರ್ಯವುಳ್ಳ ಯಾವಳಾದರೂ ಸ್ತ್ರೀಯಳನ್ನು ನೋಡಿ ಮೋಹಿತರಾಗಿರುವ ಕಾರಣ ನನ್ನ ಮೇಲಿನ ನಿಮ್ಮ ಪ್ರೇಮವು ಹೊರಟು ಹೋಗಿರುತ್ತದೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ" ಎಂದು ಹೇಳಿ ಗರ್ಜನೆ ತರ್ಜನೆಮಾಡಿದ್ದ ಸುಶೀಲೆಯೇ ತಾನು ಅಂಬರೇಶ್ವರನ ರಾಣಿಯಾದ ಮೇಲೆ ಅವನನ್ನು ಕುರಿತು, "ಹೋಗಿರಿ—ಇನ್ನು ಇಲ್ಲಿ ನಿಂತುಕೊಳ್ಳಬೇಡಿರಿ—ನಾನು ಪರಸ್ತ್ರೀಯಳಿದ್ದೇನೆ" ಎಂದು ಹೇಳುವುದನ್ನು ನೋಡಿ, ತಪಸ್ವಿಯು ಬಹಳ ವಿಲಕ್ಷಣವಾದ ಶಿಕ್ಷಣವನ್ನು ಕೊಟ್ಟಿದ್ದನೆನ್ನಿಸುತ್ತದೆ. ಫೈಜಿ, ಮಾನಸಿಂಹ—ಈ ಎರಡು ಪಾತ್ರಗಳು ಮಾತ್ರವೇ ನಮ್ಮ ಸಹಾನುಭೂತಿಗೆ ಪಾತ್ರರು; ಉಳಿದ ಪಾತ್ರಗಳಲ್ಲಿ ವಾಚಕರಿಗೆಂದಿಗೂ ಆದರ ಹುಟ್ಟುವುದಿಲ್ಲ. ಮಾನಸಿಂಹನ ಪಟ್ಟದ ರಾಣಿಯಾದ ಕಮಲಕುಮಾರಿಯು ಸುಶೀಲೆಯ ವಿಷಯವಾಗಿ ತನ್ನ ದಾಸಿಯೊಡನೆ, "ಆಕೆಯ ನಾಶವನ್ನು ಮಾಡಲೇಬೇಕು. ಆ ಚಾಂಡಾಲೆಯನ್ನು ಈ ಜಗತ್ತಿನಿಂದ ದೂರಮಾಡುವದು ಅವಶ್ಯವದೆ. ಆ ಮುಂಡೆಯು ನನ್ನ ಪಟ್ಟಮಂಚದ ಮೇಲೆ ಕುಳಿತುಕೊಳ್ಳಲಿಕ್ಕೆ ಬಂದಿರುತ್ತಾಳೆ ...." ಎನ್ನುವಳು. ರಾಜಪ್ರಾಸಾದದಲ್ಲಿರಲು ಯೋಗ್ಯಳಾದ ಒಬ್ಬ ದಾಸಿಯೂ ಇಂತಹ ಅಶ್ಲೀಲ ವಾಕ್ಕುಗಳನ್ನು ನುಡಿಯುವುದು ಉಚಿತವಲ್ಲ.

ಗ್ರಂಥಕರ್ತರ ಶೈಲಿಯು ಸರಳವಾಗಿದೆ. 'ನನ್ನಕಿಂತ,' 'ಉಸಾಬರಿಗೆ,' 'ಕರ್ತವ್ಯದಕ್ಕೋಸ್ಕರ,' 'ಜೀವದಕಿಂತಲು' ಮುಂತಾದ ಕೆಲವು ಪ್ರಯೋಗಗಳು ಸಾಧುವಾಗಿಲ್ಲ. ಕೆಲವು ಕಡೆಗಳಲ್ಲಿ ಪದ ಪ್ರಯೋಗದಲ್ಲಿ ಔಚಿತ್ಯವಿಲ್ಲ. "ಹೃದಯ ವೇಧಕ" ಎಂಬ ಪದವು ಒಪ್ಪುವ ಸನ್ನಿವೇಶದಲ್ಲಿ "ಹೃದಯದ್ರಾವಕ" ಎಂಬ ಪದವು ಉಪಯೋಗಿಸಲ್ಪಟ್ಟಿರುವುದನ್ನು ಉದಾಹರಣೆಗಾಗಿ ಸೂಚಿಸಬಹುದಾಗಿದೆ. ಆದರೂ, ಒಟ್ಟಿನಲ್ಲಿ ಶೈಲಿಯು ಸರಳವಾಗಿ ಬಹು ಮಟ್ಟಿಗೆ ಚೆನ್ನಾಗಿದೆ.

**ಸಿ. ಕೆ. ವೆಂ.**

---

## ೭. ನೀತಿವಾಕ್ಯ ಮಂಜರಿ

ಲೇಖಕರು.—ರಾ. ನರಸಿಂಹಾಚಾರ್ಯರು, ಎಂ.ಎ., ಎಂ.ಆರ್.ಎ.ಎಸ್.

**ಪುಟಗಳು ೪೨ ; ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾದುದು ; ೧೯೨೯ ; ಬೆಲೆ ೨ ಆಣೆ.**

ತಮಿಳು ಭಾಷೆಯಲ್ಲಿ ಅತ್ಯುತ್ತಮ ನೀತಿ ಗ್ರಂಥಗಳೆಂದು ಪ್ರಸಿದ್ಧಪಡೆದ ಕುಱಳ್ ಮೊದಲಾದ ಗ್ರಂಥಗಳಲ್ಲಿಯ ನೀತಿಗಳನ್ನು ಸಂಗ್ರಹಪಡಿಸಿ 'ನೀತಿ ಮಂಜರಿ' ಎಂಬ ಗ್ರಂಥವನ್ನು ಪದ್ಯರೂಪವಾಗಿ ಬರೆದ ಶ್ರೀಮನ್ನರಸಿಂಹಾಚಾರ್ಯರೇ ಈ 'ನೀತಿ ವಾಕ್ಯ ಮಂಜರಿ' ಎಂಬ ಗ್ರಂಥವನ್ನು ಚಿಕ್ಕದಾಗಿ ವಚನ ರೂಪದಲ್ಲಿ ಬರೆದಿರುವರು. ನೀತಿ ವಿಧುರರಾಗಿಯೂ ಅತ್ಯಾಚಾರಿಗಳಾಗಿಯೂ ಪ್ರವರ್ತಿಸುವುದೇ ಸ್ವಾಭಾವಿಕವಾಗಿರುವ ಈ ಕಲಿಯುಗದಲ್ಲಿ ನೀತಿ ವಾಕ್ಯಗಳನ್ನು ಎಷ್ಟಾವೃತ್ತಿ ಬೋಧಿಸಿದರೂ, ನೀತಿ ಬೋಧಕವಾದ ಗ್ರಂಥಗಳನ್ನು ಎಷ್ಟು ಬರೆದರೂ 'ಪುನರುಕ್ತಿ' ಎಂದಾಗಲಿ 'ಚರ್ವಿತಚರ್ವಣ'ವೆಂದಾಗಲಿ ಹೇಳಲಾಗುವುದಿಲ್ಲ. ನೀತಿಯನ್ನು ಬೋಧಿಸುವುದಕ್ಕೆ ಬಾಲ್ಯವೇ ಯುಕ್ತವಾದ ಕಾಲವಾದುದರಿಂದಲೂ, ಗ್ರಂಥವು ಬಹಳ ಸುಲಭವಾದ ವಾಕ್ಯಗಳಿಂದ ಬರೆಯಲ್ಪಟ್ಟಿರುವುದರಿಂದಲೂ ಬಾಲಕ ಬಾಲಿಕೆಯರಿಗೆ ಉಪಕಾರಕವಾಗುವಂತೆ ಕನ್ನಡ ಪ್ರಾಥಮಿಕ ಪಾಠಶಾಲೆಗಳಲ್ಲಿ ಈ ಪುಸ್ತಕವನ್ನು ಪಠ್ಯ ಪುಸ್ತಕವನ್ನಾಗಿ ನಿಯಮಿಸುವುದು ಬಹಳ ವಿಹಿತವೆಂದು ನಮ್ಮ ಅಭಿಪ್ರಾಯವು.

**ಎ. ಭೀಮಾಚಾರ್ಯ.**

---

## 8

## The School Folk

*Publishers.*—The Government High School, Tumkur
Royal 8 vo. pp. 44+20+5, with two nice full-page pictures
Printed at the Phœnix Press, Bangalore
The Tenth Annual Special Number: Vol. X, No. 10, March 1929
Annual subscription Re. 1–8–0.

This is a high class bilingual periodical conducted by an Editorial Board composed of the staff of the Government High School, Tumkur. Twenty-four of its pages are now devoted to English and sixteen for Kannada articles. Ten numbers per year are now published. That this Magazine is completing the *tenth* year of its existence is proof positive of its vitality. The articles, both in English and Kannada, contributed by some of the students, are also good.

The present number contains some very good articles on a variety of subjects written by experts in their respective fields; to name a few: 'A Talk about Insects' by Dr. K. Kunhikannan, 'Agriculture in Mysore' by Mr. A. K. Yegnanarayana Iyer, 'Sericulture in Mysore' by Mr. H. S. Govinda Rao, 'Sandalwood Oil Industry in Mysore' by Mr. Y. Narasinga Rao, 'Electrical Power in Tumkur' by Dr. B. K. Ramaprasad and 'The Indian Lac Industry' by Mr. M. Srinivasaiya.

The Kannada section is not neglected. In this issue there is a fairly long smooth-flowing poem on 'Abhimanyu' composed in a popular metre, presumably by a student, and three interesting articles in prose.

We heartily wish this nice journal a long life of useful ness, both to the student population and to the public in general.

B. V.

---

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೪] ಶುಕ್ಲ ಸಂ॥ ಆಷಾಢ ಮಾಸ [ಸಂಚಿಕೆ ೨

## ಹದಿನೈದನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನ

ಸನ್ ೧೯೨೫ನೆಯ ಇಸವಿಯ ಮೇ ತಿಂಗಳಲ್ಲಿ ಹನ್ನೊಂದನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನವು ಮುಂಬಯಿ ಕರ್ಣಾಟಕದ ಮುಖ್ಯ ಪಟ್ಟಣಗಳಲ್ಲೊಂದಾದ ಯಾವ ಷಹರ್ ಬೆಳಗಾಂವಿಯಲ್ಲಿ ನಡೆಯಿತೋ ಅದೇ ಬೆಳಗಾಂವಿ ಪಟ್ಟಣದಲ್ಲಿ ನಾಲ್ಕು ವರ್ಷಗಳ ತರುವಾಯ ಎರಡನೆಯ ಸಾರಿ ಹದಿನೈದನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನವು ೧೯೨೯ನೆಯ ಇಸವಿ ಮೇ ತಿಂಗಳು ೧೨, ೧೩, ೧೪ನೆಯ ತಾರೀಖುಗಳಲ್ಲಿ ಮೈಸೂರು ಸಂಸ್ಥಾನದ ಸೀನಿಯರ್ ಅಸಿಸ್ಟೆಂಟ್ ಕಮಿಷನರ್ ಮ॥ ರಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ವಿಶೇಷ ವೈಭವದೊಡನೆ ಜರುಗಿತು. ಇಷ್ಟು ಬೇಗನೆ ಬೆಳಗಾಂವಿಯಲ್ಲಿ ಎರಡನೆಯ ಆವೃತ್ತಿ ಸಮ್ಮೇಳನವು ಕೂಡಿದುದು ಅಲ್ಲಿಯ ಕರ್ಣಾಟಕ ಭಾಷಾಭಿಮಾನಿಗಳ ಉತ್ಸಾಹಕ್ಕೂ ಔದಾರ್ಯಕ್ಕೂ ಜಾಗೃತಿಗೂ ನಿದರ್ಶನವು. ಏಕೆಂದರೆ, ಬೆಳಗಾಂವಿ ಜಿಲ್ಲೆಯು ಉತ್ತರ ಕರ್ಣಾಟಕದ ಗಡಿ ನಾಡಾದುದರಿಂದ ಅದು ಮರಾಠಿಯೂ ಕನ್ನಡವೂ ಸಂಧಿಸುವ ಪ್ರದೇಶ; ಆದಕಾರಣ ಅಲ್ಲಿಯ ಕನ್ನಡಿಗರು ಕೊಂಚ ಎಚ್ಚರವಾಗಿರಬೇಕಾದುದು ನ್ಯಾಯ.

ಸಮ್ಮೇಳನವು ಮೇ ೧೨ನೆಯ ತಾರೀಖು ಭಾನುವಾರದ ದಿವಸ ಬೆಳಗಾಂವಿಯ ವೆಸ್ಲಿಯನ್ ಹೈಸ್ಕೂಲಿನಲ್ಲಿ ಮಧ್ಯಾಹ್ನಾತ್ತರ ಮೂರು ಗಂಟೆಗೆ ಪ್ರಾರಂಭವಾಯಿತು. ಸಭಾ ಮಂದಿರವು ಜನಸಂಪಣಿಯಿಂದ ತುಂಬಿ ಒಳಗಡೆ ಸ್ಥಳ ಸಾಲದೆ ಹೊರಗಣ ಜಗುಲಿಯ ಮೇಲೆ ಕೋಡಿ ಹರಿಯುತ್ತಿದ್ದಿತು. ಸಮ್ಮೇಳನಕ್ಕೆ ಕರ್ಣಾಟಕದ ಎಲ್ಲ ಪ್ರಾಂತಗಳಿಂದಲೂ ಪ್ರತಿನಿಧಿಗಳು ಬಂದಿದ್ದರು. ಹೊರಗಿನಿಂದ ಬಂದಿದ್ದವರಲ್ಲಿ ಮೈಸೂರು ಸಂಸ್ಥಾನದವರ ಸಂಖ್ಯೆ ಹೆಚ್ಚಾಗಿದ್ದಿತು. ಕರ್ಣಾಟಕವು ಒಡೆದು ಮುರುಕುಗಳಾಗಿ ಬೇರೆಬೇರೆ ಸರ್ಕಾರಗಳಿಗೆ ಸೇರಿದ್ದರೂ

ಕನ್ನಡಿಗರೆಲ್ಲರೂ ಒಂದು ತಾಯಿಯ ಮಕ್ಕಳೆಂಬುದಕ್ಕೆ ಈ ಸಮ್ಮೇಳನವು ನಿದರ್ಶನವಾಗಿದ್ದಿತು. ಮೈಸೂರು ಸಂಸ್ಥಾನದಿಂದ ಕೆಲಬರು ಸ್ತ್ರೀಯರು ಬಂದು ಸಮ್ಮೇಳನವನ್ನು ಅಲಂಕರಿಸಿದ್ದುದು ಮತ್ತೊಂದು ವಿಶೇಷ.

ಭಾರತೀಯ ಸಂಪ್ರದಾಯದ ಪ್ರಕಾರ ಕಾರ್ಯಾರಂಭವಾಗುವುದಕ್ಕೆ ಮುಂಚೆ "ಒಲ್ಮೆಸಿ ಬರುತಿಹೆ ಕನ್ನಡ ತಾಯೆ" ಎಂಬ ಮಂಗಳಕರವಾದ ಪದ್ಯಗಳನ್ನು ಸುಸ್ವರದಿಂದ ಕೆಲವು ಹುಡುಗರು ಹಾಡಿದರು. ತರುವಾಯ ನಗೆ ಮೊಗದೊಡನೆ ಕೂಡಿದ ಸಣ್ಣ ಹುಡುಗಿಯರು ಕೆಲಬರು ಕೆಲವು ಹಾಡುಗಳನ್ನು ಕಿವಿಗಿಂಪಾಗಿ ಗಾನಮಾಡಿದರು. ಅನಂತರ ಮ॥ರಾ॥ ಕೆ. ಗುರುರಾಯಾಚಾರ್ಯರು ಕೆಲವು ಪದ್ಯಗಳನ್ನು ಓದಿದರು. ಮಂಗಳಾಚರಣೆಯು ಮುಗಿದನಂತರ ಸ್ವಾಗತ ಮಂಡಲಿಯ ಅಧ್ಯಕ್ಷರ ಪರವಾಗಿ ಕೊಲ್ಲಾಪುರದ ರಾಜಾರಾಮ ಕಾಲೇಜಿನ ಕನ್ನಡದ ಅಧ್ಯಾಪಕರಾದ ಮ॥ ರಾ॥ ಕುಂದಣಗಾರ, ಎಂ.ಎ. ಅವರು ಸ್ವಾಗತ ಭಾಷಣವನ್ನು ಓದಿದರು. ಇದನ್ನು ಮುಂದೆ ಕೊಟ್ಟಿದೆ. ಆಮೇಲೆ ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿಯ ಕರ್ಣಾಟಕ ಭಾಷಾಪ್ರೇಮಿಗಳು ಕೆಲಬರು ಸಮ್ಮೇಳನಕ್ಕೆ ತಾವು ಬರಲು ಆನುಕೂಲ್ಯವಿಲ್ಲದೆ ಹೋದುದಕ್ಕಾಗಿ ತಮ್ಮ ವಿಷಾದವನ್ನು ಸೂಚಿಸಿ ಸಮ್ಮೇಳನವು ಸಾಂಗವಾಗಿಯೂ ಸುಸೂತ್ರವಾಗಿಯೂ ಯಶಸ್ವಿಯಾಗಿಯೂ ನಡೆಯಲಿ ಎಂದು ಹಾರೈಸಿ ಬರೆದ ಪತ್ರಗಳನ್ನು ಸ್ವಾಗತ ಮಂಡಲಿಯ ಗೌರವ ಕಾರ್ಯದರ್ಶಿಗಳಲ್ಲೊಬ್ಬರಾದ ಮ॥ ರಾ॥ ಗೆಜ್ಜಿ ಕೃಷ್ಣರಾಯರು ಓದಿದರು. ಮುಂದೆ ಸಭಾಧ್ಯಕ್ಷರ ಚುನಾವಣೆಗೆ ಪ್ರಾರಂಭವಾಗಿ ಮ॥ ರಾ॥ ಗೆಜ್ಜಿ ಕೃಷ್ಣರಾಯರು ಎದ್ದು ಮೈಸೂರು ಸಂಸ್ಥಾನದ ಸೀನಿಯರ್ ಅಸಿಸ್ಟೆಂಟ್ ಕಮಿಷನರ್ ಮ॥ ರಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ. ಅವರ ಕರ್ಣಾಟಕ ಮತ್ತು ಇಂಗ್ಲೀಷು ಪಾಂಡಿತ್ಯವನ್ನೂ, ಅವರು ಸುಲಲಿತ ಕರ್ಣಾಟ ಕವಿಗಳೆಂಬುದನ್ನೂ ಪ್ರಶಂಸಿಸಿ ಈ ಸಮ್ಮೇಳನವನ್ನು ಸುಸೂತ್ರವಾಗಿ ನಡೆಯಿಸಿಕೊಡಬೇಕೆಂದು ಅಲ್ಲಿ ನೆರೆದಿದ್ದ ಪ್ರತಿನಿಧಿಗಳ ಪರವಾಗಿ ಸೂಚಿಸಲು ಆ ಸೂಚನೆಯನ್ನು ಮ॥ ರಾ॥ ಆರ್. ಬಿ. ಪೋದ್ದಾರ್, ಬಿ.ಎ. ಅವರು ಕೆಲವು ಉಚಿತವಾದ ಮಾತುಗಳಿಂದ ಅನುಮೋದಿಸಿದರು. ತರುವಾಯ ಮ॥ ರಾ॥ ಕೃಷ್ಣರಾವ್ ಮುದವೇಡಕರ್ ಅವರು ಎದ್ದು ಸೂಚನೆಯನ್ನು ಸ್ವಾರಸ್ಯವಾದ ಕೆಲವು ನುಡಿಗಳಿಂದ ಪುಷ್ಟೀಕರಿಸಲು ಮ॥ ರಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಸಭಾಮಂಟಪದಲ್ಲಿ ಕಿಕ್ಕಿರಿಯುತ್ತಿದ್ದ ಸದಸ್ಯರ ಕರತಾಡನ ಮತ್ತು ಜಯಘೋಷದ ಮಧ್ಯದಲ್ಲಿ ಅಗ್ರಪೀಠವನ್ನಲಂಕರಿಸಿ ಸದಸ್ಯರು ತಮ್ಮನ್ನು ಆ ಸ್ಥಾನದಲ್ಲಿ ಕುಳ್ಳಿರಿಸಿ ಮರ್ಯಾದೆಮಾಡಿದುದಕ್ಕಾಗಿ ವಂದನೆಗಳನ್ನರ್ಪಿಸಿದರು. ತರುವಾಯ ಅಧ್ಯಕ್ಷರ ಅನುಮತಿಯ ಪ್ರಕಾರ ಕಾರ್ಯಕ್ರಮದಲ್ಲಿ ತೋರಿಸಿದ್ದಂತೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯವರಾದ ಮ॥ ರಾ॥ ನಂಗಪುರಂ ವೆಂಕಟೇಶ ಅಯ್ಯಂಗಾರ್ಯರು ಪರಿಷತ್ತಿನ ವಿಭವ ಸಂವತ್ಸರದ ವರದಿಯನ್ನು ಓದಿದರು. ಆಮೇಲೆ ಅಧ್ಯಕ್ಷರು ತಮ್ಮ ಭಾಷಣ

ವನ್ನು ಓದಿದರು. ಅಷ್ಟುಹೊತ್ತಿಗೆ ಸಂಜೆಯಾಗಲು, ಸಮ್ಮೇಳನದಲ್ಲಿ ಚರ್ಚಿಸತಕ್ಕ ವಿಷಯಗಳಾವುವೆಂಬುದರ ನಿರ್ಧಾರಣಕ್ಕಾಗಿ ವಿಷಯ ನಿರ್ಧಾರಕ ಸಭೆಯೊಂದು ನಿರ್ಮಿತವಾಗಿ ಈ ಸಭೆಯು ಮಾರನೆಯ ದಿವಸ ಸರದಾರ್ ಹೈಸ್ಕೂಲು ಹಾಸ್ಟಲಿನಲ್ಲಿ ಅಧ್ಯಕ್ಷರು ಉಳಿದುಕೊಂಡಿದ್ದ ಕೋಣೆಯಲ್ಲಿ ಬೆಳಗ್ಗೆ ೮ ಗಂಟೆಗೆ ಸೇರತಕ್ಕುದೆಂದು ತೀರ್ಮಾನವಾಯಿತು. ಇಷ್ಟಕ್ಕೆ ಮೊದಲನೆಯ ದಿವಸದ ಕಾರ್ಯವು ಪೂರಯಿಸಿತು.

---

## ಎರಡನೆಯ ದಿವಸ (೧೩-೫-೧೯೨೯)

ಹಿಂದಣ ದಿವಸ ಏರ್ಪಾಡಾಗಿದ್ದಂತೆ ವಿಷಯ ನಿರ್ಧಾರಕ ಸಭೆಯ ಸದಸ್ಯರು ಸುಮಾರು ೮ ಗಂಟೆಗೆ ಸೇರಿ ಸಮ್ಮೇಳನದ ಮುಂದೆ ತರತಕ್ಕ ವಿಷಯಗಳಾವುವೆಂಬುದನ್ನು ಚರ್ಚಿಸಿ ಅವುಗಳನ್ನು ಠರಾವು ರೂಪದಲ್ಲಿ ಸಮ್ಮೇಳನದ ಮುಂದಿಡತಕ್ಕುದೆಂದು ತೀರ್ಮಾನಮಾಡಿದರು. ಮಧ್ಯಾಹ್ನೋತ್ತರ ಮೂರು ಗಂಟೆಗೆ ಸಮ್ಮೇಳನವು ಕೂಡಿತು. ಕಾರ್ಯಾರಂಭಕ್ಕೆ ಮುಂಚೆ ದೇವತಾ ಪ್ರಾರ್ಥನೆ ಆಯಿತು. ತರುವಾಯ ಹಿಂದಣ ದಿವಸ ಮಂಗಳಾಚರಣೆಯ ಕಾಲದಲ್ಲಿ ಗಾನ ಮಾಡಿದ ಹುಡುಗಿಯರೇ ರಸಯುಕ್ತವಾದೊಂದು ಅತ್ತೆ ಸೊಸೆಯರ ಸಂಭಾಷಣವನ್ನು ಕನ್ನಡದಲ್ಲಿ ಅಭಿನಯಿಸಿ ತೋರಿಸಿದರು. ಎಲ್ಲರೂ ಅವರನ್ನು ಕೊಂಡಾಡಿ ಆನಂದಪಟ್ಟರು. ಸೊಸೆಯ ಪಾತ್ರವನ್ನು ಚೆನ್ನಾಗಿ ಅಭಿನಯಿಸಿದ ಹುಡುಗಿಗೆ ಸದಸ್ಯರಲ್ಲೊಬ್ಬರು ತಮ್ಮ ಸಂತೋಷ ಸೂಚನಾರ್ಥವಾಗಿ ಸಂಭಾವನೆಯನ್ನು ದಯಪಾಲಿಸಿದರು. ಆಮೇಲೆ ಕಾರ್ಯಾರಂಭವಾಗಿ ಕೆಳಗೆ ಕಂಡ ಠರಾವುಗಳು ಸಭ್ಯರ ಮುಂದಿಡಲ್ಪಟ್ಟು ಅಂಗೀಕೃತವಾದುವು:—

೧. ಮುಂಬೈ ಕರ್ಣಾಟಕದಲ್ಲಿ ಕಾಲೇಜಿನ ಪ್ರಥಮ ಪರೀಕ್ಷೆಗೂ, ಇಂಟರ್ ಪರೀಕ್ಷೆಗೂ ಕನ್ನಡವನ್ನು ಇಡದೆ ಬಿಟ್ಟು ಮುಂದೆ ಬಿ.ಎ. ಪರೀಕ್ಷೆಗೆ ಕನ್ನಡವನ್ನು ಐಚ್ಛಿಕವಾಗಿ ಇಟ್ಟಿರುವುದರಿಂದ, ಮೆಟ್ರಿಕ್ ಪರೀಕ್ಷೆಯಲ್ಲಿ ಕನ್ನಡ ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಮುಂದೆ ಕಾಲೇಜ್ ತರಗತಿಗಳಲ್ಲಿ ಪ್ರವೇಶ ದೊರೆಯುವುದು ಕಷ್ಟವಾಗುವುದಲ್ಲದೆ ಪ್ರವೇಶ ದೊರೆತರೂ ಕನ್ನಡವನ್ನು ಬಿಟ್ಟು ಸಂಸ್ಕೃತವನ್ನೇ ತೆಗೆದುಕೊಳ್ಳಬೇಕೆಂಬ ನಿರ್ಬಂಧವಿರುವುದರಿಂದ ನಡುವೆ ಎರಡು ವರ್ಷ ಕಾಲ ಕನ್ನಡದ ಸಂಪರ್ಕ ತಪ್ಪಿದ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ತಕ್ಕಷ್ಟು ಯೋಗ್ಯತೆಯಿಲ್ಲವಾಗುವುದು. ಆದಕಾರಣ ಕನ್ನಡವನ್ನು ಮದರಾಸು, ಮೈಸೂರು ಯೂನಿವರ್ಸಿಟಿಗಳಲ್ಲಿ ಏರ್ಪಡಿಸಿರುವಂತೆ ಕಾಲೇಜಿನ ಎಲ್ಲಾ ತರಗತಿಗಳಲ್ಲಿಯೂ ನಿರ್ಬಂಧವಾದ ಭಾಷೆಗಳಲ್ಲೊಂದಾಗಿ ಪರಿಗಣಿಸಬೇಕೆಂದು ಮುಂಬೈ ಸರ್ಕಾರಕ್ಕೂ ಮುಂಬೈ ವಿಶ್ವವಿದ್ಯಾಲಯಕ್ಕೂ ಈ ಸಮ್ಮೇಳನವು ಏಕಕಂಠದಿಂದ ಬಿನ್ನವಿಸುತ್ತದೆ.

ಸೂಚಕರು :—ಮ|| ರಾ|| ಗೆಜ್ಜಿ ಕೃಷ್ಣರಾಯರು.

ಅನುಮೋದಕರು :—ಮ|| ರಾ|| ಅಂಕಲೆಯವರು.

ಅಂಗೀಕೃತವಾಯಿತು.

೨. ಕನ್ನಡವನ್ನು ಇಂಗ್ಲಿಷ್, ಜರ್ಮನ್, ಫ್ರೆಂಚ್ ಮುಂತಾದ ಭಾಷೆಗಳಂತೆ ಪಟ್ಟ ಪ್ರತಿಷ್ಠಾ ಪರೀಕ್ಷೆಗೆ (B.A. Hons.) ಏಕ ಭಾಷಾ ವ್ಯಾಸಂಗವಾಗಿ ಏರ್ಪಡಿಸುವುದಲ್ಲದೆ, ಪ್ರಧಾನವಾದ ಕನ್ನಡ ಭಾಷೆಯೊಡನೆ ಸಂಸ್ಕೃತ, ಇಂಗ್ಲಿಷ್, ಇತರ ದೇಶಭಾಷೆಗಳಲ್ಲೊಂದು—ಇವುಗಳಲ್ಲಿ ಯಾವುದಾದರೂ ಒಂದನ್ನು ದ್ವಿತೀಯ ಭಾಷೆಯಾಗಿ ತೆಗೆದುಕೊಂಡು ಕೂಡ ಈ ಪರೀಕ್ಷೆಗೆ ವ್ಯಾಸಂಗಮಾಡಲು ಸೌಕರ್ಯವನ್ನು ಕಲ್ಪಿಸಿಕೊಡಬೇಕೆಂದು ಈ ಸಮ್ಮೇಳನವು ಮುಂಬೈ, ಮದರಾಸು ವಿಶ್ವವಿದ್ಯಾನಿಲಯದವರಿಗೆ ಬಿನ್ನವಿಸುತ್ತದೆ.

ಸೂಚಕರು :—ಮ|| ರಾ|| ಎಚ್. ಚೆನ್ನಕೇಶವ ಅಯ್ಯಂಗಾರ್ಯರು.

ಅನುಮೋದಕರು :—ಮ|| ರಾ|| ಕೇಶವ ಶರ್ಮಾ ಗಲಗಲಿ.

ಅಂಗೀಕೃತವಾಯಿತು.

೩. ಕನ್ನಡ ನಾಡು ನಡೆನುಡಿಗಳ ಇತಿಹಾಸ ರಚನೆಯಲ್ಲಿ ಪ್ರೌಢ ಪರಿಶೋಧನ ಕಾರ್ಯವನ್ನು ಕೈಕೊಳ್ಳಲು ಅನುಕೂಲಿಸುವಂತೆ ಕನ್ನಡದಲ್ಲಿ ಪಟ್ಟಾಗ್ರ ವ್ಯಾಸಂಗ ಕ್ರಮವನ್ನು (Post Graduate Study) ಏರ್ಪಡಿಸಬೇಕೆಂದು ಮುಂಬೈ, ಮದರಾಸು, ಮೈಸೂರು ಸರ್ಕಾರದವರನ್ನೂ, ವಿಶ್ವವಿದ್ಯಾನಿಲಯದವರನ್ನೂ ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು :—ಮ|| ರಾ|| ಹಲಸಂಗಿ ಚೆನ್ನಮಲ್ಲಪ್ಪನವರು.

ಅನುಮೋದಕರು :—ಮ|| ರಾ|| ದ. ಪ. ಕರಮರಕರ.

ಅಂಗೀಕೃತವಾಯಿತು.

೪. ಮುಂಬಯಿ ಕರ್ಣಾಟಕದಲ್ಲಿಯ ಬೆಳಗಾಂವಿ, ಧಾರವಾಡ ಪೋಸ್ಟಲ್ ಡಿವಿಜನ್ನುಗಳನ್ನು ಮದರಾಸು ಸರ್ಕಲ್ಲಿಗೆ ಸೇರಿಸಿದರೆ ಇಡೀ ಕರ್ಣಾಟಕವು ಪೋಸ್ಟಿನ ಆಡಳತೆಯ ಮಟ್ಟಿಗೆ ಒಂದೇ ಅಧಿಕಾರಕ್ಕೆ ಒಳಗಾಗುವುದರಿಂದ ಈ ಬದಲಾವಣೆಯನ್ನು ತೀವ್ರವೇ ಮಾಡಬೇಕೆಂದು ಈ ಸಮ್ಮೇಳನವು ಅಂಚೆಯ ಮುಖ್ಯಾಧಿಕಾರಿಗಳಿಗೆ ಬಿನ್ನವಿಸುತ್ತದೆ.

ಸೂಚಕರು :—ಮ|| ರಾ|| ಧಾರವಾಡ ವಾಮನರಾಯರು.

ಅನುಮೋದಕರು :—ಮ|| ರಾ|| ನಾರಾಯಣ ಶ್ರೀನಿವಾಸ ರಾಜಪುರೋಹಿತರು.

ಅಂಗೀಕೃತವಾಯಿತು.

೫. ಬೆಳಗಾಂವಿ ಜಿಲ್ಲೆಯ ಯಾವತ್ತು ಕೋರ್ಟುಗಳಲ್ಲಿ ಮೊದಲಿನಿಂದಲೂ ದೇಶ ಭಾಷೆಯಾದ ಕನ್ನಡವೇ ಕೋರ್ಟಿನ ಭಾಷೆಯಾಗಿದ್ದು ಇತ್ತೀಚೆಗೆ ಕೋರ್ಟಿನ

ವ್ಯವಹಾರಗಳು ಮರಾಟಿ ಭಾಷೆಯಲ್ಲಿಯೂ ನಡೆಯಬಹುದೆಂದು ಮುಂಬಯಿ ಹೈಕೋರ್ಟಿನವರು ನಿರ್ಣಯಿಸಿರುವುದರಿಂದ ಇಲ್ಲಿಯ ಕನ್ನಡ ಜನಕ್ಕೆ ಅಸನುಕೂಲತೆಯುಂಟಾಗಿದೆ. ಈ ಜಿಲ್ಲೆಯಲ್ಲಿ ಮೊದಲಿನಂತೆಯೇ ಎಲ್ಲ ಕೋರ್ಟುಗಳಲ್ಲಿ ಎಲ್ಲ ವ್ಯವಹಾರಗಳೂ ಕನ್ನಡದಲ್ಲಿಯೇ ನಡೆಯುವಂತೆ ಅಪ್ಪಣೆಮಾಡಬೇಕೆಂದು ಹೈಕೋರ್ಟಿನ ಅಧಿಕಾರಿಗಳಿಗೆ ಈ ಸಮ್ಮೇಳನವು ವಿಜ್ಞಾಪಿಸುತ್ತದೆ.

ಸೂಚಕರು:—ಮ॥ ರಾ॥ ಅಂಕಲಿ ಯಶವಂತರಾಯರು.

ಅನುಮೋದಕರು:—ಮ॥ ರಾ॥ ಗೆಜ್ಜಿ ಕೃಷ್ಣರಾಯರು.

ಅಂಗೀಕೃತವಾಯಿತು.

೬. ಕರ್ಣಾಟಕ ರಾಷ್ಟ್ರಗೀತೆಯೊಂದನ್ನು ನಿರ್ಧರಿಸಿ ಅದನ್ನು ಅಖಿಲ ಕರ್ಣಾಟಕದ ಎಲ್ಲ ಪಾಠಶಾಲೆಗಳಲ್ಲಿ ವಾಡಿಕೆಗೆ ತರುವ ಬಗ್ಗೆ ಈ ಸಮ್ಮೇಳನವು ಕೆಳಗೆ ಕಂಡ ಸದಸ್ಯರನ್ನೊಳಕೊಂಡ ಒಂದು ಮಂಡಲವನ್ನು ಏರ್ಪಡಿಸುತ್ತದೆ:—

ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು.
,, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು.
,, ಬೇಂದ್ರೆ ದತ್ತರಾಯರು.
,, ಎ. ಸೀತಾರಾಮಯ್ಯನವರು (ಕಾರ್ಯದರ್ಶಿ).
,, ಬೆಟ್ಟಿಗೇರಿ ಕೃಷ್ಣಶರ್ಮರು.
,, ಎಂ. ಎನ್. ಕಾಮತ್.
,, ಅಥಣಿ ಹನುಮಂತಾಚಾರ್ಯರು.
,, ಕಟ್ಟೀಮನಿ.
,, ಚಿಕ್ಕೋಡಿ.



ಸೂಚಕರು:—ಮ॥ ರಾ॥ ಪಾಟೀಲ ವೀರಭದ್ರಪ್ಪನವರು.

ಅನುಮೋದಕರು:—ಮ॥ ರಾ॥ ಕುಲಕರ್ಣಿ ಮಲ್ಹಾರರಾಯರು.

ಅಂಗೀಕೃತವಾಯಿತು.

೭. ಬೆಳಗಾಂವಿ ಜಿಲ್ಲೆಯ ಹಲವು ಗ್ರಾಮಗಳಲ್ಲಿ ಮೊದಲು ಇದ್ದ ಕನ್ನಡ ಶಾಲೆಗಳನ್ನು ತೆಗೆದುಹಾಕಿ ಅಲ್ಲಿ ಮರಾಟಿ ಶಾಲೆಗಳನ್ನು ಏರ್ಪಡಿಸಿರುವುದು ಕನ್ನಡ ಜನರಿಗೆ ಬಹಳ ಅನನುಕೂಲವಾಗಿದೆ. ಆದುದರಿಂದ ಇಂಥ ಸ್ಥಳಗಳಲ್ಲಿ ಮತ್ತೆ ಕನ್ನಡ ಶಾಲೆಗಳನ್ನೇ ಏರ್ಪಡಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು:—ಮ॥ ರಾ॥ ಶೈಲಪ್ಪನವರು.

ಅನುಮೋದಕರು:—ಮ॥ ರಾ॥ ಕುಲಕರಣಿ ಮಲ್ಹಾರರಾಯರು.

ಅಂಗೀಕೃತವಾಯಿತು.

೮. ಚಾಲುಕ್ಯ ರಾಷ್ಟ್ರಕೂಟರೇ ಮುಂತಾದ ಕನ್ನಡ ರಾಜರ ಹಲವು ಶಿಲಾಲೇಖನಗಳೂ, ತಾಮ್ರಶಾಸನಗಳೂ ನಿಜಾಂ ಕರ್ಣಾಟಕದಲ್ಲಿದ್ದು ಅವುಗಳಲ್ಲಿ

ಅತ್ಯಲ್ಪವೇ ಹೊರಗೆ ಬಂದಿರುವುದರಿಂದ ಬಹು ಸಂಖ್ಯಾತವಾದ ಈ ಪುರಾತನ ಶಾಸನಗಳನ್ನು ವರ್ಷಕ್ಕೆ ಒಂದೊಂದು ಸಂಪುಟದಂತೆಯಾದರೂ ಪ್ರಕಟಿಸುವ ಏರ್ಪಾಡು ಮಾಡಿಸಬೇಕೆಂದು ಈ ಸಮ್ಮೇಳನವು ಹೈದರಾಬಾದು ಸರ್ಕಾರವನ್ನು ಪ್ರಾರ್ಥಿಸುತ್ತದೆ.

ಸೂಚಕರು :—ಮ|| ರಾ|| ನಾರಾಯಣಶಾಸ್ತ್ರೀ ಭಾನೂಶಾಸ್ತ್ರೀ, ಕೊಪ್ಪಳ.
ಅನುಮೋದಕರು :—ಮ|| ರಾ|| ಎಚ್. ಚೆನ್ನಕೇಶವಯ್ಯಂಗಾರ್ಯರು.
ಅಂಗೀಕೃತವಾಯಿತು.

೯. ಬೆಳಗಾಂವಿ ಜಿಲ್ಲೆಯಲ್ಲಿಯ ಅನೇಕ ಕನ್ನಡ ಹಳ್ಳಿಗಳಲ್ಲಿ ಗ್ರಾಮದ ನೌಕರರು ಲೆಕ್ಕಪತ್ರಗಳನ್ನು ಕನ್ನಡದಲ್ಲಿ ಇಡುವುದಿಲ್ಲ. ಆದುದರಿಂದ ಕನ್ನಡದಲ್ಲಿಯೇ ಆಯಾ ಗ್ರಾಮದ ಲೆಕ್ಕಗಳನ್ನು ಇಡಬೇಕೆಂದು ಸರಕಾರದವರು ಅವರಿಗೆ ಆಜ್ಞಾಪಿಸಬೇಕಾಗಿ ಈ ಸಮ್ಮೇಳನವು ಆಗ್ರಹದ ವಿನಂತಿ ಮಾಡಿಕೊಳ್ಳುತ್ತದೆ.

ಸೂಚಕರು :—ಮ|| ರಾ|| ಅಂಕಲೆಯವರು.
ಅನುಮೋದಕರು :—ಮ|| ರಾ|| ಗೆಜ್ಜಿ ಕೃಷ್ಣರಾಯರು.
ಅಂಗೀಕೃತವಾಯಿತು.

೧೦. ಕನ್ನಡದ ಗ್ರಾಂಥಿಕ ಭಾಷೆಯ ಏಕೀಕರಣಕ್ಕಾಗಿ ಅಖಿಲ ಕರ್ಣಾಟಕದ ಬೇರೆ ಬೇರೆ ಭಾಗಗಳ ಶಿಷ್ಟ ಪ್ರಯೋಗಗಳನ್ನು ಆಧಾರವಾಗಿಟ್ಟುಕೊಂಡು, ಪಾಠಶಾಲೆಯಲ್ಲಿ ಅಭ್ಯಾಸ ಪುಸ್ತಕವಾಗುವಂತೆ ಹೊಸಗನ್ನಡ ವ್ಯಾಕರಣವೊಂದನ್ನು ಶಾಸ್ತ್ರೀಯ ಮಾರ್ಗದಿಂದ ರಚಿಸಬೇಕಾಗಿದೆ. ಅದಕ್ಕಾಗಿ ಈ ಸಮ್ಮೇಳನವು ಕೆಳಗೆ ಕಾಣಿಸಿದ ಉಪಸಭೆಯನ್ನು ಏರ್ಪಡಿಸುತ್ತದೆ:—

ಮ|| ರಾ|| ಟಿ. ಎಸ್. ವೆಂಕಣ್ಣಯ್ಯನವರು.
,, ಪಂಡಿತ ಶ್ರೀನಿವಾಸರಾಘವಾಚಾರ್ಯರು.
,, ಮುಳಿಯ ತಿಮ್ಮಪ್ಪಯ್ಯನವರು.
,, ಕಡೆಂಗೋಡ್ಲು ಶಂಕರಭಟ್ಟರು.
,, ರಾಜಪುರೋಹಿತ ನಾರಾಯಣರಾಯರು.
,, ಪಂಡಿತ ಕೇಶವಶರ್ಮಾ ಗಲಗಲಿ.
,, ಬೇಂದ್ರೆ ದತ್ತರಾಯರು.
,, ಉಗ್ರಾಣ ಮಂಗೇಶರಾಯರು.
,, ಪೂಜಾರ ಮಹಾದೇವ ಪ್ರಭಾಕರರು.
,, ಕಟ್ಟೀಮನಿ.
,, ಕೆ. ಜಿ. ಕುಂದಣಗಾರರು.

ಸೂಚಕರು :—ಮ|| ರಾ|| ನಾರಾಯಣ ಶ್ರೀನಿವಾಸ ರಾಜಪುರೋಹಿತರು.
ಅನುಮೋದಕರು :—ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರು.
ಅಂಗೀಕೃತವಾಯಿತು.

೧೧. ಮುಂಬೈ ಕರ್ನಾಟಕದ ಹಳ್ಳಿಗಳಲ್ಲಿರುವ ಅಂಚೆಯ ಕೆಲಸವು ಅಲ್ಲಲ್ಲಿಯ ಪಾಠಶಾಲೆಯ ಉಪಾಧ್ಯಾಯರುಗಳ ಕಡೆಗೆ ಇದ್ದು, ಮೇಲಣ ಅಧಿಕಾರಿಗಳು ಮರಾಟಿಗರಿರುವುದರಿಂದ ಅದರ ವ್ಯವಹಾರವನ್ನೆಲ್ಲ ಅನೇಕ ಸ್ಥಳಗಳಲ್ಲಿ ಮರಾಟಿಯಲ್ಲಿಯೇ ಸಾಗಿಸಬೇಕಾಗಿರುತ್ತದೆ. ಪೋಸ್ಟಿನ ವ್ಯವಹಾರವು ಆಯಾ ಪ್ರಾಂತೀಯ ಭಾಷೆಯಲ್ಲಿಯೇ ನಡೆಯಬೇಕೆಂದು ಇರುವ ನಿಯಮವನ್ನು ಯೋಗ್ಯ ರೀತಿಯಿಂದ ಪ್ರಚಾರದಲ್ಲಿ ತರುವಂತೆ ಮಾಡಬೇಕೆಂದು ಅಂಚೆಯ ಮುಖ್ಯಾಧಿಕಾರಿಗಳನ್ನು ಈ ಸಮ್ಮೇಳನವು ಕೇಳಿಕೊಳ್ಳುತ್ತದೆ.

ಸೂಚಕರು :—ಮ॥ ರಾ॥ ಪಾಟೀಲ ವೀರಭದ್ರಪ್ಪನವರು.

ಅನುಮೋದಕರು:—ಮ॥ ರಾ॥ ಸಿದ್ಧರಾಮಪ್ಪನವರು.

ಮ॥ ರಾ॥ ಕುಲಕರಣಿ ಮಲ್ಹಾರರಾಯರು.

ಅಂಗೀಕೃತವಾಯಿತು.

೧೨. ಮುಂಬಯಿ ಕರ್ನಾಟಕದಲ್ಲಿಯ ಪಬ್ಲಿಕ್‌ವರ್ಕ್ಸ್ ಡಿಪಾರ್ಟ್‌ಮೆಂಟಿನವರು ಮತ್ತು ಜಿಲ್ಲಾ ಬೋರ್ಡಿನವರು ದಾರಿಯಲ್ಲಿರುವ ಮೈಲು ಕಲ್ಲು, ಫರ್ಲಾಂಗು ಕಲ್ಲು, ಹಲಗೆ ಮುಂತಾದುವುಗಳನ್ನು ಇಂಗ್ಲಿಷಿನಲ್ಲಿ ಹಾಕುತ್ತಿದ್ದು, ಅದರಿಂದ ಇಂಗ್ಲಿಷ್ ಬಾರದವರಿಗೆ ಯಾವ ಪ್ರಯೋಜನವೂ ಆಗದಿರುವುದರಿಂದ ಅವುಗಳಲ್ಲಿ ಕನ್ನಡವನ್ನೂ ಸೇರಿಸಬೇಕೆಂದು ಈ ಸಮ್ಮೇಳನವು ಆ ಇಲಾಖೆಯವರಿಗೆ ತಿಳಿಸುತ್ತದೆ.

ಸೂಚಕರು:—ಮ॥ ರಾ॥ ಗಣೇಶ ರಾಮಯಾಜಿ.

ಅನುಮೋದಕರು :—ಮ॥ ರಾ॥ ಹೊಸ್ಮಾಪುರಮಠ, ವಕೀಲರು.

ಅಂಗೀಕೃತವಾಯಿತು.

೧೩. ಕಲ್ಬುರ್ಗಿಯ ಸಮ್ಮೇಳನದಲ್ಲಿ ಅಂಗೀಕೃತವಾದ (೩, ೪, ೫) (ಈ ಕೆಳಗೆ ಕಾಣಿಸಿರುವ) ನಿರ್ಣಯಗಳನ್ನು ಈ ಸಮ್ಮೇಳನವು ಮತ್ತೊಮ್ಮೆ ಎತ್ತಿ ಹೇಳುತ್ತದೆ.

ಈ ನಿರ್ಣಯಗಳು ಅಧ್ಯಕ್ಷರಿಂದ ಸೂಚಿಸಲ್ಪಟ್ಟು ಅಂಗೀಕೃತವಾದುವು:—

೧. (ಅ) ನಿಜಾಂ ಕರ್ನಾಟಕದಲ್ಲಿರುವ ಗುಲ್ಬರ್ಗ, ರಾಯಚೂರು, ಬೀದರ ಮುಂತಾದ ಜಿಲ್ಲೆಗಳು ಕನ್ನಡ ಜಿಲ್ಲೆಗಳಾದುದರಿಂದ ಆ ಭಾಗಗಳಲ್ಲಿರುವ ಕೋರ್ಟು ಕಚೇರಿಗಳ ಭಾಷೆಯು ಕನ್ನಡವಿರಬೇಕೆಂದು ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

(ಇ) ಪೋಸ್ಟಾಫೀಸು ಮಣಿಯಾರ್ಡರು ಫಾರಂ ಮುಂತಾದುವುಗಳು ಕನ್ನಡದಲ್ಲಿಯೂ ಇರುವಂತೆ ಏರ್ಪಾಡು ಮಾಡಬೇಕೆಂದು ಆಯಾ ಅಧಿಕಾರಿಗಳನ್ನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

(ಉ) ರೈಲ್ವೆ ಸ್ಟೇಷನುಗಳಲ್ಲಿ ಸ್ಟೇಷನುಗಳ ಹೆಸರು ಮುಂತಾದುವುಗಳು ಕನ್ನಡದಲ್ಲಿರಲು ವಿನಂತಿಮಾಡಿಕೊಳ್ಳತಕ್ಕದ್ದು.

೨. ನಿಜಾಂ ಕರ್ಣಾಟಕದಲ್ಲಿಯ ಎಲ್ಲ ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಣವೂ ಕನ್ನಡ ಬಾಲಕರ ಮಾತೃಭಾಷೆಯಲ್ಲದ ಭಾಷೆಗಳಲ್ಲಿ ನಡೆಯುತ್ತಿರುವುದರಿಂದ ಶಿಕ್ಷಣ ಪ್ರಗತಿಯು ಅತಿಶಯ ಕುಂಠಿತವಾಗುತ್ತಿದೆ. ಆದುದರಿಂದ ಆ ಪ್ರಾಥಮಿಕ ಶಿಕ್ಷಣವೆಲ್ಲವೂ ಕನ್ನಡದಲ್ಲಿಯೇ ಇರಬೇಕೆಂದೂ, ಮುಂದೆ ಅದು ಅವ್ಯಾಹತವಾಗಿ ಸಾಗುವಂತೆ ಏರ್ಪಾಡು ಮಾಡಲ್ಪಡಬೇಕೆಂದೂ ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

೩. ನಿಜಾಂ ಕರ್ಣಾಟಕದ ಗುಲ್ಬರ್ಗ, ಬೀದರ ಮುಂತಾದ ಜಿಲ್ಲೆಗಳಲ್ಲಿ ಗ್ರಾಮಸ್ಥರ ದಫ್ತರಗಳು ಮರಾಠಿಯಲ್ಲಿರುವುದರಿಂದ ಕನ್ನಡ ಪ್ರಾಥಮಿಕ ಶಿಕ್ಷಣಕ್ಕೆ ಬಹಳ ತೊಂದರೆಯಾಗಿರುವುದು. ಆದಕಾರಣ ಈ ಭಾಗಗಳಲ್ಲಿಯೂ ಗ್ರಾಮಸ್ಥರ ದಫ್ತರುಗಳು ಕನ್ನಡದಲ್ಲಿಯೇ ಇರುವಂತೆ ನಿಜಾಂ ಸರ್ಕಾರದವರು ಅಪ್ಪಣೆಕೊಡಿಸಿ ತೀವ್ರ ಜಾರಿಯಲ್ಲಿ ತರಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

**೧೪.** ಮುಂಬೈ ಕರ್ಣಾಟಕದಲ್ಲಿ ಅನೇಕ ವರ್ಷಗಳ ಹಿಂದಿನಿಂದಲೂ ಸಂಗ್ರಹಿಸಿ ಇಡುತ್ತ ಬಂದಿರುವ ಹಲವು ಶಿಲಾಲೇಖನ ತಾಮ್ರಶಾಸನಗಳನ್ನು ಆದಷ್ಟು ತೀವ್ರವಾಗಿ ವರ್ಷಕ್ಕೆ ಒಂದೊಂದು ಸಂಪುಟದಂತೆಯಾದರೂ ಪ್ರಕಟಿಸುವುದಕ್ಕೆ ಏರ್ಪಡಿಸಿ ತಾಳೆಯೋಲೆಯ ಪ್ರಾಚೀನ ಗ್ರಂಥಗಳನ್ನು ಕೂಡಹಾಕಲು ಸಮರ್ಥರಾದ ಇಬ್ಬರು ಕನ್ನಡ ಪಂಡಿತರನ್ನು ನೇಮಿಸಬೇಕೆಂದು ಮುಂಬೈ ಸರಕಾರದವರನ್ನೂ, ಮುಂಬೈ ಶಾಸನ ಸಭೆಯ ಕರ್ಣಾಟಕ ಸದಸ್ಯರನ್ನೂ ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಅಧ್ಯಕ್ಷರಿಂದ ಸೂಚಿಸಲ್ಪಟ್ಟು ಅಂಗೀಕೃತವಾಯಿತು.

**೧೫.** (೧) ನಿಜಾಂ ಸಂಸ್ಥಾನದ ಕನ್ನಡ ಜಿಲ್ಲೆಗಳ ಭಾಗವನ್ನು ಮೊದಲಿದ್ದಂತೆ 'ಕರ್ಣಾಟಕ ಸುಬಾ' ಎಂದು ಬೇರೆ ಮಾಡಿ ಆ ಭಾಗದಲ್ಲಿ ರಾಜಕೀಯ ವ್ಯವಹಾರಗಳನ್ನೂ ಕೋರ್ಟು ಭಾಷೆಯನ್ನೂ ಕನ್ನಡವನ್ನಾಗಿ ಮಾಡುವಂತೆ ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ಪ್ರಾರ್ಥಿಸುತ್ತದೆ.

(೨) ಹೈದರಾಬಾದ್ ಗೆಜಿಟ್ (ಜರೀದಾ) ಉರ್ದು ಭಾಷೆಯಲ್ಲಿ ಪ್ರಕಟವಾಗುತ್ತಿರುವುದರಿಂದ ಬಹು ಸಂಖ್ಯೆಯವರಾದ ಕನ್ನಡ ಪ್ರಜೆಗಳಿಗೆ ಸರ್ಕಾರದ ಯಾವ ವಿಷಯಗಳೂ ತಿಳಿಯದೆ ಇರುವುದರಿಂದ ಗೆಜಿಟ್ಟಿನಲ್ಲಿ ಬರುವ ಸರ್ಕಾರಿ ಹುಕುಮುಗಳೂ ಕಾನೂನುಗಳೂ ಕನ್ನಡದಲ್ಲಿ ಪ್ರಕಟನೆಯಾಗುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನವು ಆ ಸರ್ಕಾರವನ್ನು ಪ್ರಾರ್ಥಿಸುತ್ತದೆ.

ಸೂಚಕರು :—ಮ|| ರಾ|| ರಾಘವೇಂದ್ರರಾವ್ ಚಾಕಲಬ್ಬಿ.
ಅನುಮೋದಕರು :—ಮ|| ರಾ|| ನಾರಾಯಣ ಶ್ರೀನಿವಾಸ
ರಾಜಪುರೋಹಿತರು.

ಅಂಗೀಕೃತವಾಯಿತು.

೧೬. ಮುಧೋಳ, ಜತ್ತು, ಅಕ್ಕಲಕೋಟೆ, ಸೊಂಡೂರು ಸಂಸ್ಥಾನಗಳೊಳಗಿನ ಪ್ರಜೆಗಳು ಕನ್ನಡ ಭಾಷೆಯವರಾಗಿದ್ದು ಪ್ರಾಥಮಿಕ ಶಿಕ್ಷಣವನ್ನು ಅವರಿಗೆ ಕನ್ನಡ ಭಾಷೆಯಲ್ಲಿ ಕೊಡದೆ ಮರಾಟಿ ಭಾಷೆಯಲ್ಲಿ ಕೊಡುವ್ರದರಿಂದ ಪ್ರಜೆಗಳಿಗೆ ಶಿಕ್ಷಣದ ಲಾಭ ದೊರೆಯುವುದಿಲ್ಲ. ಮತ್ತು ರಾಜಕೀಯ ದರಬಾರಿ ದಫ್ತರವನ್ನು ಕನ್ನಡ ಭಾಷೆಯಲ್ಲಿಡದೆ ಮರಾಠಿಯಲ್ಲಿಟ್ಟಿರುವುದರಿಂದ ಬಹಳ ತೊಂದರೆಗಳು ಸಂಭವಿಸುತ್ತವೆ. ಆದುದರಿಂದ ಆ ಸಂಸ್ಥಾನಗಳ ಕನ್ನಡ ಪ್ರಜೆಗಳಿಗೆ ಶಿಕ್ಷಣವನ್ನು ಕನ್ನಡದಲ್ಲಿಯೇ ಕೊಡಬೇಕೆಂದೂ, ರಾಜಕೀಯ ದರ್ಬಾರಿ ದಫ್ತರವನ್ನು ಕನ್ನಡದಲ್ಲಿಯೇ ಇರಿಸಬೇಕೆಂದೂ ಈ ಸಮ್ಮೇಳನವು ಈ ಸರ್ಕಾರಗಳಿಗೆ ಬಿನ್ನವಿಸುತ್ತದೆ.

ಸೂಚಕರು :—ಮ॥ ರಾ॥ ಟಿ. ಎಸ್. ಚಿಕ್ಕೋಡಿ.

ಅನುಮೋದಕರು :—ಮ॥ ರಾ॥ ನಾರಾಯಣ ಶ್ರೀನಿವಾಸ ರಾಜಪುರೋಹಿತರು.

ಅಂಗೀಕೃತವಾಯಿತು.

೧೭. ಮುಂಬಯಿ ಕರ್ಣಾಟಕದಲ್ಲಿ ವಕೀಲಿ ಮಾಡುವ ಜನರಿಗೆ ವಕೀಲಿಯ ಸನ್ನದು ಕೊಡುವ ಮೊದಲು ಹೈಕೋರ್ಟಿನವರು ಅವರು ಕನ್ನಡವನ್ನು ಬಲ್ಲರೆಂಬ ಬಗ್ಗೆ ಸರ್ಟಿಫಿಕೇಟ್ ತರಬೇಕೆಂದು ನಿರ್ಣಯಿಸಿರುತ್ತಾರೆ. ಆದರೆ ಈ ಸರ್ಟಿಫಿಕೇಟು ನೆಪಮಾತ್ರವಾಗಿರುವುದರಿಂದ ಜನರಿಗೆ ಪ್ರಯೋಜನವಿಲ್ಲ. ಸರ್ಕಾರದ ಅಧಿಕಾರಿಗಳಿಗೆ ಇಲ್ಲಿರುವಂತೆ ಅವರಿಗೂ ಕನ್ನಡದ ಒಂದು ಪರೀಕ್ಷೆಯನ್ನು ನಡಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಅಂಕಲೆಯವರು.

ಅನುಮೋದಕರು :—ಮ॥ ರಾ॥ ಗಣೇಶ ರಾಮಯಾಜಿಯವರು.

ಅಂಗೀಕೃತವಾಯಿತು.

೧೮. ಮುಂಬಯಿ ಕರ್ಣಾಟಕದಲ್ಲಿ ವಿದ್ಯಾಖಾತೆಯ ಇನ್ಸ್ಪೆಕ್ಟರ್ ಮೊದಲಾದ ನೌಕರರುಗಳೆಲ್ಲರೂ ಕನ್ನಡಿಗರಾಗಿರತಕ್ಕುದು ಅತ್ಯಾವಶ್ಯಕವೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಹೊನ್ನಾಪುರಮಠ.

ಅನುಮೋದಕರು :—ಮ॥ ರಾ॥ ವೀರಯ್ಯ ಕುಲಕರ್ಣಿ.

ಅಂಗೀಕೃತವಾಯಿತು.

೧೯. ಮುಂಬಯಿ ಕರ್ಣಾಟಕದ ಕನ್ನಡ ಟ್ರೈನಿಂಗು ಕಾಲೇಜಿನಲ್ಲಿ ಮೂರು ತರಗತಿಗಳಿದ್ದುದನ್ನು ವಜಾಮಾಡಿ ಒಂದೇ ತರಗತಿಯನ್ನಿಟ್ಟಿರುವುದರಿಂದ ಶಿಕ್ಷಣ ಪ್ರಾವೀಣ್ಯದ ಅಭ್ಯಾಸಕ್ಕೆ ಹಾನಿಯುಂಟಾಗಿದೆ; ಆದುದರಿಂದ ಮೊದಲಿನಂತೆ ಮೂರು ವರ್ಷದ ಅಭ್ಯಾಸವನ್ನು ಏರ್ಪಡಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ|| ರಾ|| ಹೊನ್ನಾಪುರಮಠ.
ಅನುಮೋದಕರು :—ಮ|| ರಾ|| ವೀರಯ್ಯ ಕುಲಕರ್ಣಿ.
ಅಂಗೀಕೃತವಾಯಿತು.

೨೦. ಮುಂಬಯಿ ಕರ್ಣಾಟಕದಲ್ಲಿಯ ವರ್ನಾಕ್ಯುಲರ್ ಸ್ಕೂಲ್ ಫೈನಲ್ ಪರೀಕ್ಷೆಗೆ ಬಹು ವರ್ಷಗಳಿಂದಲೂ ಒಂದೇ ಪಠ್ಯ ಪುಸ್ತಕವನ್ನು ನೇಮಿಸಿರುವುದ ರಿಂದ, ಹಾಗಿರುವುದು ಕರ್ಣಾಟಕ ಸಾಹಿತ್ಯ ಜ್ಞಾನ ವಿಕಾಸಕ್ಕೆ ಅವಕಾಶವನ್ನು ತಪ್ಪಿಸುವುದಾದ ಕಾರಣ ಬೇರೆಬೇರೆ ಪುಸ್ತಕಗಳನ್ನು ಪ್ರತಿ ವರ್ಷವೂ ಬದಲಾ ಯಿಸಿ ಇಡಬೇಕೆಂದು ಈ ಸಮ್ಮೇಳನವು ಮುಂಬಯಿ ಸರ್ಕಾರವನ್ನೂ ಸ್ಥಾನಿಕ ಸರ್ಕಾರವನ್ನೂ ಕೇಳಿಕೊಳ್ಳುತ್ತದೆ.

೨೧. ಕನ್ನಡದಲ್ಲಿ ಮೈಸೂರು, ಮದರಾಸು ಇಲಾಖೆಗಳಲ್ಲಿರುವ ಪಂಡಿತ ಪರೀಕ್ಷೆಗಳಲ್ಲಿ ಪಾಸಾಗಿ ಬಂದವರನ್ನು ಮುಂಬಯಿ, ನಿಜಾಂ ಇಲಾಖೆಗಳಲ್ಲಿರುವ ಹೈಸ್ಕೂಲು ಮುಂತಾದುವುಗಳಲ್ಲಿ ನೇಮಿಸಿಕೊಂಡು ಅವರ ಪಾಂಡಿತ್ಯದ ಲಾಭ ವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡುವುದು ಇಷ್ಟವಾಗಿರುವುದರಿಂದ ಆ ಎರಡೂ ಸರ್ಕಾರದವರು ಆ ಪ್ರಕಾರ ನೇಮಿಸಿಕೊಳ್ಳಬೇಕೆಂದು ಈ ಸಮ್ಮೇಳನವು ಮುಂಬಯಿ, ನಿಜಾಂ ಸರ್ಕಾರದವರನ್ನು ಕೇಳಿಕೊಳ್ಳುತ್ತದೆ.

ಅಧ್ಯಕ್ಷರಿಂದ ಸೂಚಿಸಲ್ಪಟ್ಟು ಅಂಗೀಕೃತವಾದುವು.

೨೨. ಕನ್ನಡ ಗಡಿನಾಡಿನ ಅನೇಕ ಭಾಗಗಳಲ್ಲಿ ಬಹು ಮಂದಿ ಕನ್ನಡಿಗ ರಿರುವರಾದರೂ ಅವರಲ್ಲನೇಕರಿಗೆ ಕನ್ನಡ ಲಿಪಿಯೂ ವಾಚನವೂ ಗೊತ್ತಿಲ್ಲದೆ ಕನ್ನಡವು ಜೀರ್ಣವಾಗುತ್ತಲಿದೆ. ಇದಕ್ಕಾಗಿ ಈ ಪ್ರಾಂತಗಳಲ್ಲಿ ಕನ್ನಡ ಪ್ರಸಾರಣೆಯ ಬಗ್ಗೆ ಒಬ್ಬ ಪ್ರಚಾರಕರನ್ನು ಸಾಹಿತ್ಯ ಪರಿಷತ್ತು ಕೂಡಲೆ ಗೊತ್ತುಪಡಿಸತಕ್ಕದ್ದು.

ಸೂಚಕರು :—ಮ|| ರಾ|| ಅಂಕಲೆಯವರು.
ಅನುಮೋದಕರು :—ಮ|| ರಾ|| ಗಣೇಶ ರಾಮಯಾಜಿಯವರು.
ಅಂಗೀಕೃತವಾಯಿತು.

೨೩. ಉತ್ತರ ಕನ್ನಡ ಜಿಲ್ಲೆಯಲ್ಲಿ ಕೆಲವು ಊರುಗಳಲ್ಲಿ ಮರಾಠಿ ಶಾಲೆ ಗಳಿದ್ದು ಅದರಿಂದ ಕನ್ನಡ ಭಾಷಾಭಿವೃದ್ಧಿಗೂ ವ್ಯವಹಾರಕ್ಕೂ ಆತಂಕವಾಗಿರು ವುದರಿಂದ ಆ ಶಾಲೆಗಳನ್ನು ಕನ್ನಡವಾಗಿ ಮಾಡಬೇಕೆಂದೂ, ಅನಿರ್ವಾಹ ಪಕ್ಷದಲ್ಲಿ ಕನ್ನಡವನ್ನು ನಿರ್ಬಂಧದಿಂದ ಕಲಿಸಬೇಕೆಂದೂ ಈ ಸಮ್ಮೇಳನವು ಅಲ್ಲಿಯ ಬೋರ್ಡಿಗೆ ವಿಜ್ಞಾಪನೆ ಮಾಡಿಕೊಳ್ಳುತ್ತದೆ.

ಸೂಚಕರು :—ಮ|| ರಾ|| ಗಣೇಶ ರಾಮಯಾಜಿಯವರು.
ಅನುಮೋದಕರು :—ಮ|| ರಾ|| ಟಿ. ಎಸ್. ಚಿಕ್ಕೋಡಿಯವರು.
ಅಂಗೀಕೃತವಾಯಿತು.

ತರುವಾಯ, ಸಮ್ಮೇಳನ ಕಾಲದಲ್ಲಿ ಓದಲಿಕ್ಕೆಂದು ಬರೆದು ಬಂದಿದ್ದ ನಿಬಂಧ ಗಳಲ್ಲಿ ಕೆಲವನ್ನು ಓದಬೇಕೆಂದು ಗೊತ್ತಾಗಿ ಚಿಕ್ಕದಾದ ಕೆಲವುಗಳನ್ನು ಓದ

ಲಾಯಿತು. ಮೈಸೂರು ಗೌರ್ನಮೆಂಟು ಕನ್ನಡ ಟ್ರಾನ್ಸ್‌ಲೇಟರ್ ಮ॥ ರಾ॥ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು ಭಾಸ ಕವಿಯ ವಿಷಯವಾಗಿ ಸ್ವಲ್ಪ ಕಾಲ ಭಾಷಣ ಮಾಡಿದರು. ಆಮೇಲೆ 'ನಾಗಾಯಿಯ ಅವಶೇಷ' ಎಂಬ ನಿಬಂಧವನ್ನು ಮ॥ ರಾ॥ ಚಾಕಲಬ್ಬಿ ರಾಘವೇಂದ್ರರಾಯರು ಓದಿದರು. ಇಷ್ಟಕ್ಕೆ ಎರಡನೆಯ ದಿವಸದ ಕಾರ್ಯವು ಮುಗಿಯಿತು.

---

## ಮೂರನೆಯ ದಿವಸ (೧೫-೫-೧೯೨೯)

ಮಧ್ಯಾಹ್ನಾನಂತರ ೨-೩೦ ಗಂಟೆಗೆ ವಿಷಯ ನಿರ್ಧಾರಕ ಸಭೆಯು ಮರಳಿ ಕೂಡಿ ಬೆಳಗಾಂವಿಯಲ್ಲಿ ವಾಸವಾಗಿರುವ ಮರಾಠಿ ಭಾಷಾಭಿಮಾನಿಗಳು ಕೆಲಬರು ಮರಾಠಿ ಸಾಹಿತ್ಯ ಸಮ್ಮೇಳನವನ್ನು ಅದೇ ತಿಂಗಳ ಕೊನೆಯಲ್ಲಿ ಬೆಳಗಾಂವಿಯಲ್ಲಿಯೇ ಕೂಡಿಸಬೇಕೆಂದು ಕೈಕೊಂಡಿದ್ದ ಪ್ರಯತ್ನ ವಿಷಯದಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಳನವು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕೆಂಬ ವಿಷಯವು ದೀರ್ಘ ಕಾಲ ಚರ್ಚೆಯಾಯಿತು. ಇಷ್ಟು ಹೊತ್ತಿಗೆ ೪-೩೦ ಗಂಟೆಯಾಗಲು, ಸಮ್ಮೇಳನವು ಮರಳಿ ಕೂಡಿ ಕೆಳಗೆ ಕೊಟ್ಟಿರುವ ಠರಾವು ಸರ್ವಾನುಮತದಿಂದ ಅಂಗೀಕೃತವಾಯಿತು :—

**೨೪.** ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಅಧ್ಯಕ್ಷರವರಿಂದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳವರಿಗೆ ಬೆಳಗಾಂವಿಯ ನಗರದಲ್ಲಿ ಇದೇ ಮೇ ತಿಂಗಳು ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನವು ಕೂಡುವ ವಿಚಾರವಾಗಿ ೧೯೨೯ನೆಯ ಏಪ್ರಿಲ್ ೨೧ನೆಯ ತಾರೀಖಿನಲ್ಲಿ ಬಂದ ಪತ್ರವನ್ನು ಓದಿ ರೆಕಾರ್ಡು ಮಾಡಿ ಈ ಸಮ್ಮೇಳನವು ಕೆಳಗೆ ಕಂಡಂತೆ ನಿರ್ಧರಿಸುತ್ತದೆ:—

ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನವು ಬೆಳಗಾಂವಿ ನಗರದಲ್ಲಿ ಕೂಡುವ ವಿಚಾರದಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಶಂಕೆಪಟ್ಟದ್ದು ನಿಷ್ಕಾರಣವೆಂದೂ, ಅವರು ಕಲಹೋದ್ದೇಶದಿಂದ ವರ್ತಿಸಿದರೆಂದೂ ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಅಧ್ಯಕ್ಷರು ಸೂಚಿಸಿರುವ ಅಭಿಪ್ರಾಯವನ್ನು ಈ ಸಮ್ಮೇಳನವು ಅಂಗೀಕರಿಸಲಾಗುವುದಿಲ್ಲವೆಂದು ಹೇಳಲು ವಿಷಾದಪಡುತ್ತದೆ. ಮತ್ತು ಬೆಳಗಾಂವಿ ಜಿಲ್ಲೆಯ ಪ್ರಕೃತ ಸ್ಥಿತಿಯಲ್ಲಿ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನವು ಬೆಳಗಾಂವಿಯಲ್ಲಿ ಸೇರತಕ್ಕದ್ದು ಅಪ್ರಸ್ತುತವೆಂದು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯವರು ಸೂಚಿಸಿದುದನ್ನು ಈ ಸಮ್ಮೇಳನವು ಒತ್ತಿ ಹೇಳುತ್ತದೆ.

ಸೂಚಕರು :—ಮ॥ ರಾ॥ ಜೋಶಿ ನಾರಾಯಣರಾಯರು.
ಅನುಮೋದಕರು :—ಮ॥ ರಾ॥ ಅಂಕಲೆಯವರು.
ಅಂಗೀಕೃತವಾಯಿತು.

ಉಳಿದಿದ್ದ ಪ್ರಬಂಧಗಳೆಲ್ಲವನ್ನೂ ಓದಲು ಕಾಲವಿರಲಿಲ್ಲವಾದುದರಿಂದ ಅಧ್ಯಕ್ಷರು ಈ ವಿಷಯವನ್ನು ಸಭೆಗೆ ತಿಳಿಸಿ, ಪ್ರಬಂಧಗಳೆಲ್ಲವೂ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗುವುದರಿಂದ ಅವುಗಳನ್ನು ವಾಚಕರು ವಿರಾಮವಾಗಿ ಓದಿಕೊಳ್ಳಬಹುದೆಂದೂ, ಉಳಿದಿರುವ ಅಲ್ಪಕಾಲದಲ್ಲಿ ಮೈಸೂರು ಮಹಾರಾಜರವರ ಸಂಸ್ಕೃತ ಪಾಠಶಾಲೆಯ ಅಧ್ಯಕ್ಷರಾದ ಮ|| ರಾ|| ಯೋಗಾನರಸಿಂಹಂ, ಎಂ.ಎ. ಅವರು ಸುಪ್ರಸಿದ್ಧ ಗಾಯಕರೂ ರಾಮಭಕ್ತರೂ ಆಗಿದ್ದ ತ್ಯಾಗರಾಜರವರ ಜೀವನ ಚರಿತೆಯನ್ನು ಸಂಕ್ಷೇಪವಾಗಿ ಹೇಳುತ್ತ ಜೊತೆಗೆ ಅವರ ಕೀರ್ತನೆಗಳಲ್ಲಿ ಕೆಲವನ್ನು ದೃಷ್ಟಾಂತ ರೂಪವಾಗಿ ಹಾಡುವರೆಂದೂ ವಿಜ್ಞಾಪಿಸಿಕೊಂಡನಂತರ ಮ|| ರಾ|| ಯೋಗಾನರಸಿಂಹಂ ಅವರು ಉಪನ್ಯಾಸವನ್ನು ಪ್ರಾರಂಭಿಸಿದರು. ಹತ್ತು ನಿಮಿಷಗಳೊಳಗಾಗಿ ಅದನ್ನು ನಿಲ್ಲಿಸಬೇಕಾಗಿ ಬಂದಿತು.

ಆಮೇಲೆ ಅಧ್ಯಕ್ಷರು ಎದ್ದು ಉಪಸಂಹಾರ ಭಾಷಣವನ್ನು ಮಾಡಿ ಸಮ್ಮೇಳನವನ್ನು ಅತ್ಯಂತ ವೈಭವದಿಂದ ಬೆಳಗಾಂವಿಯ ಮಹಾಜನರು ನಡೆಯಿಸಿದುದಕ್ಕಾಗಿ ಅವರಿಗೆ ವಂದನೆಗಳನ್ನರ್ಪಿಸಿದರು. ಸ್ವಾಗತ ಮಂಡಲಿಯ ಅಧ್ಯಕ್ಷರ ಪರವಾಗಿ ಮ|| ರಾ|| ಜೋಷಿಯವರೂ, ಮ|| ರಾ|| ಗೆಜ್ಜಿ ಕೃಷ್ಣರಾಯರೂ, ಕರ್ಣಾಟಕದ ನಾನಾ ಭಾಗಗಳಿಂದ ಪ್ರತಿನಿಧಿಗಳು ಈ ಸಮ್ಮೇಳನಕ್ಕೆ ದಯಮಾಡಿಸಿದುದಕ್ಕಾಗಿಯೂ, ಮ|| ರಾ|| ಮಾಸ್ತಿ ವೆಂಕಟೇಶಯ್ಯಂಗಾರ್ಯರು ಸಭಾಧ್ಯಕ್ಷತೆಯನ್ನು ವಹಿಸಿ ಸಮ್ಮೇಳನವನ್ನು ಸಾಂಗವಾಗಿ ನಡೆಯಿಸಿ ಕೊಟ್ಟುದಕ್ಕಾಗಿಯೂ ಬೆಳಗಾಂವಿಯ ಮಹಾಜನರ ಪಕ್ಷವಾಗಿ ವಂದನೆಗಳನ್ನರ್ಪಿಸಿದರು.

ಕೊನೆಗೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯವರಾದ ಮ|| ರಾ|| ಸಂಗಪುರಂ ವೆಂಕಟೇಶಯ್ಯಂಗಾರ್ಯರು ಪರಿಷತ್ತಿನ ಪರವಾಗಿ ಬೆಳಗಾಂವಿಯ ಮಹಾಜನರ ಔದಾರ್ಯವನ್ನೂ ಉತ್ಸಾಹವನ್ನೂ ಕೊಂಡಾಡಿ, ಅವರಿಗೂ ಅಧ್ಯಕ್ಷರಿಗೂ ಮನಃಪೂರ್ವಕವಾದ ವಂದನೆಗಳನ್ನು ಸಮರ್ಪಿಸಿದರು. ಮ|| ರಾ|| ಕೃಷ್ಣರಾವ್ ಮುದವೇಡಕರ್ ಅವರು ಎದ್ದು ಅಲ್ಲಿ ನೆರೆದಿದ್ದವರೆಲ್ಲರಿಗೂ ವಂದನೆಗಳನ್ನರ್ಪಿಸಿದರು. ಇಲ್ಲಿಗೆ ಸಮ್ಮೇಳನವು ಪೂರಯಿಸಿತು.

---

## ಸ್ವಾಗತಾಧ್ಯಕ್ಷರ ಭಾಷಣ

ಕನ್ನಡ ಶಾರದೆಯ ಸೇವಕರಾದ ನನ್ನ ಸಹೋದರ ಸಹೋದರಿಯರೇ! **'ನುಡಿಯೇ ನಾಡಿನ ಜೀವ'** ವೆಂಬ ಸಿದ್ಧಾಂತವನ್ನು ಮುಂದಿಟ್ಟುಕೊಂಡು ಕನ್ನಡ ನುಡಿಯ ಉನ್ನತಿಗಾಗಿ ಯತ್ನಮಾಡಲೆಂದು ಅನುಗೊಂಡು ಬಂದ ತಮ್ಮೆಲ್ಲರನ್ನೂ ಬರಮಾಡಿಕೊಳ್ಳುವ ಭಾಗ್ಯವು ನನಗೆ ದೊರೆತುದಕ್ಕಾಗಿ ಬಲು ಆನಂದವೆನಿಸುತ್ತಿದೆ. ಪಯಣದ ದಣಿವು, ಹಣದ ವೆಚ್ಚದ ಹೊರೆ, ಇವುಗಳನ್ನೆಲ್ಲ ಸಹಿಸಿ **"ಕನ್ನಡ ತಾಯಿಯ ಮಕ್ಕಳು ನಾವೆಲ್ಲರೊಂದೆ"** ಎಂಬ ಮಾತನ್ನು

ಸಿದ್ಧಗೊಳಿಸಲು, ಮಾತೃಭಾಷೆಯಿಂದ ಚ್ಯುತರಾಗುತ್ತ ನಡೆದಿರುವ ನಮಗೆ ಉಚಿತ ಕಾಲಕ್ಕೆ ಅರಿವನ್ನು ಹುಟ್ಟಿಸಲು ಇಲ್ಲಿಯ ವರೆಗೆ ಬಂದ ತಮ್ಮೆಲ್ಲರ ಉಪಕಾರವು ನಮ್ಮ ಬೆಳಗಾಂವಿಯ ಜನರಮೇಲೆ ಅಷ್ಟಿಷ್ಟಾಯಿತೆಂದು ಹೇಳಲು ಬಾರದು. ನುಡಿಯ ಏಳಿಗೆಗಾಗಿ ಒದಗಿದ ಸಂಕಟಗಳನ್ನೆಲ್ಲ ಎದುರಿಸಲು ಸಿದ್ಧರಾದ ತಾವು ನಾವು ಮಾಡುವ ಆತಿಥ್ಯದಲ್ಲಿಯ ಕುಂದು ಕೊರತೆಗಳನ್ನು ಕ್ಷಮಿಸದಿರಲಾರಿರೆಂದು ನನ್ನ ಪೂರ್ಣ ನಂಬುಗೆಯಿದೆ.

ಕನ್ನಡ ಸಾಹಿತ್ಯ ಪ್ರಪಂಚದ ಇತಿಹಾಸದ ಕಡೆಗೆ ನೋಡಿದಲ್ಲಿ ನಮ್ಮ ಜಿಲ್ಲೆಯೂ ತಕ್ಕಷ್ಟು ಸಾಹಿತ್ಯ ಸೇವಕರನ್ನು ಒದವಿಸಿ ಭಾಷಾಮಾತೆಯ ಪೂಜೆಗೆ ಸಾಹಿತ್ಯಗಳನ್ನು ಸಂಗ್ರಹಿಸಿಕೊಟ್ಟಿದೆಯೆಂದು ಹೇಳಬಹುದು. ಬೆಳುಗಲಿ ನಾಡಿನ ಬಳೆಗಾರ ರನ್ನನು—ಕರ್ಣಾಟಕ ಕವಿರತ್ನನು—ಕನ್ನಡ ಸರಸತಿಗೆ ತನ್ನ ಕೃತಿಗಳಿಂದ ಶಾಶ್ವತವಾದ ಮಂಗಲ ಕಂಕಣಗಳನ್ನು ತೊಡಿಸಿರುವನು. **“ಮರುಳಂ ತಿರುಳಾಗಿಪ, ಕಾಷ್ಠಮಂ ಕೊನರಿಪ, ಕಲ್ಲಲ್ಲಿ ನಾರೆತ್ತುವ, ಕಿವಿಗಳೊಳ್ ಪೀಯೂಷಮಂ ಪಿಂಡುವ”** ಕವಿರಾಜ ಕುಂಜರ ನೇಮಿನಾಥನು—ಸಾಹಿತ್ಯ ಕಲಾಧರನು, ಕನ್ನಡ ತಾಯಿಯ ಕಳೆಯನ್ನು ಹೆಚ್ಚಿಸಿರುವನು. ಸವದತ್ತಿಯ ರಟ್ಟರಾಜರ ಆಶ್ರಯದಲ್ಲಿದ್ದ ಕವಿಗಳ ಕೆಲಸವೇನೂ ಕಡಿಮೆಯದಲ್ಲ. ಮಧ್ಯಕಾಲದಲ್ಲಿಯೂ ಅನೇಕ ಶಿವಶರಣರು, ವೈಷ್ಣವ ದಾಸರು, ನಮ್ಮ ನಾಡಿನಲ್ಲಿಯ ಸಾಹಿತ್ಯದ ಬೆಳವಣಿಗೆಗೆ ಸಹಾಯಕರಾಗಿರುವರು. ಆದರೆ ಮುಹಮ್ಮದೀಯರು, ಮರಾಟಿಗರು, ಇಂಗ್ಲಿಷರು—ಇವರ ಕೈಸೇರುತ್ತ ಬಂದಂದಿನಿಂದ ಪರ ಭಾಷೆಯ ಪುಸ್ಟವು ನಮ್ಮ ಜಿಲ್ಲೆಯಲ್ಲಿ ಬೆಳೆದು ಕನ್ನಡ ನುಡಿಯು ಕಳೆಗುಂದುತ್ತ ಬಂದಿದೆ. ಸೋತ ಜನಾಂಗದ ಮೇಲೆ ಗೆದ್ದ ಜನಾಂಗವು ತನ್ನ ನಡೆ, ನುಡಿ, ಆಚಾರ, ವಿಚಾರಗಳನ್ನು ಬಲಾತ್ಕಾರದಿಂದ ಹೊರಿಸುತ್ತಿರುವುದೊಂದು ರಾಜನೀತಿ. ಜನರು ಅರಿವುಗೇಡಿಗಳಾಗಿ ಈ ಹೊರೆಯನ್ನು ಹೊರಲು ಸಿದ್ಧರಾದರೆ ತಮ್ಮ ವ್ಯಕ್ತಿತ್ವವನ್ನು ಹಾಳುಮಾಡಿಕೊಳ್ಳುವರು. ಅಲ್ಲದೆ, ಅಂತಹ ಜನರಿರುವ ರಾಷ್ಟ್ರವು ನಾಮಶೇಷವಾಗುವುದರಲ್ಲಿ ಸಂದೇಹವಿಲ್ಲ. ಪ್ರಪಂಚದಲ್ಲಿ ಏಳು ಬೀಳುಗಳು ಒಂದರ ಹಿಂದೆ ಇನ್ನೊಂದು ಇದ್ದೇ ಇರುವುವು. ಒಮ್ಮೆ ಉನ್ನತಿಯ ಅತ್ಯುಚ್ಚ ಶಿಖರದ ಮೇಲೆ ಕುಳಿತ ದೇಶವು ಇನ್ನೊಮ್ಮೆ ಅವನತಿಯ ಆಳವಾದ ಕಂದರದಲ್ಲಿ ಬೀಳುವುದೆಂಬುದಕ್ಕೆ ಬೇರೆ ಉದಾಹರಣೆಗಳೇ ಬೇಕಾಗಿಲ್ಲ. ನಮ್ಮ ಕನ್ನಡ ನಾಡು ಇದಕ್ಕೆ ದೊಡ್ಡದಾದ ಸಾಕ್ಷಿಯಾಗಿದೆ. ಬಿದ್ದವನು ಬಿದ್ದೇಹೋದೆನೆಂದು ತಿಳಿದುಕೊಂಡು ಬಿದ್ದಲ್ಲಿ ಬೀಳದೆ ಎದ್ದು ನಡೆಯಲು ಹವಣಿಸಬೇಕು. ಬಿದ್ದ ಪೆಟ್ಟನ್ನು ಸಹಿಸಿ ಸವರಿಸಿಕೊಂಡು ತನ್ನ ಕಾಲುಗಳಿಂದಲೇ ಎದ್ದು ನಡೆಯಬೇಕು. ಆವರೆಯೇ ಅವನು ಗುರಿಯನ್ನು ಮುಟ್ಟುವನು; ಇಲ್ಲದಿದ್ದರೆ ಅವನ ಇರವು ನಿರುಪಯುಕ್ತವಾಗುವುದು.

ಇಂದು ನಮ್ಮ ನಾಡು ಬಿದ್ದಿದೆ. ನಮ್ಮ ಜೀವಾಳವಾದ ಮಹತ್ತ್ವದ ಅಂಗವಾದ ಭಾಷೆ ಸಂಸ್ಕೃತಿಗಳಿಗೆ ಏಟು ತಗುಲಿದೆ. ಏಟು ತಗುಲಿದ ಅಂಗವನ್ನು

ಪೂರ್ಣವಾಗಿ ಕಡಿದು ಕೃತ್ರಿಮಾಂಗಗಳನ್ನು ಜೋಡಿಸಬೇಕೊ? ಇಲ್ಲವೆ ಸರಿಯಾದ ಪೌಷ್ಟಿಕವಾದ ಔಷಧಗಳನ್ನು ಕೊಟ್ಟು ಇದ್ದ ಅಂಗಗಳನ್ನೇ ಸರಿಪಡಿಸಿಕೊಳ್ಳಬೇಕೊ? ಕೃತ್ರಿಮಾಂಗಗಳಿಂದ ಕೆಲಸ ಸರಿಯಾಗಿ ಸಾಗದು. ಸ್ವಾಭಾವಿಕವಾದ ಅಂಗಗಳಿಂದಲೇ ಹೆಚ್ಚು ಕೆಲಸವಾಗುವುದು. ಭಾಷೆ ಸಂಸ್ಕೃತಿಗಳ ರೀತಿಯೂ ಹೀಗೆಯೇ. ಬಿದ್ದವರು ನಾವೀಗ ಏಳಲೇ ಬೇಕಾಗಿದೆ. ಅಳಿದುಳಿದ ನಮ್ಮ ಭಾಷೆಯ ಸಂಸ್ಕೃತಿಗಳನ್ನು ಬೆಳೆಯಿಸಿ ಇವುಗಳನ್ನೇ ನಮ್ಮ ಕೈಕೋಲಾಗಿ ಮಾಡಿಕೊಂಡು ಇವುಗಳ ಬಲವಾದ ಆಧಾರದಿಂದಲೇ ಎದ್ದು ನಿಂತು ನಾವು ಮುಂದಡಿಯಿಡಬೇಕಾಗಿದೆ; ಗುರಿಯನ್ನು ಸಾಧಿಸಬೇಕಾಗಿದೆ. ಅದನ್ನು ಬಿಟ್ಟು ಬೇರೆ ನುಡಿಯ, ಬೇರೆ ಸಂಸ್ಕೃತಿಯ ಬೆನ್ನು ಹತ್ತಿದರೆ ನಾವು ಬಲಶಾಲಿಗಳಾಗದೆ ಮುಂದುವರಿಯಲು ಶಕ್ತಿಸಾಲದೆ ಮತ್ತಿಷ್ಟು ಮುಗ್ಗರಿಸಿ ಬೀಳುವೆವೆಂದು ನಮ್ಮ ಮನವರಿಕೆಯಾಗಿಹೋಗಿದೆ. ಆದುದರಿಂದಲೇ ನಾವು ಕನ್ನಡಿಗರೆಲ್ಲರೂ ಇಲ್ಲಿ ಕಲೆತು ನಮ್ಮ ವಾಙ್ಮಯದ ಪರಿಪೂರ್ಣತೆಗಾಗಿ, ಸಂಸ್ಕೃತಿಯ ಸಂರಕ್ಷಣೆಗಾಗಿ, ಈಗ ಉಚಿತ ರೀತಿಯಿಂದ ವಿಚಾರಮಾಡಿ ಒಂದುಗೂಡಿ ಕಾರ್ಯೋನ್ಮುಖರಾಗಬೇಕಾಗಿದೆ.

ಯಾವುದೊಂದು ರಾಷ್ಟ್ರದ ಏಳಿಗೆಗೂ ಉಜ್ಜ್ವಲವಾದ ಪ್ರಭುಶಕ್ತಿಯ ಸಾಹಾಯ್ಯವು ಬೇಕು; ಅದಿಲ್ಲದಿದ್ದರೆ ಪ್ರಚಂಡವಾದ ಪ್ರಜಾ ಶಕ್ತಿಯ ಸಾಹಾಯ್ಯವು ಬೇಕು. ರಾಷ್ಟ್ರದ ಏಳಿಗೆಗೆ ಸ್ವಭಾಷೆಯ ಸಂಸ್ಕೃತಿಗಳ ಸಂರಕ್ಷಣೆಯಂತೂ ಅತ್ಯಾವಶ್ಯಕವೆಂಬುದನ್ನು ಈ ಮೊದಲೇ ವಿದಿತಪಡಿಸಿರುವೆನು. ಈ ಕಾರ್ಯವು ಪ್ರಭು ಶಕ್ತಿಯಿಂದ ನೆರವೇರುವುದಂತೂ ನಮ್ಮಲ್ಲಿ ಸದ್ಯಕ್ಕೆ ಸಾಧ್ಯವಿಲ್ಲ; ಆದುದರಿಂದ ಪ್ರಜಾ ಶಕ್ತಿಯ ಬೆಂಬಲದಿಂದಲೇ ಕೊನೆಗಾಣಬೇಕಾಗಿದೆ; ಅದಕ್ಕಾಗಿ ನಾವು ಅನೇಕ ಮುಖದಿಂದ ಈ ಸಂಸ್ಕೃತಿ ಭಾಷಾ ಸಂರಕ್ಷಕವಾದ ಚಳವಳಿಗಳನ್ನು ಸಾಗಿಸಬೇಕಾಗಿದೆ. ಇಂದಿನ ಈ ಸಮ್ಮೇಲನವೂ ಆ ಚಳವಳಿಯದೊಂದು ಭಾಗವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಭರತ ಖಂಡದಲ್ಲಿಯ ಇನ್ನಿತರ ಪ್ರಾಂತಗಳಲ್ಲಿ ನಡೆದ ಸಾಹಿತ್ಯೋನ್ನತಿಯ ಚಳವಳಿಗೂ ನಮ್ಮ ಕರ್ಣಾಟಕದಲ್ಲಿ ನಡೆದ ಚಳವಳಿಗೂ ಆಡು ಆನೆಗಳಷ್ಟು ಅಂತರವಿದೆ. ಹೀಗಾಗುವುದಕ್ಕೆ ಮುಖ್ಯ ಕಾರಣವೆಂದರೆ, ಕನ್ನಡ ನಾಡು ತುಂಡು ತುಂಡುಗಳಾಗಿ ಹರಿದು, ಹಂಚಿ, ಬೇರೆ ಬೇರೆ ಆಡಳಿತಕ್ಕೆ ಒಳಗಾಗಿರುವುದು. ಇದರಿಂದ ಕನ್ನಡಿಗರ ಮುಖಗಳು ಒಂದೊಂದು ದಿಕ್ಕಿಗಾಗಿಬಿಟ್ಟು ಸಂಘ ಶಕ್ತಿಯಿಂದ ಯಾವ ಕಾರ್ಯವೂ ನಡೆಯದಾಗಿದೆ. ಅದಕ್ಕಾಗಿಯೇ ನಾವೀಗ ಯಾವ ಚಳವಳಿಯನ್ನು ಮಾಡಿದರೂ ಅದು ಕರ್ಣಾಟಕದ ಏಕೀಕರಣಕ್ಕೆ ಪರಿಪೋಷಕವಾಗುವಂತೆ ಮಾಡಬೇಕಾಗಿದೆ. ಇನ್ನು ನೆರೆಯ ನಾಡಿನವರ ಆಕ್ರಮಣದಿಂದಲೂ ನಮ್ಮ ಕನ್ನಡ ಭಾಷಾ ವಿಷಯಕ ಚಳವಳಿಯು ನಿಯಂತ್ರಿತವಾಗಿ ಸಾಗದಾಗಿದೆ. ಉತ್ತರದಲ್ಲಿ ಮರಾಠಿಗರ ಏರಾಟ, ದಕ್ಷಿಣದಲ್ಲಿ ತೆಲುಗು ತಮಿಳರ ತುಳಿದಾಟ,

ಇವುಗಳಿಂದ ಕನ್ನಡ ನಾಡು ದಿನ ದಿನಕ್ಕೆ ಕ್ಷೀಣವಾಗುತ್ತ ನಡೆದಿದೆ. ಕನ್ನಡ ನುಡಿಯು ಕುಗ್ಗುತ್ತ ನಡೆದಿದೆ.

ಕನ್ನಡ ಸಾಹಿತ್ಯದ ಉನ್ನತಿಗಾಗಿ ನಾವೆಲ್ಲ ಸೇರಿ ಅದೆಷ್ಟೋ ಕಾರ್ಯಗಳನ್ನು ಮಾಡಬೇಕಾಗಿದೆ. ಹುಳು ತಿನ್ನುತ್ತ ಬಿದ್ದಿರುವ ಪುರಾತನ ಗ್ರಂಥಗಳನ್ನು ಬೆಳಕಿಗೆ ತರಬೇಕಾಗಿದೆ. ಹೊಸ ತೆರದ ಗ್ರಂಥಗಳನ್ನು ಬರೆದು ಜನರ ವಾಙ್ಮಯಾಭಿರುಚಿಯನ್ನು ಬೆಳೆಯಿಸಬೇಕಾಗಿದೆ. ಹಳ್ಳಿ ಹಳ್ಳಿಗೆ ವಾಚನಾಲಯಗಳನ್ನು ತೆಗೆದು ಸಾಮಾನ್ಯ ಜನರಲ್ಲಿಯೂ ಓದುವ ಅಭ್ಯಾಸವನ್ನು ಹೆಚ್ಚಿಸಬೇಕಾಗಿದೆ. ನಮ್ಮ ವೃತ್ತಪತ್ರಿಕೆ, ಮಾಸಪತ್ರಿಕೆಗಳಲ್ಲಿ ಸುಧಾರಣೆಯನ್ನು ಮಾಡಬೇಕಾಗಿದೆ. ಶುದ್ಧವಾದ ಭಾಷೆಯಿಂದ ಪಠ್ಯ ಪುಸ್ತಕಗಳನ್ನು ಬರೆಯಿಸಬೇಕಾಗಿದೆ. ಉಚ್ಚ ತರದ ಸಾಹಿತ್ಯವನ್ನು ಅಭ್ಯಾಸಮಾಡುವಂತಹ, ಮಾಡಿಸುವಂತಹ, ಸಂಸ್ಥೆಗಳನ್ನು ಅಲ್ಲಲ್ಲಿ ತೆರೆಯಬೇಕಾಗಿದೆ. ಮಾಧ್ಯಮಿಕ ಶಿಕ್ಷಣವೂ ಉಚ್ಚ ಶಿಕ್ಷಣವೂ ಕನ್ನಡದಲ್ಲಿಯೇ ದೊರೆಯುವಂತೆ ಹೆಣಗಬೇಕಾಗಿದೆ. ಶಾಸ್ತ್ರೀಯ ವಿಷಯಕ ಪುಸ್ತಕಗಳನ್ನು ಪ್ರಸಿದ್ಧಿಸಬೇಕಾಗಿದೆ. ಅಭ್ಯಾಸಿಗಳಿಗೆ ಉಪಯುಕ್ತವಾಗುವಂತಹದೊಂದು ಶಬ್ದಕೋಶವನ್ನು ಸಿದ್ಧಮಾಡಬೇಕಾಗಿದೆ. ವಿಶ್ವಕೋಶವನ್ನು ಬರೆಯಿಸಿ ಪ್ರಕಟಿಸಲು ಪ್ರಯತ್ನಿಸಬೇಕಾಗಿದೆ. ಇಷ್ಟೆಲ್ಲ ಕೆಲಸಗಳನ್ನೂ ಮಾಡಬೇಕಾಗಿದೆಯೇನೋ ನಿಜ. ಆದರೆ ಇವರಲ್ಲಿ ಮೊದಲು ಮಾಡಬೇಕಾದುವು ಯಾವುವೆಂಬುದನ್ನು ನಾವುಗಳೆಲ್ಲ ಸೇರಿ ನಿರ್ಣಯಿಸಿ ಅವೆಲ್ಲ ಕಾರ್ಯರೂಪಕ್ಕೆ ಇಳಿಯುವಂತೆ ನಾವಿಂದು ಮನಮುಟ್ಟಿ ಯತ್ನಮಾಡುವ!

ನನ್ನ ನಚ್ಚಿನ ಕನ್ನಡಿಗರೇ! ಭಾಗ್ಯವಿಧಾಯಕನು ಕನ್ನಡ ನಾಡನ್ನು ನಲ್ನೋಟದಿಂದ ನೋಡುತ್ತಿದ್ದಾನೆ. ಇದುವರೆಗೆ ಮಲಗಿದ ಕನ್ನಡ ನಾಡು ಎಚ್ಚರಗೊಳ್ಳುತ್ತಲಿದೆ. ಎಲ್ಲ ಕನ್ನಡ ನಾಡಿನೊಡನೆ ನಮ್ಮ ಬೆಳಗಾಂವಿ ಜಿಲ್ಲೆಯೂ ಎಚ್ಚರಗೊಂಡು ತನ್ನ ಕರ್ತವ್ಯವನ್ನರಿತು ಕೆಲಸಮಾಡಿ ಭೂತಕಾಲದ ಕರ್ಣಾಟಕರ ಇತಿಹಾಸದಲ್ಲಿದ್ದ ಸ್ಥಾನಕ್ಕಿಂತಲೂ ಮಹತ್ವದ ಸ್ಥಾನವನ್ನು ಭಾವಿ ಕಾಲದ ಇತಿಹಾಸದಲ್ಲಿ ಪಡೆಯುವುದೆಂದು ನನ್ನ ನಂಬುಗೆಯುಂಟು. ಪರಮೇಶ್ವರನು ಹೀಗೆ ಮಾಡಿಸಲೆಂದು ಬೇಡಿಕೊಳ್ಳುತ್ತ ತಮ್ಮೆಲ್ಲರನ್ನೂ ಮತ್ತೊಮ್ಮೆ ಸ್ವಾಗತಿಸಿ ನಾನೀಗ ವಿರಮಿಸುವೆನು.

**ಚೌಗುಲೆ ಅಣ್ಣಪ್ಪ,**
ಸ್ವಾಗತಾಧ್ಯಕ್ಷ.

## ಅಧ್ಯಕ್ಷರ ಭಾಷಣ

ವಂದನೆ

ಕುಲ ಮಾತೆಯರೆ, ಮಹನೀಯರೆ! ಕರ್ಣಾಟಕ ಸಾಹಿತ್ಯ ಸಮ್ಮೇಳನದ ಈ ಅಧಿವೇಶನಕ್ಕೆ ನನ್ನನ್ನು ಅಧ್ಯಕ್ಷನೆಂದು ಮಾಡಿ ತಾವು ನನ್ನಲ್ಲಿ ತೋರಿರುವ ಪ್ರೇಮಕ್ಕೆ ನಾನು ಬಹಳ ಕೃತಜ್ಞನಾಗಿದ್ದೇನೆ. ಕನ್ನಡ ಭಾಷೆಯ ಸೇವಕನಿಗೆ ನಮ್ಮ ಜನರು ತೋರಬಹುದಾದ ಮರ್ಯಾದೆಯಲ್ಲಿ ಈ ಅಧ್ಯಕ್ಷ ಸ್ಥಾನವನ್ನು ವಹಿಸುವುದೇ ಹಿರಿಯ ಮರ್ಯಾದೆ. ಈಗ ನಾಲ್ಕು ವರ್ಷಗಳ ಹಿಂದೆಯೇ ಬೆಳಗಾವಿನ ತಾವು ನನ್ನನ್ನು ಈ ಅಧ್ಯಕ್ಷ ಸ್ಥಾನಕ್ಕೆ ಕರೆದಿರಿ. ಆಗ ನಾನು 'ನಾನಿನ್ನೂ ಬಹಳ ಚಿಕ್ಕವನು, ಬೇರೆಯವರನ್ನು ಕರೆಯಿರಿ' ಎಂದು ಹೇಳಿ ಕ್ಷಮೆಯನ್ನು ಬೇಡಿದೆನು. ಆ ವರ್ಷ ಶ್ರೀಮಾನ್ ಬೆನಗಲ್ ರಾಮರಾಯರು ಅಧ್ಯಕ್ಷ ಪದವಿಯನ್ನಲಂಕರಿಸಿ ಮೂವತ್ತು ವರ್ಷದಿಂದ ನಮ್ಮ ಸಾಹಿತ್ಯದ ಬೆಳೆವಣಿಗೆಯನ್ನು ಕಾದು ನೋಡಿರುವುದರ ಫಲವಾದ ಒಂದು ಅಮೋಘ ಭಾಷಣವನ್ನು ಇಲ್ಲಿ ಮಾಡಿದರು. ತಾವು ನನ್ನನ್ನು ಈ ಸಾರಿ ಕರೆದಾಗಲೂ ನಾನು ಈ ಸ್ಥಾನವು ನನಗೆ ಬೇಡವೆಂದೇ ಹೇಳಿದೆನು. ಅಂದಿನಿಂದಿಂದಿಗೆ ನಾಲ್ಕು ವರ್ಷಗಳು ಕಳೆದಿವೆ. ಆದರೆ ಅವು ನನ್ನಲ್ಲಿ ವಯಸ್ಸಾಯಿತೆಂಬ ಭಾವನೆಯನ್ನು ತಂದಿಲ್ಲ. ಇದು ನಮ್ಮನ್ನೆಲ್ಲ ಕವಿದಿರುವ ಒಂದು ಮಾಯೆಯೆಂದು ಕಾಣುತ್ತದೆ. ಆದರೆ ತಾವು ಈ ಸಲ ನನ್ನನ್ನು ಬಿಡಲಿಲ್ಲ. ಇದರಲ್ಲಿ ತಾವು ತೋರಿರುವ ವಿಶ್ವಾಸದಿಂದ ನನ್ನ ಮನಸ್ಸು ಉಬ್ಬುತ್ತಿದೆ; ಹಾಗೆಯೇ, ಈ ಕೆಲಸದ ಭಾರವನ್ನು ನೆನೆದಾಗ ಸ್ವಲ್ಪ ಕುಗ್ಗುತ್ತದೆ. ಹಿಂದೆ ಈ ಸ್ಥಾನದಲ್ಲಿ ತಮ್ಮ ವೈದುಷ್ಯ ಪ್ರತಿಭೆ ಪ್ರಪಂಚ ಜ್ಞಾನಗಳ ಬೆಳಕನ್ನು ಸಭೆಗೆ ಬೀರಿದ ಮಹನೀಯರು ಎಥೆಂಥವರೆಂದು ನೆನೆದ ಯಾರಿಗೇ ಆಗಲಿ ಅವರು ನಡೆದ ದಾರಿಯಲ್ಲಿ ತಾನು ನಡೆಯಬಲ್ಲೆನೆ ಎಂದು ಶಂಕೆ ಬರುವುದು ಸಹಜ. ನನಗಂತೂ ಈ ಶಂಕೆ ಸಂಪೂರ್ಣವಾಗಿ ಉಂಟು. ಇದಲ್ಲದೆ ಈ ಸಲ ಇಲ್ಲಿ ನನ್ನ ಮಿತ್ರರಾದ ಶ್ರೀಮಾನ್ ಪಂಜೇ ಮಂಗೇಶರಾಯರು ಅಧ್ಯಕ್ಷರಾಗಿರಬೇಕಾಗಿತ್ತು ಎಂಬುದು ಬೇರೆ. ಪಂಜೇರಾಯರವರ ಪರಿಚಯವುಳ್ಳವರು ಅವರು ಈ ಸ್ಥಾನಕ್ಕೆ ಎಷ್ಟು ಅರ್ಹರೆಂಬುದನ್ನು ಚೆನ್ನಾಗಿ ಬಲ್ಲರು. ಹುತ್ತರೀ ಹಾಡು ಮೊದಲಾದ ಅವರ ಕವಿತೆಗಳನ್ನೂ ಮುದ್ದಣ ಕವಿಯ ವಿಷಯದಲ್ಲಿ ಅವರು ಬರೆದಿರುವ ಲೇಖನವನ್ನೂ ಓದಿದವರು ಅವರ ರಸಜ್ಞತೆಯೂ ಅವರ ವಿಮರ್ಶೆಯೂ ಎಷ್ಟು ನಯವಾದುವು ಎಂದು ತಿಳಿದಿರುವರು. ಅವರು ಈ ಕೆಲಸಕ್ಕೆ ಖಂಡಿತವಾಗಿಯೂ ಒಪ್ಪಿಕೊಳ್ಳಬೇಕಾಗಿತ್ತು ಎಂದು ನನಗೆ ತೋರುತ್ತದೆ. ಪಂಜೆಯವರು ಕಾರಣಾಂತರದಿಂದ ಬರಲಾಗಲಿಲ್ಲವಾದರೂ ಶ್ರೀಮಾನ್ ಆಲೂರ ವೆಂಕಟರಾಯರಾದರೂ ಈ ಕೆಲಸಕ್ಕೆ ಒಪ್ಪಿಕೊಳ್ಳಬೇಕಾಗಿತ್ತು. ಶ್ರೀಮಾನ್ ವೆಂಕಟರಾಯರು ನಾನು ಕಾಲೇಜಿನಲ್ಲಿ ಓದುತಿದ್ದಾಗಳಿಂದ ಕನ್ನಡಕ್ಕಾಗಿ ದುಡಿದಿದ್ದಾರೆ. ರಾಜಕೀಯವಾಗಿ ಬೇರೆ ಬೇರೆಯ ಭಾಗಗಳಾದರೂ ಕನ್ನಡ ನಾಡ ಪ್ರಾಂತಗಳಲ್ಲಿ ಏಕೀಕರಣದ ಭಾವನೆ ಹುಟ್ಟಿರು

ವುದೂ ಅವು ತಕ್ಕ ಮಟ್ಟಿಗೆ ಒಂದು ಮನಸ್ಸಿನಿಂದ ನಡೆಯುತ್ತಿರುವುದೂ ಆಲೂರ ರವರ ಮತ್ತು ಇವರ ಮಿತ್ರರ ಸಾಹಸ, ದೂರದೃಷ್ಟಿ—ಇವುಗಳ ಫಲ. ಇವರೂ ಕೂಡ ಈ ಸ್ಥಾನವನ್ನು ಬೇಡವೆಂದು ಹೇಳಿದರು. ತಾವೆಲ್ಲ ಇವರ ಜೊತೆಗೆ ಸೇರಿ ನನ್ನನ್ನು ಇಲ್ಲಿ ಕೂರಿಸಿರುವುದನ್ನು ನೋಡಿದರೆ ಹಿರಿಯರು ಕಿರಿಯರನ್ನು ಹಸೆಯ ಮೇಲೆ ಕೂರಿಸಿ ಹರಸುವ ಪ್ರೀತಿ ಕಾಣುತ್ತಿದೆ. ಹೇಗಾದರೂ ನಾನು ಈ ಮರ್ಯಾದೆಗೆ ಒಪ್ಪಿದುದಾಯಿತು. ಇನ್ನು, ಕೆಲಸದಲ್ಲಿ ಏನು ಕುಂದು ಕೊರತೆ ಬಂದರೂ ನನ್ನನ್ನು ಇಲ್ಲಿ ಕೂರಿಸಿದ ವಿಶ್ವಾಸವೇ ಅದನ್ನು ಮನ್ನಿಸಬೇಕಾಗಿದೆ.

**ನಮ್ಮ ಪರಿಷತ್ತು**

ನಮ್ಮ ಕರ್ಣಾಟಕ ಸಾಹಿತ್ಯ ಪರಿಷತ್ತು ಏರ್ಪಾಡಾಗಿ ಈಗ್ಗೆ ಹದಿನಾಲ್ಕು ವರ್ಷಗಳು ಕಳೆದಿವೆ. ಕನ್ನಡದ ಸ್ಥಿತಿಯು ಈ ಹದಿನಾಲ್ಕು ವರುಷಗಳಲ್ಲಿ ಬಹಳ ವ್ಯತ್ಯಾಸ ಹೊಂದಿದೆ. ಪರಿಷತ್ತು ಮಾಡಿರುವ ಕಾರ್ಯವನ್ನು ನಾನು ಈ ಸಂದರ್ಭದಲ್ಲಿ ಪರಿಶೀಲಿಸುವುದಕ್ಕೆ ತೊಡಗುವುದಿಲ್ಲ. ಈಗ ನಾಲ್ಕು ವರ್ಷಗಳ ಹಿಂದೆ ಶ್ರೀಮಾನ್ ಬೆನಗಲ್ ರಾಮರಾಯರು ತಮ್ಮ ಭಾಷಣದಲ್ಲಿ ಪರಿಷತ್ತು ಅದುವರೆಗೆ ಮಾಡಿದ ಕೆಲಸವನ್ನೆಲ್ಲ ವಿವರಿಸಿ ಅದು ತೃಪ್ತಿಕರವಾಗಿ ನಡೆದಿದೆಯೆಂದು ತಿಳಿಸಿದರು. ಅವರು ಅಷ್ಟು ವಿಚಕ್ಷಣತೆಯಿಂದ ಮಾಡಿದ ಕೆಲಸವನ್ನು ನಾನು ಮತ್ತೆ ಮಾಡುವ ಆವಶ್ಯಕತೆಯಿಲ್ಲ. ಅಲ್ಲದೆ, ಪರಿಷತ್ತು ಈ ಕೆಲಸವನ್ನು ಮಾಡಿತು, ಆ ಕೆಲಸವನ್ನು ಮಾಡಲಿಲ್ಲ ಎಂದು ನಾವು ಯಾರೂ ಯಾರನ್ನೂ ಹೇಳುವಂತಿಲ್ಲ. ನಾವು ಮಾಡಿದುದನ್ನು ಪರಿಷತ್ತು ಮಾಡುತ್ತದೆ, ನಾವು ಮಾಡದೆ ಇದ್ದುದನ್ನು ಪರಿಷತ್ತು ಮಾಡಲಾರದು. ಪರಿಷತ್ತೇ ನಾವು ಮಾಡಿದುದು. ಒಟ್ಟಿನಲ್ಲಿ, ಪರಿಷತ್ತು ಕನ್ನಡಕ್ಕೆ ಈಗ ಮಾಡಿರುವುದಕ್ಕಿಂತ ಹೆಚ್ಚಾದ ಕೆಲಸವನ್ನು ಮಾಡದೆ ಇರುವುದಕ್ಕೆ ವಿದ್ಯಾವಂತರಾದ ಕನ್ನಡಿಗರ ಔದಾಸೀನ್ಯವೇ ಮುಖ್ಯ ಕಾರಣ. ಈ ವಿಷಯವನ್ನು ಹೇಳಲು ನನಗೆ ವ್ಯಸನವಾಗುತ್ತದೆ. ಮಹನೀಯರೇ, ಕನ್ನಡ ನಾಡಿನ ಇಷ್ಟು ಸಾವಿರ ಮಂದಿ ಸುಶಿಕ್ಷಿತರಾದವರಲ್ಲಿ ಹತ್ತರಲ್ಲಿ ಒಂದರ ಸಂಖ್ಯೆಯಷ್ಟು ಜನ ಪರಿಷತ್ತಿಗೆ ಸದಸ್ಯರಾಗಿಲ್ಲವೇಕೆ? 'ಪರಿಷತ್ತು ಚೆನ್ನಾಗಿ ಕೆಲಸಮಾಡಲಿ, ಆಮೇಲೆ ನಾನು ಬಂದು ಅದಕ್ಕೆ ಸದಸ್ಯನಾಗುತ್ತೇನೆ' ಎಂದು ಅನೇಕರು ಹೇಳುವರು. ಮೈ ಚೆನ್ನಾಗಿ ಕೆಲಸಮಾಡಲಿ, ಆಮೇಲೆ ನಾನು ಅದಕ್ಕೆ ನೆರವಾಗುತ್ತೇನೆ ಎಂದು ಹೇಳಿ ಕಯ್ಯೋ ಕಣ್ಣೋ ಕೆಲಸಮಾಡದೆ ನಿಂತರೆ ಅದನ್ನು ಏನೆಂದು ವರ್ಣಿಸಬಹುದು? ಪರಿಷತ್ತು ಮಾಡಬಹುದಾದ ಕೆಲಸ ನೂರು ಇದೆ. ಜನರು ಬಂದು ಸದಸ್ಯರಾಗಿ ಹಣವನ್ನು ಕೊಟ್ಟು ಇತರ ಸಹಾಯ ಮಾಡಿ ಅದಕ್ಕಾಗಿ ದುಡಿದರೆ ಆ ಕೆಲಸ ನಡೆಯಬಹುದು; ಇಲ್ಲದಿದ್ದರೆ ಅದು ನಡೆಯುವ ಸಂಭವವೇ ಇಲ್ಲ.

**ಪರಿಷತ್ಪತ್ರಿಕೆ**

ಇದಕ್ಕೆ ಉದಾಹರಣೆಯಾಗಿ ನಮ್ಮ ಪರಿಷತ್ಪತ್ರಿಕೆಯ ಕೆಲಸವನ್ನು ಕುರಿತು ಆಲೋಚಿಸಿರಿ. ವರ್ಷಕ್ಕೆ ನಾಲ್ಕು ಸಲ ಹೊರಡಬೇಕಾದ ಈ ಪತ್ರಿಕೆಗೆ ಸಲ ಸಲಕ್ಕೂ ಲೇಖನಗಳನ್ನು ಹವಣಿಸುವ ಕೆಲಸ

ಬಹಳ ದುಸ್ತರವಾಗಿ ಕುಳಿತಿದೆ. ಈಗ ಹಲವು ಸಂಚಿಕೆಗಳು ಹಿಂದೆ ಬಿದ್ದಿವೆ. ವರ್ಷದಲ್ಲಿ ನಾನೂರು ಪುಟಗಳಷ್ಟು ಬರೆವಣಿಗೆ ನಮ್ಮ ಸೀಮೆಯಲ್ಲಿ ಸಿಕ್ಕದೆ ಹೋದರೆ ಪರಿಷತ್ಪತ್ರಿಕೆಯ ಗತಿ ಏನು? ಈ ಪತ್ರಿಕೆಯನ್ನು ನಡೆಯಿಸಲಾರದ ನಮ್ಮ ಶಕ್ತಿ ಇನ್ನೆಷ್ಟರದು? ನಮ್ಮ ಸಾಹಿತ್ಯ, ಇತರ ಸಾಹಿತ್ಯಗಳು, ನಮ್ಮ ಸೀಮೆಯ ಇತಿಹಾಸ, ಸಂಸ್ಕೃತಿ, ಇವುಗಳಲ್ಲಿ ಆಸಕ್ತಿಯುಳ್ಳವರು ನಮ್ಮಲ್ಲಿ ಅನೇಕರಿದ್ದೇವೆ. ಇಪ್ಪತ್ತು ಜನ ವರ್ಷಕ್ಕೆ ಒಂದು ಲೇಖನದಂತೆ ಕೊಟ್ಟರೆ ಪತ್ರಿಕೆ ಸಕಾಲದಲ್ಲಿ ಹೊರಡಬಹುದು. ನಾವು ಇಷ್ಟನ್ನು ಮಾಡಲಾರೆವೆ? ಪತ್ರಿಕೆ ಹೊರಡುವದಿಲ್ಲ ಎಂದು ಎಲ್ಲರೂ ಅಸಮಾಧಾನವನ್ನು ಮಾತ್ರ ಸೂಚಿಸಿದರೆ ಏನು ಮಾಡಿದ ಹಾಗಾಯಿತು? ಈಚೆಗೆ ಪತ್ರಿಕೆಯ ಕೆಲಸಕ್ಕೆ ಸ್ವಲ್ಪ ಹೆಚ್ಚಿನ ಏರ್ಪಾಡು ಗಳನ್ನು ಮಾಡಿಕೊಂಡಿರುವುದರಿಂದ ಇನ್ನುಮೇಲೆ ಅದು ಸಕಾಲದಲ್ಲಿ ಬರಬಹು ದೆಂದು ಭರವಸೆ ಇದೆ. ಮುಖ್ಯ, ನಾನು ಅರಿಕೆಮಾಡುವುದು ಇಷ್ಟೇ: ನಮ್ಮಲ್ಲಿ ವಿದ್ಯಾವಂತರೆಲ್ಲ ಪರಿಷತ್ತನ್ನು ತಾವು ನಮ್ಮ ಜನರ ಸೇವೆಗಾಗಿ ಮಾಡಿಕೊಂಡಿರುವ ಸಂಸ್ಥೆಯೆಂದು ಭಾವಿಸಿ ಸಾಧ್ಯವಾದಷ್ಟು ಜನರನ್ನು ಅದಕ್ಕೆ ಸದಸ್ಯರನ್ನಾಗಿ ಮಾಡಿ ಅದು ಈಗ ಮಾಡುತ್ತಿರುವ ಕೆಲಸವೂ ಇನ್ನೂ ಮಾಡಬಹುದಾದ ಕೆಲಸವೂ ಚೆನ್ನಾಗಿ ನಡೆಯುವಂತೆ ನೆರವಾಗಬೇಕು. ಇದನ್ನು ಮಾಡುವ ಹೊಣೆ ನಮ್ಮದು; ಇದನ್ನು ಮಾಡದೆ ಇದ್ದರೆ ತಪ್ಪೂ ನಮ್ಮದು; ಪರಿಷತ್ತಿನದಲ್ಲ.

ನಮ್ಮಲ್ಲಿ ಸಾಕಾದಷ್ಟು ಜನ ಕೆಲಸಮಾಡದೆ ಇರುವ ತಪ್ಪಿಗೆ ಕೆಲವು ಕಾರಣಗಳೂ ಇವೆಯೆಂದು ನಾವು ಒಪ್ಪಿಕೊಳ್ಳಬೇಕು.

**ಕನ್ನಡ–ಸಂಸ್ಕೃತ**

ನಮ್ಮಲ್ಲಿ ಬರೆಯುವ ವಾಡಿಕೆ ಬಂದಿಲ್ಲ. ನಮ್ಮ ಹೃದಯದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನ ಇನ್ನೂ ದೊರೆತಿಲ್ಲ. ಹಿಂದೆ ಸಂಸ್ಕೃತದಿಂದ, ಈಚೆಗೆ ಇಂಗ್ಲೀಷಿನಿಂದ, ಕನ್ನಡವು ಕಡೆಗೆ ಬಿತ್ತು. ಪೂರ್ವ ದಲ್ಲಿ ಸಂಸ್ಕೃತನ್ನು ಕಲಿತವರು ಕನ್ನಡದ ವಿಷಯದಲ್ಲಿ ಆದರವನ್ನು ತೋರಬೇಕಾದ ಕಾರಣವಿರಲಿಲ್ಲ. ಕನ್ನಡ ಸಾಹಿತ್ಯದಲ್ಲಿ ಏನಿದೆ? ವೃತ್ತಗಳಿವೆ, ಕಂದಗಳಿವೆ. ಸಂಸ್ಕೃತ ಕಾವ್ಯಗಳಲ್ಲಿಲ್ಲದ ಸೊಗಸು ಇಲ್ಲಿ ಇದೆಯೆ? ಇನ್ನು ತತ್ತ್ವವೇನು? ವೇದಾಂತವೇನು? ವ್ಯಾಕರಣವೇನು? ಇತರ ಶಾಸ್ತ್ರವೇನು? ಸಂಸ್ಕೃತದಲ್ಲಿಲ್ಲದ್ದು ಕನ್ನಡದಲ್ಲಿಲ್ಲ; ಏನಿದೆಯೋ ಅದು ಸಂಸ್ಕೃತದ ಮೂಲವನ್ನು ಅವಲಂಬಿಸಿ ಬರೆದಿರ ತಕ್ಕದ್ದು: ಇದು ಕೆಲವರ ಮತ. ಇನ್ನು ಕೆಲವರು ಇದೇ ಮಾತನ್ನು ಇನ್ನೂ ಕಠಿನವಾಗಿ ಹೇಳುವರು. ನನ್ನ ಪರಿಚಯದ ಆಚಾರ್ಯರೊಬ್ಬರು ಒಂದು ಸಲ, "ಕನ್ನಡದಲ್ಲಿ ಏನಿದೆ ಸ್ವಾಮಿ? ಶುದ್ಧ ಪಿಶಾಚ ಭಾಷೆ" ಎಂದರು. ಅವರ ಮನೆಯ ಮಾತು ಕನ್ನಡ. ಅದರಿಂದಲೇ ಅದು ಅವರಿಗೆ ಪಿಶಾಚ ಭಾಷೆಯಾಗಿ ಕಂಡಿರ ಬಹುದೊ? ನಮ್ಮಲ್ಲಿ ಕೆಲಜನರು ಮಡಿಯಲ್ಲಿರುವಾಗ ಕನ್ನಡದಲ್ಲಿ ಮಾತನಾಡುವು ದಿಲ್ಲವಂತೆ; ಅದು ಮೈಲಿಗೆಯೆಂದು ಅವರ ಭಾವನೆ. ಇಂಥವರೊಬ್ಬರು, "ಮಾಡ ದಲ್ಲಿ ಕೊಡಪಿದೆ ತೆಗೆದುಕೊಂಡು ಬಾ" ಎನ್ನುವುದಕ್ಕೆ "ನಕರೋತಿ ಮಧ್ಯೇ ಸದ ದಾತಿ ವರ್ತತೇ ತಮಾನಯ" ಎಂದು ಹೇಳಿದರೆಂದು ಒಂದು ಹಾಸ್ಯದ ಕತೆಯಿದೆ.

ನಮ್ಮ ತಾಯಂದಿರು, ನಮ್ಮ ಅಕ್ಕ ತಂಗಿಯರು, ನಮ್ಮ ಪ್ರಿಯೆಯರು, ನಮ್ಮ ಮಕ್ಕಳು ನಮ್ಮೊಂದಿಗೆ ಆಡುವ ಮಾತು ನಮ್ಮ ಮನಸ್ಸಿಗೆ ಪಿಶಾಚ ಭಾಷೆಯಾಗಿಯೂ ಮೈಲಿಗೆಯ ಭಾಷೆಯಾಗಿಯೂ ಕಂಡರೆ ನಮ್ಮ ದುರವಸ್ಥೆ ಇನ್ನೆಂತಹದು? ಅದು ಪಿಶಾಚ ಭಾಷೆ, ಮೈಲಿಗೆಯ ಭಾಷೆ ಎಂದು ಕೆಲವರು ಹೇಳಿದರೆ ಏನಾಯಿತು ಎಂದು ನೀವು ಹೇಳುವಿರಾ? ಮಹನೀಯರೇ, ನಾವೆಲ್ಲ ನಮ್ಮ ಭಾಷೆಯನ್ನು ನಿರಾಕರಿಸದೆ ಇದ್ದ ಮಾತ್ರಕ್ಕೆ ಸಾಲದು. ನಮಗೆ ನಮ್ಮ ಭಾಷೆ ದೇವ ಭಾಷೆ ಎಂಬ ಮಮತೆ ಇರಬೇಕು. ಸಂಸ್ಕೃತ ಭಾಷೆ ಮಾತ್ರ ಗೀರ್ವಾಣರ ಭಾಷೆಯಲ್ಲ; ನಮ್ಮ ಭಾಷೆಯೂ ಗೀರ್ವಾಣರ ಭಾಷೆಯೇ. ತಾಯ ಮಮತೆ, ಸೋದರಿಯ ಪ್ರೀತಿ, ಪ್ರಿಯೆಯ ಕೂರ್ಮೆ, ಇವು ನಮ್ಮ ಉದ್ಧಾರಕ್ಕಾಗಿ ನಮ್ಮ ಬದುಕಿನಲ್ಲಿ ದೈವಶಕ್ತಿಯು ಧರಿಸುವ ರೂಪಗಳು. ಮಾನವ ಹೃದಯದ ಆನಂದ, ಸ್ಥೈರ್ಯ, ಭಕ್ತಿ, ಇವೆಲ್ಲ ದೈವೀಭಾವಗಳು. ಈ ಮಮತೆ ಪ್ರೀತಿ ಕೂರ್ಮೆಗೂ ಈ ಆನಂದ ಭಕ್ತಿ ಸ್ಥೈರ್ಯಗಳಿಗೂ ದೇಹವನ್ನು ಕೊಡುವ ಮಾತೆಲ್ಲ ದೇವ ಭಾಷೆ. ಪಂಪನ ಕಾವ್ಯದ ಭಾಷೆ, ಬಸವೇಶ್ವರನ ವಚನದ ಭಾಷೆ, ಹರಿದಾಸರ ಗೀತೆಗಳ ಭಾಷೆ, ಇದು ದೇವ ಭಾಷೆಯಲ್ಲದೆ ಮತ್ತೇನು? ಹೀಗೆಂಬ ಬುದ್ಧಿ ನಮ್ಮಲ್ಲೆಲ್ಲರಿಗೂ ಬರುವ ವರೆಗೂ ಕನ್ನಡದಲ್ಲಿ ಸಾಕಾದಷ್ಟು ಬರವಣಿಗೆ ಬರಲಾರದು.

**ಕನ್ನಡ–ಇಂಗ್ಲೀಷು** ಸಂಸ್ಕೃತದಲ್ಲಿ ಪ್ರವೇಶವಿರುವವರಿಗೆ ಹೇಗೋ ಹಾಗೆಯೇ ಇಂಗ್ಲೀಷಿನಲ್ಲಿ ಪ್ರವೇಶವಿರುವವರಿಗೂ ಸಾಮಾನ್ಯವಾಗಿ ಕನ್ನಡದ ವಿಷಯದಲ್ಲಿ ಅಶ್ರದ್ಧೆ. ಸಂಸ್ಕೃತದಲ್ಲಿರುವುದು ಕನ್ನಡದಲ್ಲಿ ಏನಿದೆ ಎಂದು ಸಂಸ್ಕೃತ ಪಂಡಿತರು ಕೇಳುವಂತೆ ಇಂಗ್ಲೀಷಿನಲ್ಲಿರುವುದು ಕನ್ನಡದಲ್ಲಿ ಏನಿದೆ ಎಂದು ಇಂಗ್ಲೀಷ್ ಪಂಡಿತರು ಎನ್ನುವರು. ಈ ಮಾತು ನಿಜವೂ ಅಹುದು. ಇಂಗ್ಲೀಷಿನಲ್ಲಿರುವ ಕಾವ್ಯ, ಇಂಗ್ಲೀಷಿನಲ್ಲಿರುವ ಕತೆ, ಇಂಗ್ಲೀಷಿನಲ್ಲಿರುವ ವಿಮರ್ಶೆ ನಮ್ಮ ಭಾಷೆಯಲ್ಲಿ ಇಲ್ಲ. ನಿಜ, ಆದರೆ ಏಕೆ ಇಲ್ಲ? ಇಲ್ಲವೆಂದು ಹೇಳುವವರು ಹಾಗೆ ಹೇಳಿ ತಟಸ್ಥರಾಗಿರುವುದರಿಂದ. ಇಂಗ್ಲೀಷಿನ ಕಾವ್ಯವೂ ಕತೆಯೂ ವಿಮರ್ಶೆಯೂ ನಾನೂರು ವರುಷಗಳ ಬೆಳಸು; ಸಾವಿರ ಜನರ ಕೆಲಸ. ಅವರು ಕೆಲಸಮಾಡಿದಷ್ಟು ಜನ, ಅವರು ಕೆಲಸಮಾಡಿದಷ್ಟು ಕಾಲ, ನಾವೂ ಕೆಲಸಮಾಡಿದರೆ ನಮ್ಮಲ್ಲಿಯೂ ಉತ್ತಮವಾದ ಕಾವ್ಯವೂ ಉತ್ತಮವಾದ ಕತೆಯೂ ಉತ್ತಮವಾದ ವಿಮರ್ಶೆಯೂ ಪುಷ್ಕಲವಾಗಿ ಬೆಳೆಯುವುವು. ಅದನ್ನು ಬಿಟ್ಟು ನಾವು ಕನ್ನಡದಲ್ಲಿ ಇದೆಲ್ಲ ಇಲ್ಲವೆನ್ನುವಷ್ಟರಿಂದ ಮಾತ್ರ ನಮ್ಮ ಕರ್ತವ್ಯ ಮುಗಿಯಿತೆಂದು ಭ್ರಮಿಸಿ ಸುಮ್ಮನಾಗುತ್ತೇವೆ. ಹಿಂದಣ ಶತಮಾನದ ಮಧ್ಯ ಕಾಲದಲ್ಲಿ ನಮ್ಮ ಜನರ ವಿದ್ಯೆಯು ಇಂಗ್ಲೀಷಿನಲ್ಲಿ ನಡೆಯಬೇಕೆ ದೇಶಭಾಷೆಗಳಲ್ಲಿ ನಡೆಯಬೇಕೆ ಎಂಬ ಚರ್ಚೆ ಬಂದಾಗ ಇಂಗ್ಲೀಷಿನ ಪರವಾಗಿ ಮಾತನಾಡಿದ ಲಾರ್ಡ್ ಮೆಕಾಲೇ ಮೊದಲಾದವರು ಇಂಗ್ಲೀಷ್ ಕಲತ ದೇಶೀಯರು ತಮ್ಮ ದೇಶಭಾಷೆಗಳಲ್ಲಿ ಇಂಗ್ಲೀಷಿನಲ್ಲಿರುವಂತಹ ಗ್ರಂಥಗಳನ್ನು

ಬರೆಯುವರೆಂದು ನಿರೀಕ್ಷಿಸಿದರು. ೧೮೫೪ನೆಯ ವರ್ಷದ ಆಡಳಿತದ ಪತ್ರದ ಈ ಮಾತುಗಳನ್ನು ಕೇಳಿರಿ:—

"It is neither our aim nor desire to substitute the English Language for the vernacular dialects of the country. We have always been most sensible of the importance of the use of the languages which alone are understood by the great mass of the population. These languages, and not English, have been put by us in the place of Persian in the administration of justice, and in the intercourse between the officers of Government and the people. It is indispensable, therefore, that, in any general system of education, the study of them should be assiduously attended to. And any acquaintance with improved European knowledge which is to be communicated to the great mass of the people—whose circumstances prevent them from acquiring a high order of education, and who cannot be expected to overcome the difficulties of a foreign language—can only be conveyed to them through one or other of these vernacular languages.

"In any general system of education, the English language should be taught where there is a demand for it; but such instruction should always be combined with a careful attention to the study of the vernacular language of the district and with such general instruction as can be conveyed through that language. And while the English language continues to be made use of, as by far the most perfect medium for the education of these persons who have acquired a sufficient knowledge of it to receive general instruction through it, the vernacular languages must be employed to teach the far larger class who are ignorant of, or imperfectly acquainted with, English. This can only be done effectually through the instrumentality of masters and professors, who may, by themselves knowing English, and thus having full access to the latest improvements in knowledge of every kind, impart to their fellow-countrymen, through the medium of their mother-tongue, the information which they have thus obtained. At the same time, as the importance of the vernacular languages becomes more appreciated, the vernacular literatures of India will be gradually enriched by translations of European books, or by the original compositions of men whose minds have been imbued with the spirit of European advancement, so that European knowledge may gradually be placed in this manner within the reach of all classes of the people. We look, therefore, to the English language and to the vernacular languages of India together as the media for the diffusion of European knowledge; and it is our desire to see them cultivated together in all schools in India of a sufficiently high class to maintain a schoolmaster possessing the requisite qualifications."

"ಈ ದೇಶದ ಭಾಷೆಗಳಿಗೆ ಪ್ರತಿಯಾಗಿ ಇಂಗ್ಲಿಷ್ ಭಾಷೆಯನ್ನು ವಾಡಿಕೆಗೆ ತರಬೇಕೆಂದು ನಮ್ಮ ಉದ್ದೇಶವಲ್ಲ; ಇದು ನಮಗೆ ಇಷ್ಟವೂ ಇಲ್ಲ. ಪ್ರಜಾವರ್ಗದ ಬಹು ಮಂದಿಗೆ ತಿಳಿದಿರುವ ಭಾಷೆಗಳನ್ನು ಉಪಯೋಗಿಸುವುದು ಆವಶ್ಯಕವೆಂದು ನಾವು ಚೆನ್ನಾಗಿ ಬಲ್ಲೆವು. ನ್ಯಾಯಾಸ್ಥಾನಗಳಲ್ಲಿ ಪರ್ಷಿಯನ್ ಭಾಷೆಗೆ ಪ್ರತಿಯಾಗಿ ನಾವು ಈ ಭಾಷೆಗಳನ್ನೇ ಇರಿಸಿದ್ದೇವೆ, ಇಂಗ್ಲೀಷನ್ನಲ್ಲ. ಸರಕಾರದ ಅಧಿಕಾರಿಗಳಿಗೂ ಜನರಿಗೂ ನಡೆಯುವ ವ್ಯವಹಾರದಲ್ಲೂ ಹೀಗೆಯೇ. ಆದುದರಿಂದ ಈ ಸೀಮೆಯ ವಿದ್ಯಾಭ್ಯಾಸ ಕ್ರಮದಲ್ಲಿ ಈ ಭಾಷೆಗಳಿಗೆ ವಿಶೇಷ ಗಮನಕೊಡುವುದು ಕೇವಲ ಆವಶ್ಯಕ. ಪ್ರಜಾ ಸಾಮಾನ್ಯದ ಬಹು ಸಂಖ್ಯಾಕರಾದ ಜನರು ಹೆಚ್ಚಿನ ವಿದ್ಯೆಯನ್ನು ಪಡೆಯುವ ಸ್ಥಿತಿಯಲ್ಲಿರುವುದಿಲ್ಲ; ಅಲ್ಲದೆ, ಅವರಿಗೆ ಪರದೇಶದ ಭಾಷೆಯೊಂದನ್ನು ಕಲಿಯುವುದು ಕಷ್ಟವಾಗುತ್ತದೆ. ಇವರಿಗೆಲ್ಲ ಪಾಶ್ಚಾತ್ಯ ವಿಜ್ಞಾನದ ಪರಿಚಯವನ್ನು ಮಾಡಿಕೊಡುವುದಕ್ಕೆ ಈ ಭಾಷೆಗಳನ್ನೇ ಉಪಯೋಗಿಸಬೇಕಾಗುತ್ತದೆ.

"ನಮ್ಮ ವಿದ್ಯಾಭ್ಯಾಸದ ಕ್ರಮದಲ್ಲಿ ಇಂಗ್ಲೀಷು ಬೇಕೆನ್ನುವ ಕಡೆ ಇಂಗ್ಲೀಷನ್ನು ಹೇಳಿಕೊಡಬೇಕು. ಆದರೆ ಇಂಗ್ಲೀಷನ್ನು ಹೇಳಿಕೊಡುವುದರಲ್ಲಿ ಆಯಾ ಪ್ರಾಂತದ ದೇಶಭಾಷೆಯನ್ನು ಚೆನ್ನಾಗಿ ಹೇಳಿಕೊಡಬೇಕು; ಮತ್ತು ಅದರಲ್ಲಿಯೇ ಸಾಧ್ಯವಾದ ಇತರ ವಿದ್ಯೆಯನ್ನು ಕಲಿಸಬೇಕು. ಇಂಗ್ಲೀಷು ಭಾಷೆಯೇನೋ ವಿಷಯಗಳನ್ನು ತಿಳಿಸಿ ಜನರಿಗೆ ಪಾಠ ಹೇಳುವುದಕ್ಕೆ ಅನುಕೂಲವಾದ ಭಾಷೆ. ಸಾಕಾದಷ್ಟು ಇಂಗ್ಲೀಷು ಬಲ್ಲವರಿಗೆ ಆ ಭಾಷೆಯಿಂದಲೇ ಪಾಠ ಹೇಳಬೇಕು. ಆದರೆ ಇವರಿಗಿಂತ ಬಹು ಸಂಖ್ಯೆಯ ಜನಕ್ಕೆ ಇಂಗ್ಲೀಷು ಬಂದೇ ಇರುವುದಿಲ್ಲ; ಅಥವಾ, ಅಲ್ಪ ಸ್ವಲ್ಪ ಬಂದಿರುತ್ತದೆ. ಇಂಥವರಿಗೆ ದೇಶಭಾಷೆಗಳಲ್ಲಿಯೇ ಪಾಠ ಹೇಳಬೇಕು. ಈ ಕೆಲಸವನ್ನು ಸಮರ್ಪಕವಾಗಿ ಮಾಡಬೇಕಾದರೆ ದೇಶೀಯರಲ್ಲಿ ಇಂಗ್ಲೀಷನ್ನು ಕಲಿತು ಪಾಶ್ಚಾತ್ಯ ವಿಜ್ಞಾನವನ್ನು ಚೆನ್ನಾಗಿ ಬಲ್ಲವರಾಗಿ ತಮ್ಮ ಕಲಿವನ್ನು ತಮ್ಮ ಜನರಿಗೆ ದೇಶಭಾಷೆಗಳ ಮೂಲಕ ಹೇಳಬಲ್ಲ ಉಪಾಧ್ಯಾಯರ ಮೂಲಕ ಮಾತ್ರ ಸಾಧ್ಯ. ಇದೇ ಅಲ್ಲದೆ ದೇಶಭಾಷೆಗಳ ಬೆಲೆಯು ತಿಳಿದುಬಂದಹಾಗೆ ಇಂಡಿಯಾದೇಶದ ದೇಶಭಾಷೆಗಳ ವಾಙ್ಮಯಗಳು ಪಾಶ್ಚಾತ್ಯ ಗ್ರಂಥಗಳ ಭಾಷಾಂತರಗಳಿಂದಲೂ ಪಾಶ್ಚಾತ್ಯ ಪುರೋಗಮನದ ಭಾವಗಳಿಂದ ಉದ್ರಿಕ್ತವಾಗಿ ಬೆಳೆದ ಸ್ವಂತ ಕೃತಿಗಳಿಂದಲೂ ತುಂಬುತ್ತವೆ. ಈ ರೀತಿಯಲ್ಲಿ ಜನಸಾಮಾನ್ಯಕ್ಕೆ ಪಾಶ್ಚಾತ್ಯ ವಿಜ್ಞಾನದ ಪರಿಚಯವು ಸಾಧ್ಯವಾಗುತ್ತದೆ. ಆದುದರಿಂದ ಪಾಶ್ಚಾತ್ಯ ವಿಜ್ಞಾನವು ಜನರಲ್ಲಿ ಹರಡ

ಬೇಕಾದರೆ ಇಂಗ್ಲೀಷೇ ಅಲ್ಲದೆ ದೇಶಭಾಷೆಗಳೂ ಸಾಧನಗಳೆಂದು ನಾವು ಅಭಿಪ್ರಾಯಪಡುತ್ತೇವೆ. ಇದಕ್ಕೆ ಆವಶ್ಯಕವಾದ ತಿಳಿವಳಿಕೆಯುಳ್ಳ ಉಪಾಧ್ಯಾಯನಿರುವ ಪ್ರತಿಯೊಂದು ಪಾಠಶಾಲೆಯಲ್ಲಿಯೂ ಈ ಎರಡು ಭಾಷೆಗಳನ್ನೂ ಕಲಿಸಬೇಕೆಂದು ನಾವು ಅಪೇಕ್ಷಿಸುತ್ತೇವೆ.''

ಈ ಮಾತುಗಳಲ್ಲಿರುವ ನಿರೀಕ್ಷೆ ಇನ್ನೂ ನೆರವೇರಿಲ್ಲ. ಇಂಗ್ಲೀಷನ್ನು ಕಲಿತು ಕನ್ನಡಕ್ಕೆ ನೆರವಾಗಲೆಂದು ಆ ಮಹನೀಯರು ಎಣಿಸಿದರೆ ನಾವು ಕನ್ನಡವನ್ನು ತೊರೆಯಲು ಕಾದಿದ್ದೇವೆ. ಶ್ರೀರಾಮನನ್ನು ಕರೆತರಲು ಭರತನೊಡನೆ ಹೊರಟ ಸೈನಿಕರು ಭರದ್ವಾಜಾಶ್ರಮದ ಚೊಕ್ಕ ಭೋಜನಕ್ಕೆ ಮನಸೋತು ನಾವು ರಾಮನ ಬಳಿಗೂ ಹೋಗುವುದಿಲ್ಲ, ಅಯೋಧ್ಯೆಗೂ ಬರುವುದಿಲ್ಲ, ಇಲ್ಲೇ ಊಟ ಮಾಡಿಕೊಂಡಿರುತ್ತೇವೆ ಎಂದರಂತೆ. ಇಂಗ್ಲೀಷನ್ನು ಕಲಿತು ವಿಶೇಷ ಜ್ಞಾನವನ್ನು ಪಡೆದು ನಮ್ಮ ಜನರಿಗಾಗಿ ಅದನ್ನು ತರಹೋದ ಗೃಹಸ್ಥರು ಇಂಗ್ಲೀಷಿನ ಕತೆಗಳನ್ನೂ ಪದ್ಯಗಳನ್ನೂ ನಾವೆಲುಗಳನ್ನೂ ನೋಡಿ ಸುಮ್ಮನೆ ಅವನ್ನು ಓದುತ್ತ ಇದ್ದುಬಿಡೋಣ ಎನ್ನುವುದು ಇದರಂತಾಯಿತು. ಅಥವಾ, ಈ ಕಾಲದ ಸಂದರ್ಭವೊಂದನ್ನು ಹೋಲಿಸಿ ಹೇಳುವುದಾದರೆ ಸಂಸಾರದ ಖರ್ಚಿಗೆ ಹೆಚ್ಚು ಹಣ ಬರುವಂತಾಗಲೆಂದು ಮಗನನ್ನು ಓದಿಗೆ ಇಂಗ್ಲೆಂಡಿಗೆ ಕಳುಹಿಸಿದರೆ ಅವನು ಇಂಗ್ಲಿಷ್ ಹೆಣ್ಣನ್ನು ಮದುವೆಯಾಗಿ ಇಂಗ್ಲೆಂಡಿನಲ್ಲೇ ನಿಂತಂತಾಯಿತು.

**ಇಂಗ್ಲೀಷಿನಲ್ಲಿ ಏನನ್ನು ಓದುತ್ತೇವೆ?**

ಸಾಲದುದಕ್ಕೆ ನಾವು ವಿಶೇಷವಾಗಿ ಇಂಗ್ಲೀಷಿನಲ್ಲಿ ಓದುವುದು ಆ ಸಾಹಿತ್ಯದ ಉತ್ತಮ ಗ್ರಂಥಗಳನ್ನಲ್ಲ, ಆರಾಣೆಯ ದರ್ಜೆಯ ನಾವೆಲುಗಳನ್ನು. ಬೆಂಗಳೂರು ಮೈಸೂರಲ್ಲಿ ಸರ್ಕಾರದವರು ಸಾರ್ವಜನಿಕ ಪುಸ್ತಕಭಂಡಾರಗಳನ್ನು ಏರ್ಪಡಿಸಿದ್ದಾರೆ. ಅವುಗಳಲ್ಲಿ ವಿಶೇಷವಾಗಿ ಜನರು ತೆಗೆದುಕೊಂಡುಹೋಗಿ ಓದುವ ಪುಸ್ತಕಗಳು ಕೀಳ್ತರದ ನಾವೆಲುಗಳು. ನಾವೆಲನ್ನೇ ಓದುವುದಾದರೂ ಅದರಲ್ಲಿ ಒಳ್ಳೆಯ ರೀತಿಯವು ಇವೆ; ಅವನ್ನು ನಾವು ಓದುವುದಿಲ್ಲ. ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್, ಮಾರ್ಲ್ಲಿ, ಇವರ ಪುಸ್ತಕಗಳನ್ನು ಓದುವುದು ಸಾಮಾನ್ಯವಾಗಿ ಟೆಕ್ಸ್ಟ್‌ಬುಕ್ ಆದರೆಯೇ; ಇಲ್ಲದಿದ್ದರೆ ಅವುಗಳ ಕಡೆ ನಮ್ಮ ಕೈಯೇ ಹೋಗುವುದಿಲ್ಲ. ಆಂಗ್ಲೇಯ ಸಾಹಿತ್ಯದ ಸಹಾಯದಿಂದ ಇತರ ಸಾಹಿತ್ಯದ ಪರಿಚಯವನ್ನು ಮಾಡಿಕೊಳ್ಳುವುದು ಸಾಧ್ಯ. ಈ ರೀತಿಯ ಪುಸ್ತಕಗಳೂ ನಮ್ಮಲ್ಲಿ ಬಳಕೆಗೆ ಬಂದಿಲ್ಲ. ಇದನ್ನೆಲ್ಲ ನೋಡಿದವರಿಗೆ ಇಂಗ್ಲೀಷು ಕಲಿತು ಈಗ ನಾವು ಓದುವ ಕಸವನ್ನು ಓದುವುದಕ್ಕಿಂತ ನಮ್ಮವರ ಹಿಂದಣ ಕಾವ್ಯಗಳನ್ನೇ ಓದುತ್ತಿದ್ದರೆ ಚೆನ್ನಾಗಿತ್ತು ಎನ್ನಿಸುತ್ತದೆ. ಹಿಂದೆ ನಾನು ಹೇಳಿದ ರೂಪಕವನ್ನು ಒಂದು ಹೆಜ್ಜೆ ಮುಂದಕ್ಕೆ ಎಳೆಯುವುದಾದರೆ ಮಗನು ಮದುವೆಯಾದ ಇಂಗ್ಲಿಷ್ ಹೆಣ್ಣು ಸುಂದರಿಯೂ ಅಲ್ಲ, ಡ್ಯೂಕಿನ ಮಗಳೂ ಅಲ್ಲ; ಕುರೂಪಿ, ಹೋಟಲ್ ಕೀಪರ

ಮಗಳು. ಇದಕ್ಕಿಂತ ನಮ್ಮವರ ಹುಡುಗಿ ಎಷ್ಟೋಗೆಂಪಾದರೂ ಮೂಗು ಮೋರೆ ಸರಿಯಾಗಿರುವವಳನ್ನು ಮದುವೆಯಾಗಿದ್ದರೆ ಚೆನ್ನಾಗಿತ್ತು.

**ವಿವರಣೆಯ ಮಾತು**

ದೇಶಬಾಂಧವರೆ, ಈ ಮಾತುಗಳನ್ನು ನಾನು ಮತ್ಸರಭಾವದಿಂದ ಹೇಳುತ್ತಿದ್ದೇನೆಂದು ತಾವು ಎಣಿಸಲಾಗಿರಪ್ಪೆ? ನಾನು ಯಾರಲ್ಲಿ ಮಾತ್ಸರ್ಯ ತೋರಲಿ? ಸಂಸ್ಕೃತದ ವಿಷಯದಲ್ಲಾಗಲಿ ಇಂಗ್ಲೀಷಿನ ವಿಷಯದಲ್ಲಾಗಲಿ ನನ್ನ ಮನಸ್ಸಿನಲ್ಲಿ ಮಾತ್ಸರ್ಯಕ್ಕೆ ಸ್ಥಳವಿಲ್ಲ. ಸಂಸ್ಕೃತದ ವಿಷಯದಲ್ಲಿ ನನಗೆ ಬಹಳ ಗೌರವ ಬುದ್ಧಿ ಇದೆ. ನಮ್ಮ ಹಿರಿಯರು ನಮಗೆ ಬಿಟ್ಟಿರುವ ಆಸ್ತಿಯ ಬಹುಭಾಗ ಆ ಭಾಷೆಯಲ್ಲಿದೆ; ಅದನ್ನು ನಾವು ಬಿಡಲಾಗದು. ಇಂಗ್ಲೀಷಾದರೂ ನನ್ನನ್ನು ಬೆಳೆಯಿಸಿದ ಭಾಷೆ; ಇನ್ನೂ ಬೆಳೆಯಿಸುತ್ತಿರುವ ಭಾಷೆ. ನಾನು ಆ ಭಾಷೆಯನ್ನು ಬಹಳ ವಿಶ್ವಾಸದಿಂದ ಓದಿದ್ದೇನೆ; ಇನ್ನೂ ಓದುತ್ತಿದ್ದೇನೆ. ಅದರ ವಿಷಯದಲ್ಲಿ ನನಗೆ ಬಹಳ ಪ್ರೇಮವುಂಟು. ನಮ್ಮವರು ಇಂಗ್ಲೀಷನ್ನು ಕಲಿಯಲೇ ಬೇಕೆಂದೂ, ಅದರ ಅತ್ಯುತ್ತಮ ಗ್ರಂಥಗಳನ್ನು ಓದಲೇ ಬೇಕೆಂದೂ, ಇದರಿಂದ ನಮಗೆ ಬರುವ ಸಂಸ್ಕೃತಿಯು ನಮಗೆ ಬರಿಯ ಯಾವ ದೇಶಭಾಷೆಯನ್ನು ಓದಿದರೂ ಬರಲಾರದೆಂದೂ ನನ್ನ ಅಭಿಪ್ರಾಯ. ನಾವು ಈ ರೀತಿ ಇಂಗ್ಲೀಷನ್ನು ಓದಿ ನಮ್ಮ ತಿಳಿವನ್ನು ಹೆಚ್ಚಿಸಿಕೊಂಡು ಅದರ ಸಹಾಯದಿಂದ ನಾವೂ ಮುಂದುವರಿದು ನಮ್ಮ ಜನರನ್ನೂ ಮುಂದುವರಿಸುವುದಕ್ಕೆ ಪ್ರಯತ್ನಮಾಡಬೇಕು. ಇನ್ನು ನಮ್ಮ ಅಣ್ಣ ತಮ್ಮಂದಿರ ವಿಷಯದಲ್ಲಿ ನನಗೆ ಮಾತ್ಸರ್ಯವಿಲ್ಲವೆಂದು ನಾನು ಬೇರೆ ಹೇಳಬೇಕೆ? ನನ್ನ ಭಾವನೆ ಇಷ್ಟೇ: ನಮ್ಮ ನಾಡ ಮಕ್ಕಳು ತಾಯನ್ನು ಮರೆಯದೆ ಎಲ್ಲ ವಿದ್ಯವೂ ಅವಳ ಸೇವೆಗಾಗಿ ಎಂಬುದನ್ನು ಮನಸ್ಸಿನಲ್ಲಿಡಬೇಕು. ನಾನೊಬ್ಬನು ಓದಿ ಜ್ಞಾನಿಯಾದರೆ, ನಾನೊಬ್ಬನು ಓದಿ ಸುಖಿಯಾದರೆ, ನಾನೊಬ್ಬನು ಓದಿ ಹಿರಿಯನಾದರೆ ಅದರಿಂದ ಬಂದ ಹಿರಿಯ ಫಲವೇನು? ಎಂಬ ಖೇದವು ನಮ್ಮೆಲ್ಲರ ಮನಸ್ಸನ್ನು ಕೊರೆಯುತ್ತಿರಬೇಕು.

**ಕನ್ನಡ–ಹಿಂದಿ**

ನಮ್ಮ ಹೃದಯದಲ್ಲಿ ಕನ್ನಡದ ಸ್ಥಾನವು ಮೊದಲೇ ಹೀಗೆ ಅತಂತ್ರವಾಗಿರುವಲ್ಲಿ ಈಚೆಗೆ ನಮ್ಮ ಸೀಮೆಯ ರಾಜಕೀಯ ಪರಿಸ್ಥಿತಿಯಿಂದ ನಮ್ಮ ಜನಕ್ಕೆ ಹಿಂದೀ ಭಾಷೆಯೂ ಬರಬೇಕೆಂದು ಮುಖಂಡರು ನಿರ್ಧರಿಸಿದ್ದಾರೆ. ನಾನು ರಾಜಕೀಯನಲ್ಲ; ಒಂದು ಸರಕಾರದ ಅಧಿಕಾರ ವರ್ಗದಲ್ಲಿರುವುದರಿಂದ ನನಗೆ ರಾಜಕೀಯ ವಿಷಯಗಳ ಚರ್ಚೆಯಲ್ಲಿ ಪ್ರವೇಶವೂ ಇಲ್ಲ. ಆದರೆ ಹಿಂದಿ ಅವಶ್ಯಕವೆಂಬ ಈ ತೀರ್ಮಾನದಿಂದ ಕನ್ನಡದಮೇಲೆ ಯಾವ ಪರಿಣಾಮ ಉಂಟಾದೀತೆಂದು ಆಲೋಚಿಸುವುದು ಇಲ್ಲಿ ಅಪ್ರಕೃತವಾಗಲಾರದು. ದೇಶಕ್ಕೆಲ್ಲ ಸಾಮಾನ್ಯ ಭಾಷೆಯೊಂದು ಇರಬೇಕೆಂಬ ಕಾರಣದಿಂದ ರಾಜಕೀಯರು ಹಿಂದಿ ಭಾಷೆಯನ್ನು ಮುಂದಕ್ಕೆ ತರುತ್ತಿದ್ದಾರೆ. ಹಿಂದೆ ವಿದ್ಯಾವಂತರಿಗೆ ನಮ್ಮ ದೇಶದಲ್ಲಿ ಸಾಮಾನ್ಯ ಭಾಷೆ ಸಂಸ್ಕೃತವಾಗಿತ್ತು. ಈಚೆಗೆ ಇಂಗ್ಲೀಷು ಈ ಸ್ಥಾನವನ್ನು ಆಕ್ರಮಿಸಿಕೊಂಡಿದೆ.

ಇನ್ನುಮುಂದೆ ಹಿಂದೀ ಭಾಷೆ ಈ ಸ್ಥಾನವನ್ನು ತೆಗೆದುಕೊಳ್ಳಬಹುದೊ? ರಾಜಕೀಯ ದೃಷ್ಟಿಯಿಂದ ಮಾತ್ರ ನೋಡಿದರೆ ಇದಾಗಬಹುದೆಂದು ತೋರಿದರೂ ಇತರ ದೃಷ್ಟಿಯಿಂದ ಇದು ಅಪೇಕ್ಷಣೀಯವೆಂದು ನನ್ನ ಮನಸ್ಸಿಗೆ ತೋರುವುದಿಲ್ಲ. ಒಂದೊಂದು ದೇಶಭಾಷೆಯನ್ನೂ ಆಯಾ ಜನರು ತಮ್ಮ ಬಾಳಿಕೆಗೆ ತಕ್ಕ ಸಾಧನವನ್ನಾಗಿ ಮಾಡಿಕೊಳ್ಳಬೇಕು. ಅದಕ್ಕೆ ಅವರು ತಮ್ಮ ಭಾಷೆಗೆ ಸಾಕಾದಷ್ಟು ಗಮನವನ್ನು ಕೊಡಬೇಕು. ಇದರ ಜೊತೆಗೆ ಅವರು ವಿಶಾಲ ಪ್ರಪಂಚದ ಜೀವನದೊಂದಿಗೆ ಸಂಬಂಧವನ್ನುಂಟುಮಾಡುವಂತಹ ಇನ್ನೊಂದು ಭಾಷೆಯನ್ನು ತಕ್ಕ ಮಟ್ಟಿಗೆ ಕಲಿಯಬೇಕು. ಈಗಿನ ಸ್ಥಿತಿಯಲ್ಲಿ ನಮಗೆ ಇಂಥ ಭಾಷೆ ಇಂಗ್ಲೀಷು ಭಾಷೆ. ಹಿಂದಿಯು ರಾಜಕೀಯ ದೃಷ್ಟಿಯಿಂದ ನಮಗೆ ಉಪಯೋಗವಾಗಬಹುದೇ ಹೊರತು ಕನ್ನಡಕ್ಕೆ ಒಂದು ಹೊಸ ಪ್ರಪಂಚವನ್ನು ತೋರಿಸಲಾರದು; ಒಂದು ಹೊಸ ನಿಯಮವನ್ನು ಕೊಡಲಾರದು. ಆದಕಾರಣ ನಾವು ಇಂಗ್ಲೀಷನ್ನು ಬಿಡುವಂತಿಲ್ಲ. ಆದರೆ ರಾಜಕೀಯ ಕಾರ್ಯಕ್ಕಾಗಿ ಬೇಕಾದಷ್ಟು ಹಿಂದಿಯನ್ನೂ ಕಲಿಯಬೇಕು. ಈ ಮಧ್ಯೇ ಕನ್ನಡದ ವಿಷಯದಲ್ಲಿ ನಮಗೆ ಇರುವ ಸ್ವಲ್ಪ ಉತ್ಸಾಹವು ಜಿನುಗಿಹೋಗದಂತೆ ಮಾತ್ರ ನೋಡಿಕೊಳ್ಳಬೇಕು.

ಮುಖ್ಯವಾದ ಮಾತು

ಮುಖ್ಯವಾಗಿ ಇದೆಲ್ಲದರ ಅರ್ಥ ಇಷ್ಟು: ನಮ್ಮ ನಾಡ ಜನರೆಲ್ಲ ಕನ್ನಡವನ್ನು ಚೆನ್ನಾಗಿ ಕಲಿಯಬೇಕು. ಸಂಸ್ಕೃತವನ್ನು ಕಲಿತವರು, ಇಂಗ್ಲೀಷನ್ನು ಕಲಿತವರು, ಹಿಂದಿಯನ್ನು ಕಲಿತವರು, ಇನ್ನು ಬೇರೆ ಯಾವ ಭಾಷೆಯನ್ನೇ ಆಗಲಿ ಕಲಿತವರು ಕನ್ನಡವನ್ನು ಕಲಿತವರಲ್ಲವೆಂದು ಇರಬಾರದು. ಸಂಸ್ಕೃತವನ್ನು ಕಲಿತವರು ಕನ್ನಡದಲ್ಲಿ ಏನಿದೆ ಎಂದು ಅದನ್ನು ತುಚ್ಛೀಕರಿಸಬಾರದು. ಇಂಗ್ಲೀಷನ್ನು ಕಲಿತವರು ಅದಕ್ಕೇ ನಮ್ಮ ಬಾಳನ್ನೆಲ್ಲ ಮಾರಿಕೊಳ್ಳಬಾರದು. ಹಿಂದಿಯನ್ನು ಕಲಿಯುತ್ತೇವೆ, ಹಿಂದಿಯನ್ನು ಪ್ರಚಾರಕ್ಕೆ ತರುತ್ತೇವೆ ಎಂದು ಹೊರಟು ಹಿಂದೀ ಪ್ರಚಾರದಲ್ಲಿ ವಿಶೇಷ ಶ್ರದ್ಧೆಯಿಂದ ನಡೆಯುವವರು ಕನ್ನಡದ ಪ್ರಚಾರದಲ್ಲಿ ಕಾಲುಸೋತು ನಿಲ್ಲಬಾರದು. ಕನ್ನಡವು ನಮಗೆ ಮಾತೃಭಾಷೆ; ಕನ್ನಡವು ದೇವ ಭಾಷೆ; ಅಥವಾ, ಇನ್ನೂ ತೀರ ದೇವ ಭಾಷೆಯಾಗದಿದ್ದರೂ ಅದನ್ನು ದೇವ ಭಾಷೆಯನ್ನಾಗಿ ಮಾಡುವುದು ನಮ್ಮ ಕರ್ತವ್ಯ. ದೇವತೆಗಳಿಗೆ ಪಕ್ಷಪಾತವಿಲ್ಲ. ಅವರ ಸ್ವರೂಪವನ್ನು ಯಾವ ಭಾಷೆ ಸರಿಯಾಗಿ ವರ್ಣಿಸುವುದೋ ಆ ಭಾಷೆಯನ್ನು ಅವರು ತಮ್ಮದೆಂದು ಅಂಗೀಕರಿಸಿದ್ದಾರೆ. ಇದು ಪ್ರಪಂಚದ ಭಾಷೆಗಳ ಚರಿತ್ರೆಯಲ್ಲೆಲ್ಲ ಕಂಡು ಬಂದಿದೆ. ನಮ್ಮ ಜೀವನದ ಸಮಸ್ತ ಭಾವಗಳನ್ನು ವ್ಯಕ್ತಗೊಳಿಸುವುದಕ್ಕೂ ನಾವು ಕನ್ನಡವನ್ನು ಉಪಯೋಗಿಸಿ ಅದು ನಮ್ಮ ದೇಶದ ಸಂಸ್ಕಾರಕ್ಕೆ ತಕ್ಕ ಸಾಧನವಾಗುವಂತೆಯೂ, ಇನ್ನುಮುಂದೆ ಬರುವ ಉತ್ತಮ ಸಂಸ್ಕಾರದ ಫಲವನ್ನು ಒಳಗೊಳ್ಳುವಂತೆಯೂ ಮಾಡಬೇಕು. ಕನ್ನಡವನ್ನು ಪ್ರಪಂಚದ ಪ್ರಮುಖ ಭಾಷೆಗಳಲ್ಲಿ ಒಂದೆನ್ನಿಸುವುದು ನಮ್ಮೆಲ್ಲರ ಕರ್ತವ್ಯ. ಯಾವ ಭಾಷೆಯನ್ನು ಕಲಿಯಲಿ, ಯಾವುದನ್ನು ಬಿಡಲಿ, ಇದನ್ನು ಕನ್ನಡಿಗರು ಮರೆಯಬಾರದು.

ಈ ಸಂದರ್ಭದಲ್ಲಿ ಕನ್ನಡಿಗರು ಯಾರು, ಕನ್ನಡ ನಾಡು ಯಾವುದು ಎಂದೂ ಕನ್ನಡದ ಮತ್ತು ನೆರೆಯ ಭಾಷೆಗಳ ಸಂಬಂಧವನ್ನು ಕುರಿತೂ ಎರಡು ಮಾತನ್ನು ಹೇಳಬೇಕು. ಕನ್ನಡಿಗರು ಯಾರು? ಕನ್ನಡ ನಾಡಿನಲ್ಲಿ ನೆಲಸಿರುವ ಎಲ್ಲ ಜನರೂ. ನನ್ನ ಮನೆಯ ಮಾತು ತಮಿಳು; ಆದರೂ ನಾನು ಅಚ್ಚಗನ್ನಡಿಗನೇ. ತಮಿಳು ಹೇಗೋ ಹಾಗೆಯೇ ಅಥವಾ, ತಮಿಳಿಗಿಂತಲೂ ಹೆಚ್ಚಾಗಿಯೇ ನನಗೆ ಕನ್ನಡವು ಮಾತೃಭಾಷೆ. ಒಂದು ಸಲ ನನ್ನನ್ನು ನಾನು ತಮಿಳುಕರ್ಣಾಟಕನೆಂದು ವರ್ಣಿಸಿಕೊಂಡೆನು. ಕನ್ನಡಿಗರಲ್ಲಿ ಹೊಯಿಸಳನಾಡ ಕರ್ಣಾಟಕರು, ಸೀರನಾಡ ಕರ್ಣಾಟಕರು, ಬಡಗನಾಡ ಕರ್ಣಾಟಕರು ಇರುವಂತೆ ತಮಿಳುನಾಡು ಕರ್ಣಾಟಕರೂ ಕೊಂಕಣಿ ಕರ್ಣಾಟಕರೂ ತೆಲುಗುನಾಡು ಕರ್ಣಾಟಕರೂ ಮಹಾರಾಷ್ಟ್ರ ಕರ್ಣಾಟಕರೂ ಇದ್ದೇವೆ. ನಾವೆಲ್ಲ ಕರ್ಣಾಟಕರೇ ಹೊರತು ಬೇರೆಯಲ್ಲ. ನಮ್ಮ ಜನರು ಇಂಥ ಭೇದಗಳನ್ನು ಎಂದೂ ಎಣಿಸಿಲ್ಲ. ನಮ್ಮಲ್ಲಿ ಇಂಥ ಭೇದಭಾವವಿಲ್ಲವೆನ್ನುವುದಕ್ಕೆ ನಾನು ಇಂದು ಇಲ್ಲಿ ನಿಂತಿರುವುದೇ ಸಾಕ್ಷಿ, ಇದುವರೆಗೆ ಇಲ್ಲಿ ಅಧ್ಯಕ್ಷರಾದ ಮಹನೀಯರುಗಳ ಹೆಸರುಗಳೇ ಸಾಕ್ಷಿ! ತನ್ನಲ್ಲಿ ಬಂದು ನಿಂತವರನ್ನೆಲ್ಲ ಕರ್ಣಾಟಕವು ಎಂದೂ ಇದೇ ಸಮ ಬುದ್ಧಿಯಿಂದ ಕಂಡಿದೆ. ಸಮತಾ ಬುದ್ಧಿಯು ಅದರ ಚರಿತ್ರೆಯಲ್ಲಿ ಪ್ರಕಾಶವಾಗಿ ಕಾಣುತ್ತದೆ. ವೇದಾಂತ ಮತ ಸಂಸ್ಥಾಪಕರಾದ ಶ್ರೀ ಶಂಕರಾಚಾರ್ಯರು ಪಶ್ಚಿಮ ಸಮುದ್ರದ ತೀರದಲ್ಲಿ ಜನಿಸಿದರೂ ಕನ್ನಡ ನಾಡಲ್ಲಿ ತಮ್ಮ ಮುಖ್ಯ ಮಠವನ್ನು ಸ್ಥಾಪಿಸಿದರು; ಚೋಳದೇಶದಲ್ಲಿ ಜನಿಸಿದರೂ ವೇದಾಂತ ಮತ ದೀಪರಾದ ಶ್ರೀ ರಾಮಾನುಜಾಚಾರ್ಯರು ತಮ್ಮ ದೇಶದ ರಾಜರ ಕೋಟಲೆಯಿಂದ ನೊಂದು ಕರ್ಣಾಟಕಕ್ಕೆ ಬಂದು ಶಾಂತಿಯನ್ನು ಅನುಭವಿಸಿದರು. ಕರ್ಣಾಟಕದಲ್ಲೇ ಜನಿಸಿದ ಗುರುವರೇಣ್ಯರಾದ ಶ್ರೀಮದಾನಂದತೀರ್ಥರಿಗೂ, ಭುವನ ಮಾನ್ಯರಾದ ಶ್ರೀ ಬಸವೇಶ್ವರರಿಗೂ ಯಾವ ರೀತಿಯ ಮನ್ನಣೆ ದೊರೆತಿದೆಯೋ ಅದೇ ರೀತಿಯ ಮನ್ನಣೆ ಅವರಿರ್ವರಿಗೂ ನಮ್ಮ ನಾಡಿನಲ್ಲಿ ದೊರೆತಿದೆ. ಕರ್ಣಾಟಕದಲ್ಲಿ ಜೈನ ಮತದ ಮುಖ್ಯ ಪೀಠಗಳಿವೆ. ಇಲ್ಲಿಲ್ಲದ ಮತವಿಲ್ಲ, ಇಲ್ಲಿಲ್ಲದ ಬುಡಕಟ್ಟಿಲ್ಲ. ಕರ್ಣಾಟಕವು ಸಮತಾ ಬುದ್ಧಿಯಲ್ಲಿ ಸಂಕ್ಷೇಪ ಭಾರತವರ್ಷವಾಗಿದೆ.

ಕನ್ನಡಿಗರು ಯಾರು?

ನೆರೆಯ ಭಾಷೆಗಳೊಂದಿಗೂ ಕನ್ನಡವು ಹಿಂದಿನಿಂದ ಇದೇ ಸಮ ಬುದ್ಧಿಯಿಂದ ನಡೆದುಕೊಂಡಿದೆ. ಆಂಧ್ರ ಕವಿವರನಾದ ಶ್ರೀನಾಥನಿಗೆ ಕನಕಾಭಿಷೇಕವಾದುದು ಕರ್ಣಾಟಕದಲ್ಲಿ ಎಂದು ಕೇಳಿದ್ದೇನೆ. ತಮಿಳು ಸಾಹಿತ್ಯದ ಚರಿತ್ರೆಯನ್ನು ಬಲ್ಲವರು ತಮಿಳು ಕವಿಗಳಿಗೆ ಇಲ್ಲಿ ಇದೇ ಮರ್ಯಾದೆ ದೊರೆತಿರುವುದನ್ನು ಹೇಳಬಲ್ಲರೋ ಏನೊ? ಆದರೆ ಇತ್ತೀಚೆಗೆ ಕನ್ನಡಕ್ಕೂ ನೆರೆಯ ಭಾಷೆಗಳಿಗೂ ಕೆಲವಂಶಗಳಲ್ಲಿ ವಿವಾದ ಉಂಟಾಗುತ್ತಿದೆ: ನಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿದರೂ ನಿರ್ವಹಿಸಲಾಗದಷ್ಟು ಕೆಲಸಗಳು ಇದಕ್ಕಿಂತ ಮುಖ್ಯವಾದುವು ಬೇರೆಯವು ಇರುವಲ್ಲಿ ನಮ್ಮಲ್ಲಿ ಅನೇಕರು ಈ ವಿವಾದದಲ್ಲಿ ಕಾಲವನ್ನು ಕಳೆಯಬೇಕಾಗಿ ಬಂದಿದೆ.

ಕನ್ನಡವೂ ನೆರೆಯ ಭಾಷೆಗಳೂ

ಬಳ್ಳಾರಿಯನ್ನು ತೆಲುಗು ಸೀಮೆಯ ಭಾಗವಾಗಿ ಎಣಿಸಬೇಕೆಂಬ ಪ್ರಯತ್ನವು ಈ ವಿವಾದಗಳ ಕಾರಣಗಳಲ್ಲಿ ಒಂದು. ಇದೇನೋ ಈಚೆಗೆ ಒಂದು ವಿಧವಾಗಿ ನಿರ್ಣಯವಾದಂತೆ ಇದೆ. ಇಲ್ಲಿ ಬೆಳಗಾಂ ಜಿಲ್ಲೆಯನ್ನು ಮಹಾರಾಷ್ಟ್ರವೆಂದು ಎಣಿಸಬೇಕೆಂದು ಕೆಲವರು ಪ್ರಯತ್ನಮಾಡುತ್ತಿದ್ದಾರೆಂದು ನಮ್ಮವರ ಪತ್ರಿಕೆಗಳಿಂದ ಗೊತ್ತಾಗುತ್ತದೆ. ಈ ಪ್ರಶ್ನೆಗಳು ಒಂದು ಮುಖದಿಂದ ರಾಜಕೀಯ ಪ್ರಶ್ನೆಗಳು; ಆದರೆ ಮತ್ತೊಂದು ಮುಖದಿಂದ ಸಾಹಿತ್ಯಕ್ಕೂ ಜನ ಜೀವನಕ್ಕೂ ಸಂಬಂಧಪಟ್ಟಿವೆ. ಆದುದರಿಂದ ಆ ದೃಷ್ಟಿಯಿಂದ ನಾನು ಇಲ್ಲಿ ಎರಡು ಮಾತನ್ನು ವಿಜ್ಞಾಪನೆ ಮಾಡುತ್ತೇನೆ. ಯಾವ ಪ್ರಾಂತವೇ ಆಗಲಿ ಯಾವ ಮಾತಿನಿಂದ ಬೆಳೆಯುವುದೆಂದು ನಿರ್ಧರಿಸುವುದಕ್ಕೆ ಆ ಪ್ರಾಂತದಲ್ಲಿ ಹೆಚ್ಚು ಜನ ಯಾವ ಭಾಷೆಯವರು ಎಂದು ವಿಚಾರಮಾಡಬೇಕು. ನೂರರಲ್ಲಿ ಅರುವತ್ತು ಎಪ್ಪತ್ತರಷ್ಟು ಜನ ಯಾವ ಮಾತನ್ನು ಆಡುತ್ತಾರೆಯೋ ಆ ಮಾತಿನಲ್ಲಿ ಅಲ್ಲಿ ವಿದ್ಯಾಭ್ಯಾಸವನ್ನು ಕೊಡುವುದು ದೇಶದ ಅಭ್ಯುದಯಕ್ಕೆ ಸಾಧನವಾಗುತ್ತದೆ. ಉಳಿದ ಮೂವತ್ತು ನಲವತ್ತರಷ್ಟು ಜನರಲ್ಲಿ ಅನೇಕರಿಗೆ ಆ ಅರುವತ್ತು ಎಪ್ಪತ್ತು ಜನರ ಸಹವಾಸದಲ್ಲಿ ಅವರ ಮಾತು ತಕ್ಕಮಟ್ಟಿಗೆ ಬಂದೇ ಇರುತ್ತದೆ. ಎಪ್ಪತ್ತು ಜನರ ಭಾಷೆಯನ್ನು ಪಾಠಶಾಲೆಗಳಲ್ಲಿ ಕಲಿಯುವುದರಲ್ಲಿ ಮೂವತ್ತು ಜನರಿಗೆ ವಿಶೇಷ ಕಷ್ಟವಿರುವುದಿಲ್ಲ. ಈ ದೃಷ್ಟಿಯಿಂದ ನೋಡಿದರೆ ಬಳ್ಳಾರಿ ಬೆಳಗಾಂ ಜಿಲ್ಲೆಗಳು ಕನ್ನಡದ ಸೀಮೆಗೆ ಸೇರಬೇಕೇ, ತೆಲುಗು ಮಹಾರಾಷ್ಟ್ರ ಸೀಮೆಗಳಿಗೆ ಸೇರಬೇಕೇ ಎಂದು ನಿರ್ಧರಿಸುವುದು ಸುಲಭ. ಮಹಾರಾಷ್ಟ್ರರಾಗಲಿ, ತೆಲುಗರಾಗಲಿ, ಕನ್ನಡಿಗರಾಗಲಿ ಒಬ್ಬರನ್ನೊಬ್ಬರು ಗೆದ್ದು ಒಬ್ಬರಮೇಲೊಬ್ಬರು ಚಕ್ರಾಧಿಪತ್ಯವನ್ನು ನೆಟ್ಟಿಲ್ಲ; ನೆಟ್ಟಿದ್ದರೂ ನಮ್ಮ ಭಾಷೆಯನ್ನು ನೀವು ಕಲಿಯಿರಿ ಎಂದು ಹೇಳಿದ್ದರೆ ಸರಿಯಾಗಿರುತ್ತಿರಲಿಲ್ಲ. ಸ್ವಲ್ಪ ಸಮಾಧಾನ ಮನಸ್ಸಿನಿಂದ ನೋಡಿದರೆ ಹೆಚ್ಚು ಜನರ ಭಾಷೆಯಿಂದ ನಾಡು ಯಾವ ನಾಡೆಂಬುದನ್ನು ನಿರ್ಧರಿಸಬೇಕೆಂದು ಒಪ್ಪಬೇಕಾಗುವುದು. ಒಟ್ಟು ಜಿಲ್ಲೆಯನ್ನೇ ಕನ್ನಡ ನಾಡು ಅಥವಾ, ತೆಲುಗು ನಾಡು ಅಥವಾ, ಮಹಾರಾಷ್ಟ್ರ ಎಂದು ಹೇಳುವುದರಿಂದ ಹೆಚ್ಚು ತೆಲುಗು ಪ್ರಜೆಗಳುಳ್ಳ ಅಥವಾ, ಹೆಚ್ಚು ಮಹಾರಾಷ್ಟ್ರ ಪ್ರಜೆಗಳುಳ್ಳ ತಾಲ್ಲೂಕು ಕನ್ನಡ ನಾಡಿಗೆ ಸೇರಿ ಹೋಗುವ ಸಂಭವವಿದೆಯೆಂದರೆ ಅಂಥ ಸಂದರ್ಭದಲ್ಲಿ ಆ ತಾಲ್ಲೂಕನ್ನು ತೆಲುಗು ಸೀಮೆಯಲ್ಲಿ ಅಥವಾ, ಮಹಾರಾಷ್ಟ್ರ ಸೀಮೆಯಲ್ಲಿ ಸೇರಿಸಬಹುದು.

**ಈ ಸೂತ್ರದ ವ್ಯಾಪನೆ**

ಈ ಸೂತ್ರವನ್ನು ಅನ್ವಯಿಸಿ ನೋಡಿದರೆ ಯಾವ ಯಾವ ಭಾಗ ಕನ್ನಡ ನಾಡಾಗಿರಬೇಕು, ಯಾವ ಯಾವ ಭಾಗ ಬೇರೆ ನಾಡುಗಳಿಗೆ ಸೇರಬೇಕು ಎಂದು ನಾನು ಪರೀಕ್ಷಿಸಿ ನೋಡಿಲ್ಲ. ಈ ಸೂತ್ರದ ಪ್ರಕಾರ ಈ ಜಿಲ್ಲೆಗಳು ವಿಶೇಷವಾಗಿ ಕನ್ನಡ ನಾಡಾಗುವುದಾದರೆ ಇದನ್ನು ನೋಡಿಕೊಂಡೇ ಸೂತ್ರವನ್ನು ಹೇಳಿದೆನೆಂದು ಯಾರೂ ಹೇಳಬಾರದು. ನನ್ನ ಮನಸ್ಸಿನಲ್ಲಿರುವುದು ಇಷ್ಟೇ: ವಿದ್ಯೆಯಲ್ಲಿಯೂ ಜೀವನದಲ್ಲಿಯೂ ಯಾವ ಪ್ರಾಂತದಲ್ಲಾದರೂ ಅವರ ಜನು

ಸಂಖ್ಯೆಯ ಜನರ ಭಾಷೆಯೇ ಬಳಕೆಯಲ್ಲಿ ಬರಬೇಕು. ಇದರಿಂದ ಬಹಳ ಜನಕ್ಕೆ ಅನುಕೂಲ; ಕೆಲವರಿಗೆ ಸ್ವಲ್ಪ ಅನನುಕೂಲವಾಗಬಹುದು. ಆದರೆ ಇಂಥ ಸಂದರ್ಭದಲ್ಲಿ ಇದು ತಪ್ಪಿದುದಲ್ಲ. ಮಹಾರಾಷ್ಟ್ರರು ಅಥವಾ, ತೆಲುಗರು ಹೆಚ್ಚಾಗಿರುವ ಕಡೆ ವಾಸವಾಗಿರುವ ಕೆಲವು ಕನ್ನಡಿಗರು ತಮಗೆ ಅನುಕೂಲವಾಗುವಂತೆ ವ್ಯವಹಾರವೆಲ್ಲ ಕನ್ನಡದಲ್ಲಿ ಆಗಬೇಕೆಂದು ಕೇಳುವುದು ಸರಿಯಲ್ಲ. ಇದರಂತೆಯೇ, ಹೆಚ್ಚು ಜನ ಕನ್ನಡಿಗರಿರುವ ಕಡೆ ವಾಸಮಾಡುವ ಮಹಾರಾಷ್ಟ್ರರಾಗಲಿ ತೆಲುಗರಾಗಲಿ ತಮ್ಮ ಸಲುವಾಗಿ ಅಲ್ಲಿ ತಮ್ಮ ಭಾಷೆ ಪಾಠದಲ್ಲಿಯೂ ಆಡಳಿತದಲ್ಲಿಯೂ ಬಳಕೆಯಲ್ಲಿ ಬರಬೇಕೆಂದು ಕೇಳಲಾಗದು. ಈ ರೀತಿಯ ಒಂದು ಏರ್ಪಾಡನ್ನು ನಾವೆಲ್ಲ ಒಪ್ಪಿಕೊಂಡರಲ್ಲದೆ ನಮ್ಮ ನಮ್ಮ ಈಗಣ ವಿವಾದಗಳು ಕೊನೆಗಾಣುವಂತಿಲ್ಲ. ನಮ್ಮ ನಾಡುಗಳ ಸೆರಗುಗಳು ಒಂದರಲ್ಲೊಂದು ಹೆಣೆದುಕೊಂಡಿವೆ. ಇಂಥ ಸೆರಗಿನ ಪ್ರದೇಶದಲ್ಲಿ ಎರಡು ಭಾಷೆಗಳ ಜನರು ಇರುತ್ತಾರೆ. ಇಂಥ ಸಂದರ್ಭದಲ್ಲೆಲ್ಲ ಈ ರೀತಿಯ ಒಪ್ಪಂದದಿಂದಲೇ ನಾವು ಆಯಾ ಭಾಷೆಯ ವ್ಯಾಪನೆ ಇಷ್ಟೆಂದು ನಿರ್ಧರಿಸಬೇಕು.

**ನಮ್ಮ ವಿದ್ಯಾಭ್ಯಾಸದಲ್ಲಿ ಕನ್ನಡದ ಸ್ಥಾನ**

ಹೀಗೆ ನಿರ್ಧರವಾದ ಕನ್ನಡ ನಾಡಿನ ವಿಸ್ತೀರ್ಣದಲ್ಲೆಲ್ಲ ನಾವು ಕನ್ನಡ ಭಾಷೆಗೆ ವಿದ್ಯಾಭ್ಯಾಸದಲ್ಲಿ ಸರಿಯಾದ ಸ್ಥಾನವನ್ನು ಕಲ್ಪಿಸಬೇಕು. ಈ ಸರಿಯಾದ ಸ್ಥಾನವೆನ್ನುವುದು ಯಾವುದು ಎಂಬ ವಿಷಯದಲ್ಲಿ ಈವರೆಗೆ ಭಾರತವರ್ಷದ ಎಲ್ಲಾ ಕಡೆಯಲ್ಲಿಯೂ ಕೊನೆ ಮೊದಲಿಲ್ಲದಷ್ಟು ಚರ್ಚೆ ನಡೆದಿದೆ. ಕನ್ನಡ ನಾಡಿನಲ್ಲಿ ಕನ್ನಡದ ಜನಕ್ಕೆ ವಿದ್ಯೆಯನ್ನು ಕನ್ನಡದಲ್ಲಿ ಕಲಿಸಬೇಕೆಂಬುದು ಸಹಜವಾಗಿ ಕಾಣುತ್ತದೆ. ಲಾರ್ಡ್ ಮೆಕಾಲೆ ಮುಂತಾದವರು ದೇಶಭಾಷೆಗಳಿಗೆ ಒಪ್ಪದಿದ್ದುದಕ್ಕೆ ಅವು ಇನ್ನೂ ಸಾಕಾದಷ್ಟು ಬೆಳೆದಿರಲಿಲ್ಲವೆಂದು ಮಾತ್ರ ಕಾರಣವೆಂದು ತಾವು ಈ ಮೊದಲೇ ಕೇಳಿದ್ದೀರಿ. ಈಗ ನಮ್ಮಲ್ಲಿ ಹಲವರು ಅವರಿಗಿಂತ ವೀರರಾದ ಇಂಗ್ಲಿಷ್ ಭಕ್ತರಾಗಿ ವಿದ್ಯಾಭ್ಯಾಸದಲ್ಲ ಎಲ್ಲ ತರಗತಿಯಲ್ಲಿ ಎಂದೆಂದಿಗೂ ಇಂಗ್ಲೀಷೇ ಮುಖ್ಯ ಭಾಷೆಯಾಗಿರಬೇಕೆಂದು ಹೇಳುತ್ತಿದ್ದಾರೆ. ವಿದ್ಯೆಯಿಂದ ಮನುಷ್ಯನಿಗೆ ಮುಖ್ಯವಾಗಿ ಭಾವವಿಕಾಸವಾಗಬೇಕು. ಇದು ಮಾತೃಭಾಷೆಯಿಂದ ಆಗುವಂತೆ ಇನ್ನು ಯಾವ ಭಾಷೆಯಿಂದಲೂ ಆಗಲಾರದು. ಮಾತೃಭಾಷೆಯಲ್ಲದಿದ್ದರೆ ಮಾತೃಸಮವಾದ ಭಾಷೆಯಿಂದ ಅದೇ ವಿಕಾಸವಾಗಬಹುದು. ಇದನ್ನು ಬಿಟ್ಟು ಪರ ಸೀಮೆಯ ಭಾಷೆಯಿಂದ ಭಾವವನ್ನು ವಿಕಾಸಗೊಳಿಸುತ್ತೇವೆನ್ನುವುದು ಅಸಾಧ್ಯವಾದ ಪ್ರಯತ್ನ. ಇಂಗ್ಲಿಷ್ ಪರವಾಗಿ ವಾದಿಸುವ ನಮ್ಮ ಮಿತ್ರರೊಬ್ಬರು ನಾಲ್ಕು ವರ್ಷದ ಹಿಂದೆ ಬರೆದ ಒಂದು ಲೇಖನದಲ್ಲಿ ನಮ್ಮ ಹುಡುಗರಿಗೆ ಇಂಗ್ಲೀಷನ್ನೇ ಮಾತೃಭಾಷೆಯಂತೆ ಮಾಡಬೇಕೆಂದೂ, ಹೀಗಾಗುವುದಕ್ಕೆ ಮಕ್ಕಳನ್ನು ಚಿಕ್ಕಂದಿನಿಂದ ಬೋರ್ಡಿಂಗ್ ಸ್ಕೂಲುಗಳಲ್ಲಿ ಬಿಡಬೇಕೆಂದೂ, ಆ ಸ್ಕೂಲುಗಳಲ್ಲಿ ಮಕ್ಕಳಿಗೆ ಪಾಠಕಲಿಸುವುದಕ್ಕೆ ಇಂಗ್ಲೆಂಡಿನಿಂದ ಲೇಡೀ ಟೀಚರುಗಳನ್ನು ಕರೆಯಿಸಬೇಕೆಂದೂ, ಈ ಲೇಡೀ ಟೀಚರುಗಳು 'ಮಿಷನ್'ವುಳ್ಳವ

ರಾಗಿದ್ದರೆ ಸಂತೋಷವೆಂದೂ, ಇಂಥ ಸ್ಕೂಲುಗಳನ್ನು ಸ್ಥಾಪಿಸುವುದಕ್ಕೆ ಸರ್ಕಾರದವರು ಸಾಲವನ್ನು ಎತ್ತಬೇಕೆಂದೂ ಬರೆದರು. "ಮಾತೃಭಾಷೆಯಲ್ಲಿ ಗ್ರಂಥಗಳಿಲ್ಲ; ಇತರ ಕೊರತೆಗಳಿವೆ. ಆದುದರಿಂದ ಗ್ರಂಥಗಳಿರುವ, ಮತ್ತು ಯಾವ ಕೊರತೆಯೂ ಇಲ್ಲದ ಇಂಗ್ಲೀಷನ್ನು ನಮ್ಮ ಜನಕ್ಕೆಲ್ಲ ಮಾತೃಭಾಷೆಯಾಗಿ ಮಾಡೋಣ" ಎನ್ನುವುದೇ ಈ ವಿಚಿತ್ರವಾದ ಸಲಹೆಯಲ್ಲಿ ಅಡಗಿರುವ ತತ್ತ್ವಾಂಶ. ಮಾತೃಭಾಷೆಯಲ್ಲಿ ಅಥವಾ, ಅದಕ್ಕೆ ಸಮವಾದ ಭಾಷೆಯಲ್ಲಿ ಪಾಠ ಕಲಿಸುವುದರಿಂದ ಬರುವ ಸಂಸ್ಕಾರವು ಬೇರೆ ಯಾವ ಭಾಷೆಯಿಂದ ಕಲಿಸಿದರೂ ಬರುವುದಿಲ್ಲ. ಇದು ನಿಜವಾದ ಮಾತು; ಇದು ನಾವು ಮರೆಯಬಾರದ ಮಾತು. ಇದೇ ಮಾತನ್ನು ಕಲಿಕತ್ತೆಯ ಯೂನಿವರ್ಸಿಟಿ ಕಮಿಷನ್ನಿನವರು ಹೇಳಿದ್ದಾರೆ. ಈ ಕಾರಣದಿಂದ ಅವರು ಬಂಗಾಳದಲ್ಲಿ ಮಧ್ಯಮ ತರಗತಿಗಳಲ್ಲೆಲ್ಲ ದೇಶಭಾಷೆಯಲ್ಲಿ ಪಾಠ ಹೇಳಬೇಕೆಂದೂ, ಪ್ರೌಢ ವಿದ್ಯೆಯ ಮೊದಲೆರಡು ವರ್ಷಗಳಲ್ಲಿ ದೇಶಭಾಷೆಗೆ ಹೆಚ್ಚಿನ ಸ್ಥಾನವನ್ನು ಕೊಡಬೇಕೆಂದೂ ನಿರ್ಧರಮಾಡಿದರು. ಬಂಗಾಳೀ ಭಾಷೆಗೆ ಆ ಕಮಿಷನ್ನಿನವರು ಮಾಡಿದ ಸಿದ್ಧಾಂತವು ನಮ್ಮಲ್ಲಿ ಕನ್ನಡಕ್ಕೆ ಅನ್ವಯಿಸತಕ್ಕುದಾಗಿದೆ. ಅವರ ಈ ಮಾತುಗಳನ್ನು ಕೇಳಿರಿ:—

"But on the other hand, the mother-tongue is of primary importance. The mother-tongue is the true vehicle of mother-wit. Another medium of speech may bring with it, as English brings with it, a current of new ideas. But the mother-tongue is one with the air in which a man is born..........A man's native speech is almost like his shadow, inseparable from his personality. In our way of speech we must each, as the old saying runs, drink water out of our own cistern. For each one of us is a member of a community. We share its energy and its instincts; its memories, however dim, of old and far-off things. And it is through our vernacular, through our folk speech, whether actually uttered or harboured in our unspoken thoughts, that most of us attain to the characteristic expression of our nature and of what our nature allows us to be or to deserve......Hence in all education, the primary place should be given to training in the exact and free use of the mother-tongue.

"Since the primary aim of the course in the Intermediate College is to give the student a liberal education, there must be a common element in all forms which this course may assume. And the most essential part of this common element must obviously be a training in the media of self-expression, and of exact and clear thinking. This is, of course, the primary purpose of linguistic training; and the educated Bengali boy, who has to be bilingual, must be given a sound training in the use of at least two languages, his mother-tongue and English.

"We attach great importance to the systematic study of the vernacular at this stage, not only for its own sake, but as a means to clear thinking. The student should read some of the best works in modern Bengali or other vernacular, and be given practice both in composition and in clear and correct speech."

"ಮಾತೃಭಾಷೆಯು ಬಹು ಮುಖ್ಯವಾದುದು. ಮನುಷ್ಯನ ಸಹಜವಾದ ಬುದ್ಧಿಯು ಕಾಣುವುದು ಅವನ ಮಾತೃಭಾಷೆಯಲ್ಲಿಯೇ. ಇಂಗ್ಲೀಷಿನಂತಹ ಬೇರೆಯ ಭಾಷೆಯು ಹೊಸ ಭಾವನೆಗಳ ಪ್ರವಾಹವನ್ನು ತರಬಹುದು. ಮಾತೃಭಾಷೆಯಾದರೋ ಮನುಷ್ಯನಿಗೆ ಅವನು ಹುಟ್ಟಿದ ಆವರಣದ ಗಾಳಿಯಂತಿರುತ್ತದೆ. ಯಾವನೊಬ್ಬನ ಮಾತೃಭಾಷೆಯೂ ಅವನ ನೆರಳಿನಂತೆ. ಅವನ ವ್ಯಕ್ತಿತ್ವದಿಂದ ಅದನ್ನು ಬಿಡಿಸಲಾಗದು. ನಮ್ಮ ನಮ್ಮ ಮಾತಿನ ರೀತಿಯಲ್ಲಿ ತಮ್ಮ ತಮ್ಮ ಕೊಳದ ನೀರನ್ನು ತಾವು ತಾವು ಕುಡಿಯಬೇಕು. ನಮ್ಮಲ್ಲಿ ಒಬ್ಬೊಬ್ಬರೂ ಒಂದು ಸಮುದಾಯದಲ್ಲಿ ಸೇರಿದ್ದೇವೆ. ಅದರ ಶಕ್ತಿಗಳೂ ಅದರ ಪ್ರವೃತ್ತಿಗಳೂ ನಮ್ಮಲ್ಲಿ ಅಡಗಿವೆ. ಎಷ್ಟೋ ಮಂಕಾದರೂ ಆ ಸಮುದಾಯದ ಪೂರ್ವಚರಿತ್ರೆಯ ನೆನಪು ನಮ್ಮಲ್ಲಿ ಐಕ್ಯವಾಗಿರುತ್ತದೆ. ಆಡಿದರೂ, ಆಡದೆ ಮನಸ್ಸಿನಲ್ಲಿ ಇಟ್ಟಿದ್ದರೂ ನಮ್ಮ ಮಾತೃಭಾಷೆಯಿಂದಲೇ ನಮ್ಮ ಜನದ ದಿನದ ನುಡಿಯಿಂದಲೇ ನಾವು ನಮ್ಮ ವ್ಯಕ್ತಿತ್ವವನ್ನು ಸಹಜರೀತಿಯಲ್ಲಿ ತೋರ್ಪಡಿಸತಕ್ಕದ್ದು; ನಮ್ಮ ಸ್ವಭಾವಕ್ಕೆ ಸಾಧ್ಯವಾಗ ತಕ್ಕುದಾದ ರೀತಿಯಲ್ಲಿ ವಿಕಾಸವಾಗತಕ್ಕದ್ದು. ಆದಕಾರಣ ಎಲ್ಲ ವಿದ್ಯಾಭ್ಯಾಸ ಕ್ರಮದಲ್ಲಿಯೂ ಮಾತೃಭಾಷೆಯನ್ನು ನಿಷ್ಕರ್ಷೆಯಿಂದಲೂ ಧಾರಾಳವಾಗಿಯೂ ಉಪಯೋಗಿಸುವುದನ್ನು ಕಲಿಸುವುದಕ್ಕೆ ಮೊದಲ ಸ್ಥಾನವನ್ನು ಕೊಡಬೇಕು.

"ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ ಮುಖ್ಯೋದ್ದೇಶವು ವಿದ್ಯಾರ್ಥಿಗೆ ಭಾವನೆಯನ್ನು ವಿಶಾಲಪಡಿಸುವ ತಿಳಿವನ್ನು ಕಲಿಸುವುದು. ಆದ್ದರಿಂದ ಈ ತರಗತಿಯ ಎಲ್ಲ ಶಾಖೆಗಳಲ್ಲಿ ಒಂದು ಭಾಗವು ಸಾಮಾನ್ಯವಾಗಿರಬೇಕು. ವಿದ್ಯಾರ್ಥಿಗೆ ತನ್ನ ಭಾವಗಳನ್ನು ವ್ಯಕ್ತಪಡಿಸುವ ಭಾಷೆಯಲ್ಲಿ ಜ್ಞಾನವನ್ನು ಕೊಡುವುದೂ ಸ್ಪಷ್ಟವಾಗಿಯೂ ನಿಷ್ಕಲ್ಮಷವಾಗಿಯೂ ಆಲೋಚಿಸುವುದರಲ್ಲಿ ಅಭ್ಯಾಸವನ್ನು ಕೊಡುವುದೂ ಈ ಸಾಮಾನ್ಯ ಭಾಗದ ಮುಖ್ಯಾಂಶ; ಭಾಷೆಯನ್ನು ಕಲಿಯುವುದರ ಉದ್ದೇಶವೇ ಇದು. ಆದಕಾರಣ ಎರಡು ಭಾಷೆಗಳನ್ನು ಕಲಿಯಬೇಕಾಗಿರುವ ಬಂಗಾಳೀ ವಿದ್ಯಾರ್ಥಿಗೆ ತನ್ನ ಮಾತೃಭಾಷೆ ಮತ್ತು ಇಂಗ್ಲೀಷು, ಈ ಎರಡು ಭಾಷೆಗಳಲ್ಲಾದರೂ ಖಚಿತವಾದ ಅಭ್ಯಾಸವನ್ನು ಕೊಡುವುದು ಅತ್ಯಂತ ಆವಶ್ಯಕ.

"ಈ ತರಗತಿಯಲ್ಲಿ ದೇಶ ಭಾಷೆಯನ್ನು ಕ್ರಮವಾಗಿ ಪಾಠ ಮಾಡುವುದು ಬಹಳ ಆವಶ್ಯಕವೆಂದು ನಮ್ಮ ಅಭಿಪ್ರಾಯ; ವಿದ್ಯಾರ್ಥಿಯು ತನ್ನ ಭಾಷೆಯನ್ನು ಕಲಿಯಲಿ ಎಂದು ಮಾತ್ರವಲ್ಲ. ಅವನಿಗೆ ಸ್ಪಷ್ಟವಾಗಿ ಆಲೋಚಿಸುವ ಶಕ್ತಿ ಬರಲು ಇದು ಸಾಧನ. ಈ ತರಗತಿಯ ವಿದ್ಯಾರ್ಥಿಯು ಬಂಗಾಳೀ ಭಾಷೆಯ ಅಥವಾ, ಇತರ ಭಾಷೆಯ ಆಧುನಿಕ ಸಾಹಿತ್ಯದ ಅತ್ಯುತ್ತಮ ಗ್ರಂಥಗಳನ್ನು ಓದಬೇಕು; ಆ ಭಾಷೆಯಲ್ಲಿ ವಾಕ್ಯರಚನೆ ಮತ್ತು ಸ್ಪಷ್ಟವಾಗಿಯೂ ಶುದ್ಧವಾಗಿಯೂ ಮಾತನಾಡುವುದು, ಇವೆರಡರಲ್ಲಿಯೂ ಅಭ್ಯಾಸವನ್ನು ಪಡೆಯಬೇಕು."

ಈ ಕಮಿಷನ್ನಿನವರು ಈ ನಿರ್ಧಾರವನ್ನು ಅಂಗೀಕರಿಸುವ ಮೊದಲು ನಮಗೆ ಇಂಗ್ಲೀಷೇ ಇರಬೇಕು, ದೇಶಭಾಷೆಯಿಂದ ನಮಗೆ ಶ್ರೇಯಸ್ಸು ಬರುವುದು ಕಷ್ಟ, ಎಂದು ಹೇಳಿದ ಹತ್ತಾರು ಜನರ ಅಭಿಪ್ರಾಯಗಳನ್ನು ತೆಗೆದುಕೊಂಡು ಚೆನ್ನಾಗಿ ಆಲೋಚನೆಮಾಡಿ ಕೊನೆಗೆ ಇದು ತಮ್ಮ ಸಿದ್ಧಾಂತವೆಂದು ನಿರ್ಣಯಿಸಿದರು.

**ಕನ್ನಡದಲ್ಲಿ ಕಷ್ಟವೇನು?**

ಇಷ್ಟಕ್ಕೆ ಕನ್ನಡದ ವಿಷಯದಲ್ಲಿ ಆಕ್ಷೇಪವೇನು? ಕನ್ನಡದಲ್ಲಿ ಸಾಕಾದಷ್ಟು ಮಾತುಗಳಿಲ್ಲ, ಕನ್ನಡದಲ್ಲಿ ಟೆಕ್ಸ್ಟ ಪುಸ್ತಕಗಳಿಲ್ಲ, ಕನ್ನಡದಲ್ಲಿ ಎಲ್ಲಾ ವಿಷಯಗಳಲ್ಲಿಯೂ ಗ್ರಂಥಗಳಿಲ್ಲ ಎನ್ನುವುದು. ಕನ್ನಡದಲ್ಲಿ ಮಾತಿಲ್ಲದೆ ಏನು? ಕುಮಾರವ್ಯಾಸನ ಭಾರತದಲ್ಲಿರುವ ಮಾತನ್ನೆಲ್ಲ ಉಪಯೋಗಿಸಿದರೆ ಯಾವ ವಿಷಯವನ್ನು ಕುರಿತು ಎಷ್ಟು ದೊಡ್ಡ ಪುಸ್ತಕ ಬರೆದರೆ ಬೇಡವೆಂದೀತು? ನಾವೀಗ ಕನ್ನಡದ ಮಾತಿಗೆ ಇಂಗ್ಲೀಷಿನಲ್ಲಿ ಅರ್ಥವನ್ನು ಕಲಿಯುತ್ತ Bhringa ಎಂದರೆ A kind of musical insect ಎಂದೂ, ಕದಳೀಫಲ ಎಂದರೆ Banana, a kind of edible fruit ಎಂದೂ ಹೇಳುವ ಸ್ಥಿತಿಗೆ ಬಂದಿದ್ದೇವೆ. ನಮ್ಮ ಪಾಲಿಗೆ ಕನ್ನಡದಲ್ಲಿ ಮಾತೇ ಇಲ್ಲ. ನಮಗೆ ಪ್ರಾಪ್ತಿ ಇಲ್ಲದುದರಿಂದ ಕನ್ನಡ ಬಡವಾಯಿತು. ಇರುವ ಮಾತುಗಳನ್ನು ಹೊಸ ಸಂದರ್ಭಗಳಲ್ಲಿ ಉಪಯೋಗಿಸಿದರೆ ಹೊಸ ಅರ್ಥಗಳು ಸೇರಿ ಹೊಸ ಮಾತುಗಳು ಬರುವುವು. ಇನ್ನು, ಟೆಕ್ಸ್ಟಪುಸ್ತಕಗಳ ಮಾತು: ಪಾಠ ಹೇಳುವುದು ನಿರ್ಧರವಾದರೆ ಟೆಕ್ಸ್ಟಪುಸ್ತಕಗಳು ಬರುತ್ತವೆ. ಎತ್ತು ಹಾರುವುದಕ್ಕೆ ಮುಂಚೆ ಗೋಣಿಯನ್ನು ಹಾರೆಸ್ನುವುದೆ? ಕಥೆಯ ಪುಸ್ತಕಗಳನ್ನು ಬರೆದವರೇ ಅಚ್ಚಿನ ಖರ್ಚನ್ನು ಸಂಪಾದಿಸುವುದು ಕಷ್ಟವಾಗಿದೆ; ಇನ್ನು ಟೆಕ್ಸ್ಟ ಪುಸ್ತಕಗಳನ್ನು ಯಾವ ಮಹನೀಯನು ಮುಂದಾಗಿ ಬರೆದು ನಮಗಾಗಿ ಕಾಯಬಹುದು! ಎಲ್ಲಾ ವಿಷಯಗಳಲ್ಲಿಯೂ ಗ್ರಂಥಗಳಿಲ್ಲವೆನ್ನುವುದಕ್ಕೂ ಇದೇ ಮಾತು. ಜನರ ಜೀವನ ಬಂದಾಗುವುದಕ್ಕೆ ದಾರಿ ಮಾಡಿದರೆ ಗ್ರಂಥಗಳು ತಾವಾಗಿ ಬರುವುವು. ಕನ್ನಡ ನಾಡಿನಲ್ಲಿ ಎಲ್ಲ ಕೆಲಸವೂ ಕನ್ನಡದಲ್ಲಿ ನಡೆಯುತಕ್ಕುದೆಂದು ಗೊತ್ತಾದರೆ ಕನ್ನಡದಲ್ಲಿ ಗ್ರಂಥಗಳು ಬರುವುವು ಸತ್ಯವಾದ ಮಾತು. ಇಷ್ಟು ಹೇಳಿದಮೇಲೆ

ನಮ್ಮ ಆಂಗ್ಲೋಪಾಸಕರು, "ಕಾಥಿ, ಕಾಶ್ಮೀರಿ, ಕೊಂಕಣಿ ಎಂದು ಅವರವರು ಅವರವರ ಮಾತು ಬೇಕೆಂದರೆ ಆಯಾ ಭಾಗದ ಜನರು ಅವರವರ ಆಲೋಚನೆ ಮಾಡಿಕೊಳ್ಳುತ್ತ ಸಂಕುಚಿತ ಬುದ್ಧಿಯುಳ್ಳವರಾಗುತ್ತಾರೆ" ಎಂದು ಆಕ್ಷೇಪಿಸುವರು. ಈ ಭಯ ನಿರಾಧಾರವಾದದ್ದೆಂದು ನಾನು ಹೇಳುವುದಿಲ್ಲ. ಆದರೆ ದೇಶದ ಏಳಿಗೆಗೆ ಕನ್ನಡವೇ ಆವಶ್ಯಕವೆಂಬುದು ನಿಜವಾದರೆ ಈ ಕಾರಣದಿಂದ ನಾವು ಹಿಂದೆಗೆಯಲಾಗದು. ಕನ್ನಡಕ್ಕೆ ವಿದ್ಯಾಭ್ಯಾಸದಲ್ಲಿ ಮುಖ್ಯ ಸ್ಥಾನವನ್ನು ಕೊಟ್ಟು ಇದರಿಂದ ಸಂಕುಚಿತ ಬುದ್ಧಿ ಇತ್ಯಾದಿ ಯಾವುದಾದರೊಂದು ಅನರ್ಥ ಬಾರದಂತೆ ನೋಡಿಕೊಳ್ಳಬೇಕು. ಇನ್ನಿದರಮೇಲೆ ಅನೇಕರು ಇದೇಕೆ ಇಷ್ಟು ಗಲಭೆ? ಉತ್ತಮ ವಿಚಾರವೆಲ್ಲ ಇಂಗ್ಲೀಷಿನಲ್ಲಿಯೇ ಇರಲಿ ಎಂದಿದ್ದರೂ ಉತ್ತಮವಾದ ಜ್ಞಾನವೆನ್ನುವುದು ಕೆಲವರಿಗೆ ಮಾತ್ರ ಸಾಧ್ಯ, ಉತ್ತಮವಾದ ಜ್ಞಾನ ಬೇಕೆನ್ನುವವರು ಇಂಗ್ಲೀಷಿನಲ್ಲೇ ಅದನ್ನು ಕಲಿಯಲಿ ಎನ್ನುವರು. ನಾವು ಏನೇ ಮಾಡಿದರೂ ತಿಳಿವಳಿಕೆ ತೆಂಗಿನಕಾಯೇ ಸರಿ. ಅದು ಕನ್ನಡದಲ್ಲಿದ್ದರೂ ಅದನ್ನು ಕೀಳುವುದಕ್ಕೆ ಉದ್ದವಾದ ಮರವನ್ನು ಏರಬೇಕು. ಆದರೆ ಹೇಗಿದ್ದರೂ ಕಷ್ಟವೆಂದು ಅದನ್ನು ಇಂಗ್ಲೀಷಿನಲ್ಲೇ ಇಡುವುದಾದರೆ ತೆಂಗಿನ ಮರಕ್ಕೆ ಮುಳ್ಳು ಕಂಪೆಯನ್ನು ಕಟ್ಟಿದ ಹಾಗಾಯಿತು. ಇದು ಸರಿ ಎನ್ನುವುದು ಹೇಗೆ? ನಮಗೆ ಇಂಗ್ಲೀಷು ಇರಲಿ; ಆದರೆ ನಮ್ಮ ದೇಶದ ಇತರ ಪ್ರಾಂತದ ಜನರೊಂದಿಗೆ, ಪ್ರಪಂಚದ ಇತರ ದೇಶಗಳ ಜನರೊಂದಿಗೆ ಬಳಕೆಗಾಗಿ ಮಾತ್ರ ಅದನ್ನು ಉಪಯೋಗಿಸೋಣ. ನಮ್ಮ ಬದುಕು ಚೆನ್ನಾಗಿ ಬೆಳೆಯುವುದಕ್ಕೂ ನಮ್ಮ ಜನರ ಬದುಕು ಒಂದಾಗುವುದಕ್ಕೂ ದೇಶಭಾಷೆಯನ್ನು ಇಟ್ಟುಕೊಂಡರಲ್ಲದೆ ವಿಧಿಯಿಲ್ಲ.

**ಕೆಲವು ಉಪಷ್ಟಂಭಕ ವಾಕ್ಯಗಳು**

ಆಂಗ್ಲೇಯ ಚರಿತ್ರೆಯಲ್ಲಿ, ದೇಶಭಾಷೆಯಲ್ಲದೆ ರಾಜರಾದ ನಾರ್ಮನರ ಭಾಷೆಯು ಬಳಕೆಯಲ್ಲಿದ್ದಾಗ, ಅಲ್ಲಿಯ ಸ್ಥಿತಿ ಏನಾಗಿತ್ತೆಂದು ಆಂಗ್ಲೇಯ ಸಾಹಿತ್ಯ ಚರಿತ್ರೆಯನ್ನೋದಿದವರಿಗೆ ತಿಳಿದಿರಬಹುದು. ಆಗಣ ಒಂದೆರಡು ಗ್ರಂಥಗಳಲ್ಲಿ ಇರುವ ಈ ಸಂಬಂಧದ ಮಾತುಗಳನ್ನು ಓದಿದರೆ ಈಗಣ ನಮ್ಮ ಸ್ಥಿತಿಯನ್ನು ಕುರಿತ ಮಾತುಗಳೋ ಎಂದು ತೋರುತ್ತದೆ. ಚರಿತ್ರಕಾರನಾದ ರಾಬರ್ಟ ಎಂಬ ಕವಿಯು, "ಇಂಗ್ಲೆಂಡು ಹೀಗೆ ನಾರ್ಮನ್ನರ ಕೈಸೇರಿತು. ಆಗ ಅವರಿಗೆ ತಮ್ಮ ಭಾಷೆ ಮಾತ್ರ ಗೊತ್ತು. ಅವರು ಮನೆಯಲ್ಲಿ ಹೇಗೋ ಹಾಗೆಯೇ ಹೊರಗೂ ಫ್ರೆಂಚ್ ಭಾಷೆಯನ್ನೇ ಉಪಯೋಗಿಸುತ್ತಿದ್ದರು. ಮಕ್ಕಳಿಗೆ ಫ್ರೆಂಚನ್ನು ಹೇಳಿಕೊಡುತ್ತಿದ್ದರು. ಆದುದರಿಂದ ದೊಡ್ಡ ಪದವಿಯಲ್ಲಿರುವ ಎಲ್ಲ ಜನರೂ ಅವರ ಬಂಧುಗಳೂ ಈಗಲೂ ಅದೇ ಮಾತನ್ನೇ ಆಡುತ್ತಾರೆ....ತನ್ನ ಭಾಷೆಯನ್ನು ಬಿಟ್ಟು ಇತರ ಭಾಷೆಯನ್ನು ಅವಲಂಬಿಸಿರುವ ದೇಶವು ಇಂಗ್ಲೆಂಡು ಅಲ್ಲದೆ ಪ್ರಪಂಚದಲ್ಲಿ ಮತ್ತೊಂದಿರಲಾರದು" ಎಂದು ಬರೆದನು. ಹಿಗ್‌ಡನ್ ಎಂಬ ಮುನಿಯೂ, "ಪ್ರಪಂಚದ ಎಲ್ಲ ಜನಾಂಗದ ಪದ್ಧತಿಗೆ ವಿರೋಧವಾಗಿ ಈ ಸೀಮೆಯ ಪಾಠಶಾಲೆಗಳಲ್ಲಿ, ನಾರ್ಮನ್ನರು ಬಂದಂದಿನಿಂದಲೂ, ಹುಡುಗರು ತಮ್ಮ ಮಾತೃಭಾಷೆಯನ್ನು

ಬಿಟ್ಟು ಅದನ್ನು ಫ್ರೆಂಚ್ ಭಾಷೆಗೆ ಭಾಷಾಂತರ ಮಾಡುವುದನ್ನು ಕಲಿಯಬೇಕಾಗಿದೆ. ದೊಡ್ಡಮನುಷ್ಯರ ಮಕ್ಕಳು ಹುಟ್ಟಿದ ಮೊದಲು ಫ್ರೆಂಚನ್ನೇ ಕಲಿಯುತ್ತಾರೆ. ದೊಡ್ಡವರ ಹಾಗೆ ತಾವೂ ಮಾಡಿ ದೊಡ್ಡಮನುಷ್ಯರಾಗಬೇಕೆಂದು ಸಾಮಾನ್ಯರೂ ಕೂಡ ಫ್ರೆಂಚ್ ಮಾತನ್ನಾಡುವುದಕ್ಕೇ ಪ್ರಯತ್ನಪಡುತ್ತಾರೆ'' ಎಂದು ಬರೆದನು. ಕರ್ಸ್ಸರ್‌ಮುಂಡೈ ಗ್ರಂಥಕಾರನು, ''ಎಲ್ಲೆಲ್ಲಿ ನೋಡಿದರೂ ಫ್ರೆಂಚ್ ಪುಸ್ತಕಗಳೇ ನನ್ನ ಕಣ್ಣಿಗೆ ಬೀಳುತ್ತವೆ. ಫ್ರೆಂಚ್ ತಿಳಿದವರಿಗೇನೋ ಅವು ಸರಿ; ಉಳಿದವರ ಪಾಡೇನು? ಇಂಗ್ಲೆಂಡಿನ ಜನಾಂಗದಲ್ಲಿ ಇಂಗ್ಲಿಷ್ ಜನರು ಹೆಚ್ಚಾಗಿದ್ದಾರೆ. ಜನರಿಗೆ ಯಾವ ಮಾತು ಸುಲಭವಾಗಿ ತಿಳಿಯುವುದೊ ಆ ಮಾತಿನಲ್ಲಿ ಅವರು ವಿದ್ಯೆಯನ್ನು ಕಲಿಯಬೇಕು. ಎಂದೇ ಆಗಲಿ, ಏತಕ್ಕೇ ಆಗಲಿ ಇಂಗ್ಲಿಷ್ ಭಾಷೆಯನ್ನು ಫ್ರಾನ್ಸಿನಲ್ಲಿ ಬಳಕೆಗೆ ತರಲಿಲ್ಲ. ಅವರ ಭಾಷೆ ಅವರಿಗೆ, ನಮ್ಮ ಭಾಷೆ ನಮಗೆ. ಹೀಗೆ ಮಾಡಿದರೆ ಯಾರಿಗೂ ಅನ್ಯಾಯವಿಲ್ಲ'' ಎಂದು ಟೀಕಿಸಿದನು. ಫ್ರೆಂಚ್ ಭಾಷೆ ಮುಖ್ಯ ಭಾಷೆ ಎನ್ನುವುದನ್ನು ಬಿಡುವತನಕ ಇಂಗ್ಲೀಷು ಬೆಳೆಯಲಿಲ್ಲ. ಇಂಗ್ಲೀಷು ಮುಖ್ಯ ಭಾಷೆ ಎನ್ನುವುದನ್ನು ಬಿಡುವತನಕ ಕನ್ನಡ ಬೆಳೆಯುವುದಿಲ್ಲ. ಇನ್ನು, ನಮ್ಮ ದೇಶದ ಹಿರಿಯ ಕವಿಗಳಾದ ರವೀಂದ್ರನಾಥ ಠಾಕೂರರವರ ಜೀವನ ಸ್ಮೃತಿಯಿಂದ ಎತ್ತಿದ ಈ ಎರಡು ವಾಕ್ಯಗಳನ್ನು ಕೇಳಿರಿ. ರವೀಂದ್ರನಾಥರಿಗೆ ಇವರ ಅಣ್ಣಂದಿರು ಚಿಕ್ಕಂದಿನಲ್ಲಿ ಇಂಗ್ಲೀಷಿಗಿಂತ ಹೆಚ್ಚಾಗಿ ಬಂಗಾಳಿಯ ಪಾಠವನ್ನೇ ಮಾಡಿಸಿದರಂತೆ. ಅವರು ಹೀಗೆಂದು ಬರೆದಿದ್ದಾರೆ:—

"It is because we were taught in our own language that our minds quickened. If the whole mind does not work from the beginning, its full powers remain undeveloped to the end. While all around was the cry for English teaching my third brother was brave enough to keep us to our Bengali course. To him in heaven my grateful reverence."

''ನಮಗೆ ನಮ್ಮ ಭಾಷೆಯಲ್ಲಿ ಪಾಠವಾದುದರಿಂದಲೇ ನಮ್ಮ ಮನಸ್ಸು ವಿಕಾಸವಾದುದು. ಮನಸ್ಸೆಲ್ಲ ಮೊದಲಿಂದ ಚಲಿಸದಿದ್ದರೆ ಅದರ ಸಂಪೂರ್ಣ ಶಕ್ತಿಯು ಕೊನೆಗೂ ವ್ಯಕ್ತವಾಗದೆ ಹೋಗುವುದು. ಸುತ್ತಲೆಲ್ಲ ಇಂಗ್ಲೀಷೆಂದು ಕೂಗಾಡುತ್ತಿರುವಲ್ಲಿ ನಮ್ಮ ಮೂರನೆಯ ಅಣ್ಣಂದಿರು ನಮ್ಮನ್ನು ಬಂಗಾಳಿ ಪಾಠದಲ್ಲೇ ಇರಿಸುವ ಧೈರ್ಯವನ್ನು ಮಾಡಿದರು. ಸ್ವರ್ಗದಲ್ಲಿರುವ ಅವರಿಗೆ ನನ್ನ ವಂದನೆಗಳು.''

ಮಹನೀಯರೆ, ಮುಂದೆ ಬರುವವರ ಬಾಳು ಎಂತಹುದಾಗಬೇಕೆಂದು ತೀರ್ಮಾನಿಸುವ ಭಾರವು ಈಗ ನಮ್ಮನ್ನವಲಂಬಿಸಿದೆ. ತೀರ್ಮಾನ ಎಂಥದಾಗಿರಬೇಕೆಂದು ನಾವು ಯೋಚಿಸಬೇಕು. ನಾವು ಈ ಬದುಕನ್ನು ಮುಗಿಯಿಸಿ ಇಲ್ಲಿಂದ ಮರೆಯಾದ ಮೇಲೆ ನಮ್ಮ ಮಕ್ಕಳು ಮೊಮ್ಮಕ್ಕಳು, ''ನಮ್ಮ ಹಿರಿಯರು ನಮ್ಮ ವಿದ್ಯಾಭ್ಯಾಸದ ವಿಷಯದಲ್ಲಿ ಸರಿಯಾದ ದಾರಿಯನ್ನು ಹಿಡಿದರು; ಅದಕ್ಕಾಗಿ ಅವರಿಗೆ ವಂದನೆಗಳು'' ಎಂದು ಹೇಳುವಂತಾಗಲಿ. ಇದು ನಮ್ಮ ನೆನಪಿನಲ್ಲಿರಬೇಕಾದ ವಿಷಯ.

**ಸಾರಾಂಶ**

ಕನ್ನಡಕ್ಕೆ ನಮ್ಮ ದೇಶದ ವಿದ್ಯಾಭ್ಯಾಸ ಕ್ರಮದಲ್ಲಿ ಮುಖ್ಯ ಸ್ಥಾನವನ್ನು ಕೊಟ್ಟರೆ ನಮ್ಮ ದೇಶಕ್ಕೆ ಎಷ್ಟು ಶ್ರೇಯಸ್ಸುಂಟಾಗುವುದೆಂದು ನೆನೆದಾಗ ನನ್ನ ಮನಸ್ಸು ಉತ್ಸಾಹದಿಂದ ಉಬ್ಬುತ್ತದೆ. ನನಗೆ ತಿಳಿದ ಹಿರಿಯರಲ್ಲಿ ಕೆಲವರು ತಮ್ಮ ಭಾವನೆಗಳನ್ನು ಕನ್ನಡದಲ್ಲಿ ಬರೆದರೆ ಕನ್ನಡಕ್ಕೆ ಎಷ್ಟು ಗೌರವ ಬರುತ್ತಿತ್ತೆಂದು ಎಣಿಸಿದಾಗಲೆಲ್ಲ ನಾನು ಅದು ಸಾಧ್ಯವಲ್ಲದೆಹೋದುದಕ್ಕಾಗಿ ಖಿನ್ನನಾಗಿದ್ದೇನೆ. ಈಗಲಾದರೋ ಜನರಿಗೆ ತಿಳಿವಳಿಕೆ ಕೊಡಬಲ್ಲವರನೇಕರಿಗೆ ಜನರ ಮಾತು ಬರುವುದಿಲ್ಲ. ಅವರಿಗೆ ಅದನ್ನು ಕಲಿಯಲು ಇಚ್ಛೆಯೂ ಇಲ್ಲ. ಶಕ್ತರಾದವರೆಲ್ಲ ಕಾದಿರುವುದು ಬೇರೆ ಸೀಮೆಯ ಪಂಡಿತರ ಮೆಚ್ಚುಗೆಗೆ. ಮ್ಯಾತ್ಯೂ ಆರ್ನಾಲ್ಡ್ ಅವರು ಬರೆದ ಒಂದು ಉಪನ್ಯಾಸವನ್ನು ಕುರಿತು ಫ್ರೆಂಚ್ ಪಂಡಿತರೊಬ್ಬರು, "ನಿಮ್ಮ ಉಪನ್ಯಾಸ ಬಹಳ ಚೆನ್ನಾಗಿದೆ" ಎಂದು ಬರೆದುದಕ್ಕೆ ಈತನು, "ನಾನು ಮುಖ್ಯವಾಗಿ ನಮ್ಮ ಜನಕ್ಕಾಗಿ ಬರೆದೆನು; ಇದು ತಮ್ಮವರಿಗೂ ಉಪಯೋಗವಾದರೆ ಬಹಳ ಸಂತೋಷ" ಎಂದರು. ನಮ್ಮವರಿಗೆ ಈ ರೀತಿಯ ಆತ್ಮಗೌರವವು ಬರಬೇಕು. ಇತರರ ಮೆಚ್ಚುಗೆಗಾಗಿ ಕೆಲಸಮಾಡದವರು ಅವರ ಪರಿಚಯಮಾಡಿಕೊಂಡು ಸುಖಪಡುತ್ತ ನಮ್ಮವರ ಆಲೋಚನೆಯನ್ನು ಬಿಟ್ಟಿದ್ದೇವೆ; ಇದೂ ತಪ್ಪು. ಮನೆಯಲ್ಲಿ ಜಿಲೇಬಿ ಮಾಡಿ ಹೆಂಡತಿ ಮಕ್ಕಳಿಗೆಲ್ಲ ಕೊಡುವುದು ಕಷ್ಟವೆಂದು ಹೋಟಲಿಗೆ ಹೋಗಿ ಒಂದು ಸೇರು ಜಿಲೇಬಿ ತಿಂದುಬರುವಂತಾಯಿತು ನಮ್ಮ ರೀತಿ. ಕನ್ನಡವೇ ನಮಗೆಲ್ಲ ಭಾಷೆ, ಅದನ್ನು ಬಿಟ್ಟರೆ ನಮಗೆ ಬರೆಯುವ ಭಾಷೆಯಿಲ್ಲ, ಅದನ್ನು ಬಿಟ್ಟರೆ ನಮಗೆ ಓದುವ ಭಾಷೆಯಿಲ್ಲ ಎಂದು ನಿರ್ಧರಮಾಡಿ ಕನ್ನಡವನ್ನು ನಾವೆಲ್ಲ ಹಿರಿದಾಗಿ ಮಾಡಬೇಕು. ಬಡವೆಯಾದರೂ ಸುನೀತಿಯೇ ಧ್ರುವನ ತಾಯಿ; ಒಳ್ಳೆಯ ಸೀರೆಯುಟ್ಟು ದೊರೆಯನ್ನು ವಶಮಾಡಿಕೊಂಡಿದ್ದ ಮಾತ್ರಕ್ಕೆ ಸುರುಚಿಯನ್ನು ಅವನು ತಾಯಿ ಎಂದು ಸ್ವೀಕರಿಸಲಿಲ್ಲ. ತಾಯ ದುಃಖವನ್ನು ಕಳೆಯುವುದಕ್ಕೆ ಕಾಡಿನಲ್ಲಿ ತಪಸ್ಸುಮಾಡಿದನು. ನಾವೂ ಹೀಗೆಯೇ ತಪಸ್ಸುಮಾಡಬೇಕು, ನಮ್ಮ ತಾಯ ಬಡತನವನ್ನು ನೀಗಬೇಕು.

**ಬಹುಮುಖವಾದ ಕರ್ತವ್ಯ**

ಭಾಷೆಯ ಏಳಿಗೆಗಾಗಿ ನಾವು ಹೀಗೆ ಮಾಡಬೇಕಾಗಿರುವ ಕರ್ತವ್ಯವು ಬಹುಮುಖವಾಗಿದೆ. ಕನ್ನಡಿಗರಾಗಿ ಕನ್ನಡದಲ್ಲಿ ವಿಶೇಷ ಪರಿಚಯವಿಲ್ಲದವರು ನಮ್ಮಲ್ಲಿನೇಕರುಂಟು. ಇಂಥವರು ಭಾಷೆಯನ್ನು ಕಲಿಯುವುದಕ್ಕೆ ನಾವು ಸೌಕರ್ಯಗಳನ್ನು ಕಲ್ಪಿಸಬೇಕು. ನಮ್ಮ ಜನರು ಓದುವುದಕ್ಕೆ ಮುಖ್ಯವಾದ ವಿಷಯಗಳಲ್ಲೆಲ್ಲ ಒಳ್ಳೆಯ ಪುಸ್ತಕಗಳನ್ನು ನಿರ್ಮಿಸಬೇಕು. ಇತರ ಸಾಹಿತ್ಯಗಳಲ್ಲಿಯ ಉತ್ತಮ ಭಾವಗಳು ನಮ್ಮ ಸಾಹಿತ್ಯದಲ್ಲಿ ಹಿತವಾಗಿ ರಸಯುಕ್ತವಾಗಿ ದೊರಕುವಂತೆ ಭಾಷಾಂತರಗಳನ್ನು ಮಾಡಬೇಕು. ನಮ್ಮ ನಾಡ ಸಮಸ್ತ ಜನರೂ ತಮ್ಮ ತಮ್ಮ ಮತದ ವಿಷಯವಾದ ಗ್ರಂಥಗಳನ್ನು ಕನ್ನಡದಲ್ಲಿ ನೋಡುವಂತೆ ಮತಗ್ರಂಥಗಳನ್ನು ಪ್ರಚುರಗೊಳಿಸಬೇಕು. ನಮ್ಮ ಭಾಷೆಗೂ ಇತರ ಭಾಷೆಗಳಿಗೂ

ಇರುವ ಸಂಬಂಧವು ವ್ಯಕ್ತವಾಗುವಂತೆಯೂ, ಅವುಗಳಿಂದ ನಮ್ಮ ಭಾಷೆಗೆ ಆಗ ಬಹುದಾದ ಸಹಾಯವಾಗುವಂತೆಯೂ ನೆರೆಯ ಭಾಷೆಗಳ ಉತ್ತಮ ಗ್ರಂಥ ಗಳನ್ನು ಭಾಷಾಂತರಮಾಡಬೇಕು. ಸಂಸ್ಕೃತವು ನಮಗೆ ಹಿರಿಯ ತಾಯಿ. ನಮ್ಮ ಸಂಸ್ಕೃತಿಗೆ ಆವಶ್ಯಕವಾದ ಅನೇಕ ಗ್ರಂಥಗಳು ಈ ಭಾಷೆಯಲ್ಲಿರುವುದ ರಿಂದ ನಮಗೆ ಅವು ಈಗಲೂ ಹೆಸರು ಮಾತ್ರವಾಗಿವೆ. ಅವುಗಳನ್ನೆಲ್ಲ ಕನ್ನಡದಲ್ಲಿ ಅಚ್ಚು ಹಾಕಿಸಬೇಕು. ಭಾಷೆಯ ಶೈಲಿ ಧರಿಸುತ್ತಿರುವ ರೂಪವನ್ನು ನೋಡಿ ಜೀವಕಳೆಯುಳ್ಳ ವ್ಯಾಕರಣವೊಂದನ್ನೂ ಸಾಹಿತ್ಯ ಶಾಸ್ತ್ರವೊಂದನ್ನೂ ರಚಿಸಬೇಕು. ಭಾಷೆಯನ್ನು ಒಕ್ಕಟ್ಟಾಗಿ ಮಾಡಬೇಕು, ದೇಶವನ್ನು ಒಕ್ಕಟ್ಟಾಗಿ ಮಾಡಬೇಕು; ದೇಶವೆಲ್ಲದರ ಭಾವನೆಯಿಂದ ಒಂದು ಯೂನಿವರ್ಸಿಟಿಯನ್ನು ಮಾಡಬೇಕು. ಇನ್ನು ಮುಂದಕ್ಕೆ ನಮ್ಮ ದೇಶದಲ್ಲಿ ಬೇಕಾಗಬಹುದಾದ ಎಲ್ಲ ಸಲಕರಣೆಗಳನ್ನೂ ಒದಗಿಸುವುದಕ್ಕೆ ಈಗಣಿಂದ ಸರ್ವತೋಮುಖವಾದ ಪ್ರಯತ್ನವನ್ನು ಮಾಡ ಬೇಕು.

ಎಲ್ಲರಿಗಾಗಿ ಒಂದು ಶಬ್ದಕೋಶ

ಕನ್ನಡಿಗರೆಲ್ಲ ತಮ್ಮ ಭಾಷೆಯನ್ನು ಚೆನ್ನಾಗಿ ಕಲಿಯುವುದಕ್ಕೆ ಅವಕಾಶ ವಾಗುವಂತೆ ಮೊದಲು ನಾವು ಸರ್ವ ಜನರ ಉಪಯೋಗಕ್ಕಾಗಿ ಕನ್ನಡದ ಒಂದು ಶಬ್ದಕೋಶವನ್ನು ಮಾಡಬೇಕಾಗಿದೆ. ಪೂರ್ವದಲ್ಲಿದ್ದಂತೆ ನಮ್ಮ ಊರುಗಳಲ್ಲಿ ಪದ್ಯಕಾವ್ಯದ ಓದು ಇಲ್ಲದೆ ಇರುವುದರಿಂದ ನಮ್ಮ ಜನತೆಯಲ್ಲಿಯೂ ಸಾಮಾನ್ಯ ವಾದ ಕನ್ನಡ ಕಾವ್ಯದ ಅರ್ಥವನ್ನು ತಿಳಿದುಕೊಳ್ಳಬಲ್ಲವರು ಕಡಿಮೆಯಾಗು ತ್ತಿದ್ದಾರೆ. ಪಾಠಶಾಲೆಗಳಲ್ಲಿ ಕಲಿಯುವ ಕನ್ನಡವು ಬಹಳ ಕಡಿಮೆಯಾದುದರಿಂದ ನಮ್ಮ ವಿದ್ಯಾವಂತರಲ್ಲಿಯೂ ಇದೇ ಸ್ಥಿತಿ ಬಂದಿದೆ. ಕಿಟಲರ ನಿಘಂಟು ಇಂಥವ ರಿಗೆ ಅನುಕೂಲವಾದುದಲ್ಲ. ಅದರಲ್ಲಿ ಒಂದೇ ಮಾತಿನ ಹತ್ತಾರು ಅಪಭ್ರಂಶ ರೂಪಗಳನ್ನು ಹಾಕಿರುವುದರಿಂದ ಪುಸ್ತಕವು ಬಹಳ ದೊಡ್ಡದಾಗಿಹೋಯಿತು; ಅರ್ಥ ಬೇರೆ ಇಂಗ್ಲೀಷಿನಲ್ಲಿದೆ. ಆ ಗ್ರಂಥದಲ್ಲಿ ಕೊಟ್ಟಿರುವುದರಲ್ಲಿ ನಿಜವಾದ ಮಾತೆಷ್ಟೋ ಅಷ್ಟನ್ನು ಮಾತ್ರ ಇಟ್ಟುಕೊಂಡು ಅದರಲ್ಲಿ ಬಿಟ್ಟಿರುವ ವಾಡಿಕೆಯ ಮಾತುಗಳನ್ನು ಸೇರಿಸಿಕೊಂಡು ಒಂದು ಪುಸ್ತಕವನ್ನು ಮಾಡಿದರೆ ಅದು ನಮ್ಮ ಈ ಉದ್ದೇಶಕ್ಕೆ ಸಾಕಾಗುವುದು. ನಮ್ಮಲ್ಲಿ ರೂಢಿಯಲ್ಲಿರುವ ಸಂಸ್ಕೃತದ ಮಾತುಗಳನ್ನೆಲ್ಲ ಇದರಲ್ಲಿ ಕೊಟ್ಟು ಸಂಸ್ಕೃತದಲ್ಲಿ ಆಯಾ ಮಾತಿಗಿರುವ ಅರ್ಥ, ಅವುಗಳ ಮೂಲದ ಧಾತು, ಅದೇ ಧಾತುವಿನಿಂದ ಸಿದ್ಧವಾಗಿರುವ ಇತರ ಪದಗಳು, ಆ ಪದಗಳ ರೂಪಗಳು, ಇವುಗಳನ್ನು ತಿಳಿಸಿದರೆ ಭಾಷಾ ಜ್ಞಾನಾರ್ಥಿ ಗಳಿಗೆ ಬಹಳ ಸಹಾಯವಾಗುವುದು.

ಎಲ್ಲರಿಗಾಗಿ ಹಿಂದಣ ಕಾವ್ಯಗಳು

ಇದೇ ಉದ್ದೇಶದಿಂದ ನಮ್ಮ ಮಹಾಕಾವ್ಯಗಳ ಸ್ವಾರಸ್ಯವಾದ ಮತ್ತು ಮುಖ್ಯವಾದ ಭಾಗಗಳನ್ನು ಬೇರೆಯಾಗಿ ತೆಗೆದು, ಭಾಗದಿಂದ ಭಾಗಕ್ಕೆ ಸಂಬಂಧವನ್ನು ತೋರಿಸುವ ಸಣ್ಣ ಟೀಕೆಗಳನ್ನು ಕೊಟ್ಟು ಸಂಕ್ಷೇಪ ಗ್ರಂಥಗಳನ್ನು ಅಚ್ಚು ಹಾಕಿಸಬೇಕು.

ಇಂಥ ಸಂಕ್ಷೇಪ ಗ್ರಂಥಗಳ ಕೊನೆಯಲ್ಲಿ ಆ ಕಾವ್ಯದಲ್ಲಿ ಬಂದಿರುವ ಬಳಕೆಯಲ್ಲಿಲ್ಲದ ಮಾತುಗಳನ್ನು ಸೇರಿಸಿ ಕಾವ್ಯದಲ್ಲಿ ಅವು ಬಂದಿರುವ ಸ್ಥಳವನ್ನೂ ಅವುಗಳಿಗೆ ಅರ್ಥವನ್ನೂ ನಿರೂಪಿಸಬೇಕು. ನಮ್ಮ ಕಾವ್ಯಗಳನೇಕ ಬಹು ದೊಡ್ಡವು: ಒಂದೊಂದು ಒಂದು ಗ್ರಂಥವಲ್ಲ, ಹತ್ತು ಗ್ರಂಥಗಳಂತಿವೆ; ರಸಪುಷ್ಟವಾದ ಭಾಗಗಳ ಮಧ್ಯೇ ಬೇಸರವಾಗುವಂತೆ ಅರ್ಥವಿಲ್ಲದ ದೀರ್ಘವಾದ ವರ್ಣನೆಗಳು ಸೇರಿರುತ್ತವೆ. ಇದರಿಂದ, ಈ ಅವಸರದ ಕಾಲದಲ್ಲಿ ಆ ಗ್ರಂಥಗಳನ್ನು ಕೈಯಲ್ಲಿ ಹಿಡಿಯುವುದಕ್ಕೇ ಅನೇಕರಿಗೆ ಹೆದರಿಕೆ. ಜೈಮಿನಿ ಭಾರತದಲ್ಲಿಯ ಕುಶಲವ ಚರಿತ್ರ, ಬಭ್ರುವಾಹನನ ಕಾಳಗದ ಭಾಗ, ಚಂದ್ರಹಾಸನ ಚರಿತ್ರ, ಇವುಗಳನ್ನು ಬೇರೆಯಾಗಿ ಅಚ್ಚು ಹಾಕಿಸಿದರೆ ಅವನ್ನು ಸುಲಭದ ಬೆಲೆಗೆ ಅನೇಕರಿಗೆ ದೊರಕಿಸಬಹುದು; ಅವರಿಗೆ ಕಾವ್ಯದಲ್ಲಿ ಅಭಿರುಚಿಯೂ ಹೆಚ್ಚುತ್ತದೆ. ಭಾರತದಲ್ಲಿ ಶಿಶುಪಾಲ ವಧ, ದ್ರೌಪದೀ ಮಾನಭಂಗ, ಉತ್ತರ ಗೋಗ್ರಹಣ, ಕೃಷ್ಣಸಂಧಿ ಮೊದಲಾದ ಭಾಗಗಳನ್ನು ಬೇರೆ ಮಾಡಿ ಒಂದುಕಡೆ ಕೂಡಿಸಿ ಅಚ್ಚು ಹಾಕಿಸಿದರೆ ದಿನದ ಓದಿಗೆ ಯೋಗ್ಯವಾದ ಭಾಗವೆಲ್ಲ ಸುಲಭವಾಗಿ ಎಲ್ಲರಿಗೂ ಸಿಕ್ಕಿದಂತಾಗುವುದು. ಹೀಗೆಯೇ, ಪಂಪ ಭಾರತ, ಪಂಪ ರಾಮಾಯಣ, ಗಿರಿಜಾ ಕಲ್ಯಾಣ, ಹರಿಶ್ಚಂದ್ರ ಕಾವ್ಯ, ರಾಜಶೇಖರ ವಿಲಾಸ ಮುಂತಾದ ಎಲ್ಲಾ ಕಾವ್ಯಗಳಿಂದಲೂ ಸಂಕ್ಷೇಪ ಕಾವ್ಯಗಳನ್ನು ಮಾಡಿ ಸರ್ವ ಜನರ ಉಪಯೋಗಕ್ಕಾಗಿ ಸುಲಭವಾದ ಬೆಲೆಗೆ ದೊರಕಿಸಬೇಕು. ಸಾಮಾನ್ಯರಿಗಾಗಿ ಇಂತಹ ಸಂಕ್ಷೇಪ ಗ್ರಂಥಗಳನ್ನು ಮಾಡುವುದಲ್ಲದೆ ಒಟ್ಟು ಪುಸ್ತಕ ಬೇಕೆನ್ನುವವರಿಗೂ ದೊರಕುವಂತೆ ಇದೇ ಸಂದರ್ಭದಲ್ಲಿ ಸಂಪೂರ್ಣ ಪುಸ್ತಕಗಳನ್ನೂ ಅಚ್ಚುಹಾಕಿಸಬೇಕು. ನಮ್ಮಲ್ಲಿ ಬಳಕೆಯಲ್ಲಿರುವ ದೇವರ ನಾಮಗಳು, ಈಚೆಗೆ ಚೆನ್ನಾಗಿ ಅಚ್ಚಾಗಿರುವ ಶರಣರ ವಚನಗಳು, ಇವೆಲ್ಲ ಈ ಕಾವ್ಯಮಾಲೆಗಳಲ್ಲಿ ಎಲ್ಲರಿಗೂ ಸಿಕ್ಕುವ ಬೆಲೆಗೆ ಹೊರಕ್ಕೆ ಬರಬೇಕು.

**ಸಂಸ್ಕೃತ ಗ್ರಂಥಗಳು**

ಭಾರತವರ್ಷದ ಸಂಸ್ಕೃತಿಗೆ ಸಂಸ್ಕೃತವು ತಾಯಿಬೇರು. ಇತರ ಭಾಷೆಗಳಿಗೆ ಹೇಗೋ ಹಾಗೆಯೇ ಕನ್ನಡದ ಬೆಳೆವಣಿಗೆಗೆ ಸಂಸ್ಕೃತವು ಕೇವಲ ಆವಶ್ಯಕ. ಆದುದರಿಂದ ನಮ್ಮ ಜನಕ್ಕೆ ವಿಶೇಷ ಕ್ಲೇಶವಿಲ್ಲದೆ ಎಷ್ಟು ವಿಧಗಳಲ್ಲಿ ಸಾಧ್ಯವೋ ಅಷ್ಟು ವಿಧದಲ್ಲಿ ಸಂಸ್ಕೃತ ಶ್ಲೋಕಗಳ ಪರಿಚಯವನ್ನು ಮಾಡಿಸಬೇಕು. ನಮ್ಮ ಹುಡುಗರಿಗೆ ಹಿಂದಿನಂತೆ ಚಿಕ್ಕಂದಿನಲ್ಲೇ ಒಂದು ನೂರು ಒಳ್ಳೆಯ ಶ್ಲೋಕಗಳಾದರೂ ಬಾಯಿಗೆ ಬರುವಂತೆ ಮಾಡಿದರೆ ಅವರ ಉಚ್ಚಾರಣೆಯೂ ಅವರ ಭಾಷಾ ಮಾಧುರ್ಯ ಜ್ಞಾನವೂ ಒಳ್ಳೆಯ ಸಂಸ್ಕಾರವನ್ನು ಪಡೆಯುವುವು; ಮುಂದಕ್ಕೆ ಅವರು ಆ ಶ್ಲೋಕಗಳಿಗೆ ಅರ್ಥವನ್ನೂ ತಿಳಿದುಕೊಳ್ಳಬಹುದು. ಆಗ್ಗೆ ಅವರಿಗೆ ಕಷ್ಟವಿಲ್ಲದೆ ಉತ್ತಮವಾದ ಕಾವ್ಯದ ಸಹವಾಸವು ಸದಾ ದೊರಕಿದಂತಾಗುವುದು. ವಯಸ್ಸಾದವರಿಗಾಗಿ ಸಂಸ್ಕೃತದಲ್ಲಿರುವ ಉತ್ತಮ ಶ್ಲೋಕ ಮಂಜರಿಗಳಿಂದ ಅತ್ಯುತ್ತಮವಾದ ಶ್ಲೋಕಗಳನ್ನು ಆಯ್ದು ಅಚ್ಚುಹಾಕಿಸಿ ಕೊನೆಯಲ್ಲಿ ಟಿಪ್ಪಣಿಗಳನ್ನು

ಕೊಟ್ಟು ಶ್ಲೋಕಗಳನ್ನು ತಿಳಿದುಕೊಳ್ಳುವುದಕ್ಕೆ ಸಹಾಯವನ್ನು ಒದಗಿಸಬೇಕು. ಇಂಥ ಪುಸ್ತಕಗಳನ್ನು ಎಲ್ಲರೂ ಆನಂದದಿಂದ ಓದಬಹುದು. ಇದೇ ಸಂದರ್ಭ ದಲ್ಲಿ ಸಂಸ್ಕೃತದಿಂದ ನಮಗೆ ಆವಶ್ಯಕವಾಗುವ ಪುಸ್ತಕಗಳ ಪಟ್ಟಿಯೊಂದನ್ನು ಮಾಡಿಕೊಂಡು ಅವನ್ನು ಸಾಧ್ಯವಾದರೆ ಪದಶಃ, ಇಲ್ಲದಿದ್ದರೆ ಒಟ್ಟು ತಾತ್ಪರ್ಯ ವಾದರೂ ತಿಳಿಯುವಂತೆ ಅರ್ಥದೊಂದಿಗೆ ಅಚ್ಚು ಹಾಕಿಸಬೇಕು. ಉಪನಿಷತ್ತು ಗಳು, ಭಾಗವತ, ಭಾರತ, ರಾಮಾಯಣ, ಇತರ ಪ್ರಮುಖ ಮತ ಗ್ರಂಥಗಳು, ರಘುವಂಶ ಮೊದಲಾಗಿ ಕಾಳಿದಾಸನ ಎಲ್ಲ ಕಾವ್ಯಗಳು, ಕಿರಾತಾರ್ಜುನೀಯ ಮೊದಲಾದ ಇತರ ಗ್ರಂಥಗಳ ಸ್ವಾರಸ್ಯವಾದ ಭಾಗಗಳು, ಜಯದೇವನ ಗೀತಗೋವಿಂದ, ಇವೆಲ್ಲ ಈ ಪಟ್ಟಿಯಲ್ಲಿ ಇರಬೇಕು. ಇದರ ಜೊತೆಗೆ ಸಂಸ್ಕೃತ ದಲ್ಲಿಯ ಕಾವ್ಯ ವಿಮಾಂಸಾ ಗ್ರಂಥಗಳಲ್ಲಿ ಮುಖ್ಯವಾದುವನ್ನಾದರೂ, ಮಾತು ಸೇರಿಸದೆ, ಮಾತು ಬಿಡದೆ, ಕನ್ನಡಕ್ಕೆ ಭಾಷಾಂತರ ಮಾಡಿ ನಮ್ಮ ಪೂರ್ವಿಕರ ಭಾವನೆಗಳು ಜನರಿಗೆಲ್ಲ ವ್ಯಕ್ತವಾಗುವಂತೆ ಮಾಡಬೇಕು.

**ನೆರೆಯ ಭಾಷೆಗಳ ಗ್ರಂಥಗಳು**

ಹೀಗೆಯೇ ನೆರೆಯ ಭಾಷೆಗಳಿಂದ ಒಳ್ಳೆಯ ಗ್ರಂಥ ಭಾಗಗಳನ್ನು ಆಯ್ದು ಕೊಂಡು ಓದಿದವರಿಗೆ ಆಯಾ ಭಾಷೆಯ ಪರಿಚಯಕ್ಕೆ ಅವಕಾಶ ವಾಗುವಂತೆ ಕೆಲವು ಪುಸ್ತಕಗಳನ್ನು ಪ್ರಕಟಿಸಬೇಕು. ತೆಲುಗಿ ನಲ್ಲಿ ಭಾಗವತ ಬಹಳ ಚೆನ್ನಾಗಿದೆಯೆಂದು ಹೇಳುತ್ತಾರೆ. ಶ್ರೀನಾಥನು ಕನ್ನಡದ ವಿಷಯವಾಗಿ ಏನೇನೋ ಬರೆದಿದ್ದಾ ನಂತೆ. ಇದೆಲ್ಲ ನಮ್ಮವರಿಗೆ ಸ್ವಲ್ಪವಾದರೂ ತಿಳಿಯಬೇಕು. ಈಗಣ ಸ್ಥಿತಿಯಲ್ಲಿ ನಮಗೆ ಕೀಟ್ಸ್, ಷೆಲ್ಲಿ ಎಂದರೆ ತಿಳಿಯುತ್ತದೆ, ಬೊಮ್ಮಣ್ಣಕವಿ ಯಾರು ಎಂದು ತಿಳಿಯದು. ಇದರಿಂದ ನಮಗೆ ಬಹಳ ನಷ್ಟವಾಗಿದೆ. ನನಗೆ ತಮಿಳಿನ ಗ್ರಂಥಗಳ ಪರಿಚಯವಿಲ್ಲ. ಅವುಗಳಲ್ಲಿರುವ ವಿಶಿಷ್ಟಾದ್ವೈತ ಮತದ ಆಳ್ವಾರುಗಳ ಗೀತಗಳಲ್ಲಿ ಕೆಲವನ್ನು ಮಾತ್ರ ನೋಡಿದ್ದೇನೆ. ಅವುಗಳಲ್ಲಿ ಕಾಣುವ ಊಹಾ ಶಕ್ತಿಯೂ ಕಾವ್ಯ ಚಾತುರ್ಯವೂ ಆಶ್ಚರ್ಯವನ್ನುಂಟುಮಾಡುವಂತಿವೆ. ನಮ್ಮ ಜನರು ಇಷ್ಟ ಪಡುವುದಾದರೆ ಈ ಭಾಷೆಗಳ ಕೆಲವು ಭಾಗವಾದರೂ ನಮ್ಮ ಲಿಪಿಯಲ್ಲಿಯೇ, ನಮ್ಮ ಭಾಷೆಯ ಸಹಾಯದಿಂದಲೇ ಅವರಿಗೆ ಪರಿಚಯಕ್ಕೆ ಬರುವುದಕ್ಕೆ ನಾವು ಸಾಧನವನ್ನು ಕಲ್ಪಿಸಬೇಕು. ಸಂಸ್ಕೃತದಿಂದ ಹೇಗೋ ಹಾಗೆ ತಮಿಳಿನಿಂದಲೂ ತೆಲುಗಿನಿಂದಲೂ ನಮ್ಮ ಭಾಷೆಯ ಬೆಳವಣಿಗೆಗೆ ನಾವು ಸಹಾಯವನ್ನು ಪಡೆಯ ಬಹುದು. ಇದೇ ಸಂದರ್ಭದಲ್ಲಿ ಈ ಆಳ್ವಾರ ಕೃತಿಗಳಂತೆ ಮರಾಠಿ, ತೆಲುಗು, ತಮಿಳು ಮೊದಲಾದ ಭಾಷೆಗಳಲ್ಲಿರುವ ಪಾರಾಯಣ ಗ್ರಂಥಗಳನ್ನೂ ಕನ್ನಡದಲ್ಲಿ ಒದಗಿಸಿಕೊಟ್ಟರೆ ಭಾಷಾ ಸೇವೆಯೊಂದಿಗೆ ಮತ ಸೇವೆಯನ್ನೂ ಮಾಡಿದಹಾಗಾಗು ವುದು; ಸಾಮಾನ್ಯ ಜನರೂ ಬೇರೆ ಭಾಷೆಯನ್ನು ಕಲಿಯದೆ ತಮ್ಮ ಮತದ ವಿಷಯವನ್ನು ತಿಳಿಯುವುದಕ್ಕೆ ಸಹಾಯವಾಗುವುದು.

ಇದರ ಜೊತೆಗೆ ಮುಂದುವರಿದಿರುವ ಇತರ ದೇಶೀಯ ಭಾಷೆಗಳಿಂದ ಅತ್ಯುತ್ತಮ ಗ್ರಂಥಗಳನ್ನು ನಮ್ಮ ಭಾಷೆಗೆ ಸಂಪೂರ್ಣವಾಗಿ ಭಾಷಾಂತರಮಾಡ

ಬೇಕು. ಬಿಂಡಿಗನವಲೆ ವೆಂಕಟಾಚಾರ್ಯರು ಬಂಕಿಂಚಂದ್ರರ ನಾವೆಲುಗಳನ್ನು ಕನ್ನಡಕ್ಕೆ ತಂದುದರಿಂದ ಕನ್ನಡ ಎಷ್ಟು ಬೆಳೆಯಿತೆಂಬುದನ್ನು ನಮ್ಮ ತಲೆಮಾರಿನ ಜನ ಬಲ್ಲುದು. ಇದೇ ಕೆಲಸವನ್ನು ನಾವು ಇನ್ನೂ ಮುಂದುವರಿಸಬೇಕಾಗಿದೆ. ಈ ಗ್ರಂಥಗಳನ್ನು ನಾವು ತಂದುಕೊಳ್ಳುವುದು, ನಮ್ಮಲ್ಲಿ ಬೆಳೆ ಇಲ್ಲದಾಗ ನಮ್ಮ ಸೀಮೆಯು ಬೇರೆ ಪ್ರಾಂತದಿಂದ ಅಕ್ಕಿಯನ್ನು ತರಿಸಿಕೊಂಡಂತೆ.

ಇತರ ದೇಶೀಯ ಭಾಷೆಗಳ ಗ್ರಂಥಗಳು

ನಮಗೆ ಇಂಥ ಗ್ರಂಥಗಳು ಪರದೇಶದ ಗ್ರಂಥಗಳಿಗಿಂತ ಅನುಕೂಲವಾದುವು, ನಮಗೆ ಒಗ್ಗಿರುವ ರೀತಿಯವು. ರವೀಂದ್ರನಾಥ ಠಾಕೂರರ ಇಂಗ್ಲೀಷು ಗ್ರಂಥಗಳನ್ನೂ ಅವುಗಳ ಬಂಗಾಳೀ ಮೂಲಗಳನ್ನೂ ಓದಿರುವವರು ಅವರ ಬಂಗಾಳಿಯ ಮೂಲಗಳು ಇಂಗ್ಲಿಷ್ ಭಾಷಾಂತರಗಳಿಗಿಂತ ಬಹಳ ಚೆನ್ನಾಗಿವೆಯೆಂದು ಹೇಳುತ್ತಾರೆ. ಬಂಗಾಳಿಯನ್ನು ಬಲ್ಲವರು ಆ ಭಾಷೆಯಿಂದ ನೇರವಾಗಿ ಕನ್ನಡಕ್ಕೆ ಭಾಷಾಂತರಮಾಡಿದರೆ ಈ ಕವಿವರರ ಗ್ರಂಥಗಳು ಈಗ ನಮಗೆ ಇಂಗ್ಲೀಷಿನ ಮೂಲಕ ಸಿಕ್ಕುತ್ತಿರುವುದಕ್ಕಿಂತ ಹೆಚ್ಚು ರಸಯುಕ್ತವಾಗಿ ಸಿಕ್ಕಬಹುದು. ಹೀಗೆಯೇ ತುಲಸೀದಾಸ್, ಮೀರಾಬಾಯಿ, ಕಬೀರದಾಸ್, ತುಕಾರಾಮ್ ಮುಂತಾದವರ ಉತ್ತಮ ಕೃತಿಗಳನ್ನು ಮೂಲ ರೂಪದಲ್ಲಿಯೇ ಅಚ್ಚುಹಾಕಿಸಿ, ಜೊತೆಗೆ ಕನ್ನಡದಲ್ಲಿ ಅರ್ಥವನ್ನು ಕೊಟ್ಟರೆ ದೇಶದಲ್ಲೆಲ್ಲ ಒಂದೇ ಸಂಸ್ಕೃತಿ ಬೆಳೆಯುವುದಕ್ಕೂ ಆಯಾ ಮಹನೀಯರ ಶೀತಲಚ್ಛಾಯೆಯಿಂದ ನಮ್ಮ ಬಾಳಿಗೆ ಸ್ವಲ್ಪ ತಂಪು ಬರುವುದಕ್ಕೂ ಅನುಕೂಲವಾಗುವುದು.

ಇನ್ನು, ಇಂಗ್ಲೀಷಿನ ಸಹಾಯದಿಂದ ಮಾಡಬೇಕಾದ ಕೆಲಸವು ಹೇರಳವಾಗಿದೆ. ಇಂಗ್ಲಿಷ್ ಸಾಹಿತ್ಯದಲ್ಲಿ ಹಿರಿಯರಾದವರ ಅತ್ಯುತ್ತಮ ಗ್ರಂಥಗಳಲ್ಲಿ ಭಾಷಾಂತರಕ್ಕೆ ಸಿಲುಕುವುವು ಅನೇಕವಿವೆ. ಇವುಗಳನ್ನೆಲ್ಲ ಕನ್ನಡಕ್ಕೆ ಭಾಷಾಂತರಮಾಡುವುದು ಆವಶ್ಯಕ. ಷೇಕ್ಸ್‌ಪಿಯರ್ ನಾಟಕಗಳಲ್ಲಿ ಕಿಂಗ್‌ಲಿಯರ್, ಹ್ಯಾಮ್‌ಲೆಟ್, ಒಥೆಲೊ, ಮ್ಯಾಕ್‌ಬೆತ್, ಈ ನಾಲ್ಕನ್ನಾದರೂ ಹದವಾಗಿ ಭಾಷಾಂತರಮಾಡಿಕೊಳ್ಳಬೇಕು. ಇಂಗ್ಲೀಷಿನ ವಿಮರ್ಶನ ಲೇಖನಗಳಲ್ಲಿ, ಇತರ ಉಪನ್ಯಾಸಗಳಲ್ಲಿ, ಕಥೆಗಳಲ್ಲಿ, ಕಾವ್ಯಗಳಲ್ಲಿ ಉತ್ತಮವಾದುವನ್ನು ತೆಗೆದುಕೊಂಡು ಅವುಗಳ ಅರ್ಥ ಕನ್ನಡದಲ್ಲಿ ಬರುವಂತೆ ಬರೆಯಬೇಕು. ಹೀಗೆ ಮಾಡುವುದರಲ್ಲಿ ಹೇಮಚಂದ್ರ, ಪ್ರಭಾವತಿ ಎಂದು ನಮ್ಮ ಸೀಮೆಯ ಹೆಸರುಗಳನ್ನು ಹಾಕುವುದಕ್ಕೆ ಬದಲಾಗಿ ಅಲ್ಲಿರುವ ಹೆಸರುಗಳನ್ನೇ ಉಪಯೋಗಿಸಿ ಅಲ್ಲಿರುವಂತೆ ಬರೆದರೆ ಬಹಳ ಚೆನ್ನಾಗಿರುತ್ತದೆಯೆಂದು ಕಾಣುತ್ತದೆ. ಇಂಗ್ಲಿಷ್ ಸಾಹಿತ್ಯದ ಗ್ರಂಥಗಳನ್ನೇ ಅಲ್ಲದೆ ಈ ಭಾಷೆಯ ಸಹಾಯದಿಂದ ನಾವು ಪ್ರಪಂಚದ ಇತರ ಸಾಹಿತ್ಯಗಳ ಉತ್ತಮ ಗ್ರಂಥಗಳನ್ನು ಕನ್ನಡಕ್ಕೆ ತಂದುಕೊಳ್ಳಬೇಕು. ಮೊಲಿಯೇರ್ ಕವಿಯ ಹಾಸ್ಯದ ನಾಟಕಗಳು, ಗ್ರೀಕರ ರುದ್ರನಾಟಕಗಳು, ಸಾಕ್ರೆಟೀಸನ ಸಂವಾದಗಳು, ಎಪಿಕ್ಟೀಟಸ್, ಮಾರ್ಕಸ್ ಆರೀಲಿಯಸ್, ಸೇಂಟ್

ಇಂಗ್ಲೀಷಿನ ಸಹಾಯದಿಂದ ಮಾಡಬೇಕಾದ ಕೆಲಸ

ಫ್ರಾನ್ಸಿಸ್, ಸೆಂಟ್ ಅಗಸ್ಟೀನ್, ಥಾಮಸ್ ಎಕೆಂಪಿಸ್, ಪ್ಲೂಟಾರ್ಕ್, ಗಯಟೆ, ಇಬ್ಸನ್, ಟಾಲ್ಸ್ಟಯ್ ಮುಂತಾದವರ ಗ್ರಂಥಗಳು, ಇವನ್ನೆಲ್ಲ ಈ ರೀತಿ ನಾವು ಕನ್ನಡಕ್ಕೆ ತಂದು ವಿಶಾಲವಾದ ಪ್ರಪಂಚದ ಎಲ್ಲ ಭಾಗದ ಪರಿಚಯುವನ್ನು ನಮ್ಮವರಿಗೆ ಮಾಡಿಕೊಡಬೇಕು.

ಇತರ ವಿಷಯುಗಳು

ಇದೆಲ್ಲ ಸಾಹಿತ್ಯ, ಮತ, ತತ್ತ್ವ, ಇವುಗಳ ಮಾತಾಯಿತು. ಇಷ್ಟಲ್ಲದೆ ವಿಜ್ಞಾನಶಾಸ್ತ್ರದಲ್ಲಿ ಇದುವರೆಗೆ ತಿಳಿದಿರುವ ವಿಷಯುವನ್ನು ಸಂಕ್ಷೇಪವಾಗಿ ಹೇಳಬೇಕಾದ ಕೆಲಸ ಬೇರೆ ಇದೆ. ನಮ್ಮ ದೇಶದ ಇತಿಹಾಸಕ್ಕೆ ಸಂಬಂಧಪಟ್ಟ ಫಾಹಿಯಾನ್, ಮನೂಚಿ, ಬರ್ನಿಯರ್ ಮುಂತಾದವರ ಗ್ರಂಥಗಳನ್ನು ಕನ್ನಡಕ್ಕೆ ತರಬೇಕಾದುದು ಬೇರೆ. ನಮ್ಮ ದೇಶದ ಮಹನೀಯರ ಚರಿತೆಗಳು, ನಮ್ಮವರು ಇತರ ದೇಶಗಳಲ್ಲಿ ನೆಲಸಿ ಮಾಡಿದ ಕೆಲಸದ ಚರಿತೆಗಳು, ಭಾರತವರ್ಷದ ಪವಿತ್ರವಾದ ಇತಿಹಾಸದ ಆಖ್ಯಾನಗಳು, ಇವುಗಳ ಪರಿಚಯುವನ್ನೆಲ್ಲ ನಮ್ಮ ಜನರಿಗೆ ನಮ್ಮ ಭಾಷೆಯಲ್ಲಿಯೇ ಮಾಡಿಕೊಡಬೇಕಾಗಿದೆ. ಬರೆಯುುವವರ ಅನುಕೂಲ್ಯಕ್ಕಾಗಿ ಕನ್ನಡದ ಲಿಪಿಯನ್ನು ಟೈಪ್‌ರೈಟರಿಗೆ ಸರಿಪಡಿಸಿ ಕನ್ನಡಕ್ಕೊಂದು ಟೈಪ್‌ರೈಟರನ್ನು ಮಾಡಬೇಕು. ಕನ್ನಡಕ್ಕೊಂದು ಷಾರ್ಟ್‌ಹ್ಯಾಂಡ್ ಏರ್ಪಡಿಸಬೇಕು; ಒಂದು ವಿಶ್ವಕೋಶವನ್ನು ಮಾಡಿಸಬೇಕು. ಗ್ರಂಥಕರ್ತರಲ್ಲಿ ಕೇಳುವವರಿಲ್ಲದೆ ನಿಂತಿರುವ ಪುಸ್ತಕಗಳನ್ನು ಅಚ್ಚುಹಾಕುವ ಸಂಸ್ಥೆಗಳನ್ನೂ ಪ್ರಕಾಶಪಡಿಸುವ ಸಂಸ್ಥೆಗಳನ್ನೂ ಏರ್ಪಡಿಸಬೇಕು.

ದೂರದೃಷ್ಟಿ ಆವಶ್ಯಕ

ಮಹನೀಯರೇ, ಇದೆಲ್ಲ ಆಗಹೋಗದ ಮಾತು ಎನ್ನುವಿರಾ? ನಮ್ಮಜೀವನದಷ್ಟು ಮಾತ್ರಕ್ಕೆ ನೋಡಿದರೆ ಇದು ಆಗಹೋಗದ ಮಾತು ಎಂದೇ ತೋರಬಹುದು. ನನಗಾಗಲಿ ಇದು ಶೀಘ್ರದಲ್ಲಿ ಮುಗಿಯುುವ ಕಾರ್ಯವೆಂದು ತೋರುತ್ತಿಲ್ಲ. ಆದರೆ ಇದು ಆಗುತ್ತದೋ ಇಲ್ಲವೋ ಎಂಬ ಸಂದೇಹವನ್ನು ಬಿಡಿರಿ; ಆಗುತ್ತದೆ. ಆದರೆ ಆಯಿತೆನ್ನುವುದಕ್ಕೆ ನಾವು ಇರುವೆವೋ ಇಲ್ಲವೋ ಎನ್ನುವುದು ನಿಜ. ಆದರೂ ನಾವು ಈ ಕೆಲಸವನ್ನು ಕೈಕೊಳ್ಳಬೇಕು. ನಾವು ತಿನ್ನುತ್ತಿರುವ ತೆಂಗಿನಕಾಯಿ ನಾವು ಹಾಕಿದ ಮರದಿಂದ ಬಂದುದಲ್ಲ. ನಾವು ಹಾಕಿದುದೆಂದು ಕೆಲವು ಮರ ಇರಲಿ; ಅವುಗಳ ಫಲ ಮುಂದಕ್ಕೆ ಬರಲಿ. ಈ ದೃಷ್ಟಿಯಿಂದ ಕೆಲಸಮಾಡುವೆವಾದರೆ ನಮಗೆ ಕೆಲಸದ ಮಹತ್ತ್ವದಿಂದ ಭೀತಿ ತೋರುವುದಿಲ್ಲ, ಕೆಲಸವಾಗುವುದಿಲ್ಲವೆಂದು ನಿರಾಶೆಯಾಗುವುದಿಲ್ಲ. ನಾವು ಪುಣ್ಯವಂತರೇ ನಿಜವಾದರೆ ಅನುಕೂಲವಾದ ಈ ಸಮಯದಲ್ಲಿ ದೊಡ್ಡ ಭಾವನೆಯಿಂದ ದೊಡ್ಡ ಕೆಲಸಕ್ಕೆ ಆರಂಭ ಮಾಡೋಣ. ಕೆಲಸ ಎಂದಿದ್ದರೂ ಆರಂಭವಾಗುತ್ತದೆ, ಮುಗಿಯುತ್ತದೆ. ಆದರೆ ಆರಂಭಮಾಡುವ ಪುಣ್ಯ ನಮ್ಮದೇ ಅಲ್ಲವೆ ಎಂಬುದು ನಮ್ಮ ಮುಂದಿರುವ ಸಮಸ್ಯೆ.

**ಕರ್ಣಾಟಕದ ಏಕೀಕರಣ**

ನಮ್ಮ ಸೀಮೆಯ ವಿದ್ಯಾಭ್ಯಾಸದ ಕ್ರಮದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನವನ್ನು ಕಲ್ಪಿಸಬೇಕೆಂದೂ, ನಮ್ಮ ಜನಕ್ಕೆ ಇತರ ಭಾಷೆಗಳಿಂದ ಒಳ್ಳೆಯ ಪುಸ್ತಕಗಳನ್ನು ಭಾಷಾಂತರಮಾಡಿ ಓದುವ ಸಲಕರಣೆಗಳನ್ನು ಒದಗಿಸಬೇಕೆಂದೂ ಹೇಳಿದ್ದಾಯಿತು. ಇನ್ನು ನಮ್ಮ ಪ್ರಕೃತ ಸ್ಥಿತಿಯಲ್ಲಿ ಬಹು ಮುಖ್ಯವಾದ ಏರ್ಪಾಡೆಂದರೆ ಕರ್ಣಾಟಕದ ಏಕೀಕರಣ. ಕರ್ಣಾಟಕವೆಲ್ಲ ಒಂದಾಗಬೇಕೆಂದು ನಾನು ಹೇಳಿದರೆ ಮೈಸೂರಿನ ಸರಕಾರದ ಅಧಿಕಾರಿಯೊಬ್ಬನು ನಿಜಾಂ ಕರ್ಣಾಟಕವನ್ನು ಮೈಸೂರಿಗೆ ಸೇರಿಸಬೇಕೆಂದು ಹೇಳಿದನೆಂದು ಅಪಾರ್ಥಮಾಡುವ ಮಹನೀಯರು ಇರಬಹುದು. ಕರ್ಣಾಟಕದ ಏಕೀಕರಣವೆಂದರೆ ಮೈಸೂರು ಕರ್ಣಾಟಕ, ನಿಜಾಂ ಕರ್ಣಾಟಕ, ಬ್ರಿಟಿಷ್ ಕರ್ಣಾಟಕ, ಎಲ್ಲವನ್ನೂ ಸೇರಿಸುವುದು ಎಂದು ಅರ್ಥವನ್ನು ಕಲ್ಪಿಸಿದವರು ನಾನು ಹೇಳಿದ ಅಪಾರ್ಥವನ್ನು ಮಾಡುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ನಮ್ಮ ಜನರು ಏಕೀಕರಣವೆನ್ನುವುದರಲ್ಲಿ ಬ್ರಿಟಿಷ್ ಕರ್ಣಾಟಕವನ್ನೆಲ್ಲ ಒಂದಾಗಿ ಮಾಡುವುದೆಂಬ ಅರ್ಥವನ್ನು ಮಾತ್ರ ಇಟ್ಟುಕೊಂಡಿರುತ್ತಾರೆ. ನನ್ನ ಅರ್ಥವೂ ಇಷ್ಟೇ. ನಿನ್ನೆಯ ದಿನ ಇಲ್ಲಿ ನಡೆದ ಏಕೀಕರಣದ ಸಮ್ಮೇಳನದಲ್ಲಿ ತಾವು ಈ ವಿಷಯವನ್ನು ಚರ್ಚೆಮಾಡಿ ಯುಕ್ತವಾದ ಸಿದ್ಧಾಂತಗಳನ್ನು ಅಂಗೀಕರಿಸಿರುವಿರಿ. ಈ ಕಾರಣದಿಂದಲೂ ರಾಷ್ಟ್ರೀಯ ಏಕೀಕರಣದ ವಿಷಯವನ್ನು ನಮ್ಮ ಪ್ರಮುಖ ರಾಜಕೀಯ ಮಹನೀಯರು ಸಭೆಗಳ ಮುಂದೆ ಚರ್ಚೆಗೆ ತರುತ್ತಿರುವುದರಿಂದಲೂ ನಾನು ಈ ವಿಷಯದಲ್ಲಿ ಏನನ್ನೂ ಹೆಚ್ಚಾಗಿ ಹೇಳುವುದಿಲ್ಲ. ರಾಷ್ಟ್ರೀಯವಾಗಿ ಕರ್ಣಾಟಕವೆಲ್ಲ ಒಂದಾಗದೆಯಿದ್ದರೂ ಈಗಲೂ ತಕ್ಕ ಮಟ್ಟಿಗೆ ಒಂದು ಮನಸ್ಸಿನಿಂದ ನಡೆಯುತ್ತಿದೆ. ಇದೇ ರೀತಿಯಲ್ಲಿ ನಾವು ಮುಂದಕ್ಕೆ ನಡೆಯುತ್ತ ರಾಷ್ಟ್ರೀಯವಾಗಿ ಒಂದಾಗುವ ಮೊದಲು ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ವಿದ್ಯಾಭ್ಯಾಸ ಕ್ರಮದಲ್ಲಿಯೂ ಇತರ ವಿಷಯಗಳಲ್ಲಿಯೂ ಹತ್ತಿರ ಹತ್ತಿರ ಬರಬೇಕು. ನಮ್ಮ ಬೇರೆ ಬೇರೆಯ ಪ್ರಾಂತಗಳ ಕನ್ನಡದ ರೀತಿ ಸ್ವಲ್ಪ ಮಟ್ಟಿಗೆ ಬೇರೆಯಾಗಿದೆ. ಈಚೆಗೆ ಈ ವ್ಯತ್ಯಾಸ ಕಡಿಮೆಯಾಗುತ್ತಿರುವುದು ನಿಜ. ತಾನಾಗಿ ಹೀಗೆ ಆಗುತ್ತಿರುವ ಮಾರ್ಪಾಡನ್ನು ನಾವು ಪ್ರಯತ್ನಪಟ್ಟು ಇನ್ನೂ ಸ್ವಲ್ಪ ಜಾಗ್ರತೆಯಾಗಿ ಆಗಮಾಡಬಹುದು. ಕೆಳಗಣ ಪಾಠಶಾಲೆಗಳಲ್ಲಿ ಇಟ್ಟಿರುವ ಪಾಠ ಪುಸ್ತಕಗಳನ್ನು ಎಲ್ಲಾ ಪ್ರಾಂತಗಳಿಗೂ ಅನುಕೂಲಿಸುವಂತೆ ಒಂದು ರೀತಿಗೆ ತಿದ್ದಬೇಕು. ಎಲ್ಲ ಪ್ರಾಂತಗಳ ಟೆಕ್ಸ್ಟಬುಕ್ ಕಮಿಟಿಗಳವರೂ ಸೇರಿದರೆ ಹೀಗೆಮಾಡುವುದು ಕಷ್ಟವಲ್ಲ. ಇದಾದಮೇಲೆ ಸಾಧ್ಯವಾದಷ್ಟು ಮಟ್ಟಿಗೆ ಹೀಗೆ ತಿದ್ದಿದ ಪುಸ್ತಕಗಳನ್ನೇ ಪಾಠಶಾಲೆಗಳಲ್ಲಿ ಪಾಠಕ್ಕೆ ನಿಯಮಿಸಬೇಕು. ಹೀಗೆ ಕೀಳ್ತರಗತಿಯ ಪಾಠಶಾಲೆಗಳಲ್ಲಿ ಉಪಯೋಗಿಸುವ ಪುಸ್ತಕಗಳನ್ನು ಸಕಲ ಪ್ರಾಂತಗಳಿಗೂ ಸಾಮಾನ್ಯವಾಗಿ ಮಾಡುವುದಲ್ಲದೆ ಮೇಲ್ತರಗತಿಯ ಪಾಠಶಾಲೆಗಳಲ್ಲಿ ಇಲ್ಲಿಯ ಪುಸ್ತಕಗಳನ್ನು ಅಲ್ಲಿಯೂ ಅಲ್ಲಿಯ ಪುಸ್ತಕಗಳನ್ನು ಇಲ್ಲಿಯೂ ಇರಿಸಬೇಕು. ಸಾಧ್ಯವಾದಷ್ಟು ಮಟ್ಟಿಗೆ

ಇಲ್ಲಿಯ ಗ್ರಂಥಗಳು ಅಲ್ಲಿಯೂ, ಅಲ್ಲಿಯವು ಇಲ್ಲಿಯೂ ಉಪಯೋಗಕ್ಕೆ ಬರುವಂತೆ ಮಾಡಬೇಕು.

**ನಮ್ಮ ಟೆಕ್ಸ್ಟ್‌ಬುಕ್ ಕಮಿಟಿಗಳು**

ಈ ಸಂದರ್ಭದಲ್ಲಿ ನಮ್ಮ ಬೇರೆ ಬೇರೆ ಪ್ರಾಂತಗಳ ಟೆಕ್ಸ್ಟ್‌ಬುಕ್ ಕಮಿಟಿಗಳವರು ಮಾಡಬೇಕಾದ ಕೆಲಸ ಬಹಳ ಹಿರಿದಾಗಿದೆ. ನಾನು ಸ್ವಲ್ಪ ಕಾಲ ಇಂಥ ಕಮಿಟಿಗಳ ಕೆಲಸವನ್ನು ನೋಡಿದ್ದೇನೆ. ಇವುಗಳಲ್ಲಿ ಯಾವ ಒಬ್ಬ ಮೆಂಬರೂ ಕಂಡಂತೆ ಕರ್ತವ್ಯ ವಿಮುಖನಾಗದಿದ್ದರೂ ಒಟ್ಟಿನಲ್ಲಿ ಕಮಿಟಿಯು ತಪ್ಪುಮಾಡುವ ಸಂಭವಗಳು ಬಹಳ ಹೆಚ್ಚು. ಈ ಕಮಿಟಿಗಳು ನಿಜವಾಗಿ ಇರುವುದು ವಿದ್ಯಾರ್ಥಿಗಳ ಶ್ರೇಯಸ್ಸಿಗಾಗಿ. ಇವು ಕೆಲಸಮಾಡುವುದು ಪುಸ್ತಕ ಬರೆಯುವವರ ಲಾಭಕ್ಕಾಗಿ ಎಂಬಂತೆ. ಮರಳಿ ಮರಳಿ ಈ ಕಮಿಟಿಗಳಲ್ಲಿ ಮೆಂಬರುಗಳು, "ಅಯ್ಯೋ ಪಾಪ! ಇವರು ಬಹಳ ಕಷ್ಟಪಟ್ಟು ಕೆಲಸಮಾಡಿದ್ದಾರೆ; ಸ್ವಲ್ಪ ಉತ್ತೇಜನಕೊಡಬೇಕು", "ಈ ಗ್ರಂಥಕರ್ತರ ಹತ್ತಿರ ಬೇರೆ ಪುಸ್ತಕಗಳಿವೆ, ಅವುಗಳನ್ನು ಅಚ್ಚು ಹಾಕಿಸುವುದಕ್ಕೆ ಸ್ವಲ್ಪ ಹಣ ಬರಲಿ, ಇವರ ಪುಸ್ತಕವನ್ನಿಡೋಣ" ಎಂದು ಹೇಳುತ್ತಾರೆ. "ಈ ಪುಸ್ತಕದ ಕತೆ ಚೆನ್ನಾಗಿದೆ, ಇದರ ಶೈಲಿ ಚೆನ್ನಾಗಿದೆ, ಇದು ಹುಡುಗರಿಗೆ ಓದುವುದಕ್ಕೆ ಚೆನ್ನಾಗಿದೆ, ಇದರಿಂದ ವಿದ್ಯಾರ್ಥಿಗಳು ಹೆಚ್ಚು ವಿಷಯವನ್ನು ಕಲಿಯಬಹುದು" ಎಂದು ಹೇಳುವುದು ಆಮೇಲೆ, ಅಥವಾ ಇಲ್ಲವೇ ಇಲ್ಲ. ಇದು ಶೋಚನೀಯವಾದ ಸ್ಥಿತಿ. ನಮ್ಮ ಟೆಕ್ಸ್ಟ್‌ಬುಕ್ ಕಮಿಟಿಗಳೆಲ್ಲ ಯಾವ ಪುಸ್ತಕವನ್ನಾಗಲಿ ಪಾಠಕ್ಕೆಂದು ನಿಯಮಿಸುವ ಮೊದಲು ಆಯಾ ಪುಸ್ತಕದಿಂದ ವಿದ್ಯಾರ್ಥಿಗಳು ಭಾಷೆಯನ್ನು ಕಲಿಯಬಹುದೇ, ಅದು ಸರಸವಾಗಿದೆಯೇ, ವಿಚಾರಯುಕ್ತವಾಗಿದೆಯೇ, ಉದಾತ್ತ ಭಾವಗಳನ್ನೊಳಕೊಂಡಿದೆಯೇ ಎಂದಾಲೋಚಿಸಬೇಕು. ಈ ವಿಷಯದಲ್ಲೆಲ್ಲ ಮನವೊಪ್ಪಿದ ಮೇಲೆ ಪುಸ್ತಕವನ್ನು ನಿಯಮಿಸಬೇಕು. ಹೀಗೆ ನಿಯಮಿತವಾದ ಪುಸ್ತಕದಿಂದ ಅದನ್ನು ಬರೆದವರಿಗೆ ಲಾಭ ಬರಬಹುದು, ಅವರು ಇತರ ಪುಸ್ತಕಗಳನ್ನು ಅಚ್ಚುಹಾಕಬಹುದು. ಆದರೆ ಇವೆಲ್ಲ ಪ್ರಾಸಂಗಿಕ ಫಲಗಳೇ ಹೊರತು ಟೆಕ್ಸ್ಟ್‌ಬುಕ್ ಕಮಿಟಿಯ ಧ್ಯೇಯವಲ್ಲ. ಟೆಕ್ಸ್ಟ್‌ಬುಕ್ ಕಮಿಟಿಯ ಕೆಲಸ ವಿದ್ಯಾರ್ಥಿಗೆ ಒಳ್ಳೆಯ ಪುಸ್ತಕವನ್ನು ಒದಗಿಸಿಕೊಡುವುದು. ಅನೇಕ ವೇಳೆ ಕನ್ನಡದ ಪಾಠಕ್ಕೆ ಬೇರೆ ಬೇರೆಯ ತರಗತಿಗಳಿಗೆ ತಕ್ಕ ಪುಸ್ತಕಗಳು ಸಿಕ್ಕುವುದಿಲ್ಲ; ಇದು ನಿಜ. ಹೀಗೆ ಕಂಡರೆ ತಕ್ಕ ಪುಸ್ತಕಗಳನ್ನು ಗ್ರಂಥಕರ್ತರು ಯಾರಾದರೂ ಬರೆಯುವ ವರೆಗೂ ಕಮಿಟಿಯವರು ಪೂರ್ವದ ಪುಸ್ತಕಗಳನ್ನು ಸರಿಪಡಿಸಿ ಪಾಠ ಪುಸ್ತಕಗಳನ್ನು ಸಿದ್ಧಪಡಿಸಬೇಕು. ಇದು ಹೊರೆಯ ಕೆಲಸ. ಆದರೆ ಇದನ್ನು ಮಾಡದೆ ಕಮಿಟಿಯವರು ಕೃತಕೃತ್ಯರಾಗಲಾರರು. ಇದುವರೆಗೆ ಪುಸ್ತಕಗಳನ್ನು ನಿಯಮಿಸುವಲ್ಲಿ ನಮ್ಮ ಕಮಿಟಿಗಳ ಮೆಂಬರುಗಳು ಗ್ರಂಥಕರ್ತರನ್ನು ಕುರಿತು ಅಯ್ಯೋ ಪಾಪ ಎಂದಷ್ಟು ಸಲ ವಿದ್ಯಾರ್ಥಿಗಳನ್ನು ಕುರಿತು ಅಯ್ಯೋ ಪಾಪ ಎಂದು ಹೇಳಿದ್ದರೆ ಕನ್ನಡದ ವಿಷಯದಲ್ಲಿ ನಮ್ಮ ವಿದ್ಯಾರ್ಥಿಗಳಿಗೆ

ಈಗಿರುವುದಕ್ಕಿಂತ ಹೆಚ್ಚು ಆದರವಿರುತ್ತಿತ್ತೆಂದು ಖಂಡಿತವಾಗಿ ಹೇಳಬಹುದು. ಇನ್ನು ಮೇಲಾದರೂ ಎಲ್ಲ ಕಮಿಟಿಗಳವರೂ ತಮ್ಮ ಕರ್ತವ್ಯವನ್ನು ನೆನೆದು ನಡೆದರೆ ಭಾಷೆಯು ಬೆಳೆವಣಿಗೆಗೆ ಬಹಳ ಸಹಾಯವಾಗುವುದು.

ಕರ್ಣಾಟಕಕ್ಕೆ ಒಂದು ಯೂನಿವರ್ಸಿಟಿ

ನಾಡಿನ ದೃಷ್ಟಿಯಿಂದ ನನಗೆ ಒಂದು ವಿಶ್ವವಿದ್ಯಾಪೀಠವೂ ಬೇಕು. ಈಗ ನಮ್ಮ ಪ್ರೌಢ ವಿದ್ಯಾರ್ಥಿಗಳು ಮೂರು ವಿದ್ಯಾಪೀಠಗಳಲ್ಲಿ ಹಂಚಿ ಹೋಗಿದ್ದಾರೆ. ಇವುಗಳಲ್ಲಿ ಕನ್ನಡಕ್ಕೆ ಸ್ವಲ್ಪವಾದರೂ ಪ್ರಾಶಸ್ತ್ಯವಿದೆಯೆನ್ನುವುದು ಮೈಸೂರು ಯೂನಿವರ್ಸಿಟಿಯಲ್ಲಿ ಮಾತ್ರ; ಅದರಲ್ಲಿಯೂ ಅದಕ್ಕೆ ತಕ್ಕ ಸ್ಥಾನ ಸಿಕ್ಕಿದೆಯೆಂದು ನಾವು ಹೇಳುವಂತಿಲ್ಲ. ಸಾಲದುದಕ್ಕೆ ರಾಜಕೀಯ ಕಾರಣಗಳಿಂದ ಅದು ಮೈಸೂರಷ್ಟಕ್ಕೇ ಕೇಂದ್ರ ವಿದ್ಯಾಪೀಠವಾಗಬಹುದಾಗಿದೆಯೇ ಹೊರತು ಇತರ ಭಾಗಗಳನ್ನು ಸೇರಿಸಿಕೊಳ್ಳುವಂತಿಲ್ಲ. ಪ್ರೌಢ ವಿಷಯಗಳನ್ನು ಕುರಿತು ಕನ್ನಡದಲ್ಲಿ ಚರ್ಚೆಮಾಡುವ ಮತ್ತು ಬರೆಯುವ ಪರಿಸ್ಥಿತಿಯು ನಮ್ಮಲ್ಲಿ ಉಂಟಾಗಬೇಕಾದರೆ ನಮ್ಮ ಪ್ರೌಢ ವಿದ್ಯಾರ್ಥಿಗಳು ತಮ್ಮ ಬುದ್ಧಿಶಕ್ತಿಯನ್ನು ಈ ಮುಖಕ್ಕೆ ತಿದ್ದಬೇಕು. ಇದಕ್ಕೆ ಕನ್ನಡವನ್ನು ಮುಖ್ಯ ಭಾಷೆಯಾಗಿ ಎಣಿಸಿ ಸೀಮೆಗೆಲ್ಲ ಕೇಂದ್ರವಾಗುವ ಒಂದು ವಿಶ್ವವಿದ್ಯಾಪೀಠವು ಆವಶ್ಯಕ. ಈ ವಿಷಯ ಆಗಲೇ ನಮ್ಮ ಆಲೋಚನೆಯಲ್ಲಿದೆ. ಮುಂದೆ ಇದಕ್ಕೆ ಯಾವ ರೂಪ ಬರುವುದೋ ನೋಡಬೇಕು. ಆದರೆ ಮುಂದಕ್ಕೆ ಈ ಭಾವ ಹೇಗೆ ಬೆಳೆದರೂ ಈಗ ಸದ್ಯಕ್ಕೆ ಈ ಕೆಲಸದಲ್ಲಿ ನಮ್ಮ ಮೂರು ಯೂನಿವರ್ಸಿಟಿಗಳು ಎಷ್ಟು ಸಾಧ್ಯವೋ ಅಷ್ಟು ಸಹಾಯವನ್ನು ಮಾಡಬೇಕಾಗಿದೆ. ಎಲ್ಲ ವಿಷಯಗಳನ್ನೂ ಕುರಿತ ಪ್ರೌಢೋಪನ್ಯಾಸಗಳನ್ನೂ ಸಾರ್ವಜನಿಕೋಪನ್ಯಾಸಗಳನ್ನೂ ವರ್ಷಕ್ಕೆ ಎರಡು ಮೂರು ಮಾಲೆಯನ್ನಾದರೂ ಕನ್ನಡದಲ್ಲಿ ಈ ಪೀಠಗಳು ಕೊಡಿಸಬಹುದಾಗಿದೆ. ಅದರಿಂದ ನಮ್ಮಲ್ಲಿ ವಿದ್ವಾಂಸರಾದವರನ್ನು ಕನ್ನಡದ ಬೆಳೆವಣಿಗೆಗೆ ಸಹಾಯಕರನ್ನಾಗಿ ತರಬಹುದು. ನಮ್ಮ ಕಾಲೇಜುಗಳ ಕರ್ಣಾಟಕ ಸಂಘಗಳು ವಿದ್ಯಾರ್ಥಿಗಳನ್ನೂ ಹಿರಿಯರನ್ನೂ ಸೇರಿಸಿ ಚರ್ಚೆಗಳನ್ನು ಏರ್ಪಡಿಸುತ್ತಿವೆ. ಇವು ಸದ್ಯದ ಸ್ಥಿತಿಯಲ್ಲಿ ತಕ್ಕಷ್ಟು ಗಂಭೀರವಾದ ರೀತಿಯಲ್ಲಿ ನಡೆಯುತ್ತಿಲ್ಲ. ಚರ್ಚಿಸುವ ಮಹನೀಯರು, ನಿಜವಾದ ಚರ್ಚೆ ಅಸೆಂಬ್ಲಿಗಳಲ್ಲಿ ಮಾತ್ರ ನಡೆಯಬೇಕು, ಕಾಲೇಜಿನಲ್ಲಿ ಹುಡುಗರ ಜೊತೆಗೆ ಮಾಡುವ ಚರ್ಚೆ ಹುಡುಗಾಟದ ಚರ್ಚೆಯಾಗಿರಬೇಕು ಎಂದು ಭಾವಿಸಿ ಮಾತನಾಡುವಂತೆ ಹಲವು ವೇಳೆ ನನಗೆ ಕಂಡಿದೆ. ಯಾವ ವಿಷಯವನ್ನು ತೆಗೆದುಕೊಂಡರೂ ಗಂಭೀರವಾಗಿ ಯುಕ್ತಿಯುಕ್ತವಾಗಿ ಮಾತನಾಡುವುದನ್ನು ನಮ್ಮ ವಿದ್ಯಾರ್ಥಿಗಳು ಕಲಿಯಬೇಕು. ಇದಕ್ಕೆ ಇಂಥ ಚರ್ಚೆಗಳು ಅವಕಾಶವನ್ನು ಕಲ್ಪಿಸುತ್ತವೆ. ಕನ್ನಡ ನಾಡಿನ ಎಲ್ಲ ಪ್ರೌಢ ವಿದ್ಯಾಶಾಲೆಗಳೂ ಸೇರಿ ಇಂಥ ಚರ್ಚೆಗಳನ್ನು ಏರ್ಪಡಿಸಿದರೆ ಬಹಳ ಚೆನ್ನಾಗಿರಬಹುದು. ಬೇರೆ ಬೇರೆ ಪ್ರಾಂತದ ಕಾಲೇಜುಗಳ ಅಧ್ಯಾಪಕರು ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಒಂದು ಉಪನ್ಯಾಸಗಳನ್ನು ಮಾಡುವುದರಿಂದಲೂ ನಮ್ಮ ನಾಡಿನ ಪ್ರೌಢ ವಿದ್ಯೆಯು ಒಂದು ಮುಖ

ವಾಗಬಹುದು. ಹಣ ಕಾಸಿಗೂ ಮೇಲ್ವಿಚಾರಣೆಗೂ ಈ ಪ್ರಾಂತದ ಕಾಲೇಜು ಗಳನ್ನು ಮುಂಬಯಿ ಯೂನಿವರ್ಸಿಟಿಗೆ ಸೇರಿಸಬಹುದಾದರೂ ಇಲ್ಲಿಯ ವಿದ್ಯಾರ್ಥಿಗಳು ಬಿ.ಎ. ಮುಂತಾದ ದೊಡ್ಡ ಪರೀಕ್ಷೆಗಳಿಗೆ ಬೆಂಗಳೂರು, ಮೈಸೂರಿಗೆ ಬಂದು ಸೇರುವುದೂ ಒಳ್ಳೆಯದು. ಅದರಲ್ಲಿಯೂ ಕನ್ನಡದ ಎಂ.ಎ. ಪರೀಕ್ಷೆಗೆ ಓದಬೇಕೆನ್ನುವವರೆಲ್ಲ ಮೈಸೂರಿನ ಯೂನಿವರ್ಸಿಟಿಗೆ ಬರುವುದಕ್ಕೆ ಮನಸ್ಸು ಮಾಡಿದರೆ ನಮ್ಮ ಭಾಷೆಯ ಪ್ರಾಂತಗಳೆಲ್ಲ ಒಂದಾಗುವುದಕ್ಕೂ ನಮ್ಮ ವಿದ್ಯಾರ್ಥಿಗಳಲ್ಲಿ ಪರಸ್ಪರ ಪ್ರೀತಿ ಬೆಳೆಯುವುದಕ್ಕೂ ಯೋಗ್ಯವಾದ ಸ್ಪರ್ಧೆಯಿಂದ ಅವರ ಶಕ್ತಿ ಅಭಿವೃದ್ಧಿಯಾಗುವುದಕ್ಕೂ ಅನುಕೂಲವಾಗುತ್ತದೆ.

ಇದಿಷ್ಟು ಎಲ್ಲ ಜನರೂ ಮಾಡಬೇಕಾದ ಕೆಲಸ. ಇನ್ನು, ಗ್ರಂಥಕರ್ತನೇ ಮಾಡಬೇಕಾದ ಕೆಲಸವನ್ನು ಕುರಿತು ಎರಡು ಮಾತನ್ನು ಹೇಳುತ್ತೇನೆ. ಈ ಪರಿಷತ್ತಿನ ಕಳೆದ ವರ್ಷದ ಅಧಿವೇಶನದಲ್ಲಿ ನನ್ನ ಗುರುವರ್ಯರಾದ ಶ್ರೀಮಾನ್ ಶ್ರೀಕಂಠಯ್ಯನವರು ಈ ವಿಷಯವನ್ನು ಕುರಿತು ಅಮೋಘವಾದ ಉಪನ್ಯಾಸವನ್ನು ಮಾಡಿದರು. ಸಾಹಿತ್ಯ ಪ್ರಪಂಚದಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರು ನೋಡದ ಪ್ರಸ್ಥಭೂಮಿಯೊಂದಿಲ್ಲ. ಅಂಥ ಒಂದೊಂದು ಪ್ರಸ್ಥಭೂಮಿಯಿಂದ ಅವರ ವಿಶಾಲ ದೃಷ್ಟಿಗೆ ಕಂಡ ಸಕಲ ವಿಷಯವನ್ನೂ ಅವರು ಆ ಉಪನ್ಯಾಸದಲ್ಲಿ ಸೂಚಿಸಿರುವರು. ಈಚೆಗೆ ಇನ್ನೊಂದು ಸಂದರ್ಭದಲ್ಲಿ ನಮ್ಮ ಮಿತ್ರರಾದ ಶ್ರೀಮಾನ್ ಗುಂಡಪ್ಪನವರು ಪಾಶ್ಚಾತ್ಯ ಸಾಹಿತ್ಯದ ಸ್ವಾತಂತ್ರ್ಯ ಭಾವದ ವಸಂತ ಮಾರುತದಿಂದ ಶ್ವಾಸಕೋಶಗಳನ್ನು ತುಂಬಿಕೊಂಡು ಸಾಹಿತ್ಯ ಕಲೆಯನ್ನು ಜನ ಜೀವನದ ಸಂಸ್ಕರಣವೆಂಬ ಅದರ ಮುಖ್ಯ ಕರ್ತವ್ಯಕ್ಕೆ ಉದ್ಘೋಷಿಸಿ ಕರೆದಿರುವರು. ಸಹಜವಾದ ಸಾಹಿತ್ಯ ದೀಕ್ಷೆಯಿಂದ ಭಾಷಾ ಸೇವೆಗೆ ಬಂದು ನಿಂತಿರುವ ಶ್ರೀಮಾನ್ ಪುಟ್ಟಪ್ಪನವರು ಇನ್ನೊಂದು ಸಂದರ್ಭದಲ್ಲಿ ಅವರ ವಯಸ್ಸಿಗೆ ತಕ್ಕ ವಿನಯದಿಂದಲೂ, ಅವರ ವಯಸ್ಸಿಗೆ ಮೀರಿದ ಪ್ರೌಢಿಮೆಯಿಂದಲೂ, ಅವರಿಗೆ ಸುಲಭವಾದ ಪ್ರತಿಭೆಯಿಂದಲೂ ಹೊಸ ಕವಿಗಳ ಆಕಾಂಕ್ಷೆಗಳನ್ನೂ ಶಂಕೆಗಳನ್ನೂ ಧ್ಯೇಯಗಳನ್ನೂ ತಮ್ಮ ಸುಂದರವಾದ ಒಂದು ಭಾಷಣದಲ್ಲಿ ವರ್ಣಿಸಿರುವರು. ಪಾಶ್ಚಾತ್ಯ ಸಾಹಿತ್ಯಗಳ ಸಂಪರ್ಕದಿಂದ ನಮ್ಮಲ್ಲಿ ಉಂಟಾಗಿರುವ ಸಾಹಿತ್ಯ ವಿಷಯಕ ಪರಿಜ್ಞಾನದ ಮುಖ್ಯ ವಿಷಯಗಳು ಈ ಮೂರು ಉಪನ್ಯಾಸಗಳಲ್ಲಿ ಚೆನ್ನಾಗಿ ವ್ಯಕ್ತವಾಗಿವೆ. ಮುಖ್ಯವಾಗಿ ನಾವು ತಿಳಿದುಕೊಳ್ಳಬೇಕಾಗಿರುವುದೇನೆಂದರೆ, ನಮ್ಮ ಸಾಹಿತ್ಯವು ಮುಂದುವರಿಯಬೇಕಾದರೆ ಅದು ಕೃತಕ ನಿಯಮಗಳ ನಿರ್ಬಂಧದಿಂದ ಬಿಡಿಸಿಕೊಂಡು ಸ್ವತಂತ್ರವಾಗಿ ನಡೆಯಬೇಕು. ಕೃತಕ ನಿಯಮಗಳನ್ನು ಬಿಡಬೇಕೆಂದರೆ ನಿಯಮಗಳೇ ಇರಕೂಡದೆಂದರ್ಥವಲ್ಲ. ಸಾಹಿತ್ಯದ ಸೌಜನ್ಯಕ್ಕೆ ಆವಶ್ಯಕಗಳಾದ ಸ್ವರೂಪ ಜನ್ಯಗಳಾದ ನಿತ್ಯ ನಿಯಮಗಳು ಹಲವು ಇವೆ. ಅವು ಎಲ್ಲ ಸಂದರ್ಭಗಳಲ್ಲಿಯೂ ಇರತಕ್ಕವೇ. ಗ್ರಂಥಕರ್ತನೆಲ್ಲರೂ ಅವುಗಳನ್ನು ತಿಳಿದುಕೊಂಡು ಅವಕ್ಕೆ ತಗ್ಗಿಯೇ ನಡೆಯಬೇಕು. ನಮ್ಮ ಪೂರ್ವದ

ಹೊಸ ಸಾಹಿತ್ಯದ ದಾರಿಗಳು

ಸಾಹಿತ್ಯವು ಕೃತಕವಾಗುವುದಕ್ಕೆ ಮೊದಲು ಚೆನ್ನಾಗಿಯೇ ಇದ್ದಿತು. ಒಟ್ಟು ಸಾಹಿತ್ಯವು ಕೃತಕವಾದಮೇಲೆಯೂ ಸ್ವಭಾವವಾಗಿ ಬರೆದ ಹಲಕೆಲವು ಕೃತಿಗಳು ಚೆನ್ನಾಗಿಯೇ ಬಂದುವು. ಕೃತಕದಲ್ಲಿಯೂ ವಸಂತಋತು, ಮಂದಮಾರುತ ಮೊದಲಾದ ತಿಳಿದ ವಿಷಯವನ್ನು ವರ್ಣಿಸಿ ಅತಿಗೆ ಹೋಗದೆ ಬರೆದಾಗ ಕವಿತೆ ಚೆನ್ನಾಗಿಯೇ ಹರಿಯಿತು. ಸಮುದ್ರದಂತಹ ತಿಳಿಯದ ವಿಷಯವನ್ನು ಕುರಿತು ಬರೆದಾಗ, ಭಾವದಿಂದ ಕಾವ್ಯ ಮಾತಿನಿಂದಲ್ಲ, ಎಂಬ ತತ್ತ್ವವನ್ನು ಮರೆತಾಗ, ಸಾಹಿತ್ಯವು ಕಲೆ, ಅದನ್ನು ಉತ್ತಮ ಕಾರ್ಯಕ್ಕೇ ಉಪಯೋಗಿಸಬೇಕು ಎಂಬ ನೀತಿಯನ್ನು ತೊರೆದಾಗ ಕಾವ್ಯವು ಕೆಟ್ಟುಹೋಯಿತು. ನಮ್ಮ ವನವರ್ಣನೆಗಳಲ್ಲಿ ಒಂದೊಂದು ಮರವನ್ನು ವರ್ಣಿಸಿರುವ ಕಡೆ ವರ್ಣನೆ ಚೆನ್ನಾಗಿ ಬಂದಿದೆ. ವನವನ್ನೇ ವರ್ಣಿಸುವುದಕ್ಕೆ ಹೋಗಿ ಸೃಷ್ಟಿಯಲ್ಲಿ ಇರುವ ಮರ, ಇಲ್ಲದ ಮರ, ಕಂಡ ಮರ, ಕಾಣದ ಮರ ಎಲ್ಲವನ್ನೂ ಪ್ರಾಸಕ್ಕಾಗಿ ಸೇರಿಸಿದಕಡೆಗಳಲ್ಲೆಲ್ಲ ಬೇಸರ ಮಾತ್ರ ಹುಟ್ಟುತ್ತದೆ. ಸರಿಯಾದ ಸ್ಥಳದಲ್ಲಿ ಸುಲಕ್ಷಣವಾಗಿ ವರ್ಣಿಸಿರುವ ಶೃಂಗಾರವುಂಟು. ಇದು ಚೆನ್ನಾಗಿದೆ. ನಾಟಕದ ನಾಂದಿಯಲ್ಲಿ ದೇವದೇವನಾದ ವಿಷ್ಣುವಿನ ರತ್ಯುತ್ಸಾಹದ ವಿವರವಾದ ವರ್ಣನೆಯೂ ಉಂಟು. ಇದು ಅಸಹ್ಯವಾಗಿದೆ. ಕನ್ನಡದ ವೇಣೀಸಂಹಾರ ನಾಟಕದ ಮೊದಲನೆಯ ಪುಟದಲ್ಲಿ ಈ ವರ್ಣನೆಯೊಂದಿದೆ. ಇದಾದಮೇಲೆ ಸೂತ್ರಧಾರನು ಪ್ರವೇಶಿಸಿ ಇನ್ನು ಅಧಿಕಪ್ರಸಂಗವು ಸಾಕು ಎಂದು ಹೇಳುತ್ತಾನೆ. ಗ್ರಂಥದ ಇತರ ಭಾಗ ಹೇಗಿದ್ದರೂ ವಿಷ್ಣುವಿನ ರತ್ಯುತ್ಸಾಹದ ವರ್ಣನೆಯು ಅಧಿಕಪ್ರಸಂಗವೆಂದು ಹೇಳಿದಷ್ಟು ಮಾತು ಈ ಕಾವ್ಯದಲ್ಲಿ ಅಮೂಲ್ಯವಾದುದು. ಇಂಥ ವರ್ಣನೆಗಳು ಏಕೆ ಬೇಕಾದುವು? ಬೇರೆ ಕೆಲಸವಿಲ್ಲದೆ ಶೃಂಗಾರಾನುಭವದಲ್ಲಿ ಸೋತ ರಸನೆಗೆ ಸುಖ ತಿಳಿಯುವುದಕ್ಕೆ ಇನ್ನಷ್ಟು ಮತ್ತಷ್ಟು ಶೃಂಗಾರವನ್ನು ಹಾಕುವುದಕ್ಕೆ ಹೋಗಿ ಹೀಗಾಯಿತು. ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಇಂತಹ ಬರೆವಣಿಗೆ ಇಲ್ಲದೆ ಇಲ್ಲ. ಆದರೆ ಇದರ ಜೊತೆಗೆ ಇತರ ರೀತಿಯ ಬರೆವಣಿಗೆ ಸಾಕಾದಷ್ಟು ಇದೆ. ನಮ್ಮಲ್ಲಿ ಒಟ್ಟಿನಲ್ಲಿಯೇ ಬರೆವಣಿಗೆ ಕಡಿಮೆ. ಬರೆದ ಸ್ವಲ್ಪವು ವಿಶೇಷವಾಗಿ ರಾಜರನ್ನು ಕುರಿತುದು. ರಾಜರಿಗಾಗಿ ಅಥವಾ ಕೆಲವು ಮಹಾಜನರಿಗಾಗಿ ಬರೆದುದು. ಇದರಿಂದ ಬೇರೆಯ ರೀತಿಯಾದ ವರ್ಣನೆ ಇಲ್ಲದೆಹೋಯಿತು. ಹಿಂದೆ ನಮ್ಮ ಸಾಹಿತ್ಯವು ಸಮುದ್ರಕ್ಕೆ ಸಂಬಂಧವಿಲ್ಲದೆ ಇದ್ದ ಸರೋವರದಂತೆ ಇತ್ತು. ಅದರಲ್ಲಿ ಶಾಂತಿಯಿತ್ತು. ಆದರೆ ನೀರೂ ಸ್ವಲ್ಪ ಕೊಳೆಯಾಗುತ್ತ ಬಂದಿತ್ತು. ಈಗ ಅದು ವಿಶಾಲ ಪ್ರಪಂಚದೊಂದಿಗೆ ಸಂಬಂಧವನ್ನು ಪಡೆದಿದೆ. ಇದಕ್ಕೆ ನಾವು ಸಂತೋಷಪಡೋಣ. ಸಮುದ್ರದೊಡನೆ ಸಂಬಂಧವುಂಟಾದ ಸರೋವರದ ಹಾಗೆ ಈಗ ಇದರಲ್ಲಿ ಆ ಶಾಂತಿ ಇಲ್ಲದೆ ಹೋಗುವುದು. ಆದರೆ ಕ್ಷೋಭೆಯಲ್ಲದೆ ಇನ್ನೇನೂ ಇಲ್ಲದೆ ಹೋಗದಂತೆ ನೋಡಿಕೊಳ್ಳೋಣ. ಮುಖ್ಯವಾಗಿ ನಮ್ಮ ಕಾವ್ಯ ಚೆನ್ನಾಗಿ ಆಗಬೇಕಾದರೆ ನಮ್ಮ ಜೀವನ ಚೆನ್ನಾಗಬೇಕು. ತನ್ನ ಜೀವನವನ್ನು ಒಳ್ಳೆಯದನ್ನಾಗಿ ಮಾಡಲಾರದವನು ತನ್ನ ಕಾವ್ಯವನ್ನು ಒಳ್ಳೆಯದಾಗಿ ಮಾಡ

ಲಾರನು. ತಂದೆತಾಯಿಗಳ ಮುಖದ ಮತ್ತು ಮನಸ್ಸಿನ ಹೋಲಿಕೆಯು ಮಗುವಿನಲ್ಲಿ ಬರುವುದು ಎಷ್ಟು ನಿಜವೋ ಎಷ್ಟು ಖಂಡಿತವೋ ಕವಿಯ ಮನಸ್ಸಿನ ಗುಣದೋಷಗಳು ಅವನ ಕೃತಿಯಲ್ಲಿ ಕಾಣುವುದೆನ್ನುವುದು ಅಷ್ಟು ನಿಜ, ಅಷ್ಟು ಖಂಡಿತ. ಕವಿಯಾದವನು ಸರಸ್ವತಿಯ ಮುಂದೆ ನಿಂತಾಗ ಗೆಣ್ಣುಗೆಣ್ಣೂ ನಿಜವನ್ನು ನುಡಿಯುತ್ತದೆ. ಅವನು ಅದನ್ನು ಅನೇಕ ವೇಳೆ ಮರೆಯಿಸನೋಡುವನು ; ಸಾಮಾನ್ಯ ದೃಷ್ಟಿಗೆ ಕಾಣದಂತೆ ಮರೆಯಿಸಲೂ ಬಹುದು. ಆದರೆ ಇದರಿಂದ ಫಲವಿಲ್ಲ. ಕವಿತೆಗೆ ಕೊಳೆಯ ಮನಸ್ಸನ್ನು ತರುವುದು ದೇವರಿಗೆ ಕೊಳೆತ ಕಾಯನ್ನು ತಂದಂತೆ. ಆ ಕಾಯಿಗೂ ಆ ಮನುಷ್ಯನಿಗೂ ಸಾನ್ನಿಧ್ಯದ ವರೆಗೆ ಪ್ರವೇಶವುಂಟು. ಆದರೆ ಅಲ್ಲಿ ಅಂಗೀಕಾರವಿಲ್ಲ. ಇನ್ನೊಂದು ವಿಷಯವೇನೆಂದರೆ, ಸಾಹಿತ್ಯವು ಜನದ ಜೀವನದ ಸಮಸ್ತ ಭಾಗವನ್ನೂ ಒಳಗೊಂಡುದು. ಜನಾಂಗದ ಎಲ್ಲಾ ಭಾಗವೂ ಒಳ್ಳೆಯ ಸ್ಥಿತಿಗೆ ಬರಬೇಕು ಎಂಬುದು ನಮ್ಮೆಲ್ಲರ ಆಸೆ. ಈ ಕೆಲಸದಲ್ಲಿ ಎಷ್ಟು ದೂರ ಸಾಹಿತ್ಯವು ನೆರವಾಗಿರುವುದೋ ಅಷ್ಟುಮಟ್ಟಿಗೆ ಅದು ಸಾರ್ಥಕವಾಯಿತು. ಎಷ್ಟು ದೂರ ಆಗದೆ ಹೋಗುವುದೋ ಅಷ್ಟು ದೂರ ಅದು ವ್ಯರ್ಥವಾಯಿತು. ಹಿಂದೆ ತಕ್ಕಮಟ್ಟಿಗೆ ಒಂದು ಸ್ಥಿತಿಯಲ್ಲಿ ನಿಂತ ಜನಕ್ಕೆ ನಮ್ಮ ಜನರು ವಿಶ್ವಧರ್ಮವನ್ನು ಬೋಧಿಸುವುದಕ್ಕೆ ಒಂದು ರೀತಿಯ ಕಾವ್ಯವನ್ನು ನಿರ್ಮಿಸಿ ಅದನ್ನೇ ಓದಿ ಓದಿ ಹೇಳಿದರು. ಈಗಣ ಸ್ಥಿತಿಗನುಸಾರವಾಗಿ ನೂರಾರು ಸಂದರ್ಭಗಳಿಗೆ ಅನ್ವಯಿಸುವ ನೂರಾರು ರೀತಿಯ ಬರೆವಣಿಗೆಯಿಂದ ಅದೇ ವಿಶ್ವಧರ್ಮವನ್ನು ನಮ್ಮ ಸಾಹಿತ್ಯ ಕಲೋಪಾಸಕರು ಬೋಧಿಸಬೇಕಾಗಿದೆ. ಬೋಧಿಸುವುದರಲ್ಲಿ ಸಾಹಿತ್ಯದ ಪದ್ಧತಿಯೂ ಮುಖ್ಯವಾಗಿ ಮನಸ್ಸಿನಲ್ಲಿರಬೇಕಾದುದು. ತಮ್ಮ ಬಳಿಗೆ ಉಪದೇಶಕ್ಕೆಂದು ಬಂದವರಿಗೆ ಅಗಡಿಯ ಸಾಧುಗಳು, "ಉಪದೇಶಮಾಡುವುದು ಅಂದರೇನು ಸ್ವಾಮಿ? ಉಪದೇಶ ಆಗಬೇಕು" ಎಂದು ಹೇಳುತ್ತಿದ್ದರಂತೆ. ಸಾಹಿತ್ಯಕ್ಕೆ ಈ ಮಾತು ಚೆನ್ನಾಗಿ ಒಪ್ಪುವುದು. ಸಾಹಿತ್ಯವು ಉಪದೇಶ ಮಾಡುವುದಿಲ್ಲ; ಉಪದೇಶ ಆಗುವಂತೆ ಮಾಡುತ್ತದೆ. ಸಾಹಿತ್ಯದಿಂದ ದೇಶಸೇವೆಯನ್ನು ಮಾಡುವವರು ಇದನ್ನು ಮರೆಯಲಾಗದು. ಸಂಪ್ರದಾಯದಲ್ಲಿ ಒಳ್ಳೆಯದನ್ನು ಇಟ್ಟುಕೊಂಡು ಅದರ ಸಂಕೋಲೆಯಿಂದ ಬಿಡುಗಡೆ ಹೊಂದುವುದು, ತನ್ನ ಬದುಕನ್ನು ಚೆನ್ನಾಗಿ ಮಾಡಿಕೊಳ್ಳುವುದು, ನಿಜವಾದ ಅನುಭವವನ್ನು ನುಡಿಯುವುದು, ಜನಾಂಗವೆಲ್ಲದರ ಕ್ಷೇಮವನ್ನು ಬಯಸುವುದು, ಇದಕ್ಕೆ ಆವಶ್ಯಕವಾಗಿರುವ ಕೆಲಸದಲ್ಲಿ ಕಾವ್ಯ ನಿರ್ಮಾಣದಿಂದ ತನ್ನ ಕೈಯಲ್ಲಾದುದನ್ನು ಮಾಡುವುದು, ಹೀಗೆ ಮಾಡುವುದರಲ್ಲಿ ಸಾಹಿತ್ಯದ ಸ್ವರೂಪವನ್ನು ಮರೆಯದಿರುವುದು, ಇದೀಗ ನಮ್ಮ ಹೊಸ ಗ್ರಂಥಕಾರರ ಕರ್ತವ್ಯ.

ಕಾವ್ಯದ ಕೆಲಸದ ಈ ವರ್ಣನೆಯು ಬಹು ರಸ ವಿಹೀನವಾಗಿ ಕಾಣಬಹುದು.

**ಹೊಸ ಸಾಹಿತ್ಯಶಾಸ್ತ್ರ**

ಕಾವ್ಯವು ಮಾಡುವ ಕೆಲಸವು ಇದೇಯೇ ಎಂದು ತೋರಬಹುದು. ರಸಾತ್ಮಕವಾದ ವಾಕ್ಯ ಕಾವ್ಯ, ಕಾವ್ಯಕ್ಕೆ ರೀತಿಯು ಆತ್ಮ ಎಂಬ ಮಾತುಗಳು ಏನಾಗಬೇಕು? ಇನ್ನು

ಪಾಶ್ಚಾತ್ಯ ಕವಿವರರ ಕಾವ್ಯೋತ್ಸಾಹದ ಬಣ್ಣನೆಯ ನುಡಿಗಳೇನಾಗಬೇಕು ? ಕವಿಯು ಉತ್ತಮರಲ್ಲಿ ಉತ್ತಮನು, ಭೋಗಿಗಳಲ್ಲಿ ಭೋಗಿಯು, ಬುದ್ಧಿವಂತ ರಲ್ಲಿ ಬುದ್ಧಿವಂತನು, ತೃಪ್ತರಲ್ಲಿ ತೃಪ್ತನು ಎಂಬ ಷೆಲ್ಲಿಯ ಮಾತು ಏನಾಗಬೇಕು ; ಮಹನೀಯರೆ! ನಮ್ಮ ಪೂರ್ವಿಕರ ಕಾವ್ಯವಿಮಾಂಸೆಯು ಕೆಲವು ಸಂದರ್ಭ ಗಳಲ್ಲಿ ಸರಿಯಾದ ಸ್ಥಾನವನ್ನು ಮುಟ್ಟಿ ಆಮೇಲೆ ಅತಿವಿವರಣೆಗೆ ಹೋಗಿ ಅಡ್ಡ ದಾರಿಯನ್ನು ಹಿಡಿಯಿತು. ಋಷಿಯಲ್ಲದವನು ಕವಿತೆಯನ್ನು ಮಾಡಲಾರನೆಂದ ವರು ನಮ್ಮವರು ; ಆಮೇಲೆ ಸಾಹಿತ್ಯಶಾಸ್ತ್ರದಲ್ಲಿ ಅಧ್ಯಾಯದ ಮೇಲೆ ಅಧ್ಯಾಯ ವನ್ನು ಅಲಂಕಾರಕ್ಕೂ ಲಕ್ಷಣಕ್ಕೂ ಯಾರೂ ಕಾಣದ ಗುಣದೋಷಗಳಿಗೂ ಕೊಟ್ಟವರು ನಮ್ಮವರು. ಪಾಶ್ಚಾತ್ಯರ ಕಾವ್ಯವಿಮಾಂಸೆಯೂ ಇನ್ನೊಂದು ರೀತಿಯಲ್ಲಿ ಹೀಗೆಯೇ ಆಯಿತೆಂದು ನನಗೆ ತೋರುತ್ತದೆ. ಷೆಲ್ಲಿಯು ಬಹಳ ಉತ್ತಮ ಕವಿ. ಅವನು ಕವಿಯನ್ನು ಹೊಗಳಿ ನುಡಿದ ಮಾತನ್ನು ಮೇಲೆ ಹೇಳಿದೆ. ಆದರೆ ಅವನ ಕಾವ್ಯದಲ್ಲಿ ಒಂದು ಕಡೆ ಅವನೇ, "Alas ! I have nor hope nor health nor peace within, nor calm around, nor that content surpassing wealth, the sage in meditation found." ಎಂದು ಹೇಳಿದನು. ಹೀಗೆಂದು ಇವನು ಬರೆದಿರುವ ಪದ್ಯವನ್ನು ಓದುವವರಿಗೆ ಮಾತಿನ ಶಕ್ತಿ ಇನ್ನು ಮುಂದೆ ಹೋಗುವುದುಂಟೆ ಎನ್ನಿಸುತ್ತದೆ. ಇದನ್ನು ಬರೆದವನು ಸುಖಿಯಲ್ಲ; ಇದನ್ನು ಅವನು ಬರೆದುದು, In dejection near Naples ; "Our sweetest songs are those that tell of saddest thought" ಎಂದು ಈತನೇ ಹೇಳಿದ್ದಾನೆ. ಭಾರತವರ್ಷದ ಆದಿಕಾವ್ಯದ ಕವಿಗೆ ಶ್ಲೋಕವಾಗಿ ಬಂದುದು ಅವನ ಹೃದಯದ ಶೋಕ. ಹಾಫೀಸ್ ಕವಿಯು ತನ್ನ ಕವಿತೆಯನ್ನು ಕುರಿತು, "For each small word my heart hath surely bled silent and long" ಎಂದು ಹೇಳಿದನು. ಷೆಲ್ಲಿಯ ಅಭಿಮಾನಜನಕವಾದ ಪ್ರಶಂಸೆಯನ್ನು ನಾಲ್ಕು ಪದ್ಯ ಬರೆಯಬಲ್ಲ ಕವಿಯೆಂಬ ವ್ಯಕ್ತಿಗಳೆಲ್ಲ ತಮಗೆ ಆರೋಪಿಸಿಕೊಳ್ಳಲಾಗದು. ಕವಿಯಾದವನು ನಿತ್ಯಸುಖವನ್ನು ಕುರಿತು ಮಾತನಾಡಬಹುದು ; ಅದರ ಸ್ವರೂಪವನ್ನು ಕ್ಷಣಮಾತ್ರ ಕಾಣಬಹುದು ; ಅದನ್ನು ಅವನು ನಿತ್ಯವಾಗಿ ಪಡೆದಿದ್ದಾನೆಂದು ನಾವು ಭಾವಿಸಲಾಗದು. ಅವನು ಇತರರಿಗೆ ಬೆಳಕನ್ನು ಕೊಡುವು ದಲ್ಲದೆ ತಾನೂ ಆ ಬೆಳಕನ್ನು ಕಾಣಬಹುದು ; ಕೆಲವು ವೇಳೆ ಪಂಜನ್ನು ಹಿಡಿದ ಕುರುಡನಂತೆ ಇತರರಿಗೆ ಬೆಳಕನ್ನು ಕೊಡುತ್ತ ತಾನು ಅದನ್ನು ಅನುಭವಿಸಲಾರ ದವನಾಗಿರಬಹುದು. ಒಟ್ಟಿನಲ್ಲಿ ಕವಿಯ ಕರ್ಮದ ಸ್ವರೂಪಕ್ಕೆ ಪ್ರಾಮುಖ್ಯವನ್ನು ಕೊಟ್ಟು ನಿಯಮಗಳನ್ನು ಮುಂದಿಟ್ಟ ಇತ್ತೀಚಿನ ನಮ್ಮ ಕಾವ್ಯವಿಮಾಂಸೆ ಯನ್ನೂ, ಒಬ್ಬೊಬ್ಬ ಕವಿಯ ಅಂತರಂಗಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ನಿಯಮವೇ ಇಲ್ಲವೋ ಎಂಬಂತೆ ಕಾಣಿಸಿಕೊಳ್ಳುವ ಪಾಶ್ಚಾತ್ಯರ ಕಾವ್ಯವಿಮಾಂಸೆಯನ್ನೂ ಸಮನ್ವಯಮಾಡುವ ಕಾವ್ಯವಿಮಾಂಸೆಯೊಂದು ನಮಗೆ ಬೇಕಾಗಿದೆ. ಮಾನವನ ಪ್ರಯತ್ನಕ್ಕೇ ಹೆಚ್ಚು ಬೆಲೆಯನ್ನು ಕೊಡುವ ಪಾಶ್ಚಾತ್ಯ ಜೀವನ ತತ್ತ್ವವನ್ನೂ ಕೇವಲ ದೈವಿಕವನ್ನು ಪ್ರವರ ಮೇಲೆ ಹೆಚ್ಚು ಭಾರ ಹಾಕುವ ನಮ್ಮವರ ಜೀವನ

ತತ್ತ್ವವನ್ನೂ ಸಮನ್ವಯಮಾಡಿ ಒಂದು ಜೀವನ ತತ್ತ್ವವನ್ನು ನಿರ್ಧರಿಸಿಕೊಂಡು ಆದಕ್ಕೆ ಅನುಸಾರವಾದ ಸಾಹಿತ್ಯವನ್ನು ನಾವು ತರಬೇಕಾಗಿದೆ. ಋಷಿಯಾದವನು ಮಾತ್ರವಲ್ಲ, ಋಷಿಯಾಗಲು ಯತ್ನಿಸುತ್ತಿರುವವನೂ ಸುಖದ ಸ್ವರೂಪವನ್ನು ಕಂಡು ತಿಳಿದು ತನ್ನ ಅನುಭವವನ್ನು ಹೇಳಿದರೆ ಕಾವ್ಯವಾಗುತ್ತದೆ. ನಮ್ಮ ಹೊಸ ಸಾಹಿತ್ಯ ಶಾಸ್ತ್ರದಲ್ಲಿ ಈ ಸೂತ್ರಕ್ಕೆ ಸ್ಥಾನವು ದೊರೆಯಬೇಕು.

ಮುಖ್ಯ ತತ್ತ್ವದ ವಿಚಾರ ಹೀಗಿರಲಾಗಿ, ಬರೆಯುವ ದಾರಿಯನ್ನು ಕುರಿತು ಒಂದೆರಡು ವಿಷಯವನ್ನು ನಾವು ಮನಸ್ಸಿನಲ್ಲಿಡಬೇಕಾಗಿದೆ:

**ಎರಡು ಎಚ್ಚರಿಕೆಯ ಮಾತು**

'ಹೊಸ ಸಾಹಿತ್ಯದ ಕವಿಗಳು ಹೊಸದರ ಪರಿಚಯದಿಂದ ಮೋಹಗೊಂಡು ದೇವರು ಪ್ರಪಂಚವನ್ನು ಕೈಬಿಟ್ಟಿದ್ದಾನೆ; ಇದನ್ನು ನಾವು ಉದ್ಧಾರಮಾಡುತ್ತೇವೆ' ಎಂಬ ಬುದ್ಧಿಯಿಂದ ಕಾವ್ಯ ಸೃಷ್ಟಿಗೆ ಹೊರಡಬಾರದು. 'ದೇವರು ಪ್ರಪಂಚವನ್ನು ಉದ್ಧಾರಮಾಡುತ್ತಿದ್ದಾನೆ, ನಾವು ಅವನ ಕೈಯ ಆಯುಧಗಳು' ಎಂದು ಹೊರಟರೆ ಸರಿಯಾದ ಸೂತ್ರವನ್ನು ಹಿಡಿದಂತಾದೀತು. ಕನ್ನಡದ ಸಂಪ್ರದಾಯವು ಬಹು ಉಚ್ಚ ಸಂಪ್ರದಾಯ; ನಾವು ಬರೆಯುವ ಯಾವ ಗ್ರಂಥದಿಂದಲಾಗಲಿ ಉಚ್ಚವಾದ ಆ ಸಂಪ್ರದಾಯಕ್ಕೆ ಕುಂದು ಬರಬಾರದು. ನಮ್ಮ ಸಾಹಿತ್ಯದ ಆದಿ ಕವಿಯೇ ಆ ಸಂಪ್ರದಾಯವನ್ನು ಆಕಾಶದಲ್ಲಿಟ್ಟನು. ಸ್ವರೂಪತಃ ಕವಿಯಾದವನು ಪಾಂಡಿತ್ಯವುಳ್ಳವನಾದರೆ ಎಂತಹ ಕಾವ್ಯವನ್ನು ಬರೆಯಬೇಕೆಂದು ಪಂಪನ ಹೊಂದಾವರೆಗಳು ನಿಯಮಿಸಿವೆ! ಸಾಹಿತ್ಯದ ಉನ್ನತ ಶಿಖರಗಳಲ್ಲಿ ಎಂತಹ ತೀಕ್ಷ್ಣವೂ ನಿರ್ದಾಕ್ಷಿಣ್ಯವೂ ಆದ ಆತ್ಮಪರೀಕ್ಷೆ ಇರಬೇಕೆಂಬುದನ್ನು ಬಸವೇಶ್ವರನ ವಚನಗಳು ತೋರುತ್ತಿವೆ! ಮಹಾ ಕಾವ್ಯದ ಭಾವೌನ್ನತ್ಯಕ್ಕೆ ಸ್ಫುರದ್ರೂಪವು ಬರಬೇಕಾದರೆ ಎಷ್ಟು ವಿಶಾಲವೂ ಉದಾರವೂ ಆದ ಪ್ರಪಂಚ ಜ್ಞಾನವು ಆವಶ್ಯಕವೆನ್ನುವುದು ಕುಮಾರವ್ಯಾಸನ ಕಾವ್ಯದಿಂದ ತಿಳಿಯುತ್ತದೆ! ಈ ಮೂರು ಗ್ರಂಥಗಳೂ ಪ್ರಪಂಚದ ಅತ್ಯುತ್ತಮ ಗ್ರಂಥಗಳಲ್ಲಿ ಸೇರಿದುವು. ಇಂತಹ ಗ್ರಂಥಗಳನ್ನುಳ್ಳ ನಮ್ಮ ಸಾಹಿತ್ಯವು ಸಾಹಿತ್ಯ ಪ್ರಪಂಚದ ಮೇಲು ಮೆಟ್ಟಲನ್ನು ಕಂಡಿರತಕ್ಕುದೆಂಬುದರಲ್ಲಿ ಸಂದೇಹವಿಲ್ಲ. ಈ ಮಹಾ ಗ್ರಂಥಗಳಿಂದ ಕನ್ನಡಕ್ಕೆ ಒಂದು ಪ್ರಶಸ್ತಿ ಬಂದಿರುವುದೇನೋ ನಿಜ. ಆದರೆ ಇದರಿಂದ ನಮ್ಮೆಲ್ಲರ ಕೆಲಸವೂ ಕಷ್ಟವಾಗಿದೆ. ಈ ಗ್ರಂಥಗಳನ್ನು ರಚಿಸಿದವರ ಹೆಸರು ಹೇಳುವ ನಾವು ನಮ್ಮ ಕಾವ್ಯಕ್ಕೆ ಅಲ್ಪ ರೀತಿಯನ್ನು ತರಬಾರದು. ಇನ್ನೊಂದು ವಿಷಯವೇನೆಂದರೆ, ಕೇವಲ Originality, ಎಂದರೆ, ನವೀನತೆ ಎಂಬ ಒಂದು ಭ್ರಮೆಯಲ್ಲಿ ನಾವು ತೀರ ಕಾಡು ಮೆಯ್ದು ಹೋಗಬಾರದು ಎಂಬುದು. ದೃಷ್ಟಿಸಿ ನೋಡಿದರೆ Originality ಎನ್ನುವುದು ಇಲ್ಲವೇ ಇಲ್ಲ; ಇದ್ದರೆ ಅದು ಅಷ್ಟು ದೊಡ್ಡ ವಿಷಯವಲ್ಲ. ನಾನು ಸ್ವತಂತ್ರವಾಗಿ ಬರೆದಿದ್ದೇನೆ, ನಾನು ಯಾರಿಂದಲೂ ಏನನ್ನೂ ಕಲಿಯಲಿಲ್ಲ ಎನ್ನುವವರು "......I am a block-head at first-hand" ಎಂದು ಹೇಳುತಲಿದ್ದಾರೆಂದು ಗಯಟೇ ಎಂಬುವನು ಹೇಳಿದ್ದಾನೆ. ನಾವೆಲ್ಲ

ಇತರರಿಂದ ಕಲಿತೇ ದೊಡ್ಡವರಾಗಿರುವುದು. ಕಲಿತುದನ್ನು ಜೀರ್ಣಿಸಿಕೊಂಡಿದ್ದರೆ ಸಾಕು. ಇಷ್ಟನ್ನು ಮಾಡಿದ ಮೇಲೆ ಇತರರು ಬರೆದಂತೆ ಬರೆದರೂ ಚೆನ್ನಾಗಿ ಬರೆದು ನಮ್ಮ ಸಂಸ್ಕಾರವು ನಮ್ಮ ಕೃತಿಯಲ್ಲಿ ರೂಪುಗೊಳ್ಳುವಂತೆ ಮಾಡಬೇಕು. ಮತ್ತೊಂದು ವಿಷಯವೇನೆಂದರೆ, ಕಾವ್ಯದಲ್ಲಿ ಒಂದು ಸಂಪ್ರದಾಯವಿರುವಂತೆ ಭಾಷೆಯಲ್ಲಿ ಒಂದು ಮರ್ಯಾದೆಯಿದೆ. ಬರೆಯುವವರೆಲ್ಲ ಇದನ್ನು ಸಾವಧಾನವಾಗಿ ತಿಳಿದು ಎಚ್ಚರಿಕೆಯಿಂದ ಬರೆಯಬೇಕು. ನಮ್ಮಲ್ಲಿ ಚೆನ್ನಾಗಿ ಬರೆಯುವವರೂ ಕೂಡ ಸಂಸ್ಕೃತದ 'ರಹಿತ, ವಿಹೀನ' ಎಂಬ ಮಾತುಗಳಿಗೆ ವ್ಯತ್ಯಾಸವೇನು? ಅವು ಎಂಥ ಕಡೆ ಬರಬೇಕು ಎಂದು ಗ್ರಹಿಸಿರುವುದಿಲ್ಲ. ಇದರಂತೆ ನೂರು ವಿಷಯವಿರುತ್ತದೆ. ಭಾಷೆಯ ಮರ್ಯಾದೆಯೆಂದು ಹೇಳಿ, ಹೇಳಿದವರ ಮಾತನ್ನೆಲ್ಲ ಕೇಳಬೇಕಾದುದಿಲ್ಲ. ಆದರೆ ಸ್ವಭಾವವಾಗಿ ಮಾತಿನೊಂದಿಗೆ ಬೆಳೆದು ಬಂದಿರುವ ಮರ್ಯಾದೆಯೊಂದು ಇರುತ್ತದೆ; ಅದನ್ನು ಮೀರಬಾರದು. ಬರೆಯುವವರೆಲ್ಲ ಭಾಷೆಯನ್ನು ಎಚ್ಚರಿಕೆಯಿಂದ ಕಲಿಯಬೇಕು. ಅದರಲ್ಲಿಯೂ ಕವಿಯಾದವನು ಮಾತಿನ ಸ್ವರೂಪವನ್ನು ಚೆನ್ನಾಗಿ ತಿಳಿಯದೆ ಕೆಲಸಕ್ಕೆ ಕೈಹಾಕಲೇ ಬಾರದು.

**ನಮ್ಮ ಸಾಹಿತ್ಯದಲ್ಲಿ ಈಗ ನಡೆಯುತ್ತಿರುವ ಕೆಲಸ.**

ಈಗ ನಮ್ಮ ಸಾಹಿತ್ಯದಲ್ಲಿ ನಡೆಯುತ್ತಿರುವ ಕೆಲಸವೆಂಥದೆಂದು ತಮ್ಮಲ್ಲಿ ಅನೇಕರಿಗೆ ತಿಳಿದೇ ಇದೆ. ನಮ್ಮ ಗ್ರಂಥಕರ್ತರು ಹೊಸ ದಾರಿಯಲ್ಲಿ ಕಾಲಿಟ್ಟಿರುವುದೇನೋ ನಿಜ. ಇದು ಅನಿವಾರ್ಯವಾದ ಮಾರ್ಪಾಡು. ಭರತಖಂಡದಲ್ಲೆಲ್ಲ ಕಾಣುವ ಈ ಪ್ರವೃತ್ತಿಯು ನಮ್ಮಲ್ಲಿಯೂ ತಲೆದೋರಿದೆ. ನಮ್ಮ ಪದ್ಯಕಾವ್ಯವು ಛಂದಸ್ಸಿನ ಹೊಸ ಕಟ್ಟಡಗಳನ್ನು ಕಟ್ಟಿ ನೋಡುತ್ತದೆ. ನಮ್ಮ ಗದ್ಯದಲ್ಲಿ ಅನೇಕ ಶೈಲಿಗಳು ಬೆಳೆದಿವೆ. ನಮ್ಮ ಪದ್ಯವೂ ಗದ್ಯವೂ ಪಾಶ್ಚಾತ್ಯ ಸಾಹಿತ್ಯಗಳ ರೀತಿಯಲ್ಲಿ ಜೀವನದ ಅನೇಕ ವಿಷಯಗಳನ್ನು ವಸ್ತುವಾಗಿ ಸೇರಿಸಿಕೊಂಡಿವೆ. ನಮ್ಮ ಹೊಸ ಕಾವ್ಯದಲ್ಲಿ ಒಂದು ಹೊಸ ಚೈತನ್ಯವು ಕಂಡುಬರುತ್ತಿದೆ. ಇದೆಲ್ಲ ಬಹಳ ಸಂತೋಷದ ವಿಚಾರ. ಹೊಸ ದಾರಿಯಲ್ಲಿ ಅಡಿಯಿಟ್ಟಿರುವ ಈ ಸಾಹಿತ್ಯದ ವಿಚಾರವಾಗಿ ಕೆಲವು ಭಿನ್ನಾಭಿಪ್ರಾಯಗಳಿರುವುದು ಸಹಜ. ನಮ್ಮ ಹೊಸ ಕಾವ್ಯದಲ್ಲಿಯ ಹಲವು ವಿಷಯಗಳು ಅಲ್ಪವಾದುವೆಂದೂ, ಉತ್ತಮ ಕಾವ್ಯಕ್ಕೆ ಯೋಗ್ಯವಾದ ವಸ್ತುಗಳಲ್ಲವೆಂದೂ ಕೆಲವರಿಗೆ ತೋರಬಹುದು. ಬರೆಯುವ ಕತೆಗಳು ನಡೆಯುವ ವಿಷಯವನ್ನು ನಡೆದಂತೆ ಬರೆದಿರುತ್ತವೆ, ಇದರಲ್ಲಿ ಏನು ವಿಶೇಷ ಎಂದು ತೋರಬಹುದು. ಪ್ರಾಸಬಿಟ್ಟಿರುವುದು ಕಾವ್ಯದ ಮೂಲಕ್ಕೇ ಕೇಡನ್ನು ತಂದಿತೆಂದು ಕೆಲವರ ಭಾವನೆ. ಇನ್ನು ಕೆಲವರಿಗೆ ನಮ್ಮ ಭಾಷೆಯ ರೂಪಗಳನ್ನು ನಮ್ಮ ಗ್ರಂಥಕಾರರು ಕೆಡಿಸುತ್ತಾರೆ ಎಂದು ತೋರಬಹುದು. ಸಂಪ್ರದಾಯದ ಭಕ್ತರು ಹೀಗೆನ್ನುವುದು ಆಶ್ಚರ್ಯವಲ್ಲ. ಇಂಗ್ಲೀಷಿನಲ್ಲಿ ಬಿಡಿ ಪ್ರವೃತ್ತಿ ಹೊಸದಾಗಿ ಬಂದಾಗ ಈಗ ನಾವು ಹೇಳುವಂತಹ ಮಾತುಗಳನ್ನು ಅಲ್ಲಿಯ ಸಂಪ್ರದಾಯದ ಭಕ್ತರೂ ಹೇಳಿದರು. ವರ್ಡ್ಸ್‌ವರ್ತ್,

ಕೋಲರಿಡ್ಜ್ ಕವಿಗಳು ಹೊಸ ಶೈಲಿಯನ್ನು ವಾಡಿಕೆಗೆ ತಂದಾಗ ಅವರನ್ನು ಅಲ್ಲಿಯ ವಿಮರ್ಶಕರು ತಕ್ಕ ಮಟ್ಟಿಗೆ ಅಲ್ಲಗಳೆದರು. ಇದು ಯಾವುದೂ ತಪ್ಪಿದುದಲ್ಲ. ಆದರೆ ಅಭಿಪ್ರಾಯದಲ್ಲಿ ಭೇದವಿದ್ದ ಮಾತ್ರಕ್ಕೆ ನಾವು ಒಬ್ಬರನ್ನೊಬ್ಬರು ಬಯ್ಯಬೇಕಾದುದಿಲ್ಲ. ಯಾವನಾದರೂ ಗ್ರಂಥಗಳನ್ನು ಓದುವವರೆಗೆ ಮಾತ್ರ ಭಾಷಾಪ್ರೇಮಿಯಾಗಿರುತ್ತಾನೆ, ಗ್ರಂಥಗಳನ್ನು ಬರೆಯುವುದಕ್ಕೆ ತೊಡಗಿದೊಡನೆ ಅವನು ಭಾಷಾದ್ರೋಹಿಯಾಗುತ್ತಾನೆ ಎಂದು ಹೇಳಲಾಗುವುದೆ? ಭಾಷೆಯಲ್ಲಿ ಪ್ರೇಮವುಳ್ಳವರಲ್ಲವೆ ಭಾಷೆಯಲ್ಲಿ ಕೆಲಸಮಾಡಬೇಕೆನ್ನುವರು? ಅವರು ಏನಾದರೂ ತಪ್ಪುಮಾಡಿದರೂ ಓದುವವರು ಅದನ್ನು ಸ್ವಲ್ಪ ಸೈರಣೆಯಿಂದ ನೋಡಿ, 'ಪಾಪ, ತಪ್ಪಾಯಿತು' ಎನ್ನಬೇಕು; ಅದನ್ನು ಬಿಟ್ಟು ಕಠಿನವಾದ ಭಾಷೆಯಿಂದ ಅವರನ್ನು ಬಡಿಯುವುದಕ್ಕೆ ಹೋಗಬಾರದು. ಇಷ್ಟಕ್ಕೆ, ಬರೆಯುವವನ ಭಾವನೆಯೇ ಸರಿಯಾಗಿರಬಹುದು, ನಮ್ಮದು ತಪ್ಪಾಗಿರಬಹುದು ಎಂದೂ ಅವರು ಎಣಿಸುವುದು ಒಳ್ಳೆಯದು. ಏಕೆಂದರೆ ಹೀಗೂ ಒಂದೊಂದು ಸಲ ಆಗಿದೆ. ಹೀಗಾಗಿಯೇ ಸಾಹಿತ್ಯಗಳು ಬೆಳೆದಿರುವುದು, ಭಾಷೆಗಳು ಮುಂದುವರಿದಿರುವುದು. ಓದುವವರು ಈ ತಾಳ್ಮೆಯನ್ನು ತೋರಬೇಕೆಂದ ಮಾತ್ರಕ್ಕೆ ಗ್ರಂಥಕರ್ತರು ಸಿಕ್ಕಿದ ಹಾಗೆ ಬರೆಯಬಹುದೆಂದು ಅರ್ಥವಲ್ಲ. ಗ್ರಂಥಕರ್ತನು ಎಂಥವನಾಗಿರಬೇಕು, ಎಷ್ಟು ಎಚ್ಚರಿಕೆಯಿಂದ ನಡೆಯಬೇಕೆಂಬುವುದು ಮೊದಲೇ ಹೇಳಿದೆ. ತಮ್ಮ ಮೇಲಿರುವ ಭಾರವನ್ನು ಗ್ರಂಥಕರ್ತರೂ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

**ಗ್ರಂಥಕರ್ತರಿಗೆ ಕೆಲವು ಸೂಚನೆಗಳು**

ನಮ್ಮ ಸಾಹಿತ್ಯದ ಹೊಸ ಗ್ರಂಥಕಾರರು ಏನು ಮಾಡುತ್ತಿದ್ದಾರೆಂದು ತಿಳಿಯದವರು ಹೇಳುವ ಆಕ್ಷೇಪಗಳು ಹೀಗಿರುವಲ್ಲಿ ಗ್ರಂಥಕಾರರೇ ಮನಗಂಡಿರುವ ಕೆಲವು ಕೊರತೆಗಳು ನಮ್ಮಲ್ಲಿವೆ. ಇವುಗಳಲ್ಲಿ ಸಂಪ್ರದಾಯದ ಸಂಕೋಲೆಯಿಂದ ಬಿಡಿಸಿಕೊಂಡು ಬಂದಿರುವವರು ಹೊಸ ಸಂಪ್ರದಾಯವನ್ನೇ ಸಂಕೋಲೆಯನ್ನಾಗಿ ಮಾಡಿಕೊಂಡಿರುವುದು ಮುಖ್ಯವಾದುದು. ನಮ್ಮಲ್ಲಿ ಸಣ್ಣ ಕತೆಗಳು ಆರಂಭವಾಗಿ ಹಲವು ವರುಷಗಳಾದುವು. ಬಾಲ್ಯದ ಪ್ರೇಮ, ಮದುವೆ, ವಿರಹ, ಇವುಗಳನ್ನು ಬಿಟ್ಟು ಬೇರೆ ವಿಷಯಗಳಿಗೆ ಇನ್ನೂ ನಾವು ನಡೆದಿಲ್ಲ; ದೊಡ್ಡ ಕತೆಗಳನ್ನು ಬರೆಯುವುದಕ್ಕೆ ಯಾರೂ ತೊಡಗಿಲ್ಲ; ನಾವೆಲನ್ನು ರಚಿಸುವ ಆಲೋಚನೆಯೇ ನಮ್ಮಲ್ಲಿ ತಲೆದೋರಿದಂತೆ ಕಾಣಲಿಲ್ಲ. ಪದ್ಯದಲ್ಲಿ ವ್ಯಂಜಕ ಗೀತೆಗಳು ವಾಡಿಕೆಗೆ ಬಂದಿವೆ. ಆದರೆ ವ್ಯಂಜನದ ವಿಷಯವು ಜೀವನದಂತೆ ವಿಸ್ತಾರವಾಗಲಿಲ್ಲ; ಎಲ್ಲವೂ ಒಂದೇ ರೀತಿಯವಾಗಿ ಕಾಣುತ್ತಿವೆ. ಬಿಡಿವೃತ್ತವೊಂದು ರೂಪುಗೊಂಡಿತು. ಇನ್ನೂ ನಾವು ಅದನ್ನು ಇಂಗ್ಲೀಷಿನಲ್ಲಿ ಉಪಯೋಗಿಸುವಂತೆ ಹಲವು ವಿಷಯಗಳಿಗೆ ಉಪಯೋಗಿಸಿ ನೋಡಿಲ್ಲ. ಪಾದದ ಅಂತ್ಯದಿಂದ ಸಂಧಿಯನ್ನು ಬಿಟ್ಟು ಬರೆದುದಾಯಿತು; ಇಟ್ಟುಕೊಂಡು ಬರೆದ ಹಿಂದಣ ರೀತಿಯೂ ಬಿಟ್ಟು ಬರೆಯುವ ಈಗಣ ರೀತಿಯೂ ಕಲೆಯುವುದು ಸಾಧ್ಯವೇ

ಎಂದು ಇನ್ನೂ ನಮ್ಮ ಮನಸ್ಸಿಗೇ ನಿರ್ಧಾರವಾಗಿಲ್ಲ. ನಾಟಕವನ್ನು ಬರಿಯ ಗದ್ಯದಲ್ಲಿ ಬರೆದುದಾಯಿತು; ಅದು ನಮ್ಮ ನಾಟಕ ರಂಗವನ್ನು ಇನ್ನೂ ಹಿಡಿದಿಲ್ಲ. ಹಳೆಯ ರೀತಿಯನ್ನು ತೀರ ಬಿಡದೆ ಹೊಸ ರೀತಿಯನ್ನು ಅನುಸರಿಸಿಯೇ ನಾಟಕವನ್ನು ಸಜೀವವನ್ನಾಗಿ ಮಾಡುವ ಪ್ರಯತ್ನ ನಮ್ಮಲ್ಲಿ ನಡೆಯಲೇ ಇಲ್ಲ. ಭಾವದ ವ್ಯಂಜನೆಗೆ ಗೀತೆಯು ಎಷ್ಟು ಒಳ್ಳೆಯ ಸಾಧನವೋ ಉಪನ್ಯಾಸವೂ ಅಷ್ಟೇ ಒಳ್ಳೆಯ ಸಾಧನವೆಂಬುದನ್ನು ನಮ್ಮ ಬರೆಹಗಾರರು ಕಂಡಂತೆ ತೋರುವುದಿಲ್ಲ. ಯಾವ ಸಾಹಿತ್ಯದ ಪರಿಚಯದಿಂದ ನಮ್ಮಲ್ಲಿ ಹೊಸ ದಾರಿಯೊಂದು ಕಂಡಿತೋ ಅದೇ ಸಾಹಿತ್ಯವನ್ನು ನಮ್ಮ ತರುಣ ಲೇಖಕರು ಮುಂದಿಟ್ಟುಕೊಂಡು ಕೆಲಸ ಮಾಡಿದರೆ ಈ ಎಲ್ಲ ರೀತಿಯ ಸಾಹಿತ್ಯ ರೂಪಗಳೂ ವಾಡಿಕೆಗೆ ಬರುವುವು. ಹೊಸ ಹೊಸ ರೀತಿಯ ಕೆಲಸವನ್ನು ಹೊಸ ಹೊಸ ಹುರುಪಿನಿಂದ ಮಾಡಿ ಅದರದರ ಯೋಗ್ಯತೆಯನ್ನು ಕಂಡುಕೊಂಡರಲ್ಲದೆ ನಮ್ಮ ಸಾಹಿತ್ಯವನ್ನು ನಾವು ಮುಂದು ವರಿಸಲಾರೆವು. ಈಗ ಆಗಿರುವ ಯಾವ ಕೆಲಸವೂ ಸಾಹಿತ್ಯದಲ್ಲಿ ಸ್ವತಃಸಿದ್ಧವಾದುದೆಂದು ನಾವು ತಿಳಿಯಬಾರದು. ಪರೀಕ್ಷೆಯ ಅವಸ್ಥೆ ಇನ್ನೂ ಮುಗಿದಿಲ್ಲ. ಹೊಸ ರೂಪಗಳನ್ನಾದರೂ 'ಚೆನ್ನಾಗಿದ್ದರೆ ಸಂತೋಷ, ಇಲ್ಲದಿದ್ದರೆ ಅದು ನಮ್ಮದಲ್ಲ' ಎಂದು ಬಿಡುವ ಧೈರ್ಯವನ್ನು ನಾವು ಬಳೆಯಿಸಬೇಕು. ಹಳೆಯದೆಲ್ಲ ಸಾಧು ಎನ್ನುವುದು ತಪ್ಪು. ಹಾಗೆಯೇ ಹೊಸದೆಲ್ಲ ಸಾಧುವೆನ್ನುವುದೂ ತಪ್ಪು. ಸ್ವಾತಂತ್ರ್ಯವು ಸ್ವಾತಂತ್ರ್ಯವೆಂದು ಕರೆದುಕೊಳ್ಳುವ ದಾಸ್ಯವಾಗಬಾರದು. ಸಾಹಿತ್ಯರಂಗದಲ್ಲಿ ಕೆಲಸಮಾಡುವವರು ಈ ತತ್ತ್ವವನ್ನು ಮನಸ್ಸಿನಲ್ಲಿಡುವುದು ಆವಶ್ಯಕ.

ಒಡನೆಯೇ ಮಾಡಬೇಕಾದ ಕೆಲಸ

ಮಹನೀಯರೆ, ನಮ್ಮ ವಿದ್ಯಾಭ್ಯಾಸದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನವನ್ನು ಕೊಡಿಸುವುದೂ, ಕನ್ನಡಕ್ಕೆ ಎಲ್ಲ ಭಾಷೆಗಳಿಂದ ಉತ್ತಮ ಗ್ರಂಥಗಳನ್ನು ಭಾಷಾಂತರ ಮಾಡುವುದೂ, ಕನ್ನಡ ರಾಷ್ಟ್ರವನ್ನೂ ಭಾಷೆಯನ್ನೂ ಒಂದಾಗಿ ಮಾಡುವುದೂ, ಹೊಸ ಯುಗದ ನಮ್ಮ ಗ್ರಂಥಕರ್ತರು ಉತ್ತಮ ಗ್ರಂಥಗಳನ್ನು ಬರೆದು ನಮ್ಮ ಜನದ ಜೀವನವನ್ನು ಹಿಡಿದು ತಿದ್ದುವುದೂ ಕಾಲಕ್ರಮವಾಗಿ ಆಗುವ ಕೆಲಸ. ಈಗ ಒಡನೆ ಏನು ಮಾಡಬೇಕು ಎಂದು ತಮ್ಮಲ್ಲಿ ಯಾರಾದರೂ ಕೇಳಬಹುದು. ಇದು ನ್ಯಾಯವಾದ ಮಾತಾಗಿದೆ. ಇರುವುದಕ್ಕೆ ಮನೆ ಇಲ್ಲದಿರುವನು ಗಂಧರ್ವ ನಗರವನ್ನು ಕಟ್ಟಿ ಪ್ರಯೋಜನವೇನು? ಈಗ ನಾವು ಒಡನೆಯೇ ಮಾಡಬೇಕಾದ ಕೆಲಸಗಳೂ ಇವೆ. ಅವುಗಳನ್ನು ಕುರಿತು ಎರಡು ಮಾತನ್ನು ಹೇಳುತ್ತೇನೆ. ಈ ಕೆಲಸಗಳಲ್ಲಿ ಮೊದಲನೆಯದು, ನಮ್ಮಲ್ಲಿರತಕ್ಕ ಗ್ರಂಥಕರ್ತರಿಗೆ ಉತ್ತೇಜನ ಕೊಡುವುದು, ಎಂದರೆ ಅವರು ಮಾಡುತ್ತಿರುವ ಕೆಲಸಕ್ಕೆ ಅವರಿಗೆ ತಕ್ಕ ಪ್ರತಿಫಲ ದೊರೆಯುವಂತೆ ಮಾಡುವುದು. ನಮ್ಮಲ್ಲಿ ಹಲವರು ಈಗ ಇತರ ಪಥದಲ್ಲಿ ಜೀವನಮಾಡಿಕೊಂಡು ಜೊತೆಗೆ ಸಾಹಿತ್ಯದಲ್ಲಿ ಕೆಲಸವನ್ನು ಮಾಡುತ್ತಿದ್ದಾರೆ. ಇಂಥವರಿಂದಲೇ ಸಾಹಿತ್ಯಕ್ಕೆ ಸಾಕಾದಷ್ಟು ಸೇವೆಯಾಗುತ್ತದೆನ್ನ

ವುದು ಧ್ರುವ. ಸಾಹಿತ್ಯ ಸೇವೆಯು ಒಂದು ಉಪಾಸನೆ. ಬದುಕನ್ನು ಮುಖ್ಯವಾಗಿ ಬೇರೆಯ ಕೆಲಸಕ್ಕೆ ಕೊಟ್ಟು ಸಾಹಿತ್ಯವನ್ನು ವಿರಾಮ ಕಾಲಕ್ಕೆ ಉಳಿಸಿಕೊಂಡಿರುವವನು ಸಾಹಿತ್ಯದಲ್ಲಿ ಬದುಕನ್ನು ಸಂಪೂರ್ಣವಾಗಿ ಸಾಹಿತ್ಯಕ್ಕೆ ಕೊಡುವವರಿಗೆ ಸಾಧ್ಯವಾದ ಮಟ್ಟವನ್ನು ಏರಲಾರನು. ವಿರಾಮದಲ್ಲಿ ಕೆಲಸ ಮಾಡುವವರಿಂದಲೂ ಒಳ್ಳೆಯ ಕೆಲಸ ನಡೆಯಬಹುದು. ಆದರೆ ಅದು ಜನಕ್ಕೆ ಎಷ್ಟು ಬೇಕೋ ಅಷ್ಟು ಆಗುವುದಿಲ್ಲ. ಇಂದಿಗಲ್ಲದಿದ್ದರೆ ಇನ್ನು ಹತ್ತು ವರುಷಕ್ಕಾದರೂ, ಇಪ್ಪತ್ತು ವರುಷಕ್ಕಾದರೂ ಕನ್ನಡದಲ್ಲಿ ಒಳ್ಳೆಯ ಪುಸ್ತಕಗಳನ್ನು ಬರೆದರೆ ಸಾಮಾನ್ಯವಾಗಿ ಜೀವನಕ್ಕೆ ಸಾಕಾದಷ್ಟು ಪ್ರತಿಫಲ ಸಿಕ್ಕುತ್ತದೆಂಬ ಭರವಸೆ ಬರೆಯುವವರಿಗೆ ಬರಬೇಕು. ಧನವಂತರ ಆಶ್ರಯದಿಂದ ಮಾತ್ರ ಸಾಹಿತ್ಯವು ಬೆಳೆಯುವ ದಿನವಲ್ಲ ಇದು. ಗ್ರಂಥಕಾರನು ಸಮಸ್ತ ಪ್ರಜೆಗಾಗಿ ದುಡಿಯುತ್ತಾನೆ; ಸಮಸ್ತ ಪ್ರಜೆಯೂ ಅವನಿಗೆ ಜೀವನವನ್ನು ಕೊಡಬೇಕು. ಪುಸ್ತಕವನ್ನು ಬರೆದು ಜೀವಿಸುವವರು ಪೊಳ್ಳು ಪುಸ್ತಕಗಳನ್ನು ಬರೆದು ಹಣ ಸಂಪಾದಿಸುವಂತಾದರೆ ಏನು ಮಾಡುವುದು ಎನ್ನಬಹುದು. ಆದರೆ ಈ ಸಂದರ್ಭದಲ್ಲಿ ಹತ್ತು ಜನ ಪೊಳ್ಳು ಪುಸ್ತಕಗಳನ್ನು ಬರೆದು ಧನವನ್ನು ಸಂಪಾದಿಸುವೆವೆಂದರೆ ಒಬ್ಬನಾದರೂ ಕೀರ್ತಿಗಾಗಿ ಒಂದು ಉತ್ತಮವಾದ ಗ್ರಂಥವನ್ನೇ ಬರೆಯುವನು. ನಮ್ಮ ಜನರು ಮುಂದಕ್ಕೆ ಇಂಥವರಿಗೆ ಜೀವನದ ವೇತನವನ್ನು ಕೊಡುವಂತೆ ಆಗಬೇಕಾದರೆ ಈಗ ಅಚ್ಚಿನ ಖರ್ಚು ಏಳುವಂತಾದರೂ ಗ್ರಂಥಕರ್ತರಿಗೆ ಸಹಾಯ ಮಾಡಬೇಕು. ಬರೆದವರಿಗೆಲ್ಲ ಹಿಡಿ ಹೊನ್ನು ಕೊಡಿ ಎಂದು ನಾನು ಹೇಳುವುದಿಲ್ಲ. ಒಳ್ಳೆಯ ಪುಸ್ತಕವೆಂದು ತೋರಿದುದರ ಒಂದೊಂದು ಪ್ರತಿಯನ್ನು ಎಲ್ಲರೂ ಕೊಳ್ಳಿರಿ, ಅಷ್ಟೇ. ಒಬ್ಬನು ಕೊಂಡು ಹತ್ತು ಜನ ಓದಬೇಡಿರಿ, ಅಂಗಡಿಯಲ್ಲಿ ನೋಡಿ ಅಲ್ಲಿಯೇ ಇಡಬೇಡಿರಿ. ನೀವು ಓದಿ ಮುಗಿಸಿರುವ ಪುಸ್ತಕವನ್ನಾದರೂ ಮನೆಯವರಿಗೆಂದು ತಂದುಕೊಡಿರಿ. ನೀವು ಓದಿದಾಗ, ಇದೇನು ಸ್ಕಾಟಿನ ನಾವೆಲಿನ ಹಾಗೆ ಇದೆಯೋ ಎಂದು ತೋರಿದರೂ ಸ್ಕಾಟಿನ ನಾವೆಲನ್ನು ಕಾಣದ ಮನೆಯ ಹೆಂಗಸರಿಗೆ ಮಕ್ಕಳಿಗೆ ಚೆನ್ನಾಗಿರಬಹುದೆಂದು ತೋರುವ ಪುಸ್ತಕದ ಒಂದು ಪ್ರತಿಯನ್ನು ಅವರಿಗೆ ತಂದುಕೊಡಿರಿ. ಈಗ ನಮ್ಮಲ್ಲಿ ಸಾಮಾನ್ಯವಾಗಿ ಒಳ್ಳೆಯ ಪುಸ್ತಕವೆನ್ನುವುದು ಯಾವುದೂ ಎರಡನೆಯ ಮುದ್ರಣಕ್ಕೆ ಬರುವುದೇ ದುಸ್ತರ; ನಾಲ್ಕು ಐದು ಮುದ್ರಣಗಳಿಗೆ ಬರುವುದೆನ್ನುವುದು ಇಲ್ಲವೇ ಇಲ್ಲ. ನಾನು ಇದುವರೆಗೆ ನೋಡಿರುವ ಕನ್ನಡದ ಪುಸ್ತಕಗಳಲ್ಲಿ ಹತ್ತನೆಯ ಮುದ್ರಣಕ್ಕೆ ಬಂದಿರುವ ಪುಸ್ತಕವು ಒಂದೇ: ಅದು ಪಂಡಿತರಿಂದ ಪರಿಶೋಧಿಸಲ್ಪಟ್ಟು ಯಾರೋ ಒಬ್ಬ ಮಹನೀಯರ ಸ್ವಕೀಯ ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟ ಶನಿದೇವರ ಮಾಹಾತ್ಮ್ಯ. ಇನ್ನೊಂದು ಮಾತು: ನಮ್ಮಲ್ಲಿ ಓದಬಲ್ಲ ಜನ ಬಹಳ ಕಡಿಮೆ. ಓದಬಲ್ಲವರು ತಾವು ಓದಿ ಚೆನ್ನಾಗಿದೆಯೆಂದುಕೊಂಡ ಬರೆಹವನ್ನು ಓದಲಾರದವರಿಗೆ ತಿಳಿಸುವುದಕ್ಕೆ ಸಾಧ್ಯವಾದ ಏರ್ಪಾಡುಗಳನ್ನು ಮಾಡಬೇಕು. ಜೈಮಿನಿ ಭಾರತವೂ ಕುಮಾರವ್ಯಾಸ ಭಾರತವೂ ನಮ್ಮ ಜನರಲ್ಲಿ ಹಿಂದೆ ವಾಡಿಕೆಗೆ ಬಂದುದು

ಹೀಗೆಯೇ. ಆ ಕಾವ್ಯಗಳು ವಾಡಿಕೆಗೆ ಬಂದಹಾಗೆಯೇ ನಮ್ಮ ಹೊಸ ಗ್ರಂಥಗಳೂ ವಾಡಿಕೆಗೆ ಬರಬೇಕು; ನಾವು ಅದೇ ಏರ್ಪಾಡನ್ನು ಈಗಲೂ ಮಾಡಬೇಕು. ಹಳೆಯ ಕಾವ್ಯಗಳನ್ನೂ ಹೊಸ ಕಾವ್ಯಗಳನ್ನೂ ಜನರಲ್ಲಿ ಓದಿಸಿ ಜನರ ಸಾಹಿತ್ಯಾಭಿರುಚಿಯು ವೃದ್ಧಿಯಾಗುವಂತೆಯೂ ಶುದ್ಧಿಯಾಗುವಂತೆಯೂ ಯತ್ನಿಸಬೇಕು. ನಮ್ಮಲ್ಲಿ ಇರುವ ಪುಸ್ತಕಗಳು ಜನರಲ್ಲಿ ಬಳಕೆಗೆ ಬಂದಿಲ್ಲ; ಇಂತಹ ಪುಸ್ತಕ ಇದೆ ಎಂಬುದೇ ಜನರಿಗೆ ತಿಳಿದಿಲ್ಲ. ಇದಕ್ಕೆ ಇಂತಹ ಏರ್ಪಾಡು ಆವಶ್ಯಕ.

ನಮ್ಮ ಸೀಮೆಯ ನಾಟಕದ ಸುಧಾರಣೆ

ಜನರ ವಿದ್ಯಾಭ್ಯಾಸಕ್ಕೆ ನಾಟಕದಷ್ಟು ಅನುಕೂಲವಾದ ಸಾಧನವಿಲ್ಲ. ನಮ್ಮ ಸೀಮೆಯ ನಾಟಕ ರಂಗವನ್ನು ಎಷ್ಟು ಬೇಗ ಯಾವ ರೀತಿಯಿಂದ ನಮ್ಮ ಜನರ ಏಳಿಗೆಯ ರಥಕ್ಕೆ ಹೂಡಬಹುದು ಎಂಬುದನ್ನು ಒಡನೆಯೇ ನಾವು ಆಲೋಚಿಸಬೇಕಾಗಿದೆ. ಜನರ ಮನಸ್ಸನ್ನೇ ತಿದ್ದಬೇಕಾದರೆ ನಾಟಕದಷ್ಟು ಅನುಕೂಲವಾದ ಸಾಧನ ಬೇರೆ ಬಂದಿಲ್ಲ. ಈಗ ನಮ್ಮ ನಾಟಕವು ಯಾವುದೋ ಕಾಡುದಾರಿಯಲ್ಲಿ ಬಿದ್ದುಹೋಗಿದೆ. ನಮ್ಮ ನಾಟಕದಲ್ಲಿ ನಾರದನಿಗೆ ಬಂದಿರುವ ಗತಿಯನ್ನೂ, ಕಬೀರದಾಸನ ಭಕ್ತಿಗೆ ಬಂದಿರುವ ವಿಕಾರ ಸ್ವರೂಪವನ್ನೂ, ರಾಮದಾಸನ ಕನಿಕರವು ಚಿತ್ರಿತವಾಗುವ ವಿಚಿತ್ರ ರೀತಿಯನ್ನೂ ನೋಡಿದರೆ ಇದು ವ್ಯಕ್ತವಾಗುವುದು. ಸಿಕ್ಕಿ ಸಿಕ್ಕಿದಾಗ ನಿಂತು ದೀರ್ಘವಾಗಿ ರಾಗಾಲಾಪನಮಾಡುವ ಪಾತ್ರಗಳ ಅನೌಚಿತ್ಯವನ್ನು ಕುರಿತು ಬಹಳ ಹೇಳಬೇಕಾದುದಿಲ್ಲ. ಜನಕ್ಕೆ ಸಂಗೀತ ಬೇಕಾಗಿದೆ; ಎಷ್ಟು ಅವಶ್ಯಕವೋ ಅಷ್ಟನ್ನು ಇಟ್ಟುಕೊಂಡು ಹೆಚ್ಚಾದ ಭಾಗವನ್ನೆಲ್ಲ ಬಿಟ್ಟು ನಾವು ನಾಟಕವನ್ನು ಸುಧಾರಿಸಬೇಕಾಗಿದೆ. ಹಳೆಯ ವಿಷಯಗಳನ್ನೇ ವಸ್ತುವಾಗಿಟ್ಟುಕೊಂಡು ನಿಜವಾದ ಭಕ್ತಿ ಯಾವುದು, ನಿಜವಾದ ಪ್ರಜಾ ವಾತ್ಸಲ್ಯ ಯಾವುದು, ನಿಜವಾದ ನಾರದಸಂಘವನಿರಬಹುದು ಎಂದು ಸಂಸ್ಕೃತವಾದ ದೃಷ್ಟಿಯಿಂದ ತಿಳಿದು ನೋಡುವವರ ದೃಷ್ಟಿಗೆ ಸಂಸ್ಕಾರವಾಗುವಂತೆ ನಾವು ತೋರಿಸಬೇಕಾಗಿದೆ. ಇಂಗ್ಲೀಷಿನಲ್ಲಿ ನಾಟಕವು ಅತ್ಯುನ್ನತ ಸ್ಥಿತಿಗೆ ಬಂದುದಕ್ಕೆ ಮುಖ್ಯ ಕಾರಣಗಳಲ್ಲಿ ಬಿಡಿವೃತ್ತವು ರಂಗದಲ್ಲಿ ಉಪಯೋಗಕ್ಕೆ ಬಂದುದು ಒಂದು. ಈ ವೃತ್ತವು ಗದ್ಯದಂತೆ ಸರಳವಾದ ರೀತಿಯೊಡನೆ ಪದ್ಯದ ನಿಯಮದ ಅತ್ಯವಶ್ಯ ಭಾಗವನ್ನು ಸೇರಿಸುತ್ತದೆ. ಈ ವೃತ್ತದಲ್ಲಿ ಬರೆದು ಹಳೆಯ ವಿಷಯಗಳನ್ನಾದರೂ ಹೊಸ ರೀತಿಯಲ್ಲಿ ಪ್ರತಿಪಾದಿಸುವ ನಾಟಕಗಳು ನಮ್ಮ ರಂಗಕ್ಕೆ ಬೇಕಾಗಿವೆ. ಇವುಗಳನ್ನು ಬರೆಯುವುದು ಹೇಗೋ ಹಾಗೆ ಇಂತಹ ನಾಟಕಗಳನ್ನು ಅಭಿನಯಿಸುವುದೂ ನವೀನ ಸಂಸ್ಕೃತಿಯ ತರುಣರಿಗೆ ಮಾತ್ರ ಸಾಧ್ಯ. ಹಳೆಯ ರೀತಿಯ ನಟರು ಇಂಥ ನಾಟಕಗಳನ್ನು ಸುಲಭವಾಗಿ ಸ್ವೀಕರಿಸುವುದಿಲ್ಲ. ಆದುದರಿಂದ ನಮ್ಮ ನಾಟಕ ರಂಗವನ್ನು ಜನರ ಶ್ರೇಯಸ್ಸಿಗೆ ಸಾಧನವಾಗಿ ಮಾಡುವುದು ನಮ್ಮ ಸುಸಂಸ್ಕೃತ ತರುಣ ಮಂಡಲವನ್ನು ಸೇರಿದ ಕೆಲಸವಾಗಿದೆ.

ಇದಲ್ಲದೆ, ನಾವು ನಮ್ಮ ಸೀಮೆಯ ಆಡಳಿತದಲ್ಲಿ ಸಾಧ್ಯವಾದಲ್ಲೆಲ್ಲ ಕನ್ನಡವನ್ನು ಒಡನೆಯೇ ವಾಡಿಕೆಗೆ ತರಬೇಕು. ಇಂಗ್ಲೀಷಿನಲ್ಲಿ ಕೆಲಸ ನಡೆಯುವ

ಸಂಸ್ಥೆಯಲ್ಲಿ, ನಮ್ಮಲ್ಲಿ ಹಿರಿಯರಾದವರನೇಕರು ಆ ಭಾಷೆಯ ಪರಿಚಯವಿಲ್ಲದ ಕಾರಣ ಭಾಗಿಗಳಾಗಲಾರರು. ಇಂಥವರ ಪ್ರಪಂಚ ಜ್ಞಾನದ

ಆಡಳಿತದಲ್ಲಿ ಕನ್ನಡ

ಫಲವು ನಮ್ಮ ಆಡಳಿತಕ್ಕೆ ಸಿಕ್ಕಬೇಕಾದರೆ ಕೆಲಸವೆಲ್ಲ ಕನ್ನಡದಲ್ಲಿ ನಡೆಯಬೇಕು. ಕಾಯಿದೆ ಕಾನೂನುಗಳೂ ಕನ್ನಡದಲ್ಲಿ ಮುಖ್ಯವಾಗಿ ಪ್ರಚುರವಾಗಬೇಕು. ಅವು ಆಗುವುದು ಜನರಿಗಾಗಿ, ಅವು ಇರುವುದು ಅವರಿಗೆ ತಿಳಿಯದ ಭಾಷೆಯಲ್ಲಿ. ಇದರಿಂದ ಯಾವ ಪ್ರಯೋಜನವೂ ಇಲ್ಲ. ನ್ಯಾಯಾಸ್ಥಾನಗಳಲ್ಲಂತೂ ಇಂಗ್ಲೀಷಿನ ವ್ಯವಹರಣೆಯು ಕೇವಲ ಅನುಚಿತವೆಂದೇ ಹೇಳಬೇಕು. ದೂರು ಹೊತ್ತುಕೊಂಡು ನ್ಯಾಯಾಧೀಶನ ಮುಂದೆ ನಿಂತಿರುವವನ ಮೇಲೆ ದೂರನ್ನು ಬರೆಯುವುದು ಇಂಗ್ಲೀಷಿನಲ್ಲಿ, ಅದನ್ನು ಕುರಿತು ರುಜುವಾತನ್ನು ಬರೆದುಕೊಳ್ಳುವುದು ಇಂಗ್ಲೀಷಿನಲ್ಲಿ; ಆಮೇಲೆ ಅದನ್ನು ಓದಿ ಅವನಿಗೆ ಅರ್ಥ ಹೇಳಬೇಕು. ಲಾಯರುಗಳ ವಾದ ಇಂಗ್ಲೀಷಿನಲ್ಲಿ, ತೀರ್ಪು ಇಂಗ್ಲೀಷಿನಲ್ಲಿ. ಇದೆಲ್ಲ ತೀರ ಹಾಸ್ಯಾಸ್ಪದವಾಗಿದೆ. ಸಂಬಂಧಪಟ್ಟ ಕೆಲಜನಕ್ಕೆ ತೊಂದರೆಯಾಗುವುದು ಮಾತ್ರವಲ್ಲದೆ ಇದರಿಂದ ನಮಗೆ ಇನ್ನೊಂದು ನಷ್ಟವಿದೆ. ಕೋರ್ಟು ಕಚೇರಿಗಳು ವಯಸ್ಸಾದವರಿಗೆ ನಾಗರಿಕತೆಯ ಕೆಲಸದ ವಿಷಯದಲ್ಲಿ ಪಾಠಶಾಲೆಗಳು. ಇವುಗಳಿಂದ ನಾಗರಿಕನ ಕರ್ತವ್ಯವೆಂಥದೆಂಬ ಜ್ಞಾನವು ಹಲ ರೀತಿಯಲ್ಲಿ ಜನರಲ್ಲಿ ಹರಡುತ್ತದೆ. ಈ ಸಂಸ್ಥೆಗಳಲ್ಲಿ ಕೆಲಸವು ಇಂಗ್ಲೀಷಿನಲ್ಲಿ ನಡೆಯುವುದರಿಂದ ನಮ್ಮ ಜನಕ್ಕೆ ಈ ಉಪಯೋಗವು ಇಲ್ಲದಂತಾಗಿದೆ. ಎಲ್ಲ ಜನರ ಜ್ಞಾನದ ಫಲವನ್ನೂ ಆಡಳಿತವು ಪಡೆಯುವುದೂ, ಎಲ್ಲ ಜನಕ್ಕೂ ಆಡಳಿತದ ಸ್ವರೂಪವು ತಿಳಿಯುವುದೂ ರಾಜ್ಯದ ಏಳಿಗೆಯ ಮೂಲತತ್ತ್ವಗಳು. ನಾವು ಈ ತತ್ತ್ವಗಳನ್ನು ಸಾಧಿಸಬೇಕಾದರೆ ಕನ್ನಡ ನಾಡಿನ ಆಡಳಿತದ ಕೆಲಸವೆಲ್ಲ ಕನ್ನಡದಲ್ಲಿ ನಡೆಯುವಂತೆ ಮಾಡಬೇಕು.

ಉಪಸಂಹಾರ

ಮಹನೀಯರೆ, ಒಂದಾನೊಂದು ಕಾಲದಲ್ಲಿ ಭಾರತವರ್ಷದ ಜೀವನ ವಾಹಿನಿಯು ಹೊಳೆದುಂಬಿ ಎರಡು ದಡವನ್ನೂ ಮುಟ್ಟಿ ಹರಿಯುತ್ತಿತ್ತು. ದೇಶದಲ್ಲೆಲ್ಲ ಹರಡಿರುವ ಶಿಲ್ಪ, ಚಿತ್ರಗಳಿಂದ, ಎಲ್ಲೆಡೆಯೂ ಕಾಣುವ ಕಾವ್ಯಗೀತಗಳಿಂದ, ಎಲ್ಲ ಜನದಲ್ಲಿಯೂ ಹರಡಿರುವ ತತ್ತ್ವಜ್ಞಾನ ವಿನಯದಿಂದ ಇದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಪೂರ್ಣ ಪ್ರವಾಹದ ಜೀವನ ಸಂಪತ್ತಿನಲ್ಲಿ ಕರ್ಣಾಟಕವು ಇನ್ನು ಯಾವ ನಾಡಿಗಿಂತಲೂ ಕಡಿಮೆಯಿಲ್ಲದೆ ಭಾಗಿಯಾಗಿತ್ತು ಎಂದು ನಮ್ಮ ಸೀಮೆಯ ಕಲೆಯಿಂದಲೂ ಇತಿಹಾಸದಿಂದಲೂ ಕಾಣುತ್ತದೆ. ಅಂದು ಹಾಗೆ ತುಂಬಿ ಹರಿದ ಜನಜೀವನವು ಇಂದು ನೋಡಿದರೆ ವಿಶಾಲವಾದ ಮರಳ ಶಯ್ಯೆಯಲ್ಲಿ ಬಹು ಭಾಗವನ್ನೆಲ್ಲ ಬಿಟ್ಟು ಏಕದೇಶವಾಗಿ ಹರಿಯುವ ನದಿಯಂತೆ ಸಂಕುಚಿತವಾಗಿ ಹೋಗಿದೆ. ಈ ವಾಹಿನಿಯು ಪುನಃ ಪೂರ್ಣ ಪ್ರವಾಹವಾಗಬೇಕು. ಇದಕ್ಕೆ ಎಲ್ಲ ನಾಡ ಜನರೂ ಸೇರಿ ಕೆಲಸಮಾಡಬೇಕಾಗಿದೆ. ಕನ್ನಡ ನಾಡು ಸುಂದರವಾದ ನಾಡು, ಕನ್ನಡ ಮಾತು ಸುಂದರವಾದ ಮಾತು; ಕನ್ನಡ ಸಾಹಿತ್ಯವು ಈ ಸುಂದರವಾದ ನಾಡಿನ ಈ ಸುಂದರವಾದ ಮಾತಿನ ವ್ಯಕ್ತಿತ್ವದಿಂದ ಭಾರತ ಭೂಮಿಯ ಹೆಮ್ಮೆಗೆ ಮೆರುಗನ್ನು

ಕೊಡಬೇಕಾಗಿದೆ. ನಮಗೆ ಬೇರೆ ಭಾಷೆಗಳ ವಿಷಯದಲ್ಲಿ ಹಗೆಯಿಲ್ಲ, ಅಸೂಯೆ ಯಿಲ್ಲ. ಅವು ಚೆನ್ನಾಗಿ ಬಾಳಲಿ ಎಂದೇ ನಮ್ಮ ಆಸೆ. ಅವೂ ಚೆನ್ನಾಗಿ ಬಾಳ ಬೇಕು, ನಮ್ಮ ಭಾಷೆಯೂ ಚೆನ್ನಾಗಿ ಬಾಳಬೇಕು; ಈ ಚೆನ್ನವಾದ ಬಾಳೆಂಬುದು ವಿಶಾಲವಾಗಬೇಕು. ಪೂರ್ವದಲ್ಲಿ ಯಾವ ನಿತ್ಯ ನಿಯಮಗಳನ್ನು ಹಿಡಿದು ನಮ್ಮ ದೇಶವು ಮುಂದುವರಿಯಿತೆಂಬುದನ್ನೂ, ಯಾವ ನಿಯಮಗಳ ಉಲ್ಲಂಘನೆಯಿಂದ ಅದಕ್ಕೆ ಅಮಂಗಳ ಪ್ರಾಪ್ತವಾಯಿತೆಂಬುದನ್ನೂ, ಮತ್ತೆ ಏನು ಮಾಡಿದರೆ ನಾವು ಉದ್ಧಾರವಾಗಬಹುದೆಂಬುದನ್ನೂ ಆಲೋಚಿಸಿ ಎಲ್ಲರಿಗೂ ತಿಳಿಯುವಂತೆ ಹೇಳುವುದು ಸಾಹಿತ್ಯ ಕಲೋಪಾಸಕರ ಕೆಲಸ. ಈ ಕೆಲಸವನ್ನು ತಾವು ಕೈಕೊಂಡಿದ್ದೀರಿ. ತಾವು ಇದರಲ್ಲಿ ಕೃತಕೃತ್ಯರಾಗಬೇಕೆಂದು ನಾನು ಹಾರೈಸುತ್ತೇನೆ.

ಮಹನೀಯರೆ, ಈ ಭಾಷಣವು ಬಹು ದೀರ್ಘವಾಗಿಹೋಯಿತು. ಇನ್ನು ನಾನು ತಮ್ಮ ಕಾಲವನ್ನು ತೆಗೆದುಕೊಳ್ಳುವುದಿಲ್ಲ. ಈ ಮಧ್ಯೆ ನಾನು ಹೇಳಿರುವ ಮಾತುಗಳಲ್ಲಿ ತಮ್ಮಲ್ಲಿ ಯಾರಿಗಾದರೂ ಮನಸ್ಸಿಗೊಪ್ಪದ ಮಾತು ಕೆಲವು ಇರ ಬಹುದು. ಹಾಗೇನಾದರೂ ಇದ್ದರೆ ಅಂಥ ಮಾತು ತಾವೆಲ್ಲ ತೋರಿರುವ ಅತ್ಯಧಿಕ ವಿಶ್ವಾಸದಿಂದುಂಟಾದ ಸಲಿಗೆಯಿಂದ ಬಂದಿತೆಂದು ಭಾವಿಸಿ ಮನ್ನಿಸಿರಿ. ಅನೇಕ ಮಹನೀಯರು ತನ್ನ ಸೇವೆಗಾಗಿ ಸೇತುವೆಯನ್ನು ಕಟ್ಟುತ್ತಿರುವಲ್ಲಿ ಸ್ವಲ್ಪ ದೂಳನ್ನು ತಂದು ಕೊಡವಿದ ಅಳಿಲೊಂದನ್ನು ಹಿಡಿದು ಕನ್ನಡ ನಾಡು ಇಂದದರ ಬೆನ್ನನ್ನು ತಡವಿದೆ. ಈ ಪ್ರೇಮದ ಗುರುತು ಇನ್ನೆಂದೆಂದಿಗೂ ನನ್ನ ಬೆನ್ನಮೇಲೆ ನಿಲ್ಲುವುದು. ಅದಕ್ಕೆ ಸದಾ ಕಾಲದಲ್ಲಿಯೂ ಅರ್ಹನಾಗಿರುವಂತೆ ನನ್ನ ಜೀವನ ವನ್ನು ಭಗವಂತನು ತಿದ್ದಲಿ. ಇನ್ನು, ಕನ್ನಡ ನಾಡು ತನ್ನ ಮಕ್ಕಳಿಂದ ಸದಾ ಕಾಲದಲ್ಲಿಯೂ ಉತ್ತಮವಾದ ಸೇವೆಯನ್ನೇ ಪಡೆಯುವಂತಾಗಲೆಂದೂ ಈ ನಮ್ಮ ನಾಡು, ನಮ್ಮ ಮಾತು, ನಮ್ಮ ಜನಕ್ಕೆ ಶುಭವಾಗಲೆಂದೂ ನಾವು ಭಾರತವರ್ಷದ ದೇಶಗಳಲ್ಲಿಯೂ ಪ್ರಪಂಚದ ಜನಗಳಲ್ಲಿಯೂ ತಲೆಯೆತ್ತಿಕೊಂಡು ನಡೆಯು ವಂತಾಗಲೆಂದೂ ತಮ್ಮೆಲ್ಲರ ಪರವಾಗಿ ಸರ್ವಾಂತರ್ಯಾಮಿಯೂ ಸರ್ವ ಶಕ್ತನೂ ಕೃಪಾಸಾಗರನೂ ಆದ ಭಗವಂತನನ್ನು ಪ್ರಾರ್ಥಿಸಿ ಈ ಭಾಷಣವನ್ನು ಮುಗಿಸುತ್ತೇನೆ.

---

# ಕರ್ಣಾಟಕ ಸಾಹಿತ್ಯ ಪರಿಷತ್ತು

ಸನ್ ೧೯೨೯ನೆಯ ಇಸವಿ ಮೇ ತಿಂಗಳು ೧೫ನೆಯ ತಾರೀಖು ಬುಧವಾರ ಪ್ರಾತಃಕಾಲ ೭॥ ಗಂಟೆಗೆ ಬೆಳಗಾಂವಿಯ ಸರದಾರ ಹೈಸ್ಕೂಲ್ ಹಾಸ್ಟಲಿನ ವಾಚನಾಲಯದಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನದ ಕಾರ್ಯ ವಿವರ.

## ಅಧಿವೇಶನಕ್ಕೆ ಬಂದಿದ್ದ ಸದಸ್ಯರು

೧. ಮ॥ ರಾ॥ ಗೆಜ್ಜಿ ಕೃಷ್ಣರಾಯರು, ಬಿ.ಎ., ಎಲ್‌ಎಲ್.ಬಿ. (ಬೆಳಗಾಂವಿ)
೨. ,, ಮುದವೇಡಕರ್ ಕೃಷ್ಣರಾಯರು (ಬೆಳಗಾಂವಿ)
೩. ,, ನಾರಾಯಣಸ್ವಾಮಿರಾವ್ ಬೋಕೂರರು, ಬಿ.ಎ., ಎಲ್‌ಎಲ್.ಬಿ. (ಬೆಳಗಾಂವಿ)
೪. ,, ರಂಗಪ್ಪ ಭೀಮಪ್ಪ ಪೋದ್ದಾರರು, ಬಿ.ಎ. (ಕಾರವಾರ)
೫. ,, ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ (ಕೊಪ್ಪಳ)
೬. ,, ರಾಘವೇಂದ್ರರಾವ್ ಚಾಕಲಬ್ಬಿ (ಕೊಪ್ಪಳ)
೭. ,, ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)
೮. ,, ಎಚ್. ಚೆನ್ನಕೇಶವ ಅಯ್ಯಂಗಾರ್ಯರು (ಧಾರವಾಡ)
೯. ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ; ಬಿ.ಎ. (ಧಾರವಾಡ)
೧೦. ,, ನಾರಾಯಣರಾವ್ ದೇಶಪಾಂಡೆ, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೧೧. ,, ನಾರಾಯಣ ಶ್ರೀನಿವಾಸ ರಾಜಪುರೋಹಿತರು (ಧಾರವಾಡ)
೧೨. ,, ವಾಮನರಾವ್ ಬಿ. ಧಾರವಾರಕರ್, ಬಿ.ಎ. (ಧಾರವಾಡ)
೧೩. ,, ಆಲೂರು ಬಿ. ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೧೪. ,, ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್‌ಎಲ್.ಬಿ. (ಹುಬ್ಬಳ್ಳಿ)
೧೫. ,, ಕೇಶವ ಶರ್ಮಾ ಗಲಗಲಿ (ಗಲಗಲಿ)
೧೬. ,, ಕೌಜಲಗಿ ಶ್ರೀನಿವಾಸರಾಯರು, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)
೧೭. ,, ತಿರುಮಲೆ ತಾತಾಚಾರ್ಯ ಶರ್ಮರು (ಬೆಂಗಳೂರು)
೧೮. ,, ಕಡಬದ ನಂಜುಂಡ ಶಾಸ್ತ್ರಿಗಳು (ಬೆಂಗಳೂರು)
೧೯. ,, ಎ. ಎನ್. ನರಸಿಂಹಯ್ಯನವರು, ಬಿ.ಎ., ಎಲ್.ಟಿ. (ಬೆಂಗಳೂರು)
೨೦. ,, ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ. (ಬೆಂಗಳೂರು)
೨೧. ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. (ಬೆಂಗಳೂರು)
೨೨. ,, ಎನ್. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., ಗೌ॥ ಕಾರ್ಯದರ್ಶಿ (ಬೆಂಗಳೂರು)
೨೩. ,, ವಿ. ಸೀತಾರಾಮಯ್ಯನವರು, ಎಂ.ಎ. (ಬೆಂಗಳೂರು)
೨೪. ,, ಎಸ್. ಜಿ. ಬಿಂದೂರಾಯರು (ಮೈಸೂರು)

೨೫. ಮ|| ರಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ. (ಮೈಸೂರು)
೨೬. ,, ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಮೈಸೂರು)
೨೭. ,, ಸಿ. ವೆಂಕಟರಮಣ ಶಾಸ್ತ್ರಿಗಳು (ಚಾಮರಾಜನಗರ)
೨೮. ,, ಎಚ್. ಹನುಮಂತರಾಯರು (ಮಂದಗೆರೆ)
೨೯. ,, ತಿರುಮಲೆ ಶ್ರೀನಿವಾಸಾಚಾರ್ಯರು (ಹಾಸನ)

೧. ಮ|| ರಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರನ್ನು ಸಭಾಪತಿಗಳನ್ನಾಗಿ ಚುನಾಯಿಸಿ ಕಾರ್ಯಕ್ರಮವನ್ನು ಆರಂಭಿಸುವುದಕ್ಕೆ ಮೊದಲು, ಪರಿಷತ್ತಿನ ಸದಸ್ಯರನ್ನಾಗಿ ಸೇರಿಸಿಕೊಳ್ಳಬೇಕೆಂದು ಬಂದಿದ್ದ ಸಭ್ಯರ ದರಖಾಸ್ತುಗಳನ್ನು ಪರಿಶೀಲಿಸಿ ಈ ಕೆಳಗೆ ನಮೂದಿಸಿರುವ ಸಭ್ಯರನ್ನು ಪರಿಷತ್ತಿನ ಸದಸ್ಯರನ್ನಾಗಿ ಸೇರಿಸಿಕೊಳ್ಳಲಾಯಿತು :—

೧. ಮ|| ರಾ|| ಎ. ಎಸ್. ನರಸಿಂಹಯ್ಯನವರು, ಬಿ.ಎ., ಎಲ್.ಟಿ. (ಬೆಂಗಳೂರು)
೨. ,, ಎಸ್. ಜಿ. ಬಿಂದೂರಾಯರು (ಮೈಸೂರು)
೩. ,, ಮೊಹರೆ ಹನುಮಂತರಾಯರು (ಬಿಜಾಪುರ)
} ಸಾಧಾರಣ ಸದಸ್ಯರು
೪. ,, ಎ. ಸದಾಶಿವ್ (ಮೈಸೂರು) (ಆಜೀವ ಸದಸ್ಯರು)

೨. ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಿಭವ ಸಂವತ್ಸರದ ವರದಿಯನ್ನು ಮೊದಲೇ ಸಮ್ಮೇಳನದಲ್ಲಿ ಓದಿದ್ದುದರಿಂದ ಮರಳಿ ಅದನ್ನು ಓದ ಕೆಲಸವಿಲ್ಲವೆಂದೂ ವರದಿಯನ್ನು ಅಂಗೀಕರಿಸಬಹುದೆಂದೂ ಮ|| ರಾ|| ರಾಘವೇಂದ್ರರಾವ್ ಚಾಕಲಬ್ಬಿಯವರು ಸೂಚಿಸಿದುದನ್ನು ಮ|| ರಾ|| ಆಲೂರು ವೆಂಕಟರಾಯರು ಅನುಮೋದಿಸಿದರು. ಈ ಸೂಚನೆಯನ್ನು ಏಕ ಕಂಠದಿಂದ ಒಪ್ಪಿಕೊಳ್ಳಲಾಯಿತು.

೩. ಆಡಿಟರವರಿಂದ ಪರಿಶೋಧಿಸಲ್ಪಟ್ಟು ವರದಿಯಲ್ಲಿ ಕೊಟ್ಟಿರುವ ಪರಿಷತ್ತಿನ ವಿಭವ ಸಂವತ್ಸರದ ಆಯ ವ್ಯಯದ ಪಟ್ಟಿಯನ್ನು ಓದಿದನಂತರ ಅದನ್ನು ಅಂಗೀಕರಿಸಬಹುದೆಂದು ಮ|| ರಾ|| ಪಿ. ಬಿ. ಧಾರವಾರಕರರು ಸೂಚಿಸಿದರು. ಮ|| ರಾ|| ಆಲೂರು ವೆಂಕಟರಾಯರವರ ಅನುಮೋದನೆಯಾದ ಮೇಲೆ ಈ ಪಟ್ಟಿಯು ಏಕ ಕಂಠತೆಯಿಂದ ಅಂಗೀಕೃತವಾಗಿ, ಆಯ ವ್ಯಯ ಶೋಧಕರಾದ ಮ|| ರಾ|| ಸಿ. ಕೆ. ವೆಂಕಟರಾಮಯ್ಯನವರಿಗೆ ವಂದನೆಗಳನ್ನು ಒಪ್ಪಿಸಲಾಯಿತು.

೪. ಶುಕ್ಲ ಸಂವತ್ಸರದ (೧೯೨೯–೩೦) ಆಯ ವ್ಯಯದ ಅಂದಾಜು ಪಟ್ಟಿಯನ್ನು ಗೌರವ ಕಾರ್ಯದರ್ಶಿಯವರು ಓದಿ ಹೇಳಿದನಂತರ ಅಂದಾಜನ್ನು ಅಂಗೀಕರಿಸಬಹುದೆಂದು ಮ|| ರಾ|| ಪಿ.ಬಿ. ಧಾರವಾರಕರರು ಸೂಚಿಸಲು ಅದನ್ನು ಮ|| ರಾ|| ರಾಘವೇಂದ್ರರಾವ್ ಚಾಕಲಬ್ಬಿಯವರು ಅನುಮೋದಿಸಿದರು. ಈ ಸೂಚನೆಯನ್ನು ಏಕ ಕಂಠತೆಯಿಂದ ಅಂಗೀಕರಿಸಲಾಯಿತು (ಈ ಪಟ್ಟಿಯನ್ನು ೧೨೮ನೆಯ ಪುಟದಲ್ಲಿ ಕೊಟ್ಟಿದೆ).

೫. ಮ|| ರಾ|| ಟಿ. ಟಿ. ಶರ್ಮರು ಸೂಚಿಸಿದ ಗೊತ್ತುವಳಿಗಳು :—

೧. ಪರಿಷತ್ತಿನ ಸಾಧಾರಣ ಸದಸ್ಯರು ಕೊಡಬೇಕಾದ ೬ ರೂಪಾಯಿಗಳ ವಾರ್ಷಿಕ ಚಂದಾ ಹಣದಲ್ಲಿ ೪ ರೂಪಾಯಿಗಳನ್ನು ಪರಿಷತ್ಸದಸ್ಯತ್ವದ ಚಂದಾ ಹಣವೆಂದು ಭಾವಿಸತಕ್ಕದ್ದು.

೨. ಪರಿಷತ್ಪತ್ರಿಕೆಯ ಚಂದಾದಾರರಾಗಲು, ಅಥವಾ ಆಗದಿರಲು ಪ್ರತಿ ಸಾಧಾರಣ ಸದಸ್ಯನಿಗೂ ಪೂರ್ಣ ಸ್ವಾತಂತ್ರ್ಯವನ್ನು ಕೊಡತಕ್ಕದ್ದು.

೩. ಸಾಧಾರಣ ಸದಸ್ಯರು ಯಾರಾದರೂ ತಮ್ಮನ್ನು ಆಜೀವ ಸದಸ್ಯರನ್ನಾಗಿ ಪರಿವರ್ತಿಸಬೇಕೆಂದು ಕಾರ್ಯನಿರ್ವಾಹಕ ಸಭೆಯನ್ನು ಪ್ರಾರ್ಥಿಸಿದಲ್ಲಿ ಅಂತಹವರು ಸಲಿಸುತ್ತಿರುವ ವಾರ್ಷಿಕ ಚಂದಾ ಹಣವು ಆಜೀವ ಸದಸ್ಯತ್ವಕ್ಕೆ ನಿರ್ಧರಿಸಿರುವ ಹಣದಷ್ಟಾದ ಕೂಡಲೆ, ಅಥವಾ ಬಾಕಿ ಹಣವನ್ನು ಅವರು ಸಲಿಸಿದ ಕೂಡಲೆ ಅವರನ್ನೂ ಆಜೀವ ಸದಸ್ಯರೆಂದು ಎಣಿಸ ತಕ್ಕದ್ದು.

೪. ಈ ಗೊತ್ತುವಳಿಗಳಿಗನುಗುಣವಾಗಿ ಪರಿಷತ್ತಿನ ನಿಯಮಗಳಲ್ಲಿ ತಿದ್ದುಪಡಿ ಮಾಡತಕ್ಕದ್ದು.

ಇವನ್ನು ಮ|| ರಾ|| ಶರ್ಮರವರು ಹಿಂದಕ್ಕೆ ತೆಗೆದುಕೊಂಡರು.

೬. ಮ|| ರಾ|| ಆಲೂರು ವೆಂಕಟರಾಯರವರು ಸೂಚಿಸಿದ ಗೊತ್ತುವಳಿಗಳು :—

೧. ಬೆಂಗಳೂರಿನ ಹೊರಗಿರುವ ಸದಸ್ಯರು ಮತಗಳನ್ನು (ವೋಟುಗಳನ್ನು) ಕೊಡುವ ಹಕ್ಕಿನ ವಿಷಯ.

೨. ಬೆಳಗಾಂವಿ ಮುಂತಾದ ಪ್ರದೇಶಗಳಲ್ಲಿ ಪ್ರಚಾರಕರನ್ನು ನೇಮಿಸುವ ವಿಷಯ.

೩. ಅಖಿಲ ಕರ್ಣಾಟಕಕ್ಕೆ ಒಂದು ವಿಶ್ವವಿದ್ಯಾಲಯವು ಇರಬೇಕು; ಮತ್ತು ಈಗಿನ ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ಣಾಟಕದ ವಿದ್ಯಾಲಯವನ್ನಾಗಿ ಮಾರ್ಪಡಿಸುವುದಕ್ಕೆ ಪ್ರಯತ್ನಿಸಬೇಕು. ಅದಕ್ಕೆ, ಆ ಪ್ರಕಾರ ಪ್ರಯತ್ನಗಳನ್ನು ಕುರಿತು, ಕೆಳಗಿನ ಸದಸ್ಯರದೊಂದು ಮಂಡಳವಿರಬೇಕು. ಈ ಮಂಡಳದ ವೆಚ್ಚಕ್ಕಾಗಿ ಈ ಬರುವ ವರ್ಷ ೨೦೦ ರೂಪಾಯಿಗಳನ್ನು ಮಂಜೂರು ಮಾಡಬೇಕು.—

ಸದಸ್ಯರು

೧. ಮ|| ರಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ.
೨. ಡಾ|| ನಾಡಿಗೇರ ಯಶವಂತರಾಯರು
೩. ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.
೪. ,, ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ.
೫. ,, ಸಖ್ರೆ

ಮತ್ತು ಈ ಮಂಡಳಕ್ಕೆ ಶ್ರೀ ಆಲೂರು ವೆಂಕಟರಾಯರು ಮತ್ತು ಬಸವನಹಾಳ—ಇವರು ಕಾರ್ಯದರ್ಶಿಗಳಾಗಿರಬೇಕು.

೪. ಉದಾತ್ತ ಗ್ರಂಥಗಳನ್ನು ಬರೆಯಿಸಿ ಪ್ರಸಿದ್ಧಪಡಿಸುವುದಕ್ಕೆ ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬುದನ್ನು ಆಲೋಚಿಸಿ ಸೂಚಿಸುವುದಕ್ಕಾಗಿ ಕೆಳಗಿನ ಸದಸ್ಯರ ಉಪ ಮಂಡಳವು ಇರಬೇಕು. ಆ ಮಂಡಳವು ಮೂರು ತಿಂಗಳೊಳಗಾಗಿ ಕಾರ್ಯಕಾರಿ ಮಂಡಳಕ್ಕೆ ವರದಿಯನ್ನು ಒಪ್ಪಿಸಬೇಕು; ಮತ್ತು ಕಾರ್ಯಕಾರಿ ಮಂಡಳದವರು ಆ ಸೂಚನೆಗಳನ್ನು ಕಾರ್ಯತಃ ಫಲಕಾರಿಯಾಗುವಂತೆ ಪ್ರಯತ್ನಿಸಬೇಕು.—

ಸದಸ್ಯರು

೧. ಮ॥ ರಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ.

೨. ,, ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

೩. ,, ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ.

೪. ,, ರಂಗರಾವ್ ದಿವಾಕರರು

೫. ,, ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ.

ಈ ಮಂಡಲಕ್ಕೆ ಮ॥ ರಾ॥ ಎಸ್. ವೆಂಕಟೇಶಯ್ಯಂಗಾರ್ಯರು ಕಾರ್ಯದರ್ಶಿಗಳಾಗಿರಬೇಕು.

ಮ॥ ರಾ॥ ಆಲೂರರವರು ಈ ಸೂಚನೆಗಳನ್ನು ಹಿಂದಕ್ಕೆ ತೆಗೆದುಕೊಂಡರು.

೭. ಮ॥ ರಾ॥ ನಾರಾಯಣ ಶ್ರೀನಿವಾಸ ರಾಜಪುರೋಹಿತರಿಂದ ಬಂದ ಸೂಚನೆ:—

ಪರಿಷತ್ತಿನ ೧೩ನೆಯ ನಿಬಂಧನೆಯಲ್ಲಿ ತಿದ್ದುಪಾಟು:—

"ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರು ಯಾರಾಗಲಿ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನಕ್ಕೆ ಬರಲು ಅನುಕೂಲವಿಲ್ಲದಿದ್ದಾಗ ಅವರು ತಮ್ಮ ಅಭಿಮತವನ್ನು ಗೌರವ ಕಾರ್ಯದರ್ಶಿಯವರಿಗೆ ಅಧಿವೇಶನವು ನಡೆಯುವುದಕ್ಕೆ ಎರಡು ದಿನ ಮುಂಚಿತವಾಗಿಯೇ ತಲುಪುವಂತೆ ಬರೆಹ ಮೂಲಕವಾಗಿ ತಿಳಿಸತಕ್ಕದ್ದು."

ಮ॥ ರಾ॥ ರಾಜಪುರೋಹಿತರು ಈ ಗೊತ್ತುವಳಿಯನ್ನು ಹಿಂದಕ್ಕೆ ತೆಗೆದುಕೊಂಡರು.

೮. ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಚುನಾವಣೆ:—

೧. ಮ॥ ರಾ॥ ವಿ. ಸೀತಾರಾಮಯ್ಯನವರನ್ನೂ ಮ॥ ರಾ॥ ರಾಜಪುರೋಹಿತರನ್ನೂ ಮತಗಳ (ವೋಟುಗಳ) ಎಣಿಕೆಗೆ ನೇಮಿಸಲಾಯಿತು. ಇವರು ಮತಗಳನ್ನೆಣಿಸಿ ಕೊಟ್ಟ ಪಟ್ಟಿಯಿಂದ, ಈ ಕೆಳಗೆ ಕಂಡ ಸದಸ್ಯರು ಚುನಾಯಿಸಲ್ಪಟ್ಟರು:—

ಮೈಸೂರು ಪ್ರಾಂತಕ್ಕೆ—

೧. ಮ॥ ರಾ॥ ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. (ಬೆಂಗಳೂರು)

೨. ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. (ಬೆಂಗಳೂರು)

೩. ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. (ಬೆಂಗಳೂರು)

೪. ,, ತಿ. ತಾತಾಚಾರ್ಯ ಶರ್ಮರು (ಬೆಂಗಳೂರು)

೫. ರಾವ್ ಬಹಾದ್ದೂರ್ ಡಾ॥ ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ. (ಬೆಂಗಳೂರು)

೬. ಮ॥ ರಾ॥ ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. (ಬೆಂಗಳೂರು)

೭. ,, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ. (ಮೈಸೂರು)

೮. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)

೯. ,, ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಮೈಸೂರು)

೧೦. ,, ಕೆ. ಸಂಪದ್ಗಿರಿರಾಯರು, ಎಂ.ಎ. (ಬೆಂಗಳೂರು)

೧೧. ,, ವಿ. ಸೀತಾರಾಮಯ್ಯನವರು, ಎಂ.ಎ. (ಬೆಂಗಳೂರು)

೧೨. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದ್ದೂರ್
ಮ॥ ರಾ॥ ರಾ. ನರಸಿಂಹಾಚಾರ್ಯರು, ಎಂ.ಎ. (ಬೆಂಗಳೂರು)

ಮುಂಬಯಿ ಪ್ರಾಂತಕ್ಕೆ—

೧. ಮ|| ರಾ|| ಗೆಜ್ಜಿ ಕೃಷ್ಣರಾಯರು, ಬಿ.ಎ , ಎಲ್‌ಎಲ್.ಬಿ. (ಬೆಳಗಾಂವಿ)
೨. ,, ಗುರುಸಿದ್ದಪ್ಪ ಮಹಾಲಿಂಗಪ್ಪ ವಿರ್ಜಿ, ಬಿ.ಎ., ಎಲ್‌ಎಲ್.ಬಿ. (ಹುಬ್ಬಳ್ಳಿ)
೩. ,, ಎಚ್. ಚೆನ್ನಕೇಶವಯ್ಯಂಗಾರ್ಯರು (ಧಾರವಾಡ)
೪. ,, ನಾರಾಯಣ ಶ್ರೀನಿವಾಸ ರಾಜಪುರೋಹಿತರು (ಧಾರವಾಡ)
೫. ,, ನಾರಾಯಣ ಸ್ವಾಮಿರಾವ್ ಲೋಕೂರರು, ಬಿ.ಎ., ಎಲ್‌ಎಲ್.ಬಿ. (ಬೆಳಗಾಂವಿ)
೬. ,, ರಂಗಪ್ಪ ಭೀಮಪ್ಪ ಪೋದ್ದಾರರು, ಬಿ.ಎ. (ಕಾರವಾರ)
೭. ,, ಆಲೂರು ಬಿ. ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೮. ,, ಕೌಜಲಗಿ ಶ್ರೀನಿವಾಸರಾಯರು, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)
೯. ರಾವ್‌ಸಾಹೆಬ್ ಮ|| ರಾ|| ಪಿ. ಜಿ. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)

ಉತ್ತರ ಕರ್ಣಾಟಕ ಪ್ರಾಂತಕ್ಕೆ—

೧. ಮ|| ರಾ|| ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)
೨. ,, ಆರ್. ಎಸ್. ಮಂಗಸೂಲಿ (ಶಿರಹಟ್ಟಿ)

ಹೈದರಾಬಾದ್ ಸಂಸ್ಥಾನಕ್ಕೆ—

೧. ಮ|| ರಾ|| ಕೃಷ್ಣರಾವ್ ಕಪಟ್ರಾಳ (ಗುಲ್ಬರ್ಗ)
೨. ,, ರಾಘವೇಂದ್ರರಾವ್ ಚಾಕಲಬ್ಬಿ (ಕೊಪ್ಪಳ)

ಕೊಡಗು ಮತ್ತು ಮದರಾಸು ಪ್ರಾಂತಗಳ ಸದಸ್ಯರಾರೂ ಬರಲಿಲ್ಲವಾದುದರಿಂದ ಹಿಂದಣ ವರ್ಷದ ಸದಸ್ಯರೇ ಈ ವರ್ಷವೂ ಸದಸ್ಯರಾಗಿರತಕ್ಕುದೆಂದು ತೀರ್ಮಾನಿಸಲಾಯಿತು.

ಮದರಾಸು ಪ್ರಾಂತಕ್ಕೆ—

೧. ಮ|| ರಾ|| ಎಚ್. ತಿಮ್ಮಕೃಷ್ಣರಾಯರು, ಬಿ.ಎ.; ಬಿ.ಎಲ್. (ಬಳ್ಳಾರಿ)
೨. ,, ಎನ್. ರಾಜಗೋಪಾಲಕೃಷ್ಣರಾಯರು, (ಉಡಿಪಿ)
೩. ,, ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ. (ಮದರಾಸು)
೪. ,, ಕೆ. ಟಿ. ಶ್ರೀನಿವಾಸಾಚಾರ್ಯರು, ಎಂ.ಎ., ಎಲ್‌ಎಲ್.ಬಿ. (ಬಳ್ಳಾರಿ)
೫. ,, ಪಿ. ವೆಂಕೋಬಾಚಾರ್ಯರು, ಎಂ.ಎ., ಎಲ್‌ಎಲ್.ಬಿ. (ಬಳ್ಳಾರಿ)

ಕೊಡಗು ಪ್ರಾಂತಕ್ಕೆ—

ಮ|| ರಾ|| ಎಸ್. ಆರ್. ಸುಬ್ಬಣ್ಣಯ್ಯನವರು (ನಿಡತ)

೯. ಪರಿಷತ್ತಿನ ಆಜೀವ ಸದಸ್ಯರೂ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರೂ ಆಗಿದ್ದ ಮ|| ರಾ|| ಗಂಗಾಧರಪ್ಪ ಸಂಗಪ್ಪ ಸಾಪೋಜಿಯವರು ದೈವಾಧೀನರಾದ ವಿಷಯದಲ್ಲಿ ಪರಿಷತ್ತಿಗುಂಟಾದ ನಷ್ಟವನ್ನೂ ದುಃಖವನ್ನೂ

ಕುರಿತು ಗಂಗಾಧರಪ್ಪನವರ ಕುಟುಂಬಕ್ಕೆ ತಿಳಿಸಬೇಕೆಂದು ನಿರ್ಣಯಿಸಲಾಯಿತು.

೧೦. ಪರಿಷತ್ತಿನ ಮುಂದಿನ ವರ್ಷದ ಕರ್ಣಾಟಕ ಸಾಹಿತ್ಯ ಸಮ್ಮೇಳನವು ಹುಬ್ಬಳ್ಳಿಯಲ್ಲಿ ನಡೆಯಬೇಕೆಂದು ಮ॥ ರಾ॥ ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿಯವರು ಕೊಟ್ಟ ಆಹ್ವಾನವನ್ನು ಪರ್ಯಾಲೋಚಿಸಿ, ಇದುವರೆಗೆ ಒಂದು ಸಮ್ಮೇಳನವೂ ಆಗದೆ ಇರುವ ಉತ್ತರ ಕನ್ನಡ ಜಿಲ್ಲೆ ಮತ್ತು ಕೊಡಗು—ಈ ಎರಡು ಪ್ರಾಂತಗಳಲ್ಲಿ ಯಾವುದರಿಂದಲಾದರೂ ಆಹ್ವಾನವು ಬಾರದಿದ್ದರೆ ಹುಬ್ಬಳ್ಳಿಯ ಆಹ್ವಾನವನ್ನು ವಂದನಾ ಪೂರ್ವಕ ಸ್ವೀಕರಿಸಬಹುದೆಂದು ತೀರ್ಮಾನಿಸಲಾಯಿತು.

೧೧. ಪರಿಷತ್ತಿನ ಶುಕ್ಲ ಸಂವತ್ಸರದ ಆಯ ವ್ಯಯದ ಲೆಕ್ಕಗಳನ್ನು ಪರಿಶೋಧಿಸಲು ಆಯ ವ್ಯಯ ಶೋಧಕರನ್ನು ಕಾರ್ಯ ನಿರ್ವಾಹಕ ಮಂಡಲಿಯವರೇ ಆರಿಸಬಹುದೆಂದು ತೀರ್ಮಾನಿಸಲಾಯಿತು.

**ನಂ. ವೆಂಕಟೇಶಯ್ಯಂಗಾರ್,**
ಗೌ॥ ಕಾರ್ಯದರ್ಶಿ.

**ಎಂ. ವೆಂಕಟೇಶ ಐಯಂಗಾರ್,**
ಸಭಾಪತಿ.



---

# ಶುಕ್ಲ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿ

| ಆಯ | ರೂ. ಆ. ಪೈ. |
|---|---|
| ೧ ವರ್ಷಾರಂಭದ ಶಿಲ್ಕು .. | ೧೬,೨೯೦—೧೩—೭ |
| ೨ ತಿಂಗಳು ಗಟ್ಟಲೆ ಮೈಸೂರು ಸರ್ಕಾರದಿಂದ ಬರುವ ಸಹಾಯ ದ್ರವ್ಯ .. | ೧,೮೦೦—೦—೦ |
| ೩ ಚಂದಾ ವೊಬಲಗು, ಸದಸ್ಯರಿಂದ (ಸುಮಾರು) .. | ೩೬೦—೦—೦ |
| ೪ ಪರಿಷತ್ಪತ್ರಿಕೆಯ ಚಂದಾ (ವರ್ಗಣಿದಾರರಿಂದ) (ಸುಮಾರು) .. | ೧೬೦—೦—೦ |
| ೫ ಸದಸ್ಯರುಗಳಿಂದ ಬರಬೇಕಾದ ಚಂದಾ ಹಣದ ಪೈಕಿ ವಸೂಲಾಗಬಹುದಾದುದು (ಸುಮಾರು) | ೨೦೦—೦—೦ |
| ೬ ಪುಸ್ತಕಗಳ ಮಾರಾಟದಿಂದ ,, .. | ೧೫೦—೦—೦ |
| ೭ ಡಿಪಾಜಿಟ್ಟುಗಳ ಮೇಲೆ ಬರುವ ಬಡ್ಡಿ ,, .. | ೫೦೦—೦—೦ |
| ೮ ಪಂಪ ಭಾರತಕ್ಕಾಗಿ ಕೊಟ್ಟಿರುವ ಡಿಪಾಜಿಟ್ಟು .. | ೧೦೦—೦—೦ |
| ೯ ಪರಿಷತ್ತಿನಲ್ಲಿರುವ ಕಾಗದ .. | ೧೦—೦—೦ |
| ಒಟ್ಟು .. | ೧೯,೫೭೦—೧೩—೭ |

| ವ್ಯಯ | ರೂ. ಆ. ಪೈ. |
|---|---|
| ೧ ಸಿಬ್ಬಂದಿಯ ವೆಚ್ಚಕ್ಕಾಗಿ— ಸಹಾಯಕ ಕಾರ್ಯದರ್ಶಿ ೫೦ ರೂ. ಮೇರೆ; ಪಂಡಿತರು ೩೦ ,,; ಗುಮಾಸ್ತೆ ೨೫ ,,; ಜವಾನ ೧೨ ,, | ೧,೪೦೪—೦—೦ |
| ೨ ಆಫೀಸು ಬಾಡಿಗೆಗೆ, ತಿಂಗಳಿಗೆ ೩೦ ರೂ. ಮೇರೆ .. | ೩೬೦—೦—೦ |
| ೩ ದೀಪದ ವೆಚ್ಚಕ್ಕಾಗಿ .. | ೪೦—೦—೦ |
| ೪ ಬರೆವಣಿಗೆಯ ಸಾಮುಗ್ರಿಗಾಗಿ .. | ೧೦೦—೦—೦ |
| ೫ ಅಂಚೆಯ ಹಾಸಲಿಗಾಗಿ .. | ೨೦೦—೦—೦ |
| ೬ ಮುದ್ರಣದ ವೆಚ್ಚ ಮತ್ತು ಕಾಗದಕ್ಕಾಗಿ .. | ೧,೫೦೦—೦—೦ |
| ೭ ಪಂಪ ಭಾರತ ಕಾರ್ಯದ ವೆಚ್ಚಕ್ಕಾಗಿ .. | ೧೫೦—೦—೦ |
| ೮ ಪುಸ್ತಕ ಭಾಂಡಾರಕ್ಕಾಗಿ .. | ೨೫೦—೦—೦ |
| ೯ ವಾಚನ ಮಂದಿರಕ್ಕಾಗಿ .. | ೨೦೦—೦—೦ |
| ೧೦ ಬಹುಮಾನಗಳಿಗಾಗಿ .. | ೨೫೦—೦—೦ |
| ೧೧ ಪ್ರಚಾರ ಕಾರ್ಯಕ್ಕಾಗಿ .. | ೨೫೦—೦—೦ |
| ೧೨ ಸಮ್ಮೇಳನದ ವೆಚ್ಚಕ್ಕಾಗಿ .. | ೨೦೦—೦—೦ |
| ೧೩ ಮರದ ಅಲಮಾರುಗಳಿಗಾಗಿ .. | ೧೫೦—೦—೦ |
| ೧೪ ವಿಜ್ಞಾನ ಸಂಬಂಧವಾದ ಪುಸ್ತಕಗಳ ಪ್ರಕಟನೆಗಾಗಿ .. | ೨,೮೦೦—೦—೦ |
| ೧೫ ಪರಿಷತ್ತಿನ ಕಟ್ಟಡಕ್ಕಾಗಿ .. | ೧೧,೫೦೦—೦—೦ |
| ೧೬ ಇತರ ವೆಚ್ಚ (ಸಾದಿಲ್ವಾರು ವಗೈರೆ)ಗಳಿಗಾಗಿ .. | ೨೧೬—೧೩—೭ |
| ಒಟ್ಟು .. | ೧೯,೫೭೦—೧೩—೭ |

ನಂ. ವೆಂಕಟೇಶಯ್ಯಂಗಾರ್, ಗೌ|| ಕಾರ್ಯದರ್ಶಿ.

# ತಿರುಳ್ಗನ್ನಡ ನಾಡು ಯಾವುದು ?

---

**ಕಾವೇರಿಯಿಂದಮಾ ಗೋ।**
**ದಾವರಿವರಮಿರ್ದ ನಾಡದಾ ಕನ್ನಡದೊಳ್ ॥**
**ಭಾವಿಸಿದ ಜನಪದಂ ವಸು।**
**ಧಾ ವಳಯ ವಿಲೀನ ವಿಶದ ವಿಷಯ ವಿಶೇಷಂ ॥ ೩೬ ॥**

**ಅದರೊಳಗಂ ಕಿಸುವೊಳಲಾ।**
**ವಿದಿತ ಮಹಾ ಕೊಪಣನಗರದಾ ಪುಲಿಗೆರೆಯಾ॥**
**ಸದಭಿಸ್ತುತಮಪ್ಪೊಂಕುಂ।**
**ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ ೩೭ ॥**

(ಕವಿರಾಜಮಾರ್ಗ–ಪ್ರಥಮ ಪರಿಚ್ಛೇದ)

ತಿರುಳು ಎಂದರೆ ತಿಳಲು, ಅಥವಾ ಕೆಚ್ಚು, ಹಣ್ಣು ಕಾಯಿಗಳಲ್ಲಿಯೇ ಆಗಲಿ ಕಟ್ಟಿಗೆಯಲ್ಲಿಯೇ ಆಗಲಿ ಮಧ್ಯ ಪ್ರದೇಶದಲ್ಲಿ ಇರುತ್ತದೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇದೇ ಮೇರೆಗೆ ಕನ್ನಡ ಭಾಷೆಯ ತಿರುಳು ಅಖಿಲ ಕರ್ಣಾಟಕದಲ್ಲಿ **"ನಡುವಣ ನಾಡಿ"**ನಲ್ಲಿ ಇರುವುದು ಸ್ವಾಭಾವಿಕವಾಗಿದೆ. ಕರ್ಣಾಟಕದಲ್ಲಿಯ ತೀರ ಉತ್ತರ ಪ್ರದೇಶದಲ್ಲಿದ್ದ ಕನ್ನಡ ಭಾಷೆಯು ಮರಾಠಿಯ ಸಂಪರ್ಕದಿಂದಲೂ, ತೀರ ಪೂರ್ವ ದಿಕ್ಕಿನ ಪ್ರದೇಶದಲ್ಲಿದ್ದ ಕನ್ನಡವು ತೆಲುಗು ತಮಿಳು ಭಾಷೆಗಳ ಸಂಪರ್ಕದಿಂದಲೂ, ಹಾಗೂ ತೀರ ದಕ್ಷಿಣ ಪ್ರದೇಶದಲ್ಲಿದ್ದ ಕನ್ನಡ ನುಡಿಯು ತಮಿಳು ತುಳು ಮಲೆಯಾಳ ಭಾಷೆಗಳ ಸಂಪರ್ಕದಿಂದಲೂ ವಿಕೃತ ರೂಪವನ್ನು ಹೊಂದುವುದು ಸಹಜ ಪ್ರಾಪ್ತವಾಗಿದೆ. ಆದರೆ ಕರ್ಣಾಟಕದ ಮಧ್ಯ ಪ್ರದೇಶದಲ್ಲಿದ್ದ ಎಂದರೆ ನಡುವಣ ನಾಡಿನಲ್ಲಿದ್ದ ಭಾಷೆಯು ಮಾತ್ರ ಕನ್ನಡದ ತಿರುಳಾಗಿರುವುದು. ಅರ್ಥಾತ್, ಅಲ್ಲಿ ಶುದ್ಧವಾದ ಕನ್ನಡ ಭಾಷೆಯು ಪ್ರಚಾರದಲ್ಲಿರುವುದು ನೈಸರ್ಗಿಕವಾಗಿರುತ್ತದೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಅತ್ತ ಕವಿ, ನೃಪತುಂಗನು (ಕ್ರಿ. ೮೧೪-೮೭೭) ಕವಿರಾಜಮಾರ್ಗ ಗ್ರಂಥದಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ಇದ್ದ ಕರ್ಣಾಟಕ ದೇಶದೊಳಗೆ "ನಡುವಣ ನಾಡು" ಕನ್ನಡದ ತಿರುಳಾಗಿರುತ್ತದೆಂದು ಹೇಳಿರುವುದು ಯಥಾ ನ್ಯಾಯವಾಗಿದೆ. ಈ ನಡುವಣ ನಾಡು ಕಿಸುವೊಳಲ ನಾಡು, ಕೊಪಣನಗರದ ನಾಡು, ಪುಲಿಗೆರೆಯ ನಾಡು, ಒಂಕುಂದದ ನಾಡು ಎಂಬ ನಾಲ್ಕು ನಾಡುಗಳು ಸೇರಿ

ಆಗಿರುತ್ತದೆಂಬುದನ್ನು *ಜಾತಿ ಸಂಬಂಧದ ಷಷ್ಠೀ ವಿಭಕ್ತಿಯಿಂದ (ಅಥವಾ, †ಪ್ರಥಮಾರ್ಥದ ಷಷ್ಠೀ ವಿಭಕ್ತಿಯಿಂದ) ಚೆನ್ನಾಗಿ ವ್ಯಕ್ತಪಡಿಸಿದ್ದಾನೆ.

ಇನ್ನು, ಈ ನಾಲ್ಕು ನಾಡುಗಳು ಎಲ್ಲಿರುತ್ತವೆಂಬುದನ್ನು ಅನುಕ್ರಮದಿಂದ ಸಂಶೋಧಿಸುವ:—(೧) **ಕಿಸುವೊಳಲ ನಾಡು.**—ಕಿಸುವೊಳಲು ಎಂದರೆ ಧಾರವಾಡ ಜಿಲ್ಹೆಯ ರೋಣ ತಾಲೂಕಿಗೆ ಹೊಂದಿ ಈಗಿನ ವಿಜಾಪುರ ಜಿಲ್ಹೆಯಲ್ಲಿ ಬಾದಾಮಿಯ ಈಶಾನ್ಯಕ್ಕೆ ೮ ಮೈಲು ದೂರದಲ್ಲಿರುವ **ಪಟ್ಟದಕಲ್ಲೆಂ**ಬ ಗ್ರಾಮವೆಂಬುದು ಪ್ರಾಚೀನ ಶಾಸನಗಳಿಂದ ವ್ಯಕ್ತವಾಗಿದೆ. ಇದು ಕಿಸುಕಾಡು ನಾಡಿನ ಮುಖ್ಯ ಪಟ್ಟಣವಾದುದರಿಂದ ಇದಕ್ಕೆ 'ಕಿಸುವೊಳಲು' ಎಂಬ ಹೆಸರು ಪ್ರಾಪ್ತವಾಗಿದೆ. ನನಗೆ ತಾಳೀಕೋಟೆಯಲ್ಲಿ ದೊರೆತಿರುವ ಬಾದಾಮಿ ಚಾಳುಕ್ಯ ಚಕ್ರವರ್ತಿಯಾದ ವಿನಯಾದಿತ್ಯನ ತಾಮ್ರಶಾಸನದಲ್ಲಿ, ಈ 'ಕಿಸು–ವೊಳಲು' ಎಂಬ ಹೆಸರನ್ನು ಶಬ್ದಶಃ ಸಂಸ್ಕೃತದಲ್ಲಿ ಭಾಷಾಂತರ ಮಾಡಿ, 'ರಕ್ತ–ಪುರ'ವೆಂದು ಈ ಪಟ್ಟದಕಲ್ಲು ಗ್ರಾಮವನ್ನು ಸಂಬೋಧಿಸಿದ್ದಾರೆ. ಈ ಕಿಸುವೊಳಲ ನಾಡಿನಲ್ಲಿ, ಎಂದರೆ ಕಿಸುಕಾಡು ನಾಡಿನಲ್ಲಿ ಎಪ್ಪತ್ತು ಗ್ರಾಮಗಳಿದ್ದುವೆಂದು ಶಾಸನಗಳಲ್ಲಿ ಉಲ್ಲೇಖವಿದೆ. ರಾಷ್ಟ್ರಕೂಟರ ತರುವಾಯ ಉತ್ತರ ಕಾಲೀನ ಚಾಳುಕ್ಯ ಚಕ್ರವರ್ತಿಯಾದ ಜಯಸಿಂಹನ ಆಳಿಕೆಯಲ್ಲಿ (ಕ್ರಿ. ೧೦೧೮–೧೦೪೨) ಆತನ ಅಕ್ಕನಾದ ಅಕ್ಕಾದೇವಿಯು ಈ ಕಿಸುಕಾಡು ಎಪ್ಪತ್ತು ನಾಡನ್ನು ಕ್ರಿ. ೧೦೨೨ರಿಂದ ೧೦೪೭ರ ವರೆಗೆ ಆಳಿದಳು. (೨) **ಕೊಪಣ ನಗರದ ನಾಡು.**—ಈ ಕೊಪಣ ಗ್ರಾಮವು, "ಆ ವಿದಿತ **ಮಹಾ** ಕೊಪಣ **ನಗರ**"ವೆಂದು ವರ್ಣಿಸಲ್ಪಟ್ಟಿರುವುದರಿಂದ ಆ ಕಾಲದಲ್ಲಿ ಇದು ಸುಪ್ರಸಿದ್ಧವಾದ ದೊಡ್ಡ ಪಟ್ಟಣವಾಗಿತ್ತೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಆದುದರಿಂದಲೇ ಈ ಮಹಾ ಕೊಪಣ ನಗರದ ನಾಡು ವಿಸ್ತೀರ್ಣವಾದುದಿರಬೇಕೆಂದು ಹೇಳುವುದು ಸಯುಕ್ತಿಕವಾಗಿದೆ. ಈ ನಾಡಿನಲ್ಲಿ ಎಷ್ಟು ಗ್ರಾಮಗಳಿದ್ದುವೆಂಬುದು ಇನ್ನೂ ತಿಳಿದುಬಂದಿಲ್ಲ; ಆದರೆ ನಾನು ರನ್ನನ ಗದಾಯುದ್ಧವೆಂಬ ಗ್ರಂಥದಿಂದ ಈ ನಾಡಿನಲ್ಲಿ ಹನ್ನೆರಡು ಸೂರು ಗ್ರಾಮಗಳಿದ್ದುವೆಂದು ಇದೇ ಲೇಖದಲ್ಲಿ ಮುಂದೆ ಊಹಿಸುವವನಿದ್ದೇನೆ. ಇರಲಿ; ಇನ್ನು, ಈ ಕೊಪಣ ನಗರವು ಎಲ್ಲಿದೆ? ಮತ್ತು ಇದಕ್ಕೆ ಈಗಿನ ಹೆಸರೇನು? ಎಂಬುದನ್ನು ಸಂಶೋಧಿಸುವ. ಚಾವುಂಡರಾಯ ಪುರಾಣದ ಗ್ರಂಥಾವತಾರದಲ್ಲಿ:—

* ಪತಿ ಕುಲ ಜಾತ್ಯವಯುವ ವಿ-|
ಶ್ರುತ ಲಕ್ಷಣ ಸನ್ನಿಧಾನ ಸಂಸ್ಪರ್ಶ ಸಮಾ-||
ಗತ ಸಂಬಂಧದೊಳಂ ತ-|
ದ್ಗತ ಸಂಬಂಧದೊಳಮುಂಟು ಷಷ್ಠಿಗೆ ಯೋಗಂ ||

(ಶಬ್ದಮಣಿದರ್ಪಣ, ಸೂತ್ರ ೧೩೭)

† ಇಂತೀ ಪೇಳ್ದ ವಿಭಕ್ತಿಗ-|
ಳಿಂತುಂ ಪಲ್ಲಟಿಸುಗುಂ ಯಥೇಷ್ಟಂ ಪ್ರಥಮಾ-||
ರ್ಥಂ ತೋರೆಯುಂ ದ್ವಿತೀಯಾ-|
ರ್ಥಂ ತೋರೆಯುಮಲ್ಲಿ ಷಷ್ಠಿ ದೊರೆಕೊಂಡಿರ್ಕುಂ ||

(ಶಬ್ದಮಣಿದರ್ಪಣ, ಸೂತ್ರ ೧೩೪)

ಅಸಿ ಧಾರಾ ವ್ರತದಿಂದೆ ಪೆಂಪೆಸೆವಿನಂ ಮುಳ್ಗುಂದದೊಳ್ ಮುನ್ನೆ ಸಂ।
ನ್ಯಸನಕ್ಕೆಯ್ದಿ ನಿವೃತ್ತಿಗೆಯ್ದು ಕೊಪಣಾದ್ರೀಂದ್ರಕ್ಕೆ ವಂದಾಗಮೋ ॥
ಕ್ತ ಸಮಾಧಾನ ವಿಧಾನದಿಂ ಮುಡಿಪಿ ಮುಕ್ತಿ ಸ್ಥಾನಮಂ ಮುಂಚೆ ಸಾ।
ಧಿಸಿಕೊಂಡೊಳ್ಪು ಕುಮಾರಸೇನ ಮುನಿಪಂಗಕ್ಕುಂ ಪೆರ್ಗ್ಗಕ್ಕುಮೇ ॥ ೧೫ ॥

ಎಂದು ಕುಮಾರಸೇನ ಮುನಿಯನ್ನು ಸ್ತುತಿಸುವಾಗ್ಗೆ, ಚಾವುಂಡ ರಾಯನು (ಕ್ರಿ. ೯೭೮) ಜೈನರ ಪರಮಪೂಜ್ಯಕ್ಷೇತ್ರವಾದ, ಹಾಗೂ ಶ್ರೇಷ್ಠವಾದ ಕೊಪಣಾದ್ರಿಯು ಮುಳ್ಗುಂದ ಗ್ರಾಮದ ಸಮೀಪದಲ್ಲಿರುತ್ತದೆಂಬುದನ್ನು ಧ್ವನಿತಮಾಡಿದ್ದಾನೆ. ಅರ್ಥಾತ್, ಕೊಪಣಾದ್ರಿಯೆಂದರೆ ಕೊಪ್ಪಳ ಗ್ರಾಮಕ್ಕೆ ಹೊಂದಿದ ಪರ್ವತವೇ ಸರಿ. ಏಕೆಂದರೆ, ಕೊಪ್ಪಳವು ಮುಳಗುಂದಕ್ಕೆ ಸಮೀಪವಾಗಿದೆ. ಅಲ್ಲದೆ, ಕೊಪಣ, ಕೊಪ್ಪಳ ಇವುಗಳಲ್ಲಿ ಶಬ್ದಸಾದೃಶ್ಯವಿದೆ. ಇಷ್ಟೇ ಅಲ್ಲ, ಕೊಪ್ಪಳ ಗ್ರಾಮದಲ್ಲಿ ಪ್ರಾಚೀನ ಕಾಲದಲ್ಲಿ ೭೭೦ ಜೈನ ಬಸದಿಗಳಿದ್ದುವೆಂದು ಅಲ್ಲಿ ಲೋಕವಾರ್ತೆಯಿದೆ. ಈಗಲೂ ಆ ಊರಲ್ಲಿ ಜೈನರ ಮನೆತನಗಳು ಇವೆ. ಆದುದರಿಂದ ಕೊಪಣನಗರವೆಂದರೆ ಕೊಪ್ಪಳವೆಂದು ಧಾರಾಳವಾಗಿ ಹೇಳಬಹುದು. ಈ ಕೊಪ್ಪಳ ಗ್ರಾಮವು, ಧಾರವಾಡ ಜಿಲ್ಲೆಯ ಗದಗ ತಾಲೂಕಿಗೆ ಹೊಂದಿ, ನಿಜಾಮ ಸಂಸ್ಥಾನದಲ್ಲಿದೆ. ಶಿಕಾರಿಪುರದ ೩೧೭ನೆಯ ಶಾಸನದಲ್ಲಿ (ಕ್ರಿ. ೧೨೦೫) :—

ಊರೊಳ್ ತಪ್ಪದೆ ಬಸದಿಯ।
ನೋರಂತಿರೆ ಮಾಡಿ ಬೆಳಗವತ್ತಿಯ ನಾಡಂ ॥
ಧಾರಿಣಿಗೆ ನೆಗಳ್ದ ಕೊಪಣ।
ಕ್ಕೋರಗೆ ಮಾಡಿದನುದಾರನಿಧಿಯೇಚರಸಂ ॥

ಎಂದು ಇದೆ. ಈ ಪದ್ಯದಿಂದ ಕೊಪಣನಗರವು, ಅಥವಾ ಕೊಪಣ ನಾಡು ಆ ಕಾಲದಲ್ಲಿ ಸುಪ್ರಸಿದ್ಧವಾಗಿತ್ತೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. (೩) **ಪುಲಿಗೆರೆಯ ನಾಡು.**—ಪುಲಿಗೆರೆಯೆಂದರೆ, ಧಾರವಾಡ ಜಿಲ್ಲೆಯ ಮಧ್ಯದಲ್ಲಿರುವ ಲಕ್ಷ್ಮೇಶ್ವರ ಗ್ರಾಮವು. ಈ ಗ್ರಾಮದೊಳಗಿನ ಒಂದು ಭಾಗಕ್ಕೆ ಈಗಲೂ **'ಹುಲಿಗೆರೆ'** ಎಂದು ಹೆಸರುಂಟು; "ಪುಲಿಗೆರೆ ಮುನ್ನೂರು ನಾಡು" ಎಂದು ಪ್ರಾಚೀನ ಶಾಸನಗಳಲ್ಲಿ ಉಲ್ಲೇಖವಿದೆ; ಎಂದರೆ, ಪುಲಿಗೆರೆ ನಾಡಿನಲ್ಲಿ ಮೂರುನೂರು ಗ್ರಾಮಗಳಿದ್ದುವು. ಈ ಪುಲಿಗೆರೆಯು ನೆಲೆವೀಡಿನಲ್ಲಿದ್ದ ಸುಪ್ರಸಿದ್ಧ ಕನ್ನಡ ಕವಿಯಾದ ಆದಿ ಪಂಪನು ತನ್ನ ಗ್ರಂಥಗಳನ್ನು "ಪುಲಿಗೆರೆಯ ತಿರುಳ ಕನ್ನಡದೊಳ್" ಬರೆದಿರುತ್ತೇನೆಂದು ಹೇಳಿದ್ದಾನೆ. (೪) **ಒಂಕುಂದದ ನಾಡು.**—ಒಂಕುಂದವೆಂದರೆ ಧಾರವಾಡ ತಾಲೂಕಿಗೆ ಹೊಂದಿ, ಬೆಳಗಾಂವ ಜಿಲ್ಲೆಯಲ್ಲಿರುವ ಒಕ್ಕುಂದ ಗ್ರಾಮವೇ ಸರಿ. ಈ ಗ್ರಾಮವು ಧಾರವಾಡಕ್ಕೆ ಸಮೀಪವಾಗಿದೆ. ಈ ಒಂಕುಂದದ ನಾಡಿನಲ್ಲಿ ಎಷ್ಟು ಗ್ರಾಮಗಳಿದ್ದುವೆಂಬುದು ಇನ್ನೂ ತಿಳಿದುಬಂದಿಲ್ಲ. ಈ ಒಕ್ಕುಂದದಲ್ಲಿ ಸುಂದರವಾದ ಶಿಲ್ಪಕಲಾ ಕೌಶಲದಿಂದ ಶೋಭಿಸುವ ಮೂರು

ಪ್ರಾಚೀನ ಜೈನ ಬಸದಿಗಳುಂಟು. ಈ ಬಸದಿಗಳಲ್ಲಿಯ ತೀರ್ಥಂಕರರ ಮೂರ್ತಿಗಳನ್ನು ಕಿತ್ತು, ಅವುಗಳ ಸ್ಥಳದಲ್ಲಿ ಶಿವಲಿಂಗಗಳನ್ನೂ ಎಲ್ಲಮ್ಮನನ್ನೂ ಈಗ ಪ್ರತಿಷ್ಠಿಸಿದ್ದರೂ ಈ ದೇವಾಲಯಗಳ ಹೊರ ಮಗ್ಗಲೂ ಒಳ ಮಗ್ಗಲೂ ಕಾಯೋತ್ಸರ್ಗದ, ಹಾಗೂ ಪದ್ಮಾಸನದ ಜಿನ ಬಿಂಬಗಳು ಎಲ್ಲ ಕಡೆಗೂ ದೃಷ್ಟಿಗೋಚರವಾಗುತ್ತವೆ.

ಮುಧೋಳ ಗ್ರಾಮದ ಸುಪ್ರಸಿದ್ಧ ಕನ್ನಡ ಕವಿಯಾದ ರನ್ನನು (ಕ್ರಿ. ೯೮೨) ತನ್ನ ಭಾಷೆಯೂ ತಿರುಳ ಕನ್ನಡವೆಂದು ತನ್ನ "ಗದಾ ಯುದ್ಧ"ವೆಂಬ ಗ್ರಂಥದ ಪ್ರಥಮಾಶ್ವಾಸದಲ್ಲಿ ಹೀಗೆ ಹೇಳಿದ್ದಾನೆ:—

ಕನ್ನಡಮೆರಡಱುನೂಱಱ।
ಕನ್ನಡಮಾ ತಿರುಳ ಕನ್ನಡಂ ಮಧು ರಮ್ಯೋ ॥
ತ್ಪನ್ನಂ ಸಂಸ್ಕೃತಮೆನೆ ಸಂ।
ಪನ್ನಂ ನೆಗೞ್ದುಭಯ ಕವಿತೆಯೊಳ್ ಕವಿ ರನ್ನಂ ॥ ೪೨ ॥

ಈ ಪದ್ಯದಲ್ಲಿ ಹೇಳಿದ ಹನ್ನೆರಡು ನೂರರ ಕನ್ನಡವಾದ ತಿರುಳ ಕನ್ನಡವು ಯಾವ ನಾಡಿನದು? ಎಂಬುದು ವಿಚಾರಾರ್ಹವಾದ ಪ್ರಶ್ನೆಯಾಗಿದೆ. ಸಂಖ್ಯೆಯನ್ನು ಅನುಸರಿಸುವ ನಾಡುಗಳ ಹೆಸರುಗಳು ಕರ್ಣಾಟಕದಲ್ಲಿ ಅನೇಕವಾಗಿವೆ. ತಿರುಳ ಕನ್ನಡವು ಪ್ರಚಾರದಲ್ಲಿದ್ದಂಥ ಮೇಲೆ ಹೇಳಿದ ನಾಲ್ಕು ನಾಡುಗಳಲ್ಲಿಯೇ ಪುಲಿಗೆರೆಯ ನಾಡು ಮೂರುನೂರು ಸಂಖ್ಯೆಯನ್ನು ಅನುಸರಿಸುತ್ತದೆ; ಮತ್ತು ಕಿಸುವೊಳಲ ನಾಡು ಎಪ್ಪತ್ತು ಸಂಖ್ಯೆಯನ್ನನುಸರಿಸುತ್ತದೆ. ಇನ್ನು, ಮಿಕ್ಕ ಎರಡು ನಾಡುಗಳಲ್ಲಿ ಯಾವುದು ಈ ಹನ್ನೆರಡು ನೂರು ಸಂಖ್ಯೆಯನ್ನನುಸರಿಸುತ್ತದೆಂಬುದನ್ನು ನೋಡುವ:—ಮೊಟ್ಟಮೊದಲು ರನ್ನ ಕವಿಯು ಈ ಗದಾ ಯುದ್ಧವೆಂಬ ಕಾವ್ಯವನ್ನು ಯಾವ ಸ್ಥಳದಲ್ಲಿ ಕುಳಿತು ರಚಿಸಿದನೆಂಬುದನ್ನು ತಿಳಿದುಕೊಂಡರೆ, ಹನ್ನೆರಡು ನೂರರ ತಿರುಳ ಕನ್ನಡ ನಾಡು ಯಾವುದೆಂಬುದು ಆಮೇಲೆ ತನ್ನಿಂದ ತಾನೆ ಗೊತ್ತಾಗುವುದು. ರನ್ನನು ಈ ಗದಾ ಯುದ್ಧ ಕಾವ್ಯವನ್ನು ಚಾಳುಕ್ಯ ಚಕ್ರವರ್ತಿಯಾದ ತೈಲಪನ ಆಸ್ಥಾನದಲ್ಲಿ ಕುಳಿತು, ಶಕ ವರ್ಷದ ೯೦೪ನೆಯ (ಕ್ರಿ. ೯೮೨ನೆಯ) ಚಿತ್ರಭಾನು ಸಂವತ್ಸರದಲ್ಲಿ ರಚಿಸಿದ್ದಾನೆಂಬುದು ಈ ಗ್ರಂಥದಿಂದಲೇ ತಿಳಿಯುತ್ತದೆ. ಹಾಗಾದರೆ ಈ ತೈಲಪನ ರಾಜಧಾನಿಯು ಯಾವುದು? ಈ ಉತ್ತರ ಕಾಲೀನ ಚಾಳುಕ್ಯರ ರಾಜಧಾನಿಗಳು—ಮಾನ್ಯಖೇಟ (ಮಳಖೇಡ), ಯಾತಗಿರಿ, ಕಂಪಿಲಿ, ಕಲ್ಯಾಣ, ಅಣ್ಣಿಗೇರಿ, ಬಂಕಾಪುರ, ಬಳ್ಳಿಗಾವೆ ಮುಂತಾದುವು. ಈ ತೈಲಪನು ಕ್ರಿ. ೯೭೩ರಲ್ಲಿ ಮಾನ್ಯಖೇಟದ ರಾಷ್ಟ್ರಕೂಟ ಚಕ್ರವರ್ತಿಯಾದ ಇಮ್ಮಡಿ ಕಕ್ಕಲನನ್ನು ಸೋಲಿಸಿ, ಆ ರಾಷ್ಟ್ರಕೂಟ ಸಾಮ್ರಾಜ್ಯವನ್ನೆಲ್ಲ ಆಕ್ರಮಿಸಿ, ಚಾಳುಕ್ಯ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಿದನು. ಮತ್ತು ಆ ಕಕ್ಕಲನ ಮಗಳಾದ ಜಾಕಬ್ಬೆಯನ್ನು ಮದುವೆಯಾದನು. ಈ ಪ್ರಕಾರ ರಾಷ್ಟ್ರಕೂಟ ರಾಜಪುತ್ರಿಯನ್ನೇ ಮದುವೆಯಾಗಿಕೊಂಡಿದ್ದರಿಂದ

ತೈಲಪನು ಆ ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟ ನಗರವನ್ನೇ ತನ್ನ ನೆಲೆವೀಡನ್ನಾಗಿ ಮಾಡಿಕೊಂಡಿರಬೇಕೆಂದು ಕೆಲವರು ಇತಿಹಾಸಕಾರರು ಊಹಿಸುತ್ತಾರೆ. ಈ ತೈಲಪನ ಕಾಲದಲ್ಲಿ ಕಲ್ಯಾಣಪಟ್ಟಣವಂತೂ ಅಸ್ತಿತ್ವದಲ್ಲಿಯೇ ಇದ್ದಿಲ್ಲ. ಮುಂದೆ ೮೦ ವರ್ಷಗಳ ಮೇಲೆ ಈತನ ಮರಿಮಗನಾದ ಮೊದಲನೆಯ ಸೋಮೇಶ್ವರನು (ಕ್ರಿ. ೧೦೪೨–೧೦೬೮) ಕ್ರಿ. ೧೦೫೩ರ ಸುಮಾರಕ್ಕೆ ಕಲ್ಯಾಣ ಪಟ್ಟಣವನ್ನು ನೂತನವಾಗಿ ನಿರ್ಮಿಸಿ, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಈ ಸೋಮೇಶ್ವರನ ಮಗನಾದ ವಿಕ್ರಮಾಂಕ ಚಕ್ರವರ್ತಿಯು (ಕ್ರಿ. ೧೦೭೬–೧೧೨೬) ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ೨ನೆಯ ಪಿಂಗಳ ಸಂವತ್ಸರದಲ್ಲಿ (ಕ್ರಿ. ೧೦೭೮ರಲ್ಲಿ) ಸುಖ ಸಂಕಥಾ ವಿನೋದದಿಂದ **ಏತಗಿರಿ**ಯ ನೆಲೆವೀಡಿನಲ್ಲಿ ರಾಜ್ಯವನ್ನಾಳುತ್ತಿದ್ದನೆಂದು ಶಿಕಾರಿಪುರ ತಾಲೂಕಿನ ೧೩೫ನೆಯ ಶಾಸನವು ಹೇಳುತ್ತದೆ. ಈ ವಿಕ್ರಮಾದಿತ್ಯನ ಕಾಲದಲ್ಲಿ ಕಲ್ಯಾಣಪಟ್ಟಣವು ಮುಖ್ಯ ರಾಜಧಾನಿಯಾಗಿದ್ದರೂ, ಪ್ರಾರಂಭದ ಒಂದೆರಡು ವರ್ಷಗಳವರೆಗೆ ಈತನು ಏತಗಿರಿಯ ನೆಲೆವೀಡಿನಲ್ಲಿದ್ದುದನ್ನು ನೋಡಿದರೆ, ಈ ಯಾತಗಿರಿ ಪಟ್ಟಣವು ಈ ಮನೆತನದ ಮುಂಚಿನ ರಾಜಧಾನಿಯಾಗಿರಬೇಕೆಂದು ತೋರುತ್ತದೆ. ಅರ್ಥಾತ್, ಇದು ತೈಲಪನ ಕಾಲದಲ್ಲಿ ರಾಜಧಾನಿಯಾಗಿದ್ದಿರಬೇಕು. ಇಷ್ಟಕ್ಕೂ ಈ ಯಾತಗಿರಿ ಪಟ್ಟಣವು ಮಳಖೇಡಕ್ಕೆ ಸಮೀಪವಾಗಿಯೂ ಇದೆ. ಇತ್ಯರ್ಥವೇನೆಂದರೆ, ಮಳಖೇಡ, ಯಾತಗಿರಿ, ಇವೆರಡು ಪಟ್ಟಣಗಳಲ್ಲಿ ಯಾವುದಾದರೂ ಒಂದು ತೈಲಪನ ರಾಜಧಾನಿಯಾಗಿರಬೇಕೆಂದು ಹೇಳುವುದು ಕ್ರಮ ಪ್ರಾಪ್ತವಾಗಿದೆ. ಇನ್ನು, ರನ್ನ ಕವಿಯು ಯಾತಗಿರಿ ಪಟ್ಟಣದಲ್ಲಿ, ಅಥವಾ ಮಳಖೇಡ ಪಟ್ಟಣದಲ್ಲಿ ತೈಲಪನ ಆಸ್ಥಾನದಲ್ಲಿ ಕುಳಿತು ಗದಾ ಯುದ್ಧ ಕಾವ್ಯವನ್ನು ರಚಿಸಿ, ಹನ್ನೆರಡು ನೂರರ ತಿರುಳ್ಗನ್ನಡ ಭಾಷೆಯಲ್ಲಿ ಕಾವ್ಯವನ್ನು ರಚಿಸಲು ತಾನು ಸಮರ್ಥನಿದ್ದೇನೆಂದು ಹೇಳಿಕೊಂಡಿರುವುದರಿಂದ ಯಾತಗಿರಿ, ಮಳಖೇಡ ಪಟ್ಟಣಗಳು ಹನ್ನೆರಡು ನೂರರ ತಿರುಳ್ಗನ್ನಡ ನಾಡಿನಲ್ಲಿ ಸಮಾವೇಶವಾಗುವುದು ಯಥಾ ನ್ಯಾಯವಾಗಿದೆ. ಈ ಮಾತು, ಕವಿರಾಜಮಾರ್ಗ ಗ್ರಂಥದಿಂದ ಮತ್ತಿಷ್ಟು ಬಲಪಡುತ್ತದೆ. ಅದು ಹೇಗೆಂದರೆ, ನೃಪತುಂಗನು ಕವಿರಾಜಮಾರ್ಗ ಗ್ರಂಥದಲ್ಲಿ ಕರ್ಣಾಟಕದ ನಡುವಣ ನಾಡು ತಿರುಳ್ಗನ್ನಡ ನಾಡಾಗಿರುತ್ತದೆಂಬುದನ್ನು ಹೇಳಿದ ಬಳಿಕ ಆ ತಿರುಳ್ಗನ್ನಡ ನಾಡಿನ ಜನರು ಆ ಭಾಷೆಯನ್ನು ಚೆನ್ನಾಗಿ ಅಭ್ಯಾಸಮಾಡಿದ್ದರೆಂದು ಹೇಳಿದ್ದಾನಲ್ಲದೆ ಆ ನಾಡಿನ ಸಣ್ಣ ಹುಡುಗರು ವಿವೇಕವನ್ನು ಕಲಿಸಬಲ್ಲರು! ಮೂಕರು ಮಾತುಗಳನ್ನು ಕಲಿಸಬಲ್ಲರು!! ಎಂದು ಅತಿಶಯೋಕ್ತಿಯ ವ್ಯಾಜದಿಂದ ಆ ನಾಡಿನ ಜನರ ಮಹಿಮೆಯನ್ನು ವರ್ಣಿಸುವುದನ್ನು ನೋಡಿದರೆ, ಈ ನೃಪತುಂಗನೂ ತಿರುಳ್ಗನ್ನಡ ನಾಡಿನವನೇ ಎಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಅರ್ಥಾತ್, ಈತನ ರಾಜಧಾನಿಯಾದ ಮಳಖೇಡ ನಗರವೂ ತಿರುಳ್ಗನ್ನಡ ನಾಡಿನಲ್ಲಿಯೇ ಒಳಗಾಗಿರುತ್ತದೆಂಬುದು ಸ್ಪಷ್ಟವಾಗುತ್ತದೆ. ಇನ್ನು ಹನ್ನೆರಡು ನೂರರ ತಿರುಳ್ಗನ್ನಡ ನಾಡು ಯಾವುದೆಂಬುದನ್ನು ನೋಡುವ: ಕಿಸುವೊಳಲು,

ಮಹಾ ಕೊಪಣ ನಗರ, ಪುಲಿಗೆರೆ, ಒಂಕುಂದ—ಈ ನಾಲ್ಕು ತಿರುಳ್ಗನ್ನಡ ನಾಡುಗಳಲ್ಲಿ, ಕೊಪಣವು ಮಹಾ ನಗರವೆಂದು ವರ್ಣಿಸಲ್ಪಟ್ಟಿರುವುದರಿಂದ ಈ ಕೊಪಣ ನಗರದ ನಾಡು ವಿಸ್ತೀರ್ಣವಾದುದಿರಬೇಕೆಂದು ಹಿಂದೆಯೇ ಹೇಳಿದ್ದೇವೆ. ಅತಏವ, ಮಹಾ ಕೊಪಣ ನಗರದ ನಾಡು ಹನ್ನೆರಡು ನೂರರ ತಿರುಳ್ಗನ್ನಡ ನಾಡೆಂದು ಹೇಳುವುದು ಕಾರ್ಯ ಕಾರಣ ಸಂಗತಿಗೆ ಸರಿಯಾಗಿ ಹೊಂದುತ್ತದೆ. ಸಾರಾಂಶವೇನೆಂದರೆ, ಹನ್ನೆರಡು ನೂರು ಗ್ರಾಮಗಳುಳ್ಳ ಮಹಾ ಕೊಪಣ ನಗರದ ನಾಡಿನಲ್ಲಿ ಮಳಖೇಡ, ಯಾತಗಿರಿ, ಕಂಪಿಲಿ, ಇವು ಮೂರು ಚಾಳುಕ್ಯರ ರಾಜಧಾನಿಗಳೂ ಸಮಾವೇಶವಾಗುತ್ತವೆ. ಇವಲ್ಲದೆ ರನ್ನ ಕವಿಯು ಜನ್ಮಸ್ಥಳವಾದ ಮುದುವೊಳಲು (ಎಂದರೆ ಮುಧೋಳವು) ಸಹ ತಿರುಳ್ಗನ್ನಡ ನಾಡಿನಲ್ಲಿಯೇ ಇದೆ. ಹೇಗೆಂದರೆ, ಮುಧೋಳವು ಒಂಕುಂದಕ್ಕೂ ಸಮೀಪವಾಗಿದೆ; ಕಿಸುವೊಳಲಿಗೂ ಸಮೀಪವಾಗಿದೆ. ಅರ್ಥಾತ್, ಆ ಗ್ರಾಮವು ಒಂಕುಂದದ ನಾಡಿನಲ್ಲಾಗಲಿ ಕಿಸುವೊಳಲ ನಾಡಿನಲ್ಲಾಗಲಿ ಸಮಾವೇಶವಾಗುತ್ತದೆ. ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ, ರನ್ನ ಕವಿಯು ತನ್ನ ಭಾಷೆಯು ತಿರುಳ ಕನ್ನಡವೆಂದು ಹೇಳಿಕೊಂಡಿರುವುದರಿಂದ ಆತನ ಜನ್ಮಸ್ಥಳವಾದ ಮುಧೋಳ ಪಟ್ಟಣದ ಭಾಷೆಯಾಗಲಿ ಆತನ ಆಸ್ಥಾನದ ಸ್ಥಳವಾದ ಮಳಖೇಡ, ಯಾತಗಿರಿ ಪಟ್ಟಣಗಳ ಭಾಷೆಯಾಗಲಿ, ಅಥವಾ ಈ ಮೂರೂ ಪಟ್ಟಣಗಳ ಭಾಷೆಯಾಗಲಿ ತಿರುಳ್ಗನ್ನಡವೆಂಬುದು ಸಿದ್ಧ.

ಕರ್ಣಾಟಕ ಕವಿಚರಿತೆಕಾರರಾದ ಶ್ರೀಮಾನ್ ಆರ್. ನರಸಿಂಹಾಚಾರ್ಯರವರು, ಧಾರವಾಡದಲ್ಲಿ ನೆರವೇರಿದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ನಾಲ್ಕನೆಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಅಪ್ಪಣೆಕೊಡಿಸಿರುವುದೇನೆಂದರೆ:—"ನೃಪತುಂಗನು—ಕಿಸುವೊಳಲು, ಕೊಪಣನಗರ, ಪುಲಿಗೆರೆ, ಒಂಕುಂದ, ಇವುಗಳ ಮಧ್ಯ ಪ್ರದೇಶವೇ ತಿರುಳುಗನ್ನಡದ ನೆಲೆಯೆಂದು ಹೇಳಿದ್ದಾನೆ. ಆದಿ ಪಂಪನು 'ಪುಲಿಗೆರೆಯ ತಿರುಳ ಕನ್ನಡದೊಳ್' ತನ್ನ ಗ್ರಂಥವನ್ನು ಬರೆದುದಾಗಿ ಹೇಳಿದ್ದಾನೆ. ಆದುದರಿಂದ ಧಾರವಾಡ ಜಿಲ್ಹೆಯಲ್ಲಿರುವ ಪುಲಿಗೆರೆಯ ಕನ್ನಡವು ಪೂರ್ವದಲ್ಲಿ ಕವಿಗಳಿಗೆ ಆದರ್ಶಪ್ರಾಯವಾಗಿದ್ದಂತೆ ತಿಳಿಯುತ್ತದೆ. ಇದು ಈ ಪ್ರಾಂತದವರಿಗೆ ನಿಜವಾಗಿಯೂ ಹೆಮ್ಮೆಯನ್ನುಂಟುಮಾಡಬೇಕಾದ ವಿಷಯವಾಗಿದೆ." ಶ್ರೀಮಾನ್ ಆರ್. ನರಸಿಂಹಾಚಾರ್ಯರವರು ಸನ್ನಿಧಾನ ಸಂಬಂಧದ ಷಷ್ಠೀ ವಿಭಕ್ತಿಯನ್ನು ಸ್ವೀಕರಿಸಿ, (ಕವಿರಾಜಮಾರ್ಗ ಗ್ರಂಥದ ಪ್ರಥಮ ಪರಿಚ್ಛೇದದ ೩೭ನೆಯ ಪದ್ಯಕ್ಕೆ) ಕಿಸುವೊಳಲು, ಕೊಪಣನಗರ, ಪುಲಿಗೆರೆ, ಒಂಕುಂದ, ಇವುಗಳ ಮಧ್ಯ ಪ್ರದೇಶವೇ ತಿರುಳ್ಗನ್ನಡ ನಾಡೆಂದು ಅರ್ಥವನ್ನು ಮಾಡಿದ್ದಾರೆ. ಅಲ್ಲದೆ, ಇವರು ಈ ಸ್ಥಳದ ವಿಷಯವಾಗಿ ಬಹು ಸಮಂಜಸವಾದ ಒಂದು ಯುಕ್ತಿಯನ್ನು ಮಾಡಿದ್ದಾರೆ. ಅದೇನೆಂದರೆ, ಇವರು ಕಿಸುವೊಳಲು ಎಂದರೆ, ಪಟ್ಟದಕಲ್ಲು ಗ್ರಾಮವೆಂದು ಹೇಳದೆ, ನೃಪತುಂಗನು ಹೇಳಿರುವ ಕಿಸುವೊಳಲು ಗೋದಾವರೀ ತೀರದಲ್ಲಿತ್ತೆಂದು ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ:—"ಕರ್ಣಾಟಕ ಕವಿತೆಯು ರಾಷ್ಟ್ರಕೂಟರ

ಕಾಲದಲ್ಲಿ ಗೋದಾವರೀ ತೀರದಲ್ಲಿ ಕಿಸುವೊಳಲೇ ಮೊದಲಾದ ಸ್ಥಳಗಳಲ್ಲಿ ಉತ್ತಮ ಸ್ಥಿತಿಯಲ್ಲಿತ್ತು" (ಕರ್ಣಾಟಕ ಕವಿಚರಿತೆ, ಪ್ರಥಮ ಸಂಪುಟ, ಅವತರಣಿಕೆಯ ಪುಟ ೧೩). ಈ ಹೇಳಿಕೆಯಿಂದ, ಗೋದಾವರಿಯಿಂದ ತುಂಗಭದ್ರಾ ನದಿಯ ವರೆಗೆ ಇರುವ ಉತ್ತರ ಕರ್ಣಾಟಕವೆಲ್ಲವೂ ತಿರುಳ್ಗನ್ನಡ ನಾಡಾಗುವುದರಿಂದ ರನ್ನ ಕವಿಯ ಮುಧೋಳ, ಮಳಖೇಡ, ಯಾತಗಿರಿ ಪಟ್ಟಣಗಳು ಈ ತಿರುಳ್ಗನ್ನಡ ನಾಡಿನಲ್ಲಿ ಸಮಾವೇಶವಾಗುವುದೇನೋ ನಿಜ; ಆದರೆ ವಸ್ತುತಃ ನೋಡಲು, ಗೋದಾವರೀ ನದಿಯ ತೀರದಲ್ಲಿ ಕಿಸುವೊಳಲು ಕೊಪಣ ನಗರಗಳು ಇರುವುದಿಲ್ಲ. ಈ ಗ್ರಾಮಗಳನ್ನು ಸಂಶೋಧಿಸುವುದಕ್ಕಾಗಿಯೇ ಗೋದಾವರೀತೀರದಲ್ಲಿ ನಾನು ಸಂಚರಿಸಿದೆನು. ಎಲ್ಲಿಯೂ ಕಿಸುವೊಳಲು, ಅಥವಾ ಕಿಸೋಳ ಎಂಬ ಹೆಸರಿನ ಊರು ದೃಷ್ಟಿಗೋಚರವಾಗಲಿಲ್ಲ. ಅಹಮ್ಮದನಗರ ಜಿಲ್ಲೆಯಲ್ಲಿ ಮಾತ್ರ ಗೋದಾವರೀ ತೀರದಲ್ಲಿ "ಕೊಪರ–ಗಾವ" ಎಂಬುದೊಂದು ದೊಡ್ಡ ಗ್ರಾಮವಿದೆ. ಇದು ಈಗ ತಾಲೂಕಿನ ಸ್ಥಳವಾಗಿದೆ. ಈ ಗ್ರಾಮವು ಕೊಪಣ ನಗರವಾಗಿರಬೇಕೆಂದು ಭಾವಿಸಿ, ಈ ಗ್ರಾಮವನ್ನು ನೋಡುವುದಕ್ಕೆ ಅಲ್ಲಿಗೆ ಹೋದೆನು. ಈ ಕೊಪರ ಗಾವದೊಳಗಿನ ಎಲ್ಲ ಭಾಗಗಳನ್ನೂ ಇದರ ಸುತ್ತುಮುತ್ತಲಿನ ಪ್ರದೇಶವನ್ನೂ ಚಿಕಿತ್ಸಾ ಪೂರ್ವಕವಾಗಿ ಸಂಶೋಧಿಸಿದರೂ ಪುರಾತನವಾದ ಕಟ್ಟಡವಾಗಲಿ, ಮೂರ್ತಿ, ಶಿಲಾಲೇಖ ಮುಂತಾದ ಪ್ರಾಚೀನ ಅವಶೇಷಗಳಾಗಲಿ ಎಲ್ಲಿಯೂ ಕಾಣಲಿಲ್ಲ. ಇರಲಿ; ಮಳಖೇಡದ ಉತ್ತರಕ್ಕೆ ನಾಂದೇಡ, ಪರಭಣಿ, ಬೀಡ, ಔರಂಗಾಬಾದ ಜಿಲ್ಲೆಗಳಲ್ಲಿ ಗೋದಾವರೀ ನದಿಯು ಹರಿಯುತ್ತದೆ; ಮತ್ತು ಆ ಪ್ರದೇಶದಲ್ಲಿ ಮುಧೋಳ, ಮುದಖೇಡ, ಚಿಂತೂರು, ವಾಲೂರು, ಕನ್ನಡ, ಬೀಡ, ಧಾರೂರು ಮುಂತಾದ ಕನ್ನಡ ಹೆಸರಿನ ಊರುಗಳಿವೆ. ಪರಂತು, ಕಿಸುವೊಳಲು ಕೊಪಣ ನಗರಗಳು ಮಾತ್ರ ಅಲ್ಲಿ ಇರುವುದಿಲ್ಲ. ಕರ್ಣಾಟಕದ ನಡುವಣ ನಾಡಿನಲ್ಲಿದ್ದ ಈ ಪಟ್ಟಣಗಳು ಕರ್ಣಾಟಕದ ಉತ್ತರ ಮೇರೆಯಲ್ಲಿ ಸಿಕ್ಕುವ ಬಗೆ ಹೇಗೆ?

ಕಿಸುವೊಳಲು ಎಂದರೆ ಪಟ್ಟದಕಲ್ಲು, ಕೊಪಣನಗರವೆಂದರೆ ಕೊಪ್ಪಳ, ಪುಲಿಗೆರೆಯೆಂದರೆ ಲಕ್ಷ್ಮೇಶ್ವರ, ಒಂಕುಂದ ಎಂದರೆ ಒಕ್ಕುಂದ ಎಂಬುದನ್ನು ಈ ಪ್ರಬಂಧದಲ್ಲಿ ಈ ಮೊದಲೇ ಸಪ್ರಮಾಣವಾಗಿ ಸಿದ್ಧಮಾಡಿದ್ದೇವೆ. ಆದರೆ ಕೆಲವರು ಕವಿರಾಜಮಾರ್ಗ ಗ್ರಂಥದ ಪ್ರಥಮ ಪರಿಚ್ಛೇದದ ೩೭ನೆಯ ಪದ್ಯದಲ್ಲಿದ್ದ ಷಷ್ಠೀ ವಿಭಕ್ತಿಯು ಸನ್ನಿಧಾನ ಸಂಬಂಧದ ಷಷ್ಠೀ ವಿಭಕ್ತಿಯೆಂದು ತಿಳಿದು ಪಟ್ಟದಕಲ್ಲು, ಕೊಪ್ಪಳ, ಲಕ್ಷ್ಮೇಶ್ವರ, ಒಕ್ಕುಂದ, ಈ ನಾಲ್ಕು ಗ್ರಾಮಗಳ ನಡುವಿನ ಪ್ರದೇಶವು ತಿರುಳ ಕನ್ನಡ ನಾಡೆಂದು ಅರ್ಥಮಾಡುತ್ತಾರೆ. ಹೀಗೆ ಅರ್ಥಮಾಡಿದರೆ, ಈ ಅತಿ ಸಂಕುಚಿತವಾದ ಪ್ರದೇಶದಲ್ಲಿ ಧಾರವಾಡ ಜಿಲ್ಲೆಯ ಉತ್ತರಾರ್ಧಭಾಗವಿಷ್ಟೇ ಸಮಾವೇಶವಾಗುವುದು, ಎಂದರೆ, ಧಾರವಾಡ ಜಿಲ್ಲೆಯ ೧೧ ತಾಲೂಕುಗಳಲ್ಲಿ ಧಾರವಾಡ, ಹುಬ್ಬಳ್ಳಿ, ನವಲಗುಂದ, ಗದಗ, ರೋಣ, ಇವೇ ಐದು ತಾಲೂಕುಗಳು ಮಾತ್ರ ಸೇರಿ ಆದ ಪ್ರದೇಶಕ್ಕೆ ತಿರುಳ್ಗನ್ನಡ ನಾಡೆಂದು ಕರೆಯಬೇಕಾಗು

ವುದು! ಹೊರತು, ರನ್ನ ಕವಿಯ ಜನ್ಮಸ್ಥಳವಾದ ಮುಧೋಳ ಗ್ರಾಮವಾಗಲಿ ಆಸ್ಥಾನ ಸ್ಥಳಗಳಾದ ಮಳಖೇಡ, ಯಾತಗಿರಿ ಪಟ್ಟಣಗಳಾಗಲಿ ಈ ಪ್ರದೇಶದಲ್ಲಿ ಸಮಾವೇಶವಾಗುವುದಿಲ್ಲ; ಅರ್ಥಾತ್, ಆಪತ್ತಿಯು ಬಂದೊದಗುವುದು. ಆದುದ ರಿಂದ ಈ ಪ್ರಕಾರ ಅರ್ಥವನ್ನು ಮಾಡದೆ, ಈ ಪದ್ಯದಲ್ಲಿದ್ದ ಷಷ್ಠೀ ವಿಭಕ್ತಿಯು ಜಾತಿ ಸಂಬಂಧದ ಷಷ್ಠೀ ವಿಭಕ್ತಿಯೆಂದು ತಿಳಿದು, ಕಿಸುವೊಳಲ ನಾಡು, ಕೊಪಣ ನಗರದ ನಾಡು, ಪುಲಿಗೆರೆಯ ನಾಡು, ಒಂಕುಂದದ ನಾಡು, ಈ ನಾಲ್ಕು ನಾಡು ಗಳು ಸೇರಿ ಆದ ನಡುವಣ ನಾಡು (ಎಂದರೆ, ಅಖಿಲ ಕರ್ಣಾಟಕದ ನಡುವಣ ನಾಡು) ತಿರುಳ ಕನ್ನಡ ನಾಡಾಗಿರುತ್ತದೆಂದು ಅರ್ಥಮಾಡುವುದು ಯಥಾ ನ್ಯಾಯ ವಾಗಿದೆ; ಏಕೆಂದರೆ, ಕರ್ಣಾಟಕದ ಈ ನಡುವಣ ನಾಡಿನಲ್ಲಿ ತನ್ನ ಭಾಷೆಯು ತಿರುಳ ಕನ್ನಡವೆಂದು ಹೇಳಿಕೊಂಡ ರನ್ನ ಕವಿಯ ಮುಧೋಳ, ಮಳಖೇಡ, ಯಾತಗಿರಿ ಪಟ್ಟಣಗಳು ಸಮಾವೇಶವಾಗುತ್ತವೆ. ಅರ್ಥಾತ್, ಮೇಲೆ ಹೇಳಿದ ಆಪತ್ತಿಯು ಪರಿಹಾರವಾಗುವುದಲ್ಲದೆ ಸರ್ವ ಸಂಗತಿಗಳೂ ಸುಸಂಗತವೂ ಸುವ್ಯಕ್ತವೂ ಆಗುವವು. ಕಿಂಬಹುನಾ, ಅಖಿಲ ಕರ್ಣಾಟಕದಲ್ಲಿಯ ನಡುವಣ ನಾಡು ತಿರುಳ್ಗನ್ನಡ ನಾಡೆಂಬ ಸಮಂಜಸವಾದ ಸಿದ್ಧಾಂತವು ನಿಷ್ಪನ್ನವಾಗುವುದು.

**ನಾರಾಯಣ ಶ್ರೀನಿವಾಸ ರಾಜಪುರೋಹಿತ.**

---

# *ಕವಿಯೂ ಅನುಶಾಸನಕಾರರೂ

ಕಂ ‖ ಹೃದಯಾರವಿಂದ ವಾಸೆಯೆ।
ಮುದದ ಖಣೀ ಪ್ರಣಯ ಮೂರ್ತಿ ಸೊಬಗಿನ ತೆನೆಯೇ ‖
ಮೃದು ಮಧುರ ಹಾಸ್ಯ ನಿನಗಿದು।
ಚದುರೆಯೆ ಹೊಳೆದಿನ್ನು ತೋರು ನವ ನವವಾಗಿ ‖

"ಪ್ರಜ್ಞಾ ನವ ನವೋನ್ಮೇಷಶಾಲಿನೀ ಪ್ರತಿಭಾ ಮತಾ।
ತದನುಪ್ರಾಣನಾ ಜೀವದ್ವರ್ಣನೋ ನಿಪುಣಃ ಕವಿಃ ‖
ತಸ್ಯ ಕರ್ಮ ಸ್ಮೃತಂ ಕಾವ್ಯಂ"

ಕವಿ ಎಂದರೇನು? ಕವಿತೆಯೆಂದರೇನು? ಅವನಲ್ಲಿರಬಹುದಾದ ಆ ಶಕ್ತಿಗೆ ಏನೆನ್ನಬೇಕು? ಮನುಷ್ಯ ಮಾತ್ರದಲ್ಲಿರಬಹುದಾದ ಅದೇ ಶಕ್ತಿಯೇ ಇದು? ಏನಾದರೂ ವ್ಯತ್ಯಸ್ತವಾಗಿ ಇದೆಯೆ? ಎಂದು ಮುಂತಾಗಿ ಜಿಜ್ಞಾಸೆ ಪಡುತ್ತಿರುವ ಒಬ್ಬ ಲಾಕ್ಷಣಿಕನಿಂದ ಮೇಲಿನ ಉದ್ಗಾರಗಳು ಹೊರ ಹೊರಟಿವೆ. ಇದಕ್ಕಿಂತಲೂ ಸೂಕ್ಷ್ಮತರವಾಗಿನ್ನಾರೂ ಹೋಗಿಲ್ಲ. ಈ ಸೊಲ್ಲಿನಲ್ಲಿ ಶಬ್ದ ಶಬ್ದಕ್ಕೂ, ಹುಟ್ಟಿನಲ್ಲಿರುವ ಜೇನ ರಸದಂತೆ, ಅರ್ಥವು ಅಡಕವಾಗಿದೆ. ಇದರಿಂದ, ನಾನೊಂದೊಡಪನ್ನೊಡೆಯಲು ಸಾಹಸಪಡುವೆನು.

**ಪ್ರಜ್ಞೆ**ಯು ಎಲ್ಲರಲ್ಲಿಯೂ ಇರತಕ್ಕುದು. ಅಮರಸಂತೂ, 'ಬುದ್ಧಿರ್ಮನೀಷಾ ಧಿಷಣಾ ಧೀಃ ಪ್ರಜ್ಞಾ ಶೇಮುಷೀ ಮತಿಃ' ಎಂದು ಎಲ್ಲವನ್ನೂ ಒಂದೇ ಸಾಲಿನಲ್ಲಿ ಎಳೆದುಬಿಟ್ಟಿದ್ದಾನೆ. ಇಂತಹ ಪ್ರಜ್ಞೆಯು ನವ ನವೋನ್ಮೇಷ ಶಾಲಿನಿಯಾಯಿತೆಂದರೆ **ಪ್ರತಿಭೆ** ಎನಿಸುವುದು. ಇಂತಹ ಪ್ರತಿಭೆಯೇ ಜೀವನವಾಗಿ ಉಳ್ಳ ವರ್ಣನೆಯ ನಿಪುಣನೇ **ಕವಿ**ಯು. ಅವನ ಸೊಲ್ಲೇ **ಕಾವ್ಯ**ವು.

ಯೋಗದಲ್ಲಿ ಸುಸಂಸ್ಕೃತ 'ಪ್ರಜ್ಞೆಯು' ವಿಷಯಕವಾಗಿ ಹೀಗೆ ಹೇಳಿದೆ:—

ದೇಶ ಬಂಧಶ್ಚಿತ್ತಸ್ಯ ಧಾರಣಾ।
ತಸ್ಯ ಪ್ರತ್ಯಯೈಕ ತಾನತಾ ಧ್ಯಾನಂ।
ತದೇವಾರ್ಥ ಮಾತ್ರ ನಿರ್ಭಾಸಂ ಸ್ವರೂಪ ಶೂನ್ಯಮಿವ ಸಮಾಧಿಃ।
ತ್ರಯಮೇಕತ್ರ ಸಂಯಮಃ ತಜ್ಜಯಾತ್ಪ್ರಜ್ಞಾ ಲೋಕಃ।

ಬಗೆಯು ಅಲುಗದ ಹಾಗೆ ನಿಲ್ಲಿಸುವುದೇ **ಧಾರಣೆ**ಯು. ಹೀಗಾಗುವಲ್ಲಿ ತಲ್ಲೀನವಾಗುವುದೇ **ಧ್ಯಾನ**ವು. ಇದಾದ ಮೇಲೆ ಸ್ವರೂಪವಳಿದು ಒಂದೇ ಒಂದಾಗಿ ತೋರುವುದೇ **ಸಮಾಧಿ**ಯು. ಧಾರಣಾ ಧ್ಯಾನ ಸಮಾಧಿಗಳು

* ಬೆಳಗಾವಿಯ ಕವಿ ಸಮ್ಮೇಲನ (ಮೇ, ೧೯೨೯) ದಲ್ಲಿ ಓದಿದುದು.

ಬಂದಿದ ಮೇಲೆ **ಸಂಯಮವು**ಪಾಯಿತು. ಇಂತಹ ಸಂಯಮವು ಜಯವನ್ನು ಪಡೆದಮೇಲೆ **ಪ್ರಜ್ಞಾಲೋಕವು.**

ಧಾರಣೆಯು ಬರಿಯ ಹಠದಿಂದ ತಿಳಿಯತಕ್ಕುದಲ್ಲ. ಚಿತ್ತವನ್ನು ದುರ್ವಿಷಯಗಳಿಂದ ಕಿತ್ತು ಸದ್ವಿಷಯ ಚಿಂತನೆಯಲ್ಲಿ ನೆಲೆಗೊಳಿಸಿದರೂ ಧಾರಣೆಯಾಗಬಹುದು. ಇದನ್ನು ಭಕ್ತಿ ಯೋಗದಿಂದಲೂ, ಭಾವ ಯೋಗದಿಂದಲೂ ಸಾಧಿಸಬಹುದು. ಕಾವ್ಯ ಯೋಗ ಸಾಧಕನಿಗೆ ಭಾವ ಚಿಂತನೆಯಿಂದ ಚಿತ್ತ ಸ್ಥಿರತೆಯಾಗಿ ಸಂಯಮವಾಗುವುದು. ಆಮೇಲೆ ಆ ಯೋಗಿವರ್ಯನ ಹೃದಯಾಕಾಶದಲ್ಲಿ ಪ್ರಾತಿಭ ಸೂರ್ಯೋದಯವಾಗಿ ಆತನ ನಿರ್ಮಲವಾದ ಭಾವ ಜೀವನಲ್ಲಿ ಬಿಂಬಿಸಿ ಮುಖದಿಂದ ವಾಗ್ಝರಿಯಾಗಿ ಬರುತ್ತದೆ. ಇದಕ್ಕೆಂದೇ ಅವನ ಕೃತಿಗಷ್ಟು ಆದರ. "ನಾನೃಷಿಃ ಕುರುತೇ ಕಾವ್ಯಂ" ಎಂದೆನ್ನುವ ಸಾಹಸವಾದರೂ ಇದಕ್ಕಾಗಿಯೇ.

ಸಾಮಾನ್ಯ ವಸ್ತುವಿನ ಅಸಾಮಾನ್ಯತೆಯನ್ನು ತೋರುವುದೇ ಕವಿಯು ಕಯ್ಕೊಂಡ ಕಾರ್ಯ. ಸಾಮಾನ್ಯತೆಯ ಅಸಾಮಾನ್ಯತೆಯನ್ನು ಹುಡುಕಲು ಅವನಾವಾಗಲೂ ತೊಡಗಿರುವನು. ಈ ಸಂಸಾರ ಸಾಗರದಲ್ಲಿ ಈಸುತ್ತಿರುವಾಗ, ಮುಳುಗು ಬಂದಾಗ ಮುಳುಗಿ ತೇಲು ಬಂದಾಗ ತೇಲಿಯೇ, ಅವನು ಸದ್ರತ್ನಗಳನ್ನು ತೆಗೆವುದು. ಈ ಮುಳುಗು ನಮಗೆ ದುಃಖ ದಾಯಕ, ಅವನಿಗೆ ಆನಂದ ದಾಯಕ. ಅವನ ದೃಷ್ಟಿಯು ಆನಂದ ಪ್ರೇಮಗಳಿಂದ ಕೂಡಿದುದು; ನಮ್ಮದು ದುಃಖ ಮತ್ತು ಅಸಹನಮಯ.

"ಅಸಾರಃ ಸಂಸಾರಃ": ಹೀಗೆ ಇದ್ದುದನ್ನೆಲ್ಲ ಅಸಾರವಾಗಿಸಿಕೊಂಡು, 'ಹಿಂದಿನದೇ ಒಳ್ಳಿತು, ಇಂದಿನದೇನು ? ಪಾಪಿ ಯುಗ' ಎಂದು ಕೊರಗು ಹಚ್ಚಿಕೊಳ್ಳುವುದು ಜಗದ ನಡತೆ; ಆದರೆ ಕವಿಯು ಅಸಾರದಲ್ಲಿಯ ಸಾರವನ್ನು ತೆಗೆದು, ಮುಂದೆ ಜನತೆಗೆ ಜಗವು ಆನಂದ ದಾಯಕವಾಗಲೆಂದು ಹಾರಯಿಸುತ್ತಿರುವನು. ಅವನಾ ಆದೇಶವು—'ಇಗೊ! ಹೀಗೆಯೇ ನಡೆ ; ಇಲ್ಲದಿರೆ ನೋಡೀ ಕಗ್ಗೋಲ' ಎಂದು ಜುಟ್ಟು ಹಿಡಿದು ನಿಲ್ಲಿಸುವ ಪ್ರಭು ಸಮ್ಮಿತಿಯದಲ್ಲ. 'ಅಗೋ! ಅದೊಂದು ಜಾರಿಕೆಯ ದಾರಿ; ಅತ್ತ ಹೋದವರೆಲ್ಲ ಇಂತು ಕೆಟ್ಟಿಹರು' ಎಂದು ಅಳುಬುರುಕತನದಿಂದ ಹೇಳುವ ಮಿತ್ರ ಸಮ್ಮಿತಿಯದೂ ಅಲ್ಲ. "ಕಾಂತಾ ಸಮ್ಮಿತ ತಯೋಪದೇಶಯುಜೇ" ಎಂದು ಪೂರ್ವಜರು ಹೇಳಿದುದರಲ್ಲಿ ಅರ್ಥವುಂಟು. ಭವ ತಾಪದಿಂದ ಬೆಂದು ಬೆಂಡಾಗಿ ಉಸ್ಸೆಂದು ಉಸಿರುಗಳೆಯುತ್ತ ಕುಳಿತ ನಲ್ಲನನ್ನು ಹುರುಪು ಹುಟ್ಟಿಸುವ ಆ ಚಲ್ಲೆಗಂಗಳಿಂದೊಮ್ಮೆ ನೋಡಿ, ಚೆಂದುಟಿಯ ನವಿಯಲಿತ್ತು, "ನಾಥಾ......" ಎಂತೆಂದರೆ ಅದೆಂಥವನು ಆ ಇನಿ ನುಡಿಗೆ ಕಿವಿಗೊಡದವನು !

ಕಾವ್ಯಯೋಗಾರುರುಕ್ಷುವು ಇಹಾಮುತ್ರದಲ್ಲಿ ಸಿರಿಹನು. ಅವನಾ ಯೋಗ ಸಾಧನೆಯಲ್ಲಿ ಪ್ರಾತಿಭ ನೇತ್ರಕ್ಕೆ ಹೊಳೆದ ಅನಿರ್ವಚನೀಯವಾದ ವಿಭೂ

ತಿಯ ದರ್ಶನಾನುಭೂತಿಯನ್ನು, ಅಂತಃಸ್ಫೂರ್ತಿಯಿಂದ ಬರಹಾಗಲಿ, ಬಗರಾಗಲಿ, ಮಾತುಗಳಿಂದ ಒಡನುಡಿದುಬಿಡುವನು. ಅವನದು ನಿರ್ಹೇತುಕವಾದ ಆನಂದ. ಅವನ ಕೃತಿಯು ಶಾಸ್ತ್ರಕಾರರ ಕೃತಿಯಂತೆ ಏಕ ದೇಶೀಯ ಮತಾನುಸರಣೆಯದಲ್ಲ, ಪಕ್ಷಾಭಿಮಾನದ್ದಲ್ಲ, ವಾದದ ಜಂಜಾಟದ್ದಲ್ಲ; ಕಂಡುದನ್ನು ಕಂಡಂತೆಯೇ ಒಡನುಡಿವುದವನ ಕಾರ್ಯ. ಇದನ್ನು ಪೂರ್ವದ ಕವಿಗಳು ಅರಿತಿದ್ದರು. ಆದುದರಿಂದಲೇ ಅವರು ಋಷಿಗಳಾದರು, ಮಂತ್ರದ್ರಷ್ಟರಾದರು. "ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ, ಮನೋ ಮೇ ವಾಚಿ ಪ್ರತಿಷ್ಠಿತಂ" ಎಂಬುದು ಅವರ ಜೀವನ ಮಂತ್ರ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಇಂತಹುದನ್ನರಸುವುದೇ ಅವರ ಹೆಗ್ಗುರಿ. ಕವಿಗೆ ಸತ್ಯಾನ್ವೇಷಣದಲ್ಲಿ ಸ್ಫೂರ್ತಿಯುಂಟಾಗುವುದು. ಇಂತಹ ಸ್ಫೂರ್ತಿಯು ಪ್ರೇರಣೆಯಾಗಬೇಕು; ಎಂದರೆ, "ವಾಚಮರ್ಥೋಽನುವರ್ತತೇ" ಎಂಬುದು ಸಿದ್ಧಿಸುವುದು. ಭಾವೋನ್ಮಾದದ ಸ್ಫೂರ್ತಿ ಮೂಲಕ ಒಳಗಿಂದ ಹೊರಹೊಮ್ಮುವ ದೈವೀ ವಾಣಿಯೇ ಕಾವ್ಯವು. ಅದುವೇ ಅಪೌರುಷೇಯವೆಂದು ಹೊಗಳಿಸಿಕೊಳ್ಳುವುದು. ಇಂಥದಕ್ಕೇ ಸಿಕ್ಕದುದು ಬೃಹದಾರಣ್ಯಕದ ಈ ಸನ್ನದು:—

> ಏವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ಸರ್ವಾಣಿ ನಿಃಶ್ವಸಿತಾನಿ. (ಬೃ. ಮ. ೨, ಬ್ರಾ. ೪, ಮಾ. ೧೦)—

(ಋಗ್ಯಜುಸ್ಸಾಮಾಥರ್ವಗಳು ಆ ಮಹಾ ಪುರುಷನ ನಿಃಶ್ವಸಿತಗಳು; ಇದೇ ಪ್ರಕಾರವಾಗಿ ಇತಿಹಾಸ ಪುರಾಣೋಪನಿಷದಾದಿಗಳೂ ಕವನಗಳೂ ಸೂತ್ರವ್ಯಾಖ್ಯಾನಗಳೂ ಆತನ ನಿಃಶ್ವಸಿತಗಳೇ.)

ಇಲ್ಲಿ ಒಂದೆಡೆಗೆ ವೇದೋಪನಿಷತ್ತುಗಳನ್ನೂ ಇನ್ನೊಂದೆಡೆಗೆ ಇತಿಹಾಸ ಪುರಾಣಾದಿಗಳನ್ನೂ ಹೇಳಿ, ಇವೆರಡೂ—ಇವೆಲ್ಲವೂ ಆತನ ನಿಃಶ್ವಸಿತಗಳೆಂದು ಹೇಳಿದೆ. ವೇದೋಪನಿಷತ್ತುಗಳಿಗೆ 'ಶ್ರುತಿ'ಗಳೆಂದೆನ್ನುವ ವಾಡಿಕೆ; ಆದರೆ ಇತಿಹಾಸ ಪುರಾಣ ಕಾವ್ಯಾದಿಗಳಿಗೆ ಇಲ್ಲ. ಹೀಗಿದ್ದರೂ, ಇವೆಲ್ಲವೂ 'ನಿಃಶ್ವಸಿತ'ಗಳೆಂದು ತಿಳಿವ ಉಪನಿಷತ್ಕಾರರ ಧೋರಣವೇನೆಂಬುದನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಇಂತಹ ಮಹತ್ತತ್ತ್ವಗಳನ್ನುಸಿರುವುದು ಮಾನವನ ಮಾತಲ್ಲ. ಅವನು ಸಾಧನೆಯ ಸಾನ್ನಿಧ್ಯವನ್ನೈದಿದಾಗ ದೈವೀ ಸ್ಫೂರ್ತಿಯ ಪ್ರೇರಣೆಯಿಂದ ಮನೋಭೂಮಿಯಲ್ಲಿ ಕಾಣಿಸಿಕೊಂಡ ಮಂತ್ರಗಳನ್ನೇ ಉಚ್ಚರಿಸುವನು. ಅದಕ್ಕಾಗಿ ಅವನೇನು ಅವುಗಳ ಕರ್ತೃವಲ್ಲ; ಅವನಂತರಾತ್ಮವೇ ನಿಜವಾಗಿ ಅವುಗಳ ಕರ್ತೃ. ಇದೇ ತೆರನಾಗಿ ಆಯುರ್ವೇದ, ಧನುರ್ವೇದ, 'ಭಾರತಃ ಪಂಚಮೋ ವೇದಃ' ಮೊದಲಾದುವೆಲ್ಲವೂ ವೇದಗಳು. ಇದು ಏತರ ದ್ಯೋತಕ? ಎಲ್ಲಕ್ಕೂ ಈಶ್ವರ ಸೃಷ್ಟಿಯೆಂದು 'ಅಪೌರುಷೇಯ'ತ್ವಕ್ಕೆ ಗುರಿಮಾಡಿಬಿಡುವು

ದೊಂದು ನಮ್ಮವರ ಹೆಗ್ಗುರಿ. ವಾಕ್ಕು ವ್ಯಾಕರಣದಿಂದ ಬದ್ಧ; ಕವಿಯು ಕವಿತೆಯಿಂದ ಬದ್ಧ; ನುಡಿಗೂ ನುಡಿಗಟ್ಟಿಗೂ ವಾಗರ್ಥದಂತೆ ಸಂಬಂಧ. ಛಾಂದಸ ನಿಯಮಗಳನ್ನು ಮೀರಿ ಕವಿಯು ಹೊರಡಲಾಗದು. ಆದರೆ ಲಕ್ಷ್ಯ ಗಳಿಂದಲೇ ಲಕ್ಷಣಗಳೆಂಬುದನ್ನು ಮರೆಯದಿರಿ.

ಇನ್ನು, ಶ್ರುತಿಗಳ ಕಾಲದಿಂದ ಆಧುನಿಕ ಕಾವ್ಯ ಕಾಲದ ವರೆಗೆ ಸಿಂಹಾವ ಲೋಕನ ಮಾಡೋಣ. ಶ್ರುತಿಕಾಲದಲ್ಲಿ ಶಬ್ದಾನುಶಾಸನವಿರಲಿಲ್ಲ; ಅವರೆಂದುದೇ ಶಬ್ದ ಸಿದ್ಧಿ; ಆ ರೂಪಗಳಿಗನುಗುಣವಾಗಿಯೇ ಸೂತ್ರ ನಿರ್ಮಾಣ. ಆಗ್ಗೆ ಛಾಂದಸ ನಿಯಮಗಳಿರಲಿಲ್ಲ; ಅವರೆಂದುದೇ ಛಂದ; ಅವರ ವಾಕ್ಸರಣಿಗನುಸಾರ ವಾಗಿಯೇ ಛಾಂದಸ ನಿಯಮಗಳಾದುವು.

ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ।
ಕ್ಷುರಸ್ಯ ಧಾರಾ ನಿಹಿತಾ ದುರತ್ಯಯಾ।
ದುರ್ಗಂ ಪಥಸ್ತತ್ಕವಯೋ ವದಂತಿ

ಇಲ್ಲಿ 'ಜಾಗ್ರುತ' ಎಂಬ ಮೂರಕ್ಷರಗಳನ್ನುಳಿದರೆ ಆ ಪಾದವೂ, ಎರಡನೆಯ ಪಾದವೂ 'ವಂಶಸ್ಥ' ವೃತ್ತದಲ್ಲಿಯೂ, ಹಾಗೂ ಮೂರನೆಯ ಪಾದವು 'ಉಪೇಂದ್ರ ವಜ್ರಾ' ವೃತ್ತದಲ್ಲಿಯೂ ಪ್ರಕಟವಾಗಿವೆ. ಹೀಗಾಗಿ ಈ ವಚನವು ಮೂರು ಚರಣದ 'ಉಪಜಾತಿ' ವೃತ್ತವಾಗಿದೆ. ಋಷಿಗಳೇನೂ ಉಪಜಾತಿ ವೃತ್ತ ಮಾಡಲು ಹಾರಯಿಸಿರಲಿಲ್ಲ; ಆ ತೆರನಾಗಿ ವಾಕ್ಕೇ ಆವಿರ್ಭವಿಸಿದೆ. ಇದೇ ಪ್ರಕಾರವಾಗಿ ಈ ಕಾಲದಲ್ಲಿ ಹಲವೆಡೆಗಳಲ್ಲಿ ಗದ್ಯಗಳೂ ಪದ್ಯಗಳೂ ಉಂಟಾಗಿವೆ.

ಇದರ ತರುವಾಯ ಪುರಾಣ ಕಾಲವು. ಇದು ಛಾಂದಸ ಕಾಲಕ್ಕಿಂತ ಅರ್ವಾಚೀನವು. ಅನುಶಾಸಕರ ಹಾವಳಿ ಮಾತ್ರ ಈ ಕಾಲದಲ್ಲಿರಲಿಲ್ಲ. ಈ ಕಾಲದ ಕವಿಗಳು ಹಲವೆಡೆಗೆ ವೃತ್ತಿ ತನ್ಮಯತೆಯಲ್ಲಿ ಗದ್ಯಗಳನ್ನೂ,

ತೇ ತಂ ಭುಕ್ತ್ವಾ ಸ್ವರ್ಗ ಲೋಕಂ ವಿಶಾಲಂ।
ಕ್ಷೀಣೇ ಪುಣ್ಯೇ ಮರ್ತ್ಯ ಲೋಕಂ ವಿಶಂತಿ ॥
ಏವಂ ತ್ರಯೀ ಧರ್ಮಮನುಪ್ರಪನ್ನಾ।
ಗತಾಗತಂ ಕಾಮ ಕಾಮಾ ಲಭಂತೇ ॥

ಎಂಬ ಸಂಕರ ವೃತ್ತಗಳನ್ನೂ ಉಸಿರಿದ್ದಾರೆ. ಇಲ್ಲಿ ಒಂದೆರಡನೆಯ ಚರಣ ಗಳು 'ಶಾಲಿನೀ' ವೃತ್ತದಲ್ಲಿಯೂ, ಮೂರನೆಯ ಚರಣವು 'ಇಂದ್ರವಜ್ರಾ' ವೃತ್ತ ದಲ್ಲಿಯೂ, ನಾಲ್ಕನೆಯದು 'ಜಗಣ'ವೂ, ಎರಡು 'ತಗಣ'ಗಳೂ, ಎರಡು 'ಗುರು' ಗಳೂ ಉಳ್ಳ ಯಾವುದೋ ಒಂದು ಅಜ್ಞಾತ ವೃತ್ತದ ಚರಣವಾಗಿಯೂ ಇದೆ. ಇಂಥ ನಾಲ್ಕು ಚರಣಗಳಿಂದ ಕೂಡಿದ ಇಂಥ ವೃತ್ತಗಳಿಗೆ ಛಾಂದಸರು ಏನೆಂದು ಸಂಜ್ಞೆಗೊಟ್ಟಿದ್ದಾರೆ?

ಪುರಾಣ ಕಾಲದ ತರುವಾಯ ಅನುಶಾಸಕರ ಯುಗವು ಪ್ರಾರಂಭವಾಗಿದೆ ಎನಿಸುತ್ತದೆ. ಅಲ್ಲಿಂದ ಪ್ರಕಟವಾದ ಕಾವ್ಯ ನಾಟಕಗಳಲ್ಲವೂ ಅನುಶಾಸಕರ

ಅನುಶಾಸನ ಶೃಂಖಲೆಗಳಿಂದ ಬದ್ಧವಾಗಿವೆ. ಕವಿ ಸಮಯ ಸೂಚಕವಾದ ವರ್ಣನೆ, ಒಂದೊಂದೇ ವೃತ್ತದ ಒಂದೊಂದು ಸರ್ಗ—ಇವರ ಕಾಲದಲ್ಲಿಯೇ ಕಾವ್ಯಗಳಲ್ಲಿ ಪ್ರವೇಶಿಸಿವೆ. ಆದರೂ ಕಾವ್ಯಯೋಗಸ್ಥನಾದ ಕವಿಯು 'ಪ್ರಜ್ಞಾ ಕುಂಡಲಿನಿ'ಯು 'ಭಾವಕಮಲ'ವನ್ನೈದಿದಾಗ, 'ಪ್ರತಿಭಾ ಸಾಕ್ಷಾತ್ಕಾರ'ವಾಗಿ ನವ ನವೋನ್ಮೇಷ ಸ್ಫೂರ್ತಿಯಿಂದ ಒಡನುಡಿವಾಗ, ಒಂದೇ ಕಾವ್ಯದಲ್ಲಿ, ಒಂದೇ ಸರ್ಗದಲ್ಲಿ, ವಿವಿಧ ವೃತ್ತಗಳೂ ವಾಕ್ಯಗಳೂ ಗದ್ಯಗಳೂ ಉಂಟಾದುವು. ಆಮೇಲೆ 'ಗದ್ಯ ಪದ್ಯಾತ್ಮಕಂ ಕಾವ್ಯಂ ಚಂಪೂರಿತ್ಯಭಿಧೀಯತೇ' ಎಂಬ ಶಾಸನವು ಜನಿಸಿರಬಹುದು.

ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಚಂಪೂ ಗ್ರಂಥಗಳೂ ಹಾಡುಗಬ್ಬಗಳೂ ಹೆಚ್ಚು; ಇದೇಕೆ? ಮಾಘ ನೈಷಧಾದಿಗಳಂತಹ, ಒಂದೇ ವೃತ್ತವು ಒಂದೊಂದು ಸರ್ಗದಲ್ಲಿರುವ, ಕಾವ್ಯಗಳೇಕಿಲ್ಲ?

ನುತ ಶಬ್ದಾಲಂಕಾರದೊ।
ಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ ॥

ಎಂದು ಎದೆಗೆ ಕೈ ಹಚ್ಚಿಕೊಂಡು ನುಡಿದ ಆಲಂಕಾರಿಕರು 'ರಗಳೆ'ಗಳಲ್ಲಿ 'ಪ್ರಾಸ' ಯಾವ ತೆರನಾಗಿರಬೇಕೆಂದು ಹೇಳಿರುವರು? ಇದನ್ನೆಲ್ಲವನ್ನೂ ವಿಮರ್ಶಿಸಿ ನೋಡಿದರೆ, "ನಿರಂಕುಶಾಃ ಕವಯಃ"—ಕವಿಯು ಅನ್ಯರ ಇಚ್ಛಾನುವರ್ತಿಯಲ್ಲ. ಅವನು ಬಾಹ್ಯ ಬಂಧನದಿಂದ ಬದ್ಧನಲ್ಲ. ಅವನ ನುಡಿಯೂ ಬದ್ಧವಲ್ಲ, ಕೃತಿಯೂ ಬದ್ಧವಲ್ಲ. ನಿಸರ್ಗಕ್ಕೆ ನಿಯಮ ಉಂಟೇ? ಅವನು ಪ್ರಾತಿಭ ಲೋಕವನ್ನೈದಿದಾಗ ಅಲ್ಲಿ ಕಂಡುಂಡ ಅನುಭೂತಾನುಭವಗಳನ್ನು ಹೇಗೋ ಒಡನುಡಿದು ಬಿಡುವನು. ಅವು ವಾಕ್ಯಗಳೇ ಆಗಲಿ, ಪದ್ಯಗಳೇ ಆಗಲಿ, ಗದ್ಯಗಳೇ ಆಗಲಿ ನುಡಿದು ಬಿಡುವುದೊಂದೇ ಆತನ ಕಾರ್ಯ.

ಶಾಸ್ತ್ರದಲ್ಲೊಂದು ಜಗಳವುಂಟು: ಜೀವನ್ಮುಕ್ತನಾದ ಮಾನವನು ಲೋಕಾರಾಧನೆಯಂತಹ ಕರ್ಮವನ್ನಾಗಲಿ ನಿತ್ಯ ನೈಮಿತ್ತಿಕ ಕರ್ಮವನ್ನಾಗಲಿ, ಅಥವಾ ಮತ್ತಾವುದೋ ತೆರದ ಕರ್ಮವನ್ನಾಗಲಿ ಮಾಡಬೇಕೊ? ಮಾಡಬಾರದೊ? ಎಂದು. ಒಂದು ಪಕ್ಷ ಮಾಡಿಯೇ ತೀರಬೇಕೆಂದು, ಮತ್ತೊಂದು ಪಕ್ಷ ಮಾಡಕೂಡದೆಂದು. ಜಗದ್ಬಂಧನಗಳನ್ನೆಲ್ಲ ಕಿತ್ತು ಬೀಸಾಡಿ ಸ್ವಾತ್ಮಾನಂದ ಸುಧೆಯನ್ನುಂಡು ತಾನೆ ತಾನಾಗಿ "ಅಹಮನ್ನಮಹಮನ್ನಮಹಮನ್ನಂ" ಎಂದು ಸಾಮಗಾನ ಮಗ್ನವಾದ ಆ ಆನಂದಮಯನೆಲ್ಲಿ? ಈ ವಾದದ ಪರಿವೆ? ಅವನ ಮುಂಗೈ ಹಿಡಿದು ಹೇಳುವವರಾರು "ನಿಯತಂ ಕುಲ ಕರ್ಮತ್ವಂ" ಎಂದು?

ಅನುಶಾಸನಕಾರರಾದರೂ ಇದೇ ತೆರನಾಗಿಯೇ ಕವಿಯ ಸುತ್ತೂ ಕಯ್ತೊಳೆದುಕೊಂಡು ಬೆನ್ನು ಹತ್ತಿರುವರು. ಅವರಾ ಬಂಧನೆಯಿಂದ ಕವಿತಾ ಪ್ರಪಂಚಕ್ಕೆ ವಿಶೇಷ ಹಾನಿಯಾಗದೆಯೇ ಹೊರತು ಲಾಭವೇನೂ ತಟ್ಟಿಲ್ಲ. ಪ್ರಾತಿಭ ಕಲಾ ನಿಧಿಯ ಸ್ನಿಗ್ಧ ಜ್ಯೋತ್ಸ್ನೆಯಲ್ಲಿ ಮೆಯ್ಯರೆದು ಭಾವವೆಂಬ ಗರಿಗಳಿಂದ ಮನ ಬಂದ ಹಾಗೆ ವಿಹರಿಸುವ ಕವಿ ಚಕೋರಕಗಳಿಗೆ ಇಂತಹ ಎಲ್ಲೆಯನ್ನು ಕಟ್ಟಿ ಅವರ ಸ್ವಾತಂತ್ರ್ಯವನ್ನು ನಿರ್ನಾಮ ಮಾಡಿದ ಲಾಕ್ಷಣಿಕರ ನಿಯಮಗಳು

ಕಾವ್ಯಗಳ ಸೊಬಗನ್ನೂ ಸ್ವರೂಪವನ್ನೂ ಉದ್ದೇಶವನ್ನೂ ಮಾಧುರ್ಯವನ್ನೂ ಬಹ್ವಂಶದಿಂದ ನಾಶಪಡಿಸಿರುವುವೆಂದರೆ ನವ ಯುಗದ ನವ ದೃಷ್ಟಿಯ ನನ್ನ ಬಂಧುಗಳು ನನ್ನನ್ನು ನಿಂದಿಸರೆಂದು ನಂಬುಗೆಯಿದೆ. ಇದರ ಸತ್ಯತೆಯ ನಿದರ್ಶನಾರ್ಥ ಒಂದೆರಡು ನುಡಿಗಳನ್ನು ಉದಾಹರಿಸುವೆನು.—

ಕಾವ್ಯಾವಲೋಕನದ ಕವಿಸಮಯಾಧಿಕರಣದಲ್ಲಿ ನಿಯಮಾರ್ಥಪ್ರಕರಣದ—

ಜಳಧಿಯೊಳೆ ತಿಮಿ ತಿಮಿಂಗಿಳ|
ಗಿಳ ಮಕರ ಪ್ರಕರ ಶಂಖ ಸಂಭವಮಕ್ಕುಂ ||

ಎಂಬ ೩೨೪ನೆಯ ಸೂತ್ರಕ್ಕೆ ಉದಾಹೃತವಾದ—

ಮಿಳಿರ್ವರುಣಧ್ವಜಂಗಳ ನೆೞಲ್ಗಳನೊಂದೆರೆಗೆತ್ತು ವಾರ್ಧಿಯೊಳ್ |
ಪೊಳೆವೆಳವಾಳೆಗಳ್ ಕರ್ದುಕೆ ಬಾಳೆಗಳಂ ತಿಮಿ ನುಂಗೆ ನುಂಗಿದಾ ||
ಗಳೆ ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂ|
ಗಿಳಮುಮನಾ ತಿಮಿಂಗಿಳಗಿಳಂ ತವೆ ನುಂಗಿದುದೊಂದು ತಾಣದೊಳ್ ||

ಈ ಪದ್ಯವನ್ನೂ, ಜೈಮಿನಿ ಭಾರತದ ಆರನೆಯ ಸಂಧಿಯೊಳಗಣ ಲಕ್ಷ್ಮೀಶನ ಈ ಕೆಲ ನುಡಿಗಳನ್ನೂ ನೋಡಿ:—

. . . . . . . . . . . . . . . . . . . . . . . . . . |
. . . . . . . . . . . . . . . . . . . . . . . . . . . . . .ಕಂಡ ನಗ|
ಕುಲದ ಪವಿ ಘಾತ ಭಯ ಶಮನೌಷಧಿಯನತುಲ ಕಲ್ಲೋಲ ನಿರವಧಿಯನು ||
ಜಳ ಜಂತು ಚಾರಣ ವಿಧಿಯನಿಳಾ ಮಂಡಲವ|
ಬಳಸಿದ ಪರಿಧಿಯನಪಹೃತ ಗಣಿತ ಸುಧೆಯನವಿ|
ರಳ ಘೋಷದುದಧಿಯನನೇಕ ರತ್ನ ಪ್ರತತಿಗಳ ನಿಧಿಯನಂಬುಧಿಯನು ||

*　　*　　*

ಕ್ರೂರ ಕರ್ಕಟಕ ಕಟಕಂ ಕಮಠ ಮಠಮಿಡಿದ|
ನೀರಾನೆಗಳ್ ನೆಗಳ್ವೆಡೆ ಮುದ ಮುದಯ್ಪು ಶಾ|
ಲೂರ ಕುಲ ರಾಜಿ ರಾಜಿಪ ಗೃಹಂ ನಿಬಿಡ ಗಂಡೂಪದ ಪದಂ ಪೆರ್ಚಿದ ||
ಘೋರತರ ಸಮುದಗ್ರದಗ್ರಾಹ ಭವ ಭವನಮಂ|
ಭೂರಿ ಭೀಕರ ಮಕರಮಹಿ ತಿಮಿ ತಿಮಿಂಗಿಲ ಕ|
ಠೋರತರ ರಾಜೀವ ಜೀವ ಪ್ರತತಿ ವಾಸವಾ ಸಮುದ್ರದೊಳೆಸೆದುದು ||

ಇಲ್ಲಿಗೆ ಸೂತ್ರದಲ್ಲಿ ಹೇಳಿದಂತೆ 'ತಿಮಿ ತಿಮಿಂಗಿಳ', 'ಮಕರ', ಇವಲ್ಲದೆ 'ಕರ್ಕಟಕ', 'ನೀರಾನೆ' ಮೊದಲಾದುವೆಲ್ಲವೂ ಬಂದುದಾಯ್ತು. ಆದರೆ ಈ ಮುಂದಣ ನುಡಿಯ ಆವಶ್ಯಕತೆ ಏನೊ?

ಸುಳಿದೊಂದು ಮೀನ ಮೀನ್ನುಂಗಿತಾ ಮೀನನಾ|
ಗಳೆ ನುಂಗಿತೊಂದು ಮೀನಾ ಮೀನು ನುಂಗಿದುದು|
ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾ ಮೀನು ನುಂಗಿತೊಂದು ||

ತೊಳ ತೊಳಲುತೊಂದನೊಂದಿಂತು ನುಂಗಲ್ ತಿಮಿಂ।
ಗಿಳಮೆಲ್ಲಮಂ ನುಂಗುತಿರ್ಪುದೆನೆ ಬೆದರಿ ಮಿಾನ್।
ಗಳು ತಿರುಗುತಿರ್ದುವೆರಕಗಳೊಡನೆ ಮುಂ ಪೊಕ್ಕ ಗಿರಿಗಳೆಡೆಯಾಡುವಂತೆ ॥

ಇವುಗಳು ಸಮುದ್ರ ವರ್ಣನೆಯ ಕವಿತೆಗಳು. ಏತಕ್ಕೆಂದರೆ, ಪ್ರತಿಯೊಂದು ನುಡಿಯಲ್ಲಿಯೂ 'ವಾರ್ಧಿಯೊಳ್,' 'ಅಂಬುಧಿಯನು,' 'ಸಮುದ್ರದೊಳು' ಮೊದಲಾದ 'ಉದಧಿ' ಪರ್ಯಾಯ ನಾಮಗಳು ಬಂದಿವೆಯೆಂದು. ಆದರೆ ಕಡೆಯ ನುಡಿಯನ್ನು ಮಾತ್ರ, ಇಂಥದರ ವರ್ಣನೆಯೇ ಇದು, ಎಂದು ಗುರುತಿಸುವುದು ಕಷ್ಟವಾದರೂ, 'ತಿಮಿಂಗಿಳ ಗಿಳ' ಮೊದಲಾದ ಮಹಾ ಮಹಾ ಜಲಚರ ಪ್ರಾಣಿಗಳ ಉಲ್ಲೇಖ ಬಂದಿದೆಯೆಂದಮೇಲೆ ಇದೂ ಬಹುತರವಾಗಿ ಸಮುದ್ರ ವರ್ಣನೆಯೇ ಇರಬಹುದೆಂದು ಊಹಿಸಬೇಕಾಗಿ ಬರುವುದು. ಈ ತೆರನಾಗಿ ಅದರಲ್ಲಿರುವ ಪ್ರಾಣಿಯ ನಾಮ ಸಾಮ್ಯ ಯೋಗದಿಂದ ಸಮುದ್ರ ವರ್ಣನೆಯೇ ಎಂದು ತಿಳಿಯಬೇಕೇ ಹೊರತು ನೈಸರ್ಗಿಕ ಸಮುದ್ರದ ಇರವನ್ನು ಕಣ್ಮುಂದೆ ತಂದಿರುವ ಶಬ್ದ ಭಾವಗಳಿಂದಲ್ಲ. "ವೃದ್ಧಾಸ್ತೇ ನ ವಿಚಾರಣೀಯ ಚರಿತಾಃ" ಎಂದು.... ಸ್ವಲ್ಪ ಆಚೆ ಹೋಗಿ......ನಿಂತು ಹೇಳುವುದಾದಲ್ಲಿ—ಈ ಕವಿಗಳಿರ್ವರೂ ಸಮುದ್ರವನ್ನೇನೂ ನೋಡಿರಲಿಕ್ಕಿಲ್ಲ. ಕಾವ್ಯಾವಲೋಕನದಂಥ ಇಂತಹ ಸೂತ್ರಗಳನ್ನು ನೋಡಿಯೇ ಸಮುದ್ರದ ಇರವನ್ನು ಊಹಿಸಿ ವರ್ಣಿಸಿರುವರೇನೊ? ಎಂದು ಸಂದೇಹಬಡಬೇಕಾಗಿ ಬರುವುದು. ಇದರಿಂದ, ನೈಸರ್ಗಿಕ ವರ್ಣನೆಯ ಕವಿತೆಗಳು ಇಲ್ಲವೇ ಇಲ್ಲವೆಂದು ತಿಳಿಯಕೂಡದು. ಸಂಪೂರ್ಣ ಪ್ರತಿಭಾವತಾರಿಗಳೇ ಆದ ಇಂತಹ ಮಹಾ ಮಹಾ ಕವಿಗಳ ವಾಗ್ಝರಿಯೂ ಕೂಡ ಲಾಕ್ಷಣಿಕರ ಬಂಧನಕ್ಕೆ ಹೇಗೆ ಒಳಗಾಗಿದೆ ಎಂಬುದನ್ನು ತೋರುವುದೇ ಇಲ್ಲಿ ಅಭಿಮತ. ಲಕ್ಷ್ಮೀಶನ ಈ ಕಡೆಯ ಪದ್ಯಕ್ಕೂ ಕಾವ್ಯಾವಲೋಕನದ ಸೂತ್ರಕ್ಕೆ ಉದಾಹೃತವಾದ ಆ ಮೇಲಿನ ಪದ್ಯಕ್ಕೂ ಎಲ್ಲಿ, ಯಾವ ಭೇದವಿದೆಯೆಂಬುದನ್ನು ನಾನೂಹಿಸಿ ತಿಳಿಯಲಾರೆನು. ಹೀಗೆಲ್ಲ ಲಾಕ್ಷಣಿಕರ ಹಾವಳಿಗೊಳಗಾದ ಭಾರತೀಯ ಸಾಹಿತ್ಯವನ್ನೆಲ್ಲ ನೋಡಿದತ್ತ ಒಂದೇ ಮಟ್ಟು. ವರ್ಣನಾ ಭಾಗಗಳಿಗೇನೂ ಕೊರತೆ ಇಲ್ಲ. ಪಾಪ! ಕವಿಗಳೇನು ಮಾಡ್ಯಾರು? ತಂತಮ್ಮ ಯೋಗ್ಯತಾನುಸಾರ ಒಂದೇ ವಸ್ತುವನ್ನು ವಿವಿಧ ಶಬ್ದಗಳಿಂದ ಒಂದೇ ಬಗೆಯಾಗಿ ವರ್ಣಿಸಿದುದು ಕಂಡುಬರುವುದು; ಅಥವಾ, ಶಾಸ್ತ್ರಕಾರರ ಉದ್ದೇಶವೇ ಬೇರೆ ಇರಬಹುದೆ? ಏನಿದ್ದರೂ ಜನತೆಗೆ ಆ ಉದ್ದೇಶ ಸಾಧನೆಯ ಮಟ್ಟಲಿಲ್ಲವಲ್ಲಾ! ಇಷ್ಟೇ ಅಲ್ಲ; ಅದನ್ನು ವಿಪರೀತವಾಗಿ ಉಪಯೋಗಿಸಿಕೊಳ್ಳಹತ್ತಿದೆ. ಆದುದರಿಂದಲೇ ನಮ್ಮ ಸಾಹಿತ್ಯದಲ್ಲಿ ವಿವಿಧತೆಯುಂಟಾಗಲಿಲ್ಲ. ನಾಟಕವನ್ನೇ ನೋಡಲಿ, ಕಾವ್ಯವನ್ನೇ ನೋಡಲಿ—ಮೊದಲು ಹೇಗೊ ನಾಯಕ ನಾಯಿಕೆಯರ ಸಂದರ್ಶನ, ಅಲ್ಲಿಯೇ ಪ್ರೇಮೋದಯ, ಆಮೇಲೆ ವಿರಹ ತಾಪ, ಅಲ್ಲಿಂದ ಸಂಘಟನ; ಆಯಿತು ಒಂದು ನಾಟಕದ ಹೊಳಹು. ಇನ್ನು, ಮಹಾ ಕಾವ್ಯವನ್ನು ಮಾಡಬೇಕಾಗಿದ್ದರೆ ಲಾಕ್ಷಣಿಕರ ಹೇಳಿಕೆಯಂತೆ—

ಉದಧಿ ಪುರಾಧಿಪ ಸುತಮಂ।
ತ್ರಿ ದೂತ ಗಮನಾಜಿ ವಿರಹ ಪರಿಣಯ ಸುರತ ||
ರ್ತು ದಿನೇಶ ಚಂದ್ರ ಮಧು ಕುಭೃ।
ದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ ||

ಈ ಪ್ರಕಾರ ಅಷ್ಟಾದಶ ವರ್ಣನೆಗಳನ್ನೂ "ಸಕಾರನಾನಾರಕಾಸಕಾಯ ಸಾದದಸಾಯಕಾ" ಎಂಬಂಥ ಹಲ ಕೆಲವು ಬಂಧಗಳನ್ನೂ ಅಷ್ಟು ಜೋಡಿಸಿದರಾಯಿತು. ನಾಯಕ ನಾಯಿಕಾ ನಿರ್ಮಾಣ ವಿಷಯದಲ್ಲಿಯ ಕಟ್ಟನ್ನಂತೂ ಹೇಳಲಿಕ್ಕಾಗದು. ಅಂಥಿಂಥ ನಾಯಕನನ್ನು ಆರಿಸಕೂಡದು: 'ಧೀರ ಲಲಿತ,' 'ಧೀರಪ್ರಶಾಂತ,' 'ಧೀರೋದಾತ್ತ', 'ಧೀರೋದ್ಧತ'—ಇವುಗಳಲ್ಲೊಂದು ವೃತ್ತಿಯುಳ್ಳವನನ್ನೇ ನಾಯಕನನ್ನಾಗಿ ಮಾಡಬೇಕು. ಸಾಮಾನ್ಯ ನಾಯಕನನ್ನು 'ಧೀರಲಲಿತ'ನನ್ನಾಗಿ ವರ್ಣಿಸಕೂಡದು. ಇಂಥಿಂಥ ನಾಯಕನಿಗೆ ಇಂಥಿಂಥ ನಾಯಿಕೆಯನ್ನೇ ಜೋಡಿಸಬೇಕು; ಇಂಥಿಂಥ ಪಾತ್ರದ ಭಾಷೆ ಹೀಗೆಯೇ ಇರಬೇಕು; ಇಂಥಿಂಥಲ್ಲಿ ಇಂಥಿಂಥ ವರ್ಣನೆಗಳೇ ಬರಬೇಕು; ಆ ವರ್ಣನೆಗಳ ಬಗೆಯೂ ಹೀಗೆಯೇ ಇರಬೇಕು; ಇಂಥ ಕೃತಿಗೆ ಅಂಕಗಳಿಷ್ಟು, ಆಶ್ವಾಸಗಳಿಷ್ಟು, ಪ್ರಕರಣಗಳಿಷ್ಟು; ಇಂಥಿಂಥಲ್ಲಿ ಇಂಥಿಂಥ ರೀತಿಗಳನ್ನೇ ಉಪಯೋಗಿಸಬೇಕು; ಇಂಥಿಂಥ ಅಲಂಕಾರಗಳು ಇಂಥಿಂಥಲ್ಲಿ ಬರಬೇಕು; ಶಬ್ದ ಸೌಷ್ಠವವು ಹೀಗಿರಬೇಕು; ವೃತ್ತಗಳು ಅಪ್ರಸಿದ್ಧಗಳಾಗಬಾರದು—ಎಂದು ಮುಂತಾಗಿ ಅಸಂಖ್ಯ ನಿಯಮ ಸಂಕಲೆಗಳಿಂದ ಭಾರತೀಯ ಕಾವ್ಯ ಪುರುಷನನ್ನು ಬಿಗಿಯಾಗಿ ಬಿಗಿದು ನಿಬಿಡಾಂಧಕಾರಮಯವಾದ ಒಂದು ಗುಹೆಯಲ್ಲಿ ಒಗೆದುಬಿಟ್ಟಿದ್ದಾರೆ. ಪಾಪ! ಅಂಥದರಲ್ಲಿಯೂ ಆ ಪ್ರತಿಭಾ ಪುತ್ರನ ದೇದೀಪ್ಯಮಾನವಾದ ಪ್ರಾತಿಭ ನೇತ್ರಗಳು ಥಳ ಥಳಿಸುತ್ತಿವೆ. ಬನ್ನಿರಿ, ಅವನ ಉಪಾಸಕರಾದ ನಾವು ಆ ಬಂಧನೆಗಳನ್ನೆಲ್ಲ ಹರಿದೊಗೆದು ಅವನನೆತ್ತಿಕೊಂಡು ಆಕಾಶಕ್ಕೆ ಹಾರಿ ಸ್ವಚ್ಛಂದವೂ ಪ್ರಶಾಂತವೂ ಆದ ಆ ನಭಃಸ್ಥಳದಲ್ಲಿ ಭಾವವೆಂಬ ಗರಿಗಳನ್ನು ಕೆದರಿ 'ಭುರ್' ಎಂದು ಹಾರೋಣ!

ಭಾವದ ಗರಿಗಳ ಮೇಲೇರಿ ಹಾರುತ।
ಭಾವಿ ಪ್ರಪಂಚದೊಳಿರುವೆವು ನಾವು ||
ನಾವು ನೋವೆಂಬುದರರ್ಥವನರಿಯೆವು।
ನಾವು ನಿರಂಕುಶ ನಿರ್ಜರರು || (ಜಯಕರ್ನಾಟಕ, ಸಂ. ೧, ಪುಟ ೬೦೭)

ಭಾವ ಸುಧೆಯು ಮಳೆಗರೆವೆವು ಕುಡಿಯಿರಿ।
ಆವ ಬಂಧನವನೂ ನೆನೆಯದಿರಿ ||
ಭಾವಿ ಪ್ರಪಂಚಕೆ ದುಡುಕಿರಿ ಏರಿರಿ।
ಶೀವಿರಿ ಭಾರತವಂ ನಿರ್ಜರರು ||

ನಾ. ಭಾ.

# ಗ್ರಂಥ ವಿಮರ್ಶೆ

---

## ೧. ನಾಡದೇವಿ

ಸಂಪಾದಕರು.—ಮೇವುಂಡಿ ಮಲ್ಲಾರಿ, ಧಾರವಾಡ.

ಪ್ರಕಾಶಕರು.—ಹೇಜೀಬ ರಾಮಚಂದ್ರ, ಕನ್ನಡಿಗರ ಕೂಟ, ಧಾರವಾಡ.

**ಡೆಮ್ಮೆ ಸಣ್ಣ ಪುಟ ೨೪ ; ೧೯೨೯ ; ಬೆಲೆ ೪ ಆಣೆ.**

ಈ ಗ್ರಂಥದಲ್ಲಿ ೧೩ ಕವಿತೆಗಳಿವೆ. ಎಲ್ಲವೂ ತಾಯಿ ನಾಡಿನ ಭಾಗ್ಯ, ಬಲುಮೆ, ಒಲುಮೆಗಳನ್ನು ಕುರಿತು ಹಾಡಿದುವು. ಕನ್ನಡ ದೇಶದ ಅಧಿದೇವತೆಯ ಅಡಿದಾವರೆಯಲ್ಲಿ ತರುಣರು ಅರ್ಪಿಸಿದೀ ಕುಸುಮಗಳಲ್ಲಿ "ರಾಮ"ನ ಕುಸುಮಗಳು ರಮ್ಯವಾಗಿವೆ ; ಕೊಂಚ ಮಟ್ಟಿಗೆ ಭಾವ ಪರಾಗ ಲಿಪ್ತವಾಗಿವೆ. "ನಾಡ ನೆಲೆಗಾರ್ತಿ," "ನಾಡಿಗರ ನೆರವಿ," "ಬಸದಮ್ಮ"—ಈ ಉದಾಹರಣೆಗಳೇ ಸಾಕು ; ಮಲ್ಲಾರಿಯು ಸಂಕೀರ್ಣ ಭಾವ ಹೃದಯನು.

ಈ ಹಾಡುಗಳ ಬಂಧವು ಹೊಸ ಕಾಲದ ರೀತಿ ರುಚಿಗೆ ಸರಿಯಾದುದು. ಭಾಷೆಯು ಸಾಮಾನ್ಯವಾಗಿ ಸರಲವಾಗಿಯೂ, ಪ್ರಯೋಗಗಳು ಹೆಚ್ಚು ಕಡಿಮೆ ಸಾಧುವಾಗಿಯೂ ಇವೆ.

**ತಿ. ತಾ. ಶ.**

---

## ೨. ಮೈಸೂರ ಮಾಣಿಕ್ಯ

(ರಾಜ ಭಕ್ತಿ)

ಗ್ರಂಥಕರ್ತರು.—ಚಿ. ಸದಾಶಿವಯ್ಯನವರು, ಬಸವನಗುಡಿ, ಬೆಂಗಳೂರು.

**ಡೆಮ್ಮೆ ಅಷ್ಟಪತ್ರ ೨೫ ; ೧೯೨೮ ; ಬೆಲೆ ೨॥ ಆಣೆ.**

ಇದು "ಲಲಿತ ಕುಸುಮ ಮಾಲೆ"ಯ ದೃಶ್ಯ ಕಾವ್ಯ. 'ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಶ್ರೀರಂಗಪಟ್ಟಣವನ್ನು ವಿಜಾಪುರದ ರಣದುಲ್ಲಾಖಾನನು ಮುತ್ತಿ ಪರಾಜಿತನಾಗಿ ಓಡಿಹೋದನು; ಆಗ ಪ್ರಭಾಕರನೆಂಬೊಬ್ಬ ಬ್ರಾಹ್ಮಣ ತರುಣನು ತನ್ನ ಸಾಹಸವನ್ನು ಮೆರೆಯಿಸಿ, ರಾಜ, ದೈವಗಳ ಅನುಗ್ರಹಕ್ಕೆ ಪಾತ್ರನಾದನು' ಎಂಬುದು ಕಥೆ. ಹೃದಯಂಗಮವಾಗುವಂತೆ ದೃಶ್ಯ ಕಾವ್ಯದ ಮರ್ಯಾದೆಯನ್ನನುಸರಿಸಿ ರಚಿತವಾಗಿರುವ ಈ ಕಾವ್ಯವು ಆದರಣೀಯವಾಗಿದೆ.

ಮ॥ ಸದಾಶಿವಯ್ಯನವರಲ್ಲಿ ಉತ್ತಮ ನಾಟಕಕಾರರಾಗುವ ಶಕ್ತಿಯು ಇದೆ. ಇವರಿಗೆ ಅವಕಾಶ ದೊರೆತು ನಾಡಿನ ಹೆಸರಾದ ನುಡಿಯಾಳುಗಳಲ್ಲಿ ಒಬ್ಬರಾಗಲೆಂದು ಹಾರೈಸುತ್ತೇವೆ.

ಈ ಸಂದರ್ಭದಲ್ಲಿ ಎರಡು ಹೆಚ್ಚು ಮಾತು ನುಡಿಯಲು ಬಗೆಯು ತವಕಿಸುತ್ತಿದೆ. ಜಗತ್ತು ದೈವಾಧೀನವೆಂಬುದು ಅಕ್ಷರಶಃ ನಿಜವಾದರೂ, ನಾಟಕದಲ್ಲಿ—ಅದರಲ್ಲೂ, ವಿಚಾರ ಪರಿಪ್ಲುತವಾಗಿರಬೇಕಾದ ಈಗಿನ ಕಾಲದ ನಾಟಕಗಳಲ್ಲಿ—ಅನವಶ್ಯವಾಗಿ ದೈವವನ್ನು ತಂದೊಡ್ಡುವುದು ಸರಿಯಲ್ಲ. ದೈವವು ಬರಬೇಕಾದರೆ ಮನುಷ್ಯನ ಪೌರುಷವೆಲ್ಲವೂ ಮುಗಿದುಹೋಗಿ, ಬೇರೆ ಗತಿಯಿಲ್ಲದಂತಾಗಿರಬೇಕು. ಹಾಗಿಲ್ಲದೆ, ಕೋರಿದಾಗಲೆಲ್ಲ ದೈವವು ತಲೆದೋರುವುದಾದರೆ, ಅದೂ ಒಂದು ಬೇಸರವೇ ಆಗುವುದು.

ಹಾಗೆಯೇ, ಸಾಮಾನ್ಯವಾಗಿ ಲೋಕದಲ್ಲಿ ಸಮಾಜ ವ್ಯಕ್ತಿಗಳಿಗೆ ಒಂದು ನಿಯತ ಸಂಬಂಧವುಂಟು, ಒಂದು ಸಾಮಾನ್ಯ ಭಾವವುಂಟು. ಇದನ್ನು ಬಿಟ್ಟು, ತಿಂಡಿಪೋತರೂ ಹೊಟ್ಟೆಬಾಕರೂ (ಪುಟ ೮, ೯), "ಭಯದಿಂದ ಸುಮ್ಮನೆ ಕುಳಿತುಕೊಂಡು..........ಅಡಿಗೆ ಊಟಕ್ಕೂ ಲಕ್ಷ್ಯಮಾಡದ" ಸಮಾಜದಲ್ಲಿ ಪ್ರಭಾಕರನಂತಹ ವೀರಾಗ್ರೇಸರನು ಇದ್ದನೆಂದು ತೋರಿಸಿದರೆ ಅವಾಸ್ತವವಾಗುವುದು. ಕಾವ್ಯಗಳಲ್ಲಿ—ಸೋಪಲಕ್ಷಕವಾಗಿ ಬರೆದವುಗಳಲ್ಲಿ—ಅಸಾಮಾನ್ಯ ವ್ಯಕ್ತಿಗಳಿದ್ದರೆ, ಅವರು ಹಾಗಿರಲು ಕಾರಣವೇನು ಎಂಬುದನ್ನೂ ತೋರಿಸಲೇ ಬೇಕು; ಇಲ್ಲವಾದರೆ, ಹರಿಕಥೆಯು ದಾಸರ ಹಾಡೇ ಆಗಿ, ಮಾಡಿದ ಕೆಲಸವು ಹುಡಿಗೂಡುವುದು. ಪ್ರಭಾಕರ, ಕಂಠೀರವರಂಥವರು ನಮಗೆ ಬೇಕಾದರೆ ನಾವೇನು ಮಾಡಬೇಕು ಎಂಬುದನ್ನು ಕುರಿತು ಎರಡು ಮಾತಾದರೂ ಬರೆದಿದ್ದರೆ ಕವಿಯು ಬಹಳ ಉಪಕಾರಮಾಡಿದಂತಾಗುತ್ತಿದ್ದಿತು.

ಹೀಗೆ ಹೇಳಿದುದರಿಂದ ಶ್ರೀ ಸದಾಶಿವಯ್ಯನವರನ್ನು ಆಡಿಕೊಳ್ಳುತ್ತಿರುವೆವೆಂದು ಯಾರೂ ಭಾವಿಸಲಾಗದು. ಈಗ ವಾಡಿಕೆಯಲ್ಲಿರುವ ಒಂದು ಪದ್ಧತಿಯನ್ನನುಸರಿಸಿ, ಇವರೂ ಒಂದು ಕಥೆಗೆ ಅಷ್ಟು ಬಣ್ಣ ಹಚ್ಚಿ, ಸಂಭಾಷಣ ರೂಪವಾಗಿ ಬರೆದಿದ್ದಾರೆ. ಈಗಿನ ಪೌರಾಣಿಕ ನಾಟಕಗಳಂತೆ ಇದೂ ಒಂದು ನಾಟಕ. ಅದಕ್ಕಿಂತ ಒಂದು ತೆರನಾಗಿ ಮೇಲು: ಚೆನ್ನಾದ ಮಾತುಗಳಿವೆ. ಆದರೆ ಈ ಜಾತಿಯವು ಬರ್ಜರಿಯಕಾಯಿಯ ಹಾಗೆ ಟೊಳ್ಳು; ಕವಿಯ ಮೇಧಾ ಶಕ್ತಿ, ವರ್ಚಸ್ಸು, ಕಾವ್ಯ ರಚನಾ ಚಾತುರ್ಯಗಳ ಪೂರಣವಿರುವ ಕರಿಗಡುಬುಗಳಲ್ಲ. ಮೊದಲಿನವು ಉಳಿಯುವುದಿಲ್ಲ, ಎರಡನೆಯವು ಅಳಿಯುವುದಿಲ್ಲ. ಶ್ರೀ ಸದಾಶಿವಯ್ಯನವರು ಎರಡನೆಯ ಜಾತಿಯ ನಾಟಕಗಳನ್ನು ಬರೆಯಬೇಕೆಂದು ನಮ್ಮ ಆಸೆ.

**ದೇವುಡು.**

---

## ೩. ಲೀಲೆ

(ದ್ವಿತೀಯ ಮುದ್ರಣ)

ಗ್ರಂಥಕರ್ತರು.—ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯರು, ಮಂಗಳೂರು.

ಸಣ್ಣ ಪುಟಗಳು ೧೪ ; ೧೯೨೯ ; ಬೆಲೆ ೧ ಆಣೆ.

ಈ ಕವಿತೆಯ ಪ್ರಥಮ ಮುದ್ರಣವನ್ನು ಪರಿಷತ್ಪತ್ರಿಕೆಯ ೧೦ನೆಯ ಸಂಪುಟದಲ್ಲಿ (ಪುಟ ೬೪ರಲ್ಲಿ) ವಿಮರ್ಶಿಸಿದೆ.

ಎರಡನೆಯ ಮುದ್ರಣಕ್ಕೆ ಅವಕಾಶ ದೊರೆತುದು ಕವಿತೆಯ ಮಾಧುರಿಯನ್ನೂ ಇದಕ್ಕಿರುವ ಜನಾನುರಾಗವನ್ನೂ ತೋರಿಸುತ್ತದೆ.

---

## ೪, ೫, ೬. ಶ್ರೀ ಪ್ರಭುದೇವರ ಪದಗಳು, ಪ್ರಭುದೇವರ ಸ್ತೋತ್ರ ಸಂಗ್ರಹ, ಪ್ರಭುದೇವರ ತ್ರಿವಿಧಿ

ಶೋಧಕರು ಮತ್ತು ಪ್ರಕಾಶಕರು.—ಬುದ್ಧಯ್ಯಾ ಮಗಯ್ಯಾ ಪುರಾಣೀಕ, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೪೬, ೧೨, ೯ ; ೧೯೨೯.

ಇವು "ಶ್ರೀಮನ್ನಿರಂಜನ ಜಗದ್ಗುರು ಗ್ರಂಥ ಮಾಲೆ"ಯ ಮೊದಲ ಮೂರು ಪುಷ್ಪಗಳು. ಮೊದಲನೆಯದರಲ್ಲಿ ಮಗಿಯ ನರೇಂದ್ರ, ಚನ್ನ ಶ್ರೀ ಪ್ರಭು, ಗುರುಬಸವ ಮತ್ತು ಇತರ ಭಕ್ತರೂ, ವೀರಶೈವ ಗುರುಗಳಲ್ಲಿ ಬಹಳ ಪ್ರಖ್ಯಾತನಾದ ಪ್ರಭುದೇವನನ್ನು ಸ್ತೋತ್ರ ರೂಪವಾಗಿ ವರ್ಣಿಸಿ, ರಾಗ, ತಾಳ, ಮಟ್ಟುಗಳಿಂದ ರಚಿಸಿರುವ ಹಾಡುಗಳಿವೆ.

ಎರಡನೆಯದರಲ್ಲಿ, ಕೆಲವರು ಪ್ರಾಚೀನ ಮತ್ತು ಅರ್ವಾಚೀನ ವೀರಶೈವ ಗ್ರಂಥಕರ್ತರು, ಕೆಲವರು ಸಂಸ್ಕೃತದಲ್ಲಿಯೂ, ಕೆಲವರು ಕನ್ನಡದಲ್ಲಿಯೂ ಪ್ರಭುದೇವನನ್ನು "ಸ್ತುತಿಸಿದ ಸ್ತೋತ್ರಗಳಲ್ಲಿ ಒಂದೊಂದೇ ಸ್ತೋತ್ರವನ್ನು ಮಾದರಿಗಾಗಿ ತೆಗೆದುಕೊಂಡು" ಮುದ್ರಿಸಿದೆ.

ಮೂರನೆಯದರಲ್ಲಿ ಜಟಾಶಂಕರ ದೇವನೆಂಬ ಕವಿಯು ತ್ರಿಪದಿಯಲ್ಲಿ ರಚಿಸಿರುವ ಅಲ್ಲಮಪ್ರಭು ದೇವರ ಸ್ತೋತ್ರವನ್ನು ಕೊಟ್ಟಿದೆ.

ತಪ್ಪುಗಳಿಲ್ಲದಂತೆ ಪದ್ಯಗಳ ಪಾದಗಳನ್ನು ತಕ್ಕ ಸಾಲುಗಳಲ್ಲಿ ಮುದ್ರಣ ಮಾಡಿಸಿದ್ದರೆ ಶಿವಭಕ್ತರಿಗೆ ಈ ಸ್ತೋತ್ರಗಳು ಮತ್ತಷ್ಟು ಆನಂದ ದಾಯಕವಾಗುತ್ತಿದ್ದುವು.

---

## ೭. ಸ್ವಾಮಿ ವಿವೇಕಾನಂದರವರ ಪತ್ರಗಳ ಕನ್ನಡ ಅನುವಾದ

(ಪ್ರಥಮ ಭಾಗ)

ಅನುವಾದಕರು.—ಸಂಗಪುರಂ ವೆಂಕಟೇಶಯ್ಯಂಗಾರ್ರ್ಯರು, ಬಿ.ಎ., ಬೆಂಗಳೂರು.

ಕ್ರೌನ್ ಅಷ್ಟಸತ್ರ ಪುಟಗಳು ೧೩೦ ; ೧೯೩೯ ; ಬೆಲೆ ೮ ಆಣೆ.

ಇದು ಶ್ರೀ ರಾಮಕೃಷ್ಣಾಶ್ರಮ ಗ್ರಂಥಮಾಲೆಯ ೭ನೆಯ ಗ್ರಂಥ. ಇದರಲ್ಲಿ ದಂಡಧಾರಿಗಳಾದ ಶ್ರೀ ವಿವೇಕಾನಂದರವರ ಭಾವಚಿತ್ರವೊಂದಿದೆ.

ಶ್ರೀ ವಿವೇಕಾನಂದರು ಒಬ್ಬ ಮಹಾ ವಿಭೂತಿ, ಅಮರ ಜ್ಯೋತಿ. ಷೆಲ್ಲಿಯ 'ಬಾನಾಡಿ'ಯಂತೆ—"a Voice without a form." ವಿವೇಕಾನಂದರೇ ತಮ್ಮನ್ನು ಹೀಗೆ ವರ್ಣಿಸಿಕೊಂಡಿದ್ದಾರೆ—"ವಿದೇಹ ಧ್ವನಿ" ಎಂದು. ನಮ್ಮ ಭಾರತ ರಾಷ್ಟ್ರೀಯ ಜಾಗೃತಿಗೂ ನಮ್ಮ ಪ್ರಾಂತೀಯ ಜಾಗೃತಿಗೂ ವಿವೇಕಾನಂದರು ಅಷ್ಟಿಷ್ಟು ಕಾರಣವೆಂದು ಹೇಳಲು ಬಾರದು. ಆದರೂ, ಇನ್ನೂ ಅವರ ಧ್ವನಿ 'ಅರಣ್ಯ ರೋದನ' ಅಥವಾ, 'ಕೋಣನ ಮುಂದಿನ ಕಿನ್ನರಿ' ಎನ್ನೋಣ. ಆದ ಕಾರಣವೇ, ಅವರ ಸಂದೇಶವನ್ನು ಎಲ್ಲರೂ ಓದುವಂತೆ ಮಾಡುವುದು ಅವಶ್ಯ. ಈ ಪುಸ್ತಕದಲ್ಲಿ ಸಂಕಲಿತವಾಗಿರುವ ಪತ್ರಗಳನ್ನೋದಿದರೆ, ನೆಲಕ್ಕುರುಳಿರುವ ಭಾರತ ವನ್ನು ಮರಳಿ ಮೇಲಕ್ಕೆತ್ತಿ ನಿಲ್ಲಿಸುವ ಪ್ರಯತ್ನಗಳಾವುವು? ವೈರಾಗ್ಯವೆಂದರೇನು? ಆಧ್ಯಾತ್ಮಿಕತೆಯೆಂದರೇನು ? ಭಾರತದ ದೌರ್ಬಲ್ಯವನ್ನೂ ದಾರಿದ್ರ್ಯವನ್ನೂ ಮೌಢ್ಯವನ್ನೂ ನೀಗಿಸುವ ಉಪಾಯಗಳೇನು ? ಎಂಬುವು ತಿಳಿದುಬರುವುದು. ಆ ವಿಚಾರದ ಉಪಯೋಗವು ನಮ್ಮ ಕರ್ಣಾಟಕೋದ್ಧಾರ ಕಾರ್ಯದಲ್ಲಿಯೂ ಪ್ರಯೋಜನಕಾರಿ. ವಿವೇಕಾನಂದರು ಬರಿ ಯೋಗಿಗಳಲ್ಲ, ಉಪಯೋಗಿಗಳೂ ಅಹುದು. ಅಂತೆಯೇ, ಅವರು ಮಾನವನ ಇಹ ಯಾತ್ರೆಯು ಹೇಗೆ ಅಭ್ಯುದಯ ಕಾರಿಯಾಗುವುದೆಂಬುದನ್ನು ಕುರಿತು ಮನನ ನಿದಿಧ್ಯಾಸಮಾಡಿ, ಭಾರತೀಯರ ದೈನ್ಯವನ್ನು ಕಂಡು ದಯಾಪೂರಿತರಾಗಿ, ಕಲ್ಯಾಣೇಚ್ಛೆಯಿಂದ ಈ ಪತ್ರಗಳನ್ನು ಬರೆದಿರುವರು. ಎಲ್ಲ ಕನ್ನಡಿಗರೂ ಅವುಗಳನ್ನು ಓದಿ ತಿಳಿದುಕೊಳ್ಳಲೆಂದು ಇಂಗ್ಲೀಷಿನಿಂದಲೂ ಬಂಗಾಲಿಯಿಂದಲೂ ಶ್ರೀ ಸಂ. ವೆಂಕಟೇಶಯ್ಯಂಗಾರ್ರ್ಯರು ಕನ್ನಡಿಸಿರುವರು. ಇದು ಕೇವಲ ಭಾಷಾಂತರವಲ್ಲ, ಅನುವಾದ.

ಪದ್ಯದಲ್ಲಿ ಭಾವಗೀತೆ ಹೇಗೊ, ಹಾಗೆ ಗದ್ಯದಲ್ಲಿ ಆತ್ಮೀಯರಿಗೆ ಬರೆದ ಪತ್ರ. ಭಾವಗೀತೆಯನ್ನು ಭಾಷಾಂತರಿಸುವುದು ಹೇಗೆ ಬಿಗಿಯೋ ಹಾಗೆಯೇ ಆತ್ಮೀಯ ಪತ್ರದ ವಿಷಯ ; ಅದರಲ್ಲೂ, ಅತ್ಯುತ್ಕಟ ಭಾವನೆಗಳಿಂದಲೂ ಜೀವದ ಜೀವಾಳದ ವಿಚಾರಗಳಿಂದಲೂ ಸೂಸುವ ಪತ್ರಗಳಲ್ಲಿ, ಅಲ್ಲಲ್ಲಿ ಸುದ್ದಿ ಸಂಗತಿಗಳ ಬೆರಕೆಯು ಹಠಾತ್ತಾಗಿ ಚಂಪೂ ಶೈಲಿಗೆ ಎಳೆದೊಯ್ಯುವುದು. ಇದಲ್ಲದೆ, ಆಂಗ್ಲ ವಂಗ ಭಾಷೆ ಗಳೆರಡರ ವರ್ಚಸ್ಸು ಕನ್ನಡವನ್ನು ಕಲಕಾಡಿದೆ. ಹೀಗಾಗಿ, ಅಚ್ಚಗನ್ನಡಿಗರಿಗೆ ಇದನ್ನೋದುವಾಗ ಅವ್ಯಾಹತವಾದ ಆನಂದವಾಗದು. ಆದು ನಮ್ಮ ಕಾಲದ

ದೋಷ, ನಮ್ಮ ಶಿಕ್ಷಣದ ದೋಷ. ಆದರೂ ಲೇಖಕರ ಇಚ್ಛೆಯು ತೀರ ವಿಫಲವಾಗುವಂತಿಲ್ಲ. ಅವರ ಬರೆವಣಿಗೆಯಲ್ಲಿ ಹೆಡಸು ಇದೆ, ವಚನ ಶೈಲಿಯ ಸಂಸ್ಕಾರವಿದೆ. ವಿವೇಕಾನಂದರ ವಾಣಿಯನ್ನು ಹೇಳಲು ಅದು ಬೇಕು.

ದೋಷಕ್ಕೆಡೆಗೊಟ್ಟಿರುವ ವಾಕ್ಯಗಳ ಮಾದರಿಯನ್ನು ಆಯ್ದು ತೆಗೆಯಬೇಕಾಗಿಲ್ಲ. ಮೊದಲನೆಯ ಹತ್ತು ಪುಟಗಳಲ್ಲಿ ಈ ವಾಕ್ಯಗಳಿವೆ:—

ವಿಷಮ ಶೈಲಿಗೆ.—

ಪುಟ ೩.—ಪುಸಿಯಲ್ಲ ಈ ಸೊಲ್.

ಮಿಶ್ರ ಶಬ್ದ ಪ್ರಯೋಗಕ್ಕೆ.—

ಪುಟ ೪.—ನಮ್ಮ ಜಹಜು ಸುಮಾರು ಹಗಲೆಲ್ಲಾ ರೇವೆಯಲ್ಲಿ ನಿಂತಿದ್ದುದರಿಂದ ಇದೇ ಸಮಯವೆಂದರಿತು ದಡಕ್ಕೆ ಬಂದು ಗಾಡಿ ಮಾಡಿಕೊಂಡು ಪಟ್ಟಣವನ್ನು ನೋಡುವುದಕ್ಕಾಗಿ ರಸ್ತೆಗಳಲ್ಲಿ ಹೊರಟೆವು.

ಆಂಗ್ಲ ಭಾಷಾ ವರ್ಚಸ್ಸಿಗೆ.—

ಪುಟ ೯.—ಜಪಾನ್ ಸೈನ್ಯಾಧಿಕಾರಿಯಿಂದಲೇ ಕಲ್ಪಿತವಾದ ಫಿರಂಗಿಗಳಿಂದ ಕೂಡಿ ಸುಶಿಕ್ಷಿತವಾಗಿ ಒಳ್ಳೆಯ ಕಟ್ಟುಳ್ಳ ಅವರ ಸ್ಥಳ ಸೈನ್ಯವು ಯಾವುದಕ್ಕೂ ಎರಡನೆಯದಲ್ಲ.

ವಿವೇಕಾನಂದರ ಪತ್ರಗಳ ಶ್ರವಣ ಮನನ ನಿದಿಧ್ಯಾಸವಾಗುವುದು ಅವಶ್ಯವಾಗಿದೆ. ಆ ಭಾಗ್ಯವಾಗಲಿ, ಕಾಲವಾಗಲಿ ಇಲ್ಲದವರಿಗಾಗಿ ಒಂದೆರಡು ಮಾತುಗಳನ್ನು ಇಲ್ಲಿ ಎತ್ತಿ ಬರೆಯಬೇಕಾಗಿದೆ:—

ಪುಟ ೧೦.—ಹೊರಗೆ ಹೋದರೆ ನಿಮ್ಮ ಜಾತಿಯು ಕೆಡುವುದಲ್ಲವೆ? ನೂರಾರು ವರ್ಷಗಳಿಂದ ಎಡೆ ಬಿಡದೆ ಹೆಚ್ಚಿ ಬೆಳೆದು ಕಲ್ಲಾದ ಮೂಢ ವಿಶ್ವಾಸವೆಂಬ ಹೊರೆಯನ್ನು ತಲೆಯ ಮೇಲೆ ಹೊತ್ತು, ನೂರಾರು ವರ್ಷಗಳು, ಈ ಆಹಾರ ಮುಟ್ಟಲು ಯೋಗ್ಯವೋ, ಅದು ಸ್ಪರ್ಶ ಮಾಡಲು ಅಯೋಗ್ಯವೋ ಎಂಬ ದೊಡ್ಡ ವಿಷಯದ ವಿಚಾರದಲ್ಲಿ ನಿಮ್ಮ ಬುದ್ಧಿ ಶಕ್ತಿಗಳನ್ನು ವ್ಯಯ ಮಾಡಿ, ಯುಗಗಳ ಗಟ್ಟಲೆಯಾಗಿ ಸಂತತ ಸಾಮಾಜಿಕ ಪೀಡನದಿಂದ ನಿಮ್ಮ ಮಾನವತ್ವವನ್ನೆಲ್ಲಾ ಹೋಗಲಾಡಿಸಿಕೊಂಡು—ನೀವೇನಯ್ಯ ನೀವು! ನಿಮ್ಮ ಅವಸ್ಥೆ ಏನಯ್ಯ! ನಿಮ್ಮ ಬಾಳನ್ನು ಏನೆಂದು ಬಣ್ಣಿಸುವ!

ಪುಟ ೧೦.—ಭಾರತವರ್ಷದ ಪುರೋವೃದ್ಧಿಗೆ ವಿಘ್ನಪ್ರಾಯರಾಗಿರುವ ಪುರೋಹಿತರನ್ನೆಲ್ಲಾ ಹೊಡೆದಟ್ಟಿ! ಏಕೆ ಎನ್ನುವಿರೋ! ಅವರು ಕಡು ಮೂರ್ಖರು. ಅವರ ಹೃದಯಗಳೆಂದೂ ಅಗಲವಾಗವು.

ಪುಟ ೧೧.—ಭಾರತ ಮಾತೆಗೆ ಕನಿಷ್ಠ ಪಕ್ಷ ಸಹಸ್ರ ನರರ ಬಲಿ ಬೇಕು—ನರರು, ಪಶುಗಳಲ್ಲ.

ಪುಟ ೧೧.—ಬಡವರಲ್ಲಿ ಅನುತಾಪವನ್ನೂ, ಹಸಿದಿರುವ ಹೊಟ್ಟೆಗೆ ಹಿಟ್ಟನ್ನೂ, ಜನಸಾಮಾನ್ಯಕ್ಕೆ ತಿಳುವಳಿಕೆಯನ್ನೂ ಕೊಡುವಂತಹ ನೂತನ ಅವಸ್ಥೆಯನ್ನು ಉಂಟು ಮಾಡುವುದಕ್ಕಾಗಿಯೂ, ನಿಮ್ಮ ಹಿಂದಣವರ ಕಿರುಕುಳದಿಂದ ಪಶುಗಳ ಸಮಕ್ಕೆ ಇಳಿ

ದಿರುವವರನ್ನು ಮಾನವರನ್ನಾಗಿ ಮಾಡುವುದಕ್ಕಾಗಿಯೂ ಪ್ರಾಣ ಹೋಗುವ ಪರ್ಯಂತ ಹಿಂಜರಿಯದೆ ಹೋರಾಡತಕ್ಕಂಥ ಸ್ವಾರ್ಥತ್ಯಾಗಿಗಳಾದ ಯುವಕರೆಷ್ಟು ಮಂದಿಯನ್ನು ಕೊಡುವುದಕ್ಕೆ ಮದರಾಸು ಸಿದ್ಧವಾಗಿರುವುದೀಗ?

ವಿವೇಕಾನಂದರು 'ಹಿಂದಿನದೆಲ್ಲ ಹೊನ್ನು' ಎಂಬ ಪೂರ್ವ ಮತವಾದಿಗಳು ಎಂದು ಕೆಲವರ ಭ್ರಮೆ. ಅವರ ಭ್ರಮ ನಿರಸನಕ್ಕೆ ಇವಿಷ್ಟು ಸಾಕು. ಅದಿರಲಿ; ವಿವೇಕರ ಒಂದೊಂದು ಮಾತನ್ನೂ ಓದಿದರೆ ನಮ್ಮ ವೇದಾಂತ ಜಂಬುಕಗಳ ಮಧ್ಯದಲ್ಲಿ ಈ ವೇದಾಂತ ಕೇಸರಿಯು ಎಲ್ಲಿಂದ ಬಂದಿತು ಎಂದೆನಿಸುವುದು. "ಅಯ್ಯಾ, ನೀವು ಮರ್ತ್ಯರಲ್ಲ, ಅಮೃತ ಪುತ್ರರು" ಎಂದು ಮೇಲಿಂದ ಮೇಲೆ ಅವರು ಉದ್ಘೋಷಿಸುತ್ತಿದ್ದರು. ಕಣ್ಣು ಕಾಣದ ಕುನ್ನಿಗಳಿರುವಂತೆ, ಕಿವಿಗೇಳದ ಕುನ್ನಿ ಮಾನವರೂ ಇದ್ದಾರೆ. ಉದ್ಧಾರವಾಗಲಿಚ್ಛೆಯುಳ್ಳವರು ಕಿವಿದೆರೆಯಲಿ, ಕೇಳಲಿ, ತಿಳಿದುಕೊಳ್ಳಲಿ, ಆಡದೆ ಮಾಡಲಿ. ಅಂದು, ಆ ಜೀವನ್ಮುಕ್ತನಿಗೆ ನಿಜವಾದ ಮುಕ್ತಿ. ಅಲ್ಲಿಯ ವರೆಗೆ ಭಾರತದೊಡನೆ ಆ ಮುಕ್ತನೂ ಬದ್ಧನು.

**ದ. ರಾ. ಬೇಂದ್ರೆ.**

---

ಶ್ರೀಯುತ ಡಾಕ್ಟರ್ ಎಸ್. ರಾಧಾಕೃಷ್ಣನ್ ಅವರ

## ೮. ಭಾರತ ಧರ್ಮ

(೧–೨ನೆಯ ಭಾಗಗಳು)

ಅನುವಾದಕರು.—ಎನ್. ಶೇಷಾದ್ರಿಶರ್ಮ, ಬಿ.ಎ., ಬೆಂಗಳೂರು.

ಕ್ರೌನ್ ಅಷ್ಟಪತ್ರ ೨೦+೨೨೮; ೨೦೨; ೧೯೨೯; ಬೆಲೆ (ಪ್ರತಿ ಭಾಗಕ್ಕೂ) ರೂ. ೨–೮–೦.

ಈ ಗ್ರಂಥದ ಎರಡನೆಯ ಭಾಗವು ಕಲ್ಕತ್ತೆಯ ವಿಶ್ವವಿದ್ಯಾನಿಲಯದಲ್ಲಿ ತತ್ತ್ವಶಾಸ್ತ್ರ ವಿಶಾರದರಾಗಿರುವ ಶ್ರೀಮಾನ್ ಡಾಕ್ಟರ್ ಎಸ್. ರಾಧಾಕೃಷ್ಣನ್, ಎಂ.ಎ., ಡಿ.ಲಿಟ್. ಅವರು ೧೯೨೬ನೆಯ ಇಸವಿಯಲ್ಲಿ ಆಕ್ಸ್‌ಫರ್ಡ್ ನಗರದ ಮ್ಯಾನ್ಚೆಸ್ಟರ್ ಕಲಾ ಶಾಲೆಯಲ್ಲಿ ಮಾಡಿದ "ಅಪ್ಟನ್ ಸಂಭಾಷಣೆ"ಗಳ ಕನ್ನಡ ಅನುವಾದವು. ಇವುಗಳಲ್ಲಿ ಮೊದಲನೆಯ ಉಪನ್ಯಾಸದ ವಿಚಾರವು, "ಆತ್ಮಾನುಭವವೂ ಅದರ ಸ್ವಭಾವವೂ"; ಎರಡನೆಯದರ ವಿಚಾರವು, "ಮತ ವಿವಾದಗಳು ಮತ್ತು ಹಿಂದೂ ಜನರ ಮತ ಸಹನೆ"; ಮೂರನೆಯದು ಹಿಂದೂ ಧರ್ಮದಲ್ಲಿ, "ಮಾಯಾ, ಕರ್ಮ, ಪುರುಷಾರ್ಥ ಮತ್ತು ಆಶ್ರಮ ಧರ್ಮ"ಗಳ ವಿಚಾರವಾದುದು; ನಾಲ್ಕನೆಯದು ಹಿಂದೂ ಧರ್ಮದಲ್ಲಿ, "ಜಾತಿ ಮತ್ತು ಸಂಘ ಧರ್ಮ"ಗಳ ವಿಚಾರವಾದುದು.

ಮ|| ರಾಧಾಕೃಷ್ಣಯ್ಯರವರು ಹಿಂದೂ ದೇಶದಲ್ಲಿ ಸುಪ್ರಸಿದ್ಧರಾದ ತತ್ತ್ವಜ್ಞಾನಿಗಳೆಂದು ಪ್ರಖ್ಯಾತಿಹೊಂದಿರುವರಲ್ಲದೆ, ಅಮೆರಿಕದಲ್ಲಿಯೂ ಇಂಗ್ಲೆಂಡಿನಲ್ಲಿಯೂ ಅವರ ಪಾಂಡಿತ್ಯವು ಅಲ್ಲಿಯ ದೊಡ್ಡ ದೊಡ್ಡ ವಿದ್ವಾಂಸರಿಂದಲೂ ಬಹಳ ಶ್ಲಾಘನೆ ಪಡೆದಿರುವುದು. ಪ್ರಕೃತ ಗ್ರಂಥದಲ್ಲಿಯು ಅವರ ಭಾಷಣಗಳು ಭಾರತ

ಧರ್ಮವನ್ನರಿಯದ ಅಮೆರಿಕನರಿಗೂ ಇಂಗ್ಲಿಷರಿಗೂ ಆ ವಿಷಯವನ್ನು ಪ್ರೌಢ ರೀತಿಯಲ್ಲಿ ಬೋಧಿಸುವುವಲ್ಲದೆ, ಆ ವಿಷಯಗಳನ್ನು ಸ್ವಲ್ಪ ಮಟ್ಟಿಗೆ ತಿಳಿದಿರುವ ಭಾರತೀಯರಿಗೂ ಬೋಧಪ್ರದವಾಗಿರುವುವು. ಇಂಗ್ಲಿಷಿನಲ್ಲಿರುವ ಈ ಉಪನ್ಯಾಸ ಗಳನ್ನು ಮ॥ ಶೇಷಾದ್ರಿಶರ್ಮರವರು ಇಂಗ್ಲಿಷನ್ನರಿಯದ ಕನ್ನಡಿಗರ ಉಪ ಯೋಗಕ್ಕಾಗಿ ತಿಳಿಗನ್ನಡದಲ್ಲಿ ಅನುವಾದ ಮಾಡಿರುವುದಕ್ಕಾಗಿ ಕನ್ನಡಿಗರೆಲ್ಲರೂ ಅವರಿಗೆ ಕೃತಜ್ಞರಾಗಿರಬೇಕು. ಜನಸಾಮಾನ್ಯಕ್ಕೆ ವಿಷಯ ಗ್ರಹಣವಾಗುವಂತೆ ಮಾಡಬೇಕೆಂಬ ಅಭಿಲಾಷೆಯಿಂದ ಪರಿವರ್ತನಕಾರರು ಭಾಷಾ ಶುದ್ಧತೆಗೆ ಅಷ್ಟು ಗಮನಕೊಟ್ಟಂತಿಲ್ಲ.

ಮೊದಲನೆಯ ಭಾಗವು ಪರಿವರ್ತನಕಾರರ ಉಪೋದ್ಘಾತವಾಗಿದೆ. ಈ ಉಪೋದ್ಘಾತವು ಮೂಲಕ್ಕಿಂತಲೂ ದೊಡ್ಡದಾಗಿರುವುದೇ ಇದರ ವಿಶೇಷ. ಇದರಲ್ಲಿರುವ ವಿಷಯಗಳಾದರೋ, ೧೯೧೪ನೆಯ ಸಾರ್ವತ್ರಿಕ ಮಹಾ ಯುದ್ಧದ ವಿಚಾರ ಮೊದಲ್ಗೊಂಡು ಮೊನ್ನೆ ಬೆಂಗಳೂರಿನಲ್ಲಿ ನಡೆದ ಗಲಾಟೆಯ ವಿಚಾರದ ವರೆಗೂ ಹಬ್ಬಿವೆ. ಪರಿವರ್ತನಕಾರರು ತಾವು ರಚಿಸಿರುವ ಅನೇಕ ಗ್ರಂಥಗಳನ್ನೂ, ತಾವು ಮಾಡಬೇಕೆಂದುದ್ದೇಶಿಸಿರುವ ದೇಶ ಹಿತ ಕಾರ್ಯವನ್ನೂ ಪ್ರಕಟಪಡಿಸಲೋ ಎಂಬಂತೆ ವಾಚಕರ ಗಮನವನ್ನು ಆಗಾಗ ಅವಕ್ಕೆ ಸೆಳೆಯುತ್ತಿರುವರು. ಅನ್ಯ ದೇಶೀಯರಾದ ಅನೇಕ ಮಂದಿ ಪಂಡಿತರ ಹೆಸರನ್ನೂ ಅವರ ಗ್ರಂಥಗಳನ್ನೂ ಆಗಾಗ ಹೇಳುವುದರಿಂದ, ಇವರ ಹೆಸರನ್ನೇ ಅರಿಯದ ಕನ್ನಡಿಗರಿಗೆ ಏನು ಪ್ರಯೋಜನವಾದಂತಾಯಿತು? ಈ ಉಪೋದ್ಘಾತವನ್ನು ಓದುವಾಗ, ಶ್ರೀಮಾನ್ ರಾಧಾಕೃಷ್ಣಯ್ಯರವರ 'ಭಾರತ ಧರ್ಮ'ಕ್ಕೂ ಉಪೋದ್ಘಾತದಲ್ಲಿ ಚರ್ಚಿಸಿರುವ ಅನೇಕಾನೇಕ ಸ್ಥಳೀಯ ವಿಷಯಗಳಿಗೂ ನಿಕಟ ಸಂಬಂಧವನ್ನು ಕಲ್ಪಿಸುವುದು ಹೇಗೆ? ಎಂಬುದು ವಾಚಕರನ್ನು ಬಾಧಿಸುವುದು. ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಸಿದ್ಧಿಪಡೆದಿರುವ ಪ್ರೌಢ ಶಾಸ್ತ್ರಜ್ಞರನ್ನೂ ಕೇವಲ ಸಾಮಾನ್ಯರಾದ ಸ್ಥಳೀಯ ಕರ್ಮಕಾರರನ್ನೂ ಒಂದೇ ಅಂತಸ್ತಿನಲ್ಲಿರುವ ಹಾಗೆ ತೋರುವಂತೆ ಹೊಗಳಿರು ವುದು ಲೇಖಕರ ತಾರತಮ್ಯ ಜ್ಞಾನವನ್ನು ಪ್ರಶಂಸಿಸುವಂತಿಲ್ಲ. ಅಂತು, ಈ ಉಪೋದ್ಘಾತವನ್ನು ಬರೆಯದಿದ್ದಲ್ಲಿ, ಪರಿವರ್ತನಕಾರರ ಶ್ರಮವು ಹೆಚ್ಚಾಗಿ ಅಭಿನಂದನೀಯವಾಗುತ್ತಿದ್ದಿತೆಂದು ತೋರುವುದು.

ಮುದ್ರಣದ ತಪ್ಪುಗಳು ಹೇರಳವಾಗಿಯೇ ಇರುವುವು. ಮುದ್ರಣವು ಅಂದವಾಗಿಲ್ಲವೆಂದರೆ ದ್ರವ್ಯಾಭಾವವೇ ಅದಕ್ಕೆ ಕಾರಣವೆಂದು ಹೇಳಬೇಕಾದುದಿಲ್ಲ.

ಒಟ್ಟಿನಲ್ಲಿ, ಮ॥ ಶೇಷಾದ್ರಿಶರ್ಮರವರು ಕನ್ನಡಗರಿಗೆ ಇಂತಹ ಪ್ರೌಢ ಗ್ರಂಥದಲ್ಲಿಯ ವಿಷಯಗಳನ್ನು ತಿಳಿಯಪಡಿಸಬೇಕೆಂಬ ಉದ್ದೇಶದಿಂದ ಸ್ವಂತ ದ್ರವ್ಯವನ್ನು ವೆಚ್ಚಮಾಡಿ ಅಷ್ಟು ಶ್ರಮಪಟ್ಟಿರುವುದು ಬಹಳ ಶ್ಲಾಘ್ಯವಾಗಿರು ವುದು. ಕನ್ನಡಿಗರು ಇದಕ್ಕೆ ತಮ್ಮ ಕೃತಜ್ಞತೆಯನ್ನು ದ್ರವ್ಯ ರೂಪವಾಗಿಯೂ ತೋರ್ಪಡಿಸಬೇಕೆಂದು ಕೋರುತ್ತೇವೆ.

---

## ೯. ಕಾದಂಬರೀ ಪರಿಚಯ

ಲೇಖಕರು.—ಸೋಸಲೆ ಕೃಷ್ಣಸ್ವಾಮಿ ಶಾಸ್ತ್ರಿಗಳು, ಮೈಸೂರು.

ಡೆಮ್ಮೈ ಅಷ್ಟಪತ್ರ ಪುಟ ೧೩; ೧೯೨೯.

ಇದು ಬಾಣಭಟ್ಟನು ಸಂಸ್ಕೃತ ಭಾಷೆಯಲ್ಲಿ ಗದ್ಯ ರೂಪವಾಗಿ ರಚಿಸಿರುವ 'ಕಾದಂಬರೀ' ಎಂಬ ಗದ್ಯ ಕಾವ್ಯದಲ್ಲಿಯ ವಿಷಯವನ್ನು ತಿಳಿಸುವುದಕ್ಕಾಗಿ ಬರೆದ ಸಣ್ಣ ಉಪನ್ಯಾಸ. ಈ ಕಾವ್ಯಕ್ಕೂ ನಾಗವರ್ಮವಿರಚಿತವಾದ ಕರ್ಣಾಟಕ ಚಂಪೂ ರೂಪವಾದ ಕಾದಂಬರೀ ಕಾವ್ಯಕ್ಕೂ ಕೆಲವು ಕಡೆ ಅಲ್ಲಲ್ಲಿ ಹೋಲಿಸಿ ತೋರಿಸಿದೆ. ಮುದ್ರಣದ ತಪ್ಪುಗಳೂ ಇತರ ತಪ್ಪುಗಳೂ ಅಲ್ಲಲ್ಲಿ ಕಾಣಬರುವುವು.

---

## ೧೦. ಕಾಳಿದಾಸ ಮಹಾ ಕವಿಯು ಶೃಂಗಾರರಸವನ್ನು ಚಿತ್ರಿಸಿರುವ ಬಗೆ

ಲೇಖಕರು.—ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ., ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟ ೮೬; ೧೯೨೮.

ಇದು ಬೆಂಗಳೂರಿನ ಅಮೆಚೂರ್ ನಾಟಕ ಸಂಘದವರು ೧೯೨೭ನೆಯ ಇಸವಿ ಫೆಬ್ರುವರಿ ತಿಂಗಳಲ್ಲಿ ನಡೆಯಿಸಿದ ಕಾಳಿದಾಸ ಮಹೋತ್ಸವದಲ್ಲಿ, ಮೈಸೂರು ಸರಕಾರದ ಕನ್ನಡ ಟ್ರಾನ್ಸ್‌ಲೇಟರ್ ಆದ ಮ॥ ಸಿ. ಕೆ. ವೆಂಕಟರಾಮಯ್ಯನವರು ಮಾಡಿದ ಉಪನ್ಯಾಸ. ಇವರ ಹೆಸರನ್ನು ಕನ್ನಡಿಗರಿಗೆ ಹೊಸದಾಗಿ ಪರಿಚಯ ಮಾಡಿಕೊಡಬೇಕಾದ ಆವಶ್ಯಕತೆಯಿಲ್ಲ; ಏಕೆಂದರೆ, ಇವರು ಕನ್ನಡದಲ್ಲಿ ಒಳ್ಳೆಯ ಲೇಖಕರೆಂದೂ ವಾಗ್ಮಿಗಳೆಂದೂ ಆಗಲೇ ಪ್ರಸಿದ್ಧರಾಗಿದ್ದಾರೆ. ಇಡೀ ಪ್ರಪಂಚದ ಶ್ರೇಷ್ಠ ಕವಿಗಳ ಪಙ್ಕ್ತಿಗೆ ಸೇರಿದ ಕಾಳಿದಾಸ ಮಹಾ ಕವಿಯ ಗ್ರಂಥಗಳನ್ನು ಮ॥ ವೆಂಕಟರಾಮಯ್ಯನವರು ಚೆನ್ನಾಗಿ ವ್ಯಾಸಂಗ ಮಾಡಿ ಕವಿ ಹೃದಯವನ್ನು ಹೊಕ್ಕು ತಮಗುಂಟಾದ ಆನಂದಾನುಭವದಲ್ಲಿ ಎಲ್ಲಿಯೋ ಅಲ್ಪ ಸ್ವಲ್ಪ ಶೃಂಗಾರ ರಸ ವಿಷಯವಾದುದನ್ನು ಈ ಉಪನ್ಯಾಸದಲ್ಲಿ ವಾಚಕರಿಗೆ ಸ್ವಾರಸ್ಯವಾದ ದೃಷ್ಟಾಂತ ಶ್ಲೋಕಗಳ ಮೂಲಕ, ಗಾಂಭೀರ್ಯದಿಂದಲೂ, ನುಡಿ ಜಾಣ್ಮೆಯಿಂದಲೂ ಹೃದಯಂಗಮವಾದ ಶೈಲಿಯಲ್ಲಿ ತಿಳಿಸಿರುವುದಕ್ಕಾಗಿ ನಾವು ಅವರನ್ನು ಕೊಂಡಾಡುತ್ತೇವೆ. ಈ ಪುಸ್ತಕವನ್ನು ಓದಿ ಆನಂದಪಡದ ರಸಿಕರು ಅತಿ ವಿರಳರೆಂಬುದು ನಮ್ಮ ನಂಬಿಕೆ.

ನಂ. ವೆಂ.

---



ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ ೧೪]    ಶುಕ್ಲ ಸಂ॥ ಆಶ್ವಯುಜ ಮಾಸ    [ಸಂಚಿಕೆ ೩

## *ಶೃಂಗೇರಿ ಮತ್ತು ಪರಶುರಾಮಭಾವೂ ಟೀಪುಸುಲ್ತಾನನೂ

ಹಿಂದೂ ಮುಸಲ್ಮಾನ ಪ್ರಕೃತಿಗಳು ಪರಸ್ಪರ ವೈಷಮ್ಯವನ್ನೇ ಧರ್ಮವಾಗಿ ಎಣಿಸುವಂತೆ ತೋರುವ ಈ ವಿಷಮ ಕಾಲದಲ್ಲಿ ನೂರಿಪ್ಪತ್ತು ವರ್ಷಗಳ ಕಾಲದ ಹಿಂದೆ ಹಿಂದೂ ಜನರ ಪುಣ್ಯಕ್ಷೇತ್ರವೊಂದನ್ನು ಹಿಂದೂಗಳೇ ನಾಶಗೊಳಿಸಿದಾಗ ಮುಸಲ್ಮಾನ ಪ್ರಭುವು ಜೀರ್ಣೋದ್ಧಾರಕ್ಕೆ ನೆರವಾದ ವೃತ್ತಾಂತವನ್ನು ನಾವು ಸ್ಮರಿಸತಕ್ಕುದು ಉಚಿತ. ಶೃಂಗೇರಿಯು ಎಂತಹ ಪವಿತ್ರವಾದ ಕ್ಷೇತ್ರವೆಂಬುದನ್ನು ವಿವರಿಸುವುದು ಅನಾವಶ್ಯಕ. ಹಾಗೆಯೇ ಪರಶುರಾಮಭಾವು, ಪಟವರ್ಧನ ಮತ್ತು ಟೀಪುಸುಲ್ತಾನರ ಪರಿಚಯವನ್ನುಂಟುಮಾಡಿಕೊಡುವುದೂ ಅನಾವಶ್ಯಕ. ಹಿಂದೂ ಮತಾವಲಂಬಿಗಳಾಗಿದ್ದ ಪೇಶ್ವೆಗಳ ಕಾಲದಲ್ಲಿ ಹಿಂದೂ ದಂಡನಾಯಕನೊಬ್ಬನು ಶೃಂಗಗಿರಿಯಲ್ಲಿ ಅತ್ಯಾಚಾರಕ್ಕೆ ಅವಕಾಶಕೊಡಿಸಿದುದು ಎಷ್ಟು ವಿಸ್ಮಯಕರವೋ, ಸಾಧಾರಣವಾಗಿ ಜನರ ಮನಸ್ಸಿನಲ್ಲಿ ಅನ್ಯಮತ ದ್ವೇಷಿಯೆಂದು ತೋರಿಬರುವ ಟೀಪುಸುಲ್ತಾನನು ಶೃಂಗೇರಿಯಲ್ಲಿ ಭಕ್ತಿ ಗೌರವಗಳನ್ನು ತೋರಿಸಿದನೆಂಬುದೂ ಅಷ್ಟೇ ವಿಸ್ಮಯಕರ. ಈ ವಿಸ್ಮಯದ ವೃತ್ತಾಂತದಿಂದ ಧರ್ಮವೆಂದು ಹೇಳಿಕೊಂಡು ಅಧರ್ಮವನ್ನು ಸಾಧಿಸುವುದರಲ್ಲಿ ಹಿಂದೂಗಳೂ ಮುಸಲ್ಮಾನರೂ ಕ್ರೈಸ್ತರೂ ಎಲ್ಲರೂ ಪ್ರವೀಣರೇ ಎಂಬುದು ಸಾವಧಾನವಾದ ಆಲೋಚನೆಗೆ ಸಿಲುಕುವುದು.

ಮೈಸೂರಿನ ಪ್ರಭುಗಳಿಗೂ ಮರಾಠಿಯವರಿಗೂ ಮೊದಲಿನಿಂದಲೂ ವಿರೋಧವೇ ಇದ್ದಿತು. ಒಡೆಯರ ವಂಶದ ಅರಸರೂ, ಹೈದರಲ್ಲಿ ಟೀಪುಸುಲ್ತಾನರೂ ಮರಾಠಿಯವರನ್ನು ಪ್ರಬಲ ಶತ್ರುಗಳೆಂದೇ ಭಾವಿಸಿಕೊಂಡಿದ್ದರು. ಸರ್ವಾಧಿಕಾರವನ್ನು ಪಡೆದ ಮೇಲೆ ಹೈದರನು ಮೈಸೂರು ರಾಜ್ಯವನ್ನು ವಿಸ್ತರಿಸುವುದರಲ್ಲಿ

* ಹದಿನೈದನೆಯ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಬಂದುದು.

ಬಿದನೂರು ಪ್ರಾಂತವನ್ನು ಸ್ವಾಧೀನಪಡಿಸಿಕೊಂಡನಷ್ಟೆ. ಮರಾಟೆಯವರ ಮನಸ್ಸಿನಲ್ಲಿ, ಬಿದನೂರು ಪ್ರಾಂತವು ಮೊದಲು ಬಿಜಾಪುರದ ಆಳಿಕೆಗೊಳಪಟ್ಟಿದ್ದುದರಿಂದ, ಆ ಸೀಮೆಯು ತಮ್ಮ ಸ್ವಾಧೀನದಲ್ಲಿಯೇ ಇರತಕ್ಕುದೆಂಬ ಭಾವನೆಯು ಬಲವಾಗಿದ್ದಿತು. ಮೈಸೂರಿನವರು ತುಂಗಭದ್ರೆಯನ್ನು ದಾಟಿ ಉತ್ತರ ಕರ್ಣಾಟಕವನ್ನು ಸಾಧಿಸುತ್ತ ಬಂದ ಹಾಗೆ ಮರಾಟೆಯವರ ವೈರವೂ ಬಲವಾಯಿತು. ಈ ವಾಯವ್ಯ ಪ್ರಾಂತಗಳ ವಶ್ಯತೆಯು ಇವರಿಬ್ಬರಿಗೂ ಬೇಕಾಗಿದ್ದಿತಾದುದರಿಂದ ಸಮಯ ದೊರೆತಾಗಲೆಲ್ಲ ಮೈಸೂರಿನವರಿಗೂ ಮರಾಟೆಯವರಿಗೂ ಯುದ್ಧಗಳು ನಡೆಯುತ್ತಲೇ ಇದ್ದುವು. ಇದೂ ಅಲ್ಲದೆ, ಮರಾಟೆಯವರು ಮೈಸೂರಿನ ಪ್ರಭುಗಳಿಂದ ತಮಗೆ ಚೌಥಾಯ ಸಲ್ಲಬೇಕೆಂಬ ಹಕ್ಕನ್ನು ಹೂಡಿ ಪದೇ ಪದೇ ದಂಡೆತ್ತಿ ಬರುತ್ತಲೇ ಇದ್ದುದರಿಂದ ಮೈಸೂರಿನ ಸಾಧಾರಣ ಪ್ರಜೆಗಳಿಗೆ ಮರಾಟೆಯವರ ದಂಡೆಂದರೆ ಭಯವೂ ರೋಷವೂ ಪ್ರಾಪ್ತಿಯಾಗುತ್ತಿದ್ದುವು.

ಹೈದರಲ್ಲಿಖಾನನು ಕಾಲವಾಗಿ ಟೀಪುಸುಲ್ತಾನನು ಪಟ್ಟವನ್ನೇರಿದಮೇಲೆ, ತಂದೆಯಷ್ಟು ಯುಕ್ತಿಯನ್ನು ತೋರದಿದ್ದರೂ ತಂದೆಗಿಂತಲೂ ಹೆಚ್ಚಾದ ಶೌರ್ಯವನ್ನು ತೋರುತ್ತ ಟಿಪ್ಪುವು ತನ್ನ ರಾಜ್ಯವನ್ನು ಎಲ್ಲ ದಿಕ್ಕುಗಳಲ್ಲಿಯೂ ವಿಸ್ತರಿಸಿದನು. ಇಂಗ್ಲೀಷರ ಸರ್ವಾಧಿಕಾರಿಯಾಗಿ ಬಂದಿದ್ದ ಲಾರ್ಡ್ ಕಾರನ್ವಾಲೀಸನು ಟಿಪ್ಪುವಿನ ಮೇಲೆ ಯುದ್ಧವನ್ನು ಹೂಡಲು ಸಮಯ ನಿರೀಕ್ಷಣೆ ಮಾಡುತ್ತ ಹೈದರಾಬಾದಿನ ನೈಜಾಮರ ಮತ್ತು ಮರಾಟೆಯವರ ಮೈತ್ರಿಯನ್ನು ಬೆಳೆಯಿಸಿದನು. ಪುಣೆಯಲ್ಲಿ ರೆಸಿಡೆಂಟಾಗಿದ್ದ ಮ್ಯಾಲೆಟ್ಟನಿಗೂ ನಾನಾಫಡನವೀಸನಿಗೂ ಸಂಭಾಷಣೆಗಳು ನಡೆದು, ಕಡೆಗೆ ೧೭೯೦ನೆಯ ಇಸವಿ ಜೂನ್ ೧ನೆಯ ತಾರೀಖಿನ ದಿನ, ಇಬ್ಬರೂ ಶನಿವಾರವಾಡೆಯಲ್ಲಿ ಒಂದು ಕೌಲಿಗೆ ಸಹಿ ಹಾಕಿದರು. ಈ ದೃಶ್ಯವು ಗಣೇಶಖಿಂಡ್ ಭವನದಲ್ಲಿ ಚಿತ್ರರೂಪದಲ್ಲಿ ಈಗಲೂ ಕಾಣಿಸುತ್ತಲಿದೆ.

ಕೂಡಲೆ ನಾನಾಫಡನವೀಸನು ಇಂಗ್ಲೀಷರಿಗೆ ನೆರವಾಗಲು ಮಹಾರಾಷ್ಟ್ರ ದಂಡನಾಯಕರಲ್ಲಿ ಹೆಸರುವಾಸಿಯಾಗಿದ್ದ ಹರಿಬಲ್ಲಾಳಪಂತ್ ಫಡ್ಕೆ ಮತ್ತು ಪರಶುರಾಮಭಾವು ಪಟವರ್ಧನರನ್ನು ತಮ್ಮ ದಳಗಳೊಡನೆ ಮೈಸೂರಿನ ಕಡೆಗೆ ಹೊರಡತಕ್ಕುದೆಂದು ಅಪ್ಪಣೆ ಮಾಡಿದನು. ಇವರಿಬ್ಬರಲ್ಲಿ ಪರಶುರಾಮಭಾವು ಸಾಹೇಬನ ಗತಿಯನ್ನೇ ನಾವು ಗಮನಿಸಬೇಕು. ದಳಸಹಿತ ಹೊರಟ ಪಟವರ್ಧನನು ಆಗಸ್ಟ್ ೧೧ನೆಯ ತಾರೀಖು ಕೃಷ್ಣಾನದಿಯನ್ನು ದಾಟಿ ಸೆಪ್ಟೆಂಬರ್ ೧೮ನೆಯ ತಾರೀಖಿಗೆ ಕ್ಯಾಪ್ಟನ್ ಲಿಟಲ್ ಎಂಬಾತನ ಇಂಗ್ಲೀಷ್ ದಳದೊಡನೆ ಸೇರಿ ಧಾರ್ವಾಡದ ಮುಂದೆ ನಿಂತನು. ಧಾರ್ವಾಡದಲ್ಲಿ ಟಿಪ್ಪುವಿನ ಕಡೆಯ ಕಿಲ್ಲೇದಾರನಾಗಿದ್ದ ಬದರುಜ್ಜಮಾನನು ಕೋಟೆಯನ್ನು ಸುಲಭವಾಗಿ ಬಿಟ್ಟುಕೊಡಲಿಲ್ಲ. ಮುತ್ತಿಗೆಯು ಮುಗಿಯುವುದಕ್ಕೆ ಸಾವಕಾಶವಾಯಿತು. ಕಡೆಗೆ ಏಪ್ರಿಲ್ ೪ನೆಯ ತಾರೀಖಿಗೆ ಕಿಲ್ಲೇದಾರನು ಕೈಸೆರೆಯಾಗಿ ಧಾರವಾಡವು ಪಟವರ್ಧನನ ವಶವಾಯಿತು. ತರುವಾಯ ಅಲ್ಲಿಂದ ಹೊರಟು ಏಪ್ರಿಲ್ ೨೨ನೆಯ ತಾರೀಖಿನ

ದಿನ ತುಂಗಭದ್ರೆಯನ್ನು ದಾಟಿ ಏಳು ದಿವಸಗಳೊಳಗಾಗಿ ಚಿತ್ರದುರ್ಗದ ಸಮಿಪಕ್ಕೆ ಬಂದನು. ಅಲ್ಲಿಂದ ಮುಂದಕ್ಕೆ ಹೊರಟು ಮೇ ತಿಂಗಳು ೨೪ನೆಯ ತಾರೀಖಿಗೆ ನಾಗಮಂಗಲದಲ್ಲಿ ಹರಿಪಂತನೊಂದಿಗೆ ಸಂಧಿಸಿ ಮೇಲುಕೋಟೆಯ ಕಡೆಗೆ ಹೊರಟನು. ಆ ವೇಳೆಯಲ್ಲಿ ಕಾರನ್ವಾಲೀಸನಿಗೆ ಶ್ರೀರಂಗಪಟ್ಟಣಕ್ಕೆ ಮುತ್ತಿಗೆಯನ್ನು ಹಾಕುವುದು ಅಸಾಧ್ಯವೆನಿಸಿದ್ದುದರಿಂದ ಮರಾಟೆಯವರು ಶೀರ್ಯದ ಕಡೆಗೆ ಹೊರಟು ಟಿಪ್ಪುವಿನ ರಾಜ್ಯದ ಉತ್ತರ ಭಾಗದಲ್ಲಿ ಯುದ್ಧವನ್ನು ನಡೆಯಿಸಬೇಕೆಂದು ನಿಶ್ಚಯಿಸಲು, ಅಂತೆಯೇ ಜೂಲೈ೮ನೆಯ ತಾರೀಖು ಪಟವರ್ಧನನು ಕಾರನ್ವಾಲೀಸನನ್ನು ಬಿಟ್ಟುಕೊಟ್ಟು ಉತ್ತರಕ್ಕೆ ಹೊರಟು, ದೇವರಾಯದುರ್ಗವನ್ನು ಬೆಂಕಿಗೆ ತುತ್ತಾಗಿ ಕೊಟ್ಟು, ಚಿತ್ರದುರ್ಗದ ಸಮಿಪಕ್ಕೆ ಬಂದು ಬಿದನೂರು ಪ್ರಾಂತವನ್ನು ಗೆಲ್ಲುವಾಲೋಚನೆಯನ್ನು ಮಾಡಿದನು. ಅದಕ್ಕನುಸಾರವಾಗಿ ತುಂಗಾ ನದಿಯನ್ನೇ ಅನುಸರಿಸಿಕೊಂಡು ಡಿಸೆಂಬರ್ ೨೯ನೆಯ ತಾರೀಖಿಗೆ ಶಿವಮೊಗ್ಗಿಯ ಬಳಿಗೆ ಬಂದನು. ಶಿವಮೊಗ್ಗಿಯ ಕಿಲ್ಲೇದಾರನಾಗಿದ್ದ ರಸಾಸಾಹೇಬನು ಈ ದಂಡನ್ನು ನಿರೀಕ್ಷಿಸಿಕೊಂಡಿದ್ದು ಶಿವಮೊಗ್ಗಿಯನ್ನು ಬಿಟ್ಟು ಸೈನ್ಯ ಸಮೇತನಾಗಿ ಸಮಿಪದ ಕಾಡಿನಲ್ಲಿ ಗೋಪ್ಯವಾಗಿ ಅಡಗಿಕೊಂಡಿದ್ದನು. ಪಟವರ್ಧನನು ಶಿವಮೊಗ್ಗಿಗೆ ಬಂದಿದ್ದರೂ ಅಲ್ಲಿ ಕೈಮಾಡದೆ ಸಮಿಪದ ಅರಣ್ಯ ಪ್ರದೇಶದಲ್ಲಿ ನುಗ್ಗಿದನು. ಒಂದು ಕಡೆ ರಸಾಸಾಹೇಬನಿಗೂ ಮತ್ತೊಂದು ಕಡೆ ಪಟವರ್ಧನ ಮತ್ತು ಕ್ಯಾಪ್ಟನ್ ಲಿಟಲ್ ಎಂಬಾತನಿಗೂ ಕದನವಾಗಿ ರಸಾಸಾಹೇಬನು ಸೋತುಹೋದನು. ತರುವಾಯ ಪಟವರ್ಧನನು ಶಿವಮೊಗ್ಗಿಗೆ ಬಂದು ಜನವರಿ ೨ನೆಯ ತಾರೀಖು ಆ ಪಟ್ಟಣವನ್ನು ಸುಲಭವಾಗಿ ವಶಪಡಿಸಿಕೊಂಡು ನೆರೆಹೊರೆಯಲ್ಲಿದ್ದ ಪ್ರಾಂತವನ್ನು ಸ್ವಾಧೀನಪಡಿಸಿಕೊಳ್ಳಲು ತಕ್ಕ ಸನ್ನಾಹವನ್ನು ಮಾಡಿ, ತಾನು ಬಿದನೂರಿಗೆ ಹೊರಟು ಜನವರಿ ೨೮ನೆಯ ದಿನ ತಲಪಿ, ಕೂಡಲೆ ಶಿವಮೊಗ್ಗಿಗೆ ಹಿಂದಿರುಗಿ ಬಂದು, ಶ್ರೀರಂಗಪಟ್ಟಣವು ಇಂಗ್ಲಿಷರ ಹಸ್ತಗತವಾದ ಸಂಗತಿಯನ್ನು ಫೆಬ್ರುವರಿ ೬ನೆಯ ತಾರೀಖು ಕೇಳಿ, ನಾಲ್ಕು ದಿನಗಳ ತರುವಾಯ, ೧೦ನೆಯ ತಾರೀಖಿನ ದಿನ ಶ್ರೀರಂಗಪಟ್ಟಣಕ್ಕೆ ಅಭಿಮುಖವಾಗಿ ಪ್ರಯಾಣ ಮಾಡಿದನು.

ಲಾರ್ಡ್ ಕಾರನ್ವಾಲೀಸನು ಹೇಳಿಕಳುಹಿಸಿದ ಸಮಯಕ್ಕೆ ಬಾರದೆ ಪಟವರ್ಧನನು ವಿಳಂಬ ಮಾಡಿದುದಕ್ಕೆ ಕಮರುದ್ದೀನ್ ಸಾಹೇಬನು ಮೈಸೂರು ಕಡೆಯಿಂದ ಬಿದನೂರು ಪ್ರಾಂತಕ್ಕಾಗಿ ಸೈನ್ಯದೊಡನೆ ಹೊರಡಲು ಕಾರಣವೇನೆನ್ನುವುದೂ ಶ್ರೀರಂಗಪಟ್ಟಣದಿಂದ ಮುಂದೆ ಪಟವರ್ಧನನು ಮೈಸೂರು ಪ್ರಾಂತವನ್ನು ಬಿಟ್ಟು ಬೇರೆ ಮಾರ್ಗವಾಗಿ ಹೊರಟುದೂ ಇಲ್ಲಿ ಅನಾವಶ್ಯಕ. ಶಿವಮೊಗ್ಗಿ ಪ್ರಾಂತದಲ್ಲಿ ಪಟವರ್ಧನನು ಕಾಲಿಡುವುದಕ್ಕೆ ಮೊದಲೇ ಆತನ ಸೈನ್ಯದ ಒಂದು ಭಾಗವು ಶೃಂಗೇರಿಗೆ ಹೊರಟುದು ಅಲ್ಲಿ ಅತ್ಯಾಚಾರಗಳಿಗೆ ಕಾರಣವಾಯಿತು. ನಡೆದ ಸಂಗತಿಯ ವಿವರವು ಮರಾಟೆಯವರ ಎರಡು ಪತ್ರಗಳಲ್ಲಿಯೇ ಕಾಣ

ಬರುವುದು; ಅಲ್ಲದೆ, ರಸಾ ಸಾಹೇಬನೊಡನೆ ಯುದ್ಧವಾಗುವುದಕ್ಕೆ ಮೊದಲೇ ಶೃಂಗೇರಿಯಲ್ಲಿ ಅತ್ಯಾಚಾರಗಳು ನಡೆದಿದ್ದುವೆಂದೂ ದೃಢವಾಗುತ್ತದೆ.

ಆ ಎರಡು ಪತ್ರಗಳಲ್ಲಿ ಮೊದಲನೆಯದು, ನೀಲಕಂಠ ಅಪ್ಪಾಜಿಯೆಂಬಾತನು ಮೀರಜಿನಲ್ಲಿದ್ದ ಬಾಳಾಸಾಹೇಬನಿಗೆ ೧೭೯೧ನೆಯ ಇಸವಿ ಏಪ್ರಿಲ್ ೨೩ನೆಯ ತಾರೀಖಿನಲ್ಲಿ ಬರೆದುದು; ಬರೆದ ಒಕ್ಕಣೆಯಿದು*:—

"ರಾಜಶ್ರೀ ದಾದಾಸಾಹೇಬ(ರಘುನಾಥರಾವ್ ಕುರುಂದವಾಡಕರ)ರ ಸೈನ್ಯದಿಂದ ಲಮಾಣರು ಮತ್ತು ಪಿಂಢಾರಿಗಳು ಹೊರಟು ಶೃಂಗೇರಿ ಸ್ವಾಮಿಗಳ ದೇವಸ್ಥಾನವನ್ನು ಕೊಳ್ಳೆಹೊಡೆದು, ಆನೆಗಳನ್ನೂ ಸುಮಾರು ಒಂದು ಲಕ್ಷ ರೂಪಾಯಿ ಬಾಳುವ ಪದಾರ್ಥವನ್ನೂ ತೆಗೆದುಕೊಂಡರು. ನಿನ್ನೆಯ ದಿವಸ ಇವೆಲ್ಲವನ್ನೂ ಈ ಶಿಬಿರದಿಂದ ಸ್ವಲ್ಪ ದೂರದಲ್ಲಿರುವ ಒಂದು ಸ್ಥಳಕ್ಕೆ ತಂದರು. ನಮ್ಮವರು ಕೆಲವರು ಅಲ್ಲಿಗೆ ಹೋಗಿ ಅವುಗಳನ್ನು ನೋಡಿದರು. ಆಮೇಲೆ ಅವುಗಳನ್ನು ವಶಕ್ಕೆ ತೆಗೆದುಕೊಳ್ಳುವ ವಿಚಾರವಾಗಿ ದಾದಾಸಾಹೇಬರಿಗೆ ಕಾಗದವೊಂದನ್ನು ಬರೆಯಲಾಯಿತು."

(ಪಟವರ್ಧನನು ತುಂಗಭದ್ರೆಯನ್ನು ದಾಟಿದುದು ಏಪ್ರಿಲ್ ೨೨ನೆಯ ದಿನ. ಶೃಂಗೇರಿಯಲ್ಲಿ ಅತ್ಯಾಚಾರವು ನಡೆದುದು ಮರುದಿನ, ಎಂದರೆ ಏಪ್ರಿಲ್ ೨೩ನೆಯ ದಿನ.) ಈ ಕಾಗದದಲ್ಲಿ ವಿಶೇಷ ಸಂಗತಿಗಳಿಲ್ಲ; ಎರಡನೆಯ ಕಾಗದದಲ್ಲಿವೆ. ಈ ಎರಡನೆಯ ಕಾಗದವು ಪ್ರಾಯಶಃ ಒಂದು ತಿಂಗಳು ಕಾಲ ಕಳೆದಮೇಲೆ, ಸುಮಾರು ಮೇ ತಿಂಗಳು ೧೪ನೆಯ ತಾರೀಖಿನಲ್ಲಿ, ಬರೆಯಲಾಯಿತು. ಇದು ತ್ರಿಯಂಬಕರಾವ್ ಬಲ್ಲಾಳನೆಂಬಾತನು ದಾದಾಸಾಹೇಬರಿಗೆ ಬರೆದುದು:—

"ತುಂಗಭದ್ರಾ ನದಿಯನ್ನು ಸೈನ್ಯವು ದಾಟುವುದಕ್ಕೆ ಮೊದಲೇ ಲಮಾಣರೂ ಪಿಂಢಾರಿಯವರೂ ಶಿವಮೊಗ್ಗಿಯ ಕಡೆಗೆ ಹೊರಟಿದ್ದರು. ಸ್ವಾಮಿಯವರಿಗೆ ಸೇರಿದ ಶೃಂಗೇರಿಯನ್ನು ಅವರು ಲೂಟಿಮಾಡಿದರು; ದಂಡ ಮತ್ತು ಕಮಂಡಲುಗಳನ್ನೂ ಬಿಡದೆ ಸ್ವಾಮಿಯ ಸ್ವತ್ತೆಲ್ಲವನ್ನೂ ಅಪಹರಿಸಿದರು; ಸ್ವಾಮಿಗಳಿಗೇನನ್ನೂ ಬಿಡಲಿಲ್ಲ. ಹೆಂಗಸರನ್ನು ಅತ್ಯಾಚಾರಕ್ಕೆ ಗುರಿಮಾಡಿದರು; ಹೆಂಗಸರು ಕೆಲವರು ಆತ್ಮಹತ್ಯ ಮಾಡಿಕೊಂಡರು. ದೇವಲಿಂಗ ಮತ್ತು ಇತರ ವಿಗ್ರಹಗಳನ್ನು ಲೂಟಿಮಾಡಿದರು. ಸ್ವಾಮಿಗಳ ಆನೆಗಳೆಲ್ಲವನ್ನೂ ಲಮಾಣರು ತೆಗೆದುಕೊಂಡುಬಿಟ್ಟರು. ಸ್ವಾಮಿಗಳು ಐದು ದಿನ ಉಪವಾಸಮಾಡಿ ತೀರಿಕೊಂಡರು.

"ಪರಶುರಾಮಭಾವು ಸಾಹೇಬರು(ಹಿರಿಯರು) ಈ ವೃತ್ತಾಂತವನ್ನು ಕೇಳಿದ ಕೂಡಲೆ ಕೆಲವು ರಾವುತರನ್ನು ಕಳುಹಿಸಿ ಲಮಾಣರನ್ನು ಹಿಡಿಸಿ ಆನೆಗಳನ್ನು ಸ್ವಾಧೀನಪಡಿಸಿಕೊಂಡರು. ಇಷ್ಟಲ್ಲದೆ, ಒಂದು ರೂಪಾಯಿ ಬಾಳುವಷ್ಟು ಸಾಮಾನೂ ಕಾಣಲಿಲ್ಲ."

*Khare's Aitihasik Lekh Samgraha*, Quoted by S. N. Sen, in Ind, Ant. Vol. 48

ಈ ಎರಡು ಕಾಗದಗಳಿಂದ, ಮರಾಟೆಯವರ ದಂಡಿನ ಭಾಗವಾಗಿದ್ದ ಲಮಾಣರೂ ಪೆಂಢಾರಿಯವರೂ ಮೃಗಗಳಂತೆ ವರ್ತಿಸಿದರೆಂಬುದು ದೃಢವಾಗುತ್ತದೆ; ಹಿಂದೂ ಸೈನಿಕರೇ ಆದರೂ, ಯುದ್ಧಕಾಲದಲ್ಲಿ ಮೈಮರೆತು ಪವಿತ್ರ ಕ್ಷೇತ್ರವೆನ್ನದೆ, ಯತಿಗಳೆಂದು ಗೌರವಿಸದೆ, ದೇವಸ್ಥಾನವೆಂದು ಪೂಜೆಮಾಡದೆ, ಕೊಳ್ಳೆಹೊಡೆದು ಪಶುಕ್ರೀಡೆಯಲ್ಲಿ ನಿರತರಾಗಿಹೋದರು. ಈ ಅವಮಾನಕ್ಕೆ ಕಾರಣರು ಪೆಂಢಾರಿಗಳೇ ಹೊರತು ಪರಶುರಾಮಭಾವು ಸಾಹೇಬನಲ್ಲವೆಂದು ಮ॥ ರಾ॥ ಖರೇಯವರು ವಾದಿಸುತ್ತಾರೆ. ಅದನ್ನು ಖಂಡಿಸುತ್ತ ಸುರೇಂದ್ರನಾಥ ಸೇನರು, ವಾಸ್ತವವಾಗಿ ಈ ಸೈನಿಕರು ದಾದಾ ಸಾಹೇಬರ ಆಜ್ಞಾನುವರ್ತಿಗಳೆಂಬುದು ಸ್ಪಷ್ಟವಾಗಿ ಕಾಣುವುದಾಗಿಯೂ, ಸಂಗತಿಯು ನಡೆದ ತರುವಾಯ ಅಪರಾಧಿಗಳಾದವರಿಗೆ ಶಿಕ್ಷೆಯಾವುದೂ ವಿಧಿಸಲಾಗಲಿಲ್ಲವೆಂಬುದಾಗಿಯೂ, ದಾದಾ ಸಾಹೇಬನೂ ಪರಶುರಾಮಭಾವು ಸಾಹೇಬನೂ ಆಪ್ತಮಿತ್ರರಾಗಿದ್ದರೆಂಬುದಾಗಿಯೂ ತೋರಿಸಿಕೊಟ್ಟು, ಮರಾಟೆಯವರ ರಾಜ್ಯವ್ಯವಸ್ಥೆಯಲ್ಲಿ ಪೆಂಢಾರಿಗಳು ಸಂಪಾದಿಸಿದ ಲೂಟಿಯಲ್ಲಿ ನಾಲ್ಕನೆಯ ಭಾಗವನ್ನು ಸರಕಾರಕ್ಕೆ ತೆರುತ್ತಿದ್ದುದರಿಂದ ಪೆಂಢಾರಿಗಳ ಕೃತ್ಯಗಳಿಗೆ ಮರಾಟೆಯವರು ತಾವು ಜವಾಬ್ದಾರರಲ್ಲವೆಂದು ಹೇಳುವುದು ನ್ಯಾಯಸಮ್ಮತವಲ್ಲವೆಂದು ಸಿದ್ಧಾಂತಪಡಿಸುತ್ತಾರೆ.

ಟಿಪ್ಪುವಿಗೂ ಪರಶುರಾಮಭಾವುವಿಗೂ ವೈಯಕ್ತಿಕವಾಗಿ ಬದ್ಧವೈರವಿದ್ದುದು ನಿಜ. ಮೈಸೂರು ಪ್ರಾಂತದಲ್ಲಿರುವಾಗ್ಗೆ ಭಾವುಸಾಹೇಬನು ದೇಶವನ್ನು ಕೊಳ್ಳೆಹೊಡೆಯಲು ಅಪ್ಪಣೆಯಿತ್ತನೆಂಬುದು ನಿಜ. ಸ್ವಸ್ಥಾನಕ್ಕೆ ಹಿಂದಿರುಗಿ ಹೋಗುವಾಗ ಮೈಸೂರಿನ ಜನರು ಹರಿಪಂತನ ಮಾರ್ಗದಲ್ಲಿ ತೊಂದರೆಗಳನ್ನು ಒಡ್ಡಲಿಲ್ಲ. ಶ್ರೀರಂಗಪಟ್ಟಣದಿಂದ ಹಿಂದಿರುಗಿದಾಗ ಪರಶುರಾಮಭಾವುವಿನ ಸೈನ್ಯಕ್ಕೆ ಮಾರ್ಗದಲ್ಲಿ ಮೈಸೂರು ಪ್ರಾಂತದ ಜನರು ಹಿಂಸೆಯನ್ನು ಕೊಟ್ಟರು. ಹೀಗೆ ಮೈಸೂರಿನವರು ಮಾಡಲು ಕಾರಣವು ಸ್ಪಷ್ಟವಾಗಿಯೇ ಇದೆ. ಪರಶುರಾಮಭಾವುವಿನ ಸೈನ್ಯವು ಇತರ ಸೈನ್ಯಗಳಂತೆ ಪ್ರವರ್ತಿಸದೆ ದಾರಿಯುದ್ದಕ್ಕೂ ಕೊಳ್ಳೆಹೊಡೆದು ಜನರನ್ನು ಹಿಂಸೆಪಡಿಸಿದ್ದಿತು. ಇದನ್ನು ಲಾರ್ಡ್ ಕಾರನ್ವಾಲೀಸನ ಒಂದು ಕಾಗದದಲ್ಲಿ ಕೆಲವು ವಾಕ್ಯಗಳು ದೃಢೀಕರಿಸುತ್ತವೆ:—

* "ಪರಶುರಾಮಭಾವು ಶ್ರೀರಂಗಪಟ್ಟಣಕ್ಕೆ ಬಂದು ನನ್ನನ್ನು ಸೇರಿದ ಕೂಡಲೆ ಭಾವುಸಾಹೇಬನ ಸೈನಿಕರು, ಕರಾರು ನಡೆದು ಶಾಂತಿಸ್ಥಾಪನೆಯಾಗಿದ್ದರೂ ಕೂಡ, ದೇಶವನ್ನು ಕೊಳ್ಳೆಹೊಡೆಯುತ್ತಿದ್ದರೆಂದು ದಿನೇ ದಿನೇ ಟಿಪ್ಪುಸುಲ್ತಾನನು ನನ್ನಲ್ಲಿ ದೂರು ಹೇಳುತ್ತಿದ್ದನು. ಟಿಪ್ಪುವಿನೆದುರಿನಲ್ಲಿ ನಾನದನ್ನು ಒಪ್ಪಿಕೊಳ್ಳಲಿಲ್ಲವಾದರೂ ಆ ದೂರುಗಳು ಯಥಾರ್ಥವೆಂದು ನನಗೆ ತಿಳಿದಿದ್ದುದರಿಂದ ಅವುಗಳ ಕಾರಣವನ್ನು ಮೂಲೋತ್ಪಾಟನೆ ಮಾಡಲು ಪ್ರಯತ್ನಪಟ್ಟೆನು."

* To the Secret Committee—Dated 2nd May 1792. Vol. II, Cornwallis Correspondence, Ed. by Ross.

ಈ ರೀತಿಯಲ್ಲಿ ಭಾವು ಸಾಹೇಬನು ದೇಶವನ್ನು ಲೂಟಿಹೊಡೆಯಲು-ಉದ್ಯುಕ್ತನಾದುದು ಯುದ್ಧದಲ್ಲಿ ಅಸ್ವಾಭಾವಿಕವಲ್ಲ. ಶೃಂಗೇರಿಯಲ್ಲಿ ಅತ್ಯಾಚಾರ ನಡೆದುದು, ಪ್ರಾಯಶಃ ನಡೆದ ಮೇಲೆ ಆತನಿಗೆ ತಿಳಿದಿರಬಹುದು; ತಿಳಿದ ಮೇಲೆ ವಿಚಾರಣೆಯನ್ನು ನಡೆಯಿಸಿ ಅಪರಾಧಿಗಳನ್ನು ಶಿಕ್ಷೆಗೆ ಗುರಿಮಾಡದಿದ್ದುದೂ, ಶೃಂಗೇರಿಯ ದೇವಾಲಯಗಳಿಗೇ ಆಗಲಿ ಸ್ವಾಮಿಗಳಿಗೇ ಆಗಲಿ ತಕ್ಕ ಉಪಚಾರ ಸಮಾಧಾನಗಳನ್ನು ಮಾಡಲು ಪ್ರಯತ್ನಿಸದಿದ್ದುದೂ ಅಕ್ಷಮ್ಯವೆಂದೇ ತೋರುವುದು.

ತ್ರಿಯಂಬಕರಾವ ಬಲ್ಲಾಳನು ಬರೆದುದರಲ್ಲಿ, ಸ್ವಾಮಿಗಳು ತೀರಿಹೋದರೆಂಬುದು ನಿಜವಲ್ಲ. ಪೆಂಢಾರಿಯವರ ದಾಂಧಲೆಯ ಕಾಲದಲ್ಲಿ, ಅಸಹಾಯರಾದ ಸ್ವಾಮಿಗಳು ಗೋಪ್ಯವಾಗಿ ಶೃಂಗೇರಿಯನ್ನು ಬಿಟ್ಟು ಕಾರ್ಕಳಕ್ಕೆ ಹೋಗಿದ್ದಂತೆ ಟೀಪುಸುಲ್ತಾನನ ಕಾಗದಗಳಿಂದ ತಿಳಿಯಬರುವುದು. ಪ್ರಾಯಶಃ ಮರಾಟಿಯವರು ಆ ಸಮಯದಲ್ಲಿ ಸ್ವಾಮಿಗಳು ತೀರಿಹೋದರೆಂದೇ ಭಾವಿಸಿರಬಹುದು. ಶೃಂಗೇರೀ ಪೀಠವನ್ನಾಗ ಅಲಂಕರಿಸಿದ್ದವರು ೧೭೭೦ರಿಂದ ೧೮೧೪ರ ವರೆಗಿದ್ದ ಸಚ್ಚಿದಾನಂದ ಭಾರತೀ ಸ್ವಾಮಿಗಳು. ಈ ಸ್ವಾಮಿಗಳಿಗೆ ಸುಲ್ತಾನನು ಮೂವತ್ತು ಪತ್ರಗಳನ್ನು ಬರೆದಿರುತ್ತಾನೆ. ಪ್ರತಿ ಪತ್ರದಲ್ಲಿಯೂ ಸ್ವಾಮಿಗಳಲ್ಲಿ ಸುಲ್ತಾನನಿಗಿದ್ದ ಭಕ್ತಿ ಗೌರವಗಳು ವಿಶದವಾಗುತ್ತವೆ. ಆ ಕಾಗದಗಳಿಂದ ಶೃಂಗೇರಿಯಲ್ಲಿ ನಡೆದ ಅತ್ಯಾಚಾರಗಳ ವಿವರವು ಇನ್ನೂ ವಿಶೇಷವಾಗಿಯೇ ದೊರೆಯುತ್ತದೆ. ಮರಾಟಾ ರಾವುತರು ಶೃಂಗೇರಿಗೆ ನುಗ್ಗಿ ಬ್ರಾಹ್ಮಣರನ್ನೂ ಇತರ ಜನರನ್ನೂ ಹೊಡೆದು ಗಾಯಪಡಿಸಿ ಅನೇಕ ಬ್ರಾಹ್ಮಣರನ್ನೂ ಇತರರನ್ನೂ ಹತ್ಯಮಾಡಿ ಶಾರದಾ ದೇವಿಯ ವಿಗ್ರಹವನ್ನು ಅದರ ಸ್ಥಾನದಿಂದ ಹಿಡಿದೆಳೆದು ಮಠವನ್ನು ಲೂಟಿ ಮಾಡಿ, ಒಟ್ಟಿನ ಮೇಲೆ ಅರುವತ್ತು ಲಕ್ಷ ರೂಪಾಯಿ ಬಾಳುವ ಧನ ಕನಕ ವಸ್ತು ವಿಶೇಷಗಳನ್ನು ಒಯ್ದರೆಂದು ಆ ಕಾಗದಗಳಿಂದ ಸಿದ್ಧವಾಗುತ್ತದೆ. ಇಷ್ಟು ಅಕ್ರಮ ಜರುಗಿದಾಗ ಸ್ವಾಮಿಗಳು ಕಾರ್ಕಳಕ್ಕೆ ಹೋಗಿ ಅಲ್ಲಿಂದ ಟಿಪ್ಪುವಿಗೆ ಕಾಗದ ಬರೆದರು. ಟಿಪ್ಪುವು ಉದ್ಧಾರಕ್ಕೆ ಸಹಾಯ ಮಾಡಿ ಆದರದಿಂದ ಸ್ವಾಮಿಗಳನ್ನು ಬರಮಾಡಿಕೊಂಡನು. ಕೆಲವು ಕಾಲವಾದ ಮೇಲೆ ಸ್ವಾಮಿಗಳು ಪರಶುರಾಮಭಾವುವನ್ನು ಹುಡುಕಿಸಿ ಆತನು ದೊರೆಯದಿರಲು, ತಾವೇ ಪ್ರಯಾಣ ಹೊರಟು ತೀರ್ಥಯಾತ್ರೆಗಳನ್ನು ನೆರವೇರಿಸಿ ಪುಣೆಗೆ ಹೋಗುವ ಪ್ರಯತ್ನದಲ್ಲಿದ್ದರು. ಸ್ವಾಮಿಗಳು ಪುಣೆಯನ್ನು ತಲಪಿದ ಸಂಗತಿಯಾಗಲಿ ಅಲ್ಲಿ ನಡೆದ ಸಂಗತಿಗಳಾಗಲಿ ಈ ಕಾಗದಗಳಿಂದ ತಿಳಿಯುವುದಿಲ್ಲ. ಮರಾಠೀ ಭಾಷೆಯನ್ನು ಬಲ್ಲವರು ಜೇರೆಡೆಯಲ್ಲಿ ಅರಸಿದರೆ ಆ ವೃತ್ತಾಂತವು ಸ್ಪಷ್ಟವಾದೀತು. ಸ್ವಾಮಿಗಳು ದೇಶಾಂತರದಲ್ಲಿದ್ದಾಗ ಟೀಪು ಸುಲ್ತಾನನು ಬರೆದ ಒಂದು ಕಾಗದವನ್ನು ದೃಷ್ಟಾಂತಕ್ಕಾಗಿ ನೋಡಬಹುದು :—

"ಶ್ರೀಮತ್ಪರಮಹಂಸಾದಿ ಯಥೋಕ್ತ ಬಿರುದಾಂಕಿತರಾದ ಶೃಂಗೇರಿ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರಿಗೆ ಟಿಪೂಸುಲತಾನ್ ಪಾದಷಾಹರವರು

ಸಲಾಂ! ತಾವು ಬರಸಿ ಕಳುಹಿಸಿದ ಪತ್ರಿಕೆಯಿಂದ ಸಕಲಾಭಿಪ್ರಾಯವು ತಿಳಿಯು ಲಾಯಿತು. ತಾವು ಜಗದ್ಗುರುಗಳು, ಸರ್ವಲೋಕಕ್ಕೂ ಕ್ಷೇಮವಾಗಬೇಕು, ಜನರು ಸ್ವಸ್ಥದಲ್ಲಿ ಇರಬೇಕೆಂಬುದಾಗಿ ತಪಸ್ಸು ಮಾಡುತ್ತಲೆ ಇಧೀರಿ. ಸರಕಾರದ ಕ್ಷೇಮವು ಉತ್ತರೋತ್ತರ ಅಭಿವರ್ಧಮಾನ ಆಗುವಂತೆ ತ್ರಿಕಾಲ ತಪಸ್ಸು ಮಾಡುವಲ್ಲಿಯು ಈಶ್ವರ ಪ್ರಾರ್ಥನೆ ಮಾಡುತ್ತಾ ಬರುವುದು. ತಮ್ಮಂಥಾ ದೊಡ್ಡವರು ಯಾವ ದೇಶದಲ್ಲಿ ಇದ್ದಾರೆ, ಆ ದೇಶಕ್ಕೆ ಮಳೆ ಬೆಳೆ ಸಕಲವೂ ಆಗಿ ಸುಭಿಕ್ಷವಾಗಿ ಇರತಕ್ಕದ್ದಾದ್ದರಿಂದ ಪರಸ್ಥಳದಲ್ಲಿ ಬಹಳ ದಿವಸ ತಾವು ಯಾತಕ್ಕೆ ಇರಬೇಕು. ಹೋದ ಕೆಲಸವನ್ನು ಕ್ಷಿಪ್ರದಲ್ಲ ಅನುಕೂಲಪಡಿಸಿಕೊಂಡು ಸ್ಥಳಕ್ಕೆ ಸಾಗಿಬರುವಂತೆ ಮಾಡಿಸುವುದು.......''

ಮರಾಟೆಯವರ ವೃತ್ತಾಂತದಲ್ಲಿ ಮುಖ್ಯವಾದುದೊಂದುಳಿದಿರುವುದು: ೧೮೦೦ರಲ್ಲಿ (ಟಿಪ್ಪು ತೀರಿಹೋದ ಮೇಲೆ) ಪೇಶ್ವೆ ಬಾಜೀರಾಯನು ಇದೇ ಸ್ವಾಮಿಗಳಿಗೆ ಕಾಗದ ಬರೆಯುತ್ತ ಸ್ವಾಮಿಗಳ ಶ್ರೀಮುಖದಂತೆ ಎಲ್ಲ ಸಭೆಗಳಲ್ಲಿಯೂ ಶೃಂಗೇರೀ ಪೀಠಕ್ಕೆ ಅಗ್ರಪೂಜೆಯು ನಡೆಯುವಂತೆ ನಿಷ್ಕರ್ಷಿಸಲ್ಪಟ್ಟಿರುವುದೆಂದೂ ಅದಕ್ಕಾಗಿ ಸ್ವಾಮಿಗಳು ಪುಣೆ ಮತ್ತು ಇತರ ಸ್ಥಳಗಳಲ್ಲಿ ಪ್ರತಿನಿಧಿಗಳನ್ನು ನಿಯಮಿಸಬೇಕೆಂದೂ ಕೇಳಿಕೊಳ್ಳುವುದಲ್ಲದೆ ತಾನು ಸ್ವಾಮಿಗಳ ಶಿಷ್ಯನೆಂದು ಹೇಳಿಕೊಳ್ಳುತ್ತಾನೆ. ಇದರಿಂದ, ಆ ವೇಳೆಗೆ ಮರಾಟೆಯವರು ಸ್ವಾಮಿಗಳ ಕ್ಷಮೆಯನ್ನು ಪಡೆದಿದ್ದರೆಂಬುದು ಸ್ಪಷ್ಟವಾಗುವುದು. ಹೇಗೆ ಪಡೆದರೆಂಬುದು ಮರಾಠೀ ಬಲ್ಲ ಇತಿಹಾಸಾನ್ವೇಷಿಗಳು ಅರಸಬಹುದಾದ ವಿಷಯ. ಪರಶುರಾಮಭಾವುವು ಆ ವೇಳೆಗೆ ಧೋಂಡೂವಾಘೆಂಬ ಹೆಸರಿನಿಂದ ಪ್ರಸಿದ್ಧನಾದ ತನ್ನ ಬಂಧುವಿನ ಕೈಯಿಂದಲೇ ಹತನಾಗಿದ್ದನು. ಈ ವಿಷಯದ ವಿವರವು ಇನ್ನೂ ಸ್ಪಷ್ಟವಾಗಬೇಕಾಗಿದೆ.

ಮೇಲಿನ ಕಾಗದದಿಂದ ಟೀಪು ಸುಲ್ತಾನನಿಗೆ ಸ್ವಾಮಿಗಳಲ್ಲಿ ಪೂಜ್ಯಬುದ್ಧಿಯಿದ್ದುದು ಸ್ಪಷ್ಟವಾಗುತ್ತದೆ. ಇತರ ಕಾಗದಗಳಲ್ಲಿಯೂ ಅದೇ ಭಕ್ತಿ ವಿಶ್ವಾಸಗಳು ಕಾಣುತ್ತವೆ. ಅವುಗಳ ವೃತ್ತಾಂತವನ್ನು ರಾವ್ ಬಹದೂರ್ ಆರ್. ಎ. ನರಸಿಂಹಾಚಾರ್ಯರು ಆಗಲೇ ವಿವರಿಸಿರುತ್ತಾರಾದುದರಿಂದ ಇಲ್ಲಿ ಅವುಗಳ ದೀರ್ಘ ವಿಚಾರವು ಅನುಚಿತ. ಆ ಕಾಗದಗಳಿಂದ ಟಿಪ್ಪುವು, ಒಂದು ಪಕ್ಷದವರು ಹೇಳಿದಂತೆ, ಪಿಶಾಚ ಸ್ವರೂಪಿಯಲ್ಲನೆಂದು ಸ್ಪಷ್ಟವಾಗುವುದು. ಪ್ರತಿಪಕ್ಷದವರು ''ಈ ಕಾಗದಗಳನ್ನು ನೋಡಿ, ಬೆಂಗಳೂರಿನಲ್ಲಿಯೂ ಶ್ರೀರಂಗಪಟ್ಟಣದಲ್ಲಿಯೂ ಅರಮನೆಯ ಸಮೀಪದಲ್ಲಿಯೇ ಇರುವ ಹಿಂದೂ ದೇವಾಲಯಗಳನ್ನು ನೋಡಿ, ಅನ್ಯಮತಸ್ಥರನ್ನು ಹಿಂಸೆಪಡಿಸಿದವನು ಟಿಪ್ಪುವೆಂದಾಗಲಿ ಬಲಾತ್ಕಾರದಿಂದ ಇತರರನ್ನು ಮಹಮ್ಮದೀಯರನ್ನಾಗಿ ಮಾಡಿದವನು ಟಿಪ್ಪುವೆಂದಾಗಲಿ ಹೇಳುವುದು ಅನ್ಯಾಯ'' ಎಂದು ಹೇಳುವುದೂ ನ್ಯಾಯವಲ್ಲ. ಮಲೆಯಾಳ, ಕೊಡಗು, ಉತ್ತರ ಕರ್ಣಾಟಕಗಳಲ್ಲಿ ಟಿಪ್ಪುವಿನ ಹಿಂಸೆಗೆ ಬೇಕಾದಷ್ಟು ಕುರುಹುಗಳುಂಟು.

ತಥ್ಯಾಂಶವು ಹೀಗೆ: ಟೀಪು ಸುಲ್ತಾನನು, ನಮ್ಮಲ್ಲಿ ಬಳಕೆಯಲ್ಲಿರುವ ಗಾದೆಯನ್ನು ಸ್ವಲ್ಪ ಬದಲಾಯಿಸಿಕೊಂಡು ಅನುಸರಿಸಿದ್ದನು—ಅವನು ಮನೆಗೆ ಉಪಕಾರಿಯೂ ನೆರೆಮನೆಗೆ ಮಾರಿಯೂ ಆಗಿದ್ದನು. ಇತರ ಪ್ರಾಂತಗಳ ಜನರು ಮುಸಲ್ಮಾನರಾದರೆ ತನ್ನ ಪ್ರಭುತ್ವವನ್ನಂಗೀಕರಿಸಿ ವಿಧೇಯರಾಗಿರುವರೆಂದು ಟಿಪ್ಪು ಪ್ರಾಯಶಃ ತಿಳಿದಿದ್ದನು.

**ಕೆ. ಕೃಷ್ಣಯ್ಯಂಗಾರ್ಯ, ಬಿ.ಎ.**

---

# *ನಾಗಾಯಿಯ ಅವಶೇಷಗಳು

**೧. ಪೀಠಿಕೆ.**—ನಿಜಾಮ ಹೈದರಾಬಾದ ಸಂಸ್ಥಾನವು ಹಿಂದೂಸ್ಥಾನದಲ್ಲಿರುವ ಎಲ್ಲ ದೇಶೀಯ ಸಂಸ್ಥಾನಗಳಲ್ಲಿ ವಿಸ್ತೀರ್ಣತೆಯಿಂದಲೂ ಘನತೆಯಿಂದಲೂ ಜನಸಂಖ್ಯೆಯ ಮಾನದ ಮೇಲಿಂದಲೂ ಉಚ್ಚತಮವಾದ ಐತಿಹಾಸಿಕ ಸಂಗತಿಗಳ ಮೇಲಿಂದಲೂ ಶ್ರೇಷ್ಠವಾಗಿರುವಂತೆ, ಪುರಾತನ ಐತಿಹಾಸಿಕ ಕುರುಹಿನಂತಿರುವ ಅವಶೇಷಗಳಿಂದಲೂ ತುಂಬಿ ತುಳುಕುತ್ತಿರುವುದು. ಆನೆಗೊಂದಿ, ಮಾನ್ಯಖೇಟ (ಮಳಖೇಡ), ಅಜಂತಾ, ವೇರೂಳ, ಕಲ್ಯಾಣ, ಕೊಪಣನಗರ (ಕೊಪ್ಪಳ) ಇಟಗಿ—ಇವೇ ಮೊದಲಾದ ಜಗತ್ಪ್ರಸಿದ್ಧ, ಹಾಗೂ ವಿದೇಶೀಯ ಜನರ ಕೇವಲ ಕೌತುಕಾಶ್ಚರ್ಯದ ನೋಟಗಳಿಗೆ ಆಕರ್ಷಕವಾಗಿರುವ ಹಲವು ಸ್ಥಳಗಳು ಇಲ್ಲಿರುವುವು. ಆದರೂ, ಈ ವಸ್ತುಗಳ ಸಂಶೋಧನದ ಕಾರ್ಯದಲ್ಲಿ ತೃಪ್ತಿಕರವಾದ ಉತ್ಸಾಹವು ಈ ಸಂಸ್ಥಾನದಲ್ಲಿಯ ರಾಜಪ್ರಜೆಗಳಲ್ಲಿ ಕಾಣದಿರುವುದು ದುಃಖಕಾರಕವೇ ಸರಿ. ಇದಕ್ಕೆ ಈ ರಾಜ್ಯದಲ್ಲಿಯ ರಾಜಕೀಯ ವಿಭಾಗಗಳ ವಿಪರೀತ ಸ್ಥಿತಿಯೂ ಅಧಿಕಾರಸ್ಥರ ಅಲಕ್ಷ್ಯವೂ ಮತ್ತು ಪ್ರಜೆಗಳ ವಿದ್ಯಾವಿಹೀನತೆಯೂ ಕಾರಣಗಳು. ಹೈದರಾಬಾದು ಸಂಸ್ಥಾನದಲ್ಲಿ ಪುರಾತನ ಐತಿಹಾಸಿಕ ಸಂಶೋಧಕರಿಗೆ ಆಹಾರವೆಷ್ಟರ ಮಟ್ಟಿಗಿದೆಯೆಂಬುದರ ವಿಷಯವಾಗಿ ಉಪನ್ಯಾಸವನ್ನು ಕೊಡುವಾಗ್ಗೆ, ಹೈದರಾಬಾದ ಆರ್ಕಿಯೊಲಾಜಿಕಲ್ ಸೊಸೈಟಿಯಲ್ಲಿ ಕ್ರಿ. ೧೯೧೪, ೨೭ನೆಯ ಸೆಪ್ಟಂಬರಲ್ಲಿ ಮಿ॥ ಗುಲಾಮ ಎಜದಾನಿ, ಎಂ.ಎ., ಸೂಪರಿಂಟೆಂಡೆಂಟ, ಹೈದರಾಬಾದ ಆರ್ಕಿಯೊಲಾಜಿಕಲ್ ಡಿಪಾರ್ಟಮೆಂಟ—ಇವರು ಹೇಳುವುದೇನೆಂದರೆ :—

"His Highness the Nizam's Dominions are almost identical in limit with the ancient political division of the Deccan, and claim a history which, though lacking in continuity, goes back to several centuries before the Christian era. The country is dotted over with monuments and relics bearing marks of the civilization and religious beliefs of diverse nations who in turn wielded supreme authority here and, when their power gradually waned, made room for others superior to them in power and culture. The monuments of these various peoples are heir-looms which not only appeal to our piety and patriotism but also call for careful study and genuine appreciation."

* ಹದಿನೈದನೆಯ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಬ್ರಿಟಿಷ್ ಹಿಂದೂಸ್ಥಾನದ ಪ್ರಾಂತಗಳಲ್ಲಿಯೂ ಮತ್ತು ಉಳಿದ ದೇಶೀಯ ಸಂಸ್ಥಾನಗಳಲ್ಲಿಯೂ ಕತ್ತಲೆಯಲ್ಲಡಗಿರುವ ಐತಿಹಾಸಿಕ ದ್ರವ್ಯವನ್ನು ಬೆಳಕಿಗೆ ತೆಗೆದು ತಮ್ಮ ಪುರಾತನ ವೈಭವವನ್ನು ಜಗತ್ತಿಗೆ ತೋರಿಸಿ ತಾವು ಸ್ಫುರಣ ಹೊಂದುವ ಹಲವು ಕಾರ್ಯಗಳನ್ನು ಸರಕಾರದವರೂ ಮತ್ತು ಇತರರೂ ಕೂಡಿಯೇ ಮಾಡಿರುತ್ತಾರೆ. ಹೊರಗೆ ಕಾಣಿಸುವ, ಹಾಗೂ ಶಕ್ಯವಿದ್ದ ಮಟ್ಟಿಗೆ ಬಯಲಿಗೆ ತೆಗೆಯಲ್ಪಡುವ ಎಲ್ಲ ಪುರಾತನ ವೈಭವವೂ ಬೆಳಕಿಗೆ ಬಂದು ಅದರ ವಿಷಯಕವಾದ ಎಲ್ಲ ಸಂಗತಿಗಳೂ ಸಾಧ್ಯವಿದ್ದ ಮಟ್ಟಿಗೆ ಕೂಲಂಕಷವಾಗಿ ತಿಳಿಯುವಂತೆ ಐತಿಹಾಸಿಕರೂ ಸರಕಾರದವರೂ ಕೂಡಿಯೇ ಪ್ರಯತ್ನಮಾಡಿರುವರು. ಹೈದರಾಬಾದು ಸಂಸ್ಥಾನದಲ್ಲಿಯೂ ಸಹ ಅದೇ ಮಾದರಿಯನ್ನನುಸರಿಸಿ ಕೆಲಸ ಮಾಡುವ ಉದ್ದೇಶದಿಂದ ಪುರಾತನ ವಸ್ತು ಸಂಶೋಧನದ ಶಾಖೆಯು ನಿರ್ಮಿತವಾಗಿ ಸುಮಾರು ಇಪ್ಪತ್ತು ವರುಷಗಳ ಅವಧಿಯು ಗತಿಸಿದರೂ ಆಗ ಬೇಕಾದಷ್ಟು ಕಾರ್ಯವಾಗಿಲ್ಲ. ಹಣವೇನೋ, ಮಿಕ್ಕ ಕಡೆಗಳಲ್ಲಿ ಅಷ್ಟೇ ಕೆಲಸಕ್ಕೆ ವ್ಯಯವಾಗಬಹುದಾದುದಕ್ಕಿಂತ ಹೆಚ್ಚಾಗಿ ವ್ಯಯವಾಗಿರುವುದು. ಇದರ ಕಾರಣವೆಂದರೆ, ಈ ಶಾಖೆಯವರು ತಮ್ಮ ದೃಷ್ಟಿಯನ್ನು ಕೇವಲ ಮುಸಲ್ಮಾನೀ ಕುರುಹುಗಳ ಮೇಲಿಟ್ಟಿರುವುದರಿಂದ ಹಿಂದೂ ಐತಿಹಾಸಿಕ ಕುರುಹಗಳ ವಿಷಯವಾಗಿ ಸಾಕಾದಷ್ಟು ಆದರವೂ ಚಿಕಿತ್ಸಕ ಬುದ್ಧಿಯೂ ಕಂಡುಬಾರದೆ ಸಂಪೂರ್ಣ ಅಲಕ್ಷ್ಯ ಮಾಡಿರುವರೆಂದರೂ ಸಲ್ಲುವುದು. ಪ್ರಜಾಜನರಲ್ಲಿ ಈ ವಿಷಯಕವಾದ ಚೈತನ್ಯವೇ ಇಲ್ಲ. ಹೆಸರಿಗೆ ಮಾತ್ರ ಕೆಲವು ದೇವಾಲಯಗಳ ಕುಂಬ, ಮಾಳಿಗೆ, ಕಳಸ, ಗೋಪುರಗಳಿಗೆ ಮುಲಾಮು (Plaster) ಹಚ್ಚಿದಂತೆ ಮಾಡಿರುತ್ತಾರೆ; ಇದಿರಲಿ.

**೨. ಸ್ಥಳ ಪರಿಚಯ.**—ಮೇಲೆ ಹೇಳಿದಂತೆ ನಿಜಾಮರ ಸಂಸ್ಥಾನದಲ್ಲಿ ಅಡಕವಾಗಿರುವ ಪುರಾತನ ಐತಿಹಾಸಿಕ ದ್ರವ್ಯಗಳಲ್ಲಿ ನಾಗಾಯಿ(ವಿ?)ಯೂ ಒಂದು ಆಗಿರುವುದು. ವಾಡೀ ರೈಲ್ವೆ ಸ್ಟೇಷನ್ನಿನಿಂದ ಹೈದರಾಬಾದಿಗೆ ಹೋಗುವ ರೈಲ್ವೇ ಮಾರ್ಗದಲ್ಲಿ ಚಿತಾಪುರವೆಂಬುದು ಮೊದಲನೆಯ ರೈಲ್ವೇ ಸ್ಟೇಷನ್ ಆಗಿದೆ. ನಾಗಾಯಿಯು ಈ ಚಿತಾಪುರ ಸ್ಟೇಷನ್ನಿನ ದಕ್ಷಿಣ ದಿಕ್ಕಿಗೆ ಸುಮಾರು ಒಂದು ಒಂದೂವರೆ ಮೈಲು ದೂರದಲ್ಲಿರುವುದು. ಇದು ಈಗ ಜನ ವಸತಿಯಿಲ್ಲದ ಕಾಲನ ವಶಕ್ಕೆ ತುತ್ತಾದ ಹಾಳು ಹಳ್ಳಿಯು. ಈ ಹಳ್ಳಿಯ ಕೆಲವು ಭಾಗವು ನವಾಬ ಅಸ್ಗರಜಂಗ ಬಹಾದ್ದೂರರಿಗೂ, ಕೆಲವು ಭಾಗವು ನವಾಬ ಜಫೀರುದ್ದೌಲಾ ಬಹಾದ್ದೂರರಿಗೂ ಜಹಗೀರಾಗಿರುವುದು.

ಈ ಗ್ರಾಮಕ್ಕೆ ನಾಗಾಯಿಯೆಂಬ ಹೆಸರು ಏಕೆ ಬಂದಿತೆಂಬುದು ನಮಗೆ ತಿಳಿಯಲಿಲ್ಲ. ಈ ಊರಲ್ಲಿ ನೋಡಿದಲ್ಲೆಲ್ಲ ಕಲ್ಲುಗಳ ಮೇಲೆ ನಾಗರ ಹಾವಿನ ಒಂಟಿ, ಅಥವಾ ಜೋಡು ಚಿತ್ರಗಳು ವಿಪುಲವಾಗಿ ಕಾಣಿಸುವುವು. ನಾಗ ಮೂರ್ತಿಗಳಿಗೂ ನಾಗಾಯಿಯೆಂಬ ಹೆಸರಿಗೂ ವಿಶೇಷವಾದ ಪ್ರಬಲ ಕಾರಣವುಳ್ಳ ಸಂಬಂಧ ಇದ್ದಿರಬಹುದೆಂಬಲ್ಲಿ ಸಂದೇಹವೇನೂ ಇಲ್ಲ.

ನಾಗಾಯಿಯ ಪುರಾತನ ಐತಿಹಾಸಿಕ ಕುರುಹಿಸಂತಿರುವ ಅವಶೇಷಗಳು ಈ ಹಳ್ಳಿಯ ಸುತ್ತು ಮುತ್ತು ಸುಮಾರು ನಾಲ್ಕು ಮೈಲುಗಳವರೆಗೆ ಹಬ್ಬಿರುತ್ತವೆ. ಇದರಲ್ಲಿ ಹಾಳು ಗುಡಿಗಳೂ ಮಸೀದೆಗಳೂ ಮನೆಗಳೂ ಕೆರೆ ಮತ್ತು ಬಾವಿ ಮೊದಲಾದವುಗಳೇ ಹಲವಿರುವುವು. ಗ್ರಾಮವು ಒಂದು ಎತ್ತರವಾದ ದಿಣ್ಣೆಯ ಮೇಲಿರುವುದರಿಂದ ಸುತ್ತಲೂ ರಮಣೀಯವಾದ ನೋಟವನ್ನು ಬೀರುತ್ತಿದೆ. ದಿಣ್ಣೆಯ ಉತ್ತರ ಭಾಗವು ಒಡೆದಿದ್ದು ಹತ್ತಲಿಕ್ಕೆ ಅನುಕೂಲ ವಿಲ್ಲ. ಚಿತಾಪುರದಿಂದ ಬರುವವರಿಗೆ ದಿಣ್ಣೆಯ ಪಶ್ಚಿಮ ಭಾಗದ ಮಾರ್ಗವೇ ಅನುಕೂಲವಾದುದು.

ನಾಗಾಯಿಯಲ್ಲಿ ಹಲವು ಬಾವಿಗಳಿದ್ದು ಎಲ್ಲಕ್ಕೂ ಹೆಸರಾದ ಬಾವಿಯು ಸಂದಿ ಬಾವಿಯು. ಅದಲ್ಲದೆ ಇನ್ನು ಮೂರು ಬಾವಿಗಳು, ಎಂದರೆ: (೧) ಕರಿಯ ಮಸೀದೆಯ ಬಾವಿ, (೨) ಶಿದ್ದಲ ಬಾವಿ, (೩) ಎಲ್ಲಮ್ಮನ ಬಾವಿ—ಇವುಗಳಾದರೂ ಪುರಾತನ ಕಾಲದುವಿದ್ದು ನೋಡಲಿಕ್ಕೆ ತಕ್ಕವು. ಈ ಬಾವಿಗಳಲ್ಲಿ ಯಾವ ಕಾಲಕ್ಕೂ ನೀರು ಬತ್ತುವುದಿಲ್ಲವೆನ್ನುತ್ತಾರೆ. ಪುರಾತನದ ವಾಡಿಕೆಯಂತೆ, ಶ್ರೀರಾಮನು ಸೀತಾ ದೇವಿಯ ಶೋಧಾರ್ಥವಾಗಿ ಲಂಕಾಭಿಮುಖನಾಗಿ ಹೊರಟಾಗ್ಗೆ ಆತನಿಗೂ ಆತನ ಪಾಳೆಯಕ್ಕೂ ಸೆಲೆಗಳು ತಾವಾಗಿಯೇ ಉದ್ಭವಿಸುತ್ತಿದ್ದುವಂತೆ. ಈ ಸ್ಥಳಗಳನ್ನು—ಈ ಗ್ರಾಮಕ್ಕೆ ಸುತ್ತು ಮುತ್ತಲೂ ಸಮೀಪವಾಗಿರುವ ಗ್ರಾಮಗಳಾದ ಮಾಗಳ, ರಾವೂರು, ಜೊಮ್ಮಳ್ಳಿಗಳಲ್ಲಿ—ಶ್ರೀರಾಮಚಂದ್ರ ದೇವರು ಪಾಳೆಯವನ್ನು ಬಿಟ್ಟಿದ್ದುವೆಂದೆನ್ನುವರು. ಪ್ರಾಯಶಃ ಆಗಿನ ಕಾಲದಲ್ಲಿ ಈ ಪ್ರದೇಶಗಳಲ್ಲಿ ಅತ್ಯಂತ ದಟ್ಟವಾಗಿ ಸಂದುಗೊಡದೆ ಬೆಳೆದ ಕಾನನದ ಮೂಲಕ ವಾಗಿಯೇ ಶ್ರೀರಾಮನಿಗೆ ಒಂದಕ್ಕೊಂದು ಸಮೀಪ ಗ್ರಾಮಗಳಲ್ಲಿ ಪಾಳೆಯ ವನ್ನು ಬಿಡಲಿಕ್ಕೆ ಕಾರಣವಾಗಿರಬಹುದು. ಶ್ರೀರಾಮನ ಕಾಲಕ್ಕೆ ಆತನ ಪಾಳೆಯಕ್ಕೆ ಸೆಲೆಯಾಗಿ ನೀರು ಪೂರೈಸಿದ ಈಗಿನ ಬಾವಿಗಳ ಅಂಕಿತ ನಾಮಗಳು ಎಲ್ಲಿಂದ ಹೇಗೆ ಬಂದುವೆಂಬುದನ್ನು ಸಂಪೂರ್ಣ ಶೋಧಿಸದೆ ಬರೆಯುವು ದುಚಿತವಲ್ಲ.

೩. **ಮುಖ್ಯಾವಶೇಷಗಳು.**—(೧) ಎರಡು ಮಂಟಪದ ದೇವಾಲಯ, (೨) ಜೈನ ದೇವಾಲಯ, (೩) ಮಸೀದೆ, (೪) ಎತ್ತರವಾದ ಕಮಾನಿನ ಪ್ರವೇಶ ದ್ವಾರವು, (೫) 'ಮಡಿವಾಳಪ್ಪನ ಗುಂಡು' ಎಂಬ ಗುಡಿ, (೬) ಸಂದಿ ಬಾವಿಯ ಪಕ್ಕದಲ್ಲಿರುವ ಮಹಾದೇವರ ಗುಡಿ, (೭) ಶಿಲಾಲೇಖವನ್ನೊಳಕೊಂಡ ಮತ್ತೊಂದು ಗುಡಿ, (೮) ಅರವತ್ತು ಕಂಬದ ಗುಡಿ, (೯) ಕರಿಯ ಮಸೀದೆ (ಕಾಲೀ ಮಸಜಿದ), (೧೦) ಮತ್ತೊಂದು ಮಸೀದೆ (ಇದರ ಪ್ರಾಕಾರದಲ್ಲಿ ಇಬ್ಬರು ಮುಸಲ್ಮಾನ ಸಾಧುಗಳ ಗೋರಿಗಳಿರುವುವು), (೧೧) ಕಟ್ಟಿ ಬಸವಣ್ಣನ ಗುಡಿ, (೧೨) ಹನುಮಂತ ದೇವರ ಗುಡಿ, (೧೩) ದೀಪಸ್ತಂಭ, (೧೪–೧೫) ಎರಡು ಸಣ್ಣ ಗುಡಿಗಳು (ಅದರಲ್ಲಿ ಒಂದಕ್ಕೆ ಮಲ್ಲಯ್ಯನ ಗುಡಿಯೆಂಬ ಹೆಸರಿದೆ), (೧೬) ಎಲ್ಲಮ್ಮನ ಗುಡಿ.

ಇವುಗಳಲ್ಲದೆ ಅಸಂಖ್ಯಾತವಾದ ಗಣೇಶನ ಮೂರ್ತಿಗಳೂ, ನಾಗರ ಹಾವಿನ ಚಿತ್ರಗಳೂ, ಸಂದಿ ಮತ್ತು ಚಿತ್ರ ವಿಚಿತ್ರವಾದ ಕಡೆದ ಗೊಂಬೆಗಳೂ, ಹಾಳು ಮನೆಗಳೂ, ಬಾವಿಗಳೂ ಅಲ್ಲಲ್ಲಿ ಹಬ್ಬಿರುತ್ತವೆ. ಒಂದಾನೊಂದು ಕಾಲದಲ್ಲಿ ವಿಶಾಲವಾದ ರಾಜವೀಥಿಗಳಾಗಿರಬಹುದಾದ ಮಾರ್ಗಗಳಲ್ಲಿ ಪುರಾತನ ಮಂದಿರಗಳ ಭಗ್ನಾವಶೇಷ ರೂಪವಾದ ಕಲ್ಲುಗಳು ಚದರಿಬಿದ್ದು, ಇವುಗಳನ್ನು ತುಳಿದು ಹೋಗುವಾಗ್ಗೆ ಪಾಂಥರಿಗೆ ತುಂಬ ಶ್ರಮವಾಗುತ್ತದೆ.

**೪. ಎರಡು ಮಂಟಪದ ದೇವಾಲಯ.**—ಮೇಲೆ ಹೇಳಿದಂತೆ ಚಿತಾಪುರದಿಂದ ನಾಗಾಯಿಯ ದಿಣ್ಣೆಯ ಪಶ್ಚಿಮ ಭಾಗವನ್ನೇರಿ, ಹಾಳುಗಳನ್ನು ನೋಡಲು ಬರುವಾಗ್ಗೆ, ನಮ್ಮ ಕಣ್ಣುಗಳಿಗೆ ಕಾಣಿಸುವ ಮೊದಲನೆಯ ವಸ್ತುವೆಂದರೆ ಒಂದು ಹಾಳು ಗುಡಿಯು. ಅದರಲ್ಲಿ ಎರಡು ಮಂಟಪಗಳಿವೆ. ಗುಡಿಯಲ್ಲಿಯೂ ಮಂಟಪಗಳಲ್ಲಿಯೂ ಸಮೃದ್ಧಿಯಾಗಿ ಕಂಟಿ ಮುಳ್ಳುಗಳು ಬೆಳೆದಿರುವುವು. ಮಂಟಪದ ಹೊರಭಾಗದಲ್ಲಿ ಎರಡೂ ಪಕ್ಕಗಳಲ್ಲಿ ಪಾವಟಿಗೆಗಳಿದ್ದು ಒಡೆದುಹೋಗಿವೆ. ಈ ಮಂಟಪದ ಮೇಲ್ಭಾಗ(ಮಾಳಿಗೆ)ಕ್ಕೆ ಆಧಾರವಾಗಿ ಸುತ್ತಲೂ ಕಂಬಗಳಿವೆ. ಇವುಗಳಲ್ಲಿ ನಾಲ್ಕು ಕಂಬಗಳಲ್ಲಿ ಮಾತ್ರ ಚಿತ್ರದ ಕೆಲಸವಿದೆ. ನಾಲ್ಕೂ ಕಂಬಗಳ ಕೆಳಭಾಗದಲ್ಲಿ ಕಡೆದ ಗೊಂಬೆಗಳಿದ್ದು ಈಗ ಅವು ಕೆತ್ತಿಹೋಗಿವೆ. ಈ ಮಂಟಪದೊಳಗೆ ಒಂದು ಕಲ್ಲು ಬಿದ್ದಿರುತ್ತದೆ. ಅದರ ಮೂರು ಭಾಗಗಳಲ್ಲಿಯೂ ಲಿಪಿಯಿದೆ. ಈ ಕಂಬವು ನಾಲ್ಕು ಅಡಿ ಒಂಬತ್ತು ಅಂಗುಲ ಎತ್ತರವಿದ್ದು ಒಂದು ಅಡಿ ಎಂಟು ಅಂಗುಲ ಚೌರಸವಿರುತ್ತದೆ. ಒಳಗಿನ ಮಂಟಪ, ಹೊರಗಿನ ಮಂಟಪಗಳನ್ನು ಜೋಡಿಸುವ ಮಾಳಿಗೆಯ ಮೇಲ್ಭಾಗವು ಬಿದ್ದು ಸೂರ್ಯ ಚಂದ್ರರ ಬೆಳಕಿಗೆ ಅವಕಾಶಕೊಟ್ಟ ಸ್ಥಳದಲ್ಲಿಯೇ ಒಂದು ಕಲ್ಲು ಬಿದ್ದಿರುವುದು. ಅದರಲ್ಲಿಯೂ ಲಿಪಿಯಿದೆ. ಹೊರಗಿನ ಮಂಟಪದಲ್ಲಿಯ ನಾಲ್ಕು ಕಂಬಗಳಂತೆಯೇ ಒಳಗಿನ ಮಂಟಪದ ನಾಲ್ಕು ಕಂಬಗಳೂ ಅತ್ಯುತ್ತಮ ರೀತಿಯಿಂದ ಕೆತ್ತಲ್ಪಟ್ಟಿರುತ್ತವೆ. ಈ ಮಂಟಪದ ಮೇಲ್ಭಾಗವೂ ಗಟ್ಟಿಯಿರುತ್ತದೆ. ಈ ಮಂಟಪದಲ್ಲಿ ಐದು ಹೆಡೆಯ ನಾಗಮೂರ್ತಿಯಿರುವದು. ನಾಗನ ಹೆಡೆಯ ಕೆಳಭಾಗದಲ್ಲಿ ಒಂದು ಮೂರ್ತಿಯಿರುವದು. ಇದರ ಬಲಗೈಯಲ್ಲಿ ಕತ್ತಿಯೂ ಎಡಗೈಯಲ್ಲಿ ಢಾಲೂ ಒಪ್ಪಿದಿರುವುದು. ಈ ಮಂಟಪದ ಹಿಂಭಾಗದಲ್ಲಿ ಒಳಕೋಣೆಯಿದ್ದು ಅದರ ಮುಂದೆ ಬರಿದಾದ, ಹಾಗೂ ಹಾಳುಬಿದ್ದ, ಮೂರ್ತಿಯಿಲ್ಲದ ಗರ್ಭ ಗುಡಿಯಿದೆ. ಗರ್ಭ ಗುಡಿಯ ಚೌಕಟ್ಟಿನ ಮೇಲೆ ಗಜ ಲಕ್ಷ್ಮಿಯ ಮೂರ್ತಿಯು ಕೆತ್ತಲ್ಪಟ್ಟಿದೆ.

**೫. ಜೈನ ದೇವಾಲಯವು.**—ಮೇಲೆ ಬರೆದ ಗುಡಿಗೆ ಸ್ವಲ್ಪ ದೂರದಲ್ಲಿ ದಕ್ಷಿಣ ಭಾಗಕ್ಕೆ ಒಂದು ಜೈನ ಮಂದಿರವಿದ್ದು ಅದರ ಸುತ್ತಲೂ ಪ್ರಾಕಾರದ ಗೋಡೆಯಿರುವುದು. ಒಳ ಭಾಗದ ಎದುರಿನಲ್ಲಿ ಬೈಲು ಇದ್ದು ಅದರ ಮುಂದೆ ಮಂಟಪವೂ ಮಂಟಪದ ಮುಂದೆ ಗುಡಿಯೂ ಇದೆ. ಈ ಮಂದಿರದ ಮೇಲ್ಮಾಳಿಗೆಯೆಲ್ಲವೂ ಗಟ್ಟಿಯಿದೆ. ಗುಡಿಯಲ್ಲಿ, ನಿಂತ ಸ್ಥಿತಿಯಲ್ಲಿರುವ ಜೈನ ಮೂರ್ತಿಯಿದೆ;

ಮೂರ್ತಿಯು ಸಗ್ನಾವಸ್ಥೆಯಲ್ಲಿದೆ. ಅದರ ಅಳತೆಯು ೧ ಅಡಿ × ೨ ಅಡಿ × ೪ ಅಂಗುಲ. ಮೂರ್ತಿಯ ತಲೆಯ ಮೇಲೆ ತ್ರಿಕೋಣಾಕೃತಿಯ ಕಿರೀಟವಿದೆ. ಮೇಲೆ ಐದು ಹೆಡೆಯ ನಾಗರವಿದೆ. ದಿಗಂಬರ ಜೈನ ಮೂರ್ತಿಗಳೆಲ್ಲವೂ ನಮಗೆ ತಿಳಿದ ಮಟ್ಟಿಗೆ ಸಗ್ನಾವಸ್ಥೆಯಲ್ಲಿರುವುವು. ದಿಗಂಬರ ಜೈನಮತ ವಿಶ್ವಾಸಾನುವಾಗಿ ಅವರ ೨೪ ತೀರ್ಥಂಕರರಲ್ಲಿ ಏಳನೆಯವರಾದ ಸುಪಾರ್ಶ್ವನಾಥರ ಮೂರ್ತಿಯು ಹೀಗೆಯೇ ಇರುವುದೆನ್ನುವರು. ಆದುದರಿಂದ ನಮ್ಮ ಭಾವನೆಯೂ ಹಾಗೆಯೇ ಇರುವುದು. ಮೂರ್ತಿಯ ಕೆಳಭಾಗದಲ್ಲಿ ಗೊಂಬೆಗಳು ಕೆತ್ತಲ್ಪಟ್ಟಿವೆ.

ಈ ಮಂದಿರಕ್ಕೆ ಸಂಬಂಧಪಟ್ಟ ಮಂಟಪದಲ್ಲಿ ಎರಡು ಮೂರ್ತಿಗಳಿವೆ. ಅದರಲ್ಲಿ ಒಂದು ಮೂರ್ತಿಯು ಕುಳಿತಿದ್ದು ಮೇಲ್ಭಾಗದಲ್ಲಿ ಏಳು ಹೆಡೆಯ ಹಾವಿನ ಮುಖವಿದೆ. ಇದು ೨೩ನೆಯ ತೀರ್ಥಂಕರ ಪಾರ್ಶ್ವನಾಥರದು. ಇನ್ನೊಂದು ಚಚ್ಚೌಕ ಕಲ್ಲು ಇದ್ದು ಅದರ ಪ್ರತಿಯೊಂದು ಭಾಗದಲ್ಲಿಯೂ ಕುಳಿತ ಜೈನ ಮೂರ್ತಿಯಿದ್ದು ಕೆಳಭಾಗದಲ್ಲಿಯೂ ಸಣ್ಣ ಸಣ್ಣ ಗೊಂಬೆಗಳಿವೆ.

**೬. ಮಸೀದೆ.**—ಜೈನ ದೇವಾಲಯದಿಂದ ತಿರುಗಿ ನಾವು ಮೊದಲು ಬರೆದ ಮಂಟಪದಲ್ಲಿ ಬಿದ್ದಿರುವ ಲಿಪಿಯುಳ್ಳ ಕಂಬಗಳ ಹತ್ತಿರ ಬಂದು ಅಲ್ಲಿಂದ ಪೂರ್ವ ದಿಕ್ಕಿಗೆ ಸಾಗಲು, ಎಡ ಬಲದಲ್ಲಿ ಹಾಳಾಗಿ ಬಿದ್ದಿರುವ ಮನೆಗಳ ಕಲ್ಲುಗಳನ್ನು ತುಳಿಯುತ್ತ ಮುಂದೆ ಹೋಗಲು, ಚಿತ್ರ ಕೆತ್ತಿದ ಕಲ್ಲಿನ ದ್ವಾರವುಳ್ಳ ಮಸೀದೆಯು ಕಾಣಿಸುವುದು. ಮಸೀದೆಯ ಪ್ರವೇಶ ದ್ವಾರವೂ ಮತ್ತು ಕೆಲವು ಕಂಬಗಳೂ ಒಂದು ಹಳೆಯ ಗುಡಿಯವಾಗಿರಬಹುದೆಂದು ಕಾಣುತ್ತದೆ. ಮಸೀದೆಯು ಮೇಲೆ ವಿವರಿಸಿದ ಮಂದಿರಗಳಿಗಿಂತ ಎಷ್ಟೋ ವರುಷಗಳು ಈಚೆಯದಾಗಿರಬಹುದಾದರೂ ಉಳಿದವುಗಳಂತೆಯೇ ಹೀನಾವಸ್ಥೆಯಲ್ಲಿರುವುದು. ಧಾರ್ಮಿಕಾಭಿಮಾನ ಪೂರಿತರಾಗಿ ವಿದೇಶಗಳಲ್ಲಿ ಮಸೀದೆಗಳ ಕಟ್ಟಡಗಳಿಗೆ ಲಕ್ಷಾವಧಿ ರೂಪಾಯಿಗಳನ್ನು ಸೂರೆಮಾಡುತ್ತಿರುವ ಈಗಿನ ನಿಜಾಮರ ಆಳಿಕೆಯಲ್ಲಿ ಪುರಾತನ ಮಸೀದೆಯು ಈಗಿನ ಈ ಸ್ಥಿತಿಯಲ್ಲಿರುವುದು ಸೋಜಿಗವಲ್ಲವೆ?

**೭. ಅಗಸೆ ಬಾಗಿಲು** (ಎತ್ತರವಾದ ಕಮಾನಿನ ಮಹಾದ್ವಾರವು).—ಮಸೀದೆಯ ಪ್ರವೇಶ ದ್ವಾರದ ಮುಂದೆ ದಕ್ಷಿಣಾಭಿಮುಖವಾಗಿ ದೊಡ್ಡದಾದ ಮಾರ್ಗವಿದ್ದು ಅದರಿಂದ ಎಡಭಾಗಕ್ಕೆ ತಿರುಗಲು, ಒಂದು ದೊಡ್ಡ ಅರ್ಧ ವರ್ತುಲಾಕಾರದ ಮಹಾದ್ವಾರವು ಕಾಣಿಸುವುದು. ನಿಶ್ಚಯವಾಗಿಯೂ ಇದೇ ದ್ವಾರವೇ ಆ ಊರಿನ ಪಶ್ಚಿಮ ಭಾಗದ ಅಗಸೆ ಬಾಗಿಲಾಗಿರಬಹುದು. ಈ ದ್ವಾರದ ಮೇಲ್ಭಾಗದಲ್ಲಿ ನಿಂತು ನೋಡಲು, ಸುತ್ತಲಿನ ಹಾಳುಗಳೆಲ್ಲವೂ ಸ್ಪಷ್ಟವಾಗಿ ಕಾಣುವುವು. ಈ ಅಗಸೆ ಬಾಗಿಲಿನ ಒಳಿಯಲ್ಲಿಯೇ 'ಬಾಬಿ ಬಾಯಿ' ಎಂಬ ದೊಡ್ಡ ಕೆರೆಯಿದೆ.

**೮. ಮಡಿವಾಳಪ್ಪನ 'ಗುಂಡು'.**—ಬಾಬಿಬಾಯಿ ಕೆರೆಯಿಂದ ಬಲ ಭಾಗಕ್ಕೆ, ಎಂದರೆ ಪೂರ್ವ ದಿಕ್ಕಿಗೆ ಸಾಗಲು ಒಂದು ಸಣ್ಣ ಹಳ್ಳವು ಇರುತ್ತದೆ.

ಅದನ್ನು ದಾಟಿ ಸ್ವಲ್ಪ ಮುಂದೆ ಸಾಗಲು, ಕೆಲವು ಹಾಳು ಗುಡಿಗಳೂ ಹಾಳು ಮಂಟಪಗಳೂ ಕಾಣಹತ್ತುವುವು. ಇಲ್ಲಿಯೇ ನಮ್ಮ ಬಲಗಡೆಗೆ 'ಮಡಿವಾಳಪ್ಪನ ಗುಂಡು' ಎಂಬ ಹೆಸರಿನ ಗುಡಿಯಿದೆ. ಇದರಲ್ಲಿ ಅತ್ಯಂತ ಭವ್ಯವಾದ ಕೆತ್ತನೆಯುಳ್ಳ ಎರಡು ದೊಡ್ಡ ಬಾಗಿಲುಗಳಿದ್ದು ಒಳಗೆ ದೊಡ್ಡ ಗದ್ದುಗೆಯಿದೆ. ಬಹುಶಃ ಈ ಗುಡಿಯೇ ಆಗಿನ ಕಾಲದಲ್ಲಿ ಆ ಊರಿನ ಮಹತ್ವದ ಗುಡಿಯಾಗಿರಬಹುದು. ಏಕೆಂದರೆ ಇದರಲ್ಲಿದ್ದಷ್ಟು ಶಿಲ್ಪಕೌಶಲವು ಇಲ್ಲಿ ಇನ್ನಾವ ಗುಡಿಗಳಲ್ಲಿಯೂ ಕಾಣುವುದಿಲ್ಲ. ಗುಡಿಯ ತೀರ ಹೊರಗಿನ ಬಾಗಿಲಲ್ಲಿ, ನಾವು ಒಳಗೆ ಹೋಗುವಾಗ್ಗೆ ಬಲಭಾಗದಲ್ಲಿ, ಕೊಡವನ್ನು ಬಲಗೈಯಲ್ಲಿ ಹೊತ್ತುಕೊಂಡ ಹೆಣ್ಣು ಮೂರ್ತಿಯಿದ್ದು, ಎಡಭಾಗದಲ್ಲಿಯೂ ಒಂದು ಹೆಣ್ಣು ಮೂರ್ತಿಯು ಕೈಯಲ್ಲಿ ಪರಾತವನ್ನು ಹಿಡಿದು ನಿಂತಿರುವುದು. ಈ ದ್ವಾರದ ಚೌಕಟ್ಟಿನ ಎರಡೂ ಪಕ್ಕಗಳಲ್ಲಿಯೂ ಬಳ್ಳಿಗಳನ್ನು ಕೊರೆದಿರುವರು. ಚೌಕಟ್ಟಿನ ಮೇಲ್ಭಾಗದಲ್ಲಿ ಮೂರ್ತಿಯಿದ್ದು ಅದರ ಎಡಭಾಗಕ್ಕೆ ಎರಡು ಹೆಣ್ಣು ಮೂರ್ತಿಗಳೂ ಬಲಭಾಗಕ್ಕೆ ಸಣ್ಣ ಸಣ್ಣ ಕುಳಿತ ಮತ್ತು ನಿಂತ ಮೂರ್ತಿಗಳೂ ಇವೆ. ಗುಡಿಯ ಒಳಭಾಗದ ಮಹಾದ್ವಾರದ ಮೇಲೆ ಗಜಲಕ್ಷ್ಮಿಯ ಮೂರ್ತಿಯಿದೆ. ಅದಕ್ಕೆ ಸಮೀಪದಲ್ಲಿಯೇ ಮೂರು ಹೆಣ್ಣು ಮೂರ್ತಿಗಳಿದ್ದು ಅವುಗಳ ಕೈಯಲ್ಲಿ ಚಾಮರಗಳಿರುತ್ತವೆ. ಇಲ್ಲಿ ಒಳಗೆ ನಾಲ್ಕು ಮೂರ್ತಿಗಳಿರುತ್ತವೆ.

ಮೂರ್ತಿಯ ಕೆಳಭಾಗದ ಗದ್ದುಗೆಯು ನಾಲ್ಕು ಅಡಿ ಉದ್ದ, ಎರಡೂವರೆ ಅಡಿ ಆಳ, ಮೂರೂವರೆ ಅಡಿ ಎತ್ತರವಾಗಿದೆ. ಗದ್ದುಗೆಯ ಮೇಲೆ ಎರಡು ಮೂರ್ತಿಗಳನ್ನಿಟ್ಟ ಗುರುತು ಕಾಣುತ್ತದೆ. ಅದರಿಂದ, ಈ ಗದ್ದುಗೆಯ ಮೇಲೆ ಶಿವಲಿಂಗ ವಿದ್ದಿಲ್ಲವೆಂಬುದಂತೂ ಸಹಜ. ಗರ್ಭಗುಡಿಯ ಹೊರಭಾಗದಲ್ಲಿ ದ್ವಾರಪಾಲಕರ ಬದಲಾಗಿ ಸ್ತ್ರೀಯರ ಗೊಂಬೆಗಳಿದ್ದುದರಿಂದ ಇದು ಯಾವುದಾದರೂ ದೇವತೆಯ ಗುಡಿಯಿರಬಹುದೆಂದು ತರ್ಕಿಸಬಹುದಾಗಿದೆ.

**೯. ಕಡ್ಲಿ ಬಸವಣ್ಣನ ಗುಡಿ.**—ಮೇಲೆ ಬರೆದ ಗುಡಿಯ ಸಮೀಪದಲ್ಲಿಯೇ ವಾಯುವ್ಯ ದಿಕ್ಕಿಗೆ ಶಿವನ ವಾಹನವಾದ ನಂದಿಯ ಭವ್ಯವಾದ ಮೂರ್ತಿಯುಳ್ಳ ಗುಡಿಯಿದೆ. ಎಲ್ಲ ನಂದಿಗಳಂತೆಯೇ ಇದಾದರೂ ಕುಳಿತ ಸ್ಥಿತಿಯಲ್ಲಿರುವುದು. ಇದಕ್ಕೆ ಅನೇಕ ಪೆಟ್ಟುಗಳು ಬಿದ್ದಿವೆ. ಇದರ ಪಕ್ಕದಲ್ಲಿಯೇ ಒಂದು ಶಿಲಾಲಿಪಿಯಿದ್ದು ಅದರ ಮೇಲ್ಭಾಗವು ತೀರ ಸವೆದಿರುತ್ತದೆ. ಬಹಳ ದಿವಸಗಳಿಂದ ಪ್ರಯಾಣಿಕರು ಈ ಕಲ್ಲನ್ನು ಅರೆಯುವ ಕೆಲಸಕ್ಕೆ ಉಪಯೋಗಿಸಿದಂತೆ ತೋರುತ್ತದೆ.

**೧೦. ಮಹಾದೇವರ ಗುಡಿ.**—ಮಡಿವಾಳಪ್ಪನ ಗುಂಡಿನ ಗುಡಿಯ ಹತ್ತಿರ, ಬಲಭಾಗಕ್ಕೆ ಮಹಾದೇವರ ಗುಡಿಯಿದೆ. ಅದರ ಮುಂದೆ ಒಂದು ಮಂಟಪವೂ ಅದರಲ್ಲಿ ಒಂದು ಕೋಣೆಯೂ ಗರ್ಭಗುಡಿಯೂ ಇರುತ್ತವೆ. ಗುಡಿಯಲ್ಲಿ ಶಿವಲಿಂಗವಿದ್ದು ಎದುರಿನ ಮಂಟಪದಲ್ಲಿ ನಂದಿಯ ವಿಗ್ರಹವಿದೆ. ಇದರ ಎದುರಿಗೆ

ಒಂದು ಸಣ್ಣ ಗುಡಿಯಿದೆ. ಈ ಗುಡಿಯ ಗೋಡೆಯೊಳಗಿನ ಒಂದು ಕಲ್ಲಿನ ಮೇಲೆ ಲಿಪಿಯಿದೆ.

೧೧. **ನಂದಿ ಬಾವಿ.**—ಮಹಾದೇವರ ಗುಡಿಯ ಹಿಂದೆ ಪ್ರಸಿದ್ಧವೂ ಪವಿತ್ರವೂ ಎಂದು ಎಣಿಸಲ್ಪಡುವ ನಂದಿಯ ಬಾವಿಯಿದೆ. ಆದರೂ, ಕಲಿಯುಗದ ಧರ್ಮಾನುಸಾರವಾಗಿ ಬಾವಿಯ ಕರ್ಮವನ್ನು ಕೊಳೆಯಿಂದ ತೊಳೆಯುತ್ತಿರುವರು.

೧೨. **ಅರುವತ್ತು ಕಂಬದ ಗುಡಿ.**—ಮೇಲ್ಕಾಣಿಸಿದ ಗುಡಿಗಳ ಗುಂಪಿನಿಂದ ಸುಮಾರು ಒಂದು ನೂರು ಗಜದಳತೆಯಷ್ಟು ದೂರದಲ್ಲಿ ಅರುವತ್ತು ಕಂಬದ ಹೆಸರಿನ ಗುಡಿಯಿದೆ. ವಸ್ತುತಃ ಎಣಿಸಿದಲ್ಲಿ ಈ ಗುಡಿಯಲ್ಲಿ ೮೫ ಕಂಬಗಳಿರುತ್ತವೆ. ಗುಡಿಯ ಹೊರಭಾಗದಲ್ಲಿ ಲಿಪಿಯುಳ್ಳ ಒಂದು ಶಿಲೆಯು ಬಿದ್ದಿರುತ್ತದೆ. ಇದರ ಅಳತೆಯು ೬ ಅಡಿ ೩ ಅಂಗುಲ × ೧ ಅಡಿ ೭ ಅಂಗುಲ × ೧ ಅಡಿ ೪॥ ಅಂಗುಲ. ಗುಡಿಯ ಚೌಕಟ್ಟಿನ ಮೇಲೆ ಗಜಲಕ್ಷ್ಮಿಯಿದೆ. ಗುಡಿಯಲ್ಲಿಯ ಒಟ್ಟು ಕಂಬಗಳಲ್ಲಿಯ ಮಧ್ಯದ ನಾಲ್ಕು ಕಂಬಗಳು ಮಾತ್ರವೇ ನೋಡತಕ್ಕುವು. ಗರ್ಭಗುಡಿಯಲ್ಲಿ ಯಾವ ಮೂರ್ತಿಯೂ ಇಲ್ಲ, ಮೂರ್ತಿಯಿರಬಹುದಾದ ಗದ್ದುಗೆಯು ಮಾತ್ರವಿದೆ. ಈ ಗುಡಿಯು ನಾಗಾಯಿಯ ಹಾಳುಗಳಲ್ಲಿ ದೊಡ್ಡದು.

೧೩. **ಕರಿ ಮಸೀದೆ.**—ಅರುವತ್ತು ಕಂಬದ ಗುಡಿಯಿಂದ ನಾವು ತಿರುಗಿ ದಕ್ಷಿಣಕ್ಕೆ ಹೋದರೆ ಕಾಲೀ ಮಸಜಿದ, ಅಥವಾ ಕರಿ ಮಸೀದೆಯು ಕಾಣುವುದು. ಇದರಲ್ಲಿರುವ ಸುಂದರವಾದ ಕರಿಯ ಕಲ್ಲಿನ ಕಂಬಗಳಿಂದಲೇ ಇದಕ್ಕೆ ಕರಿ ಮಸೀದೆಯೆಂಬ ಹೆಸರು ಬಂದಿರುವುದು ಸಹಜ. ಈ ಮಸೀದೆಯಲ್ಲಿ ಇಂಥ ಎಂಟು ಕಂಬಗಳಿದ್ದು ಅವುಗಳು ಯಾವುದೋ ಒಂದು ಗುಡಿಯವಾಗಿರಬಹುದಾಗಿ ಕಾಣುತ್ತವೆ. ಈ ಮಸೀದೆಯ ಮಗ್ಗುಲಲ್ಲಿಯೇ ಕರಿ ಮಸೀದೆಯ ಬಾವಿಯಿರುವುದು.

೧೪. **ಮತ್ತೊಂದು ಮಸೀದೆಯು.**—ಕರಿ ಮಸೀದೆಯ ದಕ್ಷಿಣಕ್ಕೆ ಒಂದು ಸಣ್ಣ ಹಳ್ಳದಾಚೆಗೆ ಮತ್ತೊಂದು ಮಸೀದೆಯು ಕಾಣುತ್ತದೆ. ಈ ಮಸೀದೆಯು ಮೊದಲು ಗುಡಿಯಿದ್ದು ಅದನ್ನೇ ಮಸೀದೆಯನ್ನಾಗಿ ಮಾಡಿರಬಹುದೆಂಬ ಸಂಗತಿಯು ಮಸೀದೆಯನ್ನು ನೋಡಿದ ಕೂಡಲೆ ಒಡೆದು ಕಾಣುತ್ತದೆ. ಮಸೀದೆಯ ಪ್ರಾಕಾರದಲ್ಲಿ ಪೀರಪ್ಪನ ಗುಡಿಯೆಂಬ ಹೆಸರಿನ ಗುಡಿಯಿದೆ. ಇದರ ಬಾಹ್ಯ ಸ್ವರೂಪವು ತಪ್ಪು ತಿಳಿವಳಿಕೆಯನ್ನುಂಟುಮಾಡುವುದು ; ಹೆಸರು ಹಾಗೂ, ಸ್ವರೂಪವು ಗುಡಿಯದಿದ್ದಾಗ್ಯೂ ಇದರೊಳಗೆ ಇಬ್ಬರು ಮುಸಲ್ಮಾನ ಸಾಧುಗಳ ಸಮಾಧಿಗಳಿದ್ದು ಇಂದಿಗೂ ಮಹಮ್ಮದೀಯರಿಗೆ ಕೇವಲ ಪೂಜ್ಯವಾಗಿವೆ.

೧೫. **ಹನುಮಂತದೇವರ ಗುಡಿ.**—ಮಸೀದೆಯಿಂದ ಸ್ವಲ್ಪ ಮುಂದಕ್ಕೆ ಸಾಗಲು, ಹನುಮಂತದೇವರ ಗುಡಿಯಿದೆ. ನಾಗಾಯಿಯ ಎಲ್ಲ ಗುಡಿಗಳಿಗಿಂತಲೂ ಇದು ಒಳ್ಳೆಯ ಸ್ಥಿತಿಯಲ್ಲಿದೆ. (ಹಳ್ಳಿಗರಿಗೆ ಹನುಮಪ್ಪ ಶ್ರೇಷ್ಠ—ಇಲ್ಲವೆ, ಊರು

ಸುಟ್ಟರೂ ಹನುಮಪ್ಪ ಹೊರಗೆ—ಎಂಬಂತೆ.) ಇದರಲ್ಲಿ ಒಂದು ಮಂಟಪವೂ ಗರ್ಭಗುಡಿಯೂ ಇದ್ದು ಹನುಮಂತದೇವರ ಮೂರ್ತಿಯಿದೆ. ಗುಡಿಯ ಸುತ್ತಲೂ ಪ್ರಾಕಾರದ ಗೋಡೆಯಿದ್ದು ಕಲ್ಲುಗಳ ಮೇಲೆ ರಾಮಾಯಣದೊಳಗಿನ ಚಿತ್ರಗಳೆಲ್ಲ ವೂ ಕೊರೆಯಲ್ಪಟ್ಟಿವೆ. ಇದೇ ಗುಡಿಯ ಎದುರಿನಲ್ಲಿ ದೀಪಸ್ತಂಭವಿದ್ದು ಅದರಲ್ಲಿ ದೀಪಹಚ್ಚುವ ೧೧೪ ನಾಲಗೆಗಳೂ ಹಲವು ಸಣ್ಣ ಸಣ್ಣ ಗೂಡುಗಳೂ ಇವೆ.

೧೬. **ಮಲ್ಲಯ್ಯನ ಗುಡಿ.**— ಹನುಮಂತದೇವರ ಗುಡಿಯ ಪೂರ್ವ ಭಾಗಕ್ಕೆ ಮೇಲಕ್ಕೆ ಸಾಗಲು, ಎತ್ತರವಾದ ಸ್ಥಳದ ಮೇಲೆ ಒಂದು ಗುಡಿಯೂ ಚಚ್ಚೌಕ ಬಾವಿಯೂ ಇದೆ. ಇಲ್ಲಿಯ ಎಲ್ಲ ಗುಡಿಗಳಿಗಿಂತಲೂ ಇದೇ ಹೆಚ್ಚು ಎತ್ತರವಾದ ಸ್ಥಳದಲ್ಲಿರುವುದರಿಂದ ಈ ಬಾವಿಯಿಂದಲೇ ಇದರ ಕೆಳಭಾಗದಲ್ಲಿರುವ ಎಲ್ಲ ಬಾವಿಗಳಿಗೂ ಸೆಲೆಯು ಹೋಗುತ್ತದೆ ಎನ್ನುತ್ತಾರೆ. ಇದಕ್ಕೆ ಮಲ್ಲಯ್ಯನ ಗುಡಿಯೆನ್ನುವರು.

೧೭. **ಎಲ್ಲಮ್ಮನ ಗುಡಿ.**—ನಾಗಾಯಿಯ ಮುಖ್ಯಾವಶೇಷಗಳೆಂದರೆ ಮೇಲೆ ಬರೆದುವುಗಳು ಮಾತ್ರ. ಇಲ್ಲಿ ಎಲ್ಲಮ್ಮನ ಒಂದು ಸಣ್ಣ ಗುಡಿಯಿದೆ. ಚಿತಾಪುರದಲ್ಲಿ ಮಲ್ಹಾರನಾಯಕನೆಂಬ ಹೆಸರಿನಿಂದ ಪ್ರಸಿದ್ಧನಿದ್ದ ಲಚ್ಚಪ್ಪ ಸೆಟ್ಟಿಯು ಈ ಎಲ್ಲಮ್ಮನ ಭಕ್ತನಿದ್ದು ಗುಡಿಯನ್ನು ವಿಸ್ತಾರವಾಗಿ ಕಟ್ಟಿಸಿ ಗುಡಿ ಯಿಂದ ಚಿತಾಪುರದ ವರೆಗೆ ಮಾರ್ಗವನ್ನು ಮಾಡಿಸಿದ್ದಾನೆ.

೧೮. **ಹಾಳಾದ ಊರಿನ ವಿಚಿತ್ರ ಸ್ಥಿತಿ.**—ಇಷ್ಟು ಹಾಳುಗಳು ಇಲ್ಲಿ ದ್ದರೂ ಯಾವ ಹಾಳು ಮನೆಯ ಮೇಲೂ ಪೂರ್ಣ, ಅಥವಾ ಕೊಂಚವಾದರೂ ಮಾಳಿಗೆಯು ಉಳಿದಿಲ್ಲ. ಎಲ್ಲ ಮನೆಗಳೂ ಕಲ್ಲಿನವಿದ್ದು ಗಚ್ಚಿನ ಉಪಯೋಗ ವಾದಂತೆ ಕಂಡುಬರುವುದಿಲ್ಲ. ಅದರಂತೆಯೇ ಕಟ್ಟಿಗೆಯನ್ನುಪಯೋಗಿಸಿದ ಕುರುಹುಗಳೂ ಇಲ್ಲ.

೧೯. **ಶಿಲಾ ಲಿಪಿಗಳು.**—ಈ ಊರಲ್ಲಿ ಕಾಣಬಹುದಾದ ಶಿಲಾ ಲಿಪಿಗಳ ವಿಷಯವಾಗಿ ಬೇರೊಂದು ಲೇಖನವನ್ನು ಸಂಪೂರ್ಣ ವಿವರಣೆ ಸಹಿತವಾಗಿ ಬರೆ ಯುವ ಉದ್ದೇಶವಿದೆ. ಇಲ್ಲಿರುವ ಎಲ್ಲ ಶಿಲಾ ಲಿಪಿಗಳಲ್ಲಿಯೂ ೬೦ ಕಂಬದ ಗುಡಿ ಯೊಳಗಿನದು ಬಹಳ ಹಳೆಯದು. ಅದರ ಮೇಲೆ ೯೮೦ನೆಯ ಶಕ ವರುಷವಿದೆ. ಅದಕ್ಕೆ ಸಮವೆಂದರೆ, ಕ್ರಿ. ೧೦೫೮. ಈ ಲಿಪಿಯ ಪ್ರಾರಂಭದಲ್ಲಿ ಪಶ್ಚಿಮ ಚಾಲು ಕ್ಯರ ವಂಶಾವಳಿಗೆ ಸಂಬಂಧಪಟ್ಟ ಮುದ್ರಿಕೆಗಳಿವೆ. ಎಲ್ಲಕ್ಕೂ ಮೊದಲು ಎರಡು ಮಂಟಪಗಳುಳ್ಳ ದೇವಾಲಯದಲ್ಲಿ ಎರಡು ಲಿಪಿಗಳಿವೆಯೆಂದು ಹೇಳಲಾಗಿದೆ. ಇವು ಗಳಲ್ಲಿ ಒಂದು ಕಲ್ಲಿನ ಮೇಲೆ ಸುಮಾರು ೩೫೦ ಸಾಲಿನಷ್ಟು ಲಿಪಿಯಿದೆ. ಈ ಲಿಪಿ ಯಲ್ಲಿ ಚಾಲುಕ್ಯ ರಾಜನಾದ ತ್ರೈಲೋಕ್ಯಮಲ್ಲನ ಹೆಸರು ಇರುವುದು. ಈ ಲಿಪಿ ಯಲ್ಲಿ ಕ್ರಿ. ೧೦೬೩, ೧೦೮೯ರಲ್ಲಿ ಕೊಟ್ಟ ದಾನಗಳ ವಿವರಣೆಯಿದೆ. ಈ ಕಲ್ಲಿನ ಹತ್ತ ರಿರುವ ಮತ್ತೊಂದು ಲಿಪಿಯಲ್ಲಿ ಕ್ರಿ. ೧೧೯೨ರಲ್ಲಿ ಕಾಳಿದಾಸನೆಂಬ ಮಂತ್ರಿಯು ದಾನಕೊಟ್ಟ ಸಂಗತಿಯಿದೆ. ಮಹಾದೇವರ ಗುಡಿಯೆದುರಿನ ಗುಡಿಯೊಳಗಿನ

ಗೋಡೆಯಲ್ಲಿರುವ ಲಿಪಿಯು ಪಶ್ಚಿಮ ಚಾಲುಕ್ಯ ರಾಜನಾದ ಭೂಲೋಕಮಲ್ಲನ ಕಾಲದ್ದಿರುವುದು. ಇದರ ಮೇಲೆ ಚಾಲುಕ್ಯ ವಿಕ್ರಮ ಶಕ ವರುಷ ೧೭, ಎಂದರೆ ಅದಕ್ಕೆ ಸಮವಾದ ಕ್ರಿ. ೧೦೯೨ ಇದೆ. ಇದರಲ್ಲಿಯೂ ಒಬ್ಬ ರಾಜನು ದಾನ ಕೊಟ್ಟ ಸಂಗತಿಯಿದೆ. ಈ ಮೇಲಿನ ಎಲ್ಲ ಲಿಪಿಗಳನ್ನೂ ನಿಜಾಮ ಸರಕಾರದವರು ಅಚ್ಚು ಹಾಕಿಸುತ್ತಲಿದ್ದು ಸ್ವಲ್ಪಾವಧಿಯಲ್ಲಿಯೇ ಬಯಲಿಗೆ ಬರಬಹುದಾಗಿದೆ.

**೨೦. ನಾಗಾಯಿಯ ದಂತಕಥೆಗಳು.**— ನಾಗಾಯಿಯ ವಿಷಯವಾಗಿ ಪೂರ್ವ ಪರಂಪರೆಯಿಂದ ಕೆಲವು ಕಥೆಗಳು ಬಂದಿವೆ. ಅಲ್ಲಿಯ ಬಾವಿಗಳ ವಿಷಯವಾಗಿ ಇದ್ದ ಕಥೆಯನ್ನಂತೂ ಈ ಮೊದಲೇ ಹೇಳಿದೆ. ಇನ್ನೊಂದು ಕಥೆಯು ಊರು ಹಾಳಾದ ಬಗ್ಗೆ ಇರುವುದು: ಒಂದಾನೊಂದು ಕಾಲಕ್ಕೆ ನಾಗಾಯಿಯ ಪ್ರಜೆಗಳು ಕೇವಲ ದುರ್ನೀತಿಯುಳ್ಳವರಾಗಿ ದೇವತೆಗಳಿಗೆ ಕ್ರೋಧ ಬರುವಂತೆ ಮದಾಂಧರಾಗಿ ವರ್ತಿಸಹತ್ತಿದರು. ಆಗ್ಗೆ ಒಂದು ದಿವಸ, ಮೊದಲು ಮುತ್ತು ಮಾಣಿಕ ರತ್ನಗಳ ಮಳೆಗರೆದು ಕೊನೆಗೆ ಅಗ್ನಿ ಪ್ರಳಯವಾಯಿತು; ಸ್ವಲ್ಪಾವಧಿಯಲ್ಲಿಯೇ ಪಟ್ಟಣವೆಲ್ಲವೂ ನಾಶವಾಯಿತು. ಇಂಥದರಲ್ಲಿಯೂ ತಮ್ಮ ಕರ್ಮಾನುಸಾರವಾಗಿ, ಪಾರಾಗಿ ಉಳಿದ ಕೆಲವು ಜನರು ಬಂದು ಚಿತಾಪುರದಲ್ಲಿರಹತ್ತಿದರು. ಆಗ್ಗೆ ಚಿತಾಪುರವಿದ್ದ ಸ್ಥಳದಲ್ಲಿ ಕೇವಲ ಅರಳಿಯ ಮರಗಳ ಅಡವಿಯಿದ್ದಿತು. ನಾಗಾಯಿಯ ಅಗ್ನಿಪ್ರಳಯದಲ್ಲಿ ಚಿತೆಯಿಂದ ಪಾರಾಗಿ ಬಂದು ಇಲ್ಲಿ ಊರು ಮಾಡಿಕೊಂಡುದರಿಂದ ಈ ಗ್ರಾಮಕ್ಕೆ ಚಿತಾಪುರವೆಂಬ ಹೆಸರು ಸಹಜವಾಗಿಯೇ ಬಂದಿರಬಹುದೆಂದು ನಮ್ಮ ತರ್ಕವಿದೆ. ಈ ಹಾಳು ಗ್ರಾಮದಲ್ಲಿ ಈಗಲೂ ಪಿಶಾಚ ಸಂಚಾರವಿದೆಯೆಂದು ಹೇಳುತ್ತಾರೆ. ಆದುದರಿಂದಲೇ ಇಲ್ಲಿ ರಾತ್ರಿ ಯಾರೂ ಇರುವುದಿಲ್ಲ. ಈ ಹಳ್ಳಿಯ ಒಬ್ಬ ವಯೋವೃದ್ಧ ಪೋಲೀಸ ಪಟೇಲನು ತನ್ನ ಅನುಭವವನ್ನು ನಮ್ಮ ಮುಂದೆ ಹೇಳಿದನು: ಎಷ್ಟೋ ವರುಷಗಳ ಹಿಂದೆ, ಅವನೂ ಇನ್ನೂ ೧೦-೧೨ ಜನಗಳೂ ಕೂಡಿ ಇಲ್ಲಿಯ ಹಾಳು ಮಂಟಪದಲ್ಲಿ ಮಲಗಿರಲು, ರಾತ್ರಿ ನಿಶ್ಶಬ್ದವಿದ್ದ ಆ ಗ್ರಾಮದಲ್ಲಿ ಶಸ್ತ್ರಾಸ್ತ್ರಗಳ ಝಣತ್ಕಾರದ ಶಬ್ದವೂ, ಗಾಯನಸ್ವರವೂ, ಅಸಂಖ್ಯಾತವಾಗಿ ಜನರು ನಡೆದು ಬರುತ್ತಿರುವ ಕಾಲು ಸಪ್ಪಳವೂ ಕೇಳಿಸಹತ್ತಿದುವು. ಇದೇ ತೆರದ ಅನುಭವವನ್ನು ನಮ್ಮ ನಿದರ್ಶನಕ್ಕೆ ತಂದುಕೊಡಲು ವಿನಂತಿ ಮಾಡಿಕೊಂಡರೂ ಪಟೇಲನು ಒಪ್ಪಲಿಲ್ಲ. ನಾಗಾಯಿಗೂ ಶ್ರೀಶೈಲಕ್ಕೂ ಸಂಬಂಧವಿದ್ದ ಮತ್ತೊಂದು ಕಥೆಯಿರುವುದು: ನಾಗಾಯಿಯ ಹಾಳಿನಲ್ಲೆಲ್ಲಿಯೋ ಮಾನವ ದೃಷ್ಟಿಗಗೋಚರನಾದ ನೆಯ್ಗೆಯವನಿರುವನಂತೆ. ಇವನು ಪ್ರತಿದಿನವೂ ಒಂದು ಮೊಳದಂತೆ ಬಿನುಗಾದ, ಹಾಗೂ ಸುಂದರವಾದ ವಸ್ತ್ರವನ್ನು ೩೬೫ ದಿವಸಗಳವರೆಗೆ ೩೬೫ ಮೊಳ ನೆಯ್ದು ಶ್ರೀಶೈಲದಲ್ಲಿ ರಥೋತ್ಸವದ ಕಾಲಕ್ಕೆ ದೇವರ ತಲೆಗೆ ಸುತ್ತುವನಂತೆ. ಇವನನ್ನಾಗಲಿ ವಸ್ತ್ರವನ್ನು ಸುತ್ತುವುದನ್ನಾಗಲಿ ಶ್ರೀಶೈಲದಲ್ಲಿ ಯಾರಿಂದಲೂ ನೋಡುವುದು ಸಾಧ್ಯವಾಗಿಲ್ಲ. ಸಹಸ್ರಾವಧಿ ಯಾತ್ರಿಕರು ಶ್ರೀಶೈಲದಲ್ಲಿ ಈ ಕೌತುಕವನ್ನು

ನೋಡಲು ತವಕಪಡುತ್ತಿರುವರಾದರೂ, ಅವರಿಗೆ ಎಲ್ಲಿಯೋ ಮೇಲಿನಿಂದ ವಸ್ತ್ರದ ಎರಡು ತುಂಡುಗಳು ಮಾತ್ರವೇ ಬೀಳುವುದು ಕಾಣಿಸುವುದು. ನೋಡ ನೋಡು ವಷ್ಟರಲ್ಲಿ ವಸ್ತ್ರವು ಅಗೋಚರ ರೀತಿಯಿಂದ ದೇವರ ತಲೆಯ ಮೇಲೆ ಸುಂದರವಾಗಿ ಸುತ್ತಲ್ಪಡುವುದು. ಶ್ರೀಶೈಲವು ಹಿಂದೂಸ್ಥಾನದಲ್ಲಿಯ ಅತ್ಯಂತ ಪವಿತ್ರವಾದ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದು ಜ್ಯೋತಿರ್ಲಿಂಗವುಳ್ಳ ದೇವಾಲಯವು. ಹಿಂದೂ ಜನರ ದೃಷ್ಟಿಯಿಂದ ಈ ಜ್ಯೋತಿರ್ಲಿಂಗಗಳು ಅತ್ಯಂತ ಮಹತ್ವವುಳ್ಳವು. ನಿಜಾಮ ಸಂಸ್ಥಾನದಲ್ಲಿ ಇಂಥ ಮೂರು ಜ್ಯೋತಿರ್ಲಿಂಗಗಳಿರುವುವು. ನಾಗೇಶ, ಅಥವಾ ನಾಗ ನಾಥನೆಂಬ ಹೆಸರಿನ ಜ್ಯೋತಿರ್ಲಿಂಗವು ಓಂಧಾದಲ್ಲಿಯೂ, ಘೃಷ್ಣೇಶ್ವರನೆಂಬ ಜ್ಯೋತಿರ್ಲಿಂಗವು ಶಿವಾಲಯ, ಅರ್ಥಾತ್ ಈಗಿನ ಎಲೋರಾ(ವೇರೂಳ) ದಲ್ಲಿಯೂ, ಮೂರನೆಯ ಭೀಮಾ ಶಂಕರನೆಂಬ ಜ್ಯೋತಿರ್ಲಿಂಗವು ಪರೇಲಿ(ಪರಲಿ) ಯಲ್ಲಿಯೂ ಇರುವುದು.

೨೧. **ಕೊನೆಯ ಮಾತು.**—ಪುರಾತನ ವಸ್ತು ಸಂಶೋಧಕರ ದೃಷ್ಟಿಯಿಂದ ವಿಚಾರ ಮಾಡದ ಹಲವು ಸಂಗತಿಗಳು ನಾಗಾಯಿಯಲ್ಲಿರುವುವು. ಮಂದಿರಗಳ ಕಟ್ಟು, ಶಿಲ್ಪ, ಧಾರ್ಮಿಕ, ಐತಿಹಾಸಿಕ ದೃಷ್ಟಿಯಿಂದ ಮಹತ್ವವುಳ್ಳ ಎಷ್ಟೋ ವಿಷಯಗಳಿವೆ. ಈ ಗ್ರಾಮದಿಂದ ಮಾನ್ಯಖೇಟ, ಅಥವಾ ಮಳಖೇಡವು ಸುಮಾರು ಹತ್ತು ಮೈಲಿನೊಳಗಿದೆ; ಕಲ್ಯಾಣವು ಸುಮಾರು ಐವತ್ತು ಮೈಲು ಇದೆ; ಬಹಮನೀ ರಾಜ್ಯದ ರಾಜಧಾನಿಯಾದ ಕಲ್ಲಬುರಗಿಯು ಸುಮಾರು ಮೂವತ್ತು ಮೈಲು ಇದೆ. ಒಂದಿಲ್ಲೊಂದು ರೀತಿಯಿಂದ ಮೂರೂ ರಾಜ್ಯಗಳ ಆಳಿಕೆಗೆ ಇದು ಸಂಬಂಧಪಟ್ಟಿರುವುದು. ಇದು ಯಾರ ಕಾಲಕ್ಕೆ ಹಾಳಾಯಿತೆಂಬ ಪ್ರಶ್ನೆಯನ್ನು ಐತಿಹಾಸಿಕರ ಉತ್ತರಕ್ಕೆ ಒಪ್ಪಿಸಿದೆ. ಇಲ್ಲಿರುವ ಲಿಪಿಗಳೆಲ್ಲವೂ ಕನ್ನಡದಲ್ಲಿಯೇ ಇವೆ ಎಂದ ಮೇಲೆ, ಕನ್ನಡಿಗರಾಳಿದುದಂತೂ ಖಂಡಿತ. ಕಟ್ಟಡಗಳು ದ್ರಾವಿಡ ಪದ್ಧತಿಯನ್ನು ಹೋಲುತ್ತಿವೆ. ಇಂಥವುಗಳನ್ನು ಕಷ್ಟಪಟ್ಟು ಶೋಧಿಸುವ ಜನರು ನಿಜಾಮ ಕರ್ಣಾಟಕದಲ್ಲಿ ವಿರಳ; ಈ ತೆರದ ಜ್ಞಾನವೂ ಅಲ್ಪ. ನಿಜಾಂ ಸರಕಾರದವರು ಲಿಪಿಗಳನ್ನು ಪ್ರಕಟಿಸಿದ ಮೇಲೆ ಇದರ ಇತಿಹಾಸವನ್ನು ಶೋಧಿಸಲು ಮಾರ್ಗವು ಸಿಕ್ಕುವಂತಾಗುವುದು. ಈ ವಿಷಯದಲ್ಲಿ ಈ ಲೇಖನವು ಅಪೂರ್ಣವೆಂದು ಭಾವಿಸಬಹುದಾದರೂ ಅನಾವಶ್ಯಕ, ಅಥವಾ ಅಕಾರಣವಾಗಲಾರದೆಂದು ನನ್ನ ನಮ್ರ ಭಾವನೆ.

೨೨. **ಕೃತಜ್ಞತೆ.**—ಈ ಲೇಖನವು ಹೈದರಾಬಾದ ಆರ್ಕಿಯೊಲಾಜಿಕಲ್ ಸೊಸೈಟಿಯ ಜರ್ನಲ್ ನಂಬರ್ ಕ್ರಿ. ೧೯೧೯–೨೦ ರಲ್ಲಿ ಮಿ|| ಟಿ. ಶ್ರೀನಿವಾಸ, ಬಾರ್-ಅಟ್-ಲಾ ಅವರ 'Nagai and it's Remains' ಒಳಗಿನ ಕೆಲವಂಶಗಳನ್ನೊಡಗೊಂಡಿರುವುದರಿಂದ ಅವರಿಗೆ ಕೃತಜ್ಞನಾಗಿರುವೆನು.

**ರಾಘವೇಂದ್ರರಾವ ಚಾಕಲಬ್ಬಿ.**

# *ಹನ್ನೊಂದನೆಯ ಶತಮಾನದ ಕನ್ನಡ ಸಾಹಿತ್ಯ

(*Copy-right*)

---

**ಪೀಠಿಕೆ.**—ಒಂಬತ್ತನೆಯ ಶತಮಾನದ ವರೆಗೂ ಅವ್ಯಾಹತವಾಗಿ ಪ್ರವಹಿಸುತ್ತ ಬಂದಿದೆಯೆಂದು ನೃಪತುಂಗನು ಸಾರುವ ಕನ್ನಡ ಸಾಹಿತ್ಯವು—ಹತ್ತನೆಯ ಶತಮಾನದಲ್ಲಿ ವಿದ್ಯುಲ್ಲತೆಯಂತೆ ಪ್ರಜ್ವಲಿಸಿದ ಕನ್ನಡ ಸಾಹಿತ್ಯವು—ಹನ್ನೊಂದನೆಯ ಶತಮಾನದಲ್ಲಿ ಮಾತ್ರ ಇದ್ದುವಿದ್ದಂತೆ ಮಬ್ಬು ಮುಸುಕಿದ ಗುಹೆಯಲ್ಲಿ ಅಡಗಿಕೊಂಡಿತೆಂದು ಇದುವರೆಗೂ ಹಲವರ ಅಭಿಪ್ರಾಯವಿದ್ದಂತೆ ತೋರುತ್ತದೆ. ಅಲ್ಲದೆ, ಕನ್ನಡ ಸಾಹಿತ್ಯವು ಆದಿಯಲ್ಲಿ ಜೈನರಿಂದಲೂ, ಅನಂತರ ವೀರಶೈವರಿಂದಲೂ, ಕಡೆಗೆ ಬ್ರಾಹ್ಮಣರಿಂದಲೂ ಆನುಪೂರ್ವಿಯಾಗಿ ಬೆಳೆಯಿತೆಂದು ಹೇಳುವ ಸಂಪ್ರದಾಯವೂ ಉಂಟು. ಸಾಹಿತ್ಯ ಸಾಮಗ್ರಿಗಳು ಹೊರಬಿದ್ದಂತೆಲ್ಲ ಇವೆರಡು ಅಭಿಪ್ರಾಯಗಳ ಬಲವೂ ಕುಂದುತ್ತ ಹೋಗುವುದರಲ್ಲಿ ಸಂಶಯವಿಲ್ಲ.

**ಕನ್ನಡ ಮಾತೆಗೆ ಜಾತಿ ಭೇದವಿಲ್ಲ.**—ಮಾತೆಯು ವಿಶಾಲವಾದ ವರದ ಹಸ್ತದಲ್ಲಿ ನಲಿದಾಡುವ ಮುದ್ದು ಮಕ್ಕಳೊಳಗೆ ಯಾವುದೊಂದು ಜಾತಿಗೇ ಆಗಲಿ, ಯಾವುದೊಂದು ಪಂಗಡಕ್ಕೇ ಆಗಲಿ ಭಾಷಾ ಜನನಿ ವರವಾಗಿಲ್ಲ; ಪಕ್ಷಪಾತವನ್ನೂ ಬೀರಿಲ್ಲ. ಯಾವುದಾದರೂ ಒಂದು ಪಂಗಡದವರು ಕಾಲ ದೇಶ ವರ್ತಮಾನವನ್ನು ಅನುಸರಿಸಿ ಮುಂದೆ ಬಂದು ಭಾಷಾ ಮಾತೆಯ ಪವಿತ್ರ ಚರಣ ಸೇವೆಯನ್ನು ಮಾಡುತ್ತಿದ್ದರೆ ಉಳಿದ ಪಂಗಡದವರು ಅದನ್ನು ತಾಳ್ಮೆಯಿಂದಲೂ ಭಕ್ತಿಯಿಂದಲೂ ನೋಡಿ ಆನಂದಿಸುತ್ತ ಬಂದಿರುವರು—ಅಷ್ಟೆ. ಈ ತಾಳ್ಮೆಯೂ ಈ ಸಮದರ್ಶಿತ್ವವೂ ಕನ್ನಡ **ರಾಜರ** ಮೊದಲುಗೊಂಡು ದೀನ **ಮನುಜನ** ವರೆಗೂ ಸಾಮಾನ್ಯವಾಗಿ ಹರಡಿದ್ದುವೆಂಬುದಕ್ಕೆ ಕನ್ನಡ ಸಾಹಿತ್ಯ ಚರಿತಾಮೃತ ಮಹೋದಧಿಯಲ್ಲಿ ಹಲವು ಕುರುಹುಗಳು ದೊರೆಯುತ್ತವೆ.

**ಸಾಹಿತ್ಯ-ಮತ ಪ್ರಚಾರ.**—ಕನ್ನಡ ಸಾಹಿತ್ಯದಲ್ಲಿ ಹಲವು ಗ್ರಂಥಗಳು ಹುಟ್ಟಲು ಮತ ಪ್ರಚಾರವೇ ಮುಖ್ಯ ಕಾರಣವಾಗಿದ್ದರೂ, ಇದು ಜೈನ ವೀರಶೈವ ಗ್ರಂಥಗಳಿಗೆ ವಿಶೇಷವಾಗಿ ಅನ್ವಯಿಸುತ್ತದೆಯೇ ಹೊರತು ಬ್ರಾಹ್ಮಣ ಗ್ರಂಥಗಳಿಗೆ ಅಷ್ಟೇನೂ ಅನ್ವಯಿಸುವುದಿಲ್ಲ. ಏಕೆಂದರೆ, ವೈದಿಕ ಧರ್ಮದ ತತ್ತ್ವಗಳು ಈಗಿನಂತೆಯೇ ಹಿಂದಿನ ಕಾಲದಿಂದಲೂ ಪುರಾಣ ಪುಣ್ಯಕಥೆಗಳ ಮೂಲಕ ಪಂಡಿತರಿಂದ ಪಾಮರರ ವರೆಗೂ ಪ್ರಚಾರವಾಗುತ್ತಲೇ ಬಂದಿವೆ. ಅಲ್ಲದೆ, ಅವು ಹಾಲಲ್ಲಿ ಸಕ್ಕರೆ ಬೆರೆತಂತೆ ಜನಸಾಮಾನ್ಯರ ದಿನಗಟ್ಟಳೆಯ ನಡೆನುಡಿಗಳಲ್ಲಿ ಎಷ್ಟೋ ಕಾಲ

* ಹದಿನೈದನೆಯ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಹಿಂದೆ ಸಹಜವಾಗಿಯೇ ಬೇರೂರಿ ನಿಂತವು. ಆದಕಾರಣ, ವೈದಿಕ ಧರ್ಮ ಪ್ರಚಾರಕ್ಕೆ ದೇಶಭಾಷಾ ಗ್ರಂಥಗಳ ಆವಶ್ಯಕತೆಯುಂಟಾಗಲಿಲ್ಲ. ಉಳಿದ ಧರ್ಮಗಳ ವಿಚಾರವಾದರೋ ಬೇರೆ. ಉದಾಹರಣಾರ್ಥವಾಗಿ ೧೨ನೆಯ ಶತಮಾನದಲ್ಲಿ ಜನ ಸಾಮಾನ್ಯವನ್ನು ಆಕರ್ಷಿಸಿದ ಲಿಂಗವಂತ ಮತದಲ್ಲಿ ಅಷ್ಟಾವರಣ ಷಟ್‌ಸ್ಥಲ ಮುಂತಾದ ವೀರಶೈವ ಸಂಪ್ರದಾಯಗಳನ್ನು ಪಾಮರರಿಗೆ ಕೂಡ ತಿಳಿಯುವಂತೆ ದೇಶ ಭಾಷೆಯಿಂದ ಹೇಳುವುದು ಅವಶ್ಯವಾಯಿತು. ಹಾಗೆಯೇ, ವೈದಿಕ ಧರ್ಮದ ಯಾಗಾದಿಗಳನ್ನು ನಿಷೇಧಿಸುವ ಅಹಿಂಸಾಚರಣೆ, ಅನಶನವ್ರತ ಮುಂತಾದ ಜೈನ ಮತ ತತ್ತ್ವಗಳನ್ನು ಪಾಮರರಲ್ಲಿ ಪ್ರಚಾರಗೊಳಿಸಲು ದೇಶ ಭಾಷಾ ಗ್ರಂಥಗಳ ಸಹಾಯವು ಅವಶ್ಯವಾಯಿತು.

**ಜಾತಿಗೆ ಭಾಷೆ ಕಾರಣವಲ್ಲ.**—ಪೂರ್ವಪಕ್ಷ ಖಂಡನೆಗಾಗಿ ಇಲ್ಲಿ ವೀರಶೈವ ಜೈನ ಬ್ರಾಹ್ಮಣರ ಹೆಸರನ್ನು ಹೇಳಬೇಕಾಯಿತೇ ಹೊರತು, ಸಮಾಜದಲ್ಲಿ ಆನಂದವನ್ನೂ ಶಾಂತಿಯನ್ನೂ ಹುಟ್ಟಿಸತಕ್ಕ ಸಾಹಿತ್ಯದಲ್ಲಿಯೂ ರಾಜ ಕಾರಣದಲ್ಲಿಯೂ ಜಾತಿಗಳ ಭೇದವನ್ನೂ ಪಕ್ಷಪಾತವನ್ನೂ ಎತ್ತುವುದು ಘಾತಕವೆಂಬುದನ್ನು ಮರೆಯಕೂಡದು. ಏಕೆಂದರೆ, ಒಂದು ಮತದಿಂದ ಮತ್ತೊಂದು ಮತಕ್ಕೆ ಹೋದವರು ಭಾಷಾ ದೃಷ್ಟಿಯಿಟ್ಟು ಆ ರೀತಿ ವರ್ತಿಸಿದರೆಂದು ಹೇಳಲು ಆಧಾರವಿಲ್ಲ; ಕನ್ನಡ ಸಾಹಿತ್ಯದಲ್ಲಂತೂ ಯಾವ ಆಧಾರವೂ ಇಲ್ಲ. ಅದಕ್ಕೆ ಬದಲು ಒಂದೇ ಕುಟುಂಬದಲ್ಲಿ ಗಂಡನೇ ಒಂದು ಮತ, ಹೆಂಡತಿಯೇ ಒಂದು ಮತ, ಮಗನು ಮೂರನೆಯ ಮತ, ಮಗಳು ನಾಲ್ಕನೆಯ ಮತ—ಈ ವಿಧವಾದ ಉದಾಹರಣೆಗಳು ನಮ್ಮ ಸಾಹಿತ್ಯದಲ್ಲಿ ದೊರೆಯುತ್ತವೆ. ಅಷ್ಟೇ ಅಲ್ಲದೆ, ಬ್ರಾಹ್ಮಣರು ಜೈನರಾದುದಕ್ಕೂ ಜೈನರು ವೈಷ್ಣವ, ಅಥವಾ ಶೈವರಾದುದಕ್ಕೂ ದೃಷ್ಟಾಂತಗಳು ದೊರೆಯುತ್ತವೆ. ಇವಕ್ಕೆಲ್ಲ ವ್ಯಕ್ತಿಸ್ವಾತಂತ್ರ್ಯವೋ, ಸಮಾಜ ಪ್ರಭಾವವೋ, ಇಲ್ಲವೆ, ವರ್ಚಸ್ವಿಯಾದ ಮತಾಚಾರ್ಯನ, ಅಥವಾ ಮಹಾತ್ಮನ ವ್ಯಾಪಕತ್ವವೋ ಕಾರಣವಲ್ಲದೆ, ಭಾಷೆ ಎಂದೆಂದೂ ಕಾರಣವಾಗಿಲ್ಲ. ಕನ್ನಡ ಸಾಹಿತ್ಯದೊಳಗೆ ಹತ್ತನೆಯ ಶತಮಾನದಲ್ಲಿದ್ದ ಪಂಪ, ಪೊನ್ನ, ಚಾವುಂಡರಾಯಾದಿಗಳು ಬ್ರಾಹ್ಮಣ ವಂಶದಿಂದ ಜೈನ ಮತ ಸ್ವೀಕಾರಮಾಡಿದ ಪರಂಪರೆಗೆ ಸೇರಿದವರೆಂಬುದು ತಿಳಿದೇ ಇದೆ. ಇವರು ತಮ್ಮ ಮನೆಯಲ್ಲಿ, ಅಥವಾ ಮನದಲ್ಲಿ ಜೈನ ಮತ ಪ್ರವರ್ತಕರಾಗಿದ್ದಿರಬಹುದು; ತಮ್ಮ ತಮ್ಮ ಗ್ರಂಥಗಳಲ್ಲಿ ಜೈನ ಮತಾಮೃತ ಧಾರೆಗಳನ್ನು ಅಲ್ಲಲ್ಲಿ ವರ್ಷಿಸಿರಬಹುದು. ಆದರೆ ಸಾಹಿತ್ಯ ವಿಮರ್ಶಕರ ದೃಷ್ಟಿಯಲ್ಲಿ, ಅವರೆಲ್ಲರೂ '**ಕವಿ**' ಯೆಂಬ ಒಂದೇ ಮತಕ್ಕೆ ಸೇರಿದವರಾಗಿ ಕಾಣಿಸತಕ್ಕವರು. ವೀರಶೈವ ಕವಿಗಳ ವಿಚಾರವೂ ಹಾಗೆಯೇ; ಇರಲಿ.

**ಬ್ರಾಹ್ಮಣ ಕವಿಗಳು.**—ಬ್ರಾಹ್ಮಣ ಕವಿಗಳಿಗೆ ಮತಪ್ರಚಾರವು ಮುಖ್ಯೋದ್ದೇಶವಾಗಿರಲಿಲ್ಲವೆಂದಮೇಲೆ ಅವರು ಕನ್ನಡ ಸಾಹಿತ್ಯಕ್ಕೆ ಸೇವೆ ಏನು ಮಾಡಿದರು? ಹೇಗೆ ಮಾಡಿದರು? ಯಾವಾಗ ಮಾಡಿದರು? ಅವರಿಗೆ ಕನ್ನಡದಲ್ಲಿ ಎಷ್ಟರ

ಮಟ್ಟಿಗೆ ಅಭಿಮಾನವಿದ್ದಿತು? ಜನಸಾಮಾನ್ಯಕ್ಕೆ ಜ್ಞಾನ ಪ್ರಸಾರ ಮಾಡುವ ಕಾರ್ಯದಲ್ಲಿ ಅವರು ಎಷ್ಟು ಉತ್ಸುಕರಾಗಿದ್ದರು?—ಎಂಬಿವೇ ಮುಂತಾದ ಕೆಲವು ವಿಚಾರಗಳನ್ನು ಇಲ್ಲಿ ವಿಮರ್ಶಿಸುವ.

**ಹತ್ತನೆಯ ಶತಮಾನ.**—ಬ್ರಾಹ್ಮಣ ವಂಶದಲ್ಲಿ ಜೈನರಾದ ೧೦ನೆಯ ಶತಮಾನದ ಪಂಪ, ಪೊನ್ನ, ಚಾವುಂಡರಾಯಾದಿಗಳ ವಿಚಾರವೊಂದು ಕಡೆ ಇರಲಿ. ಬ್ರಾಹ್ಮಣನಾಗಿದ್ದನೆಂದೇ ಊಹಿಸಬಹುದಾದ ಆದಿ ನಾಗವರ್ಮನು ಮತಪ್ರಚಾರ ಗ್ರಂಥವನ್ನು ಬರೆಯದೆ ಛಂದಶ್ಶಾಸ್ತ್ರ ಗ್ರಂಥವನ್ನು ಕನ್ನಡದಲ್ಲಿ ಬರೆದಿರುವನು. ಇದೇ ಶತಮಾನದಲ್ಲಿದ್ದವರೆಂದು ತಿಳಿಯಬಂದಿರುವ ಇನ್ನು ಮೂವರು ಬ್ರಾಹ್ಮಣ ಕವಿಗಳು ಶಾಸನಕಾರರು. ಇವರಲ್ಲಿ ರವಿನಾಗಭಟ್ಟನೂ, ಕವಿರಾಜ ರಾಜನೂ ಧಾರವಾಡ ಜಿಲ್ಲೆಯಲ್ಲಿಯ ಕೆಲವು ಕನ್ನಡ ಶಾಸನಗಳನ್ನು ಬರೆದವರು; ಕಮಲಾದಿತ್ಯನೆಂಬವನು ಬೆಳಗಾವಿ ಜಿಲ್ಲೆಯ ಕನ್ನಡ ಶಾಸನವೊಂದನ್ನು ಬರೆದವನು.

**ಹನ್ನೊಂದನೆಯ ಶತಮಾನದ ರಾಜಕೀಯ ಪರಿಸ್ಥಿತಿ.**—ಇನ್ನು ೧೧ನೆಯ ಶತಮಾನದ ಕನ್ನಡ ಸಾಹಿತ್ಯವನ್ನು ಪರಿಕಿಸುವ ಮೊದಲು ಆ ಕಾಲದ ಪರಿಸ್ಥಿತಿಯನ್ನು ಕುರಿತು ಸ್ವಲ್ಪ ವಿಚಾರಮಾಡಬೇಕು. ಹನ್ನೊಂದನೆಯ ಶತಮಾನದ ಪ್ರಾರಂಭದ ವರೆಗೂ ದಕ್ಷಿಣ ಕರ್ಣಾಟಕದಲ್ಲಿ ಮೈಸೂರಿಗೆ ತೆಂಕಲಲ್ಲಿದ್ದ ತಲಕಾಡನ್ನು ರಾಜಧಾನಿಯನ್ನಾಗಿಟ್ಟುಕೊಂಡು ಗಂಗರಸರು ಆಳುತ್ತಿದ್ದರು. ಈ ಗಂಗರಾಜರು ಜೈನರು. ಇವರ ರಾಜ್ಯಕ್ಕೆ ದಕ್ಷಿಣದಲ್ಲಿದ್ದ ಚೋಳ ದೇಶವನ್ನು ಆ ಕಾಲದಲ್ಲಿ ರಾಜೇಂದ್ರಚೋಳನೆಂಬವನು ಆಳುತ್ತಿದ್ದನು. ಚೋಳರು ಶೈವರು. ಇವರು ಗಂಗರಾಜ್ಯಕ್ಕೂ ಜೈನಮತಕ್ಕೂ ಬದ್ಧದ್ವೇಷಿಗಳಾಗಿದ್ದು ಸಮಯವನ್ನು ಸಾಧಿಸಿ, ಕ್ರಿ. ಶ. ೧೦೦೪ರಲ್ಲಿ ಗಂಗರಾಜ್ಯದ ಮೇಲೆ ದಾಳಿಯಿಟ್ಟು ಆ ರಾಜನನ್ನು ಸೋಲಿಸಿ ವಿಜಯಮದದಿಂದ ಮುಂದೆ ಉತ್ತರ ದಿಕ್ಕಿಗೂ ನುಗ್ಗಿದರು. ಆ ಕಾಲಕ್ಕೆ ಉತ್ತರ ಕರ್ಣಾಟಕಕ್ಕೆ ಚಾಳುಕ್ಯರು ಒಡೆಯರಾಗಿದ್ದರು. ರಾಜೇಂದ್ರಚೋಳನು ಮೈಸೂರಿಂದ ಉತ್ತರಕ್ಕೆ ಪುಲಿಗೆರೆಯ ವರೆಗೂ ನುಗ್ಗಿ ದಾರಿಯಲ್ಲಿ ಸಿಕ್ಕಿದ ಜೈನ ಮಠಗಳನ್ನೂ ಬಸದಿಗಳನ್ನೂ ನೆಲಸಮ ಮಾಡಿದನು. ಹೀಗೆ ಜೈನರ ಮೇಲೆ ಚೋಳರ ದಾಳಿ ಅಲ್ಲಿಂದ ೪೦–೫೦ ವರ್ಷಗಳ ವರೆಗೂ ಅಪ್ರತಿಹತವಾಗಿ ನಡೆಯಿತು. ಚೋಳರ ಕೋಪಾಗ್ನಿಗೂ ನಿಶಿತ ಖಡ್ಗಕ್ಕೂ ತಮ್ಮ ಪ್ರಾಣ ಮಾನಗಳೇ, ತಮ್ಮ ಧರ್ಮವೇ, ಸೂರೆ ಹೋಗುತ್ತಿರುವಾಗ ಜೈನ ಧರ್ಮ ಪ್ರಚಾರಕ್ಕೆ ಮುಖ್ಯ ಸಾಧನವಾಗಿದ್ದ ಕನ್ನಡ ಸಾಹಿತ್ಯದ ಹಂಬಲು ಜೈನರಿಗೆ ಹೇಗೆ ಹುಟ್ಟಬೇಕು? ಸಾಹಿತ್ಯ ಸೇವೆ ಹೇಗೆ ಲಭಿಸಬೇಕು?

**ಜೈನ ಸಾಹಿತ್ಯದ ತಾತ್ಕಾಲಿಕವಾದ ಅವನತಿ.**—ಕಾಲ ದೇಶ ವರ್ತಮಾನದ ಈ ಅನಿವಾರ್ಯ ಕಾರಣಗಳಿಂದ ಜೈನರಿಗೆ ಕನ್ನಡ ಸಾಹಿತ್ಯ ಸೇವೆ ಕೆಲವು ಕಾಲ ದಕ್ಕದೆ ಹೋಗಲು, ಆ ಕಾಲದಲ್ಲಿ ಬ್ರಾಹ್ಮಣ ಕವಿಗಳು ತಮ್ಮ ಭಾಷಾ ಮಾತೆಯ ಪೋಷಣೆಗಾಗಿ ಅಭಿಮಾನದಿಂದ ಮುಂದೆ ಬಂದು ಅಲ್ಲಿಯ ವರೆಗೂ ಅವಿಚ್ಛಿನ್ನ

ವಾಗಿ ನಡೆಯುವಂಥ ಭಾಷಾಮಹಾತ್ಮ್ಯಸೇವೆಗೆ ಲೋಪಚಾರದಂತೆ ತಾವೇ ಬದ್ಧಕಂಕಣ ರಾಗಿ ನಿಂತರು. ೧೦ನೆಯ ಶತಮಾನದಲ್ಲಿದ್ದ ಗುಣವರ್ಮ, ಪಂಪ, ಪೊನ್ನ, ರನ್ನ ರೆಂಬ ಜೈನ ಕವಿಗಳಲ್ಲಿ ಒಬ್ಬೊಬ್ಬರೂ ಜಿನ ಧರ್ಮ ಪ್ರತಿಪಾದಕವಾದ ಕಾವ್ಯದ ಜೊತೆಗೆ ಜೈನ ಸಾಹಿತ್ಯ ದೃಷ್ಟಿಯಿಂದ 'ಲೌಕಿಕ'ವೆನಿಸಿಕೊಳ್ಳುವ ಬೇರೆ ಕಾವ್ಯ ವನ್ನೂ ಬರೆದರು. ಹರಿವಂಶ, ಆದಿಪುರಾಣ, ಶಾಂತಿಪುರಾಣ, ಅಜಿತನಾಥಪುರಾಣ ಗಳು ಜಿನ ಸಮಯ ಪ್ರದೀಪವಾದ ಅವರ ಕಾವ್ಯಗಳಾದರೆ, ಶೂದ್ರಕ, ಭಾರತ (ವಿಕ್ರಮಾರ್ಜುನ ವಿಜಯ), ಭುವನೈಕರಾಮಾಭ್ಯುದಯ, ಗದಾಯುದ್ಧಗಳೆಂಬ ಇತರ ಗ್ರಂಥಗಳು ಇವರ ದೃಷ್ಟಿಯಿಂದ 'ಲೌಕಿಕ' ವೆನಿಸಿಕೊಂಡುವು. ೧೦–೧೧ ನೆಯ ಶತಮಾನಗಳಲ್ಲಿದ್ದ ಬ್ರಾಹ್ಮಣ ಕವಿಗಳಾದರೋ ತಮ್ಮ ಗ್ರಂಥಗಳನ್ನು ವೈದಿಕ ಧರ್ಮ ಪ್ರಸರಣೋದ್ದೇಶದಿಂದಲೇ ಬರೆಯುವ ಆವಶ್ಯಕತೆ ಇಲ್ಲದೆ, ಸಾಮಾನ್ಯ ಜನರ ಜ್ಞಾನ ವಿಕಾಸಕ್ಕೂ ಭಾಷಾಭ್ಯವಸಾಯಕ್ಕೂ ಕನ್ನಡ ಸಾಹಿತ್ಯ ಪರಿಪೋಷಣಕ್ಕೂ ವಿಶೇಷತಃ ಸಾಧಕವಾದ ಗ್ರಂಥಗಳನ್ನೇ ಬರೆದಿರುವರು. ಆದಿ ನಾಗವರ್ಮನ 'ಛಂದೋಂಬುಧಿ,' ಎರಡನೆಯ ನಾಗವರ್ಮನ 'ಕಾದಂಬರಿ,' ದುರ್ಗಸಿಂಹನ 'ಪಂಚತಂತ್ರ,' ಚಂದ್ರರಾಜನ 'ಮದನತಿಲಕ'—ಇವೇ ಕೆಲವು ಉದಾಹರಣೆಗಳು. ಹೀಗೆ ಜೈನ ಸಾಹಿತ್ಯವು ತಾತ್ಕಾಲಿಕವಾಗಿ ಅವನತಿ ಹೊಂದಿದ ಕಾಲದಲ್ಲಿ ಬ್ರಾಹ್ಮಣ ಸಾಹಿತ್ಯವು ತಲೆದೋರಿ ಕನ್ನಡ ಸಾಹಿತ್ಯ ಪ್ರವಾಹಕ್ಕೆ ಒದಗ ಬಹುದಾಗಿದ್ದ ತಡೆಗಟ್ಟನ್ನು ತಪ್ಪಿಸಿತು.

**ಬ್ರಾಹ್ಮಣ ಸಾಹಿತ್ಯ.**—ಹನ್ನೊಂದನೆಯ ಶತಮಾನದಲ್ಲಿ ಮೇಲೆ ಹೇಳಿದ ಮೂವರು ಬ್ರಾಹ್ಮಣ ಕವಿಗಳಲ್ಲದೆ, ನಾಗವರ್ಮಾಚಾರ್ಯನೆಂಬ ಮತ್ತೊಬ್ಬನು (ಕ್ರಿ. ಶಕ ೧೦೭೧) 'ಚಂದ್ರಚೂಡಾಮಣಿ ಶತಕ'ವನ್ನು ಬರೆದಿರುವನು. ಇವ ರೆಲ್ಲರೂ ಕಲ್ಯಾಣ ಚಾಲುಕ್ಯರ ಕಾಲದವರು; ಇವರೇ ಅಲ್ಲದೆ, ಶಾಸನಗಳಲ್ಲಿ ಉಕ್ತ ರಾದ ಇನ್ನು ೫ ಜನ ಕವಿಗಳ ಹೆಸರೂ ದೊರೆವುದು. ಕಪ್ಪಣ್ಣಭಟ್ಟ (೧೦೩೨); ನಾರಾಯಣಭಟ್ಟ (ಸು. ೧೦೪೦) ಇವನು ತೆಲುಗು ಸಾಹಿತ್ಯದಲ್ಲಿ ಮೊದಲನೆಯ ಪ್ರಾಚೀನ ಗ್ರಂಥವಾದ 'ಆಂಧ್ರಭಾರತ'ದ ರಚನೆಯಲ್ಲಿ ಸಹಾಯ ಮಾಡಿದವನು; ಚಂದ್ರಭಟ್ಟ (೧೦೬೭); ಕರ್ಪರಸ (೧೦೮೪) ('ಮದನತಿಲಕ'ಕಾರ ಚಂದ್ರರಾಜನ ಮಗ). ''ಕಾವ್ಯನಾಟಕಕಾರ''ನೆಂದು ಕೀರ್ತಿತನಾದ ಸೇನಬೋವ ಮಾದಿಮಯ್ಯ ನೂ (೧೦೯೮) ಬ್ರಾಹ್ಮಣನೆಂದು ತೋರುತ್ತದೆ. ೧೧ನೆಯ ಶತಮಾನದ ಕನ್ನಡ ಸಾಹಿತ್ಯವು ವಿಶೇಷತಃ ಬ್ರಾಹ್ಮಣ ಕವಿಗಳಿಂದಲೇ ಪರಿಪೋಷಿತವಾಗಿದ್ದರೂ ಅಲ್ಪ ಸಂಖ್ಯಾಕರಾದ ಜೈನ ಕವಿಗಳೂ ಆ ಕಾಲದಲ್ಲಿ ಇದ್ದರು. ಆದರೆ ಅವರು ಹತ್ತ ನೆಯ ಶತಮಾನದಲ್ಲಿದ್ದ ಜೈನ ಕವಿಗಳಂತೆ ಕೇವಲ 'ಜಿನ ಪುರಾಣ' ಕರ್ತೃ ಗಳಾಗದೆ, ಇವರ ದೃಷ್ಟಿಯಿಂದ 'ಲೌಕಿಕ'ವೆನಿಸಿಕೊಳ್ಳುವ ಗ್ರಂಥಗಳನ್ನೇ ವಿಶೇಷವಾಗಿ ರಚಿಸಿದವರು. ಇವರಲ್ಲಿ ಶ್ರೀಧರಾಚಾರ್ಯನೆಂಬವನು (೧೦೪೯) ಮೊದಲನೆಯವನು; ಇವನ ಗ್ರಂಥ—''ಜಾತಕ ತಿಲಕ''; ಕನ್ನಡದಲ್ಲಿ ಇದೇ

ಮೊದಲನೆಯ ಜ್ಯೋತಿಷ ಗ್ರಂಥ. ಎರಡನೆಯವನು ಶಾಂತಿನಾಥ (೧೦೬೮); ಇವನ ಗ್ರಂಥ–''ಸುಕುಮಾರ ಚರಿತೆ''; ಜಿನ ಮತ ಸಂಬಂಧವಾದರೂ ಕನ್ನಡದಲ್ಲಿ ಇದೇ ಮೊದಲನೆಯ 'ಜೀವನ ಚರಿತ್ರೆ'ಯೆಂದು ಹೇಳಬಹುದು; ಇವರಲ್ಲದೆ ಏಚಮ, ದಿವಾಕರ ನಂದಿ, ಹರಿಯಣ್ಣ ಮುಂತಾದ ಕೆಲವರು ಜೈನ ಕವಿಗಳ ಹೆಸರೂ, ಇತರರ ಹೆಸರೂ ಈ ಕಾಲದ ಶಾಸನಗಳಲ್ಲಿ ಕಾಣಬರುತ್ತವೆ.

**ಬ್ರಾಹ್ಮಣ ಸಾಹಿತ್ಯದ ಮುಖ್ಯ ಲಕ್ಷಣಗಳು.**—ಮೇಲೆಯೇ ತಿಳಿಸಿದಂತೆ, ೧೧ನೆಯ ಶತಮಾನದ ಬ್ರಾಹ್ಮಣ ಕವಿಗಳು ವೈದಿಕ ಧರ್ಮ ಪ್ರಚಾರವನ್ನೇ ಮುಖ್ಯೋದ್ದೇಶವಾಗಿಟ್ಟುಕೊಂಡವರಲ್ಲ. ಜನಸಾಮಾನ್ಯದ ಲೌಕಿಕ ಜ್ಞಾನ ವಿಕಾಸಕ್ಕೂ ಮನೋರಂಜನೆಗೂ ಯೋಗ್ಯವಾದ ಗ್ರಂಥಗಳನ್ನೇ ರಚಿಸಿದವರು; ವೈದಿಕ ಧರ್ಮ ವಿಚಾರಗಳಲ್ಲದ ಇತರ ವಿಷಯಗಳನ್ನು ಸಂಸ್ಕೃತ ಗ್ರಂಥಗಳಿಂದಾಗಲಿ, ಇತರ ಮಾರ್ಗಗಳಿಂದಾಗಲಿ ತಿಳಿಯಲು ಆಸ್ಪದವಿಲ್ಲದ ಪಾಮರರಿಗೆ ಅವುಗಳ ಆಸ್ವಾದನವನ್ನು ಕನ್ನಡ ಗ್ರಂಥಗಳ ಮುಖಾಂತರ ಮಾಡಿಸಿದವರು. ಆದಕಾರಣವೇ ಆ ಕಾಲದ ಪ್ರತಿಯೊಬ್ಬ ಬ್ರಾಹ್ಮಣ ಕವಿಯೂ ಲಲಿತ ಶೈಲಿಯಿಂದಲೇ ಕಾವ್ಯವನ್ನು ಬರೆದಿರುವನು; ಹೊಸತಾಗಿ ಹೊಸಗನ್ನಡದಿಂದ ಬರೆದೆನೆಂದು ಹೇಳಿಕೊಂಡಿರುವನು.

'' **ಪೊಸತಾಗಿರೆ** ವಿರಚಿಸುವೆಂ। ವಸುಮತಿಯೊಳ್ ಪಂಚತಂತ್ರಮಂ **ಕನ್ನಡದಿಂ**'' ಎಂದು ದುರ್ಗಸಿಂಹನೂ, ''ಮುನಿಮತವಿದೆ ಪೇಳ್ದನೆನೆಯೆ **ಪೊಸಗನ್ನಡದಿಂ**'' ಎಂದು ಚಂದ್ರರಾಜನೂ ಹೇಳಿಕೊಂಡಿರುವರು. ಕಾದಂಬರಿಯ ನಾಗವರ್ಮನು ಸ್ಪಷ್ಟವಾಗಿ ಹಾಗೆ ಹೇಳಿಕೊಳ್ಳದಿದ್ದರೂ ಅವನ ಗ್ರಂಥದಲ್ಲಿ ಹಲವು ಹೊಸಗನ್ನಡ ಪ್ರಯೋಗಗಳು ಕಾಣಬರುವುವೆಂಬುದನ್ನು ಮುಂದೆ ತಿಳಿಸುತ್ತೇವೆ. ಇವನ ಗ್ರಂಥವು ಮನೋಹರವಾದ ಕಾದಂಬರೀ ಕಥೆಯಾದರೆ, ದುರ್ಗಸಿಂಹನ ಪಂಚ ತಂತ್ರವು ರಾಜನೀತಿ ಲೌಕಿಕ ನೀತಿ ಪರಿಪ್ಲುತವಾದ ಬೃಹತ್ಕಥಾ ಭಾಗ. ಇನ್ನು, ಚಂದ್ರರಾಜನ ಗ್ರಂಥವಾದರೋ ''ಕಾಮಶಾಸ್ತ್ರ.'' ''ಇದನ್ನು ಪ್ರಾಚೀನ ಪಂಡಿತರು ಬೇಕಾದಷ್ಟು ಓದಿಕೊಂಡರೇ ಹೊರತು ತಾವು ಓದಿದುದನ್ನು ಲೋಕದ ಜನರಿಗೆ ತಿಳಿವಂತೆ ಅರಿಪಲೊಲ್ಲದಾದರು. ನಾನಾದರೂ ಇದನ್ನು ನೀತಿಗೂಡಂಬಡುವಂತೆ ಆಗಮ ಲೌಕಿಕ ವಿರೋಧಮಂ ಕಳೆದು ಸಾರಾಂಶಮಂ ಕೊಂಡು, ಪಲವು ಮತಂಗಳನೊಂದು ಮಾಡಿ ಪದಿನೆಂಟು ಅಧಿಕರಣಂಗಳಿಂದೆ 'ಅಲಂಕಾರಂ' ಕೃತಮಾಗೆ 'ನಾನಾಚ್ಛಂದ'ದಲ್ಲಿ ೫೦೦ ಗದ್ಯ ಪದ್ಯಂಗಳಿಂ ವಿಶ್ರುತಂ ಮಾಡಿ ಪೇಳ್ದೆಂ'' ಎಂಬರ್ಥಕ್ಕೆ ಹೇಳಿಕೊಂಡಿದ್ದಾನೆ. ಇವನು ಪಲವು ಲೌಕಿಕ ಶಾಸ್ತ್ರಗಳನ್ನು ಬಲ್ಲಾತನು; ಕಲ್ಯಾಣ ಚಾಲುಕ್ಯರ ೧ನೆಯ ಜಯಸಿಂಹ ಜಗದೇಕಮಲ್ಲನ ಕೈಯ ಕೆಳಗಿದ್ದ 'ರೇಚನೃಪ'ನ ಆಶ್ರಯದಲ್ಲಿ ಗ್ರಂಥವನ್ನು ಬರೆದನು. ಇದು ಮದನ ಶಾಸ್ತ್ರ ಗ್ರಂಥವಾದರೂ ಇದರಲ್ಲಿ ಛಂದಶ್ಶಾಸ್ತ್ರದ ಸಾರವೇ ಅಡಗಿದೆ. ಇದರಲ್ಲಿ ಹಲವು ಛಂದಸ್ಸನ್ನು ಬಂಧಗಳನ್ನು ನೋಡಬಹುದು; ಇಷ್ಟಾದರೂ, ಗ್ರಂಥವು ಬಹು

ಲಲಿತವಾಗಿಯೂ ವ್ಯಾಕರಣ ಶುದ್ಧವಾಗಿಯೂ ಇದೆ; ಕವಿ ಕಾವ್ಯ ಪ್ರಶಂಸೆಯನ್ನೂ, ಇದುವರೆಗೆ ಅಚ್ಚಿನಲ್ಲಿ ಪ್ರಕಟವಾಗದ ಕವಿಯ ಮಾತುಗಳಲ್ಲಿ ಕೆಲವನ್ನೂ ಸೇರಿಸಿ ಇಲ್ಲಿ ಬರೆಯುತ್ತೇವೆ:—

ಮ || ಸಕಲ ವ್ಯಾಕರಣಾರ್ಥಶಾಸ್ತ್ರ ಗಣಿತಾಲಂಕಾರ ಸತ್ಕಾವ್ಯ ನಾ।
ಟಕ ವಾತ್ಸ್ಯಾಯನ ನೃತ್ಯ ಗೀತ ಹಯಶಾಸ್ತ್ರಾದ್ವೈತ ಗಾಂಧರ್ವ ತಾ ||
ರ್ಕ ಕವೀಂದ್ರಾಗಮ ವೈದ್ಯ ವಾದ್ಯ ಶಕುನೋದ್ಯತ್ ಹೃದ್ಯ ವಿದ್ಯಾ ಕದಂ।
ಬಕಮಂ ಚಂದ್ರಕವೀಂದ್ರನೊರ್ವನೆ ವಲಂ ಬಲ್ಲಂ ಪೆರರ್ ಬಲ್ಲರೇ || (೧-೪೯)

ಕಂ|| ಎನೆ ನೆಗಳ್ದ ಚಂದ್ರನಬ್ಜಾ।
ನನ ಚಂದ್ರಂ ಶ್ವೇತಕೇತು ಬಭ್ರುಕ ವಾತ್ಸ್ಯಾ ||
ಯನ ಪಾಂಚಾಳಾದಿ ಮಹಾ।
ಮುನಿ ಮತಮಿರೆ ಪೇಳ್ದನೆಸೆಯೆ ಪೊಸಗನ್ನಡದಿಂ || (೧-೫೧)

ಅನವದ್ಯ || ನೆರೆಯೆ ಮುನ್ನಿನ ತತ್ತ್ವಮನಾರುಂ ಮುನ್ನಿನವರ್ ವಿದಿತಾರ್ಥಮಾ।
ಗಿರಿಸಲೊಲ್ಲದಣಂ ಪಲವೋದಂ ಮಾಡಿ ಸಮಂತೊಗೆದಂದವಾ ||
ರರಿವರೆಂದು ಧರಾ ತಳಕೆಲ್ಲಂ ಕಾಮ ಕಳಾಗಮಮೆಲ್ಲಮಂ।
ಕಿರಿದರಿಂದರಿವಂತಿರೆ ಪೇಳ್ದಂ ಶ್ರೀ ಕವಿತಾ ಮಹಿಮಾರ್ಣವಂ || (೧-೫೨)

ಕಂ|| ಅನುಭವಿಸಿದಂ ಗಜಾಗಮ।
ಮನೆ ಮಾಡಿ ಪಲರ್ಗೆ 'ಗತಾನುಗತಿಕೋ ಲೋಕಃ' ||
ಎನಿಪಂತೆ ಮುನ್ನ ಪೇಳ್ದುದ।
ನನುಭವಣೆಗಮಾಗಮಕ್ಕಮಳವಡೆ ಪೇಳ್ವೆಂ || (೧-೫೩)

ಛಂದದಳಂಕಾರಂ ಕರ।
ಮೊಂದಿ ಮನೋಜಾಗಮೋಕ್ತಮಂ ಲೌಕಿಕಮಂ ||
ಸಂಧಿಸಿ **ನೀತಿಗೊಡಂಬಡು।**
**ವಂದದಿ**ನಾರ್ ಪೇಳ್ವರಿಂತು ಚಂದ್ರನ ತೆರದಿಂ || (೧-೫೪)

ಅಧರೀಕೃತ ವಾತ್ಸ್ಯಾಯನ।
ನಧಿಗತ ಕವಿ ಮಾರ್ಗನಖಿಳ ನಾನಾ ಬೋಧ ||
ಕ್ಕಧಿಕೃತಮಿದೆಂದು ಪೇಳ್ವುದು।
ಬುಧ ಮಂಡಳಿ ನಚ್ಚಿ ಮಚ್ಚಿ ಚಂದ್ರನ ಕೃತಿಯಂ || (೧-೫೫)

ಕೃತಿಪತಿ 'ರೇಚನೃಪಂ' ಕವಿ।
ಪತಿ ಚಂದ್ರಂ ತಿರ್ದಿ ಬರೆದವಂ ಬಹ್ಮಂ ಸ ||
ತ್ಕೃತಿ 'ಮದನತಿಲಕ'ಮಿದು ಕಾ।
ಮ ತತ್ತ್ವಮೆನೆ ನಚ್ಚಿ ಮಚ್ಚಿ ಪೊಗಳದರೊಳರೇ (೧-೫೬)

('ಕವಿಚರಿತ'ಕಾರರು "ಮಾಚಿನೃಪಂ" ಎಂದು ಬರೆದಿರುವರು. ನಮ್ಮ ಮಾತೃಕೆಯಲ್ಲಾದರೋ "ರೇಚನೃಪ", "ರೇಚಿಗ" ಎಂದೇ ಎಲ್ಲಾ ಕಡೆಯೂ ಇದೆ.)

**ಕಾದಂಬರಿಯ ನಾಗವರ್ಮ** (ಕ್ರಿ. ಶ. ಸು. ೧೦೧೪).— ಕನ್ನಡ ಸಾಹಿತ್ಯದಲ್ಲಿ ನಾಗವರ್ಮನೆಂಬ ಹೆಸರುಳ್ಳ ಇಬ್ಬರು ಕವಿಗಳಿದ್ದಂತೆಯೂ, ಮೊದಲನೆಯವನು 'ಛಂದೋಂಬುಧಿ'ಯನ್ನೂ 'ಕಾದಂಬರಿ'ಯನ್ನೂ ಬರೆದವನೆಂದೂ, ಎರಡನೆಯವನು 'ಕಾವ್ಯಾವಲೋಕನ,' 'ವಸ್ತುಕೋಶ,' 'ಕರ್ಣಾಟಕ ಭಾಷಾಭೂಷಣ'ಗಳನ್ನು ಬರೆದವನೆಂದೂ 'ಕವಿಚರಿತ'ಕಾರರು ಪ್ರತಿಪಾದಿಸಿರುತ್ತಾರೆ. ಪಾ॥ ವೆಂಕಟಸುಬ್ಬಯ್ಯನವರಾದರೋ ಒಬ್ಬನೇ ನಾಗವರ್ಮನೆಂದೂ, ಮೇಲೆ ಹೇಳಿದ ಎಲ್ಲ ಗ್ರಂಥಗಳೂ ಅವನೊಬ್ಬನದೇ ಎಂದೂ ವಾದಿಸಿರುವರು. ನಮ್ಮದು ಮೂರನೆಯ ಪಂಥ. ಪ್ರಕೃತದಲ್ಲಿ ಎಲ್ಲಾ ಗ್ರಂಥಗಳನ್ನೂ ಕುರಿತು ವಿಚಾರಮಾಡುವ ಆವಶ್ಯಕತೆಯಿಲ್ಲವಾದ ಕಾರಣ 'ಛಂದೋಂಬುಧಿ'ಯನ್ನು ಬರೆದ ನಾಗವರ್ಮನೇ 'ಕಾದಂಬರಿ'ಯನ್ನೂ ಬರೆದವನಿರಬಹುದೇ? ಇಷ್ಟನ್ನು ಮಾತ್ರ ವಿಮರ್ಶಿಸುವ. ಈ ವಿಚಾರದಲ್ಲಿ ಪಾ॥ ವೆಂಕಟಸುಬ್ಬಯ್ಯನವರು ಗ್ರಂಥರಚನೆಯಲ್ಲಿ ದಂಡಿಯನ್ನು ಅನುಕರಿಸಿದ ನಾಗವರ್ಮನು ಅವನಂತೆಯೇ ಛಂದೋಗ್ರಂಥ, ಅಲಂಕಾರಗ್ರಂಥ, **ಗದ್ಯ**ಗ್ರಂಥ, ಇವು ಮೂರನ್ನೂ ರಚಿಸಿರುವುದು **ಸಹಜ**ವಾಗಿಯೇ ಇರುವುದಲ್ಲದೆ, ಇಷ್ಟರಿಂದಲೇ ನಾಗವರ್ಮನು ತೃಪ್ತನಾಗದೆ ಒಂದು ವ್ಯಾಕರಣಗ್ರಂಥವನ್ನೂ ಒಂದು ಅಭಿಧಾನಕೋಶವನ್ನೂ ಬರೆದು ತನ್ನ ಮಾರ್ಗದರ್ಶಿಯಾದ ದಂಡಿಯನ್ನೇ ಮೀರಿಸಿರುವನು—ಎಂಬರ್ಥಕ್ಕೆ ಬರೆದು ಚುಟಿಕೆಯಲ್ಲಿ ಹಾರಿಸಿರುವರು ('ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ', ಪುಟ ೧೬೮). 'ಛಂದೋಂಬುಧಿ'ಯ ನಾಗವರ್ಮನೇ 'ಕಾದಂಬರಿ'ಯ ನಾಗವರ್ಮನೆಂಬುದನ್ನು ಇಷ್ಟರಿಂದಲೇ ಸಿದ್ಧಾಂತಮಾಡಲು ಆಗುವುದಿಲ್ಲ. ಇನ್ನು, 'ಕವಿಚರಿತ'ಕಾರರಾದರೋ—ಕಾದಂಬರಿಯ ಕೊನೆಯಲ್ಲಿ ಹೇಳಿರುವ ಭೋಜರಾಜನು ೧೦ನೆಯ ಶತಮಾನದ ಅಂತ್ಯಭಾಗದಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿಯುವ ಧಾರಾಪುರದ ಭೋಜರಾಜನೇ ಆಗಿರಬಹುದು; ಈ ಕಾರಣದಿಂದ (ಛಂದೋಂಬುಧಿ ಕಾದಂಬರಿಗಳನ್ನು ಬರೆದ) ಈ ನಾಗವರ್ಮನು ಸು. ೯೯೦ರಲ್ಲಿ ಇದ್ದಿರಬೇಕು—ಎಂಬರ್ಥಕ್ಕೆ ಬರೆದಿರುವನು (ಕವಿಚರಿತೆ, I, ಪುಟ ೫೨). ಇದರಿಂದಲೂ ಕಾದಂಬರಿ ಛಂದೋಂಬುಧಿಗಳನ್ನು ಬರೆದವನು ಒಬ್ಬನೇ ನಾಗವರ್ಮನೆಂಬುದು ಸ್ಥಿರಪಡುವುದಿಲ್ಲ. ಆದರೆ ಇತ್ತೀಚೆಗೆ, "ಧಾರಾಪುರದ ಭೋಜರಾಜನು ೧೦೧೦ರಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿವುದರಿಂದ 'ಕಾದಂಬರಿ'ಯನ್ನು ಬರೆದ ನಾಗವರ್ಮನು, ಛಂದೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ"—ಎಂದು ರಾವ್ ಬಹಾದ್ದೂರ್ ಶ್ರೀ ನರಸಿಂಹಾಚಾರ್ಯರವರು ತಮ್ಮ ಮುದ್ರಿಕೆಯನ್ನು

ಬಹು ಸೂಕ್ಷ್ಮವಾಗಿ ತೇಲಿಸಿ ಬತ್ತಿರುವರು. 'ಕವಿಚರಿತೆ'ಕಾರರ ಈ ಊಹೆ ಬಲು ಮಟ್ಟಿಗೆ ಸರಿಯೆಂದು ನಮ್ಮ ಅಭಿಪ್ರಾಯ.

'ಛಂದೋಂಬುಧಿ'ಯ ನಾಗವರ್ಮನೇ 'ಕಾದಂಬರಿ'ಯ ನಾಗವರ್ಮನೂ ಆಗಿದ್ದ ಪಕ್ಷದಲ್ಲಿ ಜಾತಿ, ವಂಶಪರಂಪರೆ, ಪೋಷಕ ಮುಂತಾದ ಪ್ರವರಗಳನ್ನು ತನ್ನ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿರುವ 'ಛಂದೋಂಬುಧಿ'ಕಾರನು 'ಕಾದಂಬರಿ' ಯಲ್ಲಿ ಈ ವಿವರಗಳನ್ನು ಏಕೆ ಹಾಗೆ ಸ್ಪಷ್ಟವಾಗಿ ಹೇಳಿಕೊಳ್ಳಲಿಲ್ಲ? 'ಛಂದೋಂಬುಧಿ' ಯನ್ನು ಮೊದಲು ಬರೆದಿದ್ದರೆ 'ಕಾದಂಬರಿ'ಯಲ್ಲಿ ಆ ಗ್ರಂಥದ ಸೂಚನೆ ಏಕೆ ಕಂಡುಬರುವುದಿಲ್ಲ? ಅಥವಾ, 'ಕಾದಂಬರಿ'ಯನ್ನೇ ಮೊದಲು ಬರೆದಿದ್ದರೆ 'ಛಂದೋಂಬುಧಿ'ಯ-ಸೂಚನೆ ಅದರಲ್ಲಿ ಏಕಿಲ್ಲ? ಎಂಬ ಈ ಪ್ರಶ್ನೆಗಳು ಸಹಜವಾಗಿ ಹುಟ್ಟುವುವು. ಹುಟ್ಟುವ ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನು ಕೊಡುವುದೂ ಕಷ್ಟ. ಅಲ್ಲದೆ, ಇವೆರಡು ಗ್ರಂಥಗಳ ಭಾಷಾ ಶೈಲಿಗಳನ್ನು ವಿಮರ್ಶಕ ದೃಷ್ಟಿಯಿಂದ ಸೂಕ್ಷ್ಮವಾಗಿ ಪರಿಶೀಲಿಸಿದರೆ ಇವು ಬೇರೆ ಬೇರೆ ಕವಿಗಳಿಂದ ರಚಿತವಾದುವೆಂದು ಹೊಳೆಯದೆ ಇರಲಾರದು. 'ಛಂದೋಂಬುಧಿ'ಯ ಪ್ರಕರಣಾಂತ್ಯಗಳಲ್ಲಿರುವ ಗದ್ಯಕ್ಕೂ, 'ಕಾದಂಬರಿ'ಯ ಪೂರ್ವೋತ್ತರ ಭಾಗಾಂತ್ಯದ ಗದ್ಯಕ್ಕೂ ಇರುವ ವ್ಯತ್ಯಾಸವನ್ನೂ ಗಣಿಸಬಹುದು. 'ಛಂದೋಂಬುಧಿ'ಯ ನಾಗವರ್ಮನ ಭಾಗಕ್ಕೆ 'ಅರಸಂ ರಕ್ಕಸ ಗಂಗಂ', 'ಪೊರೆವ ನೃಪಂ ಅಣ್ಣಂ ರಾಯಂ' ಎಂಬವು ಸ್ಪಷ್ಟವಾಗಿರುವಲ್ಲಿ, 'ಕಾದಂಬರಿ'ಯ ನಾಗವರ್ಮನ ಭಾಗಕ್ಕೆ ಈ ವಿವರಗಳು ಸರ್ವಥಾ ಅನ್ವಯಿಸುವುದಿಲ್ಲ. ಈಚಿನ ಶತಮಾನಗಳಲ್ಲಿದ್ದ ಬ್ರಾಹ್ಮಣ ಕವಿಗಳಾದ ರುದ್ರಭಟ್ಟ ಲಕ್ಷ್ಮೀಶರು ತಮ್ಮ 'ಜಗನ್ನಾಥವಿಜಯ', 'ಕನ್ನಡ ಜೈಮಿನಿ ಭಾರತ'ಗಳಲ್ಲಿ ತಮ್ಮ ದೇಶವನ್ನೂ ಪೋಷಕರನ್ನೂ ಶ್ಲೇಷೆಯಿಂದ ಗುಪ್ತವಾಗಿ ಗ್ರಂಥದಲ್ಲಿ ಸೂಚಿಸಿರುವಂತೆ, 'ಕಾದಂಬರಿ'ಯ ನಾಗವರ್ಮನು ಕೂಡ ತನ್ನ ಗ್ರಂಥದಲ್ಲಿ ತನ್ನ ದೇಶವನ್ನೂ ಪೋಷಕನನ್ನೂ ಶ್ಲೇಷೆಯಿಂದ ಸೂಚಿಸಿರುತ್ತಾನೆ. ಇದನ್ನು ಮುಂದಿನ ಪ್ರಕರಣದಲ್ಲಿ ವಿವರಿಸಿದೆ.

'ಕಾದಂಬರಿ'ಯ ನಾಗವರ್ಮನು ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯ ತ್ರಿಭುವನಮಲ್ಲನ ಕಾಲದಲ್ಲಿ (೧೦೭೬-೧೧೨೬), ಅವನ ಸಾಮಂತನೂ ಬನವಾಸಿಯ ನಾಗರಖಂಡದಲ್ಲಿ ಆಳುತ್ತಿದ್ದವನೂ ಆದ **ಚಂದ್ರ**ನೆಂಬ ರಾಜನ ಆಶ್ರಿತನಾಗಿದ್ದು ತನ್ನ ಗ್ರಂಥವನ್ನು ಬರೆದಿರುವನೆಂದೂ, ಅದೇ ಕಾಲದಲ್ಲಿದ್ದ ಮಾಳವಾಧೀಶನಾದ ಧಾರಾಪುರದ ಪರಮಾರ ವಂಶದ ಭೋಜರಾಜನಿಂದ(೧೦೧೦-೧೦೫೦) ವಿದ್ವತ್ಸಭಾ ಮಂಡಲಿಯಲ್ಲಿ ಸನ್ಮಾನಿತನಾದನೆಂದೂ ಈ ಗ್ರಂಥಸ್ಥ ಪ್ರಮಾಣಗಳಿಂದ ತಿಳಿಯಬಹುದಾಗಿದೆ. ಕವಿ ಅದ್ವೈತ ಬ್ರಾಹ್ಮಣನೆಂಬುದು ಕೂಡ ಅದರಿಂದಲೇ ಸಿದ್ಧವಾಗುತ್ತದೆ. ಇವುಗಳನ್ನು ಪ್ರಮಾಣೀಕರಿಸುವುದಕ್ಕೆ ಯೋಗ್ಯವಾದ ಗ್ರಂಥಸ್ಥ ಪದ್ಯಗಳನ್ನೂ ಪದ್ಯ ಭಾಗಗಳನ್ನೂ ಉದಾಹರಿಸುವುದಕ್ಕೆ ಮೊದಲು, ಆ ಕಾಲದ ಕಲ್ಯಾಣ ಚಾಲುಕ್ಯ ವಂಶದ ಮೂವರು ಚಕ್ರವರ್ತಿಗಳ ಹೆಸರನ್ನೂ ಕಾಲ

ವನ್ನೂ ಇಲ್ಲಿ ತಿಳಿಸುತ್ತೇವೆ. ೫ನೆಯ ವಿಕ್ರಮಾದಿತ್ಯ ತ್ರಿಭುವನಮಲ್ಲ (೧೦೦೯–೧೦೧೪); ಅನಂತರ, ಜಯಸಿಂಹ ಜಗದೇಕಮಲ್ಲ (೧೦೧೫–೧೦೪೨); ತರುವಾಯ, ಸೋಮೇಶ್ವರ ತ್ರೈಲೋಕ್ಯಮಲ್ಲ ಆಹವಮಲ್ಲ (೧೦೪೨–೧೦೬೮). 'ಕಾದಂಬರಿ'ಯ ನಾಗವರ್ಮನು ಬನವಾಸಿಯ ನಾಗರಖಂಡವನ್ನು ಆಳುತ್ತಿದ್ದ ಸಾಮಂತ ಚಂದ್ರ ರಾಜನ ಆಶ್ರಿತನೆಂಬುದನ್ನು ಈ ಕೆಳಗಿನ ಪದ್ಯಭಾಗಗಳಿಂದ ತಿಳಿಯಬಹುದು. ಪಂಪ, ರನ್ನರು ತಂತಮ್ಮ ಪೋಷಕರನ್ನು ಅರ್ಜುನ ಭೀಮರಿಗೆ ಹೋಲಿಸಿ ಹೇಗೆ ಗ್ರಂಥವನ್ನು ಬರೆದಿರುವರೋ ಹಾಗೆಯೇ ನಾಗವರ್ಮನೂ ತನ್ನ ಪೋಷಕನಾದ ಚಂದ್ರನನ್ನು ಚಂದ್ರಾಪೀಡನಿಗೆ ಶ್ಲೇಷೆಯಿಂದ ಹೋಲಿಸಿ ಗ್ರಂಥವನ್ನು ಬರೆದಿರುವನು. ಗ್ರಂಥಾದ್ಯಂತವೂ ತ್ರಿಭುವನಮಲ್ಲ, ವಿಕ್ರಮಾದಿತ್ಯ, ಚಂದ್ರ, ನಾಗ ಎಂಬ ಶಬ್ದಗಳು ಅಡಿಗಡಿಗೆ ಧ್ವನಿತವಾಗಿ ಕನ್ನಡ ಕಾದಂಬರಿಗೆ ಉತ್ತಮ ಕಾವ್ಯ ವೆಂಬ ಬೆಡಗನ್ನು ಉಂಟುಮಾಡಿಕೊಟ್ಟಿವೆ:—

**ಕವಿಯ ಪೋಷಕನು ಚಂದ್ರನು ಬನವಾಸಿಯ ನಾಗರಖಂಡದವನು ಎಂಬುದಕ್ಕೆ ಗ್ರಂಥಸ್ಥ ಪ್ರಮಾಣಗಳು.—**

'ಶ್ರೀಮ**ನ್ನಾಗೇಂದ್ರ** ಭೋಗಸ್ಫುರದರುಣ ಮಣಿದ್ಯೋತಿ **ಸಂಧ್ಯಾ** ನಿಬದ್ಧ ಪ್ರೇಮಂ'

ಸೂರ್ಯಾಸ್ತ ಸಂಧ್ಯಾಕಾಲದ ಕೆಂಪು ಬಣ್ಣದ ಬೆಡಗನ್ನು ಪಶ್ಚಿಮ ಸಮುದ್ರದ ಬಳಿಯಲ್ಲಲ್ಲವೇ ನೋಡಬೇಕು?

'ಪ್ರೋದ್ವೃತ್ತರಂಗೋಚ್ಚ್ಛರದ**ಮರ ನದೀ** ಶೀಕರೋದಾರ ತಾರಾರಾಮಂ'

('ಗಂಗಾವಳಿ' ಎಂಬ ನದಿ ಈಗಿಗೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಇದ್ದೇ ಇದೆ.)

'ಹೇಮ ಪ್ರಭಾ ಪ್ರಸ್ಫುರಿತ ಗಿರಿಶ ಚಂಚಜ್ಜ**ಟಾ ಜಾಲ ಜೂಟ** ವ್ಯೋಮ ಪ್ರೋದ್ಭಾಸಿ ಚಂದ್ರಂ'

(ಪಶ್ಚಿಮ ಘಟ್ಟದಲ್ಲಿರುವ ಉದ್ದುದ್ದವಾದ ಮರಗಳನ್ನೂ ತೆಂಗು ಅಡಕೆಯ ಮರಗಳನ್ನೂ ಹೋಲಿಸಿ)

'**ತ್ರಿಭುವನ** ಜನಕಾನಂದಮುಂ ಮಾಡುಗೆಂದುಂ'

(ಶ್ಲೇಷೆಯಿಂದ ಚಾಲುಕ್ಯ ಚಕ್ರವರ್ತಿ **ತ್ರಿಭುವನಮಲ್ಲ**ನ ಹೆಸರನ್ನು ಹೇಳಿದೆ (**ಪೂ. ಭಾ.** ೧).

'ಕೃತಿಪತಿ ನರೇಂದ್ರ **ಚಂದ್ರಂ'** [೨].
'ರಾಜೇಂದ್ರ **ಚಂದ್ರಾಂ**ಕನಾ' [೨೮].
'ಮನುಜೇಂದ್ರ **ಚಂದ್ರ**ನಂ' [೮೩].

'ಕಂದ **ಚಂದ್ರ**ನೆಸಲುಂ **ತ್ರೈಲೋಕ್ಯ**ದಿಂ ವಂದನೀಯನೆ'
(ತ್ರೈಲೋಕ್ಯ=ಚಾಳುಕ್ಯ ರಾಜ್ಯ) [ಉತ್ತರ ಭಾಗ–೭೯].

'ಎರೆಯಂ **ತ್ರೈಲೋಕ್ಯ**ರಾಜ್ಯಕ್ಕೆನಿಸಿದ ವಿಭುವಿಂಗೇನನಿತ್ತು..ರಾಜೇಂದ್ರ **ಚಂದ್ರಂ**' [ಉ. ಭಾ. ೮೧೦].

'**ಜಗತ್**ಸ್ತುತನಾದ **ನಾಗಪೂಜ್ಯಂ** ಕೃತಿಪಂ ತಾಂ ಸುಖದಿನಿರ್ಕೆ....' (ಭರತವಾಕ್ಯ: ಪೋಷಕನಾದ **ನಾಗರಖಂಡದ ಚಂದ್ರ**ರಾಜನಿಗೆ ಮಂಗಳ) [ಉ. ಭಾ. ೮೨೬].

ಕಲ್ಯಾಣ ಚಾಲುಕ್ಯರ **ವಿಕ್ರಮಾಂಕ,** ಅಥವಾ **೫ನೆಯ ವಿಕ್ರಮಾದಿತ್ಯ ತ್ರಿಭುವನಮಲ್ಲ**ನ (೧೦೦೯–೧೦೧೪) ಹೆಸರು ಶ್ಲೇಷಾತ್ಮಕವಾಗಿ ಬಂದಿರುವ ಪದ್ಯ ಭಾಗಗಳು ಯಾವುವೆಂದರೆ:—

'ಚಂದ್ರಂ **ತ್ರಿಭುವನ ಜನಕಾ**ನಂದಮಂ ಮಾಡುಗೆಂದುಂ' (ಪೂ. ಭಾ. ೧).

'ಸತತ ಗಭೀರ ವೃತ್ತಿಯಿನುದಾರತೆಯಿಂ **ಜಗದೇಕ** ಜೀವನಸ್ಥಿತಿಯಿನತಿ ಪ್ರಸಾದ ಗುಣದಿಂ..'

(**ಜಗದೇಕಮಲ್ಲ**ನು (೧೦೧೫–೧೧೪೨) ತ್ರಿಭುವನಮಲ್ಲನ ಕಾಲದಲ್ಲಿ ಯುವರಾಜನು) [ಪೂ. ಭಾ. ೨].

'ಆಕ್ರಾಂತ ಸಮಸ್ತ ಜಗಚ್ಚಕ್ರಂ ನೃಪನೊಂದೆ **ವಿಕ್ರಮಂ** ನಗುತಿರ್ಕುಂ' (ಇದು ಮೂಲದ ಅನುವಾದವಾದರೂ ಚಾಲುಕ್ಯ ಚಕ್ರವರ್ತಿಯು ಈ ಬಿರುದಿನ ಹೆಸರಿಗೆ ಹೊಂದುವುದು. ಉತ್ತರ ಭಾಗದ ೮೨೪ನೆಯ ಪದ್ಯವನ್ನು ನೋಡಿ) [ಪೂ. ಭಾ. ೯].

'**ತ್ರಿಭುವನ** ಪ್ರಸವಕ್ಕಿದು ಭೂಮಿ' [೧೫].
'**ವಿಕ್ರಮಾಂಕಂ**' [೨೬].
'ಇದು ಮೂಲೋಕಕ್ಕಮೊಂದಚ್ಚರಿಯೆನಿಸಿ..**ತ್ರಿಭುವನ**ಕ್ಕಾಶ್ಚರ್ಯಂ'
[೫೦].
'**ಭುವನತ್ರಯ**ಮನತ್ಯುತ್ಸವದಿಂದಂ' [೧೨೩].
'**ತ್ರಿಭುವನ**ಮೆಲ್ಲಮಂ ತೆಕ್ಕನೆ ತೀವುವಾನಂದ ಬಹುಳ ಕೋಲಾಹಲಂ'
[೪೧೦].
'**ಭುವನತ್ರಯ** ಮಂಗಳಾಭಿರಾಮಮಿದೆನೆ' [೪೪೨].
'**ತ್ರೈಲೋಕ್ಯ ಸಾಮ್ರಾಜ್ಯದ** ಫಳಮೆನಿಪ' [೫೫೭].
'**ಭುವನತ್ರಯಂ** ಜಯಸ್ವರಮಯಂ' [೬೦೧].
'ಶೈಲಗೃಹ ನಿಕಾಯ ತಾರಾಂಕ **ಜಗತ್ರಿತಯಮಂ**' [೬೩೧].
'**ತ್ರಿಭುವನ ಪ್ರಾಸಾದ** ರಮ್ಯಪ್ರಣಾಳದವೋಲ್ ಕಣ್ಗೆಸೆವಿಂದುಮಂಡಲನಿಂ'
[೮೮೯].

'**ಭುವನತ್ರಯಮುಮಂ** ನೋಡಲ್ಕೆ' [ಉ. ಭಾ. ೧].
'**ತ್ರಿಭುವನ** ವಿಜಯ ಪ್ರಶಸ್ತಿ' [ಉ. ಭಾ. ೧೧].
'**ಭುವನಾಧೀಶ್ವರ** ಸುತಂ'

('ಸುತಂ' ಎಂಬಲ್ಲಿ ಪ್ರೀತಿ ಪಾತ್ರನಾದ ಸಾಮಂತರಾಜ **ಚಂದ್ರ**ನೆಂದು ಧ್ವನಿಸುವುದು.) [ಉ. ಭಾ. ೫೪].

'**ಭುವನತ್ರಯಾಂ**ತರಾಳ ಪ್ರವಿದಿತ ನಿಜ ಮಹಿಮಂ' [ಉ. ಭಾ. ೧೧೧].

'ಅಮೃತಾಸಾರದಿನಾವಗಂ **ತ್ರಿಭುವನ**ಕ್ಕಾನಂದಮಂ ಮಾಳ್ಪ ತನ್ನ ಮರೀಚಿ ಪ್ರಕರಂಗಳಿಂದೆ'

(**ತನ್ನ** ಎಂಬಲ್ಲಿ ಚಂದ್ರನೆಂಬರ್ಥ.) [ಉ. ಭಾ. ೫೬೪].
'**ಕಂದ ಚಂದ್ರ**ನೆನಲುಂ **ತ್ರೈಲೋಕ್ಯ**ದಿಂ ವಂದನೀಯನೆ'

(ಚಂದ್ರನು ಚಾಲುಕ್ಯ ಚಕ್ರವರ್ತಿಯ ಪ್ರಿಯ ಸಾಮಂತನೆಂಬ ಧ್ವನಿ) [ಉ. ಭಾ. ೭೯೯].

'**ಭುವನತ್ರಯ**ದೊಳ್' [ಉ. ಭಾ. ೮೦೫].

'ಎರೆಯಂ **ತ್ರೈಲೋಕ್ಯ ರಾಜ್ಯ**ಕ್ಕೆನಿಸಿದ ವಿಭುವಿಂಗೇನನೆತ್ತು.. ರಾಜೇಂದ್ರ **ಚಂದ್ರಂ**ಗೆ' [ಉ. ಭಾ. ೮೧೦].

ಹೀಗೆ **ತ್ರಿಭುವನ, ಭುವನತ್ರಯ, ತ್ರೈಲೋಕ್ಯ** ಎಂಬ ಶಬ್ದಗಳು ಆ ಕಾಲದ ಚಾಲುಕ್ಯ ಚಕ್ರವರ್ತಿ, ಅಥವಾ ಚಾಲುಕ್ಯ ಸಾಮ್ರಾಜ್ಯ ಎಂಬ ಸಮಯೋಚಿತವಾದ ಅರ್ಥದಲ್ಲಿಯೂ ಬಂದಿವೆ.

ಇನ್ನು, ಮೂಲ 'ಕಾದಂಬರಿ'ಯ ಪಾತ್ರ ಸನ್ನಿವೇಶಗಳನ್ನು ನಾಗವರ್ಮನ ಪೋಷಕನಾದ ಸಾಮಂತ ರಾಜ **ಚಂದ್ರ**ನಿಗೂ, ಆ ಕಾಲದ ಚಕ್ರವರ್ತಿ **ತ್ರಿಭುವನಮಲ್ಲ**ನಿಗೂ, ಅವನ ಸಾಮ್ರಾಜ್ಯದ ಸನ್ನಿವೇಶಗಳಿಗೂ ಚತುರತೆಯಿಂದ ವಿಸ್ತರಿಸಿ ಹೊಂದಿಸಿಕೊಳ್ಳುವ ವಿಚಾರದಲ್ಲಿ ನಾಗವರ್ಮನೇ ಧ್ವನಿತ ಮಾಡಿ ಈ ಮುಂದಣ ಪದ್ಯದಲ್ಲಿ ಅನುಜ್ಞೆ ಕೊಟ್ಟಿರುತ್ತಾನೆ:—

"..........................ಮತ್ತೆ ಕರ್ಣಾಟ ಭಾಷಾ॥
ಚತುರತ್ವಂ ಪೂರ್ವ ಕಾದಂಬರಿ **ಪಸರಿಸಿ** ರಾಜೇಂದ್ರ **ಚಂದ್ರಾಂಕ**ನೊಳ್ **ಸಂ**।
**ಗತಿವೆತ್ತಾದಂ ತ್ರಿಲೋಕೀ ಸಹಚರಿ**ಯೆನೆ ತಾಂ ಸಂದು ದಾಚಂದ್ರತಾರಂ॥"
[ಉ. ಭಾ. ೮೨೪]

ಪೂರ್ವ ಭಾಗದ ೫೫ನೆಯ ಪದ್ಯದಲ್ಲಿಯೂ 'ಕರ್ಣಾಟಕ ಕಾದಂಬರಿ'ಯ ಚಮತ್ಕೃತಿಯನ್ನೂ ಸೊಬಗನ್ನೂ ನಿರ್ದೇಶಿಸಿರುತ್ತಾನೆ:—

"ಕಂ|| ಸತ್ಕೃತಿ ಸಂಸ್ಕೃತದಿಂದೆ ಜ।
ಗತ್ಕೌತುಕವಾಗಿ **ಮತ್ತೆ** ಕರ್ಣಾಟದೊಳಂ ||
ಸತ್ಕವಿ ನಿವಹಂ ಪೊಗಳೆ ಜ।
**ಮತ್ಕೃತಿಯಂ** ಪಡೆದು **ಸೊಬಗುವಡೆದತ್ತೀಗಳ್** || "

**ಕರ್ಣಾಟಕ ಕಾದಂಬರಿಯ ಕಾಲ ನಿರ್ಣಯ.**—ಉತ್ತರ ಭಾಗದ ೮೨೫ನೆಯ ಪದ್ಯದಲ್ಲಿ ನಾಗವರ್ಮನು—

"ಇವು ನಾನಾ ಶಾಸನಂ ಸತ್ಕೃತಿ ವನಿತೆಗಿವೌಚಿತ್ಯವೆಂದಿತ್ತಸತ್ಪು।
ತ್ಸವಧಿಂ ವಿದ್ವತ್ಸಭಾ ಮಂಡಲಿ ತಣಿವಿನೆಗಂ **ಭೋಜರಾಜಕ್ಷಿತೀಶಂ** ||

ಎಂದು ಹೇಳಿದ್ದಾನೆ. ಈ ಭೋಜರಾಜನು. ಹಿಂದೆಯೇ ಹೇಳಿದಂತೆ, ಪರಮಾರ ವಂಶದವನು, ಮಾಳವಾಧೀಶನು, ಧಾರಾಪುರದಲ್ಲಿ (೧೦೧೦–೧೦೫೦) ಆಳುತ್ತಿದ್ದವನು. ಇವನನ್ನು ಚಾಳುಕ್ಯರ ಜಯಸಿಂಹ ಜಗದೇಕಮಲ್ಲನು (೧೦೧೫–೧೦೪೨) ಇದಿರಿಸಿದನು. ಜಗದೇಕಮಲ್ಲನ ಮಗನಾದ ಸೋಮೇಶ್ವರ ತ್ರೈಲೋಕ್ಯಮಲ್ಲ ಆಹವಮಲ್ಲನು (೧೦೪೨–೧೦೬೮) ಈ ಭೋಜರಾಜನನ್ನು ಸೋಲಿಸಿ ಇವನ ರಾಜಧಾನಿಯಾದ ಧಾರಾಪಟ್ಟಣವನ್ನು ಹಿಡಿದುಕೊಂಡನು. ಚಾಲುಕ್ಯರಿಗೂ ಭೋಜರಾಜನಿಗೂ ಶತ್ರುತ್ವವುಂಟಾಗುವುದಕ್ಕೆ ಮುಂಚೆ, ಎಂದರೆ ಜಯಸಿಂಹ ಜಗದೇಕಮಲ್ಲನು ಯುವರಾಜನಾಗಿದ್ದಾಗ, ಎಂದರೆ ತ್ರಿಭುವನಮಲ್ಲ ವಿಕ್ರಮಾದಿತ್ಯನ ಆಳಿಕೆಯಲ್ಲಿ (೧೦೦೯–೧೦೧೪) ನಾಗವರ್ಮನ 'ಕರ್ಣಾಟಕ ಕಾದಂಬರಿ' ಹುಟ್ಟಿರಬೇಕು; ಎಂದರೆ, ಇದರ ಪರಮಾವಧಿಕಾಲ ಕ್ರಿ. ಶಕ ೧೦೧೪ ಅಥವಾ, ಅದಕ್ಕೆ ೨–೩ ವರ್ಷಗಳ ಹಿಂದೆಯೇ ಹೊರತು ೧೦೧೪ರಿಂದೀಚೆಗಂತೂ ಅಲ್ಲ.

**ನಾಗವರ್ಮನ ದೇಶ.**—ಬಾಣಕವಿಯ ಸಂಸ್ಕೃತ ಮೂಲ ಕಾದಂಬರಿಗೂ, ನಾಗವರ್ಮನ ಕರ್ಣಾಟಕಾನುವಾದಕ್ಕೂ ವರ್ಣನಾ ಭಾಗಗಳಲ್ಲಿ ಅಲ್ಲಲ್ಲಿ ವ್ಯತ್ಯಾಸವು ಕಾಣಬರುತ್ತದೆ. ಕನ್ನಡ ಗ್ರಂಥದಲ್ಲಿ ಮೊದಲಿನ ಏಳು ಪದ್ಯಗಳಂತೂ ಬೇರೆಯೇ ಆಗಿವೆ. ಹಾಗೆಯೇ, ಕಡೆಯ ನಾಲ್ಕು ಪದ್ಯಗಳೂ. ಮೊದಲನೆಯದಾದ ನಾಂದೀ ಪದ್ಯದಲ್ಲಿರುವ 'ಅರುಣ ಮಣಿದ್ಯೋತಿ ಸಂಧ್ಯಾ ನಿಬದ್ಧ ಪ್ರೇಮಂ' 'ಅಮರ ನದೀ ಶೀಕರೋದಾರ ತಾರಾರಾಮಂ', 'ಗಿರಿಶ ಜಂಜಜ್ಜಟಾ ಜಾಲ ಜೂಟ ವ್ಯೋಮ ಪ್ರೋದ್ಭಾಸಿ ಚಂದ್ರಂ' ಎಂಬ ವಿಶೇಷಣಗಳು ಶ್ಲೇಷಾತ್ಮಕವಾಗಿಯೂ ಧ್ವನಿ ಪೂರ್ವಕವಾಗಿಯೂ ಪಶ್ಚಿಮ ಸಮುದ್ರದಲ್ಲಿ ಅಸ್ತಮಿಸುವ ಸೂರ್ಯನ ಸಂಧ್ಯಾಕಾಲದ ಸೊಬಗನ್ನೂ, ಉತ್ತರ ಕನ್ನಡ ಜಿಲ್ಲೆಯಲ್ಲಿ ಈಗಲೂ ಇರುವ 'ಗಂಗಾವಳೀ' ನದಿಯನ್ನೂ, ಪಶ್ಚಿಮ ಘಟ್ಟಗಳ ಮೇಲೆ ಉನ್ನತೋನ್ನತವಾದ ಶಾಖೋಪಶಾಖೆಗಳಿಂದ ಬೆಳೆದಿರುವ ವೃಕ್ಷಾಗ್ರಗಳಲ್ಲಿ ಹೊಳೆಯುವ ಚಂದ್ರನನ್ನೂ ಸೂಚಿಸುತ್ತವೆಯೆಂದು ಹಿಂದೆಯೇ ತಿಳಿಸಿದ್ದೇವೆ. ಕವಿ ಸ್ವಾನುಭವದಿಂದ ಪಶ್ಚಿಮಾಚಲದ ವರ್ಣನೆಯನ್ನು ಮಾಡಿರುತ್ತಾನೆ:—

"ತುರುಗಿದ ತಾರಾ ಪುಂಜದೆ।
ಮಿರುಗುತ್ತಿರ್ದಪುದೊ **ಪಶ್ಚಿಮಾದ್ರೀಂದ್ರ**ಮೆನಲ್ ॥"

[ಪೂ. ಭಾ. ೩೨].

"………………**ಮಲಯಾದ್ರಿ ನಿಕುಂಜ ದೇಶದಂ**।
ತೆವೊಲತಿ ಸೌರಭಾಕಲಿತ ಚಂದನ ಶೀತ ವನಂ ಸರೋವರಂ ॥"

[ಪೂ. ಭಾ. ೬೪೨].

ಪಶ್ಚಿಮ ಘಟ್ಟದಲ್ಲಿ ಹರಿವ 'ಗಂಗಾವಳೀ ನದಿ' ಯು ಉಪಮಾನವೂ ರಮ್ಯವಾಗಿದೆ (ಪದ್ಯ ೪೯೬).—

"ಕಂ॥ ಎರಡುಮಚಲಂಗಳೆಡೆಯೊಳ್।
ಪರಿ**ವಮರನದೀ ಪ್ರವಾಹ**ದಿಂದೆಸೆವ ವಸುಂ॥
ಧರೆಯುಂದದಿನಲಘು ಪಯೋ।
ಧರ ವಿಲಸಿತ ಹಾರ ಲತಿಕೆ ಸತಿ ಸೊಗಯಿಸಿದಳ್ ॥"

ಪಶ್ಚಿಮ ಘಟ್ಟ ಪ್ರಾಂತದ ಬನವಾಸಿದೇಶದಲ್ಲಿದ್ದ ಕವಿಗೆ **'ವನ ವರ್ಣನೆ'**ಯಲ್ಲಿಯೂ (ಪೂ. ಭಾ. ೯೩–೧೧೬), **'ಸಂಧ್ಯಾಕಾಲ ವರ್ಣನೆ'**ಯಲ್ಲಿಯೂ (ಪೂ. ಭಾ. ೨೭೧–೨೮೧; ೫೦೭–೫೧೪; ೮೬೮), **'ಸರೋವರ ವರ್ಣನೆ'**ಯಲ್ಲಿಯೂ (ಪೂ. ಭಾ. ೬೩೪–೬೪೪), **'ವರ್ಷಾಕಾಲ ವರ್ಣನೆ'**ಯಲ್ಲಿಯೂ (ಉ. ಭಾ. ೫೨೮–೫೩೪) ಸಹಜವಾಗಿ ಎಷ್ಟು ಪ್ರೀತಿಯೂ ನೈಪುಣ್ಯವೂ ಇರುತ್ತವೆಯೆಂಬುದನ್ನು ಕಾವ್ಯ ಪರಿಣತರು ಓದಿ ಆನಂದಿಸಬಹುದು. ಹಾಗೆಯೇ, (ಪೂ. ಭಾ. ೫೮೧ನೆಯ ಪದ್ಯದಲ್ಲಿ) ಮುಂದೆ ಹೇಳುವ ಉಪಮಾನವು ಕವಿಗೆ ಸಹಜವಾಗಿ ಕೈಗೂಡಿ ಬಂದಿದೆ :—

"ಕಂ॥ ಮರದಿಂ ಮರಕ್ಕೆ ದಾಂಗುಡಿ।
ವರಿವೆಳ ಲತೆಯಂತೆ **ನೀತಿ ಮಾಂಧಾತ**ನೊಳಾ ॥
ವರಿಸಿರ್ದು **ರಾಜ ವಿದ್ಯಾ**।
**ಧ**ರನಲ್ಲಿಗೆ ರಾಜ್ಯಲಕ್ಷ್ಮಿ ನಿಲುಕಿದಳಾಗಳ್ ॥"

ಹಾಗೆಯೇ, ಬಾಣ ಕವಿ ಸಂಸ್ಕೃತಗ್ರಂಥದಲ್ಲಿ ವಿಂಧ್ಯಾಟವಿಯನ್ನು ವರ್ಣಿಸಿದ್ದರೆ, ಚತುರನಾದ ನಾಗವರ್ಮನು ಆ ವನ ವರ್ಣನೆಯ ವ್ಯಾಜದಿಂದ ಪಶ್ಚಿಮ ಘಟ್ಟ ಪ್ರಾಂತದ ಬನವಾಸಿ ದೇಶದೊಳಗಣ ಅಡವಿಯನ್ನು ಗೋದಾವರಿ(ಪಂಚವಟಿ)ಯಿಂದ ಕೇರಳ ದೇಶದ ವರೆಗೆ ವರ್ಣಿಸಿರುವನು. (ಪೂರ್ವ ಭಾಗದ ಪದ್ಯಗಳು ೯೩–೧೦೯, ೧೨೮, ೧೫೭, ೨೧೫–೨೧೬, ೨೨೨, ೨೨೮, ೨೨೯–೨೫೭, ೨೯೮–೯, ೨೯೪). ನಾಗವರ್ಮನ ಕಾಲದಲ್ಲಿ ಈಗಿನಂತೆ ಉತ್ತರ ಕನ್ನಡ, ದಕ್ಷಿಣ ಕನ್ನಡ ಜಿಲ್ಲೆಗಳೆಂಬ ಭೇದವಿರಲಿಲ್ಲ. ಉತ್ತರಕ್ಕೆ ಬನವಾಸಿ ದೇಶವೂ, ದಕ್ಷಿಣಕ್ಕೆ ಕೇರಳಕ್ಕೆ ಹೊಂದಿ ತೌಳವ ದೇಶವೂ ಇದ್ದುವು. ಈ ಪ್ರಾಂತದ ಅಡವಿಗಳನ್ನೂ ತಪೋ

ವನಗಳನ್ನೂ ನಾಗವರ್ಮನು ವರ್ಣಿಸಿರುವುದು ಸಹಜವಾಗಿಯೇ ಇದೆ. ಬಿದಿರು, ತೆಂಗು, ಅಡಕೆ, ವೀಳೆಯದೆಲೆಯ ಬಳ್ಳಿ, ಮೆಣಸಿನ ಬಳ್ಳಿ, ಪಲಕ್ಕಿ, ದರ್ಭೆ, ಬಿಲ್ವ (ಬೂರುಗ), ಗುಂಗುರು (ಕಣ್ಣನ್ನು ಪೀಡಿಸುವ ಸಣ್ಣ ನೊರಜು), ಬಾಳೆ, ಕದಳೀ ವನ, ಪಿಪ್ಪಲಿ, ಪಿಪ್ಪಲೀ ಪತ್ರಮಾಲೆ, ಚಂದನ (ಶ್ರೀಗಂಧ), ಹಂದಿಗೆಡ್ಡೆ—ಇವೇ ಮುಂತಾದುವು ಪಶ್ಚಿಮ ಘಟ್ಟದ ಕಾಡುಗಳಲ್ಲಿ ಹೊರತು ಮತ್ತೆಲ್ಲಿ ಒಟ್ಟಿಗೆ ಕಾಣಬರುವುವು?—

'**ಮರಿಚ ಲತಾ** ಪ್ರಚಯ' (೯೫), 'ಸೊಕ್ಕನಾಳ್ದ **ಕೇರಳಿಯರ** ಕದಪಿನ ಬಣ್ಣಮನಪ್ಪ **ಚೆಂದಳಿರ್ದುರುಗಲ್**' (೯೬), '**ಎಳಗೌಂಗಿನ ಹೊಂಗೇದಗೆಯ** ಬಳಸಿನೊಳಂ **ಎಲೆವಳ್ಳಿಯ** ತಳ್ಕಿನಿಂ'[೯೭],'ಕತ್ತುಲಿಪುದು ಪುದಿ**ದೇಲಾ ಲತಾ ವನ** ಪ್ರೋದ್ಯಾನಂ (೯೮), 'ವಾಸರ ಭಜ್ಯಮಾನ **ತುಂಗ ಸಾಲಮುಂ**', '**ಮಹಾ ವರಾಹ** ಸಮುತ್ಪಾತ ಧರಣೀ ಮಂಡಲಮುಂ', '**ವೇತ್ರ ಲತಾ** ದುಷ್ಪ್ರವೇಶಮುಂ', '**ವಿರಾಟ ನಗರಿ**ಯಂತೆ (ಹಾನಗಲ್) **ಕೀಚಕಾ**ವೃತಮುಂ (ಬಿದಿರು), ದರ್ಭ ಚೀರ ಜಟಾ ವಲ್ಕಲ ಧಾರಿಯುಂ, '**ಅಪರಿಮಿತ ಪತ್ರ** ಸಂಚಯಮವಾಗಿಯುಂ, **ಸಪ್ತ ಪರ್ಣೋಪ** ಶೋಭಿತಮುಂ' (೧೦೦), 'ಏಲಾ ಲತಾ ಕುಲ ಪೂಗದ್ರುಮ ನಾಳಿ ಕೇರ ಬಹುಳಂ' (೨೧೫), 'ಹಂದಿಗೆಡ್ಡೆಯುಂ ದಾಡೆಯಿಂದಗುಳ್ದು ಸೀಡುವ ವನ ವರಾಹಂಗಳಿಂ' (೨೨೨), 'ಕದಳೀ ವನಂಗಳೊಳ್ ಸಯನ ರಾಗಂ' (೨೨೮), 'ಎಳವುಲ್ಲ ಸುಣ್ಬಸಲೆ' (೨೮೭), 'ಪಾವು', 'ಪೀಲಿಗಣ್ಗಳ ಪರಭಾಗದಿಂದೆಸೆದು ತೋರುವ ಸೋಗೆ' (೨೫೭), 'ಮಿಸುಪ ಕದಳೀ ವನಂಗಳ ಪಸುರಿಂ' (೨೯೯), 'ಪಿಪ್ಪಲೀ ಪತ್ರಮಾಲೆ' (೩೯೪)—

ಇವೇ ಮುಂತಾದ ವರ್ಣನೆಗಳು ಬನವಾಸಿ ದೇಶದಲ್ಲಿ ಹುಟ್ಟಿ ಬಳೆದ ಕವಿಗೆ ಸಾಧ್ಯವೇ ಹೊರತು ಉಳಿದವರಿಗೆ ಸಹಜವಲ್ಲ. ಇವೆಲ್ಲ ಕಾರಣಗಳಿಂದ ನಾಗವರ್ಮನು ಬನವಾಸಿ ದೇಶದವನೇ ಆಗಿರಬೇಕು.

**ನಾಗವರ್ಮನ ಭಾಷಾ ಶೈಲಿ.**—ಗ್ರಂಥವು ಪ್ರೌಢವಾಗಿದ್ದರೂ ಶೈಲಿ ಬಹು ಲಲಿತವಾಗಿದೆ; ಕಥಾ ಸರಣಿಯನ್ನು ಹಿಡಿದು ಓದುವ ಕನ್ನಡಿಗರಿಗೆ ತೊಡಕಾಗುವಂತಿಲ್ಲ. ಹನ್ನೊಂದನೆಯ ಶತಮಾನದ ಪ್ರಾಚೀನ ಕಾವ್ಯದಲ್ಲಿ ಬೇಕಾದ ವ್ಯಾಕರಣದ ಬಿಗಿ ಇದರಲ್ಲಿಲ್ಲ. ಆ ಕಾಲದ ಹೊಸಗನ್ನಡ ರೂಪಗಳನ್ನು ಇದರಲ್ಲಿ ಕಾಣಬಹುದು. ನಮ್ಮ ಕಾಲದ ಹೊಸಗನ್ನಡಕ್ಕೆ ಹೊಂದುವ ರೂಪಗಳನ್ನು ಕೂಡ ಇದರಲ್ಲಿ ಕಾಣಬಹುದು. ವ್ಯಂಜನಾಂತವಾದ ಹಳಗನ್ನಡ ರೂಪಗಳನ್ನು ನಾವು ಈಗ ಹೊಸಗನ್ನಡದಲ್ಲಿ ಬಳಸುವಂತೆ ನಾಗವರ್ಮನು ಸ್ವರಾಂತವಾಗಿ ಪ್ರಯೋಗಿಸಿದ್ದಾನೆ.—

ಉದಾಹರಣೆ: 'ಚಿತ್ರದೊಳ್ ಪರಿದು ಕೌತುಕವಾಗ**ಲು**' (೯೨), 'ಒಕ್ಕ**ಲು** ವೋಗಿಸನೇಕೆ' (೧೮೨), 'ಎನ್ನಯ ತಾ**ಯಿ** ಸತ್ತಳಲಂ' (೧೯೩), 'ನೀರಡಿಕೆ ತಿಣ್ಣಮಾದತ್ತಾಗಳ್' (೧೯೭).

**ಪ್ರಕೃತಿ ಪ್ರಯೋಗಕ್ಕೆ.**—'ನಸುಗೇಳಲಾಯ್ತು.. ಹಂಸಸ್ವನ' (೧೯೬), ಬೇರೊಂದೆಡೆ '**ಎಳೆಯೆಕ್ಕೆಯ** ಕಾಯ್ಗಳಂತೆ' (೧೭೮).

ಭಿನ್ನಕರ್ತೃಕವಿರುವಲ್ಲಿ, "ಅಲ್" ಪ್ರಯೋಗ ದೋಷವು ಈ ಗ್ರಂಥದೊಳಗೆ ಎರಡು ಕಡೆ ಬಂದಿದೆ. ಉದಾಹರಣೆ:—

"..ಕೇಳ್ವಾಳವಳ್ ಮೆಲ್ಲನೆ ಕರತಳಪದ್ಮಂಗಳಿಂ ಪಾದಪದ್ಮಂ।
ಗಳನಂದೊತ್ತುತ್ತಿ**ರಲ್** ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್॥"
[೮೦].

"..ಬೈಗಿನ ಕೆಂಬಿಸಿಲಳು**ರಲೆ**ಸೆದುವಾಶ್ರಮ ತರುಗಳ್" [೨೭೫].

**ನಾಗವರ್ಮನ ಜಾತಿ.**—ನಾಗವರ್ಮನು ಬ್ರಾಹ್ಮಣನೆಂದು ಹಿಂದೆಯೇ ಹೇಳಿದ್ದರೂ, ಅದಕ್ಕೆ ಕಾರಣಗಳನ್ನು ಕೊಟ್ಟಿರುವುದಿಲ್ಲ. ಇವನು ಜೈನನೆಂಬುದಕ್ಕೆ ಗ್ರಂಥದಲ್ಲಾಗಲಿ ಬೇರೆಯೆಡೆಯಲ್ಲಾಗಲಿ ಆಧಾರವಿಲ್ಲ. ಕಾದಂಬರಿಯ ನಾಂದೀ ಪದ್ಯದಿಂದಲೂ, ವೈದಿಕ ಪುರಾಣ ಉಪಾಖ್ಯಾನಗಳಲ್ಲಿ ಬರುವ ಹೆಸರುಗಳನ್ನೂ ಆಚಾರಗಳನ್ನೂ ಒಳಕೊಂಡಿರುವ ಗ್ರಂಥವನ್ನು ಪ್ರೀತಿಯಿಂದ ಅನುವಾದಿಸಿರುವುದರಿಂದಲೂ ಕವಿ ಅದ್ವೈತ ಬ್ರಾಹ್ಮಣನೆಂದು ತೋರುವುದು.

**ಉಪಸಂಹಾರ.**—ಕನ್ನಡ ಸಾಹಿತ್ಯ ನಂದನವನದಲ್ಲಿ ಬಂಜರು ನೆಲವೆಂದು ಇದುವರೆಗೆ ಪರಿಗಣಿತವಾಗಿದ್ದ ಹನ್ನೊಂದನೆಯ ಶತಮಾನವು ಬಂಜರಲ್ಲವೆಂದು ನಿರ್ಧರಿಸಿದಂತಾಯಿತು. ಕನ್ನಡ ಮಾತೆಯ ಸೇವೆಗೆ ಆದಿಯಿಂದಲೂ ಜೈನರ ಮೇಲೆಯೇ ಭಾರವನ್ನು ಹಾಕದೆ ಸಕಾಲದಲ್ಲಿ ಬ್ರಾಹ್ಮಣ ಕವಿಗಳು ಕೂಡ ಮುಂದೆ ಬಂದು ಈ ಪವಿತ್ರ ಕಾರ್ಯವನ್ನು ದಕ್ಷತೆಯಿಂದಲೂ ಉಚಿತಜ್ಞತೆಯಿಂದಲೂ ಕೈಕೊಂಡು, ತಮಗೆ ಕೀರ್ತಿಯೂ ಕನ್ನಡಿಗರಿಗೆ ಆಚಂದ್ರಾರ್ಕವಾಗಿ ಪ್ರಯೋಜನವೂ ಲಭಿಸುವಂತೆ ನಿರ್ವಹಿಸಿರುವರೆಂದು ತಿಳಿದಂತಾಯಿತು. ೧೧ನೆಯ ಶತಮಾನದ ಬ್ರಾಹ್ಮಣ ಕವಿಗಳು ವಿಶೇಷತಃ ಚಾಲುಕ್ಯ ಚಕ್ರವರ್ತಿಗಳ ಅಥವಾ, ಅವರ ಸಾಮಂತರ ಆಶ್ರಯದಲ್ಲಿ ಗ್ರಂಥಗಳನ್ನು ಬರೆದರು. ಕಾದಂಬರಿಯ ನಾಗವರ್ಮನು ಮುಂದೆ ಜಯಸಿಂಹ ಜಗದೇಕಮಲ್ಲನ ಆಳಿಕೆಯಲ್ಲಿ ಇದ್ದಿರಬಹುದಾದರೂ, ತ್ರಿಭುವನಮಲ್ಲ ೫ನೆಯ ವಿಕ್ರಮಾದಿತ್ಯನ ಕಾಲದಲ್ಲಿಯೇ (ಸು. ೧೦೧೪) ತನ್ನ ಗ್ರಂಥವನ್ನು ಬರೆದನು. ಇವನು 'ಛಂದೋಂಬುಧಿ'ಯ ನಾಗವರ್ಮನಿಂದ ಭಿನ್ನನು, ಬನವಾಸಿ ದೇಶದವನು, ಸಾಮಂತ**ಚಂದ್ರನ** ಆಶ್ರಿತನು. ಮುಂದೆ ಜಯಸಿಂಹ ಜಗದೇಕಮಲ್ಲನ ಆಳಿಕೆಯಲ್ಲಿ (೧೦೧೫—೧೦೪೨) ದುರ್ಗಸಿಂಹನ 'ಪಂಚತಂತ್ರ'ವೂ (ಸು. ೧೦೨೫), ಚಂದ್ರರಾಜನ 'ಮದನತಿಲಕ'ವೂ (ಸು. ೧೦೨೫) ಹುಟ್ಟಿದುವು. ಈ ಮೂವರು ಕವಿಗಳ ಗ್ರಂಥಗಳೂ ಆ ಕಾಲದ ಹೊಸಗನ್ನಡದ ಲಲಿತಶೈಲಿಯಲ್ಲಿ ರಚಿತವಾದುವು. ಮುಂದೆ ೨ನೆಯ ಸೋಮೇಶ್ವರ ಭುವನೈಕಮಲ್ಲನ (೧೦೬೮—೧೦೭೬) ಕಾಲದಲ್ಲಿ ನಾಗವರ್ಮಾಚಾರ್ಯನೆಂಬ

ಬ್ರಾಹ್ಮಣ ಕವಿ 'ಚಂದ್ರಚೂಡಾಮಣಿ ಶತಕ'ವೆಂಬ (೧೦೭೧) ವೈರಾಗ್ಯ ಬೋಧಕ ಗ್ರಂಥವನ್ನು ಬರೆದನು; ಇದಾದರೂ ಲಲಿತ ಶೈಲಿಯುಳ್ಳದು—ಎಂಬಿಷ್ಟು ವಿಷಯಗಳನ್ನು ಕ್ರೋಡೀಕರಿಸಿ ಹೇಳುವಲ್ಲಿ, 'ಕಾದಂಬರಿ'ಯ ಗ್ರಂಥಸ್ಥ ಪ್ರಮಾಣಗಳಿಂದ ಏತದ್ಗ್ರಂಥ ಕರ್ತೃವಿನ ದೇಶ ಕಾಲ ವಿಚಾರಗಳನ್ನೂ, 'ಮದನತಿಲಕ'ದ ವಿಚಾರದಲ್ಲಿ ಕೆಲವು ಹೊಸ ಸಂಗತಿಗಳನ್ನೂ, ೧೧ನೆಯ ಶತಮಾನದ ಬ್ರಾಹ್ಮಣ ಕವಿಗಳ ವೈಲಕ್ಷಣ್ಯವನ್ನೂ ಸ್ಥಿರಪಡಿಸಬೇಕಾದ ಪ್ರಯುಕ್ತ, ಅನಿವಾರ್ಯವಾಗಿ ಉಂಟಾದ ಲೇಖನ ವಿಸ್ತಾರವನ್ನು ವಾಚಕ ಮಹಾಶಯರು ಮನ್ನಿಸುವರೆಂದು ಕೋರಿದೆ.

**ಎಚ್. ಚೆನ್ನಕೇಶವ ಅಯ್ಯಂಗಾರ್.**



---

## ಭಾಸ ಮಹಾ ಕವಿಯ

# ಅಭಿಷೇಕ ನಾಟಕ

## (ಕನ್ನಡದ ಪರಿವರ್ತನೆ)

---

ಸ್ರ ॥ ಶ್ರೀ ಗೌರೀ ವದನಾರವಿಂದ ದಿನಪಂ ಶ್ರೀ ಮೌನಿ ಸಂಸೇವಿತಂ।
ನಾಗೇಂದ್ರಾಭರಣಾವೃತಂ ಶಶಿಧರಂ ಕೈಲಾಸ ವಾಸಂ ಭವಂ ॥
ವಾಗೀಶಾದ್ಯಮರೌಘ ಸೇವಿತ ಪದಂ ಗಂಗಾಧವಂ ಶಂಕರಂ।
ರಾಗಂಬೆತ್ತಿಳೆಗೀವಸಕ್ಕೆ ಸೊಗಮಂ ದ್ವಾರಾವತೀಶಂ ಶುಭಂ ॥

(ನಾಂದ್ಯನಂತರದಲ್ಲಿ ಸೂತ್ರಧಾರನು ಪ್ರವೇಶಿಸಿ)

ಉ ॥ ಗಾಧಿ ಕುಮಾರನಧ್ವರ ವಿಘಾತಿಗಳಂ ನೆರೆ ಕೊಂದು ಮತ್ತಮಾ।
ಯೋಧನದೊಳ್ ವಿರಾಧ ಖರ ದೂಷಣರೆಲ್ಲರ ಶೌರ್ಯಮಂ ಕವ ॥
ರ್ದಾದಮಪಾರ ದರ್ಪಿತ ಕಬಂಧ ಕಪೀಂದ್ರರನಿಕ್ಕಿದಾತನಾ।
ಮೋದದೆ ನಿಮ್ಮನೋವುಗೆ ನಿಶಾಚರ ಪಾಲಕ ವಂಶ ನಾಶಕಂ ॥ ೧ ॥

ಆರ್ಯಮಿಶ್ರರನ್ನು ಕುರಿತು ಹೀಗೆ ವಿಜ್ಞಾಪಿಸುವೆನು :—(ಮುಂದೆ ಬಂದು ನೋಡಿ) ಏನಿದು? ನಾನು ವಿಜ್ಞಾಪಿಸುವಷ್ಟರಲ್ಲಿ ಯಾವುದೋ ಶಬ್ದವು ಕೇಳಿಬರುತ್ತಿರುವುದು. ಇರಲಿ! ನೋಡುವೆನು.

(ತೆರೆಯಲ್ಲಿ) ಇತ್ತಲಿತ್ತಲ್ ಸುಗ್ರೀವಾ!

ಪಾರಿಪಾರ್ಶ್ವಕ.—(ಪ್ರವೇಶಿಸಿ) ಭಾವ!

ಕಂ ॥ ಖರ ಮರುತೋದ್ಧತದಿಂ ಭೀ।
ಕರದಿಂ ಗಮಿಸುತ್ತೆ ಗಗನದೊಳ್ ಗರ್ಜಿಸುವಾ ॥
ಶರದ ರವದಂತೆ ಕರ್ಣ ಕು।
ಹರಮಂ ಸೀಳ್ವೀ ಮಹಾ ರವಮದೆಲ್ಲಿಯದೈ ॥ ೨ ॥

ಸೂತ್ರಧಾರ.—ಮಾರಿಷ! ಕೇಳಲಿಲ್ಲವೇನು? ಇದಾದರೋ ಸೀತಾಪಹರಣದಿಂದ ಸಂತಪ್ತನೂ ರಘುಕುಲಪ್ರದೀಪನೂ ಸಮಸ್ತ ಲೋಕ ನಯನಾಭಿರಾಮನೂ ಆದ ರಾಮನಿಗೂ, ದಾರಾಭಿಮರ್ಶನದಿಂದ ತಿರಸ್ಕೃತನೂ ಸಮಸ್ತ ಕಪಿ ಸೈನ್ಯಾಧಿಪನೂ ವಿಪುಲ ಮಹಾಗ್ರೀವನೂ ಆದ ಸುಗ್ರೀವನಿಗೂ, ಪರಸ್ಪರ ಉಪಕಾರ ಮಾಡುವಂತೆ ಪ್ರತಿಜ್ಞೆಯಾಗಿ ಸಮಸ್ತ ವಾನರಾಧಿಪತಿಯೂ ಹೇಮಮಾಲಿಯೂ ಆದ ವಾಲಿಯನ್ನು ಕೊಲ್ಲಲು ಸನ್ನಾಹ ನಡೆಯುತ್ತಿರುವುದು. ಇವರಾದರೊ—

ಕಂ ॥ ಧರೆಯಿಂ ದೂಡಿದ ಸುಗ್ರೀ।
ವರಸನನೀಗಳ್ ಮಗುಳ್ದುವಿಳೆಯೊಳ್ ನಿಲಿಸಲ್ ॥
ಸುರ ಪತಿಯಂ ನೆಲೆಗೊಳಿಸಲ್।
ಹರಿ ಹರರೆನೆ ಬಂದ ರಾಮ ಲಕ್ಷ್ಮಣರಲ್ತೇ ॥ ೩ ॥

(ಇದು ಸ್ಥಾಪನೆ)

(ಆಮೇಲೆ ರಾಮ ಲಕ್ಷ್ಮಣ ಸುಗ್ರೀವ ಹನುಮಂತರು ಪ್ರವೇಶಿಸುವರು)

ರಾಮ.—ಇತ್ತಲಿತ್ತಲ್ ಸುಗ್ರೀವಾ!

ಉ ॥ ಎನ್ನಯ ಬಾಣ ಪಾತ ಹತಿಯಿಂ ತನೆ ಸೀಳ್ದು ವಿಕೀರ್ಣ ದೇಹಿಯಿಾ।
ನಿನ್ನಯ ವೈರಿಯಂ ಬುವಿಯೊಳೀಗಳೆ ಜೀಳಿಸುವೆಂ ಚಣಕ್ಕನಾ ॥
ನಿನ್ನಳಿಯೈ ನೃಪಾ ಭಯಮನೆನ್ನಯ ಪಾರ್ಶ್ವದೊಳಿರ್ಪೆಯಲ್ತೆ ನೀಂ।
ಮುನ್ನನೆ ನೋಡಿದಂತೆ ತಿಳಿಯೈ ರಣದೊಳ್ ಹತನಾದ ವಾಲಿಯಂ ॥ ೪ ॥

ಸುಗ್ರೀವ.—ದೇವಾ! ನಾನಾದರೊ ಪೂಜ್ಯನ ಪ್ರಸಾದದಿಂದ ದೇವ ರಾಜ್ಯವನ್ನಾದರೂ ಸಂಪಾದಿಸಬಲ್ಲೆನು. ಹೀಗಿರುವಲ್ಲಿ ಈ ವಾನರ ರಾಜ್ಯವು ಯಾವ ವಿಷಯವು? ಏಕೆಂದರೆ—

ಚಂ ॥ ಹಿಮಗಿರಿ ಕೋಡಿನಂತೆ ವನದೊಳ್ ತುರುಗಿರ್ದ ಪಲಾಶ ಸಪ್ತಮಂ।
ಗಮಿಸಿಯತೀವ ವೇಗದೆ ಧರಿತ್ರಿಯನೊಂದಿ ಬಳಿಕ್ಕೆ ಭೋಗಿ ಲೋ ॥
ಕಮನುರೆ ಸೇರ್ದುಮಂಬುಧಿಯೊಳಳ್ಕಿ ಮರಳ್ದುದು ನಿನ್ನ ಬಾಣ ಮು।
ಸ್ತಮಿಸಿತು ಸಂಶಯಂ ಗಡಿರಿಪ್ಪೆ ಗಡ ವಾಲಿಯುರಸ್ಸನಿಂದು ನೀಂ ॥ ೫ ॥

ಹನೂಮಾನ್.—ರಾಜನೇ!

ಕಂ ॥ ಪರಿದುದು ಭೀತಿ ಭವನ್ಮುಖ।
ಕರ ಪಚ್ಛದಿಂದೆಮಗೆ ದುಃಖಮುಂ ಗಡ ಪೋಯ್ತೈ ॥
ಹರಿಗೆ ಜಯಂಗುಡೆ ರಘುವರ।
ತೆರಳಾ ಕರ್ಮುಗಿಲ ಸನ್ನಿಭಂ ಗಿರಿ ವರಮಂ ॥ ೬ ॥

ಲಕ್ಷ್ಮಣ.—ಆರ್ಯನೆ! ವೃಕ್ಷಗಳಿಂದ ದಟ್ಟವಾಗಿ ಶೋಭಿಸುತ್ತಿರುವ ಈ ವನಾಂತದ ಸಮಿಾಪದಲ್ಲಿಯೇ ಕಿಷ್ಕಿಂಧೆಯಿರಬೇಕು.

ಸುಗ್ರೀವ.—ಕುಮಾರನು ಚೆನ್ನಾಗಿ ಹೇಳಿದನು.

ಕಂ ॥ ನೃಪ ತವ ಭುಜ ರಕ್ಷಿತರಾಂ!
ಕಪಿ ವರ ಭುಜ ರಕ್ಷ್ಯಮಾದ ಕಿಷ್ಕಿಂಧೆಗೆ ಬಂ ॥
ದಪೆವೈ ನೀನಿಲ್ಲಿರ ಕಂ।
ಪಿಪೆ ನಾನಾರ್ಭಟಿಸಿ ಭೂಮಿ ಭೂಭೃತ್ತುಗಳಂ ॥ ೭ ॥

ರಾಮ.—ಆಗಲಿ, ನಡೆ.

ಸುಗ್ರೀವ.—ಸ್ವಾಮಿಯಾಜ್ಞೆ (ಎಂದು ಹೋಗಿ)

ಕಂ || ಅಪರಾಧಂಗೆಯ್ಯದೊಡಂ।
ನೃಪ ನೀಂ ವರ್ಜಿಸಿದೆಯಲ್ತೆಯಾ ಸುಗ್ರೀವಂ ||
ಸುಪಥಂ ಸಂಗ್ರಾಮದೊಳಿ।
ಚ್ಛಿಪನೀಗಳ್ ನಿನ್ನ ಪಾದ ಸೇವೆಯನೆಸಗಲ್ || ೮ ||

(ತೆರೆಯಲ್ಲಿ) ಹೇಗೆ? ಹೇಗೆ? ಸುಗ್ರೀವನೆಂತಲೊ?

(ಅನಂತರ ಸೆರಗನ್ನು ಹಿಡಿದು ತಡೆವ ತಾರೆಯೊಡನೆ ವಾಲಿಯು ಪ್ರವೇಶಿಸುವನು)

ವಾಲಿ.—ಹೇಗೆ? ಹೇಗೆ? ಸುಗ್ರೀವನೆಂತಲೊ?

ಕಂ || ಬಿಡುಯೆನ್ನರಿವೆಯನೇತಕೆ।
ಪಿಡಿವೌ ಭಯ ವಿಹ್ವಲಾಕ್ಷಿ ನೀರೇ ತಾರೇ ||
ಕೆಡೆದಾಜಿಯೊಳರುಣಾಂಬುವಿ।
ನುಡಿದಂಗನನೀಕ್ಷಿಸುವುದು ಸುಗ್ರೀವನನಿಂ || ೯ ||

ತಾರೆ.—ಮಹಾರಾಜನೇ! ಪ್ರಸನ್ನನಾಗು, ಪ್ರಸನ್ನನಾಗು. ಸುಗ್ರೀವನು ಸ್ವಲ್ಪ ಕಾರಣದಿಂದ ಬಂದಿರಲಾರನು. ಆದುದರಿಂದ ಅಮಾತ್ಯವರ್ಗದೊಡನೆ ಆಲೋಚಿಸಿ ತೆರಳಬಹುದು.

ವಾಲಿ.—ಆಃ!

ಚಂ || ವಿಧುಮುಖಿಯೆನ್ನ ವೈರಿಗೆ ಸಹಾಯಮನಾಗಿಪನಿಂದ್ರನಾದೊಡಂ।
ಪ್ರದುರಿತ ಧಾರೆಯಿಂ ಪರಶುವಂ ಪಿಡಿದಂ ಪರಮೇಶನಾದೊಡಂ ||
ಕೆದರಿದ ಪುಂಡರೀಕ ಸುವಿಲೋಚನನಾ ಹರಿಯಾದೊಡಂ ಸಮಂ।
ತಿದುರಿಸಿ ನಿಲ್ಲುತೆನ್ನಸಿರಿಯಲ್ಕೆ ವಿಶೇಷಮಶಕ್ತರಪ್ಪರೌ || ೧೦ ||

ತಾರೆ.—ಮಹಾರಾಜನೇ! ಪ್ರಸನ್ನನಾಗು, ಸೈರಣೆಯನ್ನು ತಾಳು. ಈ ಜನದ ವಿಷಯದಲ್ಲಿ ಅನುಗ್ರಹವಿಟ್ಟು ಕಾಪಾಡು.

ವಾಲಿ.—ತಾರೇ! ನನ್ನ ಪರಾಕ್ರಮವನ್ನಾದರೂ ಕೇಳು.

ಕಂ || ಅಮರ್ದಂ ಕಡೆವಾಗಳ್ ನಾಂ।
ಗಮಿಸಿ ಸುರಾಸುರರನೇಡಿಸಾ ಫಣಿಪತಿಯಂ ||
ಭ್ರಮಿತಾಕ್ಷನನುಗ್ರಾಂಗನ।
ನಮಿತಂ ಸೆಳೆಯಲ್ಕೆ ಕಂಡು ಬೆಕ್ಕಸಗೊಂಡರ್ || ೧೧ ||

ತಾರೆ.—ಮಹಾರಾಜನು ಪ್ರಸನ್ನನಾಗಬೇಕು, ಸೈರಿಸಿಕೊಳ್ಳಬೇಕು.

ವಾಲಿ.—ಆಃ! ನನ್ನ ಅಧೀನಳಾಗಿರು, ಒಳಕ್ಕೆ ಹೋಗು.

ತಾರೆ.—ಇದೊ! ಮಂದ ಭಾಗಿನಿಯು ತೆರಳುವೆನು (ಎಂದು ಹೋಗುವಳು).

ವಾಲಿ.—ಆಃ! ತಾರೆಯು ತೆರಳಿದಳು. ಇನ್ನು ನಾನು ಸುಗ್ರೀವನನ್ನು ಭಗ್ನಗ್ರೀವನನ್ನಾಗಿ ಮಾಡುವೆನು. (ಬೇಗನೆ ಬಂದು) ಸುಗ್ರೀವಾ! ನಿಲ್ಲು, ನಿಲ್ಲು.—

ಕಂ ॥ ಸುರ ನಾಥಂ ಶರಣಾಗುಗೆ।
ಯಿರದಿರೆ ವಿಭು ಹರಿಯೆ ನಿನಗೆ ಕಾಪಿರ್ಕೆನ್ನೀ ॥
ವರ ಲೋಚನ ಪಥದೊಳ್ ಗೋ।
ಚರಿಸಿ ಬಳಿಕ್ಕುಸಿರಿನೊಡನೆ ಪೋಗೆ ಗಡಾ ನೀಂ ॥ ೧೨ ॥

ಇತ್ತಲಿತ್ತಲ್

ಸುಗ್ರೀವ.—ಮಹಾರಾಜನಾಜ್ಞೆ. (ಇರ್ವರೂ ಬಾಹು ಯುದ್ಧವನ್ನು ಮಾಡುವರು.)

ರಾಮ.—ಇವನೀ ವಾಲಿಯು—

ಮ ॥ ಸ್ರ ॥ ತವೆ ಕರ್ಚಿಪೌಁಡಿನಿಂ ಭೀಕರ ಕರಮರುಣಾಕ್ಷಿಪ್ತ ನೇತ್ರಂಗಳಿಂದು।
ರ್ಕುವ ಬಲ್ಪಿಂದಾಂತ ಕೈ ಮುಟ್ಟಿಯಿನುರೆ ಮೆರೆಯುತ್ತಿರ್ಪ ದಂಷ್ಟ್ರಂ
ಗಳಿಂ ಕಿ ॥
ರ್ಚುವ ಭೀತ್ಯುತ್ಪನ್ನ ನಾದಂಗಳಿನಿದೆಕೊ ಕಪೀಂದ್ರುಂ ಗಡಾ ರಾಜಿಪಂ ಪ್ರಾ।
ಹವದೊಳ್ ನೈಜಂ ಸುಡಲ್ಕಚ್ಚಿಸಿದ ಪರಮ ಕಾಲಾಗ್ನಿಯೆಂಬಂದ
ದಿಂದಂ ॥ ೧೩ ॥

ಲಕ್ಷ್ಮಣ.—ಆರ್ಯನು ಇಗೋ ಸುಗ್ರೀವನನ್ನು ನೋಡುವನಾಗಲಿ.—

ಮ ॥ ಅರಳ್ದಾ ತಾವರೆಯಂತೆ ಚೆಂಬೊಗರಿನಿಂದೊಪ್ಪಿರ್ಪ ನೇತ್ರಂಗಳಿಂ।
ವರ ಹೇಮಾಂಚಿತ ದೇಹದಿಂ ಕನಕಮಂ ಕಟ್ಟಿರ್ಪ ಪೆರ್ದೋಳ್ಗಳಿಂ ॥
ಹರಿ ಭಾವಂಬಡಿದುಂ ಸುವೃತ್ತಿಯುಳಿದುಂ ತನ್ನಗ್ರಜಂ ವಾನರೇ।
ಶ್ವರನಿಂ ಕೀಳ್ಗಳೆದಾಂತು ಮಾರ್ಮಲೆವುತುಂ ತೋರ್ದಪ್ಪನೀಗಳ್
ಗಡಾ ॥ ೧೪ ॥

ಅಯ್ಯೋ! ವಾಲಿಯಿಂದ ಹೊಡೆಯಿಸಿಕೊಂಡ ಸುಗ್ರೀವನು ಬಿದ್ದನು.

ಹನೂಮಾನ್.—ಹಾ! ಹಾ! (ಕಾತರದಿಂದ ರಾಮನ ಬಳಿಗೆ ಬಂದು) ಸ್ವಾಮಿಗೆ ಜಯವಾಗಲಿ! ಈತನ ಅವಸ್ಥೆಯು ಈ ರೀತಿಯಾಗಿದೆ.—

ಕಂ ॥ ಅತಿ ಬಲನೀ ಕಪಿ ಪತಿ ಮೇ।
ಣತಿ ದುರ್ಬಲನೆನ್ನ ವಿಭು ಗಡಾ ಇವನಾ ॥
ಸ್ಥಿತಿಯಂ ಶಪಥಮುಮಂ ಸುವಿ।
ಹಿತ ಮತಿಯಿಂದಾರ್ಯನೇ ವಿಚಾರಿಸವೇಳ್ಕುಂ ॥ ೧೫ ॥

ರಾಮ.—ಹನೂಮಾನ್! ಸಾಕು, ಸಾಕು, ಕಳವಳಿಸದಿರು. ಇದನ್ನೇ ಮಾಡುತ್ತಿರುವೆನು. (ಎಂದು ಬಾಣವನ್ನು ಬಿಟ್ಟು) ಭಲಾ! ವಾಲಿಯು ಬಿದ್ದನು.

ಲಕ್ಷ್ಮಣ.—ಇವನೀ ವಾಲಿಯು—

ಮ ॥ ರುಧಿರಂಬೆತ್ತ ಘನಾಘನಂ ಜಗುಳ್ದ ಸಂರಕ್ತೇಕ್ಷಣಂ ಮತ್ತವೊಂ।
ದಿದ ಕಾಠಿನ್ಯ ವಿಶಾಲ ಬಾಹು ಯಮ ಲೋಕಾಪೇಕ್ಷಿಯಿಾತಂ ತುಡುಂ ॥
ಕಿದ ಬಾಣಾಹತಿಯಿಂದೆ ಬಲ್ಮೆಯಿನತೀವಂ ತಳ್ಗಿದಾ ಗಾತ್ರಮಂ।
ಪದನೆಂತೋ ಗಡ ಧೈರ್ಯದಿಂದವೆಳೆದತ್ಯುತ್ಕಷ್ಟದಿಂದೆಳ್ದಪಂ ॥ ೧೬ ॥

ವಾಲಿ.—(ಮೂರ್ಛೆಗೊಂಡು ಮರಳಿ ತಿಳಿದು ಅಂಬಿನಲ್ಲಿದ್ದ ನಾಮಾಕ್ಷರಗಳನ್ನು ಓದಿ ರಾಮನನ್ನು ಕುರಿತು)—

ಚಂ ॥ ಇಳೆಯಧಿನಾಥ ಧರ್ಮಗಳನಾಂತು ಧರೋದಿತ ಧರ್ಮ ಸಂಶಯಂ।
ಗಳಿನುರೆ ಮುಕ್ತನಾಗಿ ಜನದೊಳ್ ಕಪಟಾಚರಣಂಗಳಂ ಕರಂ ॥
ಕಳೆಯಿಪುದರ್ಕೆ ವಾಂಛಿಪನೆನುತ್ತೆ ವಿರಾಜಿಪ ವೀರ ರಾಮ ನೀಂ।
ಕೊಳುಗುಳದೊಳ್ ಕ್ರಮಂಗಳೆದು ವಂಚನೆಗೊಳ್ವುದದಾವ
ನೀತಿಯೈ ॥ ೧೭ ॥

ಅಯ್ಯೋ!

ಕಂ ॥ ಸಲೆ ಸೌಮ್ಯಾಕೃತಿಯಿಂ ಮೇಣ್।
ವಿಲಸದ್ಯಶದಿಂದೆ ರಂಜಿಸುವ ನೀನೆನ್ನಂ ॥
ಛಲದಿಂ ಪ್ರಹರಿಸಿ ಭೂವಿಾ।
ತಲದೊಳ್ ದುಷ್ಕೀರ್ತಿಯಂ ಪ್ರರೂಢಿಸಿದೆಯಲೇ ॥ ೧೮ ॥

ಎಲೈ ರಾಘವ! ನಾರು ಮಡಿಯನ್ನು ಧರಿಸಿದವನಾದ, ವೇಷದಿಂದ ಬದಲಾಯಿಸಿದ ಮನಸ್ಸುಳ್ಳವನಾದ ನೀನು, ನನ್ನ ತಮ್ಮನೊಡನೆ ಕಾಳೆಗದಲ್ಲಿ ಕಾತರನಾಗಿದ್ದ ನನ್ನನ್ನು ಮರೆಯಿಂದ ಕೊಲ್ಲುವುದು ಅಧರ್ಮವಲ್ಲವೆ?

ರಾಮ.—ಹೇಗೆ? ಮರೆಯಿಂದ ಕೊಲ್ಲುವುದನ್ನು ಅಧರ್ಮವೆನ್ನುವೆಯಾ?

ವಾಲಿ.—ಸಂಶಯವೇನು?

ರಾಮ.—ಹಾಗಲ್ಲ; ನೋಡು—

ಕಂ ॥ ಬಲೆಯಂ ಸೇರಿದ ಮೃಗ ಸಂ।
ಕುಲಮಂ ಸಂಹರಿಪುದುಚಿತಮಾದಪುದಲ್ತೇ ॥
ಕೊಲೆಗಾಂತಂ ಮೃಗಿಯುಂ ನೀ।
ನಲೆಯದರಿಂ ದಂಡಿಸಿದೆ ಗಡಾಂ ಮರೆಯಿಂದಂ ॥ ೧೯ ॥

ವಾಲಿ.—ನೀನು ನನ್ನನ್ನು ದಂಡ್ಯನೆಂದು ತಿಳಿದಿರುವೆಯಾ?

ರಾಮ.—ಸಂಶಯವೇನು?

ವಾಲಿ.—ಯಾವ ಕಾರಣದಿಂದ?

ರಾಮ.—ಅಗಮ್ಯಾಗಮನದಿಂದ.

ವಾಲಿ.—ಅಗಮ್ಯಾಗಮನದಿಂದಲೇ? ನಮಗಿದು ಧರ್ಮವಾದುದು.

ರಾಮ.—ಅಯ್ಯಾ! ಯುಕ್ತವಾದುದು !—

ಕಂ || ನೆರೆ ಧರ್ಮಾಧರ್ಮಂಗಳ।
ನರಿತುಂ ಕಪಿ ಸಾರ್ವಭೌಮನಾಗಿರುತುಂ ನೀಂ ||
ಸರಿಗೆತ್ತು ಮಿಗಕೆ ನಿನ್ನಂ।
ಸರಿಯೇಂ ಸೋದರನ ಸತಿಯನೊಂದುವ ಕಜ್ಜಂ || ೨೦ ||

ವಾಲಿ.—ಸೋದರನ ಸತಿಯನ್ನು ಸೇರಿಕಿದುದರಲ್ಲಿ ಸಮಾನ ದೋಷಿಗಳಾದಿವ್ವಿರ್ವರಲ್ಲಿ ನಾನು ಮಾತ್ರ ಶಿಕ್ಷಾರ್ಹನು, ಸುಗ್ರೀವನಲ್ಲ!

ರಾಮ.—ಶಿಕ್ಷಾರ್ಹನು ನೀನು; ಅದರಿಂದ ಶಿಕ್ಷಿತನಾದೆ. ಶಿಕ್ಷೆಗೆ ತಗದವರನ್ನು ಶಿಕ್ಷಿಸುವುದೇ ಇಲ್ಲ.

ವಾಲಿ.—

ಕಂ || ಗುರುವಾದೆನ್ನಿನಿಯಳನೊಡ।
ವೆರೆದಂ ಸುಗ್ರೀವನದರಿನಾನಾತನೆಯಾ ||
ತರುಣಿಯೊಳೊಡಗೂಡಿದೆನಿಂ।
ತಿರಲಾನೊರ್ವನೆಯೆ ದಂಡ್ಯನೆಂತೈ ರಾಮಾ || ೨೧ ||

ರಾಮ.—ಹಿರಿಯವನು ಕಿರಿಯವನ ಮಡದಿಯನ್ನು ತಾಗುವುದು ಯಾವಾಗಲೂ ಇಲ್ಲವಲ್ಲವೆ?

ವಾಲಿ.—ಅಯ್ಯೋ! ಇನ್ನು ನನ್ನ ಬಾಯಿ ಮುಚ್ಚಿತು. ನಿನ್ನಿಂದ ದಂಡಿತನಾದೆನಾದುದರಿಂದ ನನ್ನ ಪಾಪವು ಹೋಯಿತಲ್ಲವೆ?

ರಾಮ.—ಹಾಗೆಯೇ ಸರಿ.

ಸುಗ್ರೀವ.—ಅಯ್ಯೋ! ಅಯ್ಯೋ!

ಚಂ || ಹರಿವರ ಸಾಮಜೇಂದ್ರಗಮನಾ ಗಜ ಹಸ್ತಕೆ ಸಾಟಿಯಾಗಿ ಮ।
ತ್ತರಿ ಶರದಿಂದೆ ನೀಳ್ದ ಭುಜ ಕೀರ್ತಿಯನೊಂದಿದ ನಿನ್ನ ಬಾಹುಗಳ್ ||
ಧರಣಿಯ ಮೇಲೆ ಬಿಳ್ದಿರಲಿದಂ ನೆರೆ ನಿಟ್ಟಿಸಿಯೆನ್ನ ಮಾನಸಂ।
ಗರೆದು ಕುಸುಳ್ದು ಬಿಳ್ದಮುರುಳ್ವಂತೆವೊಲಿರ್ದಪುದೀಗಳಕ್ಕಟಾ || ೨೨ ||

ವಾಲಿ.—ಸುಗ್ರೀವ! ಸಾಕು ಅಳಲದಿರು. ಲೋಕ ಧರ್ಮವೇ ಹೀಗಿರುವುದು.

(ತೆರೆಯಲ್ಲಿ) ಹಾ! ಹಾ! ಮಹಾರಾಜನು—

ವಾಲಿ.—ಸುಗ್ರೀವ! ಸ್ತ್ರೀಜನವನ್ನು ತಡೆ, ತಡೆ; ಈ ರೀತಿಯಿಂದಿರುವ ನನ್ನನ್ನು ನೋಡಬಾರದು.

ಸುಗ್ರೀವ.—ಮಹಾರಾಜನಾಜ್ಞೆ. ಹನೂಮಾನ್! ಹೀಗೆ ಮಾಡು.

ಹನೂಮಾನ್.—ಕುಮಾರನಾಜ್ಞೆ (ಎಂದು ತೆರಳುವನು).

(ಬಳಿಕ ಅಂಗದನೂ ಹನುಮಂತನೂ ಪ್ರವೇಶಿಸುವರು.)

ಹನೂಮಾನ್.—ಇತ್ತಲಿತ್ತಲ್ ಅಂಗದಾ!

ಅಂಗದ.—

ಕಂ॥ ವಾನರ ಋಕ್ಷಾಧಿಪನವ।
ಸಾನದ ಸಂಗತಿಯನರಿತು ಸಂತಾಪ ವಿಶೇ ॥
ಷೌನ್ನತ್ಯದೆ ಸಂಭರನಿ।
ರ್ಪಾನೆಯ್ದೆಂ ಶಿಥಿಲವಾದ ಪಾದಗಳಿಂದಂ ॥ ೨೩ ॥

ಹನೂಮಾನ್! ಮಹಾರಾಜನೆಲ್ಲಿ?

ಹನೂಮಾನ್.—

ಕಂ॥ ಸ್ಕಂಧ ಮಹಾ ಶಕ್ತ್ಯಾಯುಧ।
ದಿಂದೆ ಸಮಾಕ್ರಾಂತಮಾದ ಕ್ರೌಂಚಾಚಲದಾ ॥
ಅಂದದೆ ಕಣೆಯಿಂ ಸೀಳ್ದಿರ್ದೆ।
ಯಂ ಧರಣೀತಲದೊಳಿದೆಕೊ ರಾಜಿಸುತಿರ್ಪಂ ॥ ೨೪ ॥

ಅಂಗದ.—(ಹತ್ತಿರ ಹೋಗಿ) ಹಾ! ಮಹಾರಾಜನೇ!

ಚಂ॥ ಅತಿ ಬಲ ವಾನರೇಂದ್ರ ಮೊದಲೊಳ್ ಸುಖ ಶಯ್ಯೆಯೊಳೊಪ್ಪುತಿರ್ದ ನೀಂ।
ಕ್ಷಿತಿ ತಲದಲ್ಲುರುಳ್ದು ವಿಗತಾಂಗ ವಿಕಾರದಿನಿರ್ಪೆಯಲ್ತೆಯಿ ॥
ನ್ನತಿ ನಿಶಿತಾಗ್ರ ಬಾಣ ಹತಿಯಿಂ ಬಿರಿದೀ ತನುವಂ ಬಿಸುಟ್ಟು ಶಾ।
ಶ್ವತ ಸುಖವಿಾವ ವೀರ ಸುರ ಲೋಕಮನೇಂ ತೆರಳಲ್ಕೆಯಾಸಿಪಾ ॥ ೨೫ ॥

(ಎಂದು ಕೆಳಗೆ ಬೀಳುವನು.)

ವಾಲಿ.—ಅಂಗದಾ! ಸಾಕು, ಶೋಕಿಸದಿರು. ಎಲೈ! ಸುಗ್ರೀವಾ—

ಕಂ॥ ಎನ್ನಪಕೃತಿಯಂ ಮರೆತು ಮ।
ಹೋನ್ನತ ಮತಿವಂತನೆನಿಸಿ ಕಪಿ ಪತಿಯಾಗು ॥
ತ್ತಿನ್ನುಳಿದು ರೋಷಮಂ ಧ।
ರ್ಮಾನ್ವಿತನಾಗೆನ್ನ ಬಳಿಯ ಮೊಳೆಯಂ ಬಳೆಸಾ ॥ ೨೬ ॥

ಸುಗ್ರೀವ.—ಮಹಾರಾಜನಾಜ್ಞೆ.

ವಾಲಿ.—ಎಲೈ ರಾಘವಾ! ಯಾವ ಅಪರಾಧವನ್ನು ಮಾಡಿದರೂ ಕಪಿಗಳಾದ ಇವರಿರ್ವರ ಚಪಲತೆಯನ್ನು ನೀನು ಕ್ಷಮಿಸುವೆಯಲ್ಲವೆ?

ರಾಮ.—ನಿಶ್ಚಯ; ಆಗಲಿ.

ವಾಲಿ.—ಸುಗ್ರೀವಾ! ನಮ್ಮ ಕುಲ ಧನವಾದ ಈ ಹೇಮ ಮಾಲೆಯನ್ನು ಪತಿಕರಿಸು.

ಸುಗ್ರೀವ.—ಅನುಗೃಹೀತನಾದೆನು (ಎಂದು ತೆಗೆದುಕೊಳ್ಳುವನು.)

ವಾಲಿ.—ಹನೂಮಾನ್! ನೀರನ್ನು ತರುವವನಾಗು.

ಹನೂಮಾನ್.—ಮಹಾರಾಜನಾಜ್ಞೆ (ಎಂದು ಹೋಗಿ ಬಂದು,) ಇದೋ ನೀರು!

ವಾಲಿ.—(ಆಚಮನ ಮಾಡಿ) ಪ್ರಾಣಗಳು ನನ್ನನ್ನು ಬಿಟ್ಟುಹೋಗುವಂತಿವೆ. ಇದೋ! ಗಂಗೆಯೇ ಮೊದಲಾದ ಮಹಾನದಿಗಳೂ, ಊರ್ವಶಿಯೇ ಮೊದಲಾದ ಅಪ್ಸರಸ್ತ್ರೀಯರೂ ನನ್ನನ್ನು ಸೇರಿರುವರು. ಇದೋ! ಸಾವಿರ ಹಂಸಗಳಿಂದ ಕೂಡಿದ, ವೀರರನ್ನು ಕರೆದೊಯ್ಯುವ ವಿಮಾನವು ನನಗಾಗಿ ಕಾಲನನುಮತಿಯಿಂದ ಬಂದಿದೆ. ಆಗಲಿ, ಬರುವೆನು, ಬರುವೆನು. (ಸ್ವರ್ಗಕ್ಕೆ ತೆರಳುವನು.)

ಎಲ್ಲರೂ.—ಹಾ! ಹಾ! ಮಹಾರಾಜನು—

ರಾಮ.—ಅಹೋ! ವಾಲಿಯು ಸ್ವರ್ಗವನ್ನಡರಿದನು. ಸುಗ್ರೀವಾ! ಇವನಿಗೆ ಸಂಸ್ಕಾರವನ್ನು ಮಾಡು.

ಸುಗ್ರೀವ.—ದೇವನಾಜ್ಞೆ.

ರಾಮ.—ಲಕ್ಷ್ಮಣಾ! ಸುಗ್ರೀವಾಭಿಷೇಕಕ್ಕೆ ಸಿದ್ಧಮಾಡು.

ಲಕ್ಷ್ಮಣ.—ಆರ್ಯನಾಜ್ಞೆ. (ಎಲ್ಲರೂ ತೆರಳುವರು.)

---

**ಪಂಡಿತ ಬಿ. ನಂಜುಂಡಸ್ವಾಮಿ.**

---

# ಕರ್ಣಾಟಕ ಕವಿ ಸಾರ್ವಭೌಮನಾದ
# ಪಂಪನೂ ಸ್ತ್ರೀ ಶಿಕ್ಷಣವೂ

ಪಂಪನು ಸನ್ ೯೦೨ರಲ್ಲಿ ವತ್ಸಗೋತ್ರೀಯ ಬ್ರಾಹ್ಮಣ ಕುಲದಲ್ಲಿ ಹುಟ್ಟಿದನು. ಇವನ ತಂದೆಯ ಹೆಸರು ಅಭಿರಾಮ ದೇವರಾಯ. ಈತನು ಮೊದಲು ವೇದಾನುಯಾಯಿಯಾಗಿದ್ದು ಅನಂತರ ಜೈನ ಮತವನ್ನು ಅವಲಂಬಿಸಿದನು. ಪಂಪನ ಜನ್ಮಸ್ಥಾನವು ಅಜ್ಞಾತವಾಗಿದೆ. ಇವನು ರಟ್ಟರಾಜ್ಯದಲ್ಲಿದ್ದುದಾಗಿ ಕವಿಚಕ್ರವರ್ತಿ ರನ್ನನು ಬರೆದಿದ್ದಾನೆ. "ಆದರೆ ಪಂಪನು 'ತೆಂಕನಾಡ ಮರೆಯಲ್ಕೆಂದುಂ ಮನಂ ಬರ್ಕುಮೇ' ಎಂದು ತನ್ನ ಭಾರತದಲ್ಲಿ ದಕ್ಷಿಣ ದೇಶವನ್ನು ವಿಶೇಷವಾಗಿ ವರ್ಣಿಸಿ, ತನಗೆ ಆ ದೇಶವು ಆಗಾಗ್ಗೆ ನೆನಪಿಗೆ ಬರುತ್ತಿದ್ದಂತೆ ಬರೆದಿದ್ದಾನೆ. ಇದರಿಂದ ಇವನು ದಕ್ಷಿಣದೇಶದಲ್ಲಿ ಜನಿಸಿ ಬಳೆದು, ಯಾವುದೋ ಒಂದು ಕಾರಣದಿಂದ ಅದನ್ನು ಬಿಟ್ಟು ಬೇರೆ ದೇಶದಲ್ಲಿ ವಾಸಮಾಡುತ್ತಿದ್ದಂತೆ ಊಹಿಸುವುದಕ್ಕೆ ಅವಕಾಶವಿದೆ"—ಎಂದು ಆದಿ ಪುರಾಣದ ಸಂಪಾದಕರಾದ ಶ್ರೀಯುತ ಎಸ್. ಜಿ. ನರಸಿಂಹಾಚಾರ್ಯರ ಅಭಿಪ್ರಾಯವಾಗಿದೆ. ಪಂಪನು ಪುಲಿಗೆರೆಯ ಚಾಳುಕ್ಯ ರಾಜನಾದ ಅರಿಕೇಸರಿಯ ಆಸ್ಥಾನ ಕವಿಯಾಗಿಯೂ ದಂಡನಾಯಕನಾಗಿಯೂ ಇದ್ದನು. ಇವನ ವಿದ್ಯಾಧ್ಯಯನವೇ ಮೊದಲಾದ ಸಂಗತಿಗಳು ಯಾವುವೂ ತಿಳಿದುಬಂದಿಲ್ಲವಾದರೂ, ದೇವೇಂದ್ರ ಮುನಿಗಳನ್ನು ತನ್ನ ಗುರುಗಳನ್ನಾಗಿ ಹೇಳಿಕೊಂಡಿರುವುದರಿಂದ, ಪಂಪನು ದೇವೇಂದ್ರ ಮುನಿಗಳಲ್ಲಿಯೇ ವಿದ್ಯೆಯನ್ನು ಕಲಿತನೆಂದು ಊಹಿಸಬಹುದಾಗಿದೆ. ಈ ದೇವೇಂದ್ರ ಮುನಿಗಳು ಮಹಾ ಪ್ರಖ್ಯಾತರಾದ ವಿದ್ವಾಂಸರು. ಶ್ರವಣಬೆಳ್ಗೊಳದ ಚಂದ್ರಗಿರಿ ಪರ್ವತದಲ್ಲಿರುವ ೪೨ನೆಯ ಶಿಲಾ ಲೇಖದಲ್ಲಿ ಇವರ ವಿಷಯದಲ್ಲಿ ಈ ಪ್ರಕಾರವಾಗಿ ಬರೆದಿದೆ:—

> **ಅಜನಿ ಮಹಿಪ ಚೂಡಾ ರತ್ನ ರಾರಾಜಿತಾಂಘ್ರಿಃ।**
> **ವಿಜಿತ ಮಕರ ಕೇತೂದ್ದಂಡ ದೋರ್ದಂಡ ಗರ್ವಃ ॥**
> **ಕನಯ ನಿಕರ ಭೂಧ್ರಾನೀಕ ದಂಭೋಳಿ ದಂಡಃ।**
> **ಸ ಜಯತು ವಿಬುಧೇಂದ್ರೋ ಭಾರತೀ ಭಾಳ ಪಟ್ಟಃ ॥**

—ಜೈನ ಶಿಲಾ ಲೇಖ ಸಂಗ್ರಹ, ಪುಟ ೬೫

ಈ ಶ್ಲೋಕದಿಂದ, ಈ ಮುನಿಗಳು ರಾಜಾಧಿರಾಜರುಗಳಿಂದ ಪೂಜಿತರಾಗಿದ್ದಂತೆ ತಿಳಿದುಬರುತ್ತದೆ.

ಪಂಪನು ಕನ್ನಡ ಕವಿಗಳಲ್ಲಿ ಸರ್ವಶ್ರೇಷ್ಠನು. ಇವನನ್ನು ಕನ್ನಡ ಕವಿ ಪಿತಾಮಹನೆಂದರೂ ಅತ್ಯುಕ್ತಿಯಾಗಲಾರದು. ಕವಿ ರತ್ನತ್ರಯಗಳಲ್ಲಿ ಅನ್ಯತಮ

ನಾದ ಈತನು ಕನ್ನಡದಲ್ಲಿ ಆದಿಪುರಾಣ, ಭಾರತ, ಅಥವಾ ವಿಕ್ರಮಾರ್ಜುನ ವಿಜಯ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಕವಿಯು ಭಾರತವನ್ನು ಆರು ತಿಂಗಳಲ್ಲಿಯೂ ಆದಿಪುರಾಣವನ್ನು ಮೂರು ತಿಂಗಳಲ್ಲಿಯೂ ಮುಗಿಸಿದಂತೆ ಹೇಳುತ್ತಾನೆ. ಇವೇ ಪಂಪನ ಅಮೇಯ ಪಾಂಡಿತ್ಯಕ್ಕೆ ಉಜ್ಜ್ವಲ ನಿದರ್ಶನ ಗಳಾಗಿವೆ. ಇವನ ಗ್ರಂಥಗಳಿಂದ ನಾಗವರ್ಮ, ಕೇಶಿರಾಜ ಮುಂತಾದ ಲಕ್ಷಣ ಗ್ರಂಥಕಾರರೆಲ್ಲ ಪದ್ಯಗಳನ್ನು ಉದಾಹರಿಸಿದ್ದಾರೆ. ಅಲ್ಲದೆ, ಇವನಿಂದೀಚೆಗೆ ಗ್ರಂಥಗಳನ್ನು ಬರೆದಿರುವ ಜೈನ ಕವಿಗಳೆಲ್ಲ ತಮ್ಮ ತಮ್ಮ ಗ್ರಂಥಗಳಲ್ಲಿ ಪ್ರಾಯಃ ಇವನನ್ನು ಗೌರವ ದೃಷ್ಟಿಯಿಂದ ಸ್ಮರಿಸಿರುತ್ತಾರೆ. ಪಂಪನಿಗೆ ಕವಿತಾ ಗುಣಾರ್ಣವ, ಪುರಾಣ ಕವಿ, ಸುಕವಿ ಜನ ಮನೋ ಮಾನಸೋತ್ತಂಸ ಹಂಸ, ಸರಸ್ವತೀ ಮಣಿಹಾರ, ಸಂಸಾರ ಸಾರೋದಯ ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಈ ಉಪಾಧಿಗಳಿಂದ ಸುಜ್ಞ ಪಾಠಕರು ತಾವೇ ಪಂಪನನ್ನು ಒಬ್ಬ ಅದ್ವಿತೀಯ ಕವಿಯನ್ನಾಗಿ ತಿಳಿದುಕೊಳ್ಳದಿರಲಾರರು. ಇರಲಿ; ಪ್ರಕೃತ ಸ್ತ್ರೀ ಶಿಕ್ಷಣೆಯ ವಿಷಯದಲ್ಲಿ ಕವಿತಾಗುಣಾರ್ಣವ ಪಂಪನ ಅಭಿಪ್ರಾಯವನ್ನು ಪಾಠಕರ ಮುಂದಿಡುವುದೇ ಈ ಲೇಖನದ ಮುಖ್ಯೋದ್ದೇಶವಾಗಿದೆ. ಈ ಮಾತನ್ನು ಆತನ ಆದಿ ಪುರಾಣದ ಕೆಲವು ಪದ್ಯಗಳೇ ವಿಶದಮಾಡುವುವು. ಇವನ ಆದಿ ಪುರಾಣವು ಚಂಪೂ ರೂಪವಾದ ಕೃತಿಯಾಗಿದೆ. ಇದರಲ್ಲಿ ೧೬ ಆಶ್ವಾಸಗಳಿವೆ. "ಈ ಗ್ರಂಥ ವನ್ನು ಕವಿ ಉತ್ಕೃಷ್ಟ ಭಾಷಾ ಶೈಲಿಯಲ್ಲಿ ರಚಿಸಿದ್ದಾನೆ. ಪದದ ಜೋಡಣೆ ಕಿವಿಗಿಂಪಾಗಿಯೂ ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆ. ಪದಗಳು ಮುತ್ತು ಕೋದಂತೆ ಹೊಂದಿಕೆಯಾಗಿವೆ. ಬಂಧವು ಗಂಭೀರವಾಗಿಯೂ ಭಾವ ಗರ್ಭಿತವಾಗಿಯೂ ಇದೆ. ಇವನ ವಾಗ್ಧೋರಣೆ ಪ್ರಾಯಃ ಇತರ ಕನ್ನಡ ಕವಿಗಳಲ್ಲಿ ದೊರೆಯಲಾರದೆಂದು ತೋರುತ್ತದೆ" ಎಂದು ಈ ಗ್ರಂಥದ ವಿಷಯ ದಲ್ಲಿ ಕರ್ಣಾಟಕ ಕವಿಚರಿತೆಯ ಲೇಖಕರಾದ ಶ್ರೀಯುತ ರಾ. ನರಸಿಂಹಾ ಚಾರ್ಯರ ಮತವಾಗಿದೆ.

ಇದೇ ಗ್ರಂಥದ ಮುದ್ರಿತ ಪ್ರತಿಯ ಪುಟ ೨೦೮–೨೦೯ರಲ್ಲಿ ಪಂಪನು ಸ್ತ್ರೀ ಶಿಕ್ಷಣೆಯ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಈ ಪ್ರಕಾರವಾಗಿದೆ :—

ಒಂದಾನೊಂದು ದಿವಸ ವೃಷಭಸ್ವಾಮಿಯು ವಿದ್ಯೆಗಳನ್ನು ಉಪದೇಶಿಸ ಬೇಕೆಂದು ಆಲೋಚಿಸುತ್ತಿದ್ದ ಕಾಲದಲ್ಲಿ ಪುತ್ರಿಯರಿಬ್ಬರೂ ಒಂದು ನಮಸ್ಕಾರ ಮಾಡಿದರು. ಅವರಿಬ್ಬರನ್ನೂ ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಬ್ರಹ್ಮೆಗೆ ಸಿದ್ಧಂನಮಃ ಎಂದು ತೊಡಗಿ ಲಿಪಿಗಳನ್ನು ದಕ್ಷಿಣ ಹಸ್ತದಲ್ಲಿ ಉಪದೇಶಿಸಿದನು. ಸೌಂದರಿಗೆ ಗಣಿತವನ್ನು ಎಡಗೈಯಲ್ಲಿ ಬರೆದು ತೋರಿಸಿ ಸ್ವಯಂಭುವಾಭಿಧಾನ ಪದ ವಿದ್ಯಾ ಚ್ಛಂದೋ ವಿಚಿತ್ರ್ಯಲಂಕಾರಗಳೆಂಬಿವೇ ಮೊದಲಾದ ಸಮಸ್ತ ವಿದ್ಯೆ ಗಳನ್ನೂ ಬೋಧಿಸಿ ಇಬ್ಬರನ್ನೂ ವಿದ್ಯಾ ಪರಿಪೂರ್ಣೆಯರನ್ನು ಮಾಡಿದನು.

ಬಳಿಕ ಉಳಿದ ಗಂಡುಮಕ್ಕಳಿಗೆ ಭರತ, ಅರ್ಥಶಾಸ್ತ್ರ, ಗಾಂಧರ್ವಶಾಸ್ತ್ರ ಮೊದಲಾದ ಲೋಕೋಪಕಾರಿಗಳಾದ ಶಾಸ್ತ್ರಗಳನ್ನು ಉಪದೇಶಿಸಿ ಸುಖದಿಂದಿರುತ್ತಿದ್ದನು.

ಕವಿ ಪುಂಗವನಾದ ಪಂಪನು ಗಂಡುಮಕ್ಕಳ ಅಪೇಕ್ಷೆಯಿಂದ ಹೆಣ್ಣುಮಕ್ಕಳಿಗೆ ಶಿಕ್ಷಣೆಯ ವಿಷಯದಲ್ಲಿ ಅಗ್ರಸ್ಥಾನವನ್ನಿತ್ತ ಸಂಗತಿಯು ಪಾಠಕರಿಗೆ ಉಲ್ಲಿಖಿತ ಪಙ್ಕ್ತಿಗಳಿಂದ ಸ್ವಯಂ ವಿದಿತವಾಗದಿರಲಾರದು. ಮಹಾಪುರಾಣಾದಿ ಸಂಸ್ಕೃತ ಜೈನ ಗ್ರಂಥಗಳಲ್ಲಿಯೂ ಈ ಕಥನವು ಸಿಕ್ಕುವುದರಿಂದ ಇದು ಹೊಸ ವಿಷಯವಲ್ಲವೆಂದು ಕೆಲವರಿಗೆ ಕಂಡರೂ, ಸ್ತ್ರೀ ಶಿಕ್ಷಣೆಯ ವಿಷಯದಲ್ಲಿ ಕನ್ನಡ ಕವಿಪಿತಾಮಹನಾದ ಪಂಪನ ಸಮ್ಮತಿಯನ್ನು ಕನ್ನಡ ಭಾಷಾಭಿಜ್ಞರ ಮುಂದಿಡುವುದೇ ಈ ಲೇಖದ ಉದ್ದೇಶವು.

ಕಂ ॥ ಈ ವಯಸಮನೀ ಶೀಲಮ।
ನೀ ವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮ ॥
ತ್ತೇವೇಳ್ವುದೊ ನೀವೆ ಜಗತ್ಪಾ।
ವನೆಯರಿರಕ್ಕೆ ನಿಮಗಮುಗ್ಗಳರೊಳರೇ ॥

ಎಂಬೀ ಪದ್ಯದಲ್ಲಿ ಸ್ತ್ರೀಯರಿಗೆ ಶೀಲ ಮತ್ತು ವಿನಯ ಗುಣದೊಡನೆ ವಿದ್ಯೆಯೂ ಪರಮಾವಶ್ಯಕವೆಂದೂ, ಇದರಿಂದಲೇ ಅವರು ಜಗತ್ಪಾವನೆಯರಾಗುತ್ತಾರೆಂದೂ ಕವಿತಾಗುಣಾರ್ಣವನ ಕಥನವಾಗಿದೆ.

ವಿದ್ಯಾರ್ಜನೆಯೇ ಪ್ರತ್ಯೇಕ ಸ್ತ್ರೀಪುರುಷರ ಆದ್ಯಕರ್ತವ್ಯವೆಂಬ ಮಾತು ನಿರ್ವಿವಾದವಾದುದು. ಏಕೆಂದರೆ, ವಿದ್ಯಾರ್ಜನೆಯ ಹೊರತು, "ಜ್ಞಾನೇನ ಹೀನಾಃ ಪಶುಭಿಃ ಸಮಾನಾಃ" ಎಂಬ ನಾಣ್ಣುಡಿಯಂತೆ ಅವರು ಮನುಷ್ಯರಾಗಿ ಹುಟ್ಟಿಯೂ ಪಶುತುಲ್ಯರು. ಸುಖವು ಜ್ಞಾನದಿಂದಲೇ ಪ್ರಾಪ್ತವಾಗುತ್ತದೆಂದೂ, ಅದರ ಉನ್ನತಿಯಿಂದಲೇ ಸುಖದ ಉನ್ನತಿಯೂ ಆಗುವುದೆಂದೂ, ಅತಃ ಸ್ತ್ರೀಯರನ್ನು ಸುಶಿಕ್ಷಿತೆಯರನ್ನಾಗಿ ಮಾಡುವುದು ಪರಮಾವಶ್ಯಕ ಮತ್ತು ಲಾಭದಾಯಕವಾದ ಒಂದು ದೊಡ್ಡ ಕಾರ್ಯವೆಂದೂ ವಿಚಾರಪರರಾದ ದೊಡ್ಡದೊಡ್ಡ ವಿದ್ವಾಂಸರ ಅಭಿಪ್ರಾಯವಾಗಿದೆ. ಸ್ತ್ರೀಶಿಕ್ಷಣೆಯ ಹೊರತು ಸಮಾಜೋನ್ನತಿಯ ಸ್ವಪ್ನವನ್ನು ನೋಡುವುದು ತಪ್ಪು. ಸಮಸ್ತ ಗೃಹಕಾರ್ಯಗಳನ್ನೂ ನೋಡಿಕೊಳ್ಳುವುದು, ತನ್ನ ಸಂತಾನವನ್ನು ವಿದ್ಯೆಯಿಂದ ಅಲಂಕರಿಸುವುದು, ಪತಿಯ ಪ್ರತ್ಯೇಕ ಸತ್ಕಾರ್ಯಗಳಲ್ಲಿ ಸಹಾಯಮಾಡುವುದು, ಧರ್ಮಾನುಕೂಲವಾಗಿ ನಡೆಯುವುದು—ಇವೇ ಮುಂತಾದುವು ಶಿಕ್ಷಿತ ಸ್ತ್ರೀಯರ ಅಧೀನವಾಗಿವೆ. ಪ್ರಾಚೀನ ಕಾಲದಲ್ಲಿ ಎಷ್ಟೋ ವಿದುಷಿಯರು ಪುರುಷರ ಕಾರ್ಯಗಳಲ್ಲಿ ವಿಶೇಷವಾಗಿ ಸಹಾಯಮಾಡುತ್ತಿದ್ದರೆಂಬ ಅಂಶವು ಇತಿಹಾಸ ಪ್ರಸಿದ್ಧವಾಗಿದೆ. ಅಗಸ್ತ್ಯಋಷಿಯ ಪತ್ನಿಯಾದ ಲೋಪಾಮುದ್ರೆಯು ಪೂರ್ಣ ವಿದುಷಿಯಾಗಿದ್ದು ೧೭೯ನೆಯ ಋಚವನ್ನು ರಚಿಸಿರುತ್ತಾಳೆ. ಬೀಜಗಣಿತದ ಲೇಖಕಳಾದ ಅಂಜಾಸಿಯು

ಪ್ರಸಿದ್ಧ ವಿದುಷಿಯಾಗಿದ್ದಳು. ಶಂಕರಾಚಾರ್ಯರ ಪುತ್ರಿಯಾದ ವಿಧವೆ ಲೀಲಾವತಿಯು ತನ್ನ ತಂದೆಯಿಂದ ಗಣಿತ ಮತ್ತು ಧರ್ಮವನ್ನು ಕಲಿತು ಪೂರ್ಣ ವಿದುಷಿಯಾಗಿದ್ದ ಅಂಶವು ಸರ್ವ ವಿದಿತವಾಗಿದೆ. ಇಂದೂ ಆಕೆಯ ಗಣಿತ ಗ್ರಂಥವು ಉಚ್ಚ ಕೋಟಿಯ ಗಣಿತ ಗ್ರಂಥಗಳ ಶ್ರೇಣಿಯಲ್ಲಿ ಗಣಿಸಲ್ಪಡುತ್ತದೆ. ವಿಕ್ರಮಾದಿತ್ಯನ ನವ ರತ್ನಗಳಲ್ಲಿ ಅನ್ಯತಮನೂ ಸರ್ವಶ್ರೇಷ್ಠ ಜ್ಯೋತಿಷ್ಕನೂ ಆದ ವರಾಹಮಿಹಿರನು ಖಾನಾ ಎಂಬ ಸ್ತ್ರೀಯಿಂದ ಜ್ಯೋತಿಷವನ್ನು ಕಲಿತನು. ಭೋಜರಾಜನ ಸಮಯದಲ್ಲಿ ಕುಂಬಾರರ ಹುಡುಗಿಯೊಬ್ಬಳು ಕಾವ್ಯ ರಚನೆಯಲ್ಲಿ ಬಹಳ ಪ್ರಸಿದ್ಧಳಾಗಿದ್ದಳು. ಮಹಾರಾಜ ಶಾಲಿವಾಹನನ ಪತ್ನಿಯಾದ ಭಲಯವತಿಯು ವ್ಯಾಕರಣದಲ್ಲಿ ಪೂರ್ಣ ಪ್ರವೀಣೆಯಾಗಿದ್ದಳು. ಕಥಾಸರಿತ್ಸಾಗರದಲ್ಲಿ ಅನಂತದೇವನ ಹೆಂಡಿತಿಯಾದ ಸೂರ್ಯವತಿಯನ್ನು ಅಧಿಕವಾಗಿ ಹೊಗಳಿರುತ್ತದೆ. ನರಸಿಂಹರಾಜರ ಪುತ್ರಿಯಾದ ಲಕ್ಷ್ಮೀದೇವಿಯು 'ವಿವಿಧ ಚಂದ್ರ' ಎಂಬ ನ್ಯಾಯ ಗ್ರಂಥವನ್ನು ಬರೆದಿರುವಳು. ಮಂಡನಮಿಶ್ರನ ಸಹಧರ್ಮಿಣಿಯಾದ ಭಾರತಿಯ ಪಾಂಡಿತ್ಯವು ಲೋಕ ವಿಖ್ಯಾತವಾಗಿದೆ. ಶಂಕರಾಚಾರ್ಯ ಮತ್ತು ಮಂಡನ ಮಿಶ್ರ—ಇವರ ಶಾಸ್ತ್ರಾರ್ಥದಲ್ಲಿ ಈಕೆಯೇ ನ್ಯಾಯಾಧೀಶಳಾಗಿದ್ದಳು. ಪ್ರಾಚೀನ ಕಾಲದಲ್ಲಿ ಬೌದ್ಧ ಮತ್ತು ಜೈನರು ಸ್ತ್ರೀ ಶಿಕ್ಷಣೆಯ ವಿಷಯದಲ್ಲಿ ವಿಶೇಷ ಲಕ್ಷ್ಯವನ್ನು ಕೊಡುತ್ತಿದ್ದರೆಂದೂ ಅವರ ವಿದುಷಿಯರು ದೇಶವಿದೇಶಗಳಲ್ಲಿ ಹೋಗಿ ಧರ್ಮಪ್ರಚಾರಮಾಡುತ್ತಿದ್ದರೆಂದೂ, ಅಶೋಕನ ಅಣ್ಣನ ಮಗಳಾದ ಸಂಗಮಿತ್ರೆಯು ಧರ್ಮಪ್ರಚಾರಕ್ಕಾಗಿಯೇ ಸಿಲೋನ್ ವರೆಗೆ ಹೋಗಿದ್ದಳೆಂದೂ ಒಬ್ಬ ಪ್ರಸಿದ್ಧ ಜೈನೇತರ ಲೇಖಕರ ಕಥನವಾಗಿದೆ. ಕವಿತಾ ಕೌಮುದಿಯಿಂದ ಉಲ್ಲಿಖಿತ ವಿದುಷಿಯರಾದ ವಿಜ್ಜಿತಾ, ವಿಜಯಾ, ವಿಕಟ ನಿತಂಬಾ—ಇವರ ಹೊರತು—

ನೀಲೋತ್ಪಲ ದಲಶ್ಯಾಮಾಂ ವಿಜ್ಜಿತಾಂ ಮಾಮಜಾನತಾ।
ವೃಥೈವ ದಂಡಿನಾ ಪ್ರೋಕ್ತಂ ಸರ್ವ ಶುಕ್ಲಾ ಸರಸ್ವತೀ ॥
ಸರಸ್ವತೀವ ಕರ್ಣಾಟೀ ವಿಜಯಾಂತಾ ಜಯತ್ಯಸೌ।
ಯಾ ವೈದರ್ಭಗಿರಾಂ ವಾಸಃ ಕಾಳಿದಾಸಾದನಂತರಂ ॥

ಬಾಲಾ ತನ್ವೀ ಮೃದುರಿಯಮಿತಿ ತ್ಯಜ್ಯತಾಮತ್ರ ಶಂಕಾ।
ದೃಷ್ಟಾ ಕಾಚಿದ್ಭ್ರಮರ ಭರತೋ ಮಂಜರೀ ಭಗ್ನ ಪುಷ್ಪಾ ॥
ತಸ್ಮಾದೇಷಾ ರಹಸಿ ಭವತಾ ನಿರ್ದಯಂ ಪೀಡನೀಯಾ।
ಮಂದಾಕ್ರಾಂತಾ ವಿಸೃಜತಿ ರಸಂ ನೇಕ್ಷು ಯಷ್ಟಿಃ ಕದಾಚಿತ್ ॥

ಮೋರಿಕಾ, ಶೀಲಭಟ್ಟಾರಿಕಾ ಇವರಾದಿಯಾಗಿ ಹಲವು ವಿದುಷಿಯರ ಹೆಸರೂ ಪಾಠಕರಿಗೆ ಗೊತ್ತಾಗದಿರದು. ಇರಲಿ; ಈ ಲೇಖನದಲ್ಲಿ ನಾನು ಕೇವಲ ಪ್ರಖ್ಯಾತರಾದ ಪ್ರಾಚೀನ ಸಂಸ್ಕೃತ ವಿದುಷಿಯರ ಹೆಸರನ್ನು ಮಾತ್ರ ತಿಳಿಸಿರುತ್ತೇನೆ.

ಮಾಗಚ್ಛ ಪ್ರಮದಾಪ್ರಿಯ ಪ್ರಿಯ ಶತೈರ್ಭೂಯಸ್ತಮುಕ್ತೋ ಮಯಾ।
ಬಾಲಾ ಪ್ರಾಂಗಣಮಾಗತೇನ ಭವತಾ ಪ್ರಾಪ್ನೋತಿ ನಿಷ್ಠಾಂ ಪರಾಂ ॥
ಕಿಂಚಾನ್ಯತ್ಕುಚ ಭಾರ ಪೀಡನ ಸಹೈರ್ಯತ್ನ ಪ್ರಬದ್ಧೈರಪಿ।
ತ್ರುಟ್ಯತ್ಕಂಚುಕ ಜಾಲಕೈರನುದಿನಂ ನಿಃಸೂತ್ರಮಸ್ಮದ್ಗೃಹಂ ॥

ದೂತೀ ತ್ವಂ ತರುಣೀ ಯುವಾ ಸ ಚಪಲಃ ಶ್ಯಾಮಾಸ್ತಮೋಭಿರ್ದಿಶಃ।
ಸಂದೇಶಃ ಸರಹಸ್ಯ ಏವ ವಿಪಿನೇ ಸಂಕೇತಕಾವಾಸಕಃ ॥
ಭೂಯೋ ಭೂಯ ಇಮೇ ವಸಂತ ಮರುತಶ್ಚೇತೋಹರಂತ್ಯನ್ಯತೋ।
ಗಚ್ಛಕ್ಷೇಮ ಸಮಾಗಮಾಯ ನಿಪುಣೇ ರಕ್ಷಂತು ತೇ ದೇವತಾಃ ॥

ಇದೇ ಪ್ರಕಾರವಾಗಿ ಕನ್ನಡ, ಗುಜರಾತಿ, ಹಿಂದಿ, ಮೊದಲಾದ ಭಾರತೀಯ ಬೇರೆ ಬೇರೆ ಭಾಷಾ ಸಂಬಂಧಿ ವಿದುಷಿಯರ ಹೆಸರನ್ನು ಸಂಗ್ರಹಮಾಡಿದರೆ ಒಂದು ದೊಡ್ಡ ಪುಸ್ತಕವೇ ಆಗುವುದರಲ್ಲಿ ಸಂದೇಹವಿಲ್ಲ.

**ಕೆ. ಭುಜಬಲಿಶಾಸ್ತ್ರೀ, ಆರಾ.**




---

# *ರತ್ನಾಕರವರ್ಣಿಯೂ ಲಕ್ಷ್ಮೀಶನೂ

ಕಂ || ರಸಮಂ ನಾಲಗೆ ಕವಿತಾ|
ರಸಮಂ ಕವಿ ಕುಸುಮ ರಸಮನಳಿ ಮಾಳೆ ಸುಧಾ ||
ರಸಮಂ ಸುರರಕ್ಷೆಯ ಸುಖ|
ರಸಮಂ ಪರಮಾತ್ಮನರಿವನುಳಿದವರರಿಯರ್ ||

(ಅಭಿನವ ಪಂಪ)

ಮಾನವನ ಇಲ್ಲಿ ಅಲ್ಲಿಯ ಸೌಕರ್ಯಕ್ಕಾಗಿ ದೇವರು ಅದೆಷ್ಟೋ ಆಟ ನೋಟ ಕೂಟಗಳನ್ನು ಮಾಡಿ, ಮೇಲೊಂದು ಮಾಟವನ್ನು ಮಸಕು ಮಸಕಾಗಿ ಮಾಡಿದ್ದಾನೆ. ಈ ಮಾಟದ ಕಾಂತಿಗೇ ಮರ್ತ್ಯರು ಮನಸೋತವರಾಗುವುದು.

ದೇವರು ಈ ಮಾನವನಿಗೆ ಎಲ್ಲ ಜೀವಿಗಳಿಗೂ ಒದಗಲು ಆಗದಂಥ ಬುದ್ಧಿ ಸೌಕರ್ಯವೊಂದನ್ನು ದಯಪಾಲಿಸಿದ್ದಾನೆ. ಇದರಿಂದ ಅವನು ಅದೊಂದು ಮೇಲು ತೆರದ ಸೂಕ್ಷ್ಮತೆಯುಳ್ಳವನಾಗಿ ಇಲ್ಲಿಯ ಸುಖವನ್ನು ಆ ದೇವತೆಗಳ ಸೌಖ್ಯಕ್ಕೆ ಸರಿಮಾಡಿ ಸವಿಯುವನು; ಅಲ್ಲದೆ, ಜನತೆಗೆಲ್ಲ ಬಣ್ಣ ಬಳಿದು ತೋರಿಸುವನು.

ಪಾಮರನು ಅನುಭವಿಸುವ ಸೌಖ್ಯಾನಂದಗಳಲ್ಲಿ ಕಾವ್ಯಾನುಭವದಿಂದಾಗುವ ಆನಂದವು ಮೇಲುತೆರವಾದುದೆಂದೆನ್ನಬಹುದು. ಅದಕ್ಕಾಗಿಯೇ ಹಿರಿಯರು, ಹಾಡು ಹಿಗ್ಗಿನದು ಹುರುಪಿನದು ಎಂದು ಆಡಿ ನಿಲಿಸಿರುವರು. ಇದರ ಉಪಯೋಗವನ್ನು ಮನುಷ್ಯರು ತಾವು ತೆಗೆದುಕೊಂಡಂತೆ ಆಗುವುದು. ಇದು ಒಂದು ಬಗೆಯಿಂದ ನೀರೆನ್ನಬಹುದು; ಕಲ್ಲನ್ನಾಗಿ, ಉಗಿಯನ್ನಾಗಿ ಮಾಡಿಕೊಳ್ಳಬಹುದು, ಬಿರುಸಾಗಿಯೂ ಮೆದುವನ್ನೂ ಆಗಿಸಿಕೊಳ್ಳಬಹುದು.

ಇಂತಹ ಅನುಭವವನ್ನು ಜನತೆಗೆ ತಂದುಕೊಟ್ಟವರನೇಕರುಂಟು. ಅವರಲ್ಲಿ ರತ್ನಾಕರ ಲಕ್ಷ್ಮೀಶರು ಕನ್ನಡ ನುಡಿಪಾಯಿಗೆ ಒಂದು ಬಗೆಯಲ್ಲಿ ಅಲಂಕಾರಪ್ರಾಯರಾಗಿರುವರು. ಆದರೀಗ ಅವರನ್ನು ಬಣ್ಣಿಸುವುದು ನನ್ನ ಪೆಟ್ಟಿನ ಘಾಜೆಯಲ್ಲ; ಅವರಿರ್ವರ ಬಣ್ಣನೆಯ ಬಗೆಗಳನ್ನಷ್ಟೇ ಬಿಟ್ಟಿಟ್ಟು ತೋರಬೇಕೆಂಬುದೇ ಬಯಕೆಯಾಗಿದೆ; ಇದಿಲ್ಲಿಗೆ ಗುರಿಯು ಗುರುತು.

ಲಕ್ಷ್ಮೀಶ ರತ್ನಾಕರರ ಶೈಲಿಗಳು ಕೊನೆಗಂಡವಿರುತ್ತವೆ. ಆದರೆ ಅವೆರಡರ ಬಗೆಗೆ ಸ್ವಲ್ಪ ಅಂತರವಿದೆ. ಲಕ್ಷ್ಮೀಶನ ವಾಗ್ಝರಿಯು ಮೋಡಗಳನ್ನು ಮುದ್ದಿಟ್ಟು ಮೆರೆವ ಬೆಟ್ಟದ ಕೊಳ್ಳಗಳ ನಡುವೆ ಹಾಯ್ದು, ತನ್ನ ಶಕ್ತಿಯಿಂದ ಕಲ್ಲು ಗುಂಡು

* ಕೊಪ್ಪಳದ 'ಸಾಹಿತ್ಯ ಸೇವಾ ಸಮಿತಿ'ಯಿಂದ ಬೆಳಗಾವಿಯಲ್ಲಿ ನಡೆದ ೧೫ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕಾಗಿ ಬರೆದುಬಂದುದು.

ಗಳನ್ನು ಸವೆಯಿಸಿ ದಾರಿಯನ್ನು ಕೊರೆದುಕೊಂಡು ಹಿರಿದಾದ ಒಂದು ಸ್ವರದೊಂದಿಗೆ ಭೋರ್ಗರೆಯುತ್ತ ಮನವನ್ನು ವಿಸ್ಮಯವನ್ನಾಗಿ ಮಾಡಿ ಹೆದರಿಕೆಯಿಲ್ಲದೆ ಹರಿಯುವಂತಹ ಬ್ರಹ್ಮಪುತ್ರ ಸಿಂಧು ನರ್ಮದೆಗಳ ಪ್ರವಾಹದಂತಹುದು.

ರತ್ನಾಕರನ ವಾಗ್ಝರಿಯ ಶೈಲಿಯು ಇಂತಹುದಲ್ಲ. ಅವನದು ಇವುಗಳೆಲ್ಲವುಗಳ ಮೇಲಾಡಿ ಇವಕ್ಕೆ ತವರುಮನೆಯೆನಿಸಿಕೊಳ್ಳುವ ಪಾವನವಾದ ಮಾನಸ ಸರೋವರದಂತಹುದು. ಅದರ ಶಾಂತಿ ಸುಖ ತಂಪು ಪೆಂಪುಗಳನ್ನು ನದಿಗಳಲ್ಲಿ ಹುಡುಕಬೇಕಾಗುತ್ತದೆ. ಅದಲ್ಲದೆ, ಇಂತಹ ಪ್ರವಾಹಗಳ ಮೇಲೆ ಸುಖವನ್ನು ಹೊಂದಬೇಕೆಂದು ಬಯಸಿ ಪೋಗಿ ಅದರ ಸಪ್ಪಳದಲ್ಲಿ ಶಾಂತಿಯನ್ನು ಕಾಣದೆ ವಿಸ್ಮಯದಿಂದ ಒತ್ತಟ್ಟಿಗಾಗದೆ ಮೇಲೆ ಅತ್ತಿತ್ತ ಹಾರಾಡುವ ಹಕ್ಕಿಗಳನ್ನೆಷ್ಟೋ ಕಾಣಬಹುದು. ಆದರೆ ಆ ಕದಲು ಇಲ್ಲದ ಸರೋವರದಲ್ಲಿ ಈ ತೆರನಾಗಿ ಉಲಿವ ಪಕ್ಷಿಗಳು ಒಂದೆರಡರಣಿಕೆಯಲ್ಲಿ ಬರುವುವು. ಇಲ್ಲಿ ಸರೋವರದಲ್ಲಿ ಪಕ್ಷಿಗಳು ಕೊನರಿ ಕಮಲ ಲತಾ ಪತ್ರಗಳ ಮೇಲೆ ಕುಳಿತು, ಕೋರಕಗಳ ಅಲೆದಾಟಕ್ಕೆ ಒಲೆದು ಕುಣಿದು ನಲಿಯುವುದು ಕಂಗೊಳಿಸುವುದು. ಅಲ್ಲದೆ, ಮೊಗ್ಗೆ ಮೈದೆರೆವುದನ್ನು ಕಾದುಕೊಂಡು ಮೇಲೆ ರವದೊಂದಿಗೆ ಆಡುವ ಗುಂಗಿಗಳ ಗುಂಪು ಅಲ್ಲಲ್ಲಿ ಮೊಗ್ಗೆ ಮೊಗ್ಗೆಗೆ, ಕಂಡಕಂಡಲ್ಲಿ ಕೊನರಿಸುವುವು. ಚಿತ್ತವನ್ನು ಚಂಚಲಗೊಳಿಸದೆ ಈ ಬಗೆಯ ಆಟಗಳ ಸೌಕರ್ಯವು ನದಿಯಲ್ಲಿ ನೋಡಲು ಸಿಕ್ಕದು. ತಾನು ಜಗಕೆ ಕಾಣಿಸಿಕೊಳ್ಳಬೇಕೆಂದು ಸಿಲ್ಲದೆ ಹರಿಯುತ್ತಿರುವ ಪ್ರವಾಹದಲ್ಲಿ ಸೌಂದರ್ಯ ಸೂರ್ಯನನ್ನುದಯಿಸುವಂತಹ ತಾವರೆಯ ವಲ್ಲಿಗೆಲ್ಲಿ ಅಸುವು? ಉದಿಸಲಿಕ್ಕೆ ಹೋಡಿ? ಕಠಿನವಾದ ಆವು ಕೂಡ ಅಸುವುಗಾಣದೆ ದಂಡೆಗುಂಟ ಬೆಳೆಯುವುದು; ಎಂದಮೇಲೆ, ಇಲ್ಲಿ ಇದರ ಸಾಹಸಾರ್ಭಟಗಳೇ ಹೆಚ್ಚಾಗಿ ಕಾಣುವುದು ಸಹಜ. ಲಕ್ಷ್ಮೀಶನ ನುಡಿದೊರೆಯು ಬಲವು ಅವನ ಸಾಹಸ, ವಿದ್ವತ್ತೆ, ಚಾತುರ್ಯ—ಇವುಗಳಿಂದ ಬೆಂಬಲಿಸಲ್ಪಟ್ಟುದು. ಅವನಲ್ಲಿ ನವೆಯದಂತೆ ಕೂಡಿ ಬಿದ್ದಿದ್ದ ಶಬ್ದ ಭಾಂಡಾರದಿಂದ ನಲವಿಗಾಗಿ ಆಯ್ದುಕೊಂಡು ಆಡಿ ನೋಡಿದ ಒಂದು ಸಣ್ಣ ಬಳಕೆ. ಅವನು ತನ್ನ ಬುದ್ಧಿ ಚಾತುರ್ಯವನ್ನು ಬಳಸಿ ಬಣ್ಣಗೊಟ್ಟ ಸುಲಲಿತವಾದ ಒಂದು ಸಣ್ಣ ಸರಣಿ.

ಆದರೆ ರತ್ನಾಕರನದು ಈ ಬಗೆಯಿಂದಾದ ಕಾವ್ಯವಲ್ಲ. ಕಾವ್ಯಯೋಗ ಸಾಧನೆಯಿಂದ ಸಂಸ್ಕಾರ ಹೊಂದಿದ ಬಗೆಯ ಬೆಂಬಲದಿಂದಾದುದು. ಕಲಿಸಿ ಕೊಟ್ಟುದನ್ನು ಕೂಡಿಟ್ಟುಕೊಂಡು ಮುದ್ದುಮುದ್ದಾಗಿ ಆಡುವಂತಹ ಕೀಟಕದ ರವವಲ್ಲ ರತ್ನಾಕರನದು. ನೈಸರ್ಗಿಕತೆಯ ಸೋರೆ ಮುಟ್ಟಿ ಹಾಡುವಂತಹ ಕೋಗಿಲೆಯ ಸರಲ ಸ್ವರವು. ತಾಯಿ ತಂದೆಗಳು ಮಕ್ಕಳ ಮುದ್ದಾಟವನ್ನು ನೋಡಿ ಮೆಯ್ದಡವಿ ಮುದ್ದಿಟ್ಟು ಮರೆಯದಂತೆ ಹೇಳಿಕೊಳ್ಳುವ ಕರುಳಿನ ವಚನಗಳು. ಇದರ ಸವಿಯು ಕೂಡಿ ಕಲಿತು ಆಡಿ ಆನಂದಿಸುವುದಕ್ಕಿಂತ ಎಷ್ಟೋ ಆಚೆಯದು. ಇಂಥದನ್ನು ಸವಿಯುವುದು ಕೂಡ ಕಂಡಕಂಡವರಿಗೆ ಸಾಧಿಸದು.

ಲಕ್ಷ್ಮೀಶನು ಎಷ್ಟೇ ಸುರಸ ಸರಸ ಕವಿಯಾದರೂ ಆಧಾರಗಳ ಅಧೀನನು. ಅಂತೆಯೇ ತನ್ನ ಕಾವ್ಯದ ಹೆಚ್ಚಳಿಕೆ ಹೀಗಾಗಲಿಕ್ಕಿಲ್ಲವೇ ಎಂದು ತನ್ನನ್ನೇ ತಾನು ಕೇಳಿಕೊಂಡನು :—

ವರ ವರ್ಣದಿಂದೆ ಶೋಭಿತವಾಗಿ ರೂಪ ವಿ।
ಸ್ತರದಿಂದ ಚೆಲ್ವಾಗಿ ಮಧುರತರ ನವ ರಸೋ।
ದರ ಭರಿತದಿಂದ ವಿಲಸಿತವಾಗಿ ಸುಮನೋನುರಾಗದಿಂ ಪ್ರಚುರವಾಗಿ ॥
ನಿರುತ ಮಂಜುಳ ಶಬ್ದದಿಂದೆ ಕಿವಿಗಿಂಪಾಗಿ।
ಚರಿಸುವ ಸುಲಲಿತ ಷಟ್ಪದಿಗಳೆಡೆವಿಡದೆ ಝೇಂ।
ಕರಿಸದಿರ್ಪವೆ ಬಂದು ಸೆರೆದ ವಿದ್ವತ್ಸಭಾ ನೀರೇರುಹಾಕರದೊಳು ॥

ರತ್ನಾಕರನು ಇಂತಾಗಿ ಎದೆ ಇಳಿಯದೆ ಇಂತೆಂದುಕೊಂಡು ಆಡಿರುವನು :—

ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ। ರಚಿಸುವರಾನಂತು ಪೇಳೆ।
ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ। ನಿಚಿತ ಪ್ರಯೋಜನವೆನಗೆ ॥

ಕೃತಿಯ ಪೇಳ್ವಾತ ಸಾಮಾನ್ಯನಹುದು ಕಾವ್ಯ। ಪತಿ ಚಕ್ರಿ ಸಾಮಾನ್ಯನಲ್ಲ।
ಕೃತಿಗಾದಿನಾಥನ ಕೂರ್ತು ಕೇಳ್ವುದು ಕಾವ್ಯ। ಕೃತನ ದೋಷವ ನೋಡಬೇಡ ॥

ಆಗಮುವಧ್ಯಾತ್ಮವಳವಟ್ಟು ಶೃಂಗಾರ। ತ್ಯಾಗ ಭೋಗದ ವೋಡಿ ಮೆರೆಯೆ।
ಭೋಗಿ ಯೋಗಿಗಳೆದೆ ಜುಮ್ಮು ಜುಮ್ಮನೆ ನೇದು। ದಾಗಿ ಸೊಲ್ಲಿಸುವೆನಾಲಿಸಿರೊ ॥

ಇಂತು ಎಂದುದನ್ನು ಅಚ್ಚುಮೆಚ್ಚಾಗಿ ಮಾಡುತ್ತ ಹೋಗಿರುವನು. ಅಲ್ಲದೆ, ತನ್ನ ಹಾಡನ್ನು ತಾನೇ ಕೇಳುವಂತೆ ಮಾಡಿ ಎಲ್ಲ ತೊಡಕು ನಿಯಮಗಳನ್ನೂ ಹಿಂದೆ ಬಿಟ್ಟು ಹೀಗೆ ನುಡಿದಿರುವನು :—

ಅಯ್ಯಯ್ಯ ಚನ್ನಾದುದೆನೆ ಕನ್ನಡಿಗರು। ರಯ್ಯಾಮಂಚಿದೆಯೆನೆ ತೆಲುಗಾ।
ಅಯ್ಯಯ್ಯ ಎಂಚಪೊಲರ್ಲಾಂಡೆಂದು ತುಳುವರು। ಮೈಯುಬ್ಬಿ ಕೇಳಬೇಕಣ್ಣಾ॥

ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು। ವಿಕಳವಾದರು ದೋಷವಲ್ಲ।
ಸಕಲ ಲಕ್ಷಣಕಾಗಿ ಬಿರುಸು ಮಾಡಿದರೆ ವ। ಸ್ತುಕದ ಬದನೆ ಕಾಯಹುದು ॥

ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು। ಕಂದಿ ಕುಂದಿಹುದೊ ನಿರ್ಮಲವೊ।
ಸಂಧಿಸಿ ಶಬ್ದದೋಷಗಳೊಮ್ಮೆ ಸುಕಥೆಗೆ। ಬಂದರೆ ಧರ್ಮ ಮಾಸುವುದೆ ॥

ಇಂತು ಬಂದು ಬಗೆಯಿಂದ ರುಚಿಸುವಂತೆ ಹೇಳಿ ತನ್ನ ಕಥಾನಾಯಕನಾದ ಭರತೇಶನ ಬಣ್ಣನೆಯನ್ನು ಬಿಚ್ಚಿ ಬೆಲೆಗಟ್ಟುವಂತೆ ಮಾಡಿರುವನು.

ಲಕ್ಷ್ಮೀಶನ ನುಡಿಗಳು ಈ ಬಗೆಯವಲ್ಲ. ಅವನು ತನ್ನ ಕಥಾನಾಯಕ ನಾಯಿಕೆಯರ ಕೃತಿಯ ಬಣ್ಣನೆಯನ್ನು ಬುದ್ಧಿಯಿಂದ ಮಾಡಿರುವನು. ಆನಕೆ ಅವನ ಕಾವ್ಯವನ್ನು ಕುಳಿತು ಮನದಂದು ಹಾಡಿದರೆ ಕೆಲವೆಡೆ ಮೂಗು ಮುರಿದು ಏಳಬೇಕಾಗುವುದು. ಇದರಿಂದ, ಲಕ್ಷ್ಮೀಶನ ಶೈಲಿಯು ಒಲ್ಲದ್ದು ಎಂದು

ಊಹಿಸಲಾಗದು. ಅವನ ಆ ಬಗೆಯ ನುಡಿಯಲ್ಲಿ ಮೇಲು ತೆರನಾದ ಕವಿತೆಗಳಿಲ್ಲವೆಂದರ್ಥವಲ್ಲ. ಅವನ ಕವಿತೆಗಳಿಂದ ಕೆಲಕಾಲ ವಾಚಕರು ಹುಚ್ಚು ಹಿಡಿದವರಾಗುವರೆಂಬಲ್ಲಿ ಸಂದೇಹವಿಲ್ಲ. ರತ್ನಾಕರನಂತೆ ಅವನ ವರ್ಣನಾ ಸಾಮರ್ಥ್ಯವೂ ಅವರ್ಣನೀಯವೇ ಸರಿ. ಆದರೆ 'ಅಪೌರುಷೇಯ'ವೆಂದೆನಿಸಿಕೊಳ್ಳದಿಷ್ಟೆ. ಲಕ್ಷ್ಮೀಶನ ಕೃತಿಯಲ್ಲಿ ಅಗ್ಗವಾಗಿ ಸಿಕ್ಕುವುದೆಂದರೆ ಎಲ್ಲ ಬಗೆಯ ಅಲಂಕಾರಗಳೇ. ಅವುಗಳ ಸೊಬಗು ಸೌಕರ್ಯವನೆಂತೆಂತೊ ಅಲ್ಲಿ ಕಾಣಬಹುದು. ಇರಲಿ; ಇನ್ನು ಲಕ್ಷ್ಮೀಶನ ಶೃಂಗಾರ ವರ್ಣನೆಯ ಬೆಡಗನ್ನೂ, ರತ್ನಾಕರನ ಶೃಂಗಾರ ಸೌಕರ್ಯವನ್ನೂ ತಿಳಿದು ನೋಡುವ. ಯಾವುದು ಎಷ್ಟೊಂದು ಬೇಕಾಗಿದೆ ಎಂಬುದು ಜೈಮಿನಿಯ ಹನ್ನೊಂದನೆಯ ಸಂಧಿಯಲ್ಲಿ ಸುಧನ್ವ ಪ್ರಭಾವತಿಯರ ಭಾವದ ಬಣ್ಣನೆಯೂ, ಹದಿನೆಂಟನೆಯ ಸಂಧಿಯಲ್ಲಿ ಸೀತಾ ರಾಮರ ಇದೇ ಬಗೆಯ ವರ್ಣನೆಯೂ ಅದಾವ ಬಗೆಯಾಗಿ ಆನಂದ ಸುಧೆಯನೀಂಟಿಸುವುವೊ ನೋಡೋಣ.

ಸುಧನ್ವನು ಯುದ್ಧಸನ್ನದ್ಧನಾಗಿ ಸತಿ ಪ್ರಭಾವತಿಯನ್ನು ಕಾಣಹೋಗಲು, ಆ ಸಮಯದಲ್ಲಿಯ ಲಕ್ಷ್ಮೀಶನ ಚಾತುರ್ಯದ ಈ ನುಡಿಗಳನ್ನಷ್ಟು ಕೇಳಿರಿ:—

**ಚಂದ್ರಮಂಡಲ ಸದೃಶ ವದನದೆಳ ನಗೆಯ ನವ।**
**ಚಂದ್ರಿಕೆಯೆನಲ್ಮೇಲುದಿನ ದುಕೂಲಂ ಮೆರೆಯೆ।**
**ಚಂದ್ರ ತಿಲಕದ ರಾಗಮಂ ಚಿತ್ತದನುರಾಗಮಂ ಸೂಚಿಪಂತೆ ಸೊಗಸೆ ॥**
**ಇಂದ್ರನೀಲದ ಮಣಿಯ ಮಿರುಗುವ ಲಲಿತ ಕಾಂತಿ।**
**ಸಾಂದ್ರಮಾದವೊಲೆಸೆವಳಕ ಪಾಶದಿಂದ ನಯ।**
**ನೇಂದ್ರಿಯವನುರೆ ಕಟ್ಟಿ ಕೆಡಸದಿರಳೆಂಬಿನಂ ರಂಜಿಸಿದಳಾ ಮೃಗಾಕ್ಷಿ ॥**

**ಸ್ಫುರಿಸುವೊಳ್ದೊಡೆಯ ಬೆಡಗಿನ ನಡೆಯ ನಿರಿಯ ಸಿಂ।**
**ಗರದುಡಿಯ ತೆಳ್ವಾದಸಿಯ ಪೊಡೆಯ ಚೆಲ್ವದಳಿ।**
**ದುರದೆಡೆಯನಿಂಬುಗೊಂಡಿಟ್ಟೆಡೆಯ ಬಲ್ಮೊಲೆಯ ಪೊಳೆವ ಕಣ್ಮಲರ ಕಡೆಯ ॥**
**ತ್ವರಿಪ ಭುಜವಲ್ಲರಿಯ ತೊಡವುಗಳ ಮೆಯ್ಸಿರಿಯ।**
**ಬಿರಿ ಮುಗುಳ ಕಬರಿಯ ಕಲೆಗಳಿಡಿದ ಸೌಂದರಿಯ।**
**ದರಸಿ ನಿಜ ಪತಿಯ ಮುಂದಚ್ಚರಿಯ ಬಗೆಗೊಂಡಳಂದು ಬೇರೊಂದು ಪರಿಯ ॥**

**ಮುಡಿಯ ಪೊಸ ಮಲ್ಲಿಗೆಯ ಸೂಸುವೆಳ ನಗೆಯ ಸವಿ।**
**ನುಡಿಯ ಬಾಯ್ದೆರೆಯ ಹೊಳೆಹೊಳೆವ ದಶನದ ಮಿಸುಪ।**
**ಕಡೆಗಣ್ಣ ತೊಳಗುವ ನಖಾವಳಿಯ ಥಳಥಳಿಪ ಕಂಠಮಾಲೆಯ ಮುತ್ತಿನ ॥**
**ತೊಡವುಗಳ ಘನಸಾರದನುಲೇಪನದ ಸಣ್ಣ।**
**ಮಡಿದುಕೂಲದ ಬೆಳ್ವಿಗಕೋಮಲಾಂಗದೊಳ್।**
**ಬಿಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ಥಳಿಯೊಲವಳೆಸೆದಳು ॥**

ಈ ಕವಿತೆಗಳಲ್ಲಿ ಒಂದು ಬಗೆಯ ಸುರಸ ಸರಣಿಯು ಸುಲಲಿತವಾಗಿ ಹೊರ ಹೊರಟಿರುವುದು ಮೆಚ್ಚುವಂತಿದೆ. ಬಣ್ಣಿಸುತ್ತ ಬಣ್ಣಿಸುತ್ತ ಮೆಟ್ಟಿಲಿನೊಂದಿಗೆ

ಮೇಲುತನಕ ಮುಟ್ಟಿ ವಿಶ್ರಮಿಸಿ ಮುಂದುವರಿದು ಮೊದಲ ಸ್ಥಿತಿಗಿಳಿಯುವುದನ್ನು ಮನನಿಸಿ ಓದಿದಲ್ಲಿ ಮನವೊಲೆಯುವಂತಿದೆ. ಆದರೆ ಈ ಬಗೆಯ ಶಬ್ದ ಸರಣಿಯ ಸೌಕರ್ಯವು ಬಂಗಾಲಿ ಚಿತ್ರ ಕಲೆಯನ್ನು ಹೋಲುವ ಆ ಸರಲ ರತ್ನಾಕರನ ಕವಿತ್ವದಲ್ಲಿ ಬರಲು ಅದಕ್ಕಿಲ್ಲ ಇಂಬು; ನಾನಾ ಬಗೆಯ ಶೃಂಗಾರದ ಬಣ್ಣನೆಯನ್ನು ಕಂಡು ಕೇಳಿ ನೋಡಿ ಬಲ್ಲ ವಾಚಕರು ರತ್ನಾಕರನ ಚಾತುರ್ಯವನ್ನಷ್ಟು ಕೇಳಿ ನೋಡಬೇಕು. ಕಂಡು ಕೊಸರಬಹುದಾದ ವಸ್ತುವನ್ನು ವರ್ಣಿಸಿ ಕಣ್ಣಮುಂದೆ ಕಟ್ಟುವಂತೆ ಮಾಡುವುದೇ ಅಸಾಧಾರಣ ಚಾತುರ್ಯ. ಕಂಡು ಕೇಳುವ ಸಂಗೀತದಿಂದುಂಟಾಗಬಹುದಾದ ಆನಂದವನ್ನು ಸಣ್ಣ ಸಣ್ಣ ಮಾತುಗಳಿಂದ ಬಣ್ಣಿಸಿ ಅದರ ಭಾವನೆಯನ್ನು ಓದುಗರಿಗಾಗಿ ಕೊಟ್ಟು ಆ ಆನಂದವನ್ನನುಭವಿಸುವಂತೆ ಮಾಡುವ ಶಕ್ತಿಗೆ ಅಸದೃಶವಾದ ಶಕ್ತಿ ಎನ್ನಬೇಕು. ರತ್ನಾಕರನು ನೃತ್ಯ ಗಾಯನ ಕಲೆಗಳಲ್ಲಿ ಅದೆಷ್ಟು ನಿಪುಣನಿದ್ದನೆನ್ನುವುದು ಅವನ ಈ ಕೆಳಗಣ ಕವಿತೆಗಳಿಂದ ಗೊತ್ತಾಗುವುದಲ್ಲದೆ ವಾಚಕರು ಅವನ ಸ್ತ್ರೀ ವರ್ಣನಾ ಚಾತುರ್ಯವನ್ನೂ ಕಾಣಬಹುದು :—

ನೋಟ ರಾಯನ ಮೇಲೆ ನೆನಹು ರಾಗದ ಮೇಲೆ | ನೀಟ ತಂತಿಯ ಮೇಲೆ ಬೆರಳು |
ಚಾಟು ಕಾಂತೆಯರು ಭಾಂದಸಿಕೆಯ ನೂಂಕಿ | ಸಘಾಟಿಕೆಯಿಂದ ಪಾಡಿದರು ||

*　　*　　*　　*　　*

ನಾಭಿಯಿಂದೇಳಿಸಿ ಎದೆಯೊಳೋಲಾಡಿಸಿ | ಶೋಭೆಯ ಮಾಡಿ ಕಂಠದೊಳು |
ಆ ಭೂಪ ಮೆಚ್ಚೆ ರಾಗಿಸಿದರು ಶ್ರೀದೇವಿ | ಶೋಭನವನು ಪಾಡುವಂತೆ ||

ಅಳಿವಂತೆ ರಾಗವ ತುಳಿವಂತೆ ಜಾಡ್ಯವ | ಹಿಳಿವಂತೆ ಮೋಹನ ರಸವ |
ತೊಳೆವಂತೆ ಮನವ ಸಂಜೀವನಾಮೃತವನು | ತಳಿವಂತೆ ರಾಗದೋರಿದರು ||

*　　*　　*　　*　　*

ಸಂಜೆಗೆಂಪೊಲೆವಂತೆ ತೆರೆ ತೊಲಗಿತು ಕಣ್ಗೆ | ಕಂಜಾಕ್ಷಿಯರು ಕಾಣಿಸಿದರು |
ರಂಜಿಪ ನಳಿದೋಳ್ಗಳೆತ್ತಿ ಸುವರ್ಣ ಪು | ಷ್ಪಾಂಜಲಿ ಮಾಡಿದರೊಡನೆ ||

ನಡುಮುಟ್ಟ ತೆರೆಯಿದ್ದುದಾಗ ತೋಳ್ಗಳನೆತ್ತಿ | ಕಡೆಗಣ್ಣೊಳರಸನ ನೋಡಿ |
ಬಿಡಗಿಂದ ಪುಷ್ಪಾಂಜಲಿ ಮಾಡಿದರು ಕಾಮ | ನೊಡಲನಲರ್ಗಣೆಗಳ ಸೂಸಿ ||

ನಡುವಿನೊಳಿಟ್ಟ ಹಸ್ತಗಳು ಪಸರಿಸಿದ | ತೊಡೆ ಸಾರ್ದ ಮಡಗಳಿಂದಾಗ |
ಮಿಡುಕದೆ ನಿಲುವಿನ ರೇಖೆದೋರಿದರು ಮು | ಪ್ಪೊಡಮಿಯಂದವ ತೋರುವಂತೆ ||

*　　*　　*　　*　　*

ಪಚ್ಚೆಯ ಚಲ್ಲಣ ಪಚ್ಚೆ ವರ್ಣದ ಕಾಸೆ | ಬೆಚ್ಚ ಮುತ್ತಿನ ಮೊಲೆಗಟ್ಟು |
ಅಚ್ಚ ಜವ್ವನೆಯರಿದ್ದರು ನೋಡುವರ ಮನ | ಮೆಚ್ಚಿದ್ದು ಮೇಲೆ ಬೀಳ್ವಂತೆ ||

ತಿಟ್ಟವಿಕ್ಕಲು ತಿದ್ದೇರಿದೆನಿಸುವ ಮೈಯ | ಕಟ್ಟಾಯಮೇರಿದ ಪ್ರಾಯ |
ಕಟ್ಟಾಣಿವೆಂಗಳೆಸೆದರು ನಟ್ಟುವರೊಳು | ಹುಟ್ಟ ತಿಕ್ಕ ವರೆಯೆಂಬಂತೆ

ತೊಟ್ಟ ಸಿಂಗಾರದ ಕೊಂಬು ಬಿಂಕಣೆ ರಸ| ತೊಟ್ಟಿಡುವಂತೆ ಲಾವಣ್ಯ|
ಮುಟ್ಟಿ ಕುಂದುವ ಮೈಯು ಪೆಂಗಳಿದ್ದರು ನಿಂದ| ತಿಟ್ಟ ಸೋಲಿಸೆ ರಾಜ ಸಭೆಯ ||

ನೇತ್ರ ಮೋಹಿನಿ ಮೆಲ್ಲನೊಲೆದು ರಾಯನ ನೋಡಿ| ನೇತ್ರ ಸುಖವ ಸೂಚಿಸಿದಳು|
ಸೂತ್ರಿಸಿ ಚಿತ್ತ ಮೋಹಿನಿ ಕೂಡೆ ಚಿತ್ತವ| ಸೂತ್ರದಂತಗುಲಾಡಿಸಿದಳು ||

ಹಜ್ಜೆ ಸರಿದು ಮೆಲ್ಲನೊಲೆದು ಕಾಲ ಹೊಂ| ಗೆಜ್ಜೆ ಘಲಿರು ಘಲಿರೆನಲು|
ಸಜ್ಜುಕ ಮೊಲೆಯ ಪೆಣ್ಗಳು ಮುಂದೆ ನಡೆದರು| ಪಜ್ಜಳಿಸುತ ಮುಖ ಕಾಂತಿ ||

ನೋಟದೊಳಗೆ ಕೊಂದರೊಮ್ಮೆ ನೋಟಕರನು| ನಾಟಿಸಿ ನಸು ನಗೆಯಿಂದ|
ಊಟಿ ಮಾಡಿದರು ಮೈಯೊಲಿದಾಟದಿಂದೆದೆ| ಗೋಟೆಯ ಕೊಂಡರೇನೆಂಬೆ ||

ಎತ್ತ ನೀಡಿತು ಹಸ್ತವತ್ತ ದೃಷ್ಟಿಗಳಲ್ಲಿ| ಚಿತ್ತವೆಲ್ಲವು ಭಾವ ರಸವು|
ತತ್ತತಿ ತಿತ್ತಿತಿ ಯಾರೆ ಯಾರೆಯೆನ| ಲತ್ತಿತ್ತಲೊಲೆದು ಹರಿದರು ||

ತಳರ್ವಜ್ಜೆ ತಟಪುಟನಿಡುವಾಗ ಏಟರೆನೆ| ತಳಹೊಳಗೊಳುತಿಹುದೊಡನೆ|
ಒಲೆದು ಕಾಲ್ನೀಡೆ ಮುನಿದು ತಮ್ಮನೊದೆದ ನ| ಲ್ಲಳ ನೆನೆದರು ರಾಜ ಸುತರು ||

*    *    *    *    *

ಆಳಾಪಗೇಳುತ ನಿಂದರಿಬ್ಬರು ನಾಟ್ಯ| ಶಾಲೆ ಮೋಹನದಲ್ಲಿ ಮುಳುಗೆ|
ಸೀಳಿ ಹರಿದರೆಡಬಲಕೆ ಬೆರಸಿ ಪಾರಿ| ವಾಳದ ಪಕ್ಕಿಗಳಂತೆ ||

ಇದಿರಾಗುವರು ಬೆನ್ನು ಬೆನ್ನುಗಾಣಿಸಿ ತೇಲ್ವ| ರದ ಬಿಟ್ಟು ಸಸಿನೆ ಹರಿವರು|
ಇದೆ ಇದೆ ಇಲ್ಲಿಲ್ಲಿ ಇತ್ತಿತ್ತಲೆನೆ ಹೊಳೆ| ದದೆ ಝಾಮ ಬಯಲಾದರೊಡನೆ ||

ಆಯೆಂದು ಕೂಡೆ ರಾಗವನೆತ್ತಿ ಸಭೆಯೊಳು| ಗಾಯಕ ಕೇಳಿಸುತಿದ್ದ|
ಮಾಯಕಾತಿಯರಂತೆ ಮತ್ತೆ ಬಂದರು ಮುನ್ನ| ಮಾಯವಾದೆಳವೆಂಗಳವರು ||

ಈ ಕವಿತೆಗಳಲ್ಲಿ ರತ್ನಾಕರನು ತುಂಬಿದ ಮಾಧುರ್ಯವು ಅದೆಷ್ಟು ಸುಲಲಿತ ಸುಮನೋಹರವಾಗಿದೆ ಎನ್ನುವುದನ್ನು ಒಡೆದು ಹೇಳಬೇಕಾಗಿಲ್ಲ. ವೀಣೆಯೊಂದಿಗೆ ಗಾನ ಮಾಡುವ ನಾಯಿಕೆಯನ್ನೂ, ಅವಳ ಆ ಚರ್ಯೆಯನ್ನೂ ಮನ ಮುಟ್ಟುವಂತೆ ಆ ಪುಟ್ಟ ನಾಲ್ಕೇ ಸಾಲುಗಳಲ್ಲಿ ನೋಡಗೊಟ್ಟುದು ಎಷ್ಟು ಸ್ವಜವಾಗಿದೆ! ಮುಂದಿನ ಕೆಲ ನುಡಿಗಳಲ್ಲಿ ಬಣ್ಣಿಸಿದ ನೃತ್ಯ ಗೀತಗಳನ್ನೋದುವಾಗ ಕಣ್ಮುಂದೆ ನಾಟ್ಯ ಕನ್ನಿಕೆಯರು ಕುಣಿಯುತಿರುವಂತೆ ಭಾಸವಾಗದಿರಲಾರದು. ರತ್ನಾಕರನು ಆ ಭೂಮಿಕೆಗಳನ್ನು ಬಣ್ಣಿಸುತ್ತ ಬಣ್ಣಿಸುತ್ತ ಅವರ ಅಭಿನಯಗಳಲ್ಲಿ ಅಡಕವಾಗಿದ್ದ ಅಂತರ್ಭಾವಗಳನ್ನು ನವ ನವ ದೃಷ್ಟಿಯಿಂದ (ಹೊಸಗಣ್ಣಿನಿಂದ) ಹೊಳೆಗಣ್ಣಿನಿಂದ ಹೊಳೆದುಕೊಂಡು ತಿಳಿಯಪಡಿಸಿದ್ದಾನೆ. ನೇತ್ರ ಮೋಹಿನಿಯು ರಾಯನಿಗೊಲೆದು ನೇತ್ರ ಸುಖವ ಸೂಚಿಸುವಷ್ಟರಲ್ಲಿ, ಚಿತ್ತ ಮೋಹಿನಿಯು ಕೂಡಲೆ ದೃಷ್ಟಿ ಚೆಲ್ಲಿ, ಮುಗ್ಧವಾಗಿದ್ದ ರಾಯನ ಚಿತ್ತವನ್ನು ಅಲುಗಿಸಿ ಆನಂದವನ್ನುಣಿಸಿದ ಆ ಆಟದ ಅನುಭವವನ್ನು ಸಣ್ಣ ಸಣ್ಣ ಶೃಂಗಾರ ಉಪಮೆಗಳಿಂದ ಮನ ಮೆಚ್ಚುವಂತೆ ಮಾಡಿ ಅನನುಭವಿಕರಿಗೂ ಕೂಡ ತಿಳಿಯಗೊಟ್ಟು ತಲೆದೂಗಿಸಿಬಿಟ್ಟಿರುವನು. ರತ್ನಾಕರನ ಈ ಬಗೆಯ ಶೃಂಗಾರ ವರ್ಣನೆಯು ಎಲ್ಲರ ವರ್ಣನೆಗಿಂತ ಹೆಚ್ಚಾಗಿ ಬಗೆಗೊಳ್ಳುವಂತಿದೆ.

ಲಕ್ಷ್ಮೀಶನು ಸುಧನ್ವ ಪ್ರಭಾವತಿಯರ ಆ ಮುಂದಣ ಸಂದರ್ಭಗಳನ್ನು ಬೆಳೆಸಿ ಒಣ್ಣಗೊಟ್ಟು ಅಂಡವಾಗಿರಿಸಿದ ಚಾತುರ್ಯವನ್ನು ನೋಡೋಣ. ಅವೆಷ್ಟು ಹೃದಯ ವೀಣಾ ತಂತುವನ್ನು ಮಿಡಿಯುತ್ತಿವೆ!—

........................|
ಗಮನಕನುಕೂಲೆಯಾಗೆನುತ ಗಲ್ಲಂ ಪಿಡಿದು!
ಕಮಲಾಕ್ಷಿಯಂ ಮುದ್ದುಗೈದು ಬೀಳ್ಕೊಂಬಿನಿಂ ಕಾತರಿಸಿ ಮೇಲ್ವಾಯ್ದಳು ||

ಅಂಗವಿಲ್ಲದನ ಸಮ ರಂಗಮಂ ಪೊಗಲಂಜಿ|
ತುಂಗ ವಿಕ್ರಮ ವಿಜಯ ಸಂಗರಕೆಳಸುವೆನೆಂ|
ಬಂಗವಣೆಯೆಂತುಟೆಂದಂಗನೆ ಬಲಾತ್ಕಾರದಿಂ ಘನ ಕುಚ ದ್ವಯವನು ||
ಸಂಘಟಿಸುವಂತೆ ಬಿಗಿದಪ್ಪಿ ಗಾಢತರದಾ|
ಲಿಂಗನಂಗೈದು ಕುಡಿಗಣ್ಗಳಿಂದವನ ಮೊಗ|
ದಿಂಗಿತವನಾರೈವ ಶೃಂಗಾರ ಚೇಷ್ಟೆಯ ಬೆಡಂಗನದನೇವೇಳ್ವೆನು ||

ಮಿಡಿದರೊಡೆವಂತಮೃತ ರಸದಿಂದೆ ನೆರೆವ ಪೊಂ|
ಗೊಡ ಮೊಲೆಯನವನ ವಕ್ಷಸ್ಥಳದೊಳಿಟ್ಟೊತ್ತಿ|
ದೊಡೆ ಹಿಸಿದೊಳಗಣ ತನಿ ಸುಧೆಯೊ ಸರಿತೊಟ್ಟಿಡುವ ಬಿಂದುಗಳ ಸಾಣಮೆನಲು ||
ಕಡಿಕಿ ಪರಿದೊಗುವ ಮುತ್ತುಗಳ ಹಾರದ ಮಣಿಗ|
ಳೆಡೆವಿಡದೆ ಸೂಸುತಿರೆ ಸೊಕ್ಕು ತಕ್ಕೆಗೆ ಸೊಗಸು|
ವಡೆದಳಾ ಕಾಂತೆ ಪ್ರಿಯನಂಗದೊಳ್ಮೋಹನೋತ್ಸಂಗದೊಳ್ಬಗೆಗೊಳುತಿರೆ ||

ಲಕ್ಷ್ಮೀಶನು ಅವರುಂಡ ಅಂತರಾನಂಡವನ್ನು ತಿಳಿದು ಅದನ್ನು ಹೊಳೆಯಿಸಲು ಹವಣಿಸಿ (ಹೊಳೆಯುದೆಯೋ ಏನೋ ಎನ್ನುವ ಹಾಗೆ) ಅಲ್ಲಿಗೇ ನಿಲ್ಲಿಸಿ ಏನೇಳ್ವೆನು' ಎಂದು ಮುಗಿಸಿ ಮುಂದಾಡಿರುವನಲ್ಲದೆ ಅವರ ಆಟ ಸೊಗಸೆನಿಸಗೊಟ್ಟಿಲ್ಲ. ಅಲ್ಲದೆ, ಆ ಮೇಲಿನ ನುಡಿಯನ್ನು 'ಡ'ಕಾರ ಪ್ರಾಸಿಸಲ್ಲಿಟ್ಟು ತೊಡಕು ಮಾಡಿರುವ ತನ್ನ ಹೇಳಿಕೆಗೂ, ಪಾತ್ರಗಳ ಆಳಿಕೆಗೂ, ನಮ್ಮ ಕೇಳಿಕೆಗೂ ಮೊದಲು ತಾನೆ ಆ ಬೆಡಗನ್ನೇನು ಹೇಳುವೆನು ಎಂದು ಆಡಿದವನು ಈ ಮುಂದಿನ ನುಡಿ ಮೊದಲ್ಗೊಂಡು ಆ ಎಲ್ಲ ಆಟಗಳನ್ನೂ ಒಂದು ಬಗೆಯಾಗಿ ಹೇಳಿಯೇ ಬಿಟ್ಟಿರುವನು:—

ಪ್ರಿಯನ ತನು ಚಂದನ ಮಹೀಜಮಂ ಸುತ್ತಿದ ಫ|
ಣಿಯೊ ವಲ್ಲಭಾಂಗದಾಲಸ್ತಂಭಮಂ ತೊಡ|
ರ್ದಯುಗ ಶರ ಕರಿಯ ಸುಂಡಿಲೋ ಕಾಂತ ಕಾಯ ಬಲಮಂ ಬಂಧಿಸಿದ ಮದನನ ||
ಜಯ ಪಾಶಮೋ ರಮಣ ದೇಹ ಕಲ್ಪದ್ರುಮಾ|
ಶ್ರಯದ ಕೋಮಲ ಲತೆಯೊ ಪೊಸತಾದುದೆಂಬಂತೆ|
ನಿಯನನಪ್ಪಿದ ಹರಿಣ ಲೋಚನೆಯ ನಳಿದೋಳ್ಗಳೆಸೆದವತಿ ಗಾಢದಿಂದ ||

ಕಣ್ಮಲರ್ಕಾತರಿಸೆ ಮುಡಿ ಪೂಗಳಂ ಸೂಸೆ।
ನುಣ್ಮೊಗಂ ಬೇರೊಂದು ಪರಿಯಾಗೆ ನುಡಿ ದೈನ್ಯ।
ವುಣ್ಮೆ ಹೀನಸ್ವರದೊಳೆಸೆಯೆ ಕೈ ಕಲೆಗಳಂ ಸೋಕೆ ಮೈ ಪುಳಕದಿಂದ ॥
ಪೊಣ್ಮೆ ಮದನಾತುರಂ ತಲೆದೋರೆ ಮೇಲುದಂ।
ಬಿಣ್ಮೊಲೆಗಳೋಸರಿಸೆ ನಿರಿಯು ಬಿಗಿ ಪೈಸರಿಸೆ।
ಪೆಣ್ಮಂಚದಂಚೆದುಪ್ಪುಳವಾಸಿಗೆಳೆದೊಯ್ದಳಿನಿಯನಂ ಬಲ್ಪಿನಿಂದ ॥

* * *

ನಾಣ್ಮೀಸಲಳಿಯುದವಯುವ ಭೇದಮಂ ಮುರಿದ।
ಜಾಣ್ಮೆಗಳ ಬಂಧಂಗಳೊಳ್ಬಳಸಿ ಸೊಗಯಿಸುವ।
ಗೋಣ್ಮೊಳಗನಿಂಚರಂಗಳನೆಸಗಿ ಮೊನೆವಲ್ಲ ಕರ್ದುಕನಂದುಗುರೊತ್ತಸು ॥
ಮಾಣ್ಮಾಣೆನಲ್ಕೈಗೊಳಿಸೆ ಲಲ್ಲೆಗೈದೊಲವ।
ನಾಣ್ಮಂಗೆ ಕಾಣಿಸಿದಳವಳಂದು ಕೂರ್ಮೆಯಿಂ।
ಮೇಣ್ಮಾನಿನಿಗೆ ಮದನ ಕಲೆಗಳಂ ತೋರಿಸಿದನವನಂದು ಸಮರತಿಯೊಳು ॥

* * *

ಕೂರುಗುರ್ಗಳ ಗೆರೆಯ ಸೂತ್ರ ಬಂಧದೊಳೆಸೆವ ।
ತೋರ ಮೊಲೆಗಳ ಕುಂಭ ಸಂಸ್ಥಾಪನಂಗೈದು।
ಚಾರುತರ ಗಳರವದ ಮಂತ್ರದಿಂ ರೋಮಾಂಚನದ ಕುಶಾಗ್ರಂಗಳಿಂದ ॥
ವೀರರತಿ ಸಾಮ್ರಾಜ್ಯ ಪಟ್ಟದೊಳ್ಬಿಮರ್ವನಿಯ।
ವಾರಿ ಸೇಚನದಿಂದ ಕೃತಕೃತ್ಯರಾದಂತೆ।
ರಾರಾಜಿಸಿದರೊಮ್ಮೆ ಮೆಲ್ವಾಸಿನೊಳ್ಮೆರೆವ ಮಣಿ ಮಂಚದಾಸನದೊಳು ॥

* * *

ಲಕ್ಷ್ಮೀಶನು ಅವರ ಆನಂದವನ್ನು ಒಂದೊಂದಾಗಿ ಅಂದಗೊಳಿಸದೆ ಒಂದನ್ನೇ ವರ್ಣಿಸಿ ವರ್ಣಿಸಿ ಒಪ್ಪಂತಾಗಿಸಿರುವನೆನ್ನುವುದನ್ನು ಬೇರೆ ಹೇಳಬೇಕಾಗಿಲ್ಲ. “ಮೊದಲು ಹೇಳಿದ ಮಾತನ್ನೇ ಹೇಳಿ ಮತ್ತದನೆ ವರ್ಣಿಸಿ ಹೇಳಿದರೆ ಕೇಳಿಕೆಯಲ್ಲುಳಿವ ಆಕಾಂಕ್ಷೆಯ ಅಂಶವೇ ಇಲ್ಲುಳಿವುದೆಂದು” ನನ್ನ ಮತ. ಇದು ನಿರಂಕುಶತನದ ನೆನಪಲ್ಲ; ಕರಾಂಕುಶದ ಕುಶಲತೆ. ಮೊದಲು ಪ್ರಭಾವತಿಯ ಆಲಿಂಗನವನ್ನು ಕಂಗೊಳಿಸಿ, ಮುಂದೆ ಅದಾವ ಪರಿಯಲ್ಲಾಯಿತೆನ್ನುವುದನ್ನು ಪಾಡಿ ಆಡಿ, ಆಮೇಲೆ ಅದು ತನಗೆ ಆವ ರೀತಿಯಾಗಿ ಕಂಗೊಳಿಸಿತೆನ್ನುವುದನ್ನು ಪರ್ಯಾಯವಿಡಿದು ಪಾಡಿದ ಲಕ್ಷ್ಮೀಶನ ಈ ಅಸಾಧಾರಣ ಚಾತುರ್ಯದಲ್ಲಿ ಪಾತ್ರಗಳ ಭಾವವನ್ನು ಬೆಳಗಲು ಇಂಬು ಎಷ್ಟಿದೆ ಎನ್ನುವುದನ್ನು ನೀವೇ ತಿಳಿದು ನೋಡಿರಿ!

ಇದು ಅವನು ತನ್ನ ವರ್ಣನಾ ಚಾತುರ್ಯವನ್ನು ಚೆಲ್ಲಿ ತೋರಿಸಿದ ಸೊಲ್ಲು. ಅಲ್ಲದೆ, ಬೇಕಾದ ಬಣ್ಣನೆಯಲ್ಲ. ಲಕ್ಷ್ಮೀಶನು ಇಲ್ಲಿ ಇನ್ನೂ ಕೆಲ ನುಡಿಗಳನ್ನು ಇದರಂತೆ ಆಡಿದ್ದರೆ ನನೂ ಹೆಚ್ಚೆಂದೆನಿಸುತ್ತಿರಲಿಲ್ಲ; ಈಗಿದ್ದ ನುಡಿಗಳಲ್ಲಿ ಒಂದೆ

ರಡು ಕಡಿಮೆಯಾಗಿದ್ದರೂ ಅರೆಯಾಗಿ ಕಾಣುತ್ತಿರಲಿಲ್ಲ. ಆವಶ್ಯಕತೆಗೆ ಅರ್ಹವಾದುದನ್ನಷ್ಟೇ ಆಡುವುದು ಅಸಾಧಾರಣ ಚಾತುರ್ಯ. ಒಲವು ಒಂದಾಗಿ ಒಲೆದುದನ್ನು ಒಂದೇ ನುಡಿಯಿಂದೆ ಒಡನುಡಿದು ಒಲಿಸಿಕೊಳ್ಳುವ ಶಕ್ತಿಯೇ ಮೇಲಾದುದು; ಮೇಲಿನ ಆ ಎರಡು ನುಡಿಗಳೂ ಹೆಚ್ಚಾಗಿ ಮೆಚ್ಚುವಂತಿವೆಯಲ್ಲದೆ ಓದುತ್ತ ಓದುತ್ತ ಮೈಮ್ಮರೆಯಿಸಿಬಿಡುತ್ತವೆ. ಕವಿಯು ಕ್ರಮವಿಡಿದು ಶಬ್ದ ಮಣಿಗಳನ್ನು ಹೊಂದಿಸಿ ಹೆಣೆದು ಅಂದಗೊಳಿಸಿದುದು ಅವನನ್ನು ಕೊಂಡಾಡುವಂತಿದೆ. ತಾಳಮೇಳನಗಳ ಸುಖಕ್ಕೆ ಅನುಗುಣವಾಗಿ ವರ್ಣಿಸುತ್ತ ವರ್ಣಿಸುತ್ತ ಅರ್ಥದ ಅರಿವು ತೊಡರು ತೊಡಕುಗಳಿಲ್ಲದ ಹಾಗೆ ತಿಳಿಯಾಗಿ ತಿಳಿಯಲು ಅಲ್ಲಲ್ಲಿ ಮಾಡಿದ ಉಸಿರ್ಮನೆಗಳು ಅರೆಯಾಗಿ ಎಲ್ಲೆಲ್ಲಿಯೂ ಕಾಣುವುದಿಲ್ಲ. ಮೊದಲು ಪರಾಮದಲ್ಲಿದ್ದ ಸೊಗಕ್ಕಿಂತ ಮುಂದಿನ ಪರಾಮದಲ್ಲಿ ಹೆಚ್ಚು ಸೊಗವನ್ನಿಟ್ಟು ಹೀಗೆಯೇ ಹೆಚ್ಚು ಹೆಚ್ಚಾಗಿ ಹೊಳೆಯಿಸುತ್ತ ಕಡೆಯಲ್ಲಿ ತಾನು ಹೊಳೆಯಿಸಬೇಕೆಂದಿದ್ದ ಹರಳ ಮಣಿಯನ್ನು ಹಗುರಾಗಿಟ್ಟು ಸೊಗಸೆನಿಸಿಕೊಂಡಿರುವನು. ಅವನ ಆ ಕಡೆಯ ಮೆಟ್ಟಿಲೊಂದೇ ಆ ಕಾಣದ ಸುಖದಲ್ಲಿ ಕೂಡಿರುವುದು. ಲಕ್ಷ್ಮೀಶ ಕವಿಯು ಆ ದಂಪತಿಗಳ ಸರಸ ಸಲ್ಲಾಪಗಳನ್ನು ಇಂತು ಬೆಳಸಿ ಬಣ್ಣಗೊಟ್ಟು ತನ್ನ ಚಾತುರ್ಯವನ್ನು ಕಾಣಿಸಿಕೊಂಡರೂ, ತಿಳಿದುನೋಡಿದಲ್ಲಿ ಆ ಮಾತುಗಳು ನಮ್ಮನ್ನು ಶಬ್ದದ ಚಿನಿವಾಲರನಲ್ಲದೆ ಹೆಚ್ಚಿನ ಕೃತಾರ್ಥರನ್ನಾಗಿ ಮಾಡಲಾರವು. ಆದರೆ ರತ್ನಾಕರನ ನುಡಿಗಳು ಇವುಗಳಿಗಿಂತ ಹೆಚ್ಚಾಗಿ ಕಲಿಸಿಕೊಡುವುವು. ಎಲ್ಲ ಮಾತಿನ ಅರ್ಥವನ್ನೂ ಇದಿಷ್ಟರಲ್ಲಿಯೇ ಆಡಿ ತಿಳಿಯಪಡಿಸಬೇಕೆಂದಿರುವೆನು.

ಲಕ್ಷ್ಮೀಶನು ತಾನು ಹೇಳುವ ವಸ್ತುವಿಗಾಗಿ, ವಾಚಕರಲ್ಲಿ ಕೇಳಿಕೆಯ ಆಶೆಯು ಮತ್ತಿಷ್ಟು ಹೆಚ್ಚಾಗಬೇಕೆಂಬ ಇಚ್ಛೆಯಿಂದ, ಹೀಗೆ ಹತ್ತೆಂಟು ಬಗೆಯಾಗಿ ಹೊಗಳಿ ಕಡೆಯಲ್ಲಿ ಹೇಳಿದ್ದರೂ, ಆ ಕಡೆಯ ಮೆಟ್ಟಿಲೊಂದು ಹೊಳೆದ ಹೊರತು ಇವು ಅಷ್ಟೊಂದು ಹೊಗಳಿಸಿಕೊಳ್ಳಲಾರವು. ಇವುಗಳ ಎಲ್ಲ ಮಾಧುರ್ಯವೂ ಮೊದಲು ತಿಳಿದಿದ್ದರೂ ಅದಷ್ಟು ಅರಿತಮೇಲೆ ತಿಳಿಯಾಗುವುದು. ಪದಕವನ್ನು ಮಣಿಮಾಲೆಯಿಂದ ಅಂದಗೊಳಿಸುವಂತೆ ಲಕ್ಷ್ಮೀಶನು ತನ್ನ ಕಥಾಪುತ್ತಳಿಗಳನ್ನು ನಾಲ್ದೆಸೆಯಿಂದಲೂ ಅಂದಗೊಳಿಸಿರುವನು; ಉಭಯ ಅಲಂಕಾರ ಮಣಿಗಳನ್ನೂ ಕೆತ್ತಿ ಕೂಡಿಸಿರುವನು. ಆದರೆ ಅವನ ನುಡಿಗಳು ಅರಿತಲ್ಲಿ ಇಮ್ಮಡಿ ಮುಮ್ಮಡಿಯಾಗಿ ಆನಂದವೀಯುವುವು.

ರತ್ನಾಕರನ ಶೃಂಗಾರ ವರ್ಣನೆಯು ಈ ತೆರನಾದುದಲ್ಲ. ಅದು ತನ್ನಲ್ಲಿದ್ದ ಪಾವಿತ್ರ್ಯವನ್ನು ಕಾಣಿಸಿಕೊಡುವುದಲ್ಲದೆ ಇಹವು ಇಷ್ಟರ ಮಟ್ಟಿಗೆನ್ನುವುದನ್ನೂ ತಿಳಿಸಿಕೊಡುವುದು. ಇವನು ಆಡಿದ ಆವುದನ್ನೂ ತನ್ನದನ್ನಾಗಿ ಇಟ್ಟುಕೊಳ್ಳದುದರಿಂದ ಅದಿಷ್ಟು ಸ್ವಾರಸ್ಯವಾಗಿದೆ ಎನ್ನುವುದು ಸಲ್ಲುವಂತಿದೆ. ಕವಿಯು 'ವೈಭವ'ದ ಎರಡನೆಯ ಸಂಧಿಯಾದ 'ಕವಿವಾಕ್ಯ' ಸಂಧಿಯಲ್ಲಿ 'ಭರತೇಶ'ನ

ಆಸ್ಥಾನ ಕವಿ 'ದಿವಿಜ ಕಲಾಧರ'ನೆಂಬ ಕವಿಯನ್ನು ಕಲ್ಪಿಸಿ ಅವನಿಂದ ಅರಸನಿಗೆ ರಾಜನೀತಿಯನ್ನೂ ವಾಚಕರಿಗೆ ತನ್ನ ಕಥಾನಾಯಕನ ಗುಣ ರೂಪ ವೈಭವವನ್ನೂ ಒಳ್ಳೆ ಚಾತುರ್ಯದಿಂದ ಕಾಣಿಸಿಕೊಟ್ಟಿದ್ದಾನೆ. ರತ್ನಾಕರನ ಆ ಕಲ್ಪಿತ ಕವಿಯ ಕುಶಲತೆಯನ್ನಷ್ಟು ಕಾಣಿಸಿಯೇ ಬಿಡುವೆನು.—

ನಲ್ಲಳೊಲುಮೆಗಾಗಿ ಸಖ ಸಖಿ ದೂತಿಯ | ರೆಲ್ಲರ ಮನ್ನಿಪನಂತೆ |
ಸಲ್ಲಲಿತಾತ್ಮ ವಿಜ್ಞಾನಾರ್ಥಕಾಗಿ ನ | ಮ್ಮೆಲ್ಲರ ಮನ್ನಿಪೆಯಲ್ಲೆ ||

ಮೊಲೆ ಮುಡಿ ಮುಖ ನಖ ಕಟಿ ತುಟಿಯೆಂದರೆ | ಒಲಿದೀವರುಂಟು ಲೋಕದಲಿ |
ಒಳ ಹೊರಗಾತ್ಮ ಶರೀರ ಂಬೀ ನುಡಿ | ಗೊಲಿದೀವರಾರು ನಿನ್ನಂತೆ ||

ಹೆಣ್ಣ ಬಣ್ಣಿಸಿದರಂತಿಂತು ಲೇಸೆಂದೆದೆ | ಹಣ್ಣಾಗಿ ಕೇಳುವರುಂಟು |
ಬಣ್ಣಿಸಲಾತ್ಮ ತತ್ತ್ವಕೆ ಮೆಚ್ಚಿ ಕಿವಿಗೊಡು | ವಣ್ಣಂದಿರಾರು ನಿನ್ನಂತೆ ||

ಇಲ್ಲ ಪ್ರತಿಯೊಂದು ನುಡಿಯಲ್ಲಿಯೂ ಶೃಂಗಾರ ರಸವು ಸಿಕ್ಕುವುದಾದರೂ ಅದರಿಂದ ವಾಚಕರಿಗೆ ಏನೂ ತಿಳಿಯಲಾಗದೆ ಹುಟ್ಟಿದ ಮಾರ್ಗದ ಘಾಜೆಯೊಂದೇ ಹೆಚ್ಚು ನಿಚ್ಚಳವಾಗಿ ಕಾಣಹತ್ತುವುದೊ ಇಲ್ಲವೊ ಎಂಬುದನ್ನು ನೀವೇ ಹೇಳಿರಿ. ವೀಣೆಯೊಂದಿಗೆ ಹಾಡುವ ಕಾಮಿನಿಯ ಕುಶಲತೆಯನ್ನು ಕವಿಯು ಭರತೇಶನ ಬುದ್ಧಿಗೆ ಇಂತಾಗೆ ಹೊಳೆಯಿಸಿದುದಲ್ಲದೆ ಜಗಕೆ ಒಂದು ಒಗೆಯಿಂದ ನೀತಿಯನ್ನೂ ತಿಳಿದುಕೊಳ್ಳುವಂತಿದೆ.—

ನಿರಸವೀ ಸಂಸಾರವೆಂದು ನೆನೆದು ಹೇಸಿ | ಬೆರಳ ಮಿಡಿವಳೊ ಎಂಬಂತೆ |
ನರ ನಾಥನೆದೆಗೆ ಕಾಣಿಸಿತಾಕೆ ತಂತಿಯ | ಬೆರಳಿಂದ ಮಿಡಿದ ಬಿನ್ನಾಣ ||

* * *

ಅರುಹಂತ ದೇವನ ಸಿದ್ಧರ ಮುನಿಗಳ | ಸ್ಮರಿಸಿ ಚಕ್ರೇಶನ ಮನದ |
ಪರಿಯನರಿದು ಭೋಗ ಯೋಗಗಳೆರಡನು | ಬೆರಸಿ ಹಾಡಿದರು ನೀರೆಯರು ||

* * *

ಎರಡು ಕಣ್ಣಿಂದ ಲೋಕವ ನೋಡಬೇಕು ತ | ನ್ನಿರವ ಸುಜ್ಞಾನ ದೃಷ್ಟಿಯೊಳು |
ತಿರುಗಿ ನಿಟ್ಟಿಸಬೇಕು ಮುಕ್ಕಣ್ಣಗಲ್ಲದೆ | ಲ್ಲರಿಗೆ ಬಹುದೆ ಸುಖ ಸಿದ್ಧಿ ||

ಬಾಲೆಯರೊಡನಿರಬೇಕಾತ್ಮ ರತಿಯೆಂಬ | ಪಾಲುಗಡಲೊಳಿರಬೇಕು |
ಲಾಲಿತ ಸುಖ ಸಿದ್ಧಿ ಪುರುಷೋತ್ತಮಗಲ್ಲ | ದಾಲಸ್ಯ ಪುರುಷಗೇಕಹುದು ||

ವರ ಸತಿಯರ ಕೂಡೆ ನುಡಿದಾಡಬೇಕೊಮ್ಮೆ | ಸರಸತಿಯೊಳು ನುಡಿಬೇಕು |
ಪರ ಸತಿಯೊಳು ಮೌನ ಮುಕ್ತಿ ಸತಿ ಧ್ಯಾನ | ವಿರಬೇಕು ನಾಲ್ಮೊಗ ಬೇಕು ||

ಹೀಗೆ ರತ್ನಾಕರನು ಸರಸ ಚಾತುರ್ಯದೊಂದಿಗೆ ಅಲ್ಲಲ್ಲಿ ಬಣ್ಣಿಸಿದ ಬೆಡಗನ್ನು ಸ್ವಲ್ಪವೇ ಕೇಳಗೊಟ್ಟು ಅವನ ಶೃಂಗಾರ ವರ್ಣನಾ ಚಾತುರ್ಯವನ್ನು ತಿಳಿಯಪಡಿಸುವೆನು. ಸಾಮಾನ್ಯವಾಗಿ ಸತಿಯರಲ್ಲಿ ತಮ್ಮ ಪತಿಗಳಿಗಾಗಿದ್ದ ಪ್ರೇಮವನ್ನೂ ಸತಿಪತಿಯರು ಎದುರಿನಲ್ಲಿದ್ದ ಇರವನ್ನೂ ಬುದ್ಧಿಗೆ ನಿಲುಕುವಂತೆ

ಅಲ್ಲ, ಅಂತಃಕರಣಕ್ಕೆ ಸಿಲುಕುವಂತೆ ಬಣ್ಣಗೊಟ್ಟಿರುವನು. ಹೆಚ್ಚು ಮಾತೇಕೆ? ಅವೊಂದೆರಡರ ಅವಗಾಹನೆಯಾಗಲಿಲ್ಲಿ:—

ಖೊಳ್ಳನೆ ಸತಿಯರೆಲ್ಲರು ನಕ್ಕರದಕೆ ಭೂ | ವಲ್ಲಭ ತಾ ನಸು ನಕ್ಕ |
ಒಳ್ಳಿತಂತಾಯ್ತಾಗಬೇಕೆಂದು ಕುಸುಮಾಜಿ | ಗಲ್ಲವಿಡೆದು ನಕ್ಕಳೊಡನೆ ||

*   *   *

ಮೂಗಿನ ಮೇಲೆ ಬೆರಳನಿಟ್ಟು ಕಣ್ಮುಚ್ಚಿ | ತೂಗಾಡಿ ತಲೆಯನೊಂದಿನಿಸು |
ಯೋಗಿಗಳಂತಿಪ್ಪ ಜಾಣಿಸಿ ಕಣ್ದೆರೆ | ದಾಗಳೆ ನುಡಿದಳಾ ಕುಟಿಲೆ ||

*   *   *

ಕಂಡನು ಬಾಗಿಲ ಮರೆಗೊಂಡ ಸತಿಯ ಪ್ರ | ಚಂಡೆ ಬಾರೆನುತೆದ್ದು ಕುಳಿತ |
ಕೆಂಡವನುಗುಳ್ವ ಕೆಂಪಿನ ತುಟಿ ನಸು ನಗೆ | ಯಿಂಡೆ ಮಾಡುತ ಬಂದಳವಳು ||

ಸಾರಿದಳಾ ಕುಸುಮಾಜಿ ವಲ್ಲಭಗೆ ಪ | ನ್ನೀರ ಮುಕ್ಕುಳಿಸಲೆರೆದಳು |
ಕೂರುಗರಿಂದ ಸೀಳ್ದೆಲೆಯ ಮಡಿದು ಕೊಟ್ಟ | ಳಾ ರಾಯಗತಿ ವಿಭವದೊಳು ||

ಈ ನುಡಿಗಳು ಎಷ್ಟು ಸ್ವಾಭಾವಿಕವಾಗಿ ಹೊರಹೊರಟಿವೆ ಎನ್ನುವುದನ್ನು ಮತ್ತೆ ಇಲ್ಲಿ ಬೆಳಗಬೇಕಾಗಿಲ್ಲ. ಕುಸುಮಾಜಿಯು 'ಗಲ್ಲವಿಡಿದು ನಕ್ಕಳೊಡನೆ' ಎಂದಿಷ್ಟೇ ಹೇಳಿದುದು ಎಷ್ಟು ಅಚ್ಚುಮೆಚ್ಚಾಗಿದೆ! ಇಷ್ಟರಿಂದಲೇ ನಾವು ಇನ್ನೂ ಎಷ್ಟೆಷ್ಟನ್ನೋ ಊಹಿಸಿ ತಿಳಿಯಬಹುದಾಗಿದೆ. ಭರತೇಶ ಕುಸುಮಾಜಿಯರ ಆ ಮುಂದಿನ ಆಟವನ್ನು ಆಡಿ ಅಂದಗೊಳಿಸಿದುದು ಎಷ್ಟು ಮನೋಹರವಾಗಿದೆ ಎನ್ನುವುದನ್ನು ಈ ಕೆಳಗಣ ನುಡಿಗಳು ತೋರ್ಪಡಿಸುವುವು:—

ಕುಸುಮಿ ತಾನೇಕೆ ಬಂದಳೊ ಕುಸುಮಾಜಿಯೆಂ | ದುಸುರಿದನಾಕೆಯ ಕೂಡೆ |
ನಸುನಗುತೇಕೆ ಬಂದಳೊ ದೇವರೇ ಬಲ್ಲ | ರಸಿಯಳಿಚ್ಚೆಯನೆಂದಳವಳು ||

ಮೊಗವ ನೋಳ್ಪಾಗ ನಮ್ಮೊಡನವಳೆಂದೊಂಮ | ಜಗಳಕೆ ಬಂದಳೆಂಬಂತೆ |
ಬಗೆದೋರುತಿದೆ ನೀನು ಕೇಳಿ ಹೇಳೆಂದಾಗ | ವಿಗಡದ ಮಾತನಾಡಿದಳು ||

ಕೇಳ್ದನಾಕೆಯ ದೇವ ಜಗಳಕಲ್ಲೆಂದಳು | ನೀಳ್ದ ಗೂಢಾರ್ಥವೊಂದುಂಟು |
ಆಳ್ದನ ಕೂಡೆ ಯೋಚಿಸಬಂದೆನೆಂದೊಲ್ದು | ಪೇಳ್ದಳೆಂದಳು ಪತಿಯೊಡನೆ ||

ಎಲೆಯ ಘಳಿಗೆಯನಿತರೊಳು ಸಾಕಾದುದು | ನಳಿನಾಕ್ಷಿ ಪತಿಯ ಪಾದಗಳ |
ನಲಿದೊತ್ತುತಿದ್ದಳು ತಳಿರು ತಾವರೆಯ ಮೇ | ಲೊಲೆದಾಡುವಂತಿದ್ದುದಾಗ ||

ಪಾದವನೊತ್ತುವ ಕುಶಲ ಲೇಸೆಂದಾಗ | ಪಾದದಿಂದಪ್ಪಿದನವಳ |
ಆದುದೊಡೆಯ ಮೆಚ್ಚಿ ಕಾಲೊಳೊದೆದನೆಂಬ | ಗಾದೆಯಿಂದೆನಗೆಂದಳವಳು ||

ನಗುತ ಭೂಪತಿಯೆದ್ದನಲ್ಲಿಂದ ಮುಂದಣು | ಜ್ಜುಗವನವರೆ ಬಲ್ಲರದರ |
ಸೊಗಸನಂತಿಂತೆಂದು ನುಡಿದೆನಾದರೆ ಬಲು | ಹಗರಣವಹುದದಂತಿರಲಿ ||

ಆವ ಜಾಣನವಳು ಸುಜಾಣೆ ಮತ್ತಂತಿಂತು | ಸವಿ ನುಡಿ ನೋಟ ಸೊಂಕಿಂದ |
ತವಕಿಸಿ ತಕ್ಕೈಸಿ ಚುಂಬಿಸಿ ನೆರೆದನು | ಭವವ ಬಾಯ್ಬಿಟ್ಟಾಡಬಹುದೆ ||

*   *   *

ಅಚ್ಚುಮೆಚ್ಚಿನೊಳು ಕೂಡಿದರೆನೆ ಸಾಕು ಕ। ಣ್ಮುಚ್ಚಿ ಮೈಮರೆವರಾಕ್ಷಣವೆ।
ಎಚ್ಚರುವರು ಕೂಡೆ ಮೂರ್ಛೆವಡೆವರೆಂದು। ರಚ್ಚೆಯ ಮಾಡಲದೇಕೆ ॥
ಜಾಣ್ಮೆಯೊಳೊಂದಿದರೆನೆ ಸಾಕು ಸುಖವೇರಿ। ಕಣ್ಮುಚ್ಚಿ ಪೀರ್ದು ಚೆಂದುಟಿಯ।
ನುಣ್ಮಯ್ಯನಮರ್ದಪ್ಪಿ ಕೂಡಲಿಂದ್ರಿಯ ಪೊರ। ಪೊಣ್ಮೆತೆಂಬುದದಾವ ಚದುರು ॥

*　　*　　*

ಕೊಸರುವನಹುದು ರತ್ನಾಕರ ಸಿದ್ಧಗಿ। ದ ಸಮಾನವಹ ಕೆಲಸವಲ್ಲ।
ಸುಸಿಲ ಪ್ರಕಟವಾಗೆ ಸೊಬಗಲ್ಲವೆಂದು ಸೂ। ಚಿಸಿಬಿಟ್ಟೆನೆಂದರಿದಿಹುದು ॥

*　　*　　*

ಆನಂದ ವಾರ್ಧಿಯೊಳೋಲಾಡಿದಂತೆ ಲೀ। ಲಾ ನದಿಯೊಳು ತೇಲುವಂತೆ।
ಆ ನಲ್ಲರಾಟವಿದ್ದುದು ನವಿಲುಯ್ಯಾಲ। ತಾನೇರಿ ತೂಗಾಡಿದಂತೆ ॥

*　　*　　*

ಶೃಂಗಾರ ವರ್ಣನೆಯಲ್ಲಿ ರತ್ನಾಕರನು ಕಾಣಗೊಟ್ಟ ಅಪ್ರತಿಮ ಚಾತುರ್ಯವನ್ನು ತಿಳಿಯಲಪೇಕ್ಷೆಯುಳ್ಳ ರಸಿಕರು ಇದಿಷ್ಟರಿಂದ ಮನಸೋತವರಾಗಿ ಮುಂದಿನ ಅವನ ಈ ಬಗೆಯ ವರ್ಣನೆಯನ್ನು ಹೊಂದಿ ಹಿಡಿದು ಓದದಿರಲಾರರು. ರತ್ನಾಕರನು ಏನನ್ನು ವರ್ಣಿಸಿದರೂ ಮೊದಲು ಅದನ್ನು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಅದರ ಪ್ರತಿಬಿಂಬವೇ ವಾಚಕರಿಗೆ ತೋರುವಂತೆ ಅದನ್ನು ಸಹಜವಾದ, ಸ್ವಾಭಾವಿಕವಾದ ಮಾತಿನಿಂದ ಸರಿಯಾಗಿ ಹೇಳುತ್ತ ಹೋದುದರಿಂದ, ಅವನ ಆಯಾ ವರ್ಣನೆಗಳನ್ನು ಓದುವಾಗ ಆಯಾ ಚಿತ್ರಗಳೇ ವಾಚಕರೆದುರಿಗೆ ಜೀವದುಂಬಿ ನಿಂತು ನಟಿಸಿದಂತೆ ಭಾಸವಾಗುವುದು. ಚಿತ್ರಕನು ತನ್ನ ಚಿತ್ರದಲ್ಲಿ ಕಿರಿಗಣ್ಣಿನಿಂದ ಕಾಣುವ ಕುಂದನ್ನು ಬಣ್ಣಬಳಿದು ತಿದ್ದುವಂತೆ ರತ್ನಾಕರನು ತನ್ನ ಹೇಳಿಕೆಯಲ್ಲಿ ತನಗೆ ತಿಳಿದುದು ಕಳೆಗೊಳ್ಳದಿರಲು ಅದನ್ನೇ ಸರಲತೆಯಿಂದ ಹತ್ತೆಂಟು ಬಗೆಯಾಗಿ ಹಾಡಿ ಸರಿಗೊಳಿಸಿರುವನು. ಆದುದರಿಂದಲೇ ಅವು ಒಪ್ಪೊಂದು ಸುಂದರವಾಗಿ, ಸುರಸವಾಗಿ ವಾಚಕರ ಮನಸ್ಸನ್ನು ಒಲಿಸಿಕೊಳ್ಳುವುವು. ಇವನ ಈ ಶೃಂಗಾರದ ಬಣ್ಣನೆಯು ಕಂಡೂ ಕಾಣದಂತೆ ಅತಿ ಮೋಹಿನೀಯವಾಗಿ ಉಡುವ ಉಡುಪಿನ ಜೆಪಗನ್ನು ಅನುಸರಿಸಿದೆ ಎನ್ನುವುದು ಹೇಳಿಯೂ ಹೇಳದಂತಿದ್ದು ಹೇಳಿದ ರೀತಿಯು ಅವನ ಈ ಮೇಲಿನ ವರ್ಣನೆಯಿಂದ ತಿಳಿಯುವಂತಿದೆ. ತುಂಬ ಅಳುಕನ್ನು ನಟಿಸಿ ಹೇಳಿದ ಹಾಗೆ ಹಾಡಿ ಚಮತ್ಕಾರವಾಗಿಸಿರುವ 'ಸುಸಿಲ ಪ್ರಕಟವಾಗೆ ಸೊಬಗಲ್ಲವೆಂದು' ತಿಳಿಯುವುದೆಂದು ಹೇಳಿ ಕವಿಯು ಹೇಳಲಾಗದವನಾಗದೆ ಸರಿ ಎನಿಸಿಬಿಟ್ಟಿರುವನು. ರತ್ನಾಕರನ ಈ ಬಗೆಯ ಸರಲ ಚಾತುರ್ಯವು ಹೇಳಿದಷ್ಟೂ ಹಿಗ್ಗುವುದು. ವೀಣಾ ಸಂಧಿಯಲ್ಲಿ ಬಣ್ಣಿಸಿದ ಆ ದಂಪತಿಗಳ ಚೆಲ್ಲಾಟವನ್ನು ಕೇಳಿದರೆ ವಾಚಕರು ನಿಜವಾಗಿ ಈ ಕವಿಯು ಅದೆಷ್ಟು ಆಳವಾಗಿ ಹೆಣ್ಣುಗಳ ಬಗೆಗಳನ್ನರಿತಿದ್ದನೆನ್ನುವುದು ನಿದರ್ಶನವಾಗಬಹುದು. ಹೆಣ್ಣಿನ ಭಾವವನ್ನು ಹೆಣ್ಣಾಡುವಂತೆ ಹೆಣ್ಣಿನದಾಗಿ ಹಣ್ಣಾಗಿಸಿ ಆಡುವುದು ಇವನಿಗದೆಷ್ಟು ಸಾಧಿಸಿದೆಯೊ ?

ಕಾವ್ಯದಲ್ಲಿ ಕಾವ್ಯವನ್ನೂ ನಾಟಕದಲ್ಲಿ ನಾಟಕವನ್ನೂ ಅಲ್ಲದೆ, ಸಣ್ಣ ಒಂದು ಕವಿತೆಯಲ್ಲಿ ಮತ್ತೊಂದು ಕವಿತೆಯನ್ನೂ ತರುವ ಚಾತುರ್ಯವೂ ರತ್ನಾಕರನಲ್ಲಿದೆ. 'ವೈಭವ'ದಲ್ಲಿ 'ಕುಸುಮಾಜಿಯು' ಪ್ರೇಮವಲ್ಲರಿಯನ್ನು 'ಅಮರಾಜಿ'ಯ ಕೆಯ್ಯಿಂದ ಕಾವ್ಯದಲ್ಲಿ ಕೊನರಿಸಿ 'ಭರತೇಶ'ನ ಇದಿರಾಗಿ ಹಾಡಿಸಿದುದು ಮೊದಲ ಮಾತಿಗೆ ಲಕ್ಷ್ಯವಾಗಿದೆ. ಆ ಸಂಧಿಯ ಹೆಸರು 'ರಾಜಲಾವಣ್ಯ ಸಂಧಿ.' ಇದರ ಪರಿಚಯವನ್ನೂ ಸಂದರ್ಭಾನುಸಾರ ಮಾಡುವೆನು. ಪದ್ಯದಲ್ಲಿ ಮತ್ತೊಂದು ಪದ್ಯದ ಭಾವವನ್ನು ಪೇರಿ ಬಣ್ಣಿಗೊಟ್ಟ ಇವನ ಈ ಅಸಾಧಾರಣ ಚಾತುರ್ಯವು ಎಷ್ಟು ಸ್ವಾಭಾವಿಕ ಲೀಲೆದುಂಬಿದುದಾಗಿದೆ!

ಸೀಯನೆ ರಾಗವ ಮಾಡಿ ವಿಚಿತ್ರಾಭಿ। ಪ್ರಾಯ ಪದಗಳ ಹಾಡಿದಳು।
ಕಾಯ ಸಂಭೂತನಾರಾಧಿಸುವಧಿದೇವಿ। ಗಾಯಕಿಯಾದಳೆಂಬಂತೆ ॥

ಈ ಬಗೆಯಾದ ಚಾತುರ್ಯವು ಹೇಳಲು ಹೆಚ್ಚಾಗಿಹುದು. ಮುಂದೆ ಅದೇ ಆ ಪ್ರಮದೆಯ ಹಾಡಿಕೆಯನ್ನೂ, ಅದಕ್ಕೆ ಅರಸನ ಮೆಚ್ಚುಗೆಯನ್ನೂ, ಮರಳಿ ಅದಕ್ಕೆ ಅವಳ ಹಿಗ್ಗನ್ನೂ ಬಣ್ಣಿಸಿದ ಪರಿಯನ್ನಷ್ಟು ನೋಡೋಣ:—

ಒಳಗುಮ್ಮಿದಾನಂದರಸ ತನ್ನ ತನು ತುಂಬಿ। ತುಳುಕಿ ಹೊರಗೆ ಸೂಸುವಂತೆ।
ತೆಳುವಸಿರಿಂದ ಬಾಯ್ದೆರೆಯೊಳು ಸುಸ್ವರ। ಹೊಳೆದು ಮೋಹಿಸುತಿದ್ದುದಾಗ ॥

ಸುಳಿನಾಭಿಯೊಳು ಪುಟ್ಟಿ ಮೆಲ್ಲೆದೆಯೊಳು ಬೆಳೆ। ದೊಳುಗೊರಳೊಳು ಪ್ರಾಯವಡೆದು।
ಎಳೆಯಳ ಬ್ರಹ್ಮರಂಧ್ರವನೇರಿ ಬಾಯ್ದೆರೆ। ಗಿಳಿದು ಮೋಹಿಸಿದುದಾಳಾಪ ॥

* * *

ಕುಂಕಣಿಗೋಲೆಯ ಬರೆವ ಕಾವನ ಕೈಯ। ಕಂಠದೊಂದುಲುಹೊಯೆಂಬಂತೆ।
ಕಂಠವನಲುಗಿಸಿ ಹೊಸ ತಾನಗಳ ಕಳ। ಕಂಠೆ ನಿನಾದದೋರಿದಳು ॥

* * *

ಉಂಚದಿಂದೆತ್ತುವಳಡಕದಿಂದಡಗಿಸಿ। ಮಿಂಚಿನಂತೊಡನೇಳಿಸುವಳು।
ಅಂಚೆಯ ನಡೆದಾಡಿಸುವಂತೆ ರಾಗದ। ಸಂಚುಗಾಣಿಸಿ ತೋರುತಿಹಳು ॥

ಬಂದ ತಾನವ ಬರಲೀಸದೆ ಹೊಸಹೊಸ। ತೊಂದು ಪರಿಯ ತಾನಗಳ!
ತಂದು ತಂಪೆದೆಗೊಳಿಸಿದಳು ಗಾನವ ಕರೆ। ತಂದು ತೋರಿಸುವಂತೆ ನೃಪಗೆ ॥

ಆದುದೌ ಕುಸುಮಿ ಚೆಲ್ವಾದುದೌ ಕುಸುಮಾಜಿ। ಭೇದಿಸಿ ಹಾಡಿದೌ ಕುಸುಮು
ಓದೋದು ಸೊಗಸಾದುದಿನ್ನೊಮ್ಮೆಯೆಂದು ವಿ। ನೋದಿಗಳರಸ ಕೇಳಿದನು ॥

ಆ ನುಡಿಗೇಳ್ದವಳುಬ್ಬಿ ಹಾಡುವಳದ। ಕಾ ನರನಾಥನುಬ್ಬುವನು।
ತಾನವಳಿಗೆ ಮೆಚ್ಚುತವಳು ತನಗೆ ಮೆಚ್ಚು। ತಾನಂದಗೋಷ್ಠಿ ಮಾಡಿದರು ॥

ಮೆಚ್ಚಿದಿನಿಯಳೊಂದು ಹುಚ್ಚ ನುಡಿದರದೆ। ನೊಚ್ಚನಾಗಿಹುದು ನಲ್ಲರಿಗೆ।
ಅಚ್ಚ ಗಾನವನಾಕೆ ಪಾಡುತಿರಲು ಕೇಳ್ದು। ಮೆಚ್ಚದಿಹನೆ ಚಕ್ರಧರನು ॥

* * *

ಪಾಡುವಾಗವಳಿಗೆಲೆಯ ಗಳಿಗೆಯ ತಳು । ಮಾಡಿತು ಪುತ್ತಳಿಯದನು ।
ನೋಡು ತನ್ನ ಹಸ್ತದ ಗಳಿಗೆಯ ಪೆಣ್ಗೆ । ನೀಡಿದನುಚಿತ ವಿನೋದ ॥

ಒಲ್ಲೆನೆಂದೆಲೆಯ ಗಳಿಗೆಗಾಕೆ ಮಂಡೆಯ । ನಲ್ಲಾಡಿ ನಗುತ ಹಾಡಿದಳು ।
ಬಲ್ಲರ ಬಲ್ಲಹನರಿದನು ತನ್ನ ಕೈ । ಯಲ್ಲಿ ಸೇವೆಯ ಕೊಳ್ಳಳೆಂದು ॥

ಚಿಂತೆ ಇಲ್ಲ ಹಿಡಿ ಕುಸುಮಿ ನಲ್ಲಳಿಗೊಲ್ವು । ಕಾಂತ ಕೊಟ್ಟರೆ ಕೊಳ್ಳಬಹುದು ।
ಸಂತೋಷ ನನಗಿದೆಂದವಳ ಬಾಯ್ದೆರೆಗೆ ಭೂ । ಕಾಂತ ನೀಡಿದನಾ ಘಳಿಗೆಯ ॥

ಅಂತು ವಲ್ಲಳು ಹಾಡುವುದ ಬಿಟ್ಟು ಕಣ್ಮುಚ್ಚಿ । ತಂತಿಯೊಳಗೆ ಕೇಳಿಸಿದಳು ।
ಕಂತು ರೂಪನು ಬಾಯ್ಗೆ ಬಾಯಿಟ್ಟು ಕೊಟ್ಟನ । ತ್ಯಂತ ಲೀಲೆಯೊಳು ತಂಬುಲವ ॥

* * *

ಹೀಗೆ ಸರಸವಾಗಿ ಬಗೆಗೊಳ್ಳುವಂತೆ ಪಾತ್ರಗಳ ಭಾವಗಳನ್ನು ತಿಳಿದು, ಅಲ್ಲ, ಪರಾಂತಃಕರಣ ಪ್ರವೇಶಿಯಾಗಿ, ನುಡಿದಿರುವನು. ಇದರಲ್ಲಿ ಹೇಳದೆ ತಿಳಿಯಬಹುದಾದ ಸವಿಯೂ ಒಂದುಂಟು. ಅದು ಆಗಲೇ ಅರಿತವರನ್ನಾಗಿ ಮಾಡುವುದು ರಸಿಕರನ್ನು ಮಾತ್ರ. ಇಬ್ಬರ ಆಟವನ್ನೂ ತಾನೊಬ್ಬನಾಡದೆ ರತ್ನಾಕರನು ಅವರವರದನ್ನು ಅವರವರದನ್ನಾಗಿ ಬಿಟ್ಟು ತಾನು ಮರೆಯಾಗಿರುವನು. ಗಂಡನ ಚೆಲ್ಲಾಟಕ್ಕೆ ಮೆಯ್ದುಂಬಿ ಆಡಿದ ಕುಸುಮಾಜಿಯ ಈ ನುಡಿಗಳನ್ನು ಕೇಳಿರಿ. ಅವೆಷ್ಟು ಉತ್ಸಾಹ ಪರಿಪೂರ್ಣಗಳಾಗಿವೆ!—

ಮಾತು ಮಾತಿಗೆ ಸೊಂಕು ಸೊಂಕಿಗೆ ಮೈಯಲ್ಲ । ಬಾತು ಬಿಮ್ಮನುತಾಕೆ ತನ್ನ ।
ಮಾತಿಂದ ಸೊಂಕಿದ ಕೂಡೆ ನಲ್ಲನ ತನ್ನ । ರೀತಿ ಮಾಡಿದಳು ಮಾಣುವಳೆ ॥

ನಿಲ್ಲು ನಿನ್ನಾಟ ಸಾಕೆಂಬಳು ನಾನೊಂದು । ದಿಲ್ಲ ಸುಮ್ಮನಿರು ಮಾತಿಂದ ।
ಕೊಲ್ಲದಿರೆನ್ನನೆಂಬಳು ಕೊಳುವಳು ಮುದ್ದ । ಲಲ್ಲಿಯಿಂದಪ್ಪುವಳೊಡನೆ ॥

ಅರಸುತನದ ಸೊಕ್ಕೆ ನಿನಗೆನ್ನ ಕೆಂಬಾಯ । ಪರಿಮಳವನು ಸೂರೆಗೊಂಡೈ ।
ತಿರುಗಿ ಕೊಡೆಮ್ಮ ವಸ್ತುವನೆಂದು ತುಟಿಗಚ್ಚಿ । ಬುರು ಬುರನೊಡನೆ ಚುಂಬಿಪಳು ॥

ಲಕ್ಷ್ಮೀಶನು ಈ ಬಗೆಯಾಗಿ ಹೊಳೆಯಿಸದಿದ್ದರೂ ತನ್ನ ಹೊತ್ತಗೆಯಲ್ಲಿ ಒಂದು ಬಗೆಯಾಗಿ ಮಾಧುರ್ಯವನ್ನು ತುಂಬಿರುವುದು ನಿಜ. ಆದರೆ ಅದು ಇಷ್ಟೊಂದು ಮನವನೋಲೈಸಲಾರದು. ಇಲ್ಲಿ ಪಾತ್ರಗಳ ನೈಜವಾದ ಭಾಷಾ ಸರಣಿಗೆ ಮೆಯ್ದುಂಬಿ ಉಬ್ಬುವಂತೆ ಲಕ್ಷ್ಮೀಶನ ಕವಿತೆಗಳಲ್ಲಿ ಉಬ್ಬದು; ಅಲ್ಲಿಯ ಹರ್ಷಾತಿರೇಕವು ಪಾತ್ರಗಳ ನೈಜ ಗುಣ ವರ್ಣನೆಗಳಿಗಲ್ಲ, ಕವಿಯ ಪಾಂಡಿತ್ಯ ಪ್ರಚುರ ಪ್ರಭೆಗಾಗಿ.

ಹದಿನೆಂಟನೆಯ ಸಂಧಿಯಲ್ಲಿ ಲಕ್ಷ್ಮೀಶನು ಸೀತಾರಾಮರ ಭಾವ ಚಿತ್ರವನ್ನು ಸರಸವಾಗಿ ಮಾಡಿರುವನಾದರೂ ಆತನ ಆ ನೈಜ ವಾಕ್ಪ್ರವಾಹವು ಬದಲಿಸಿಲ್ಲ. ಆ ಭಾವನೆಗಳು ನಮ್ಮ ಕಲ್ಪನೆಯ ಆಚೆಯವಲ್ಲ; ಅಂತೆಯೇ ಮನೋಹರವಾಗಿವೆ. ನೀರಿನಲ್ಲಿ ಹೊಕ್ಕು ನೀರಾಡಿ ಮೀನುಗಳ ನೆಲೆಗಾಣುವುದು ಸಾಹಸದ ಮಾತಾದರೂ ಬಾಳಿಕೆಗೆ ಆದರ್ಶವಾದುದು. ಆದರೆ ಹೊರಗಣಿಂದ ಅದನ್ನರಿತು ಅಂದ

ಗೊಳಿಸಿ ತಿಳಿಯಪಡಿಸುವುದು ಅದಕ್ಕೂ ಹೆಚ್ಚಿನ ಕೆಲಸ. ಇದನ್ನು ಕಾಣಿಸಲಿಕ್ಕೇ ನಾಸಿಲ್ಲಿ ಬಚ್ಚಿ ಬರೆಯದೆ ನಿಮಗಷ್ಟು ಉಳುಹಿ ಉಳಿದುಕೊಳ್ಳುವೆನು. ಸೀತಾರಾಮರ ಇರವಿನಲ್ಲಿ ಕವಿಯು ಸಾಮಾನ್ಯರ ಕಲ್ಪನೆಗಳನ್ನು ತಂದು ಅಂದಗೊಳಿಸಿದ ಈ ಎರಡು ನುಡಿಗಳನ್ನು ಕೇಳಿರಿ.—

ಸಂತಾನ ಮಂದಾರದೊಳ್ಪಡೆದತುಳ ವಿಭವ|
ಮಂ ತಳೆದ ನಂದನೋತ್ಸವದಮೃತ ಪಾನದ|
ತ್ಯಂತ ಸೌಖ್ಯಮನೈದಿ ದೇವೇಂದ್ರನಂತೆ ಸುಮ್ಮಾನವಾಗಿರದೆ ಬರಿದೆ ||
ಸಂತತಂ ಜಾತರೂಪವನೆ ಕಾಣದ ತಾಪ|
ದಿಂ ತೊಳಲಿ ಬಳಲುವ ದರಿದ್ರನಂದವೊಲೈದೆ|
ಚಿಂತಿಸುವ ಸಂಸಾರಮೇಕೆ ಮಾನವ ಜನ್ಮಕೆಂದು ರಘುಪತಿ ನುಡಿದನು ||

*  *  *

ಕಾಂತ ನೀಂ ಪೇಳ್ದೊಡೇಂ ಪುತ್ರವತಿಯಹುದು ಜ|
ನ್ಮಾಂತರದ ಪುಣ್ಯಮೈಸಲೆ ಪೆಣ್ಗೆ ಮುನ್ನ ತಾಂ|
ನೋಂತಡಲ್ಲದೆ ಬಂದಪುದೆ ಬರಿದೆ ಬಯಸಿದೊಡೆ ಸುಕುಮಾರನಂ ಪಡೆವುದು ||
ಆಂತೊಳಗೆ ಪುದುಗಿರ್ದ ಪರಿಮಳದೊಳೊಪ್ಪುವ ಲ|
ತಾಂತ ಕುಟ್ಮಲದಂತೆ ವರ ಗರ್ಭ ಲಾಂಛನದ|
ಕಾಂತಿಯಂ ತಳೆವುದಂಗನೆಯರೆಲ್ಲರ್ಗೆ ದೊರೆವುದೆ ಮೇದಿನಿಯೊಳೆಂದಳು ||

ಬಣ್ಣಗಾರನಾದ ಕವಿಯು ತನ್ನ ಕೆಲಸದಲ್ಲಿದ್ದಾಗ್ಗೆ ತನ್ನ ತನವನ್ನು ಬದಿಗಿಟ್ಟು ಸ್ವಾಭಾವಿಕ ಕಲ್ಪನೆಗಳನ್ನಾಗಲಿ, ಇಲ್ಲವೆ ಹೊಸ ಹೊಸ ಕಲ್ಪನೆಗಳನ್ನಾಗಲಿ ತಿಳಿದು ಕಳೆಗೊಳಿಸಿದರೆ ಅದು ಎಲ್ಲರಿಂದಲೂ ಬೇಕಾಗುವುದು. ಸಂತಾನ ಸುಖಾಪೇಕ್ಷಿಯಾದ ಸೀತೆಯ ಮನವನ್ನು ತಾನು ಹೀಗೆ ಹಾಡಿರುವನು, ಬೇಡುವ ಬಗೆಯಿಂದಾಡಿಸದೆ—

ಕಂದನಾಡುವ ಬಾಲಲೀಲೆಯಂ ನೋಡಿ ತೊದ|
ಳೊಂದಿದಿನಿವಾತನುರೆ ಕೇಳ್ದು ಮುದ್ದಿನ ಮುದ್ದೆ|
ಯಂದದಂಗವನೆತ್ತಿಕೊಂಡು ನಳಿದೋಳ್ಗಳಿಂದಪ್ಪಿ ಕೆಂಗುರುಳ್ಗಳಸೆವ ||
ಮುಂದಲೆಯ ಕಂಪನಾಘ್ರಾಣಿಸಿ ತೊರೆದ ಜೊಲ್ಲ|
ಕೆಂದರೆಯ ಬಾಯ್ದೆರೆಯನೈದೆ ಚುಂಬಿಸೆ ಸೊಗಸು|
ಗುಂದದಾಯೆಂದು ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ ||
ತೇಲ್ದೋಸರಿಸಿ ಮೇಲುದಂ ಸೆಳೆವ ಕಮಲಮಂ|
ಪೋಲ್ವ ಕಣ್ಗೊನೆಯಿಂದ ತಾಯ ಮೊಗಮಂ ನೋಳ್ಪ|
ಕಾಲ್ಬುದಿಗಳಂ ಬೀರಿ ತಡವರಿಸಿ ಕೈವಿಡಿವ ಬಾಲಂಗೆ ಮೋಹದಿಂದ ||
ಜೋಲ್ದೊಲೆವ ಹಾರಮಂ ಸರಿದು ಮೇಲುದ ಸಾರ್ಚಿ|
ಪಾಲ್ದೊರೆವ ಮೊಲೆಯೂಡಿ ಕೂಡೆ ತೊಟ್ಟಿಲೊಳಿಟ್ಟು|
ಸಾಲ್ವ ಸೈಸಿಂದ ಜೋಗುಳವಾಡಿ ತೂಗುವಳದೇಂ ಸುಕೃತಿಯೋ ಧರೆಯೊಳು ||

ಈ ಕವಿತೆಗಳನ್ನು ಓದುವಾಗ್ಗೆ, ಇಲ್ಲವೆ ಕೇಳುವಾಗ್ಗೆ, ಸೀತೆಯಲ್ಲಿ ಮಕ್ಕಳಿಗಾಗಿ ಇದ್ದ ಅಂಗಲಾಚುಗತನವು ಅಷ್ಟೊಂದು ಕಾಣಿಸದೆ ಲಕ್ಷ್ಮೀಶನ ನಿಜವಾದ ಸಾಹಸಿಕ ವರ್ಣನಾ ಚಾತುರ್ಯವೇ ಕಣ್ಣುಕಟ್ಟಿ ಕಾಣಿಸಿದಂತೆ ಮಾಡುವುದು. ಆ ಭೂಮಿಕೆಯ ಭಾವಾಂತಃಕರಣಗಳನ್ನು, ಹೀಗೆ ಭಾವಗಳನ್ನು ಬಳಸದೆ, ಎಷ್ಟು ಬೆಳಿಸಿದರೂ ಪಾತ್ರಗಳ ಭಾವಗಳು ಬಯಲಾಗಿ ಬೆಳಗಲಾರವು. ಇದೇ ಬಗೆಯಾಗಿ ಸಂತಾನಕ್ಕಾಗಿ ಹಂಬಲಿಸುವ ಬಗೆಯನ್ನು ಅಭಿನವ ಪಂಪದೇವನು ಹೇಗೆ ಆಡಿರುವ ನೋಡಿರಿ. ಅವೆಷ್ಟು ಬಗೆದುಂಬಿ ಬೆಳಗಿವೆ !—

ಬಾಲಕನ ಪಿಶಂಗ ತಲಂ।
ಬಾಲಕನಸ್ಖಲಿತ ಚಲನ ವಿನ್ಯಾಸದ ಲೀ ॥
ಲಾಲಸಮಂ ಕಾಣದ ದು।
ರ್ಲೀಲಮೆನಿಪ್ಪೊಂದು ಜೀವನಂ ಜೀವನಮೇ ॥

ದರ ವಿಕಸಿತಮಂ ರಜದೊಳ್।
ಪೊರೆದಾತ್ಮಜ ಮುಖ ಸರೋಜಮಂ ಮೋಹ ರಸಂ ॥
ತೆರಮೆಸಗಿ ನೋಳ್ಪ ಜನನಿಯ।
ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ ॥

ಆಡಾಡುತ್ತ ಅಭಿನವ ಪಂಪ ಎಂದು ಅಡಿಯಿಟ್ಟುದಕ್ಕೆ ಅಡ್ಡದಾರಿಯೆಂದರಿಯಲಾಗದು. ಲಕ್ಷ್ಮೀಶನಂತೆ ಬದ್ಧನಾಗಿಯೂ ಎಷ್ಟೊಂದು ಭಾವವನ್ನು ಬಿಚ್ಚಿ ಬಳೆಯಿಸಲು ಬರುವುದೆಂಬುದನ್ನು ತಿಳುಪಿಸಲು ಹೇಳಿದೆನಷ್ಟೇ.

ಲಕ್ಷ್ಮೀಶನು ಹೆಚ್ಚಾಗಿ ವರ್ಣನೆಗಳಿಗೆ ಒಲೆದ ಕವಿ ಎನ್ನುವುದನ್ನು ಆತನ ಈ ಕೆಳಗಣ ಕವಿತೆಯಿಂದ ಕಂಡುಹಿಡಿಯಬಹುದು.—

ಇಂತು ಸುತರಿಲ್ಲದಾಸರದೊಳವರಿರ್ವರುಂ।
ಚಿಂತಿಸುವ ಸಮಯಕೆ ವಸಿಷ್ಠ ಮುನಿಪತಿ ಬಂದು।
ಸಂತಾನದಭ್ಯುದಯಮಾದಪುದು ನಿಮಗೆಂದುಸುರೆ ಪ್ರೀತಿಯಿಂದ ॥
ಸಂತೈಸೆ ಬಳಿಕ ರಘುಕುಲ ಸಾರ್ವಭೌಮನ।
ತ್ಯಂತ ಹರುಷಿತನಾಗಿರಲ್ಕೆ ತಲೆದೋರಿತು ವ।
ಸಂತ ಕಾಲಂ ವಿರಾಜಿತ ರಸಾಲಂ ವಿರಹಿ ಹೃದಯ ಶೂಲಂ ತಾನೆನೆ ॥

ಕಥಾ ಸಂದರ್ಭವನ್ನು ಇಂತಾಡಿ ವರ್ಣನೆಯ ಸಮಯವು ಯಾವಾಗ ಬರುವುದೆಂದು ಬಳ್ಳಿಯ ಉತ್ಸುಕತೆಯಿಂದ ಕುಳಿತ ಲಕ್ಷ್ಮೀಶನಿಗೆ ವಸಂತಕಾಲ ವಿರಾಜಮಾನವಾಯಿತೆಂದು ಹೊಳೆಯೆ, ಅಲ್ಲಿಂದ ಅವನ ಸರಸ ವಾಕ್ಚಾಪಲ್ಯವನ್ನು ಕೇಳುವುದೇನು ? ವಸಂತ ಕಾಲದ ಬೆಡಗಿನ ಇರವನ್ನು ಒಂದೊಂದಾಗಿ ಆಟಿ ಕೂಡಿಸಿ

ಕಳೆಗೊಟ್ಟಿರುವನು. ತನ್ನ ಕಥಾನಾಯಕ ನಾಯಿಕೆಯರಿಗೆ ಅದೆಷ್ಟು ಅಂದ ಚಂದ ವಾಗಿ ಆಹ್ಲಾದವನ್ನುಂಟುಮಾಡುವುದು !—

ಅರಸಂಚೆ ಸರಸಿಯಂ ಕಲ ಪಿಕಂ ತಳಿತ ಮಾ।
ಮರನಂ ಚಕೋರತತಿ ಚಂದ್ರಿಕೆಯನಳಿ ಕುಲಂ।
ಬಿರಿಮುಗುಳನರಗಿಳಿ ಬನಂಗಳಂ ವಿರಹಿಗಳ್ ಕೂರ್ಪರಂ ಸಾರ್ದೆಸೆಯಲು ॥
ಧರೆಯೊಳೆಳ ಗಾಳಿಯಂ ಶೀತಳದ ವಾರಿಯಂ।
ತರುಗಳ ನೆರಳ್ಗಳಂ ಸೇರತೊಡಗಿತು ಜನಂ।
ಪರಿವೃತ ವಸಂತ ಕಾಲದೊಳಿಂತಿರಲ್ ಬಳಿಕ ಸೀತೆ ಋತುಮತಿಯಾದಳು ॥

ಮಲ್ಲಿಕಾಸ್ಮಿತ ರುಚಿರೆ ಕುಂದ ಕುಟ್ಮಲ ರದನೆ।
ಪಲ್ಲವಾಧರೆ ಭೃಂಗ ಕುಂತಳೆ ಕುಸುಮ ಗಂಧಿ ।
ಸಲ್ಲಲಿತ ಕೋಕಿಲಾಲಾಪೆ ಚಂಪಕ ವರ್ಣೆ ಮೃದು ಮಧುರ ಕೀರ ವಾಣಿ ॥
ಫುಲ್ಲ ಲೋಚನೆ ಚಾರು ಚಂದ್ರ ಬಿಂಬಾನನೆಯು।
ಸಲ್ಲಲಿತ ಗಾತ್ರಿ ಜಾನಕಿ ವಿರಾಜಿಸಿದಳ್ಸ।
ಮುಲ್ಲಾಸದಿಂ ಪುಷ್ಪವತಿಯಾಗೆ ವಿದಳಿತ ವಸಂತ ಲಕ್ಷ್ಮಿಯ ತೆರದೊಳು ॥

ಮೊಡವಿ ಮೂಡಿದ ಮೊಗಂ ಸೊಗಡುಗಂಪೊಗೆದ ಮೈ।
ತೊಡವುಗಳ ತೊಡರಿಲ್ಲದವಯವಂ ಪೂಗಳಂ।
ಮುಡಿಯದ ಬಳಲ್ದುರುಬು ನಿಚ್ಚಳದ ಕಂಗಳೊಳ್ ತೊಳಪ ಪಣೆ ಮಿರುಪ ಕದಪು ॥
ಕಡು ಬಿಣ್ಪಿಡಿದ ಕುಚಂ ಮಾಧವೀ ಲತೆಯ ಸೆಳೆ।
ವಿಡಿದ ಕೈನಿರಿಯಳಿದ ನಸು ಮಾಸಿದಂಬರಂ।
ಕುಡಿವರಿವ ಲಜ್ಜೆ ಸಿಂಗರಕೆ ಮಿಗಲಾಯ್ತವನಿ ಸುತೆಗೆ ಋತುಮತಿಯಾಗಲು ॥

ಸ್ಫುರದುತ್ಕಟಾಕ್ಷ ಚಂಚಲದಿಂದ ಚಾರು ಪೀ।
ವರ ಪಯೋಧರದಿಂದ ಪರಿವೃತ ಸುಮೇಖಲಾ।
ತರಳ ಕಿಂಕಿಣಿಯ ರವದಿಂದಲಾರಾಜಿಸುವ ಕಂಕಣಂಗಳಿಂದ ॥
ಸರಸತರ ಲಾವಣ್ಯ ಪೂರ ಪ್ರವಾಹದಿಂ।
ಭರಿತ ಕಬರೀ ಬರ್ಹಿ ಲೀಲೆಯಿಂ ಮಳೆಗಾಲ।
ದಿರವನೆಚ್ಚರಿಪರಸಿಯಂ ಕಂಡು ರಾಮನ ಮನಶ್ಚಾತಕಂ ನಲಿದುದು ॥

ಮಂದ ಗಮನೆಯ ಮಂದ ಹಾಸದ ವಿಲಾಸಮಂ।
ಕುಂದ ರದನೆಯ ಕುಂದದವಯವದ ಸೌಂದರ್ಯ।
ದಂದಮಂ ವಕ್ರ ಕುಂತಳೆಯ ವಕ್ರಾವಲೋಕನದ ಭಾವದ ಬಗೆಯನು ॥
ಚಂದನ ಸುಗಂಧಿನಿಯ ಚಂದ್ರಾಸ್ಯದೆಸಕಮಂ।
ಬಂದುಗೆಯ ತುಟಿಯ ಬಂಧುರದ ಸಿಂಗರಮನೇ।
ನೆಂತು ಬಣ್ಣಿಸಬಹುದು ರಾಮಣೀಯಕಮಾಪ ರಾಮನ ಮಡದಿಯೊಲವನು ॥

ನೊಸಲೊಳಾರಾಜಿಸುವ ತಿಲಕದಿಂದಲಕದಿಂ।
ಮಿಸುಪ ಮೈದೋರ್ವ ನಸು ವಸನದಿಂ ದಶನದಿಂ।
ಪಸರಿಪೆಳನಗೆಯ ತೆಳ್ಗದಪಿನಿಂ ಪದಪಿನಿಂದಮರ್ದ ಪೊಂದೊಡಿಗೆಯಿಂದ ॥
ಅಸಿವೆರಳೊಳೊಪ್ಪುವ ಉಗುರ್ಗಳಿಂ ತಿಗುರ್ಗಳಿಂ।
ಪೊಸತೆನಿಪ ಕುಂಕುಮದ ಕಂಪಿನಿಂದಿಂಪಿನಿಂ।
ತ್ರಿಸರದೊಳ್ಮೆರೆವ ಗುರು ಕುಚದಿಂದ ಕಚದಿಂದ ಕಾಂತೆ ಕಣ್ಗೆಸೆದಿರ್ದಳು ॥

ಪಜ್ಜಳಿಪ ರತ್ನ ಪ್ರದೀಪಂಗಳಿಂದ ಪೊಸ।
ಬಜ್ಜರದ ಮಣಿ ಮಂಚದಿಂದಂಚೆದುಪ್ಪಳಿಂ।
ಸಜ್ಜುಕದರಳ್ಗಳಿಂದೆಸೆವ ಮೇಲ್ವಾಸಿನಿಂ ರಾಜೋಪಭೋಗ್ಯಮಾದ ॥
ಸಜ್ಜೆವನೆಯೊಳ್ವಿರಾಜಿಪ ಕಾಂತನೆಡೆಗೆ ನಸು।
ಲಜ್ಜೆ ಮಂದಸ್ಮಿತಂ ಕಿರು ಬೆಮರ್ಕಾತರಂ।
ಪಜ್ಜೆದೋರಲ್ಮೊಗದೊಳೈತಂದು ಸಾರ್ದಳೊಯ್ಯನೆ ಮತ್ತ ಗಜ ಗಾಮಿನಿ ॥

ಹೆಚ್ಚು ಮೆಚ್ಚಿಗೆಯ ಮನ್ನಣೆಯನ್ನು ಪಡೆದ ಲಕ್ಷ್ಮೀಶನ ಈ ನುಡಿಗಳ ವಿಷಯವಾಗಿ ಹೆಚ್ಚು ಹೇಳಬೇಕಾಗಿಲ್ಲ.

ಸೀತಾ ರಾಮರ ವಿಲಾಸಕ್ಕಾಗಿ ಶೃಂಗರಿಸಲ್ಪಟ್ಟಿದ್ದ ಆ ಗೃಹದ ಈ ವರ್ಣನೆಗಿಂತ ರತ್ನಾಕರನು ಬಣ್ಣಕೊಟ್ಟು ಬಯಲಿಗಿಟ್ಟ ಭರತೇಶನ ಶಯನಗೃಹದ ವರ್ಣನೆಯು ಆವ ಬಗೆಯಲ್ಲಿ ಎಷ್ಟು ಅಂತರದಲ್ಲಿದೆ ಎಂಬುದನ್ನು ಈ ಕೆಳಗಣ ಪದ್ಯಗಳು ತಿಳಿಸಿಕೊಡುವುವಲ್ಲದೆ ಆ ಪ್ರಣಯಿಗಳ ಪ್ರೇಮಾಲಾಪವು ಎಷ್ಟು ಲಲಿತವಾಗಿದ್ದಿತೆನ್ನುವುದನ್ನೂ ತೋರಿಸಿಕೊಟ್ಟು ಕವಿಯ ಅಸಾಧಾರಣ ಕಲ್ಪನಾ ಚಾತುರ್ಯವನ್ನೂ ಹೊಗಳಿ ಹಾಡುತ್ತಿವೆ:—

ಶಯನದ ಗೃಹವೆಲ್ಲ ನವರತ್ನಮಯ ಹೇಮ। ಮಯಗಳು ಮತ್ತದನೊಲ್ಲು।
ಮಯನು ನಿರ್ಮಿಸಿದನೆಂದಾಡಿಬಿಡುವೆ ವಿ। ಸ್ಮಯಬಟ್ಟು ಪೊಗಳಲಾನರಿಯೆ ॥

ಮುದುಕ ಮುದುಕರೊಮ್ಮೆ ಹೊಕ್ಕರಾ ಮನೆಯೊಳು। ಬೆದೆ ಬೆದೆಗೊಳಿಸಿ ಕಾಡುವವು।
ಮದವೆದ್ದು ಜವ್ವನದರಸಗರಸಿಯರ। ಗೆದೆ ಸೊಕ್ಕು ಮಾಳ್ಪುದಚ್ಚರಿಯೆ ॥

ಕೊಡಗೂಸುಗಳು ಬಂದು ಹೊಕ್ಕರಾ ಮನೆಯೊಳು। ತಡೆಯದೆ ಪ್ರಾಯವೇರಿಪವು।
ನುಡಿಯದವರ ನುಡಿಸುವವಲ್ಲ ಕಾಮಿಯ। ಗಡು ಕಾಮಿಮಾಳ್ಪವೇನೆಂಬೆ ॥

ಪಾರಿವಾಳದ ಪಕ್ಕಿ ಮದನ ಕೈಯೊಳು ತನ್ನ। ನಾರಿಗಿದಿರು ನಡೆದಾಡಿ।
ಗೂರುಳು ಗುಕು ಗುಕು ಗುಟು ಗುಟು ಗುರು ಗುರು। ಚಾರಿಟಿಯೆಂದುವಲ್ಲಲ್ಲಿ ॥

ಭಾವ ಬಂದನು ತನ್ನ ಭಾವಕಿಯೆಡೆಗೀಗ। ಭಾವಜ ಕೇಳಿಗೆ ಬಂದ।
ಭಾವಿಸಿ ಬಡ ಪರಿಯವನಲ್ಲವೆಂದು ಶು। ಕಾವಳಿ ನುಡಿದುವಲ್ಲಲ್ಲಿ ॥

ಅಕ್ಕ ಬಂದಳು ಭಾವಗಧರ ಸುಧೆಯನುಣ। ಲಿಕ್ಕ ಬಂದಳು ತನ್ನ ಪತಿಯ।
ತೆಕ್ಕೆಯ ಸುಖದೊಳೋಲಾಡಲ್ಕೈದಿದಳೆಂದು। ನಕ್ಕವು ಗಿಳಿಗಳಲ್ಲಲ್ಲಿ ॥

*    *    *    *    *

ಮೊಲೆಗಟ್ಟು ಕಾಸೆ ಚಲ್ಲಣ ತುರುಬಿನ ಮಣೆ| ಬಲೆ ಮೊದಲಾದುವ ತೆಗೆದು|
ಬೆಳುವಟ್ಟೆ ಮುಟ್ಟು ಚಮತ್ಕಾರದೊಳು ಬಂದ| ಳೆಲೆಲೆ ಮೋಹನವದೊಂದೆನಿಸಿ ||
ಸಿಂಹ ವಾಹಿನಿಯೆಂಬ ಮಂಚದ ಮೇಲಿದ್ದ| ಸಿಂಹ ವಿಕ್ರಮನ ಕೆಲದೊಳು|
ಸಿಂಹಾಯತ ಮಧ್ಯೆ ಕುಳಿತಳು ಜಾಡ್ಯವ| ಸಂಹರಿಸುವ ಶಕ್ತಿ ಮೆರೆಯೆ ||

*    *    *    *    *

ಕಡು ಪಂಥಗಾತಿ ನೀನೆನಗೆ ವೀಳೆಯದೆಲೆ| ಗೊಡದಿರಂಜುವೆವು ನಾವೆಂದ|
ನಡೆಯಿತೆ ನಿನ್ನ ಮುಂದೆನ್ನಯ ಪಂಥಕೊ| ಪಿಡಿ ಸುಮ್ಮನೆನುತೀಯುತಿಹಳು ||
ಅಕ್ಕಟಕ್ಕಟ ನೋಡ ಇವಳಿಗೆನ್ನೊಡನಕ್ಕೆ| ಸಿಕ್ಕದುದಾಸೀನದಾಟ|
ಲೆಕ್ಕಕೆ ತಾರೆ ನಾನಾರಂತೆ ನಿನ್ನ ನೋ| ಟಕ್ಕೆ ತೋರಿದೆನೊ ಹಾಯೆಂದ ||
ದೇವ ನೀನೆನ್ನ ನೋಟಕೆ ನನ್ನ ಮನಕೆ ಸಂ| ಜೀವನವಾಗಿ ತೋರಿದವೆ|
ಹಾ ವೈಶಿಕದಾಟ ಸಾಕೆಂದು ಮುನಿದು ಕ| ಲಾವಿದ ಮೊಗವಡ್ಡ ತೆಗೆದ ||
ಹರಣವ ಸೂರೆಗೊಂಡರಸ ನೀನುರೆ ಮೊಗ| ದಿರುಹಿದರಾನು ಬಿಡುವೆನೆ|
ತಿರುಗಿತ್ತಲೆಂದು ತನ್ನತ್ತ ತೆಗೆದಳು ನಂ| ಗೊರಳ ನೆಡದ ತೋಳೊಳಪ್ಪಿ ||
ತೆಗೆದಂತೆ ಮೊಗವ ಸಂಮುಖಕೆ ಕೊಟ್ಟನು ಕಣ್ಣ| ಮುಗಿದು ಮೌನದೋರ್ದನಾಗ|
ಮುಗಿದ ಕಣ್ಣಾಗಿಯ ಮೊಗದ ಕಾಂತಿಯ ನೋಡಿ| ನಗುತ ನಗುತ ಚುಂಬಿಸುವಳು ||
ನೊಸಲೊಳು ನೊಸಲನಾಟಿಸುತ ಮುಂದಾಡಿ ಚುಂ| ಬಿಸುವಳು ಕೊರಳನಪ್ಪುವಳು|
ಸಸಿನೆ ಕಣ್ದೆರೆದೊಲ್ದು ನೋಡೆನ್ನ ಪ್ರಾಣದ| ಬೆಸುಗೆಕಾರ ಎಂಬಳೊಡನೆ ||
ನೀಡುವಳೆಲೆಯ ಘಳಿಗೆಯ ಬಾಯ್ದೆರೆಗೆ ಪ| ಲ್ಗೂಡಿಕೊಂಬನು ಕೊಳ್ಳದವನು|
ಕಾಡದಿರಿನಿಯ ನೀನೆನ್ನನೆನುತಲಾಗ| ಬೇಡಿಕೊಂಬಳು ಲಲ್ಲೆಗರೆದು ||
ಉಗುರಿಕ್ಕುವಳು ನೇಮ ನೇಮಕವನ ಮೈಯ| ದುಗುಲವ ನೂಂಕಿ ತನ್ನೆದೆಯ|
ದುಗುಲವ ತೆಗೆಪಮರ್ದಪ್ಪಿಕೊಂಬಳು ರೋಮ| ನೆಗೆದು ಮೈಯೊಳು ತುಂಬುವಂತೆ ||
ಚೀರು ಚೀರೆಂದು ಚೆಂದುಟಿಗರ್ಚಿ ಸುಧೆಯನು| ಹೀರುವಳಿನಿಸು ಗುದ್ದುವಳು|
ಮಾರನ ಮದವನಂಡಲೆವ ಚೆಲ್ವಿನ ಹೊಂತ| ಕಾರಿ ನೋಡೆಂದು ಮುದ್ದಿಪಳು ||
ಪದ್ಮಿಯ ಪ್ರಾಣದೊಡೆಯ ಕಣ್ದೆರೆ ಬೇಗ| ಪದ್ಮಿಯ ಸಿರಿಯೆ ಮಾತಾಡು|
ಪದ್ಮಿನಿಗರ್ತಿದೋರೆಂದು ಮುದ್ದಿಸಿ ಮುಖ| ಪದ್ಮವ ತಡವಿ ನೋಡಿಪಳು ||
ಗಿಳಿಯಂತೆ ನುಡಿವಳು ಲತೆಯಂತೆ ತಬ್ಬುವ| ಳಿಳಿದು ಹರಿವ ಹೊಳೆಯಂತೆ|
ಗಳರವ ತೋರುವಳಪ್ಪಿ ತೂಗಾಡಿ ಕಂ| ಗಳ ತೆರೆಯೆಂದು ಕಾಡುವಳು ||

ಚಿತ್ರಕನು ತಾ ಬರೆವ ಚಿತ್ರದಲ್ಲಿದ್ದ ಹಾವ ಭಾವ ರೂಪ ಲಾವಣ್ಯಗಳನ್ನು ತನ್ನ ಕುಶಲತೆಯಿಂದ ಕಂಗೊಳಿಸಲಾರದೆ ತನ್ನ ಕಲಾ ಕೌಶಲವನ್ನೆಲ್ಲ ಆ ಕೆಲಸದಲ್ಲಿ ಕಾಣಿಸಿಕೊಟ್ಟು ಕೃತಾರ್ಥನಾದರೆ ಆ ಚಿತ್ರದ ಇರವೇ ಅವನ ಅವನ ಕಲೆ

ಯಷ್ಟೇ ಕಾಣುವಂತೆ ಪಾತ್ರಗಳ ಭಾವಗಳನ್ನು ಬೆಳಗಿಸದೆ ತನ್ನ ಚಾತುರ್ಯವನ್ನು ತೋರಗೊಟ್ಟ ಕವಿಯ ಕವನಗಳು ಕಾಣಿಸುತ್ತವೆ ಎನ್ನುವುದೇ ಇದರ ತಾತ್ಪರ್ಯ. ತನ್ನ ಹೊತ್ತಗೆಯ ತುಂಬ ತಾನೇ ಕಾಣಿಸಿಕೊಳ್ಳಬೇಕೆಂಬ ಆಶೆಯೋ ಏನೊ ಲಕ್ಷ್ಮೀಶನಿಗೆ.

ಆಡಿದುದನ್ನೇ ಆಡಿ ಆಹ್ಲಾದವನ್ನುಂಟುಮಾಡಬೇಕೆಂಬುದೇ ರತ್ನಾಕರನ ಗುರಿಯು. ಅವನು ತನ್ನ ಹೊತ್ತಗೆಯಲ್ಲಿ ಎಷ್ಟು ಬಗೆಯಾಗಿ ಪ್ರೇಮಾಂತಃಕರಣಗಳ ಸಂಗತಿಗಳನ್ನು ಸಂಪರ್ಶನೀಯವಾಗಿಟ್ಟು ಸಾಂಗಗೊಳಿಸಿರುವನೆನ್ನುವುದು ಇದರಿಂದ ಅಷ್ಟೊಂದು ತಿಳಿಯಲಾಗದು. ಅವನ ಪ್ರತಿಯೊಂದು ನುಡಿಯಲ್ಲಿ ಭಕ್ತಿ ಪ್ರೇಮ ಶೃಂಗಾರಗಳು ಸಾಲುಗೊಂಡು ಬಂದಿವೆ. ಇವನು ಏನನ್ನು ಎಷ್ಟು ಬಣ್ಣಿಸಿದರೂ ಅದರ ಕೃತಿಯು ತನ್ನ ಕಥಾನಾಯಕ ನಾಯಿಕೆಯರಿಗಾಗಿಯೇ ಅಂದವಾಗಿರುತ್ತದೆ ಎನ್ನುವುದನ್ನು ಆತನ ಈ ಅರುಣೋದಯ ವರ್ಣನೆಯುಳ್ಳ ಉಪ್ಪವಡ ಹಾಡಿನಿಂದ ಅರಿತುಕೊಳ್ಳಬಹುದಾಗಿದೆ.—

**ಅರುಹನ ನೆನಹಿಂದೆ ಪಾಪ ತೊಲಗುವಂತೆ। ಧರೆಯಂಧಕಾರ ಜಾರುತಿದೆ।**
**ಗುರು ಭಕ್ತಿ ತೋರುವಂತರುಣೋದಯ ತೋರಿ। ತರಸಯೆಂದೆತ್ತಿ ಹಾಡಿದರು ॥**

**ತಾರೆ ಮಸುಳುತಿವೆ ತಣ್ಣತಣ್ಣನೆ ಮಂದ। ಮಾರುತ ಬಂದು ತೀಡುತಿದೆ।**
**ನಾರಿಯ ನಳಿದೋಳ ತೆಕ್ಕೆಯಿಂದೇಳೆಲೆ। ವೈರಿ ಭೂಭುಜ ತವೋ ಭಾನು ॥**

**ಅರುಣೋದಯವಾಗಿ ಕಿರಣೋದಯವಾಯ್ತು। ತರಣಿ ತೋರದ ಮುನ್ನ ನಿನ್ನ।**
**ಸುರುಚಿರಾಂಗವ ತೋರಿ ಜಗವನುದ್ಧರಿಸೆಲೆ। ಪುರನಾಥನರ್ಗಕುಮಾರ ॥**

*    *    *    *    *

ಈ ತೆರನಾಗಿ ರತ್ನಾಕರವರ್ಣಿಯು ಭಕ್ತಿ ಪ್ರೇಮ ವಿಶ್ವಾಸಗಳ ಕುರುಹುಗಳನ್ನು ಕಾಣಿಸಗೊಡದೆ ಅವುಗಳ ಆ ಇರವನ್ನೇ ಅತಿ ಅಂದಗೊಳಿಸಿರುವನು. ಕವಿತಾ ಲೋಕದಲ್ಲಿ ಹೊಸ ಹಾದಿಯನ್ನು ಕಂಡು ಹಾಯಬೇಕೆಂದು ಹುರುಪುಳ್ಳ ನನ್ನ ಬಂಧು ಬಳಗಕ್ಕೆ ಈ ಕಾವ್ಯವು ಮಾರ್ಗದರ್ಶಿಯಾಗಿದೆ. ಆತನ ರಚನಾ ಚಾತುರ್ಯವನ್ನೂ ಭಕ್ತಿ ಪ್ರೇಮ ಮೊದಲಾದುವುಗಳನ್ನು ಸೂರೆಮಾಡಿದ ಭಾವಗಳನ್ನು ತಿಳುಹಿ ಅವನ ಕಾವ್ಯವು ನನಗೆ ಕಲಿಸಿಕೊಡುವ ನೀತಿಯನ್ನೂ ತಿಳಿಸಿಕೊಡಬೇಕೆಂದು ನಾಡಿದ ನನಗೆ ಶೃಂಗಾರ ವರ್ಣನಾ ಚಾತುರ್ಯದ ಬಗೆಯನ್ನೇ ಕಾಣಿಸಿಕೊಡಲು ಅದೆಷ್ಟೋ ಸಾಹಸಪಡಬೇಕಾಯಿತು. ಸದ್ಯಕ್ಕೆ ಇಷ್ಟೇ ಸಾಕು. ಕವಿಕುಲಗುರುವಾದ ಕಾಳಿದಾಸನ "ಭಿನ್ನರುಚಿರ್ಹಿ ಲೋಕಃ" ಎಂಬ ಉಕ್ತಿಯಂತೆ, ಅಥವಾ "ವಿಚಿತ್ರರೂಪಾಃ ಖಲು ಚಿತ್ತವೃತ್ತಯಃ" ಎಂಬ ಭಾರವಿಯ ಭಾವದಂತೆ ನನ್ನ ಚಿತ್ತವೃತ್ತಿಗೆ, ಅಥವಾ ನನ್ನ ಕೇವಲ ರುಚಿಗೆ ನರಿಬೀಳುವ ಈ ಲೇಖನದಲ್ಲಿಯ ಭಾವನೆಗಳಿಗೆ ಯಾರೂ ಏನೂ ಹೆಸರಿಡಲಿಕ್ಕಿಲ್ಲವೆಂದು ನಂಬುಗೆ.

**"ಶಿವರಾಮ"**

# *ಕನ್ನಡದ ವಿಶಿಷ್ಟಾಭಿಮಾನಿಗಳು

ಕನ್ನಡದ ಮೇಲೆ ಪರ ಭಾಷೆಗಳ ವರ್ಚಸ್ಸು ಬೀಳುವ ಪೂರ್ವದಲ್ಲಿ ಎಷ್ಟೋ ಕನ್ನಡ ಭಾಷಾ ಸೇವೆಯನ್ನು ಮುನಸವಾರೆ ಮಾಡಿ ಕನ್ನಡ ವಾಙ್ಮಯ ಭಾಂಡಾರವನ್ನು ಬೆಳಸಿ ಬೆಳಕಿಗೆ ತಂದವರಲ್ಲಿ ನಾಗವರ್ಮ, ಪಂಪ, ರನ್ನ, ಲಕ್ಷ್ಮೀಶ, ಷಡಕ್ಷರಿ—ಇವರೇ ಮೊದಲಾದ ಸಾಹಿತ್ಯ ಭಕ್ತರು ಅಗ್ರುಗಣ್ಯರು. ಸಂಸ್ಕೃತಕ್ಕಿಂತ ಕನ್ನಡದ ಅಭಿಮಾನವನ್ನು ಹೆಚ್ಚು ಹಿಡಿದು ಕನ್ನಡ ಭಾಷಾ ಸೇವೆಯನ್ನು ಮಾಡಿದವರಲ್ಲಿ ನಯಸೇನ, ನಾಗವರ್ಮ, ಆಂಡಯ್ಯ, ರಂಗನಾಥ, ಭಟ್ಟಾಕಲಂಕ, ಮುದ್ದಣ—ಇವರೇ ಮೊದಲಾದವರು ಶ್ರೇಷ್ಠರೆಂದು ಹೇಳಬಹುದು.

ಕನ್ನಡ ಭಾಷೆಯು ಮರಾಠಿ ಬಂಗಾಲಿಗಳಂತೆ ಸಂಸ್ಕೃತದಿಂದ ಜನ್ಯವಾದ ಪ್ರಾಕೃತದಿಂದ ಹುಟ್ಟಿದ ಭಾಷೆಯಲ್ಲ. ತಮಿಳು, ತೆಲುಗು, ಕನ್ನಡ, ಮಲೆಯಾಳ, ಇವು ಪಂಚ ದ್ರಾವಿಡ ವರ್ಗಕ್ಕೆ ಸೇರಿದ ಭಾಷೆಗಳು. ಇವುಗಳಿಗೆಲ್ಲ ಯೂರೋಪಿನ ಪಂಡಿತರು ಹೇಳುವಂತೆ—ಸಂಸ್ಕೃತ, ಜರ್ಮನ್ ಮೊದಲಾದ ಭಾಷೆಗಳಿಗೆ ಒಂದು ಅಜ್ಞಾತವಾದ 'ಇಂಡೋ ಜರ್ಮ್ಯಾನಿಕ್' ಭಾಷೆಯು ಮಾತೃಭಾಷೆಯಾಗಿದ್ದಂತೆ—ಒಂದು ಅಜ್ಞಾತ ದ್ರಾವಿಡ ಭಾಷೆಯು ಕನ್ನಡ, ತಮಿಳು ಮೊದಲಾದುವುಗಳಿಗೆ ಮಾತೃ ಭಾಷೆಯಾಗಿದ್ದಿತು. ಕನ್ನಡವು ಸಂಸ್ಕೃತದ ಸಹಾಯದಿಂದ ಬಳೆದ ಭಾಷೆಯಾಗಿದ್ದರೂ, ಅವಶ್ಯವಿಲ್ಲದ ಸಂದರ್ಭದಲ್ಲಿ ಸಂಸ್ಕೃತ ಪದಗಳನ್ನು ಕನ್ನಡದಲ್ಲಿ ಸೇರಿಸುವುದು ಕೆಲವು ಕನ್ನಡ ಕವಿಗಳಿಗೆ ಸಹಿಸಲಿಲ್ಲ. ಆದುದರಿಂದ ಕ್ರಿ. ಶ. ೧೧೧೨ರಲ್ಲಿ ಮುಳಗುಂದದಲ್ಲಿದ್ದ ನಯಸೇನನೆಂಬ ಜೈನ ಕವಿಯು ಧರ್ಮಾಮೃತವೆಂಬ ತನ್ನ ಗ್ರಂಥದಲ್ಲಿ—

(೧) **ಪೊಸಗನ್ನಡದಿಂ ವ್ಯಾವ|**
**ರ್ಣಿಸುವೆಂ ಸಂಸ್ಕೃತಿಯನೆಂದು ಕನ್ನಡಮಂ ಚಿಂ ||**
**ತಿಸಿ ಕೊಡಲಾರದಕ್ಕಟ|**
**ಮಿಸುಕದ ಸಕ್ಕದವನಿಕ್ಕುವವನುಂ ಕವಿಯೇ ||**

(೨) **ಸಕ್ಕದಮಂ ಪೇಳ್ವೊಡೆ ನೆರೆ|**
**ಸಕ್ಕದಮಂ ಪೇಳ್ಗೆ ಶುದ್ಧ ಕನ್ನಡದೊಳ್ ತಂ ||**
**ದಿಕ್ಕುವರೆ ಸಕ್ಕದಂಗಳ|**
**ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ||**

(೧) ಪೊಸಗನ್ನಡದಲ್ಲಿ ಕೃತಿಯನ್ನು ನಿರ್ಮಿಸುವೆನೆಂದು ಒಳ್ಳೆಯ ಆಸ್ಥೆಯಿಂದ ಹೇಳಿ ಅಸಂಬದ್ಧವಾದ ಸಂಸ್ಕೃತ ಪದಗಳನ್ನು ತಂದಿಕ್ಕುವವನು ಕವಿಯೇ?

* ಬೆಳಗಾವಿಯಲ್ಲಿ ನಡೆದ ೧೫ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದುಬಂದುದು.

ಮತ್ತು (೨) ಯಾರಾದರೂ ತಮ್ಮ ಕಾವ್ಯವನ್ನು ಸಂಸ್ಕೃತದಲ್ಲಿ ಬರೆಯಬೇಕೆಂದು ಇಚ್ಛಿಸುತ್ತಿದ್ದರೆ ಯಥೇಚ್ಛವಾಗಿ ಬರೆಯಲಿ, ನಮ್ಮದೇನೂ ಅಡ್ಡಿಯಿಲ್ಲ. ಆದರೆ, ಶುದ್ಧ ಕನ್ನಡದಿಂದ ಕಾವ್ಯವನ್ನು ಬರೆಯ ಹೊರಟು ಸಂಸ್ಕೃತ ಪದಗಳನ್ನು ತಂದು ಕೂಡಿಸಿದರೆ ತುಪ್ಪದಲ್ಲಿ ಎಣ್ಣೆ ಕೂಡಿದಂತಾಗಿ ಕಾವ್ಯಕ್ಕೆ ಹೇಗೆ ತಾನೆ ಶೋಭೆಯುಂಟಾದೀತು ? ಎಂಬುದೇ ಅವನ ಅಭಿಪ್ರಾಯವು.

ಈಗ ಸಾಮಾನ್ಯರಿಗೆ ಅಸಾಧ್ಯವಾದರೂ, ನಯಸೇನನು ತನ್ನ ಕನ್ನಡಕ್ಕೆ ಪೊಸಗನ್ನಡವೆನ್ನುವುದರಿಂದ, ಅವನಿಗೆ ಎಷ್ಟೋ ಕಾಲಗಳ ಹಿಂದೆಯೇ ಈಗ ಪಂಡಿತರಿಗೂ ಅಸಾಧ್ಯವಾದ ಒಂದು ಕನ್ನಡವಿರಬಹುದೆಂದು ಶಾಸ್ತ್ರಜ್ಞರ ಮತ. ನಯಸೇನನು ವಿಸುಕದ (ಕ್ಲಿಷ್ಟವಾದ, ಅರ್ಥವಾಗದ) ಸಕ್ಕದವನ್ನು ನಿಂದಿಸುವುದರಿಂದ ಸಹಜ ಸಕ್ಕದವು ಈತನಿಗೆ ಸಮ್ಮತವಿದ್ದಂತೆ ತೋರುತ್ತದೆ.

ಇವನಂತೆ, ನಾಗವರ್ಮನು ತನ್ನ ಗ್ರಂಥದಲ್ಲಿ—

**ಪಳಗನ್ನಡಂ ಪುದುಂಗೊಳೆ ।**
**ಕೊಳೆ ಸಕ್ಕದಮಂ ತಗುಳ್ಚಿ ನಾಣ್ಚಿಡೆ ಮುತ್ತಂ ॥**
**ಮೆಳಸಂ ಕೋದಂತಿರೆ ಪೇ ।**
**ಳ್ವಳಿಗವಿಗಳ ಕಬ್ಬಮೇಂ ಮನಂಗೊಳಿಸುಗುಮೇ ॥**

ಕೀಳ ಕವಿಗಳು ಕೊಳೆ (ವ್ಯಾಕರಣಾದಿ ಲಕ್ಷಣಕ್ಕೆ ಸರಿಹೋಗದ) ಸಕ್ಕದವನ್ನು ಹಳಗನ್ನಡದಲ್ಲಿ ಸೇರಿಸುವುದರಿಂದ ಮುತ್ತಿನೊಡನೆ ಮೆಣಸನ್ನು ಸೇರಿಸಿದಂತಾಗುತ್ತದೆಂದು ಹೇಳುವುದರಿಂದ, ವ್ಯಾಕರಣಾದಿ ಲಕ್ಷಣಗಳನ್ನರಿದು ಸಂಸ್ಕೃತದ ಶುದ್ಧ ರೂಪಗಳನ್ನು ಅವಶ್ಯಕಂಡಲ್ಲಿ ಸೇರಿಸಬಹುದೆಂಬುದಾಗಿ ಇವನ ಅಭಿಪ್ರಾಯವಿದ್ದಂತೆ ತೋರುತ್ತದೆ.

ಇದರಂತೆ, ೯ನೆಯ ಶತಮಾನದಲ್ಲಿದ್ದ ನೃಪತುಂಗನು ತನ್ನ 'ಕವಿರಾಜಮಾರ್ಗ'ವೆಂಬ ಅಲಂಕಾರ ಗ್ರಂಥದಲ್ಲಿ—

**ಸಮಸಂಸ್ಕೃತಂಗಳೊಳ್ ಸ ।**
**ಯ್ತಮರ್ದಿರೆ ಕನ್ನಡಮನರಿದು ಪೇಳ್ಗೆಂಬುದಿದಾ ॥**
**ಗಮ ಕೋವಿದ ನಿಗದಿತ ಮಾ ।**
**ರ್ಗಮಿದಂ ಬೆರಸಲ್ಕಮಾಗದೀ ಕನ್ನಡದೊಳ್ ॥**

ಕನ್ನಡದಲ್ಲಿ ಲಿಂಗಸಂಜ್ಞೆಗೊಳ್ಳದ ಸಂಸ್ಕೃತ ಶಬ್ದಗಳನ್ನು ಬೆರಸಿದರೆ ಕಾವ್ಯವು ಸುಂದರವಾಗಲಾರದೆಂದೂ, ಅಲಂಕಾರಕ್ಕೆ ಸರಿಹೋಗಲಾರದೆಂದೂ ತನ್ನ ಅಧಿಕಾರಯುಕ್ತ ವಾಣಿಯಿಂದ ಹೇಳಿರುವನು.

ಇನ್ನು, ಸು. ಕ್ರಿ. ಶ. ೧೬೭೫ರಲ್ಲಿದ್ದ ರಂಗನಾಥನು ತನ್ನ 'ಅನುಭವಾಮೃತ'ದಲ್ಲಿ—



ಸುಲಿದ ಬಾಳೆಯ ಹಣ್ಣಿನಂದದಿ।
ಕಳೆದ ಸಿಗುರಿನ ಕಬ್ಬಿನಂದದಿ।
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ದ ॥
ಲಲಿತವಹ ಕನ್ನಡದ ನುಡಿಯಲಿ।
ತಿಳಿದು ತನ್ನೊಳು ತನ್ನ ಸೌಖ್ಯವ ।
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ॥

ಸುಲಿದ ಬಾಳೆಯ ಹಣ್ಣಿನಂತೆ, ಕಳೆದ ಸಿಬರಿನ ಕಬ್ಬಿನಂತೆ, ಕಲ್ಲುಸಕ್ಕರೆ ಹಾಕಿ ಮರಳಿಸಿದ ಹಾಲಿನಂತೆ, ಕನ್ನಡ ಭಾಷೆಯ ಮಾಧುರ್ಯವಿದೆ. ಸಂಸ್ಕೃತ ಮೊದಲಾದ ಭಾಷೆಗಳಂತೆ ಕಷ್ಟಬಟ್ಟು ಕನ್ನಡದ ಸೌಂದರ್ಯವನ್ನು ತಿಳಿಯಬೇಕಾಗಿಲ್ಲ. ಕನ್ನಡದಲ್ಲಿದ್ದ ಗ್ರಂಥಗಳನ್ನಾದರೂ ಸಾಮಾನ್ಯರು ತಿಳಿದುಕೊಂಡರೆ ಬೇಕಾದಷ್ಟು ಜ್ಞಾನವಾಗುವುದು. ಸಂಸ್ಕೃತದ ಗೊಡವೆಗೆ ಹೋಗದಿದ್ದರೂ ಅಡ್ಡಿಯಿಲ್ಲವೆಂದು ಕವಿಯ ಅಭಿಪ್ರಾಯವಿರಬೇಕು. ಶ್ರೀಮಾನ್ ಆರ್. ನರಸಿಂಹಾಚಾರ್ಯರು ಇತ್ತಲಾಗಿ ಮಾಡಿದ ಶೋಧದಿಂದ ಬಹುಮಟ್ಟಿಗೆ ಸಂಸ್ಕೃತ ಸಾಹಿತ್ಯ ಜ್ಞಾನವನ್ನೆಲ್ಲ ಕನ್ನಡ ಸಾಹಿತ್ಯವು ಒಳಕೊಂಡಿದೆಯೆಂದು ಸಿದ್ಧವಾಗಿದೆ. ಜನತೆ ಅಷ್ಟನ್ನಾದರೂ ತಿಳಿದುಕೊಳ್ಳಲೆಂದು ಕವಿಯು ಒತ್ತಿ ಹೇಳಿರುವನು.

ಇನ್ನು, ಸು. ೧೨೩೫ರಲ್ಲಿ 'ಕಬ್ಬಿಗರ ಕಾವ'ವೆಂಬ ಗ್ರಂಥವನ್ನು ಬರೆದ ಆಂಡಯ್ಯನಂತೂ ಕನ್ನಡದ ಅಭಿಮಾನವನ್ನು ಶಿಖರಕ್ಕೆ ಮುಟ್ಟಿಸಿಬಿಟ್ಟಿದ್ದಾನೆ. ಸಂಸ್ಕೃತ ಸಾಹಿತ್ಯದ ವರ್ಚಸ್ಸು ಕನ್ನಡದ ಮೇಲೆ ಬಿದ್ದ ಆ ಕಾಲಕ್ಕೆ ಸಂಸ್ಕೃತವನ್ನುಳಿದು ಕನ್ನಡಕ್ಕೆ ಸ್ವತಂತ್ರವಾದ ಗ್ರಂಥ ರಚನೆಯಾಗಲಾರದೆಂಬ ಹಲವರ ತಪ್ಪು ತಿಳಿವಳಿಕೆಯನ್ನು ತನ್ನ ಅಚ್ಚಗನ್ನಡದ ಗ್ರಂಥದಿಂದ ಸಂಪೂರ್ಣವಾಗಿ ಹೋಗಲಾಡಿಸಿದನು. ಈ ಗ್ರಂಥದಲ್ಲಿ ಸಂಸ್ಕೃತವು ಸಂಪೂರ್ಣವಾಗಿ ನಿಷೇಧಿಸಲ್ಪಟ್ಟುದರಿಂದ ಹಲವರು ಇದಕ್ಕೆ ದುರಭಿಮಾನವೆಂದು ಕರೆಯುವುದುಂಟು. ಇದು ಸತ್ಯವಾಗಿದ್ದರೆ ಗ್ರಂಥ ರಚನಾ ಸೌಂದರ್ಯಕ್ಕೆ ಭಂಗ ಬರಬಹುದಾಗಿದ್ದಿತು; ಆದರೆ ಹಾಗೇನೂ ತೋರುವುದಿಲ್ಲ. ಹಾಗಾದರೆ ಇದು ಹಳಗನ್ನಡ ಕಾವ್ಯ ಪರಿಶ್ರಮವಿಲ್ಲದೆ ಜಂಬಕ್ಕಾಗಿ ಕನ್ನಡವನ್ನು ಓದುವವರ ಆಕ್ಷೇಪವಿದ್ದರೂ ಇರಬಹುದು. ಪರ ಭಾಷಾ ಮೋಹದಿಂದ ಪೀಡಿತರಾಗಿ ಸಂಸ್ಕೃತದ ಸಹಾಯವಿಲ್ಲದೆ ಸ್ವತಂತ್ರವಾಗಿ ಕನ್ನಡದಲ್ಲಿ ಗ್ರಂಥಗಳು ಹುಟ್ಟಲಾರವೆಂದು ವಾದಿಸುತ್ತಿರುವ ಜನರಿಗೆ ಕಿವಿ ಹಿಂಡಲು ಕಬ್ಬಿಗರ ಕಾವವು ಈಗಲಾದರೂ ಸಿದ್ಧವಿದೆ.

ಸಂಸ್ಕೃತದಿಂದ ಮೈಮರೆತ ಎಷ್ಟೋ ಜನರು, ಕನ್ನಡವು ಸಾಮಾನ್ಯ ಜನರ ವ್ಯವಹಾರಕ್ಕಾಗಿ ಮಾತ್ರ ಉಪಯೋಗಿಸಲ್ಪಡುವ ಭಾಷೆಯೆಂದೂ, ಶಾಸ್ತ್ರಕ್ಕೆ ಸರಿಹೋಗಲಾರದೆಂದೂ ಬಾಯಿಗೆ ಬಂದಹಾಗೆ ಬಗುಳುವ ಕಾಲಕ್ಕೆ ಭಟ್ಟಾಕಲಂಕನು ಪಾಣಿನಿಯ ಪದ್ಧತಿಯಂತೆ ಸೂತ್ರ ರೂಪವಾಗಿ ಕನ್ನಡದ ವ್ಯಾಕರಣವನ್ನು ಬರೆದು ಬಾಯಿಗೆ ಬೀಗ ಹಾಕಿದನಲ್ಲದೆ ಕನ್ನಡವು ಶಾಸ್ತ್ರಕ್ಕೆ ಒಪ್ಪುವ ಭಾಷೆ

ಯೆಂದು ಸಿದ್ಧಮಾಡಿಕೊಟ್ಟನು. ಸಂಸ್ಕೃತವನ್ನುಳಿದು ಯಾವತ್ತೂ ಭಾಷೆಗಳು ಶಾಸ್ತ್ರಕ್ಕೆ ಅಸಮ್ಮತವೆಂದು ತಿಳಿಯಲ್ಪಡುವಾಗ್ಗೆ ಉಳಿದ ಭಾಷೆಗಳನ್ನೊಗೆದು ಕನ್ನಡವು ಶಾಸ್ತ್ರಭಾಷೆಯಾದುದನ್ನು ಕೇಳಿದರೆ ಯಾವ ಕನ್ನಡಿಗನಿಗೆ ತಾನೆ ಆನಂದವಾಗಲಿಕ್ಕಿಲ್ಲ?

ಮುಂದೆ ಮಧ್ವಗುರುಗಳಾದ ಜಗನ್ನಾಥರಾಯರು ತಮ್ಮ 'ಹರಿಕಥಾಮೃತ'ದಲ್ಲಿ—

(೧) ಆದರುಶವ ಗತಾಕ್ಷ ಭಾಷಾ।
ಭೇದದಿಂದಲಿ ಕರೆಯಲದನು ನಿ।
ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು ॥
ಮಾಧವನ ಗುಣ ಕೇಳ್ವ ಪ್ರಾಕೃತ।
ವಾದರೂ ಸರಿ ಕೇಳಿ ಪರಮಾ।
ಹ್ಲಾದ ಬಡದಿಪ್ಪರೆ ನಿರಂತರ ಬಲ್ಲ ಕವಿಜನರು ॥

(೨) ಭಾಸ್ಕರನ ಮಂಡಲವ ಕಂಡು ನ।
ಮಸ್ಕರಿಸಿ ಮೋದಿಸದೆ ದ್ವೇಷಿಸಿ।
ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ ॥
ಸಂಸ್ಕೃತವಿದಲ್ಲೆಂದು ಕುಹಕ ತಿ।
ರಸ್ಕರಿಸಲೇನಹುದು ಭಕ್ತಿ ಪು।
ರಸ್ಕರದಿ ಕೇಳ್ವಂಗೆ ಒಲಿವನು ಪುಷ್ಕರಾಕ್ಷ ಸಖಾ ॥

(೧) ಇದು ಸಂಸ್ಕೃತವಲ್ಲೆಂದು ನಿಂದಿಸುವುದೆಂದರೆ ಕುರುಡನು ಕನ್ನಡಿಯನ್ನು ತಿರಸ್ಕರಿಸಿದಂತೆಯೇ. ಮಾಧವನ ಗುಣವರ್ಣನ ಪರವಾದ ಗ್ರಂಥವು ಸಂಸ್ಕೃತದಲ್ಲಿದ್ದರೇನು? ಪ್ರಾಕೃತದಲ್ಲಿದ್ದರೇನು? ಸಜ್ಜನರು ಪ್ರೀತಿಸರೇ?

(೨) ಸೂರ್ಯನನ್ನು ಕಂಡು ಸಂತಸದಿಂದ ನಮಿಸದೆ ತಸ್ಕರನು ನಿಂದಿಸಲು ಸೂರ್ಯನಿಗೆ ಕುಂದುಂಟೆ? ಸಂಸ್ಕೃತವು ಇದಲ್ಲೆಂಬ ಕುಹಕ ನಿಂದೆಯಿಂದ ಏನಾಗುವುದು? ಭಕ್ತಿಯಿಂದ ಆಲಿಸಿದರೆ ಪರಮಾತ್ಮನು ಒಲಿಯನೆ? ಎಂಬುದಾಗಿ ಅವರ ಅಭಿಪ್ರಾಯವು.

ಶ್ರೀ ಜಗನ್ನಾಥ ದಾಸರಂತೆಯೇ ಶ್ರೀದ ವಿಟ್ಠಲಾಂಕಿತ ಕರ್ಜಗಿ ದಾಸಪ್ಪ ದಾಸರಾಯರಿಂದ ವಿರಚಿತವಾದ ಫಲ ಸ್ತುತಿ ಸಂಧಿಯಲ್ಲಿ—

ಪ್ರಾಕೃತೋಕ್ತಿಗಳೆಂದು ಬರಿಲೇ।
ಹಾ ಕೃತಘ್ನರು ಜರೆವರಲ್ಲದೆ।
ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು ॥
ಶ್ರೀಕೃತಿಯ ಪತಿಯಮಲ ಗುಣಗಳು।
ಈ ಕೃತಿಯೊಳುಂಟಾದ ಬಳಿಕ।
ಪ್ರಾಕೃತವೆ ಸಂಸ್ಕೃತದ ನಡಗರವೇನು ಸುಜನರಿಗೆ ॥

ಅಯ್ಯೋ! ಕೃತಘ್ನರು ಪ್ರಾಕೃತವೆಂದು ಜರೆಯುವುದರಲ್ಲಿ ಏನುಂಟು? ಸುಜನರು ಸ್ವೀಕರಿಸದೆ ಬಿಡುವರೆ? ಶ್ರೀಪತಿಯ ಅಮಲ ಗುಣಗಳು ಈ ಕೃತಿಯೊಳು ಉಂಟಾದ ಬಳಿಕ ಅದು ಪ್ರಾಕೃತವೇ? ಅದರ ಮುಂದೆ ಸಂಸ್ಕೃತದ-ಪಾಡೇನು?

ಪರಭಾಷೆಗಳ ಮೋಹಕ್ಕೆ ಸಿಕ್ಕಿ ಕನ್ನಡದ ಮರ್ಮವನ್ನರಿಯದೆ ಕನ್ನಡ ಸಾಹಿತ್ಯ ಜ್ಞಾನವಿಲ್ಲದೆ ಮಾತೃಭಾಷೆಯಾದ ಕನ್ನಡವನ್ನು ತಿರಸ್ಕರಿಸುವವರ ಸಲುವಾಗಿಯೇ ಇವರು ಕೃತಘ್ನ ಪದವನ್ನು ಉಪಯೋಗಿಸಿದಂತೆ ತೋರುತ್ತದೆ.

ಬಹಳವೇಕೆ? ಪರ ಭಾಷೆಗಳ ಆಘಾತವಾಗುತ್ತಿರುವ ಈಗಿನಂಥ ಪ್ರತಿಕೂಲ ಪರಿಸ್ಥಿತಿಯಲ್ಲಿ ಕೂಡ ಮುದ್ದಣನು ಕನ್ನಡದ ಅಭಿಮಾನವನ್ನು ಹಿಡಿದು ಕನ್ನಡ ಗದ್ಯ ಗ್ರಂಥಗಳಲ್ಲಿ ಉಚ್ಚತಮವೆನಿಸುವ ತನ್ನ ರಾಮಾಶ್ವಮೇಧದಲ್ಲಿ—

"ಸ್ವಸ್ತಿ ಸಮಸ್ತ ಸುರಾಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರ ಮಕುಟ ತಟ ಘಟಿತ"ವೆಂದು ಪೂರ್ವ ಕವಿಗಳ ಶೈಲಿಯಂತೆ ಕಥೆ ಹೇಳಲಾರಂಭಿಸಿದ್ದನ್ನು ನಿಲ್ಲಿಸಿ ಹೆಂಡಿತಿಯಾದ ಮನೋರಮೆಯ ಮುಖದಿಂದ, "ಸೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು" ಎಂದು ಉದ್ಗಾರ ತೆಗೆದುದನ್ನು ನೋಡಿದರೆ, ಕನ್ನಡದಲ್ಲಿಯ ಈ ಪ್ರಯೋಗವು ಅವನಿಗೆ ಸಮ್ಮತವಿದ್ದಂತೆ ತೋರುವುದಿಲ್ಲ. ಇಷ್ಟರಿಂದಲೇ ಅವನು ಸಂಸ್ಕೃತಕ್ಕೆ ವಿರೋಧಿಯಾಗಿದ್ದನೆಂದು ಯಾರೂ ತಿಳಿಯಕೂಡದು. ಅವನ ಹೆಂಡಿತಿಯು, "ಕನ್ನಡಂ ಕತ್ತುರಿಯಲ್ತೇ!" ಎಂದು ಹೇಳಲಾಗಿ ಮುದ್ದಣನು ಹೆಂಡಿತಿಯ ಮಾತಿಗೆ ಸಮ್ಮತಿಸಿದರೂ, ಪ್ರಸಂಗಾನುರೂಪವಾಗಿ ಕನ್ನಡದಲ್ಲಿ ಸಂಸ್ಕೃತವು ಕೂಡಿದರೆ ಮಾತ್ರ "ಕರ್ಮಣಿ ಸರದೊಳ್ ಚೆಂಬವಳಮುಂ ಕೋದಂತಾಗಿ" ಕಾವ್ಯಕ್ಕೆ ಹೆಚ್ಚು ಶೋಭೆಯನ್ನುಂಟುಮಾಡುವುದೆಂಬುದಾಗಿ ಹೇಳಿರುವುದನ್ನು ನೋಡಿದರೆ, ಸಂಸ್ಕೃತ ಶಬ್ದಗಳ ಪ್ರಯೋಗಗಳು ಕೆಲವೊಂದು ಮೆಟ್ಟಿನವರೆಗೆ ಮಾತ್ರ ಕನ್ನಡದಲ್ಲಿ ಇರಬಹುದೆಂಬುದಾಗಿ ಇವನ ಅಭಿಪ್ರಾಯವಿದ್ದಂತಾಯಿತು.

ಶಬ್ದಮಣಿದರ್ಪಣಕಾರನಾದ ಕೇಶಿರಾಜನು ತನ್ನ ಗ್ರಂಥದಲ್ಲಿ—

**ಗಮಕ ಸಮಾಸದಿಂ ರಳ ಕುಳ ಕ್ಷಳದಿಂ ಶ್ರುತಿ ಸಹ್ಯ ಸಂಧಿಯಿಂ |**
**ಸಮುಚಿತಮಾಗಿ ಬರ್ಪ ಸತಿ ಸಪ್ತಮಿಯಿಂ ಸಮ ಸಂಸ್ಕೃತೋಕ್ತಿಯಿಂ ||**
**ವಮುಹಪಭೇದದಿಂ ವಿರಹಿತಾವ್ಯಯ ಸಂಸ್ಕೃತ ಲಿಂಗದಿಂ ಪದೋ |**
**ತ್ತಮ ಶಿಥಿಲತ್ವದಿಂ ಯತಿ ವಿಲಂಘನದಿಂದರಿದಲ್ತೆ ಕನ್ನಡಂ ||**

ಉಳಿದ ಯಾವ ಭಾಷೆಗೂ ಇಲ್ಲದ ಈ ಆರು ಭೇದಗಳನ್ನು ನೋಡಿ ಹಿರಿಹಿರಿ ಹಿಗ್ಗಿ ಕವಿಯು ಕನ್ನಡವನ್ನು ಈ ಪ್ರಕಾರವಾಗಿ ಗೌರವಿಸಿದ್ದಾನೆ.

ಇನ್ನು ಹಲವರು ಕನ್ನಡದ ಸ್ವರೂಪವನ್ನು ವಿಚಿತ್ರವಾದ ಶೈಲಿಯಿಂದ ಈ ಪ್ರಕಾರವಾಗಿ ಹೇಳಿರುವರು :—

(೧) ಎತ್ತಂ ಹೇರೆಂಬರ್ ಹೇ ।
ರೆತ್ತೆಂಬರ್ ಕಲ್ಲು ಮಣ್ಣೊಳಿಕ್ಕಿದ ಕೋಟೆಯ ॥
ಮುತ್ತೆಂಬರ್ ಮರನೊಂದಂ ।
ಹತ್ತೆಂಬರ್ ನೋಡ ಕನ್ನಡದ ವಿಸ್ಮಯಮಂ ॥

(೨) ಹುರಿಯೋಡ ಸಿರಿವಂತಿಕೆಯೆಂದೆಂಬುದು ।
ನರನ ಪಾರುವಸೆಂದೆಂಬುದು ॥
ಮರಗೆತ್ತುವಸನೋಜನೆಂದೆಂಬುದೇನ ।
ಚ್ಚರಿ ರಂಗ ಕನ್ನಡದೊಳ್ಪು ॥

(೩) ಸರಸನನರಸನೆಂಬುದು ಪೂರ್ಣ ಗೃಹವನು ।
ಅರಮನೆಯೆಂದುಸಿರುವುದು ॥
ನರಪ ಕುಮಾರನನರಮಗನೆಂಬುದೇ ।
ನೊರೆ ರಂಗ ಕನ್ನಡದೊಳ್ಪು ॥

ಇನ್ನು, ಕನ್ನಡ ಜಾಣನೆಂಬ ಕವಿಯು—

ಪೊಸ ಕಾಲದ ನವಿಲಾಟಂ
ಸಿಸುಗಳ ಮುದ್ದಾಟ ಹರಿಣ ಹರಿಣಿಯ ನೋಟಂ ।
ರಸ ಕವಿಗಳ ಕರ್ಣಾಟಂ ।
ಶಸಿಮುಖಿಯೊಡಗೂಟದಂತೆ ಕನ್ನಡ ಜಾಣಾ ॥

ರಸ ಕವಿಗಳ ಕರ್ಣಾಟ(ಕನ್ನಡ)ವು ಮಳೆಗಾಲದ ನವಿಲಾಟದಂತೆ, ಶಿಶುಗಳ ಮುದ್ದಾಟದಂತೆ, ಗಂಡು ಹೆಣ್ಣು ಚಿಗರೆಗಳ ನೋಟದಂತೆ, ಶಶಿ ಮುಖಿಯರ ಕೂಟ ದಂತಿರುತ್ತದೆಂದು ಒಳ್ಳೆಯ ಹೃದಯಂಗಮ ಶೈಲಿಯಿಂದ ಬಣ್ಣಿಸಿರುವನು.

ಭಟ್ಟಾಕಲಂಕನು ದೇವ ಭಾಷೆಯಲ್ಲಿ ಕನ್ನಡದ ವ್ಯಾಕರಣವನ್ನು ಬರೆದು ಕನ್ನಡ ಭಾಷೆಯು ಶಾಸ್ತ್ರವನ್ನು ಚರ್ಚಿಸಲಿಕ್ಕೆ ಯೋಗ್ಯವಾದ ಭಾಷೆಯೆಂದು ಸಿದ್ಧಮಾಡಿರುವುದನ್ನೂ, ನಯಸೇನ ನಾಗವರ್ಮರು ಸಂಸ್ಕೃತಕ್ಕಿಂತ ಹೆಚ್ಚಾಗಿ ಕನ್ನಡದ ಅಭಿಮಾನ ಹಿಡಿದಿರುವುದನ್ನೂ, ನಯಸೇನನಿಗೆ ಕನ್ನಡದಲ್ಲಿ ಸಂಸ್ಕೃತ ವನ್ನು ಕೂಡಿಸುವುದು ತುಪ್ಪದಲ್ಲಿ ಎಣ್ಣೆ ಬೆರೆತಂತೆ ಕಂಡಿರುವುದನ್ನೂ, ನಾಗ ವರ್ಮನಿಗೆ ಕನ್ನಡ ಪದಗಳು ಮುತ್ತಿನಂತೆ ತೋರಿರುವುದನ್ನೂ ವಿಚಾರಿಸಿದರೆ, ಸಂಸ್ಕೃತದ ಮೇಲಿನ ದ್ವೇಷದಿಂದಲ್ಲ. ಕಾಲಮಾನದಿಂದ ಮಾತೃಭಾಷೆಯಾದ ಕನ್ನಡದ ಮೇಲುಂಟಾದ ಜನರ ಅನಾಸ್ಥೆಯನ್ನು ಹೋಗಲಾಡಿಸುವುದಕ್ಕಾಗಿ ಈ ಮೇಲಿನ ಉದ್ಗಾರಗಳೆಲ್ಲ, ಕನ್ನಡವು ಆಪತ್ಕಾಲದಲ್ಲಿದ್ದಾಗ ಹೊರಟಿರಬಹುದಾಗಿ ತೋರುತ್ತದೆ.

ಕನ್ನಡ ಸಾಹಿತ್ಯ ಭಕ್ತರು ವಿರಳವಾಗಿರುವ ಈಗಿನ ಕಾಲದಲ್ಲಿ ಎಷ್ಟೋ ಇಂಗ್ಲೀಷು ಕಲಿತ ಪದವೀ ಧರರು ಕನ್ನಡದ ಅಭ್ಯಾಸವನ್ನು ಆಳವಾಗಿ ಮಾಡ

ದಿದ್ದರೂ ಕನ್ನಡ ಭಾಷೆಯ ಅಭಿಮಾನವು ಅವರಿಗೆ ಬೇಕು. ಎಷ್ಟರ ಮಟ್ಟಿಗೆ? ಅಷ್ಟರ ಮಟ್ಟಿಗೆ, ಸ್ವಪ್ರತಿಷ್ಠೆಗಾಗಿ; ಭಾಷಾನುಸಾರ ಪ್ರಾಂತ ರಚನೆ ಮೊದಲಾದ ತತ್ತ್ವಗಳಿಗೆ ವ್ಯಾವಹಾರಿಕ ಸಮ್ಮತಿಯನ್ನು ಕೊಡುವುದಕ್ಕಾಗಿ. ಇಂಥವರು ಸಭೆಯಲ್ಲಿ ಮಾತನಾಡಹತ್ತಿದರೆ ಕನ್ನಡ ವಾಗ್ದೇವಿಯ ಮಾನಸ ಪುತ್ರರೋ ಏನೋ? ಎಂಬಂತೆ ತೋರುವುದು. ಇನ್ನು ಕೆಲವರಂತೂ ಪರ ಭಾಷೆಯ ಆಡಂಬರಕ್ಕೆ ಮರುಳಾಗಿ ತಾವು ಕನ್ನಡಿಗರೆಂದು ಹೇಳಲಿಕ್ಕೆ ಸಹ ಹೆದರುವಷ್ಟು ದುರ್ಬಲರಾಗಿರುತ್ತಾರೆ. ಇವೆಲ್ಲ ಕಾರಣಗಳಿಂದಲೇ ಕನ್ನಡಕ್ಕೆ ಈ ಶೋಚನೀಯ ಸ್ಥಿತಿಯು ಬಂದುದು.

ಉಷ್ಣತೆಯಿಂದ ಹವೆಯು ತೆಳ್ಳಗಾಗಲು, ಬಿರುಗಾಳಿ ಬಂದು ಬೀಸುವಂತೆ ಎಲ್ಲ ರೀತಿಯಿಂದಲೂ ದುರ್ಬಲರಾದ ಕನ್ನಡಿಗರ ಮೇಲೆ ಪರಪ್ರಾಂತೀಯರು ಏರಿ ಬರುವುದು ಸ್ವಾಭಾವಿಕವು. ಹೀಗಾದುದೊಂದು ಕನ್ನಡಿಗರ ಸುದೈವವೆಂದೇ ತಿಳಿಯಬೇಕಾಗಿದೆ. ನಮ್ಮ ದುರ್ಬಲತೆಯ ಲಾಭವನ್ನು ಹೊಂದಬೇಕೆಂದು ಯತ್ನಿಸಿದ ಮರಾಠಿಗರ ಅತಿರೇಕದಿಂದಲ್ಲವೆ ಕನ್ನಡಿಗರು ಕಣ್ಣು ತೆರೆದುದು. ಕರ್ಣಾಟಕವು ಜಾಗೃತವಾಗುತ್ತಿರುವ ಈ ಕಾಲದಲ್ಲಿ ಸುಮ್ಮನಿರದೆ ಕೈಯಲ್ಲಾದ ಮಟ್ಟಿಗೆ ಸಹಾಯ ಮಾಡುವುದು ಪ್ರತಿಯೊಬ್ಬ ಕನ್ನಡ ಮಾತೆಯ ಪುತ್ರನ ಕರ್ತವ್ಯವಾಗಿದೆ.

ಆದರೆ, ಕನ್ನಡಿಗರೇ ಕನ್ನಡವನ್ನು ಮರೆತು ಪರ ವಾಙ್ಮೋಹದಲ್ಲಿ ಬಿದ್ದು ಕನ್ನಡವನ್ನು ತಿರಸ್ಕರಿಸ ಹೊರಟಾಗ ಪರರಿಗೆ ನಾವು ಉಪದೇಶ ಮಾಡುವ ಉಸಾಬರಿಗೆ ಹೋಗದೆ ಕನ್ನಡ ಭಕ್ತರು ಅಲ್ಪ ಸಂಖ್ಯಾಕರೇ ಇದ್ದರೂ ಅವರನ್ನಷ್ಟೇ ಒಟ್ಟುಗೂಡಿಸಿ ಕನ್ನಡ ಧರ್ಮವನ್ನು ಬಳೆಯಿಸಬೇಕು. ಕನ್ನಡ ಭಕ್ತಿಯನ್ನು ಮೊದಲು ಕನ್ನಡಿಗರಲ್ಲಿ ಜಾಗೃತವಾಗಿ ಮಾಡದೆ ಪರರಿಗೆ ಉಪದೇಶ ಮಾಡ ಹೋಗುವುದು ಫಲಕಾರಿಯಾಗಲಿಕ್ಕಿಲ್ಲ. ಜಗನ್ನಾಥದಾಸರು ಹೇಳಿರುವಂತೆ, ಸಂಸ್ಕೃತವಿದಲ್ಲೆಂದು ಕುಹಕ ತಿರಸ್ಕರಿಸಲೇನಹುದು? ಅಂಧರು ಭಾಸ್ಕರನನ್ನು ತಿರಸ್ಕರಿಸಿದರೆ ಏನಾಗುವುದು? ಆಗಿನ ಕಾಲದಲ್ಲಿಯೇ ಕನ್ನಡದಲ್ಲಿ ಇಷ್ಟು ಅಭಿಮಾನವನ್ನು ಹಿಡಿದವರು ಹುಟ್ಟಿರಲು, ಈಗ ಪರರು ತಿರಸ್ಕರಿಸುವರೆಂದೂ, ನಮ್ಮವರೇ ಅನಾದರಿಸುವರೆಂದೂ ಹೆದರುವ ಕಾರಣವಿಲ್ಲ. ಮ|| ನರಸಿಂಹಾಚಾರ್ಯರು ಕನ್ನಡದ ಪ್ರಾಚೀನ ವಾಙ್ಮಯದಲ್ಲಿ ತಮ್ಮ ಅದ್ಭುತ ಪರಿಶ್ರಮದ ಶೋಧಗಳಿಂದ ಪ್ರಕಾಶವನ್ನು ಬೀರಲು, ಕನ್ನಡದ ವೈಭವದ ಕಡೆಗೆ ಹಣಿಕಿಕ್ಕದೆ ಆ ಭಾಷೆಯ ಅಜ್ಞತೆಯಿಂದ ಅಂಧರಾಗಿ ಕನ್ನಡವನ್ನು ತಿರಸ್ಕರಿಸಿದರೆ ಏನಾಗುವುದು? ನಮ್ಮ ಕನ್ನಡ ಭಕ್ತರು ತಮ್ಮ ಅತುಲ ಭಕ್ತಿಗೆ ನ್ಯೂನತೆ ಬಾರದಂತೆ ಕೆಲಸ ಮಾಡಿದರೆ ತೀರಿತು; ನಿಶ್ಚಯವಾಗಿ ಕಾರ್ಯಸಿದ್ಧಿಯಾಗುವುದು.

**ರಂಗೋ ಗೋವಿಂದ ನಾಯಿಕ ಹಬ್ಬು.**

---

## *ಕರ್ಣಾಟಕದ ಮಹತ್ತ್ವವು ಏಕೆ?

ಕರ್ಣಾಟಕ ಭಾಷಾ ಕೋವಿದರಾದ ಮಹಾಶಯರೇ! ಈ ಹೊತ್ತಿನ ಈ ಅಪೂರ್ವ ಸಾಹಿತ್ಯ ಸಮ್ಮೇಲನವು ಯಾವ ಕರ್ಣಾಟಕದ ಮುಖ್ಯ ಪಟ್ಟಣಗಳಲ್ಲೊಂದಾದ ಈ ಬೆಳಗಾವಿಯಲ್ಲಿ ನೆರೆದಿರುವುದೋ, ಆ ಕರ್ಣಾಟಕ ದೇಶದ ಮಹತ್ತ್ವವನ್ನು ಕುರಿತು ಒಂದೆರಡು ಮಾತುಗಳನ್ನು ತಮ್ಮೆದುರಿಗೆ ಹೇಳ ಬಯಸುತ್ತೇನೆ. ಇದೇ ಕನ್ನಡ ದೇಶದ ಮಹತ್ತ್ವವನ್ನು ಕುರಿತು ಕನ್ನಡದ ಕಡು ಜಾಣ ಕಬ್ಬಿಗನಾದ **ಆಂಡಯ್ಯ**ನು ತನ್ನ ಕಬ್ಬಿಗರ ಕಾವದಲ್ಲಿ—

ಮ ॥ ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾರನಾ।
ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ ಬಲ್ಲರೆಂಬೊಂದು ಬ ॥
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು ಮೆ।
ಲ್ಲಿಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ ॥

ಎಂದು ಹೇಳಿದಂತೆ ಅದರ ವರ್ಣನೆಯನ್ನು ಮಾಡಲು ಎರಡು ಸಾವಿರ ನಾಲಗೆಯುಳ್ಳ ಮಹಾ ಜ್ಞಾನಿಯಾದ ಆದಿಶೇಷನಿಗೆ ಅಸಾಧ್ಯವಾಗಿರುವಾಗ ಒಂದೇ ಒಂದು ನಾಲಗೆಯುಳ್ಳ ಪಾಮರನಾದ ನನಗಂತೂ ಮತ್ತಷ್ಟು ಅಸಾಧ್ಯವೆಂಬುದು ಸಹಜಸಿದ್ಧವಾದುದು. ಆದರೂ, ಪೂರ್ವದ ಮಹಾ ಕವಿಗಳ ವಾಣಿಯೆಂಬ ಭದ್ರ ನೌಕೆಯಿಂದಲೇ ಅಂತವೂ ನೆಲೆಯೂ ಇಲ್ಲದ ಈ ವಿಷಯ ಸಾಗರವನ್ನು ದಾಟಿ ಆಚೆಯ ದಂಡೆಗೆ ಮುಟ್ಟೇ ಮುಟ್ಟುವೆನೆಂಬ ಬಲವಾದ ಆತ್ಮ ವಿಶ್ವಾಸದಿಂದಲೇ ಈ ಸಾಹಸದ ಕಾರ್ಯವನ್ನು ಕೈಕೊಂಡಿದ್ದೇನೆ.

ಈ ದೇಶಕ್ಕೆ **ಕರಿನಾಡು** ಎಂದರೆ, ಕಪ್ಪು ದೇಶವೆಂಬ ಅರ್ಥದಿಂದಲೂ, **ಕರುನಾಡು** ಎಂದರೆ, ಎತ್ತರ ದೇಶವೆಂಬ ಅರ್ಥದಿಂದಲೂ, **ಕರ್ಣ+ಅಟನ** ಎಂದರೆ, ಎಲ್ಲರ ಕಿವಿಗಳಲ್ಲಿ ಸುಳಿದಾಡುವ, ಅರ್ಥಾತ್ ಪ್ರಸಿದ್ಧ ದೇಶವೆಂಬ ಅರ್ಥದಿಂದಲೂ, ಸಂಸ್ಕೃತಜ್ಞರು (ಇದಕ್ಕೆ) **ಕರ್ಣಾಟ** ಅಥವಾ, **ಕರ್ಣಾಟಕ** ಎಂಬ ನಾಮಕರಣ ಮಾಡಿದಂತೆ ಹಿಂದಿನ ಆಧಾರಗಳಿಂದ ತಿಳಿಯುತ್ತದೆ. ಕ್ರಿಸ್ತ ಶಕದ ಪೂರ್ವದಲ್ಲಿ ಮೂರನೆಯ ಶತಮಾನದಲ್ಲಿದ್ದ ಅಶೋಕ ಮಹಾರಾಜನು, ಕರ್ಣಾಟಕ ದೇಶದ ಕದಂಬರ ರಾಜಧಾನಿಯಾಗಿದ್ದ **ಬನವಸೆ**ಗೆ ಒಬ್ಬ ಬೌದ್ಧ ಮತೋಪದೇಶಕನನ್ನು ಕಳುಹಿಸಿದಂತೆ **ಮಹಾವಂಶ**ವೆಂಬ ಬೌದ್ಧ ಗ್ರಂಥದಲ್ಲಿ ಬರೆದಿದೆ. ಇದರಿಂದ, ಆ ಕಾಲದಿಂದಲೂ ಇದಕ್ಕೆ ಕರ್ಣಾಟಕವೆಂಬ ಹೆಸರು ಇದ್ದುದರಲ್ಲಿ ಯಾವ ಸಂಶಯವೂ ಇಲ್ಲ. ಇಷ್ಟೇ ಅಲ್ಲ, ಅದಕ್ಕೂ ಪೂರ್ವದಿಂದಲೇ ಈ ಹೆಸರು ರೂಢಿಯಲ್ಲಿರಬೇಕೆಂಬುದು ಸಹಜವಾಗಿ ಗೊತ್ತಾಗುವ ಸಂಗತಿಯಾಗಿದೆ.

* ಬೆಳಗಾವಿನಲ್ಲಿ ನಡೆದ ೧೧ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದುಬಂದುದು.

ಕರ್ಣಾಟಕ ದೇಶವು ದಕ್ಷಿಣ ಹಿಂದೂಸ್ಥಾನದ ಒಂದು ಭಾಗವಾಗಿದೆ. ಒಂಬತ್ತನೆಯ ಶತಮಾನದ **ನೃಪತುಂಗ**ನ ಕಾಲದಲ್ಲಿ ಇದು ಕಾವೇರೀ ಗೋದಾವರೀ ನದಿಗಳ ನಡುವಿನ ವಿಶಾಲವಾದ ಪ್ರದೇಶವನ್ನು ವ್ಯಾಪಿಸಿದ್ದರೂ, ಬಿದ್ದ ಮುದಿ ಎತ್ತನ್ನು ಹದ್ದುಗಳು ಹರಿದು ತಿನ್ನುವಂತೆ, ಇದರ ನಾಲ್ಕೂ ದಿಕ್ಕುಗಳಿಂದ ತುಳುವರೂ ಮಲೆಯಾಳಿಗಳೂ ಆಂಧ್ರರೂ ಮರಾಠಿಗರೂ ತಮ್ಮ ಕೈಗೆ ಸಿಕ್ಕಿದಷ್ಟು ಪ್ರದೇಶವನ್ನು ಹರಿದು ನುಂಗುತ್ತ ಬಂದುದರಿಂದ ಈಗ ಇದರ ಆಕಾರವು ಸಂಕುಚಿತವಾಗಿದೆ. ಕರ್ಣಾಟಕದ ಬಹುಭಾಗವನ್ನು ತಿಂದ ಇವರುಗಳಿಗೆ ಇದನ್ನು ಸಂಪೂರ್ಣ ತಿಂದು ನೀರು ಕುಡಿದ ಹೊರತು ಸಮಾಧಾನವಾಗುವಂತೆ ಕಂಡು ಬರುವುದಿಲ್ಲ. ಆದಕಾರಣ, ಈ ಸಮಯದಲ್ಲಿ ಕನ್ನಡಿಗರಾದ ನಾವು ದೇಶರಕ್ಷಣೆಗಾಗಿ ಟೊಂಕ ಕಟ್ಟಿ, ಎದುರಾಳಿಗಳಿಂದ ನಮ್ಮ ಸೀಮೆಯ ಸಂರಕ್ಷಣೆಯನ್ನು ಮಾಡಿಕೊಳ್ಳುವುದು ಎಷ್ಟು ಅವಶ್ಯವಿರುತ್ತದೆಂಬುದನ್ನು ಮರೆಯಲಾಗದು.

ಈಗುಳಿದ ಕರ್ಣಾಟಕದ ಉತ್ತರಕ್ಕೆ ಕಲಬುರ್ಗೆ, ಬೀದರ, ಕಲ್ಯಾಣಗಳೂ, ಪಶ್ಚಿಮಕ್ಕೆ ಮರಾಠೀ ದೇಶ, ಅರಬೀ ಸಮುದ್ರಗಳೂ, ದಕ್ಷಿಣಕ್ಕೆ ನೀಲಗಿರಿ, ಕೋಯಿಮುತ್ತೂರುಗಳೂ, ಪೂರ್ವಕ್ಕೆ ಅನಂತಪುರ, ಬಳ್ಳಾರಿ, ಆದವಾನಿಗಳೂ ಉಂಟು. ಇದರ ಜನಸಂಖ್ಯೆಯು ಒಂದು ಕೋಟಿ (೧೯೦೧) ಇದ್ದು, ೨೨ ಭಾಗಗಳಾಗಿ ವಿಭಾಗಿಸಲ್ಪಟ್ಟಿರುವುದು.

ಕರ್ಣಾಟಕವು ತಮಿಳು, ತೆಲುಗು, ತುಳು, ಮಲೆಯಾಳ ಮೊದಲಾದ ಪಂಚ ದ್ರಾವಿಡ ದೇಶಗಳಲ್ಲಿ ಪ್ರಾಮುಖ್ಯವಾದುದೊಂದಾಗಿದೆ. ಆರ್ಯರು ತಮ್ಮ ಬುದ್ಧಿ ಪರಾಕ್ರಮಗಳಿಂದ ಭರತಖಂಡದ ಇತರ ಅನಾರ್ಯರನ್ನು ಸುಲಭವಾಗಿ ಜಯಿಸಿದುದು ನಿಜವಿದ್ದಷ್ಟೇ, ನಾಗರಿಕತೆಯಲ್ಲಿ ತಮಗಿಂತ ಮಿಗಿಲಾದ ದ್ರಾವಿಡರಿಗೆ ಸೋಲದಿದ್ದರೂ, ಅವರನ್ನು ಗೆಲ್ಲಲಿಲ್ಲೆಂಬುದು ಸತ್ಯವಾಗಿದೆ. ಇದರಿಂದ, ಆರ್ಯರ ನಾಗರಿಕತೆಗಿಂತ ದ್ರಾವಿಡರ ನಾಗರಿಕತೆಯು ಮೊದಲಿನದಾಗಿಯೂ ಭಿನ್ನ ಪ್ರಕಾರವಾದುದಾಗಿಯೂ ಇದ್ದಿತೆಂದು ಕಾಣುತ್ತದೆ. ಆದಕಾರಣ, ಆ ಪಂಚ ದ್ರಾವಿಡ ದೇಶಗಳಲ್ಲೊಂದಾದ ಈ ನಮ್ಮ **ಕರ್ಣಾಟಕದ ನಾಗರಿಕತೆಯು** ಆರ್ಯ ನಾಗರಿಕತೆಗಿಂತ ಬೇರೆ ಬಗೆಯಾಗಿದ್ದು ಪುರಾತನವಾಗಿರುತ್ತದೆಂಬ ಮಾತು ಸಹಜ ಸಿದ್ಧವಾಗುತ್ತದೆ. ಈ ಪ್ರಕಾರ ಅನಾದಿ ಕಾಲದಿಂದ ಇತರ ದೇಶಗಳಂತೆ ಆರ್ಯರಂಥ ಸುಧಾರಕರ ದಾಸ್ಯಕ್ಕೊಳಗಾಗದೆ ತನ್ನ ಸ್ವಾತಂತ್ರ್ಯದ ಗೌರವವನ್ನು ಕಾಯ್ದುಕೊಂಡ ಈ ನಮ್ಮ ಕರ್ಣಾಟಕದ ಬಗ್ಗೆ ಉಂಟಾದ ಅಭಿಮಾನದ ಆವೇಶವು ಪ್ರತಿಯೊಬ್ಬ ಕನ್ನಡಿಗನನ್ನೂ ಸೆಳೆದು ನಿಲ್ಲಿಸುವುದರಲ್ಲಿ ಸಂಶಯವಿಲ್ಲ.

ಭೋ! ಕರಿನಾಡಿನ ಕಟ್ಟಭಿಮಾನಿಗಳೇ!! ಈ ಮೊದಲು ಹೇಳಿದಂತೆ ಕೇವಲ ವೇದ ಕಾಲದಲ್ಲಷ್ಟೇ ಕರ್ಣಾಟಕದ ಬಗ್ಗೆ ಅಭಿಮಾನಪಡುವ ಸಂಗತಿಗಳು ವರ್ತಿಸಿದುವೆಂದು ತಿಳಿಯಬೇಡಿರಿ. ಇದರ ಮುಂದಿನ ಕಾಲದಲ್ಲಿ, ಅದೇಕೆ? ಈ ಹೊತ್ತಿನ ವರೆಗೆ ಸಹ, ಈ ಕರ್ಣಾಟಕದಿಂದಾದಷ್ಟು ಮಹಾ ಕಾರ್ಯಗಳು ಭರತ

ಖಂಡದ ಇನ್ನಾವ ದೇಶಗಳಿಂದಲೂ ಆಗಿರುವುದಿಲ್ಲೆಂದು ಹೇಳಿದರೆ ಆನಂದ ವಾಯು ವಿನಿಂದ ಏಕ ಕಾಲಕ್ಕೆ ತಮ್ಮೆಲ್ಲರ ಮೆಯ್ ಝುಮ್ಮೆನ್ನದಿರಲಾರದು. ಇಂಥ ಆನಂದ ವಾಯುವಿನಿಂದ ಪ್ರಫುಲ್ಲಿತವಾದ ಆತ್ಮ ವೃಕ್ಷವು ಮತ್ತಿಷ್ಟು ಕಳೆ ಏರಿ ಫಲಿಸುವಂತೆ ಇನ್ನುಳಿದ ಕೆಲವು ಮಹತ್ತ್ವದ ಸಂಗತಿಗಳನ್ನು ಇಲ್ಲಿ ಹೇಳ ಬಯಸುತ್ತೇನೆ.

ಪ್ರಿಯ ಸಹೋದರರೇ! ಮಾಹಿಷ್ಮತಿಯ ಅರಸನಾದ ಕಾರ್ತವೀರ್ಯಾರ್ಜುನನನ್ನೂ, ಲಂಕೆಯ ಅರಸನಾದ ರಾವಣನನ್ನೂ ಹುಲ್ಲಿಗೆ ಸರಿಯಾಗಿ ತಿಳಿದ ವಾನರರ ಅರಸನಾದ **ವಾಲಿಯು** ಕರ್ಣಾಟಕದ ಲಲಾಟ ತಿಲಕದಂತಿರುವ ಕಿಷ್ಕಿಂಧೆಯವನು. ಅಯೋಧ್ಯೆಯಿಂದ ಅನಾಥರಾಗಿ ಬಂದ ರಾಮ ಲಕ್ಷ್ಮಣರಿಗೆ ಆಶ್ರಯಕೊಟ್ಟ **ಸುಗ್ರೀವನು** ಇದೇ ವಾಲಿಯ ತಮ್ಮನು. ರಾಮಾಯಣಕ್ಕೆ ಆಧಾರಸ್ತಂಭದಂತಿರುವ ವೀರ **ಹನುಮಂತನು** ಕನ್ನಡಿಗನು. ಕಾರ್ತವೀರ್ಯಾರ್ಜುನನ ಸಂಹಾರಮಾಡಿದ ಜಮದಗ್ನಿಯ ಮಗನಾದ ಶೂರ **ಪರಶುರಾಮನು** ನಮ್ಮವನು. ಪಾಂಡವರ ಅಜ್ಞಾತ ವಾಸಕ್ಕೆ ಆಶ್ರಯಕೊಟ್ಟ **ವಿರಾಟ ರಾಜನೂ**, ಜಗದೇಕವೀರ ಅರ್ಜುನನಿಗೂ ಬೆದರದ **ಚಂದ್ರಹಾಸನೂ**, ದುರ್ಯೋಧನನ ಸ್ನೇಹಿತನಾದ ಮೈಸೂರರಸು **ಸುಶರ್ಮನೂ** ಶುದ್ಧ ಕನ್ನಡಿಗರು.

ಬೌದ್ಧ ಕಾಲದಲ್ಲಿ ಕ್ಷಾಮ ಬಾಧೆಗೆ ತುತ್ತಾದ ಮಗಧ ದೇಶದ ಭದ್ರಬಾಹುವಿನ ಬೌದ್ಧ ಸಂಘಕ್ಕೂ, ಮೌರ್ಯ ಅರಸನಾದ ಚಂದ್ರಗುಪ್ತನಿಗೂ ಆಶ್ರಯಕೊಟ್ಟ ಔದಾರ್ಯವುಳ್ಳ ದೇಶವು ಕರ್ಣಾಟಕವು. ರೋಮ, ಚೀನಗಳಂಥ ವಿದೇಶಗಳೊಡನೆ ಜಲ ಮಾರ್ಗದಿಂದ ಭರತಖಂಡದಲ್ಲಿ ಎಲ್ಲಕ್ಕೂ ಮೊದಲು ವ್ಯಾಪಾರ ಮಾಡಿದ ದೇಶವು ಕರ್ಣಾಟಕವು. ಶಕರನ್ನು ಹೊಡೆದುಹಾಕಿದ **ಶಾಲಿವಾಹನ** ನನ್ನೂ, ಕನೋಜದ ಸಾರ್ವಭೌಮ ಹರ್ಷವರ್ಧನನ್ನು ದಿಕ್ಕುಗೆಡಿಸಿ ಓಡಿಸಿದ ಚಾಲುಕ್ಯರ **ಸತ್ಯಾಶ್ರಯ**ನನ್ನೂ, ರಣ ಧುರಂಧರನಾದ **ಚಾಲುಕ್ಯ ವಿಕ್ರಮ** ನನ್ನೂ ಹಡೆದ ಪುಣ್ಯ ಭೂಮಿಯು ಕರ್ಣಾಟಕವು.

ಭಾರತ ಭೂಮಿಯ ಧಾರ್ಮಿಕ ಗುರುತ್ವವು ಕರ್ಣಾಟಕಕ್ಕೆ ಸೇರಿದುದಾಗಿದೆ. ಏಕೆಂದರೆ, ಬೌದ್ಧ, ಚಾರ್ವಾಕ ಮೊದಲಾದ ಮತಗಳನ್ನು ರಸಾತಳಕ್ಕೆ ಮೆಟ್ಟಿ ವೈದಿಕ ಮತವನ್ನು ಪುನರುದ್ಧಾರಮಾಡಿದ ಅದ್ವೈತ ಮತ ಸ್ಥಾಪಕರಾದ **ಆದಿ ಶಂಕರಾಚಾರ್ಯರೂ**, ವಿಶಿಷ್ಟಾದ್ವೈತ ಮತ ಸ್ಥಾಪಕರಾದ **ರಾಮಾನುಜಾಚಾರ್ಯರೂ**, ದ್ವೈತ ಮತ ಕರ್ತೃಗಳಾದ **ಮಧ್ವಾಚಾರ್ಯರೂ** ಕನ್ನಡಿಗರು. ಆದರಿಂದ. ಬಹಳ ಹೇಳುವುದೇನು? ಮೇಲೆ ಹೇಳಿದಂತೆ, ಭಾರತ ವರ್ಷದ ಧರ್ಮ ಸೂತ್ರ ಚಾಲಕರು ಕನ್ನಡಿಗರೇ ಎಂದು ಘಂಟಾ ಘೋಷವಾಗಿ ಹೇಳಬಹುದು. ಈ ಮೂವರು ಆಚಾರ್ಯರು ತಮ್ಮ ತಮ್ಮ ಸಂಪ್ರದಾಯಕ್ಕನುಸರಿಸಿ ವೇದ ವೇದಾಂತಗಳಿಗೆ ಭಾಷ್ಯಗಳನ್ನೂ, ಭಗವದ್ಗೀತೆಗೆ ಟೀಕೆಗಳನ್ನೂ ಬರೆದರು. ಅವೇ ಈಗಿನ ಎಲ್ಲ ವಿದ್ವಾಂಸರಿಗೆ ಪ್ರಮಾಣಭೂತವಾಗಿವೆ.

೧೯ನೆಯ ಶತಮಾನದ ವರೆಗೆ ಅಸ್ಪೃಶ್ಯರ ಹೆಜ್ಜೆಯಿಂದಲೂ ಉಗುಳಿನಿಂದಲೂ ನೆಲವು ಅಪವಿತ್ರವಾಗಬಾರದೆಂದು ಅವರ ಟೊಂಕಕ್ಕೆ ಹೆಂಟವನ್ನೂ, ಕೊರಳೊಳಗೆ

ಮಣಿಯನ್ನೂ ಕಟ್ಟುವ ಪದ್ಧತಿ ಇದ್ದಿತೆಂದು ದಂತ ಕಥೆಗಳಿಂದ ತಿಳಿಯುತ್ತಿದ್ದರೂ. ಈಗ ಸುಮಾರು ೭೦೦ ವರ್ಷಗಳ ಹಿಂದೆಯೇ ಅಸ್ಪೃಶ್ಯತೆಯನ್ನು ಹೋಗಲಾಡಿಸಿ ಮಿಶ್ರ ವಿವಾಹ ಮಾಡಿಸಿದ ಮಹಾತ್ಮ **ಬಸವೇಶ್ವರರು** ಕಲ್ಯಾಣದವರು. ಹಿಂದೂ ಜನರು ಗಣಿತಜ್ಞರೆಂಬ ಬಹುಮಾನದ ಬಿರುದಿಗೆ ಸಂಪೂರ್ಣ ಪಾತ್ರರಾದ **ಭಾಸ್ಕರಾಚಾರ್ಯರು** ಕರ್ನಾಟಕದ ಕಲ್ಯಾಣದ ನೆರೆಯಲ್ಲಿರುವ ಬೀಡುಗ್ರಾಮದವರು. ದುರ್ಬೋಧವಾದ ಋಗ್ವೇದಕ್ಕೆ ಭಾಷ್ಯವನ್ನು ಬರೆದು ಇಡೀ ಭೂಮಂಡಲಕ್ಕೆ ಅಪಾರ ಲಾಭಮಾಡಿಕೊಟ್ಟ ಘನ ಪಂಡಿತ **ಸಾಯಣಾಚಾರ್ಯರು** ಕರ್ನಾಟಕದ ಪ್ರಸಿದ್ಧ ರಾಜಧಾನಿಯಾದ ವಿಜಯನಗರದವರು. ಶಿವಾಜಿ ಮಹಾರಾಜರು ಹುಟ್ಟುವುದಕ್ಕಿಂತ ೩೦೦ ವರ್ಷ ಮೊದಲೇ ಮುಸಲ್ಮಾನರನ್ನು ಬಗ್ಗುಬಡಿಯಲು ಮೊದಲು ಟೊಂಕ ಕಟ್ಟಿದ ವಿದ್ಯಾನಗರದ ಅರಸರಾದ **ಹರಿಹರ, ಬುಕ್ಕ** ಬಹಾದ್ದೂರರು ಕನ್ನಡಿಗರೇ.

ಪ್ರಾಚೀನ ಕಾಲದ ಪರಶುರಾಮ, ವಾಲಿ, ಹನುಮ, ಜಾಂಬವ, ಸತ್ಯಾಶ್ರಯ, ವಿಕ್ರಮ—ಇವರಂತೆ ಅರ್ವಾಚೀನ ಕಾಲದಲ್ಲಿ ಈ ಪುಣ್ಯ ಕರ್ನಾಟಕ ಮಾತೆಯ ಪುಣ್ಯ ಗರ್ಭದಿಂದ ಜನಿಸಿದ ವೀರ ಮಣಿಗಳಿಗೆ ಕೊರತೆ ಇಲ್ಲ. ಮುಸಲ್ಮಾನ ಅರಸರನ್ನು ಗೆದ್ದ ವಿಜಯನಗರದ ಕೃಷ್ಣದೇವ ರಾಜನ ಶೌರ್ಯವನ್ನೂ, ಮುಸಲ್ಮಾನರ ಮುಯ್ಯಿಗೆ ಮುಯ್ಯಿ ತೀರಿಸಿದ ರಾಮರಾಜನ ಪರಾಕ್ರಮವನ್ನೂ, ವೀರಾಗ್ರೇಸರ ಶಿವಾಜಿಯನ್ನು ಹೊಡೆದೋಡಿಸಿದ ಮೈಸೂರ ಚಿಕ್ಕದೇವರಾಜನ ಅತುಲ ಭುಜ ಬಲವನ್ನೂ, ಅದೇ ಶಿವಾಜಿಯನ್ನು ಆಳುಮೋರೆಗೆ ತರಿಸಿದ ಬೆಳವಡಿಯ ದೇಶಾಯಣಿ ವೀರಮಲ್ಲಮ್ಮನ ವೀರ ಶ್ರೀಯನ್ನೂ, ಹೈದರನ ಕೂಡ ಕಾದಿದ ಬೀಳಗಿಯ ರಾಣಿ ಚೆನ್ನಮ್ಮಾಜಿಯ ಸಾಹಸವನ್ನೂ, ಸ್ವಾತಂತ್ರ್ಯಕ್ಕಾಗಿ ಜೀವವನ್ನೂ ರಾಜ್ಯವನ್ನೂ ನೀರಿನಂತೆ ಸೂರೆಗೆಯ್ದು ಮೈಸೂರ ಹುಲಿ ಎಂಬ ಅನ್ವರ್ಥಕ ಬಿರುದು ಪಡೆದ ಟೀಪುವಿನ ಕಲಿತನವನ್ನೂ ನೋಡಿದರೆ ಯಾವ ಕರ್ನಾಟಕ ಹೇಡಿಯ ರಕ್ತವು ಅಭಿಮಾನದ ಲಹರಿಯಿಂದ ಸ್ಫುರಣಹೊಂದಲಿಕ್ಕಿಲ್ಲ? ಕಿತ್ತೂರ ಮಲ್ಲಸರ್ಜಾ, ನಿಪ್ಪಾಣಿಕರರ ಪರಾಕ್ರಮವನ್ನೂ, ಧುಂಡಜಿವಾಘ, ಸಂಗೊಳ್ಳಿ ರಾಯಣ್ಣನ ಪ್ರಚಂಡ ಸಾಮರ್ಥ್ಯವನ್ನೂ, ಮುಂಡರಗಿ ಭೀಮರಾಯನ ಭೀಷ್ಮ ವೃತ್ತಿಯನ್ನೂ ಕೇಳಿ ಯಾವ ಕಲ್ಲೆದೆಯ ಕನ್ನಡಿಗನ ಕಣ್ಣುಗಳಿಂದ ಆನಂದ ಬಾಷ್ಪಗಳು ದಳ ದಳನೆ ಉದುರಲಿಕ್ಕಿಲ್ಲ?

ಮಾಂಸಾಹಾರಿಗಳಲ್ಲದ, ಅರ್ಥಾತ್ ಹಿಂಸೆಗೆ ಆಶ್ರಯವಿಲ್ಲದ, ಶುದ್ಧ ಶಾಕಾಹಾರಿಗಳಾದ ಬ್ರಾಹ್ಮಣ, ಲಿಂಗವಂತ, ಜೈನರ ತೌರುಮನೆಯು ಇದಾಗಿದೆ. ಗಂಡನ ಕೂಡ ಸತಿ ಹೋದ ಗುರುತಿಗಾಗಿ ನಿಲ್ಲಿಸಿದ, ಅಡಿಗಡಿಗೆ ಕಾಣುವ ಮಾಸತಿಗಲ್ಲುಗಳ ನಿವಾಸ ಸ್ಥಾನವು ಇದಾಗಿದೆ. ಅರಸರ ಮರಣಕ್ಕಾಗಿ ತಮ್ಮ ಪ್ರಾಣ ಕೊಟ್ಟ ಪವಿತ್ರಾಧಿಕಾರಿಗಳ ಮಾದರಿಯ ದೇಶವು ಇದಾಗಿದೆ. ವಿಜಾತಿಯ ಅರಸನಾಗಿದ್ದರೂ ಉಂಡ ಮನೆಗೆ ಎರಡು ಬಗೆಯದೆ ಏಕ ನಿಷ್ಠೆಯಿಂದ ಸೇವೆಗೆಯ್ದು

ರಾಜನಿಷ್ಠರ ಪವಿತ್ರ ಭೂಮಿಯೂ ಇದಾಗಿದೆ. "ಹರಿವ ಹಾವಿಗಂಜೆ, ಉರಿವ ಅನಲಂಗಂಜೆ, ಪರಧನ ಪರವಧುವಿಗಂಜುವೆ ಕೂಡಲ ಸಂಗಮ ದೇವಾ" ಎಂದು ಉದ್ಗಾರ ತೆಗೆದ ಕಲ್ಯಾಣ ಬಸವೇಶ್ವರರಂಥ ಶುದ್ಧಾಚರಣೆಯ ಮಹಾತ್ಮರ ಬೀಡು ಇದಾಗಿದೆ. ಒಟ್ಟಿನಲ್ಲಿ ನೋಡಿದರೆ ನೈತಿಕಾಚರಣೆಯಲ್ಲಿ ಇದು ಯಾವ ದೇಶಕ್ಕೂ ಹಿಂದಾಗದೆಂಬುದು ಸಹಜವಾಗಿ ಕಾಣದಿರಲಾರದು.

ತಮ್ಮ ಭಕ್ತಿ ಬಲದಿಂದ ದೇವರನ್ನು ಸಹ ಜಗ್ಗಿ ತರುವ ಸಾಮರ್ಥ್ಯವುಳ್ಳ ಪುರಂದರ ದಾಸ, ಕನಕ ದಾಸರಂಥ ದೇವ ಭಕ್ತರೂ, ಅಚಲ ತಪೋಬಲದಿಂದ ಪ್ರಕಾಶಮಾನರಾದ ತೋಂಟದ ಸಿದ್ಧಲಿಂಗ, ನಿಜಗುಣ ಶಿವಯೋಗಿ, ಸರ್ವಜ್ಞ ಮೂರ್ತಿಗಳಂಥ ಯತಿ ವರೇಣ್ಯರೂ, ಕವಿ ಶ್ರೇಷ್ಠ ಕಾಳಿದಾಸನಿಗೆ ಸಮಾನರೂ ಸಂಸ್ಕೃತ ಕರ್ಣಾಟಕ ದ್ವಂದ್ವ ಭಾಷಾ ವಿಶಾರದರೂ ಆದ ಪಂಪ, ರನ್ನ, ಹೊನ್ನ, ಅಭಿನವ ಪಂಪ, ಚಂದ್ರರಾಜ, ಹರೀಶ್ವರ, ಷಡಕ್ಷರ ದೇವ, ರುದ್ರಭಟ್ಟ, ಲಕ್ಷ್ಮೀಶ, ಬಸವಪ್ಪ ಶಾಸ್ತ್ರಿಗಳಂಥ ಕವಿ ಕುಲ ತಿಲಕರೂ, ಕಂತಿ ಹೊನ್ನಮ್ಮ ರಂಥ ಕವಯಿತ್ರಿಯರೂ, ಮಯ ಸಮಾನ ಶಿಲ್ಪಿಯಾದ ಜಕ್ಕಣಾಚಾರ್ಯರೂ, ನೈಸರ್ಗಿಕ ಮುತ್ಸದ್ದಿಗಳಾದ ಪಿಟ್ಟ ಬಿಸ್ಮಾರ್ಕರಿಗೆ ಸಮಾನರಾದ ಖಾಜೀ ಜಿಹಾನ, ಪೂರ್ಣಯ್ಯ, ರಾಯರ ಅಪ್ಪಾಜಿ, ಸರ್ ಎಂ. ವಿಶ್ವೇಶ್ವರಯ್ಯರಂಥ ಮುತ್ಸದ್ದಿಗಳೂ, ತೆನ್ನಾಲ ರಾಮಕೃಷ್ಣನಂಥ ಹಾಸ್ಯಗಾರರೂ, ಕುಮಟಿಗಿಯ ರಾಚಪ್ಪನವರಂಥ ಅಷ್ಟಾವಧಾನಿಗಳೂ ಇದೇ ಕರುನಾಡಿನವರಲ್ಲವೆ?

ಜಗದ್ವಿಖ್ಯಾತವಾದ ಅಜಿಂಟಾ ಕಾರ್ತಿಯ ಗುಡ್ಡದೊಳಗೆ ಕೊರೆದ ಚೈತ್ಯಾಲಯಗಳನ್ನು ರಚಿಸಿ ದಿಗಂತ ಕೀರ್ತಿಪಡೆದ ಶಿಲ್ಪಿಗಳು ಕನ್ನಡಿಗರು. ಭೂಮಿಯ ಮೇಲಿನ ಆರು ಆಶ್ಚರ್ಯದ ವಸ್ತುಗಳಲ್ಲೊಂದಾದ ವಿಜಾಪುರದ ಗೋಳ ಗುಮಟವನ್ನು ರಚಿಸಿದವರು ನಮ್ಮವರು. ಸೂರ್ಯನು ಯಾವ ದಿವಸ ಯಾವ ರಾಶಿಯಲ್ಲಿ ಪ್ರವೇಶಿಸುವನೋ ಅದೇ ದಿವಸ ಅಷ್ಟೇ ವೇಳೆಗೆ ಅದೇ ಕಂಬದಮೇಲೆ ಸೂರ್ಯ ಕಿರಣಗಳು ಬೀಳುವಂತೆ, ಹನ್ನೆರಡು ಕಂಬಗಳುಳ್ಳ ಸೌತೆ ಕಾಯಿ ಆಕಾರದ ಶೃಂಗೇರಿಯ 'ವಿದ್ಯಾ ಶಂಕರ' ಮಂದಿರವನ್ನು ಕ್ರಿ. ಶ. ೧೩೫೮ರಲ್ಲಿ ಕಟ್ಟಿ ಅಪ್ರತಿಮ ಕಲಾ ಕೌಶಲದ ಪರಮಾವಧಿಯನ್ನು ತೋರಿಸಿದ ಶಿಲ್ಪಿಗಳು ಕನ್ನಡಿಗರು. ಈ ಹೊತ್ತಿಗೂ ಕಾರಪಾರದ ಗುಡಿಗಾರರ ಪ್ರಶಂಸನೀಯವಾದ ಕೆತ್ತನೆಯ ಕೆಲಸದಿಂದ ಕರ್ಣಾಟಕ ಪ್ರಾಚೀನ ಶಿಲ್ಪ ಕಲೆಯ ಅವಶೇಷವನ್ನು ಕಾಣಬಹುದಾಗಿದೆ. ಮತ್ತು ಹಳೆಬೀಡಿನ ಹೊಯ್ಸಳೇಶ್ವರ ದೇವಾಲಯವೂ ಬೇಲೂರಿನ ಚೆನ್ನಕೇಶವ ದೇವಾಲಯವೂ ಈ ಮಾತಿಗೆ ಮತ್ತಷ್ಟು ಪುಷ್ಟಿಯನ್ನು ಕೊಡುವುದರಲ್ಲಿ ಸಂಶಯವಿಲ್ಲ.

ಪ್ರಾಕೃತಿಕ ದೃಷ್ಟಿಯಿಂದಲೂ ಕರ್ಣಾಟಕದ ಮಹತ್ತ್ವವು ಕಡಿಮೆಯಾಗಿಲ್ಲ. ಭೂಮಂಡಲದ ಮೊದಲನೆಯದಾದ ಗೇರುಸೊಪ್ಪೆಯ ತಡಸಲು ಇಲ್ಲುಂಟು. ದಕ್ಷಿಣ ಹಿಂದೂಸ್ಥಾನದ ಹಿಮಾಲಯವೆನ್ನಿಸುವ ನೀಲಗಿರಿಯೂ, ಅನೇಕ ಮಹ

ತ್ತ್ವದ ಪದಾರ್ಥಗಳ ಬೀಡಾದ ಸಹ್ಯಾದ್ರಿಯೂ, ಪವಿತ್ರವಾದ ಗೋದಾವರೀ ಕೃಷ್ಣಾ ತುಂಗಭದ್ರಾ ಕಾವೇರೀ ನದಿಗಳೂ, ಉತ್ಕೃಷ್ಟವಾದ ಕರಿಯ ಮಣ್ಣಿನ ಭೂಮಿಯೂ, ಜಲಮಾರ್ಗಕ್ಕೆ ಅನುಕೂಲವಾದ ಕಾರವಾರ, ಕುಮಟಾ, ಭಟಕಳ, ಮಂಗಳೂರು ಮೊದಲಾದ ಬಂದರಗಳೂ ಉಂಟು.

ಮದ್ಬಾಂಧವರೇ! ಧಾರ್ಮಿಕ, ಸಾಮಾಜಿಕ, ರಾಜಕೀಯ ವಿಷಯಗಳಲ್ಲಿಯೂ, ವ್ಯಾಪಾರೋದ್ಯೋಗಗಳಲ್ಲಿಯೂ, ಕೃಷಿ ಕಲಾ ಕೌಶಲಗಳಲ್ಲಿಯೂ, ನೈತಿಕಾಚರಣೆಯಲ್ಲಿಯೂ, ತತ್ತ್ವಜ್ಞಾನದಲ್ಲಿಯೂ, ಸಂಗೀತ ಸಾಹಿತ್ಯದಲ್ಲಿಯೂ, ಕಲಿತನದಲ್ಲಿಯೂ ಕರ್ಣಾಟಕವು ಉಳಿದ ಯಾವ ದೇಶಗಳಿಗಿಂತಲೂ ಹಿಂದಿಲ್ಲೆಂಬುದನ್ನು ಖಂಡಿತವಾಗಿ ಮರೆಯಲಾಗದು.

"ಕರ್ಣಾಟಕದ ಮಹತ್ತ್ವವು ಏಕೆ?" ಎಂಬ ನಮ್ಮ ಶಿರೋ ಲೇಖದೊಳಗಿನ ಪ್ರಶ್ನೆಗೆ ಬಲ್ಲವರು ಇನ್ನೂ ಅನೇಕ ಬಗೆಯಿಂದ ಉತ್ತರ ಹೇಳಲು ಸಮರ್ಥರಾಗಿದ್ದರೂ ನನ್ನ ತಿಳಿವಳಿಕೆಯ ಮೇರೆಗೆ, ಈಗ ವಿವರಿಸಿದ ವಿವರಣೆಯಿಂದಲೇ, ಶ್ರೋತೃವರ್ಗದ ಸಮಾಧಾನವು ಬಹುಶಃ ಆಗಬಹುದೆಂದು ನನ್ನ ಪೂರ್ಣ ನಂಬುಗೆಯುಂಟು.

ಸೃಷ್ಟಿ ನಿಯಮಕ್ಕನುಸರಿಸಿ, ಜಗದೊಳಗಿನ ಪ್ರತಿಯೊಂದು ವಸ್ತುವೂ ದುಷ್ಟ ಗ್ರಹಗಳ ಬಾಯಿಗೆ ತುತ್ತಾಗುವಂತೆ ಒಂದಾನೊಂದು ಕಾಲದಲ್ಲಿ ಏಳ್ಗೆಯ ಅತ್ಯುಚ್ಚ ಶಿಖರವನ್ನೇರಿದ ಕರ್ಣಾಟಕವು ಈಗಿನ ಅವನತಿಯ ಜಾಲದಲ್ಲಿ ಸಿಕ್ಕಿ ನರಳುತ್ತಿರುವುದು ಸೃಷ್ಟಿ ನಿಯಮದ ವಿರುದ್ಧವಲ್ಲ. ಪರಾಕ್ರಮಿಯಾದ ಪುರುಷನು ಕೈಕಾಲು ಕಡಿಸಿಕೊಂಡು ನರಳುವಂತೆ ವೈಭವಶಾಲಿಯಾದ ಕರ್ಣಾಟಕವು ಅಖಂಡವಾಗಿ ಉಳಿಯದೆ ಮೂರು ನಾಲ್ಕು ತುಂಡುಗಳಾಗಿ ಒದ್ದಾಡಹತ್ತಿದೆ. ಇಂಥ ದುರ್ದೈವದ ಸ್ಥಿತಿಯಲ್ಲಿ ಸುದೈವದ ಮಾತೇನೆಂದರೆ, ಕರ್ಣಾಟಕ ಮಾತೆಯ ಎರಡು ಕಾಲುಗಳಾದ ಮುಂಬಯಿ ನೈಜಾಮ ಕರ್ಣಾಟಕಗಳೂ, ಎರಡು ಕೈಗಳಂತಿರುವ ಅನಂತಪುರ, ಬಳ್ಳಾರಿ, ಕೊಡಗು, ಮಂಗಳೂರುಗಳೂ, ಮೈಸೂರ ಕರ್ಣಾಟಕವೆಂಬ ಶಿರಸ್ಸಹಿತವಾದ ದಡದಿಂದ ತುಂಡರಿಸಲ್ಪಟ್ಟಿದ್ದರೂ, ಮುಖ್ಯ ಭಾಗವಾದ ಮೈಸೂರ ಕರ್ಣಾಟಕವೆಂಬ ಶಿರಸ್ಸಹಿತವಾದ ದಡದ ಪ್ರಾಣವು ತೊಲಗದೆ ರಕ್ತಾಭಿಸರಣವು ಸರಿಯಾಗಿ ಸಾಗಿದೆ.

ಹೀಗೆ ಮೃತಪ್ರಾಯವಾಗಿ ಬಿದ್ದ ವಿಚ್ಛಿನ್ನ ಕರ್ಣಾಟಕಕ್ಕೆ ಅದರ ಮೊದಲಿನ ಸ್ವರೂಪವನ್ನುಂಟುಮಾಡಲು ಮೈಸೂರ ಸಿಂಹಾಸನಾಧೀಶರಾದ **ಶ್ರೀಮತ್ಕೃಷ್ಣ ರಾಜೇಂದ್ರ ಒಡೆಯರ್ ಬಹಾದ್ದೂರರ**ವರಂಥ ರಾಜರ್ಷಿಗಳು ಟೊಂಕ ಕಟ್ಟಿರುವುದನ್ನು ನೋಡಿದರೆ ಅದು ನಮ್ಮೆಲ್ಲರ ಭಾಗ್ಯವೆಂದೇ ಎಣಿಸಬೇಕಾಗಿದೆ. ಈ ಮಹಾತ್ಮರ ಅಮೃತ ಹಸ್ತ ಸ್ಪರ್ಶದಿಂದ ಖಂಡ ತುಂಡಾದ ಕರ್ಣಾಟಕ ಮಾತೆಯ ಅವಯವಗಳು ಸರಿಯಾಗಿ ಕೂಡಿ ತನ್ನ ಮೊದಲಿನ ಆರೋಗ್ಯವನ್ನು ಹೊಂದುವಳೆಂಬ ದೃಢವಾದ ನಂಬುಗೆಯ ಆನಂದದ ತೆರೆಯೊಡನೆ ಈ ಲೇಖ ಜಲಾಶಯದ

ಎರಡನೆಯ ದಂಡೆಗೆ ಪಾರಾಗಿಬಿಡುತ್ತೇನೆ. ಇಂಥ ಮಹಾ ಕಾರ್ಯವನ್ನು ಕೈಕೊಂಡ ಕರ್ಣಾಟಕ ರತ್ನಸಿಂಹಾಸನಾಧೀಶ್ವರ ಶ್ರೀಮನ್ಮಹೀಶೂರ ಮಹಾರಾಜರವರಿಗೆ ದೇವರು ದೀರ್ಘಾಯುರಾರೋಗ್ಯಂಗಳನ್ನುಂಟುಮಾಡಲೆಂದು ಹಾರೈಸುತ್ತೇನೆ.

**ವೀರಭದ್ರಯ್ಯಾ ಗದಿಗಯ್ಯಾ ಪಾಟೀಲ.**

---

## * ಚಂಪೂ ಭಾರತದ ಕವಿಯು ಕನ್ನಡಿಗನಿದ್ದಿರಬಹುದೆ?

ಇದೀಗ ಸಂಸ್ಕೃತ ಸಾಹಿತ್ಯದಲ್ಲಿ ಚಂಪೂ ಭಾರತವೆಂಬ ಗ್ರಂಥವೊಂದು ಉಪಲಬ್ಧವಾಗಿದೆ. ಸುಮಾರು ೧೨ ಸ್ತಬಕಗಳಿದ್ದು ಕಥೆಯು ಕನ್ನಡ ಕವಿಚಕ್ರವರ್ತಿಯಾದ ರನ್ನನ ಮಾತಿನಲ್ಲಿ ಹೇಳಬೇಕಾದರೆ, "ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಂ" ಎಂಬಂತೆ ಶ್ರೀಮನ್ಮಹಾಭಾರತದ ಕಥೆಯನ್ನೇ ಸಂಕ್ಷೇಪವಾಗಿ ಚಂಪೂ ಶೈಲಿಯಲ್ಲಿ ಅನಂತಭಟ್ಟ ಕವಿಯು ಬರೆದಿರುವನು. ಕತೆಯ ವಿಷಯವಾಗಿ ಹೆಚ್ಚೇನೂ ಹೇಳುವ ಆವಶ್ಯಕತೆಯಿಲ್ಲ. ಚಂಪೂ ಶೈಲಿಯ ಪರಿಚಯವು ಸಂಸ್ಕೃತ ಸಾಹಿತ್ಯಾಭ್ಯಾಸಿಗಳಿಗೆ ಅಪೂರ್ವವೆಂದರೂ ಸಲ್ಲುವುದು. ನಾಟಕವನ್ನೇ ಚಂಪೂಕಾವ್ಯವೆಂದು ತಿಳಿದ ಹೊರತು ನಿಜವಾಗಿಯೂ ಚಂಪೂ ಕಾವ್ಯಗಳು ಸಂಸ್ಕೃತದಲ್ಲಿ ಬೆರಳಿನಿಂದೆಣಿಸುವಷ್ಟು. ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ಚಂಪೂ ಶೈಲಿಯು ಪರಿಚಿತವಾದುದೆಂದು ಬೇರೆ ಹೇಳಬೇಕೆಂದಿಲ್ಲ. ೯ರಿಂದ ೧೨ನೆಯ ಶತಮಾನಗಳವರೆಗೆ, ಎಂದರೆ ಸುಮಾರು ಮೂರು ಶತಕಗಳ ಪರ್ಯಂತ, ಚಂಪೂ ಶೈಲಿಯೇ ಸಾಹಿತ್ಯ ಸಾಮ್ರಾಜ್ಯದಲ್ಲಿ ಮೆರೆಯುತ್ತಿದ್ದಿತೆಂದು ಹೇಳಿದ ಹಾಗಾಯ್ತು.

ಇನ್ನು, ಕವಿ ವಿಷಯವಾಗಿ ಏನಾದರೂ ಆಂತರಿಕ ಪ್ರಮಾಣಗಳಿವೆಯೇ ಎಂಬುದನ್ನು ವಿಚಾರಿಸುವ. ಸಾಮಾನ್ಯವಾಗಿ ಕವಿಯ ವಿಷಯಗಳನ್ನು ತಿಳಿದುಕೊಳ್ಳಲು, (೧) ಆಂತರಿಕ, (೨) ಬಾಹ್ಯ—ಎಂಬೆರಡು ಪ್ರಮಾಣಗಳನ್ನು ಆದರಿಸುವ ವಾಡಿಕೆಯುಂಟು. ಅದೇ ರೀತಿಯಲ್ಲಿ ನಾವಾದರೂ ನಮ್ಮ ಕವಿ ವಿಷಯಕ ವಿಚಾರಗಳನ್ನು ಅರಿತುಕೊಳ್ಳಲು ಅಣಿಯಾಗುವ. ಯಾವನೊಬ್ಬ ಕವಿಯ ವಿಷಯದಲ್ಲಿ, ಆತನ (೧) ಕಾಲ, (೨) ಸ್ಥಳ, (೩) ಮತ ಮುಂತಾದ ವಿಷಯಗಳನ್ನು ಅರಿತುಕೊಳ್ಳುವುದರಿಂದ ಗ್ರಂಥಸ್ಥವಾಗಿದ್ದ ಕೆಲವು ವಿಚಾರಗಳ ಸಾಮಂಜಸ್ಯವು ಹೊರಹೊಮ್ಮುವುದು. ಕವಿಯ ಕಾಲದ ವಿಷಯದಲ್ಲಾದರೆ ಇದುವರೆಗೆ ಯಾವ ವಿಚಾರವೂ ಹೊರಪಟ್ಟಿಲ್ಲ. ಈ ಗ್ರಂಥದ ಪ್ರಥಮ ಪರಿಚಯವು ಮಿ|| ಎ. ಬಿ. ಕೀಥರವರ ಸಂಸ್ಕೃತ ಸಾಹಿತ್ಯೇತಿಹಾಸವೆಂಬ ಗ್ರಂಥದಲ್ಲಾಗಿದೆ. ಅಲ್ಲಿ ಅವರು ಕೇವಲ ಒಂದೆರಡು ಸಾಲುಗಳಲ್ಲಿ ಇಂಥದೊಂದು ಹೊತ್ತಗೆಯುಂಟೆಂಬುದನ್ನಷ್ಟು ಹೇಳಿ ಹೆಚ್ಚಿನ ವಿಷಯಗಳನ್ನೇನೂ ಹೇಳಿರುವುದಿಲ್ಲ.

ಬೇರೆ ವಿಶ್ವಸನೀಯವಾದ ಐತಿಹಾಸಿಕ ಪ್ರಮಾಣಗಳ ಅಭಾವದ ಸಂದರ್ಭದಲ್ಲಿ ಆಂತರಿಕ ಪ್ರಮಾಣಗಳನ್ನೇ ಆದರಿಸುವುದು ಸಮಂಜಸವೂ ಶಾಸ್ತ್ರಸಮ್ಮತವೂ ಆಗಿದೆ. ಈ ರೀತಿಯಲ್ಲಿ ಕಣ್ಣೊಳಗೆ ಕಣ್ಣಿಟ್ಟುಕೊಂಡು ಗ್ರಂಥವನ್ನು ಓದಿದೆ

* ಬೆಳಗಾವಿಯಲ್ಲಿ ನಡೆದ ೧೯ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಬಂದುದು.

ವಾದರೆ ಕೆಳಗಿನ ಅಂಶಗಳು ನಮ್ಮ ದೃಷ್ಟಿಗೋಚರವಾಗುತ್ತವೆ. ಈ ಕವಿಯು ಬಹು ಮಟ್ಟಿಗೆ ದಕ್ಷಿಣ ಭಾರತದವನಿರಬಹುದೆಂದೂ, ವಿಶೇಷವಾಗಿ ಕನ್ನಡಿಗನು ಇದ್ದಿರಬಹುದೆಂದೂ ಕೆಳಗಿನ ಆಧಾರಗಳಿಂದ ಹೇಳಬಹುದು. ಮೇಲಿನ ನಮ್ಮ ವಿಧಾನದ ಪುಷ್ಟಿಗಾಗಿ ಕೆಳಗೆ ಹೇಳಿರುವ ಕಾರಣಗಳನ್ನು ಕೊಡಬಹುದು:—

(೧) ಗ್ರಂಥದ ಶೈಲಿ.—ಸಂಸ್ಕೃತ ಸಾಹಿತ್ಯದಲ್ಲಿ ಚಂಪೂ ಶೈಲಿಯು, ನಾಟಕವನ್ನು ಬಿಟ್ಟರೆ–ಅತಿ ವಿರಳವೆಂದು ಧಾರಾಳವಾಗಿ ಹೇಳಬಹುದು. ನಮ್ಮ ಸಾಹಿತ್ಯದಲ್ಲಾದರೆ ಈ ರೀತಿಯು ಅತ್ಯಂತ ಪರಿಚಿತವಾದುದೆಂಬುದಕ್ಕೆ ೯ರಿಂದ ೧೨ನೆಯ ಶತಮಾನದ ವರೆಗಿನ ಕನ್ನಡ ಸಾಹಿತ್ಯ ಚರಿತೆಯೇ ಆಧಾರ.

(೨) ದ್ರಾವಿಡ ಪದ್ಧತಿಯ ಛಂದಃಶಾಸ್ತ್ರದಲ್ಲಿ ಉಳಿದ ಸಾಹಿತ್ಯದಲ್ಲಿಲ್ಲದ ವಿಶಿಷ್ಟವಾದುದೊಂದು ನಿಯಮವಿದೆ. ಅದುವೇ ಪ್ರಾಸದ ನಿಯಮ. ನೃಪತುಂಗನು ಕವಿರಾಜಮಾರ್ಗದಲ್ಲಿ ಹೇಳಿದಂತೆ—

ನುತ ಶಬ್ದಾಲಂಕಾರದೊ।
ಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಮ್ ‖

ಈ ನಿಯಮವನ್ನು ಒಳ್ಳೆಯ ಕಟ್ಟುಪಾಡಿನಿಂದ ಪಾಲಿಸದಿದ್ದರೂ ಇದರ ಪಡಿನೆಳಲು ಅಲ್ಲಲ್ಲಿ ಕಂಗೊಳಿಸುತ್ತಿದೆಯೆಂದು ಹೇಳಬಹುದು. ಕನ್ನಡ ನುಡಿಯಲ್ಲಿ–ಅದೇಕೆ? ದ್ರಾವಿಡ ಭಾಷೆಗಳಲ್ಲೆಲ್ಲವುಗಳಲ್ಲಿಯೂ—ದ್ವಿತೀಯಾಕ್ಷರ ಪ್ರಾಸವು ಆವಶ್ಯಕವೆಂಬುದು ಸಾಹಿತ್ಯ ವಿಮರ್ಶಕರು ಅರಿಯದ ವಿಷಯವಲ್ಲ. ಈ ವಿಷಯವು ನಮಗೆ ಅಲ್ಲಲ್ಲಿ ದೃಗ್ಗೋಚರವಾಗುತ್ತಿದೆ. ದೃಷ್ಟಾಂತವಾಗಿ, ೧ನೆಯ ಸ್ತಬಕದ ೧೭ನೆಯ ಶ್ಲೋಕದಲ್ಲಿ—

ಕ್ಷೋಣೀ ಪತೌ ಯದಕಲಂ ಪ್ರತಿ ಕೃಷ್ಣಸಾರಂ
ತೂಣೀ ಮುಖೇ ಪತಿತ ಪಾಣಿ ನಖಾಂಕುರೇಽಸ್ಮಿನ್ ।
ಏಣೀ ಕುಲಾನಿ ತರಲೈರ್ಯಮುನಾ ಜಲಾನಾಮ್
ವೇಣೀಮಿವಾಕ್ಷಿ ವಲನೈರ್ವಿಪಿನೇ ವಿತೇನುಃ ‖

ಇಂಥವಿನ್ನೂ ಅನೇಕ ದೃಷ್ಟಾಂತಗಳನ್ನು ಉದ್ಧರಿಸಬಹುದು. ನಾನು ಓದಿದ ನಾಲ್ಕು ಸ್ತಬಕಗಳಲ್ಲಿಯ ಇಂಥ ದೃಷ್ಟಾಂತಗಳನ್ನು ಎಣಿಸಿದರೆ ೩೩೨ ಶ್ಲೋಕಗಳಲ್ಲಿ ಸುಮಾರು ಕನಿಷ್ಠ ಪಕ್ಷ ಐವತ್ತು ಸಲವಾದರೂ ಈ ವಿಷಯವು ಕಣ್ಣಿಗೆ ಬೀಳುತ್ತದೆ. ದ್ರಾವಿಡ ಕಾವ್ಯಶಾಸ್ತ್ರದ ಆಧಾರವನ್ನು ಬಿಟ್ಟರೆ ಈ ವಿಷಯಕ್ಕೆ ಕಾರಣವೇನಿರಬಹುದೆಂಬುದನ್ನು ಹೇಳಲು ಬರುವಂತಿಲ್ಲ. ಈ ವಿಷಯವಾದರೆ ಮೊದಮೊದಲು ಹೆಚ್ಚಾಗಿ ಕಂಡುಬರುತ್ತ, ಮುಂದೆ ಕಡಿಮೆಯಾಗುತ್ತಿದೆ. ಹೆಚ್ಚಿನ ತಿಳಿವಳಿಕೆಗಾಗಿ ಕೆಳಗಿನ ಟಿಪ್ಪಣವನ್ನು ಕೊಡಬಹುದು:—

| ಸ್ತಬಕ | ಶ್ಲೋಕ |
|---|---|
| ೧. | ೧೭, ೨೭, ೨೮, ೪೨, ೬೧, ೬೨, ೭೨, ೮೩. |

| ಸ್ತಬಕ | ಶ್ಲೋಕ |
|---|---|
| ೨. | ೬, ೧೮, ೨೯, ೩೦, ೪೦, ೪೬, ೭೮, ೭೯, ೮೪, ೯೦, ೯೯, ೧೦೯. |
| ೩. | ೨, ೬, ೪೨, ೮೨, ೮೩, ೧೧೪. |
| ೪. | ೧೪, ೪೮. |

ಮೇಲಿನ ಟಿಪ್ಪಣವು ಸ್ಥೂಲವಾಗಿ ಈ ವಿಷಯವನ್ನು ತಿಳಿಸುತ್ತಿದೆ. ದ್ರಾವಿಡ ಪದ್ಧತಿಯ ಛಾಯೆಯು ಪರಿಣಾಮವೇ ಇದಕ್ಕೆ ಕಾರಣವೆಂದು ನಾವು ಹೇಳಬಹುದು. ಕವಿಯು ದಕ್ಷಿಣ ಹಿಂದೂದೇಶದವನಿರಬಹುದು. ದ್ರಾವಿಡ ಪದ್ಧತಿಯ ಕಾವ್ಯ ಪರಿಚಯವು ಅವನಿಗೆ ಹೆಚ್ಚಾಗಿದ್ದಿರಬಹುದು. ಆದುದರಿಂದ ಅದರ ಪಡಿ ನೆಳಲು ಈತನ ಸಂಸ್ಕೃತದ ಕವಿತ್ವ ಸಮಯಕ್ಕೆ ಕಂಗೊಳಿಸಿರಬಹುದೆಂಬ ಊಹೆಯನ್ನು ಮಾಡಲಿಕ್ಕೆ ಅವಕಾಶವಿದೆ.

ಈ ಊಹೆಯನ್ನೇ ನಮ್ಮ ಮುಂದಿನ ವಿಚಾರದ ತಳಗಲ್ಲಾಗಿಟ್ಟುಕೊಂಡು ನಿಜ ಸ್ಥಿತಿಯನ್ನು ಗೊತ್ತುಹಚ್ಚಲು ಹೊರಟೆವಾದರೆ ದ್ರಾವಿಡ ಪದಪ್ರಯೋಗ ವಾಕ್ಯ ಸರಣಿಗಳ ಛಾಯೆಯು ಈತನ ವಾಕ್ಯ ಸರಣಿಗಳಲ್ಲಿರುವುದೆಂದು ಕಂಡು ಬರುತ್ತಿದೆ. ಈ ವಿಧಾನದ ಪುಷ್ಟಿಗಾಗಿ ಕೆಳಗಿನ ದೃಷ್ಟಾಂತವನ್ನು ಉದ್ಧರಿಸಬಹುದು. ಮೊದಲನೆಯ ಸ್ತಬಕದ ೫೫ನೆಯ ಪದ್ಯದಲ್ಲಿ, "ಕುಂತಿಯು ತನ್ನ ಸ್ತನ ಯುಗ್ಮದಲ್ಲಿ ಒಂದನ್ನು ಭೀಮಸೇನನಿಗೂ, ಇನ್ನೊಂದನ್ನು ಧರ್ಮಾರ್ಜುನರಿಗೂ ಹಂಚಿಕೊಟ್ಟಳು" ಎಂದು ಹೇಳುವಾಗ ಕವಿಯು ಹೀಗೆಂದು ಬರೆಯುವನು :—

**ಕ್ಷುತ್ಪೀಡಯಾ ಸ್ತನ ರಸೇ ಕಲಹಂ ಶಿಶೂನಾಂ।**
**ಕುಂತೀ ಸದಾ ಶಮಯಿತುಂ ಕುಚ ಕುಂಭ ಯುಗ್ಮೇ ॥**
**ಏಕಂ ಯುಧಿಷ್ಠಿರ ಧನಂಜಯಯೋಶ್ಚ ಭಾಗ।**
**ಮೇಕಂ ಸಮೀರಣ ಸುತಸ್ಯ ಚ ಸಂವಿಭೇಜೇ ॥**

"ಕುಚ ಕುಂಭ ಯುಗ್ಮೇ ಸಂವಿಭೇಜೇ" ಎಂಬ ವಾಕ್ಯ ಸರಣಿಯು ಅ–ಸಂಸ್ಕೃತವೆಂದು ಸಂಸ್ಕೃತದ ಪರಿಚಯವುಳ್ಳವರಿಗೆ ತಟ್ಟನೆ ಹೊಳೆಯುವುದು. ವಿಭಾಗದ ಭಾವವನ್ನು ಸೂಚಿಸುವ ಸಂದರ್ಭದಲ್ಲಿ ಸಪ್ತಮೀ ವಿಭಕ್ತಿಯ ಪ್ರಯೋಗವನ್ನು ಮಾಡಿದುದನ್ನು ನಾನು ಕಂಡುದೂ ಇಲ್ಲ, ಕೇಳಿದುದೂ ಇಲ್ಲ; ಇಂಥ ಭಾವವನ್ನು ಸ್ಪಷ್ಟಪಡಿಸುವಾಗ್ಗೆ ದ್ವಿತೀಯೆಯನ್ನು ಉಪಯೋಗಿಸುವುದು ವಾಡಿಕೆಯಾಗಿದೆ. ಆದರೆ ಸಪ್ತಮೀ ವಿಭಕ್ತಿಯ ಪ್ರಯೋಗವು ಸಮಂಜಸವಾಗುವಂತೆ ಕಾರಣಗಳನ್ನು ಕೊಟ್ಟು ಸ್ಪಷ್ಟೀಕರಿಸಲು ಶಕ್ಯವಿದೆಯೆ? ಅಹುದು, ಶಕ್ಯವಿದೆ. ಏತತ್ಸದೃಶವಾದ ಪ್ರಯೋಗವೇನಾದರೂ ದ್ರಾವಿಡ ಭಾಷೆಗಳಲ್ಲಿದೆಯೆ? ಎಂಬುದನ್ನು ನೋಡುವ. ಕನ್ನಡ ನುಡಿಯಲ್ಲಿ ಇಂಥ ಪ್ರಯೋಗ ವಿದ್ದುದು ನಮ್ಮ ಭಾಗ್ಯವೇ ಸರಿ. ಉದಾಹರಣೆಗಾಗಿ—

"ಆ ಹಣ್ಣುಗಳಲ್ಲಿ ಒಂದನ್ನು ರಾಮನಿಗೆ, ಒಂದನ್ನು ಕೃಷ್ಣನಿಗೆ ಹಂಚಿಕೊಡು." ಈ ಪ್ರಯೋಗದಿಂದ ಮೇಲಿನ ಸಂಸ್ಕೃತ ಪ್ರಯೋಗದಲ್ಲಿ ದ್ರಾವಿಡ ಭಾಷೆಯ ಪಡಿನೆಳಲಿದೆಯೆಂದು ಊಹಿಸಲವಕಾಶವಿಲ್ಲವೆ? ನಮ್ಮ ತರ್ಕಸರಣಿಯು ಸರಿಯೆಂದಾದರೆ ಈ ಕವಿಯು ದಕ್ಷಿಣ ಭಾರತದವನೆಂದು ಹೇಳಬಹುದು.

ಇದರಂತಹುದೇ ಇನ್ನೊಂದು ಪ್ರಯೋಗವು ಮೂರನೆಯ ಸ್ತಬಕದ ೧೦೬ನೆಯ ಶ್ಲೋಕದಲ್ಲಿ ಕಂಡುಬರುತ್ತದೆ. ಅದು ಹೀಗಿದೆ:—

**ಕ್ಷುತ್ಪ್ರಪೀಡಯತಿ ಮಾಮಯಿ ವೀರೌ।**
**ಕುಕ್ಷಿಮೇತ್ಯ ಚಕಿತೇವ ಯುವಾಭ್ಯಾಮ್ ॥**

ಇದನ್ನು "ಕ್ಷುತ್ ಕುಕ್ಷಿಮೇತ್ಯ ಮಾಮ್ ಪೀಡಯತಿ" ಎಂಬುದಾಗಿ ಅನ್ವಯವನ್ನು ಹಚ್ಚಿದರೆ ಈ ಪ್ರಯೋಗವು ಕನ್ನಡದಲ್ಲಿ ಪುರಾಣಿಕರ ಬಾಯಲ್ಲಿರುವ ಕೆಳಗಿನ ಪ್ರಯೋಗವನ್ನು ಸಾಧಾರಣವಾಗಿ ಹೋಲುತ್ತದೆ. ಹೀಗಿದೆಯದು: (೧) "ಹಸಿವು ಬಂದು ನನ್ನನ್ನು ಪೀಡಿಸುತ್ತಿದೆ." (೨) "ಶ್ರೀಕೃಷ್ಣ ಪರಮಾತ್ಮನು ಬಂದು ಈ ಪ್ರಕಾರವಾಗಿ ಹೇಳಿದನು" ಮುಂತಾದ ಪ್ರಯೋಗಗಳ ಛಾಯೆಯು ಕಂಗೊಳಿಸುವುದಿಲ್ಲವೆ?—ಇವೇ ಮೊದಲಾದ ಪ್ರಯೋಗಗಳು ಪ್ರಾಯಕವಾಗಿ ಪುರಾಣಿಕರಿಂದಲಾಗಲಿ ಕೀರ್ತನಕಾರರಿಂದಾಗಲಿ ಉಪಯೋಗಿಸಲ್ಪಡುತ್ತವೆ. ಈ ತರ್ಕಸರಣಿಯು ಸರಿಯೆಂದಾದರೆ ಈ ಕವಿಯು ಪುರಾಣಿಕನಾಗಲಿ ಕೀರ್ತನಕಾರನಾಗಲಿ ಇದ್ದಿರಬಹುದು.

ಇದಲ್ಲದೆ, ಮೂರನೆಯ ಸ್ತಬಕದ ೩೪ನೆಯ ಶ್ಲೋಕದಲ್ಲಿ ಸ್ಥಳೀಯವಾದುದೊಂದು ಲೋಕಾಚಾರದ ಉಲ್ಲೇಖವಿದೆ. ಹೆಂಗಸರು ಗಲ್ಲಕ್ಕೆ ಅರಿಸಿನ ಹಚ್ಚುವ ಪರಿಪಾಠವೇ ಅದು. ಅದನ್ನು ಕವಿಯು ಹೀಗೆನ್ನುತ್ತಾನೆ:—

**ಚೋಲೀ ಹರಿದ್ರಾ ಸುರಭೀನ್ ಸಮೀರಾನ್**

ಇದಕ್ಕೆ ಟೀಕಾಕಾರನು ಅರ್ಥವನ್ನು ಹೇಳುವಾಗ್ಗೆ, "ಚೋಲದೇಶಸ್ತ್ರೀಣಾಂ ಹರಿದ್ರಾಲೇಪ ಇತಿ ಪ್ರಸಿದ್ಧಿಃ" ಎಂದು ಬರೆದಿದ್ದಾನೆ. ಉತ್ತರ ಹಿಂದೂಸ್ಥಾನದಲ್ಲಾದರೆ ಈ ತೆರದ ರೂಢಿಯು ಕಂಡುಬರುವುದಿಲ್ಲ. ನಮ್ಮ ಕಡೆಗೆ ಹೆಂಗಸರು ಗಲ್ಲಕ್ಕೆ ಅರಿಸಿನವನ್ನು ಬಳಿಯುವುದು ಪರಿಚಿತವಾದ ವಿಷಯ.

ದಕ್ಷಿಣದಲ್ಲಿಯ ಅರ್ಜುನನ ಯಾತ್ರೆಯ ಬಣ್ಣನೆಯನ್ನು ಮಾಡುವಾಗ ದಕ್ಷಿಣ ಭಾರತದ ಬಣ್ಣನೆಗಾಗಿ ಬಹುಳ ಪದ್ಯಭಾಗವನ್ನು ಪ್ರಯೋಗಿಸಿದ್ದುದೂ ಕಂಡುಬರುತ್ತದೆ. ಮೂರನೆಯ ಸ್ತಬಕದ ೩೬ನೆಯ ಶ್ಲೋಕದಲ್ಲಿ ಅರ್ಜುನನು ಚೋಲವಸುಧೆಗೆ ಬಂದನೆಂದು ಕವಿಯು ಹೇಳುತ್ತಾನೆ. III, ೩೮ನೆಯ ಪದ್ಯದಲ್ಲಿ "ಪಾಂಡ್ಯಗುಪ್ತಂ" ಎಂಬ ಪದವಿದೆ. ಶ್ರೀಕ್ಷೇತ್ರ ಗೋಕರ್ಣದ ಉಲ್ಲೇಖವು III, ೪೬ರಲ್ಲಿದೆ. ಮೂರನೆಯ ಸ್ತಬಕದ ೪೧ನೆಯ ಶ್ಲೋಕದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಸರಾದ ಏಲಕ್ಕಿ ಲವಂಗಗಳ ಉಲ್ಲೇಖವುಂಟು.

ಎರಡನೆಯ ಸ್ತಬಕದ ೯೧ನೆಯ ಪದ್ಯದ ಟೀಕೆಯನ್ನು ಬರೆಯುವಾಗ ಟೀಕಾಕಾರ ರಾಮಚಂದ್ರ ಬುಧೇಂದ್ರನು ಹೀಗೆಂದು ಉಲ್ಲೇಖಿಸಿದ್ದಾನೆ:—

**ಬಹು ದೇಶ ಲಿಪಿಷು ಠವರ್ಣಸ್ಯ ಮಧ್ಯ ಬಿಂದುಕತ್ವ ವರ್ತುಲತ್ವ ದರ್ಶನಾತ್ ತತ್ತ್ವೇನ ತಾಟಂಕಯೋರುತ್ಪ್ರೇಕ್ಷಾ.**

ಟೀಕಾಕಾರನು ಈ ಪದ್ಯಕ್ಕೆ ಬರೆದಿರುವ ಅರ್ಥವು ಸರಿಯೆಂದಾದರೆ ಈ ಕವಿಯು ಕನ್ನಡಿಗನಿದ್ದಿರಬಹುದೆಂದೆನ್ನಲಿಕ್ಕೆ ಮತ್ತೊಂದು ಬಲವಾದ ಆಧಾರವು ದೊರೆತಂತಾಯಿತು. 'ಠ' ಅಕ್ಷರಕ್ಕೆ ಮಧ್ಯದಲ್ಲಿ ಬಿಂದುವಿದ್ದು ದುಂಡಾಗಿರುವುದು ಕನ್ನಡದಲ್ಲಿಯೇ ಎಂಬುದೇ ನಮ್ಮ ವಿಧಾನಕ್ಕೆ ಪ್ರಮಾಣ.

ಮೇಲೆ ವಿಚಾರಿಸಿದುದು ಸಂಸ್ಕೃತ ಸಾಹಿತ್ಯಕ್ಕೆ ಸಂಬಂಧಪಟ್ಟಿದೆಯೆಂದು ಉಪೇಕ್ಷಿಸುವಂತಿಲ್ಲ. ನಮ್ಮ ಕವಿಗಳು ಬಹು ತರವಾಗಿ ಉಭಯ ಭಾಷಾ ಪಂಡಿತರಿದ್ದುದು ಸಾಹಿತ್ಯ ಚರಿತ್ರೆಯಿಂದ ತಿಳಿದುಬರುತ್ತದೆ. ಅದರಂತೆಯೇ ಈ ಕವಿಯಾದರೂ ಕನ್ನಡದಲ್ಲಿ ಏನಾದರೂ ಗ್ರಂಥಗಳನ್ನು ಬರೆದಿರಬಹುದು. ಇದೆಲ್ಲ ಊಹಾ ಮಾತ್ರವೇ. ಸಂಶೋಧಕರು ಈ ವಿಷಯವಾಗಿ ಪರಿಶ್ರಮಪಟ್ಟು ನಮ್ಮ ಊಹೆಯ ತಥ್ಯ ಮಿಥ್ಯಾಂಶಗಳನ್ನು ಬಯಲಿಗೆಳೆದು ನಿಶ್ಚಯಿಸಬೇಕೆಂಬುದಾಗಿ ಈ ಬರೆಹವನ್ನು ಬರೆದು ಸಾಹಿತ್ಯ ಶೋಧಕರ ಮುಂದಿಡಲು ಅಣಿಯಾಗಿದ್ದೇನೆಯೇ ಹೊರತು ನನ್ನ ಪಾಂಡಿತ್ಯ ಪ್ರದರ್ಶನೆಗಾಗಿ ಅಲ್ಲವೆಂಬಂಶವನ್ನು ಸ್ಪಷ್ಟಪಡಿಸುವುದು ಇದೀಗ ಸರಿಯಾದ ನನ್ನ ಭಾವನೆ.

**ನಾ. ವೆ. ವೆಂಕಟೇಶ ಭೀಮರಾವ ನಾಯಿಕ, ಬಿ.ಎ.**

---

# * ತ್ರಿಭುವನಮಲ್ಲ ವಿಕ್ರಮಾದಿತ್ಯನ ಜೀವನ ಚರಿತ್ರೆ

**ಆ ಸೇತೋಃ ಕೀರ್ತಿರಾಶೇ ರಘುಕುಲ ತಿಲಕಸ್ಯಾ ಚ ಶೈಲಾಧಿರಾಜಾ।**
**ದಾ ಚ ಪ್ರತ್ಯಕ್ಪಯೋಧೇಶ್ಚಟುಲ ತಿಮಿ ಕುಲೋತ್ತುಂಗ ರಿಂಗತ್ತರಂಗಾತ್ ॥**
**ಆ ಚ ಪ್ರಾಚಃ ಸಮುದ್ರಾನ್ನತ ನೃಪತಿ ಶಿರೋರತ್ನ ಭಾ ಭಾಸುರಾಂಘ್ರಿಃ।**
**ಪಾಯಾದಾಚಂದ್ರತಾರಂ ಜಗದಿದಮಖಿಲಂ ವಿಕ್ರಮಾದಿತ್ಯ ದೇವಃ ॥**

ಕರ್ಣಾಟಕದಲ್ಲಿ ಅನೇಕ ವೀರ ಪುರುಷರು ಹುಟ್ಟಿ ತಮ್ಮ ಪರಾಕ್ರಮಗಳಿಂದ ತಮಗೂ ತಮ್ಮ ನಾಡಿಗೂ ಕೀರ್ತಿ ತಂದುಕೊಂಡಿದ್ದಾರೆ. ಆ ವೀರರ ಚರಿತ್ರೆಗಳನ್ನು ಕಣ್ಣೆದುರಿಗೆ ತಂದು ಈಗಿನವರಾದ ನಮ್ಮನ್ನು ಸ್ಫೂರ್ತಿಗೊಳಿಸಬಹುದಾದ ಸಾಧನಗಳೂ ವಿಪುಲವಾಗಿವೆ. ಮೂರನೆಯ ಶತಮಾನದಿಂದ ಕರ್ಣಾಟಕದ ಸ್ವಾತಂತ್ರ್ಯ ತಿಲಕವು ತಾಳೀಕೋಟೆಯ ಧರ್ಮಭೂಮಿಯ ಮೇಲೆ ಅಳಿಸಿ ಹೋಗುವ ವರೆಗೆ ಕರ್ಣಾಟಕದವರಲ್ಲಿ ವೀರ ಶ್ರೀಯನ್ನು ತುಂಬಿ ಅವರಿಂದ ವೀರ ಕೃತ್ಯಗಳನ್ನು ಮಾಡಿಸಿದ ಅನೇಕ ನರಾಗ್ರಣಿಗಳು ಆಗಿಹೋಗಿದ್ದಾರೆ. ಅವರಲ್ಲಿಯೇ ವೈಭವ ಪ್ರಕರ್ಷದಿಂದಲೂ ವಿದ್ಯಾ ಪತಿತ್ವದಿಂದಲೂ ತಮ್ಮ ಪ್ರಜೆಗೆ ಅವರು ತಂದ ಆನಂದ ಸುಖ ಶಾಂತಿಗಳಿಂದಲೂ ಕನ್ನಡಿಗರಿಗೆ ಆದರಣೀಯರೂ ಸದಾ ಸ್ಮರಣೀಯ ಚರಿತ್ರರೂ ಆದ ರಾಜಪುರುಷರು ನಾಲ್ವರು: ಬಾದಾಮಿಯ ಚಾಲುಕ್ಯ ಪುಲಿಕೇಶಿ, ರಾಷ್ಟ್ರಕೂಟ ಅಮೋಘವರ್ಷ ನೃಪತುಂಗ, ಶ್ರೀಮಚ್ಚಾಲುಕ್ಯ ವಿಕ್ರಮಾದಿತ್ಯ, ವಿಜಯನಗರದ ಕೃಷ್ಣದೇವರಾಯ. ಈ ನಿಬಂಧದಲ್ಲಿ ಚಾಲುಕ್ಯ ಕುಲವನ್ನೂ ಕರ್ಣಾಟಕವನ್ನೂ ತನ್ನ ಪರಾಕ್ರಮದಿಂದ ಉಜ್ಜ್ವಲಗೊಳಿಸಿದ ಶ್ರೀ ವಿಕ್ರಮಾದಿತ್ಯ ದೇವನ ಚರಿತ್ರೆಯನ್ನು ಕುರಿತು ವಿಚಾರಮಾಡುವೆವು.

ಬಾದಾಮಿಯ ಚಾಲುಕ್ಯರೂ ಮಳಖೇಡದ ರಾಷ್ಟ್ರಕೂಟರೂ ತಮ್ಮ ಶಕ್ತಿಗನುಗುಣವಾಗಿ ಕರ್ಣಾಟಕದ ಭಾಗ್ಯಶ್ರೀಯನ್ನು ಬೆಳೆಯಿಸಲು ಪ್ರಯತ್ನಮಾಡಿದ ಬಳಿಕ ಚಾಲುಕ್ಯಕುಲವು ಮತ್ತೆ ಪ್ರಬಲವಾಗಿ ಕರ್ಣಾಟಕದ ಅರಸೊತ್ತಿಗೆಯನ್ನು ಪಡೆಯಿತು. ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಿರವಾಗಿ ನೆಲೆಗೊಳಿಸಲು ಕಠೋರ ಪ್ರಯತ್ನ ಮಾಡಿ ತನ್ನ ರಾಜ್ಯದ ಯಶೋರಕ್ಷಣೆಗಾಗಿ ತನ್ನ ಕಡೆಯ ನಿಮಿಷದ ವರೆಗೂ ಕಾದಿದ ಪುಣ್ಯಸ್ಮರಣ ಆಹವಮಲ್ಲ ಸೋಮೇಶ್ವರನನ್ನು ಕನ್ನಡಿಗರು ಎಂದಿಗೂ ಮರೆಯಲಾರರು. ಅವನ ಪೂರ್ವದಲ್ಲಿ ತೈಲಪನೂ ಐದನೆಯ ವಿಕ್ರಮಾದಿತ್ಯನೂ ಮಲ್ಲಿಕಾಮೋದ ಜಯಸಿಂಹನೂ ತಂತಮ್ಮ ಪರಿಯಿಂದ ಕರ್ಣಾಟಕಕ್ಕಾಗಿ ದುಡಿದವರು. ಆಹವಮಲ್ಲನು ಅವರು ಕಾಯ್ದಿಟ್ಟ ರಾಜ್ಯವೈಭವವು ಪರರಿಂದ ಆಘಾತಿಸಲ್ಪಟ್ಟಾಗ ತನ್ನ ಎಲ್ಲ ಸಾಮರ್ಥ್ಯದಿಂದ ಕಾಪಾಡಿ ಅದನ್ನು

* ಬೆಳಗಾವಿಯಲ್ಲಿ ನೆರೆದ ಹದಿನೈದನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಸಮರ್ಪಿಸಿದುದು.

ಹೆಚ್ಚಿಸಿದನು. ಅವನು ಪಟ್ಟಕ್ಕೆ ಬಂದುದು ಕ್ರಿ. ೧೦೪೪ರಲ್ಲಿ; ಇಹ ಲೋಕವನ್ನು ಬಿಟ್ಟುದು ೧೦೬೮ರಲ್ಲಿ; ಅವನ ಆಳಿಕೆಯ ೨೪ ವರ್ಷಗಳಲ್ಲಿ ಅವನಿಗೆ ವಿಶ್ರಾಂತಿ ಯಿದ್ದಿಲ್ಲ. ವಿಶೇಷತಃ ಕಾಂಚಿಯ ಚೋಳರೊಡನೆ ಕಾದಿ ಕಾದಿ ಅವನು ಆಹವ ಮಲ್ಲನೆಂಬ ಬಿರುದನ್ನು ಜನತಾ ಜನಾರ್ದನನಿಂದ ಪಡೆದಿದ್ದನು. ಇವನು ವೀರನಾಗಿ ಬರಿಯ ಲೌಕಿಕ ವ್ಯವಹಾರದಲ್ಲಿಯೇ ನಿಮಗ್ನನಾಗಿದ್ದನೆಂದಲ್ಲ; ಈಶ್ವರನಲ್ಲಿ ದೃಢವಾದ ಶ್ರದ್ಧೆಯೂ ವಿನಯ ಪೂರ್ವಕವಾದ ಏಕಾಂತಿಕ ಭಕ್ತಿಯೂ ಇವನ ಜೀವನದ ಆಧಾರಗಳಾಗಿದ್ದುವು. ಪರಮ ಪವಿತ್ರನೂ ಜಗದೇಕ ವೀರನೂ ಶುದ್ಧಾ ಚರಣಿಯೂ ಸದಾ ಸ್ಮರಣೀಯನೂ ಆದ ಆಹವಮಲ್ಲ ಸೋಮೇಶ್ವರನೇ ನಿಬಂಧ ನಾಯಕನಾದ ವಿಕ್ರಮಾದಿತ್ಯನ ತಂದೆಯು[1].

ವಿಕ್ರಮಾದಿತ್ಯನು ಹುಟ್ಟಿದ ತಿಥಿ ನಿರ್ಣೀತವಾಗಿಲ್ಲ. ಇವನು ತಾಯಿಯ ಒಡಲಿನಲ್ಲಿದ್ದಾಗ ತಾಯಿಗೆ ದಿಕ್ಕುಂಜರಗಳ ತಲೆಯ ಮೇಲೆ ಕಾಲಿಡಬೇಕೆಂದೂ, ಕೃಪಾಣ ಧಾರೆಯ ನೀರನ್ನು ಕುಡಿಯಬೇಕೆಂದೂ, ದಿಗಂಗನೆಯರಿಂದ ಪಾದ ಸಂವಾಹನವನ್ನು ಪಡೆಯಬೇಕೆಂದೂ ಬಯಕೆಗಳು ಆಗುತ್ತಿದ್ದುವೆಂದು ಬಿಲ್ಹಣ ಕವಿ ವರ್ಣಿಸಿದ್ದಾನೆ. ಅದು ಹೇಗಿದ್ದರೂ, ಆ ವೀರ ಮಾತೆಯು ಈ ಕೂಸನ್ನು ಹೆತ್ತು ಕನ್ನಡ ನಾಡನ್ನು ಅಪರಿಮಿತವಾಗಿ ಅನುಗ್ರಹಿಸಿದಳು. ಆ ಕೂಸು ದೊಡ್ಡದಾಗಿ ಎಲ್ಲ ಲಿಪಿಗಳ ಪರಿಚಯವನ್ನೂ ಪಡೆಯಿತು. ಕವಿತ್ವ ವಕ್ತೃತ್ವ ಶಕ್ತಿಗಳು ಆ ಚಿಕ್ಕ ಬಾಲಕನಲ್ಲಿ ತಲೆದೋರದುವು. ಎಲ್ಲ ವಿದ್ಯೆಗಳಲ್ಲಿಯೂ ಸಮರ ಸಾಹಸದಲ್ಲಿಯೂ ವಿಕ್ರಮನು ಪ್ರವೀಣನಾದನು. ರಾಜ್ಯಭಾರವನ್ನು ಅಂಶತಃ ಹೊರಲು ಸಮರ್ಥನಾದ ಆ ತರುಣ ಶ್ರೀ ವಿಕ್ರಮನನ್ನು ನೋಡಿ ಒಂದು ದಿನ ಆಹವಮಲ್ಲನು ರಾಜ್ಯದ ಯುವರಾಜತ್ವವನ್ನು ಅವನಿಗೆ ಅರ್ಪಿಸಬೇಕೆಂದೆನ್ನಲು, ಸಾತ್ವಿಕ ತೇಜದಿಂದ ಪ್ರಕಾಶಿಸುವ ಆ ತರುಣನು ತಂದೆಯ ವಿಚಾರವನ್ನು ತಡೆದು, ತನ್ನ ಹಿರಿಯ ಅಣ್ಣನಾದ ಸೋಮೇಶ್ವರನನ್ನು ಬದಿಗಿಟ್ಟು ತನಗೆ ಯುವರಾಜಪದ ವನ್ನರ್ಪಿಸುವುದೆಂದರೆ ಅದು ಕುಲ ಪರಂಪರೆಗೆ ವಿರುದ್ಧವಾದುದೆಂದೂ, ತಾತ ವಚನವು ತನಗೆ ಪವಿತ್ರವಾದರೂ ಕುಲಾಚರಣೆಯನ್ನುಲ್ಲಂಘಿಸಿದ ಪಾಪಕ್ಕೆ ತನ್ನನ್ನು ಗುರಿಮಾಡಬಾರದೆಂದೂ ತಂದೆಯನ್ನು ವಿನಯದಿಂದಲೂ ಗೌರವ

1. ಬಿಲ್ಹಣನು ವಿಕ್ರಮಾಂಕ ಕಾವ್ಯದಲ್ಲಿ ಆಹವಮಲ್ಲನನ್ನು ಈ ವಿಧವಾಗಿ ಬಣ್ಣಿಸಿದ್ದಾನೆ:—

ಆಖ್ಯಾಯಿಕಾನೀವಿನ್ನಿ ಕಥಾದ್ಭುತೇ ಚ| ಯಃ ಸರ್ಗಬಂಧೇ ದಶರೂಪಕೇ ಚ ||
ಪವಿತ್ರ ಚಾರಿತ್ರತಯಾ ಕವೀಂದ್ರೈ | ರಾರೋಪಿತೋ ರಾಮ ಇತಿ ದ್ವಿತೀಯಃ || (೧-೮೮)
ಭೂಪೇಷು ಕೂಪೇಷ್ವಿವರಿಕ್ತ ಭಾವಂ! ಕೃತ್ವಾ ಪ್ರಪಾ ಪಾಲಿಕಯೈವ ಯಸ್ಯ ||
ವೀರತ್ರಿಯಾ ಕೀರ್ತಿ ಸುಧಾ ರಸಸ್ಯ | ವಿಶಾಂ ಮುಖಾನಿ ಪ್ರಣಯೀಕೃತಾನಿ || (೮೯)

ಕಲ್ಯಾಣಪುರವನ್ನು ಆಹವಮಲ್ಲನು ಸ್ಥಾಪಿಸಿದುದನ್ನು ಕವಿ ಹೀಗೆ ಬಣ್ಣಿಸಿದ್ದಾನೆ:—

ಚಕಾರ ಕಲ್ಯಾಣವಿತಿಕ್ರಮಾದಸೌ | ಪುರಂ ಪರಾರ್ಧ್ಯಂ ಪೃಥಿವೀ ಪುರಂದರಃ ||
ಯದುಚ್ಚ ಹರ್ಮ್ಯಾವಲಿ ದೀಪ ಸಂಪದಾ| ವಿಭಾವ್ಯತೇ ಕಜ್ಜಲ ಸನ್ನಿಭಂ ನಭಃ || (೨, ೧)
ಜಲಾಶಯಾ ಯತ್ರ ಹಸಂತಿ ಸಂತತಂ| ನಪೇಂದ್ರ ನೀಲ ದ್ರವ ನಿರ್ಮಲೋದರಾಃ ||
ಶರತ್ಸಮುತ್ಸಾರಿತ ಮೇಘ ಕರ್ದಮಂ | ಕಲಿಂದ ಕನ್ಯಾ ಹ್ರದ ಮೇಚಕಂ ನಭಃ || (೬)
ಅಪಾಗುರಂ ನೇತ್ರ ಕುರಂಗ ಬಂಧನಂ| ನಿರಕ್ಷರಂ ಪಂಚ ಶರಸ್ಯ ಶಾಸನಮ್ ||
ಗೃಹೇ ಗೃಹೇ ಯತ್ರ ವಿಚಿತ್ರಮುನ್ಮಖಂ| ವಿತನ್ಯತೇ ನೃತ್ಯಮುಧೀರ ಲೋಚನಾಃ || (೨೪)

ದಿಂದಲೂ ಬೇಡಿಕೊಂಡನು[2]. ಅನಂತರ ಕೆಲಕಾಲದ ಮೇಲೆ ಕುಲವೈರಿಗಳಾದ ಚೋಳರನ್ನೂ ಮಾಲವರನ್ನೂ ಸೋಲಿಸಿ ಬಂದನು. ತಾನು ಯುವರಾಜನಿರದಿದ್ದರೂ ಶ್ರೀ ವಿಕ್ರಮನೇ ಯುವರಾಜನ ಕೆಲಸವನ್ನು ನೋಡಿಕೊಳ್ಳುತ್ತಿದ್ದನು. ಆಹವಮಲ್ಲನು ಚೋಳರಾಜನಾದ ವೀರರಾಜೇಂದ್ರನೊಡನೆ ಸಮರಸುಖವನ್ನನುಭವಿಸುವಾಗ ಶ್ರೀ ವಿಕ್ರಮನೂ ತಂದೆಯ ಜೊತೆಗಿದ್ದು ಅವನಿಗೆ ಸಹಾಯವಾಗುತ್ತಿದ್ದನು. ಕ್ರಿ. ೧೦೫೫ರಲ್ಲಿ ವಿಕ್ರಮಾದಿತ್ಯನು ಬನವಾಸಿ ನಾಡನ್ನೂ ಬೇರೆ ಭಾಗಗಳನ್ನೂ ಆಳುತ್ತಿದ್ದನು[3]. ಕ್ರಿ. ೧೦೫೮ರಲ್ಲಿ ಅವನು ಗಂಗವಾಡಿ ಸಂತಳಿಗೆ ಮತ್ತು ನೊಳಂಬವಾಡಿಯನ್ನು ಆಳುತ್ತಿದ್ದು ಆಗ ಅವನು ಬಳ್ಳಿಗಾವಿಯಲ್ಲಿ ವಾಸಮಾಡುತ್ತಿದ್ದನು[4]. ಕ್ರಿ. ೧೦೬೧ರಲ್ಲಿ ಆಹವಮಲ್ಲನಿಗೂ ಚೋಳರಾಜನಿಗೂ ಕೊಪ್ಪದಲ್ಲಿ ದೊಡ್ಡ ಕಾಳೆಗವಾಗಿ ಅದರಲ್ಲಿ ಆಹವಮಲ್ಲನು ಹಿಂದಿರುಗಬೇಕಾಯಿತು. ಅನಂತರ, ಕೂಡಲಸಂಗಮದಲ್ಲಿ ಕಾಳೆಗವಾಗಿ ಅಲ್ಲಿಯೂ ಆಹವಮಲ್ಲನೇ ಹಿಂದಿರುಗಬೇಕಾಯಿತು. ಈ ಕುಂದನ್ನು ಸಹಿಸಲಾರದೆ ಅದೇ ಸ್ಥಳದಲ್ಲಿ ಮತ್ತೊಮ್ಮೆ ಕಾದಲಿಕ್ಕೆ ಆಹ್ವಾನಪತ್ರಿಕೆಯನ್ನು ಆಹವಮಲ್ಲನು ಚೋಳರನಿಗೆ ಕಳುಹಿದನು. ಆದರೆ ಅವನು ಚಿಂತಿಸಿದುದೊಂದಾಯಿತು, ದೈವವು ವಿಧಿಸಿದುದು ಮತ್ತೊಂದಾಯಿತು. ದುಷ್ಟಜ್ವರದಿಂದ ಪೀಡಿತನಾಗಿ ತಾನು ಕೊಟ್ಟ ಆಹ್ವಾನಕ್ಕೆ ಸರಿಯಾಗಿ ರಿಪುಭಯಂಕರನಾದ ಆಹವಮಲ್ಲನು ರಣರಂಗಕ್ಕೆ ಹೋಗಲಾಗಲಿಲ್ಲ; ತನ್ನ ಅವಸಾನ ಕಾಲವು ಸಮೀಪಿಸಿದುದನ್ನು ತಿಳಿದು ಸಮರಾಂಗಣವನ್ನೇ ಮನೆಯನ್ನಾಗಿ ಮಾಡಿಕೊಂಡ ಆ ವೀರನಿಗೆ ಹಾಸಿಗೆಯ ಮೇಲೆ ಬಿದ್ದು ಸಾಯುವುದು ದುಸ್ಸಹವೆನಿಸಿತು. ಪರಮಪವಿತ್ರಳಾದ ತುಂಗಭದ್ರಾ ಮಾತೆಯ ತೊಡೆಯ ಮೇಲೆ ತಲೆಯಿಟ್ಟು ಪಾರ್ವತೀಶ್ವರನ ಸ್ಮರಣೆ ಮಾಡುತ್ತ ಇಹಲೋಕವನ್ನು ತ್ಯಜಿಸಬೇಕೆಂದು ಅವನು ತನ್ನ ಇಚ್ಛೆಯನ್ನು ತನ್ನವರಿಗೆ ತಿಳಿಸಿದನು. ಅದರಂತೆ ಕರ್ಣಾಟಕವನ್ನು ಸರ್ವಕಾಲದಲ್ಲಿಯೂ ಅನುಗ್ರಹಿಸುತ್ತಿರುವ ತುಂಗಭದ್ರೆಯ ಒಡಲಲ್ಲಿಯೇ ಆ ಮಹಾಪರಾಕ್ರಮಿಯಾದ ಆಹವಮಲ್ಲ ಸೋಮೇಶ್ವರನು ತನ್ನ ದೇಹವನ್ನು ಆನಂದದಿಂದ ಅರ್ಪಿಸಿದನು[5].

---

2. ಸೋಮೇಶ್ವರನು—

ಧತ್ಸೇ ಜಗದ್ರಕ್ಷಣಯಾಮಿಕತ್ವಂ | ನ ಚೇತ್ತ್ವಮಂಗೀಕೃತಯೌವರಾಜ್ಯಃ |
ಮಮಾಪಿನೇ ರವಾಪೂರಿತ ವಿಶ್ವಮಸ್ಯ | ಕ್ಲಾಂತಿಃ ಕಥಂ ಶಾಮ್ಯತು ಮದ್ಭುಜಸ್ಯ ॥ (೩.೪)

ಎಂದುದಕ್ಕೆ ವಿಕ್ರಮಾದಿತ್ಯನು ನುಡಿದುದು ಇಂತು :—

ವಿಚಾರಚಾತುರ್ಯಮಪಾಕರೋತಿ | ತಾತಸ್ಯ ಭೂಯಾನ್ಮಯಿ ಪಕ್ಷಪಾತಃ ॥
ಜ್ಯೇಷ್ಠೇ ತನೂಜೇ ಸತಿ ಸೋಮದೇವೇ ನ ಯೌವರಾಜ್ಯೇ ಮಮಾಧಿಕಾರಃ ॥ (೩.೫)
ಚಾಲುಕ್ಯವಂಶೋಪಿ ಯದಿ ಪ್ರಯಾತಿ | ಪಾತ್ರತ್ವಮಾಚಾರ ವಿಪರ್ಯಯಸ್ಯ ॥
ಆಯೋ ಮಹಸ್ತ್ರಸಮಾ ಕಮಸ್ಯ | ದಸಾಕುಲೋ ಘೂತ್ಕ ಕುಂಜರೋಯಮ್ ॥

3. ಕ್ರಿ. ೧೦೫೫ರ ಬಂಕಾಪುರದ ಶಿಲಾಶಾಸನ ಎಪಿಗ್ರಾಫಿಯಾ ಇಂಡಿಕಾ, ೮೬—೧೮೮.
4. ಎಪಿಗ್ರಾಫಿಯಾ ಕರ್ಣಾಟಿಕಾ. (೭). ಶಿಕಾರಿಪುರದ ೮೩ನೆಯ ಶಾಸನ.
5. ವಿಕ್ರಮಾಂಕ ಕಾವ್ಯ, ೪. ೪೬—೪೯—

ಅಕಾಂಡೇ ವಿಧಿ ಚಾಂಡಾಲಸ್ತಸ್ಮೈ ದಾಹಜ್ವರಂ ದದೌ |
ನ ಕೈಶ್ಚಿದಪಿ ಲಭ್ಯಂತೇ ನಿಷ್ಕಂಟಕಾಃ ಸುಖ ಸಂಪದಃ ॥ ೪೬ ॥

ಈ ಸಂಗತಿಗಳು ನಡೆದಾಗ ವಿಕ್ರಮಾದಿತ್ಯನು ಚೋಳರ ಮೇಲೆ ದಂಡೆತ್ತಿ ಹೋಗಿದ್ದನು; ಇದನ್ನು ತಿಳಿದು ದುಃಖ ಸಂತಪ್ತನಾಗಿ ಮರಳಿ ರಾಜಧಾನಿಗೆ ಬಂದನು. ಅತುಲ ಪರಾಕ್ರಮಿಯೂ ರಣ ಧೀರನೂ ಆದ ತನ್ನ ತಂದೆ ಅಗಲಿಹೋದ ನೆಂದು ತಿಳಿದೊಡನೆಯೇ ಅವನಿಗಾದ ದುಃಖವನ್ನು ವರ್ಣಿಸಲು ಶಕ್ಯವಿಲ್ಲ[6].

ಆಹವಮಲ್ಲ ಸೋಮೇಶ್ವರನು ತನ್ನ ದೇಹವನ್ನು ತುಂಗಭದ್ರೆಗೆ ಅರ್ಪಿಸಿದ ಹದಿನಾಲ್ಕು ದಿನಕ್ಕೆ ಅವನ ಹಿರಿಯ ಮಗನಾದ ಇಮ್ಮಡಿ ಸೋಮೇಶ್ವರನು ಪಟ್ಟ ವೇರಿದನು[7]. ಇಮ್ಮಡಿ ಸೋಮೇಶ್ವರನು ರಾಜ್ಯಭಾರ ವಹಿಸುವುದರಲ್ಲಿ ಅಸಮ ರ್ಥನೆಂದು ಭಾವಿಸಿ ಚೋಳ ವೀರರಾಜೇಂದ್ರರಾಯನು ಕರ್ಣಾಟಕದ ಮೇಲೆ ದಂಡೆತ್ತಿ ಬಂದನು. ಕರ್ಣಾಟಕ ಸೈನ್ಯಕ್ಕೂ ಚೋಳ ಸೈನ್ಯಕ್ಕೂ ಕಾಳೆಗವಾಗಿ ವೀರರಾಜೇಂದ್ರನು ಪರಾಜಯ ಹೊಂದಿ ಹಿಂದಿರುಗಬೇಕಾಯಿತು. ಇದಾದನಂತರ ಸೋಮೇಶ್ವರನು ತನ್ನ ರಾಜ್ಯವನ್ನು ಸ್ಥಿರಪಡಿಸುವ ಉಪಾಯಗಳನ್ನು ಕೈಕೊಂಡನು. ಕೆಲವರು ಶೂರ ಸೇನಾನಿಗಳನ್ನು ರಾಜ್ಯದ ದಕ್ಷಿಣ ಮೇರೆಯ ರಕ್ಷಣೆಗಾಗಿ ನಿಯಮಿಸಿದನು. ಬನವಾಸಿ ಸಂತಳಿಗೆ ಗಂಗವಾಡಿಗಳಿಗೆ ಒಬ್ಬ ಗಂಗ ರಾಜಪುತ್ರನನ್ನು ಮುಖ್ಯಸ್ಥನಾಗುವಂತೆ ಮಾಡಿದನು. ಸೋಮೇಶ್ವರನು ತಂದೆ ಯಂತೆ ಮಹತ್ವಾಕಾಂಕ್ಷಿಯಾಗಲಿ ಪರಾಕ್ರಮಿಯಾಗಲಿ ಇದ್ದಿಲ್ಲ. ಅವನು ತನ್ನ ವಿಶ್ವಾಸಕ್ಕೆ ಪಾತ್ರನಾದ ಉದಯಾದಿತ್ಯನೊಡನೆ ಬಂಕಾಪುರ ನೆಲವೀಡಿನಲ್ಲಿಯೇ ಇದ್ದನು. ಅವನು ಬಳಗಾವಿಯ ಹರಿಹರ ಆದಿತ್ಯರ ಗುಡಿಗಳಿಗೂ, ಅವನ ಅರಸಿಯು ಭಟ್ಟರ ಪೊಸವೂರಿನ ರಾಮೇಶ್ವರ ದೇವಾಲಯಕ್ಕೂ ದಾನಮಾಡಿದಂತೆ ಉಲ್ಲೇಖ ಗಳಿವೆ[8]. ತನಗಿಂತಲೂ ಹೆಚ್ಚು ಪರಾಕ್ರಮಿಯಾದ ವಿಕ್ರಮಾದಿತ್ಯನಿಗೆ ಅವನು

---

ಅಂತರ್ದಾಹಮಿವಾಲೋಕ್ಯ ಪ್ರಿಯಾಂ ಕೀರ್ತಿಂ ವಿನಿರ್ಗತಾಂ |
ದರ್ಶಯನ್ದಶನಜ್ಯೋತ್ಸ್ನಾಂ ಅಥೋವಾಚ ಸ ಮಂತ್ರಿಣಃ || ೪೯ ||
ಪ್ರಾಪ್ತ ಕೋದಂಡ ಪಾಂಡಿತ್ಯೋ ಜಾತ ಲಕ್ಷ್ಮೀ ಸಮಾಗಮಃ |
ಕಾಕುತ್ಸ್ಥ ನಿವಿಡಸ್ಥಾಮಾ ಸೂನುರ್ವಿಕ್ರಮ ಲಾಂಛನಃ || ೫೦ ||
ತೇನೈವ ಯುವರಾಜತ್ವಂ ಸಮಾರೋಪ್ಯ ಯಶಸ್ವಿನಾ |
ಏಷ ಸಾಮ್ರಾಜ್ಯ ಭಾರಸ್ಯ ವೋಢಾ ಸೋಮೇಶ್ವರಃ ಕೃತಃ || ೫೧ ||
ಜಾನಾಮಿ ಕರಿ ಕರ್ಣಾಂತ ಚಂಚಲಂ ಹತ ಜೀವಿತಂ |
ಮಮ ನಾನ್ಯತ್ರ ವಿಶ್ವಾಸಃ ಪಾರ್ವತೀ ಜೀವಿತೇಶ್ವರಾತ್ || ೫೨ ||
ಉತ್ಸಂಗೇ ತುಂಗಭದ್ರಾಯಾಸ್ತದೇಷ ಶಿವ ಚಿಂತಯಾ |
ವಾಂಛಾಮ್ಯಹಂ ನಿರಾಕರ್ತುಂ ದೇಹಗ್ರಹ ವಿಡಂಬನಾಂ || ೫೩ ||

ಆಹವಮಲ್ಲನು ತುಂಗಭದ್ರೆಯಲ್ಲಿ ಜಲ ಸಮಾಧಿಯನ್ನು ಹೊಂದಿದ ವಿಷಯಕ್ಕೆ ಶಿಲಾ ಲೇಖನದಲ್ಲಿ ಈ ಪ್ರಕಾರ ಉಲ್ಲೇಖ ಬಂದಿದೆ:—ಎ. ಕಾ. ಶಿಕಾರಿಪುರದ ೧೩೬ನೆಯ ಶಾಸನ—

ಗಗನ ನವಾಂಕ ಸಂಖ್ಯೆ ಶಕ ಕಾಳದೊಳಾಗಿರೆ ಕೀಳಕಾಲಕಂ |
ನೆಗಳೆ ತದೀಯ ಚೈತ್ರ ಬಹುಳಾಷ್ಟಮಿಯೊಳ್ ರವಿ ವಾರದೊಳ್ಜಸ ||
ವಿಮ್ಮಗೆ ಕುರುವರ್ತಿಯೊಳ್ಪರಮ ಯೋಗ ನಿಯೋಗದೆ ತುಂಗಭದ್ರೆಯೊಳ್ |
ಜಗದಧಿಪಂ ತ್ರಿವಿಷ್ಟಪವನೇರಿದನಾಹವಮಲ್ಲ ವಲ್ಲಭಂ ||

6. ಸ್ವಸ್ವಭಾವಾದ್ರ್ರ ಭಾವೇನ ಪಿತೃಸ್ನೇಹಾಚ್ಚ ತಾದೃಶಃ |
ತಥಾ ರುರೋದ ವಪುಷಾ ಭೂಪೃಷ್ಠ ಲುಠಿತೇನ ಸಃ || (ವಿ. ೪. ೭೦)

7. ಎ. ಕಾ. ೭. ಶಿಕಾರಿಪುರದ ೧೩೬ನೆಯ ಶಾಸನ.

8. ಎ. ಕಾ. ೭. ಶಿಕಾರಿಪುರದ ೧೨೯ನೆಯ ಮತ್ತು ೨೯೫ನೆಯ ಶಾಸನ.

ಯಾವಾಗಲೂ ಅಂಜುತ್ತಿದ್ದನು. ತನಗೆ ಸಹಾಯ ಮಾಡಲು ಎಲ್ಲಕ್ಕೂ ಕಿರಿಯ ತಮ್ಮನಾದ ಜಯಸಿಂಹನು ಯಾವಾಗಲೂ ಅನುಕೂಲನಾಗಿರಬೇಕೆಂದು ಅವನು ಜಯಸಿಂಹನಿಗೆ ಒಂದು ಪ್ರಾಂತದ ಆಳಿಕೆಯನ್ನು ಒಪ್ಪಿಸಿದ್ದನು[9]. ಆದರಂತೆ ಜಯಸಿಂಹನು ಕ್ರಿ. ೧೦೭೨ರಲ್ಲಿ ಗೊಂದವಡಿ ನೆಲೆವೀಡಿನೊಳು ರಾಜ್ಯವಾಳುತ್ತಿದ್ದಂತೆ ಕಲ್ಬರೆಹದಲ್ಲಿ ಉಲ್ಲೇಖವಿದೆ.

ತನ್ನ ರಾಜ್ಯವನ್ನು ಶಕ್ಯವಾದಷ್ಟು ಸ್ಥಿರಪಡಿಸುವುದರಲ್ಲಿ ಸೋಮೇಶ್ವರನು ತೊಡಗಿದಾಗ ಅವನಿಗಿಂತ ಹೆಚ್ಚು ಪರಾಕ್ರಮಿಯೂ ಮಹತ್ವಾಕಾಂಕ್ಷಿಯೂ ಆಗಿದ್ದ ವಿಕ್ರಮಾದಿತ್ಯನು ಬೇರೆ ವಿಚಾರದಲ್ಲಿ ತೊಡಗಿದ್ದನು. ಆಹವಮಲ್ಲ ಸೋಮೇಶ್ವರನ ಮರಣ ಕಾಲಕ್ಕೆ ವಿಕ್ರಮಾದಿತ್ಯನು ಪರ ಶತ್ರುಗಳೊಡನೆ ಹೋರಾಡುವುದರಲ್ಲಿ ತೊಡಗಿದ್ದನಾದರೂ ಪಿತೃ ಮರಣ ವಾರ್ತೆಯು ತಿಳಿದೊಡನೆಯೇ ಮರಳಿ ರಾಜಧಾನಿಗೆ ಬಂದನೆಂಬುದನ್ನು ಮೇಲೆ ಹೇಳಿದೆ. ಅನಂತರ ಕೆಲ ಕಾಲದ ವರೆಗೆ ಸ್ನೇಹದಿಂದಲೂ ಸೌಖ್ಯದಿಂದಲೂ ಅವರಿಬ್ಬರೂ ಇರುತ್ತಿದ್ದರು. ಬುದ್ಧಿಪ್ರಭಾವದಲ್ಲಿಯೂ ಶಕ್ತಿ ಪ್ರಭಾವದಲ್ಲಿಯೂ ವಿಕ್ರಮನು ಸೋಮೇಶ್ವರನನ್ನು ಮಿಕ್ಕಿದ್ದನಾದರೂ ಅವನು ತನ್ನ ಅಣ್ಣನನ್ನು ಮನ್ನಿಸುತ್ತ ರಾಜ್ಯ ವೃದ್ಧಿಯನ್ನು ಬಯಸುತ್ತ ರಾಜಧಾನಿಯಲ್ಲಿದ್ದನು. ಆದರೆ ಮುಂದೆ ಸೋಮೇಶ್ವರನು ಕೆಟ್ಟ ಮಾರ್ಗವನ್ನನುಸರಿಸಹತ್ತಿದನು; ತನಗೂ ತನ್ನ ಪವಿತ್ರ ಕುಲಕ್ಕೂ ಕುಂದು ತರುವ ಅಪಕೃತ್ಯಗಳನ್ನು ಮಾಡತೊಡಗಿದನು; ತನ್ನ ತಮ್ಮನ ವಿಷಯದಲ್ಲಿ ವೈಷಮ್ಯವನ್ನು ತಾಳಹತ್ತಿದನು; ಅರಸು ಮನೆತನದಲ್ಲಿ ಶಾಂತತೆಯಿಂದ ಇರುವುದಶಕ್ಯವಾದನಂತರ ಶ್ರೀ ವಿಕ್ರಮಾದಿತ್ಯನು ಕಿರಿಯ ತಮ್ಮ ಜಯಸಿಂಹನೊಡನೆ ರಾಜಧಾನಿಯನ್ನು ಬಿಟ್ಟು ದಕ್ಷಿಣ ದಿಕ್ಕಿಗೆ ತೆರಳಿದನು. ಇದನ್ನು ಕೇಳಿ ಅವನನ್ನು ಬೆನ್ನಟ್ಟುವುದಕ್ಕಾಗಿ ಸೋಮೇಶ್ವರನು ತನ್ನ ಸೈನ್ಯವನ್ನು ಕಳುಹಿದನು. ಅದನ್ನು ವಿಕ್ರಮಾದಿತ್ಯನು ಲೀಲೆಯಿಂದ ಸೋಲಿಸಿ ಹಿಮ್ಮೆಟ್ಟಿಸಿದನು[10].

ವಿಕ್ರಮಾದಿತ್ಯನೇನು ಸಾಮಾನ್ಯ ಸೇನಾನಿಯಲ್ಲ; ಯುದ್ಧ ಚಾತುರ್ಯದಲ್ಲಿಯೂ ರಾಜ ಕಾರ್ಯದಲ್ಲಿಯೂ ಶ್ರೇಷ್ಠನಾಗಿದ್ದನು. ಅವನು ಮೊದಲು ತುಂಗಭದ್ರಾ ನದಿಯನ್ನು ದಾಟಿ ಬನವಾಸಿಯಲ್ಲಿ ಕೆಲಕಾಲ ಕಳೆದು ಘಟ್ಟವನ್ನಿಳಿದು ಮಲಯ ದೇಶವನ್ನು ಮುಟ್ಟಿದನು. ಅಲ್ಲಿಂದ ಕೊಂಕಣಕ್ಕೆ ಹೋದೊಡನೆಯೇ ಅಲ್ಲಿಯ ಮಾಂಡಲಿಕ ಅರಸನಾದ ಜಯಕೇಶಿ ಬಂದು ಅವನನ್ನು ಕಂಡು ತನ್ನ ಸಂಪೂರ್ಣ ಸಹಾಯವನ್ನು ಕೊಡಲೊಪ್ಪಿದನು[11]. ಅನಂತರ ಆಳುಪರ ಅರಸನನ್ನು ಕಂಡು ಅವನಿಂದಲೂ ಸಹಾಯ ವಚನವನ್ನು ಪಡೆದನು. ತಂದೆಯಿರುವಾಗಲೇ ವಿಕ್ರಮಾದಿತ್ಯನು ತನ್ನ ಪರಾಕ್ರಮದಿಂದ ದಕ್ಷಿಣದಲ್ಲೆಲ್ಲ ಪ್ರಸಿದ್ಧನಾಗಿದ್ದನು. ಆದುದರಿಂದ ತನ್ನ ಕಾರ್ಯದಲ್ಲಿ ಕರ್ಣಾಟಕದ ಮಾಂಡಲಿಕ ಅರಸರ ಸಹಾಯ ದೊರೆಯಲು ಅವನಿಗೆ ಬಹಳ ಆಯಾಸವಾಗಲಿಲ್ಲ.

9. ಎ. ಇಂ. ೪—೨೧೫. 10. ಬಿಲ್ಹಣ: ವಿಕ್ರಮಾಂಕ ೫ನೆಯ ಅಧ್ಯಾಯ.
11. ವಿಕ್ರಮಾಂಕ—೫ನೆಯ ಅಧ್ಯಾಯ.

ಇಷ್ಟಾದ ಮೇಲೆ, ಚೋಳರ ಮೇಲೆ ದಂಡೆತ್ತಿ ಹೋಗುವ ಹಾಗೆ ನಟಿಸಿ ತುಂಗಭದ್ರೆಯನ್ನು ದಾಟಿ ಚೋಳ ರಾಜ್ಯದ ಸೀಮೆಯ ಹತ್ತಿರ ದಂಡನೊಡನೆ ಹೋದನು. ಇದುವರೆಗಿನ ವಿಕ್ರಮಾದಿತ್ಯನ ಯುಕ್ತಿ ಯುಕ್ತವಾದ ವರ್ತನವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ ವೀರರಾಜೇಂದ್ರನು ವಿಕ್ರಮಾದಿತ್ಯನೊಡನೆ ಸ್ನೇಹ ಬೆಳೆಯಿಸುವುದೇ ಶ್ರೇಯಸ್ಕರವೆಂದೆಣಿಸಿದನು. ಇದಲ್ಲದೆ ಮತ್ತೊಂದೂ ಕಾರಣ ವಿದ್ದಿತು. ವೆಂಗಿಯ ಅರಸನಾದ ರಾಜೇಂದ್ರಚೋಳನ ತಾಯಿಯೂ ಅಜ್ಜಿಯೂ ಚೋಳ ವಂಶಕ್ಕೆ ಸೇರಿದವರು. ರಾಜೇಂದ್ರನು ಮಹತ್ವಾಕಾಂಕ್ಷಿಯು; ಈಗಾಗಲೆ ಚೋಳರಾಜ್ಯವನ್ನೂ ತನ್ನ ರಾಜ್ಯಕ್ಕೆ ಸೇರಿಸಬೇಕೆಂಬ ಮಹತ್ವಾಕಾಂಕ್ಷೆಯನ್ನು ತೊಟ್ಟಿದ್ದನು. ಅವನಿಂದ ತಾನು ಸುರಕ್ಷಿತವಾಗಿರಬೇಕೆಂದೇ ವೀರರಾಜೇಂದ್ರನು ಕರ್ಣಾಟಕದ ಸಿಂಹಾಸನವನ್ನು ಒಂದಿಲ್ಲೊಂದು ದಿನ ವಿಕ್ರಮಾದಿತ್ಯನು ಅಲಂಕರಿಸುವನೆಂಬ ದೃಢ ಭಾವನೆಯಿಂದ ಅವನೊಡನೆ ಸ್ನೇಹ ಬೆಳಸಿದುದು ಸ್ವಾಭಾವಿಕವು[12]. ಅವನ ಸ್ನೇಹ ವೃತ್ತಿಯ ಕಾರಣಗಳು ಏನೇ ಇದ್ದರೂ ಚೋಳ ರಾಜನಿಂದ ಒಬ್ಬ ಶಾಂತಿ ದೂತನು ಬಂದುದನ್ನು ನೋಡಿ ವಿಕ್ರಮಾದಿತ್ಯನು ಸಮಾಧಾನಪಟ್ಟನು. ಮೊದಲು ತುಂಗಭದ್ರೆಯ ಈಚೆಗೆ ಬಂದು ತನ್ನ ಠಾಣ್ಯವನ್ನಿಡಬೇಕೆಂದೂ ಅನಂತರ ಅಲ್ಲಿಗೆ ಚೋಳರಾಜನು ಬರುವನೆಂದೂ ಚೋಳರಾಜನಿಂದ ಅಪ್ಪಣೆಯನ್ನು ದೂತನು ತಂದಿದ್ದನು. ಈ ಅವಮಾನಕರವಾದ ಸೂಚನೆಗೂ ವಿಕ್ರಮಾದಿತ್ಯನು ಒಪ್ಪಿಗೆಯನ್ನಿತ್ತು ತುಂಗಭದ್ರೆಯ ಈಚೆಗೆ ಬಂದು ಚೋಳರಸನನ್ನು ನಿರೀಕ್ಷಿಸುತ್ತಲಿದ್ದನು. ಚೋಳರಸನಾದ ವೀರರಾಜೇಂದ್ರನು ಬಂದನಂತರ ಅವರವರ ಪ್ರೇಮ ಸಂಭಾಷಣಗಳಾಗಿ ವೀರರಾಜೇಂದ್ರನು ಶ್ರೀ ವಿಕ್ರಮಾದಿತ್ಯನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ತನ್ನ ರಾಜ್ಯಕ್ಕೆ ತೆರಳಿದನು. ಮುಂದೆ ಕೆಲವು ದಿನಗಳಲ್ಲಿಯೇ ವೀರರಾಜೇಂದ್ರನು ಸ್ಮೃತಿಶೇಷನಾದನೆಂದು ವಿಕ್ರಮಾದಿತ್ಯನಿಗೆ ಸುದ್ದಿ ಬಂದಿತು. ವಿಕ್ರಮಾದಿತ್ಯನು ಕೂಡಲೆ ಕಾಂಚಿಗೆ ಹೋಗಿ ವಿಷಮರಾಗಿದ್ದವರನ್ನೆಲ್ಲರನ್ನೂ ಸೋಲಿಸಿ ವೀರರಾಜೇಂದ್ರನ ಹಿರಿಯ ಮಗನಾದ ಪರ ಕೇಸರಿವರ್ಮ ರಾಜೇಂದ್ರನಿಗೆ ಪಟ್ಟಗಟ್ಟಿದನು. ಆದರೆ ಪರಾಕ್ರಮಿಯಾದ ವೆಂಗಿಯ ಅರಸು ರಾಜೇಂದ್ರಚೋಳನು ಚೋಳರಾಜ್ಯವನ್ನಪಹರಿಸುವ ಹೊಂಚಿನಲ್ಲಿಯೇ ಇದ್ದನು. ಸ್ವಲ್ಪ ಕಾಲದಲ್ಲಿಯೇ ಅಧಿರಾಜೇಂದ್ರನು ಕೊಲೆಗಡಿಕರ ಕೊಲೆಗೆ ಆಹುತಿಯಾದನು. ವೆಂಗಿಯ ರಾಜೇಂದ್ರಚೋಳನೂ ಇದೇ ಉತ್ತಮ ಸಂಧಿಯೆಂದೆಣಿಸಿ ಕಾಂಚಿಗೆ ಬಂದು ಚೋಳರ ಸಿಂಹಾಸನವನ್ನೇರಿ ತನ್ನ ಜಯಭೇರಿಯನ್ನು ಹೊಡಿಸಿದನು; ಅವನೊಡನೆ ಕಾದಲು ವಿಕ್ರಮಾದಿತ್ಯನು ಸನ್ನಾಹಮಾಡಿದನು. ರಾಜೇಂದ್ರಚೋಳನು ಸೋಮೇಶ್ವರನ ಸಹಾಯವನ್ನು ಬೇಡಲು, ಇಂದಿಲ್ಲ ನಾಳೆ ತನ್ನನ್ನು ಸಿಂಹಾಸನದಿಂದ ತಳ್ಳಬಹುದಾದ ವಿಕ್ರಮಾದಿತ್ಯನನ್ನು ನಾಶಪಡಿಸಲು ಇದೇ ಯೋಗ್ಯ ಸಂಧಿಯೆಂದು ಸೋಮೇಶ್ವರನು ರಾಜೇಂದ್ರಚೋಳನನ್ನು ಕೂಡಿದನು. ಇರ್ವರ ಸೈನ್ಯಗಳೂ ಒಂದಾಗಿ ವಿಕ್ರಮಾದಿತ್ಯನ ಮೇಲೆ ದಂಡೆತ್ತಿ ಹೋಗಿ

12. ಇಂಡಿಯನ್ ಆಂಟಿಕ್ವೆರಿ, ೪೧—೨೧೭.

ದೊಡ್ಡ ಕಾಳೆಗವಾಗಿ ವಿಕ್ರಮಾದಿತ್ಯನಿಂದ ಪರಾಜಯ ಹೊಂದಿ ಹಿಂದಿರುಗಿದುವು. ಚೋಳರಸನು ಓಡಿಹೋದನು. ಸೋಮೇಶ್ವರನು ಸೆರೆಹಿಡಿಯಲ್ಪಟ್ಟನು. ಮುಂದೆ ಅವನ ಅವಸ್ಥೆಯೇನಾಯಿತೆಂಬುದು ತಿಳಿದಿಲ್ಲ[13]. ವಿಕ್ರಮಾದಿತ್ಯನಿಗೆ ರಾಜ್ಯ ಶ್ರೀಯನ್ನು ತಂದುಕೊಟ್ಟ ಕಾಳೆಗವು ಶ. ೯೯೮ರಲ್ಲಿ ಎಂದರೆ, ಕ್ರಿ. ೧೦೭೬ರಲ್ಲಿ ಆದುದು. ಕೂಡಲೆ ಅವನು ಸಿಂಹಾಸನಾಧಿರೂಢನಾಗಿ ಪಟ್ಟಬಂಧೋತ್ಸವವನ್ನು ನೆರವೇರಿಸಿದನು. ಜಯಸಿಂಹನಿಗೆ ಬನವಾಸಿ ಪನ್ನಿರ್ಛಾಸಿರ ಪ್ರಾಂತದ ಆಧಿಪತ್ಯ ವನ್ನು ಒಪ್ಪಿಸಿದನು. ಪಟ್ಟಕ್ಕೇರಿದ ಕೂಡಲೆ ಎಲ್ಲ ಅರಸರನ್ನೂ ಸೋಲಿಸಿ ಮರಳಿ ಕಲ್ಯಾಣಕ್ಕೆ ಬಂದು ಅಲ್ಲಿಯೇ ಸುಖದಿಂದ ಕಾಲ ಕಳೆಯುತ್ತಿದ್ದನೆಂದು ಬಿಲ್ಹಣ ಕವಿಯು ವರ್ಣಿಸಿದ್ದಾನೆ. ಕೆಲವು ಕಲ್ಬರೆಹಗಳಲ್ಲಿ ವಿಕ್ರಮಾದಿತ್ಯನು ಮರು ವಂಗ ಅಂಗ ಕಲಿಂಗ ಮಗಧ ಗೌಡ ಪಾಂಚಾಲ ನೇಪಾಲ ಬರ್ಬರ ಸೌರಾಷ್ಟ್ರ ವರಾಟ ಲಾಟ ಕರಹಾಟ ಚೇದಿ ಕಾಶ್ಮೀರ ಗುರ್ಜರ ಸಿಂಧು ದ್ರಾವಿಳ ಆಂಧ್ರ ಮಾಳವ ಮತ್ತು ತುರುಷ್ಕರನ್ನು ಗೆದ್ದ ಬಗ್ಗೆ ಅತಿಶಯೋಕ್ತಿ ಪೂರ್ಣವಾದ ವರ್ಣ ನೆಯು ಬಂದಿದೆ[13]. ಆದರೂ ವಿಕ್ರಮಾದಿತ್ಯನು ಇಡೀ ಕರ್ಣಾಟಕವನ್ನೆಲ್ಲ ಸುಖದಿಂದ ಆಳುತ್ತಿದ್ದನೆಂಬುದರಲ್ಲಿ ಏನೂ ಸಂಶಯವಿಲ್ಲ.

ಕೆಲ ಕಾಲದನಂತರ ಕರಹಾಟದ ಶಿಲಾಹಾರ ಅರಸನ ಮಗಳಾದ ಚಂದ್ರ ಲೇಖೆಯ ಸ್ವಯಂವರ ಸಮಾರಂಭವಾಗುವುದೆಂದು ಕೇಳಿ, ಅರಸು ಮಗಳ ಮನಸ್ಸು ತನ್ನನ್ನು ಆಶ್ರಯಿಸಿದೆಯೆಂಬುದನ್ನು ತಿಳಿದು, ವಿಕ್ರಮಾದಿತ್ಯನು ಕರ ಹಾಟಕ್ಕೆ ಹೋದನು. ಅಲ್ಲಿ ಅಯೋಧ್ಯಾ ಚೇದಿ ಕಾನ್ಯಕುಬ್ಜ ಕಲಂಜರ ಗೋಪಾ ಚಲ ಮಾಳವ ಗುರ್ಜರ ಪಾಂಡ್ಯ ಚೋಳ ಮುಂತಾದ ನಾನಾ ದೇಶದ ಶೂರರಾದ ಅರಸರು ಬಂದಿದ್ದರು. ಆದರೂ ಚಂದ್ರಲೇಖೆಯು ವಿಕ್ರಮಾದಿತ್ಯನನ್ನೇ ವರಿಸಿದಳು. ಆಕೆಯೊಡನೆ ಬಹುವಿಧವಾಗಿ ಸುಖದಿಂದ ಕಾಲ ಕಳೆದು ವಿಕ್ರಮಾದಿತ್ಯನು ಅವ ಳೊಡನೆ ಮರಳಿ ಕಲ್ಯಾಣ ನಗರಕ್ಕೆ ಬಂದನು[14].

ಜಯಸಿಂಹ ರಾಜಪುತ್ರನು ಬನವಾಸಿಯನ್ನಾಳುತ್ತಿದ್ದನು[15]. ಸಾಂತಳಿಗೆ ಮತ್ತು ಇಸ್ನೂರು—ಈ ನಾಡುಗಳೂ ಅವನ ಆಧಿಪತ್ಯಕ್ಕೆ ಸೇರಿದ್ದುವು. ಅವನು ಧನುರ್ವಿದ್ಯೆಯಲ್ಲಿ ನಿಪುಣನಿದ್ದನೆಂದೂ ಅವನು ಬಿಟ್ಟ ಬಾಣಗಳು ಬಂದು ಕಡೆ ನಟ್ಟು ಮತ್ತೊಂದು ಕಡೆಗೆ ಪಾರಾಗಿ ಹೋಗುತ್ತಿದ್ದುವೆಂದೂ ವರ್ಣನೆ ಬಂದಿದೆ. ಅವನು ಕೊಂಕಣವನ್ನು ಗೆದ್ದುಕೊಂಡು ತನ್ನಣ್ಣನ ಸಾಮ್ರಾಜ್ಯಕ್ಕೆ ಜೋಡಿಸಿದನು[16]. ಅವನು ಆಳುತ್ತಿದ್ದ ಸೀಮೆಯಲ್ಲಿ ಪುಲಿಗೆರೆ ಬೆಳ್ವುವಲ್ಲೆ ಕಸವಲನ್ ಬನವಸೆ ನಾಡು ಮತ್ತು ಬೆಳ್ವೊಲ—ಇವೆಲ್ಲವೂ ಸಮಾವಿಷ್ಟವಾಗಿದ್ದುವು. ಬಲದೇವನೆಂಬವನನ್ನು ಬನವಾಸೆ ನಾಡಿನ ಮತ್ತು ೧೮ ಅಗ್ರಹಾರಗಳ ಆಳಿಕೆಯಲ್ಲಿ ಸಹಾಯಕನೆಂದೂ ಬಲಿಪುರದ ಸುಂಕವೆಗ್ಗಡೆಯೆಂದೂ ನೇಮಿಸಿಕೊಂಡಿದ್ದನು[17]. ಈ ರೀತಿಯಿಂದ

13. ಬಿಲ್ಹಣಃ ವಿಕ್ರಮಾಂಕ, ೫ನೆಯ ಅಧ್ಯಾಯ. 14. ವಿಕ್ರಮಾಂಕ, ೭–೮ ಅಧ್ಯಾಯಗಳು.
15. ಎ. ಕಾ. ಶಿಕಾರಿಪುರ, ೨೯೭ನೆಯ ಶಾಸನ. 16. ಎ. ಕಾ. ೭. ಶಿಕಾರಿಪುರ, ೧೦೭ನೆಯ ಶಾಸನ.
17. ಎ. ಕಾ. ೭. ಶಿಕಾರಿಪುರ, ೨೯೭ನೆಯ ಶಾಸನ.

ಜಯಸಿಂಹನು ಸಮರ್ಥನೂ ಯುಕ್ತಿಯುತನೂ ಆಗಿದ್ದನು. ಈ ಸಾಮರ್ಥ್ಯದ ಮದದಿಂದ ತಲೆದಿರುಗಿದವನಾಗಿ ವಿಕ್ರಮಾದಿತ್ಯನಿಗೆ ವಿರುದ್ಧ ಬಂಡಾಯ ಹೂಡಿ ನಾಶ ಹೊಂದಿದನು. ಅದೆಂತೆಂದರೆ :—

ವಿಕ್ರಮಾದಿತ್ಯನು ಚಂದಲದೇವಿಯೊಡನೆ ಕಲ್ಯಾಣಕ್ಕೆ ಬಂದನಂತರ ಒಂದು ದಿನ ಒಬ್ಬ ರಹಸ್ಯಚಾರನು ಬಂದು ಜಯಸಿಂಹನು ಸಾಮ್ರಾಜ್ಯದ ವಿರುದ್ಧವಾಗಿ ಪಾಳಿ ಹೂಡುವುದರಲ್ಲಿ ತೊಡಗಿದ್ದಾನೆಂದೂ ಅನ್ಯಾಯದಿಂದ ತೆರಿಗೆಯೆಬ್ಬಿಸಿ ಧನ ಸಂಚಯವನ್ನು ಮಾಡಿದ್ದಾನೆಂದೂ ಅಡವಿಯ ಪುಂಡರನ್ನು ಕೂಡಹಾಕಿದ್ದಾನೆಂದೂ ಮೇಲಿಂದ ಮೇಲೆ ದ್ರಾವಿಡ ಅರಸನನ್ನು ತನ್ನವನನ್ನಾಗಿ ಮಾಡಿಕೊಳ್ಳುವ ಪ್ರಯತ್ನದಲ್ಲಿದ್ದಾನೆಂದೂ ವಿಕ್ರಮಾದಿತ್ಯನಿಗೆ ತಿಳುಹಿದನು. ಅವನ ಮುಖ್ಯಾಧಾರವೆಂದರೆ ವಿಕ್ರಮಾದಿತ್ಯನೇ ಪ್ರೀತಿಯ ಕಾಣಿಕೆಯಾಗಿ ಸಮರ್ಪಿಸಿದ ಮದದಾನೆಗಳು. ಈ ಸಂಗತಿಗಳೆಲ್ಲವನ್ನೂ ತಿಳಿದು ವಿಕ್ರಮಾದಿತ್ಯನು ಖಿನ್ನ ಮನಸ್ಕನಾಗಿ ಏನು ಮಾಡಬೇಕೆಂಬುದನ್ನು ತಿಳಿಯದಾದನು[18]. ಶಾಂತಿ ಸಂಧಾನದ ಎಲ್ಲ ಮಾರ್ಗಗಳನ್ನನುಸರಿಸಿದರೂ ಜಯಸಿಂಹನು ಹಾದಿಗೆ ಬರಲೊಲ್ಲನು. ಕಡೆಗೆ ವಿಕ್ರಮಾದಿತ್ಯನು ಯುದ್ಧಕ್ಕೆ ಸನ್ನದ್ಧನಾಗಿ ಕೃಷ್ಣವೇಣಿಯ ದಂಡೆಗೆ ಬಂದಿಳಿದನು. ಜಯಸಿಂಹನೂ ಕೆಲ ಮಾಂಡಲಿಕರೊಂದಿಗೆ ಬಂದು ಸಮ್ಮುಖನಾಗಿ ಇಳಿದುಕೊಂಡನು. ಅವರ ಸೈನ್ಯಗಳ ನಡುವೆ ಭಯಂಕರ ಕಾಳೆಗವಾಯಿತು. ಮೊದಮೊದಲು ಜಯಸಿಂಹನ ಮದದಾನೆಗಳು ಮುಂದಾಗಿ ಅವನಿಗೆ ವಿಜಯಶ್ರೀಯು ಮಾಲೆಯನ್ನು ಹಾಕುವಂತೆ ತೋರಿತು. ಆ ಕಾಲಕ್ಕೆ ವಿಕ್ರಮಾದಿತ್ಯನು ತಾನೇ ಜೀವದ ಹಂಗು ದೊರೆದು ಹೋರಾಡಿ[19], ಎಲ್ಲರನ್ನೂ ಹುರಿದುಂಬಿಸಿ ಎಂದಿನಂತೆ ಜಯಹೊಂದಿದನು. ಜಯಸಿಂಹನ ಸೈನ್ಯವೆಲ್ಲ ಪರಾಜಿತವಾಗಿ ದಿಕ್ಕು ದಿಕ್ಕಿಗೆ ಓಡಿಹೋಯಿತು. ಜಯಸಿಂಹನನ್ನು ಸೆರೆ ಹಿಡಿದು ತಂದರು. ಆದರೆ ಅವನನ್ನು ಕ್ರೂರತ್ವದಿಂದ ಪೀಡಿಸದೆ ವಿಕ್ರಮಾದಿತ್ಯನು ಅವನ ತಪ್ಪುಗಳನ್ನು ಕ್ಷಮಿಸಿ ಎಂದಿನಂತೆ ಪ್ರೇಮದಿಂದ ನಡಿಸಿಕೊಂಡನು.

ಇಂತು, ತನ್ನ ಪರಾಕ್ರಮದಿಂದ ಕರ್ಣಾಟಕ ಸಾಮ್ರಾಜ್ಯವನ್ನು ಸ್ಥಿರೀಕರಿಸಿ ತಾನು ಬೆಳಸಿದ ವೈಭವದ ಸಾತ್ವಿಕಾಭಿಮಾನದಿಂದ ವಿಕ್ರಮಾದಿತ್ಯನು ತನ್ನ ಹೆಸರಿನಲ್ಲಿ ಒಂದು ಹೊಸ ವರುಷವನ್ನು ಪ್ರಾರಂಭಿಸಿದನು. ಅದಕ್ಕೆ ಚಾಲುಕ್ಯ

18. ವಿಕ್ರಮಾಂಕ, ೧೪–೨೧.

19. 'ವಿಕ್ರಮಾಂಕ'ದಲ್ಲಿಯ ವರ್ಣನೆ—

ಪುಲಕಪ್ರಣಯೀ ಕಪೋಲಯೋರಥ ಚಾಲುಕ್ಯ ನೃಪಃ ಪ್ರಕಾಶಯನ್ |
ಉದತಿಷ್ಠದಪಾರ ಪೌರುಷಃ ಸ್ವಯಮುದ್ದಾಮ ಮದೇನ ದಂತಿನಾ || ([illegible])
ದಲಯನ್ರಿಪು ಕೀರ್ತಿ ಕಂದಲೀಂ ರಣ ಲೀಲಾ ಸರಸೀ ಮೃಣಾಲಿಕಾಂ |
ಕರಿ ಮೇಘ ಘಟಾಸ್ತ್ವ ಪಾಟಯನ್ನತನೋದದ್ಭುತ ರಾಜ ಹಂಸತಾಂ || ೫೯ ||
ರಿಪು ವಾರಣ ಕುಂಭ ಮಂಡಲೀಂ ಪ್ರಹರನ್ನಿರ್ಗಹನಃ ಕ್ಷಮಾಪತಿಃ |
ಪ್ರಮದಾ ಘನ ಪೀವರ ಸ್ತನ ಸ್ಮರಣ ಸ್ಮೇರ ಮುಖೋ ಬಭೂವ ಸಃ || ೬೦ ||
ನ ಸ ಕೋಽಪಿ ಕಠೋರ ಪಾಟವಃ ಪ್ರತಿಭೂಭೃತ್ಸು ಬಕೇ ಭಟೋಽಭವತ್ |
ರಣ ವರ್ಣ ಕ್ಷತಾಭಿಭಾಷಣಃ ಕ್ಷಮಮಸ್ಯಾಭಿಮುಖೋ ಬಭೂವ ಯಃ || ೬೧ ||

ವಿಕ್ರಮ ವರುಷವೆಂದು ಹೆಸರು ಕೊಟ್ಟನು. ಆ ಪ್ರತಾಪಶಾಲಿಯ ಆಳಿಕೆಯಲ್ಲಿಯ ಎಲ್ಲ ಬರೆಹಗಳೂ ಬಹುಶಃ ಈ ವರುಷವನ್ನು ಉಲ್ಲೇಖಿಸುತ್ತವೆ; ಮತ್ತು ಈ ಹೊಸ ಕಾಲಗಣನೆಯ ಪದ್ಧತಿಯನ್ನನುಲಕ್ಷಿಸಿ ಆ ಚಕ್ರವರ್ತಿಯ ಪ್ರಜೆಗಳಾದರೂ ಆನಂದೋದ್ಗಾರಗಳನ್ನು ಬರೆಹಗಳಲ್ಲಿ ಅಭಿಮಾನಪೂರ್ವಕವಾಗಿ ವ್ಯಕ್ತಪಡಿಸಿದ್ದಾರೆ. ನಿಜಾಮ ದೇಶದ ಸುರಪುರ ಇಲಾಖೆಯಲ್ಲಿ ಎಡರಾವೆ ಹಳ್ಳಿಯ ಒಂದು ಕಲ್ಬರೆಹದಲ್ಲಿ—

> ಆಹವದೇವನ ಮಗಂ ಸೋಮೇಶ್ವರೋರ್ವೀಶ್ವರಂಗನುಜಂ ವಿಕ್ರಮ ಚಕ್ರಿ ಚಕ್ರಧರ ರೂಪಂ ವಿಕ್ರಮಾದಿತ್ಯಂ ನಂದ ನರೇಂದ್ರರ್ಕಲ ತೇಜಂ ಅಡ್ಡಿಹದು ಯಿನ್ನಾಕೆಂದ ತನ್ನ ಆನೆಗೊಸನೆಯಾಗಲ್ ಶಕನಾಮಮಂ ಕಳೆದು ಚಾಲುಕ್ಯಾಂಕಮಂ ಮಾಡಿದಂ.

ಇಂತು ಪ್ರೌಢೋದ್ಗಾರಗಳು ಬಂದಿವೆ. ಅದರಂತೆಯೇ ಗದುಗಿನ ವೀರನಾರಾಯಣನ ಗುಡಿಯಲ್ಲಿಯ ಕಲ್ಬರೆಹದಲ್ಲಿಯೂ—

> ಬಲ್ಲಾತನದಿಂ ರಿಪು ನೃಪರೆಲ್ಲರಂ ಏಕಾಂಗದಿಂ ಒರಗಿಸಿ ಧರಣೀವಲ್ಲಭಮಾದಂ ತ್ರಿಭುವನಮಲ್ಲಂ ಚಾಲುಕ್ಯ ವಿಕ್ರಮಾದಿತ್ಯ ನೃಪಂ ಎಸೆವ ಶಕ ವರುಷಮಂ ಮಾಣಿಸಿ ವಿಕ್ರಮ ವರುಷಮೆಂದು ತನ್ನಯ ಪೆಸರಂ ವಸುಮತಿಗೆ ನೆಗಳ್ಚಿದಂ ಸಾಹಸಿಕಂ ಜಗದೇಕ ದಾನಿ ಧರ್ಮವಿನೋದಂ.

ಎಂದು ಧನ್ಯ ವಚನಗಳು ಬರೆದಿವೆ[20]. ಒಂದು ಕಾಲಕ್ಕೆ ಕರ್ಣಾಟಕದ ವೈಭವದ ನಿದರ್ಶನೆಗೆಂದು ಪ್ರಾರಂಭಿಸಿದ ಕಾಲಗಣನೆಯನ್ನು ಕನ್ನಡಿಗರು ಮತ್ತೆ ಪ್ರಾರಂಭಿಸಬೇಕು[21].

ವಿಕ್ರಮಾದಿತ್ಯನ ಒಂಭತ್ತು ಮಂದಿ ಅರಸಿಯರು ಕಲ್ಬರೆಹಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ[22]. ಅವರ ಹೆಸರುಗಳಿಂತು: ಸಾವಳದೇವಿಯರು ತಮ್ಮ ಅಂಗಭೋಗಕ್ಕೆಂದರ್ಪಿಸಿದ ಸರೆಯಂಗಲಗ್ರಹಾರವನ್ನು ಕ್ರಿ. ೧೦೭೭–೭೮ರಲ್ಲಿ ಆಳುತ್ತಿದ್ದರು. ಲಕ್ಷ್ಮಾದೇವಿಯರು ಪಿರಿಯರಸಿಯೆಂದು ಸಂಬೋಧಿಸಲ್ಪಟ್ಟಿದ್ದಾರೆ—೧೦೯೫–೯೬ರಲ್ಲಿ ಧರ್ಮಪುರವನ್ನು 'ಪದಿನೆಂಟಗ್ರಹಾರಮುಮಂ' ಆಳುತ್ತಿದ್ದರು[23]. ಜಕ್ಕಲದೇವಿಯರು ಇಂಗುಣಿಗೆ ಗ್ರಾಮವನ್ನು ತ್ರಿಭೋಗ್ಯಾಂತರ

20. ಇಂ. ಆಂ., ೮–೮೭.
21. ಮೊನ್ನಿನ ಫಾಲ್ಗುಣ ಶು. ೫ಯ ದಿನ ಧಾರವಾಡ ಕರ್ಣಾಟಕ ಹೈಸ್ಕೂಲಿನಲ್ಲಿ ಪಟ್ಟಬಂಧ ತಿಥಿಯ ಉತ್ಸವವು ಜರುಗಿಸಲ್ಪಟ್ಟುದು ಆನಂದಕರವಾದ ಸಂಗತಿ.
22. ಫ್ಲೀಟರ ಕನ್ನಡ ಜಲ್ಲೆಗಳ ರಾಜ ವಂಶಗಳು—(Dynasties of the Kanarese Districts of the Bombay Presidency), ಪು. ೪೪೮.
23. ಇಂ.ಆಂ., ೧೦-೧೮೫ "ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ರಾಜಾಧಿರಾಜ ಪರಮೇಶ್ವರಂ ಪರಮ ಭಟ್ಟಾರಕಂ ಸತ್ಯಾಶ್ರಯ ಕುಲ ತಿಳಕಂ ಚಾಲುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರ ಫಲ ಭೋಗ ಭಾಗಿನಿ ದ್ವಿತೀಯ ಲಕ್ಷ್ಮೀಸಮಾನೆ ಪರಿವಾರ ಸಿಘಾನೆ ದಾನ ಚಿಂತಾಮಣಿ ಸಮಸ್ತಾಂತಃಪುರ ಪ್ರಮುಖ ಮಂಡನೆ ಶ್ರೀ ತ್ರಿಭುವನಮಲ್ಲದೇವ ವಿಶಾಲ ವಕ್ಷಃಸ್ಥಲ ನಿವಾಸಿನಿಯರಪ್ಪ ಶ್ರೀಮತ್ಪಿರಿಯರಸಿ ಲಕ್ಷ್ಮಾದೇವಿಯರು ಪದಿನೆಂಟಗ್ರಹಾರಮುಮಂ ಧರ್ಮಪುರಮಂ ಆಳ್ದು ಸುಖ ಸಂಕಥಾ ವಿನೋದದಿಂ ರಾಜ್ಯಂ ಗೆಯ್ಯುತ್ತಮಿರೆ."

ಸಿದ್ಧಿಯಂತೆ ಆಳುತ್ತಿದ್ದರು. ಮಲಯಮತಿ ದೇವಿಯರು ಕ್ರಿ. ೧೦೯೪–೯೫ ರಲ್ಲಿ ಕಿರಿಯ ಕೆರೆಯೂರಗ್ರಹಾರವನ್ನು ಆಳುತ್ತಿದ್ದರು. ಪಿರಿಯರಸಿ ಚಂದಲ ದೇವಿಯರು (ಜಯಕರ್ಣನ ತಾಯಿ) ಕರಹಾಟ ಅರಸುಮನೆತನದವರು. ಶಾನು ಭೋಗ ರಾಯಣನ ಮಗಳಾದ ಮಾಳಲದೇವಿಯರು ಅರಸಿಯ ಶ್ರೇಷ್ಠಪದವಿ ಯನ್ನು ಹೊಂದಿದ್ದರು. ಬಳ್ಳಾರಿ ಜಿಲ್ಲೆಯ ಆದವಾನಿ ತಾಲೂಕಿನಲ್ಲಿಯ ಒಂದು ಶಾಸನದಲ್ಲಿ ಪೂತದೇವಿಯರ ಹೆಸರು ಬಂದಿದೆ[24]. ಹಡಗಲ್ಲಿ ತಾಲೂಕಿನ ಇನ್ನೊಂದು ಶಾಸನದಲ್ಲಿ ೨೦೦ ಮಹಾಜನರ ಬಿನ್ನಹವನ್ನನುಸರಿಸಿ ಪದ್ಮಲ ದೇವಿಯರು ತಮ್ಮ ಕೈಕೆಳಗಣ ಅಧಿಕಾರಿಯಾದ ಪಲಿಯಮ್ಮನಾಯಕನಿಗೆ ಹೇಳಿ ದೇವಸ್ಥಾನಕ್ಕೆ ಕೆಲ ಭೂಮಿಯನ್ನು ದಾನಮಾಡಿದರೆಂದು ಕಂಡುಬಂದಿದೆ. ಈಚೆಗೆ ಪ್ರಸಿದ್ಧವಾದ ಒಂದು ಶಾಸನದಲ್ಲಿ ತ್ರಿಭುವನಮಲ್ಲ ವಿಕ್ರಮಾದಿತ್ಯನ ಅರಸಿಯರಲ್ಲಿ ಒಬ್ಬರಾದ ಪಿರಿಯ ಕೇತಲದೇವಿಯರ ಉಲ್ಲೇಖವು ಬಂದಿದೆ[25]. ಅವರು ಒಳ್ಳೆಯ ವಿದುಷಿಯರೆಂದೂ ಅನೇಕ ಭಾಷೆಗಳಲ್ಲಿ ಪಾರಂಗತೆಯರೆಂದೂ ಅದರಿಂದ ಅವರು ಅಭಿನವ ಸರಸ್ವತಿಯೆಂದು ಪ್ರಸಿದ್ಧರಾಗಿದ್ದರೆಂದೂ ಕಲ್ಬರೆಹ ದಿಂದ ತಿಳಿಯುತ್ತದೆ. ಅವರು ಬಲಕುಂದಿಯ ೩೦೦ ರ ತೆಕ್ಕಕದ್ರು, ೧೨ರಲ್ಲಿಯ ಶಿರಗುಪ್ಪಕೊಳನಾರ, ಮತ್ತು ಇನ್ನೊಂದು ಹಳ್ಳಿಯನ್ನು ಆಳುತ್ತಿದ್ದು ಸಿರು ಗುಪ್ಪೆಯ ಕೇತಲೇಶ್ವರ ಗುಡಿಗಾಗಿ ದಾನಮಾಡಿದರೆಂಬುದೂ ಅದೇ ಬರೆಹದಿಂದ ಸ್ಪಷ್ಟವಾಗುತ್ತಿದೆ.

ಚಾಲುಕ್ಯ ವಿಕ್ರಮಾದಿತ್ಯನ ಮುಖ್ಯ ಸಹಾಯಕರಲ್ಲಿ ಕೆಲವರನ್ನು ಮಾತ್ರ ನಿರ್ದೇಶಿಸುವುದು ಶಕ್ಯವಿದೆ. ಕ್ರಿ. ೧೦೭೭ರಲ್ಲಿ ರವಿದೇವನು ಮುಖ್ಯ ಪ್ರಧಾನ ರಲ್ಲಿ ಒಬ್ಬನಾಗಿದ್ದನು. ಅವನ ತಂದೆ ಕೊಪ್ಪಣ್ಣನು ಮುಮ್ಮಡಿ ಜಯಸಿಂಹನ ಕೋಶಾಧ್ಯಕ್ಷನಾಗಿದ್ದನು. ಆಹವಮಲ್ಲ ಸೋಮೇಶ್ವರನು ರವಿದೇವನನ್ನು ಲಾಟ ಸಂಧಿ ವಿಗ್ರಹಿಯೆಂದು ನಿಯಮಿಸಿದ್ದನು. ಅವನ ಹಿರಿಯ ಮಗನಾದ ಸೋಮೇಶ್ವರನು ರವಿದೇವನನ್ನು ಸಂಧಿವಿಗ್ರಹಿಯನ್ನಾಗಿಮಾಡಿದನು. ವಿಕ್ರ ಮಾದಿತ್ಯನು ತನ್ನ ಮುದ್ರಿಕೆಯನ್ನುಪಯೋಗಿಸುವ ಅಧಿಕಾರವನ್ನು ಅವನಿಗೆ ಕೊಟ್ಟನು[26]. ಮಹಾಸಾಮಂತ ದಧಿಯದೇವನು ಅರಸನ ಆಶ್ರಿತನೆಂದು ವರ್ಣಿಸಲ್ಪಟ್ಟಿದ್ದಾನೆ. ಅವನು ಮಹಾರಾಷ್ಟ್ರಕೂಟ ವಂಶದಲ್ಲಿ ಹುಟ್ಟಿದನೆಂದೂ ಬಹುಪರಾಕ್ರಮಿಯಿದ್ದನೆಂದೂ ವರ್ಣಿಸಲ್ಪಟ್ಟಿದ್ದಾನೆ[27]. ಪಲತ ಪಾಂಡ್ಯನೆಂಬ ವನೂ ಅರಸನ ಆಶ್ರಯವನ್ನನುಭವಿಸುತ್ತಿದ್ದನು. ಅವನ ಬಿನ್ನಹದಿಂದಲೇ ಅರಸನು ನೀರ್ಗುಂದ ಹಳ್ಳಿಯನ್ನು ನಾನಾ ದೇಶಾಗತರೂ ನಾನಾ ಗೋತ್ರ ದವರೂ ವೇದ ಪಾರಂಗತರೂ ಆದ ಮುನ್ನೂರು ದ್ರಾವಿಡ ಬ್ರಾಹ್ಮಣರಿಗೆ ದಾನ

24. ಮದ್ರಾಸ ಇಲಾಖೆಯ ಶಿಲಾ ಶಾಸನಗಳು: (Inscriptions of the Madras Presidency) ಬಳ್ಳಾರಿ ೧೦ನೆಯ ಶಾಸನ.

25. Annual Report on South India Epigraphy, 31st. March 1923, Page. 102.

26. ಎ. ಇಂ. ೧೨–೨೭೧. 27. ಎ. ೧೮. ೭–೭೦೫.

ಮಾಡಿ ಕೊಟ್ಟನು[28]. ಪಾಂಡ್ಯ ಕುಲವು ಬಹು ಕಾಲದ ವರೆಗೆ ರಾಜಾಶ್ರಯದಲ್ಲಿದ್ದಿತೆಂಬುದಾಗಿ ತೋರುತ್ತದೆ. ಇದೇ ಪಲತ ಪಾಂಡ್ಯನ ಮೊಮ್ಮಗನಾದ ರಾಯ ಪಾಂಡ್ಯನು ೪೮ನೆಯ ಚಾಲುಕ್ಯ ವಿಕ್ರಮ ವರುಷದಲ್ಲಿ ರಾಜಾಶ್ರಯವನ್ನನುಭವಿಸುತ್ತಿದ್ದನು. ಅವನು ಶ್ರೀಕರಣಾಧಿಪತಿ ಸರ್ವಾಧ್ಯಕ್ಷನಿದ್ದಾಗ ಮೇಲ್ಕಾಣಿಸಿದ ದಾನವನ್ನು ಸ್ಥಿರಪಡಿಸಿ ಕೃಷ್ಣಪಲ್ಲಿಕೆಯೆಂಬ ಇನ್ನೊಂದು ಹಳ್ಳಿಯನ್ನು ದ್ರಾವಿಡ ಬ್ರಾಹ್ಮಣರಿಗೆ ಸಮರ್ಪಿಸುವುದಕ್ಕೆ ಅರಸನ ಅನುಜ್ಞೆಯನ್ನು ಪಡೆದನು[29]. ದಂಡನಾಯಕ ಮಹಾದೇವನೆಂಬವನು ಆಗಿನ ಪ್ರಸಿದ್ಧ ಪುರುಷರಲ್ಲಿನ್ನೊಬ್ಬನು. ಅವನು ಬೆಳ್ವೊಲ ನಾಡನ್ನಾಳುತ್ತಿದ್ದನು. ಅವನಿಗೆ ಕೇತಲ ದೇವಿ, ಮಲ್ಲಿಕಾ ದೇವಿ, ಪಂಪಲ ದೇವಿಯೆಂದು ಮೂವರು ಹೆಂಡಿರು. ಇಟಗಿಯು ತನ್ನ ಜನ್ಮಸ್ಥಾನವೆಂದು ಅಲ್ಲಿ ಮಹಾದೇವೇಶ್ವರನ ಗುಡಿಯನ್ನು ಕಟ್ಟಿಸಿ ಅಲ್ಲಿಯ ಎಲ್ಲ ವ್ಯವಸ್ಥೆಗಾಗಿ ಸಾಕಾಗುವಷ್ಟು ಭೂಮಿಯನ್ನು ಉಂಬಳಿ ಹಾಕಿ ಕೊಟ್ಟನು. ಅವನು ದಂಡನಾಯಕನಾಗಿದ್ದನಲ್ಲದೆ, ಮಹಾಪ್ರಧಾನನೂ ಕನ್ನಡ ಸಂಧಿ ವಿಗ್ರಹಿಯೂ ಇದ್ದನು. ಅವನಿಗೆ ಮಹಾಸಾಮಂತಾಧಿಪತಿಯೆಂಬ ಬಿರುದೂ ಪಂಚ ಮಹಾಶಬ್ದಗಳ ಮಾನವೂ ಸಲ್ಲುತ್ತಿದ್ದಿತು[30].

ಶ್ರೀ ವಿಕ್ರಮಾದಿತ್ಯನ ಆಳಿಕೆಯಲ್ಲಿ ಬನವಾಸಿ ಪ್ರಾಂತವು ಅನೇಕರ ಆಧಿಪತ್ಯಕ್ಕೆ ಒಳಗಾಯಿತು. ಅರಸೊತ್ತಿಗೆಯ ಮೊದಲನೆಯ ವರುಷವಾದ ೧೦೭೭ರಲ್ಲಿ ಬಮ್ಮದೇವರಸನು ಬನವಾಸೆ ಸಾಂತಳಿಗೆ ಮತ್ತು ಪದಿನೆಂಟಗ್ರಹಾರಗಳಿಗೆ ಒಡೆಯನಾಗಿದ್ದನು. ವಿಕ್ರಮಾದಿತ್ಯನು ಕಟ್ಟಿಸಿದ ಬಳಗಾವಿಯ ಪೆರ್ಮಾಡಿ ಬಸದಿಗೆ ಬಮ್ಮದೇವರಸನು ಒಂದು ಗ್ರಾಮವನ್ನು ಉಂಬಳಿಹಾಕಿ ಕೊಟ್ಟನು[31]. ಕ್ರಿ. ೧೦೮೦ರಲ್ಲಿ ಬನವಾಸಿ ಪ್ರಾಂತವು ವಿಕ್ರಮಾದಿತ್ಯನ ತಮ್ಮನಾದ ಜಯಸಿಂಹನ ಆಳಿಕೆಯಲ್ಲಿದ್ದಿತು[32]. ಕ್ರಿ. ೧೦೯೮ರಲ್ಲಿ ಅದೇ ಭಾಗವನ್ನು ಪದ್ಮನಾಭಯ್ಯನು ಆಳುತ್ತಿದ್ದನು[33]. ಕ್ರಿ. ೧೧೦೩ರಲ್ಲಿ ಬನವಾಸಿಯು ಪ್ರಸಿದ್ಧ ದಂಡನಾಯಕನಾದ ಅನಂತಪಾಲಯ್ಯನ ಜೀಗನಾದ ಗೋವಿಂದರಸನಿಗೆ ಅಧೀನವಾಗಿದ್ದಿತು[34]. ಕ್ರಿ. ೧೧೨೩ರಲ್ಲಿ ರಾಮಯ್ಯನೆಂಬವನು ಆಳುತ್ತಿದ್ದನು[35].

ವಿಕ್ರಮಾದಿತ್ಯನ ಕಾಲದ ಇನ್ನೊಬ್ಬ ಪ್ರಸಿದ್ಧ ಪುರುಷನೆಂದರೆ, ಮಹಾಪ್ರಚಂಡನಾಯಕ ಅನಂತಪಾಲನು. ಅವನ ಆಜ್ಞೆಯಿಂದಲೇ ನಾರಸಿಂಗನ ಜೇಗೂರ ಗ್ರಾಮದ ವಿಷ್ಣುದೇವಾಲಯಕ್ಕಾಗಿ ಬನವಾಸೆಯ ಪಡ್ಡರಾವುಳ ಸುಂಕ ವೆಗ್ಗಡೆಯು ಕೆಲ ಸುಂಕವನ್ನು ಬಿಟ್ಟುಕೊಟ್ಟನು[36]. ಅನಂತಪಾಲಯ್ಯನು ಕ್ರಿ. ೧೧೧೮ರ ವರೆಗೆ ಅಧಿಕಾರದಲ್ಲಿದ್ದನು. ವಿಕ್ರಮಾದಿತ್ಯನ ಸಾಮಂತರಲ್ಲಿ ಕೊಂಕಣ ಒಂಬಯ್ನೂರನ್ನೂ ಪಲಸಿ ಪನ್ನಿರಡು ಸಾವಿರವನ್ನೂ ಕವಟೀ ದ್ವೀಪ

28. ಎ. ಇಂ. ೧೨–೧೪೫. 29. ಎ. ಇಂ. ೧೨.೧೪೬. 30. ಎ. ಇಂ. ೧೩–೩೯.
31 ಎ. ಕಾ., ಶಿಕಾರಿಪುರ ೧೨೪. 32 ಎ. ಕಾ., ಶಿಕಾರಿಪುರ, ೨೯೩. 33 ಎ. ಕಾ., ೭, ಶಿಕಾರಿಪುರ, ೧೦೫. 34 ಎ. ಕಾ., ಶಿಕಾರಿಪುರ, ೩೧ 35 ಎ. ಕಾ., ೭, ಶಿಕಾರಿಪುರ, ೩೧.
36 ಎ. ಕಾ., ಶಿಕಾರಿಪುರ, ೩೧.

ವನ್ನೂ ಆಳುತ್ತಿದ್ದ ಕದಂಬ ಕುಲತಿಲಕನಾದ ಜಯಕೇಶಿ ಮುಖ್ಯನು. ಅವನ ಪರಾಕ್ರಮಕ್ಕೆ ಮೆಚ್ಚಿ ವಿಕ್ರಮಾದಿತ್ಯನು ಅವನಿಗೆ ತನ್ನ ಮಗಳಾದ ಮೈಳಲದೇವಿಯನ್ನು ಮದುವೆ ಮಾಡಿಕೊಟ್ಟನು[37].

ಶ್ರೀ ತ್ರಿಭುವನಮಲ್ಲ ವಿಕ್ರಮಾದಿತ್ಯನು ಮಹಾ ಪರಾಕ್ರಮಿಯೂ ವಿದ್ಯಾಪಕ್ಷಪಾತಿಯೂ ಇದ್ದನೆಂದು ಬಿಲ್ಹಣನು ವರ್ಣಿಸಿದ್ದಾನೆ. ಆ ವರ್ಣನೆಯು ಅಕ್ಷರಶಃ ಸಾರ್ಥವಿದೆಯೆಂದು ಹೇಳಲು ಪ್ರತ್ಯವಾಯವಿಲ್ಲ. ತನ್ನ ಬಾಹು ಬಲದಿಂದಲೂ ಅಸಾಮಾನ್ಯ ಬುದ್ಧಿಶಕ್ತಿಯಿಂದಲೂ ಕರ್ಣಾಟಕ ಸಾಮ್ರಾಜ್ಯವನ್ನು ವಿಸ್ತರಿಸಿ ಸ್ಥಿರಪಡಿಸಿ ೫೦ ವರುಷ ನಿರಾತಂಕನಾಗಿ ಆಳಿದ ಈ ಅತುಲ ಪರಾಕ್ರಮಿ ನೃಪಶ್ರೇಷ್ಠನು ವಿದ್ಯಾವಂತರಿಗೆ ಆಶ್ರಯಕೊಟ್ಟು ಆದರಿಸುತ್ತಿದ್ದನು. ಇವನ ರಾಜ್ಯದಲ್ಲಿಯ ಅನೇಕ ಕವಿಗಳಲ್ಲಿ ಒಬ್ಬನಾದ ಗೊಬ್ಬೂರಿನ ಮಲ್ಲಿಕಾರ್ಜುನ ಭಟ್ಟನ ವರ್ಣನೆಯು ಒಂದು ಕಲ್ಬರೆಹದಲ್ಲಿ ಬಂದಿದೆ. ಈ ಕವಿಯ ಅಗಾಧ ಸ್ಮೃತಿ ಸಾಮರ್ಥ್ಯದಿಂದ ಬೆರಗಾಗಿ ಇವನಿಗೆ ಜನರು 'ಅವಧಾರಣಾ ಚಕ್ರವರ್ತಿ'ಯೆಂಬ ಬಿರುದನ್ನು ಸಂತೋಷದಿಂದ ಸಮರ್ಪಿಸಿದ್ದರು[38]. ವಿಕ್ರಮಾದಿತ್ಯದೇವನ ಚರಿತ್ರ ಕರ್ತನಾದ ಬಿಲ್ಹಣ ಕವಿಯು ಆಸ್ಥಾನದಲ್ಲಿ ವಿದ್ಯಾಪತಿಯಾಗಿದ್ದನು. ತಾನು ಬರೆದ 'ವಿಕ್ರಮಾಂಕದೇವ ಚರಿತ' ಕಾವ್ಯದ ಹದಿನೆಂಟನೆಯ ಅಧ್ಯಾಯದಲ್ಲಿ ತನ್ನ ಮಾತೃಭೂಮಿಯಾದ ಕಾಶ್ಮೀರ ದೇಶವನ್ನೂ ಅಲ್ಲಿಯ ಅರಸನನ್ನೂ ತನ್ನ ಕುಲವನ್ನೂ ಆ ಕುಲದಲ್ಲಿ ಮೊದಲಿನಿಂದ ಬೆಳೆದು ಬಂದ ವಿದ್ಯಾಪ್ರಕರ್ಷವನ್ನೂ ವರ್ಣಿಸಿ, ತಾನು ಕರ್ಣಾಟಕಕ್ಕೆ ಹೇಗೆ ಬಂದನೆಂಬುದನ್ನು ವರ್ಣಿಸಿದ್ದಾನೆ. ಕಾಶ್ಮೀರದಲ್ಲಿ ಎಲ್ಲ ಶಾಸ್ತ್ರ ತತ್ತ್ವಗಳನ್ನೂ ಗ್ರಹಿಸಿ ಪ್ರಾಲೇಯಾದ್ರಿಯನ್ನು ದಾಟಿ ವೃಂದಾವನಕ್ಕೆ ಹೋಗಿ ಪ್ರಯಾಗವನ್ನು ನೋಡಿಕೊಂಡು ಗುಜರಾತದಲ್ಲ ಸೋಮನಾಥನನ್ನು ಸಂದರ್ಶಿಸಿ ಕ್ರಮುಕ ದೇಶವನ್ನು ದಾಟಿ ದಕ್ಷಿಣಕ್ಕೆ ಬಂದು ಚಾಲುಕ್ಯೇಂದ್ರನಾದ ವಿಕ್ರಮಾದಿತ್ಯನ ಆಸ್ಥಾನದಲ್ಲಿ ವಿದ್ಯಾಪತಿಯಾದ ಕಾಶ್ಮೀರಕ ಭಟ್ಟ ಶ್ರೀ ಬಿಲ್ಹಣನು ತನ್ನ ಆಶ್ರಯ ದಾತೃವೂ ಮಹಾ ಪರಾಕ್ರಮಿಯೂ ಆದ ಶ್ರೀ ವಿಕ್ರಮಾದಿತ್ಯನ ಚರಿತ್ರೆಯನ್ನು 'ವಿಕ್ರಮಾಂಕ' ಮಹಾಕಾವ್ಯದಲ್ಲಿ ಬಣ್ಣಿಸಿದ್ದಾನೆ. ಆ ಕಾವ್ಯದಿಂದ ಆಗಿನ ಕಾಲದ ಮಹತ್ತ್ವದ ಸಂಗತಿಗಳೂ ತಿಳಿದು ಬಂದಿವೆ. ವಾಙ್ಮಯ ದೃಷ್ಟಿಯಿಂದಲೂ 'ವಿಕ್ರಮಾಂಕ' ಕಾವ್ಯವು ಮೇಲ್ತರಗತಿಯದೆಂದು ರಸಿಕರು ಒಪ್ಪುವರು. ಈ ಕವಿಯು ಆರಂಭದಲ್ಲಿ ತನ್ನ ಆಶ್ರಯ ದಾತೃವಿನ ಮಗಳ ಪ್ರೇಮ ಪಾಶಕ್ಕೆ ಒಳಗಾದನೆಂದೂ ಆ ಸಂಗತಿಯನ್ನು ತಿಳಿದು ವಿಕ್ರಮಾದಿತ್ಯನು ಕೋಪಗೊಂಡು ದೇಹಾಂತ ಪ್ರಾಯಶ್ಚಿತ್ತವನ್ನು ವಿಧಿಸಿದನೆಂದೂ ಕಡೆಗಾಲ ಸಮಾಪಿಸಿ

37. "Journal of the Bombay Branch of the Royal Asiatic Society" IX. p. 279.

38. ಸುತಾಂ ಚಾಲುಕ್ಯ ಮಾಣಿಕ್ಯ ವಿಕ್ರಮಾರ್ಕ ಮಹಿಪತೇಃ|
ಶ್ರೀ ಮೈಲ್ಲಲ ಮಹಾದೇವೀಮುವಾಹ ನೃಪತಿಃ ಸ್ಮತಾಂ||
ಯಾ ಪಾರಿಜಾತ ದ್ರುಮ ವಲ್ಲಭಾಭ್ಯಾಂ ಕಾಂತಿಂ ನಿತಾಂತಂ ಕರಪಲ್ಲವೇನ|
ಪುಷ್ಣಾತಿ ಪುಷ್ಣಾತಿ ಸದರ್ಥಿ ಸಾರ್ಥಂ ಶ್ರೇಯೈವ ದಾನಾಂಬು ಸುಧಾನ್ವಿತೇವ||
ಎ. ಕಾ., ೭, ಶಿಕಾರಿಪುರ, ೯೮-೯೯.

ದಾಗ ತನ್ನ ಪ್ರಿಯೆಯ ವಿಷಯವಾಗಿ ಬಿಲ್ಹಣನು ಚಿಕ್ಕ ಕಾವ್ಯವನ್ನು ರಚಿಸಿದನೆಂದೂ ಒಂದು ಆಖ್ಯಾಯಿಕೆಯನ್ನು ಹೇಳುತ್ತಾರೆ. ಅದಕ್ಕೆ ಪೋಷಕವಾಗುವ ಒಂದು ಚಿಕ್ಕ ಕಾವ್ಯವು ಈಗಲೂ ಉಪಲಬ್ಧವಿದೆ. ಆ ಕಾವ್ಯವನ್ನು ಕೇಳಿ ಸಂತುಷ್ಟನಾಗಿ ಶ್ರೀ ವಿಕ್ರಮಾದಿತ್ಯನು ಆ ಚತುರ ಕವಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಹೋತ್ಸವವನ್ನು ಬೆಳೆಯಿಸಿದನೆಂದು ಹೇಳುತ್ತಾರೆ. ಆದರೆ ಈ ಮಾತಿಗೆ ಕಲ್ಬರೆಹಗಳಲ್ಲಿ ಯಾವ ಪ್ರಮಾಣವೂ ಸಿಕ್ಕುವುದಿಲ್ಲ[39].

ಶ್ರೀ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ಇನ್ನೊಬ್ಬ ಪ್ರಸಿದ್ಧ ಪಂಡಿತನೆಂದರೆ ಯಾಜ್ಞವಲ್ಕ್ಯ ಸ್ಮೃತಿಗೆ 'ಮಿತಾಕ್ಷರಾ' ಟೀಕೆಯನ್ನು ಬರೆದು ಹೆಸರುಗೊಂಡ ಶ್ರೀ ವಿಜ್ಞಾನೇಶ್ವರನು. ಈ ಮಹಾಪಂಡಿತನು ಬರೆದ ಟೀಕೆಯು ಬಂಗಾಲವನ್ನಷ್ಟು ಬಿಟ್ಟು ಇಡೀ ಹಿಂದೂದೇಶದಲ್ಲಿ ಧಾರ್ಮಿಕ ಭೌತಿಕ ವಿಷಯಗಳಲ್ಲಿ ಈಗಲೂ ಗ್ರಾಹ್ಯವೆಂದೆಣಿಸಲ್ಪಡುತ್ತದೆ. ಟೀಕಾತ್ಮಕ ಗ್ರಂಥವಾದ ಮಿತಾಕ್ಷರೆಯಲ್ಲಿ ದಾಯಭಾಗ, ವಿವಾಹ, ದತ್ತಕ ಮುಂತಾದ ವ್ಯವಹಾರದ ವಿಷಯದ ವಿಧಿಗಳು ಈ ಕನ್ನಡಿಗ ಪಂಡಿತನು ಹಾಕಿಕೊಟ್ಟಂತೆಯೇ ಇಂದಿಗೂ ಭರತಖಂಡದ ನ್ಯಾಯಾಲಯದಲ್ಲಿ ಅಬಾಧಿತವಾಗಿ ನಡೆಯುತ್ತಿವೆಯೆಂಬುದು ಯಾವ ಕನ್ನಡಿಗನ ಅಂತಃಕರಣದಲ್ಲಿ ಅಭಿಮಾನವನ್ನು ಹುಟ್ಟಿಸಲಿಕ್ಕಿಲ್ಲ! ಜಗತ್ತಿನಲ್ಲಿ ಕಲ್ಯಾಣದಂತಹ ನಗರವೂ ವಿಕ್ರಮಾಂಕನಂತಹ ಅರಸನೂ ಇದ್ದಿಲ್ಲವೆಂದೂ ಇಲ್ಲವೆಂದೂ ಆಗುವುದಿಲ್ಲವೆಂದೂ ನಿಃಶಂಕವಾಗಿ ವಿಜ್ಞಾನೇಶ್ವರನು ಸಾರಿದ್ದಾನೆ[40]. ಅಂತಹ ನರಪತಿಯ ಸ್ಮರಣೆಯನ್ನು ಪ್ರತಿ ಕನ್ನಡಿಗನೂ ಆಸ್ಥೆಯಿಂದಲೂ ಆದರದಿಂದಲೂ ಅಭಿಮಾನದಿಂದಲೂ ತನ್ನ ಅಂತಃಕರಣದಲ್ಲಿ ದಕ್ಷತೆಯಿಂದ ಸ್ಥಿರೀಕರಿಸುವುದು ಪರಮ ಪೂಜ್ಯ ಕರ್ತವ್ಯವಾಗಿದೆ.

ಶ್ರೀ ವಿಕ್ರಮಾದಿತ್ಯನ ಸಾಮ್ರಾಜ್ಯದಲ್ಲಿ ಅನೇಕ ಮಾಂಡಲಿಕರು ತಮ್ಮ ತಮ್ಮ ಅಧಿಕಾರದ ಮಟ್ಟಿಗೆ ಅಂಶತಃ ಸ್ವತಂತ್ರ ರೀತಿಯಿಂದ ಆಳುತ್ತಿದ್ದರು. ದಕ್ಷಿಣ ಕೊಂಕಣದ ಸಿಲಾಹಾರರು ಗೋವೆಯ ಸುತ್ತಲಿನ ಪ್ರದೇಶವನ್ನೂ ಸಾವಂತವಾಡಿಯನ್ನೂ ರತ್ನಗಿರಿ ಜಿಲ್ಲೆಯ ಪ್ರದೇಶವನ್ನೂ, ಉತ್ತರ ಕೊಂಕಣ ಸಿಲಾಹಾರರು ಕೊಲ್ಹಾಪುರದ ಸುತ್ತಲಿನ ಪ್ರದೇಶವನ್ನೂ, ಕರಹಾಡದ ಸಿಲಾಹಾ

39. ಕಾವ್ಯದ ಮೊದಲಿನ ಶ್ಲೋಕವು—

ಸರ್ವಸ್ವಂ ಗೃಹವರ್ತಿ ಕುಂತಲಪತಿರ್ಗೃಹ್ಣಾತು ತಸ್ಮೈ ಪುನಃ |
ಭಾಂಡಾಗಾರಮಖಂಡಮೇವ ಹೃದಯೇ ಜಾಗರ್ತಿ ಸಾರಸ್ವತಂ ||
ರೇ ಕ್ಷುದ್ರಾಸ್ತ್ಯಜತ ಪ್ರಮೋದಮಚಿರಾದೇಷ್ಯಂತಿ ಮನ್ಮಂದಿರಂ |
ಹೇಲಾನ್ದೋಲಿತ ಕರ್ಣತಾಲ ಕರಟಿಸ್ಕಂಧಾಧಿರೂಢಾಃ ಶ್ರಿಯಃ ||

ಅನಂತರ ಕಾವ್ಯದ ವಿಷಯಕ್ಕೆ ಪ್ರಾರಂಭವಾಗುತ್ತದೆ.—

ಅಯಿ ಹಮುಸಿತಂ ರಾಜದ್ವಾರೇ ಸಮುದ್ರ ರ ಕಂಧರೇ |
ಕುವಲಯ ದಲ ಸ್ನಿಗ್ಧೇ ಮುಗ್ಧೇ ವಿಮುಂಚಸಿ ಲೋಚನೇ ||
ಅಮರ ರಮಣೀ ಲೀಲಾ ವಲ್ಗದ್ವಿಲೋಚನ ವಾಗುರಾ |
ವಿಷಯ ಪತಿತೋ ನ ವ್ಯಾವೃತ್ತಿಂ ಕರಿಷ್ಯತಿ ಬಿಲ್ಹಣಃ ||

40. ನಿಬಂಧದ ಪ್ರಾರಂಭ ಶ್ಲೋಕವನ್ನು ನೋಡಿರಿ.

ರರು ಈಗಿನ ಸಾತಾರಾ ಜಿಲ್ಲೆಯ ದಕ್ಷಿಣ ಭಾಗವನ್ನೂ ಬೆಳಗಾವಿ ಜಿಲ್ಲೆಯ ಉತ್ತರ ಭಾಗವನ್ನೂ ಕೊಲ್ಹಾಪುರವನ್ನೂ ಆಳುತ್ತಿದರು. ಸುವರ್ಣ ಗರುಡವೇ ಸಿಲಾಹಾರರ ಕುರುಹು. ಸವದತ್ತಿಯ ರಟ್ಟರು ಕುಹುಂಡೀ ೩೦೦೦ ಪ್ರದೇಶವನ್ನು ಆಳುತ್ತಿದ್ದರು. ಮುಖ್ಯ ಪಟ್ಟಣವು ಸವದತ್ತಿಯಾಗಿದ್ದರೂ ಈಗ ಅಲ್ಲಿ ಹಳೆಯ ಕುರುಹುಗಳೇನೂ ಉಳಿದಿಲ್ಲ. ರಟ್ಟರು ಆಳುತ್ತಿದ್ದ ಕುಂಡೀ ಪ್ರದೇಶದಲ್ಲಿ ಬೆಳಗಾವಿ ನಾಡಿನ ಕೆಲ ಅಂಶವೂ ಧಾರವಾಡ ನಾಡಿನ ಸ್ವಲ್ಪ ಭಾಗವೂ ಸಮಾವೇಶವಾಗಿದ್ದುವು. ಹಾನಗಲ್ಲಿನ ಕದಂಬರ ವಶಕ್ಕೆ ಆಗಾಗ್ಗೆ ಬನವಾಸೀ ನಾಡೂ ಕೊಡಲ್ಪಡುತ್ತಿದ್ದಿತು. ಗೋವೆಯ ಕದಂಬರು ಗೋವೆಯನ್ನೂ ಧಾರವಾಡ ಬೆಳಗಾವ ನಾಡುಗಳ ಕೆಲವು ಭಾಗಗಳನ್ನೂ ಆಳುತ್ತಿದ್ದರು. ಪಯ್ವೆ ೫೦೦ ಎಂದರೆ, ಈಗಿನ ಕಾರವಾರ ನಾಡು, ಆಗಾಗ ಅವರ ಆಡಳಿತಕ್ಕೆ ಒಳಪಟ್ಟಿದ್ದಿತು. ಗುತ್ತರು ಗುತ್ತವೊಳಲ (ಗುತ್ತಲ) ವಿಷಯವನ್ನು ಎಂದರೆ, ಈಗಿನ ರಾಣೇಬೆನ್ನೂರ ಕರ್ಜಗಿ ತಾಲೂಕುಗಳನ್ನು ಆಳುತ್ತಿದ್ದರು. ಈ ಎಲ್ಲ ಮಾಂಡಲಿಕರೂ ತಮ್ಮ ರಾಜ್ಯದ ಅಂತರ್ವ್ಯವಸ್ಥೆಯ ಮಟ್ಟಿಗೆ ಸ್ವತಂತ್ರರಾಗಿದ್ದರು. ಪ್ರತಿಯೊಂದು ಕುಲಕ್ಕೂ ಪರಂಪರಾಗತವಾದ ಬಿರುದಾವಳಿಯೂ ಕುರುಹುಗಳೂ ಇದ್ದುವು. ಅವರನ್ನು ಪಂಚ ಮಹಾ ಶಬ್ದಗಳಿಂದ ಸತ್ಕರಿಸುತ್ತಿದ್ದರು. ಈ ಚಿಕ್ಕ ಮಾಂಡಲಿಕರ ವಿಷಯಕ್ಕೆ ಇಲ್ಲಿ ವಿಸ್ತಾರವಾಗಿ ಬರೆಯಲು ಶಕ್ಯವಿಲ್ಲ[41].

ಅರಸನ ಮುಖ್ಯಾಧಿಕಾರಿಗಳು ಈ ಪ್ರಕಾರ ನಿರ್ದೇಶಿಸಲ್ಪಟ್ಟಿದ್ದಾರೆ:— ಮಹಾ ಪ್ರಧಾನ, ಅಂತಃಪುರಾಧ್ಯಕ್ಷ, ಕರಿ ತುರಗ ಸಾಹನವೇರ್ಗಡೆ, ಶ್ರೀಕರಣ, ಹಿರೇ ಸಂಧಿ ವಿಗ್ರಹಿ, ಪಸಾಯಿತ, ಸೇನಾಧಿಪತಿ, ಮನೆವೆರ್ಗಡೆ, ಹಡಪವಳ ಮತ್ತು ಕಡಿದ ವೆರ್ಗಡೆ[42]. ದಾನ ಶಾಸನಗಳ ವ್ಯವಸ್ಥೆ ನೋಡುವವನು ಶಾಸನಾಧಿಕಾರಿಯು; ದಾನ ಶಾಸನಗಳನ್ನು ಕೊಡುವುದೂ ಕಾಯುವುದೂ ಅವನ ಕೆಲಸವು. ಅವನಿಗೇ ಶಾಸನಾಧಿಕಾರಿಕಾಕ್ಷ ಪಟಲಿಕನೆಂದು ಇನ್ನೊಂದು ಹೆಸರು[43]. ಶಾಸನಾಧಿಕಾರಿಯ ಅಪ್ಪಣೆಯಿಲ್ಲದೆ ದಾನಾಧಿಕಾರಿಗಳಿಗೆ ದಾನ ಪತ್ರ ಬರೆಯುವ ಅಧಿಕಾರವಿದ್ದಿಲ್ಲ[44]. ಮನೆವೆರ್ಗಡೆಯು ಅರಸನ ಅರಮನೆಯ ವ್ಯವಸ್ಥೆಯನ್ನು ನೋಡಬೇಕಾಗಿದ್ದಂತೆ ಕಾಣುತ್ತದೆ[45]. ಬಾಣಸವೆರ್ಗಡೆಯೆಂಬ ಒಬ್ಬ

41. ಈ ಮಾಂಡಲಿಕ ಅರಸರ ವಿಷಯಕ್ಕೆ ಫ್ಲೀಟರವರ ಗ್ರಂಥದಲ್ಲಿ ಬರೆದಿರುವ ಪ್ರಕರಣವನ್ನು ಓದಿರಿ.

42. ಮದರಾಸ ಪ್ರಭುತ್ವದವರ ಶಾಸನ ವಿಷಯಕ ವರದಿ, ೧೯೨೧. ೧೯೨೦ನೆಯ ಇಸವಿಯ ೪೪೦ ನೆಯ ಬರೆಹವನ್ನು ನೋಡಿರಿ. (Annual Report for Epigraphy, Madras, 1921. Ins. 440 of 1920.)

43. ಇಂ. ಆಂ. ೮—೧೯.

44. ಮಯೇದಂ ಶಾಸನಾಧಿಕಾರಿಕಾಕ್ಷ ಪಟಲಿಕ ಮಹಾ ಪ್ರಚಂಡ ದಂಡನಾಯಕ ಕಾಳಿದಾಸ ಸುತ ವಿಕ್ರಮಾದಿತ್ಯಾನುಮತ್ಯಾ ವತ್ಸಸ ಗೋತ್ರ ಸಾಮವೇದ ಭಟ್ಟವಿಲಾಸೋಪನಾಮಾಚಾರ್ಯ ಸ್ವಾಮಿ ಸೂನುನಾ ಶಾಸ್ತ್ರೀರಭಟ್ಟ ಮಲ್ಲಯ ಪಂಡಿತೇನ ದಾನಾಧಿಕಾರಿಣಾ ಲಿಖಿತಮಿದಂ—
ತ್ರಿಭುವನಮಲ್ಲ ವಿಕ್ರಮಾದಿತ್ಯನ ನೀಲಗುಂದ ತಾಮ್ರಶಾಸನಗಳು.

45. ಕ್ರಿ. ೧೦೭೭ ಮತ್ತು ೧೧೨೪.

ಅಧಿಕಾರಿಯಿದ್ದನು[46]. ಅವನೇನು ಅರಸು ಮನೆತನದ ಅಡಿಗೆ ಮನೆಯ ಮುಖ್ಯಸ್ಥನೋ ಏನೋ ತಿಳಿಯುವುದಿಲ್ಲ. ಲೆಕ್ಕಕ್ಕೆ ಮುಖ್ಯಾಧಿಕಾರಿಯಾಗಿದ್ದವನಿಗೆ ಶ್ರೀಕರಣಾಧಿಕಾರಿಯೆಂದು ಸಂಜ್ಞೆ. ಮತ್ತು ಒಂದೆಡೆಯಲ್ಲಿ ಶ್ರೀಕರಣಾಧಿಪತಿಯೇ ಸರ್ವಾಧ್ಯಕ್ಷನೂ ಆಗಿದ್ದನೆಂದು ಹೇಳಿದೆ[47]. ದಂಡನಾಯಕನೆಂಬ ಅಧಿಕಾರಿಯೂ ಉಲ್ಲೇಖಿಸಲ್ಪಟ್ಟಿದ್ದಾನೆ[48]. ಅವನು ಶಾಂತತಾ ರಕ್ಷಣ ವಿಭಾಗದ ಮುಖ್ಯಸ್ಥನೋ ಇಲ್ಲವೆ, ದಂಡನಾಯಕನೆಂದು ಒಂದು ಸನ್ಮಾನ ದರ್ಶಕ ಬಿರುದು ಆಗಿತ್ತೋ ಖಂಡಿತವಾಗಿ ಹೇಳಲಿಕ್ಕೆ ಬರುವಂತಿಲ್ಲ. ಅರಸನ ಎಷ್ಟೋ ಅಧಿಕಾರಿಗಳಿಗೆ **ಮಹಾಪ್ರಚಂಡ ದಂಡನಾಯಕ**[49], **ಹಿರಿಯದಂಡನಾಯಕ**[50], **ತಡೆಯ ದಂಡನಾಯಕ**[51]—ಮುಂತಾದ ಬಹುಮಾನ ದರ್ಶಕವಾದ ಬಿರುದುಗಳಿದ್ದುವು. ರಾಜ್ಯದ ಸರ್ವಸಾಮಾನ್ಯ ವ್ಯವಸ್ಥೆ ನೋಡುವುದಕ್ಕೆ **ಮಹಾಮಾತ್ಯ**ನೆಂಬ ಅಧಿಕಾರಿಯು ಇದ್ದ ಬಗ್ಗೆ ಉಲ್ಲೇಖವಿದೆ[52]. ಪರ ರಾಷ್ಟ್ರ ವ್ಯವಹಾರಕ್ಕೆ ಮುಖ್ಯಸ್ಥನೆಂದು ಹಿರೇ ಸಂಧಿ ವಿಗ್ರಹಿಯೆಂಬ ಅಧಿಕಾರಿಯು ಇದ್ದನು[53]. ಕರ್ಣಾಟಕಕ್ಕೆ ಕನ್ನಡ ಸಂಧಿ ವಿಗ್ರಹಿಯೂ[54], ಲಾಟ ಎಂದರೆ, ಈಗಿನ ಗುಜರಾಥ ಪ್ರಾಂತಕ್ಕಾಗಿ, ಲಾಟ ಸಂಧಿ ವಿಗ್ರಹಿಯೂ, ಹೀಗೆ ಬೇರೆ ಬೇರೆ ಅಧಿಕಾರಿಗಳಿದ್ದರು[55].

46. 'ಮದ್ರಾಸ ಇಲಾಖೆಯಲ್ಲಿಯ ಶಾಸನಗಳು' (Inscriptions from the Madras Presidency) ಬಳ್ಳಾರಿ ಜಿಲ್ಲೆ, ೧೨೬ನೆಯ ಬರೆಹ.

47. ಪಂಚಶತೇಭ್ಯಃ ಏವ ಬ್ರಾಹ್ಮಣೇಭ್ಯಃ ಚಾಲುಕ್ಯ ವಿಕ್ರಮವರ್ಷೇ ಅಷ್ಟಾಚತ್ವಾರಿಂಶೇ ಅಂಕತೋಽಪಿ (೪೮) ಪ್ರವರ್ತಮಾನ ಕಾಲೇ ಶೋಭಕೃತ್ಸಂವತ್ಸರೇ ಭಾದ್ರಪದ ಶುದ್ಧ ಶ್ರವಣ ದ್ವಾದಶ್ಯಾಂ ಸೋಮವಾರೇ ಬಹೂನಿ ಮಹಾ ದಾನಾನಿ ದತ್ವಾ ತದ್ದಕ್ಷಿಣ ಕಾಲೇ ವೈಜಯಂತೀಪುರ ಸಂವಾಸಿತ ನಿಜ ವಿಜಯ ಸ್ಕಂಧಾವಾರೇ ಶ್ರೀಕರಣಾಧಿಕಾರಿ ಸರ್ವಾಧಿಕಾರಿ ಸರ್ವಾಧ್ಯಕ್ಷ ದ್ರಾವಿಡಾದಿತ್ಯ ಪ್ರೇರಿತ ವಲಿತ ಪಾಂಡ್ಯ ಪೌತ್ರ ರಾಯಪಾಂಡ್ಯ ವಿಜ್ಞಪ್ತ್ಯಾ ಶ್ರೀಮತ್ತ್ರಿಭುವನಮಲ್ಲ ದೇವೇನ ಗ್ರಾಮಃ ಕೃಷ್ಣ ಪಲ್ಲಿಕಾ ಸಮೇತಃ ತೇಭ್ಯಃ ಧಾರಾಪೂರ್ವಕಂ ಶಾಸನೀಕೃತ್ಯ ದತ್ತಃ ||
ತ್ರಿಭುವನಮಲ್ಲನ ನೀಲಗುಂದ ಶಾಸನವು, ಎ. ಇ., ೧೨–೧೫೪.

48. ಮದ್ರಾಸ ಇಲಾಖೆಯ ಶಾಸನಗಳು, ಬಳ್ಳಾರಿ, ೧೨೬.

49. ಎ. ಕಾ. ೮. ಸೊರಬ, ೨೯೯.

50. ಕ. ಜ. ರಾ. ೪೫೭.

51. ಎ. ಇಂ. ೧೨೭೭ ಓಂ ಸ್ವಸ್ತಿ ಶ್ರೀಮಚ್ಚಾಲುಕ್ಯ ವಿಕ್ರಮ ಕಾಲದ ೫ನೆಯ ಪಿಂಗಳ ಸಂವತ್ಸರದ ಭಾದ್ರಪದ ಶುದ್ಧ ೫ ಬೃಹಸ್ಪತಿ ವಾರದಂದು ಶ್ರೀಮನ್ಮಹಾ ಪ್ರಧಾನಂ ತಡೆಯ ದಂಡನಾಯಕಂ ಲಕ್ಷ್ಮಣಯ್ಯಂಗಳ್ ಏಹೂರ ಶ್ರೀಸ್ವಯಂಭೂ ಸೋಮೇಶ್ವರದೇವರ್ಗ್ಗಂ ಬ್ರಾಹ್ಮಣರಿಗಂ ವಾಳ್ವರಿಪುರದ ತಡೆಯಳಾವನೊಡೆಯಂ ದೇವರ ನಂದಾದೀವಿಗೆಗಂ ಬ್ರಾಹ್ಮಣರಿಗಂ ಆಚಂದ್ರಾರ್ಕ ತಾರಂಬರಂ ಬಿಟ್ಟರ್.

52. ಎ.ಇಂ. ೭–೨೫೮ರಿಂದ ೨೬೨ ಪುಟಗಳಲ್ಲಿ ಮುದ್ರಿಸಿದ ಶಾಸನವನ್ನು ನೋಡಿರಿ.

53. ಕ. ಜ. ರಾ. ೪೪೭. 54. ಕ. ಜ. ರಾ. ೪೫೬.

55. ಎ. ಇಂ. ೧೨–೨೮೧, ಏಹೂರ ಶಿಲಾಶಾಸನ ಕ್ರಿ. ೧೦೭೭.

(ರವಿದೇವನು)

ಕಂ|| ಆ ವಿಭುವಾಹವಮಲ್ಲ ಮ|
ಹೀ ವಲ್ಲಭನಲ್ಲಿ ಪಡೆದನುರುತರ ನಿಜ ವಿ ||
ದ್ಯಾ ವಿಭವದಿಂದ ಮೆಚ್ಚಿಸಿ|
ಭೂವಿನುತಂ ಲಾಳ ಸಂಧಿ ವಿಗ್ರಹ ಪದಮಂ || ೮೧ ||

ಹಿರೇ ಸಂಧಿ ವಿಗ್ರಹಿ, ಹಿರೇ ಲಾಟ ಸಂಧಿ ವಿಗ್ರಹಿ [56]—ಇವ್ರುಗಳಲ್ಲಿ ಹಿರೇ ಶಬ್ದದ ಮೇಲಿಂದ ಈ ಸಂಧಿ ವಿಗ್ರಹಿಗಳಲ್ಲಿ ಹಿರಿಯರೂ ಕಿರಿಯರೂ ಎಂಬುದಾಗಿ ತರಗತಿಗಳಿದ್ದುವೆಂದು ಕಂಡುಬರುತ್ತದೆ. ಈ ಪರ ರಾಷ್ಟ್ರ ಮಂತ್ರಿಗಿರುವ ಎಲ್ಲಕ್ಕೂ ದೊಡ್ಡ ಅಧಿಕಾರವೆಂದರೆ, ಅರಸನ ಮುದ್ರಿಕೆಯನ್ನುಪಯೋಗಿಸುವ ಅಧಿಕಾರವು. ರೇವಣ ಭಟ್ಟನ ಮಗನಾದ ರವಿದೇವನು ಜಯಸಿಂಹನಿಂದ ಕೋಶಾಧ್ಯಕ್ಷನಾಗಿಯೂ ಆಹವಮಲ್ಲ ಸೋಮೇಶ್ವರನಿಂದ ಲಾಟ ಸಂಧಿ ವಿಗ್ರಹಿಯಾಗಿಯೂ, ಇಮ್ಮಡಿ ಸೋಮೇಶ್ವರನಿಂದ ಹಿರೇ ಸಂಧಿ ವಿಗ್ರಹಿಯಾಗಿಯೂ ನೇಮಿಸಲ್ಪಟ್ಟು ಕಡೆಗೆ ಚಾಲುಕ್ಯ ವಿಕ್ರಮನಿಂದ ಅರಸನ ಮುದ್ರಿಕೆಯನ್ನುಪಯೋಗಿಸುವ ಅಧಿಕಾರವನ್ನು ಪಡೆದನೆಂದು ಕಲ್ಬರೆಹಗಳಿಂದ ತಿಳಿದಿದೆ[57].

ರಾಜ್ಯ ವಿಭಾಗದ ಮುಖ್ಯಾಧಿಕಾರಿಗಳಿಗೆ ನಾಡುಹೆಗ್ಗಡೆ (ಬನವಾಸಿ ನಾಡು ಹೆಗ್ಗಡೆ) [58], ರಾಷ್ಟ್ರಪತಿ [59], ವಿಷಯಪತಿ ಅಧಿಕಾರಿನ್[60] ಮುಂತಾದ ಸಂಜ್ಞೆಗಳಿದ್ದುವು. ಅವರಿಗೆ ದಂಡನಾಯಕ, ಮಹಾ ಪ್ರಧಾನ, ಹಿರಿಯ ದಂಡನಾಯಕ, ಮಹಾ ಸಾಮಂತ, ಮಹಾ ಮಂಡಲೇಶ್ವರ ಮುಂತಾದ ಬಿರುದುಗಳೂ

---

ಅದಲ್ಲದೆಯುಂ—
ಮ|| ಸ್ರ|| ಪಿರಿದುಂ ಕಾರುಣ್ಯದಿಂದಾ ನರಪತಿ ತನಗೊಲ್ದೀಯೆ ಮುಕ್ಕುಂಡೆಗಂಗಾ|
ಪುರ ಮೇ ಹೂರಿಂಬ ವಿಕ್ಕೂರ್ಗಳನೆ ಪಡೆದು ಸದ್ಭಕ್ತಿಯಿಂದಂ ತದೀಯೋ|
ರ್ವರೆಯುಂ ಕಾಲ್ಗಚ್ಚಿ ಕೊಟ್ಟಂ ದಿನಪ ಶಶಿಧರರ್ನಿಲ್ವಿನಂ ಸರ್ವ ಬಾಧಾ|
ಪರಿಹಾರಂ ಮಾಡಿ ವಿಪ್ರಾವಳಿಗೆ ನಿಜ ಕುಲವ್ಯೋಮ ತಾರಾಧಿನಾಥಂ || ೮೨ ||

ತದನಂತರಂ—
ಕಂ || ಸೇನಾಧಿಪತ್ಯದೊಡನೆ ಮ|
ಹೀ ನಾಥಂ ಹೇರಸಂಧಿವಿಗ್ರಹಪದಮಂ ||
ಶ್ರೀನಿಲಯಂ ಸೋಮೇಶ್ವರ|
ಭೂನಾಥಂ ಕೊಟ್ಟರ್ ರಾಗದಿಂ ಕುಡೆ ಪಡೆದಂ || ೮೩ ||

ತದನಂತರಂ—
ಶ್ರೀ ವಿಕ್ರಮಾಂಕ ನೃಪನಖಿ|
ಲಾವನಿ ಪತಿ ಸಕಲ ರಾಜ್ಯಚಿಹ್ನಂಗಳನೊ ||
ಲ್ದಾವಗವಿತ್ತಂ ತನಗೆನ|
ಲೀವಣ್ಣಿಪೆನಿಂ ತದೀಯ ಮಹಿಮೋನ್ನತಿಯಂ || ೮೪ ||
ಇಂತೆನೆ ಮೂರುಂ ರಾಜ್ಯದೊ|
ಳಂ ತಾಂ ಚಾಲುಕ್ಯ ನೃಪರ್ಗೆ ಕೈಗನ್ನಡಿಯಾ ||
ದಂ ತನ್ನ ಗುಣದಿನಾವನು|
ಮಿಂತೆನಿಸಿದನೊಳನೆ ವಿಪ್ರ ವಂಶ ಪ್ರಭವಂ || ೮೫ ||

56. ಕ. ಜಿ. ರಾ., ೪೮೫.
57. ಮೇಲೆ ೩ಳನೆಯ ಟಿಪ್ಪಣಿಯನ್ನು ನೋಡಿರಿ.
58. ಕ. ಜ. ರಾ. ೪೩೩.
59. 60. ಎ. ಇಂ., ೧೨–೧೫೪.
'ರಾಷ್ಟ್ರಪತಿ ವಿಷಯಪತಿ ಗ್ರಾಮ ಕೂಟಕ ಆಯುಕ್ತಕ ನಿಯುಕ್ತಕಾಧಿಕಾರಿಕ ಮಹತ್ತರಾದೀನ್ ಸಮಾದಿಶತಿ'—
ಇದಲ್ಲದೆ, ಇಂ.ಆಂ.೬–೧೮ ನೋಡಿರಿ. ಇದೇ ಸಂದರ್ಭದಲ್ಲಿ ಮಾನಸೋಲ್ಲಾಸ ೨-೧೫೯.
ಏಕಗ್ರಾಮಪ್ರಭುಂ ಕುರ್ಯಾದ್ದಶಗ್ರಾಮಪ್ರಭುಂ ತಥಾ|
ಗ್ರಾಮಾಣಾಂ ವಿಂಶತೇಃ ಕುರ್ಯಾತ್ತ್ರಭುಂ ಶತಸಹಸ್ರಯೋಃ ||—
ಈ ಶ್ಲೋಕವನ್ನು ನೋಡಿರಿ.

ಇರುತ್ತಿದ್ದವು[61]. ಒಮ್ಮೊಮ್ಮೆ ಮುಖ್ಯಾಧಿಕಾರಿಯು ತನ್ನ ಅಧಿಕಾರವನ್ನು ತನ್ನ ಕೈಕೆಳಗಿನವನಿಗೆ ಒಪ್ಪಿಸುತ್ತಿದ್ದನು. ಮಹಾಪ್ರಧಾನ ದಂಡನಾಯಕ ಪದ್ಮನಾಭಯ್ಯನು ತನ್ನ ಮೇಲಧಿಕಾರಿಯಾದ ಮಹಾಪ್ರಧಾನ ಅಂತಃಪುರಾಧ್ಯಕ್ಷ ಹೇರಿಲಾಟ ಕನ್ನಡ ಸಂಧಿವಿಗ್ರಹಿ ಮನೆವೆರ್ಗಡೆ ದಂಡನಾಯಕ ಭಿವನಯ್ಯನಿಗಾಗಿ ಬನವಾಸಿ ಹನ್ನೆರಡು ಸಾವಿರವನ್ನು ಕ್ರಿ. ೧೦೯೮ರಲ್ಲಿ ಆಳುತ್ತಿದ್ದನು[62]. ಒಬ್ಬನಿಗೆ ಒಂದೇ ವಿಷಯವನ್ನು (ಪ್ರಾಂತವನ್ನು) ಕೊಡಬೇಕೆಂದು ನಿರ್ಬಂಧವಿದ್ದಿಲ್ಲ; ಯೋಗ್ಯತೆಯಿದ್ದಂತೆ ಹೆಚ್ಚು ಪ್ರಾಂತಗಳನ್ನು ಆಳುವ ಅಧಿಕಾರವನ್ನೂ ಒಬ್ಬನಿಗೇ ಕೊಟ್ಟ ಉದಾಹರಣೆಗಳು ಇವೆ. ಮಹಾಪ್ರಧಾನ ಸೇನಾಧಿಪತಿ ಕನ್ನಡ ಸಂಧಿವಿಗ್ರಹಿ ಹಿರಿಯ ದಂಡನಾಯಕ ಬಮ್ಮಣಯ್ಯನು ಬನವಾಸಿ ೧೨೦೦೦ವನ್ನು ಆಳುತ್ತಿದ್ದನು. ಅವನು ಯೋಗ್ಯನೆಂದು ಕಂಡುದರಿಂದ ಅವನಿಗೆ ಹೇರಿಲಾಟ ಕರ್ಣಾಟ ಸಂಧಿವಿಗ್ರಹಿಯ ಅಧಿಕಾರವನ್ನು ಕೊಟ್ಟು ತರ್ದವಾಡಿ ೧೦೦೦, ಪುಲಿಗೆರೆ ೩೦೦, ಬೆಳ್ವೊಲೆ ೩೦೦, ಹಾನಗಲ್ಲ ೫೦೦, ಹಲಸಿಗೆ ೧೨೦೦೦—ಈ ಪ್ರದೇಶಗಳನ್ನೂ ಅವನ ಆಡಳಿತಕ್ಕೆ ಸೇರಿಸಿದರೆಂದು ತಿಳಿದಿದೆ[63]. ವಿಷಯಾಧಿಪತಿಗೆ ಅಧೀನರಾಗಿ ಮುಲಕೀ ವಿಭಾಗದ ವ್ಯವಸ್ಥೆ ಮಾಡಲಿಕ್ಕೆ ಕರಣರು ನೇಮಿಸಲ್ಪಡುತ್ತಿದ್ದರು. ಒಮ್ಮೊಮ್ಮೆ ಈ ಕರಣರಲ್ಲಿ ಮುಖ್ಯಸ್ಥನೇ ಒಂದೊಂದು ರಾಜ್ಯಭಾಗವನ್ನು ಆಳುತ್ತಿದ್ದನು. ಇದಕ್ಕೆ ಪ್ರಮಾಣವೆಂದರೆ ಕರಣರಲ್ಲಿ ಮುಖ್ಯನಾದ ಪೆರ್ಗಡೆ ನಾರಾಯಣಯ್ಯನು ಬನವಾಸಿ ೧೨೦೦೦ ಪ್ರಾಂತವನ್ನು ಕೆಲವು ಕಾಲ ಆಳಿದನು[64].

ಆಗಾಗ್ಗೆ ಉಲ್ಲೇಖಿಸಲ್ಪಡುವ ತೆರಿಗೆಗಳೆಂದರೆ ವಡ್ಡರಾವುಳ[65] ಸುಂಕವೂ, ಪೆರ್ಜುಂಕವೂ[66], ಎರಡು ಬಿಳ್ಕೊಡೆಗಳೂ[67].

[ವಡ್ಡರಾವುಳವೆಂದರೆ ಕಾಳಿನ ಮೇಲಿನ ಸುಂಕವೆಂದು ತೋರುತ್ತದೆ. ವಡ್ಡರಾವುಳ ಸುಂಕದ ಮೇಲಿನ ಮುಖ್ಯಸ್ಥನಿಗೆ ವಡ್ಡರಾವುಳ ಪೆರ್ಗಡೆ[68]ಯೆಂದು ಹೆಸರು.]

61. ಕ. ಜ. ರಾ., ಕಲ್ಯಾಣ ಚಾಲುಕ್ಯರ ಪ್ರಕರಣವನ್ನು ನೋಡಿರಿ.

62. ಕ. ಜ. ರಾ., ೪೫೧. 63. ಕ. ಜ. ರಾ, ೪೭೩. 64. ಎ. ಕಾ. ಶಿಕಾರಿಪುರ ೮೩.

65. ಎ. ಕಾ. ೮, ಸೊರಬ ತಾಲೂಕಿನ ೨೯೯ನೆಯ ಶಾಸನ—
"ಶ್ರೀಮದ್ಭುವನೈಕಮಲ್ಲದೇವ ಪಾದಾರಪಿಂದ ಷಟ್ಚರಣಂ ಶ್ರೀಮನ್ಮಹಾಪ್ರಧಾನ ಹಿರೇ ಸಂಧಿವಿಗ್ರಹಿ ಮನೆವೆರ್ಗಡೆ ಉದಯಾದಿತ್ಯ ದಂಡಾಧಿಪತಿ ಬನವಾಸೆ ಪನ್ನಿಚ್ಛಾಸಿರಮುಮಂ ಪದಿನೆಂಟು ಭತ್ತಗ್ರಾಮಂಗಳಂ ಪೆಳ್ಪಟ್ಟಿಯ ವಡ್ಡರಾವುಳದ ಸುಂಕಮುಮಂ ಸುಖಸಂಕಥಾವಿನೋದದಿಂ ಆಳ್ದು ರಾಜ್ಯಂಗೆಯ್ಯುತ್ತಮಿರೆ."

66. ಎ. ಕಾ. ೮, ನಗರ ತಾಲೂಕಿನ ೩೦ನೆಯ ಶಾಸನ—
"ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಶ್ರೀಮನ್ಮಹಾಪ್ರಧಾನ ಹಿರಿಯ ಸಂಧಿ ವಿಗ್ರಹಿ ಮನೆವೆರ್ಗಡೆ ದಂಡನಾಯಕ ಉದಯಾದಿತ್ಯದೇವ ವಡ್ಡರಾವುಳಮುಮಂ ಬನವಾಸಿ ಪನ್ನಿಚ್ಛಾಸಿರದ ಪೆರ್ಜುಂಕಮುಮಂ ಎರಡು ಬಿಳ್ಕೊಡೆಯುಮಂ ಸಾಂತಳಿಗೆ ಸಾಸಿರದ ಪೆರ್ಜುಂಕಮುಮಂ ದುಷ್ಟನಿಗ್ರಹ ಶಿಷ್ಟಪರಿಪಾಲನದಿಂದ ಆಳ್ದು ...... ಉದಯಾದಿತ್ಯದೇವರ ದೆಸೆಯಿಂ ವಡ್ಡರಾವುಳ ಪೆರ್ಗಡೆ ಜನಾರ್ದನಯ್ಯ ಧರ್ಮಂ ಆಚಂದ್ರಾರ್ಕ ತಾರಂಬರಂ ಪ್ರತಿಪಾಲಿಸುವರು." . 67, 68, 69. ಮೇಲಿನ ಟಿಪ್ಪಣಿಯ ಕಡೆಯ ಭಾಗ ನೋಡಿರಿ.

ಈ ಸುಂಕಾಧಿಕಾರಿಗಳು ನಾಡಿನ ಹಿರಿಯ ಅಧಿಕಾರಿಗೆ ಅಧೀನರು. ಅನಂತಪಾಲನಿಗೆ ಅಧೀನನಾಗಿ ದಂಡನಾಯಕ ಗೋವಿಂದರಸನು ಬನವಾಸೆ ಹನ್ನೆರಡು ಸಾವಿರದ ಮೇಳ್ಪಟ್ಟಿಯ ವಡ್ಡರಾವುಳವನ್ನೂ ಎರಡು ಬಳ್ಕೊಡೆಗಳನ್ನೂ ಮತ್ತು ಪೆರ್ಜುಂಕಗಳನ್ನೂ ಆಳುತಿದ್ದನು[69]. ಇದೇ ಗೋವಿಂದರಸನಿಗೆ ಮಹಾದಂಡನಾಯಕ, ಮಹಾ ಸಾಮಂತಾಧಿಪತಿ ಮತ್ತು ಮಹಾ ಪ್ರಧಾನ—ಈ ಬಿರುದುಗಳನ್ನಿತ್ತು ಬನವಾಸೆ ಹನ್ನೆರಡು ಸಾವಿರ ಪ್ರಾಂತವನ್ನು ಆಳುವ ಅಧಿಕಾರವನ್ನು ಕೊಟ್ಟಿದ್ದರೆಂದು ತಿಳಿದುಬಂದಿದೆ[70]. ಅಚ್ಚುಪನ್ನಾಯವೆಂಬ ಒಂದು ತೆರಿಗೆಯು ಇದ್ದು ಅದರ ಮುಖ್ಯಸ್ಥನಿಗೆ ಅಚ್ಚುಪನ್ನಾಯದಧಿಷ್ಠಾಯಕನೆಂದು ಹೆಸರು[71]. ಅರಸನ ಜೊತೆಗೆ ಯಾವಾಗಲೂ ಇರಬೇಕಾದ ಅಧಿಕಾರಿಗಳ ಯೋಗ್ಯತೆಗಳನ್ನು ಕುರಿತು ಮಾನಸೋಲ್ಲಾಸ ಗ್ರಂಥದಲ್ಲಿ ಸವಿಸ್ತರವಾಗಿ ಚರ್ಚೆ ಬಂದಿದೆ. ಆ ಅಧಿಕಾರಿಗಳೆಂದರೆ, ಮಂತ್ರಿ, ಪುರೋಹಿತ, ಜ್ಯೋತಿರ್ವಿದ್ಗಣಕ, ಸೇನಾಪತಿ, ಧರ್ಮಾಧಿಕಾರಿ, ಸಭಾಧ್ಯಕ್ಷ, ಕೋಶಾಧ್ಯಕ್ಷ, ಪ್ರತೀಹಾರಿ, ಸಂಧಿವಿಗ್ರಹಿ, ಸಾರಥಿ, ಸೂದ, ವೈದ್ಯ ಮತ್ತು ಅಂತಃಪುರಾಧ್ಯಕ್ಷ[72].

ಕಲ್ಬರೆಹಗಳಲ್ಲಿ ಉಲ್ಲೇಖಿಸಲ್ಪಟ್ಟವರಲ್ಲಿ ಉಳಿದವರೆಂದರೆ, **ಆಯುಕ್ತಕ, ನಿಯುಕ್ತಕ, ಮಹತ್ತರ, ಗ್ರಾಮಕೂಟಕ**[73]. ಇದರಲ್ಲಿ ಕಡೆಯವನು ಹಳ್ಳಿಯ ಒಡೆಯ. ಆಯುಕ್ತಕನೆಂದರೆ ಯಾರೆಂಬುದೇ ತಿಳಿಯದು. ಅಶೋಕನ ಕಲ್ಬರೆಹಗಳಲ್ಲಿಯೂ **ಯುತ**ಯೆಂಬ ಅಧಿಕಾರಿಗಳು ನಿರ್ದೇಶಿಸಲ್ಪಟ್ಟಿದ್ದಾರೆ. ಆದರೆ ಅವರ ಕರ್ತವ್ಯಗಳೇನೆಂಬುದು ಸ್ಪಷ್ಟವಾಗಿ ತಿಳಿದಿಲ್ಲ.

ರಾಜ್ಯದಲ್ಲಿದ್ದ ದೊಡ್ಡ ವಿಭಾಗಗಳಲ್ಲಿ ಎಂದರೆ, ಬನವಾಸೆ ೧೨೦೦೦, ಸಾಂತಳಿಗೆ ೧೦೦೦೦, ನೊಳಂಬವಾಡಿ ೩೨೦೦೦, ಕೊಲ್ಲಿಪಾಕೆ ೭೦೦೦, ಕುಂದೀ ೩೦೦೦, ಕರಹಾಟ ೪೦೦೦—ಮುಂತಾದುವುಗಳಲ್ಲಿ ಸಣ್ಣ ಸಣ್ಣ ವಿಭಾಗಗಳು ಇದ್ದುವು. ಬೆಳವಲ ೩೦೦, ಪುರಿಗೇರಿ ೩೦೦, ಪಾನಗಲ್ ೫೦೦—ಇಂಥ ಕೆಲವು ಸಣ್ಣವಾದರೂ ಸ್ವತಂತ್ರ ವಿಭಾಗಗಳಿದ್ದುವು. ಈ ವಿಭಾಗಗಳನ್ನು ಆಳುವ ಅಧಿಕಾರಿಗಳಿಗೆ **ನಾಡಗಾವುಂಡ**[74], **ನಾಡಪ್ರಭು**[75], **ನಾಡಸ್ವಾಮಿ**[76]—ಹೀಗೆ ಬೇರೆ ಬೇರೆ ಹೆಸರುಗಳಿದ್ದುವು. ಗಾವುಂಡನೆಂದರೆ ಹಳ್ಳಿಗೆ ಹಿರಿಯ. ಆದರೆ ಈ ವಿಶೇ

70,71,72. ಕ. ಜಿ. ರಾ., ೪೫೨.

73. ತ್ರಿಭುವನಮಲ್ಲನ ನೀಲಗುಂದ ಶಾಸನ, ಎ. ಇಂ. ೧೨—೧೫೨ ಮುಂ.

74. ಕ. ಜಿ. ರಾ., ೪೩೭, ಎ. ಕಾ. ಸೊರಬದ ೪೧೪ನೆಯ ಶಾಸನದಲ್ಲಿ ನಾಳ್ಗಾವುಂಡನ ಉಲ್ಲೆಖವು ಬಂದಿದೆ.

75. ಎ. ಕಾ. ೧೧, ದಾವಣಗೆರೆ ೧೪೩ನೆಯ ಶಾಸನ.

76. ಎ. ಕಾ. ೭, ಶಿಕಾರಿಪುರದ ೯೪ನೆಯ ಶಾಸನ. ಇದೇ ಸಂದರ್ಭದಲ್ಲಿ ಎ. ಕಾ., ೭, ಶಿಕಾರಿಪುರದ ೧೧೮ರಲ್ಲಿಯ ಈ ಭಾಗವನ್ನು ನೋಡಿರಿ—
''ಎಂಟುಂ ನಾಡ ಪದಿನಾರುವರುಂ ಗವರೆಗಳುಂ ಗಾತ್ರಿಗರುಂ ಸೆಟ್ಟಿಯರುಂ ಸೆಟ್ಟಿಗುತ್ತರುಂ ಅಂಕಕಾರರುಂ ಬೀರರುಂ ಬೀರವಣಿಗರುಂ ಗಾವುಂಡ ಸ್ವಾಮಿಗಳುಂ ಎಂಟು ಬಲುಂಕೆ ದಂಡಹಸ್ತರುಂ'' ಇತ್ಯಾದಿ.

ಷಾರ್ಥವು ಹೋಗಿ ಮುಂದೆ 'ಹಿರಿಯ' ಇಷ್ಟೇ ಅರ್ಥವನ್ನು ಆ ಶಬ್ದವು ಬೋಧಿಸುತ್ತಿದ್ದಿತ್ತು. ನಾಡ**ಗಾವುಂಡ** ಎಂದರೆ, ನಾಡಿಗೆ ಹಿರಿಯ ಎಂಬ ಅರ್ಥವು ಬಂದಿತು.

ವಿಕ್ರಮಾದಿತ್ಯನ ಆಳಿಕೆಯ ೫೦ ವರ್ಷಗಳಲ್ಲಿ ಪ್ರಜೆಗಳು ಸುಖದಿಂದಿದ್ದರು. ಧರ್ಮಕಾರ್ಯವು ಅಬಾಧಿತವಾಗಿ ನಡೆದಿದ್ದಿತು. ಇಟಗಿಯು ತನ್ನ ಜನ್ಮಸ್ಥಾನವೆಂದು ಅಲ್ಲಿ ಮಹಾದೇವೇಶ್ವರನ ಗುಡಿಯನ್ನು ವಿಕ್ರಮಾದಿತ್ಯನ ದಂಡನಾಯಕನಾದ ಮಹಾದೇವನೇ ಕಟ್ಟಿಸಿದ್ದನು. ತನ್ನ ತಾಯಿಯ ಸ್ಮಾರಕವೆಂದು ಚಂದಲೇಶ್ವರನ ಗುಡಿಯನ್ನೂ ಒಂದು ಮಠವನ್ನೂ ಹೊಂಡವನ್ನೂ ಕಟ್ಟಿಸಿದನು. ಅಲ್ಲಿ ಈಶ್ವರನ 'ಅಂಗಭೋಗಕ್ಕಾಗಿ'ಯೂ ನೈವೇದ್ಯ, ಅನ್ನದಾನ, ಅಧ್ಯಾಪಕರಿಗೆ ದಕ್ಷಿಣೆ, ಕಾಲಯಂತ್ರ, ನೃತ್ತಿಕಾ ಪರಿವಾರ ಮತ್ತು ಉಳಿದ ಪರಿಚಾರಕರಿಗಾಗಿಯೂ, ಅಂತೂ ೫೦೦ ಮತ್ತರ ಭೂಮಿಯನ್ನು ದತ್ತಿಯಾಗಿ ಬಿಟ್ಟನು.... ನೃತ್ತಿಕೆಯರಿಗೂ ಪರಿಚಾರಕರಿಗೂ ೧೪ ಮನೆಗಳನ್ನೂ, ದೇವರ ನಂದಾದೀವಿಗೆಗಾಗಿ ೨ ಎಣ್ಣೆಯ ಗಾಣಗಳನ್ನೂ ಮತ್ತು ೨ ಮತ್ತರ ತೋಟವನ್ನೂ ಬಿಟ್ಟುಕೊಟ್ಟನು. ಋಗ್ವೇದ ಸಾಮವೇದಗಳನ್ನು ಅಭ್ಯಸಿಸುವ ಪ್ರತಿ ವಿದ್ಯಾರ್ಥಿಗೆ ಒಂದೊಂದು ಖಂಡುಗದಂತೆ ಎಲ್ಲ ಕಾಲದಲ್ಲಿಯೂ ವ್ಯವಸ್ಥೆಯಾಗುವುದಕ್ಕೆಂದು ನೂರಿಪ್ಪತ್ತು ಗದ್ಯಾಣಗಳನ್ನು ಆವನು ಮಹಾಜನರಲ್ಲಿ ಇಟ್ಟನು. ಅವರು ಈ ಗದ್ಯಾಣಕ್ಕೆ ಒಂದು ಪಣದಂತೆ ಆಗುವ ೧೦ ಗದ್ಯಾಣ ಬಡ್ಡಿಯನ್ನು ಪ್ರತಿ ವರ್ಷವೂ ಆ ಕಾರ್ಯಕ್ಕಾಗಿ ವಿನಿಯೋಗಿಸಬೇಕು"[77]. ಧನವಂತರಾದವರಷ್ಟೇ ಈ ಪ್ರಕಾರದ ದಾನಮಾಡುತ್ತಿದ್ದರೆಂದಲ್ಲ; ಊರವರೆಲ್ಲರೂ ಕೂಡಿ ತಲೆಪಟ್ಟಿ ಮಾಡಿ ಊರ ದೇವರಿಗಾಗಿ ಸ್ಥಿರವಾದ ವ್ಯವಸ್ಥೆ ಮಾಡಿದ ಅನೇಕ ಉದಾಹರಣೆಗಳು ದೊರೆತಿವೆ. ಪ್ರಜೆಗಳಲ್ಲಿ ಅನೇಕ ಧರ್ಮೀಯರು ಸಮಾವಿಷ್ಟರಾಗಿದ್ದರು. ಆದರೆ ಅವರಲ್ಲಿ ಪರಸ್ಪರ ಮತ್ಸರವು ಇರಲಿಲ್ಲ. ಎಲ್ಲ ಧರ್ಮಗಳಿಗೂ ರಾಜಾಶ್ರಯವು ಸಮಾನವಾಗಿ ದೊರೆಯುತ್ತಿದ್ದಿತು. ಶ್ರೀ ವಿಕ್ರಮಾದಿತ್ಯನು ತಾನು ವೈದಿಕ ಪರಂಪರೆಯನ್ನನುಸರಿಸುತ್ತಿದ್ದರೂ ಅಣ್ಣಿಗೆರೆಯಲ್ಲಿಯೂ ಬಳ್ಳಿಗಾವೆಯಲ್ಲಿಯೂ ಜೈನ ಬಸದಿಗಳನ್ನು ಕಟ್ಟಿಸಿ ಆ ಮತವನ್ನು ಆದರಿಸಿದನು. ಈಗ ನಾಮಶೇಷವಾಗಿದ್ದ ಕಾಲಾಮುಖ ಮತವು ಆಗ ಒಳ್ಳೆಯ ಸುಸ್ಥಿತಿಯಲ್ಲಿದ್ದಂತೆ ತೋರುತ್ತದೆ. ಪುರುಷರಂತೆ ಸ್ತ್ರೀಯರೂ ಧರ್ಮಕಾರ್ಯದಲ್ಲಿ ಮುಂದಾಗಿದ್ದರು. ಹಳ್ಳಿ ಹಳ್ಳಿಗೆ ಹೊಸ ಗುಡಿಗಳೂ ಹೊಸ ದಾನಗಳೂ ಆಗುತ್ತಿದ್ದುವು.

ಆಗಿನ ವಾಙ್ಮಯವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ, ಜನರ ಮನಸ್ಸು ಉತ್ಸಾಹದಿಂದ ತುಂಬಿದ್ದಿತೆಂದು ತಿಳಿದುಬರುವುದು. ಹಳ್ಳಿ ಹಳ್ಳಿಯಲ್ಲಿದ್ದ ಶಿಲಾಲೇಖನಗಳು ಜನರ ಧರ್ಮವೃತ್ತಿಯನ್ನೂ, ವೀರಗಲ್ಲುಗಳು ಶೂರ ಕೃತ್ಯಗಳ ವಿಷಯದಲ್ಲಿ ಕನ್ನಡಿಗರು ತಾಳಿದ ಆದರವನ್ನೂ, ಇಟಗಿಯ ಮಹಾದೇವೇಶ್ವರನ ಗುಡಿಯಂಥ ಕಟ್ಟಡಗಳು ಕನ್ನಡಿಗರ ಸೌಂದರ್ಯೋಪಾಸನೆಯನ್ನೂ ಎಂದಿಗೂ

77. ಎ. ಇಂ., ೧೩--೫೮.

ಮರೆಯುದಂತೆ ಸಾರಿ ಸಾರಿ ಹೇಳುತ್ತವೆ. ಎಲ್ಲ ಧರ್ಮಗಳೂ ಪಂಥಗಳೂ ತಮ್ಮ ಕಾರ್ಯಗಳನ್ನು ನಿರ್ಮಾತ್ಸರ್ಯದಿಂದ ಅಪಿಹತವಾಗಿ ನಡೆಸಿದ್ದುವು. ಲೋಕಾಶ್ರಯವು ಎಲ್ಲರಿಗೂ ಸಿಕ್ಕುತ್ತಿದ್ದಿತು. ಹಳ್ಳಿಗನೂ ತನ್ನ ಹಳ್ಳಿಗಾಗಿ **"ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ"** ಎಂಬುದಾಗಿ ತಿಳಿದುಕೊಂಡು ತನ್ನವರ ರಕ್ಷಣೆಗಾಗಿ ತನ್ನ ಪ್ರಾಣವನ್ನು ಕೂಡ ಅರ್ಪಿಸುತ್ತಿದ್ದನು. ಇಂತಹ ವೀರರ ಸುಕೃತಿಗಳನ್ನು ಹಾಡಿ ಹಳ್ಳಿಗರಿಗೆ ಆನಂದ ಕೊಡಲು ಸಮರ್ಥರಾದ ಅನೇಕ ಕವಿಗಳು ಹಳ್ಳಿ ಹಳ್ಳಿಗಿದ್ದರು. ಅಧಿಕಾರಿಗಳು ತಮ್ಮ ಅಧಿಕಾರ ದರ್ಪದಲ್ಲಿಯೇ ಇರದೆ ಸಾರ್ವಜನಿಕ ಕಾರ್ಯದಲ್ಲಿ ಮನಸ್ಸುಹಾಕುತ್ತಿದ್ದರು. ಅಖಂಡ ಕರ್ಣಾಟಕವು ರಾಷ್ಟ್ರೀಯ ಸಂಸ್ಕೃತಿಯ ಮುಖ್ಯಾಂಗಗಳಾದ ವಾಙ್ಮಯ, ಧರ್ಮ, ಶಿಲ್ಪ, ಸಾಮಾಜಿಕ ಸಂಘಟನೆ, ಮುಂತಾದುವುಗಳಲ್ಲಿ ಮುಂದಾಗಿ ತನ್ನ ಯಶೋದುಂದುಭಿಯನ್ನು ಎಂಟು ದಿಕ್ಕುಗಳಲ್ಲಿಯೂ ಉದ್ಘೋಷಿಸಿತು. ಆ ಉದ್ಘೋಷಣೆಯನ್ನು ಆಲಿಸಿಯೇ ಬಿಲ್ಹಣನಂತಹ ಮಹಾಕವಿಗಳು ವಿಕ್ರಮಾದಿತ್ಯನ ಆಸ್ಥಾನಕ್ಕೆ ಬಂದು ಜೀವಿತದ ಸಾರ್ಥಕವಾಯಿತೆಂದೆಣಿಸಿದರು. ಹೆಚ್ಚಿಂದೇನು? ಜೀವನದ ಸಂಪೂರ್ಣತೆಯ ಸುಖವನ್ನು ವಿಕ್ರಮಾದಿತ್ಯನ ಕಾಲದ ಕನ್ನಡಿಗರು ಅನುಭವಿಸುತ್ತಿದ್ದರು. ಆ ಸುಖವೇ ನಮಗೆ ದೊರೆಯಬೇಕೆಂದೂ, ಆಗಿನ ಕಲಾ ಪ್ರಕರ್ಷವು ಈಗ್ಗೂ ಆಗಬೇಕೆಂದೂ, ಆಗಿನ ವೀರ ಕಾವ್ಯದ ಸ್ಫುರಣೆಯು ಈಗಿನವರಲ್ಲಿ ಮೊಳೆಯಬೇಕೆಂದೂ, ಆಗಿನಂತೆ ಜನರಿಗಾಗಿ ಪ್ರಾಣವನ್ನರ್ಪಿಸುವ ವೀರರು ಕನ್ನಡ ನಾಡಿನಲ್ಲಿ ಮತ್ತೆ ಹುಟ್ಟಬೇಕೆಂದೂ, ಆಯುಷ್ಯವು ಸರಸವಾಗಿ, ವ್ಯಕ್ತಿಗೂ ರಾಷ್ಟ್ರಕ್ಕೂ ಸುಖವಾಗಲೆಂದೂ ಹಂಬಲಿಸುವವರೆಲ್ಲರೂ ಶ್ರೀ ಚಾಲುಕ್ಯ ವಿಕ್ರಮನಂತಹವರ ಚರಿತ್ರೆಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿ ಆನಂದ ಪಡಬೇಕು. ಪೂರ್ವಿಕರ ಪುಣ್ಯ ಸ್ಮೃತಿಯನ್ನು ಕಾದಿಟ್ಟರೆಯೇ ಮುಂದಿನ ಕಾರ್ಯಕ್ಕೆ ಬೇಕಾದ ಉತ್ಸಾಹವೂ ಶಕ್ತಿಯೂ ಬರುವುದು. ಅಂತಹ ಉತ್ಸಾಹವು ಕನ್ನಡ ನಾಡಿನ ತರುಣರಲ್ಲಿ ಉದಯವಾಗಹತ್ತಿದೆ. ಶ್ರೀಮಚ್ಚಾಲುಕ್ಯ ವಿಕ್ರಮಾದಿತ್ಯ ತ್ರಿಭುವನಮಲ್ಲನಂತಹ ಕನ್ನಡ ವೀರರ ಜಯ ಘೋಷಣೆಯನ್ನು ಮಾಡುತ್ತ ಮತ್ತೆ ಆ ವೈಭವವನ್ನು ಪಡೆಯುವ ಸಾಮರ್ಥ್ಯವನ್ನು ಶುದ್ಧ ಚಿತ್ತರಾದ ಕನ್ನಡ ತರುಣರು ಪಡೆಯಲಿ!

**ದತ್ತಾತ್ರೇಯ ಪರಶುರಾಮ ಕರಮರಕರ,**
**ಎಂ.ಎ., ಎಲ್ಎಲ್.ಬಿ.**

---

# ಗ್ರಂಥ ವಿಮರ್ಶೆ

## ೧. ಕವಿತಾ ಕಲಾಪ

ಲೇಖಕರು.—ವಿಠೋಬಾ ವೆಂಕನಾಯಕ, ತೊರ್ಕೆ (ಚಂದಿರಾನಂದ).

ರಾಯಲ್ ಷೋಡಶಪತ್ರ ಪುಟಗಳು ೨೪ ; ೧೯೨೯ ; ಬೆಲೆ ೩ ಆಣೆ.

ಈ ಪುಸ್ತಕದಲ್ಲಿ ದೇವತಾ ಸ್ತುತಿ, ವರ್ಣನೆ, ನೀತಿ ಬೋಧೆ ಮೊದಲಾದ ವಿಷಯಗಳ ಕವಿತೆಗಳು ಶರ, ಭೋಗ, ಭಾಮಿನಿ, ವಾರ್ಧಕ ಷಟ್ಪದಿಗಳಲ್ಲಿಯೂ, ಕಂದ ರಾಗಗಳಲ್ಲಿಯೂ ರಚಿತವಾಗಿವೆ ; ವಾರ್ಧಕವೇ ಹೆಚ್ಚಾಗಿರುವುದು. ಭಾಷಾ ಶೈಲಿಯು ಸುಲಭವಾಗಿಯೂ ಲಲಿತವಾಗಿಯೂ ಇದೆ ; ವರ್ಣನೆಗಳೆಲ್ಲವೂ ಅಂದ ವಾಗಿಯೂ ಭಾವ ಗರ್ಭಿತವಾಗಿಯೂ ಇವೆ ; ವಿಷಯ ವಿವರಣೆಯೂ ಸಲಕ್ಷಣ ವಾಗಿದೆ. ಶಬ್ದಗಳು ಹಳಗನ್ನಡವಾಗಿದ್ದರೂ ಪ್ರತ್ಯಯಗಳೂ, ಪ್ರಯೋಗಗಳೂ ಹೊಸಗನ್ನಡವಾಗಿರುವುದರಿಂದ ಅಷ್ಟು ಇಂಪಾಗಿ ಕಾಣುವುದಿಲ್ಲ; ಅನೇಕ ಕಡೆ ಗಳಲ್ಲಿ ಪ್ರಯೋಗಗಳು ವ್ಯಾಕರಣವನ್ನನುಸರಿಸಿಲ್ಲ.

ನಿತ್ಯಂ ಸುಖಂ ದಾಯಕಂ, ಹರ ಕಂದಂ (ಪುಟ ೧), ಗಂಹರವ, ಮೂಡುವೆಣ್ಣು (ಪು. ೨), ಧ್ರುವನಿಂಗೆ ; ನೆಲಿಸಿಹನು (ಪು. ೩), ಕಕ್ಕುಲಾತೆಯಿಂದ, ಹಣ್ಣುಹಂಪಲಂಗಳ, ಮನಪೊಂದುತ, ಶೀಘ್ರ ಕೋಪೀ(ಪು. ೪), ಮೇನಿಕೆಯು, ನೆಲೆಸಿರಲ್ (ಪು. ೫), ಪಾಸಟೆ (ಪು. ೬), ಇಕ್ಕುದಲ್ತೆ, ಬೇಸಿಗೆ (ಪು. ೧೮), ತೊಡರಂಗಳಿಗಂಜದೆ, ಪುಟ್ಟದೊಡಂ ಎಸೆಯುವ (ಪು. ೧೯), ಈರ್ವರನ್ನು (ಪು. ೨೪).

ಇವೇ ಮೊದಲಾದ ಪ್ರಯೋಗಗಳು ಸಾಧುವಾಗಿಲ್ಲ.

## ೨. ಶ್ರೀ ರಾಘವೇಂದ್ರ ವಿಜಯ

ಲೇಖಕರು.—ಬೇಲೂರು ಕೇಶವದಾಸರು, ಮೈಸೂರು.

ಪ್ರಕಾಶಕರು.—ಸುಬೋಧ ಪ್ರಕಟನಾಲಯ, ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟ ೫+೧೦೮ ; ೨ ಚಿತ್ರಗಳಿವೆ ; ೧೯೨೯ ; ಬೆಲೆ ೮ ಆಣೆ.

ಇದು ಮಂತ್ರಾಲಯ ಕ್ಷೇತ್ರದಲ್ಲಿ ವೃಂದಾವನಸ್ಥರಾಗಿರುವ ಶ್ರೀ ರಾಘ ವೇಂದ್ರ ಸ್ವಾಮಿಗಳವರ ಜೀವನ ಚರಿತ್ರೆ. ಗ್ರಂಥಕಾರರು ಗ್ರಂಥಾದಿಯಲ್ಲಿ, "ಪ್ರಾಚೀನ ಕರ್ನಾಟಕದ ಒಬ್ಬೊಬ್ಬ ಯತಿಗಳ, ಹರಿದಾಸರ, ಕವಿಗಳ, ವೀರ ಪುರುಷರ ಕೃತಿಗಳೇನೆಂದು ವಿಚಾರಿಸಿ ಸಿಕ್ಕಿದಷ್ಟನ್ನು ಬರೆದಿಟ್ಟರೆ, ಈಗಲೂ ಕರ್ನಾಟಕದ ಮಹತ್ವವು ನಿರ್ಮತ್ಸರಿಗಳಾದ ಅನ್ಯರಿಗೂ ಉದ್ರೇಕವನ್ನುಂಟು ಮಾಡುವುದರಲ್ಲಿ ಸಂಶಯವಿಲ್ಲ...ಕರ್ನಾಟಕ ಭಕ್ತರ ಚರಿತ್ರೆಯನ್ನು ಮೊತ್ತವಾಗಿ

ಬರೆದಿಡುವ ಶಕ್ತಿ ಸೌಕರ್ಯಗಳಿಲ್ಲದಿದ್ದರೂ ಅಲ್ಪಾರಂಭವನ್ನಾದರೂ ಮಾಡೋಣ ವೆಂದು ಯತ್ನಿಸಿರುವೆನು. ಈ ಗ್ರಂಥಕ್ಕೆ ಮುಖ್ಯವಾಗಿ ಅನೇಕ ಹರಿದಾಸರ ದೇವರ ನಾಮಗಳೂ, ರಾಘವೇಂದ್ರ ವಿಜಯ, ಅಣು ರಾಘವೇಂದ್ರ ವಿಜಯವೆಂಬ ಸಂಸ್ಕೃತ ಗ್ರಂಥಗಳೂ ಸಹಾಯಕವಾದುವು'' ಎಂದು ಬರೆದಿರುವುದರಿಂದ ಈ ಚರಿತ್ರೆಯ ಮುಖ್ಯೋದ್ದೇಶವೂ ಗ್ರಂಥ ಲೇಖನದ ಆಧಾರದ ಸಹಾಯಗಳೂ ತಿಳಿ ದಂತಾಯಿತು. ಭಾಷಾ ಶೈಲಿಯು ಸುಲಭವಾಗಿಯೂ ಸರಳವಾಗಿಯೂ ಇರುವ ತಿಳಿಗನ್ನಡದಲ್ಲಿದೆ. ಸ್ವಾಮಿಗಳವರ ಮಹಿಮೆ, ವಿದ್ಯಾ ಪಾಂಡಿತ್ಯ, ತಪಶ್ಶಕ್ತಿ, ದಿಗ್ವಿಜಯ, ಲೋಕೋಪಕಾರ ಮೊದಲಾದ ಮಹಾ ಕಾರ್ಯಗಳು ಇದರಲ್ಲಿ ಚೆನ್ನಾಗಿ ವರ್ಣಿತವಾಗಿರುವುದರಿಂದ ಎಲ್ಲರೂ ಈ ಗ್ರಂಥವನ್ನು ಆದರದಿಂದ ಓದತಕ್ಕುದಾಗಿದೆ.

**ಪ್ರಾಂತ್ಯ, ಈಚಿಗೆ (ಪು. i), ವಂಶೀಕ (ಪು. ೭), ಪೌರುಷ್ಯ (ಪು. ೩೪), ವಿನಾನೀತಾ (ಪು. ೫೨), ಇವತ್ತು (ಪು. ೬೩), ಶಾರಿ (ಪು ೮೩).**

ಇವೇ ಮೊದಲಾದ ಅಶುದ್ಧ ಶಬ್ದ ರೂಪಗಳು ಅನೇಕ ಕಡೆ ಕಾಣಬರುವುವು. ಮುದ್ರಣದ ತಪ್ಪುಗಳೂ ಇವೆ.

---

## ೩. ಎಂ. ವೆಂಕಟಕೃಷ್ಣಯ್ಯನವರ ಜೀವಮಾನದ ಚರಿತ್ರೆ

ಲೇಖಕರು.—ಎಂ. ವೆಂಕಟಕೃಷ್ಣಯ್ಯನವರು.

**ಡೆಮ್ಮಿ ಅಷ್ಟಪತ್ರ ಪುಟಗಳು ೫೨; ಬೆಲೆ ೮ ಆಣೆ.**

ಈ ಗ್ರಂಥದಲ್ಲಿ, ''ಮನುಷ್ಯನ ಕರ್ತವ್ಯ ಮತ್ತು ಹಕ್ಕು ಬಾಧ್ಯತೆಗಳ ಸ್ವರೂಪ,'' ''ಸತ್ಯವನ್ನು ಉದ್ಧರಿಸುವುದು ಅಧಿಕಾರಿಗಳಿಗೂ ಖಾಸಗೀ ಜನಗಳಿಗೂ ಕರ್ತವ್ಯ,'' ''ಪ್ರತಿ ನಿಮಿಷದಲ್ಲಿಯೂ, ಮೂರು ಅವಸ್ಥೆಯಲ್ಲಿಯೂ, ಪರೋಪ ಕಾರವೇ ಪುಣ್ಯ, ಪರಪೀಡೆಯೇ ಪಾಪ, ಎಂಬ ಧರ್ಮವು ಚರ್ಮ ಚಕ್ಷುಸ್ಸಿಗೆ ಮಾತ್ರವೇ ಅಲ್ಲದೆ ಜ್ಞಾನ ಚಕ್ಷುಸ್ಸಿಗೂ ಹೇಗೆ ಗೊತ್ತಾಗುವುದೋ ಅದನ್ನು ಪರಿಶೀಲಿಸಿ, ಈ ಧರ್ಮವನ್ನು ಅನುಷ್ಠಾನದಲ್ಲಿಟ್ಟುಕೊಳ್ಳುವುದು—ಇವೆಲ್ಲಾ ಸ್ತ್ರೀ ಪುರುಷರಿಗೂ ಮುಖ್ಯ ಕರ್ತವ್ಯಗಳು''—ಈ ವಿಚಾರಗಳನ್ನು ಅನೇಕ ಉದಾ ಹರಣೆಗಳ ಮೂಲಕ ಗ್ರಂಥಕರ್ತರು ಪ್ರತಿಪಾದಿಸಿರುತ್ತಾರೆ. ಮೈಸೂರು ದೇಶದ ''ಮುತ್ತಜ್ಜಂದಿ''ರಾದ ಮ|| ವೆಂಕಟಕೃಷ್ಣಯ್ಯನವರ ಜೀವನ ಚರಿತ್ರೆಯನ್ನು ಸಂಪೂರ್ಣವಾಗಿ ಬರೆದಲ್ಲಿ ಅದು ಅನೇಕ ಚಾರಿತ್ರಾಂಶಗಳನ್ನೊಳಕೊಂಡ ಬಹಳ ದೊಡ್ಡ ಗ್ರಂಥವಾಗಿ, ಜನರಿಗೆ ಕೇವಲ ಬೋಧಪ್ರದವಾಗುವುದರಲ್ಲಿ ಸಂದೇಹವಿಲ್ಲ. ಆದರೆ ಪ್ರಕೃತ ಗ್ರಂಥದಲ್ಲಿ, ಇವರು ಹುಟ್ಟಿದ ಕಾಲ, ಸ್ಥಳ, ಇವರ ತಂದೆಯವರಿಂದ ಕೇವಲ ಬಾಲ್ಯದಲ್ಲಿ ಇವರಿಗೆ ದೊರೆತ ಜ್ಞಾನಾರ್ಜನೆ—ಇಷ್ಟು ವಿಷಯಗಳು ಮಾತ್ರ ಪ್ರತಿಪಾದಿತವಾಗಿ, ತಮಗೆ ಮೈಸೂರಿನಲ್ಲುಂಟಾದ ಕೆಲವು ಅನುಭವಗಳನ್ನು ಮಾತ್ರ ಗ್ರಂಥಕರ್ತರು ಸೂಚಿಸಿರುತ್ತಾರೆ. ತಾವು ಅರ್ಧ ಶತಮಾನಕ್ಕೆ ಮೀರಿದ

ಕಾಲದಲ್ಲಿ ತಮ್ಮ ದೇಶಮಾತೆಗಾಗಿ ಮಾಡಿರುವ ಅಸಾಮಾನ್ಯವಾದ ಸೇವೆಯ ವಿಷಯವು ಯಾವುದೂ ಈ ಗ್ರಂಥದಲ್ಲಿ ದೊರೆಯದಿರುವುದರಿಂದ ಇದನ್ನು ಮ॥ ವೆಂಕಟಕೃಷ್ಣಯ್ಯನವರ "ಜೀವಮಾನದ ಚರಿತ್ರೆ"ಯೆಂದು ನಾವು ಎಂದಿಗೂ ಅಂಗೀಕರಿಸಲಾರೆವು; ನೀತಿ ಬೋಧಕವಾದ ಕೆಲವು ವಿಷಯಗಳನ್ನು ಮನಸ್ಸಿಗೆ ನಾಟುವಂತೆ ತಕ್ಕ ಉದಾಹರಣೆಗಳ ಮೂಲಕ ಪ್ರತಿಪಾದಿಸಿರುವ ಗ್ರಂಥವೆಂದು ಮಾತ್ರ ಹೇಳುವೆವು. ಇದನ್ನು ಮನಸ್ಸಿಟ್ಟು ಓದಿದರೆ ಅನೇಕ ವಿಷಯಗಳು ಸ್ಫೂರ್ತಿಗೆ ಬರುವುವು. ಮ॥ ವೆಂಕಟಕೃಷ್ಣಯ್ಯನವರು ಅಸಾಮಾನ್ಯವಾದ ತಮ್ಮ "ಜೀವನ ಚರಿತ್ರೆ"ಯನ್ನು ವಿಸ್ತಾರವಾಗಿ ಬರೆದು ಜನರಿಗೆ ಉಪಕಾರಮಾಡಬೇಕೆಂದೂ, ವಿಷಯಕ್ಕೆ ತಕ್ಕಂತೆ ಪುಸ್ತಕವನ್ನು ತಪ್ಪುಗಳಿಲ್ಲದೆ ಅಂದವಾಗಿ ಮುದ್ರಣ ಮಾಡಿಸಬೇಕೆಂದೂ ಹಾರೈಸುತ್ತೇವೆ.

---

## ೪. ಹಿತಬೋಧಿನಿ

ಲೇಖಕರು.—ಎಂ. ವೆಂಕಟಕೃಷ್ಣಯ್ಯನವರು, ಮೈಸೂರು.

**ಡೆಮ್ಮೆ ಅಷ್ಟಪತ್ರ ಪುಟಗಳು ೫೦; ೧೯೨೯; ಬೆಲೆ ೨ ಆಣೆ.**

ಇದು ಸತ್ಯ, ಧರ್ಮ, ಪರೋಪಕಾರ, ಸದ್ವೃತ್ತಿ, ಸದಾಚಾರ, ಅಂತರ್ಬಾಹ್ಯ ಪಾರಿಶುದ್ಧ್ಯ, ದೈವ ಭಕ್ತಿ, ಲೋಕ ವ್ಯವಹಾರ, ನೀತಿ—ಇವೇ ಮೊದಲಾದುವುಗಳನ್ನು ಜನತೆಗೆ ತಿಳಿಸಿ ಮೇಲ್ಮೆಯನ್ನುಂಟುಮಾಡುವುದಕ್ಕಾಗಿ ಬರೆದ ಸಾಮಾಜಿಕೋಪಯುಕ್ತವಾದ ಪುಸ್ತಕವು. ಲೇಖಕರು ಪುಸ್ತಕದ ಮುಖ ಪತ್ರದಲ್ಲಿ, "ಮನೋವಾಕ್ಕರ್ಮಗಳ ಪಾರಿಶುದ್ಧ್ಯತೆಯಿಂದ ನಮ್ಮ ಸದಿಷ್ಟಾರ್ಥ ಸಿದ್ಧಿಗಳಾಗುವುವು. ಅವುಗಳ ಅಪಾರಿಶುದ್ಧ್ಯತೆಯಿಂದ ನಾವು ಪತಿತರಾಗುವೆವು.... ಯಾರು ಜಿತೇಂದ್ರಿಯರಾಗುವರೋ, ಯಾರು ಅರಿಷಡ್ವರ್ಗಗಳನ್ನು ಗೆಲ್ಲುವರೋ, ಅವರು ದೇವರ ಪ್ರಸನ್ನತೆಗೆ ಅರ್ಹರಾಗುವರು. ಯಾರು ಹೊನ್ನು, ಹೆಣ್ಣು, ಮಣ್ಣು, ನಿರಂಕುಶವಾದ ಅಧಿಕಾರದ ಚಲಾವಣೆ—ಇವುಗಳಲ್ಲಾಸಕ್ತರಾಗುವರೋ ಅವರಿಗೆ ಪರಿಣಾಮದಲ್ಲಿ ಅಧೋಗತಿಯು ತಪ್ಪುವುದಿಲ್ಲ. ಸಕಲ ವೇದ ಶಾಸ್ತ್ರಗಳೂ ಹೀಗೆ ಮೊರೆಯುತ್ತವೆ" ಎಂದು ಸೂಚಿಸಿ, ಪೀಠಿಕೆಯಲ್ಲಿ, "ಬ್ರಿಟಿಷ್ ಜನಗಳೇ ಮೊದಲಾದ ಪಾಶ್ಚಾತ್ಯರು ಹೇಗೆ ಅಮಾನುಷ ಕರ್ಮಗಳನ್ನು ಮಾಡಿ ಮುಂದಕ್ಕೆ ಬರುತ್ತಲಿದಾರೋ ಹಾಗೆ ಅದನ್ನು ಕನ್ನಡಿಗರ ಪ್ರಯೋಜನಾರ್ಥವಾಗಿ ನಾವು ಈ ಹಿತಬೋಧಿನೀ ಗ್ರಂಥಮಾಲೆಯಲ್ಲಿ ವಿವರಿಸುತ್ತೇವೆ. ಭಾರತೀಯರಾದ ನಮ್ಮ ಜನಗಳಲ್ಲಿ ಇರತಕ್ಕ ನ್ಯೂನಾತಿರಿಕ್ತಗಳನ್ನು ತೋರಿಸುತ್ತೇವೆ" ಎಂದು ತಿಳಿಸಿರುವುದರಿಂದ ಈ ಗ್ರಂಥಮಾಲೆಯ ಉದ್ದೇಶವು ಸ್ಪಷ್ಟವಾಗುವುದು.

ಅನೇಕ ಪುಸ್ತಕಗಳಿಂದಲೂ, ಸ್ವಾನುಭವದಿಂದಲೂ, ಲೋಕವ್ಯವಹಾರದಿಂದಲೂ ವಿಷಯಗಳನ್ನು ಸಂಗ್ರಹಿಸಿ ಜನರ ಮನಸ್ಸಿಗೆ ಅವು ನಾಟುವಂತೆ ಅಲ್ಲಲ್ಲಿ ತಕ್ಕ ನಿದರ್ಶನಗಳನ್ನೂ ಆಧಾರಗಳನ್ನೂ ಕೊಟ್ಟಿರುತ್ತಾರೆ. ಸ್ವಾಮಿ ವಿವೇಕಾ

ಸಂದರು, ಶ್ರೀ ಶೃಂಗೇರಿ ಜಗದ್ಗುರುಗಳು, ಮಹಾತ್ಮಾ ಗಾಂಧಿ ಮತ್ತು ಮಹಮ್ಮದಾಲಿಯವರು, ಭಾರತೀಯ ಸಂಸ್ಥಾನಗಳು, ವಿವಾಹ ನಿರೋಧ, ದೇವತೆಗಳು, ಶಾಸ್ತ್ರಗಳು, ಕಂದಾಯದ ಲೂಟಿ, ನಿಷಾದ್ರವ್ಯ ಸೇವನೆ, ಹಿಂದೂ ಮಹಾ ಸಭಾ, ವಿದುರನೀತಿ—ಇವೇ ಮೊದಲಾದ ವಿಷಯಗಳ ಮೇಲೆ ಈ ಸಂಚಿಕೆಯಲ್ಲಿ ಲೇಖನಗಳಿವೆ. ಮುದ್ರಣದ ತಪ್ಪುಗಳು ಹೇರಳವಾಗಿರುವುದರಿಂದಲೂ, ಮುದ್ರಣವು ಅಂದವಾಗಿಲ್ಲದುದರಿಂದಲೂ ಈ ಪುಸ್ತಕವು ಓದುವವರ ಮನಸ್ಸನ್ನು ಆಕರ್ಷಿಸುವಂತಿಲ್ಲ.

---

## ೫. ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ

(ಬಸವ ತತ್ವಪ್ರಕಾಶ ಮಾಲೆಯ ಪ್ರಥಮ ಕುಸುಮ)

ಲೇಖಕರೂ ಪ್ರಕಾಶಕರೂ.—ಬಸವರಾಜ ಪತ್ರಿಕೆಯ ಸಂಪಾದಕರಾದ
ಚನ್ನಬಸವಪ್ಪ ಮುರಿಗೇಂದ್ರಪ್ಪ ಹಾಲಪ್ಪನವರು, ಧಾರವಾಡ.

**ಕ್ರೌ ಅಷ್ಟಪತ್ರ ಪುಟಗಳು ೪೯; ೧೯೨೮ ; ಬೆಲೆ ೪ ಆಣೆ.**

ಈ ಪುಸ್ತಕದಲ್ಲಿ ಎರಡು ಮುಖ್ಯವಾದ ಭಾಗಗಳಿವೆ; 'ವರ್ಣಾಶ್ರಮ ಧರ್ಮನಿರೂಪಣೆ' ಎಂಬುದು ಮೊದಲನೆಯದು ; 'ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ' ಎಂಬುದು ಎರಡನೆಯದು. ಮೊದಲನೆಯದರಲ್ಲಿ ವರ್ಣಾಶ್ರಮಗಳು ಆರಂಭವಾದುದೂ, ಅದರ ಪರಿಣಾಮಗಳೂ, ಬೌದ್ಧ ಜೈನ ಮತಗಳ ಪ್ರಚಾರ, ಶ್ರೀ ಶಂಕರಾಚಾರ್ಯರೂ, ಮಧ್ವಾಚಾರ್ಯರೂ, ರಾಮಾನುಜಾಚಾರ್ಯರೂ ವೈದಿಕಮತದ ಪುನರುದ್ಧಾರಕ್ಕಾಗಿ ಮಾಡಿದ ಕಾರ್ಯಕಲಾಪಗಳು—ಮೊದಲಾದುವನ್ನೆಲ್ಲ ವಿಹಂಗಮ ದೃಷ್ಟಿಯಿಂದ ವಿಮರ್ಶೆ ಮಾಡಿದ್ದಾರೆ. ವಿಷಯವು ವಿಸ್ತಾರವಾದುದು; ಸುಮಾರು ಇಪ್ಪತ್ತು ಪುಟಗಳಲ್ಲಿ ಮುಖ್ಯಾಂಶಗಳನ್ನೆಲ್ಲ ಗರ್ಭೀಕರಿಸಿದ್ದಾರೆ. ವರ್ಣಾಶ್ರಮಗಳು ಹುಟ್ಟಿದ ರೀತಿ ಮತ್ತು ಅವುಗಳಿಂದ ಜನತೆಗಾಗಿರುವ ಲಾಭನಷ್ಟಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಾಶವುಂಟೆಂದು ತೋರುತ್ತದೆ.

ಎರಡನೆಯದಾದ 'ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ' ಎಂಬುದರಲ್ಲಿ ಬಸವೇಶ್ವರನ ಪಂಥವನ್ನು ವಿವರಿಸಿ ಆತನಿಂದ ಕರ್ಣಾಟಕಕ್ಕೆ ಆಗಿರುವ ಉಪಕಾರವನ್ನು ಗ್ರಂಥಕರ್ತರು ತೋರಿಸಿದ್ದಾರೆ; ಬಸವೇಶ್ವರನು ಆಗಮೋಕ್ತವಾದ ಮಾರ್ಗಗಳಿಂದಲೇ ವೀರಶೈವವನ್ನು ಉದ್ಧಾರಮಾಡಿದನೆಂದು ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಿದ್ದಾರೆ. ಆಗಿನ ಸನ್ನಿವೇಶ, ಬಸವೇಶ್ವರನ ಮೂರ್ತಿ ಸ್ವರೂಪ, ಬಸವೇಶ್ವರನಲ್ಲಿ ಮಹತ್ವವಾದುದು ಏನು? ಎಂಬಿವುಗಳನ್ನು ವಿವರಿಸಿದ್ದರೆ ಗ್ರಂಥವು ಇನ್ನೂ ಸ್ವಾರಸ್ಯವಾಗುತ್ತಿದ್ದಿತು.

ಈಗ ಜನತೆಯಲ್ಲಿ ಜಾಗೃತಿಯುಂಟಾಗಿ ರಾಷ್ಟ್ರದ ಐಕಮತ್ಯ ಸಾಧನೆಗೆ ಹಲವು ಉಪಾಯಗಳು ಆಲೋಚನೆಗೆ ಬರುತ್ತಿರುವಾಗ ಬಸವೇಶ್ವರಾದಿ ಮಹಾತ್ಮರು ಯಾವ ಮಾರ್ಗಗಳನ್ನು ತೋರಿಸಿಕೊಟ್ಟಿದ್ದಾರೆಂಬುದನ್ನು ಎಲ್ಲರೂ ತಿಳಿಯಬೇಕಾದುದು ಅತ್ಯಾವಶ್ಯಕ. ಆದುದರಿಂದ ಈ ಗ್ರಂಥವು ನಮ್ಮ ಆದರಕ್ಕೆ ಪಾತ್ರವಾಗಿದೆ.

ಎಂ. ಆರ್. ಶ್ರೀ.

---

## ೬. ಶ್ರೀರಾಮನ ಮಹಿಮೆ

ಲೇಖಕರು.—ಎಂ. ವೆಂಕಟಕೃಷ್ಣಯ್ಯನವರು, ಮೈಸೂರು.

ಡೆಮ್ಮೈ ಅಷ್ಟಪತ್ರ ಪುಟ ೭; ೧೯೩೯; ಬೆಲೆ ೯ ಪೈ.

ಈ ಲೇಖಕರು ಶ್ರೀಮದ್ರಾಮಾಯಣದಲ್ಲಿಯ ವಿಷಯಗಳನ್ನೆತ್ತಿಕೊಂಡು, ಸತ್ಕಾರ್ಯಗಳಿಗೆ ತಕ್ಕ ಸುಫಲ ಪ್ರಾಪ್ತಿಯೂ, ದುಷ್ಕಾರ್ಯಗಳಿಗೆ ತಕ್ಕ ಶಿಕ್ಷಾನುಭವವೂ ದೊರೆಯುವುದು ನಿಸ್ಸಂದೇಹವೆಂದೂ, ರಾಮಾಯಣದಲ್ಲಿ ಅಷ್ಟು ಹೃದಯಂಗಮವಾಗಿ ವಿವರಿಸಿರುವ ಅನೇಕ ವಿಷಯಗಳನ್ನು ಮನನ ಮಾಡಿ, ದುರ್ಮಾರ್ಗದಲ್ಲಿ ಪ್ರವರ್ತಿಸದೆ ಸನ್ಮಾರ್ಗದಲ್ಲಿಯೇ ನಡೆಯುವುದು ಎಷ್ಟು ಶ್ರೇಯಸ್ಕರವೆಂಬುದನ್ನು ಸುಲಭವಾಗಿ ತಿಳಿಯಬಹುದೆಂದೂ ಉಪನ್ಯಾಸ ಮಾಡುತ್ತಾರೆ; "ಲೌಕಿಕರಾದ ನಾವು ನಮ್ಮ ಮನೋವಾಕ್ಕರ್ಮಗಳಲ್ಲಿ ಯಾವ ಯಾವ ಕಾಲ ದೇಶ ವರ್ತಮಾನಗಳಲ್ಲಿ ಹೇಗೆ ನಡೆದುಕೊಂಡರೆ ನಮಗೆ ಸದಿಷ್ಟಾರ್ಥ ಪ್ರಾಪ್ತಿಯಾಗುವುದೋ ಅವುಗಳಿಗೆಲ್ಲ ಅವಕಾಶವು ರಾಮಾಯಣದಲ್ಲಿರುತ್ತದೆ" ಎಂದು ಹೇಳುತ್ತಾರೆ.

ಇಷ್ಟು ಸಣ್ಣ ಲೇಖನದಲ್ಲಿಯೂ ಮುದ್ರಣದ ತಪ್ಪುಗಳು ಹೇರಳವಾಗಿವೆ.

---

## ೭. ಕಥಾಂಜಲಿ

ಸಂಪಾದಕರು.—ಅ. ನ. ಕೃಷ್ಣರಾಯರು, ಬೆಂಗಳೂರು.

(ಮಾಸ ಪತ್ರಿಕೆ—ಸಂಪುಟ ೧, ಸಂಚಿಕೆ ೧)

ಡೆಮ್ಮೈ ಅಷ್ಟಪತ್ರ ಪುಟ ೪೮; ಜೂಲೈ ೧೯೩೯; ವಾರ್ಷಿಕ ಚಂದಾ ರೂ. ೨—೮—೦.

ಇದು "ತಿಳಿಗನ್ನಡದ ಸಣ್ಣ ಕಥೆಗಳ ಮಾಸ ಪತ್ರಿಕೆ." ಸಂಪಾದಕರು ತಮ್ಮ ಮುನ್ನುಡಿಯಲ್ಲಿ, "ಭಾರತವರ್ಷವನ್ನು ಪುನಃ ಸೃಷ್ಟಿಸಿ, ಅಳಿದಿರುವ ಅದರ ಕಲಾ ಸಾಹಿತ್ಯ ವಿಜ್ಞಾನ ಸಂಸ್ಕೃತಿಗಳ ಇತಿಹಾಸವನ್ನು ಪುನಃ ರಚಿಸಿ, ಒಮ್ಮೆಯಾದರೂ ಆನಂದದಿಂದ ನರ್ತಿಸಿ ಬಾಷ್ಪಗಳನ್ನು ಸುರಿಸಬೇಕೆಂಬುದೇ ಇಂದಿನವರ ಮನಸ್ಸಿನ ಮಹದಾಶಯವಾಗಿದೆ" ಎಂದೂ, "ಈ ಆದರ್ಶ ಸಾಧನೆ

ಗವರು ಟೊಂಕಕಟ್ಟಿ ನಿಂತು ತಮ್ಮ ತನು ಮನ ಧನಗಳನ್ನರ್ಪಿಸಿದ್ದಾರೆ'' ಎಂದೂ, ''ಈ ಕಥಾಂಜಲಿಯೂ ಅಂತಹ ಆಶೆಯ ಒಂದು ರೂಪ''ವೆಂದೂ, ''ಸಣ್ಣಕಥೆಗಳಂತಹ ಸರ್ವರ ಹೃತ್ಸಾತ್ಕರ್ಷಕ ಸಾಧನದಿಂದಲೇ ನಾಡಿನ ಸಮಸ್ಯೆಗಳ ಪೂರಣವನ್ನೂ, ಐಕ್ಯತೆಯ ಆರ್ಜನೆಯನ್ನೇ ನಾವು ಮಾಡಲು ಕಟಿಬದ್ಧರಾಗಿದ್ದೇವೆ'' ಎಂದೂ ತಿಳಿಸಿರುತ್ತಾರೆ. ''ಕಥೆಗಳ ಮೇಲಣ ವಿಮರ್ಶೆಗಳು, ಕಥೆಗಾರರ ಮೇಲಣ ಲೇಖನಗಳು, ಕಥೆಗಾರರ ಮತ್ತು ಇತರ ಮಹನೀಯರ ಜೀವನ ಚರಿತ್ರೆಗಳೂ ಕಾಲಕಾಲಕ್ಕೆ ಪ್ರಕಟವಾಗುವುವು'' ಎಂದು ಹೇಳಿದ್ದಾರೆ. ಸಂಪಾದಕರ ಉದ್ದೇಶವೇನೋ ಶ್ಲಾಘ್ಯತಮವಾದುದೆಂದು ಹೇಳಬೇಕಾದುದಿಲ್ಲ. ಇದು ಎಷ್ಟು ಮಟ್ಟಿಗೆ ಕಾರ್ಯದಲ್ಲಿ ಫಲಕಾರಿಯಾಗುವುದೋ ನೋಡಬೇಕು. ಈ ಪತ್ರಿಕೆಗೆ ಸುಪ್ರಸಿದ್ಧರಾದ ಲೇಖಕರು—ಮ॥ ದೇವುಡು ನರಸಿಂಹಶಾಸ್ತ್ರಿಗಳು, ಮ॥ ದ. ಕೃ. ಭಾರದ್ವಾಜರು, ಮ॥ ಸಿ. ಕೆ. ವೆಂಕಟರಾಮಯ್ಯನವರು, ಶ್ರೀಮತಿ ಕಲ್ಯಾಣಮ್ಮನವರು—ಇವರೇ ಮೊದಲಾದವರು ಕಥೆಗಳನ್ನು ಬರೆಯುವರು.

ಈ ಪತ್ರಿಕೆಯಲ್ಲಿಯ ಕಥೆಗಳು ಸಾಮಾನ್ಯವಾಗಿ ಮಾತನಾಡುವ ಶೈಲಿಯಲ್ಲಿವೆ. ಸಹಜವಾಗಿರಬೇಕೆಂಬ ಅಭಿಪ್ರಾಯದಿಂದಿರಬಹುದು, ಭಾಷಾ ಸೌಷ್ಠವಕ್ಕೆ ಅಷ್ಟು ಗಮನಕೊಟ್ಟಿಲ್ಲ. ನಮ್ಮ ಸಮಾಜದ ಈಗಣ ಸ್ಥಿತಿಯನ್ನು ಚಿತ್ರಿಸುವುದರಿಂದ ಜನರಲ್ಲಿ ವಿವೇಕವನ್ನುಂಟುಮಾಡಬೇಕೆಂಬುದು ಸಂಪಾದಕರ ಆಶಯವೆಂದು ತೋರುವುದು.

---

## ೮. ಮದುವೆಯೋ ಮನೆಹಾಳೋ?

ಲೇಖಕರು.—ಅ. ನ. ಕೃಷ್ಣರಾಯರು, ವಿಶ್ವೇಶ್ವರಪುರ, ಬೆಂಗಳೂರು ಸಿಟಿ.

ಪ್ರಕಾಶಕರು.—ರಂಗಭೂಮಿ ಕಾರ್ಯಾಲಯ, ಬೆಂಗಳೂರು ಸಿಟಿ.

ಕ್ರೌನ್ ಚತುಷ್ಪತ್ರ ಪುಟಗಳು ೨೪; ೧೯೨೯; ಬೆಲೆ ೬ ಆಣೆ.

ಇದು 'ರಂಗಭೂಮಿ'ಯಿಂದ ಪುನರ್ಮುದ್ರಣವಾದ ಒಂದು ಸಾಮಾಜಿಕ ನಾಟಕ. ಶೇಷಗಿರಿರಾಯನೆಂಬ ಮುದುಕನು ರಾಮಾವಧಾನಿಯೆಂಬ ಜೋಯಿಸನಿಗೆ ದುಡ್ಡಿನಾಶೆಯನ್ನು ತೋರಿಸಿ ಸುಳ್ಳು ಜಾತಕವನ್ನು ಬರೆಯಿಸಿ ಮದುವೆ ಮಾಡಿಕೊಳ್ಳುವ ಏರ್ಪಾಡನ್ನು ಮಾಡುವನು. ಆತನ ಅಣ್ಣನ ಮಗನಾದ ಗಂಗಾಧರನು ರಜದ ಸಮಯಕ್ಕೆ ಬೆಂಗಳೂರಿನಿಂದ ಊರಿಗೆ ಬಂದಿರುವನು. ಗಂಗಾಧರನು ನವಯುವಕನು, ಸಮಾಜ ಸುಧಾರಣೆಯಲ್ಲಿ ಬಹಳ ಉತ್ಸಾಹವುಳ್ಳವನು. ತನ್ನ ಚಿಕ್ಕಪ್ಪನು ವರ್ತಮಾನ ಪತ್ರಿಕೆಗೆ ಕಳುಹಿಸಿದ್ದ ಪ್ರಕಟನೆಯನ್ನು ನೋಡಿ, ಈ ಅಧರ್ಮ ಕಾರ್ಯವನ್ನು ನಿಲ್ಲಿಸುವುದಕ್ಕಾಗಿ ತಾನೂ ತನ್ನ ಸ್ನೇಹಿತನಾದ ಕೃಷ್ಣಸ್ವಾಮಿಯೂ ಒಂದು ಯುಕ್ತಿಯನ್ನು ಯೋಚಿಸುವರು. ಕೃಷ್ಣಸ್ವಾಮಿಯು ಅಭಿನಯ ಮಾಡುವುದರಲ್ಲಿ ಚತುರನು. ಇವನು ಹುಡುಗಿಯಂತೆ

ವೇಷ ಹಾಕಿಕೊಂಡು ಶೇಷಗಿರಿರಾಯನನ್ನು ಮದುವೆಯಾಗುವನು ; ಅನಂತರ ಚಂಡಿಯಂತೆ ನಡೆದುಕೊಳ್ಳುವುದರಿಂದ, ಶೇಷಗಿರಿರಾಯನಲ್ಲಿ ಗಾಬರಿಯನ್ನುಂಟು ಮಾಡುವನು. ಶೇಷಗಿರಿರಾಯನು ಮೆತ್ತಗಾದಮೇಲೆ ಗಂಗಾಧರನು, ತಾನೂ ತನ್ನ ಸ್ನೇಹಿತನೂ ಮಾಡಿದ ಯುಕ್ತಿಯನ್ನು ಶೇಷಗಿರಿರಾಯನಿಗೆ ತಿಳಿಸಿ, ಆತನಿಗೂ ರಾಮಾವಧಾನಿಗೂ ಬುದ್ಧಿ ಕಲಿಸುವರು. ಇದೇ ನಾಟಕದ ಕಥಾ ವಸ್ತು.

ಇದನ್ನು ನಾಟಕವೆನ್ನುವುದಕ್ಕಿಂತಲೂ ಪ್ರಹಸನವೆಂದರೆ ಸಲ್ಲುವುದು. ಗ್ರಂಥಕರ್ತರು ಜಾಣ್ಮೆಯಿಂದ ಕಥೆಯನ್ನು ಕಲ್ಪಿಸಿರುವರು ; ನಮ್ಮ ಸಮಾಜದಲ್ಲಿಯ ಮಿಥ್ಯಾಚಾರಗಳ ವಿಷಯವಾಗಿ ಅಲ್ಲಲ್ಲಿ ವಿಡಂಬನ ಪೂರ್ವಕವಾದ ಸಂಭಾಷಣೆಗಳನ್ನು ಸೇರಿಸಿರುವರು. ಪಾತ್ರಗಳ ಕಲ್ಪನೆ ಚೆನ್ನಾಗಿದೆ; ಆದರೆ, ಅನೇಕ ಆಧುನಿಕ ನಾಟಕಗಳಲ್ಲಿಯೂ ಪ್ರಹಸನಗಳಲ್ಲಿಯೂ ಇರುವಂತೆಯೇ, ಈ ಪ್ರಹಸನದಲ್ಲಿಯೂ ಪಾತ್ರಗಳೆಲ್ಲರೂ ಬಹಳ ಸಂಭಾಷಣ ಪ್ರಿಯರು. ಶೇಷಗಿರಿರಾಯರು, ರಾಮಾವಧಾನಿ, ಆತನ ಪತ್ನಿ ಭಾಗೀರತಮ್ಮ, ಶೇಷಗಿರಿರಾಯರ ಮನೆಯಲ್ಲಿ ಕೆಲಸ ಮಾಡುವ ನಂಜಮ್ಮ—ಈ ಪಾತ್ರಗಳ ರಚನೆ ಸಮರ್ಪಕವಾಗಿದೆ. ಕಥಾನಾಯಕನಾದ ಗಂಗಾಧರ, ಅವನ ಸ್ನೇಹಿತನಾದ ಕೃಷ್ಣಸ್ವಾಮಿ—ಇವರ ರಚನೆಯ ವಿಚಾರದಲ್ಲಿ ಈ ಮಾತು ಹೇಳುವುದು ಕಷ್ಟವಾಗಿದೆ. ಗ್ರಂಥಕರ್ತರೇನೋ ಇವರಿಂದ ದೊಡ್ಡ ಸಾಹಸ ಕಾರ್ಯವನ್ನು ಮಾಡಿಸಿದ್ದರೂ, ಒಟ್ಟಿನಮೇಲೆ, ಇವರು ಕೇವಲ ಮಾತುಗಾರರೆಂದೇ ತೋರುವರು. ಕಾರ್ಯತತ್ಪರರೂ, ಸಾಹಸೋದ್ಯೋಗಿಗಳೂ ಎಷ್ಟು ಉತ್ಸಾಹಿಗಳಾದರೂ ಸಂಯಮಿಗಳಾಗಿರುತ್ತಾರೆ, ಮಾತುಗಳನ್ನು ಸುರಿಯುವವರಾಗಿರುವುದಿಲ್ಲ. ಈ ಮಾತು ಪ್ರಾಚೀನ ಕಾಲಕ್ಕೆ ಮಾತ್ರವಲ್ಲದೆ ಆಧುನಿಕಕ್ಕೂ ಸಲ್ಲುತ್ತದೆ.

ಈ ಪ್ರಹಸನವು ಬಹು ಮಟ್ಟಿಗೆ ಶ್ರೀ ಟಿ. ಪಿ. ಕೈಲಾಸಂ ಅವರ ಪಂಥವನ್ನನುಸರಿಸಿದೆ; ಭಾಷೆ, ಪಾತ್ರರಚನೆ, ವಿನೋದಕರವಾದ ಸಂಭಾಷಣೆ ಮುಂತಾದ ವಿಷಯಗಳಲ್ಲಿ ಅವರ ರಚನೆಯ ಅನುಕರಣವು ಕಾಣುತ್ತದೆ. ಆದರೂ, ಸ್ವತಂತ್ರವಾದ ಪಾತ್ರಗಳನ್ನು ನಿರ್ಮಿಸುವುದರಲ್ಲಿಯೂ ಗ್ರಂಥಕರ್ತರು ಸಮರ್ಥರೆಂದು ತೋರಿಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಂತಹ ಪ್ರಯತ್ನಗಳು ಶುಭ ಸೂಚಕವಾಗಿವೆ. ಈ ಗ್ರಂಥಕರ್ತರಿಂದ ಕನ್ನಡ ನುಡಿಗೆ ಸಾಕಾದಷ್ಟು ಸೇವೆಯಾಗಲೆಂದು ಹಾರೈಸುವೆವು.

**ಕೋ. ಸಂ.**

---

## ೯. ಅತ್ತೆ ಸೊಸೆ

ಲೇಖಕರು.—ಕೌಜಲಗಿ ಬಂಡೆಪ್ಪನವರು, ಧಾರವಾಡ.

ಕ್ರೌ೯ ಅಷ್ಟಪತ್ರ ಪುಟಗಳು ೨೮; ೧೯೨೪; ಬೆಲೆ ೧||೦ ಆಣೆ.

ಇದೊಂದು ಕಥೆ. ಅತ್ತೆ ಸೊಸೆಯರ ವೈಮನಸ್ಯವೇ ಈ ಕಥೆಯಲ್ಲಿ ಹೇಳಿರುವ ವಿಷಯ; ಕೇವಲ ಅತ್ತೆಯ ಕಾಟವೊಂದೇ ಇದರಲ್ಲಿ ಚಿತ್ರಿತವಾಗಿದೆಯೆಂದರೂ ಸಲ್ಲುವುದು. ರಾಘವೇಂದ್ರನೆಂಬವನು ವಿದ್ಯಾರ್ಥಿಯಾಗಿರುವಾಗಲೇ ಅವನಿಗೆ ವಿವಾಹವಾಗುತ್ತದೆ. ಅವನ ಪತ್ನಿಯಾದ ಇಂದಿರೆಯು ಋತುಮತಿಯಾಗುವುದಕ್ಕೆ ಮೊದಲೇ ಅತ್ತೆಯ ಮನೆಗೆ ಬಂದಿರುತ್ತಾಳೆ. ಅತ್ತೆಯ ಕಾಟದಿಂದ ಕಂದಿಕುಂದಿ ಅವಳು ರೋಗಗ್ರಸ್ತಳಾಗುತ್ತಾಳೆ. ಆ ಬಳಿಕ ಅವಳನ್ನು ತೌರು ಮನೆಯವರು ಕರೆದೊಯ್ಯುತ್ತಾರೆ. ರಾಘವೇಂದ್ರನು ವ್ಯಾಸಂಗ ಮಾಡಿ ಪರೀಕ್ಷೆಗಳಲ್ಲಿ ತೇರ್ಗಡೆಹೊಂದುತ್ತಿರುತ್ತಾನೆ. ಇಂದಿರೆಗೆ ಋತುಶಾಂತಿ ಪ್ರಸ್ತವಾದಮೇಲೆ ಅವಳು ಗಂಡನ ಮನೆಗೆ ಬರುತ್ತಾಳೆ. ಮತ್ತೆ ಅತ್ತೆಯ ಹಿಂಸೆಯು ಪ್ರಾರಂಭವಾಗುತ್ತದೆ. ಇಂದಿರೆಯು ಗರ್ಭಿಣಿಯಾಗುತ್ತಾಳೆ. ರಾಘವೇಂದ್ರನು ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದುತ್ತಾನೆ. ಅವನಿಗೆ ಪರಸ್ಥಳದಲ್ಲಿ ಕೆಲಸವಾಗುತ್ತದೆ. ಅವನೊಬ್ಬನೇ ಅಲ್ಲಿಗೆ ಹೋಗುತ್ತಾನೆ. ಆ ಬಳಿಕ ಇಂದಿರೆಯನ್ನು ಅವಳ ಅತ್ತೆಯು ಮತ್ತಷ್ಟು ಹಿಂಸಿಸತೊಡಗಿ, ಅವಳು ಹುಚ್ಚಿಯೆಂಬುದಾಗಿ ಹೇಳುತ್ತ ಕತ್ತಲೆಯ ಕೋಣೆಯಲ್ಲಿ ಕೂಡಿ, ಕಿಟಿಕಿಯಿಂದ ಅನ್ನವನ್ನು ಹಾಕುತ್ತಿರುತ್ತಾಳೆ. ಒಂದು ದಿನ ಬಾಗಿಲು ತೆರದೇ ಇರುತ್ತದೆ. ಆ ಸಮಯದಲ್ಲಿ ಇಂದಿರೆಯು ಮನೆಯಿಂದ ಎಲ್ಲಿಗೋ ಹೊರಟುಹೋಗುತ್ತಾಳೆ. ಅಲ್ಲಿಗೆ ಕಥೆಯು ಪೂರೈಸುತ್ತದೆ. ಈ ಗ್ರಂಥದಲ್ಲಿ ಅಸಂಭವವಾದ ವಿದ್ಯಮಾನಗಳೇ ತುಂಬಿವೆ. ಕಟ್ಟುಕಥೆಯು ಕಾವ್ಯವಾಗಬೇಕಾದರೆ, ಅದರಲ್ಲಿ ನೈಸರ್ಗಿಕ ಶೋಭೆ ಇರಬೇಕು. ಋತುಶಾಂತಿ ಪ್ರಸ್ತವಾಗುವುದಕ್ಕೆ ಮೊದಲೇ ಇಂದಿರೆಯು ಅತ್ತೆಯ ಮನೆಯಲ್ಲಿ ಆ ರೀತಿ ಹಿಂಸೆಗೊಳಗಾದುದು ಕೇವಲ ಅಸ್ವಾಭಾವಿಕ. ಅತ್ತೆಯು ಸೊಸೆಗೆ ಗೋಚರವಿಲ್ಲದಂತೆ ಮಂತ್ರಾಕ್ಷತೆಗಳನ್ನು ಅವಳ ಸೀರೆಯ ಸೆರಗಿನಲ್ಲಿ ಕಟ್ಟಿ, ಅವಳು ಗಂಡನಿಗೆ ಮದ್ದು ಮಾಡಲು (ಮಂತ್ರದಿಂದ ಸ್ವಾಧೀನಪಡಿಸಿಕೊಳ್ಳಲು) ಮಂತ್ರಾಕ್ಷತೆಯನ್ನಿಟ್ಟುಕೊಂಡಿದ್ದಳೆಂದು ಅವಳ ಗಂಡನಿಗೆ ಚಾಡಿ ಹೇಳುವುದೂ, ರಾಘವೇಂದ್ರನು (ಬಿ.ಎ., ಎಂ.ಎ. ಪರೀಕ್ಷೆಗಳಲ್ಲಿ ತೇರ್ಗಡೆಯಾದವನು) ಅದನ್ನು ನಂಬುವುದೂ ವಿಲಕ್ಷಣವಾದ ಸಂಗತಿಗಳು. ಮೊದಲಿನಿಂದ ಕೊನೆಯ ವರೆಗೂ ಉತ್ಪ್ರೇಕ್ಷೆಯಿಂದ ತುಂಬಿರುವ ಗ್ರಂಥವನ್ನು ಸತ್ಕಾವ್ಯವೆಂದು ಹೇಳಲಾಗುವುದಿಲ್ಲ.

ಸಿಕ್ಕಂತಾಯಿತು, ದುಷ್ಟಟ, ಪ್ರಸಾದ ಮಹಾತ್ಮೆ, ಸಿಗುವುದು, ಮರುಮರುಳಿ ನೋಡುತ್ತ, ಮುಂತಾದ ಅಶುದ್ಧ ಪ್ರಯೋಗಗಳೂ ಇವೆ.

ಗ್ರಂಥಕರ್ತರು ಮುಂದಣ ಮುದ್ರಣದಲ್ಲಿ ಈ ನ್ಯೂನತೆಗಳನ್ನು ಸರಿಪಡಿಸುವರೆಂದು ನಂಬಿರುವೆವು. ಭಾಷಾ ಪ್ರೇಮದಿಂದ ಗ್ರಂಥ ರಚನೆಗೆ ಹೊರಟಿರುವ ಅವರ ಪ್ರಯತ್ನವು ಶ್ಲಾಘ್ಯವಾದುದು.

**ಬಾಲಕನ ಬಾಲ ಲೀಲೆಗಳಂತೂ ಆ ಗಂಡ ಹೆಂಡರಿಗೆ ಸ್ವರ್ಗ ಸುಖವನ್ನು ಅಗ್ಗಮಾಡಿಬಿಟ್ಟವು.**

**ದುಃಖದ ಬೀಜವನ್ನು ಬಿತ್ತಿ ಸುಖದ ಬೆಳೆಯನ್ನು ಬೇಡಿದರೆ ಸಿಗುವುದೆಂತು?**

ಮುಂತಾದ ವಾಕ್ಯಗಳು ಮುದ್ದಾಗಿವೆ.

**ಸಿ. ಕೆ. ವೆಂ.**

---

## ೧೦. ಕಟುಕರೋಹಿಣಿ ಸಂವತ್ಸರದಲ್ಲಿ!

ಲೇಖಕರು.—ಶ್ರೀಮತಿ ಪಡುಕೋಣೆ ಸೀತಾದೇವಿ, ಮಂಗಳೂರು.

**ಕ್ರೌ ಅಷ್ಟಪತ್ರ ಪುಟಗಳು ೧೯ ; ೧೯೩೯ ; ಬೆಲೆ ಮೂರು ಆಣೆ.**

ಇದೊಂದು ಚಿಕ್ಕ ಪ್ರಹಸನ. ವಿದ್ಯಾವಂತರೂ ಪದವೀಧರರೂ ಆದ ಗಂಡುಸರು ತಮ್ಮ ಹೆಂಡಿತಿಯರನ್ನು ಸರಿಯಾಗಿ ಗೌರವಿಸುತ್ತಿಲ್ಲವೆಂಬುದನ್ನು ಸೂಚಿಸುವುದಕ್ಕಾಗಿ, ಪುರುಷರಿಗೆ ಗೃಹಕೃತ್ಯ ಕಾರ್ಯಗಳನ್ನೂ, ಸ್ತ್ರೀಯರಿಗೆ ಐ.ಸಿ.ಎಸ್. ಮುಂತಾದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಅಧಿಕಾರಮಾಡಿ ಪುರುಷರಿಗೆ ಪತ್ನೀವ್ರತವನ್ನು ಕಲಿಸುವ ಕಾರ್ಯವನ್ನೂ ವಹಿಸಿ, ಹಾಸ್ಯ ಪೂರಿತವಾದ ಈ ಗ್ರಂಥವನ್ನು ಲೇಖಕಿಯರು ರಚಿಸಿದ್ದಾರೆ. ನಾಟಕಕ್ಕಾಗಲಿ, ಪ್ರಹಸನಕ್ಕಾಗಲಿ ಸುಸಜ್ಜಿತವಾದ ಕಥಾ ಭಾಗವು ಸೇರಿದಲ್ಲದೆ ಅದು ಶೋಭಿಸಲಾರದು. ಈ ಪ್ರಹಸನದಲ್ಲಿ ಕಥಾ ಭಾಗಕ್ಕೂ ಗಮನಕೊಟ್ಟಿದ್ದರೆ ಇದು ಮತ್ತಷ್ಟು ರಮಣೀಯವಾಗಿರುತ್ತಿದ್ದಿತು. ಹಾಸ್ಯವು ಕೆಲವು ಕಡೆ ಸ್ವಲ್ಪ ಕಟುವಾಗಿರುವಂತೆ ತೋರುತ್ತದೆ. ಆದರೂ, ಒಟ್ಟಿನ ಮೇಲೆ ಈ ಗ್ರಂಥವು ವಿನೋದಕರವಾಗಿದೆ.

**ಸಿ. ಕೆ. ವೆಂ.**

---

## ೧೧. ಹೀಗಾಗಬೇಕೆ?

ಲೇಖಕರು.—ಶ್ರೀಮತಿ ಪಡುಕೋಣೆ ಸೀತಾದೇವಿ, ಮಂಗಳೂರು.

**ಕ್ರೌ ಅಷ್ಟಪತ್ರ ಪುಟಗಳು ೮೦ ; ಬೆಲೆ ಆರು ಆಣೆ.**

ಇದು ವೇಶ್ಯಾವೃತ್ತಿಯನ್ನು ಖಂಡಿಸಿ ಬರೆದಿರುವ ಗ್ರಂಥ. "ಇದು ಬಾಯಿ ಜೂಯಿ" ಎಂಬ ಮರಾಠೀ ಗ್ರಂಥದ ಕನ್ನಡ ಭಾಷಾಂತರವಾದರೂ, ಶ್ರೀಮತಿ ಸೀತಾದೇವಿಯವರು ಇದನ್ನು ಬಹಳ ಚೆನ್ನಾಗಿ ಬರೆದಿದ್ದಾರೆ. ಪುಸ್ತಕವನ್ನು ಪ್ರಾರಂಭಿಸಿದರೆ ಪೂರೈಸುವ ವರೆಗೂ ವಾಚಕರು ಅದನ್ನು ಕೆಳಕ್ಕಿಡುವಂತೆಯೇ ಇಲ್ಲ. ಮಲ್ಲಿಕೆಯೂ, ವೇಶ್ಯಾ ಕುಲದಲ್ಲಿ ಹುಟ್ಟಿದ ಚಂಪಕೆಯೂ ಗೆಳತಿಯರು.

ಮಲ್ಲಿಕೆಗೆ ಬಲತಾಯಿಯ ಕಾಟ. ಅವಳಿಗೆ ವಿವಾಹವಾಗುವುದು. ಅವಳು ಬೆಂಗಳೂರಿನಲ್ಲಿ ಧನಿಕರ ಮನೆಯನ್ನು ಸೇರಿ ಅಲ್ಲಿಗೆ ಹೊರಟುಹೋಗುವಳು. ಚಂಪಕೆಗೆ ವೇಶ್ಯಾ ವೃತ್ತಿಯಲ್ಲ ಮೊದಲಿನಿಂದಲೂ ಅಸಹ್ಯ. ಸ್ವಲ್ಪ ಕಾಲದಮೇಲೆ ಅವಳ ತಾಯಿಯೂ ಸೋದರಮಾವನೂ ಅವಳೊಡನೆ ಬೆಂಗಳೂರಿಗೆ ಹೋಗಿ ನೆಲಸುವರು. ಚಂಪಕೆಯು ತನಗಿಷ್ಟವಿಲ್ಲದಿದ್ದರೂ ತಾಯಿಯ ಕಪಟೋಪಾಯಕ್ಕೆ ಬಲಿಯಾಗಿ ತಾಯಿಯ ಪ್ರಾಣವನ್ನುಳಿಸುವುದಕ್ಕಾಗಿ ಧನಿಕನೊಬ್ಬನಿಗೆ ಆಸ್ಪದಕೊಡಲು ಒಪ್ಪುವಳು. ಆ ಧನಿಕನಿಂದ ಅವನ ಹೆಂಡಿತಿಯ ಒಡವೆಗಳನ್ನೆಲ್ಲ ಚಂಪಕೆಯು ಕಾಲಕ್ರಮದಲ್ಲಿ ಸೂರೆಗೊಳ್ಳುವಳು. ಅವನ ಹೆಂಡಿತಿಯಾದ ಮಲ್ಲಿಕೆಯ ಮಾಂಗಲ್ಯ ಸಮೇತವಾದ ಅನರ್ಘ್ಯವಾದ ಹಾರವೂ ಮಲ್ಲಿಕೆಯ ಬಳಿಗೆ ಬರುವುದು. ಮಲ್ಲಿಕೆಯು ರೋಗಗ್ರಸ್ತಳಾಗಿ ಮೃತಳಾಗುವಳು. ತಾನು ಅನ್ಯಾಯ ಮಾಡಿದುದು ತನ್ನ ಪ್ರಾಣ ಸಖಿಯಾದ ಮಲ್ಲಿಕೆಗೆ ಮಾತ್ರವೇ ಎಂಬುದು ಚಂಪಕೆಗೆ ಕೊನೆಗೆ ಗೊತ್ತಾಗುವುದು. ತಿಳಿಯದೆ ಮಾಡಿದ ಅಪರಾಧಕ್ಕಾಗಿ ಮನನೊಂದು ಚಂಪಕೆಯು ಮಲ್ಲಿಕೆಯ ಮೃತ ದೇಹವಿದ್ದ ಕೊಟಡಿಯಲ್ಲಿ ಕಪಾಟಿನಲ್ಲಿದ್ದ ವಿಷದ ಸೀಸೆಯನ್ನು ತೆಗೆದುಕೊಂಡು ವಿಷ ಪಾನ ಮಾಡಿ ಮೃತಳಾಗುವಳು. ಚಂಪಕೆಯ ಪಾತ್ರವು ಬಹಳ ರಮಣೀಯವಾಗಿ ಕಂಗೊಳಿಸುವಂತೆ ಚಿತ್ರಿತವಾಗಿದೆ. 'ಬಲತಾಯಿ,' 'ಉಲ್ಹಾಸ,' ಮುಂತಾದ ಅಶುದ್ಧ ಪ್ರಯೋಗಗಳೂ, "ಏನೇ ಹಾದರಗಿತ್ತಿ!" ಎಂಬಿವೇ ಮುಂತಾದ ಕೆಲವು ಅಶ್ಲೀಲ ವಾಕ್ಕುಗಳೂ, 'ಮಾವು, ಪೇರಳೆ, ಸೇರಳೆ, ಗೇರು ಹಣ್ಣುಗಳು' ಒಂದೇ ಕಾಲದಲ್ಲಿ ದೊರೆತವೆಂದು ಹೇಳಿರುವ ಅಸಂಭವವಾದ ಸನ್ನಿವೇಶವೂ ಇಲ್ಲದೆಹೋಗಿದ್ದರೆ ಈ ಗ್ರಂಥವು ಮತ್ತೂ ಉತ್ತಮವಾಗಿ ಮನೋರಂಜಕವಾಗುತ್ತಿದ್ದಿತು. ಆದರೂ, ಒಟ್ಟಿನಮೇಲೆ ಈ ಗ್ರಂಥವು ಬಹಳ ಸ್ವಾರಸ್ಯವಾಗಿದೆ. ಗ್ರಂಥಕರ್ತ್ರಿಯರು ಉತ್ತಮ ರೀತಿಯಲ್ಲಿ ಇದನ್ನು ರಚಿಸಿದ್ದಾರೆ. ಅವರ ಪ್ರಯತ್ನವು ಶ್ಲಾಘ್ಯವಾಗಿದೆ. ಅವರು ಇಂತಹ ಉತ್ತಮ ಗ್ರಂಥಗಳನ್ನು ಬರೆದು ಭಾಷಾ ಸೇವೆ ಮಾಡಲೆಂಬುದಾಗಿ ಹಾರೈಸುವೆವು.

**ಸಿ. ಕೆ. ವೆಂ.**

---

## ೧೨. ಯಾರಿಗೆ ಯಾರು ಕಡಮೆ

ಲೇಖಕರು.—ಚಿಂಚೋಳಿ ಜಯಪೂರ್ಣಾಚಾರ್ಯರು, ಬೆಂಗಳೂರು.

**ಡೆಮ್ಮೈ ಅಷ್ಟಪತ್ರ ಪುಟಗಳು ೨೪; ೧೯೨೭.**

ಇದೊಂದು ಸಣ್ಣ ಕಥೆ. ಶಾರದೆಯೂ ಕೃಷ್ಣಮೂರ್ತಿಯೂ ರಸಿಕರಾದ ದಂಪತಿಗಳು. ಅವರ ಜೀವನವು ಪ್ರೇಮ ಭರಿತವಾದುದು. ಶಾರದೆಯು ಎಂಟ್ರೆನ್ಸ್ ಪರೀಕ್ಷೆಗೆ ಓದುವುದು ಕೃಷ್ಣಮೂರ್ತಿಗೆ ಇಷ್ಟವಿಲ್ಲದೆ ಹೋಗುವುದು. ತರಗತಿಗೆ ಸೇರಲು ಶಾರದೆಯು ಹೊರಟಿರುವಳು. ದಂಪತಿಗಳಿಗೆ ಒಬ್ಬರ ಆಶಯವು ಮತ್ತೊಬ್ಬರಿಗೆ ತಿಳಿಯದೆ ವೈಮನಸ್ಯವುಂಟಾಗುವುದು. ಕೃಷ್ಣಮೂರ್ತಿಯು

ಕೋಪಿಸಿಕೊಂಡು ಹಿಂದೂಪುರದ ರೈಲಿಗೆ ಹೊರಟುಹೋಗುವನು. ಶಾರದೆಯು ಪಾಠಶಾಲೆಯಿಂದ ಬಂದ ಮೇಲೆ ಪತಿಯ ಆಗಮನವನ್ನು ನಿರೀಕ್ಷಿಸುವಳು. ಅತ್ತ, ಕೃಷ್ಣಮೂರ್ತಿಯು ತಾನು ದುಡುಕಿದುದಕ್ಕಾಗಿ ಪಶ್ಚಾತ್ತಾಪಪಟ್ಟು ಮತ್ತೆ ಬೆಂಗಳೂರಿಗೆ ಬರಲು ಹೊರಡುವಷ್ಟರಲ್ಲಿಯೇ ಹಳ್ಳಿಯಲ್ಲಿ ತನ್ನ ಅಜ್ಜಿಗೆ ರೋಗವೆಂದು ತಿಳಿದು ಅಲ್ಲಿಗೆ ಹೋಗುವನು. ಇತ್ತ, ಶಾರದೆಯೂ ಕೋಪಿಸಿಕೊಂಡು ಬೆಂಗಳೂರಿನಲ್ಲಿಯೇ ಇದ್ದ ತನ್ನ ತೌರುಮನೆಗೆ ಹೋಗುವಳು. ತನ್ನ ಮಗಳು ಗಂಡುಮಗನಂತೆ ತನ್ನ ಮನೆಯಲ್ಲಿಯೇ ವಾಸವಾಗಿರಬೇಕೆಂದು ಅವಳ ತಂದೆಯು ತೀರ್ಮಾನಿಸುವನು. ಶಾರದೆಯು ತಂದೆಯ ಮನೆಗೆ ಹೋದುದನ್ನು ಅಡಿಗೆಯವನ ಕಾಗದದಿಂದ ತಿಳಿದು, ಕೃಷ್ಣಮೂರ್ತಿಗೆ ಇಳಿದಿದ್ದ ಕೋಪವು ಮತ್ತೆ ಮೇಲೇರುವುದು. ಅಜ್ಜಿಯು ಅವನಿಗೆ ಬೇರೆ ಮದುವೆಯ ಅವಾಂತರವನ್ನು ಹೂಡುವಳು. ಅವನು ರುಕ್ಮಿಣಿಯೆಂಬ ಹಳ್ಳಿಯ ಹುಡುಗಿಯನ್ನು ಮದುವೆಯಾಗುವನು. ಅತ್ತ, ಶಾರದೆಯು ತನ್ನ ವ್ಯಾಸಂಗವನ್ನು ನಿರಾತಂಕವಾಗಿ ನೆರವೇರಿಸುತ್ತಿರುವಳು. ಕೃಷ್ಣಮೂರ್ತಿಯ ಅಜ್ಜಿಯು ಮೃತಪಡುವಳು. ಕೃಷ್ಣಮೂರ್ತಿಯು ಬೆಂಗಳೂರಿಗೆ ಬಂದು ಸಂಸಾರ ಮಾಡತೊಡಗುವನು. ತನ್ನ ಪತ್ನಿಯಾದ ರುಕ್ಮಿಣಿಗೆ ನಾಗರಿಕತೆಯ ಗಂಧವೇ ಇಲ್ಲವೆಂಬುದನ್ನು ತಿಳಿದು ವ್ಯಥಿತನಾಗಿ ಅವಳಿಗೆ ಶಿಕ್ಷಣ ಕೊಡಲು ಮತ್ತೆ ಹಳ್ಳಿಗೇ ಹೊರಟುಹೋಗುವನು. ಅವಳೂ ಪತಿಯಲ್ಲಿ ಪ್ರೀತಿಯಿಂದಿದ್ದು ಶಿಕ್ಷಣ ಹೊಂದಲು ಆಶೆಯಿಂದ ಸಿದ್ಧವಾಗುವಳು. ಅವಳಿಗೆ ರೋಗ ಬಂದು ಬೆಂಗಳೂರಿಗೆ ಕರೆತಂದು ಆಸ್ಪತ್ರೆಯಲ್ಲಿಟ್ಟರೂ ಸಾರ್ಥಕವಾಗದೆ ಅವಳು ಮೃತಪಡುವಳು. ಕೃಷ್ಣಮೂರ್ತಿಯು ಹುಚ್ಚನಂತಾಗಿ ಮತ್ತೆ ಹಳ್ಳಿಗೇ ಹಿಂದಿರುಗುವನು. ಅಲ್ಲಿಯೂ ಬೇಸರ; ಎಲ್ಲಿಯೂ ನಿಲ್ಲಲಾರ. ಒಂದು ದಿನ ಮೈಸೂರು ಬ್ಯಾಂಕಿನಿಂದ ಹಣವನ್ನು ತೆಗೆದುಕೊಂಡು ಹೋಗಲು, ಕೃಷ್ಣಮೂರ್ತಿಯು ಬೆಂಗಳೂರಿಗೆ ಬಂದು ಮೋಟಾರಿಗೆ ಸಿಕ್ಕಿ ಆಸ್ಪತ್ರೆಯನ್ನು ಸೇರುವನು. ಅತ್ತ ಶಾರದೆಯು ತನ್ನ ತಂದೆಯ ಮರಣಾನಂತರ ವ್ಯಾಸಂಗವನ್ನೂ ಬಿಟ್ಟು, ಪರೋಪಕಾರಾರ್ಥವಾಗಿ ಆಸ್ಪತ್ರೆಯಲ್ಲಿ "ನರಸಮ್ಮ"ನಾಗಿರುವಳು. ಕೃಷ್ಣಮೂರ್ತಿಯನ್ನು ಅವಳು ಉಪಚರಿಸುವಳು. ಕೃಷ್ಣಮೂರ್ತಿಗೆ ಜ್ಞಾನ ಬಂದಮೇಲೆ, ಅವಳು ಆಸ್ಪತ್ರೆಯನ್ನು ಬಿಟ್ಟು ಹೊರಟುಹೋಗುವಳು. ಅವನಿಗೆ ಗುಣವಾಗಿ ಮತ್ತೆ ಅವನು ಬೆಂಗಳೂರಿನಲ್ಲಿಯೇ ನಿಲ್ಲುವನು. ಅವನು ವಿಜಯ ದಶಮಿಯ ದಿನ ಸಂಚಾರಾರ್ಥವಾಗಿ ಹೊರಡುವನು; ದೂರ ಹೋಗಲಾರದೆ ಮತ್ತೆ ಹಿಂದಿರುಗಿ ಬರುವನು. ಶಾರದೆಯು ಅವನ ದೇಹಸ್ಥಿತಿಯನ್ನು ವಿಚಾರಿಸಿಕೊಂಡು ಬರಲು, ಮಹಡಿಯನ್ನು ಹತ್ತಿದ್ದು ಕೆಳಕ್ಕಿಳಿಯುತ್ತಿರುವಳು. ಸತಿ ಪತಿಯರು ಸಂಧಿಸುವರು. ಕೋಪವೆಲ್ಲ ನೋಟ ಮಾತ್ರದಿಂದಲೇ, "ಎಲ್ಲಿಯೋ ಹಾರಿಹೋಯಿತು." ಅವರು ಮಹಲಿಗೆ ಹೋಗುವರು. ವಿರಸವು ಮಾಯವಾಗಿ ಸರಸವು ಉಪಕ್ರಮವಾಗುವುದು. ಕೃಷ್ಣಮೂರ್ತಿಯು ಆಚಾರ್ಯರು ತನಗೆ ಕೊಟ್ಟಿದ್ದ ಶಮೀಪತ್ರದ ದಳವನ್ನು ಶಾರದೆಯ ತುರುಬಿನಲ್ಲಿ ಮುಡಿಸುತ್ತ, "ದೇವಿ!

ಶಮೆಯು ರಾಮನಿಗೊಬ್ಬನಿಗಲ್ಲದೆ ಕೃಷ್ಣನಿಗೂ ಪ್ರಿಯದರ್ಶಿನಿಯಾದಳು" ಎನ್ನು ವನು. ದಂಪತಿಗಳಿಬ್ಬರೂ ನಗುವರು. ಮತ್ತೆ ಅವರ ಉಲ್ಲಾಸಮಯವಾದ ಜೀವನವು ಪ್ರಾರಂಭವಾಗುವುದು.

ಇದು ಈ ಸಣ್ಣ ಕಥೆಯ ಸಾರಾಂಶ. ಶ್ರೀಮಾನ್ ಚಿಂಚೋಳಿ ಜಯ ಪೂರ್ಣಾಚಾರ್ಯರು ಮುಂದೆ ಪ್ರವರ್ಧಮಾನಕ್ಕೆ ಬರುವವರಾಗಿರುವ ಲೇಖ ಕರು. ಅವರು ಈ ಕಥೆಯನ್ನು ಬಹಳ ರಂಜಕವಾಗಿ ಬರೆದಿರುವುದೇ ಇದಕ್ಕೆ ನಿದರ್ಶನ. ಈ ಕಥೆಯಲ್ಲಿ ಘಟನೆಗಳು ಸರಸರನೆ ಸುರುಳಿಯನ್ನು ಬಿಚ್ಚಿದಂತೆ ಮುಂದೆ ಸಾಗುತ್ತವೆ. ಭಾಷೆಯ ಧಾಟಿಯೂ ಅದಕ್ಕೆ ಅನುರೂಪವೆನಿಸಿ ಚೆನ್ನಾಗಿದೆ. ಆದರೂ, ಈ ಕಥೆಯಲ್ಲಿ ಕೆಲವು ಸನ್ನಿವೇಶಗಳು ನೈಸರ್ಗಿಕವಾಗಿಲ್ಲ. ಕಥೆಯೆಂದರೇ ಕೃತಕ ಪ್ರಪಂಚದ ಓಡಾಟವೆನ್ನುವುದನ್ನು ನಾವೂ ಒಪ್ಪುತ್ತೇವೆ. ಕಥೆಗಾರರು ಪಡಬೇಕಾಗುವ ಕಷ್ಟವನ್ನೂ ನಾವು ಅರಿತಿದ್ದೇವೆ. ಆದರೂ ಆ ಕೃತಕ ಪ್ರಪಂಚದಲ್ಲಿಯೂ ನೈಸರ್ಗಿಕ ಸೌಂದರ್ಯದ ಸಮಾವೇಶವೂ, ನಿಜತ್ವ ಭ್ರಾಂತಿಯೂ ರೂಢಮೂಲವಾಗಿ ನೆಲೆಗೊಂಡಿರಬೇಕಾದುದೇ ಕಲೋಪಾಸನೆಯ ಒಳಮರ್ಮ. ಈ ದೃಷ್ಟಿಯಿಂದ ನೋಡಿದರೆ, ಈ ಕಥೆಯಲ್ಲಿ ಕೆಲವು ಸನ್ನಿವೇಶ ಗಳಲ್ಲಿ ಮಾತ್ರ ನ್ಯೂನತೆಯಿದೆ. ಶಾರದೆಯು "ಎಂಟ್ರೆನ್ಸ್" ತರಗತಿಗೆ ಸೇರುವ ದಿನವಾಗಲಿ, ಅದರ ಹಿಂದಿನ ದಿನವಾಗಲಿ, ದಂಪತಿಗಳಿಗೆ ಆ ವಿಷಯದಲ್ಲಿ ಚರ್ಚೆಯೇ ನಡೆದಿರಲಿಲ್ಲವೆ? ಅವಳು ಹೊರಟು ನಿಂತಿರುವಾಗಲೇ ಅವಳು ತರಗತಿಗೆ ಸೇರಕೂಡ ದೆಂಬ ವಾದವು ಉಪಕ್ರಮವಾದೀತೆ?—ಎಂಬ ಸಂಶಯವು ಹುಟ್ಟುತ್ತದೆ. ಕೃಷ್ಣ ಮೂರ್ತಿಯ ಸ್ಥಿತಿ ಗತಿಗಳಾವುವು, ಅವನ ವಿದ್ಯಾ ಪ್ರೌಢಿಮೆಯೇನು, ಅವನು ಹಿಂದೂಪುರದ ಕಡೆಯಿಂದ ಬೆಂಗಳೂರಿಗೇತಕ್ಕೆ ಬಂದು ನೆಲಸಿದನು, ಎಂಬ ಸಂಗತಿ ಗಳು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಕಥೆಯು ಉಪಕ್ರಮವಾಗುವ ವೇಳೆಗೆ ಶಾರದೆಯು ಪ್ರೌಢೆಯಾಗಿ ಇನ್ನೂ ಹೆಚ್ಚುಕಾಲವು ಕಳೆದಿರುವುದಿಲ್ಲ. ಹೀಗಿದ್ದೂ ಕೃಷ್ಣಮೂರ್ತಿಯ ಅಜ್ಜಿಯೇಕೆ ಬೆಂಗಳೂರಿಗೆ ಬಂದಿಲ್ಲ? ಶಾರದೆಯ ಒಡನೆಯಿಲ್ಲ ದಿದ್ದೂ, ಅಜ್ಜಿಯು "ಶಾರದೆ ನಿನಗೆ ತಕ್ಕ ಹೆಂಡತಿಯಲ್ಲ ಅಂಬೋದು ನನಗೆ ಮೊದಲೇ ಗೊತ್ತಿತ್ತು. ನಿನಗೆ ಎಷ್ಟೋ ಸಲ ಹೇಳಿದೆ, ಬೇರೆ ಮದುವೆ ಮಾಡಿಕೋ ಅಂತ, ನೀನು ಬೇರೆ ಕೇಳಲಿಲ್ಲ" ಎಂದು ಹೇಳುವುದು ಸಮಂಜಸವಾಗುವುದೆ? ಒಂದು ವೇಳೆ ಅವಳು ಮೊದಲೇ ಶಾರದೆಯ ಬಳಿಯಿದ್ದು ಬೇಸತ್ತು ಹಳ್ಳಿಗೆ ಹೋಗಿದ್ದಳೆಂದು ಭಾವಿಸೋಣವೆಂದರೆ, "ನೋಡು, ದೇವೀ, ನೀನು ಪ್ರೌಢೆ ಯಾಗುವವರಿಗೂ ನಿನ್ನ ವಿದ್ಯಾಭ್ಯಾಸಕ್ಕೆ ನಾನು ಅಡ್ಡಿಬರಲಿಲ್ಲ. ಇನ್ನುಮೇಲೆ ನೀನು ಸ್ಕೂಲಿಗೆ ಹೋಗುವುದು ನನಗೆ ಇಷ್ಟವಿಲ್ಲ" ಎಂಬ ಕೃಷ್ಣಮೂರ್ತಿಯ ಮಾತುಗಳಿಂದ ಅದಕ್ಕೂ ಅವಕಾಶವಿಲ್ಲ. ಶಾರದೆಯು ಪ್ರೌಢೆಯ ಸ್ಥಿತಿಗೆ ಸ್ವಲ್ಪ ಕಾಲದ ಹಿಂದೆ ಮಾತ್ರವೇ ಬಂದಿರಬೇಕು. ಆಗಲೇ ಅಜ್ಜಿಯು, ಹಳ್ಳಿಯಲ್ಲಿಯೇ ಇದ್ದ ಅಜ್ಜಿಯು, "ಬೇರೆ ಮದುವೆ"ಯ ಪ್ರಸ್ತಾವವನ್ನೆತ್ತಿಯಾಳೆ? ದಂಪತಿಗಳಿಗೆ ವೈಮನಸ್ಯ ಬಂದ ಮಾತ್ರಕ್ಕೇ, ಬೆಂಗಳೂರಿನಲ್ಲಿಯೇ ಇದ್ದ ಶಾರದೆಯ ತಂದೆಯು

ಅದಕ್ಕೆ ಕಾರಣವನ್ನೇ ಕೂಲಂಕಷವಾಗಿ ಕೇಳದೆ, ಶಾಂತಿ ಸಮಾಧಾನಗಳ ಪ್ರಯತ್ನವನ್ನೇ ಮಾಡದೆ, "ಓ, ಬಿಡಮ್ಮ, ನಿನ್ನಂಥ ರತ್ನವನ್ನು ಇಟ್ಟುಕೊಂಡಿರಲಿಕ್ಕೆ ಅವನಿಗೇ ಅದೃಷ್ಟವಿಲ್ಲ. ನಾನಿರುವ ವರಿಗೂ ನಿನಗೇನು ಕಡಮೆ? ನೀನೇ ನನ್ನ ಗಂಡುಮಗನಾದೆ. ಇಲ್ಲಿಯೇ ಇದ್ದುಬಿಡು" ಎಂದು ಹೇಳುವುದು ಸ್ವಾಭಾವಿಕವೆ? ಅದು ಉಚಿತವಾದುದೆ? ಉದ್ದೇಶಪೂರ್ವಕವಾಗಿ ರೋಗಿಗಳ ಸೇವೆಗೆಂದು ಹೋಗಿದ್ದ ಶಾರದೆಯೂ ಆಸ್ಪತ್ರೆಯಲ್ಲಿ ದಾದಿಯರ ಗದ್ದಲವು ಸರಿಬೀಳದೆ ಕೆಲಸಕ್ಕೆ ರಾಜಿನಾಮೆಯನ್ನು ಕೊಡುವುದು ಸ್ವಾಭಾವಿಕವೆ? ಕೃಷ್ಣಮೂರ್ತಿಯ ಯೋಗಕ್ಷೇಮದಲ್ಲಿ ಆದರವಿದ್ದೂ ಕೂಡ, ಅವನು ಆಸ್ಪತ್ರೆಗೆ ಬಂದ ಮೇಲೆ ಅದೇ ದಿನವೇ ಆರೀತಿ ಮಾಡಿದುದೇಕೆಂಬುದಾಗಿ ನಮ್ಮ ಮನಸ್ಸಿಗೆ ಆಶ್ಚರ್ಯವಾಗುವುದು. ಬಹು ಕಾಲ ಅಗಲಿದ್ದು ಕೋಪದಿಂದ ಕುದಿಯುತ್ತಿದ್ದ ದಂಪತಿಗಳು ಪರಸ್ಪರ ದರ್ಶನ ಮಾತ್ರದಿಂದಲೇ ಒತ್ತಡವೆಗೆ ಒಂದೇ ಕ್ಷಣದಲ್ಲಿಯೇ ಶಾಂತ ಮನಸ್ಕರಾಗಿ ಪ್ರೇಮಾಲಾಪಕ್ಕೆ ಪ್ರಾರಂಭಿಸಿದುದೂ ಅಸ್ವಾಭಾವಿಕವಾಗಿರುವಂತೆ ತೋರುತ್ತದೆ. ಆದರೆ ಇಬ್ಬರೂ ನೊಂದ ಮನಸ್ಸಿನವರಾಗಿದ್ದುದರಿಂದ ಆ ರೀತಿ ನಡೆಯಿತೆಂದೂ, ಪರಸ್ಪರವಾಗಿ ಮತ್ತೆ ಅನುಕೂಲ ದಾಂಪತ್ಯದ ಸೌಖ್ಯವನ್ನನುಭವಿಸಬೇಕೆಂಬುದಾಗಿ ಅವರ ಹೃದಯವು ಕಾತರಿಸುತ್ತಿದ್ದುದರಿಂದ ದ್ವೇಷವು ಎಲ್ಲಿಯೋ ಮಾಯವಾಯಿತೆಂದೂ ಹೇಳಬಹುದಾಗಿದೆ.

ಆದರೂ, ಒಟ್ಟಿನಮೇಲೆ ಈ ಕಥೆಯು ಸ್ವಾರಸ್ಯವಾಗಿ ಮನಸ್ಸಿಗೆ ವಿಶೇಷ ಆಹ್ಲಾದವನ್ನುಂಟುಮಾಡುವುದಾಗಿದೆ. ದಾಂಪತ್ಯ ಪ್ರೇಮವನ್ನು ಚಿತ್ರಿಸಿರುವ ಕೆಲವು ಸನ್ನಿವೇಶಗಳಲ್ಲಂತು ಗ್ರಂಥಕರ್ತರು ಪ್ರೀತಿಯ ತಿರುಳನ್ನೇ ಎತ್ತಿ ಹಿಡಿದಿರುವಂತೆ ತೋರುತ್ತದೆ. ಕಥೆಯಲ್ಲಿ ಕೆಲವು ದೋಷಗಳಿದ್ದರೂ ಅವು ಸೀಗೆಯ ಮೆಳೆಯ ಮುಳ್ಳುಗಳಲ್ಲ, ಪುಷ್ಪದ ಸೌಂದರ್ಯಕ್ಕೆ ಮೆಚ್ಚಿ ಮುಳ್ಳಿನ ಕಡೆಗೆ ಹೆಚ್ಚು ಗಮನವನ್ನೇ ಕೊಡದಂತೆ ಮಾಡುವ ಗುಲಾಬಿಯ ಮುಳ್ಳುಗಳು.

**ಸಿ. ಕೆ. ವೆಂ.**

---

## ೧೩. ಪರಮಾರ್ಥ ಚಂದ್ರೋದಯ

(ಸಂಪುಟ ೨; ಸಂಚಿಕೆ ೧ ರಿಂದ ೧೨)

ಸಂಪಾದಕರು.—ಪರಮ ಪ್ರಿಯ ಸುಬ್ಬರಾಯ ದಾಸರು,

ದೇವರಾಯದುರ್ಗದ ದಾಸಕೂಟ ಸಭಾ, ಬೆಂಗಳೂರು.

ಡೆಮ್ಮಿ ಅಷ್ಟಪತ್ರ ಪುಟಗಳು ಸಂಚಿಕೆ ೧ಕ್ಕೆ ೧೬; ೧೯೨೮.

ವಾರ್ಷಿಕ ಚಂದಾ—ಸ್ಥಳದವರಿಗೆ ರೂ. ೧; ಪರಸ್ಥಳದವರಿಗೆ ರೂ. ೧—೬—೦.

ಈ ಮಾಸ ಪತ್ರಿಕೆಯಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ಸದಾಚಾರ, ನೀತಿ, ಧರ್ಮ ಮೊದಲಾದ ವಿಷಯಗಳನ್ನು ತಿಳಿಯಪಡಿಸುವುದಕ್ಕಾಗಿ ಭರ್ತೃಹರಿ ಮೊದ

ಲಾದ ಪೂರ್ವ ಕವಿಗಳು, ಭಗವದ್ಭಕ್ತರು, ದಾಸರು, ಸಾಧುಗಳು ಮೊದಲಾದವರು ಹೇಳಿರುವ ಶ್ಲೋಕ, ಪದ್ಯ, ಹಾಡು ಇವುಗಳನ್ನು ಅಲ್ಲಲ್ಲಿ ಕೊಟ್ಟು ಅರ್ಥವನ್ನು ವಿಶದವಾಗಿ ತಿಳಿಸಿರುತ್ತದೆ. ಈ ಸಂಪುಟದಲ್ಲಿ ಸಾಧು ಕಲಾ, ಪರೋಪಕಾರ ಕಲಾ, ದಶಾವತಾರ ಕಲಾ, ನೀತಿ ಕಲಾ, ವಿವೇಕ ಕಲಾ, ವಿವಿಧ ಕಲಾ ಎಂಬ ವಿಭಾಗಗಳನ್ನು ಮಾಡಿಕೊಂಡು ವಿಷಯಗಳನ್ನು ವಿವರಿಸಿದೆ. ಸಂಪಾದಕರು ಪುರಾಣೇತಿಹಾಸಗಳ ವಿಷಯವನ್ನು ತೆಗೆದುಕೊಂಡು ವರ್ಣಿಸುತ್ತ, ರಾಮ ನಾಮ, ಅಷ್ಟಕ, ಸ್ತೋತ್ರ ಮೊದಲಾದುವುಗಳನ್ನು ಅಲ್ಲಲ್ಲಿ ಬರೆದು ತಮ್ಮ ಉಪನ್ಯಾಸ ಮೂಲಕ ಅನೇಕ ಸಂಗತಿಗಳು ಮನನವಾಗುವಂತೆ ಮಾಡಿದ್ದಾರೆ.

ಇಂತಹ ನಾಸ್ತಿಕ ಕಾಲದಲ್ಲಿ ಪೂರ್ವಾಚಾರ ಧರ್ಮಗಳನ್ನೂ ನೀತಿಯನ್ನೂ ದೈವ ಭಕ್ತಿಯನ್ನೂ ಆಸ್ತಿಕತೆಯನ್ನೂ ಪಾರಮಾರ್ಥಿಕತೆಯನ್ನೂ ಉಂಟು ಮಾಡುವುದಕ್ಕಾಗಿ ಪ್ರವೃತ್ತವಾಗಿರುವ ಈ ಪತ್ರಿಕೆಯ ಉದ್ದೇಶವು ಬಹಳ ಶ್ಲಾಘ್ಯವಾಗಿದೆ. ಭಾಷಾ ಶೈಲಿಯು ಸಾಮಾನ್ಯವಾದ ತಿಳಿಗನ್ನಡವಾಗಿದೆ. ಭಾಷಾಪರಿಶುದ್ಧತೆಯ ವಿಷಯಕ್ಕೆ ಅಷ್ಟು ಗಮನಕೊಟ್ಟಂತೆ ಕಾಣುವುದಿಲ್ಲ. ಮುದ್ರಣದ ತಪ್ಪುಗಳು ಹೇರಳವಾಗಿರುವುವು. ಅಲ್ಲಲ್ಲಿ ಸೂಚಿಸಿರುವ ಶ್ಲೋಕ, ಪದ್ಯ ಮೊದಲಾದುವು ಎಲ್ಲಿಯವು ಎಂಬುದನ್ನು ತಿಳಿಸಿದ್ದರೆ ವಾಚಕರಿಗೆ ಬಹಳ ಅನುಕೂಲವಾಗುತ್ತಿದ್ದಿತು. ಆಸ್ತಿಕ ಪಕ್ಷವನ್ನು ವಹಿಸಿರುವ ಈ ಪತ್ರಿಕೆಗೆ ಕನ್ನಡಿಗರು ಹೆಚ್ಚು ಸಹಾಯ ಮಾಡಿ ಇದು ಚಿರ ಸ್ಥಾಯಿಯಾಗುವಂತೆ ಮಾಡಬೇಕೆಂದು ಹಾರೈಸುತ್ತೇವೆ.

——

## ತಿದ್ದುಪಡಿ

ಹಿಂದಣ ಸಂಚಿಕೆಯ ೧೪೦ನೆಯ ಪುಟದಲ್ಲಿ ಮುಂದೆ ಹೇಳುವ ತಿದ್ದುಪಡಿಯನ್ನು ಮಾಡಿಕೊಳ್ಳಬೇಕು.

ಪಙ್ಕ್ತಿ ೧೩.—'ಜಾಗ್ರತ' ಎಂಬುದಕ್ಕೆ ಪ್ರತಿಯಾಗಿ 'ಉತ್ತಿಷ್ಠ'.

ಪಙ್ಕ್ತಿ ೧೫.—'ಉಪೇಂದ್ರ ವಜ್ರಾ' ಎಂಬುದಕ್ಕೆ ಪ್ರತಿಯಾಗಿ 'ಇಂದ್ರ ವಜ್ರಾ'.

**ಸಂಪಾದಕ, ಕ|| ಸಾ|| ಪರಿಷತ್ತು.**

——




ಕೊಲ್ಹಾಪುರದೊಳಗಿನ ಪ್ರಾಚೀನ ಕಾಲದ ನಾಣ್ಯಗಳು




ಶ್ರೀಃ

ಕರ್ಣಾಟಕ ಸಾಹಿತ್ಯ

ಪರಿಷತ್ಪತ್ರಿಕೆ



ಸಂಪುಟ ೧೪] ಶುಕ್ಲ ಸಂ॥ ಪುಷ್ಯ ಮಾಸ [ಸಂಚಿಕೆ ೪

# *ಕೊಲ್ಹಾಪುರದೊಳಗಿನ ಪ್ರಾಚೀನ ಕಾಲದ ನಾಣ್ಯಗಳು

ಕೊಲ್ಹಾಪುರದ ವಾಯುವ್ಯಕ್ಕೆ ಪಂಚಗಂಗೆಯ ತೀರದ ಮೇಲಿನ ಬ್ರಹ್ಮಪುರಿಯು ಪುರಾತನ ಕಾಲದಲ್ಲಿ ಬಹಳ ಪ್ರಸಿದ್ಧವಾಗಿದ್ದಿತು. ಅದರ ಅವಶೇಷಕ್ಕೆ ಈಗಲಾದರೂ ಬ್ರಹ್ಮಪುರಿಯೆಂದು ಹೆಸರು. ಅದರ ಸಮೀಪದಲ್ಲಿ ಶಿವಾಜಿಯ ಸುಂಕವು ೧೬೬೪ರಲ್ಲಿ ಕಟ್ಟಲಾಯಿತು. ಆ ಕಾಲಕ್ಕೆ ಒಂದು ಸ್ಥಳವನ್ನು ಅಗೆಯುತ್ತಿರಲು, ಸುಮಾರು ಎರಡು ಸಾವಿರ ನಾಣ್ಯಗಳು ದೊರೆತುವು. ಅವುಗಳಲ್ಲಿ ಕೆಲವನ್ನು ರಾಯಲ್ ಏಶಿಯಾಟಿಕ್ ಸೊಸೈಟಿಯ ಬಾಂಬೆ ಬ್ರಾಂಚಿಗೆ (Bombay Branch of the Royal Asiatic Society) ಕಳುಹಿದರು; ಉಳಿದ ನಾಣ್ಯಗಳು ಕೊಲ್ಹಾಪುರದ ಔದ್ಯೋಗಿಕ ಪ್ರದರ್ಶನದಲ್ಲಿ ಇಡಲಾದುವು. ಈಗ ಅವು ಲಾರ್ಡ್ ಅರ್ವಿನ್ ಒಕ್ಕಲತನದ ವಸ್ತುಸಂಗ್ರಹಾಲಯದಲ್ಲಿವೆ.

ಈ ನಾಣ್ಯಗಳು ಇಲ್ಲಿಯ ವರೆಗೆ ಮೂಲೆಗುಂಪಾಗಿ ಬಿದ್ದಿದ್ದುವು. ಅವುಗಳನ್ನು ಎರಡು ತಿಂಗಳ ಹಿಂದೆ ವಿಂಗಡಿಸಿ ಬೇರೆ ಬೇರೆ ಮಾಡಿ ಇಟ್ಟಿದ್ದಾರೆ. ಸ್ಥೂಲಮಾನದಿಂದ ಇವುಗಳಲ್ಲಿ ಎರಡು ಭಾಗಗಳನ್ನು ಮಾಡಬಹುದು: ಒಂದು ಭಾಗದಲ್ಲಿ ಡಾ॥ ಭಾಂಡಾರಕರರು ಪೋಶನ್ ಎಂದು ಹೆಸರಿಟ್ಟ ಮಿಶ್ರ ಧಾತುವಿನ ತಾಮ್ರದ ನಾಣ್ಯಗಳು ಬರುವುವು; ಮತ್ತೊಂದರಲ್ಲಿ ಸೀಸದ ನಾಣ್ಯಗಳು ಬರುವುವು. ಡಾ॥ ಭಾಂಡಾರಕರರು ನಾಣ್ಯಗಳಲ್ಲಿ ಮಿಶ್ರ ಧಾತುವಿದೆಯೆಂದು ಹೇಳಿದರೂ, ಅವುಗಳಲ್ಲಿ ತಾಮ್ರದ ಹೊರತು ಬೇರೆ ಯಾವ ಧಾತುವೂ ಇರುವುದಿಲ್ಲ. ರಾಜಾರಾಮ ಕಾಲೇಜಿನ ರಸಾಯನ ಶಾಸ್ತ್ರದ ಅಧ್ಯಾಪಕರಾದ ಡಾ॥ ಎಸ್. ಪಿ. ಶಹಾಯವರು ಈ ನಾಣ್ಯಗಳ ಪೃಥಕ್ಕರಣ ಮಾಡಿ ತಾಮ್ರದ ಹೊರತು ಮಿಕ್ಕ ಯಾವ ಧಾತುವಿನ ಅಂಶವೂ ದೊರೆಯುವುದಿಲ್ಲವೆಂದು ತಿಳಿಸಿರುವರು. ಈ ನಾಣ್ಯಗಳ ಮೇಲೆ

* ಬೆಳಗಾಂವಿಯಲ್ಲಿ ನಡೆದ ೧೫ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಬಂದುದು.

ಪುಳುಮಾವಿ, ಸಿರಿಪುಳುಮಾವಿ, ಸಿರಿಸತಕರ್ಣಿ, ಸಿರಿಯಜ್ಞ ಸತಕರ್ಣಿ, ಸಿರಿಸತ, ಗೋತಮಿಪುತ್ರ ವಿಲಿವಾಯಕುರ ಎಂಬ ಆಂಧ್ರಭೃತ್ಯ ರಾಜರ ಹೆಸರುಗಳಿವೆ. ಸೀಸದ ನಾಣ್ಯಗಳಲ್ಲಿ ಮೂರೇ ಅರಸರ ಹೆಸರುಗಳಿವೆ.

೧. ಮಾಢರೀಪುತ್ತಸ ಸಿವಲಕುರಸ
೨. ವಾಸಿಠೀಪುತ್ತಸ ವಿಲಿವಾಯಕುರಸ
೩. ಗೋತಮಿಪುತ್ತಸ ವಿಲಿವಾಯಕುರಸ

ಈ ಎಲ್ಲ ನಾಣ್ಯಗಳ ಮೇಲ್ಭಾಗದ ಮಧ್ಯದಲ್ಲಿ ಬಾಣ ಹೂಡಿದ ಬಿಲ್ಲೂ, ಪರಿಘದ ಒಳಭಾಗದಲ್ಲಿ ವರ್ತುಲಾಕಾರವಾಗಿ ಅರಸರ ಹೆಸರುಗಳನ್ನು ಸೂಚಿಸುವ ಬ್ರಾಹ್ಮೀ ಲಿಪಿಯ ಅಕ್ಷರಗಳೂ ಇವೆ. ಹಿಂಭಾಗದಲ್ಲಿ, ನಡುವೆ ಚೈತ್ಯವೂ, ಅದರ ಮೇಲೆ ಸ್ವಸ್ತಿಕವೂ, ಚೈತ್ಯದ ಬಲಗಡೆಗೆ, ಅಥವಾ ಎಡಗಡೆಗೆ ಬೋಧಿ ವೃಕ್ಷವೂ ಇರುವವು. ಈ ನಾಣ್ಯಗಳನ್ನು ಕೆಳಗೆ ಕೊಟ್ಟಂತೆ ವರ್ಗೀಕರಿಸಲಾಗಿದೆ:—

೧. ಇವು ಮಾಢರೀಪುತ್ರನ ನಾಣ್ಯಗಳು. ಇವುಗಳ ವ್ಯಾಸವು ೩/೪ ಇಂಚು; ಹೆಚ್ಚು ದಪ್ಪವಾಗಿವೆ. ಬೋಧಿ ವೃಕ್ಷವು ಎಡಗಡೆಗಿದೆ. ನಾಣ್ಯಗಳು ಬಹಳ ಸವೆದಿವೆ. ಆದುದರಿಂದ ಇವುಗಳನ್ನು ಬಹಳ ದಿವಸಗಳ ವರೆಗೆ ವ್ಯವಹಾರ ದಲ್ಲಿ ಉಪಯೋಗಿಸುತ್ತಿದ್ದರೆಂದೂ, ಮಾಢರೀಪುತ್ರನು ಬಹಳ ದಿವಸಗಳ ವರೆಗೆ ರಾಜ್ಯಭಾರ ಮಾಡಿದನೆಂದೂ ಹೇಳಬಹುದು.

೨. ಇವಾದರೂ ಮಾಢರೀಪುತ್ರನ ನಾಣ್ಯಗಳೇ. ಬೋಧಿ ವೃಕ್ಷವು ಮಾತ್ರ ಬಲಗಡೆಗಿದೆ. ಪುನರ್ಮುದ್ರಿತವಾದವುಗಳೆಂದು ಹೇಳಲು ಸಾಕಷ್ಟು ಚಿಹ್ನಗಳು ಇವುಗಳ ಮೇಲೆ ತೋರುತ್ತವೆ. ಆದರೆ ಇವು ಮೊದಲು ಮಾಢರೀಪುತ್ರನವೋ, ಅಥವಾ ಅವನ ಪೂರ್ವಜನವೋ ಎಂಬುದು ಮಾತ್ರ ನಿಶ್ಚಿತವಾಗುವುದಿಲ್ಲ.

೩. ವಾಸಿಠೀಪುತ್ರನ ಈ ವರ್ಗದೊಳಗಿನ ನಾಣ್ಯಗಳ ಮೇಲೆ ಬೋಧಿ ವೃಕ್ಷವು ಬಲಗಡೆಗಿದೆ. ಈ ನಾಣ್ಯಗಳಾದರೂ ಪುನರ್ಮುದ್ರಿತವಾದವುಗಳೆಂದು ಹೇಳಲು ಸಾಕಷ್ಟು ಚಿಹ್ನಗಳು ಇವುಗಳ ಮೇಲೆ ದೊರೆಯುತ್ತವೆ. ಈತನ ನಾಣ್ಯ ಗಳ ಮೇಲೆ ಬೋಧಿ ವೃಕ್ಷವು ಎಡ ಬದಿಯಲ್ಲಿ ಇದ್ದುದು ಕಂಡುಬರುವುದೇ ಇಲ್ಲ.

೪. ಈ ವರ್ಗದೊಳಗಿನ ನಾಣ್ಯಗಳ ಮೇಲೆ ವಾಸಿಠೀಪುತ್ರ ಮಾಢರೀ ಪುತ್ರರುಗಳ ಹೆಸರುಗಳು ಮೇಲ್ಭಾಗ ಕೆಳಭಾಗಗಳ ಮೇಲಿವೆ; ಚೈತ್ಯವೂ ಬಿಲ್ಲು ಬಾಣಗಳೂ ಎರಡೂ ಬದಿಗಿವೆ. ಇವು ಮೊದಲು ಯಾರ ನಾಣ್ಯಗಳು? ಆಮೇಲೆ ಅವುಗಳನ್ನು ಪುನಃ ಮುದ್ರಿಸಿದವರಾರು? ಎಂಬ ವಿಚಾರವನ್ನು ಮುಂದೆ ಮಾಡುವೆವು.

೫. ಈ ವರ್ಗದೊಳಗಿನ ನಾಣ್ಯಗಳು ಗೋತಮಿಪುತ್ರನವು. ಇವು ೧ನೆಯ ನಂಬರಿನ ನಾಣ್ಯಗಳ ಆಕಾರದವು; ಇವುಗಳ ವ್ಯಾಸವಾದರೂ ಅಷ್ಟೇ. ಚೈತ್ಯದ ಎಡಭಾಗದಲ್ಲಿ ಬೋಧಿ ವೃಕ್ಷವಿದೆ. ಅಕ್ಷರಗಳು ಅಚ್ಚಳಿಯದೆ ಹಾಗೆಯೇ ಇವೆ.

ಇವುಗಳ ಮೇಲಿಂದಲೂ ೧ನೆಯ ನಂಬರಿನ ನಾಣ್ಯಗಳ ಮೇಲಿಂದಲೂ ಒಂದು ತತ್ತ್ವವನ್ನು ತೆಗೆಯಬಹುದಾಗಿದೆ: ಈ ನಾಣ್ಯಗಳು ಹೊಸಪಿದ್ದಂತೆ ಇರುವುದರಿಂದಲೂ, ೧ನೆಯ ನಂಬರಿನ ನಾಣ್ಯಗಳ ಮೇಲೆ ಪುನರ್ಮುದ್ರಣದ ಚಿಹ್ನಗಳೇನೂ ಇರುವುದಿಲ್ಲಾದುದರಿಂದಲೂ, ಪ್ರಥಮ ಮುದ್ರಣದಲ್ಲಿ ಬೋಧಿ ವೃಕ್ಷವು ಯಾವಾಗಲೂ ಎಡಗಡೆಗೆ ಇರುತ್ತದೆ. ವಾಸಿಠೀಪುತ್ರನ ನಾಣ್ಯಗಳಲ್ಲಿ ಬೋಧಿ ವೃಕ್ಷವು ಬಲಗಡೆಗಿದೆ. ಆದುದರಿಂದ ಆ ನಾಣ್ಯಗಳು ಪುನರ್ಮುದ್ರಿತವಾದವುಗಳು.

೬. ಈ ವರ್ಗದೊಳಗಿನ ನಾಣ್ಯಗಳು ಗೋತಮಿಪುತ್ರನವು. ಅಳತೆಯು ಸ್ವಲ್ಪ ದೊಡ್ಡದು. ಬೋಧಿ ವೃಕ್ಷವು ಬಲಗಡೆಗಿದೆ. ಅಕ್ಷರಗಳು ಅಚ್ಚಳಿಯದೆ ಉಳಿದಿವೆ. ೫ನೆಯ ವರ್ಗದ ನಾಣ್ಯಗಳನ್ನು ಪುನರ್ಮುದ್ರಿಸಿದ ನಾಣ್ಯಗಳು ಇವಾಗಿರಬಹುದು.

೭. ಈ ವರ್ಗದೊಳಗಿನ ನಾಣ್ಯಗಳ ಮೇಲೆ ಗೋತಮಿಪುತ್ರನ ಹೆಸರು ಎರಡೂ ಬದಿಯಲ್ಲಿದೆ. ಎರಡೂ ಬದಿಯಲ್ಲಿ ಚೈತ್ಯ, ಬಿಲ್ಲು ಬಾಣಗಳು ಕಂಡು ಬರುತ್ತವೆ. ೬ನೆಯ ವರ್ಗದೊಳಗಿನ ನಾಣ್ಯಗಳನ್ನು ಪುನರ್ಮುದ್ರಿಸಿದವುಗಳು ಇವು ಎಂದು ತೋರುತ್ತದೆ.

೮. ಈ ವರ್ಗದ ನಾಣ್ಯಗಳ ಮೇಲ್ಭಾಗದಲ್ಲಿ ಗೋತಮಿಪುತ್ರನ ಹೆಸರು ಎರಡು ಸಾರಿ ಮುದ್ರಿತವಾಗಿದೆ. ಕೆಳಮೈಯಲ್ಲಿ ಎರಡು ಚೈತ್ಯಗಳು ಸ್ಪಷ್ಟವಾಗಿ ಕಾಣುತ್ತವೆ. ೬ನೆಯ ವರ್ಗದ ನಾಣ್ಯಗಳನ್ನು ಪುನರ್ಮುದ್ರಿಸಿದುವುಗಳು ಇವು.

೯. ಇವಾದರೂ ಪುನರ್ಮುದ್ರಿತಗಳು. ಐತಿಹಾಸಿಕ ದೃಷ್ಟಿಯಿಂದ ಇವಕ್ಕೆ ಹೆಚ್ಚು ಮಹತ್ತ್ವವಿದೆ. ಇವುಗಳ ಮುಖದ ಮೇಲೆ ೬ನೆಯ ವರ್ಗದ ನಾಣ್ಯಗಳಲ್ಲಿರುವಂತೆ ಬಿಲ್ಲೂ ಅಕ್ಷರಗಳೂ ಇರುವುವಲ್ಲದೆ ಮತ್ತೊಂದು ಬಿಲ್ಲೂ ಮಕಾಳಾಗಿ ಕಾಣುತ್ತದೆ. "ಗೋತಮಿಪುತ್ತಸ...." ಎಂಬ ಅಕ್ಷರಗಳ ಮೇಲ್ಭಾಗದಲ್ಲಿ "ಸಿರಿಪುತ್ತಸ...." ಎಂಬ ಅಕ್ಷರಗಳು ಮಸಕು ಮಸಕಾಗಿ ಕಾಣುತ್ತವೆ. ಹಿಂಭಾಗದಲ್ಲಿ ಚೈತ್ಯ, ಬೋಧಿ ವೃಕ್ಷಗಳು ಎರಡೆರಡಿದ್ದಂತೆ ಕಂಡುಬರುತ್ತದೆ. ಇವು ೬ನೆಯ ವರ್ಗದ ನಾಣ್ಯಗಳಿಗಿಂತ ದೊಡ್ಡವಿರುವುದರಿಂದಲೂ, ಮತ್ತು ಇಬ್ಬರ ಹೆಸರುಗಳು ಒಂದೇ ಮಗ್ಗುಲಿಗಿರುವುದರಿಂದಲೂ, ವಾಸಿಠೀಪುತ್ರನು ಇವುಗಳನ್ನು ಮೊದಲು ಮುದ್ರಿಸಿದನೆಂದೂ, ಗೋತಮಿಪುತ್ರನು ಇವುಗಳನ್ನು ಪುನಃ ಮುದ್ರಿಸಿದನೆಂದೂ ತೋರುತ್ತದೆ. ಆದುದರಿಂದಲೇ ಇವುಗಳ ವ್ಯಾಸವು ಹೆಚ್ಚು ಬೆಳೆದು ಹೋಗಿದೆ.

೧೦. ಇದು ಕಡೆಯ ವರ್ಗವು. ಈ ನಾಣ್ಯಗಳ ವ್ಯಾಸವು ೧ ೧/೪ ಅಂಗುಲ. ಮುಖದ ಮೇಲೆ ಒಂದು ಬಿಲ್ಲು ಎದ್ದು ಕಾಣುತ್ತಿದ್ದರೂ, ಒಂದು ಚೈತ್ಯವೂ, "..ಸಿರಿ ಪು.." ಎಂಬ ಅಕ್ಷರಗಳೂ "ಗೋತಮಿ.." ಎಂಬ ಅಕ್ಷರಗಳ ಮೇಲೆ ಮಕಾಳಾಗಿ ಕಾಣುತ್ತವೆ. ಹಿಂಬದಿಯಲ್ಲಿ ಒಂದು ಬಿಲ್ಲೂ, ಮಕಾಳಾಗಿ ಕಾಣುವ

ಒಂದು ಚೈತ್ಯವೂ, ಒಂದು ಬೋಧಿವೃಕ್ಷವೂ—ಇವುಗಳ ಸುತ್ತಲೂ "ಮಾಢರೀ ಪುತ್ರಸ ಸಿವಲಕುರಸ" ಎಂಬ ಅಕ್ಷರಗಳೂ ಇವೆ.

ಈ ನಾಣ್ಯಗಳ ಬಗ್ಗೆ ಪ್ರಾಚೀನ ಇತಿಹಾಸಜ್ಞರು ಏನೆನ್ನುವರೆಂಬುದನ್ನು ನೋಡುವ.—

ಇ. ಜೆ. ರ್‍ಯಾಪ್ಸನ್ ಸಾಹೇಬರು ತಮ್ಮ "ಕ್ಯಾಟಲಾಗ್ ಆಫ್ ಇಂಡಿಯನ್ ಕಾಯಿನ್ಸ್" (Catalogue of Indian Coins) ಎಂಬ ಪುಸ್ತಕದಲ್ಲಿ ವಾಸಿಠೀ ಪುತ್ರ, ಮಾಢರೀಪುತ್ರ, ಗೋತಮಿಾಪುತ್ರರು ಕ್ರಮವಾಗಿ ಆಳಿದರೆಂದು ಹೇಳುತ್ತಾರೆ. ಇದಕ್ಕೆ ಅವರು ಯಾವ ಆಧಾರಗಳನ್ನೂ ಹೇಳಿ ಕೊಟ್ಟಿಲ್ಲ. ಈ ಮೂವರ ಶಿಲಾ ಶಾಸನಗಳಾಗಲಿ, ತಾಮ್ರ ಪಟ್ಟಗಳಾಗಲಿ ಈ ವರೆಗೆ ಎಲ್ಲಿಯೂ ದೊರೆತಿಲ್ಲ. ಕರ್‍ಹಾಡದ (ಕರ್‍ಹಾಟಕದ) ಹತ್ತಿರ ಗುಡ್ಡದಲ್ಲಿ ಕೊರೆದ ಒಂದು ಗವಿಯಲ್ಲಿ ಬ್ರಾಹ್ಮೀ ಶಾಸನವೊಂದಿದೆ. ಅದು ಬಹಳ ಸವೆದುಹೋಗಿದೆ. ಆದುದರಿಂದ ಈ ವರೆಗೆ ಅದನ್ನು ಯಾರೂ ಓದಿಲ್ಲ. ಡಾ॥ ಇಲಿಯಟ್ ಸಾಹೇಬರವರು ತಮ್ಮ 'ಆರ್ಕಿಯೊಲಾಜಿಕಲ್ ಸರ್ವೇ ಆಫ್ ವೆಸ್ಟರ್ನ್ ಇಂಡಿಯಾ' ವಾಲ್ಯೂಮ್ ೧೦ (Archæological Survey of Western India, Vol. X) ರಲ್ಲಿ ಇದರ ಉಲ್ಲೇಖವನ್ನು ಮಾಡಿರುವುದಲ್ಲದೆ ಅದರ ಕಟ್ಟಿಗೆಯ ಮುದ್ರಣವನ್ನು (Wood-cut) ಕೊಟ್ಟಿರುವರು. ಈ ಶಿಲಾ ಶಾಸನದಲ್ಲಿ ಈ ಮೂವರ ಉಲ್ಲೇಖವಿರಬಹುದು. ನಾಣ್ಯಗಳ ಆಕಾರದ ಮೇಲಿಂದಲೂ, ಅವುಗಳ ಸ್ಥಿತಿಗಳ ಮೇಲಿಂದಲೂ, ಬೋಧಿವೃಕ್ಷದ ಸ್ಥಳದ ಮೇಲಿಂದಲೂ, ಮಾಢರೀಪುತ್ರನೇ ಮೊದಲನೆಯವನಿರಬಹುದೆಂದು ತೋರುತ್ತದೆ; ಎರಡನೆಯವನು ವಾಸಿಠೀಪುತ್ರನು, ಮೂರನೆಯವನು ಗೋತಮಿಾಪುತ್ರನು.

ಡಾ॥ ಭಾಂಡಾರಕರರು ತಮ್ಮ 'ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್' (Early History of the Deccan) ಎಂಬ ಪುಸ್ತಕದಲ್ಲಿ ಈ ಮೂವರೂ ಕೊಲ್ಹಾಪುರದ ಗವರ್ನರರೆಂದು ಹೇಳಿರುವರು. ಆದರೆ ರ್‍ಯಾಪ್ಸನ್ ಸಾಹೇಬರು ಇವರು ಗವರ್ನರರಲ್ಲವೆಂದೂ, ಆಂಧ್ರ ರಾಜರೇ ಆಗಿದ್ದರೆಂದೂ ಹೇಳಿ ಅದನ್ನು ಸಿದ್ಧಮಾಡಲು ಪ್ರಯತ್ನ ಮಾಡಿರುವರು. ತಾವು ಪ್ರತಿಪಾದಿಸಿದ ತತ್ತ್ವವು ನಿಜವೆಂದು ಅವರು ಹೇಳಲಾರರು; ಹೀಗಿರಬಹುದೆಂದು ಮುಂದಿರಿಸಿದ ಸೂಚನೆಯಿದು. ಅವರು ಹೀಗೆನ್ನುವರು :—"ಆಂಧ್ರ ರಾಜರಿಗೆ ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ಹೆಸರುಗಳಿದ್ದ ಬಗ್ಗೆ ಆಧಾರಗಳು ದೊರೆಯುತ್ತಿವೆ. ವಿಲಿವಾಯಕುರ, ಸಿವಲಕುರ ಎಂಬ ಹೆಸರುಗಳು ಕೊಲ್ಹಾಪುರ ಪ್ರಾಂತದಲ್ಲಿ ಆಂಧ್ರ ರಾಜರ ಬಿರುದುಗಳಾಗಿದ್ದುವು." ವಿನ್ಸೆಂಟ ಸ್ಮಿತ್ ಸಾಹೇಬರು ಈ ಸೂಚನೆಗೆ ಒಪ್ಪುವುದಿಲ್ಲ. ಈ ಹೆಸರುಗಳು ಬಿರುದುಗಳಾಗಿರದೆ ಅರಸರ, ಅಥವಾ ಗವರ್ನರರ ಹೆಸರುಗಳೇ ಆಗಿದ್ದುವೆಂದು ಅವರು ನಂಬುತ್ತಾರೆ.

ವಿಲಿವಾಯಕುರ ಸಿವಲಕುರರೆಂಬ ಹೆಸರುಗಳ ಬಗ್ಗೆ ರ್‍ಯಾಪ್ಸನ್ ಸಾಹೇಬರು ಹೀಗೆ ಅಭಿಪ್ರಾಯಪಡುವರು :—"ಇವು ಬಹುವ್ರೀಹಿ ಸಮಾಸಗಳು. ಇವುಗಳಲ್ಲಿಯ

'ಕುರ' ಎಂಬ ಶಬ್ದವು 'ಕುಲ' ಶಬ್ದದ ಪ್ರಾಕೃತ ರೂಪವು. 'ವಿಲಿವಾಯಕುರ' ಎಂಬ ಸಮಸ್ತ ಪದದ ಅರ್ಥವನ್ನು ವಿಲಿವಾಯ ತಂಡವೆಂದು ಮಾಡಬಹುದು. 'ವಿಲಿವಾಯ' ಶಬ್ದಕ್ಕೆ ಯಾವ ಅರ್ಥವೂ ಆಗುವುದಿಲ್ಲ. 'ಸಿವಲ' ಶಬ್ದವು ಸಿವದತ್ತ, ಅಥವಾ ಶಕಸೇನವಾಗಿರಬಹುದು. ಭರ್ಹುತ್ ಶಾಸನದಲ್ಲಿ ಸಿವಲಾದೇವಿ ಎಂಬ ಹೆಸರು ಬಂದಿದೆ. ಅವಳ ಅನುಯಾಯಿಗಳ ಹೆಸರು ಸಿವಲಕುರವಾಗಬಹುದು.'' ಈ ಊಹೆಯು ಸಮಂಜಸವಲ್ಲೆಂದು ತೋರುತ್ತದೆ. ವಿಲಿವಾಯಕುರ, ಸಿವಲಕುರ ಎಂಬ ಪದಗಳು ತಂಡಗಳನ್ನು ಸೂಚಿಸುತ್ತಿದ್ದ ಪಕ್ಷದಲ್ಲಿ ಅವು ಇಲ್ಲಿಯವರೆಗೆ ಪರಂಪರೆಯಿಂದ ಬರಬಹುದಾಗಿದ್ದಿತು. ಹಿಂದೂಸ್ಥಾನದಲ್ಲಿ ಪ್ರಸಿದ್ಧರಾದ ರಾಜರ ಬಗ್ಗೆ ಬಂದಿಲ್ಲೊಂದು ದಂತ ಕಥೆಯು ಇದ್ದೇ ಇದೆ. ಅದು ಪರಂಪರೆಯಿಂದ ಈ ಶತಮಾನದ ವರೆಗೆ ಬಂದುಬಿಟ್ಟಿದೆ. ಇದೂ ಅಲ್ಲದೆ, ಅತಿ ಪುರಾತನಗಳಾದ ಗುಪ್ತ, ಮೌರ್ಯ, ವಾಕಾಟಕ, ಆಂಧ್ರ, ಆಂಧ್ರಭೃತ್ಯ, ಪಲ್ಲವ, ಕದಂಬರ ತಂಡಗಳ ಹೆಸರುಗಳು ಮರೆತುಹೋಗಿಲ್ಲ. ಎಂದಮೇಲೆ, ವಿಲಿವಾಯಕುರ ಸಿವಲಕುರ ತಂಡಗಳಷ್ಟೇ ಮರೆತುಹೋಗುವುದು ಅಸಂಭವವು. ಸಿವಲಾದೇವಿಯ ಹೆಸರು ಭರ್ಹುತ್ ಶಾಸನದಲ್ಲಿ ಬಂದುದಾದರೂ ನಮ್ಮ ಕಲ್ಪನೆಗೆ ಸಹಾಯವನ್ನೇ ಮಾಡುವುದು. ಒಂದೇ ಹೆಸರು ಗಂಡಸರಿಗೂ ಹೆಂಗಸರಿಗೂ ಇರಬಹುದು. ಉದಾ.—ಸಿವಪ್ಪ, ಸಿವವ್ವ; ಬಸಪ್ಪ, ಬಸವ್ವ; ತವನಪ್ಪ, ತವನವ್ವ; ವೆಂಕಪ್ಪ, ವೆಂಕವ್ವ ಮುಂತಾದುವು. ಸಿವಲಾದೇವಿಯೆಂಬ ಹೆಸರಿನಂತೆ ಸಿವಲಕುರ ಎಂಬ ಹೆಸರು ಗಂಡಸಿನದೇಕಾಗಬಾರದು? ಇದರಲ್ಲಿ 'ಕುರ' ಎಂಬ ಪದಕ್ಕೆ ಮಾತ್ರ ಯಾವ ಅರ್ಥವನ್ನು ಕೊಡಬೇಕೋ ತಿಳಿಯದು.

"ಮಾಢರೀಪುತ್ತ ಸಿವಲಕುರನು ಕಣ್ಹೇರಿ ಗವಿಗಳಲ್ಲಿಯ ೫—೬ನೆಯ ಶಾಸನಗಳಲ್ಲಿ ಉಲ್ಲಿಖಿತನಾದ ಮಾಢರೀಪುತ್ತ ಸ್ವಾಮಿ ಶಕಸೇನನೂ, ಆಂಧ್ರದೇಶದ ಶಕಸೇನ, ಅಥವಾ ಶಕಸದನೂ ಇರಬಹುದು.

"ಗೋತಮೀಪುತ್ತ ವಿಲಿವಾಯಕುರನು ನಾಸಿಕ ಮತ್ತು ಕಾರ್ಲಿ ಶಾಸನಗಳಲ್ಲಿ ಉಲ್ಲಿಖಿತನಾದವನೂ, ನಹಪಾನನ ನಾಣ್ಯಗಳನ್ನು ಪುನರ್ಮುದ್ರಿಸಿದವನೂ ಆದ ಗೋತಮೀಪುತ್ರನಾಗಿರಬಹುದು.

"ವಾಸಿಠೀಪುತ್ರ ವಿಲಿವಾಯಕುರನು ವಾಸಿಠೀಪುತ್ರ ಪುಳುಮಾಯಿಯು ಆಗಲಾರನು. ಪುಳುಮಾಯಿಯು ಗೋತಮೀಪುತ್ರನ ಮಗನು. ಮಾಢರೀಪುತ್ರನಿಗಿಂತಲೂ ವಾಸಿಠೀಪುತ್ರ ವಿಲಿವಾಯಕುರನು ಪೂರ್ವದವನೆಂದು ಹೇಳಲು ನಾಣ್ಯಗಳ ಮೇಲಿಂದ ಹಗುರಾಗಿದೆ'' ಎಂದು ರ್‍ಯಾಪ್ಸನ್ ಸಾಹೇಬರವರ ಅಭಿಪ್ರಾಯವು. ಇದಾದರೂ ಅಷ್ಟು ಸಮಂಜಸವಲ್ಲೆಂದು ತೋರುತ್ತದೆ.

ಗೋತಮೀಪುತ್ರ ವಿಲಿವಾಯಕುರನು ಗೋತಮೀಪುತ್ರ ಶತಕರ್ಣಿಯು ಆಗಲಾರನು. ಶತಕರ್ಣಿಯೇ ನಹಪಾನನ ನಾಣ್ಯಗಳನ್ನು ಪುನರ್ಮುದ್ರಿಸಿದವನು. ಆಂಧ್ರ ರಾಜರಲ್ಲಿ ಕ್ಷತ್ರಪರನ್ನು ಗೆದ್ದು ರಾಜ್ಯವಿಸ್ತಾರಗೊಳಿಸಿದವನಿವನು. ಆದುದ

ರಿಂದ ಸಹಪಾನನನ್ನು ಗೆದ್ದ ಸಂಗತಿಯು ಬಹಳ ಮಹತ್ತ್ವವುಳ್ಳದ್ದಾಗಿದೆ. ಈ ಸಂದರ್ಭವು ನಾಣ್ಯಗಳಲ್ಲಿ ಬರಬಹುದಾಗಿದ್ದಿತು. ಕದಂಬರ ಶಿವಚಿತ್ರನೆಂಬ ರಾಜನು ಮಲವರನ್ನು ಗೆದ್ದು "ಮಲವರ ಮಾರಿ" ಎಂಬ ಬಿರುದನ್ನು ಧರಿಸಿದನು. ಈ ಬಿರುದು ಅವನ ನಾಣ್ಯಗಳ ಮೇಲೆ ಇದೆ. ಇದರಂತೆ ಶತಕರ್ಣಿಯಾದರೂ ಸಹಪಾನನನ್ನು ಗೆದ್ದ ಸಂಗತಿಯ ಉಲ್ಲೇಖವನ್ನು ಈ ನಾಣ್ಯಗಳಲ್ಲಿ ಮಾಡಬಹುದಾಗಿದ್ದಿತು.

ಗೋತಮಿಾಪುತ್ರ ವಿಲಿವಾಯಕುರನು ಪಟ್ಟಕ್ಕೆ ಬಂದ ಕೂಡಲೆ ಒಮ್ಮೆ ನಾಣ್ಯಗಳನ್ನು ಮುದ್ರಿಸಿದನು. ತರುವಾಯ ಅವೇ ನಾಣ್ಯಗಳನ್ನು ತಿರುಗಿ ಮುದ್ರಿಸಿದುದರಿಂದ ವೈರಿಗಳು ಈತನನ್ನು ಪದಚ್ಯುತ ಮಾಡಿರಬಹುದೆಂದು ತೋರುತ್ತದೆ. ಸೈನ್ಯವನ್ನು ಕೂಡಿಸಿ ವೈರಿಗಳನ್ನೆದುರಿಸಿ, ಅವರನ್ನು ಮುರಿಬಡಿದು, ಪುನಃ ಸಿಂಹಾಸನವನ್ನೇರಿದ ಮೇಲೆ ತನ್ನ ನಾಣ್ಯಗಳನ್ನು ಮತ್ತೆ ಮುದ್ರಿಸಿರಬಹುದು. ಪುನರ್ಮುದ್ರಿತ ನಾಣ್ಯಗಳಲ್ಲಿ ಅನೇಕ ಮಾದರಿಗಳು ದೊರೆಯುತ್ತವೆ. ಇದರ ಮೇಲಿಂದ, ಈತನ ಆಡಳಿತದಲ್ಲಿ ಅಶಾಂತತೆಯೂ ವೈರಿಗಳ ಉಪಟಳವೂ ಬಹಳವಾಗಿದ್ದಿತೆಂದು ತೋರುತ್ತದೆ. ಏಕೆಂದರೆ, ಸೈನ್ಯವನ್ನು ಕೂಡಿಸುವುದಕ್ಕೂ ಅವರ ವೆಚ್ಚಕ್ಕೂ ಮೇಲಿಂದ ಮೇಲೆ ನಾಣ್ಯಗಳನ್ನು ಮುದ್ರಿಸಬೇಕಾಗಿ ಬಂದಿತು. ಏಳನೆಯ ಮತ್ತು ಎಂಟನೆಯ ವರ್ಗದೊಳಗಿನ ನಾಣ್ಯಗಳು ತೀರ ಹೊಸ ಇದ್ದಂತೆಯೇ ಇವೆ. ಇದರ ಮೇಲಿಂದ ಈ ನಾಣ್ಯಗಳು ಬಹಳ ದಿವಸಗಳವರೆಗೆ ಪ್ರಚಲಿತವಾಗಿರಲಿಲ್ಲವೆಂದು ಹೇಳಬಹುದು; ಹಾಗಾಗಿದ್ದರೆ ಅವು ಸವೆದಿರುತ್ತಿದ್ದುವು. ಈ ನಾಣ್ಯಗಳು ಹೊರಬಿದ್ದಮೇಲೆ ಈತನು ಬಹಳ ದಿನಗಳವರೆಗೆ ಬಾಳಿರಲಿಲ್ಲ. ಈತನ ತರುವಾಯ ಈ ವಂಶವು ಮುಗಿಯಿತೆಂದು ತಿಳಿಯಬೇಕಾಗಿದೆ. ಏಕೆಂದರೆ, ಮುಂದಿನವರ ನಾಣ್ಯಗಳಾವುವೂ ದೊರೆತಿಲ್ಲ. ಶತಕರ್ಣಿಯು ಹೀಗೆ ವೈರಿಗಳ ಕೈಗೆ ಸಿಲುಕಿ ಸೆರೆಯಾಳಾದುದೂ, ಅಪಜಯಪಟ್ಟುದೂ ಯಾವ ಶಾಸನಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿಲ್ಲ. ಇವನ ಶತ್ರುಗಳು ಕ್ಷತ್ರಪರು. ಅವರ ಶಾಸನಗಳಲ್ಲಿಯೂ ಇಂಥ ಸಂಗತಿಯು ಕಂಡುಬರುವುದಿಲ್ಲ. ಆದುದರಿಂದ ಈತನು ಶತಕರ್ಣಿಯಲ್ಲವೆಂದು ಸಿದ್ಧವಾಗುತ್ತದೆ.

ಮಾಢರೀಪುತ್ರ ಸಿವಲಕುರ ಎಂಬ ಹೆಸರಿನಲ್ಲಿಯೂ ಮಾಢರೀಪುತ್ರ ಸ್ವಾಮಿ ಶಕಸೇನ ಎಂಬ ಹೆಸರಿನಲ್ಲಿಯೂ ಮಾಢರೀಪುತ್ರವೆಂಬ ಸಮಾಸ ಪದವು ಮಾತ್ರ ಸಾಧಾರಣವಾಗಿದೆ. ಇಷ್ಟರಿಂದಲೇ ಮಾಢರೀಪುತ್ರ ಸಿವಲಕುರನು ಮಾಢರೀಪುತ್ರ ಸ್ವಾಮಿ ಶಕಸೇನನಾಗಲಾರನು. ವಾಸಿಠೀಪುತ್ರ ವಿಲಿವಾಯಕುರನು ವಾಸಿಠೀಪುತ್ರ ಪುಳುಮಾವಿಯಾಗಲಾರನು.

ವಾಸಿಠೀಪುತ್ರ ವಿಲಿವಾಯಕುರನು ಮಾಢರೀಪುತ್ರ ಸಿವಲಕುರನಿಗಿಂತ ಪೂರ್ವದವನೆಂದು ಹೇಳಲು ಸಾಧ್ಯವಲ್ಲ. ಲಬ್ಧ ನಾಣ್ಯಗಳ ಸ್ಥಿತಿಯ ಮೇಲಿಂದಲೂ, ಬೋಧಿ ವೃಕ್ಷದ ಸ್ಥಳದ ಮೇಲಿಂದಲೂ ಮಾಢರೀಪುತ್ರನೇ ಪೂರ್ವದವನೆಂದು

ತೋರುತ್ತದೆ. ಇದೊಂದು ವಾದಗ್ರಸ್ತ ವಿಷಯವು. ಪ್ರಾಕ್ತನ ವಿಮರ್ಶ ವಿಚಕ್ಷಣರ ಸಂಶೋಧಗಳೇ ಇದಕ್ಕೆ ತಕ್ಕ ಉತ್ತರವನ್ನು ಕೊಡಬೇಕು. ಡಾ॥ ಇಲಿಯಟ್ ಸಾಹೇಬರೂ, ಕನ್ನಿಂಗ್ಹ್ಯಾಮ್ ಸಾಹೇಬರೂ ಪುನರ್ಮುದ್ರಿತ ನಾಣ್ಯಗಳನ್ನು ನೋಡಿರಲಿಲ್ಲೆಂದು ತೋರುತ್ತದೆ.

ಈ ಮೂವರ ಕಾಲವನ್ನು ಗೊತ್ತುಹಚ್ಚುವುದೊಂದು ಮಹತ್ತ್ವದ ವಿಷಯವಾಗಿದೆ. ಮಾಢರೀಪುತ್ತ್ರ ವಾಸಿರೀಪುತ್ತ್ರರ ನಾಣ್ಯಗಳಲ್ಲಿ ತಾಮ್ರದವು ಇಲ್ಲವೇ ಇಲ್ಲ. ಗೋತಮಿಾಪುತ್ರನ ನಾಣ್ಯಗಳು ಮಾತ್ರ ತಾಮ್ರದವು ದೊರೆತಿವೆ. ಈ ನಾಣ್ಯಗಳು ಆಂಧ್ರಭೃತ್ಯ ರಾಜರ (ಶತಕರ್ಣಿ, ಪುಳುಮಾವಿ ಮುಂತಾದವರ) ನಾಣ್ಯಗಳಷ್ಟೇ ದೊಡ್ಡವಿವೆ. ಇವುಗಳ ಮೇಲೆ ಸೀಸೆಯ ವರ್ಗದ ನಾಣ್ಯಗಳಂತೆ ಚಿಹ್ನಗಳಿವೆ. ಆಂಧ್ರಭೃತ್ಯರ ನಾಣ್ಯಗಳ ಮೇಲೆ ಆನೆಗಳಿವೆ. ಇದರ ಮೇಲಿಂದ ಗೋತಮಿಾಪುತ್ರನು ಆಂಧ್ರಭೃತ್ಯರ ನಾಣ್ಯಗಳನ್ನು ನೋಡಿ ತನ್ನ ತಾಮ್ರದ ನಾಣ್ಯಗಳನ್ನು ಮುದ್ರಿಸಿದನೆಂದು ಹೇಳಬಹುದು. ಆಂಧ್ರಭೃತ್ಯರಲ್ಲಿ ರಾಜ್ಯವನ್ನು ವಿಸ್ತಾರಗೊಳಿಸಿದವನು ಶತಕರ್ಣಿಯು. ಇವನೇ ಗೋತಮಿಾಪುತ್ರನನ್ನು ಬಗ್ಗು ಬಡಿದಿರಬಹುದು. ಮುಂದೆ ತಲೆಯೆತ್ತಿ ಗೋತಮಿಾಪುತ್ರನು ತಾಮ್ರದ ನಾಣ್ಯಗಳನ್ನು ಮುದ್ರಿಸಿರಬಹುದು. ಇದರ ಮೇಲಿಂದ, ಗೋತಮಿಾಪುತ್ರನು ಶತಕರ್ಣಿಯ ಸಮಕಾಲೀನನು; ಮಾಢರೀಪುತ್ರ ವಾಸಿರೀಪುತ್ರರು ಶತಕರ್ಣಿಗಿಂತ ಪೂರ್ವದವರಾಗುವರು; ಎಂದರೆ, ಗೋತಮಿಾಪುತ್ರನು ಕ್ರಿ. ಶ. ಎರಡನೆಯ ಶತಮಾನದವನಾಗುವನು. ಇದು ಪ್ರಮಾಣವೆಂದು ತಿಳಿಯಕೂಡದು.

ಮಾಢರೀಪುತ್ರ, ವಾಸಿರೀಪುತ್ರ, ಗೋತಮಿಾಪುತ್ರರುಗಳ ನಾಣ್ಯಗಳ ಮೇಲೆ ಚೈತ್ಯ, ಬೋಧಿ ವೃಕ್ಷಗಳಿರುವುದರಿಂದ ಇವರು ಬೌದ್ಧರು. ಆಂಧ್ರಭೃತ್ಯರು ಮಾನವ್ಯಸ ಗೋತ್ರದವರಾದುದರಿಂದ ಹಿಂದೂಗಳು. ಗೋತಮಿಾಪುತ್ರ ವಿಲಿವಾಯಕುರನು ಗೋತಮಿಾಪುತ್ರ ಶತಕರ್ಣಿಯಲ್ಲವೆಂದು ಹೇಳಲು ಇದೊಂದು ಆಧಾರವು. ಕೊಲ್ಹಾಪುರ ಪ್ರಾಂತದಲ್ಲಿ ಆ ಕಾಲದಲ್ಲಿ ಬೌದ್ಧ ಧರ್ಮವು ಹೆಚ್ಚು ಪ್ರಬಲವಾಗಿದ್ದಿತೆಂದು ತಿಳಿದರೆ ತಪ್ಪಾಗದು. ಕೊಲ್ಹಾಪುರದ ವಾಯವ್ಯಕ್ಕೆ ಎಂಟು ಮೈಲಿಗಳ ಮೇಲೆ ಬೀಡ ('ಬೀಡು' ಎಂಬ ಪದವು ಹಳಗನ್ನಡ) ಎಂಬ ಪುರಾತನ ಸ್ಥಳವಿದೆ. ಮಳೆಗಾಲದಲ್ಲಿ ಇಲ್ಲಿ ಬಂಗಾರದ ಚಿಕ್ಕ ಚಿಕ್ಕ ನಾಣ್ಯಗಳು ದೊರೆಯುತ್ತವೆ. ಇವುಗಳ ಮೇಲೆಯೂ ಚೈತ್ಯವಿದೆ. ಕೊಲ್ಹಾಪುರದ ಹತ್ತಿರ ಗಗನಬಾವಡಾ, ಪನ್ಹಾಳಾ, ಪಾವಲೆ, ಅಳತೆ, ಕರ್ಹಾಡ ಮುಂತಾದ ಪಟ್ಟಣಗಳ ಹತ್ತಿರ ಬೌದ್ಧ ಗವಿಗಳು ಅನೇಕವಾಗಿವೆ. ಪಾವಲೆಯಲ್ಲಿ ಒಂದು ಚೈತ್ಯವು ಈ ವರೆಗೆ ಸುಸ್ಥಿತಿಯಲ್ಲಿದೆ. ೧೮೮೪ರಲ್ಲಿ ಕೊಲ್ಹಾಪುರದ ಹತ್ತಿರ ಜೀವಂತೀ ಎಂಬ ಹಳ್ಳದ ದಂಡೆಯ ಮೇಲೆ ಅಗೆಯುತ್ತಿರಲು ಒಂದು ಚೈತ್ಯವು ದೊರೆತು ಅದರಲ್ಲಿದ್ದ ಒಂದು ಕಲ್ಲಿನ ಪೆಟ್ಟಿಗೆಯೂ, ಅದರಲ್ಲಿ ಭದ್ರವಾಗಿರಿಸಿದ ಒಂದು ಸ್ಫಟಿಕದ ಪೆಟ್ಟಿಗೆಯೂ ಕೈಗೆ ಬಂದುವು. ಇವು ಈಗ ಮುಂಬಯಿಯ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಜಿಯಮ್ಮ

(Prince of Wales' Museum) ನಲ್ಲಿವೆ. ಮೇಲಿನ ಕಲ್ಲಿನ ಪೆಟ್ಟಿಗೆಯ ಮುಚ್ಚಳದ ಒಳಭಾಗದಲ್ಲಿ "ಭಮ್ಮಸ ದಾನಂ ಧಮ್ಮಗುತ್ತೇನ ಕಾರಿತಂ" ಎಂಬ ಅಕ್ಷರಗಳು ಬ್ರಾಹ್ಮೀ ಲಿಪಿಯಿಂದ ಕೊರೆಯಲಾಗಿವೆ ಈ ಬ್ರಹ್ಮನಾರೋ, ಧರ್ಮ ಗುಪ್ತನಾರೋ ಎಂಬುದು ಈ ವರೆಗೂ ತಿಳಿದಿಲ್ಲ. ಕೊಂಕಣ ಪ್ರಾಂತದಲ್ಲಿ ಗೋವೆಯ ಹತ್ತಿರ ಒಂದು ಗವಿಯಲ್ಲಿ ಸುಮಾರು ಇಪ್ಪತ್ತು ವರುಷಗಳ ಹಿಂದೆ ಅಭಿಷೇಕ ಪಾತ್ರೆಗಳಂಥ ಕೆಲವು ಮುದ್ರೆಗಳು ದೊರೆತುವು. ಇವು ಮಣ್ಣಿನವು. ಇವುಗಳನ್ನು ಒಡೆಯಲು, ಬೇಳೆಯಂತೆ ಎರಡು ಭಾಗಗಳಾಗುತ್ತಿದ್ದುವು. ಪ್ರತಿಯೊಂದು ಬೇಳೆಯ ಮೇಲೆ ಬ್ರಾಹ್ಮೀ ಅಕ್ಷರಗಳಿದ್ದುವಂತೆ. ಈ ಮುದ್ರೆಗಳು ಬಹುತರವಾಗಿ ಬೌದ್ಧ ಚೈತ್ಯಕ್ಕೆ ಸಂಬಂಧಿಸಿರಬಹುದೆಂದು ಕೆಲವರ ಊಹೆಯಿದೆ. ಕದಂಬರ ಮೂಲಪುರುಷನಾದ ಮಯೂರಶರ್ಮನು ಅಹಿಚ್ಛತ್ರಪುರದಿಂದ ಮೂವತ್ತೆರಡು ಬ್ರಾಹ್ಮಣ ಕುಟುಂಬಗಳನ್ನು ತಂದನೆಂದು ತಾಳಗುಂದದ ಶಾಸನದಲ್ಲಿ ಹೇಳಿದೆ. ಆದುದರಿಂದ, ಕ್ರಿ. ಶ. ಎರಡನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ಬೌದ್ಧ ಧರ್ಮವು ಹಬ್ಬಿಕೊಂಡಿದ್ದಿತು.

ಈ ನಾಣ್ಯಗಳ ಮೇಲಿಂದ ಇದಕ್ಕಿಂತಲೂ ಹೆಚ್ಚಿನ ಸಂಗತಿಗಳು ದೊರೆಯ ಬಹುದೆಂದು ತೋರುವುದಿಲ್ಲ.

**ಕೆ. ಜಿ. ಕುಂದಣಗಾರ, ಎಂ.ಎ.**

---

# * ಲಕ್ಷ್ಮೇಶ್ವರದಲ್ಲಿ ಹೊಸದಾಗಿ ದೊರೆತ ಶಿಲಾ ಶಾಸನಗಳು

## † ಸಂಖ್ಯೆ ೧

(ಶಕೆ ೯೯೬, ಆನಂದ ಸಂವತ್ಸರ ಚೈತ್ರ ಶುದ್ಧ ೮ ಆದಿತ್ಯವಾರ)

ಈ ಶಿಲಾ ಶಾಸನವು ಇಲ್ಲಿಯ ಕುರುಬಗೇರಿಯಲ್ಲಿರುವ ಬೇವಿನ ಮರದ ಹತ್ತಿರ ಹುಗಿದುಹೋಗಿದ್ದಿತು. ಅಕಸ್ಮಾತ್ತಾಗಿ ಅಗೆಯುವ ಕಾಲಕ್ಕೆ ಕಲ್ಲು ಹತ್ತಿದ್ದು ನೋಡಿ ಕುರುಬ ಬಾಂಧವರು ತೀರ ಅಗೆದರು. ಆಗ ದೇವರೆದ್ದಿತೆಂದು ಅವರ ಭಾವನೆಯಾಗಿದ್ದಿತು. ಇದು ಸುಮಾರು ಒಂದು ವರ್ಷದ ಹಿಂದಿನ ಮಾತು. ಇದು ಆರು ಅಡಿ ಎತ್ತರವಾಗಿಯೂ ಎರಡೂವರೆ ಅಡಿ ಅಗಲವಾಗಿಯೂ ಇದ್ದು ಒಟ್ಟು ೪೧ ಸಾಲುಗಳಿರುತ್ತವೆ. ಇದರೊಳಗೆ ನಿರ್ದಿಷ್ಟವಾದ ಶಂಖ ತೀರ್ಥವು ಈ ಕಲ್ಲಿನ ಸಮೀಪದಲ್ಲಿಯೇ ಉಂಟು. ಈಗ ಅದಕ್ಕೆ **ಶಂಖಬಸ್ತಿ** ಎಂದಿಷ್ಟೇ ಎನ್ನುತ್ತಾರೆ.

ಚಾಳುಕ್ಯಾಭರಣ ಇತ್ಯಾದಿ ಬಿರುದಾಂಕಿತ ಶ್ರೀಮದ್ಭುವನೈಕಮಲ್ಲರು (ಕಲ್ಯಾಣದಲ್ಲಿ) ಚಕ್ರವರ್ತಿಗಳಾಗಿದ್ದಾಗ್ಗೆ ಮಹಾ ಮಂಡಳೇಶ್ವರ ಲಕ್ಷ್ಮರಸರು ಪುಲಿಗೆರೆ ೩೦೦, ಬೆಳ್ವೊಲ ೩೦೦, (ಕೊಪ್ಪಳ) ೧೨೦೦—ಇವುಗಳನ್ನು ಸುಖದಿಂದಾಳುತ್ತಿದ್ದರು. ಬೆಳವಲವು ಭೋಗಿಜನ ರಮ್ಯವಾಗಿದ್ದು, ಪುಲಿಗೆರೆಯು ಅದರ ಮುಖ ಸ್ಥಾನವಾಗಿ ಶೋಭಿಸುತ್ತಿದ್ದಿತು. ಹಾಗೂ, ಮಹಾ ಸಾಮಂತ ಇಂದ್ರಕೇಶಿ ನೃಪನು ಈ ಪುಲಿಗೆರೆ ೩೦೦ ಕ್ಕೆ ರಾಷ್ಟ್ರಕೂಟಕನಾಗಿ ರಾಜ್ಯಗೈಯುತ್ತಿದ್ದನೆಂದೂ ಅವನ ತರುವಾಯ ಅವನ ಪಿರಿಯರಸಿ ಚಂದಿಕಬ್ಬೆಯ ಮಗನಾದ ಜಯಕೇಶಿ ನೃಪನು ರಾಜ್ಯಗೈಯುತ್ತಿದ್ದನೆಂದೂ ಇಲ್ಲಿ ಹೇಳಲಾಗಿದೆ. 'ರಾಷ್ಟ್ರಕೂಟಕ' ನೆಂದರೆ ನಾಡ ಗೌಡನು. ಈ ಶಬ್ದವು ಇದುವರೆಗೆ ವೆಂಗಿಯ ಶಿಲಾ ಲೇಖಗಳ

* ಬೆಳಗಾಂವಿಯಲ್ಲಿ ನಡೆದ ೧೫ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಗೇಯರ ಗುಂಪಿನಿಂದ ಬರೆದು ಬಂದುದು.

† ನಮಗೆ ಹೊಸದಾಗಿ ದೊರೆತ ೪ ಶಿಲಾ ಶಾಸನಗಳಲ್ಲಿ ೧ನೆಯದೂ ೬ನೆಯದೂ ಈಗ ಕ. ಸಾ. ಪ. ಪತ್ರಿಕೆಯಲ್ಲಿ ಪ್ರಸಿದ್ಧವಾಗುತ್ತಲಿವೆ. ೧೫ನೆಯ ಶತಮಾನದ ಸಂಬಂಧವಾದ ೩ನೆಯದು ಇದೇ ವರ್ಷದ ಜೂನ್ ತಿಂಗಳ ಶಿವಾನುಭವ ಪತ್ರಿಕೆಯಲ್ಲಿಯೂ; ೧೬ನೆಯ ಶತಮಾನದ ವಿಷಯವಾದ ೪ನೆಯದು ಜ್ಯೇಷ್ಠ ಮಾಸದ ಜಯಕರ್ನಾಟಕ ಪತ್ರಿಕೆಯಲ್ಲಿಯೂ ಅಚ್ಚಾಗಿವೆ; ಇವು ನಾಲ್ಕನ್ನೂ ಮೇ ತಿಂಗಳಲ್ಲಿ ಬೆಳಗಾಂವಿಯಲ್ಲಿ ಜರುಗಿದ ಕರ್ನಾಟಕ ಐತಿಹಾಸಿಕ ವಸ್ತು ಪ್ರದರ್ಶನಕ್ಕೆ ಕಳುಹಿಸಲಾಗಿದ್ದಿತು. ಈ ಎಲ್ಲ ಕೆಲಸದಲ್ಲಿ ನನಗೆ ನೆರವು ನೀಡಿದ 'ಗೆಳೆಯ'ರಾದ ನಮ್ಮೂರ ಅಭ್ಯಂಕರ ರಾಮರಾಯರಿಗೂ ಧಾರವಾಡದ ನರೇಗಲ್ಲ ಪ್ರಹ್ಲಾದರಾಯರಿಗೂ, ಶ್ರೀಗೂ ಇವುಗಳನ್ನು ನೋಡಿ ಕೆಲವು ತಪ್ಪುಗಳನ್ನು ತಿದ್ದಿಕೊಟ್ಟ ಕ. ಇ. ಮಂಡಳದ ಅಭ್ಯಾಸ ಸಮಿತಿಯಲ್ಲಿ ಓದಲು ಅನುಕೂಲತೆ ಮಾಡಿಕೊಟ್ಟ ರಾ|| ರಾಜಪುರೋಹಿತ ನಾರಾಯಣರಾಯರಿಗೂ ನಾನು ತುಂಬ ಕೃತಜ್ಞನಾಗಿದ್ದೇನೆಂಬುದನ್ನು ಇಲ್ಲಿ ಹೇಳಬೇಕಾಗಿದೆ.

—ಕೊ. ವೀ.

ಲ್ಲಿಷ್ಟೇ ದೊರೆಯುತ್ತಿದ್ದಿತೆಂದೂ ಇತ್ತಕಡೆಯ ಭಾಗದಲ್ಲಿ ಇದು ಹೊಸ ಸಂಗತಿಯೆಂದೂ ಶ್ರೀ|| ರಾಜಪುರೋಹಿತರು ಹೇಳುತ್ತಾರೆ. ಮೇಲೆ ಹೇಳಿದ ತಿಥಿಯಲ್ಲಿ ತ್ರಿಭುವನ ಚಂದ್ರ ಪಂಡಿತ ದೇವರು ಇಲ್ಲಿಯ ಜೈನ ಮಂದಿರಗಳಿಗೆ ಬಿಜಯಂಗೈಸಿದಾಗ ಆವರ ದರ್ಶನವನ್ನು ಜಯಕೇಶಿ ನೃಪನು ತೆಗೆದುಕೊಂಡನೆಂದೂ, ತತ್ಸಂಬಂಧವಾಗಿ ಮನ್ನೆಯದ ನಿಬನ್ಧದ ಕಿರುದೆರೆಗಳನ್ನು ಬಿಟ್ಟಿಮಾಡಿ ನಡೆಯಿಸಿದನೆಂದೂ ವರ್ಣಿಸಲಾಗಿದೆ. ಇಲ್ಲಿ ಉಲ್ಲಿಖಿತವಾದ 'ಮನೆವಣ', 'ಪಿರಿಯರವಣ'ಗಳು ಈಗಿನ 'ಬಸ್ತಿಬಣ', 'ಹಿರೇಬಣ'ಗಳೆಂದು ತೋರುತ್ತದೆ; ಬಣಗಳೆಂದರೆ ಕೇರಿಗಳೆಂದರ್ಥ. ಇದರಲ್ಲಿ ನಿರ್ದಿಷ್ಟನಾದ ಲಕ್ಷ್ಮರಸನ ಕಾಲಕ್ಕೇ, ನಮ್ಮೂರ ಲಕ್ಷ್ಮಲಿಂಗ ಗುಡಿಯು ಕಟ್ಟಲ್ಪಟ್ಟು ತನ್ಮಖಾಂತರ ಪುಲಿಗೆರೆಯೆಂಬ ಹೆಸರು ಲಕ್ಷ್ಮೇಶ್ವರ ಎಂಬುದಾಗಿ ಬದಲಾಗುತ್ತಬಂದಿತೆಂದು ಊಹಿಸಬಹುದಾಗಿದೆ. ಈ ವಿಷಯದಲ್ಲಿ ಸ್ಪಷ್ಟವಾದ ಆಧಾರಗಳನ್ನು ಹುಡುಕಬೇಕಾಗಿದೆ.

ಇದರಲ್ಲಿ ೪ ಅನುಷ್ಟುಪ್‌ಗಳೂ, ೧ ವೃತ್ತವೂ, ೯ ಕಂದ ಪದ್ಯಗಳೂ, ೪ ಚಿಕ್ಕ ಗದ್ಯ ಭಾಗಗಳೂ ಇವೆ. ಭಾಷೆಯು ಸರಳವಾಗಿದೆ; ಲಿಪಿಯೆಲ್ಲವೂ ಕನ್ನಡವು. ಕಲ್ಲಿನ ತಲೆಯಲ್ಲಿ ಎಲ್ಲ ಜಿನಶಾಸನಗಳಿಗಿರುವಂತೆ ಜಿನಮೂರ್ತಿಯ ಚಿತ್ರವಿದೆ.

(೧) ಶ್ರೀಮತ್ಪರಮ ಗಂಭೀರಸ್ಯಾ [ದ್ವಾದಾಮೋ ಪು] ಲಾಂಛನಂ।
ಜೀಯಾತ್ರೈಲೋಕ್ಯ ನಾಥಸ್ಯ ಶಾಸನಂ ಜಿ(೨)ನ ಶಾಸನಂ ||
ಸ್ವಸ್ತಿ ಸ್ಯಾದಸ್ತ ದೋಷಾಯ್ಯ ನಿರಸ್ತೈಕಾನ್ತ ವಸ್ತುವೇ।
ಸಮಸ್ತ ಸುರ ಸಂಸ್ತುತ್ಯ ಜನಾನಾಂ ಶಾಸನ ಶ್ರಿಯೈ ||
(೩) ಜಯನ್ತಿ ನಿರ್ಜಿತಾಶೇಷ ಸರ್ವದೈಕಾನ್ತ ನಿತಯಃ।
ಸತ್ಯವಾಕ್ಯಾದಿ [ಪಾಸ್ಸಶ್ವ] ದ್ವಿದ್ಯಾನಂದಾ ಜಿನೇಶ್ವರಾಃ ||

(೪) ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾ ರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರ(೫)ಯ ಕುಳ ತಿಳಕಂ ಚಾಳುಕ್ಯಾಭರಣಂ ಶ್ರೀಮುದ್ಭುವನೈಕಮಲ್ಲ ದೇವರ ವಿಜಯರಾಜ್ಯಮುತ್ತರೋತ್ತರಾ(೬)ಭಿವೃದ್ಧಿ ಪ್ರವೃದ್ಧಮಾನ ಮಾಚಂದ್ರಾರ್ಕತಾರಂ ಸಲುತ್ತಮಿರೆ || ತತ್ಪಾದಪದ್ಮೋಪಜೀವಿ ಸಮಧಿಗತ ಪಂ(೭)ಚ ಮಹಾ ಶಬ್ದ ಮಹಾ ಮಂಡಳೇಶ್ವರನುದಾರ ಮಹೇಶ್ವರಂ ಚಲಕೆ ಬಲ್ಗಂಡಂ ಶೌರ್‍ಯ್ಯ ಮಾರ್ತಾಣ್ಡಂ [ಪ] ತಿಗೆಕೋ(೮)ದಂಡಂ ಸಂಗ್ರಾಮ ಗರುಡಂ ಮನುಜ ಮಾನ್ಧಾತಂ ಕೀರ್ತಿವಿಖ್ಯಾತಂ ಗೋತ್ರ ಮಾಣಿಕ್ಯಂ ವಿವೇಕ ಚಾಣಕ್ಯಂ ಪರನಾರೀ ಸಹೋ(೯)ದರಂ ವೀರ ವೃಕೋದರಂ ಕೋದಣ್ಡ ಪಾರ್ಥಂ ಸೌಜನ್ಯ ತೀರ್ಥ[೦] ಮಾಣ್ಡಳಿಕ ಕಂಠೀರವಂ ಪರಚಕ್ರ ಭೈರವಂ ರಾಯದಣ್ಡ (೧೦) ಗೋಪಾಳಂ ಮಲೆಯ ಮಣ್ಡಳಿಕ ಮೃಗ ಶಾರ್ದೂಳಂ

ಶ್ರೀಮದ್ಭುವನೈಕಮಲ್ಲ ದೇವ ಪಾದ ಪಂಕಜ ಭ್ರಮರಂ ಶ್ರೀ(೧೧)
ಮನ್ಮಹಾ ಮಂಡಳೇಶ್ವರಂ ಲಕ್ಷ್ಮರಸರ್ ಪುರಿಗೆಱೆ ಮೂಸೂಱು
ಬೆಳ್ವೊಲ ಮೂನೂರುಮನ್ತೆರಡಱು ಸೂ(೧೨)ಱುಮಂ ಸು ಖ ದಿ
ನಾಳುತ್ತಮಿರೆ—

ವೃ॥ ನಾನಾ ದ್ವೀಪದೊಳಗ್ರಿಮಂ ನೆಗೞ್ದ ಜಂಬೂದ್ವೀಪಮಾ ದ್ವೀಪ
ದೊಳ್।
ನಾನಾಕ್ಷೇ(೧೩)ತ್ರದೊಳುತ್ತಮಂ ಭರತಮಾ ಭೂಭಾಗದೊಳ್
ಕುಂತಮಂ ॥
ತಾನತ್ಯೂರ್ಜಿತಮಲ್ಲಿ ಭೋಗಿಜನ ರಮ್ಯಂ ಬೆಳ್ವೊ(೧೪)ಲಂ ತನ್ಮುಖ।
ಸ್ಥಾನಂ ಶೋಭಿಕುಮಾಗಡುಂ ಪುರಿಕರ ಶ್ರೀ ರಾಜಧಾನ್ಯಾಹ್ವಯಂ ॥

ಕಂ ॥ ಪುರಿಕರ ಪುರವರ ಪರ(೧೫)ಮೇ।
ಶ್ವರನುಜ್ವಳ ಕೀರ್ತಿ ಸಗರ ಮಾರ್ತಾಣ್ಡಂ ಕೇ ॥
ಸರಿ ಕೇತು ರಾಷ್ಟ್ರಕೂಟಕ।
ವರನಾತ್ರಿಶತಕಮಿಂದ್ರಕೇಶಿ(೧೬)ನರೇಂದ್ರಂ ॥

ತತ್ಪುರಿಕರ ವಿಶಯಾಧಿಪ।
ನುತ್ಪಾದಿತ ವೈರಿ ನೆಗೞ್ದ ಮಣಲರ ಭೀಮಂ ॥
ಸತ್ಪಾತ್ರದಾನ ನಿಧಿ[ಯುಂ]।
(೧೭)ಹೃತ್ಪಾದಾಬ್ಜಾಳಿಯೇಂದ್ರಕೇಶಿ ನರೇಂದ್ರಂ ॥

ಆತನ ಪಿರಿಯರಸಿ ಗುಣಾ।
ನ್ವಿ[ೀ]ತೆ ಪತಿವ್ರತೆ ಚರಿತ್ರವತಿ ವಿಶದ ಗು(೧೮)ಣಾ ॥
ಖ್ಯಾತವತಿ ಸತ್ಯವತಿ ಧಾ।
ತ್ರೀತಳದೊಳ್ ಚಂದಿಕಬ್ಬೆ ಪೊಗಳದರಾರ್ ॥

ಅವರ್ಗೆ ಪ್ರಸೂನು ಭಾವೋ।
ದ್ಭವ(೧೯)ಮೂರ್ತಿ ಸುಧಾಂಶು ವಿಶದ ಕೀರ್ತಿ ಜಯ ಶ್ರೀ ॥
ಧವನಮಳ ಮಣಲಕುಳ ವರ।
ಕುವಳಯ ಶೀತಾಂಶು ಸಗರ(೨೦) ಮಾರ್ತಾಣ್ಡ ನಿಪಂ ॥

ಸ್ವಸ್ತಿ ಸಮಧಿಗತ ಪಂಚ ಮಹಾ ಶಬ್ದ ಮಹಾ ಸಾಮಂತಂ ವಿಜಯ ಶ್ರೀಕಾಂತಂ ಮಣಲರಾ(೨೧)ನ್ವಯ ಪ್ರಸೂತಂ ಸಿಂಹ ಲಾಂಛನ ಪ್ರಣೂತಂ ಪುರಿಕರ ಪುರವರೇಶ್ವರಂ ಕದನ ಮಾಹೇಶ್ವರಂ

ಸೂಚನೆ.—ಚೌಕ ಕಂಸಿನೊಳಗಿನ ಅಕ್ಷರಗಳು ಸಂಶಯದ ಅಕ್ಷರಗಳು. ದುಂಡ ಕಂಸಿನೊಳಗಿನ ಅಂಕಗಳು ಕಲ್ಲಿನೊಳಗಿನ ಸಾಲುಗಳಿಗೆ ಸಂಬಂಧಿಸಿದುವು. [*] ಇಲ್ಲಿಂತೂ, ಅಕ್ಷರಗಳು ಸಂಪೂರ್ಣವಾಗಿ ಹಾರಿಹೋಗಿವೆ.

ಪ್ರಚಣ್ಡ ಮ(೨೨)ಣ್ಡಳಾಗ್ರ ಮಣ್ಡಿತ ದೋರ್ದಣ್ಡಂ ಸಗರ ಮಾರ್ತಾಣ್ಡಂ ಕಾಮಿನೀಕಾಮಂ ಮಣಲರಭೀಮಂ ತುರಗ ರೇವನ್ತಂ ಪ(೨೩)ರ ಬಳ ಕೃತಾನ್ತಂ ಸಾಹಸೋತ್ತುಂಗಂ ಮನ್ನೆಯ ಸಿಂಗ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ ಸಾಮಂತಂ (೨೪) ಜಯಕೇಶಿಯರಸರ್ ಪುರಿಗೆರೆ-ಮೂನೂಱ್ಕಂ ರಾಷ್ಟ್ರ ಕೂಟಕನಾಗಿ ಸುಖದಿಂ ರಾಜ್ಯಂಗೆಯ್ಯೆ—

ಕಂ ॥ (೨೫) ಶ್ರೀರಮಣಿಗೆ ಸಮರ ಜಯ।
ಶ್ರೀರಮಣಿಗೆ ತಾರ ಹಾರ ಶಶಿ ವಿಶದ ಯಶಃ ॥
ಶ್ರೀರಮಣಿಗೆ ಸಕಳ ವಚಃ।
ಶ್ರೀ(೨೬)ರಮಣಿಗೆ ರಮಣನಲ್ತೆ ಜಯಕೇಶಿ ನೃಪಂ ॥

ಅನ್ತೆನಿಸಿದ ಜಯಲಕ್ಷ್ಮೀ।
ಕಾನ್ತಂ ದುಷ್ಟಾಶ್ವ ಚಯಕಿದಾನೀನ್ತ(೨೭)ನ ರೇ ॥
ವನ್ತಂ ವಿದ್ವದ್ ನೃಪತಿ ಕೃ।
ತಾನ್ತಂ ಸುಖದಿಂದಮಿರ್ಪ್ಪಿ ಜಯಕೇಶಿ ನೃಪಂ ॥

ಸ್ವಸ್ತಿ ಸಕ ವರ್ಶ ೯೯೬(೨೮)ನೆಯಾನನ್ದ ಸಂವತ್ಸರದ ಚೈತ್ರ ಸುದ್ಧ ಪ್ರಥಮ ನನ್ದೀಶ್ವರದ ೮ ಆದಿತ್ಯವಾರದಂದು ಪುರಿಗೆರೆಗೆ ಬಿಜ(೨೯)ಯಂಗೈದಲ್ಲಿಯ ಶ್ರೀ ಶಂಖತೀರ್ಥಾದಿ ಜೈನ ಮಂದಿರಂಗಳಂ ವಂದನಾ ಭಕ್ತಿ ಪೂರ್ವಕಂ ನೋಡುತ್ತಂ ಬಂದು ಪೆರ್ಮ್ಮಾ(೩೦)ದಿಯ ಬಸದಿಗೆ ವನ್ದಲ್ಲಿಯ ಮೂಲ ಸಂಪೂನ್ವಯದ ಬಳತ್ಕಾರ ಗಣದ ಘಂಟಾ ವಿಮುಕ್ತ ಭ(೩೧)ಟ್ಟಾರಕರ ಶಿಷ್ಯರ್ ತ್ರಿಭುವನ ಚಂದ್ರ ಪಂಡಿತ ದೇವರಂ ಕಂಡು ತ್ರಿಕರಣ ಸುದ್ಧಿಯಿಂ ಬನ್ದಿಸಿ ಕು(೩೨)ಳ್ಳಿರ್ಪ್ಪಿ

ಕಂ ॥ ಪುರಿಗೆಱೆಯಾಳ್ವೆರ್ಮ್ಮಾದಿಯ।
ಪುರವರಮಳಿದಿರ್ಪ್ಪಿಡಂಗಜಾರಿ ಧ್ವಜನಾ ॥
ರ(೩೩)ರದಿಂದಂ[ಮೆನೋ ದೀಪ್ಯನ।
ಭ್ಯರಣಂ] ಮಾಡಲ್ಕೆ ವೇದಿ ಜಯಕೇಶಿ ನೃಪಂ ॥

ಸ್ಮರ ರೂಪಂ ಪೆರ್ಮ್ಮಾದಿಯ।
(೩೪) ಪುರವರದೊಳ್ನಡೆವ ಮನ್ನೆಯದ ಕಿಱುದೆಱೆಯಂ ॥
ಪುರದಾಸಿಕೆಯುಳ್ಳ ದಿಪಂ।
ಪರಿಹಾರಂ(೩೫) ಬಿಟ್ಟೆ ಮಾಡಿದಂ ತತ್ಪುರಮಂ ॥

ಅಲ್ಲಿ ಮನ್ನೆಯ ಸಿಬನ್ದದ ಕಿಱುದೆಱೆಗಳಾವುವೆಂದಡೆ ॥ ಮನೆ ವಣಂ(೩೬)ಪೆರಿಯರ ವಣಂ ದನಬಳಂ ಕಾಳಗೊಲ್ಪು ಮೆಂದಿ ಗಣ್ದ್ರಾ

ಗವಂ ಗಡಿಯ ತಿಂಗಳಿನ [ಬಿಜಯೋರ್ದ್ದಿನ್ತ್ತಿಸ ದೇ(೩೭)ವತೆರೊಗಳ್ಮಂ]
ಪೊಳಲ ಮನ್ನೆಯ ದಾಸಿಕೆಯುಳ್ಳ ದೀಪ್ಯವುಂ ದಾಯದ್ರುವ್ಮದ
ಕಿರುಡೆರಿ³ಗಳ(೩೮)ಮುಂ ಸರ್ವಬಾಧಾ ಪರಿಹಾರವಾಗೆ ಬಿಟ್ಟೆ
ನಡೆಯಿಸಿದ[ಂ]

ಕಂ ॥ ತಿಳಿದಿನಿತು ತೆರಿ³ಯುವುಂ ಕಾ।
ದ(೩೯)ಳಿಬಲ್ಲದೆ ನೆಗೞ್ದಿರೆಯ್ದುವಸರ್ಗ್ಗರ ಪುರವುಂ ॥
ಪಳಿಗಳ್ಕದಳಿವ ಪಾತಕ।
ರಿಳಿವರ್ಗಳ್ ಗಳನೆ ನರಕಗ(೪೦)ತಿಗನವರತಂ ॥

ಸ್ವದತ್ತ್ತಾಂ(ಂ) ಪರದತ್ತ್ತಾಂ(ಂ) ವಾ ಯೋ ಹರೆ(ರ)ತಿ ವಸುಂಧರಾ(ಂ)।
ಷಷ್ಠಿರ್ವರ್ಷಸಹಶ್ರೋಣಿ ವಿಷ್ಟಾ(೪೧)ಯಾಂ ಜಾಯತೇ ಕ್ರಿಮಿಃ ॥

## ಸಂಖ್ಯೆ ೨

(ಶಕನೃಪ ವರ್ಷ ೧೦೮೮ನೆಯ ಅವ್ಯಯ ಸಂವತ್ಸರ ಕಾರ್ತಿಕ ಪೌರ್ಣಿಮೆ ಸೋಮವಾರ ವ್ಯತಿಪಾತ ಸೋಮ ಗ್ರಹಣ)

ಈಗಿನ ಊರ ಹೊಲಗೇರಿಯಲ್ಲಿ ಇದು ಬಿದ್ದಿರುತ್ತದೆ. ಮೊದಲು ತಿಪ್ಪೆಯಲ್ಲಿ ಹುಗಿದುಹೋಗಿದ್ದಿತು. ಈಗ ೪ ತಿಂಗಳ ಹಿಂದೆ ಹೊಲೆಯ ಬಾಂಧವರು ಅಲ್ಲಿ ತಮ್ಮ ಯಾವುದೋ ಕೆಲಸದ ನಿಮಿತ್ತವಾಗಿ ಅಗೆಯುವಾಗ ಕಲ್ಲಿನಂತೆ ಹತ್ತಿ ಹತ್ತಿ ಕಡೆಗೊಮ್ಮೆ ಕಿತ್ತು ಮೊದಲು ಡಬ್ಬ ಬಿದ್ದುದನ್ನು ಹೊರಳಿಸಿ ಇಟ್ಟಿದ್ದಾರೆ. ಇದರ ಬುಡಕ್ಕೆ, ಹೂಳಿದ ಹೊನ್ನುಂಟೆಂದು ಅವರ ಭಾವನೆಯಾಗಿತ್ತು. ಇದು ೯ ಅಡಿ ಉದ್ದವಾಗಿಯೂ ೩ ಅಡಿ ಅಗಲವಾಗಿಯೂ ಇದ್ದು ಅಕ್ಷರಗಳು ಬಹಳ ಮುದ್ದಾಗಿರುವುವು. ಕೆಲಕಡೆಗೆ ಮಾತ್ರ ಕೆಲವು ಅಕ್ಷರಗಳು ಹಾರಿಹೋಗಿಯೂ ಮಸಕಾಗಿಯೂ ಇರುವುವು. ಒಟ್ಟು ೬೯ ಸಾಲುಗಳಿವೆ.

ಕಲ್ಯಾಣ ಪಟ್ಟಣದಲ್ಲಿ ಕಲಚೂರ್ಯ ವಂಶದ ವೀರ ಬಿಜ್ಜಳನು ಆಳುವಾಗ ಪುಲಿಗೆರೆಯಲ್ಲಿ ಶ್ರೀಧರ ದಂಡನಾಥನು ಆತನ ಸಾಮಂತನಾಗಿದ್ದನು. ಬಿಜ್ಜಳ, ಹಾಗೂ ಶ್ರೀಧರ, ಇವರ ವಂಶಗಳ ವೃತ್ತವೂ ಪಾಂಡಿತ್ಯ ಪರಾಕ್ರಮಗಳ ವೃತ್ತವೂ ಇದರಲ್ಲಿ ವಿವರವಾಗಿ ಹೇಳಲಾಗಿದೆ. ಶ್ರೀಧರನು ತನ್ನ ಒಡೆಯನ ಕಲ್ಯಾಣಾಭಿವೃದ್ಧಿ ನಿಮಿತ್ತವಾಗಿ ಆತನ ಅನುಜ್ಞೆಯಿಂದ ಪುಲಿಗೆರೆ ಪ್ರಾಂತದಲ್ಲಿ ಬ್ರಹ್ಮಪುರಿಯನ್ನು ಕಟ್ಟಿಸಿಕೊಟ್ಟು ಮೇಲೆ ಹೇಳಿದ ಮುಹೂರ್ತದಲ್ಲಿ ೫೨ ಬ್ರಾಹ್ಮಣರಿಗೆ ಹೊಲಗಳನ್ನು ಹಾಕಿಕೊಟ್ಟದ್ದು ಇದರಲ್ಲಿದೆ. ಈ ಎಲ್ಲ ಬ್ರಾಹ್ಮಣರ ಹೆಸರುಗಳೂ ಹೊಲಗಳ ಚಕ್ಕುಬಂದಿ(Jurisdiction)ಯೂ ವಿಸ್ತಾರವಾಗಿ ಹೇಳಲಾಗಿವೆ. ಈ ೫೨ ಜನರಲ್ಲದೆ ಎಷ್ಟೋ ಪಾರ್ವರಿಗೆ ದ್ರವ್ಯ ದಾನ ಮಾಡಿದ್ದೂ ಉಂಟು. ಲಕ್ಷ್ಮೇಶ್ವರದ ಸಮೀಪದಲ್ಲಿ 'ಬಟ್ಟೂರು' ಎಂಬ ಹಳ್ಳಿಯುಂಟು; ಬ್ರಹ್ಮಪುರಿ=ಭಟ್ಟ

ರೂರು=ಬಟ್ಟೂರು ಎಂದು ಆಗಿದೆಯೋ ಏನೋ ನೋಡಬೇಕು. ಇದರಲ್ಲಿ ಉಲ್ಲಖಿತವಾದ ಅಕ್ಕಿಗುಂದ, ಬೆಳಧಡಿ(ಬೆಂಣಿಧಡಿ)ಗಳು ಇನ್ನೂ ಇವೆ. ಗೊಗ್ಗಿ ಪುರವೆಂದರೆ ಹತ್ತಿರದ ಗೊಜನೂರು ಏನೋ ವಿಚಾರಿಸಬೇಕು.

ಒಟ್ಟಿನಲ್ಲಿ, ೧೨ನೆಯ ಶತಮಾನದಲ್ಲಿಯೂ ನಮ್ಮೂರು ಪರಾಕ್ರಮ, ಹಾಗೂ ವಿದ್ವತ್ತೆ, ಇವುಗಳ ವೈಭವದ ಕೇಂದ್ರವಾಗಿದ್ದಿತೆಂದು ಇದರ ಮೇಲಿಂದ ಕಂಡು ಬರುವುದು; ೫೨ ಬ್ರಾಹ್ಮಣರಂತೂ ಮಿಗಿಲಾದ ವಿದ್ವಾಂಸರೆಂಬುದು ತಾನೇ ಕಂಡುಬರುವುದು; ಅವರಲ್ಲಿ 'ಸಹಜಕವಿ ನಾಗದೇವ ಪಂಡಿತರು' ಎಂಬವರೊಬ್ಬ ರಾಗಿದ್ದಾರೆ. ಇವರಾರೆಂಬುದನ್ನು ಕವಿಚರಿತಕಾರರು ತಿಳಿಸಬೇಕಾಗಿದೆ. [ಈ ಊರಲ್ಲಿ ಬುನಾದಿಯಲ್ಲೊಮ್ಮೆ ನಗರೇಶ್ವರ ಸ್ಥಾಪನೆಯಾಯಿತೆಂದೂ, ನಗರೇಶ್ವರ ಸ್ಥಾಪನೆಗೆ ೧ ಲಕ್ಷ ಬ್ರಾಹ್ಮಣ ಜನವಸತಿಯಿರತಕ್ಕುದೆಂದೂ ಇಲ್ಲೊಂದು ಆಖ್ಯಾಯಿಕೆಯುಂಟು.]

ಇದರಲ್ಲಿ ವಚನ ಭಾಗವಲ್ಲದೆ ೨॥ ಅನುಷ್ಟುಪ್, ೧೦ ಅಕ್ಷರ ವೃತ್ತಗಳು, ೧೪ ಕಂದ ಪದ್ಯಗಳುಂಟು. ಇದೊಂದು ಚಿಕ್ಕ ಚಂಪೂ ಕಾವ್ಯದಂತಿದೆ. ವರ್ಣನಾ ಪದ್ಧತಿಯೂ ಭಾಷಾ ಪದ್ಧತಿಯೂ ಸರಳ ಸುಂದರವಾಗಿವೆ. ಲಿಪಿಯೆಲ್ಲವೂ ಕನ್ನ ಡವು. ಕಲ್ಲಿನ ತಲೆಯಲ್ಲಿ ಮೇಲೆ ಸೂರ್ಯ ಚಂದ್ರರ ಚಿತ್ರಗಳೂ, ಕೆಳಗೆ ಎಡಕ್ಕೆ ಆಕಳು ಕರುಗಳ ಚಿತ್ರವೂ, ಅವುಗಳ ನಡುವೆ ಒಬ್ಬ ಯೋಗಿಯ ಚಿತ್ರವೂ, ಬಲಕ್ಕೆ ಈಶ್ವರ ಲಿಂಗ ಚಿತ್ರವೂ ಉಂಟು.

(೧) ಶ್ರೀ॥ ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ।
ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ॥ ಶ್ರೀ ॥

(೨) ಶ್ರೀಮದ್ದಕ್ಷಿಣ ಸೋಮನಾಥನಗಜಾ ಪೀನಸ್ತನಾಲಿಂಗನ।
ಪ್ರೇಮಂ ಚಂದ್ರಕಳಾಧರಂ ಪುರಿಕರ ಪ್ರಖ್ಯಾತ ಚಂಚತ್‌ಪುರೀ ॥

(೩) ಧಾಮಂ[ಸೂ]ನರ ಲಕ್ಷಣಾಕೃತಿ ಸುತ ಶ್ರೀ ಶಂಭು ನ[ಮ್ರಾಮರ]।
ಸ್ತೋಮಂ ಶ್ರೀಧರ ದಂಡನಾಥತಿಳಕಂಗೀ [ಗೆ * * * ನ್ದ]*—॥

(೪) ಜನತಾ ಸಂಸ್ತುತನಪ್ಪ ಜೋಗಮನೃಪಂ ತತ್ಸೂನು ಧಾತ್ರೀಶಮಂ।
ಡನನತ್ಯೂರ್ಜಿತ ತೇಜ [ನುದ್ಧು] ರ ಬಳಂ ಪೆರ್ಮಾಡಿ ಭೂಪಾಳನಾ ॥
ತನ ಪುತ್ರಂ ರಿಪುರಾಯ ದರ್ಪ[*] (೫)ಳನಂ ವೈರೀಭ ಕಂಠೀರವಂ।
ವನ ದಿವ್ಯಾ[ವ್ಯು]ತ ಭೂರಿ ಭೂವಳಯ. ನಾಥಂ ಬಿಜ್ಜಲೊಬ್ಬೇಶ್ವರಂ॥

ಶ್ರೀಮತ್ಕಳಚುರಿಯ ಕುಲೋ।
ದ್ದಾಮಂ ನೆಗ[ಳ್ದ] ಧರಿತ್ರಿಯೊಳ್ (೬) ಜಯಲಕ್ಷ್ಮೀ ॥

ಧಾಮಮಂ ಪಾಳಿತ ವಿಬುಧ
ಸ್ತೋಮಮಂ ಬಿಜ್ಜ[ಳ] ನೃಪಾಳನಹಿತ ಕರಾಳಂ॥

ಧರೆಯುಂ ಪಿಡಿ[ಗಿ] ಸೊಕ್ಕಿದಕ್ಕುದಲೇವಾಯ್ದು [ದ್ವೃತ್ತರಾ] [* *] ಭೂ।
ಪರ ಸನ್ಮಾಳಿಸಿತಂ [*] (೭)ಬಾಹು ಬಲದಿಂ ವಿಶ್ವಂಭರಾ ಭಾರಮಂ ॥
[ಪಿ]ರಿದುಂ ತಾಳ್ದಿದಂ [ಒಬನೊಂದೆಸಕ] [*]ಂ ವಿಕ್ಕನ್ಯ ಭೂಪಾಳ ರೊಳ್।
[ದೊ]ರೆಯೇ ಬಾಷ್ಪ ವಿಶಿ[ಯ್ಯ] ವೈರಿ ವನಿತಾ ದೃಕ್ಕಜ್ಜಲಂ ಬಿಜ್ಜಲಂ ॥

ಪರನೃಪ(೮)ರಂಜಿ [ತೆತ್ತ ಧ]ನಮುಂ ವನಿತಾ ಜನಮುಂ ವಿಭೂಷಣಾಂ।
ಬರ ಗಜ ವಾಜಿ ಸಂಕುಳಮುಮಲ್ಲ [* *] ಕ ನೃಪಾಳರಂ ತಿರ ॥
ಜ್ಜರ ಪಡೆದಿತ್ತಂ ರಾಜ್ಯ ವಿಭವಕ್ಕನುರಾಗ[ದ] ಮುಯ್ಯನಾಂಪನೇ।
(೯) ಸ್ಫುರಿತತರ ಪ್ರತಾಪ ಸಿಧಿ ಭಾಪ್ಪುರೆ ಬಿಜ್ಜಲ ಭೂಮಿಪಾಳಕಂ ॥

ಮುಳಿದಿ [* * *] ಮೇರುವಿಂ ವಾದ್ರಿಯೆನೆ [ಪೊ]ಸದಜಾಜಾಂ ದೇಹಾ [ಸ್ತ್ರ್ಯಾ]ದಿ ರತ್ನಂ।
ಗಳ[ರೀ] [*] ವೆತ್ತಿಸಿ ಬಿ(೧೦)ಜ್ಜಲನನುಪಮ ಭೂಪೆ [* * *] [ನಾತ್ಮಾಸಿ] ದೇವಾ ॥
ಚಳದಿಂ [ದ್ವಿಟ್] ಸೈನ್ಯವಾರ[* *]ಯೆನೆ [ಪೂ]ಸಿದ [ಸಖ್ಯಾದಿ ಹಾಸ್ತ್ರ್ಯಾದಿ] ರತ್ನಂ।
ಗಳ ನಾದು [ಸಿತ್ತಸೆದಧಿಕನೆ ವಲವಾದಿವ] (೧೧)ರಾಜಂಗವಿಾಗಳ್ ॥

ಧರೆಯೊಳ್ ವಿಕ್ರಮ ಚಕ್ರವರ್ತಿಯೆನಿಸಿರ್ದ್ದಾ ಬಿಜ್ಜಳೊಬ್ಬೇಶ ಭೀ।
ಕರ ಭೇರೀ ರವ [ಮೊಮ್ಮೊದಲ್] ಸೆಗಳಿ ಗೆಳ್ದಾ ಗೂರ್ಜರಂ ಕೂಡೆ ಜ ॥
ರ್ಜರ ನಾ(೧೨)ದಂ ಕುಸಿದಂ ಬಸಂ ನಡುಗಿ ಕಂಡಂ ಪಾಂಡ್ಯ [ಂನದಜೀ ಬ।]
ರ್ಬರನುರ್ಬ೯ಂ ಬಿಸುದಾಡಿದಂ ಭಯದಿ ಪೊಕ್ಕಂ ಮಾಳವಂ ಮಾಳವಂ॥

ಉದಯೋತ್ತುಂಗಾದ್ರಿ ಸೇತುಕ್ಷಿತಿಧರ [* *ಪಶ್ಯ] (೧೩) ರ್ಬಂಧೀರಂ ಮತ್ತವಾ[ದ್ವಿ]ಯ।
ಮದರಿ[ಃ] ಭೃತ್ಯೈಯ್ದಿತಂ ನಾಳ್ಪವನಿಯ ಚತುರಾ ಪೂ[*] ಸಂಶುದ್ಧಿ ಗದಿ ॥
ಕ್ಕದ ಗುಂಡಂ ಪೋಲೆ ವಿಶ್ವಂಭರೆಯ ಭರವನಾಂತಿರ್ದಪಂ ಪೆತ್ತರಾ [ಪೊ]।
[ಣ್ಮಿ]ದುದೆಂದಂದಣ್ಣ ಸಾ(೧೪)ಮಾಸ್ಯನೇ ನೃಪ ತಿಳಕಂ ಬಿಜ್ಜಳ ಕ್ಷೋಣಿಪಾಳಂ ॥

ಸ್ವಸ್ತಿ ಸಮಧಿಗತ ಪಂಚ ಮಹಾ ಶಬ್ದ ಮಹಾರಾಜಾಧಿರಾಜಂ। ಕಾಳಾಂಜರ ಪುರವರಾಧೀಶ್ವರಂ। ಸುವರ್ಣ ವೃಷಭ ಧ್ವಜಂ ಡ(೧೫) ಮರುಗ ನಿರ್ಘೋಷಣಂ। ಕಳಚುರಿಯ ಕುಳ ಕಮಳಮಾರ್ತಾಂಡಂ। ಕದನ ಪ್ರಚಂಡಂ। ಮಾನ ಕನಕಾಚಳಂ। ಸುಭಟರಾದಿತ್ಯಂ । ಕಲಿಗಳಂ ಕುಶಂ। ಗಜ ಸಾಮಂತ ಶರಣಾ(೧೬)ಗ[ತ]ವಜ್ರ ಪಂಜರಂ। ಪ್ರತಾಪ ಲಂಕೇಶ್ವರಂ । ಪರನಾರೀ ಸಹೋದರಂ । [ಸನಿವಾರ ಸಿದ್ಧಿ] । ಗಿರಿ ದುರ್ಗ ಮಲ್ಲಂ। ಚಲದಂಕ ರಾಮಂ। ವೈರೀಭ ಕಂಠೀರವಂ। ನಿಸ್ಸಂಕ ಮಲ್ಲ ನಾಮಾ(೧೭)ದಿ ಪ್ರಶಸ್ತಿ ಸಹಿತಂ । ಶ್ರೀಮತ್ತ್ರಿಭುವನಮಲ್ಲ ವೀರ ಬಿಜ್ಜಲದೇವ ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ। ಚಂದ್ರಾರ್ಕ ತಾರಂ ಸ(೧೮)ಲುತ್ತಮಿರೆ ॥

ಆ ರಾಜ ಶಿಖಾಮಣಿ ಪದ।
ನೀರಜ ಭೃಂಗಂ ವಿನೂತ ವಿಜಯೋತ್ತುಂಗಂ ॥
ಧಾರಿಣಿಯೊಳ್ನೆಗಳ್ದಿರ್ದ್ದಂ।
ಧೀರಂ ಶ್ರೀಧರ ಚಮೂಪನಂಗಜ ರೂಪಂ ॥

(೧೯) ಆ ದಂಡನಾಥ ಚೂಡಾಮಣಿಯ ವಂಶಾವತಾರವೆಂತೆಂದಡೆ॥

ಕಮಳಭವಾನ್ವಯದೊಳಗು।
ತ್ತಮನಖಿಳ ಜಗದ್ವಿನೂತನೆಸೆದಿರ್ದ್ದನಗ॥
ಸ್ತ್ಯ ಮುನೀಂದ್ರಂ (೨೦) ಸುರ ನುತನನು।
ಪಮಿತ ಮಹಾಮಹಿಮನಖಿಳ ಮುನಿಜನ ಸೇವ್ಯಂ॥

ಎನೆ ನೆಗಳ್ದಗಸ್ತ್ಯಗೋತ್ರದೊ।
ಳನುಪಮಿತಂ ದಾಸಿರಾಜ ದಂಡಾಧೀಶಂ ॥
(೨೧) ಜನತಾ ಸಂಸ್ತುತ್ಯಂ ಖ್ಯಾ।
ತನಾದನಾಶ್ರಿತ ಸಮಾಜ ದಿವಿಜ ಮಹೀಜಂ॥

ಆತನ ಕುಲವಧು ಗುಣ ಗಣ ।
ಸೂತನ ಮಣಿ ಭೂಷಣಾವಳಂಬಿನಿ ಭುವನ ॥
(೨೨) ಖ್ಯಾತ ಪತಿವ್ರತೆಯಾದಳ್।
ಭೂತಳದೊಳ್ ದುಗ್ಗಣವ್ವೆಯೆಂಬಳ್ ಪೆಸರಿಂ॥

ಅವರ್ಗೆ ಸುತಂ ಪುಟ್ಟಿದನು।
ತ್ಸವದಿಂದಂ ಹರಿಯಣಯ್ಯ ದಂಡಾಧೀಶಂ ॥
(೨೩) ಭುವನ ಜನಸ್ತುತನಾಶ್ರಿತ।
ನಿವಹ ಮನೋರಥ ಫಳಪ್ರದಾಮರ ಭೂಜಂ॥



ಜಗದೊಳ್ ಶ್ರೀಕರಣೈಕಾ।
ಗ್ರಗಣ್ಯನಸುಪಮಿತ ಪುಣ್ಯನೆ(೨೪) ಸೆದಿರ್ದಂ ಚಾ ॥
ರು ಗುಣಾಭಿರಾಮನಂಭೋ।
ಧಿ ಗಭೀರಂ ಹರಿಯಣಯ್ಯ ದಂಡಾಧೀಶಂ ॥

ಜನಕಂ ತಾಂ ದಾಸಿರಾಜಂ ಜನನಿ ಪತಿ ಹಿತಾಚಾರೆ ದುಗ್ಗಬ್ಬೆ (೨೫) ಮತ್ತಂ।
ತೆನಸುಂ ಶ್ರೀ ಪಂಪನುಂ ರುದ್ರನುಮುಮಳ ಯಶರ್ತ್ತನ್ನ ತಮ್ಮಂದಿರೆಂದುಂ ॥
ತನಗಾಳ್ದಂ ಬಿಜ್ಜಲೊಬ್ಬೇಶ್ವರನಮರವರಂ ಶಂಕರಂ ದೆಯ್ವಮೆಂದಂ।
(೨೬) ಪುಸಿತಾಂತಂ ವಿಪ್ರ ಚೂಡಾಮಣಿ ಹರಿಯಣನೆಂದನ್ಯನೆಂ [ಬೊರ್ವ]ನಾವಂ ॥

ಆತನ ಕುಲವಧು ಭೂಧರ।
ಜಾತೆಗೆ ಸೀತೆಗೆ ಪಯೋಧಿ ಜಾತೆಗೆ ಪಂ(೨೭)ಕೇ ॥
ಜಾತಾಸ್ಯ ಜಾತೆಗೆಣೆಯೆನೆ।
ಭೂತಳದೊಳ್ ಮುದ್ದಿಕವ್ವೆ ಪೆಸರ್ವಡೆದಿರ್ದಳ್ ॥

ಅಂತಾ ದಂಪತಿಗಳ್ಗೆ ಪುಟ್ಟಿದರಿಳಾಖ್ಯಾತಂ ಯಶಶ್ರೀ ವ(೨೮)ಧೂ।
ಕಾಂತಂ ಮಾಚಣ ದಂಡನಾಥ ತಿಳಕಂ ಶ್ರೀ ಶ್ರೀಧರಂ ಸೋಮನೆಂ ॥
ಬಿಂತೀ ಮೂವರು [ವ] ಪ್ರತರ್ಕ್ಯ ಮಹಿಮಸೌಜನ್ಯ ರುದ್ಯದ್ಗುಣಾ।
(೨೯) ಕಾಶ್ರಾಂತರ್ಬಿಜ್ಜಳ ಭೂವಿ-ಪಾಳ [ಪೃತ]ನಾಧೀ[ಶ] ರ್ಮಹಾಮಂತ್ರಿಗಳ್ ॥

ಆ ಮಾಚಿರಾಜ ದಂಡನಾಥ ಚೂಡಾಮಣಿಯ ಮಹಿಮೆಯಂ (೩೦) ಪೇಳ್ವಡೆ ॥

ಕ್ಷಿತಿಯೊಳ್ ವಿಖ್ಯಾತನಾದಂ ಸಕಳ ಗುಣಗಣಾಳಂಕೃತಂ ಬಿಜ್ಜಲೊಬ್ಬೇ।
ಪತಿ ಪಾದಾಂಭೋಜ ಭೃಂಗಂ ಕುಮುದ ಧವಳ ಚಂಚದ್ಯಶೋವಲ್ಲರೀ ವೇ ॥
(೩೧)[*] ತ [ದಿಗ್ಗಜಳ] ಸುರೇಂದ್ರಾವನಿಧರ ನಿಭ ಧೈರ್ಯಂ ಬೃಹತ್ತ್ಯಾಗ ಸಂತ।
ರ್ಪ್ಪಿತ ದೀನಾನಾಥ[*]ಥಂ ನಿರುಪಮ ಮಹಿಮಂ ಮಾಚ ದಂಡಾಧಿ (೩೨) ನಾಥಂ ॥

ಈ ಚತುರುದಧಿ ಪರೀತ ಧ।
ರಾ ಚಕ್ರಂ ಪದಪಿನಿಂದೆ ಬಣ್ಣಿಸೆ [ನೆಗಳ್ದಿಂ] ॥
ಮಾಚಿ [*****]ಜ ದ।
ಧೀಚಿಗಳಿಂದಧಿಕವೆನಿಪ ವಿತರಣ ಗುಣದಿಂ ॥

(೩೩) ಅದಲ್ಲದೆಯುಂ ॥

ಸೋಮನ ಮಹಿಮೆಯನುಸಿರ್ವಡೆ।
ಸಾಮಾನ್ಯಮದಲ್ತು ಗಗನ ತಲದಂದದೆ ನಿ॥
ಸ್ಸೀಮಮೆನ[ಲಿದ*ಳಿತರ] ಚ।
ಮೂ ಮಾತ್ರುಸ್ಸ್ವರಿಯೆ (೩೪) ಬಗೆದು ಭಾವಿಸಿ ನೋಡಲ್ ॥

ಆವರಿಂದ[ಮ]ಧಿಕನಾದಂ।
ಭುವನ ಜನಸ್ತುತ್ಯನಮಳ ಚಾರು ಚರಿತ್ರಂ ॥
ಕವಿಜನ ಮನೋರಥಪ್ರದ।
ದಿವಿಜ ಕುಜಂ ಶ್ರೀ(೩೫)ಧರಂ ಚಮೂಪತಿ ತಿಳಕಂ ॥

ಚರಿತಂ ಗಾಂಗೇಯನೊಳ್ ಪಾಸಟಿ ಚತುರತೆ ವಾಕ್ಯಾಮಿಸೀನಾಥನೊಳ್ ತಾಂ।
ಸರಿ ಗಾಂಭೀರ್ಯ್ಯಂ ಪಯೋರಾಶಿಯೊಳೆಣೆ (೩೬) ನಿಜ ವಿಕ್ರಾಂತ [ಐಂದ್ರಾ]ರಿಯೊಳ್ [ಪಾ] ॥
ದೊರೆ ತನ್ನೊಂದಾರ್ಪು ವಿದ್ಯಾಧರಪತಿಯೊಳಣಂ [ಪಾಟಿ]ಯೆಂದೆಂದು ವಿಶ್ವಂ।
ಭರೆಯೆಲ್ಲಂ ಬಣ್ಣಿಕುಂ ಶ್ರೀಧ(೩೭)ರನನನುದಿನಂ ನಿರ್ಭರಾನಂದದಿಂದಂ ॥

ಕಳಿಮಳ ಕಳಂಕ ಪಂಕಮು।
ನಲೆಪಂ ತನ್ನೊಂದು ಚಾರು ಚರಿತ ಸುಧಾ ನಿ ॥
ರ್ಮ್ಮಳ ಜಳದಿಂದಮೆನಲ್ ಭೂ।
ತಳದೊಳ್ ಶ್ರೀಧರನ ಸ(೩೮)ರಿಗೆ ವಪ್ಪವನಾವಂ ॥

ಆವರಿವರುವರೊಳ್ಳಿದರೆಂ।
ಬ ವಿವಾದವದೇಕೆ ಸಕಳ ಗುಣಗಣದಿಂದಂ ॥
ಭುವನತ್ರಯದೊಳಗೊಳ್ಳಿದ।
ನಿವನೊಬ್ಬಂ ಶ್ರೀಧರಂ ಚಮೂ(೩೯)ಪತಿ ತಿಳಕಂ ॥

**ವಚನ.**—ಅಂತೆನಿಸಿ ನೆಗಳ್ದ ಶ್ರೀಧರ ದಂಡನಾಯಕಂ ಪುರಿಗೆಱೆ ಮುನ್ನೂಱುಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನದಿಂ

ದರಸು ಗೆ(೪೦)ಯ್ಯುತ್ತಿರ್ದೊಂದು ದೆವಸ ಕಲ್ಯಾಣ ನೆಲೆವೀಡಿನೊಳ್
ಶ್ರೀಮತ್ತ್ರಿಭುವನೈಕ ವೀರ ಬಿಜ್ಜಲದೇವರ್ಗೆ ಧರ್ಮ ಕಥಾ ಪ್ರಸಂಗ
ಮಾದಲ್ಲಿ ಮಾಚರಸ ದಂಡನಾಯಕ(೪೧)ನುಂ ಶ್ರೀಧರ ದಂಡ
ನಾಯಕನುಮೊಂದಾಗಿರ್ದು ದೇವರ ರಾಜ್ಯಾಭ್ಯುದಯ ನಿಮಿತ್ತಂ
ಶ್ರೀಮದ್ರಾಜಧಾನಿ ಪಟ್ಟಣಂ ಪುಲಿಗೆರೆಯಲ್ಲಿ ಬ್ರಹ್ಮ(೪೨)ಪುರಿಯಂ
ಮಾಡಿದಪ್ಪೆವೆಂದು ಬಿನ್ನವಿಸಿ ತದನುಜ್ಞೆಯಿಂ ಪಾರಮೇಶ್ವರ ದತ್ತಿ
ಯಾಗಿ ಬ್ರಹ್ಮಪುರಿಯಂ ಬಿಟ್ಟರಂತಾ ಬ್ರಹ್ಮಪುರಿಯ ಪರಿವಿಡಿಯೆಂ
ತೆಂದಡೆ ॥ (೪೩) ಬಹು ಕಳಾ ಬ್ರಹ್ಮ ವಾಸುದೇವಭಟ್ಟರು । ಮಹಾ
ವಾದಿ ಭಂಗದೇವಭಟ್ಟರು । ಸರಸ್ವತೀ ಸೋಮಯಾಜಿಭಟ್ಟರು ।
ಆತ್ಮವಿತ್ತುಗಳಪ್ಪ ಅಪ್ಪಣಭಟ್ಟರು । ಶಿ(೪೪)ವಣದ್ವೇದಿಭಟ್ಟರು ।
ತಾರ್ಕಿಕ ದೇವಣಭಟ್ಟರು । ವಾಚಸ್ಪತಿ ಮಹಾದೇವಭಟ್ಟರು । ಉಭಯ
ವೈಯ್ಯಾಕರಣ ಮಾಧವಭಟ್ಟರು । ಪಾಣಿನೀಯ ಕೇಶವಭಟ್ಟ(೪೫)
ರು । ಮಂಚಿಭಟ್ಟರು । ಗುಂಡದೇವಭಟ್ಟರು । ಮಲ್ಲಿಭಟ್ಟರು । ಅನಸ್ತ
ಭಟ್ಟರು । ಪಟ್ಟವರ್ಧನ ಸಾವಿಯಣ ಪುಳಿಸಾಸರು । ಪಟ್ಟವರ್ಧನ
ತ್ರಿವಿಕ್ರಮ ಪುಳಿ(೪೬)ಸಾಸರು । ಅಮಾನಿಸ ಪಟ್ಟವರ್ಧನ ನಾಗ
ವಿಷ್ಣು ಪುಳಿಸಾಸರು । ಮಾಹೇಶ್ವರಾದಿತ್ಯ ಪುಳಿಸಾಸರು । ಪಟ್ಟವರ್ಧನ
ಚಂದ್ರ ಪುಳಿಸಾಸರು । ದಶಗ್ರಂಥಿ ಮು(೪೭)ದ್ದಣ ಪುಳಿಸಾಸರು ।
ದಶಗ್ರಂಥಿ ಈಶ್ವರ ಪುಳಿಸಾಸರು । ಕ್ರಮಿತ ಲಕ್ಷ್ಮೀಧರ ಪುಳಿಸಾಸರು ।
ಸೋಮೇಶ್ವರ ಪುಳಿಸಾಸರು । ಪಟ್ಟವರ್ಧನ ಬಸವಣ ಪುಳಿಸಾ (೪೮)
ಸರು । ಲಕ್ಷ್ಮೀಧರ ಪುಳಿಸಾಸರು । ಕೈವಡದ ಸೋಮೇಶ್ವರ ಪುಳಿಸಾ
(೪೯) ಸರು । ಗಣಪತಿ ಪುಳಿಸಾಸರು । ಬ್ರಹ್ಮದೇವ ಪುಳಿಸಾಸರು ।
ನಾರಾಯಣ ಪುಳಿಸಾಸ(೪೯)ರು । ಖಂಡಿಕದ ಶಂಕರ ಪುಳಿಸಾಸರು ।
ಖಂಡಿಕದ ದೇವೆಯ ಪುಳಿಸಾಸರು । ಜನಮನೋಹರಂ ರಾಮ
ದೇವೋಪಾಧ್ಯಾಯರು । ಮಾಧ್ಯಂದಿನ ಶಾಖೆಯ ನಾರಣೋ (೫೦)
ಪಾಧ್ಯಾಯರು । ಜೋತಿಸ ಪದ್ಮನಾಭಭಟ್ಟರು । ಶಂಕರನಾಯಕರು ।
ಅವರ ಮಗ ಬಮ್ಮರಸ ಮೈದುನ ಕೇಶವಂ । ದೇವಚಂದ್ರಭಟ್ಟರು ।
ನಾರಸಿಂಹಭಟ್ಟರು । ಸಹಜಕವಿ(೫೧)ನಾಗದೇವಪಂಡಿತರು । ಗೌಡ
ಸಾವಿಕಾವರಸರು । ಹಡಪದೈಚರಸರು । ಅಗಸ್ತ್ಯೇಶ್ವರದ ದಾಸಿಯ
ಣ್ಣನು । ಗಣಕೇಶ್ವರದ ದಾಶಿಯಣ್ಣನು । ಶೋಭನೇಶ್ವರದ ಮಾರ್ತಾಂಡ
(೫೨)ಯ್ಯನು । ಶಂಕರ ಕ್ರಮಿತರು । ಪೂಜಾರಿ ಸೋಮಣ್ಣನು ।
ಆ ಕೇಶಿರಾಜನು । ಆ ನಾಣಿಮಯ್ಯನು । ಆ ಸಂಕಯ್ಯನು । ಆ ಮಗ
ಮಹಾದೇವನು । ಸಂಹಿತೆಯ ರೇವ(೫೩)ರಸನು । ಗಣಕಿಂಕರ ಬ್ರಹ್ಮ
ದೇವಭಟ್ಟರು । ಸೂತ್ರಧಾರಿ ರೇವೋಜನು ॥ ಮೂಜು ತಳಾರವೃತ್ತಿ
ಇಸ್ಸಿಯಪ್ಪತ್ತಿರ್ಬ್ಬರ್ಗ್ಗೆ ಬ್ರಹ್ಮಪುರಿಯ ವೃತ್ತಿಯಂ (೫೪) ಕುಡಲ್

ವೇಡಿಪಾರ್ಪಗೇರಿಯ ನೂಱೆಂಪ್ಪದಿಪ್ಪರ್ಗ್ಗಂ ದ್ರುವ್ಯನಿವೇದನಂ ಮಾಡಿ
ಅಜ್ಜವರ ಮಧುವಣನ ಭೂಮಿಯೊಳಗೆ ಪುರಕ್ಕೆ ವೇಡಿ ಮತ್ತಱು
ವಱುನೂಱು ಕಮ್ಮಭೂಮಿ(೫೫)ಯುಂ ಧಾರೆಯುಂ ಕೊಂಡು
ಪಿರಿಯರೊಟ್ಟಗಾವುಂಡರೊಟ್ಟಿಯ ಸಾಮಂತ ಪಡವಳ್ಪಿಜಣ ಅಡಪದ
ರಾಯುಂಣತಂ [—] ಪಾಲಕೇಸರ್ಿಯ[ಣ]ನಿಂತಿವರೊಳಗಾಗೆ ಸಾಸಿರ
ಪರಿ(೫೬)ಗ್ರಹಸಮಿತಮಿಂದ್ರಕೇಶಿ ದೇವರಸರ್ಗೆ ದ್ರುವ್ಯ ನಿವೇದನಂ
ಮಾಡಿ ಮನ್ನೆಯವೊಲದೊಳಗೆ ಸೂಱಿತೊಂಬತ್ತು ಮತ್ತರು
ಭೂಮಿಯುಂ ಧಾರೆಯುಂ ಕೊಂಡು ಪುಲಿಗೆಱೆ ಮುನ್ನೂ(೫೭)
ಱಱೆಳಗಣ ಬೆಣ್ಣೆ ಧಡಿಯುಳ್ಪತ್ತಱ ಬದಿಯ ಬಾಡಕಱಿಳವಾಡ
ಸಹಿತಂ ಸಕನೃಪ ವರ್ಷ ೧೦೮೮ನೆಯ ಅವ್ಯಯ ಸಂವತ್ಸರದ ಕಾರ್ತಿಕ
ಪೌರ್ಣಮಾಸ್ಯ ಸೋಮವಾರ (೫೮) ವ್ಯತಿಪಾತ ಸೋಮಗ್ರುಹಣ
ದಲ್ಲಿ ಶ್ರೀ ಸೋಮನಾಥ ದೇವರ ಸನ್ನಿಧಾನದಲ್ ಶ್ರೀಧರ ದಂಡನಾ
ಯಕನಯ್ವತ್ತಿರ್ಬ್ಬರ್ಗ್ಗಂ ಪಾದಪ್ರಕ್ಷಾಳನ ಪೂರ್ವಕಂ ಸರ್ವ (೫೯)
ಬಾಧಾ ಪರಿಹಾರಂ ಸರ್ಬನಮಸ್ಯವಾಗೆ ಕೊಟ್ಟನಾ ಪುರದ ಸೀಮೆಯುಂ
ತೆಂದಡೆ || ಮೂಡಲ್ ಕಾಜವಗೊಂಡದ ಕೆಯ್ಯ ಪಡುವಣ ಮೇರೆ
ಯಲ್ ನಟ್ಟಕಲ್ಲು ತೆಂಕಲ್ ಪೋಬೇಶ್ವರದ ಭೂಮಿಯ (೬೦)
ಮೇರೆಯಲ್ ನಟ್ಟಕಲ್ಲು ಪಡುವಲ್ ಗೊಗ್ಗಿಯಪುರದ ಮೂಡಣ
ಭೂಮಿಯ ಮೇರೆಯ ನಟ್ಟಕಲ್ಲು ಬಡಗಲ್ ಕೆಱೆಯೇರಿಯ ಬಡಗ
ಗಡೆಯ ನಟ್ಟಕಲ್ಲು ಸ್ಥಳ ವೃತ್ತಿಯ (೬೧)ಹೊಲದ ಸೀಮೆಯುಂ
ತೆಂದಡೆ || ಮೂಡಲಕ್ಕಿಗುಂದದ ಬಟ್ಟೆಯ ಪಡುವಣ ಪಳ್ಳದೊಳಗ
ಣೆಮ್ಮೆ ಗುಂಡಿನ ತೆಂಕಮೆಯ್ಯಲ್ ನಟ್ಟಕಲ್ಲು ಆಗ್ನೆಯದಲ್ಲಿ ಎರಡುಂ
ಪಳ್ಳದ ಕೂಡಲ್ ತೆಂಕ(೬೨)ಲು ಕಿನ್ನರಿಗಲ್ಲು ನೈರಿತ್ಯದಲ್ ಕುಱಿಂ
ಬಗೊಳದೆರಿಯಿಂ ಮೂಡಲ್ ನಟ್ಟಕಲ್ಲು ಅಲ್ಲಿ ಬಡಗವೊಗದೆ ನಡೆಯಲು
ಸೋಮನಾಥದೇವರ ಕೆಯ್ಯ ತೆಂಕಣ ಮೇರೆಯಲ್ ನ(೬೩)ಟ್ಟಕಲ್ಲು
ಅಲ್ಲಿಂ ಮೂಡನಡೆಯಲಾ ಕೆಯ್ಯಾಗ್ನೆಯದಲು ನಟ್ಟಕಲ್ಲು ಅಲ್ಲಿಂ ಬಡಗ
ನಡೆಯಲಾ ಕೆಯ್ಯ ಈಶಾನ್ಯದಲ್ ನಟ್ಟಕಲ್ಲು ಅಲ್ಲಿಂ ಪಡುವ ನಡೆಯ
ಲಾಕೆ(೬೪)ಯ್ಯ ಬಡಗಣ ಮೇರೆಯಲ್ ನಟ್ಟಕಲ್ಲು ಅಲ್ಲಿಂ ಬಡಗ
ವೊಗದೆ ನಡೆಯಲೊಳಕೆಯ ಹಳ್ಳ ವಾಯುವ್ಯದ ಮೇರ್ಯ ಬಡಗಲಾ
ಹಳ್ಳವೆ ಮೇರೆ ಈಶಾನ್ಯದಲಾ ಹಳ್ಳವಳೆಯಲ್(೬೫) ನಟ್ಟಕಲ್ಲು ಈ
ಭೂಮಿಯ ತೆಂಕಣ ಕಡೆಯೆಂನ್ನೆಸಱಲು ದಸವಂದಕ್ಕೆ ಮತ್ತರ್
ಹತ್ತೊಂಭತ್ತು || ಇನ್ತೀ ಬ್ರುಹ್ಮಪುರಿಯ ಧರ್ಮಮಯೆಲ್ಲಾಕ್ಕೆಯ
ರಸು (೬೬)ಗಳುಂ। ಸಕರಂಗಳುಂ। ಪಂಚಮಠ ಸ್ಥಾನಂಗಳುಂ। ಮನ್ನೆ
ಯರುಂ। ಸಧರ್ಮದಿಂದಂ ಕೂಡೆ ಪ್ರತಿಪಾಳಿಸುವರ್ ಈ ಧರ್ಮಕ್ಕಾ
ರೊ(೬೭)ರ್ವರನ್ನೆಯುಮಂ ಚಿಂತಿಸಿದವರ್ಗೆ ಕುರುಕ್ಷೇತ್ರ ಪ್ರಯಾಗೆ

ವಾರಣಾಸಿಯೆಂಬ ತೀರ್ಥಸ್ಥಾನಂಗಳೊಳ್ ಸಹಸ್ರ ವೇದ ಪಾರಗರಪ್ಪ ಬ್ರಾಹ್ಮಣರಂ ಕೊಂದಂತಪ್ಪ ಪಾಪಮುಕ್ಕು ॥

(೬೮)ಸ್ವದತ್ತಾಂ ಪರದತ್ತಾಂ ವಾ ಯೋ ಹರತಿ ವಸುಂಧರಾಂ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಪಿತೃಭಿಃ ಸಹ ಮಜ್ಜತಿ ॥
ಬಹುಭಿರ್ವಸುಧಾ ದತ್ತಾ ರಾಜಭಿಸ್ಸಗರಾದಿಭಿಃ।
ಯಸ್ಯ

(೬೯) ಹಾರುವರ ನೆಲದೊಳಗೆ ಗೊಗ್ಗಿಯಪುರದ ಹೊಲಗೇರಿಯು ಮಾಱಿಕೊಂಡಬಿಟ್ಟ ಕಮ್ಮ ೧೦೦ ಬ್ರಹ್ಮಪುರಿಯ ಪೊಲಗೇರಿಗೆ ಬಿಟ್ಟ ಕಮ್ಮಂ ॥

**ಕೊಪ್ಪಳ ವೀರಭದ್ರಪ್ಪ, ಲಕ್ಷ್ಮೇಶ್ವರ**

---

# * ಕರ್ಣಾಟಕದಲ್ಲಿ ಸಾಹಿತ್ಯಕ್ಕೆ ರಾಜಾಶ್ರಯವು

ಉತ್ತಮವಾದ ಸಾಹಿತ್ಯವು ನಾಡಿನಲ್ಲಿ ಹುಟ್ಟುವುದಕ್ಕೆ ರಾಜಾಶ್ರಯವು ಏತಕ್ಕೆ ಬೇಕು? ಶ್ರೀಮಂತ ಶ್ರೇಣಿಯವರ, ಉದಾತ್ತ ಜನರ, ಸಚಿವ ಸಾಮಂತರ ನೆರಳಿನಲ್ಲಿಯೇ ಉತ್ತಮವಾದ ಸಾಹಿತ್ಯದ ನಿರ್ಮಾಣವಾಗಿರುವುದೇ? ವಾಲ್ಮೀಕಿಯು ಶ್ರೀಮದ್ರಾಮಾಯಣವನ್ನು ರಚಿಸಲಿಕ್ಕೆ ಯಾರಾದರೂ ಮೇಲಾಟದ ಪಾರಿತೋಷಿಕವನ್ನಿಟ್ಟಿದ್ದರೇ? ವ್ಯಾಸಮಹರ್ಷಿಯ ಮಹಾಭಾರತಕ್ಕೆ ಅದಾರು 'ನೋಬಲ್ ಪ್ರೈಜ'(Noble Prize)ನ್ನು ಕೊಟ್ಟರು? ಸರ್ವೋತ್ಕೃಷ್ಟವಾದ ಸಾಹಿತ್ಯವು, ಜನಜೀವನವು ಪರಿಪಕ್ವವಾದಾಗ ತನ್ನಿಂದ ತಾನೇ ಹುಟ್ಟುವುದು. ಪ್ರತಿಭಾಶಾಲಿಯಾದ ಕವಿಯನ್ನು ಯಾವ ಬಂಧನವೂ ತಡೆಯಲಾರದು. ಹುಟ್ಟು ದರಿದ್ರನಾದ ಭಾರವಿಯು ಕಿರಾತಾರ್ಜುನೀಯವೆಂಬ ಸರಸ ಕಾವ್ಯವನ್ನು ನಿರ್ಮಿಸಲಿಲ್ಲವೇ? ಭವಭೂತಿಯ ಸುತ್ತಲೂ ಇರುವ ಜನರು ಅವನನ್ನು † ಆದರಿಸದಿದ್ದರೂ "ಉತ್ಪತ್ಸ್ಯತೇಸ್ತಿ ಮಮ ಕೋಪಿ ಸಮಾನ ಧರ್ಮಾ" ಎಂಬ ಅತುಲವಾದ ಆತ್ಮಶ್ರದ್ಧೆಯನ್ನು ಧರಿಸಲಿಲ್ಲವೇ? ಅಂತು, ಹಣವು ಗುಣಕ್ಕೆ ಕಾರಣವಲ್ಲವೆಂದೇ ಹಣದಾಶೆಯಿಂದ ಷಡಕ್ಷರಿಯು ನರಸ್ತುತಿಯನ್ನು ಹೀಯಾಳಿಸಿ ಹರಸ್ತುತಿಯನ್ನೇ ಮಾಡಲಿಲ್ಲವೇ? ಹಣದಿಂದ ಸತ್ಕಾವ್ಯವು ಹುಟ್ಟುವುದೆಂದು ಹೇಳಲಾಗದು. ಆದುದರಿಂದಲೇ ಕನ್ನಡ ಕವಿ ನೇಮಿಚಂದ್ರನು—

(೧) ಎಣಿಸದೆ ಗುಣಮಂ ಕಾಜಿನ।
ಮಣಿಯಂ ಮಾರುವವೊಲಹಹ ನಿನಗಂ ತನಗಂ ||
ಪಣಕೆ ಕೃತಿಯೆಂಬ ಚಿಂತಾ।
ಮಣಿಯಂ ಮಾರುವನ ಬುದ್ಧಿಗಾಂ ಬೆರಗಾದೆಂ ||

(೨) ಬೆಲೆಯಿಂದಕ್ಕುಮೆ ಕೃತಿ ಗಾ।
ವಿಲ ಭುವನದ ಭಾಗ್ಯದಿಂದಕ್ಕುಂ ನೋಳ್ಪಂ ||
ಬೆಲೆಗೊಟ್ಟು ತಾರ ಮಧುವಂ।
ಮಲಯಾನಿಲನಂ ಮನೋಜನಂ ಕೌಮುದಿಯಂ ||



ಬೆಲೆಗೊಟ್ಟರೆ ಸತ್ಕಾವ್ಯವು ಹುಟ್ಟುವುದೇ? ಸದ್ವಸ್ತುಗಳು ಬೆಲೆಯಿಂದ ಸಿಕ್ಕುವುದೆಂದು ಹೇಳಕೂಡದು. ವಸಂತನನ್ನೂ, ಮಲಯ ಮಾರುತನನ್ನೂ, ಕಾಮನನ್ನೂ, ಚಂದ್ರಿಕೆಯನ್ನೂ ಬೆಲೆಗೊಟ್ಟು ತನ್ನಿರಿ, ನೋಡುವ! ಅನುಪಮ

* ಬೆಳಗಾಂವಿಯಲ್ಲಿ ನಡೆದ ೧೫ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳಕ್ಕೆ ಬರೆದು ಬಂದುದು.

† ಅಂತೆ ಅವನ ಮುಖದಿಂದ, "ಯಥಾ ಸ್ತ್ರೀಣಾಂ ತಥಾ ವಾಚಾಂ ಸಾಧುತ್ವೇ ದುರ್ಜನೋ ಜನಃ" ಎಂದು ಹೇಳಿರುವನು.

ವಸ್ತುಗಳು ಬೆಲೆಯಿಂದ ದೊರೆಯಲಾರವು. ಶ್ರೀಮಚ್ಛಂಕರಾಚಾರ್ಯ ಮೊದಲಾದ ಮಹರ್ಷಿಯರು ವೇದಾಂತ ಗೀತಗಳನ್ನು ಯಾರ ಆಶ್ರಯದಿಂದ ಹಾಡಿದರು? ಚಿನಿವಂದ ಶ್ರೀನಿವಾಸನು ಪುರಂದರದಾಸನಾಗಿ ಹಾಡಿದಾಗ ಹಣದ ತ್ಯಾಗವನ್ನೇ ಮಾಡಲಿಲ್ಲವೇ? ನಿಷ್ಠುರಕವಿಯಾದ ಸರ್ವಜ್ಞನು ಕನ್ನಡ ಸಮಾಜವನ್ನು ಹಾದಿಗೆ ತರಲು ಹಾಡಿದಾಗ ಅದಾವ ರಾಜಾಸ್ಥಾನದ ಬಿರುದಾವಳಿಗಳನ್ನು ಬಯಸಿದ್ದನು? ಉತ್ತಮವಾದ ಸಾಹಿತಿಯ ನಿರ್ಮಿತಿಯಾಗಲಿಕ್ಕೆ ರಾಜ ಮಹಾರಾಜರ, ಮಾಂಡಳಿಕ ಸಾಮಂತರ, ಸಚಿವ ಶ್ರೀಮಂತ ಶ್ರೇಣಿಯವರ ಆಶ್ರಯವು ಬೇಕೇಬೇಕೆಂದು ಹೇಳುವುದು ಹೇಗೆ ಎಂದು ಕೆಲವರು ಕೇಳುವರು.

ಉತ್ತಮವಾದ ಕಾವ್ಯ ನಿರ್ಮಾಣಕ್ಕೆ ಹಣವು ಪ್ರತ್ಯಕ್ಷವಾದ ಕಾರಣವಾಗಿರಲಿಕ್ಕಿಲ್ಲ. ಬೆಲೆಗೊಟ್ಟರೆ ಕೇವಲ ಬೆಲೆಯಿಂದ, ಕಾಲಿದಾಸನ ರಘುವಂಶ ಶಾಕುಂತಲದಂಥ ಕಾವ್ಯಗಳು ಬೇಕಾದಾಗ ಹುಟ್ಟಲಿಕ್ಕಿಲ್ಲ. 'ನೋಬಲ್ ಪ್ರೈಜ'ನ್ನು ಕೊಡುವೆವೆಂದರೆ ಪ್ರತಿಯಾಗಿ 'ಗೀತಾಂಜಲಿ'ಯಂಥ ಕಾವ್ಯವು ಯಾವ ಮಾರ್ಕೆಟ್ಟಿನಲ್ಲಿಯೂ ದೊರೆಯಲಿಕ್ಕಿಲ್ಲ. ಇದೆಲ್ಲ ಸತ್ಯವೇ. ಆದರೂ, ಸುಸಂಸ್ಕೃತವಾದ ಗ್ರಂಥಗಳೂ ಪರಬ್ರಹ್ಮಾನಂದ ಸೋದರವಾದ ಆನಂದವನ್ನೀಯುವ ಕಾವ್ಯಗಳೂ ಜನಜೀವನೋಪಯೋಗಿಯಾದ ಸಾಹಿತ್ಯವೂ ಹುಟ್ಟಬೇಕಾದರೆ ಅಪ್ರತ್ಯಕ್ಷವಾಗಿಯೇ ಏಕಾಗಲೊಲ್ಲದು? ರಾಜರ, ಅಥವಾ ಧನಿಕರ ಆಶ್ರಯವು ಬೇಕೇ ಬೇಕಾಗುವುದು. "ಬೆಲೆಯಿಂದ ಕಾವ್ಯವು ಪುಟ್ಟಲಾರದು, ಭುವನದ ಭಾಗ್ಯದಿಂದ ಪುಟ್ಟುವುದು" ಎಂದು ಉನ್ನತ ಕಂಠದಿಂದ ಕೂಗಿಕೊಂಡ ನೇಮಿಚಂದ್ರನಿಗೆ ಗಂಡರಾದಿತ್ಯನ ಮಗನಾದ ಲಕ್ಷ್ಮಿದೇವನ ಆಶ್ರಯವಿಲ್ಲದಿದ್ದರೆ, 'ಲೀಲಾವತಿ'ಯಂಥ ಸುಂದರ ಕಾವ್ಯವು ಹುಟ್ಟುತ್ತಿದ್ದಿತೋ ಇಲ್ಲವೋ ಶಂಕೆಯೇ ಇರುವುದು. ಮತ್ತು ಲೀಲಾವತಿಯಲ್ಲಿ—

**ಅಂಬುಧಿ ವೇಷ್ಟಿತಾವನಿಗೆ ಲಕ್ಷ್ಮಣದೇವನೆ ರಾಜನೆಂದು ಲೋ।**
**ಕಾಂಬಿಕೆಯುಪ್ಪ ಪುಣ್ಯವತಿ ಚಂದಲದೇವಿಯೆ ದೇವಿಯೆಂದು ॥**

ಎಂಬ ಉದ್ಗಾರಗಳು ಕಾವ್ಯಕ್ಕೆ ಬೆಲೆಯನ್ನಪೇಕ್ಷಿಸದ ನೇಮಿಚಂದ್ರನ ಮುಖದಿಂದೇಕೆ ಹೊರಟುವು?

ಕಾವ್ಯಪ್ರಕಾಶಕಾರನಾದ ಭಟ್ಟ ಮಮ್ಮಟನು—"ಕಾವ್ಯಂ ಯಶಸೇರ್ಥಕೃತೇ ವ್ಯವಹಾರವಿದೇ ಶಿವೇತರ ಕ್ಷತಯೇ" ಎಂದು ಕಾವ್ಯದಿಂದುಂಟಾಗುವ ಫಲಗಳಲ್ಲಿ, ಅಥವಾ ಪ್ರಯೋಜನಗಳಲ್ಲಿ ಧನವನ್ನೂ ಸೇರಿಸಿರುವನು. ಅದು ಅದರ ಪ್ರಧಾನ ಫಲವಾಗಿರಲಿಕ್ಕಿಲ್ಲ, ಗೌಣ ಫಲವಾಗಿರಬಹುದು; ಒಪ್ಪಲೇಬೇಕು. ಆದರೆ ವಿಪುಲ ಸಾಹಿತ್ಯವು ಸಮಾಜದಲ್ಲಿ ಹುಟ್ಟಬೇಕಾದರೆ ಅದಕ್ಕೆ ರಾಜರ, ಇಲ್ಲವೆ ಶ್ರೀಮಂತ ಶ್ರೇಣಿಯವರ ಪ್ರೋತ್ಸಾಹವು ದೊರೆಯಲಿಕ್ಕೆ ಬೇಕು.

"ವಿನಾಶ್ರಯಂ ನ ಶೋಭಂತೇ ಪಂಡಿತಾ ವನಿತಾ ಲತಾಃ" ಎಂಬ ಮಾತಿನಲ್ಲಿ ಹುರುಳಿಲ್ಲದಿಲ್ಲ. ಆದುದರಿಂದಲೇ ಜಲ್ಹಣನು ರಾಜನಿಗೆ—"ಎಲೈ ರಾಜರೇ,

ಸುಕವಿ ಕಾವ್ಯಬಂಧದಲ್ಲಿ ಪ್ರೇಮಬಂಧವನ್ನಿಡಿರಿ; ಅವರೊಡನೆ ದ್ವೇಷವನ್ನು ಕಟ್ಟಿಕೊಳ್ಳಬೇಡಿರಿ. ಕವಿಗಳು ಸಂತುಷ್ಟರಾದರೆ ನಿಮ್ಮ ಧರ್ಮಕೀರ್ತಿ ದಿಗಂತದಲ್ಲಿ ಪಸರಿಸುವುದು; ಇಲ್ಲವಾದರೆ ನಿಮ್ಮ ಹೆಸರಿನಿಂದ ಶಂಖಧ್ವಾನವೆಲ್ಲೆಡೆಯಲ್ಲಿ.'' ರಾಮಚಂದ್ರನ ಕೀರ್ತಿ ಆಚಂದ್ರಾರ್ಕವಾಗಿ ನೆಲಸಲಿಕ್ಕೂ ತ್ರಿಭುವನ ಜಯಿಯಾದ ದಶಾಸ್ಯನು ಅಪಹಾಸ್ಯನಾಗಲಿಕ್ಕೂ ಕವಿಗಳೇ ಕಾರಣರೆಂದು ಸಾರಿ ದೂರಿ ಹೇಳುವನು. ಫರ್ದೂಸಿಯೊಡನೆ ವಚನ ಭಂಗವನ್ನು ಮಾಡಿದ ಘಜನೀ ಮಹಮೂದನ ಗತಿಯೂ ಹೀಗೇ ಆಯಿತು. ಮೊದಲು ಫರ್ದೂಸಿಯು ಮಹಮೂದನನ್ನು—

Praise ! praise ! to Mahmud, who of like renown,
In battle, or the banquet, fills the throne.
Lord of the realms of Chin and Hindustan
.. .. .. .. ..
Generous and brave, his equal is unknown
In deeds of princely worth, he stands alone.
The Infant in the cradle lisps his name,
The world exults in Mahmud's spotless fame.
In festive hours Heaven smiles upon his truth
In combat deadly as the dragon's tooth ;
Bounteous in all things, his exhaustless hand
Diffuses blessings through the grateful land
.. .. .. .. ..
.. .. .. .. ..
May Heaven with added glory crown his days,
Praise, praise to mighty Mahmud, everlasting praise.

ಸೌವರ್ಣ ನಾಣ್ಯಗಳ ಆಶೆಯಲ್ಲಿ ಬಂಧಿತನಾದ ಫರ್ದೂಸಿಯು ಮಹಮೂದನನ್ನು ಮನಬಂದಂತೆ ಸ್ತುತಿಸಿ ಈಯಾಶೆ ನಿರಾಶೆಯಾಗಲು ಅದೇ ಅರಸನನ್ನು—

"ಎಲೈ ಬಲುಮೆಯ ಭೂಪತಿಯೇ! ನಿನ್ನ ಇಹಲೋಕದ ವೈಭವವು ಕಡೆತನಕ ಬಾಳತಕ್ಕದ್ದಲ್ಲ. ಈ ಐಸಿರಿಯು ಕ್ಷಣಿಕವಾದುದು. ಗರ್ವದಿಂದ ಉಬ್ಬಬೇಡ. ನಾನು ನಿನಗೆ ಅಂಜಲಾರೆನು. ದೇವರ ಭೀತಿಯಿದೆ ನನಗೆ. ಅವನ ಸಿಂಹಾಸನದ ಎದುರಿಗಷ್ಟೇ ನಾನು ಬಗ್ಗಿ ನಿಲ್ಲುವೆನು. ಮಾನವೀಯ ಭಯಕ್ಕೆ ನಾನು ಬೆದರುವೆನೇ? ಎಲೈ ಮಹಮೂದನೇ, ನಿನ್ನ ಅಪ್ಪನು ಎಂದಾದರೂ ಸಿಂಹಾಸನವನ್ನು ಏರಿದ್ದನೇ? ನಿನ್ನ ಜನನಿಯು ಅರಸುಮನೆತನದ ಸುಗುಣಗಳನ್ನೇನು ಬಲ್ಲಳು? ನಿನ್ನ ಪೂರ್ವಜರೇನು ವೈಭವಶಾಲಿಯಾದ ವಂಶದಲ್ಲಿ ಹುಟ್ಟಿ ಬಾಳಿದವರಲ್ಲ. ನಿನ್ನ ತಂದೆಯು ಬಡತನದಲ್ಲಿ ಬಾಳುವಾಗ ಕವಿಯು ಸಂಪದದ ಸುಖವನ್ನನುಭವಿಸಿರುವನು. ನಿನ್ನ ದಿಟ್ಟತನದ ಜೀವನವು ನೀಚ ಕುಲದಿಂದ ಬೆಳೆದು ಬಂದಿರುವುದು. ನಿನ್ನ ತಂದೆಯು ಇಸ್ಪಹಾನದ ಕಮ್ಮಾರನು. ದುರ್ಗುಣದಿಂದ ಎಂದಾದರೂ

ಸುಗುಣದ ಉತ್ಪತ್ತಿ ಆಗಿರುವುದೇನೋ? ಬಲುಮೆಯ ಅರಸನಲ್ಲಿ ಎಂದಾದರೂ ಕರುಣೆಯ ಆಶೆ ಇರುವುದೇ? ರಾತ್ರಿಯಿಂದ ಕತ್ತಲೆಯನ್ನು ಬೇರ್ಪಡಿಸಲಾರ್ಪೆವೇ? ಕಹಿಯಾದ ಹಣ್ಣುಗಳನ್ನು ಪಡೆಯುವುದಕ್ಕಾಗಿ ಹುಟ್ಟಿದ ಗಿಡವನ್ನು ಸ್ವರ್ಗದ ಮಂಟಪದಲ್ಲಿ ತಂದು ನೆಟ್ಟರೂ ಮತ್ತಿಷ್ಟು ಕಹಿಯಾದ ಹಣ್ಣುಗಳನ್ನೇ ಕೊಡುವುದಲ್ಲವೇ? ದುಷ್ಟ ಹೃದಯಕ್ಕೆ ದುಷ್ಟ ಹಾದಿಯಿಂದಲೇ ಹೋಗುವುದು ಗೊತ್ತು. ಅದು ಪರಿಣತಿಯನ್ನು ಹೊಂದಿದರೂ ಮತ್ತಿಷ್ಟು ದೌಷ್ಟ್ಯದಲ್ಲಿಯೇ ಬಡವರನ್ನು ಬೀಸುವ ಕಲ್ಲಿನಂತೆ ಬೀಸಿ ಪೀಡಿಸುವ ಪರಿವೆ ಇಲ್ಲದ ನಿನ್ನಂಥ ಅರಸನ ಮೌರ್ಖ್ಯವು ಪರೀಕ್ಷಿಸಿದಷ್ಟೂ ಹೆಚ್ಚೇ ಆಗುವುದು....." ಹೀಗೆ ಕಟು ವಚನಗಳಿಂದ ಅನೇಕ ಬಗೆಯಾಗಿ ನಿಂದಿಸಿದನು. ಮಹಮೂದನ ಕಾರ್ಪಣ್ಯದಿಂದ ಫರ್ದೂಸಿಯ ಕಾವ್ಯ ಕಲೆಗೆ ಎಳ್ಳಷ್ಟೂ ಕೊರತೆ ಬರಲಿಲ್ಲ. ಕವಿಯು ತನ್ನ ಕಾವ್ಯ ಸಮಾಪ್ತಿಯಲ್ಲಿ, "ಈ ಮೂವತ್ತು ವರುಷದ ಪರಿಶ್ರಮವಿಂದು ಮುಗಿದುದು. ವೀರ ಕೃತ್ಯಗಳ ಕಾವ್ಯವಿದು ಜಗದಲ್ಲಿ ಶಾಶ್ವತವಾಗಿ ಬಾಳಲಿ; ಈ ಕಾವ್ಯವು ಎಷ್ಟೋ ಸಂಕಟಗಳಲ್ಲಿ, ತೊಂದರೆಗಳಲ್ಲಿ ಸಿಲುಕಿಕೊಂಡು ಬರೆಯಲ್ಪಟ್ಟಿದ್ದರೂ, ಪ್ರತಿಯೊಂದು ಪದ್ಯವೂ ಪ್ರತಿಯೊಬ್ಬನ ಹೃದಯವನ್ನೂ ಜಾಗೃತವಾಗಿ ಮಾಡುವುದು, ವೈಭವಶಾಲಿಯಾದ ಕಾರ್ಯಗಳನ್ನು ಮಾಡಲಿಕ್ಕೆ ಪ್ರೋತ್ಸಾಹಗೊಳಿಸುವುದು. ಇದರಲ್ಲಿಯ ವೀರ ರಸ ಪರಿಪ್ಲುತವಾದ ಕವನವನ್ನು ಓದಿ ಸಲಜ್ಜ ರಮಣಿಯು ಕೂಡ ಸ್ಫೂರ್ತಿಯುಕ್ತಯೋದ್ಧಾರಳಾಗುವಳು. ಮೂವತ್ತು ವರುಷ ಪರಿಶ್ರಮದಿಂದ ಅರಸನು ವಚನವನ್ನು ಕೊಟ್ಟಿರುವನೆಂದು ಬಗೆದು ಕಾವ್ಯವನ್ನು ಬರೆದೆನು. ಆದರೆ ಈಗ ವಂಚಿತನಾದೆನು, ತಿರಸ್ಕರಿಸಲ್ಪಟ್ಟೆನು. ಅದು ಈ ಮುದುಕ ಕವಿಯ ಶ್ರಮದ ಫಲವು; ಕೊಡುತ್ತೇನೆಂದು ಹೇಳಿದ ಶ್ರಮದ ಫಲವು ಅವನಿಗೆ ಸಿಕ್ಕಲಿಲ್ಲ." ಈ ಮೇರೆಗೆ ಹೇಳಿರುವನು. ಅವನ ಈ ಸಂತಪ್ತೋದ್ಗಾರಗಳಿಂದ ಫರ್ದೂಸಿಯ ಕಾವ್ಯ ಪಾಠಕರ ಅಂತರಂಗವೂ ಸಂತಪ್ತವಾಗುವುದು. ಆದರೆ ಮಾಡುವುದೇನು? ಮಹಮೂದನಿಗೆ ಸಕಾಲದಲ್ಲಿ ಸದ್ಬುದ್ಧಿ ಹುಟ್ಟಲಿಲ್ಲ. ಅರಸನ ಕಾರ್ಪಣ್ಯ ದೋಷದಿಂದ ಫರ್ದೂಸಿಯ ಕವಿತಾ ಪ್ರವಾಹವು ಬತ್ತದಿದ್ದರೂ ಅದಕ್ಕೆ ಸಕಾಲದಲ್ಲಿಯೇ ಉತ್ತೇಜನವು ದೊರೆತಿದ್ದರೆ ಇನ್ನು ಎಷ್ಟು ಕಲಕಲ ನಿನಾದವನ್ನೂ ಮಂಜುಳ ಧ್ವನಿಯನ್ನೂ ಮಾಡಿ ಗಂಭೀರವಾಗಿ ಹರಿಯುತ್ತಿದ್ದಿತೋ ಯಾರಿಗೆ ಗೊತ್ತು? ಮೂವತ್ತು ವರುಷದ ಪರಿಶ್ರಮವನ್ನು ಮಾಡಿದ ಶ್ರೇಷ್ಠ ಕವಿಯನ್ನು, ಅದೂ ಮುಪ್ಪಿನಲ್ಲಿ, ವಂಚಿಸುವುದು ಯುಕ್ತವೇ ಹೇಗೆ? ವಿಚಾರಿಸಿರಿ.

ಕವಿಗೆ ಪ್ರತಿಭೆಯು ದೇವದತ್ತವಾಗಿರಬಹುದು. ಆದರೆ ಅದು ಅಂಕುರಿತವೂ ಪಲ್ಲವಿತವೂ ಪುಷ್ಪಿತವೂ ಫಲಿತವೂ ಆಗಲಿಕ್ಕೆ ಅವನ ಸುತ್ತುಮುತ್ತಲೂ ಸಮಾಧಾನಕರವಾದ ವಾತಾವರಣವಿರಲಿಕ್ಕೆ ಬೇಕು; ಸಂಸಾರದ ತಾಪತ್ರಯಾದಿಗಳಿಂದ ಅವನ ಮನಸ್ಸು ಉದ್ವಿಗ್ನವಾಗಕೂಡದು. ಆಧುನಿಕ ಕವಿಗಳೇನು ಪೂರ್ವದ ಋಷಿಗಳಂತೆ ವಾತಾಂಬು ಪರ್ಣಾಶನರಲ್ಲ. ಕವಿಯ ಮನಸ್ಸು ಸುಸಂಪನ್ನವೂ

ಸುಸಂತುಷ್ಟವೂ ಇರುವಾಗಲೇ ಅವನಿಂದ ಸದ್ವಿಚಾರಗಳು ಹೊರಡುವುವು; ಅತುಲಾನಂದದಲ್ಲಿ ಮಗ್ನವಾದಾಗಲೇ ಅವನಿಂದ ಅಮಂದಾನಂದವನ್ನು ಬೀರುವ ಸತ್ಕಾವ್ಯವು ಹೊರಹೊಮ್ಮುವುದು. ಇನ್ನು ಕೆಲವು ಅಪವಾದಗಳನ್ನು ಬಿಟ್ಟರೆ—

Our sweetest thoughts are of our saddest hours.

ಸತ್ಕಾವ್ಯಗಳು ಹೊರಹೊರಡುವುದಕ್ಕೆ ಪ್ರೋತ್ಸಾಹವನ್ನು ಕೊಡುವ ಗುಣಗ್ರಾಹಿಯಾದ ಸಮಾಜವೂ, ಸಾಹಿತ್ಯವನ್ನು ಮನ್ನಿಸುವ ರಸಿಕರಾದ ಭೂಪತಿಗಳೂ, ಉತ್ತಮ ಸಾಹಿತ್ಯದ ನಿರ್ಮಾಣಕ್ಕೆ ಬಹು ಮಟ್ಟಿಗೆ ಕಾರಣರಾಗುತ್ತಾರೆಂದು ಹೇಳಲಿಕ್ಕೆ ಪ್ರತ್ಯವಾಯವಿಲ್ಲ. ಪ್ರತ್ಯಕ್ಷರಲಕ್ಷವನ್ನು (ಲಕ್ಷ ಶಬ್ದಕ್ಕೆ ಏನೇ ಅರ್ಥವಿರಲಿ) ಕೊಡುವ ಭೋಜರಾಜನನ್ನೂ, ಆಂಧ್ರ ಭೋಜನೆಂದು ಹೊಗಳಿಸಿಕೊಂಡ ವಿಜಯನಗರದ ಕೃಷ್ಣರಾಜರನ್ನೂ ಇದಕ್ಕೆ ಉದಾಹರಣೆ ಕೊಡಬಹುದು.

'ಕರ್ಣಾಟಕದಲ್ಲಿ ಪೂರ್ವದಲ್ಲಿ ಇಂತಹ ಕಾವ್ಯ ನಿರ್ಮಾಣಕ್ಕೆ ಪ್ರೋತ್ಸಾಹದಾಯಕವಾದ ವಾತಾವರಣವಿದ್ದಿತು. ಗುಣಗ್ರಾಹಿಗಳಾದ ರಾಜರಿದ್ದರು. ವಿದ್ಯಾ ಪಕ್ಷಪಾತಿಗಳಾದ ಮಾಂಡಳಿಕ ಸಾಮಂತ ಸಚಿವರಿದ್ದರು. ಅವರ ಆಶ್ರಯದಿಂದ ವಾಙ್ಮಯವು ಬಳ್ಳಿಯ ಉನ್ನತಾವಸ್ಥೆಯನ್ನು ಪಡೆದಿದ್ದಿತು' ಎಂಬುದು ಕರ್ಣಾಟಕ ಇತಿಹಾಸವನ್ನು ಓದಿದವರು ಅರಿಯದ ವಿಷಯವಲ್ಲ.

ಆದಿ ಕವಿಯಾದ ಪಂಪನನ್ನೇ ತೆಗೆದುಕೊಳ್ಳಿರಿ. ಅವನಿಗೆ ಉದಾರ ಹೃದಯನಾದ ಚಾಲುಕ್ಯರ ಅರಿಕೇಸರಿಯ ಆಶ್ರಯವಿಲ್ಲದಿದ್ದರೆ, ಅವನು 'ಸಂಸಾರ ಸಾರೋದಯ'ನೂ, 'ಸುಕವಿ ಜನ ಮನೋ ಮಾ ನ ಸೋ ತ್ತಂ ಸ ಹಂಸ'ನೂ 'ಧಾತ್ರೀ ವಳಯ ನಿಳಿಂಪನೂ' ಆಗುತ್ತಿದ್ದನೋ ಇಲ್ಲವೋ ಸಂಶಯವೇ ಇರುವುದು. ಅರಿಗನ ಆಶ್ರಯವಿಲ್ಲದಿದ್ದರೆ ಈ ದುಂದುಭಿ ಸಂವತ್ಸರದಲ್ಲಿ ಹುಟ್ಟಿದ ಕವಿಯೂ ದುಂದುಭಿಯಂತೆ ಗಭೀರ ನಾದವನ್ನು ಮಾಡದೆ, ತಮ್ಮಟೆಯಂತೆ ಕೊರಲಿನಲ್ಲಿಯೇ ಕುಗ್ಗಿದ ಧ್ವನಿಯನ್ನು ಮಾಡಬಹುದಾಗಿದ್ದಿತು. ಪಂಪನಿಗೆ ರಾಜಾಶ್ರಯವಿಲ್ಲದಿದ್ದರೆ, ಅರಿಗನ ಮೈಯುಬ್ಬುವಂತೆ ಅವನನ್ನೇಕೆ ಅರ್ಜುನನೊಡನೆ ಹೋಲಿಸಿ ಬಣ್ಣಿಸುತ್ತಿದ್ದನು? ಎಲ್ಲಿಯ ಅರ್ಜುನ? ಎಲ್ಲಿಯ ಅರಿಗ? ಅರಿಗನಿಂದ ಮುಖಲೇಪನವನ್ನು ಹೊಂದಿದ ಪಂಪನ ಕಾವ್ಯ ಮೃದಂಗದ ಮಧುರ ಧ್ವನಿಯಲ್ಲಿ ಅನನುರೂಪರಾದ ಅರಿಗಾರ್ಜುನರಲ್ಲಿ—ವಿಷಮಾಲಂಕಾರದಲ್ಲಿ—ಸಮಾಲಂಕಾರವು ಹುಟ್ಟಿರುವುದು—

ಶ್ರೀಯುವನರಾತಿ ಬಳಾಸ್ಯಕ್ |
ತೋಯಧಿಯೊಳ್ ಪಡೆದ ವೀರಸುರದರಿಗಳನಾ ||
ಶ್ರೀಯ ಪದಸ್ಫುರಿತ ನಖ |
ಚ್ಛಾಯೆಯೊಳಂ ನಿರಿಸಿ ನಿಂದ ಗಂಡಂ ಹರಿಗಂ ||

ಎಂದು ಪಂಪನು ಪಾಡಬೇಕಾಯಿತು.

ಕಾಲಿದಾಸನ ಕಾವ್ಯವನ್ನನುಕರಿಸಿ ಭವಭೂತಿಯು ಬರೆದಂತೆ, ಪಂಪನ ಕಾವ್ಯವನ್ನನುಕರಿಸಿ ರನ್ನನು ಬರೆದನು. ಪಂಪನಿಗೆ ಅರಿಗನು ಒದಗಿಬಂದಂತೆ ರನ್ನನಿಗೆ ತೈಲಪನು ಒದಗಿಬಂದನು. ರನ್ನನ ತೈಲಬುದ್ಧಿಯು ತೈಲಪನ ಆಶ್ರಯದಿಂದ ಮತ್ತಿಷ್ಟು ವಿಸ್ತಾರವನ್ನು ಹೊಂದಿತು. ತೈಲಪನ ಆಸ್ಥಾನದಲ್ಲಿ ರನ್ನನಿಗೆ ಅತುಲವಾದ ಮನ್ನಣೆ ದೊರೆಯದಿದ್ದರೆ, ರನ್ನನು—ಬಳೆಗಾರ ಕುಲದಲ್ಲಿ ಹುಟ್ಟಿದ ಈ ರನ್ನನು—ತನ್ನ ಮನೆತನದ ಬಳೆಗಳಲ್ಲಿಯ ಕಾಜಿನ ಮೂಲ್ಯವನ್ನೇ ಪಡೆಯಬಹುದಾಗಿದ್ದಿತು. ತೈಲಪನಂಥ ಕೃತಿರತ್ನ ಪರೀಕ್ಷಕರಿಲ್ಲದಿದ್ದರೆ ಆ ಮುದುವೊಳಲ್ಲಿಯೇ ರನ್ನನು ಮುದುಡಿಕೊಂಡು ಕೂಡಬಹುದಾಗಿದ್ದಿತು. ಈ ಉದ್ದಾಮಕವಿಯು ತನ್ನ ಕಾವ್ಯ ರತ್ನ ಪರೀಕ್ಷೆಗೆ, 'ಫಣಿ ಪತಿಯ ಫಣಾ ರತ್ನ ಪರೀಕ್ಷೆಗೆ ಯಾರಿಗಾದರೂ ಎದೆಯುಂಟೇ' ಎಂದು ಕೇಳುವನು. ತೈಲಪನಂಥ, ಅಥವಾ ಅವನ ಮಗನಾದ ಇರಿವಬೆಡಂಗ ಸತ್ಯಾಶ್ರಯನಂಥ* ಅರಸನು ಈ ರತ್ನಕ್ಕೆ ಆಶ್ರಯವನ್ನು ಕೊಡದಿದ್ದರೆ, "ಅರಣ್ಯದಲ್ಲಿ ಸುಗಂಧವನ್ನು ಬೀರುವ ಕುಸುಮಗಳೆಷ್ಟೋ ಇರುವುವು; ಅತಲಸ್ಪರ್ಶಿಯಾದ ಸಾಗರದಲ್ಲಿ ರತ್ನಗಳೆಷ್ಟೋ ಇರುವುವು. ಮೂಸಿಸಲಿಲ್ಲೇ ರಸಿಕರು ಜಗದಲ್ಲಿ?" ಎಂದು ಗ್ರೇ ಕವಿಯಂತೆ ಅಳುವ ಪ್ರಸಂಗವು ಬರುತ್ತಿದ್ದಿಲ್ಲವೆಂದು ಯಾರಾದರೂ ಎದೆ ತಟ್ಟಿ ಹೇಳಬಹುದೋ?

ಕನಕಾಭಿಷೇಕ, ತುಲಾಭಾರ ಮೊದಲಾದ ಸಂದರ್ಭಗಳಲ್ಲಿ ರಾಜರು ಕವಿಗಳನ್ನೂ ವಿದ್ವಾಂಸರನ್ನೂ ಸಂತುಷ್ಟಿಪಡಿಸುತ್ತಿದ್ದರು. ಕರ್ಣಾಟಕದಲ್ಲಿ ಈ ಪದ್ಧತಿಯು ಪ್ರಾಚೀನ ಕಾಲದಿಂದ ಬಂದು ವಿಜಯನಗರದವರ ಕಾಲದ ವರೆಗೂ ಇದ್ದಿತು. ಕೃಷಿಕ್ಷೇತ್ರಾದಿ ದಾನಾದಿಗಳ ನೆವದಿಂದ ಅರಸರು ವಿದ್ಯೆಯನ್ನೂ ಕಲೆಗಳನ್ನೂ ಸಂರಕ್ಷಿಸಿಕೊಳ್ಳುತ್ತಿದ್ದರು. ಇದರಿಂದ—"ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ"—ಪೋಷಕರೂ ಪೋಷಿತರೂ ಉಭಯರೂ ಶ್ರೇಯಸ್ಸನ್ನು ಪಡೆಯುತ್ತಿದ್ದರು.

ಕರ್ಣಾಟಕದಲ್ಲಿ ಆಳಿಹೋದ ಅರಸರ ಕಾಲದಲ್ಲಿ ರಾಜಾಶ್ರಯದಿಂದ ಸಾಹಿತ್ಯವು ಎಷ್ಟು ಉಚ್ಚ್ರಾಯ ಸ್ಥಿತಿಯಲ್ಲಿ ಇದ್ದಿತೆಂಬುದನ್ನು ವಿಹಂಗಮ ದೃಷ್ಟಿಯಿಂದ ನೋಡುವ. ಗಂಗಭೂಪರಲ್ಲಿ ಇಮ್ಮಡಿ ಮಾಧವನೆಂಬವನು ಕವಿ ಜನ ವಿದ್ವಜ್ಜನರೆಂಬ ಹೊನ್ನನ್ನು ಪರೀಕ್ಷಿಸುವ ನಿಕಷೋಪಲದಂತಿದ್ದನು. ಅವನು ಆಗಣ ರಾಜ್ಯತಂತ್ರ ವಿಶಾರದರಲ್ಲೆಲ್ಲ ಕುಶಲನಾಗಿದ್ದನು. ಸ್ವಯಂ ವಿದ್ಯೆಯನ್ನು ಬಲ್ಲವನಿಂದಲೇ ವಿದ್ವಾಂಸರಿಗೆ ಉತ್ತೇಜನವು ಸಿಕ್ಕುತ್ತದೆ. "ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವ ವೇದನಾಂ" ಎಂಬಂತೆ ಬಂಜೆಯಂತಿರುವ ಅರಸರೇನು ವಿದ್ಯಾವಿಭೂಷಿತರನ್ನು ಪೋಷಿಸಬಲ್ಲರು? ಅವಿನೀತನು ವಿದ್ವಾಂಸರಲ್ಲಿ

* ತೈಲಪನ ಆಸ್ಥಾನದಲ್ಲಿ ರನ್ನನಿಗಿದ್ದ ಮರ್ಯಾದೆಯು 'ಅಜಿತನಾಥ ಪುರಾಣ'ವನ್ನೂ 'ಗದಾಯುದ್ಧ'ವನ್ನೂ ನೋಡಿದರೆ ತಿಳಿಯುವುದು: ಪಾಲಕಿ, ಆನೆ, ಚಾಮರ, ಚಿನ್ನದ ಕೋಲು, ಛತ್ತ್ರದ ಗಾವೆ—ಇವೆಲ್ಲವೂ ರನ್ನನಿಗೆ ಇತ್ತ ವಸ್ತುಗಳು.

ಅಗ್ರಗಣ್ಯನಾಗುವಷ್ಟು ಯೋಗ್ಯನಾಗಿದ್ದನು. ದುರ್ವಿನೀತನಂತೂ ಬೃಹತ್ಕಥೆಯ ಆದ್ಯ ಭಾಷಾಂತರಕಾರನು. ಗುಣವರ್ಮನೆಂಬ ಕವಿಯನ್ನು ಪೋಷಿಸಿದವನು ಗಂಗರ ಎರೆಯಪ್ಪನೇ ಅಲ್ಲವೇ? ಶಿವಮಾರನು ಭಾಷಾ ತ್ರಯದಲ್ಲಿ ಪಂಡಿತ ನಾಗಿದ್ದನು. ಮಾರಸಿಂಹನು ತರ್ಕ ತತ್ತ್ವ ಸಾಹಿತ್ಯ ಶಾಸ್ತ್ರಗಳಲ್ಲಿ ವಿದ್ವಾಂಸ ನಾಗಿದ್ದನು. ಆದುದರಿಂದಲೇ ಗಂಗರ ಕಾಲದಲ್ಲಿ ವಿದ್ಯೆಯಿಂದ ಅವಂಧ್ಯ ಫಲ ವುಂಟಾಯಿತು.

ಬಾದಾಮಿಯ ಚಾಲುಕ್ಯರ ಕಾಲದಲ್ಲಿಯೂ ವಿದ್ಯೆಗೆ ಒಳಿತಾಗಿ ಉತ್ತೇಜನವು ದೊರೆಯಿತು. ಒಂದನೆಯ ಪುಲಿಕೇಶಿಯನ್ನು ಸ್ತುತಿಸುವ ಪದ್ಯವೊಂದು ನಾಗವರ್ಮನ 'ಕಾವ್ಯಾವಲೋಕ'ನದಲ್ಲಿ ಉದಾಹೃತವಾಗಿರುವುದು. ಅದನ್ನು ರಚಿಸಿದ ಕವಿಯನ್ನು ಪುಲಿಕೇಶಿಯು ಪೋಷಿಸಿರಬಾರದೇಕೆ? ಎರಡನೆಯ ಪುಲಿ ಕೇಶಿಯ ಸದಾಶ್ರಯವನ್ನು ರವಿಕೀರ್ತಿಯು ಪಡೆದಿದ್ದಾನೆಂಬುದನ್ನು ಐಹೊಳೆಯ ಶಿಲಾ ಲೇಖವೇ ಸಾರಿಹೇಳುತ್ತದೆ.—

ಸತ್ಯಾಶ್ರಯಸ್ಯ ಪರಮಾಪ್ತವತಾ ಪ್ರಸಾದಂ।
ಶೈಲಂ ಜಿನೇಂದ್ರ ಭವನಂ ಭವನಂ ಮಹಿಮ್ನಾಂ ||
ನಿರ್ಮಾಪಿತಂ ಮತಿಮತಾ ರವಿಕೀರ್ತಿನೇದಂ।
........................ ||

ಉತ್ತರದ ಹರ್ಷವರ್ಧನನ ಆಶ್ರಯದಲ್ಲಿ ಬೆಳೆದ ವಶ್ಯರಾಣೀ ಕವಿಯ ಚಕ್ರವರ್ತಿಯಾದ ಭಟ್ಟಬಾಣನಂತೆ ರವಿಕೀರ್ತಿಯ ಬೇರೆ ಗ್ರಂಥಗಳಾವುವೂ ನಮಗೆ ಸಿಕ್ಕಿಲ್ಲವಾದರೂ, ಆರ್ಯಾಪುರದ ಮೇಗುಟಿಯ ಕಲ್ಬರೆಹದ ಮೇಲಿಂ ದಲೇ ಅವನು ಉತ್ಕೃಷ್ಟ ಕವಿಯಾಗಿದ್ದನೆಂಬುದನ್ನು ನಾವು ತಿಳಿಯಬಹುದಾಗಿದೆ. ಬಾಣಭಟ್ಟನಿಗಿಂತ ಅವನ ಯೋಗ್ಯತೆ ಕಡಿಮೆ ಎಂದು ಹೇಳಲು ಬರುವಂತಿಲ್ಲ. ಅವನು ಕವಿತಾಶ್ರಿತ ಕಾಲಿದಾಸ ಭಾರವಿ ಕೀರ್ತಿಯಾದ ರವಿಕೀರ್ತಿಯೇ ಸರಿ.

ರಾಷ್ಟ್ರಕೂಟರ ಕಾಲದಲ್ಲಿಯೂ ಕರ್ಣಾಟಕ ವಿದ್ವಾಂಸರ ಕೀರ್ತಿಯು ದಿಗಂತದಲ್ಲಿ ಪಸರಿಸಿತು. ಶುಭತುಂಗನ ಕಾಲದಲ್ಲಿ ಅಕಲಂಕನು ಜೈನ ವಾದಿಗಳಲ್ಲಿ ಅಗ್ರೇಸರನಾಗಿದ್ದನು. ಸಾಹಸತುಂಗನಿಗೆ "ಬೆಳ್ಗೊಡೆಯನ್ನು ಹಿಡಿವ ಅರಸು ಗಳೆಷ್ಟೋ ಇರುವರು. ನೀನೊಬ್ಬನೇ ನಿಜವಾದ ಅರಸು; ನಾನೊಬ್ಬನೇ ನಿಜವಾದ ಪಂಡಿತನು" ಎಂದುಸುರಿದ ಜೈನ ಪಂಡಿತನ ಕಂಠವೆಷ್ಟು ಸಾಹಸ ತುಂಗನಿಂದ ಪುಷ್ಟವಾಗಿರಬೇಕು, ಪಾಠಕರೇ ತರ್ಕಿಸಲಿ. ರಾಷ್ಟ್ರಕೂಟ ಕೃಷ್ಣ ರಾಜನಿಂದ ಪೋಷಿತನಾದ ಹಲಾಯುಧನು ಕವಿ ರಹಸ್ಯದಲ್ಲಿ ಕೃಷ್ಣರಾಜನ ಬಗ್ಗೆ ಎಂತಹ ಉದ್ಗಾರಗಳನ್ನು ತೆಗೆದಿರುವನು, ನೋಡಿರಿ:—

"ಅಗಸ್ತ್ಯ ಮುನಿಯ ತಣ್ಬೆಸಿಲಿಂದ ಪವಿತ್ರವಾದ ದಕ್ಷಿಣಾಪಥದಲ್ಲಿ ಕೃಷ್ಣರಾಜ ನೆಂದು ಖ್ಯಾತನಾದ ಸಾಮ್ರಾಜ್ಯ ದೀಕ್ಷಿತನಾದ ರಾಜನಿರುವನು. ಈ ರಾಷ್ಟ್ರ ಕೂಟೋದ್ಭವನಾದ ಅರಸನನ್ನು ಬಣ್ಣಿಸುವ ಅಳವು ಯಾರಿಗಿರುತ್ತದೆ? ಅವನ ಅರಿಗಳ

ಭೋಗತೃಷ್ಣೆ ಅವರ ಮನದಲ್ಲಿಯೇ ಜೀರ್ಣವಾಗುತ್ತದೆ. ಅವರ ಶರೀರಗಳು ಅರಣ್ಯಗಳಲ್ಲಿಯೇ ಜೀರ್ಣವಾಗುವುವು. ಅವನು ರಣದಲ್ಲಿ ಶಸ್ತ್ರಸಂಪಾತವನ್ನೂ ಶ್ರಮವನ್ನೂ ಸಹಿಸುವನು. ಇಂದ್ರನನ್ನು ಕೂಡ ಗೆಲ್ಲಲು ಅವನ ಮನವು ತವಕಿಸುವುದು. ಋಷಿಗಳ ಆಶ್ರಮದಲ್ಲಿ ಕೂಡ ಅವನು ಪೂಜೆಯನ್ನು ಹೊಂದುವನು. ಮಾಂಡಲಿಕರ ಅಲ್ಪಾಪರಾಧವನ್ನೂ ಅವನು ಕ್ಷಮಿಸುವುದಿಲ್ಲ. ಬ್ರಾಹ್ಮಣರ ನೂರು ಅಪರಾಧಗಳನ್ನು ಕೂಡ ಕ್ಷಮಿಸುವನು. ಅವನ ದೇಶದಲ್ಲಿ ಗರುಡನ ಅನುಜ್ಞೆಯಿಂದ ಹಾವುಗಳು ಜನರನ್ನು ಕಚ್ಚುವುದಿಲ್ಲ; ತಪ್ಪಿ ಕಚ್ಚಿದರೂ ವಿಷವು ಏರುತ್ತಿರಲಿಲ್ಲ. ಕೀಳನಾದರೂ ಉಪಕಾರಿಯಾಗಿದ್ದರೆ ಅವನನ್ನು ಆ ಅರಸನು ಬೆದರಿಸುತ್ತಿರಲಿಲ್ಲ. ತನ್ನ ಸುತ್ತಲೂ ಇದ್ದರೂ ದುಷ್ಟರನ್ನು ಬೆದರಿಸುವನು ಶ್ರೀ ಇದ್ದವರೆಲ್ಲ ಇಂದ್ರಿಯ ಸುಖವನ್ನು ಬಯಸುವರು. ಯೋಗಿಯಂತೆ ಇದ್ದ ಈ ಅರಸನು ಅದರಿಂದ ಪರಾಙ್ಮುಖನಾಗಿರುವನು. ಅವನ ರಾಷ್ಟ್ರದಲ್ಲಿದ್ದ ಬಣಜಿಗರು ಕೋಟಿಗಳಿಂದ ವ್ಯಾಪಾರ ಮಾಡುವರು. ಅವನ ಐಸಿರಿಯನ್ನು ಯಕ್ಷರು ಕೂಡ ಹೊಗಳುತ್ತಿದ್ದರು. ಶತ್ರುಗಳ ಲಕ್ಷ್ಮಿಯನ್ನು ಅಂಬುಗಳ ವೃಷ್ಟಿಯಿಂದ ನಾಶಪಡಿಸುವನು. ಸಕಲವಾದ ಅರ್ಥಸಂಶಯದಲ್ಲಿಯೂ ಅವನ ಮನಸ್ಸು ವಿಚಲಿತವಾಗುತ್ತಿರಲಿಲ್ಲ. ಧರ್ಮವೊಂದೇ ಅವನ ಗಳಿಕೆಯ ಗುರಿಯು. ಅರ್ಥವನ್ನು ಧರ್ಮಕ್ಕಾಗಿ ಗಳಿಸುವನು. ಧರ್ಮದಿಂದಲೇ ಅವನು ಶಾಶ್ವತ ಲೋಕಗಳನ್ನು ಗಳಿಸುವನು. ದುರುಕ್ತಿಗಳಿಂದ ಅವನು ಯಾವನನ್ನೂ ನೋಯಿಸುತ್ತಿರಲಿಲ್ಲ. ದೀನರ ದುರುಕ್ತಿಗಳಿಂದ ಅವನ ಮನಸ್ಸು ಖಿನ್ನವಾಗುತ್ತಿರಲಿಲ್ಲ. ಯಜ್ಞಗಳಲ್ಲಿ ಸೋಮ(ಚಂದ್ರ)ವಂಶಕ್ಕೆ ಅಲಂಕಾರಸ್ವರೂಪದಂತಿದ್ದ ಈ ಅರಸನು ಸೋಮರಸವನ್ನು ಹಿಂಡುವನು. ಸಂಗ್ರಾಮದಲ್ಲಿ ತಾನೇ ಸಾರಥಿಯಾಗುವನು.''

ಹಲಾಯುಧನ ವಾಣಿಯಲ್ಲಿ ಕೆಲವಟ್ಟಿಗೆ ಅತಿಶಯೋಕ್ತಿ ಇರಬಹುದು. ಆದರೂ, ರಾಷ್ಟ್ರಕೂಟರ ಕಾಲದಲ್ಲಿಯ ಕರ್ಣಾಟಕದಲ್ಲಿಯ ರಮಣೀಯ ಚಿತ್ರವನ್ನು ಕವಿಯು ನಮ್ಮ ಮುಂದೆ ಇರಿಸಿರುವನೆಂಬುದರಲ್ಲಿ ತಿಲಪ್ರಾಯವೂ ಸಂಶಯವಿರುವುದಿಲ್ಲ.

ನೃಪತುಂಗನ ಆಸ್ಥಾನವಂತೂ ಪಂಡಿತಪಕ್ಕಿಗಳು ಹಾಡಿದ ಚೂತಾರಾಮವು. ಗುಣಭದ್ರ ವಿಜಯಾದಿಗಳಿಂದ ಅವನ ಕೀರ್ತಿ ಸೌರಭವು ದ್ವಿಗುಣಿತವಾದುದು. ರಾಷ್ಟ್ರಕೂಟರ ಮೂರನೆಯ ಕೃಷ್ಣನನ್ನು ಆಶ್ರಯಿಸಿದ ಹೊನ್ನನು ಸರ್ವದೇವ ಕವೀಂದ್ರನೂ ಸೌಜನ್ಯಕಂದಾಂಕುರನೂ ಎಂದು ಹೊಗಳಿಸಿಕೊಂಡನು. ಇಲ್ಲವಾದರೆ, ಪುಂಗನೂರಿ(ಹೊಸಗನಹಳ್ಳಿ)ನಲ್ಲಿ ಕುಳಿತುಕೊಳ್ಳಬಹುದಾಗಿದ್ದಿತು. ಇದಲ್ಲದೆ, ಇವರ ಕಾಲದಲ್ಲಿ ಹುಟ್ಟಿದ ಅನೇಕ ತಾಮ್ರಶಾಸನಗಳೂ ಶಿಲಾಲೇಖಗಳೂ ಇವರುಗಳನ್ನು ಕವಿಮುಖದಿಂದ ಕೊಂಡಾಡುತ್ತಿರುವುದು ರಾಜಾಶ್ರಯದ ಫಲವೇ ಅಲ್ಲವೆ? ನೃಪತುಂಗನ ಕಾಲದಲ್ಲಿದ್ದ ವೈದರ್ಭೀ ವಾಣಿಯಲ್ಲಿ ಪ್ರಸಿದ್ಧಳಾದ ವಿಜಯಾಂಕೆಯು, ಎಲ್ಲರ ತಂತಿಯ ಮೇಲೆ ಆಡಗಾಲನ್ನಿಡುತ್ತೇನೆಂದು

ಹೇಳಿಗ ಈ ಉದ್ದಾಮ ಕವಯಿತ್ರಿಯೂ ಮಾಂಡಲಿಕ ಕರ್ಣಾಟ ರಾಜಪ್ರಿಯೆಯೇ ಆಗಿದ್ದಳು.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಗದಾಯುದ್ಧವಲ್ಲದೆ ವಿಕ್ರಮಾಂಕದೇವ ಚರಿತ, ಮಿತಾಕ್ಷರಾ, ಗೋವೈದ್ಯ ಮೊದಲಾದ ಗ್ರಂಥಗಳು ರಾಜಾಶ್ರಯ ದಿಂದಲೇ ಬೆಳಕಿಗೆ ಬರಲಿಲ್ಲವೆ? ಗುಣಗ್ರಾಹಿಯಾದ ವಿಕ್ರಮನನ್ನು ಆಶ್ರಯಿಸುವು ದಕ್ಕಾಗಿ ಅಂತಹ ನಿಸರ್ಗ ಮನೋಹರವಾದ ಕಾಶ್ಮೀರವನ್ನು ಬಿಟ್ಟು ಕರ್ಣಾಟಕದ ಕಲ್ಯಾಣಕ್ಕೆ ಬಂದು ಬಿಲ್ಹಣನು ತನ್ನ ಕಲ್ಯಾಣವನ್ನುಂಟುಮಾಡಿಕೊಳ್ಳಲಿಲ್ಲವೆ? ಆರನೆಯ ವಿಕ್ರಮಾದಿತ್ಯನಲ್ಲಿ ಬಿಲ್ಹಣನಿಗೆ ಎಷ್ಟು ಮರ್ಯಾದೆಯಿದ್ದಿತೆಂಬುದು ಕಲ್ಹಣನ ರಾಜತರಂಗಿಣಿಯ ಪದ್ಯಗಳನ್ನು ನೋಡಿದರೆ ಗೊತ್ತಾಗುವುದು:—

**ಕಾಶ್ಮೀರೇಭ್ಯೋ ವಿನಿರ್ಯಾತಂ ರಾಜ್ಯೇ ಕಲಶ ಭೂಪತೇಃ|**
**ವಿದ್ಯಾಪತಿಂ ಯ ಕರ್ಣಾಟಶ್ಚಕ್ರೇ ಪೆರ್ಮಾಡಿ ಭೂಪತಿಃ ||**
**ಪ್ರಸರ್ಪತಃ ಕರಟಿಭಿಃ ಕರ್ಣಾಟ ಕಟಕಾಂತರೇ|**
**ರಾಜ್ಞೋಗ್ರೇ ದದೃಶೇ ತುಂಗಂ ಯಸ್ಯೈವಾತಪ ವಾರಣಂ ||**

ಸೇನೆಯೊಡನೆ ರಾಜನು ಹೊರಟಾಗ ರಾಜನ ಮುಂಭಾಗದಲ್ಲಿ ಬಿಲ್ಹಣನ ಬೆಳ್ಗೊಡೆಯೇ ಕಾಣುತ್ತಿದ್ದಿತಂತೆ. ಇದಕ್ಕೆ ನಿಜವಾದ ರಾಜಾಶ್ರಯ, ನಿಜವಾದ ವಿದ್ಯಾಭಿಮಾನವೆನ್ನಬೇಕು. ಇದೇ ವಿಕ್ರಮನನ್ನು ಮಿತಾಕ್ಷರ ಕರ್ತನಾದ ವಿಜ್ಞಾನೇಶ್ವರನು, "ಕಲ್ಯಾಣದಂಥ ಪುರವು ಹಿಂದಾಗಲಿಲ್ಲ, ಈಗಿರುವುದಿಲ್ಲ, ಮುಂದಾಗುವುದಿಲ್ಲ. ವಿಕ್ರಮಾರ್ಕನಂಥ ರಾಜನನ್ನು ಕಾಣಲಿಲ್ಲ, ಕೇಳಲಿಲ್ಲ; ಸೂರ್ಯ ಚಂದ್ರರಿರುವ ವರೆಗೆ ವಿಕ್ರಮಾರ್ಕನು ಪೃಥ್ವಿಯನ್ನು ಪಾಲಿಸಲಿ" ಎಂದು ಅದ್ಭುತ ಸ್ತುತಿಯನ್ನು ಮಾಡಿದ, ಆಸೇತು ಹಿಮಾಚಲವೂ ಈಗಲೂ ಮಾನ್ಯ ವಾದ ಮಿತಾಕ್ಷರಾ ಗ್ರಂಥವನ್ನು ಬರೆಯುವಂತೆ ವಿಜ್ಞಾನನಾಥನ ಬುದ್ಧಿ ಲತೆಗೆ ನೀರನ್ನೆರಚಿದ ವಿಕ್ರಮಾದಿತ್ಯನ ಔದಾರ್ಯವು ಚಿರಕಾಲ ಸ್ಮರಿಸತಕ್ಕುದಾಗಿದೆ.

ಸಂವದತ್ತಿಯಲ್ಲಿ, ಇದೇ ಬೆಳಗಾಂವಿಯಲ್ಲಿ ಕನ್ನಡ ಸಂಸ್ಕೃತಿಗೆ ಪೋಷಕ ವಾದ ಗ್ರಂಥ ಸಂಪತ್ತಿಯನ್ನು ನಿರ್ಮಿಸಿದ ಜೈನ ವಿದ್ವಾಂಸರನ್ನು ಪೋಷಿಸಿದ ರಟ್ಟರನ್ನೀಗ ನೆನಪಿಗೆ ತಂದುಕೊಡಬೇಕಾಗಿದೆ. ವೇಣುಗ್ರಾಮ(ಬೆಳಗಾಂವ)ದಲ್ಲಿ ಕಾರ್ತವೀರ್ಯ, ಮಲ್ಲಿಕಾರ್ಜುನರೆಂಬ ಸಹೋದರರು ಆಳುವಾಗ (೧೨೦೫-೨೦) ಪಾರ್ಶ್ವಪುರಾಣವನ್ನು ಬರೆದ ಪಾರ್ಶ್ವಪಂಡಿತನು ಒಂದು ರಮಣೀಯವಾದ ಕನ್ನಡ ಶಾಸನವನ್ನು ಬರೆದಿರುವನು. ಇದೇ ಕಾರ್ತವೀರ್ಯನಿಗೆ ಗುರುವಾಗಿದ್ದ, ಇವನ ಮಗನಾದ ಲಕ್ಷ್ಮೀದೇವನಿಗೆ ಶಸ್ತ್ರಾಸ್ತ್ರ ದೀಕ್ಷಾಗುರುವಾಗಿದ್ದ ರಟ್ಟರಾಜ್ಯ ಪ್ರತಿಷ್ಠಾಪನಾಚಾರ್ಯನೆಂದೂ, ಅಖಿಳ ತರ್ಕ ತಂತ್ರ ಮಂತ್ರ ವ್ಯಾಕರಣ ಭರತ ಕಾವ್ಯ ನಾಟಕ ಪ್ರವೀಣನೆಂದೂ, ಹೊಗಳಿಸಿಕೊಂಡ ಮುನಿಚಂದ್ರನನ್ನು ಪರ ಭಾಷೆಯ ವರ್ಚಸ್ಸಿನಲ್ಲಿ ಸಿಲುಕಿಕೊಂಡ ವೇಣುಗ್ರಾಮದ ಕನ್ನಡಿಗರೀಗ ಸ್ಮರಿಸಿಕೊಳ್ಳಬೇಕಾಗಿದೆ. ಇವು ಮುನಿಚಂದ್ರನನ್ನು ಸ್ತುತಿಸುವ ಪದ್ಯಗಳು:—

ಕುಮುದಾನಂದತೆಯಿಂದಮೊಂದಿ ಮುನಿಚಂದ್ರಂ ಶತ್ರು ಭೂಭೃನ್ಮುಖಾ।
ಬ್ಜಮನಿರ್ಪೀಡಿಪ ತೇಜದಿಂದೆ ಮುನಿಚಂದ್ರಂ ರಟ್ಟರಾಜ್ಯಾಬ್ಧಿಯಂ ॥
ಕ್ರಮದಿಂ ದಿಕ್ತಟವಂ ಪಳಂಚಲೆವಿನಂ ಪೆರ್ಚಿಪ್ಪ ತನ್ನೊಂದು ವಿ।
ಕ್ರಮದಿಂದಂ ಮುನಿಚಂದ್ರನಿಂತು ಮುನಿಚಂದ್ರಂ ಚಂದ್ರನಾಮಾನ್ವಿತಂ ॥
ಗುರುವಾದಂ ಕಾರ್ತವೀರ್ಯ ಕ್ಷಿತಿಪತಿಗೆನಸುಂ ಮಂತ್ರದಿಂ ತಾನೆ ಶಿಕ್ಷಾ।
ಗುರುವಾದಂ ಶಸ್ತ್ರ ಶಾಸ್ತ್ರ ಸ್ಥಿರ ಪರಿಣತಿಯೊಳ್ ಲಕ್ಷ್ಮಿದೇವಂಗೆ ದೀಕ್ಷಾ ॥
ಗುರುವಾದಂ ಪ್ರಾಚ್ಯ ರಾಜ್ಯಾಪಹರಣದೆ ಪರಕ್ಷೋಣಿಪಾಲರ್ಗೆನಲ್ ಕೇಳ್।
ಗುರು ಶಬ್ದಂ ವಾಚ್ಯವಾಯ್ತಲ್ಲದೆ ವರ ಮುನಿಚಂದ್ರಂಗಿದೇಂ ದೇಸೆಗಾಯ್ತೇ ॥

ಇದೇ ಮುನಿಚಂದ್ರ ದೇವರ ಆಳ್ಕೆವಾಡಾದ ಸುಗಂಧವರ್ತಿ (ಸವದತ್ತಿ) ಯನ್ನು ಈ ಕಾಲದಲ್ಲಿ (೧೨೩೦) ಮಾದಿರಾಜ ಮಲ್ಲಿಕಾರ್ಜುನರೆಂಬ ಸಹೋದರರು ಅವರಾಜ್ಞೆಯಿಂದ ಪ್ರತಿಪಾಲಿಸುತ್ತಿದ್ದರು. ಮೇಲಿನ ಈ ರಾಜ ಗುರುಗಳ ವರ್ಣನೆಯನ್ನು ನೋಡಿದರೆ ಇವರು ದ್ರೋಣನಂತೆ, ಶಾಪಾದಪಿ ಶರಾದಪಿ, ಸಾಮರ್ಥ್ಯವುಳ್ಳವರಾಗಿದ್ದರೆಂದು ಹೇಳಬಹುದಾಗಿದೆ. ಈ ಮೇರೆಗೆ ಬ್ರಹ್ಮ ಕ್ಷಾತ್ರ ತೇಜಸ್ಸುಗಳೆರಡೂ ಮಿಳಿತವಾಗಿ ಇದೇ ಬೆಳಗಾಂವಿಯಲ್ಲಿ ಏಳುನೂರು ವರ್ಷಗಳ ಹಿಂದೆ ಮೆರೆದುವು. ಅದನ್ನಿಂದು ಬೆಳಗಾಂವಿಯ ಕನ್ನಡಿಗರು ಮರೆತುಬಿಟ್ಟಿರುವರೋ? ಇದೇ ಬೆಳಗಾಂವಿಯಲ್ಲಿ ರಟ್ಟಕುಲ ಭೂಷಣ ಮಂಡಳಿಕ ಗಂಡ ತಳಪ್ರಹಾರಿಯಾದ ಲಕ್ಷ್ಮಿದೇವರಸನು ವೇಣುಗ್ರಾಮದ ನೆಲೆವೀಡಿನಲ್ಲಿರಲಾಗಿ (೧೨೨೯) ಮಾದಿರಾಜ ಕವಿಯ ತಂದೆಯಾದ ಕೇಶಿರಾಜನು ಮಲ್ಲಿನಾಥದೇವರಿಗೆ ದತ್ತಿಯನ್ನು ಕೊಟ್ಟಿರುವನು. ಇದೇ ಬೆಳಗಾಂವಿಯಲ್ಲಿದ್ದ (ಈಗ ಇವು ಬ್ರಿಟಿಷ್ ಮ್ಯೂಜಿಯುಮ್ಮಿನಲ್ಲಿವೆ) ಎರಡು ಕನ್ನಡ ಶಿಲಾ ಶಾಸನಗಳನ್ನು ಬರೆದ ವಕ್ರೋಕ್ತಿ ಪ್ರಗಲ್ಭನೆನಿಸಿದ ಬಾಳಚಂದ್ರ ಕವಿಕಂದರ್ಪನನ್ನೀಗ ಕನ್ನಡಿಗರು ಅಭಿನಂದಿಸಬೇಕಾಗಿದೆ. ಇವನು ಪಿಯೂಷ ಸಮ ಸೂಕ್ತಿಯೂ ಚತುರ್ಭಾಷಾ ಕವಿಚಕ್ರವರ್ತಿಯೂ ಆಗಿದ್ದನಂತೆ. ಅಂತಹ ಸ್ಥಳದಲ್ಲಿದ್ದ ವೇಣುಗ್ರಾಮದ ಕನ್ನಡಿಗರು ಒರಟು ಗನ್ನಡಿಗರೆಂದೆನ್ನಿಸಿಕೊಳ್ಳಬಾರದೆಂದು ಅಭಿಮಾನಪಡಬೇಕು. ಇಲ್ಲಿಯ ಅರಸನಾದ ಲಕ್ಷ್ಮಿದೇವನ ರಾಣಿಯಾದ ಚಂದಲದೇವಿಯು ನಿಜೋದ್ಧ ಹಸ್ತದಿಂದ ಸಂಕ್ರಮಣದಲ್ಲಿ ಸುವರ್ಣ ದಾನವನ್ನು ಮಾಡುತ್ತಿದ್ದಳೆಂದು ಇದೇ ಬೆಳಗಾಂವಿಯ (೧೨೦೪)ರ ಶಿಲಾ ಲಿಪಿಯು ಕೂಗಿ ಹೇಳುತ್ತಿರುವುದು. ಇಲ್ಲಿಯೇ ಜನಪತಿ ಕಾರ್ತವೀರ್ಯ ಸಚಿವೈಕ ಶಿರೋಮಣಿ ಬೀಚಿರಾಜನಿದ್ದನು.

ಹೊಯ್ಸಳರು ಕನ್ನಡ ನಾಡಿಗೊಡೆಯರಾಗಿರುವಾಗಲೂ ಅನೇಕ ಕನ್ನಡ ಸಂಸ್ಕೃತ ಗ್ರಂಥಗಳು ಹುಟ್ಟಿದುವು. ಶ್ರೀ॥ ನರಸಿಂಹಾಚಾರ್ಯರ ಪುಣ್ಯದಿಂದ ಕನ್ನಡ ಗ್ರಂಥಕರ್ತರ ಚರಿತ್ರೆಯೀಗ ನಮಗೆ ತಿಳಿದುಬಂದಂತೆ, ಕರ್ಣಾಟಕದಲ್ಲಿ ಆಗಿಹೋದ ಸಮಗ್ರ ಗ್ರಂಥಕಾರರ ಚರಿತೆ ಇನ್ನೂ ನಮಗೆ ತಿಳಿದುಬಂದಿಲ್ಲ. ದೋರಸೋಲಗವು, ಕಂತಿ ಹಂಪರ ಸಮಸ್ಯೆಗಳಿಗೆ, ಕವಿತ್ವ ವಾದಕ್ಕೆ ರಂಗಸ್ಥಾನ

ವಾಗಿರಲಿಲ್ಲವೆ? ನರಸಿಂಹಬಲ್ಲಾಳನ ಕೆರೆಯ ಪದ್ಮರಸನು ಸಾನಂದಚರಿತ್ರವೆಂಬ ಸಂಸ್ಕೃತ ಗ್ರಂಥವನ್ನು ಬರೆದು ತ್ರಿಭುವನತಾತನನ್ನು ಜಯಿಸಲಿಲ್ಲವೆ? ಶಿವಾದ್ವೈತ ಸಾಕಾರ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯನೆಂದು ಹೊಗಳಿಸಿಕೊಳ್ಳಲಿಲ್ಲವೆ? ವಿಷ್ಣುವರ್ಧನನ ಕಾಲದಲ್ಲಿ ರಾಜಾದಿತ್ಯನಿಂದ ಹಲವು ಗಣಿತ ಗ್ರಂಥಗಳು ಕೂಡ ಕನ್ನಡದಲ್ಲಿ ಹುಟ್ಟಲಿಲ್ಲವೆ?

ವಿಜಯನಗರದವರ ಆಸ್ಥಾನವಂತೂ ಆರ್ಯವಿದ್ಯೆಗೆ ತವರ್ಮನೆಯಾಗಿದ್ದಿತು. ಮಧುರನೆಂಬವನು ಎರಡನೆಯ ಹರಿಹರನ ಆಸ್ಥಾನ ಕವಿಯಾಗಿದ್ದನು. ಬುಕ್ಕನ ಸೊಸೆಯಾದ ಗಂಗಾದೇವಿಯು ಸರಸವಾದ ವೈದರ್ಭೀ ರೀತಿಯ 'ವೀರಕಂಪಣ ರಾಯಚರಿತ'ವನ್ನು ಬರೆದಳು. ಕಂಪನ ಮಗನಾದ ದೇವಪ್ಪರಾಜನು ಕನ್ನಡದಲ್ಲಿ 'ಸೊಬಗಿನ ಸೋನೆ', 'ಅಮರುಕ'ಗಳನ್ನು ಬರೆದನು. ಮಲ್ಲಿಕಾರ್ಜುನನ ಆಳಿಕೆಯಲ್ಲಿ ಸಂಸ್ಕೃತ ನಾಟಕಗಳು ಹುಟ್ಟಿದುವು. ಕೃಷ್ಣರಾಜನಂತು 'ಜಾಂಬವತೀ ಕಲ್ಯಾಣ'ವೆಂಬ ಸಂಸ್ಕೃತ ನಾಟಕವನ್ನು ರಚಿಸಿರುವನು. ಇವನ ಅಪ್ಪಣೆಗನುಸಾರವಾಗಿ ತಿಮ್ಮಣ್ಣ ಕವಿಯು ಭಾರತದ ಉತ್ತರ ಭಾಗವನ್ನು ಬರೆದಿರುವನು. ಕೃಷ್ಣರಾಜನಂಥ ಉದಾರ ಭೂಪತಿಯ ಆಶ್ರಯದಲ್ಲಿಯೇ ಅಷ್ಟದಿಗ್ಗಜಗಳಂಥ ವಿದ್ವಾಂಸರು ಇರುವುದು ಶಕ್ಯವಾಗಿರುವುದು.

ಕೃಷ್ಣರಾಜನ ಪ್ರೇಮಕ್ಕೆ ಪಾತ್ರಳಾಗದೆ ಅವನಿಂದ ಪರಿತ್ಯಕ್ತಳಾದ ಓರಿಸದ ಗಜಪತಿಯ ಮಗಳಾದ ಕೃಷ್ಣರಾಜನ ಹೆಂಡತಿಯೂ ಕವಯಿತ್ರಿಯಾಗಿದ್ದಳು. ಆಕೆಯ ವಿರಹ ಕವನವು ನೋಡುವಹಾಗಿದೆ.—

ಭ್ರಮನ್ ವನಾಂತೇ ನವ ಮಂಜರೀಷು |
ನ ಷಟ್ಪದೋ ಗಂಧ ಫಲೀಮಜಿಘ್ರತ್ ||
ಸಾ ಕಿಂ ನ ರಮ್ಯಾ ಸಚ ಕಿಂ ನ ರಂತಾ |
ಬಲೀಯಸೀ ಕೇವಲಮೀಶ್ವರೇಚ್ಛಾ ||

"ಉಪವನದ ಮಧ್ಯದ ನವಮಂಜರಿಗಳಲ್ಲಿ ತಿರುಗಾಡುವ ಭ್ರಮರವು ಗಂಧಫಲವನ್ನು ಮೂಸಲಿಲ್ಲ; ಆಕೆ ರಮ್ಯಳಲ್ಲವೆಂದಲ್ಲ, ಭ್ರಮರನು ರಸಿಕನಲ್ಲವೆಂದಲ್ಲ; ಕೇವಲ ಈಶ್ವರೇಚ್ಛೆ."

ತುಕ್ಕೆಯ ವ್ಯಾಜ ನಿಂದೆಯ ಚಾತುರಿಯನ್ನು ನೋಡಿರಿ. ಅಪ್ಪಯ್ಯದೀಕ್ಷಿತರು ಈ ಪದ್ಯವನ್ನು ಕುವಲಯಾನಂದದಲ್ಲಿ ಉದಾಹರಿಸಿರುವರು.

ರಾಮರಾಯ ತಿರುಮಲರಂತೂ ಅನುಪಮ ವಿದ್ಯಾ ಪಕ್ಷಪಾತಿಗಳು. ತಂಗಡಿಗಿಯ ರಣದಲ್ಲಿ ಅತುಲೋತ್ಸಾಹವನ್ನು ತೋರಿಸಿದ ರಾಮರಾಯನು ಕಾವ್ಯಶಾಸ್ತ್ರ ಚರ್ಚೆಯಲ್ಲಿ ಕೂಡ ಅಷ್ಟೇ ಉತ್ಸಾಹವನ್ನು ತೋರಿಸುತ್ತಿದ್ದನೆಂಬುದು ಆಶ್ಚರ್ಯಾವಹವಾಗಿರುವುದು. ಕವಿತ್ವದ ಭಾವನೆಗಳನ್ನು ಅಳೆಯುವುದರಲ್ಲಿ ರಾಮರಾಯನು ಭೋಜನೆಂದು ಹೊಗಳಿಸಿಕೊಂಡಿರುವನು. 'ಪಂಚಮತ ಭಂಜನ'ವೆಂಬ ಗ್ರಂಥ

ವನ್ನು ಬರೆದ ತಾತಾಚಾರ್ಯನು ರಾಮರಾಯನ ಗುರುವಾಗಿದ್ದನು. ಇವನೊಡನೆ ಚಂದ್ರಗಿರಿಯಲ್ಲಿ ರಾಮರಾಯನು ಕೆಲಕಾಲ ಶಾಸ್ತ್ರ ಚರ್ಚೆಯಲ್ಲಿ ಕಾಲವನ್ನು ಕಳೆಯುತ್ತಿದ್ದನು. ರಾಮರಾಯನು ಮಧ್ವ ಗುರುವಾದ ವಿಜಯೀಂದ್ರ ಸ್ವಾಮಿಗಳಿಗೂ ಪೋಷಕನಾಗಿದ್ದನು. ರಾಮರಾಯನು ಈ ಸ್ವಾಮಿಗಳನ್ನು ರತ್ನಗಳಿಂದ ಅಭಿಷೇಕ ಮಾಡಿ ಅನೇಕ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟಿದ್ದನು. ಅಹೋಬಲ ಮಠದ ಷಷ್ಠಪರಾಂಕುಶ ಸ್ವಾಮಿಗಳಿಗೂ ರಾಮರಾಯನು ಆಶ್ರಯದಾತನಾಗಿದ್ದನು. ಈ ದೊಡ್ಡ ವೈಷ್ಣವ ಗುರುವು ಕೆಲಕಾಲ ರಾಮರಾಯನ ಏಜಂಟನಾಗಿದ್ದನು. ಭಟ್ಟಮೂರ್ತಿ ಎಂಬ ತೆಲುಗು ಕವಿಯು ರಾಮರಾಯ ತಿರುಮಲ ಇವರಿರ್ವರನ್ನೂ ಆಶ್ರಯಿಸಿದ್ದನು. ಭಟ್ಟಮೂರ್ತಿಯು ಒಮ್ಮೆ ಒಕ್ಕಣ್ಣಿನ ತಿರುಮಲನನ್ನು, (ತಂಗಡಿಗಿಯ ಕಾಳೆಗದಲ್ಲಿ ಒಂದು ಕಣ್ಣನ್ನು ಕಳೆದುಕೊಂಡಿದ್ದನು.) ರಾಣಿಯೊಡನೆ ಕುಳಿತಾಗ, ತ್ರಿಯಂಬಕನಿಗೆ ಹೋಲಿಸಿ ಬಣ್ಣಿಸಿದನಂತೆ. 'ಗೀತಗೋವಿಂದ'ದ ಮೇಲೆ 'ಶ್ರುತಿರಂಜನೀ' ಎಂಬ ಸಂಸ್ಕೃತ ಟೀಕೆಯನ್ನು ಬರೆದ ಲಕ್ಷ್ಮಣಸೂರಿಯು ತಿರುಮಲನ ಆಶ್ರಿತನಾಗಿದ್ದನು.

ಎರಡನೆಯ ವೆಂಕಟನಂತೂ ವಿದ್ಯೆಗೆ ಆಶ್ರಯವನ್ನು ಕೊಡುವವರಲ್ಲಿ ಹೆಸರಾದವನು. ಅವನು ಸ್ವಯಂ ತನ್ನ ರಾಜ್ಯದ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬನಾಗಿದ್ದನು. ಇವನು ಒಂದು ತಾಮ್ರ ಶಾಸನದಲ್ಲಿ 'ವಿದ್ಯಾಸಾಗರ'ನೆಂದು ಕರೆಯಲ್ಪಟ್ಟಿರುವನು. ಪೋರ್ತುಗೀಸ ಪ್ರವಾಸಿಯೊಬ್ಬನು, ವೆಂಕಟನು ಪ್ರತಿ ದಿವಸ ಗಣಿತ ತತ್ತ್ವಶಾಸ್ತ್ರ ಮೊದಲಾದ ವಿಷಯಗಳಲ್ಲಿ ವಿದ್ವಾಂಸರೊಡನೆ ಚರ್ಚೆಯನ್ನು ನಡೆಯಿಸುವನೆಂದು ಬರೆದಿಟ್ಟಿರುವನು. ಮಧ್ವ ಗುರುವಾದ ಸುಧೀಂದ್ರನು ವೆಂಕಟನ ಆಶ್ರಿತರಲ್ಲಿ ಒಬ್ಬನು. ಇವನು ವೆಂಕಟನ ಆಸ್ಥಾನದಲ್ಲಿ ವಾದಿಗಳನ್ನು ಗೆದ್ದು ಶಂಖ ಮೊದಲಾದ ವಿಜಯ ಚಿಹ್ನಗಳನ್ನು ಪಡೆದನು. 'ಸಾತ್ವಿಕ ಬ್ರಹ್ಮ ವಿದ್ಯಾವಿಲಾಸ'ವೆಂಬ ಗ್ರಂಥವನ್ನು ಬರೆದ ತಾತಾಚಾರ್ಯನು ವೆಂಕಟನ ಪ್ರತ್ಯಕ್ಷ ಗುರುವಾಗಿದ್ದನು. ತೆನ್ನಾಲಿ ರಾಮಲಿಂಗನು ಹಿಂದಿನಿಂದ ತೆನ್ನಾಲಿ ರಾಮಕೃಷ್ಣನಾಗಿ, ವೈಷ್ಣವನಾಗಿ, ವೆಂಕಟಪತಿರಾಯನನ್ನು ಆಶ್ರಯಿಸಿದ್ದನು. ಇವನ ವೈನೋದಿಕ ಶೈಲಿಯು ಪ್ರಸಿದ್ಧವಾಗಿಯೇ ಇರುವುದು. 'ತ್ರಿಪಾದದ್ಯೋತಿನೀ' ಎಂಬ ಸಂಸ್ಕೃತ ವ್ಯಾಕರಣ ಗ್ರಂಥವು ಹುಟ್ಟಿದುದು ವೆಂಕಟನ ಆಸ್ಥಾನದಲ್ಲಿಯೇ. ಕನ್ನಡದ 'ಶಬ್ದಾನುಶಾಸನ'ವೆಂಬ ಅತುಲ ವ್ಯಾಕರಣವನ್ನು ಬರೆದ ಕನ್ನಡದ ಅತ್ಯುಜ್ವಲಾಭಿಮಾನಿಯಾದ ಭಟ್ಟಾಕಲಂಕನು ವೆಂಕಟನ ಆಸ್ಥಾನ ಪಂಡಿತನಾಗಿದ್ದನು. ಇವನು ಕನ್ನಡ ಭಾಷೆಯ ಅಭಿಮಾನವನ್ನು ಹಿಡಿದು ಕನ್ನಡಿಗರಿಗೆ ಎಷ್ಟು ಉಪಕರಿಸಿರುವನೆಂಬುದಕ್ಕೆ ಇವನ 'ಮಂಜರೀ ಮಕರಂದ'ದಿಂದ ಮೆರೆಯುವ ಶಬ್ದಾನುಶಾಸನವೇ ಸಾಕ್ಷಿ. 'ಚತುರಧಿಕ ಶತ ಪ್ರಬಂಧ' ನಿರ್ಮಾತರೆಂದು ಹೆಸರಾದ ಅಪ್ಪಯ್ಯ ದೀಕ್ಷಿತರು ವೆಂಕಟನ ಆಸ್ಥಾನ ಪಂಡಿತರಾಗಿದ್ದರು. ಅವರು 'ಕುವಲಯಾನಂದ'ವೆಂಬ ಅಲಂಕಾರ ಗ್ರಂಥವನ್ನು ವೆಂಕಟನ ಪ್ರೇರಣೆಯಿಂದಲೇ ಬರೆದರು.

ಅಮುಂ ಕುವಲಯಾನಂದಮಕರೋದಪ್ಪದೀಕ್ಷಿತಃ।
ನಿಯೋಗಾದ್ವೇಂಕಟಪತೇಃ ನಿರುಪಾಧಿ ಕೃಪಾನಿಧೇಃ ॥

ಗಿರಿಯ ವೆಂಕಟರಮಣನೆಂಬ ಅರ್ಥವೂ ಇಲ್ಲಿ ಇರಬಹುದು. ಆದರೂ, ಪೋಷಕನಾದ ವೆಂಕಟಪತಿರಾಯನ ಹೆಸರನ್ನು ಹೇಳುವುದು ಅಪ್ಪದೀಕ್ಷಿತರಿಗಿಲ್ಲಿ ಬೇಕಾಗಿದೆ. ವಿಜಯನಗರದವರ ಸಾಮಂತನಾದ ವೆಲ್ಲೋರ ಬೊಮ್ಮನಾಯಕನು ಇದೇ ಅಪ್ಪದೀಕ್ಷಿತರಿಗೆ ವಿಶೇಷವಾದ ಆಶ್ರಯವನ್ನು ಕೊಟ್ಟಿದ್ದನು. ಇವನು ಸ್ವಯಂ ತನ್ನ ಕೈಯಿಂದ ಚಿನ್ನದ ನಾಣ್ಯಗಳನ್ನು ದೀಕ್ಷಿತರಿಗೆ ಕನಕಾಭಿಷೇಕ ವನ್ನು ಮಾಡಿ, ಅವರ ಪಾಂಡಿತ್ಯವನ್ನು ಗೌರವಿಸಿದನು.

ವಿಜಯನಗರದವರ ತರುವಾಯ ಕನ್ನಡ ನಾಡಿನ ಒಂದು ಭಾಗಕ್ಕೆ ಒಡೆಯ ರಾದ ಮೈಸೂರ ಒಡೆಯರೂ ವಿದ್ಯೆಗೆ ಆಶ್ರಯವನ್ನಿತ್ತರು. ಇವರ ಕಾಲದಲ್ಲಿಯೂ ಅನೇಕ ಕನ್ನಡ ಗ್ರಂಥಗಳು ಹುಟ್ಟಿದುವು. ತಿರುಮಲಾರ್ಯ, ಹೊನ್ನಮ್ಮ ಮೊದಲಾದವರ ಹೆಸರುಗಳು ವಿಶೇಷವಾಗಿ ಉಲ್ಲೇಖಾರ್ಹವಾಗಿರುವುವು. ಆ ವೈಭವದ ಕಾಲವು ಹೋಗಿ ಉತ್ತರ ಕರ್ಣಾಟಕದ ಕನ್ನಡ ವಿದ್ಯೆಯಿಾಗ ರಾಜಾ ಶ್ರಯ ರಹಿತವಾದರೂ ಮೈಸೂರ ಮಹಾರಾಜರವರ ಪೋಷಣೆಯಲ್ಲಿ ಇನ್ನೂ ಕನ್ನಡ ಸಂಸ್ಕೃತಿಯು ಪೋಷಿತವಾಗುತ್ತಿರುವುದು. ಅಂತೇ, ಅಲ್ಲಿ ಇನ್ನೂ ಹಳೆಯ ತೆರದ ಆಸ್ಥಾನ ವಿದ್ವಾಂಸರೂ, ಹೊಸ ಮಾದರಿಯ ನವ ಯುಗದ ರಸಿಕ ವಿದ್ವಾಂಸರೂ ಇರುವರು. ಇದ್ದುದರಲ್ಲಿ ಇದು ಕರ್ಣಾಟಕದ ಭಾಗ್ಯವೆನ್ನಬೇಕು.

ವಿಜಯನಗರದ ವೈಭವವು ೧೫೬೫ರಲ್ಲಿ ತಂಗಡಿಗಿಯ ಕಾಳೆಗದಲ್ಲ ಅಳಿದ ನಂತರ ಕಾರ್ಣಾಟಿಕ ವಿದ್ವನ್ಮಂಡಳಿಯು ರಾಜಾಶ್ರಯದಿಂದ ವಿರಹಿತವಾದುದೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಆ ಅಳಿದುಳಿದ ಸಾಮ್ರಾಜ್ಯವು ತಂಗಡಿಗಿಯ ರಣವಾದ ಬಳಿಕ ಮತ್ತೆ ನೂರು ವರುಷ ಬಾಳಿದರೂ, ಪೆನುಗೊಂಡೆಗೋ, ಚಂದ್ರಗಿರಿಗೋ, ವೆಲ್ಲೋರಿಗೋ ಹೋಗಿ ತೆಲುಗರ, ತಮಿಳರ ವರ್ಚಸ್ಸಿನಲ್ಲಿ ಬಾಳಿತು. ೧೫೬೫ ರಿಂದ ಕರ್ಣಾಟಕ ಸಾಮ್ರಾಜ್ಯ ಲಕ್ಷ್ಮಿಯೊಡನೆ, ಕನ್ನಡಿಗರ ಸಾಹಿತ್ಯ ಸರಸ್ವತಿಯೂ ಕಳೆಗುಂದಿದ ದಶೆಯನ್ನು ಹೊಂದಿದಳು.

ಅಲ್ಲಿಂದ ಇತ್ತಕಡೆಗೆ, ಹೇಳಿಕೊಳ್ಳತಕ್ಕ ಉದ್ದಾಮ ಗ್ರಂಥಗಳು ಹುಟ್ಟಿರುವು ದಿಲ್ಲ; ಪರಿಸ್ಥಿತಿಯು ಭಿನ್ನವಾದುದು. ಪರಭಾಷೆಯ ಮೋಹದಿಂದ ನಮ್ಮವರು ಮಾತೃಭಾಷೆಯನ್ನು ಮರೆತುಬಿಟ್ಟರು. ಇದರಿಂದ ಲೋಕಾಶ್ರಯವೂ ಇಲ್ಲ ದಾಯಿತು. ಅಂತೇ ನಮ್ಮ ಉತ್ತರ ಕರ್ಣಾಟಕದ ಕವಿಗಳ ನುಡಿಯಿಂದ

ಎತ್ತುಂ ಪೊತ್ತಲು ತಾಳಲಾರದ ಮಹಾ ಗ್ರಂಥಂಗಳಂ ಗೆಯ್ದ ನೀಂ।
ಹೊತ್ತಲ್ ಸ್ನೇಹದ ಬತ್ತಿ ಹೊಯ್ಯಲಕಟಾ ಸ್ನೇಹಾಂಶವೇ ದುರ್ಲಭಂ ॥

ಎಂದು ಕಟುವಾದ ಉದ್ಗಾರಗಳನ್ನು ತೆಗೆಯಬೇಕಾಯಿತು.

ಕನ್ನಡ ಸಾಹಿತ್ಯಕ್ಕೀಗ ಪೂರ್ವದ ರಾಜಾಶ್ರಯವು ತಪ್ಪಿದ್ದರೂ, ಆಂಗ್ಲ ಸಂಸ್ಕೃತಿಯ ಸಹವಾಸದಿಂದ ಕೆಲ ಕಾಲ ಆದರ ಮಬ್ಬಿನಲ್ಲಿ ನಮ್ಮವರು ನಮ್ಮ ನುಡಿಯ ಉಪಾಸನೆಯನ್ನು ಮರೆತಿದ್ದರೂ, ಮತ್ತೆ ಜಾಗೃತರಾಗಿರುವ ಲಕ್ಷಣಗಳು ತೋರಹತ್ತಿರುವುವು. ಪಾಶ್ಚಾತ್ಯ ಸಾಹಿತ್ಯದ ಅಪೂರ್ವ ಪರಿಚಯದಿಂದ ನಮ್ಮವರು ನಮ್ಮ ಕವಿತ್ವವನ್ನು ಕಳೆದುಂಬಿಸಲು ಯತ್ನಿಸಹತ್ತಿರುವರು. ಪೂರ್ವ ಪಶ್ಚಿಮ ಸಂಸ್ಕೃತಿಗಳ ಮಧುರ ಮಿಶ್ರಣದಿಂದ ಉಂಟಾದ ಹೊಸ ಸಂಸ್ಕಾರದಿಂದ ಮತ್ತೆ ನಮ್ಮ ಕವಿತಾ ರಮಣಿಯು ಹೊಸ ಉಡಿಗೆಯನ್ನು ತೊಟ್ಟು ಹೊಸ ಅಲಂಕಾರಗಳನ್ನು ಧರಿಸಿ ಹೊಸ ತೇಜದಿಂದ ಮಿನುಗುವ ಲಕ್ಷಣಗಳು ತೋರಹತ್ತಿವೆ. ಇಂಥ ಸಂದರ್ಭದಲ್ಲಿ ಸಾಹಿತ್ಯ ವಿಕಾಸಕ್ಕೆ ಉದಾರ ಬುದ್ಧಿಯಿಂದ ಸಹಾಯಮಾಡುವ ಶ್ರೀಮಂತ ಶ್ರೇಣಿಯವರು ಮುಂದೆ ಬರಲಿ.

ಇಂಗ್ಲಿಷ ಭಾಷೆಯ ಅದ್ಭುತ ಕೋಶವನ್ನು ಅನೇಕ ಸಂಕಷ್ಟಗಳಿಗೀಡಾಗಿ ಏಳು ವರುಷ ಸತತ ಪರಿಶ್ರಮಬಟ್ಟು ರಚಿಸಿ ಮುಗಿಸುವ ಸಮಯದಲ್ಲಿ ಸಹಾಯ ಮಾಡಿದೆನೆಂದು ಅಹ್ಮತೆಯನ್ನು ತೋರಿಸಲು ಬಂದ 'ಲಾರ್ಡ ಚೆಸ್ಟರಫೀಲ್ಡ'ನಂತೆ ಸಹಾಯದ ಆಭಾಸವನ್ನು ಮಾಡದೆ, ನಮ್ಮ ವಾಙ್ಮಯ ಭಕ್ತರು ತೊಳಲುತ್ತ ಬಳಲುತ್ತ ವಾಙ್ಮಯ ಸೇವೆಯನ್ನು ನಡಿಸಿರುವಾಗಲೇ ಅವರಿಗೆ ಸಕಾಲದಲ್ಲಿ ನಿಜವಾದ ಸಹಕಾರವನ್ನೀಯುವ ಮಹಾನುಭಾವರು ಮುಂದೆ ಬರಲಿ. ನಮ್ಮ ಕರ್ಣಾಟಕದಲ್ಲಿರುವ ದೇಶಾಯಿ, ದೇಶಪಾಂಡೆ ಮೊದಲಾದ ಭಾಗ್ಯವಂತರೂ, ಶೆಟ್ಟಿ ಸಾಹುಕಾರರೂ ಕನ್ನಡ ಸಾಹಿತ್ಯ ಸೇವೆಯಿಂದ ದೂರಿರದೆ ತಾವೂ ಅದರ ಪರಿಚಯವನ್ನು ಮಾಡಿಕೊಂಡು ಪಂಡಿತರಿಗೂ ಕವಿಗಳಿಗೂ ಸಹಕಾರವನ್ನೀಯಲಿ. ಎಂದರೆ, ಅವರಿಗೆ ತಂಜಾವರದ ರಸಿಕರಾದ ಆನಂದರಾಯಾದಿಗಳು ತೆರಳಿದನಂತರ, ಅಲ್ಲಿ ಅರಸಿಕರು ಅಧಿಕಾರಿಗಳಾದ ಬಳಿಕ, ಅನಾಥನಾಗಿ ವಿದ್ಯಾ ಜೀವನದಿಂದ ಕುಂಠಿತನಾದ ವಾಂಛಾನಾಥನಂತೆ, 'ಮಹಿಷ ಶತಕ'ವನ್ನು ರಚಿಸಿ, ನೀನೇ ಇಂದ್ರನೆಂದು ಚಂದ್ರನೆಂದು ಅದನ್ನು ಹೊಗಳಿ ತನ್ನ ಕವಿತ್ವ ಶಕ್ತಿಯನ್ನೆಲ್ಲ ಮಹಿಷದ ಮೇಲೆ ಧಾರೆಯೆರೆಯುವ ಪ್ರಸಂಗವು ಬರಲಿಕ್ಕಿಲ್ಲ. ಪ್ರಜಾ ಪ್ರಾಬಲ್ಯವುದಯವಾಗುತ್ತಿರುವೀ ಕಾಲದಲ್ಲಿ ಸಾವಿರಾರು ಅಲ್ಲಲ್ಲಿ 'ಸಾಹಿತ್ಯ ಸೇವಕ ಸಮಾಜ'ಗಳನ್ನು ನಿರ್ಮಿಸಿಕೊಂಡು ಸಂಘ ಶಕ್ತಿಯ ಬಲದಿಂದ ಗ್ರಂಥಕರ್ತರಿಗೂ ಗ್ರಂಥ ಪ್ರಕಟಕರಿಗೂ ಪ್ರೋತ್ಸಾಹವನ್ನೀಯಲಿ. ಕನ್ನಡ ನುಡಿಯ ಏಳಿಗೆಯ ಬಗ್ಗೆ, ಕನ್ನಡಿಗರ ಏಳ್ಗೆಯ ಬಗ್ಗೆ ಪರಸ್ಪರ ಮಾತ್ಸರ್ಯವನ್ನು ತಾಳದೆ ಐಕಮತ್ಯದಿಂದ ಕಾರ್ಯವನ್ನು ಮಾಡಿದಾಗಲೇ ನಾವೀ ಕಾಲದಲ್ಲಿ ನಮ್ಮ ಸ್ಥಾನದಲ್ಲಿ ಸ್ಥಿರವಾಗಿ ನಿಂತುಕೊಂಡು ಪರರ ಆಕ್ರಮಣಶೀಲತೆಗೆ ಮುದುಡಿಕೊಳ್ಳದೆ ನಮ್ಮ ಉನ್ನತಿಯನ್ನು ನಾವು ಮಾಡಿಕೊಳ್ಳಲು ಸಮರ್ಥರಾಗುವೆವು. "ಕನ್ನಡಿಗರ ನಲೆ ಕೂಡಿಸಿ ಕನ್ನಡ ಧರ್ಮವನು ಬೆಳಸುವುದು ಕರ್ತವ್ಯ"—ಇದು ನಮ್ಮ ಮಂತ್ರವಾಗಿರಲಿ. ಇನ್ನೂ ಕನ್ನಡಿಗರು ಮಾಡತಕ್ಕುದು ವಾಙ್ಮಯದಲ್ಲಿ ಬಹಳವಾಗಿದೆ. ಕನ್ನಡ ಭಾಷೆಗೆ

ಇತ್ತಲಾಗಿ ಪರಭಾಷೆಗಳ ದಾಳಿಯಲ್ಲಿ ಬಂದ ಮಾಲಿನ್ಯವನ್ನು ತೊಳೆಯುಲಿಕ್ಕೆ ಪುನಃ ಅಭಿನವ ಭಟ್ಟಾಕಲಂಕನು ಹುಟ್ಟಿ ಬರಬೇಕಾಗಿದೆ. ಕನ್ನಡವನ್ನು ಇನ್ನೂ ನಯವಾಗಿ ಮಾಡಿ, ಅದರಲ್ಲಿಯೇ ವೈರಾಗ್ಯದ ಗೀತಗಳನ್ನು ಹಾಡಲಿಕ್ಕೆ ಅಭಿನವ ಶಂಕರಾಚಾರ್ಯರು ನಮ್ಮ ನಾಡಿನಲ್ಲಿ ಅವತಾರ ತಾಳಬೇಕಾಗಿದೆ. ತಿಳಿಯಾದ ಕನ್ನಡದಲ್ಲಿ, ತಿಳಿ ಹೊಳೆಯಂತೆ ಹರಿಯುವ ತನ್ನ ವಚನಾವಲಿಗಳನ್ನು ಹರಿಯಿಸಲಿಕ್ಕೆ ಮತ್ತೆ ಬಸವನು ಬರಬೇಕಾಗಿದೆ. ಪಂಪ ರನ್ನರು ಪರಲೋಕದಲ್ಲಿರುವ ಷೇಕ್ಸ್‌ಪಿಯರ್ ಕೀಟ್ಸರನ್ನು ಸಂಧಿಸಿ ಕನ್ನಡದಲ್ಲಿ ಮತ್ತೆ ಹೊಸ ಜನ್ಮವನ್ನು ತಾಳಬೇಕಾಗಿದೆ. ಕನ್ನಡ ಸಾಹಿತ್ಯ ಕಮಲಿನಿಯು ಹೊಸ ವಿಕಾಸವನ್ನು ಹೊಂದುತ್ತಿರುವೀ ಅರುಣೋದಯದ ಕಾಲದಲ್ಲಿ ಆ ಕಮಲಿನಿಯಲ್ಲಿ ರಾತ್ರಿಯಲ್ಲಿ ಮುಚ್ಚಿಹೋದ ಭ್ರಮರಗಳಂತಿರುವ ನಾವು ಬೇಗನೆ ಎಚ್ಚತ್ತು ಕಣ್ಣೊರಸಿಕೊಂಡು ಬೇಗನೆ ಆ ಅಭಿನವಾವತಾರಗಳ ಸ್ವಾಗತಕ್ಕಾಗಿ ಮಂಗಳಗೀತವನ್ನು ಸಿದ್ಧಪಡಿಸೋಣ; ಇದಿಷ್ಟೇ ಕಾರ್ಯವನ್ನು ನಾವು ಮಾಡಿದರೂ ಧನ್ಯರಾಗುವೆವು.

ಕಡೆಗೊಂದು ಕರ್ಣಾಟಕ ದೇವಿಗೆ ಪ್ರಾರ್ಥನೆ:—"ನಿನ್ನ ಮಕ್ಕಳೆಂಬ ಅಭಿಮಾನವು ಕನ್ನಡಿಗರಾದ ನಮ್ಮ ಮೇಲಿರಲಿ; ನಿನ್ನ ಮಕ್ಕಳೆಂದು ಕನ್ನಡಿಗರು ಎದೆಯುಬ್ಬಿಸಿ ನಡೆಯಲಿ; 'ಕಾನಡೀ ಅಪ್ಪಾ' ನಾವು ಎಂದು ತಲೆ ತಗ್ಗಿಸಬೇಡ, ಕುಗ್ಗಿಸಬೇಡ. ನಿನ್ನ ಆಶ್ರಯವು ನಮಗಿದೆ ಎಂಬ ವಿಶ್ವಾಸವು ನಮ್ಮ ಹೃದಯ ಗರ್ಭದಲ್ಲಿರಲಿ. ನಿನ್ನ ಮೇಲಣ ನಿಷ್ಠೆಯ ಅಭಾವವೇ ನಮಗೀ ಅವನತಿಗೆ, ಅಂಜಿಕೆಗೆ ಕಾರಣವಾಗಿದೆ. ನಿನ್ನ ಬಗ್ಗೆ ದೃಢವಾದ ಪ್ರೇಮವನ್ನು ತಾಳಲು ಕನ್ನಡಿಗರಿಗೆ ಧೈರ್ಯವನ್ನು ಕೊಡು; ಇದೊಂದೇ ಬೇಡಿಕೆ. ನಿನಗಾಗಿ ಅಪಜಯದಲ್ಲಿ ವಿಜಯವನ್ನೂ, ಮರಣದಲ್ಲಿ ಅಮರ ಜೀವನವನ್ನೂ, ಅಪಮಾನದಲ್ಲಿ ಸನ್ಮಾನವನ್ನೂ ಕಾಣುವ ದಿವ್ಯದೃಷ್ಟಿಯನ್ನು ದಯಪಾಲಿಸು. ನಿನಗಾಗಿ ಮಾತನಾಡಲು, ನಿನಗಾಗಿ ಕಾರ್ಯಮಾಡಲು, ಸಹಿಸಲು ಅತುಲ ಬಲವನ್ನು ನೀಡು. ನಿನ್ನ ಮಕ್ಕಳಲ್ಲಿ ಪೌರುಷವನ್ನು ಹುಟ್ಟಿಸು. ಇವರು ನನ್ನ ಮಕ್ಕಳೆಂದು ವಾತ್ಸಲ್ಯದಿಂದ ಮನೆಯಲ್ಲಿಯೇ ಇಟ್ಟುಕೊಳ್ಳಬೇಡ; ದೇಶದೇಶಾಂತರಕ್ಕೆ ಹೋಗಿ ಅವರು ನಿನ್ನ ಧರ್ಮಕೀರ್ತಿಗಾಗಿ ಸಾಹಸ ಕಾರ್ಯಗಳನ್ನು ಜರುಗಿಸಲಿ. ಸಂಕಟಗಳಿಗೆ ಎದುರಾಗುವ ಗಟ್ಟಿಯಾದ ಎದೆಯನ್ನು ನೀನವರಿಗೆ ಕೊಡು. ಸಂಸಾರ ರಣಾಂಗಣದಲ್ಲಿ ಹೊಡೆದಾಡುವಾಗ, ಗರ್ತದಲ್ಲಿ ಬೀಳುವ ಸಮಯದಲ್ಲಿ ಮಾತ್ರ ನೀನು ನಿನ್ನ ವಾತ್ಸಲ್ಯದ ಕೈಗೊಟ್ಟು ಮೇಲಕ್ಕೆಬ್ಬಿಸು. ವೆಂಕಟಾಧ್ವರಿಯು ಬಣ್ಣಿಸಿದಂತೆ, ಚಾಂಪೇಯ, ಕಿಂಪಾಕ ಕುಸುಮಗಳಲ್ಲಿ ಮಹಾಕ್ರೋಷ ರಾಜಲಿಕಗಳಲ್ಲಿ, ಪಂಡಿತ ಮೂರ್ಖರಲ್ಲಿ ಸಮದೃಷ್ಟಿಯವರೂ ಪಾತ್ರ್ಯರೂ ಆಗದಂತೆ, ತಾರತಮ್ಯವರಿತವರೂ ಶ್ರದ್ಧಾಳುಗಳೂ ಆಗುವಂತೆ ನೀನವರಿಗೆ ಅನುಗ್ರಹಿಸು. ಕರ್ಣಾಟಕಾಂಬೇ! ನಾವು ನಿಜವಾಗಿ **ಕರು**(ಉನ್ನತ) **ನಾಡಿ**ನವರಾಗಲಿ!

**ಪಂಡಿತ ಕೇಶವಶರ್ಮಾ ಗಲಗಲಿ.**

# * ಕನ್ನಡ ಷಟ್ಪದಿಗಳು

**ಪ್ರೌಢ ಷಟ್ಪದಿ॥ ಕಡು ಕಂಗೊಳಿಪ ಕರ್ಣಾಟಕ ತಾಯುವುಂ।**
**ಬೆಡಗಿನ ಸಾಹಿತ್ಯ ಸಮ್ಮೇಲನಮುಮಂ।**
**ಪೊಡಮಡುವೆಂ ಬಿಡದಖಿಲ ಕಬ್ಬಿಗರುಮಂ ಪಂಡಿತ ಪಾಮರರುಮಂ॥**
**ಇಡುವೆಂ ನಿಮ್ಮೆದುರು ಬಡವಂ ಬಸವ ನಾಂ।**
**ದಿಡ ಬಕುತಿಯ ಪಿಡಿದು ಕನ್ನಡ ಷಟ್ಪದಿಯ।**
**ತೊಡಕಂ ಬಿಡಿಸಲೊಂದಂ ಗಡ ಬೇಡುವೆಂ ಕುಡುವುದಿದಕೆ ಸಲಹೆಯಂ॥**

ನಮ್ಮ ಕನ್ನಡ ವಾಙ್ಮಯದಲ್ಲಿ ಷಟ್ಪದಿಗಳಿಗಿರುವಷ್ಟು ಪ್ರಾಶಸ್ತ್ಯವು ಬೇರೆ ಯಾವ ಛಂದಸ್ಸುಗಳಿಗೂ ಇರುವುದಿಲ್ಲವೆಂಬುದು ಪ್ರಾಯಶಃ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇಂತಹ ಷಟ್ಪದೀ ಶ್ರೇಣಿಯು ಪರಿಪೂರ್ಣಾವಸ್ಥೆಯನ್ನು ಹೊಂದಬೇಕೆಂದು ಬಯಸದಿರುವವರಾರೂ ಕನ್ನಡಿಗರಲ್ಲಿ ಸಿಕ್ಕಲಾರರು. ಪ್ರತ್ಯೇಕ ವ್ಯಕ್ತಿಯು ತನ್ನಿಂದಾದಷ್ಟು ಭಾಷಾ ಜನನಿಯ ಸೇವೆಯನ್ನು ಸಾಧ್ಯವಾದ ರೀತಿಯಿಂದ ಮಾಡಬಯಸುವುದು ಸ್ವಾಭಾವಿಕವೂ ಆವಶ್ಯಕವೂ ಆಗಿರುವುದು.

ಈಗ ಸದ್ಯಕ್ಕೆ ಷಟ್ಪದಿಗಳ ಗುಂಪಿನಲ್ಲಿ ಆರು ಭಿನ್ನ ಭಿನ್ನ ವೃತ್ತಗಳಿರುತ್ತವೆ: ಮೊದಲನೆಯದು ಶರಷಟ್ಪದಿ. ಇದರ ಲಘು ಚರಣಗಳಲ್ಲಿ ಪ್ರತಿಯೊಂದಕ್ಕೂ ೮ ಮಾತ್ರೆಗಳಿರುವುವು. ಮುಂದೆ ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿಗಳ ಚಿಕ್ಕ ಪಾದಗಳಲ್ಲಿ ಕ್ರಮವಾಗಿ ೧೦, ೧೨, ೧೪, ೧೬ ಮಾತ್ರೆಗಳಿರುತ್ತವೆ; ಎಂದರೆ, ಗಣಿತ ಶ್ರೇಢಿಯ ಪ್ರಕಾರ ಮಾತ್ರೆಗಳ ಸಂಖ್ಯೆಯು ಎರಡೆರಡರಂತೆ ಏರುತ್ತ ನಡೆದಿದೆ. ಆದರೆ ಕಡೆಯದಾದ ಆರನೆಯ ವಾರ್ಧಿಕ ಷಟ್ಪದಿಯು ಈ ಶ್ರೇಢಿಯ ಅನುಕ್ರಮವನ್ನತಿಕ್ರಮಿಸಿ ತನ್ನ ಕಿರಿಯಡಿಗಳಲ್ಲಿ ೨೦ ಮಾತ್ರೆಗಳುಳ್ಳದಾಗಿದೆ; ಎಂದರೆ, ಇದು ಇದರ ಹಿಂದಿನ ಪರಿವರ್ಧಿನಿಗಿಂತ ಎರಡರಿಂದ ಹೆಚ್ಚದೆ ನಾಲ್ಕು ಮಾತ್ರೆಗಳಿಂದ ಹೆಚ್ಚಾಗಿರುವುದು. ಇವೆರಡರ ನಡುವೆ ಇನ್ನೊಂದು ಷಟ್ಪದಿಯಿದ್ದರೆ ಆರಂಭಿಸಿದ ಕ್ರಮವು ಕೊನೆಯ ವರೆಗೂ ಅವಿಚ್ಛಿನ್ನವಾಗಿ ಸಾಗುತ್ತಿದ್ದಿತು; ಈ ಹೊಸ ಷಟ್ಪದಿಯ ಚಿಕ್ಕ ಪಾದಗಳಿಗೆ ಪ್ರತಿಯೊಂದಕ್ಕೂ ೧೮ ಮಾತ್ರೆಗಳಾಗಿದ್ದರೆ ಕೈಕೊಂಡ ಕ್ರಮವು ಕೈಗೂಡುತ್ತಿದ್ದಿತು. ಈ ಕೊರತೆಯನ್ನು ದೂರಮಾಡಬೇಕೆಂದಾಲೋಚಿಸಿ; ಈ ಹೊಸ ಷಟ್ಪದಿಯು ವಾರ್ಧಿಕ ಷಟ್ಪದಿಯ ಪೂರ್ವದಲ್ಲಿ ಗಣಿಸಲ್ಪಡುವುದಾದುದರಿಂದ, ಇದಕ್ಕೆ "ಪ್ರೌಢ"ವೆಂಬ ಹೆಸರನ್ನು ಕಲ್ಪಿಸಿ ಇದರ ಪ್ರತಿಯೊಂದು ಸಣ್ಣ ಪಾದವನ್ನೂ ೧೮ ಮಾತ್ರೆಗಳಿಂದ ಕೂಡಿದುದನ್ನಾಗಿ ಭಾವಿಸಿದೆ. ೧೮ ಮಾತ್ರೆಗಳನ್ನು ನಾಲ್ಕು ಗಣಗಳಾಗಿ ಮಾಡಲು ಅದು

* ಬೆಳಗಾಂವಿಯಲ್ಲಿ ನಡೆದ ೧೫ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಬಂದುದು.

ಸರಿಯಾಗಿ ನಾಲ್ಕು ಭಾಗಗಳಾಗುವುದಿಲ್ಲವಾಗಿ, ಭಾಮಿನಿಯಲ್ಲಿ ಅನುಸರಿಸಿರುವ ಕ್ರಮವನ್ನು (೩|೪|೩|೪) ನೆನಸಿ, ೪|೫|೪|೫ ಮಾತ್ರೆಗಳನ್ನಾಗಿ ಏರ್ಪಡಿಸಿದೆ. ಇತರ ಎಲ್ಲ ಷಟ್ಪದಿಗಳಲ್ಲಿಯೂ ಇರುವಂತೆ ಇದರಲ್ಲಿಯೂ ದೊಡ್ಡ ಚರಣಕ್ಕೆ ಸಣ್ಣ ಚರಣದ ಒಂದೂವರೆಯಷ್ಟು ಗಣಗಳೂ ಕೊನೆಗೆ ಒಂದು ಗುರುವೂ ಇರುವವು. ಷಟ್ಪದಿಗಳ ಉಳಿದ ಸಾಮಾನ್ಯ ನಿಯಮಗಳೆಲ್ಲವೂ ಇದಕ್ಕೂ ಹತ್ತುವ ವೆಂದು ಹೇಳಬೇಕಾಗಿಲ್ಲ.

ಈ ಕಲ್ಪನೆಯು ಸರಿಯಾಗಿ ಹೊಳೆದು ವಿಚಾರ ಮಾಡುವುದಕ್ಕೆ ಅನುಕೂಲ ವಾಗಬೇಕೆಂದು ಈ ಷಟ್ಪದಿಗಳ ಮಾತ್ರಾ ವಿವರವನ್ನು ಕೆಳಗೆ ಕೊಟ್ಟಿದೆ. ಇದನ್ನು ಸರ್ವರೂ ಪರ್ಯಾಲೋಚಿಸಿ ವಿಮರ್ಶೆಯೊಡನೆ ನಿರ್ಧರಿಸಬೇಕಾಗಿ ಬೇಡುತ್ತೇನೆ.

ಷಟ್ಪದೀ ಶ್ರೇಣಿಯ ಮಾತ್ರಾ ವಿವರ

| ಕ್ರಮಾಂಕ | ಹೆಸರು | ಮಾತ್ರೆಗಳು | |
|---|---|---|---|
| | | ಕಿರಿಯಡಿಗೆ | ಹಿರಿಯಡಿಗೆ |
| ೧ | ಶರ | ೮ | ೧೪ |
| ೨ | ಕುಸುಮ | ೧೦ | ೧೭ |
| ೩ | ಭೋಗ | ೧೨ | ೨೦ |
| ೪ | ಭಾಮಿನಿ | ೧೪ | ೨೩ |
| ೫ | ಪರಿವರ್ಧಿನಿ | ೧೬ | ೨೬ |
| ೬ | ಪ್ರೌಢ | ೧೮ | ೨೯ |
| ೭ | ವಾರ್ಧಕ | ೨೦ | ೩೨ |

ಪ್ರೌಢ ಷಟ್ಪದಿಯ ಪ್ರಸ್ತಾರ

ಪೂರ್ವಾರ್ಧ ೪|೫|೪|೫
೪|೫|೪|೫
೪|೫|೪|೫|೪|೫ ಒಂದು ಗುರು

ಉತ್ತರಾರ್ಧವೂ ಇದರಂತೆಯೇ.

**ಹಟ್ಟೀದ ಚನ್ನಪ್ಪನವರ ಮಗ ಬಸವಪ್ಪ.**



# *ಮುಂಬಯಿ ವಿಶ್ವವಿದ್ಯಾಲಯದಲ್ಲಿ ದೇಶಭಾಷೆಗಳ ಸ್ಥಾನ

ಹಿಂದೂಸ್ಥಾನದ ರಾಜ್ಯಭಾರವನ್ನು ಈಸ್ಟ್ ಇಂಡಿಯಾ ಕಂಪೆನಿಯವರು ವಹಿಸಿದ ಮೇಲೆ, ಅವರು ಎಷ್ಟೋ ವರ್ಷಗಳ ವರೆಗೆ ಹಿಂದೂಸ್ಥಾನದ ಜನರಿಗೆ ಶಿಕ್ಷಣವನ್ನು ಕೊಡುವ ಜವಾಬದಾರಿಯನ್ನೇ ಒಪ್ಪಿಕೊಂಡಿರಲಿಲ್ಲ. ಆದರೆ, ೧೮೧೩ನೆಯ ಇಸವಿಯ 'ಇಂಡಿಯಾ ಆಕ್ಟಿ'ನಿಂದ ಈ ದೇಶದ ಜನರ ಶಿಕ್ಷಣದ ಸಲುವಾಗಿ ಪ್ರತಿ ವರ್ಷ ಒಂದು ಲಕ್ಷ ರೂಪಾಯಿಗಳನ್ನಾದರೂ ಕನಿಷ್ಠ ಪಕ್ಷಕ್ಕೆ ಈಸ್ಟ್ ಇಂಡಿಯಾ ಕಂಪೆನಿಯವರು ಖರ್ಚುಮಾಡತಕ್ಕದ್ದೆಂದು ಗೊತ್ತಾಯಿತು. ಇದರಂತೆ, ಕಂಪೆನಿ ಸರಕಾರದವರು ಸ್ಥಳೀಯ ಜನರು ನಡೆಯಿಸುತ್ತಿದ್ದ ಸಂಸ್ಕೃತ ಮತ್ತು ಅರ್‍ಯಾಬಿಕ್ ಪಾಠಶಾಲೆಗಳಿಗೆ ಧನ ಸಹಾಯ ಮಾಡಹತ್ತಿದರು. ಮುಂದೆ ೧೮೩೫ರಲ್ಲಿ ಮೆಕಾಲೇ(Macaulay)ಯವರು ಹಿಂದೂಸ್ಥಾನದ ಜನರಿಗೆ ಪಾಶ್ಚಾತ್ಯ ಭೌತಿಕ ಶಾಸ್ತ್ರಗಳ ಮತ್ತು ಇಂಗ್ಲಿಷ್ ಭಾಷೆಯ ಶಿಕ್ಷಣವನ್ನು ಇಂಗ್ಲಿಷ್ ಭಾಷೆಯ ದ್ವಾರಾ ಕೊಡಬೇಕೆಂದು ತಮ್ಮ ಮತವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದರು. ಈ ತತ್ತ್ವವನ್ನು ಮಾನ್ಯಮಾಡಿ ಹಿಂದೂಸ್ಥಾನ ಸರಕಾರದವರು ಇಂಗ್ಲಿಷ್ ಶಿಕ್ಷಣವನ್ನು ಅದೇ ವರ್ಷದಿಂದ ಕೊಡಲಾರಂಭಿಸಿದರು. ಅವರು ತಮ್ಮ ಮರು ವರುಷದ ವರದಿಯಲ್ಲಿ ದೇಶಭಾಷೆಗಳ ಬಗ್ಗೆ ಕೆಳಗಿನ ಪ್ರಕಾರ ಉಲ್ಲೇಖಿಸಿರುವರು:—

"ದೇಶಭಾಷೆಗಳ ಬೆಳೆವಣಿಗೆಗೆ ಉತ್ತೇಜನ ಕೊಡುವ ಮಹತ್ತ್ವವನ್ನು ನಾವು ಪೂರ ಅರಿತಿರುವೆವು. ದೇಶಭಾಷೆಗಳ ಅಭಿವೃದ್ಧಿಯೇ ನಮ್ಮ ಅಂತಿಮ ಧ್ಯೇಯವು. ಅದನ್ನು ಈಡೇರಿಸುವುದಕ್ಕಾಗಿಯೇ ನಾವು ಎಲ್ಲ ರೀತಿಯಿಂದಲೂ ಪ್ರಯತ್ನ ಮಾಡುವೆವು."

ಈ ತಮ್ಮ ಉದ್ದೇಶವನ್ನು ಕಂಪೆನಿಯ ಡೈರೆಕ್ಟರರು ೧೮೫೪ರಲ್ಲಿ ಹಿಂದೂಸ್ಥಾನದ ಸರಕಾರಕ್ಕೆ ಕಳುಹಿಸಿದ ತಮ್ಮ 'ಡಿಸ್ಪ್ಯಾಚ್' (Despatch)ದಲ್ಲಿ ಮತ್ತೊಮ್ಮೆ ಸ್ಪಷ್ಟವಾಗಿ ಹೇಳಿರುವರು. ಈ ಡಿಸ್ಪ್ಯಾಚದಲ್ಲಿ ನಮೂದಿಸಲ್ಪಟ್ಟ ಧೋರಣಕ್ಕನುಸರಿಸಿ ಹಿಂದೂಸ್ಥಾನದಲ್ಲಿ ೧೮೫೭ನೆಯ ಇಸ್ವಿಯಲ್ಲಿ ಅಲ್ಲಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟುವು. ಆ ಕಾರಣ ಈ ಡಿಸ್ಪ್ಯಾಚದಲ್ಲಿ ದೇಶಭಾಷೆಗಳ ಬಗ್ಗೆ ವ್ಯಕ್ತವಾದ ಸರಕಾರದ ಧೋರಣವನ್ನು ಲಕ್ಷ್ಯದಲ್ಲಿಡುವುದು ಅವಶ್ಯವಾಗಿದೆ. ಈ ವಿಷಯದ ಬಗ್ಗೆ ಅವರು ಹೇಳುವುದೇನೆಂದರೆ:—

"ಹಿಂದೂಸ್ಥಾನದ ದೇಶಭಾಷೆಗಳನ್ನು ನಿರ್ನಾಮ ಮಾಡಿ ಅವುಗಳ ಸ್ಥಳದಲ್ಲಿ ಇಂಗ್ಲಿಷನ್ನು ಬಳಕೆಯಲ್ಲಿ ತರಬೇಕೆಂಬ ಮನೀಷೆಯು ನಮ್ಮದಲ್ಲ. ಸಾಮಾನ್ಯ ಜನರಿಗೆ ತಿಳಿಯುವ ದೇಶಭಾಷೆಗಳ ಉಪಯೋಗ ಮತ್ತು ಮಹತ್ತ್ವವನ್ನು

* ಬೆಳಗಾಂವಿಯಲ್ಲಿ ನಡೆದ ೧೫ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಬಂದುದು.

ನಾವು ಕಂಡುಹಿಡಿದಿರುವೆವು. ಅದಕ್ಕಾಗಿಯೇ, ಸರಕಾರ ದರಬಾರುಗಳಲ್ಲಿಯೂ ಕೋರ್ಟು ಕಚೇರಿಗಳಲ್ಲಿಯೂ ಪರ್ಸಿಯನ್ ಭಾಷೆಯನ್ನು ಬಿಟ್ಟು ದೇಶಭಾಷೆಗಳನ್ನೇ ಬಳಕೆಯಲ್ಲಿ ತಂದಿದ್ದೇವೆ. ಆ ಕಾರಣ, ಎಲ್ಲ ಕಡೆಯಲ್ಲಿಯೂ ಸಾಮಾನ್ಯವಾಗಿ ಉಪಯೋಗಿಸಲ್ಪಡುವ ಶಿಕ್ಷಣ ಕ್ರಮದಲ್ಲಿ ದೇಶಭಾಷೆಗಳ ಅಭ್ಯಾಸಕ್ಕೆ ಅವಕಾಶವನ್ನೂ ಉತ್ತೇಜನವನ್ನೂ ಕೊಡುವುದು ನಮ್ಮ ಮುಖ್ಯ ಕರ್ತವ್ಯವಾಗಿದೆ. ಎಲ್ಲ ಜನರಿಗೂ ಇಂಗ್ಲಿಷು ಕಲಿಯುವುದು ಶಕ್ಯವಿಲ್ಲ. ಇಂಗ್ಲಿಷು ಮತ್ತು ಉಳಿದ ಪಾಶ್ಚಾತ್ಯ ಭಾಷೆಗಳ ವಾಙ್ಮಯದ ಪರಿಚಯವನ್ನು ದೇಶಭಾಷೆಗಳ ಮುಖಾಂತರವಾಗಿಯೇ ಸಾಮಾನ್ಯ ಜನರಿಗೆ ಮಾಡಿಕೊಡುವುದು ನಮ್ಮ ಕರ್ತವ್ಯವಿದೆ. ......ದೇಶಭಾಷೆಗಳ ಅಭ್ಯಾಸವನ್ನು ಪುರಸ್ಕರಿಸುವ ಮಹತ್ತ್ವವನ್ನು ಜನರು ಮನಗಂಡ ಮೇಲೆ, ಅವುಗಳ ವಾಙ್ಮಯದ ಬೆಳೆವಣಿಗೆಯು ಭರದಿಂದ ಸಾಗುವುದು. ಎಷ್ಟೋ ಜನರು ಇಂಗ್ಲಿಷ್ ಸಾಹಿತ್ಯದೊಳಗಿನ ಉತ್ತಮೋತ್ತಮ ಪುಸ್ತಕಗಳನ್ನು ಭಾಷಾಂತರ ಮಾಡಬಹುದು. ಇನ್ನು ಕೆಲವರು ಪಾಶ್ಚಾತ್ಯ ಶಿಕ್ಷಣವನ್ನು ಪಡೆದು ಸುಸಂಸ್ಕೃತರಾಗಿ ಸ್ವತಃ ಪುಸ್ತಕಗಳನ್ನು ಬರೆಯಬಹುದು. ಈ ಪ್ರಕಾರ ಇಂಗ್ಲಿಷ ಮತ್ತು ದೇಶಭಾಷೆಗಳ ಮುಖಾಂತರ ಪಾಶ್ಚಾತ್ಯ ಜ್ಞಾನವು ದೇಶದಲ್ಲೆಲ್ಲ ಹಬ್ಬುವುದು. ಆದಕಾರಣ ಎಲ್ಲ ಶಾಲೆಗಳಲ್ಲಿ ಇಂಗ್ಲಿಷ ಭಾಷೆಯೊಡನೆ ದೇಶಭಾಷೆಗಳನ್ನೂ ಕಲಿಸುವುದು ಅವಶ್ಯವಿದೆ.''

ಈ ಧೋರಣವನ್ನು ಇಲ್ಲಿಯ ವಿಶ್ವವಿದ್ಯಾಲಯಗಳು ಅನುಸರಿಸಿದ್ದರೆ ಇಂದಿಗೆ ದೇಶಭಾಷೆಗಳಲ್ಲಿ ಕೆಲವಾದರೂ ವಾಙ್ಮಯದಲ್ಲಿ ಆಂಗ್ಲಭಾಷೆಯನ್ನು ಸರಿಗಟ್ಟುತ್ತಿದ್ದುವೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಆದರೆ, ಪ್ರೌಢ ಜ್ಞಾನವು ದೇಶಭಾಷೆಗಳ ಮುಖಾಂತರವಾಗಿ ದೊರೆಯದೆಂದು ಯೂನಿವರ್ಸಿಟಿಗಳು ಅಭಿಪ್ರಾಯಪಟ್ಟುವು. ೧೮೫೭ರಲ್ಲಿ ಮುಂಬಯಿ ಯೂನಿವರ್ಸಿಟಿಯ ಸ್ಥಾಪನೆಯಾಯಿತು. ೧೮೫೯-೬೦ರಲ್ಲಿ ಮೊದಲನೆಯ ಸಾರಿ ಮೆಟ್ರಿಕ್ಯುಲೇಷನ್ (Matriculation) ಪರೀಕ್ಷೆಯಾಯಿತು. ಮೊದಲು ಮೊದಲು ಯೂನಿವರ್ಸಿಟಿಯ ಅಭ್ಯಾಸ ಕ್ರಮದಲ್ಲಿ ದೇಶಭಾಷೆಗಳ ಪ್ರವೇಶವಿದ್ದಿತು. ೧೮೮೦ರ ವರೆಗೆ ಮೆಟ್ರಿಕ್ ಮತ್ತು ಕಾಲೇಜು ತರಗತಿಗಳಲ್ಲಿ ದೇಶಭಾಷೆಗಳು ಐಚ್ಛಿಕ ವಿಷಯಗಳಾಗಿದ್ದುವು. ಮುಂದೆ, ೧೮೮೦ರಿಂದ ಕಾಲೇಜಿನ ಅಭ್ಯಾಸ ಕ್ರಮದಲ್ಲಿ ದೇಶಭಾಷೆಗಳನ್ನು ಕಿತ್ತು ಹಾಕಿದರು. ೧೯೦೭ರಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ದೇಶಭಾಷೆಗಳು ಸಂಸ್ಕೃತದೊಡನೆ ಆವಶ್ಯಕ ವಿಷಯಗಳಾದುವು. ಅದೇ ಸುಮಾರಿಗೆ ಎಮ್.ಎ. ಪರೀಕ್ಷೆಯ ಅಭ್ಯಾಸದಲ್ಲಿ ದೇಶಭಾಷೆಗಳು ಐಚ್ಛಿಕ ವಿಷಯಗಳಾಗಿ ಸೇರಿಸಲ್ಪಟ್ಟುವು. ಆದರೆ, ಕಾಲೇಜುಗಳಲ್ಲಿ ದೇಶಭಾಷೆಗಳ ಅಭ್ಯಾಸವು ಇಲ್ಲದುದರಿಂದಲೂ, ಎಮ್.ಎ. ಅಭ್ಯಾಸವು ಕಠಿಣವಿದ್ದುದರಿಂದಲೂ ಅದರ ಉಪಯೋಗವನ್ನು ವಿದ್ಯಾರ್ಥಿಗಳು ವಿಶೇಷವಾಗಿ ಮಾಡಿಕೊಳ್ಳಲಿಲ್ಲ. ಮುಂದೆ, ದೇಶಭಾಷೆಗಳ ದುರ್ದೈವದಿಂದಲೋ ಏನೋ, ೧೯೧೩ರಿಂದ ದೇಶಭಾಷೆಗಳ ಪರೀಕ್ಷೆಯನ್ನು ಯೂನಿವರ್ಸಿಟಿಯವರು

ಮೆಟ್ರಿಕ್ಕಿನಲ್ಲಿ ತೆಗೆದುಕೊಳ್ಳಬಾರದೆಂದು ನಿರ್ಣಯವಾಯಿತು. ಆ ಕೆಲಸವು ಹೈಸ್ಕೂಲುಗಳ ಹೆಡ್‌ಮಾಸ್ತರರಿಗೆ ಒಪ್ಪಿಸಲ್ಪಟ್ಟಿತು. ಅದರಿಂದ ಆಗಬೇಕಾದುದೇ ಆಯಿತು: ದೇಶಭಾಷೆಗಳ ಅಭ್ಯಾಸದ ಕಡೆಗೆ ಎಲ್ಲ ಶಾಲೆಯವರೂ ದುರ್ಲಕ್ಷ್ಯ ಮಾಡಿದರು. ಈಗ್ಗೆ ಕಳೆದ ಕೆಲವು ವರ್ಷಗಳಿಂದ ದೇಶಭಾಷೆಗಳು ಮತ್ತೆ ಮೆಟ್ರಿಕ್ ಪರೀಕ್ಷೆಗೆ ಐಚ್ಛಿಕ ವಿಷಯಗಳಾಗಿ ಮಾಡಲ್ಪಟ್ಟಿರುವುವು. ಆದರೆ, ಕಾಲೇಜು ಗಳಲ್ಲಿ ಸಂಸ್ಕೃತವು ಆವಶ್ಯಕವಿರುವುದರಿಂದ ಕಾಲೇಜುಗಳಿಗೆ ಹೋಗಬಯಸುವ ಎಲ್ಲ ವಿದ್ಯಾರ್ಥಿಗಳೂ ಮೆಟ್ರಿಕ್ ಪರೀಕ್ಷೆಗೆ ಸಂಸ್ಕೃತ ಭಾಷೆಯನ್ನೇ ತೆಗೆದು ಕೊಳ್ಳುವರು. ೧೯೧೧ರಲ್ಲಿ, ಬಿ.ಎ. ಪರೀಕ್ಷೆಯ 'ಪಾಸ್' ಭಾಗದಲ್ಲಿ ದೇಶಭಾಷೆ ಗಳು ಐಚ್ಛಿಕ ವಿಷಯಗಳಾಗಿ ಸೇರಿಸಲ್ಪಟ್ಟುವು. ಕಾಲೇಜಿನ ಮೊದಲಿನ ಎರಡು ವರ್ಷಗಳಲ್ಲಿ ವಿದ್ಯಾರ್ಥಿಗಳು ಸಂಸ್ಕೃತವನ್ನು ಅವಶ್ಯವಾಗಿ ಕಲಿಯಬೇಕಾದುದ ರಿಂದ, ಮೆಟ್ರಿಕ್ ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳಲ್ಲಿ ದೇಶಭಾಷೆಗಳನ್ನು ಅಭ್ಯಸಿಸುವ ವಿದ್ಯಾರ್ಥಿಗಳ ಸಂಖ್ಯೆಯು, ವಿಶೇಷತಃ ಕನ್ನಡವನ್ನು ಕಲಿಯುವಂಥ ವಿದ್ಯಾರ್ಥಿಗಳ ಸಂಖ್ಯೆಯು, ಸಾಕಾದಷ್ಟು ಬೆಳೆಯಲಿಲ್ಲ.

ಈಗ್ಗೆ ಮುಂಬಯಿ ವಿಶ್ವವಿದ್ಯಾಲಯದಲ್ಲಿ ದೇಶಭಾಷೆಗಳ ಸ್ಥಿತಿಯು ಕೆಳಗಿನ ಪ್ರಕಾರದಿಂದಿರುತ್ತದೆ:—

(೧) ಮೆಟ್ರಿಕ್ ಪರೀಕ್ಷೆಯಲ್ಲಿ ಇವು ಐಚ್ಛಿಕ ವಿಷಯಗಳಾಗಿರುವುವು. ಹೈಸ್ಕೂಲಿನ ಮೇಲಿನ ಇಯತ್ತೆಗಳಲ್ಲಿ ಎಲ್ಲ ವಿಷಯಗಳೂ ಇಂಗ್ಲಿಷ್ ಭಾಷೆಯಲ್ಲಿ ಕಲಿಸಲ್ಪಡುವುವು. ಆದರೂ, ಮೆಟ್ರಿಕ್ ಪರೀಕ್ಷೆಯ ಇತಿಹಾಸ ಮತ್ತು ಸಂಸ್ಕೃತ ಪ್ರಶ್ನ ಪತ್ರಗಳ ಉತ್ತರವನ್ನು ಇಂಗ್ಲಿಷಿನಲ್ಲಿಯಾಗಲಿ, ದೇಶಭಾಷೆಗಳಲ್ಲಿಯಾಗಲಿ ಬರೆಯಬಹುದು.

(೨) ಯೂನಿವರ್ಸಿಟಿಯ ಮೊದಲಿನ ಎರಡು ವರ್ಷಗಳ ಅಭ್ಯಾಸ ಕ್ರಮದಲ್ಲಿ ದೇಶಭಾಷೆಗಳ ಪ್ರವೇಶವಿಲ್ಲ.

(೩) ಬಿ.ಎ. ಪರೀಕ್ಷೆಯ 'ಪಾಸ್' ಭಾಗದಲ್ಲಿ ಮಾತ್ರ ದೇಶಭಾಷೆಗಳು ಐಚ್ಛಿಕ ವಿಷಯಗಳಾಗಿವೆ.

(೪) ಎಮ್.ಎ. ಪರೀಕ್ಷೆಯಲ್ಲಿ ಇಷ್ಟವಾದ ಬದಲಾವಣೆಯುಂಟಾಗಿದೆ: ಈ ಪರೀಕ್ಷೆಗೆ ಯಾವುವಾದರೂ ಎರಡು ಭಾಷೆಗಳನ್ನು ತೆಗೆದುಕೊಳ್ಳಬಹುದು. ದೇಶಭಾಷೆಯನ್ನೇ ಮುಖ್ಯ ಭಾಷೆಯಾಗಿ ತೆಗೆದುಕೊಂಡಲ್ಲಿ ಅದರಲ್ಲಿ ಆರು ಪ್ರಶ್ನ ಪತ್ರಗಳುಂಟು. ಈ ಪ್ರಕಾರ ಆ ವಿಷಯದ ಅಭ್ಯಾಸವು ಸಾಂಗೋಪಾಂಗವಾಗಿ ಆಗುವುದು.

ಮೇಲ್ಕಂಡ ವಿವೇಚನೆಯ ಮೇಲಿಂದ, ದೇಶಭಾಷೆಗಳ ಅಭ್ಯಾಸದ ಬಗ್ಗೆ ಮುಂಬಯಿ ವಿಶ್ವವಿದ್ಯಾಲಯದ ಯಾವ ವಿಶಿಷ್ಟವಾದ ಧೋರಣವೂ ಕಂಡುಬರುವು ದಿಲ್ಲ. ಯೋಗ್ಯವಾದ ತಳಹದಿಯನ್ನು ಹಾಕದೆ ಮೇಲೆ ಸುಂದರವಾದ ಕಟ್ಟಡವನ್ನು

ಕಟ್ಟಿಸಲೆಳಸುವುದು ಎಷ್ಟು ಹಾಸ್ಯಾಸ್ಪದವೋ, ಅಷ್ಟೇ ನಮ್ಮ ಯೂನಿವರ್ಸಿಟಿಯು ದೇಶಭಾಷೆಗಳನ್ನು ವೃದ್ಧಿಗೊಳಿಸುವುದಕ್ಕಾಗಿ ಕೈಕೊಂಡ ಪ್ರಯತ್ನವು ಹಾಸ್ಯಾಸ್ಪದವಿರುತ್ತದೆ. ಹೈಸ್ಕೂಲುಗಳಲ್ಲಿ ಎಲ್ಲ ವಿಷಯಗಳನ್ನೂ ಕಲಿಸುವುದು ಇಂಗ್ಲಿಷಿನಲ್ಲಿ; ದೇಶಭಾಷೆಗಳ ಅಭ್ಯಾಸವು ಐಚ್ಛಿಕ. ಕಾಲೇಜಿನ ಮೊದಲಿನ ಎರಡು ವರ್ಷಗಳಲ್ಲಿ ದೇಶಭಾಷೆಯ ಅಭ್ಯಾಸದ ಲೋಪ. ಇಂಥ ಪರಿಸ್ಥಿತಿಯಲ್ಲಿ ಬಿ.ಎ. ಮತ್ತು ಎಮ್.ಎ.—ಇವುಗಳ ಅಭ್ಯಾಸ ರಚನೆಯು ಎಷ್ಟು ಸುಂದರವಾಗಿದ್ದರೂ ಅದರಿಂದ ತಾದೃಶ ಪ್ರಯೋಜನವಿಲ್ಲ. ಪ್ರಾಥಮಿಕ ಶಾಲೆಯಲ್ಲಿ ದೇಶಭಾಷೆಯ ಅಭ್ಯಾಸವು ಮುಗಿದಮೇಲೆ, ಆ ವಿಷಯದ ಕಡೆಗೆ ತಿರುಗಿ ನೋಡುವುದು ಬಿ.ಎ. ಪರೀಕ್ಷೆಯ ಕಾಲಕ್ಕೇ. ಆದುದರಿಂದ ವಿದ್ಯಾರ್ಥಿಗಳಿಗೆ ಬಿ.ಎ. ಅಭ್ಯಾಸವು ಬಿಗಿ ಎನಿಸಿದರೆ, ಅದು ಅವರ ತಪ್ಪಲ್ಲ; ಅದು ನಮ್ಮ ಶಿಕ್ಷಣ ಕ್ರಮದ ತಪ್ಪು. ಆದ ಕಾರಣ ದೇಶಭಾಷೆಗಳ ಬಗ್ಗೆ ಯೂನಿವರ್ಸಿಟಿಯ ಧೋರಣವು ತರ್ಕಶುದ್ಧವಾಗಿಲ್ಲ. ದೇಶಭಾಷೆಗಳ ಪುರಸ್ಕರ್ತರ ಚಳವಳಿಯ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳು ಮನಸ್ಸಿಲ್ಲದೆ ಆ ವಿಷಯಗಳ ಅಭ್ಯಾಸಕ್ಕೆ ಸ್ವಲ್ಪ ಅವಕಾಶವನ್ನು ಕಲ್ಪಿಸಿರುವರೇ ಹೊರತು ದೇಶಭಾಷೆಗಳ ವಾಙ್ಮಯದ ಅಭಿವೃದ್ಧಿಯಾಗಬೇಕೆಂದು ಹೇತುಪೂರ್ವಕವಾಗಿ ಮಾಡಿದ ಪ್ರಯತ್ನವು ಇದು ಅಲ್ಲ. ಬಿ.ಎ. ಮತ್ತು ಎಮ್.ಎ. ಪರೀಕ್ಷೆಗಳಲ್ಲಿ ದೇಶಭಾಷೆಗಳನ್ನು ತೆಗೆದುಕೊಳ್ಳುವ ವಿದ್ಯಾರ್ಥಿಗಳ ಸಂಖ್ಯೆಯು ವರ್ಷ ವರ್ಷಕ್ಕೆ ಹೆಚ್ಚಾಗದೆ ಕಡಿಮೆಯಾಗಹತ್ತಿದೆ. ಈ ವಿಧಾನದ ಸತ್ಯತೆಯನ್ನು ಕೆಳಗಿನ ಅಂಕಗಳಿಂದ ಎಲ್ಲರೂ ಕಂಡುಹಿಡಿಯಬಹುದು :—

**ಬಿ.ಎ.**

| ಭಾಷೆಗಳು | | ೧೯೨೬ | ೧೯೨೭ | ೧೯೨೮ | ೧೯೨೯ |
|---|---|---|---|---|---|
| ಗುಜರಾಥಿ | .. | ೫೧ | ೩೦ | ೩೩ | ೪೦ |
| ಮರಾಠಿ | .. | ೧೨೩ | ೧೦೫ | ೯೯ | ೭೫ |
| ಕನ್ನಡ | .. | ೨೫ | ೨೧ | ೧೮ | ೧೪ |

**ಎಂ.ಎ.**

| ಭಾಷೆಗಳು | | ೧೯೨೬ | ೧೯೨೭ | ೧೯೨೮ | ೧೯೨೯ |
|---|---|---|---|---|---|
| ಗುಜರಾಥಿ | .. | ೮ | ೭ | ೮ | ೫ |
| ಮರಾಠಿ | .. | ೧೯ | ೧೯ | ೨೨ | ೩೬ |
| ಕನ್ನಡ | .. | ೬ | ೧ | ೨ | ೩ |

ಆದರೆ, ಮೆಟ್ರಿಕ್ ಪರೀಕ್ಷೆಯಲ್ಲಿ ಮಾತ್ರ ದೇಶಭಾಷೆಗಳನ್ನು ತೆಗೆದುಕೊಳ್ಳುವವರ ಸಂಖ್ಯೆಯು ಬೆಳೆಯುತ್ತಿದೆ. ಏಕೆಂದರೆ, ಸೆಟಲವಾಡ ಕಮಿಟಿಯ ವರದಿಯು ಹೊರಬಿದ್ದ ಕೂಡಲೆ ಕಾಲೇಜುಗಳಲ್ಲಿ ಸಹ ದೇಶಭಾಷೆಗಳ ಪ್ರವೇಶವು ಆಗುವುದೆಂದು ಬಗೆದು ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ದೇಶಭಾಷೆಗಳನ್ನು ತೆಗೆದುಕೊಳ್ಳಹತ್ತಿದ್ದಾರೆ. ಒಂದು ವೇಳೆ ಆ ಕಮಿಟಿಯ ಸೂಚನೆಯು ಸಲುವಳಿಯಲ್ಲಿ ಬಾರದೆಹೋದರೆ ಈ ವಿದ್ಯಾರ್ಥಿಗಳ ಸಂಖ್ಯೆಯು ಕಡಿಮೆಯಾಗುವುದು ಖಂಡಿತ.

## ಮೆಟ್ರಿಕ್

| ಭಾಷೆಗಳು | | ೧೯೨೬ | ೧೯೨೭ | ೧೯೨೮ |
|---|---|---|---|---|
| ಮರಾಠಿ | .. | ೧,೧೬೩ | ೧,೪೯೫ | ೨,೦೧೩ |
| ಗುಜರಾಥಿ | .. | ೯೯೩ | ೧,೬೫೪ | ೨,೨೫೧ |
| ಕನ್ನಡ | .. | ೩೪೧ | ೪೯೫ | ೫೭೯ |

ಇದರಂತೆ, ಮೆಟ್ರಿಕ್ ಪರೀಕ್ಷೆಯಲ್ಲಿ ಸಂಸ್ಕೃತ ಮತ್ತು ಇತಿಹಾಸ ವಿಷಯಗಳ ಪ್ರಶ್ನ ಪತ್ರಗಳಿಗೆ ದೇಶಭಾಷೆಗಳಲ್ಲಿ ಉತ್ತರವನ್ನು ಬರೆಯಲಿಕ್ಕೆ ಅವಕಾಶವನ್ನು ಕೊಟ್ಟರೂ, ಅದರ ಉಪಯೋಗವನ್ನು ವಿದ್ಯಾರ್ಥಿಗಳು, ವಿಶೇಷತಃ ಕರ್ಣಾಟಕದ ವಿದ್ಯಾರ್ಥಿಗಳು, ಮಾಡಿಕೊಳ್ಳುವಂತೆ ಕಾಣುವುದಿಲ್ಲ. ಇದು ಕೆಳಗೆ ಕೊಟ್ಟ ಅಂಕಗಳಿಂದ ಸ್ಪಷ್ಟವಾಗುವುದು:—

## ಸಂಸ್ಕೃತ

| ಭಾಷೆಗಳು | | ೧೯೨೬ | ೧೯೨೭ | ೧೯೨೮ |
|---|---|---|---|---|
| ಮರಾಠಿ | .. | ೮೫೧ | ೧,೧೮೧ | ೧,೩೫೮ |
| ಗುಜರಾಥಿ | .. | ೨೧೫ | ೩೪೯ | ೪೩೧ |
| ಕನ್ನಡ | .. | ೩೦ | ೫೦ | ೬೯ |

## ಇತಿಹಾಸ

| ಭಾಷೆಗಳು | | ೧೯೨೬ | ೧೯೨೭ | ೧೯೨೮ |
|---|---|---|---|---|
| ಮರಾಠಿ | .. | ೧,೨೧೫ | ೧,೯೦೮ | ೨,೭೭೬ |
| ಗುಜರಾಥಿ | .. | ೩೧೩ | ೯೫೫ | ೧,೬೯೯ |
| ಕನ್ನಡ | .. | ೪೭ | ೧೧೫ | ೧೭೨ |

ಇದರ ಕಾರಣವೇನೆಂದರೆ, ಮೆಟ್ರಿಕ್ ಪರೀಕ್ಷೆಯ ಎಲ್ಲ ವಿಷಯಗಳೂ ಇಂಗ್ಲಿಷಿನಲ್ಲಿ ಕಲಿಸಲ್ಪಡುವುದರಿಂದಲೂ, ವಿದ್ಯಾರ್ಥಿಗಳು ಆಯಾ ವಿಷಯಗಳನ್ನು ಇಂಗ್ಲಿಷಿನಲ್ಲಿ ಪಾಠಮಾಡುವುದರಿಂದಲೂ, ದೇಶಭಾಷೆಗಳಲ್ಲಿ ಉತ್ತರಕೊಡುವಷ್ಟು ದೇಶಭಾಷೆಗಳ ಜ್ಞಾನವು ಅವರಲ್ಲಿ ಇರದೆ ಇರುವುದರಿಂದಲೂ, ಇಂಗ್ಲಿಷಿನಲ್ಲಿಯೇ ಉತ್ತರ ಬರೆಯುವುದು ಅವರಿಗೆ ಹಗುರವಾಗಿ ತೋರಿದರೆ ಆಶ್ಚರ್ಯವಿಲ್ಲ. ಈ ನನ್ನ ವಿಧಾನವು ಕರ್ಣಾಟಕ ವಿದ್ಯಾರ್ಥಿಗಳಿಗೆ ಮಾತ್ರ ಹತ್ತುವುದೆಂದು ಕಷ್ಟದಿಂದ ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ, ಮರಾಠಿ ಮತ್ತು ಗುಜರಾಥಿಯಲ್ಲಿ ಉತ್ತರ ಬರೆಯುವ ವಿದ್ಯಾರ್ಥಿಗಳ ಸಂಖ್ಯೆಯು ಸಮಾಧಾನಕಾರಕವಿರುತ್ತದೆ. ಅದಕ್ಕೆ ತಕ್ಕ ಕಾರಣವೂ ಇರುತ್ತದೆ; ಮತ್ತು ಅದು ಮಹತ್ತ್ವದ್ದಿರುತ್ತದೆ. ಈಗ್ಗೆ ಕೆಲವು ವರ್ಷಗಳಿಂದ ಮಹಾರಾಷ್ಟ್ರ ಮತ್ತು ಗುಜರಾಥ ಪ್ರಾಂತಗಳಲ್ಲಿ ಈ ವಿಷಯಗಳನ್ನು ದೇಶಭಾಷೆಗಳ ದ್ವಾರಾ ಕಲಿಸುವ ವ್ಯವಸ್ಥಿತ ಪ್ರಯತ್ನವು ನಡೆದಿರುತ್ತದೆ. ಕರ್ಣಾಟಕದಲ್ಲಿ ಆ ಪ್ರಕಾರ ಪ್ರಯತ್ನವು ನಡೆದಂತೆ ಕಾಣುವುದಿಲ್ಲ. ದೇಶಭಾಷೆಗಳ ದ್ವಾರಾ ಶಿಕ್ಷಣವನ್ನು ಕೊಟ್ಟರೆ, ಅದರ ಉಪಯೋಗವಾಗುವುದೆಂದು ಮೇಲೆ ಕೊಟ್ಟ ಅಂಕಗಳೇ ಸಿದ್ಧಮಾಡುತ್ತವೆ.

ಈ ದೋಷಗಳು ಸರಕಾರಕ್ಕೆ ಗೊತ್ತಿಲ್ಲವೆಂತಲ್ಲ. ಈ ದೋಷಗಳನ್ನು ದೂರ ಮಾಡುವುದಕ್ಕಾಗಿ ಹಿಂದೂಸ್ಥಾನ ಸರಕಾರದವರು ಬಂಗಾಳ ಯೂನಿವರ್ಸಿಟಿಯ ಸುಧಾರಣೆಯ ಬಗ್ಗೆ ೧೯೧೭ರಲ್ಲಿ ಸ್ಯಾಡ್ಲರ್ (Sadler) ಕಮಿಟಿಯನ್ನು ನೇಮಿಸಿದರು. ಈ ಕಮಿಟಿಯವರು ಬಂಗಾಳ ಪ್ರಾಂತದ ಎಲ್ಲ ಭಾಗಗಳಲ್ಲಿಯೂ ತಿರುಗಿ, ಯೂನಿವರ್ಸಿಟಿಗಳಿದ್ದ ಉಳಿದ ಕೆಲವು ಪ್ರಾಂತಗಳಲ್ಲಿ ಸಹ ಸಂಚರಿಸಿ, ಬಂಗಾಳ ಯೂನಿವರ್ಸಿಟಿಯಲ್ಲಿ ಆಗಬೇಕಾದ ತಿದ್ದುಪಾಟುಗಳನ್ನು ತಮ್ಮ ವಿಸ್ತೃತವಾದ ವರದಿಯಲ್ಲಿ ನಮೂದಿಸಿದ್ದಾರೆ. ಅವರು ಯೂನಿವರ್ಸಿಟಿಗಳಲ್ಲಿಯ ದೇಶಭಾಷೆಯ ಸ್ಥಾನದ ಬಗ್ಗೆ ಕೆಳಗೆ ಬರೆದಂತೆ ನಿರ್ಣಯವನ್ನು ಕೊಟ್ಟಿರುವರು:—

(೧) ವಿದ್ಯಾರ್ಥಿಗಳು ಬಾಲ್ಯಾವಸ್ಥೆಯಲ್ಲಿದ್ದಾಗ್ಗೆ, ನೆಟ್ಟಗೆ ತಿಳಿಯದ ಇಂಗ್ಲಿಷ್ ಭಾಷೆಯ ಮೂಲಕ ಅವರಿಗೆ ವಿಷಯ ಜ್ಞಾನವನ್ನು ಮಾಡಿಕೊಡುವ ಪದ್ಧತಿಯಿಂದ ಅವರ ಬೌದ್ಧಿಕ ಶಕ್ತಿಯು ಕುಂಠಿತವಾಗುತ್ತದೆ. ಆದರೆ ವಿದ್ಯಾರ್ಥಿಗಳು ಬಹಳ ಶ್ರಮಪಟ್ಟು ಎಲ್ಲ ವಿಷಯಗಳನ್ನೂ ಪಾಠಮಾಡುವುದರಿಂದ, ಮೆಟ್ರಿಕ್ ಪರೀಕ್ಷೆಯಲ್ಲಿ ಈ ದೋಷವು ಬಯಲಿಗೆ ಬರುವುದಿಲ್ಲ. ಆದರೆ ಕಾಲೇಜುಗಳಿಗೆ ವಿದ್ಯಾರ್ಥಿಗಳು ಬಂದ ಕೂಡಲೆ ಈ ದೋಷವು ಎದ್ದುಕಾಣುವುದು.

(೨) ಇಂಗ್ಲಿಷ್ ಮತ್ತು ಗಣಿತ ವಿಷಯಗಳನ್ನುಳಿದು ಮೆಟ್ರಿಕ್ ಪರೀಕ್ಷೆಯ ಎಲ್ಲ ವಿಷಯಗಳನ್ನೂ ದೇಶಭಾಷೆಯಲ್ಲಿಯೇ ಕಲಿಸಬೇಕು. ಆ ಪರೀಕ್ಷೆಯಲ್ಲಿ ಮೇಲೆ ಕಾಣಿಸಿದ ಎರಡು ವಿಷಯಗಳನ್ನು ಬಿಟ್ಟು ಉಳಿದ ವಿಷಯಗಳ ಪ್ರಶ್ನ ಪತ್ರಗಳಿಗೆ ದೇಶಭಾಷೆಯಲ್ಲಿಯಾಗಲಿ ಇಂಗ್ಲಿಷಿನಲ್ಲಿಯಾಗಲಿ ಉತ್ತರ ಬರೆಯಲಿಕ್ಕೆ ಅವಕಾಶಕೊಡಬೇಕು.

(೩) ಯೂನಿವರ್ಸಿಟಿಯಲ್ಲಿ ಮಾತ್ರ, ಸಂಸ್ಕೃತ, ಪಾಲೀ ಮತ್ತು ದೇಶಭಾಷೆಗಳನ್ನು ಬಿಟ್ಟು, ಉಳಿದ ಎಲ್ಲ ವಿಷಯಗಳನ್ನೂ ಇಂಗ್ಲಿಷಿನಲ್ಲಿಯೇ ಕಲಿಸಬೇಕು.

(೪) ಮೆಕಾಲೆ (Macaulay) ಯವರ ಕಾಲದಿಂದ ಹಿಂದೂಸ್ಥಾನ ಸರಕಾರವು ದೇಶಭಾಷೆಗಳ ಬೆಳೆವಣಿಗೆಯ ಮಹತ್ತ್ವ ಮತ್ತು ಅವುಗಳ ಪದ್ಧತಿ, ಶೀಲ ಮತ್ತು ಶಾಸ್ತ್ರಶುದ್ಧವಾದ ಅಭ್ಯಾಸ—ಇವುಗಳ ಕಡೆಗೆ ಜನರ ಲಕ್ಷವನ್ನು ಎಳೆಯುತ್ತಿದ್ದರೂ, ದೇಶಭಾಷೆಗಳ ಅಭ್ಯಾಸದ ಕಡೆಗೆ ಶಾಲೆಗಳಲ್ಲಿ, ಕಾಲೇಜುಗಳಲ್ಲಿ ಮತ್ತು ಯೂನಿವರ್ಸಿಟಿಯಲ್ಲಿ, ಇಂದಿನ ವರೆಗೆ ಯಾರೂ ಸಾಕಾದಷ್ಟು ಲಕ್ಷವನ್ನು ಕೊಟ್ಟಿಲ್ಲ. ಇದರಿಂದ ವಿದ್ಯಾರ್ಥಿಗಳ ವಿಚಾರಗಳ ಸ್ವಾಭಾವಿಕವಾದ ಬೆಳೆವಣಿಗೆಗೆ ಯೋಗ್ಯಾವಕಾಶವು ದೊರೆತಿಲ್ಲ.

(೫) ದೇಶಭಾಷೆಗಳ ಆಳವಾದ ಅಭ್ಯಾಸಕ್ಕೆ ವ್ಯವಸ್ಥಿತ ರೀತಿಯಿಂದ ಉತ್ತೇಜನಕೊಡುವ ಉದ್ದೇಶದಿಂದ, ಆ ವಿಷಯದಲ್ಲಿ ವಿಶಾರದರಾದವರನ್ನು ಪ್ರೊಫೆಸರ್ ಇಲ್ಲವೆ, ರೀಡರನ್ನಾಗಿ ಯೂನಿವರ್ಸಿಟಿಗಳು ನೇಮಿಸಬೇಕು. ದೇಶಭಾಷೆಯ ವಾಙ್ಮಯ ಮತ್ತು ಭಾಷಾ ಶಾಸ್ತ್ರ—ಇವು 'ಪಾಸ್' ಮತ್ತು 'ಆನರ್ಸ್'—ಈ ಎರಡು ಭಾಗಗಳಲ್ಲಿಯೂ ವಿಷಯಗಳಾಗಿರಬೇಕು.

ಈ ಕಮಿಟಿಯ ವರದಿಯು ಮತ್ತು ಸೂಚನೆಗಳು ಬಂಗಾಳ ಪ್ರಾಂತಕ್ಕಷ್ಟೇ ಸಂಬಂಧಿಸಿದ್ದರೂ ಅವು ನಿಜವಾಗಿ ಎಲ್ಲ ಯೂನಿವರ್ಸಿಟಿಗಳಿಗೂ ಉಪಯೋಗವಾಗುವಂಥವಿರುತ್ತವೆ.

ಮೊನ್ನೆ ಮೊನ್ನೆ, ೧೯೨೪ರಲ್ಲಿ ಮುಂಬಯಿ ಸರಕಾರದವರೂ ಒಂದು ಯೂನಿವರ್ಸಿಟಿ ಸುಧಾರಣಾ ಕಮಿಟಿಯನ್ನು, ಕಳೆದ ೧೨ ವರ್ಷಗಳ ವರೆಗೆ ಆ ಯೂನಿವರ್ಸಿಟಿಯ ವೈಸ್-ಚಾನ್ಸೆಲರಾಗಿದ್ದ ಸರ್ ಚಿಮಣಲಾಲ ಸೆಟಲವಾಡರವರ ಅಧ್ಯಕ್ಷತೆಯಲ್ಲಿ ನೇಮಿಸಿದರು. ಈ ಸೆಟಲವಾಡ ಕಮಿಟಿಯವರು ಸ್ಯಾಡ್ಲರ್ (Sadler) ಕಮಿಟಿಯವರ ಸೂಚನೆಗಳಿಗೆ ಸಾಮಾನ್ಯವಾಗಿ ತಮ್ಮ ಒಪ್ಪಿಗೆಯನ್ನು ಕೊಟ್ಟು, ಒಂದು ವಿಷಯದಲ್ಲಿ ಮಾತ್ರ ಆ ಕಮಿಟಿಗಿಂತ ಮುಂದೆ ಹೋಗಿ, ಮುಂಬಯಿ ಇಲಾಖೆಯಲ್ಲಿ ಮಹಾರಾಷ್ಟ್ರ, ಗುಜರಾಥ, ಸಿಂಧ ಮತ್ತು ಕರ್ನಾಟಕ ಭಾಗಗಳಲ್ಲಿ ನಾಲ್ಕು ಬೇರೆ ಬೇರೆ ಯೂನಿವರ್ಸಿಟಿಗಳ ಸ್ಥಾಪನೆಯಾಗಬೇಕೆಂದು ಅಭಿಪ್ರಾಯಪಟ್ಟಿರುವರು. ಈ ಸೆಟಲವಾಡ ಕಮಿಟಿಯ ಅಭಿಪ್ರಾಯದ ಪ್ರಕಾರ ಕೆಳಗಿನ ಸುಧಾರಣೆಗಳನ್ನು ತೀವ್ರವಾಗಿ ಅಮಲಿನಲ್ಲಿ ತರುವುದು ಅವಶ್ಯವಿದೆ:—

(೧) ಹೈಸ್ಕೂಲುಗಳಲ್ಲಿ ಇಂಗ್ಲಿಷ ಭಾಷೆಯನ್ನುಳಿದು ಎಲ್ಲ ವಿಷಯಗಳನ್ನೂ ದೇಶಭಾಷೆಗಳಲ್ಲಿಯೇ ಕಲಿಸಬೇಕು. ಮೆಟ್ರಿಕ್ ಪರೀಕ್ಷೆಯಲ್ಲಿ, ಇಂಗ್ಲಿಷ್ ಪ್ರಶ್ನ ಪತ್ರವನ್ನು ಬಿಟ್ಟು, ಉಳಿದ ಪ್ರಶ್ನ ಪತ್ರಿಕೆಗಳಿಗೆ ದೇಶಭಾಷೆಗಳಲ್ಲಿಯಾದರೂ ವಿದ್ಯಾರ್ಥಿಗಳು ಉತ್ತರ ಕೊಡಬಹುದು.

(೨) ಮೆಟ್ರಿಕ್ ಪರೀಕ್ಷೆಯಲ್ಲಿ ದೇಶಭಾಷೆಗಳು ಆವಶ್ಯಕ ವಿಷಯಗಳಾಗಬೇಕು; ಮತ್ತು ಯೂನಿವರ್ಸಿಟಿಯ ಎಲ್ಲ ಪರೀಕ್ಷೆಗಳಲ್ಲಿ ಇವು ಐಚ್ಛಿಕ ವಿಷಯಗಳಾಗಬೇಕು.

(೩) ಮುಂಬಯಿ ಇಲಾಖೆಯಲ್ಲಿ ಎಲ್ಲಿಯ ವರೆಗೆ ಈಗಿದ್ದ ಒಂದೇ ಯೂನಿವರ್ಸಿಟಿಯಿರುವುದೋ ಅಲ್ಲಿಯ ವರೆಗೆ ಯೂನಿವರ್ಸಿಟಿಯಲ್ಲಿ ದೇಶಭಾಷೆ ಮತ್ತು ಪ್ರಾಚ್ಯ ಭಾಷೆಗಳನ್ನುಳಿದು ಎಲ್ಲ ವಿಷಯಗಳನ್ನೂ ಇಂಗ್ಲಿಷಿನಲ್ಲಿಯೇ ಕಲಿಸಬೇಕು.

(೪) 'ಆನರ್ಸ್' ಭಾಗಕ್ಕೆ ಇಡುವಷ್ಟು ದೇಶಭಾಷೆಗಳ ಯೋಗ್ಯತೆಯಿರುವುದೋ ಇಲ್ಲವೋ ಇದರ ಬಗ್ಗೆ ಯೂನಿವರ್ಸಿಟಿಯವರೇ ವಿಚಾರಿಸಬೇಕು.

(೫) 'ಡಾಕ್ಟರ್ ಆಫ್ ಲಿಟರೇಚರ್' ಪದವಿಗೆ ಓದಬೇಕಾದ ವಿಷಯಗಳಲ್ಲಿ ದೇಶಭಾಷೆಗಳಾದರೂ ಇರಬೇಕು.

(೬) ದೇಶಭಾಷೆಗಳ ಅಭ್ಯಾಸದೊಳಗೆ ಭಾಷಾ ಶಾಸ್ತ್ರವೂ ಮತ್ತು ಭಾಷೆಗಳ ಪರಸ್ಪರ ಸಂಬಂಧದ ಜ್ಞಾನವೂ ಅಡಕವಾಗಬೇಕು.

(೭) ದೇಶಭಾಷೆಗಳ ಮೇಲ್ತರದ ಶಿಕ್ಷಣ ಕೊಡಲಿಕ್ಕೆ ಯೂನಿವರ್ಸಿಟಿಯು ತಿಳಿದವರನ್ನು 'ರೀಡರ'ನ್ನಾಗಿ ನೇಮಿಸಬೇಕು.

ಈ ಎರಡೂ ಕಮಿಟಿಗಳ ಸೂಚನೆಗಳು ಈಗಿದ್ದ ಸ್ಥಿತಿಯಲ್ಲಿ ಇಷ್ಟವಾದ ಸುಧಾರಣೆಯನ್ನು ಸ್ವಲ್ಪ ಮಟ್ಟಿಗೆ ಮಾಡುವಂಥವಾದರೂ ಅವುಗಳ ಮೂಲಭೂತವಾದ ತತ್ತ್ವವು ನನಗೆ ಮಾನ್ಯವಿಲ್ಲ. ಅವರ ಈ ಸೂಚನೆಗಳ ಮೇಲಿಂದ, "ಯೂನಿವರ್ಸಿಟಿಯಲ್ಲಿ ಶಿಕ್ಷಣಹೊಂದಿದ ಜನರಿಗೆ ಇಂಗ್ಲಿಷು ಮುಖ್ಯವಾಗಿ ಬರಲೇಬೇಕು. ಎಲ್ಲ ಶಿಕ್ಷಣವೂ ಇಂಗ್ಲಿಷಿನಲ್ಲಿಯೇ ಆಗಬೇಕು; ಮತ್ತು ಇದಕ್ಕೆ ಅಧೀನವಾಗಿ, ದೇಶಭಾಷೆಗಳ ಜ್ಞಾನವಾದರೂ ಅವರಿಗೆ ತಕ್ಕ ಮಟ್ಟಿಗೆ ಇರಬೇಕು. ಸ್ವತಂತ್ರ ದೇಶಗಳಲ್ಲಿ ಮಾತೃಭಾಷೆಗಳಿಗೆ ಇದ್ದ ಪ್ರಾಧಾನ್ಯವನ್ನು ಈ ದೇಶದಲ್ಲಿಯ ದೇಶಭಾಷೆಗಳಿಗೆ ಕೊಡಲಾಗದು; ಮತ್ತು ಇಂಗ್ಲಿಷ ಭಾಷೆಯ ಪ್ರಭುತ್ವವು ಯಾವಾಗಲೂ ಅಚ್ಚಳಿಯದೆ ಉಳಿಯತಕ್ಕದ್ದು" —ಈ ಪ್ರಕಾರ ಅವರ ಅಭಿಪ್ರಾಯವಿದ್ದಂತೆ ಕಾಣುವುದು. ನಮ್ಮ ಮೇಲೆ ಇಂಗ್ಲಂಡ್ ರಾಜ್ಯವಿರುವುದರಿಂದಲೂ ಇಂಗ್ಲಿಷ ಭಾಷೆಯ ದ್ವಾರಾ ಉಳಿದ ದೇಶಗಳೊಡನೆ ವ್ಯವಹಾರ ಸಾಗಿಸಲಿಕ್ಕೆ ಸುಲಭವಾಗುವುದರಿಂದಲೂ, ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಹೊಂದಿದ ಪ್ರತಿಯೊಬ್ಬ ಮನುಷ್ಯನಿಗೆ ಈಗಿನ ಪರಿಸ್ಥಿತಿಯಲ್ಲಿ ಇಂಗ್ಲಿಷು ಅವಶ್ಯವಾಗಿ ಬರಲೇಬೇಕು. ಇದು ನನಗೆ ಸಮ್ಮತ. ಆದರೆ ಇಂಗ್ಲಿಷ್ ಭಾಷೆಯ ಶಿಕ್ಷಣವು ಎರಡನೆಯ ಭಾಷೆಯ ಶಿಕ್ಷಣವೆಂದೇ ಆಗಬೇಕೇ ಹೊರತು ಅದು ನಮ್ಮ ಶಿಕ್ಷಣ ಕ್ರಮದಲ್ಲಿ ಮುಖ್ಯ ಭಾಷೆ ಎಂದೂ ಆಗಬಾರದು. ನಮ್ಮ ಎಲ್ಲ ಸಾರ್ವಜನಿಕ ವ್ಯವಹಾರಗಳನ್ನೂ ನಮ್ಮ ಎಲ್ಲ ಆಯುಷ್ಯವನ್ನೂ ಆವರಿಸುವಷ್ಟು

ಮಹತ್ತ್ವವನ್ನು ಇಂಗ್ಲಿಷ ಭಾಷೆಗೆ ಕೊಡುವುದು ತೀರ ಅಸ್ವಾಭಾವಿಕವಿರುತ್ತದೆ. ಇಂಗ್ಲಿಷ ನುಡಿಯ ಸಾರ್ವತ್ರಿಕ ಗುಲಾಮಗಿರಿಯಿಂದ ನಾವು ಎಷ್ಟು ತೀವ್ರ ಮುಕ್ತರಾಗುವೆವೋ ಅಷ್ಟು ನಮಗೂ ನಮ್ಮ ದೇಶಕ್ಕೂ ಒಳಿತು. ಆದರೆ ದೇಶ ಭಾಷೆಗಳ ಬೆಳೆವಣಿಗೆ ಇನ್ನೂ ಸಾಕಾದಷ್ಟು ಇಲ್ಲ. ಎಲ್ಲ ವಿಷಯಗಳ ಮೇಲೆ ಅವುಗಳಲ್ಲಿ ಪುಸ್ತಕಗಳಿಲ್ಲ; ಎಲ್ಲ ವಿಷಯಗಳನ್ನೂ ಸ್ಪಷ್ಟವಾಗಿ ತಿಳಿಸಿ ಹೇಳುವಷ್ಟು ಸಾಮರ್ಥ್ಯವು ಕೆಲವು ದೇಶಭಾಷೆಗಳಲ್ಲಿ ಇಲ್ಲ; ಇದನ್ನೆಲ್ಲ ನಾನು ಒಪ್ಪುವೆನು. ಅದರಂತೆ ಯೂನಿವರ್ಸಿಟಿಯಲ್ಲಿ ಆಗತಕ್ಕ ಮಾರ್ಪಾಡುಗಳಾದರೂ ಕ್ರಮೇಣ ಆಗಬೇಕಾಗುವುದು. ಇದನ್ನಾದರೂ ಒಪ್ಪಿಕೊಳ್ಳುವೆನು. ಆದರೂ, ನಮ್ಮ ಧ್ಯೇಯವೇನಿರುವುದೆಂಬುದನ್ನು ನಾವು ಮರೆಯಕೂಡದು. ನಾವು ಕೈಕೊಳ್ಳುವ ಉಪಾಯಗಳು ಆ ಧ್ಯೇಯದ ಕಡೆಗೆ ನಮ್ಮನ್ನು ಒಯ್ಯಲಿಕ್ಕೆ ಸಮರ್ಥವಾಗಿರಬೇಕು. ಈ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಇಂಗ್ಲಂಡಿನಲ್ಲಿ ಇಂಗ್ಲಿಷಿಗೆ ಯಾವ ಮಹತ್ತ್ವವಿದೆಯೋ, ಜಪಾನಿನಲ್ಲಿ ಜಪಾನ ಭಾಷೆಗೆ ಯಾವ ಮಹತ್ತ್ವವಿದೆಯೋ, ಅದರಂತೆ ಉಳಿದ ಸ್ವತಂತ್ರ ದೇಶಗಳಲ್ಲಿ ಆಯಾ ದೇಶ ಭಾಷೆಗಳಿಗೆ ಯಾವ ಪ್ರಾಶಸ್ತ್ಯವಿರುವುದೋ ಅದೇ ಮಹತ್ತ್ವವು, ಅದೇ ಪ್ರಾಶಸ್ತ್ಯವು, ಭಾಷಾನುಗುಣವಾಗಿ ವಿಭಾಗಿಸಲ್ಪಟ್ಟ ಹಿಂದೂಸ್ಥಾನದ ಎಲ್ಲ ಪ್ರಾಂತಗಳಲ್ಲಿ ಆಯಾ ಪ್ರಾಂತ ಭಾಷೆಗಳಿಗೆ ಇರುವುದು ಅವಶ್ಯವಿದೆ. ಇದು ಇಂದೇ ಶಕ್ಯವಿರದಿದ್ದರೂ, ಇನ್ನು ೧೫—೨೦ ವರ್ಷಗಳಲ್ಲಿಯಾದರೂ ಇದು ಸಾಧ್ಯವಾಗುವಂತೆ ನಾವು ಯತ್ನಿಸತಕ್ಕದ್ದು. ನನ್ನ ಮತದ ಮೇರೆಗೆ ನಮ್ಮ ಧ್ಯೇಯವು ಕೆಳಗೆ ಬರೆದ ಪ್ರಕಾರ ಇರಬೇಕು:—

(೧) ಭಾಷಾನುಗುಣವಾಗಿ ಪ್ರಾಂತ ರಚನೆ. ಪ್ರತಿಯೊಂದು ಪ್ರಾಂತದಲ್ಲಿ ಅಲ್ಲಿಯ ಭಾಷಾ ಪ್ರಧಾನವಾದ ವಿಶ್ವವಿದ್ಯಾಲಯದ ಸ್ಥಾಪನೆ.

(೨) ಪ್ರತಿಯೊಂದು ಪ್ರಾಂತದ ಎಲ್ಲ ಸಾರ್ವಜನಿಕ ವ್ಯವಹಾರಗಳೂ, ಎಂದರೆ ಗ್ರಾಮ ಪಂಚಾಯಿತಿ, ಸ್ಥಾನಿಕ ಸಂಸ್ಥೆ, ಕೋರ್ಟು, ಕಚೇರಿ, ಕಾಯಿದೆ ಕೌನ್ಸಿಲ್ ಮೊದಲಾದುವುಗಳಲ್ಲಿ ಜರುಗತಕ್ಕ ವ್ಯವಹಾರಗಳು ಆ ಪ್ರಾಂತಿಕ ಭಾಷೆಯ ಮುಖಾಂತರವೇ ಜರುಗಬೇಕು.

(೩) ಯೂನಿವರ್ಸಿಟಿಯ ಎಲ್ಲ ಅಂತಸ್ತುಗಳಲ್ಲಿ ಮುಖ್ಯ ಭಾಷೆಯು ಪ್ರಾಂತದ ಭಾಷೆಯಾಗಿರಬೇಕು. ಹಿಂದಿ ಮತ್ತು ಇಂಗ್ಲಿಷ ಭಾಷೆಗಳ ಅಭ್ಯಾಸವು ಅವಶ್ಯಕವಾಗಬೇಕು. ಇವೆರಡು ವಿಷಯಗಳ ಶಿಕ್ಷಣವು ಆಯಾ ಭಾಷೆಗಳಲ್ಲಿಯೇ ಆಗಬೇಕು. ಉಳಿದ ಎಲ್ಲ ವಿಷಯಗಳು ಅವಶ್ಯಕವಾಗಿ ಪ್ರಾಂತಿಕ ಭಾಷೆಯಲ್ಲಿಯೇ ಕಲಿಸಲ್ಪಡಬೇಕು ಮತ್ತು ಪರೀಕ್ಷಿಸಲ್ಪಡಬೇಕು.

ಇವುಗಳಲ್ಲಿ ಮೊದಲಿನ ಎರಡು ವಿಷಯಗಳು ಈ ಲೇಖದ ಕಕ್ಷೆಯ ಹೊರಗೆ ಇರುವುದರಿಂದ ಅವುಗಳ ಬಗ್ಗೆ ಇಲ್ಲಿ ಚರ್ಚೆಮಾಡಲು ಕಾರಣವಿಲ್ಲ. ನನ್ನ ವಿಚಾರ

ಸರಣಿಯ ಪ್ರಕಾರ, ಈ ಮೂರು ವಿಷಯಗಳ ಪರಸ್ಪರ ಸಂಬಂಧವಿರುವುದರಿಂದಲೂ, ಇದರ ಬಗ್ಗೆ ನನ್ನ ಅಭಿಪ್ರಾಯವನ್ನು ತಮ್ಮ ಮುಂದೆ ಸಾಕಲ್ಯವಾಗಿ ಇಡಬೇಕೆಂಬ ಇಚ್ಛೆಯಿದ್ದುದರಿಂದಲೂ, ಅವುಗಳ ಉಲ್ಲೇಖವನ್ನು ಮಾತ್ರ ನಾನು ಇಲ್ಲಿ ಮಾಡಿದ್ದೇನೆ.

ಮೂರನೆಯ ವಿಷಯದ ಬಗ್ಗೆ ಮಾತ್ರ ಸ್ವಲ್ಪ ವಿವೇಚನೆ ಮಾಡಬೇಕಾಗಿದೆ. ಸೆಟಲ್‌ವಾಡ ಕಮಿಟಿಯ ಸೂಚನೆಗಳಲ್ಲಿ ಕೆಲವು ಇಷ್ಟವಾದ ಬದಲಾವಣೆಗಳಾಗಬೇಕಾಗಿವೆ. ಹೈಸ್ಕೂಲುಗಳಲ್ಲಿ ಇಂಗ್ಲಿಷನ್ನು ಬಿಟ್ಟು ಉಳಿದ ಎಲ್ಲ ವಿಷಯಗಳೂ ದೇಶಭಾಷೆಗಳಲ್ಲಿ ಆವಶ್ಯಕವಾಗಿ ಕಲಿಸಲ್ಪಡಬೇಕು, ಮತ್ತು ಪರೀಕ್ಷಿಸಲ್ಪಡಬೇಕು. ಕಾಲೇಜುಗಳಲ್ಲಿ 'ಆರ್ಟ್ಸ್ ಕೋರ್ಸಿ'(Arts Course)ನಲ್ಲಿಯಾದರೂ ಮೊದಲಿನ ೧೦—೧೫ ವರ್ಷಗಳ ವರೆಗೆ ಕಲಿಸುವ ಮತ್ತು ಪರೀಕ್ಷೆಯ ಭಾಷೆಯು ಇಂಗ್ಲಿಷಾಗಲಿ ದೇಶಭಾಷೆಯಾಗಲಿ ಇರಬೇಕು. ಅಷ್ಟು ಅವಧಿಯಲ್ಲಿ ಎಲ್ಲ ವಿಷಯಗಳ ಮೇಲೆ ಯೋಗ್ಯವಾದ ಪುಸ್ತಕಗಳಾಗಬಹುದು. ಆಮೇಲೆ ಕಲಿಸುವ ಮತ್ತು ಪರೀಕ್ಷೆಯ ಭಾಷೆಯು ಅವಶ್ಯವಾಗಿ ದೇಶಭಾಷೆಯಾಗಬೇಕು.

ಕಾಲೇಜಿನ 'ಆರ್ಟ್ಸ್ ಕೋರ್ಸಿ'ನ ಎಲ್ಲ ವರ್ಷಗಳಲ್ಲಿ ದೇಶಭಾಷೆಗಳ ಅಭ್ಯಾಸವು ಆವಶ್ಯಕವಾಗಬೇಕು.

ನನ್ನ ಈ ಸೂಚನೆಗಳು ಕೆಲವರಿಗೆ ಕ್ರಾಂತಿಕಾರಕವಾಗಿ ತೋರಬಹುದು. ಆದರೆ, ಹಿಂದೂಸ್ಥಾನದ ಭವಿಷ್ಯದ ಕಡೆಗೆ ಲಕ್ಷ್ಯಕೊಟ್ಟು ಆಳವಾಗಿ ವಿಚಾರಮಾಡಿ ನೋಡಿದರೆ ನಾನು ತೋರಿಸಿದ ಉಪಾಯವೇ ಸಯುಕ್ತಿಕವೆಂದು ಜನರು ಮನಗಾಣಬಹುದು. ಸ್ಯಾಡ್ಲರ ಕಮಿಟಿಯ ಮುಂದೆ ಎಮ್.ಎ. ವೆಸ್ಟ್, ಐ.ಇ.ಎಸ್. ಇವರು ಈ ಪ್ರಕಾರ ಸಾಕ್ಷಿಕೊಟ್ಟಿದ್ದಾರೆ:—

"Looking to the future, I do not see how any country can develop a system of knowledge written and spoken entirely in a foreign language. Nor, can a country, at this stage of its history, change its language. Looking to the educational aspect, I consider that the loss of time and effort deducted from the acquisition of real knowledge is not worth it for the sake of the learning of a language. It is evident that more and more in the future, the staff of education will be Indian. In so far as Englishmen are needed, I consider that it is cheaper to pay an Englishman his salary for two years while he learns the language of the country than to pay for a whole educational system for two years while the pupils learn oral English."

ಹಿಂದೂಸ್ಥಾನದಲ್ಲಿ ಇಂಗ್ಲಿಷರು ೧೫೦ ವರ್ಷಗಳ ವರೆಗೆ ರಾಜ್ಯವನ್ನಾಳಿದರೂ, ಹಿಂದೂಸ್ಥಾನದ ಯಾವ ಭಾಗದ ಜನರ ಮಾತೃಭಾಷೆಯೂ ಇನ್ನೂ

ಇಂಗ್ಲಿಷು ಆಗಿಲ್ಲ, ಮತ್ತು ಮುಂದೆ ಆದರೂ ಆಗುವ ಸಂಭವವಿಲ್ಲ. ಪ್ರತಿಯೊಂದು ಜನಾಂಗದ ವಿದ್ಯಾರ್ಥಿಗಳಿಗೆ ಅವರ ತಾಯ್ನುಡಿಯಲ್ಲಿ ಶಿಕ್ಷಣಕೊಡಬೇಕೆಂಬ ತತ್ತ್ವವು ಎಲ್ಲರಿಗೂ ಮಾನ್ಯವಾದುದು. ಶಿಕ್ಷಣದ ಮುಖ್ಯ ಉದ್ದೇಶವು ಮನಸ್ಸಿನ ವಿಕಾಸವನ್ನು ಮಾಡುವುದೆಂದು ಇಟ್ಟುಕೊಂಡರೆ, ಮನಸ್ಸಿನ ವಿಕಾಸವು ಮಾತೃಭಾಷೆಯಲ್ಲಿ ಶಿಕ್ಷಣಕೊಟ್ಟರೆ ತೀವ್ರವಾಗಿ ಆಗುವುದೇ ಹೊರತು ಅನ್ಯಭಾಷೆಯಲ್ಲಿ ಕೊಟ್ಟರೆ ಆಗದು. ೧೯೧೩ರಲ್ಲಿ ಹಿಂದೂಸ್ಥಾನ ಸರಕಾರದವರು ತಮ್ಮ ಒಂದು ಠರಾವಿನಲ್ಲಿ ಹೀಗೆನ್ನುವರು:—

"There is much evidence to the effect that scholars who have been through a complete vernacular course are exceptionally efficient mentally."

ಅದರಂತೆ, ಇಂಪೀರಿಯಲ್ ಕಾಯಿದೆ ಕೌನ್ಸಿಲಿನಲ್ಲಿ ೧೯೧೫ರಲ್ಲಿ ಶಿಕ್ಷಣ ಮಂತ್ರಿಯಾದ ಸರ್ ಹಾರ್ಕೋರ್ಟ್ ಬಟ್ಲರ (Sir Harcourt Butler) ಇವರು ಹೀಗೆ ಹೇಳಿದ್ದಾರೆ:—

"In my own experience and that of many competent educationists (which I do not, however, regard as conclusive) there is markedly greater intelligence in the boy whose education has been conducted through the medium of the vernacular until the highest classes of the school were reached, than in the boy who had had his education conducted in English."

ಇದರ ಕಾರಣವಾದರೂ ಸ್ಪಷ್ಟವಿದೆ: ಅನ್ಯಭಾಷೆಯಲ್ಲಿ ವಿಷಯಗಳ ಜ್ಞಾನವನ್ನು ಮಾಡಿಕೊಡಹೋದರೆ ವಿದ್ಯಾರ್ಥಿಗಳಿಗೆ ವಿಷಯಗಳು ನೆಟ್ಟಗೆ ತಿಳಿಯುವುದಿಲ್ಲ. ಅದರಿಂದ ವಿದ್ಯಾರ್ಥಿಗಳು ಆಯಾ ವಿಷಯಗಳನ್ನು ಪಾಠಮಾಡಹತ್ತುವರು. ಈ ಕ್ರಮದಿಂದ ಅವರಿಗೆ ವಿಶೇಷ ತ್ರಾಸವಾಗಿ ಅವರ ಬೌದ್ಧಿಕ ಶಕ್ತಿಯು ಕುಂಠಿತವಾಗುವುದು; ಅವರ ಸ್ವತಂತ್ರ ವಿಚಾರ ಶಕ್ತಿಗೆ ಉತ್ತೇಜನವೇ ಸಿಕ್ಕುವುದಿಲ್ಲ. ಈ ಪ್ರಕಾರ ರಾಷ್ಟ್ರಶಕ್ತಿಯ ಉಗಮ ಸ್ಥಾನವೇ ಬತ್ತಿಹೋಗುವ ಅಂಜಿಕೆಯಿರುವುದು. ಎಲ್ಲ ವಿಷಯಗಳನ್ನೂ ಇಂಗ್ಲಿಷಿನಲ್ಲಿ ಪಾಠಮಾಡುವುದಕ್ಕಾಗಿ ವೆಚ್ಚವಾಗುವ ಶಕ್ತಿಯ ಉಪಯೋಗವನ್ನು, ವಿಷಯಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳುವುದರಲ್ಲಿ ಮಾಡಿಕೊಂಡರೆ ವಿದ್ಯಾರ್ಥಿಗಳಿಗೆ ಶ್ರಮವು ಕಡಿಮೆಯಾಗಿ ಹೆಚ್ಚು ಜ್ಞಾನವುಂಟಾಗುವುದು. (ಈಗಿನ ಪದ್ಧತಿಯಿಂದ ಕಲಿಸಿದರೆ, ವಿದ್ಯಾರ್ಥಿಗಳಿಗೆ ಹೆಚ್ಚು ಇಂಗ್ಲಿಷ್ ಶಬ್ದಗಳು ಗೊತ್ತಾಗಬಹುದು; ಆದರೆ, ಶಬ್ದಜ್ಞಾನವೆಂದರೆ, ವಿಷಯ ಜ್ಞಾನವಲ್ಲವೆಂಬುದನ್ನು ಲಕ್ಷ್ಯದಲ್ಲಿಡಬೇಕಾಗಿದೆ.) ಪರಭಾಷೆಯಲ್ಲಿ ಶಿಕ್ಷಣ ಕೊಡುವ ವ್ಯವಸ್ಥೆಯು ಹಿಂದೂಸ್ಥಾನ ಹೊರತು ಉಳಿದ ಯಾವ ದೇಶಗಳಲ್ಲಿಯೂ ಇದ್ದಂತೆ ಕಾಣುವುದಿಲ್ಲ. ಈ ತೆರನ ಶಿಕ್ಷಣ ಕ್ರಮವು

ಅಸ್ವಾಭಾವಿಕವೂ ಅಶಾಸ್ತ್ರೀಯವೂ ತಾಪ ದಾಯಕವೂ ಅಪಾಯ ಕಾರಕವೂ ಇರುತ್ತದೆ.

ಇನ್ನು, ನನ್ನ ಈ ಸೂಚನೆಗಳ ಮೇಲೆ ಬರಬಹುದಾದ ಒಂದೆರಡು ಆರೋಪಗಳನ್ನು ಪರೀಕ್ಷಿಸುತ್ತೇನೆ:—

(೧) ದೇಶಭಾಷೆಗಳೇ ಶಿಕ್ಷಣ ಭಾಷೆಗಳಾದಲ್ಲಿ ವಿದ್ಯಾರ್ಥಿಗಳ ಇಂಗ್ಲಿಷ ಭಾಷೆಯ ಜ್ಞಾನವು ಸಮಾಧಾನ ಕಾರಕವಾಗದು. (೨) ಎಲ್ಲ ವಿಷಯಗಳನ್ನೂ ತಿಳಿಸಿ ಹೇಳುವಷ್ಟು ಸಾಮರ್ಥ್ಯವು ದೇಶಭಾಷೆಗಳಲ್ಲಿಲ್ಲ. (೩) ಮುಂಬಯಿ ಯೂನಿವರ್ಸಿಟಿಯ ಎಲ್ಲ ಕಾಲೇಜುಗಳಲ್ಲಿ ಎಲ್ಲ ಮಾತೃ ಭಾಷೆಗಳಲ್ಲಿ ಶಿಕ್ಷಣ ಕೊಡುವ ವ್ಯವಸ್ಥೆಯನ್ನು ಮಾಡುವುದು ಶಕ್ಯವಿಲ್ಲ. ಈ ಮೂರೂ ಆರೋಪಗಳಿಗೆ ನನ್ನ ಉತ್ತರವು ಕೆಳಗಿನ ಪ್ರಕಾರವಿರುವುದು:—

ಮೊದಲಿನ ಆರೋಪವು ನನಗೆ ಸಮ್ಮತವಿಲ್ಲ. ಈಗ್ಗೆ ಹೈಸ್ಕೂಲುಗಳಲ್ಲಿ ಎಲ್ಲ ವಿಷಯಗಳನ್ನೂ ಇಂಗ್ಲಿಷಿನಲ್ಲಿ ಕಲಿಸುವ ಪರಿಪಾಠವುಂಟು. ಆದರೆ ಈ ಪದ್ಧತಿಯಿಂದ ಹುಡುಗರ ಇಂಗ್ಲಿಷ್ ಭಾಷೆಯ ಜ್ಞಾನವು ಬೆಳೆದಿಲ್ಲ. ಮೆಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಹುಡುಗರಿಗೆ ಕಾಲೇಜಿನಲ್ಲಿ ಕೊಡುವ ಇಂಗ್ಲಿಷ 'ಲೆಕ್ಚರು'ಗಳು ತಿಳಿಯುವುದಿಲ್ಲ ಎಂದು ಅನೇಕ ಪ್ರೊಫೆಸರರ ಅಭಿಪ್ರಾಯವಿರುತ್ತದೆ. ಯಾವ ವಿದ್ಯಾರ್ಥಿಗಳಿಗೆ ತಮ್ಮ ಮಾತೃ ಭಾಷೆಯ ಜ್ಞಾನವು ನೆಟ್ಟಗಿರುವುದಿಲ್ಲವೋ ಅವರಿಗೆ ಇಂಗ್ಲಿಷ್ ಭಾಷೆಯ ಜ್ಞಾನವಾದರೂ ನೆಟ್ಟಗಿರಲು ಶಕ್ಯವಿಲ್ಲ ಎಂದು ಸ್ಯಾಡ್ಲರ್ ಕಮಿಟಿಯವರೂ, ಸೆಟಲ್‌ವಾಡ್ ಕಮಿಟಿಯವರೂ ಅಭಿಪ್ರಾಯ ಪಟ್ಟಿದ್ದಾರೆ.

ಎರಡನೆಯ ಆರೋಪದ ಬಗ್ಗೆ ನನಗಿಷ್ಟೇ ಹೇಳುವುದಿದೆ: ಈಗ್ಗೆ ಸುಧಾರಿಸಿದ ಎಲ್ಲ ಭಾಷೆಗಳೂ ಒಂದಾನೊಂದು ಕಾಲಕ್ಕೆ ಈಗ ನಮ್ಮ ದೇಶಭಾಷೆಗಳಿರುವ ಸ್ಥಿತಿಯಲ್ಲಿಯೇ ಇದ್ದುವು. ಆ ಭಾಷೆಗಳಿಗೆ ಯಾವುದು ಶಕ್ಯವಾಗಿರುವುದೋ ಅದು ನಮಗೇಕೆ ಆಗಬಾರದು? ಕಳೆದ ೫೦ ವರ್ಷಗಳಲ್ಲಿಯೇ ಜಪಾನ ವಾಙ್ಮಯದಲ್ಲಿ ಕ್ರಾಂತಿಯುಂಟಾಗಿದ್ದು, ಈಗ್ಗೆ ಆ ಭಾಷೆಯಲ್ಲಿ ಎಲ್ಲ ಭೌತಿಕ ಶಾಸ್ತ್ರಗಳ ಮೇಲೆ ಪುಸ್ತಕಗಳಾಗಿರುವುವು; ಪಾರಿಭಾಷಿಕ ಶಬ್ದಗಳನ್ನು ಸಹ ಅವರು ಪಾಶ್ಚಾತ್ಯ ಭಾಷೆಗಳಿಂದ ತೆಗೆದುಕೊಂಡಿಲ್ಲ.

ಇನ್ನು, ಮೂರನೆಯ ಆರೋಪದ ಬಗ್ಗೆ ನನ್ನ ಉತ್ತರವು ಈ ಪ್ರಕಾರ ಇರುವುದು: ಮುಂಬಯಿ ವಿಶ್ವವಿದ್ಯಾಲಯಕ್ಕೆ ಅಧೀನವಾದ ಭಾಗದಲ್ಲಿ ಐದು ದೇಶಭಾಷೆಗಳು ಪ್ರಚಲಿತವಿರುವುದು ನಿಜ. ಆದರೆ, ನಮ್ಮ ಸುದೈವದಿಂದ ಈ ಪ್ರತಿಯೊಂದು ಭಾಗದಲ್ಲಿ ಈಗ್ಗೆ 'ಆರ್ಟ್ಸ್ ಕಾಲೇಜು'ಗಳಿರುವುವು. ಕರ್ನಾಟಕ ಕಾಲೇಜುಗಳಲ್ಲಿ ಕನ್ನಡದ ಮುಖಾಂತರ, ಮರಾಠೀ ಮಹಾರಾಷ್ಟ್ರ, ಗುಜರಾಥ, ಸಿಂಧ ಪ್ರಾಂತಗಳ ಕಾಲೇಜುಗಳಲ್ಲಿ ಆಯಾ ಭಾಷೆಗಳ ಮುಖಾಂತರ, ಶಿಕ್ಷಣ

ಕೊಡುವ ಏರ್ಪಾಟು ಆದಲ್ಲಿ ದೇಶಭಾಷೆಗಳ ಅಭಿವೃದ್ಧಿಯು ಭರದಿಂದ ಸಾಗುವುದೆಂದು ಎದೆ ತಟ್ಟಿ ಹೇಳಬಹುದು. ದೇಶಭಾಷೆಗಳ ಅಭಿವೃದ್ಧಿಯು ನಮ್ಮ ಅಂತಿಮ ಧ್ಯೇಯವಲ್ಲ. ನಮ್ಮ ಅಂತಿಮ ಧ್ಯೇಯವು ಸುಲಭವಾದ ಜ್ಞಾನ ಪ್ರಸಾರ. ಸುಲಭವಾದ ಜ್ಞಾನ ಪ್ರಸಾರವು ದೇಶಭಾಷೆಗಳ ಮೂಲಕವಾಗಿಯೇ ಶಕ್ಯವಿರುವುದರಿಂದ ಅವುಗಳ ವಾಙ್ಮಯಾಭಿವೃದ್ಧಿಯು ನಮಗೆ ಬೇಕಾಗಿದೆ.

ಸಾರಾಂಶವೇನೆಂದರೆ, ದೇಶಭಾಷೆಗಳ ತಳಹದಿಯಮೇಲೆಯೇ ರಾಷ್ಟ್ರೀಯ ಶಿಕ್ಷಣದ ಕಟ್ಟಡವನ್ನು ಕಟ್ಟಿಸುವುದು ಶಕ್ಯವಿದೆ. ದೇಶಭಾಷೆಗಳಿಗೆ ಉತ್ತೇಜನ ಸಿಕ್ಕದಿದ್ದರೆ, ಮತ್ತು ಅವುಗಳ ಉಪಯೋಗವು ಸಾರ್ವತ್ರಿಕವಾಗದಿದ್ದರೆ, ಸುಶಿಕ್ಷಿತರಲ್ಲಿಯೂ ಅಶಿಕ್ಷಿತರಲ್ಲಿಯೂ ಬಳಕೆ ಉಳಿಯುವುದಿಲ್ಲ. ತಮ್ಮ ವಿಚಾರಗಳನ್ನು ದೇಶಭಾಷೆಯಲ್ಲಿ ವ್ಯಕ್ತಪಡಿಸುವಷ್ಟು ದೇಶಭಾಷೆಯ ವ್ಯಾಸಂಗವು ಸುಶಿಕ್ಷಿತರಲ್ಲಿ ಇರದೆ ಇರುವುದರಿಂದ ಅವರ ಬುದ್ಧಿವಿಕಾಸದ ಉಪಯೋಗವು ಅಶಿಕ್ಷಿತರಿಗೆ ಎಷ್ಟರ ಮಟ್ಟಿಗೂ ಆಗುವುದಿಲ್ಲ. ಇಡೀ ಜನಾಂಗವು ಒಂದೇ ಭಾವನೆಯಿಂದ ಪ್ರೇರಿತವಾಗಬೇಕಾದರೂ, ಸಾಮಾಜಿಕ, ನೈತಿಕ, ಔದ್ಯೋಗಿಕ ಮತ್ತು ರಾಜಕೀಯ ದೃಷ್ಟಿಯಿಂದ ಮುಂದೆ ಹೆಜ್ಜೆ ಇಡಬೇಕಾದರೂ, ನವ ಜೀವನದಿಂದ ಸ್ಫುರಿತವಾಗಬೇಕಾದರೂ, ನಾವು ದೇಶಭಾಷೆಗೆ ನಮ್ಮ ವಿಶ್ವವಿದ್ಯಾಲಯದ ಅಭ್ಯಾಸ ಕ್ರಮದಲ್ಲಿ ಮುಖ್ಯ ಸ್ಥಾನವನ್ನು ಕೊಡಲೇಬೇಕು.

**ಆರ್. ಎ. ಜಹಗೀರದಾರ್.**

———

# * ನಿಜಾಮು ಕರ್ಣಾಟಕದಲ್ಲಿ ಕನ್ನಡವು ಅಳಿಯುವುದೋ ಉಳಿಯುವುದೋ ?

೧. ಬ್ರಿಟಿಷ ಕರ್ಣಾಟಕವನ್ನು ಬೇರೆ ಪ್ರಾಂತವನ್ನಾಗಿ ಮಾಡಿ ಕನ್ನಡಿಗರ ಸಂಸ್ಕೃತಿಯನ್ನು ಕಾಯುವುದು ಅತ್ಯಂತ ಅವಶ್ಯವಿದೆಯೆಂದು ಏಕಕಂಠವಾಗಿ ಕನ್ನಡಿಗರೆಲ್ಲರೂ ಹೇಳುವ ಸಮಯದಲ್ಲಿ, ನಮ್ಮ ಪ್ರಶ್ನೆಯು ತೀರ ಮಹತ್ತ್ವವುಳ್ಳದ್ದಾಗಿರುತ್ತದೆ. ಏಕೆಂದರೆ, ಹಿಂದೂಸ್ಥಾನದ ದೇಶೀಯ ಸಂಸ್ಥಾನಗಳಲ್ಲಿ ಹೈದರಾಬಾದು ಸಂಸ್ಥಾನವು ಹಿರಿಯದಾದಂತೆಯೇ, ಇಲ್ಲಿ ಕನ್ನಡಿಗರ ಸಂಖ್ಯೆಯೂ ಹೆಚ್ಚಾಗಿಯೇ ಇದೆ.

೨. ಕರ್ಣಾಟಕ ಪ್ರಾಂತದ ಹಲವು ಭಾಗಗಳು ಹಲವು ದಿಕ್ಕುಗಳಲ್ಲಿ ಪಸರಿಸಿವೆ. ಮುಂಬಯಿ ಕರ್ಣಾಟಕದಲ್ಲಿ ಧಾರವಾಡ, ಬೆಳಗಾಂವಿ, ವಿಜಾಪುರ, ಕಾರವಾರ, ಸೊಲ್ಲಾಪುರದ ಕೆಲವು ಭಾಗಗಳು; ಮದ್ರಾಸ್ ಕರ್ಣಾಟಕದಲ್ಲಿ ಬಳ್ಳಾರಿ, ಮಂಗಳೂರು, ಅನಂತಪುರ, ಶೇಲಂ, ಕೋಯಿಮತ್ತೂರು, ಕೊಳ್ಳೇಗಾಲ, ನೀಲಗಿರಿಯ ಕನ್ನಡ ಭಾಗವೂ ಮತ್ತು ಕೊಡಗು ಪ್ರಾಂತವೂ ಬ್ರಿಟಿಷ ಕರ್ಣಾಟಕದಲ್ಲಿ ಸಮಾವೇಶವಾಗುತ್ತವೆ. ಇದರಂತೆಯೇ, ದೇಶೀಯ ಸಂಸ್ಥಾನಗಳಲ್ಲಿಯೂ ಸಹ ಕನ್ನಡವು ಹಲವು ಬೇರೆ ಬೇರೆ ಭಾಗಗಳಲ್ಲಿ ಹಬ್ಬಿದೆ. ಮೈಸೂರು ಸಂಸ್ಥಾನವು ಸಂಪೂರ್ಣ ಕನ್ನಡವಿದ್ದು ಮಹಾರಾಜರು ಕನ್ನಡ ನುಡಿಯನ್ನೂ ಕರ್ಣಾಟಕ ಸಂಸ್ಕೃತಿಯನ್ನೂ ಸಂಪೂರ್ಣವಾಗಿ ಸಂರಕ್ಷಿಸುತ್ತಿರುವರು. ಇನ್ನುಳಿದ ದೇಶೀಯ ಸಂಸ್ಥಾನಗಳಲ್ಲಿ ಎಂದರೆ, ಹೈದರಾಬಾದು, ಕೊಲ್ಹಾಪುರ, ಸಾಂಗಲಿ, ಮಿರಜ, ಜತ್, ಜಮಖಂಡಿ, ಮುಧೋಳ, ಅಕ್ಕಲಕೋಟ, ಸೊಂಡೂರು ಸಂಸ್ಥಾನಗಳಲ್ಲಿಯ ಕನ್ನಡಿಗರ ದುರವಸ್ಥೆಯನ್ನು ಹೇಳಲಸದಳವು. ಹೈದರಾಬಾದು ಹೊರತಾಗಿ ಮಹಾರಾಷ್ಟ್ರ ಸಂಸ್ಥಾನಿಕರ ಆಧಿಪತ್ಯಕ್ಕೊಳಪಟ್ಟ ಕೊಲ್ಹಾಪುರ ಮೊದಲಾದ ಸಂಸ್ಥಾನಗಳೆಲ್ಲವೂ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳೆಂದು ಹೇಳಿಕೊಂಡು ಕನ್ನಡಿಗರನ್ನು ಹಡೆದ ಕನ್ನಡ ತಾಯಿಯಿಂದಗಲಿಸುವ ಮಹಾಪಾಪಕ್ಕೆ ಈ ದೇಶೀಯ ಸಂಸ್ಥಾನಿಕರು ಗುರಿಯಾಗಿರುತ್ತಾರೆ. ಇನ್ನು, ಹೈದರಾಬಾದ ಸಂಸ್ಥಾನಕ್ಕೆ ಹೋದರೆ ಅಲ್ಲಿಯ ಸ್ಥಿತಿಯು ತೀರ ವಿಪರೀತವಾಗಿರುತ್ತದೆ. ಈ ಸಂಸ್ಥಾನದ ಪ್ರಜೆಗಳ ಭಾಷೆಯು ಮುಖ್ಯ ನಾಲ್ಕು ಭಾಗಗಳಲ್ಲಿ ವಿಂಗಡಿಸಿದೆ: ತೆಲುಗು, ಮರಾಠಿ, ಕನ್ನಡ, ಉರ್ದು—ಇವು ನಾಲ್ಕು ಭಾಷೆಗಳೂ ಸಂಸ್ಥಾನದ ಮುಖ್ಯ ಭಾಷೆಗಳು. ಉರ್ದು ಭಾಷೆಯು ರಾಜನ ಮಾತೃಭಾಷೆಯಲ್ಲದೆ ರಾಜಕೀಯ ಭಾಷೆಯು; ಮರ್ಯಾದೆಯೂ ಅದಕ್ಕೇ ಸಂದಿದೆ. ಇಂಗ್ಲಿಷ ಭಾಷೆಯು

* ಬೆಳಗಾಂವಿಯಲ್ಲಿ ನಡೆದ ೧೫ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಬಂದುದು.

ಸಂಸ್ಥಾನದಲ್ಲಿ ಪ್ರಚಲಿತ, ಹಾಗೂ ಪ್ರಬಲವಾದ ಭಾಷೆಯಾಗದಿದ್ದರೂ, ಸಾರ್ವಭೌಮರ ಭಾಷೆಯಾದುದರಿಂದ ಅದಕ್ಕೂ ಹೆಚ್ಚಿನ ಮರ್ಯಾದೆಯು ಇದೆ. ಇಂಗ್ಲಿಷ್, ಹಾಗೂ ಉರ್ದು ವಿನಾ ಮಿಕ್ಕ ದೇಶೀಯ ಭಾಷೆಗಳಿಗೆ ರಾಜಕೀಯ ದೃಷ್ಟಿಯಿಂದ ಯಾವ ಮಹತ್ತ್ವವೂ ಮರ್ಯಾದೆಯೂ ಇಲ್ಲ. ಆದರೂ ಹೈದರಾಬಾದಿನಲ್ಲಿ ತೆಲುಗು ಮರಾಠೀ ಜನರ ಪ್ರಾಬಲ್ಯವು ವಿಶೇಷವಾಗಿದ್ದು ಅವರು ತಮ್ಮ ಕಾರ್ಯತತ್ಪರತೆಯಿಂದ ಕನ್ನಡಿಗರನ್ನು ಮೂಲೆಗೊತ್ತಿದ್ದಾರೆ. ಕನ್ನಡಿಗರು ಅಲ್ಪಸಂಖ್ಯಾತರಿದ್ದು ತಮ್ಮ ಶಕ್ತಿಯ ಮೇಲೆ ವಿಶ್ವಾಸವಿಲ್ಲದವರಾದುದರಿಂದ ಕನ್ನಡದ ಅಭಿಮಾನವನ್ನು ಬಿಟ್ಟು, ಆಂಧ್ರರೋ ಮರಾಟಿಗರೋ ಮತ್ತೆ ಯಾವುದಾದರೊಂದು ಭಾಷೆಯವರೋ ಎಂದು ಹೇಳಿಕೊಳ್ಳುವ ಮೋಹಕ್ಕೆ ಬೀಳುತ್ತಿರುವರು; ಎಂದಮೇಲೆ ಕನ್ನಡವು ಉಳಿಯುವುದೊ?

೩. ಕ್ರಿ. ೧೯೨೧ರ ಜನ ಸಂಖ್ಯೆಯ ಪ್ರಕಾರ ಹೈದರಾಬಾದು ಸಂಸ್ಥಾನದ ಒಟ್ಟು ಪ್ರಜಾ ಸಂಖ್ಯೆಯು ೧,೨೪,೭೧,೭೭೦ ಇರುತ್ತದೆ. ಸಂಸ್ಥಾನದಲ್ಲಿ ಒಟ್ಟು ಹನ್ನೆರಡು ಭಾಷೆಗಳನ್ನಾಡುವ ಜನರಿರುತ್ತಾರೆ. ಅವರಲ್ಲಿ ತೆಲುಗು, ಮರಾಠಿ, ಕನ್ನಡ, ಉರ್ದು ಭಾಷೆಗಳನ್ನಾಡುವವರೇ ಹೆಚ್ಚಾಗಿರುವರು. ಇನ್ನುಳಿದ ಭಾಷೆಗಳೆಂದರೆ, ಕಾಡು ಜನರಾಡುವ ಭಾಷೆಗಳು: ಉದಾಹರಣಾರ್ಥ, ಭಿಲ್ಲ, ಗೊಂಡ, ಲಂಬಾಣಿ ಮೊದಲಾದವರ ಭಾಷೆಗಳು. ಮುಖ್ಯವಾಗಿ, ಕನ್ನಡ ಭಾಷೆಯನ್ನಾಡುವವರ ಸಂಖ್ಯೆಯು, ಕೊನೆಯ ಜನಸಂಖ್ಯೆಯ ವರದಿಯ ಮೇರೆಗೆ, ಕೆಳಗೆ ಬರೆದ ಪ್ರಕಾರವಾಗಿದೆ:—

ತೆಲುಗು ೬೦,೧೫,೧೭೪; ಮರಾಠಿ ೩೨,೯೬,೮೫೮; ಕನ್ನಡ ೧೫,೩೬,೯೨೮; ಉರ್ದು ೧೨,೯೦,೮೬೬.

೪. ಕನ್ನಡ ಭಾಷೆಯು ಅಳಿಯುವುದೋ ಉಳಿಯುವುದೋ ಎಂಬ ಪ್ರಶ್ನೆಯು ದೊಡ್ಡ ಹೆದರಿಕೆಯ ಮೇಲೆ ಇದೆ. ಆ ಹೆದರಿಕೆಯು ಎಲ್ಲಿಂದ, ಹೇಗೆ ಉತ್ಪನ್ನವಾಯಿತು, ಮತ್ತು ಈ ಹೆದರಿಕೆಗೆ ತಕ್ಕ ಕಾರಣಗಳಿವೆಯೋ ಇಲ್ಲವೋ ಎಂಬ ವಿಧಾನವನ್ನು ಮುಂದೆ ವಿವರಿಸಲಾಗುವುದು. ಸದ್ಯಕ್ಕೆ, ಕೊನೆಯ ಜನಸಂಖ್ಯೆಯನ್ನು ಇದಕ್ಕಿಂತ ಮುಂಚಿನ ಮೂರು ಜನಸಂಖ್ಯೆಗೆ ಹೋಲಿಸಿ ನೋಡೋಣ. ಇದಕ್ಕಾಗಿ ಕ್ರಿ. ೧೮೯೧, ೧೯೦೧, ೧೯೧೧, ೧೯೨೧ರ ಪಟ್ಟಿಯನ್ನು ಕೆಳಗೆ ಕೊಟ್ಟಿದೆ. ಕೆಳಗಿನ ಸಂಖ್ಯೆಯು ಸಂಸ್ಥಾನದ ಒಟ್ಟು ಪ್ರಜಾ ಸಂಖ್ಯೆಯಲ್ಲಿ ಆಯಾ ಭಾಷೆಯವರು ಪ್ರತಿ ಸಾವಿರಕ್ಕೆಷ್ಟಿರುವರೆಂಬುದನ್ನು ತೋರಿಸುತ್ತದೆ:—

೫. ಇದರ ಮೇಲಿಂದ ನೋಡಲಾಗಿ, ಉರ್ದು ಭಾಷೆಯನ್ನಾಡುವ ಜನರ ಸಂಖ್ಯೆಯು ಮಾತ್ರ ೧೮೯೧ರಲ್ಲಿದ್ದಷ್ಟೇ ೧೯೨೧ರಲ್ಲಿಯೂ ಇದೆ. ಕನ್ನಡಿಗರ ಸಂಖ್ಯೆಯು ೧೮೯೧ಕ್ಕಿಂತ ೧೯೨೧ರಲ್ಲಿ ಸಾವಿರಕ್ಕೆ ಮೂರರಂತೆ ಕಡಿಮೆಯಾಗಿದೆ. ಆದರೆ, ಈ ಸಂಖ್ಯೆಯನ್ನು ೧೯೦೧ರ ಸಂಖ್ಯೆಗೆ ಹೋಲಿಸಲು, ಸಾವಿರಕ್ಕೆ ೧೭ರಂತೆ

| ಜನಸಂಖ್ಯೆಯ ಪ್ರತಿ ಸಾವಿರದಲ್ಲಿಯ ಜನರು | | | | |
|---|---|---|---|---|
| ಭಾಷೆ | ೧೮೯೧ | ೧೯೦೧ | ೧೯೧೧ | ೧೯೨೧ |
| ತೆಲುಗು | ೪೩೦ | ೪೬೨ | ೪೭೬ | ೪೮೨ |
| ಮರಾಠಿ | ೩೦೩ | ೨೬೦ | ೨೬೧ | ೨೬೪ |
| ಕನ್ನಡ | ೧೨೬ | ೧೪೦ | ೧೨೬ | ೧೨೩ |
| ಉರ್ದು | ೧೦೪ | ೧೦೪ | ೧೦೦ | ೧೦೪ |

ಕಡಿಮೆಯಾಗುತ್ತದೆ. ಅದರಂತೆಯೇ, ಮರಾಟಿಗರು ೧೮೯೧ಕ್ಕಿಂತ ೧೯೨೧ರಲ್ಲಿ ಸಾವಿರಕ್ಕೆ ೩೯ರಂತೆ ಕಡಿಮೆಯಾಗಿ ತೋರಿದರೂ, ೧೯೦೧ರಲ್ಲಿ ತೀರ ಕಡಿಮೆಯಾಗಿದ್ದು ೧೯೧೧, ೧೯೨೧ರಲ್ಲಿ ಏರುತ್ತಿರುವುದು ಸಮಾಧಾನಕರವು. ಇದಲ್ಲದೆ, ಮರಾಠೀ ಜನರು ಕಡಿಮೆಯಾದುದಕ್ಕೆ ಇತರ ಭಾಷೆಗಳ ಪ್ರಾಬಲ್ಯವು ಕಾರಣವಿರದೆ, ಪ್ಲೇಗಿನ ಹಾವಳಿಯ ಮೂಲಕ ಮರಾಠವಾಡಿಯಲ್ಲಿಯ ಜನಸಂಖ್ಯೆಯೇ ಕಡಿಮೆಯಾಯಿತೆಂದು ಸರಕಾರದವರೇ ಹೇಳಿರುವುದರಿಂದ, ಇದರಲ್ಲಿ ಅಷ್ಟೊಂದು ಮಹತ್ತ್ವವಿಲ್ಲ. ಇದಕ್ಕೆ ವಿರೋಧವಾಗಿ ಕನ್ನಡವು ಕ್ರಿ. ೧೯೦೧ರಲ್ಲಿ ಏರಿಕೆಯ ಸ್ಥಿತಿಯಲ್ಲಿದ್ದು ೧೯೧೧, ೧೯೨೧ರಲ್ಲಿ ಇಷ್ಟು ಇಳಿಕೆಯ ರೂಪಾಂತರಕ್ಕೆ ಬಂದಿರುವುದು ಎಷ್ಟು ದುಃಖದಾಯಕವೆಂಬುದು ಪ್ರತಿಯೊಬ್ಬ ಕನ್ನಡಿಗನೂ ಕಳಕಳಿಯಿಂದ ವಿಚಾರಮಾಡತಕ್ಕ ಪ್ರಶ್ನೆಯಾಗಿರುತ್ತದೆ. ಪ್ಲೇಗು ಮೊದಲಾದ ಬೇನೆಗಳಿಂದ ಮರಾಠವಾಡಿಯ ಒಟ್ಟು ಜನಸಂಖ್ಯೆಯಲ್ಲಿ ಕಡಿಮೆಯಾದಂತೆ ಕರ್ನಾಟಕದಲ್ಲಿ ಈ ಸ್ಥಿತಿಯಾದುದು ವರದಿಯ ಮೇಲಿಂದಂತೂ ತಿಳಿಯುವುದಿಲ್ಲ. ಆಂಧ್ರರು ಹೆಚ್ಚಾಗುವುದಕ್ಕೆ ಆಂಧ್ರ ದೇಶದ ಜನವಸತಿಯ ಸ್ಥಾನದ ವಿಸ್ತಾರವು ಹೆಚ್ಚಾದುದೂ, ಬೇರೆಬೇರೆ ಭಾಗಗಳಲ್ಲಿದ್ದ ಜನರು ತಮ್ಮ ಪ್ರಾಂತದಲ್ಲಿಯೇ ಸೇರಿದುದೂ ಕಾರಣಗಳಾಗಿವೆಯಾದರೂ ಅವರಲ್ಲಿರುವ ಆತ್ಮೀಯ ಪ್ರಾಬಲ್ಯದ ಜಾಗೃತಿಯು ವಿಶೇಷ ಸಹಾಯಕವಾಗಿದೆ. ಈ ವಿಷಯದಲ್ಲಿ ನಿಜಾಂ ಸರಕಾರದವರು ಹೇಳುವುದೇನೆಂದರೆ:—

"It is only the Telugu-speaking people that show an appreciable increase in their proportion during the last three decades. It must, however, be noted that, as compared with the proportions at the last Census (1911), the Marathi and Urdu-speaking people also show an improvement in their proportions now. Thus Kanarese seems to be the only inportant language of the State, the speakers of which have been continuosly decreasing since 1901."

೬. ಕ್ರಿ. ೧೮೮೧ರಿಂದ ೧೯೨೧ರ ವರೆಗೆ, ಎಂದರೆ ನಾಲ್ವತ್ತು ವರುಷಗಳ ಅವಧಿಯಲ್ಲಿ, ತೆಲಂಗಾಣೆಯ ಜನಸಂಖ್ಯೆಯು ನೂರಕ್ಕೆ ೪೫ರಂತೆ ಹೆಚ್ಚಿದೆ. ಈ ಹೆಚ್ಚಾದ ಜನರಲ್ಲಿ ೪೧ರಷ್ಟು ತೆಲುಗು ಮಾತನಾಡುವವರೇ ಇರುತ್ತಾರೆ. ಆದುದರಿಂದಲೇ ತೆಲಂಗಾಣೆಯ ಜನಸಂಖ್ಯೆಯ ಪ್ರಗತಿಗೂ ತೆಲುಗು ಮಾತನಾಡುವವರ ಸಂಖ್ಯೆಯ ಪ್ರಗತಿಗೂ ವಿಶೇಷ ಸಂಬಂಧವಿದೆ. ಈ ವಿಷಯದಲ್ಲಿ ಸಂಸ್ಥಾನದ

ಆಂಧ್ರರ ಚಟುವಟಿಕೆಯೂ ಚಳವಳಿಯೂ ವಿಶೇಷವಾಗಿ ಕಾರಣೀಭೂತವಾಗಿದೆ. ಆಂಧ್ರರ ಪ್ರಗತಿಯು ಆಂಧ್ರ ಪ್ರಾಂತದಲ್ಲಿ ಆದಂತೆಯೇ ಈ ಸಂಸ್ಥಾನದ ಆಂಧ್ರರಲ್ಲಿಯೂ ಜಾಗೃತಿಯು ಹುಟ್ಟಿ ಅವರು ತಮ್ಮ ಪ್ರಗತಿಯ ವಿಷಯವಾಗಿ ಹಗಲಿರುಳೂ ಶ್ರಮಪಡಹತ್ತಿದರು. ನಿಜವಾಗಿಯೂ ಸಂಸ್ಥಾನದಲ್ಲಿ ಆಂಧ್ರರಷ್ಟು ಧೈರ್ಯ ಸ್ಥೈರ್ಯಗಳಿಂದ ಸ್ವಾಭಿಮಾನವನ್ನೂ ರಾಷ್ಟ್ರೀಯತ್ವವನ್ನೂ ಕಾಯ್ದುಕೊಳ್ಳಲಿಕ್ಕೆ ಹೆಣಗಾಡುವವರು ಯಾರೂ ಇಲ್ಲ. ಈ ಸಂಸ್ಥಾನದಲ್ಲಿ ವರ್ತಮಾನ ಪತ್ರಗಳ ಹೆಸರೆತ್ತಿದ ಕೂಡಲೆ ಹೆದರುವಂಥ ಪರಿಸ್ಥಿತಿಯಿದ್ದರೂ ಆಂಧ್ರರು ಉರ್ದು ಆಂಧ್ರ ಭಾಷೆಗಳಲ್ಲಿ ತಮ್ಮ ವೃತ್ತ ಪತ್ರಿಕೆಗಳನ್ನು ಹೊರಡಿಸುತ್ತಾರೆ. ಉರ್ದು ಪತ್ರದವರಂತೂ ಸರಕಾರದವರ ಪ್ರತಿಯೊಂದು ತಪ್ಪನ್ನೂ ಬಯಲಿಗೆಳೆದು ಧೈರ್ಯದಿಂದ ಕಠೋರವಾಗಿ ಟೀಕಿಸುತ್ತಾರೆ. ನಿಜವಾದ ವರ್ತಮಾನ ಪತ್ರವೆಂದರೆ, ಇಡೀ ಸಂಸ್ಥಾನದಲ್ಲಿ "ರೈಯತ"ಎಂಬ ಸಾಪ್ತಾಹಿಕ ಉರ್ದು ಪತ್ರವು. ಇದು ಆಂಧ್ರರದು. ಇದು ವಿನಾ ಉಳಿದ ವರ್ತಮಾನ ಪತ್ರಿಕೆಗಳು ಕ್ರಯ ಪಟ್ಟಿಯಂತಿರುವ ಭಟ್ಟಂಗಿಗಳು. ಆಂಧ್ರರ ಸ್ಥಾಯಿಕ ಮತ್ತು ಸಂಚಾರದ ವಾಚನಾಲಯಗಳಿವೆ. ಸಂಸ್ಥಾನದ ಆಂಧ್ರರು ವಾಚನಾಲಯ ಪರಿಷತ್ತು, ಸ್ವಯಂಸೇವಕರ ಪರಿಷತ್ತು, ಯುವಕರ ಪರಿಷತ್ತು, ವ್ಯಾಪಾರಸ್ಥರ ಪರಿಷತ್ತು, ಒಕ್ಕಲಿಗರ ಪರಿಷತ್ತು, ಔದ್ಯೋಗಿಕ ಪರಿಷತ್ತು, ಸ್ತ್ರೀಯರ ಪರಿಷತ್ತು—ಇವುಗಳನ್ನು ಸರಕಾರದ ಪ್ರತಿಬಂಧಕ್ಕೂ ಆಳರಸರ ಮೂರ್ಖತನದ ದಬ್ಬಾಳಿಕೆಗೂ ಎದೆಗೊಟ್ಟು, ಗಟ್ಟಿ ಮನಸ್ಸಿನಿಂದ ಸಿದ್ಧವಾಗಿ ನಿಂತು, ಯಶಸ್ಸಿನಿಂದ ಪಾರುಗಾಣಿಸಿದರು. ಈ ಗುಣವನ್ನು ಹೈದರಾಬಾದಿನ ಕನ್ನಡಿಗರು ಕಲಿಯದಿದ್ದರೆ ಕನ್ನಡವು ಉಳಿಯಬಹುದೇ?

೭. ಸಂಸ್ಥಾನದ ಆಂಧ್ರರು ತಮ್ಮ ಪುರಾತನ ವೈಭವವನ್ನೂ ಇತಿಹಾಸವನ್ನೂ ಹುಡುಕುತ್ತ ಶಿಲಾ ಲಿಪಿಗಳ ಮುದ್ರಣವನ್ನು ತೆಗೆದುಕೊಳ್ಳುವಾಗ್ಗೆ ೧೪ ಕನ್ನಡ ಲಿಪಿಗಳನ್ನು ಸಹ ತಂದಿಟ್ಟುಕೊಂಡಿದ್ದಾರೆ. ಹೈದರಾಬಾದಿನ ಆಂಧ್ರ ಕೃಷ್ಣರಾಜೇಂದ್ರ ವಾಚನಾಲಯವನ್ನು ಹೊಕ್ಕು ನೋಡಿ ತಮ್ಮ ಲಿಪಿಗಳನ್ನೇನಾದರೂ ನೋಡಿರುವರೋ? ಎಂದಮೇಲೆ, ಈ ರೀತಿಯ ಅನಾದರ ಹಾಗೂ, ಅಶ್ರದ್ಧೆಯ ಸ್ಥಿತಿಯಲ್ಲಿ ಹೈದರಾಬಾದಿನಲ್ಲಿ ಕನ್ನಡವು ಉಳಿಯುವುದೋ?

ತೆಲಂಗಾಣೆಯ ಜನಸಂಖ್ಯೆಯ ಬಗ್ಗೆ ಜನಸಂಖ್ಯೆಯ ವರದಿಯು ಹೀಗಿರುವುದು :—

"Telingana forms more or less a homogeneous linguistic unit with Telugu as its prominent language." (Census of India 1921, Vol. XXI, page 16, para 193.)

೮. ಎಲ್ಲಿ ಹೋದಲ್ಲಿ ಕರ್ಣಾಟಕಕ್ಕೆ ಮರಾಟಿಗರೊಬ್ಬರು ಕುತ್ತಿಗೆಗೊಯ್ಕ ಶತ್ರುಗಳಾಗಿ ಪರಿಣಮಿಸಿರುವರು. ಯಾವುದು ಬಂದರೂ ಹೊಟ್ಟೆಬಾಕರಂತೆ

ತಮ್ಮದೇ ಎಂದು ನುಂಗುವ ದುಷ್ಟ ಸ್ವಭಾವವು ಇವರಿಗಿರುವುದು. ಅದರಂತೆಯೇ ಈ ಸಂಸ್ಥಾನದಲ್ಲಿ ಕನ್ನಡಕ್ಕೆ ಆಂಧ್ರರಿಂದ ಯಾವ ಹಾನಿಯೂ ಸಂಭವಿಸಿಲ್ಲ. ಭಾಗಾದಿಗಳಂತಿದ್ದ ಅತ್ಯಾಶೆಯುಳ್ಳ ಮರಾಟಿಗರು ಕಾರಣಾಂತರಗಳಿಂದ ಕರ್ಣಾಟಕದ ಭಾಗವನ್ನೇ ಮುರಿದು ಮೂಲೆಗುಂಪಾಗಿ ಮಾಡಿ ತಮ್ಮ ಹೆಚ್ಚಳವನ್ನು ಮಾಡಿಕೊಳ್ಳಬೇಕಾಗಿದೆ. ಇವರ ಭಾವನೆಯು ಎರಡನೆಯವರ ಮನೆಯನ್ನು ಮುರಿದು ತಾವು ಶ್ರೀಮಂತರಾಗಬೇಕೆಂಬ ದುಷ್ಟ ಹೇತುವಿನಿಂದ ಪ್ರೇರಿಸಿದುದಾಗಿರುವುದು. ಮೊದಮೊದಲು ಭಾಷಾವಾರ್ ಪ್ರಾಂತ ರಚನೆಯ ತತ್ತ್ವದಲ್ಲಿ ವಿಶ್ವಾಸವಿಟ್ಟು ಈ ಸಂಸ್ಥಾನದಲ್ಲಿ ತೆಲುಂಗಾಣೆ, ಮರಾಠವಾಡಿ, ಹಾಗೂ ಕರ್ಣಾಟಕ ಎಂಬ ಮೂರು ಭಾಗಗಳನ್ನು ಸರಕಾರದವರು ಒಪ್ಪಿಕೊಂಡಿದ್ದರೂ ಮಹಾರಾಷ್ಟ್ರರ ಆಕ್ರಮಣ ಶೀಲತೆಯು ಅತ್ಯಾಶೆಗೆ ತುತ್ತಾದ ಮರುಳು ಕನ್ನಡಿಗರ ದುರ್ದೈವದಿಂದ ಅದು ಲೋಪವಾಗಿ ಕನ್ನಡಿಗರ ಮನೆಯನ್ನು ಸಮೂಲ ನಾಶಮಾಡಿ ತೆಲುಂಗಾಣೆ, ಮರಾಠವಾಡಿ ಎಂಬ ಎರಡೇ ಮುಖ್ಯ ಭಾಗಗಳು ಈಗಿನ ಸರಕಾರದವರ ಕಣ್ಣಿನಲ್ಲಿ ತುಂಬಿಕೊಂಡಿರುತ್ತವೆ. ಈ ಬಗ್ಗೆ ಸಂಸ್ಥಾನದ ಕನ್ನಡಿಗರಿಗೆ ಯಾವ ವಿಷಾದವೂ ಆಗಲಿಲ್ಲ; ಅವರು ಮರಾಟಿಗರೆನ್ನಿಸಿಕೊಳ್ಳುವುದೇ ವಿಶೇಷ ಹಿರಿಮೆಯ ವಿಗಿಲಾದುದೆಂದು ಭಾವಿಸಿ ಅಭಿಮಾನಪಡುವರು. ಜನಸಂಖ್ಯೆಯ ವರದಿಯಲ್ಲಿ ಸಂಸ್ಥಾನದವರು ಹೇಳುವುದು :—

"Marathwada on the other hand, is not so completely limited to one language only. In fact, the southern half of this division was, up to a few decades ago, treated as a distinct and a separate division, the Karnatic or the country inhabited by the Kanarese-speaking people." (Census of India 1921, Vol. XXI, page 187, para 193.)

೯. ಪೂರ್ವ ಕಾಲದಿಂದ ಇದೇ ಸಂಸ್ಥಾನ ಸರಕಾರದವರೇ ಬಹುಸಂಖ್ಯಾಕರಾದ ಕನ್ನಡಿಗರ ಅಸ್ತಿತ್ವವನ್ನೊಪ್ಪಿಕೊಂಡು ಕರ್ಣಾಟಕ ಪ್ರಾಂತವನ್ನು ಬೇರೆ ಭಾವಿಸಿಕೊಂಡಿದ್ದರೂ, ಈಗಿನ ಕಾಲದಲ್ಲಿ ಕನ್ನಡಿಗರ ದುರ್ದೈವದ ಮೂಲಕ ಕರ್ಣಾಟಕ ಪ್ರಾಂತವನ್ನು ಮರಾಠವಾಡಿಯಲ್ಲಿ ಸಮಾವೇಶ ಮಾಡಿದರು. ಸಂಸ್ಥಾನದಲ್ಲಿ ತಮ್ಮ ಕೃತ್ರಿಮದ ಆಕ್ರಮಣ ಶೀಲತೆಯಿಂದ ಮರಾಟಿಗರು ಹೇಗೆ ಕನ್ನಡಿಗರನ್ನು ತುತ್ತುಗೊಳ್ಳುವರೆಂಬುದು ಕೆಳಗಿನ ಅವತರಣಿಕೆಯಿಂದ ಸ್ಪಷ್ಟವಾಗಿ ಕಂಡುಬರುವುದು. ಇದನ್ನು ಸಂಪೂರ್ಣ ಗಮನಿಸಿ ಹೇಳಬೇಕಾದುದೇನೆಂದರೆ, "ಕನ್ನಡವು ಅಳಿಯುವುದೋ ಉಳಿಯುವುದೋ?"

"The Kanarese-speaking population of the dominions is confined more or less to the districts of Gulbarga, Raichur and Bidar, as will be seen from the map below These three districts together contain over 93 per cent of the total Kanarese speakers in the State. Compared with their numbers in 1891, they show an increase of

85,882; but as compared with 1911, they show a falling off of 143,077. their per 1000 of the population has, therefore, fallen from 126 in 1891 to 123 in 1921. The Telugus have advanced in the last decade twice as much as the Kanerese have retrograded. The latter would seem to have equally suffered with the Marathas. since 1891 the population of the typical Kanerese districts of Gulbarga and Raichur has increased by 40 and 32 per cent respectively ; but the number of Kanerese-speakers has increased by no more than 25 per cent during the same period. Again in 1891, there were 113 Kanarese-speaking persons in every 10,000 of the population of Telingana. Now there are only 78. It would, therefore, seem that the Kanarese-speaking population is being rather hard pressed by the Telugus on one side, and Marathas on the other. An analysis of the figures points to this. For example, the proportion of the Kanarese-speaking people per 10,000 of the population of Gulbarga has decreased from 5,913 in 1911 to 5,465 in 1921. Similarly, the population of the Telugu-speakers has fallen from 1,996 to 1,614. On the other hand, the proportion for Marathi has risen enormously from 328 to 1,540. Thus Kanarese and Telugu seem to be yielding place to Marathi in this district. Likewise, Kanarese and Marathi seem to be domineered by Telugu in Bidar. Only in Raichur does Kanarese hold its own against Telugu." (Census of India, 1921, Vol. XXI, page 189, para 195.)

೧೦. ಮೇಲಿನ ಅವತರಣೆಯಿಂದ ಕಂಡುಬರುವ ಮುಖ್ಯಾಂಶಗಳಾವು ವೆಂದರೆ:—

(೧) ಕ್ರಿ. ೧೯೧೧ಕ್ಕಿಂತ ೧೯೨೧ರಲ್ಲಿಯೂ, ೧೯೦೧ಕ್ಕಿಂತ ೧೯೧೧ ರಲ್ಲಿಯೂ ಕನ್ನಡಿಗರ ಸಂಖ್ಯೆಯು ಹ್ರಾಸವಾಗುತ್ತ ನಡೆದಿರುವುದು.

(೨) ಗುಲ್ಬರ್ಗಾ, ರಾಯಚೂರು ಜಿಲ್ಲೆಗಳ ಒಟ್ಟು ಜನಸಂಖ್ಯೆಯು ಹೋದ ಸಾರಿಗಿಂತ ಅನುಕ್ರಮವಾಗಿ ೪೦, ೩೨ರಂತೆ ಹೆಚ್ಚಾಗಿರಲು, ಇವರಲ್ಲಿ ಕನ್ನಡಿಗರು ನೂರಕ್ಕೆ ೨೫ರಷ್ಟೇ ಏಕೆ ಆದರು? ಆಂಧ್ರ ಪ್ರಾಂತದ ಜನಸಂಖ್ಯೆಯು ನೂರಕ್ಕೆ ೪೫ರಷ್ಟು ಹೆಚ್ಚಿದರೆ, ಅವರಲ್ಲಿ ಆಂಧ್ರರು ೪೧ರಷ್ಟು ಇದ್ದರು; ಎಂದಮೇಲೆ, ಕನ್ನಡಿಗರಿಗೆ ಈ ಆಪತ್ತು ಎಲ್ಲಿಂದ?

(೩) ತೆಲಂಗಾಣೆಯ ಜನಸಂಖ್ಯೆಯಲ್ಲಿ ೧೮೯೧ರಲ್ಲಿ ಪ್ರತಿ ಹತ್ತುಸಾವಿರಕ್ಕೆ ಕನ್ನಡಿಗರು ೧೧೩ರಷ್ಟು ಇದ್ದವರು ಈಗ ೭೮ರಷ್ಟು ಆದರು.

೧೧. ಕನ್ನಡಿಗರ ಸಂಖ್ಯೆಯು ಕಡಿಮೆಯಾದ ವಿಷಯದಲ್ಲಿ ನಾವು ಆಂಧ್ರರ ಮೇಲೆ ಆರೋಪವನ್ನು ಮಾಡಲಿಕ್ಕೆ ಬರುವಂತೆ ಇಲ್ಲ. ಏಕೆಂದರೆ, ಕನ್ನಡಿಗರ

ಸಂಖ್ಯೆಯು ಆಂಧ್ರ ಪ್ರಾಂತದಲ್ಲಿದ್ದುದು ಮಾತ್ರವೇ ಕಡಿಮೆಯಾಗದೆಯೇ ಹೊಸಾ ಆಂಧ್ರರ ಹಾವಳಿಯು ಕರ್ಣಾಟಕದಲ್ಲಿ ಆಗಿ ಅದರಿಂದ ಕಡಿಮೆಯಾಗಿಲ್ಲ. ಕನ್ನಡಿಗರು ತಾವಾಗಿಯೇ ಆಂಧ್ರ ಪ್ರಾಂತದಲ್ಲಿ ಹೋಗಿ ತಮ್ಮ ರಾಷ್ಟ್ರೀಯತ್ವವನ್ನು ಕಳೆದುಕೊಂಡುದು ಕನ್ನಡಿಗರ ದುರ್ದೈವ ದೋಷವು. ಕನ್ನಡಿಗರ ಸಂಖ್ಯೆಯು ಹೆಚ್ಚಾಗಿ ಕಡಿಮೆಯಾದುದು ಗುಲ್ಬರ್ಗಾ ಜಿಲ್ಲೆಯಲ್ಲಿಯೇ. ಕ್ರಿ. ೧೯೧೧ರಲ್ಲಿ ಗುಲ್ಬರ್ಗಾ ಜಿಲ್ಲೆಯ ಜನಸಂಖ್ಯೆಯ ಪ್ರತಿ ಹತ್ತುಸಾವಿರದಲ್ಲಿ ೫,೯೧೩ರಷ್ಟು ಕನ್ನಡಿಗರಿದ್ದರು; ಅದರ ಬದಲಾಗಿ ಕ್ರಿ. ೧೯೨೧ರಲ್ಲಿ ೫,೪೭೫ ಆದರು. ಅದರಂತೆಯೇ, ಗುಲ್ಬರ್ಗಾ ಜಿಲ್ಲೆಯಲ್ಲಿ ಆಂಧ್ರರೂ ಕಡಿಮೆಯಾದರು. ಆಂಧ್ರರು ಕಡಿಮೆಯಾದ ಸಂಖ್ಯೆಯು ಏರಿಕೆಯಲ್ಲಿ ಕನ್ನಡಿಗರನ್ನು ಕೂಡಿಕೊಳ್ಳದೆ ಮರಾಟಿಗರನ್ನು ಸೇರಿತು. ಕ್ರಿ. ೧೮೯೧ರಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ ಆಂಧ್ರರು ಪ್ರತಿ ಹತ್ತು ಸಾವಿರಕ್ಕೆ ೧,೯೯೭ರಷ್ಟು ಇದ್ದವರು ೧೯೨೧ರಲ್ಲಿ ೧,೭೭೪ ಆದರು. ಒಟ್ಟಿನ ಮೇಲೆ, ಕನ್ನಡಿಗರೂ ಆಂಧ್ರರೂ ಕೂಡಿ ಹತ್ತು ಸಾವಿರಕ್ಕೆ ೭೭೦ರಷ್ಟು ಜನರು ಕಡಿಮೆಯಾದರು. ಇದರ ವಿರುದ್ಧವಾಗಿ ಗುಲ್ಬರ್ಗಾ ಜಿಲ್ಲೆಯಲ್ಲಿ ಕ್ರಿ. ೧೮೯೧ರಲ್ಲಿ ಮರಾಠೀ ಮಾತನಾಡುವ ಜನರು ಪ್ರತಿ ಹತ್ತು ಸಾವಿರಕ್ಕೆ ೩೨೮ ಇದ್ದವರು ಕ್ರಿ. ೧೯೨೧ರಲ್ಲಿ ೧,೫೪೦ ಆದರು. ಇದೊಂದು ಕಾರಣದಿಂದಲೇ ಮರಾಟಿಗರ ಆಕ್ರಮಣ ಶೀಲತೆಯ ದುಷ್ಟತ್ವದ ನಿಜವಾದ ಸ್ಥಿತಿಯು ತಿಳಿದುಬರುವುದು.

೧೨. ಸಾರಾಂಶವನ್ನು ವಿಚಾರಿಸಲು, ಕನ್ನಡದ ಹ್ರಾಸಕ್ಕೆ ಮರಾಠಿಯ ಮೇಲೆ ದೊಡ್ಡ ಆರೋಪವಿದೆ. ಬೆಳಗಾಂವಿ ಸೊಲ್ಲಾಪುರಗಳನ್ನು ಮರಾಟಿಗರು ನುಂಗಬೇಕೆಂದು ಕುಳಿತಿರುವ ಸಮಯದಲ್ಲಿಯೇ ಗುಲ್ಬರ್ಗಾದ ವಿಷಯದಲ್ಲಿಯೂ ಪ್ರಶ್ನೆಯು ಉಪಸ್ಥಿತವಾದಲ್ಲಿ, ಮರಾಟಿಗರು ಕಡಿದಾಡಲಿಕ್ಕೆ ಹಿಂದು ಮುಂದೆ ನೋಡಲಾರರು. ಗುಲ್ಬರ್ಗಾ ಜಿಲ್ಲೆಯ ಕನ್ನಡಿಗರಲ್ಲಿ ಈಗಿನ ಅಲಸತೆಯು ಸ್ಥಿರವಾಗಿ ಉಳಿದ ಪಕ್ಷದಲ್ಲಿ, ಕನ್ನಡಿಗರು ಗುಲ್ಬರ್ಗಾದ ಆಶೆಯನ್ನು ಬಿಡಬೇಕಾಗುವುದು. ಇದರಂತೆಯೇ, ಬೀದರ ಜಿಲ್ಲೆಯಲ್ಲಿಯೂ ಕನ್ನಡ ಮರಾಠಿಗಳೆರಡಕ್ಕೂ ತೆಲುಗಿನ ಭಯವಿರುವುದರಿಂದ ಇಲ್ಲಿಯೂ ಕನ್ನಡವು, ಲಿಪಿಯಿಲ್ಲದ ಕಾಡುಜನರ ಭಾಷೆಯ ಸ್ಥಿತಿಯಲ್ಲಿ, ಕೆಲವು ದಿವಸಗಳ ವರೆಗೆ ಮಾತ್ರವೇ ಜೀವ ಹಿಡಿಯಬಹುದು. ಕನ್ನಡಿಗರು ಗುಲ್ಬರ್ಗಾ ಬೀದರಗಳೆರಡನ್ನೂ ಬಿಟ್ಟಮೇಲೆ ರಾಯಚೂರು ಸಹಜವಾಗಿಯೇ ಅಲ್ಪಸಂಖ್ಯಾತರಲ್ಲುಳಿದು ಶತಮಾನದಲ್ಲಿಯೇ ಅದಾದರೂ ಮರಾಟಿಗರಿಗೆ ಆಹುತಿಯಾಗುವುದು ತೀರ ಸಂಭವವೂ ಶಕ್ಯವೂ ಆಗಿರುವುದು. ಇದೇ ಭವಿತವ್ಯವು ನಿಜವೆಂದು ಭಾವಿಸಲಿಕ್ಕೆ ಬೇಕಾದರೆ ಹೈದರಾಬಾದು ಸಂಸ್ಥಾನದಲ್ಲಿ ಕನ್ನಡವು ಅಳಿಯುವುದೋ ಉಳಿಯುವುದೋ?

೧೩. ನಿಜಾಮರ ಸಂಸ್ಥಾನದಲ್ಲಿ ಕನ್ನಡಕ್ಕೆ ಕೇವಲ ಮರಾಠಿ ತೆಲುಗಿನ ಬಾಧೆಯೇ ಅಲ್ಲದೆ ಎಲ್ಲ ಭಾಷೆಗಳ ಮೇಲೆಯೂ ತನ್ನ ವರ್ಚಸ್ಸನ್ನು ಕೂಡಿಸ ಲೆಣಿಸಿರುವ ರಾಜಭಾಷೆಯೂ ರಾಜಕೀಯ ಭಾಷೆಯೂ ಆಗಿರುವ ಉರ್ದು

ವಾದರೂ ಕನ್ನಡಕ್ಕೆ ಪ್ರಬಲವಾದ ಶತ್ರುವಾಗಿ ಸಂಭವಿಸಬಹುದಾದ ಭಯವಿದೆ. ಏಕೆಂದರೆ, ಮುಸಲ್ಮಾನರಲ್ಲಿ ಜಗತ್ತಿನ್ನೆಲ್ಲ ಮುಸಲ್ಮಾನೀ ಮಯವಾಗಿ ಮಾಡಿಸುವ Pan-Islamic ಚಳವಳಿಯಿರುವಂತೆಯೇ ನಮ್ಮಲ್ಲಿಯೂ ಸಹ Pan-Islamic ಮತ್ತು Pan-Urduic ಚಳವಳಿಯು ನಡೆಯುತ್ತಿದ್ದು ಉರ್ದು ಭಾಷೆಯೊಂದನ್ನೇ ಸಂಸ್ಥಾನದ ಇಡೀ ಪ್ರಜೆಗಳ ಭಾಷೆಯನ್ನಾಗಿ ಮಾಡಬೇಕೆಂಬ ಸದ್ಧೇತುವು ಸರಕಾರದ್ದಿರುವುದೆಂಬುವುದು ಹಲವು ಸರಕಾರೀ ಠಕಾಹರ್ಗಳಿಂದ ಸಹಜವಾಗಿ ಸಿದ್ಧಮಾಡಲ್ಪಡುವುದು. ಪ್ರಾಥಮಿಕ ಶಿಕ್ಷಣವೇ ಮೊದಲುಗೊಂಡು ವಿಶ್ವವಿದ್ಯಾಲಯದ ಶಿಕ್ಷಣದ ವರೆಗೂ ಮಾತೃಭಾಷೆಯು ಕೇವಲ ಅನಾದರ ಸ್ವರೂಪದಲ್ಲಿರುವುದು. ಕೆಲವು ದಿವಸಗಳ ವರೆಗೆ ಉರ್ದು ಭಾಷೆಯ ಅರ್ಥವನ್ನು ಕಂಡುಹಿಡಿಯುವ ಉದ್ದೇಶದಿಂದ ಮಾತೃಭಾಷೆಯು ಕಲಿಸಲ್ಪಡುವುದೇ ವಿನಾ ಮುಕ್ಕ ವಿಷಯಗಳಲ್ಲಿ ಶಿಕ್ಷಣದ ಭಾಷೆಯು (Medium of Instruction) ಉರ್ದುವೇ ಆಗಿರುವುದು. ಈ ವಿಷಯವನ್ನು ಇಲ್ಲಿ ಹೆಚ್ಚು ವಿಸ್ತಾರವಾಗಿ ತಿಳಿಸಿ ಹೇಳಲಿಕ್ಕೆ ಬರುವಂತೆ ಇಲ್ಲ; ಅದಕ್ಕೆ ಸಾಕಾದಷ್ಟು ಸಮಯವೂ ಅವಕಾಶವೂ ಬೇಕು. ಇವೆಲ್ಲ ಸಂಗತಿಗಳನ್ನೂ ಒಟ್ಟುಗೂಡಿಸಿ ವಿಚಾರಮಾಡಲು ಕನ್ನಡವು ಉಳಿಯುವುದಕ್ಕೆ ಬಹಳ ಹೆದರಿಕೆಗಳಿವೆ; ಅಳಿಯುವುದಕ್ಕೆ ನೂರರಲ್ಲಿ ೮೦ರಷ್ಟು ಅನುಕೂಲ ಪರಿಸ್ಥಿತಿಯಿರುವುದು.

೧೪. ಈ ದೃಷ್ಟಿಯಿಂದ, ಕನ್ನಡವು ನಿಜಾಮರ ಸಂಸ್ಥಾನದಲ್ಲಿ ಅಳಿಯುವುದಾದರೆ, ಕರ್ಣಾಟಕ ಪ್ರಾಂತಕ್ಕೂ ಕನ್ನಡಿಗರ ಸಂಸ್ಕೃತಿಗೂ ದೊಡ್ಡ ಹಾನಿಯು ಸಂಭವಿಸುವುದು ಸಹಜ. ಇದನ್ನು ಮುಂದುಗಂಡು ಪ್ರತಿಬಂಧೋಪಾಯಗಳನ್ನು ಕೈಕೊಳ್ಳಲು ಸಮಯವಿನ್ನೂ ಕೈಬಿಟ್ಟಿಲ್ಲ. ಪ್ರಯತ್ನಪಟ್ಟಲ್ಲಿ ಕನ್ನಡವನ್ನುಳಿಸಲು ಸಾಧ್ಯವಿದೆ.

೧೫. ಈ ವಿಷಯವನ್ನು ಇಲ್ಲಿಯೇ ವಿರಮಿಸಬಹುದಾಗಿದ್ದಿತು. ಆದರೆ, ಎಲ್ಲಿ ಭಯವಿದೆಯೋ ಅಲ್ಲಿ ಉಪಾಯವನ್ನು ಸೂಚಿಸುವುದೂ ನಮ್ಮ ಕರ್ತವ್ಯವೆಂದೇ ಭಾವನೆ. ಆದುದರಿಂದ ಕನ್ನಡವನ್ನುಳಿಸುವ ಉಪಾಯಗಳನ್ನು ಸಂಕ್ಷೇಪವಾಗಿ ವಿವರಿಸುವ ಉದ್ದೇಶವಿದೆ. ಈ ವಿಷಯದಲ್ಲಿ ಸಂಸ್ಥಾನದ ಕನ್ನಡಿಗರು ಎಚ್ಚರಗೊಳ್ಳಬೇಕು; ಹಾಗೂ, ಹೊರಗಿನ ಕನ್ನಡಿಗರು ಸಹಾಯಕರಾಗಬೇಕು.

೧೬. ಜನಸಂಖ್ಯೆಯ ವರದಿಯಲ್ಲಿ ಹೇಳಿದ ಮೇರೆಗೆ ಗುಲ್ಬರ್ಗಾ ಮತ್ತು ಬೀದರ ಜಿಲ್ಲೆಗಳಲ್ಲಿ ಕನ್ನಡಿಗರು ಕಡಿಮೆಯಾದ ಸಂಖ್ಯೆಯು ನಿರಾಶಾಜನಕವಾಗಿ ತೋರಿದರೂ ನನ್ನ ಅಭಿಪ್ರಾಯದಲ್ಲಿ ವಸ್ತುಸ್ಥಿತಿಯು ರಿಪೋರ್ಟಿಗಿಂತ ಭಿನ್ನವಾಗಿರಲಿಕ್ಕೆ ಬೇಕೆಂಬುದು ಖಚಿತ. ರಿಪೋರ್ಟು ಸುಳ್ಳೆಂಬುದು ನಾನು ಹೊರಿಸುವ ಆರೋಪವಲ್ಲ. ಆದರೆ ರಿಪೋರ್ಟಿನವರಿಗೆ ತಪ್ಪು ತಿಳಿವಳಿಕೆಯನ್ನುಂಟು ಮಾಡಿಕೊಡಲಿಕ್ಕೆ ನಮ್ಮ ಕನ್ನಡಿಗರೂ ನಮ್ಮ ಭಾಗಾಟಗಳಾದ ಮರಾಟಿಗರೂ

ಕಾರಣರು. ಗುಲ್ಬರ್ಗಾ ಜಿಲ್ಲೆಯಲ್ಲಿ ಕನ್ನಡಿಗರು ದೊಡ್ಡ ಸ್ಥಿತಿಯಲ್ಲಿದ್ದು ಅವರಿಗೆ
ಮರಾಠೀ ಗಾಳಿಯು ವಿಶೇಷವಾಗಿ ತಗುಲಿರುವುದರಿಂದ ಅವರು ಕನ್ನಡಕ್ಕಿಂತ
ಮರಾಠಿಯನ್ನೇ ತಮ್ಮ ಮಾತೃಭಾಷೆಯನ್ನಾಗಿ ತಿಳಿದುಕೊಳ್ಳಲಿಕ್ಕೆ ಹತ್ತಿರುವ
ರಿಷ್ಟೇ ಅಲ್ಲ; ಪ್ರಯತ್ನಪೂರ್ವಕವಾಗಿ ಗುಲ್ಬರ್ಗಾದಲ್ಲಿ ಕನ್ನಡ ಶಿಕ್ಷಣಕ್ಕೆ
ಪ್ರತಿಬಂಧವನ್ನುಂಟುಮಾಡಿದರು. ದೊಡ್ಡ ಸ್ಥಿತಿಯಲ್ಲಿದ್ದ ಮುಂದಾಳುಗಳ
ಮನೋವೃತ್ತಿಯೇ ಈ ರೀತಿಯಲ್ಲಿದ್ದಮೇಲೆ ನಿರಾಧಾರಿಗಳಾದ ಉಳಿದ ಕನ್ನಡ
ಬಡಪಾಯಿಗಳ ವಿಷಯಕ್ಕೆ ಮರುಕಪಡುವವರಾರು? ಗುಲ್ಬರ್ಗಾದಲ್ಲಿ ಪ್ರತ್ಯಕ್ಷ
ವಾಗಿ ಇಂದಿಗೂ ಹೆಣ್ಣುಮಕ್ಕಳೂ ಗಂಡಸರೂ ಕೂಡಿಯೇ ಮನೆಯಲ್ಲಿ ಕನ್ನಡ
ಮಾತನಾಡುತ್ತಿದ್ದರೂ ಹೊರಗೆ ಬಂದ ಕೂಡಲೆ ಮಾತೃಭಾಷೆಯು ಯಾವುದೆಂದು
ಕೇಳಿದರೆ 'ಮರಾಠಿ' ಎಂದು ಹೇಳುವರು. ನಿಜವಾಗಿ ವಿಚಾರಿಸಿದಲ್ಲಿ, ರಾಯಚೂರಿ
ಗಿಂತ ಗುಲ್ಬರ್ಗಾ ಬೀದರ ಜಿಲ್ಲೆಗಳಲ್ಲಿ ಕನ್ನಡಿಗರ ವರ್ಚಸ್ಸು ಹೆಚ್ಚಾಗಿರತಕ್ಕದ್ದು.
ಏಕೆಂದರೆ, ಈ ಜಿಲ್ಲೆಗಳಲ್ಲಿ ಲಿಂಗಾಯತರು ಹೆಚ್ಚಾಗಿರುವರು. ವ್ಯಾಪಾರವೂ
ಶ್ರೀಮಂತಿಕೆಯೂ ಅವರ ಕೈಯಲ್ಲಿಯೇ ಇದ್ದರೂ ಅವರೇ ಮರಾಟಿಗರಿಗೆ ಶರಣಾ
ಗತರಾಗಿರುವರು. ಆದುದರಿಂದ, ಈ ವಿಷಯದಲ್ಲಿ ಸಂಪೂರ್ಣವಾಗಿ ಜಾಗೃತಿಯು
ಹುಟ್ಟುವಂತೆ ಚಳವಳಿಮಾಡಿ ಮೊದಲು ಲಿಂಗಾಯತ ವ್ಯಾಪಾರಸ್ಥರನ್ನು ಕೈಯಲ್ಲಿ
ತೆಗೆದುಕೊಂಡು, ಅವರು ಒತ್ತಾಯದಿಂದಲಾದರೂ ಕನ್ನಡವನ್ನು ಕಲಿತು ಲೆಕ್ಕ
ಪತ್ರವೇ ಮೊದಲಾದ ವ್ಯವಹಾರವನ್ನು ಕನ್ನಡದಲ್ಲಿ ಮಾಡುವಂತೆ ಮಾಡಲಿಕ್ಕೆ
ಬೇಕು. ಈ ವಿಷಯದಲ್ಲಿ ಕರ್ಣಾಟಕ ಪ್ರಾಂತಿಕ ರಾಷ್ಟ್ರೀಯ ಸಭೆಯವರೂ,
ಕರ್ಣಾಟಕ ಏಕೀಕರಣ ಸಭೆಯವರೂ, ಕರ್ಣಾಟಕ ಸಾಹಿತ್ಯ ಪರಿಷತ್ತಿನವರೂ
ಕೂಡಿಯೇ ಪ್ರಯತ್ನಮಾಡಬೇಕು.

೧೭. ಇಲ್ಲಿಯ ಕನ್ನಡಿಗರ ಮುಖ್ಯಕಾರ್ಯವೇನೆಂದರೆ, ಸಂಸ್ಥಾನೀ
ಸರಕಾರದವರ ಬೆಂಬಲವನ್ನು ತೆಗೆದುಕೊಂಡು ಈ ಸಂಸ್ಥಾನದಲ್ಲಿಯ ಕರ್ಣಾಟಕ
ಭಾಗವನ್ನು ಬೇರ್ಪಡಿಸಬೇಕು. ಈಗ ಸಂಸ್ಥಾನದಲ್ಲಿ ಮುಖ್ಯವಾಗಿ ನಾಲ್ಕು
ಪ್ರಾಂತಗಳನ್ನು ಮಾಡಿದ್ದಾರೆ: (೧) ಗುಲ್ಬರ್ಗಾ, (೨) ಔರಂಗಾಬಾದ, (೩)
ವರಂಗಲ್ಲ, (೪) ಮೇದಕ. ಗುಲ್ಬರ್ಗಾ ಪ್ರಾಂತದಲ್ಲಿ ಗುಲ್ಬರ್ಗಾ, ರಾಯಚೂರ,
ಬೀದರ ಮತ್ತು ಉಸ್ಮಾನಾಬಾದ—ಈ ಪ್ರಕಾರ ನಾಲ್ಕು ಜಿಲ್ಲೆಗಳಿರುತ್ತವೆ.
ಮೊದಲಿನ ಮೂರು ಜಿಲ್ಲೆಗಳು ಕರ್ಣಾಟಕದವೇ ಎಂದು ಸರಕಾರದವರು ಒಪ್ಪಿದ
ಮಾತಾಗಿರುವುದು. ಸದ್ಯಕ್ಕೆ ನಮಗೆ ಪ್ರತಿ ತಾಲ್ಲೂಕಿನಲ್ಲಿ ಕನ್ನಡಿಗರೆಷ್ಟಿರುವರೆಂಬ
ಸಂಖ್ಯೆಯು ಸಿಕ್ಕುವಂತಿಲ್ಲ. ಆದರೂ, ಕೆಲವು ಜಿಲ್ಲೆಗಳಲ್ಲಿ ಕನ್ನಡಿಗರು ಹೆಚ್ಚಾ
ಗಿರುವರೆಂಬುದು ತಿಳಿಯುತ್ತದೆ. ಆಯಾ ಜಿಲ್ಲೆಗಳ ಬೇರೆ ಬೇರೆ ತಾಲ್ಲೂಕುಗಳಲ್ಲಿ
ಕನ್ನಡಿಗರು ಬಹುಸಂಖ್ಯಾತರಾಗಿದ್ದ ಪಕ್ಷದಲ್ಲಿ ಬೇರೆ ಜಿಲ್ಲೆಯನ್ನೇ ಮಾಡಬೇಕು;
ಅಥವಾ, ಕರ್ಣಾಟಕ ಜಿಲ್ಲೆಗಳಾದ ಗುಲ್ಬರ್ಗಾ, ರಾಯಚೂರು, ಬೀದರಗಳಿಗೆ
ಸಮೀಪವಾಗಿದ್ದರೆ ಆಯಾ ತಾಲ್ಲೂಕುಗಳನ್ನು ಆಯಾ ಜಿಲ್ಲೆಗಳಿಗೆ ಸೇರಿಸಬೇಕು.

ಈ ರೀತಿಯಲ್ಲಿ ಒಟ್ಟು ೧೦,೦೦೦ಕ್ಕಿಂತ ಕನ್ನಡಿಗರು ಹೆಚ್ಚಾಗಿರುವ ಜಿಲ್ಲೆಗಳನ್ನು ಕೆಳಗೆ ಬರೆದಿದೆ:—

| | ಜಿಲ್ಲೆಗಳು | ಜನ ಸಂಖ್ಯೆ | ಕನ್ನಡಿಗರು |
|---|---|---|---|
| ೧ | ಗುಲ್ಬರ್ಗಾ .. | ೧೦,೯೫,೭೫೩ | ೫,೯೮,೮೧೭ |
| ೨ | ರಾಯ್ಚೂರು .. | ೬,೧೫,೨೧೬ | ೫,೯೫,೭೩೨ |
| ೩ | ಬೀದರ .. | ೯,೨೨,೩೨೨ | ೨,೩೮,೩೪೩ |
| ೪ | ಉಸ್ಮಾನಾಬಾದ .. | ೬,೧೫,೨೧೬ | ೧೬,೫೭೬ |
| ೫ | ಅತರಾಫಬಲ್ದಾ .. | ೪,೯೭,೪೯೮ | ೧೯,೧೧೯ |
| ೬ | ಮಹಬೂಬ ನಗರ .. | ೭,೫೦,೭೩೦ | ೧೬,೮೬೯ |
| ೭ | ನಾಂದೇಡ .. | ೬,೭೧,೦೧೯ | ೩೧,೩೬೯ |

೧೮. ಈ ಲೆಕ್ಕದಿಂದ ನೋಡಲಾಗಿ (೧) ಉಸ್ಮಾನಾಬಾದ, (೨) ಅತರಾಫಬಲ್ದಾ, (೩) ಮಹಬೂಬ ನಗರ, (೪) ನಾಂದೇಡ ಜಿಲ್ಲೆಗಳಲ್ಲಿಯೂ ಕನ್ನಡಿಗರ ಸಂಖ್ಯೆಯು ಹೆಚ್ಚಾಗಿರುವುದೆಂದು ತಿಳಿಯುವುದು. ಇವುಗಳಲ್ಲಿ ಯಾವ ಯಾವ ಜಿಲ್ಲೆಗಳು ಕರ್ಣಾಟಕ ಜಿಲ್ಲೆಗಳಿಗೆ ಹೇಗೆ ಹೊಂದಿವೆಯೆಂಬುದನ್ನು ಕೆಳಗೆ ನೋಡಬಹುದು:—

(೧) ಉಸ್ಮಾನಾಬಾದ ಜಿಲ್ಲೆಯ ದಕ್ಷಿಣಕ್ಕೆ ಗುಲ್ಬರ್ಗಾ ಜಿಲ್ಲೆಯೂ, ಪೂರ್ವಕ್ಕೆ ಬೀದರ ಜಿಲ್ಲೆಯೂ ಇರುವುದರಿಂದ ಈ ಜಿಲ್ಲೆಯಲ್ಲಿ ಹೆಚ್ಚಾಗಿದ್ದ ಕನ್ನಡಿಗರ ಸಂಖ್ಯೆಯು ಬಹಳಮಟ್ಟಿ ಗೆ ಎರಡೂ ಜಿಲ್ಲೆಗಳಿಗೆ ಹೊಂದಿದ ತಾಲ್ಲೂಕುಗಳಲ್ಲಿರಲಿಕ್ಕೆ ಬೇಕು.

(೨) ಅತರಾಫಬಲ್ದಾ ಜಿಲ್ಲೆಯ ಪಶ್ಚಿಮಕ್ಕೆ ಗುಲ್ಬರ್ಗಾ ಜಿಲ್ಲೆಯೂ, ದಕ್ಷಿಣಕ್ಕೆ ಮಹಬೂಬ ನಗರ ಜಿಲ್ಲೆಯೂ ಇದ್ದು ಬಹುಶಃ ಇವುಗಳಿಗೆ ಹತ್ತಿರ ತಾಲ್ಲೂಕುಗಳಲ್ಲಿ ಕನ್ನಡಿಗರು ಹೆಚ್ಚಾಗಿರುವರು.

(೩) ಮಹಬೂಬ ನಗರ ಜಿಲ್ಲೆಯ ಪಶ್ಚಿಮಕ್ಕೆ ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಿದ್ದು, ಇವುಗಳಿಗೆ ಸೇರಿಯಾಗಿದ್ದ ತಾಲ್ಲೂಕುಗಳಲ್ಲಿಯೇ ಕನ್ನಡಿಗರಿರಬೇಕು.

(೪) ನಾಂದೇಡ ಜಿಲ್ಲೆಯ ದಕ್ಷಿಣಕ್ಕೆ ಬೀದರ ಜಿಲ್ಲೆಯಿರುವುದರಿಂದ ಬೀದರಕ್ಕೆ ಹೊಂದಿದ ತಾಲ್ಲೂಕಿನಲ್ಲಿ ಕನ್ನಡಿಗರಿರಬಹುದು.

೧೯. ಆದುದರಿಂದ ಮೇಲ್ಕಂಡ ಎಲ್ಲ ಜಿಲ್ಲೆಗಳೊಳಗಿನ ಬಹುಸಂಖ್ಯಾತರಾದ ಕನ್ನಡಿಗರಿರುವ ತಾಲ್ಲೂಕುಗಳನ್ನು ಸಂಗಡಿಸಿ ಕರ್ಣಾಟಕ ಪ್ರಾಂತಕ್ಕೆ ಸೇರಿಸತಕ್ಕದ್ದು. ನಮ್ಮ ಸಂಸ್ಥಾನದಲ್ಲಿ ದುರ್ದೈವದಿಂದ ಪ್ರತಿ ಜಿಲ್ಲೆಯ ಗೆಜಿಟಿಯರುಗಳಿನ್ನೂ ಸಂಪೂರ್ಣವಾಗಿ ಸಿದ್ಧವಾಗಿಲ್ಲ. ಆದುದರಿಂದ, ಇವೆಲ್ಲ ಜಿಲ್ಲೆಗಳೊಳಗಿನ ಇಂಥಿಂಥ ತಾಲ್ಲೂಕುಗಳೇ ಕರ್ಣಾಟಕದವೆಂದು ನಮಗೆ ಹೇಳಲಿಕ್ಕೆ ಸಾಧ್ಯವಿಲ್ಲದಾಗಿದೆ.

೨೦. ಇನ್ನು, ಸಂಸ್ಥಾನದಲ್ಲಿ ಕರ್ಣಾಟಕ ಪ್ರಾಂತವನ್ನು ಬೇರ್ಪಡಿಸುವ ಮಹಾ ಕಾರ್ಯವನ್ನು ಯಾರು ಕೈಕೊಳ್ಳಬೇಕೆಂಬುದೂ ಒಂದು ಮಹತ್ತ್ವದ ಪ್ರಶ್ನೆಯೇ ಆಗಿರುವುದು. ಈ ವಿಷಯದಲ್ಲಿ ದೊಡ್ಡ ದೊಡ್ಡ ಸ್ಥಿತಿಯಲ್ಲಿದ್ದ ಕನ್ನಡಿಗರು ಮುಂದುವರಿಯಲಿಕ್ಕೆ ಬೇಕು. ಅವರು ಈ ಕಾರ್ಯದಲ್ಲಿ ಸಂಸ್ಥಾನದ ಸರಕಾರಕ್ಕೆ ಒತ್ತಾಯ ಮಾಡಬೇಕು. ಇದರಲ್ಲಿ ಸರಕಾರಕ್ಕೆ ಯಾವ ವೆಚ್ಚವೂ ತಗಲುವುದೇ ಇಲ್ಲ. ಗುಲ್ಬರ್ಗಾ, ರಾಯಚೂರು, ಬೀದರಗಳಂತೂ ಈಗ ಒಂದೇ ಪ್ರಾಂತದಲ್ಲಿಯೇ ಇವೆ. ಇವುಗಳ ಸಂಗಡ ಆಯಾ ತಾಲ್ಲೂಕಿನ (ಬೇರೆ ಜಿಲ್ಲೆಗಳ) ಬಹುಸಂಖ್ಯಾತ ಕನ್ನಡಿಗರನ್ನು ಒಂದೇ ಪ್ರಾಂತದಲ್ಲಿ ಸೇರಿಸುವುದು ಬಹು ಸುಲಭವಾಗಿಯೇ ಇದೆ. ಅದಲು ಬದಲುಗಳಂತೂ ಮೊಗಲಾಯಿಯಲ್ಲಿ ಹೊಸವಲ್ಲ. ಈ ರೀತಿ ಪ್ರಾಂತ ವಿಭಾಗದಲ್ಲಿ ಶಾಶ್ವತವಾಗಿ ಸುವ್ಯವಸ್ಥೆಯಾಗುವುದೆಂಬ ಮಾತನ್ನು ಸರಕಾರದವರ ತಲೆಯಲ್ಲಿ ಬಿಂಬಿಸಬಹುದು. ಅಷ್ಟು ಗಟ್ಟಿಗರಾದ ಕನ್ನಡಿಗರಾರೆಂಬುದೊಂದು ದೊಡ್ಡ ಪ್ರಶ್ನೆಯು. ದೇ॥ ಭ॥ ವಾಮನರಾವ ನಾಯಿಕ ಇವರು ಪ್ರತಿಯೊಂದು ರೀತಿಯಲ್ಲೂ ಗಟ್ಟಿಗರಾದ ಮುಂದಾಳುಗಳಿರುತ್ತಾರೆ. ಇವರು ಹೇಗಿದ್ದರೂ ಕರ್ಣಾಟಕದಲ್ಲಿ ಕಾಲಿಟ್ಟಕೂಡಲೆ ಕನ್ನಡಿಗರೆಂದೇ ಹೇಳಿಕೊಳ್ಳುವರು. ಇವರು ಕನ್ನಡಿಗರೇನೋ ನಿಜ, ಮರಾಟಿಗರಂತೆ ವರ್ತಿಸುವುದೂ ನಿಜ. ಆದರೂ ತಮ್ಮ ನಿಜ ಸ್ವರೂಪವನ್ನು ಬಯಲಿಗೆ ಹಾಕಿ ಈ ವಿಷಯದಲ್ಲಿ ಪ್ರಯಾಸದಿಂದ ಪ್ರಯತ್ನಪಟ್ಟರೆ ತಾನೇ ಸಾಧ್ಯವಾಗುವದು. ಇವರಿಗೆ ಸಂಸ್ಥಾನದ ಅಧಿಕಾರಿವರ್ಗದಲ್ಲಿಯೂ ಜನತೆಯಲ್ಲಿಯೂ ಸಮಾನವಾಗಿಯೇ ಮನ್ನಣೆಯಿರುವುದು. ಇವರಿಗೆ ಸಹಾಯಕರಾಗಲಿಕ್ಕೆ ದೊಡ್ಡ ಸ್ಥಿತಿಯಲ್ಲಿರುವವರೆಂದರೆ, ಹೈದರಾಬಾದ ಹೈಕೋರ್ಟಿನ ನ್ಯಾಯಮೂರ್ತಿಗಳಾದ ಪಂಡಿತ ಗಿರಿರಾಯರು. ಹೈಕೋರ್ಟು ಜಡ್ಜರಾಗಿದ್ದರೂ, ಈ ವಿಷಯವು ಸರಕಾರಕ್ಕೆ ಯೋಗ್ಯವಾದುದರಿಂದ, ಯಾವ ದೋಷವೂ ಇಲ್ಲ. ಇದಲ್ಲದೆ, ಶ್ರೀ ವಾಮನ ನಾಯಿಕರೂ, ಶ್ರೀ ಗಿರಿರಾಯರೂ ಕೂಡಿಯೇ ಕೆಲಸಮಾಡುವ ಮನಸ್ಸುಳ್ಳವರೆಂಬುದಕ್ಕೆ ಮೊನ್ನಿನ ಯುಗಾದಿ ಪ್ರತಿಪದೆಯ ದಿವಸ ಹೈದರಾಬಾದಿನಲ್ಲಿ ಶ್ರೀ ವಾಮನ ನಾಯಿಕರ ಜಗನೆಯ ವರ್ಧಂತ್ಯುತ್ಸವದಲ್ಲಿ ಶ್ರೀ ಗಿರಿರಾಯರು ಅಧ್ಯಕ್ಷರಾಗಿ ಶ್ರೀ ನಾಯಿಕರ ಗುಣಪ್ರಶಂಸೆ ಮಾಡಿರುವುದೇ ಸಾಕ್ಷಿ. ಇದಲ್ಲದೆ, ಹೈದರಾಬಾದ ಗುಲ್ಬರ್ಗಾಗಳಲ್ಲಿರುವ, ಶ್ರೀ ಕಾರವಾನ, ಶ್ರೀ ಶಿವಾನರಾವ, ಶ್ರೀ ಜಂಗಿ ಶೇಷಗಿರಿರಾವ,

ಶ್ರೀ ಪಾಂಡುರಂಗರಾವ, ದೇಶಮುಖ ಶ್ರೀ ಕೃಷ್ಣರಾವ ದೇಸಾಯಿ ಮತ್ತು ಇತರ ದೊಡ್ಡ ದೊಡ್ಡ ವಕೀಲರಿರುವರು. ಎಲ್ಲರೂ ಕೂಡಿ ಪ್ರಯತ್ನಪಟ್ಟಲ್ಲಿ ತಾನೇ ಸುಲಭವಾಗುವುದು.

೨೧. ಇದರ ತರುವಾಯ ಎರಡನೆಯ ಪ್ರಯತ್ನವೇನೆಂದರೆ, ನಮ್ಮ ಸಂಸ್ಥಾನದಲ್ಲಿ ಉರ್ದು ವಿನಾ ಮಿಕ್ಕ ಯಾವ ದೇಶೀಯ ಭಾಷೆಗಳಿಗೂ ಪ್ರಾಶಸ್ತ್ಯವಿಲ್ಲವೆಂಬ ಸಂಗತಿಯನ್ನಂತೂ ಮೊದಲೇ ಹೇಳಿದೆ. ಉರ್ದು ಭಾಷೆಯು ರಾಜಭಾಷೆಯಾಗಿದ್ದರೂ ಬಹುಸಂಖ್ಯಾತ ಪ್ರಜಾಜನರ ಭಾಷೆಯಲ್ಲ. ಆದುದರಿಂದ ಪರಭಾಷೆಯ ಬಲವನ್ನು ಪ್ರಜಾಜನರ ಮನಸ್ಸಿನ ವಿರುದ್ಧವಾಗಿ ಹಾಕುವುದು ಮನುಷ್ಯ ಧರ್ಮಕ್ಕೆ ವಿರೋಧವಾಗಿರುವುದು. ಬ್ರಿಟಿಷ ಸರಕಾರದ ಭಾಷೆಯು ಇಂಗ್ಲಿಷ್ ಆಗಿದ್ದರೂ ಆಯಾ ಪ್ರಾಂತಿಕ ಭಾಷೆಗಳಿಗೆ ಅವರು ನಮ್ಮಲ್ಲಿಗಿಂ ಹೆಚ್ಚು ಮರ್ಯಾದೆಯನ್ನು ಕೊಟ್ಟಿರುವರು. ಈ ತತ್ತ್ವವನ್ನನುಸರಿಸಿ ಕನ್ನಡಕ್ಕೆ ಹಾಗೂ, ಕನ್ನಡ ಶಿಕ್ಷಣಕ್ಕೆ ಧಾರವಾಡ, ವಿಜಾಪುರ ಮೊದಲಾದ ಜಿಲ್ಲೆಗಳಲ್ಲಿರುವಷ್ಟು ಶಿಕ್ಷಣ ಪದ್ಧತಿಯನ್ನಾದರೂ ಇಲ್ಲಿಡಬೇಕು. ಗ್ರಾಮಾಧಿಕಾರಿಗಳು ಕನ್ನಡ ಮುಲ್ಕೀ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಲಿಕ್ಕೆಬೇಕೆಂಬ ನಿರ್ಬಂಧವಿರಬೇಕು. ಕನ್ನಡ ಶಿಕ್ಷಕರ ಟ್ರೈನಿಂಗು ಕಾಲೇಜು ಆಗಬೇಕು. ಆಂಧ್ರ, ಹಾಗೂ ಮರಾಠೀ ಕಾಲೇಜುಗಳೇಕಿರಬೇಕು? ಕನ್ನಡವೇಕಿರಬಾರದು? ಈ ವಿಷಯದಲ್ಲಿ ಸಾಕಾದಷ್ಟು ತೃಪ್ತಿಕರವಾಗಿ ಕೆಲಸವನ್ನು ಮಾಡಲು ವಿದ್ಯಾಖಾತೆಯವರನ್ನು ಒತ್ತಾಯ ಮಾಡಬೇಕು.

೨೨. ಮೂರನೆಯ ಪ್ರಯತ್ನವೆಂದರೆ, ಇಲ್ಲಿಯ ಕೋರ್ಟು ಭಾಷೆಯು ಉರ್ದುವಾಗಿರುವುದು. ಬ್ರಿಟಿಷ ಕರ್ಣಾಟಕದಲ್ಲಿ ಕೋರ್ಟು ಭಾಷೆಯು ಕನ್ನಡವಾಗಿದ್ದರೂ ಸಂಸ್ಥಾನದಲ್ಲಿ ಅದೇ ಮಾದರಿಯನ್ನನುಸರಿಸಲು ಇಲ್ಲಿ ಯಾವ ಪರಿಸ್ಥಿತಿಯೂ ಪ್ರತಿಕೂಲವಾಗಿಲ್ಲ. ದೇಶೀಯ ಭಾಷೆಯಲ್ಲದ ಪರಭಾಷೆಗಳಲ್ಲಿ ಕೋರ್ಟುಗಳನ್ನು ನಡೆಯಿಸುವುದು ರೈತರಿಗೂ ಸರಕಾರಕ್ಕೂ ಕೂಡಿಯೇ ಲಾಭದಾಯಕವಲ್ಲ. ರೈತರಿಗೆ ಬಹಳ ಅನನುಕೂಲವು ಸಂಭವಿಸುವುದಲ್ಲದೆ, ಯಾವ ನ್ಯಾಯವನ್ನು ತೀರಿಸುವ ಉದ್ದೇಶದಿಂದ ಸರಕಾರವು ಕೋರ್ಟುಗಳನ್ನು ನಿಯಮಿಸಿರುವುದೋ ಆ ಉದ್ದೇಶವು ತೃಪ್ತಿಕರವಾಗಿ ಸಾಧಿಸುವುದಿಲ್ಲವೆಂಬುದು ನಿರ್ವಿವಾದವು. ದೇಶೀಯ ಭಾಷೆಗಳಲ್ಲಿ ಕಾರ್ಯಭಾಗಗಳು ಜರುಗುವುದರಿಂದ ರೈತರಿಗಾದಷ್ಟು ವಿಶ್ವಾಸವು ಅನ್ಯಭಾಷೆಗಳಲ್ಲಿರುವುದಿಲ್ಲ. ಇದಲ್ಲದೆ ರೈತರು ತೀರ ಪರಾವಲಂಬಿಗಳಾಗಬೇಕಾಗುತ್ತದೆ. ಕೇವಲ ಅಲ್ಪಸಂಖ್ಯಾತ ಜನರ ಭಾಷೆಯಾಗಿರುವ ಉರ್ದುವನ್ನು ಮಿಕ್ಕ ಭಾಷೆಗಳ ಆಹುತಿಯಿಂದ ಎತ್ತಿಹಿಡಿಯುವುದು ರಾಜ್ಯಪದ್ಧತಿಗೆ ತೀರ ವಿರೋಧವಾದುದು. ಈ ಸಂಗತಿಯಲ್ಲಿ ಮುಖ್ಯ ವಿಷಯಗಳಿಗಿಂತ ಕೋರ್ಟಿನಲ್ಲಿ ನ್ಯಾಯವಾಗಬಹುದಾದ ಸೋಲಿಯು ಹೆಚ್ಚು ಬೆಲೆಯುಳ್ಳದ್ದಿರುವುದು. ಸೋಲಿಯು ಜೀಲಿಯಿಂದ ಕೆಲಸಕ್ಕೂ, ಕೆಲಸದಿಂದ ವಿಚಾರಣೆಗೂ ಭಾರ

ಬೇಳುವದು. ವಸ್ತುತಃ, ವ್ಯಯವಾಗಬಹುದಾದ ಎರಡರಷ್ಟು ಹಣವು ಪರಭಾಷೆಯಲ್ಲಿ ಆಗುವದು. ನಮ್ಮಲ್ಲಿಯ ಹೈಕೋರ್ಟಿನ ಛೀಫ್ ಜಡ್ಜರು ವೇಳೆಯ ಅಪವ್ಯಯವನ್ನು ಪ್ರತಿಬಂಧಿಸಲಿಕ್ಕೆ ದೊಡ್ಡದೊಂದು ಪಂಚಾಂಗದಂತಿರುವ ಸರ್ಕ್ಯೂಲರನ್ನು ತೆಗೆದಿರುವರು. ಆದರೆ ಅವರ ದೃಷ್ಟಿಯು ಈ ವಿಷಯದಲ್ಲಿ ಗಮಿಸಿಲ್ಲ. ಬಹಳ ಮಾಡಿ ಸರಕಾರವೂ ಛೀಫ್ ಜಡ್ಜರೂ ಉರ್ದುವಿನ ಪುರಸ್ಕರ್ತರಾದುದೇ ಕಾರಣವಲ್ಲವೇ?

೨೩. ಮೇಲೆ ಹೇಳಿದ ಮೂರು ಪ್ರಯತ್ನಗಳ ಹೊಣೆಯು ಸರಕಾರದವರ ಮೇಲಿರುವದು. ಅದರಂತೆಯೇ ಜನತೆಯಲ್ಲಿ ಈ ವಿಷಯಕವಾದ ಜಾಗ್ರತಿಯನ್ನುಂಟುಮಾಡಿ ಸರಕಾರವು ಈ ವಿಷಯಕ್ಕೆ ಸಿದ್ಧವಾಗಿಯೇ ತೀರಬೇಕೆಂಬಂತೆ ಮಾಡುವುದು ಸಂಸ್ಥಾನಿಕ ಕನ್ನಡಿಗರ ಆದ್ಯ ಕರ್ತವ್ಯವಾಗಿದೆ. ಈ ವಿಷಯದಲ್ಲಿ ಮುಖ್ಯ ಮಂಡಲವನ್ನೇರ್ಪಡಿಸಿ ಆಯಾ ಜಿಲ್ಲೆಗಳಲ್ಲಿ ಶಾಖೆಗಳನ್ನು ಸ್ಥಾಪಿಸಿ ಕಾರ್ಯವನ್ನು ಸಾಗಿಸಬೇಕು. ಸಂಸ್ಥಾನೀ ಮಂಡಲಕ್ಕೆ ಸಹಾಯಕವಾಗಿ ಬ್ರಿಟಿಷ ಕರ್ಣಾಟಕದವರ ಉಪದೇಶಕ ಮಂಡಲವೊಂದಿರಬೇಕು. ಈ ಮಂಡಲದವರ ಮುಖ್ಯ ಕಾರ್ಯಗಳು :—

(೧) ಕನ್ನಡ ಶಾಖೆಗಳನ್ನು ಹೆಚ್ಚು ಮಾಡುವುದು.

(೨) ಕನ್ನಡ ಸ್ಥಾಯಿಕ ಮತ್ತು ಸಂಚಾರದ ವಾಚನಾಲಯಗಳನ್ನು ಸ್ಥಾಪಿಸುವುದು.

(೩) ಕೀರ್ತನ, ಪುರಾಣ, ಭಜನೆಗಳ ರೂಪದಿಂದ ಕನ್ನಡ ಭಾಷೆಯ ವಿಷಯಕ್ಕೂ ಕರ್ಣಾಟಕದ ಸಂಸ್ಕೃತಿಯ ವಿಷಯಕ್ಕೂ ಜಾಗೃತಿಯನ್ನುಂಟು ಮಾಡುವುದು.

(೪) ಕನ್ನಡದಲ್ಲಿ ವೃತ್ತಪತ್ರಗಳನ್ನು ಹೊರಡಿಸುವುದು. (ಈ ಸಂಸ್ಥಾನದಲ್ಲಿ ಕನ್ನಡದಲ್ಲಿ ಒಂದೂ ವೃತ್ತಪತ್ರವಿಲ್ಲ. ಮರಾಟಿಗರೂ ಆಂಧ್ರರೂ ತಮ್ಮ ಪತ್ರಿಕೆಗಳನ್ನಿಟ್ಟುಕೊಂಡಿರುವರು. ಈಗ ಈ ಕಾರ್ಯದ ವಿಷಯವಾಗಿ ನಮಗೆ ಪರಿಚಯಸ್ಥರಾದ ಶ್ರೀ ಭೀಮಾಚಾರ್ಯ ಚಿಮ್ಮಲಗಿಯವರು ಆಲೋಚಿಸುತ್ತಿರುವರು. ಹೈದರಾಬಾದಿನಲ್ಲಿ ಕನ್ನಡ ಶಾಲೆಯೊಂದನ್ನು ಹೊರಡಿಸಿರುವರು. ಬಹುಶಃ ಶ್ರೀ ಚಿಮ್ಮಲಗಿಯವರ ಪ್ರಯತ್ನವು ತೀವ್ರ ಫಲಕಾರಿಯಾಗಬಹುದು.)

**ಕೊನೆಯ ಮಾತು.**—ಈ ವಿಷಯದಲ್ಲಿ ನನಗೆ ತಿಳಿದಮಟ್ಟಿಗೆ ಎಲ್ಲ ವಿಷಯಗಳನ್ನೂ ಚರ್ಚಿಸಿದ್ದೇನೆ. ವಿಷಯವು ದೊಡ್ಡದಾದುದರಿಂದ ಜನರಿಗೆ ಜುಗುಪ್ಸೆಯುಂಟಾಗಬಹುದು; ಉಪಾಯವಿಲ್ಲ. ಒಟ್ಟಿನ ಮೇಲೆ, ಎಲ್ಲರೂ ಕೂಡಿ ಈ ವಿಷಯವನ್ನಾಲೋಚಿಸಿ ಕಾರ್ಯತತ್ಪರರಾಗಬೇಕೆಂಬುದೇ ನನ್ನ ಉದ್ದೇಶವು.

**ರಾಘವೇಂದ್ರರಾವ ಚಾಕಲಬ್ಬಿ.**




# ಗ್ರಂಥ ವಿಮರ್ಶೆ

## ೧. ಕನ್ನಡ ಜ್ಞಾನೇಶ್ವರಿ

(ಮೊದಲನೆಯ ಭಾಗ—ಅಧ್ಯಾಯಗಳು ೧–೬)

ಲೇಖಕರು.—ರಾಘವೇಂದ್ರ ಸುಬ್ಬರಾವ್ ಮೂಡಕಟ್ಟಿ, ಬಿ.ಎ.,

ಮಾಮಲೇದಾರ, ಬೆಳಗಾಂವ.

ಕ್ರೌನ್ ಚತುಷ್ಪತ್ರ ಪುಟಗಳು ೧೦+೧೩೦ ; ಬೆಲೆ ರೂ. ೧–೪–೦.

ಇದು ಶ್ರೀ ಜ್ಞಾನೇಶ್ವರ ಸಾಧುಗಳು ಶ್ರೀ ಭಗವದ್ಗೀತೆಯ ಮೇಲೆ ಮರಾಠಿಯಲ್ಲಿ ಬರೆದ 'ಭಾವಾರ್ಥ ದೀಪಿಕೆ' ಎಂಬ ಟೀಕೆಯ ಕನ್ನಡ ಪದ್ಯಾನುವಾದವು. ಈ ಟೀಕೆಗೆ 'ಜ್ಞಾನೇಶ್ವರಿ' ಎಂಬ ಹೆಸರು ಪ್ರಸಿದ್ಧಿಗೆ ಬಂದಿದೆ. ಈ ಸಂಚಿಕೆಯಲ್ಲಿ ಮೊದಲಣ ಆರು ಅಧ್ಯಾಯಗಳು ಮಾತ್ರ ಇವೆ; ಒಟ್ಟು ಭಾಮಿನೀ ಷಟ್ಪದಿಗಳು ೧,೨೫೩.

ಮೊದಲಣ ೧೦೦ ಪದ್ಯಗಳು ಪೀಠಿಕೆ ಪ್ರಸ್ತಾವನೆಗಳಾಗಿರುವುವು; ತರುವಾಯ, ಭಗವದ್ಗೀತೆಯ ಪ್ರತಿ ಸಂಸ್ಕೃತ ಶ್ಲೋಕವನ್ನೂ ಕೊಟ್ಟು ಅದರ ಕೆಳಗಡೆ ಟೀಕಾ ರೂಪವಾದ ಕನ್ನಡ ಪದ್ಯಗಳನ್ನು ಕೊಟ್ಟಿದೆ. ಸಂಸ್ಕೃತ ಮೂಲಕ್ಕೆ ಪದಶಃ ಸಾಮಾನ್ಯವಾಗಿ ತೋರುವುದಕ್ಕಿಂತಲೂ ಹೆಚ್ಚು ಅರ್ಥವೂ, ಲೌಕಿಕ ದೃಷ್ಟಾಂತಗಳೂ, ವಿಶೇಷ ವಿವರಣೆಯೂ ಕನ್ನಡ ಪದ್ಯಗಳಲ್ಲಿ ಅಡಕವಾಗಿವೆ. ಇದರಿಂದಲೇ, ೨೮೦ ಸಂಸ್ಕೃತ ಶ್ಲೋಕಗಳಿಗೆ ೧,೧೫೩ ಷಟ್ಪದಿಗಳನ್ನು ರಚಿಸಿರುವುದು.

ಪದ್ಯಗಳ ಶೈಲಿಯು ಸುಲಭವಾದ ಅಚ್ಚ ತಿಳಿಗನ್ನಡವಾಗಿದೆ; ಲಲಿತವಾಗಿಯೂ ಕ್ಲಿಷ್ಟವಿಲ್ಲದೆಯೂ ಇರುವ ಹೊಸಗನ್ನಡವನ್ನೇ ಉಪಯೋಗಿಸಿರುವುದರಿಂದ ಸ್ತ್ರೀಯರೇ ಮೊದಲಾಗಿ ಎಲ್ಲರೂ ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಆದರೆ ಶಬ್ದರೂಪಗಳೂ ಪ್ರಯೋಗಗಳೂ ಅಷ್ಟು ಗ್ರಾಂಥಿಕಗಳಾಗಿಲ್ಲ; ಪ್ರಾಸನಿಯಮವನ್ನೂ ಅಷ್ಟು ಕಡಿದಾಗಿ ಅನುಸರಿಸಿಲ್ಲ. ಮುದ್ರಣದ ತಪ್ಪುಗಳು ಅಲ್ಲಲ್ಲಿ ಕಂಡುಬಂದರೂ ಬೇಸರಗೊಳಿಸುವಂತಿಲ್ಲ.

ಭಗವದ್ಗೀತೆಗೆ ವಿಶೇಷಾರ್ಥ ವಿವರಣೆಯನ್ನೂ ಲೋಕಾನುಭವ ನಿದರ್ಶನಗಳನ್ನೂ ಕೊಟ್ಟಿರುವುದು ವಾಚಕರಿಗೆ ಇದನ್ನೋದುವುದರಲ್ಲಿ ಕುತೂಹಲವನ್ನುಂಟುಮಾಡದಿರದು. ಲೇಖಕರ ಸಹಜವಾದ ಕವಿತಾ ಶಕ್ತಿಯೂ ಭಕ್ತಿ ಭಾವವೂ ಈ ಗ್ರಂಥದಲ್ಲಿ ಸ್ಪಷ್ಟವಾಗಿ ತೋರುವುದು. ಕನ್ನಡಿಗರೆಲ್ಲರೂ ಈ ಗ್ರಂಥವನ್ನು ಆದರ

ದಿಂದ ಪಠನಮಾಡಿ ಗ್ರಂಥಕರ್ತರ ಶ್ರಮವನ್ನು ಸಾರ್ಥಕಗೊಳಿಸಿ ಮುಂದಣ ಭಾಗಗಳೂ ಬೇಗನೆ ಪ್ರಕಟವಾಗುವಂತೆ ಪ್ರೋತ್ಸಾಹಿಸುವರೆಂದು ಹಾರೈಸುತ್ತೇವೆ.

* ಕೆಲವು ನ್ಯೂನತೆಗಳನ್ನು ಮಾತ್ರ ತೋರಿಸುವೆವು:—

ಪುಟ ೧, ಪದ್ಯ ೪ ದ್ರಾಕ್ಷೆರಸ; ೫–೫೪ ತಿಳುಕೊಳ್ಳಬೇಕ್ಕೆ; ೭–೭೦ ಭಂಗಾರ ರೂಪವು; ೯–೯೦ ತೇಜರಾಶಿಯಲಾ; ೧೩–೧೨೭ ನೋಡಿದನು ರಿಪು ಸೈನ್ಯ; ೧೭–೧೫೫ ನರಕದೊಳದ್ದು ಬಿಡನೇ; ೧೮–೧೬೨ ಎರಡನೇಯವನೀತ; ೨೧–೧೯೨ ಸಿದ್ಧಿಗಳು ಅಂತಃಕರಣವನು; ೨೩–೧೪ ನೀನು ಯೇತಕೆ; ೨೩–೧೫ ಬಡೆದಾಟ; ೨೩–೧೬ ಅಂತರಿಸುವುದು ಯಿಹಪರಂಗಳ—ಇತ್ಯಾದಿ.

ಪ್ರಾಸ ನಿಯಮಕ್ಕೆ—ಪುಟ ೩, ಪದ್ಯ ೨೬; ೧೦–೯೩, ೯೫; ೧೧–೧೦೩; ೧೬–೧೪೪, ೧೫೧; ೨೫–೩೧; ೨೬–೩೯—ಇತ್ಯಾದಿ.

---

## ೨. ಪುರಂದರ ದಾಸರು

ಲೇಖಕರು.—ವರವಣಿ ರಾಜಾರಾಯರು, ಬಿ.ಎ., ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟಗಳು ೧೬+೧೨೩; ೧೯೨೯; ಬೆಲೆ ೮ ಆಣೆ.

ಇದೊಂದು ದೃಶ್ಯಕಾವ್ಯ. ಪುರಂದರ ದಾಸರ ವಿಷಯದಲ್ಲಿ ಜನಗಳು ವಾಡಿಕೆಯಾಗಿ ಹೇಳುವ ಘಟನೆಗಳನ್ನೇ ನಾಟಕ ರೂಪದಲ್ಲಿ ಲೇಖಕರು ಚಿತ್ರಿಸಿದ್ದಾರೆ. ಜನತೆಯ ಬಾಯಲ್ಲಿರುವ—ಸಂಪ್ರದಾಯದಂತೆ ವಾಡಿಕೆಯಲ್ಲಿರುವ—ಕಥೆಗೆ ಅದು ರಸಘಟಿತವಾಗಿ ನಾಟಕಕ್ಕೆ ಸರಿಹೋಗುವಂತೆ ಮೆರುಗು ಕೊಟ್ಟು ಬದಲಾವಣೆ ಮಾಟಿಲ್ಲ. ದೃಶ್ಯಗಳನ್ನು ಜೋಡಣೆ ಮಾಡುವುದರಲ್ಲಿ ನಾಯಕರ ಮನೆ, ನಾಯಕರ ಅಂಗಡಿ, ಮತ್ತೆ ನಾಯಕರ ಮನೆ, ಮತ್ತೆ ನಾಯಕರ ಅಂಗಡಿ—ಹೀಗೆ ಜೋಡಿಸಿದರೆ ರಂಗಭೂಮಿಯಲ್ಲಿ ಪ್ರದರ್ಶಿಸಲು ಬಹಳ ಕಷ್ಟವಾಗುತ್ತದೆ. (ಒಂದು ದೃಶ್ಯದ ಸಾಮಗ್ರಿಗಳನ್ನು ತೆಗೆದು ಮತ್ತೊಂದರ ಸಾಮಗ್ರಿಗಳನ್ನು ಜೋಡಿಸಲು ಅವಕಾಶವೇ ದೊರೆಯುವುದಿಲ್ಲ.) ಆದರೂ, ಮಧ್ಯದಲ್ಲಿ ಸ್ವಲ್ಪ ವಿರಾಮವನ್ನು ಕೊಟ್ಟು ಇದಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳಬಹುದು. ದೇವದಾಸಿಯಾದ ರಾಧೆಗೆ ವಿಠಲನು ಪುರಂದರ ದಾಸರ ವೇಷದಲ್ಲಿ ಬಂದು ಕಡಗವನ್ನು ಕೊಟ್ಟು ಭಕ್ತನನ್ನು ಭಂಗಪಡಿಸಿದ ಸಂಗತಿಯು ನಾಟಕಕ್ಕೆ ತಕ್ಕುದಲ್ಲ. ವಿಠಲನನ್ನು ಇದರಿಂದ ಕೆಸರಿಗೆ ಎಳೆದಂತೆಯೇ ಸರಿ.

ಈ ದೃಶ್ಯದ ಭಾಷೆಯು ಸರಳವಾಗಿದೆ. ಪುರಂದರ ದಾಸರ ಕೀರ್ತನೆಗಳನ್ನೇ ಸೇರಿಸಿರುವುದು ಸ್ತುತ್ಯವಾಗಿದೆ.

**ಸಿ. ಕೆ. ವೆಂ.**

---

## ೩. ಕರ್ಣಾಟಕ ವಚನ ಮಣಿಮಂಜರಿ

ಲೇಖಕರು.—ಶಾ|| ವೆಂಕಟರಮಣಯ್ಯನವರು,

ಕರ್ಣಾಟಕ ಸಾಹಿತ್ಯನಿಧಿ, ಅಲಕಾಪುರ.

**ಕ್ರೌನ್ ಅಷ್ಟಪತ್ರ ಪುಟಗಳು ೧೦+೫೭ ; ೧೯೨೯ ; ಬೆಲೆ ೬ ಆಣೆ.**

ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಸಂಸ್ಕೃತದಲ್ಲಿ ಬರೆದಿರುವ 'ಮಣಿಮಂಜರಿ' ಎಂಬ ಗ್ರಂಥದ ಕನ್ನಡ ಪರಿವರ್ತನೆಯಿದು. ಪರಿವರ್ತನೆಯು ಯಥಾಶ್ರುತವಾಗಿರದೆ ಸಂದರ್ಭಾನುಸಾರವಾಗಿ ಹೆಚ್ಚು ಕಡಿಮೆ ಮಾಡಿ ವಚನ ರೂಪದಿಂದ ಬರೆದಿರುವಂತೆ ಗ್ರಂಥಕಾರರು ತಿಳಿಸಿರುವರು. ಇದರ ಮೊದಲಲ್ಲಿ ೩–೪ ಮಂದಿ ಪಂಡಿತರು ಈ ಪರಿವರ್ತನಾ ಗ್ರಂಥದ ವಿಷಯವಾಗಿ ಸೂಚಿಸಿರುವ ಸದಭಿಪ್ರಾಯಗಳಿವೆ. ಎಲ್ಲ ಮತಾಚಾರ್ಯರ ಚರಿತ್ರೆಗಳನ್ನು ಬರೆದಿರುವ ರೀತಿಯಲ್ಲಿಯೇ ಇದೂ ಇರುವುದು. "ಈಗ ಪ್ರಚಾರದಲ್ಲಿರುವ ಪುಸ್ತಕಗಳೊಳಗೆ ಪರಮತೀಯರ ವಿಷಯವಾಗಿ ವಿವರಿಸುವ ಕೇವಲ ದೂಷಣೀಯಾಂಶಗಳನ್ನು ದೂರೀಕರಿಸಿ, ನನ್ನ ಶಕ್ತ್ಯನುಸಾರವಾಗಿ, ಮೂಲಗ್ರಂಥಕಾರರ ಅಭಿಪ್ರಾಯವು ಭಿನ್ನವಾಗದಂತೆ ಕನ್ನಡಿಸಿರುವೆನು. ತಮ್ಮ ಮತಪ್ರಾಶಸ್ತ್ಯವನ್ನು ಪ್ರಕಟಿಸುವಾಗ ಇತರ ಮತಂಗಳ ನ್ಯೂನಾತಿರೇಕಂಗಳನ್ನು ಯುಕ್ತ ರೀತಿಯಿಂದ ಸೂಚಿಸುವುದು ಅಷ್ಟು ತಪ್ಪು ಎಂದು ಗಣಿಸಲ್ಪಡಲಾರದು. . . ." ಎಂದು ಗ್ರಂಥಕಾರರು ಪ್ರಾರಂಭದಲ್ಲಿ ಸೂಚಿಸಿರುವರು.

ಇದರಲ್ಲಿರುವ ೮ ಅಧ್ಯಾಯಗಳಲ್ಲಿ ಮೊದಲಣ ೪ ಅಧ್ಯಾಯಗಳು ಸೃಷ್ಟಿಕ್ರಮ, ರಾಮಾಯಣ ಭಾರತ ಕಥಾ ಸಂಕ್ಷೇಪ—ಇವುಗಳನ್ನು ಸೂಚಿಸುತ್ತವೆ. ಉಳಿದ ನಾಲ್ಕು ಅಧ್ಯಾಯಗಳು ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತ, ಮಹಿಮೆ ಮೊದಲಾದುವನ್ನು ತಿಳಿಸುವುವು. ಆಚಾರ್ಯರ ಚಿತ್ರವೊಂದನ್ನು ಕೊಟ್ಟಿದೆ.

ಭಾಷಾ ಶೈಲಿಯು ಸುಲಭವಾದ ತಿಳಿಗನ್ನಡವಾಗಿದೆ. ಮುದ್ರಣದ ತಪ್ಪುಗಳು ಬಹಳ ಕಡಿಮೆ.

---

## ೪. 'ಕರ್ಣಾಟಕ ಧುರೀಣ'ದ

ದೀಪಾವಳಿಯ

**ವಿಶೇಷ ಸಂಚಿಕೆ**

**ಸಂಚಿಕೆ ೨ ; ಡೆಮ್ಮೈ ಚತುಷ್ಪತ್ರ ಪುಟಗಳು ೯೬ ; ೧೯೨೯ ; ಬೆಲೆ ೧ ರೂಪಾಯಿ.**

ಈ ವಿಶೇಷ ಸಂಚಿಕೆಯಲ್ಲಿ, ಕಾವ್ಯ, ಕಲಾ, ಚಾರಿತ್ರ, ತಾತ್ತ್ವಿಕ, ಸಾಮಾಜಿಕ, ಕೃಷಿಕ, ಜ್ಯೋತಿಷ, ವಿದ್ಯಾಪ್ರಸಾರ, ವಾಣಿಜ್ಯ, ಶಿಲಾ ಲೇಖ, ವೈದ್ಯ—ಈ ವಿಷಯಕವಾದ ಲೇಖನಗಳೂ, ರೈಲ್ವೇ, ಬ್ಯಾಂಕು ಮೊದಲಾದುವುಗಳ ವಿಚಾರವೂ

ಕಥೆಗಳೂ ಇವೆ. ಕರ್ಣಾಟಕದ ನಾನಾ ಪ್ರಾಂತಗಳ ಪ್ರಸಿದ್ಧ ಲೇಖಕರು ಈ ಲೇಖನಗಳನ್ನು ಬರೆದಿರುತ್ತಾರೆ. ಅಂದವಾದ ಬಣ್ಣದ ದೊಡ್ಡ ಚಿತ್ರಪಟಗಳೆರಡು —ಒಂದು, 'ಶ್ರೀ ಕೃಷ್ಣಾರ್ಜುನರು ಕುರುಕ್ಷೇತ್ರದ ರಣಾಂಗಣದ ಮಧ್ಯದಲ್ಲಿ ನಿಂತಿರುವುದು ; ಮತ್ತೊಂದು, 'ರಾಣಾ ಪ್ರತಾಪನೂ ಭಿಲ್ಲ ಸರದಾರನೂ'—ಈ ಸಂಚಿಕೆಯಲ್ಲಿ ಸೇರಿಸಿವೆ. ಪ್ರಸಿದ್ಧರಾದ ಈಗಿನ ಭಾರತೀಯ ರಾಜ್ಯತಂತ್ರ ವಿಶಾರದರ ಚಿತ್ರಗಳೂ, ಕರ್ಣಾಟಕದ ಇತರ ಪ್ರಮುಖರ ಚಿತ್ರಗಳೂ, ಕೋಟೆ, ಕಟ್ಟಡ ಮೊದಲಾದುವುಗಳ ಚಿತ್ರಗಳೂ ಇದರಲ್ಲಿ ಅಡಕವಾಗಿವೆ.

ಬಗೆ ಬಗೆಯ ವಿಷಯಗಳ ಮೇಲೆ, ಆಯಾ ವಿಷಯಗಳಲ್ಲಿ ಪಾಂಡಿತ್ಯವುಳ್ಳ ಪ್ರಸಿದ್ಧ ಲೇಖಕರು ಲೇಖನಗಳನ್ನು ಬರೆದಿರುವುದರಿಂದ, ಈ ಸಂಚಿಕೆಯು ಎಲ್ಲರಿಂದಲೂ ಮಾನ್ಯ ಹೊಂದುವುದರಲ್ಲಿ ಸಂಶಯ ತೋರುವುದಿಲ್ಲ.

---

**ತಿದ್ದುಪಡಿ**

ಪರಿಷತ್ಪತ್ರಿಕೆಯ ೧೪ನೆಯ ಸಂಪುಟದ ೩ನೆಯ ಸಂಚಿಕೆಯಲ್ಲಿ,

ಪುಟ ೧೪೯, ಪಙ್ಕ್ತಿ ೧೪ರಲ್ಲಿ, ''ಪ್ರದುರಿತ ಧಾರೆಯಂ'' ಎಂಬುದನ್ನು ''ಖದಿದ ಖರಾಗ್ರಮಂ'' ಎಂದು ತಿದ್ದಿಕೊಳ್ಳಬೇಕು.

**ಬಿ. ಎಸ್. ಸ್ವಾಮಿ.**

---

ಶ್ರೀಃ
ಕರ್ಣಾಟಕ ಸಾಹಿತ್ಯ ಪರಿಷತ್ತು




---

## ಶುಕ್ಲ ಸಂವತ್ಸರದ ವರದಿ

---

೧. ಕಳೆದ ವರ್ಷ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನೈದನೆಯ ಸಮ್ಮೇಳನವು ಬೆಳಗಾಂವಿಯಲ್ಲಿ ವಿಶೇಷ ವೈಭವದಿಂದ ನಡೆಯಿತು. ಅದೇ ಸಮಯಕ್ಕೆ ಆ ನಗರದಲ್ಲಿ ಸಾಹಿತ್ಯ ಸಮ್ಮೇಳನದೊಡನೆ ಬಗೆ ಬಗೆಯ ಇತರ ಸಮ್ಮೇಳನಗಳೂ ನಡೆದುವು. ಕರ್ಣಾಟಕ ಭಾಷಾಭಿಮಾನಿಗಳು ನಾನಾ ಪ್ರಾಂತಗಳಿಂದಲೂ ಬಂದು ತುಂಬಿದ್ದರು. ಆಗಿನ ಜನಸಂದಣಿಯನ್ನೂ ಅಲ್ಲಿ ನೆರೆದಿದ್ದ ಭಾಷಾಭಿಮಾನಿಗಳೆಲ್ಲರಲ್ಲಿಯೂ ಕಳ ಕಳಿಸುತ್ತಿದ್ದ ಉತ್ಸಾಹಾಧಿಕ್ಯವನ್ನೂ ಸಮ್ಮೇಳನದ ವಿತರಣೆಯನ್ನೂ ನೋಡಿದರೆ ಕರ್ಣಾಟಕಾಂಬೆಯು ವರ್ಧಂತ್ಯುತ್ಸವದ ಸೊಬಗೋ ಎಂಬಂತೆ ತೋರುತ್ತಿದ್ದಿತು. ಆ ಸಮಯದಲ್ಲಿ ಹುಬ್ಬಳ್ಳಿಯ ನಾಗರಿಕರು ಹದಿನಾರನೆಯ ಸಮ್ಮೇಳನವನ್ನು ತಮ್ಮ ನಗರದಲ್ಲಿ ನಡೆಯಿಸಬೇಕೆಂಬುದಾಗಿ ಆಹ್ವಾನವನ್ನಿತ್ತುದು ಎಲ್ಲರಿಗೂ ಉಲ್ಲಾಸವನ್ನುಂಟುಮಾಡಿತು. ಮನುಷ್ಯ ಪ್ರಯತ್ನದಿಂದಲೇ ಎಲ್ಲವೂ ಸಾಧ್ಯವಾಗುವುದಾಗಿದ್ದರೆ ಈ ಹದಿನಾರನೆಯ ಸಮ್ಮೇಳನವು ಹುಬ್ಬಳ್ಳಿಯಲ್ಲಿ ನಡೆಯಬೇಕಾಗಿದ್ದಿತು. ಆದರೆ, ಪಿಡುಬು ರೋಗದ ಹಾವಳಿಯಿಂದಲೂ ನೀರಿನ ಸೌಕರ್ಯವಿಲ್ಲದ ಕೊರತೆಯಿಂದಲೂ ಇದು ಸಾಧ್ಯವಾಗದೆ ಹೋಯಿತು. ಮುಂದೆ, ಮತ್ತೂ ಹೆಚ್ಚಿನ ಉತ್ಸಾಹ ವೈಭವಗಳಿಂದ ಸಾಹಿತ್ಯ ಸಮ್ಮೇಳನವನ್ನು ತಮ್ಮ ನಗರದಲ್ಲಿ ನಡೆಯಿಸಲು ಕರ್ಣಾಟಕ ಭಾಷಾಭಿಮಾನಿಗಳಾದ ಹುಬ್ಬಳ್ಳಿಯ ಪ್ರಮುಖ ಮಹಾಶಯರು ಈ ಮೊದಲೇ ನಿಶ್ಚಯಿಸಿರಬಹುದೆಂದು ನಮ್ಮ ನಂಬಿಕೆ.

ಹುಬ್ಬಳ್ಳಿಯಲ್ಲಿ ಈ ಸಾರಿ ಸಮ್ಮೇಳನವು ನಡೆಯುವುದಕ್ಕಿಲ್ಲದೆ ಹೋದ ಸಂಗತಿಯು ತಿಳಿದೊಡನೆಯೇ ಶಿವಮೊಗ್ಗೆಯ ಮಹಾ ಜನರು ಕೇವಲ ಭಾಷಾ ಮಮತೆಯಿಂದ ಮುಂದೆ ಬಂದು ಈ ಹದಿನಾರನೆಯ ಸಮ್ಮೇಳನವು ತಮ್ಮ ನಗರದಲ್ಲಿ ನಡೆಯಬೇಕೆಂದು ಆಹ್ವಾನವನ್ನಿತ್ತರು. ಆದರೆ ಕಾಲಾವಧಿಯು ಸಾಲದೆ ಇದೂ ಅನುಕೂಲಿಸಲಿಲ್ಲ. ಶಿವಮೊಗ್ಗೆ, ತುಮಕೂರುಗಳನ್ನು ಬಿಟ್ಟು ಮೈಸೂರು ಸಂಸ್ಥಾನದ ಉಳಿದ ಆರು ಡಿಸ್ಟ್ರಿಕ್ಟುಗಳಲ್ಲಿಯೂ ಪರಿಷತ್ತಿನ ಸಮ್ಮೇಳನಗಳು ನಡೆದಿವೆ. ಆ ಡಿಸ್ಟ್ರಿಕ್ಟುಗಳ ಮಹಾ ಜನರೂ, ಕೊಡಗಿನ ಮತ್ತು ಉತ್ತರ ಕರ್ಣಾಟಕದ ಭಾಷಾಭಿಮಾನಿಗಳೂ, ತಂತಮ್ಮ ಪ್ರಾಂತಗಳಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನಗಳನ್ನು ನಡೆಯಿಸಿದರೆ, ಅಲ್ಲಿಗೆ ನಮ್ಮ ಪರಿಷತ್ತು ಕರ್ಣಾಟಕದಲ್ಲೆಲ್ಲ ಒಂದು ಬಾರಿ ಪರ್ಯಟನ ಮಾಡಿದಂತಾಗುವುದು. ಭಗವಂತನ

ದಯೆಯಿಂದ ಈ ಇಷ್ಟಾರ್ಥವು ಆದಷ್ಟು ಬೇಗನೆ ನೆರವೇರಲೆಂಬುದೇ ನಮ್ಮ ಹಾರೈಕೆ.

ಈ ಸಮ್ಮೇಳನವು ಹುಬ್ಬಳ್ಳಿಯಲ್ಲಿಯಾಗಲಿ, ಶಿವಮೊಗ್ಗಿಯಲ್ಲಿಯಾಗಲಿ ನಡೆಯುವುದಕ್ಕೆ ಅವಕಾಶವಿಲ್ಲದೆ ಹೋಗಿ ಮುಗ್ಗಟ್ಟಿನ ಸ್ಥಿತಿಯು ಒದಗಿದ್ದ ಕಾಲದಲ್ಲಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಆಹ್ವಾನವು ಬಂದುದು ಸರಸ್ವತೀ ಪೀಠದಿಂದಲೇ ಸಾಹಿತ್ಯ ಪರಿಷತ್ತಿಗೆ ಔತಣವು ಬಂದಂತಾಗಿ ನಮಗೆ ಅತ್ಯಂತ ಸಂತೋಷವನ್ನುಂಟುಮಾಡಿತು. ಇದಕ್ಕಾಗಿ ಪರಿಷತ್ತು ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಕೇವಲ ಕೃತಜ್ಞತೆಯುಳ್ಳುದಾಗಿರುವುದೆಂದು ತಿಳಿಸಬೇಕಾದ ಆವಶ್ಯಕತೆಯಿಲ್ಲ.

ಇನ್ನು, ಖೇದ ಪ್ರಕರಣವನ್ನಾರಂಭಿಸಿ ಪರಿಷತ್ತಿನ ಶೋಚನೀಯ ಪ್ರಸಂಗ ವನ್ನು ತಮಗೆ ಬಿನ್ನವಿಸಬೇಕಾಗಿದೆ. ಕಳೆದ ಸಾರಿ ನಡೆದ ಸಮ್ಮೇಳನದಲ್ಲಿ ಆಗಿನ ಗೌರವ ಕಾರ್ಯದರ್ಶಿಗಳೂ, ಕರ್ಣಾಟಕ ಭಾಷಾ ಸೇವಕರಲ್ಲಿ ಪುರಸ್ಕರಾದ ಹಿರಿಯರಲ್ಲೊಬ್ಬರೂ ಆದ ಶ್ರೀಮಾನ್ ಸಂಗಪುರಂ ವೆಂಕಟೇಶ ಅಯ್ಯಂಗಾರ್ಯರು ತಮಗೊಪ್ಪಿಸಿದ ವರದಿಯಲ್ಲಿ, "ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾಗಿ ಈ ಮೇ ತಿಂಗಳಿಗೆ ೧೪ ವರ್ಷಗಳಾದುವು. ಮನುಷ್ಯನ ಜೀವಮಾನದೊಡನೆ ಹೋಲಿಸಿ ನೋಡಿದರೆ ೧೪ ವಯಸ್ಸಿಗೆ ಹುಡುಗ ಹುಡುಗಿಯರಿಗೆ ಎಳಜೌವನವು ತಲೆದೋರುವಂತೆ ಪರಿಷತ್ತಿಗೆ ಯೌವನೋದಯ ಕಾಲವು ಪ್ರಾಪ್ತವಾಗಿರಬೇಕಷ್ಟೆ! ಆದರೆ, ಪರಿಷತ್ತಿಗೆ ಪ್ರತಿ ವರ್ಷವೂ ವಯಸ್ಸು ಹೆಚ್ಚುತ್ತ ಹೋದರೂ, ಅದಕ್ಕೆ ತಕ್ಕ ಪೋಷಣೆ ಸಾಲದೆ ಅದು ಇನ್ನೂ ಶೈಶವಾವಸ್ಥೆಯಲ್ಲೇ ಇರುವುದೆಂಬ ನೀಲಾಂಬರಿ ರಾಗವನ್ನು ತಮ್ಮ ಮುಂದೆ ಪ್ರತಿ ವರ್ಷವೂ ಆಲಾಪನ ಮಾಡುವ ಸಂದರ್ಭವು ಒದಗಿರುವುದು ಅತಿ ಶೋಚನೀಯವಾದುದು. ಪರಿಷತ್ತಿನ ದಾರ್ಢ್ಯಕ್ಕೂ ಅದರ ಬೆಳೆವಣಿಗೆಗೂ ಅದರ ಸದಸ್ಯರ ಪಟ್ಟಿಯು ಉದ್ದವೇ ಗುರುತು. ನಾವು ತಮಗೆ ಹಿಂದಣ ವರ್ಷಗಳ ವರದಿಯಲ್ಲಿ ಅರಿಕೆಮಾಡಿಕೊಂಡಂತೆ ಆ ಪಟ್ಟಿ ಬೆಳೆದಷ್ಟೂ ಅದರ ದಾರ್ಢ್ಯವು ಹೆಚ್ಚು, ಮೊಟಕಾದಷ್ಟೂ ಕಡಿಮೆ"—ಹೀಗೆಂದು ತಿಳಿಸಿದರು. ಕಳೆದ ಮೇ ತಿಂಗಳಿಗೆ ಪರಿಷತ್ತಿಗೆ ಹದಿನೈದು ವರುಷವೂ ತುಂಬಿ ಹದಿನಾರನೆಯ ವರ್ಷವು ಉಪಕ್ರಮವಾಗಿದೆ. ಆದರೆ, ಪೋಷಣೆಯು ದಿನದಿನಕ್ಕೂ ಕಡಿಮೆ ಯಾಗುತ್ತಲೇ ಬಂದು ದೇಹವು ಕೃಶವಾಗುತ್ತಿದೆ. ಹೀಗಾದರೆ ಮುಂದೆ ಗತಿಯೇನೆಂದು ಹೃದಯವು ತಲ್ಲಣಿಸುತ್ತಿದೆ. ಅಕ್ಷಯ ಸಂವತ್ಸರಾಂತದಲ್ಲಿ ಸದಸ್ಯರ ಸಂಖ್ಯೆಯು ೧೪೮; ಅದು ಪ್ರಭವ ಸಂವತ್ಸರಾಂತದಲ್ಲಿ ೧೪೫ಕ್ಕೆ ಇಳಿಯಿತು; ವಿಭವ ಸಂವತ್ಸರಾಂತದಲ್ಲಿಯೂ ಅಷ್ಟಕ್ಕೇ ನಿಂತಿದ್ದಿತು; ಶುಕ್ಲ ಸಂವತ್ಸರವಾದ ಮೇಲೆ ಅದು ೧೩೪ಕ್ಕೆ ಇಳಿದಿದೆ. ಪ್ರಭವದಿಂದ ಇಪ್ಪತ್ತು ಸಂವತ್ಸರಗಳು ಅತ್ಯುತ್ತಮವಾದುವೆಂಬ ವಾಣಿಯು ಪರಿಷತ್ತಿನ ಭಾಗಕ್ಕೆ ಸುಳ್ಳಾಗಬೇಕಾಯಿತು. ಆರ್ಯರೇ! ಈ ಕೊರತೆಯನ್ನೂ ನಿವಾರಣೆ ಮಾಡಿ ಪರಿಷತ್ತಿನ ಕಾರ್ಯಗಳು ಸುಲಲಿತವಾಗಿ ಸಾಗುವಂತೆ ಸದಸ್ಯರ ಸಂಖ್ಯೆಯು

ಹೆಚ್ಚುವ ಏರ್ಪಾಡನ್ನು ಮಾಡುವುದು ಒಟ್ಟು ಕರ್ಣಾಟಕದ ಕರ್ತವ್ಯವೆಂಬುದನ್ನು ಒತ್ತಿ ಒತ್ತಿ ಹೇಳುತ್ತೇವೆ.

ಪರಿಷತ್ತಿನ ಮೂಲ ಬಲವೆಂದರೆ ಸಮ್ಮ ಶ್ರೀಮನ್ಮಹಾರಾಜರವರ ಸರ್ಕಾರದವರು ಅಮೋಘ ರೀತಿಯಲ್ಲಿ ಮಾಡುತ್ತಿರುವ ಸಹಾಯ. ಕಳೆದ ಅಧಿವೇಶನದಲ್ಲಿ ಓದಿದ ವರದಿಯಲ್ಲಿ ಹೇಳಿರುವಂತೆ, ಅವರು ಕೃಪೆ ಮಾಡಿ ಸಹಾಯ ದ್ರವ್ಯವನ್ನು ಮೂರು ವರ್ಷ ಕಾಲಕ್ಕೆ ಹೆಚ್ಚಿಸಿಕೊಟ್ಟಿದ್ದಾರೆ. ಮೈಸೂರು ಸಂಸ್ಥಾನದ ದಿವಾನ್ ಸಾಹೇಬರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಮಹಮ್ಮದ್ ಇಸ್ಮಾಯಿಲ್, ಕೆಟಿ., ಸಿ.ಐ.ಇ., ಓ.ಬಿ.ಇ. ಯವರೂ, ಮಂತ್ರಾಲೋಚನಾ ಸಭೆಯ ಸಚಿವರುಗಳೂ ಪರಿಷತ್ತಿನ ವಿಚಾರದಲ್ಲಿ ತೋರಿಸುತ್ತಿರುವ ಆದರ ವಿಶ್ವಾಸಗಳು ಕೇವಲ ಶ್ಲಾಘನೀಯವಾಗಿವೆ. ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ ಶ್ರೀಮದ್ಯುವರಾಜರವರೂ ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಉದಾರ ಪೋಷಣೆಯನ್ನಿತ್ತು ಕೃಪಾ ಕಟಾಕ್ಷದಿಂದ ನೋಡುತ್ತಿರುವುದಕ್ಕಾಗಿ ನಾವು ಎಷ್ಟು ಕೃತಜ್ಞತೆಯನ್ನು ತೋರಿಸಿದರೂ ಸಾಲದು.

೨. **ಕಾರ್ಯನಿರ್ವಾಹಕ ಮಂಡಲಿ.**—ಪರಿಷತ್ತಿನ ಗೌ॥ ಕಾರ್ಯದರ್ಶಿಗಳಾಗಿದ್ದ ಮ॥ ರಾ॥ ಸಂಗಪುರಂ ವೆಂಕಟೇಶ ಅಯ್ಯಂಗಾರ್, ಬಿ.ಎ. ಅವರು ದೇಹಾಲಸ್ಯ ಕಾರಣದಿಂದ ಕೊಟ್ಟ ರಾಜೀನಾಮೆಯನ್ನು ಅಂಗೀಕರಿಸಿ ೧೯೩೦ನೆಯ ಮಾರ್ಚಿ ೧೬ನೆಯ ತಾರೀಖಿನಲ್ಲಿ ಮ॥ ರಾ॥ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರನ್ನು ಗೌ॥ ಕಾರ್ಯದರ್ಶಿತ್ವಕ್ಕೆ ಚುನಾಯಿಸಲಾಯಿತು. ಇವರು ಮಾರ್ಚಿ ೨೧ನೆಯ ತಾರೀಖಿನಲ್ಲಿ ಕಾರ್ಯಭಾರವನ್ನು ವಹಿಸಿದರು. ಕಳೆದ ವರ್ಷದ (೧೯೨೯ನೆಯ) ಮೇ ತಿಂಗಳಲ್ಲಿ ಬೆಳಗಾಂವಿಯಲ್ಲಿ ನೆರೆದಿದ್ದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಕೊನೆಯ ದಿವಸ ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ಕೆಳಗೆ ಕಂಡಂತೆ ಶುಕ್ಲ ಸಂವತ್ಸರಕ್ಕೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರುಗಳನ್ನು ಚುನಾಯಿಸಲಾಯಿತು. ಆಯಾ ಪ್ರಾಂತಕ್ಕೆ ಆಯಾ ಪ್ರಾಂತದ ಸದಸ್ಯರುಗಳು ಚುನಾಯಿಸಿದವರ ಹೆಸರನ್ನು ಇಲ್ಲಿ ಕೊಟ್ಟಿದೆ:—

### ಮೈಸೂರು ಪ್ರಾಂತಕ್ಕೆ

೧. ಮ॥ ರಾ॥ ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. (ಬೆಂಗಳೂರು)
೨. ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. ,,
೩. ,, ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಮೈಸೂರು)
೪. ,, ತಿರುಮಲೆ ತಾತಾಚಾರ್ಯ ಶರ್ಮರು (ಬೆಂಗಳೂರು)
೫. ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. ,,
೬. ರಾವ್ ಬಹಾದ್ದೂರ್ ಡಾಕ್ಟರ್ ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ. ,,

೭. ಮ|| ರಾ|| ಕೆ. ಸಂಪದ್ಗಿರಿರಾಯರು, ಎಂ.ಎ. (ಬೆಂಗಳೂರು)
೮. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೯. ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವ್ ಬಹಾದ್ದೂರ್
ಮ|| ರಾ|| ರಾ. ನರಸಿಂಹಾಚಾರ್ಯರು, ಎಂ.ಎ. (ಬೆಂಗಳೂರು)
೧೦. ಮ|| ರಾ|| ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ, ಎಲ್‌ಎಲ್.ಬಿ.
ಬೆಂಗಳೂರು
೧೧. ,, ವಿ. ಸೀತಾರಾಮಯ್ಯನವರು, ಎಂ.ಎ. ,,
೧೨. ,, ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ. (ಮೈಸೂರು)

## ಮುಂಬಯಿ ಪ್ರಾಂತಕ್ಕೆ

೧. ಮ|| ರಾ|| ಕೌಜಲಗಿ ಶ್ರೀನಿವಾಸರಾಯರು, ಬಿ.ಎ., ಎಲ್‌ಎಲ್.ಬಿ.
(ಬಿಜಾಪುರ)
೨. ರಾವ್ ಸಾಹೆಬ್ ಮ|| ರಾ|| ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ.
(ಬಿಜಾಪುರ)
೩. ಮ|| ರಾ|| ಎಚ್. ಚೆನ್ನಕೇಶವಯ್ಯಂಗಾರ್ಯರು (ಧಾರವಾಡ)
೪. ,, ಏ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ. ,,
೫. ,, ನಾರಾಯಣಸ್ವಾಮಿರಾವ್ ಲೋಕೂರ, ಬಿ.ಎ., ಎಲ್‌ಎಲ್.ಬಿ.
(ಬೆಳಗಾಂವಿ)
೬. ,, ನಾರಾಯಣ ಶ್ರೀನಿವಾಸ ರಾಜಪುರೋಹಿತರು (ಧಾರವಾಡ)
೭. ,, ಕೃಷ್ಣಾಜೀ ಗೋವಿಂದ ಗೆಜ್ಜಿ, ಬಿ.ಎ., ಎಲ್‌ಎಲ್.ಬಿ.
(ಬೆಳಗಾಂವಿ)
೮. ,, ಗುರುಸಿದ್ದಪ್ಪ ಮಹಾಲಿಂಗಪ್ಪ ವಿರ್ಜಿ, ಬಿ.ಎ., ಎಲ್‌ಎಲ್.ಬಿ.
(ಹುಬ್ಬಳ್ಳಿ)
೯. ,, ಆರ್. ಬಿ. ಪೋದ್ದಾರ್, ಬಿ.ಎ. (ಕಾರವಾರ)

## ಮದರಾಸು ಪ್ರಾಂತಕ್ಕೆ

ಇಲ್ಲಿಯ ಸದಸ್ಯರು ಯಾರೂ ವಾರ್ಷಿಕಾಧಿವೇಶನಕ್ಕೆ ಬಂದಿರಲಿಲ್ಲವಾದುದರಿಂದ ಕಳೆದ ವರ್ಷವಿದ್ದ ಸದಸ್ಯರುಗಳೇ ಶುಕ್ಲ ಸಂವತ್ಸರಕ್ಕೂ ಇರತಕ್ಕುದೆಂಬ ಸಭಾಪತಿಗಳ ಸೂಚನೆಯನ್ನು ಸರ್ವರೂ ಅಂಗೀಕರಿಸಿದರು :—

೧. ಮ|| ರಾ|| ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ.
(ಮದರಾಸು)
೨. ,, ಎನ್. ರಾಜಗೋಪಾಲ ಕೃಷ್ಣರಾಯರು (ಉಡಿಪಿ)
೩. ,, ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. (ಬಳ್ಳಾರಿ)
೪. ,, ಕೆ. ಟಿ. ಶ್ರೀನಿವಾಸಾಚಾರ್ಯರು, ಬಿ.ಎ., ಎಲ್‌ಎಲ್.ಬಿ.
(ಬಳ್ಳಾರಿ)
೫. ,, ಪಿ. ವೆಂಕೋಬಾಚಾರ್ಯರು, ಎಂ.ಎ., ಎಲ್‌ಎಲ್.ಬಿ.
(ಬಳ್ಳಾರಿ)

### ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ

೧. ಮ|| ರಾ|| ತಮ್ಮಣ್ಣಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)
೨. ,, ಆರ್. ಎಸ್. ಮಂಗಸೂಳಿ (ಶಿರಹಟ್ಟಿ)

### ಹೈದರಾಬಾದು ಸಂಸ್ಥಾನಕ್ಕೆ

೧. ಮ|| ರಾ|| ಕೃಷ್ಣರಾವ್ ಕಪಟ್ರಾಳ (ಗುಲ್ಬರ್ಗ)
೨. ,, ರಾಘವೇಂದ್ರರಾವ್ ಚಾಕಲಬ್ಬಿ (ಕೊಪ್ಪಳ)

### ಕೊಡಗಿಗೆ

೧. ಮ|| ರಾ|| ಎನ್. ಆರ್. ಸುಬ್ಬಣ್ಣಯ್ಯನವರು (ನಿಡತ)

**೩. ಅಧಿವೇಶನಗಳು.**—ಈ ವರ್ಷ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನಗಳು ೭. (೧೯೨೯ನೆಯ ಏಪ್ರಿಲ್ ೨೧, ಮೇ ೩, ಜುಲೈ ೭, ಸೆಪ್ಟಂಬರು ೨೯, ೧೯೩೦ನೆಯ ಜನವರಿ ೧೨ ಮತ್ತು ೨೬, ಮಾರ್ಚಿ ೧೬) ಈ ಅಧಿವೇಶನಗಳಿಗೆ ಬಂದಿದ್ದ ಸದಸ್ಯರ ಹೆಸರು ಮತ್ತು ಅಧಿವೇಶನಗಳ ಸಂಖ್ಯೆ:—

ಗೌರವ ಕೋಶಾಧ್ಯಕ್ಷರು ೭, ಗೌರವ ಕಾರ್ಯದರ್ಶಿಗಳು ೬, ರಾವ್ ಬಹಾದ್ದೂರ್ ಡಾಕ್ಟರ್ ಸಿ. ಬಿ. ರಾಮರಾಯರು ೫, ಮ|| ರಾ|| ಕೆ. ಸಂಪದ್ಗಿರಿ ರಾಯರು ೫, ಮ|| ರಾ|| ಟಿ. ಅಪ್ಪೂರಾಯರು ೪, ಮ|| ರಾ|| ಸಿ. ಕೆ. ವೆಂಕಟ ರಾಮಯ್ಯನವರು ೪, ಮ|| ರಾ|| ಮಾಸ್ತಿ ವೆಂಕಟೇಶಯ್ಯಂಗಾರ್ಯರು ೨, ಮ|| ರಾ|| ವಿ. ಸೀತಾರಾಮಯ್ಯನವರು ೧, ಮ|| ರಾ|| ಬಿ. ಐ. ಶಾಮರಾಯರು ೧, ಮ|| ರಾ|| ಎ. ಆರ್. ಕೃಷ್ಣಶಾಸ್ತ್ರಿಗಳು ೧.

**೪. ಸದಸ್ಯರು.**—ಶುಕ್ಲ ಸಂವತ್ಸರಾಂತದಲ್ಲಿದ್ದ ಸದಸ್ಯರ ಸಂಖ್ಯೆ ಮೊದಲಾದುವು:—

| ತರಗತಿ | ಸದಸ್ಯರ ಸಂಖ್ಯೆ | ಈ ವರ್ಷ ವಸೂಲಾದ ಚಂದಾ ಹಣ | ಬಾಕಿ ಬರಬೇಕಾದ ಚಂದಾ ಹಣ |
|---|---|---|---|
| | | ರೂ. ಆ. ಪೈ. | ರೂ. ಆ. ಪೈ. |
| * ಪ್ರದಾತೃಗಳು | (೧) | .. | ೫೦೦—೦—೦ |
| ಸಹಾಯಕರು | ೪ | ೪೦—೦—೦ | .. |
| ಆಜೀವ ಸದಸ್ಯರು | ೭೪ | ೧೧೫—೦—೦ | ೧೬೭–೧೨—೦ |
| ಸಾಧಾರಣ ಸದಸ್ಯರು | ೫೫ | ೨೫೬—೦—೦ | ೪೧೮—೦—೦ |
| ಒಟ್ಟು | ೧೩೩ | ೪೧೧—೦—೦ | ೧,೦೮೫–೧೨—೦ |

ಶುಕ್ಲ ಸಂವತ್ಸರದಲ್ಲಿ ಸಹಾಯಕರೊಬ್ಬರನ್ನು ಅವರಿಂದ ಬರಬೇಕಾದ ರೂ. ೮೦–೦–೦ ಗಳ ಬಾಕಿಯೊಂದಿಗೆ ತೆಗೆದುಹಾಕಬೇಕಾಯಿತು. ಆಜೀವ

* ಇವರು ಸಾಧಾರಣ ಸದಸ್ಯರಾಗಿಯೂ ಇರುವರು.

ಸದಸ್ಯರಲ್ಲಿ ಇಬ್ಬರು ದೈವಾಧೀನರಾದರು, ಒಬ್ಬರು ವರ್ಗವನ್ನು ಬದಲಾಯಿಸಿ ಕೊಂಡು ಬಂದರು, ಇಬ್ಬರು ಹೊಸದಾಗಿ ಸೇರಿದರು, ಐದು ಮಂದಿಯ ಹೆಸರನ್ನು ತೆಗೆದುಹಾಕಬೇಕಾಯಿತು. ಸಾಧಾರಣ ಸದಸ್ಯರುಗಳಲ್ಲಿ ಒಬ್ಬರು ವರ್ಗವನ್ನು ಬದಲಾಯಿಸಿಕೊಂಡರು, ಮೂರು ವರ್ಷಗಳಿಂದ ಚಂದಾ ಬಾಕಿಯು ಬಾರದೆ ಇದ್ದುದರಿಂದ ಹತ್ತು ಜನರ ಹೆಸರನ್ನು ವಜಾ ಮಾಡಲಾಯಿತು, ನಾಲ್ಕು ಮಂದಿ ಹೊಸದಾಗಿ ಸೇರಿದರು. ಪರಿಷತ್ತಿನ ಸದಸ್ಯರ ಸಂಖ್ಯೆ ವರ್ಷಾರಂಭದಲ್ಲಿ ೧೪೫ ಇದ್ದುದು ವರ್ಷಾಂತದಲ್ಲಿ ೧೩೩ಕ್ಕೆ ಇಳಿಯಿತು.

**೫. ಸಂಪಾದಕ ಮಂಡಲಿ.**—೧೯೨೮ನೆಯ ಆಗಸ್ಟ್ ೧೯ನೆಯ ತಾರೀಖಿ ನಲ್ಲಿ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನದಲ್ಲಿ ವಿಭವ ಸಂವತ್ಸ ರಕ್ಕೆ ಚುನಾಯಿಸಿದ್ದ ಸಂಪಾದಕ ಮಂಡಲಿಯ ಸದಸ್ಯರನ್ನೇ ಶುಕ್ಲ ಸಂವತ್ಸ ರಕ್ಕೂ ಉಳಿಸಿಕೊಳ್ಳಲಾಯಿತು. ಆ ಸದಸ್ಯರ ಹೆಸರನ್ನು ಇಲ್ಲಿ ಕೊಟ್ಟಿದೆ:—

| | | | |
|---|---|---|---|
| ೧. | ಮ॥ ರಾ॥ | ತಿರುಮಲೆ ತಾತಾಚಾರ್ಯ ಶರ್ಮರು | (ಬೆಂಗಳೂರು) |
| ೨. | ,, | ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. | ,, |
| ೩. | ,, | ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. | ,, |
| ೪. | ,, | ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. | ,, |
| ೫. | ,, | ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ. | ,, |
| ೬. | ,, | ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ. | ,, |
| ೭. | ,, | ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. | (ಮೈಸೂರು) |
| ೮. | ,, | ದತ್ತಾತ್ರೇಯ ಬೇಂದ್ರೆ, ಬಿ.ಎ. | (ಧಾರವಾಡ) |
| ೯. | ,, | ಆರ್ಕಾಟು ಭೀಮಾಚಾರ್ಯರು, ಎಂ.ಎ., ಎಲ್.ಟಿ. | (ಬಳ್ಳಾರಿ) |

ಸಂಪಾದಕ ಮಂಡಲಿಯ ಅಧಿವೇಶನಗಳು ೧೯೨೯ನೆಯ ಜೂನ್ ೧, ಜುಲೈ ೨೭—ಈ ತಾರೀಖುಗಳಲ್ಲಿ ನಡೆದುವು.

**೬. ಪರಿಷತ್ತಿನ ವಾಙ್ಮಯ ಕಾರ್ಯ ವಿಚಾರ.—**

**ಪರಿಷತ್ಪತ್ರಿಕೆ.**—ಇದನ್ನು ಸಕಾಲದಲ್ಲಿ ಹೊರಡಿಸುವ ಪ್ರಯತ್ನವು ಲೇಖನಗಳ ಅಭಾವದಿಂದ ಇನ್ನೂ ಸಫಲವಾಗಲಿಲ್ಲ. ಜನವರಿ ಸಂಚಿಕೆಯನ್ನು ೮–೮–೨೯ರಲ್ಲಿಯೂ, ಏಪ್ರಿಲ್ ಸಂಚಿಕೆಯನ್ನು ೨೨–೧೧–೨೯ರಲ್ಲಿಯೂ, ಜುಲೈ ಸಂಚಿಕೆಯನ್ನು ೧೩–೩–೩೦ರಲ್ಲಿಯೂ ಪ್ರಕಟಿಸಲಾಯಿತು. ಇತರ ಸಂಚಿಕೆ ಗಳನ್ನೂ ಸಾಧ್ಯವಾದ ಮಟ್ಟಿಗೆ ಬೇಗನೆ ಪ್ರಕಟಿಸಲು ಪ್ರಯತ್ನ ನಡೆಯುತ್ತಿದೆ.

ಪರಿಷತ್ಪತ್ರಿಕೆಯನ್ನು ಸಕಾಲದಲ್ಲಿ ಹೊರಡಿಸುವುದಕ್ಕಾಗಿ ಲೇಖನಗಳನ್ನು ಮುಂದಾಗಿಯೇ ಶೇಖರಿಸುವುದಕ್ಕೂ ಇತರ ವಿಷಯಗಳಲ್ಲಿ ಗೌರವ ಕಾರ್ಯದರ್ಶಿ ಯವರಿಗೆ ಸಾಹಾಯ್ಯಮಾಡುವುದಕ್ಕೂ ಸಂಪಾದಕ ಮಂಡಲಿಯವರು ಪರಿಷತ್ತಿಗೆ ಸಹಾಯ ಕಾರ್ಯದರ್ಶಿಯೊಬ್ಬರನ್ನು ನಿಯಮಿಸಬೇಕೆಂಬ ಕಾರ್ಯ ನಿರ್ವಾಹಕ ಮಂಡಲಿಯ ನಿರ್ಣಯದಂತೆ ಸಹಾಯಕ ಕಾರ್ಯದರ್ಶಿ ಸ್ಥಾನಕ್ಕೆ ಬಂದಿದ್ದ

ದರಖಾಸ್ತುಗಳನ್ನು ಪರಿಶೀಲಿಸಲಾಗಿ ಆ ಉದ್ಯೋಗಕ್ಕೆ ತಕ್ಕಷ್ಟು ಅರ್ಹರಾದವರು ಯಾರೂ ದೊರೆಯಲಿಲ್ಲವಾಗಿ ಈ ವಿಚಾರವನ್ನು ಮುಂದೆ ಆಲೋಚಿಸತಕ್ಕುದೆಂದು ತೀರ್ಮಾನವಾಯಿತು.

**ಪಂಪ ಭಾರತ.**—ಈಗ ತಯಾರು ಮಾಡಿರುವ ಪಂಪ ಭಾರತದ ನಿಘಂಟು ವನ್ನು ತಕ್ಕ ಪಂಡಿತರ ಸಹಾಯದಿಂದ ಪರಿಶೋಧಿಸಿ ಮುದ್ರಣಕ್ಕೆ ಸಿದ್ಧಮಾಡಲು ಏರ್ಪಾಡು ಮಾಡಲಾಗಿದೆ. ಈ ಗ್ರಂಥದಲ್ಲಿ ಬರುವ ಅನೇಕ ಪದಗಳು ಇತರ ಗ್ರಂಥಗಳಲ್ಲಿ ದೊರೆಯದುದರಿಂದ ಅವುಗಳ ನಿಷ್ಕೃಷ್ಟವಾದ ಅರ್ಥವನ್ನು ಗೊತ್ತು ಮಾಡುವುದು ಕಷ್ಟವಾದ ಕೆಲಸ. ಇತರ ಪ್ರಾಚೀನ ಜೈನ ಕವಿಗಳ ಕವಿತೆಗಳಲ್ಲಿ ಆ ಪದಗಳು ದೊರೆಯುವುವೇ ಎಂಬ ವಿಷಯವನ್ನು ಪರೀಕ್ಷಿಸಬೇಕಾಗಿದೆ.

**ಷಟ್ಪದಿಗಳ ನಿಘಂಟು.**—ಕೆಲವು ವರ್ಷಗಳ ಹಿಂದೆ ಕರ್ಣಾಟಕದ ಎಲ್ಲ ಪ್ರಾಂತಗಳ ಅನೇಕ ಮಂದಿ ಪಂಡಿತರ ಸಹಾಯವನ್ನು ಪಡೆದು ಪ್ರಸಿದ್ಧವಾದ ಹನ್ನೆರಡು ಷಟ್ಪದಿ ಕಾವ್ಯಗಳಿಗೆ ನಿಘಂಟುಗಳನ್ನು ತಯಾರು ಮಾಡಿಸಿದೆವಷ್ಟೆ; ಇವೆಲ್ಲವನ್ನೂ ಪರಿಶೋಧಿಸಿ ಮುದ್ರಣಕ್ಕೆ ಸಿದ್ಧಮಾಡಲು ಸಾಧ್ಯವಿಲ್ಲದೆ ಹೋದು ದರಿಂದ ಅವನ್ನು ಈಗ ಹಾಗೆಯೇ ಒಟ್ಟಿಗೆ ಸೇರಿಸಿ ಅಕಾರಾದಿಯಾಗಿ ವಿಂಗಡಿಸಿ ಅದೇ ಚೀಟಿಗಳನ್ನೇ ಕ್ರಮವಾಗಿ ಅಂಟಿಸಿ ಒಂದು ಪುಸ್ತಕವನ್ನಾಗಿ ಮಾಡಲಾಗಿದೆ.

**ಇತರ ಕಾರ್ಯಗಳು.**—ಪ್ರಸಿದ್ಧವಾದ ಅನೇಕ ಸಣ್ಣ ಸಣ್ಣ ಪ್ರಾಚೀನ ಕನ್ನಡ ನಿಘಂಟುಗಳಲ್ಲಿಯ ಪದಗಳನ್ನು ಒಟ್ಟಿಗೆ ಸೇರಿಸಿ ಅಕಾರಾದಿಯಾಗಿ ವಿಂಗಡಿಸಿ ಬರೆದಿಡಲಾಗಿದೆ.

'ಜೇಮ್ಸ್ ಏಬ್ರಾಮ್ ಗಾರ್‌ಫೀಲ್ಡನ ಚರಿತ್ರೆ'ಯನ್ನು ಮೈಸೂರು ಹೈಸ್ಕೂಲು ನಾಲ್ಕನೆಯ ಫಾರಮ್ಮಿಗೆ, ೧೯೩೧ನೆಯ ಸಂವತ್ಸರಕ್ಕೆ, ಪಠ್ಯ ಪುಸ್ತಕವನ್ನಾಗಿಟ್ಟಿರುವುದರಿಂದ ಅದನ್ನು ಅಂದವಾಗಿ ಪುನರ್ಮುದ್ರಣ ಮಾಡಿಸು ತ್ತಿರಲಾಗಿದೆ.

ನಮ್ಮ ಅಧ್ಯಕ್ಷರಾದ ಶ್ರೀಮಾನ್ ಕಂಠೀರವ ನರಸಿಂಹರಾಜ ಒಡೆಯರ್ ಬಹಾದ್ದೂರ್‌ರವರು, ವಿಜ್ಞಾನ ವಿಷಯಕವಾದ ಪುಸ್ತಕಗಳನ್ನು ಬರೆಯಿಸಿ ಪ್ರಕಟಿ ಸುವುದಕ್ಕಾಗಿ ೧೯೨೭ರಲ್ಲಿ ೨,೫೦೦ ರೂಪಾಯಿಗಳನ್ನು ಪರಿಷತ್ತಿಗೆ ಕೊಟ್ಟಿರು ವರಷ್ಟೆ. ಇದಕ್ಕಾಗಿ, ನಮ್ಮ ಗೌ॥ ಕಾರ್ಯದರ್ಶಿಗಳಾಗಿದ್ದ ಮ॥ ರಾ॥ ಸಂಗಪುರಂ ವೆಂಕಟೇಶ ಅಯ್ಯಂಗಾರ್ಯರವರು ಬರೆದಿರುವ 'ಜ್ಯೋತಿರ್ವಿನೋದಿನಿ' ಎಂಬ ಗ್ರಂಥವನ್ನು ಈಗ ಮುದ್ರಣ ಮಾಡಿಸುತ್ತಿರಲಾಗಿದೆ.

**೭. ವಾಚನ ಮಂದಿರ.**—ಈ ಮಂದಿರದ ವಾಚಕರ ಸರಾಸರಿ ಸಂಖ್ಯೆಯು ದಿನ ದಿನಕ್ಕೆ ಹೆಚ್ಚುತ್ತಲಿದೆ. ಇದರಿಂದ ಶಂಕರಪುರ, ಬಸವನಗುಡಿ—ಈ ಪ್ರಾಂತ ಗಳಲ್ಲಿರುವ ವಿದ್ಯಾರ್ಥಿಗಳಿಗೂ ಪೆನ್‌ಷನ್ ನೌಕರರಿಗೂ ಹೆಚ್ಚಿನ ಉಪಯೋಗ ವಾಗುತ್ತಲಿದೆ.

ಈ ವಾಚನ ಮಂದಿರದಲ್ಲಿ ವಾಚಕರಿಗೆ ದೊರೆಯುವ ಪತ್ರಿಕೆಗಳು.—

**ಕನ್ನಡ.**—ಕಂಠೀರವ, ಕರ್ಮವೀರ, ಕನ್ನಡಿಗ, ಕರ್ಣಾಟಕ ವೈಭವ, ಪ್ರಾರ್ಥನಾ, ರಾಜಹಂಸ, ರಾಷ್ಟ್ರಬಂಧು, ಶ್ರೀ ಧನ್ವಂತರೀ, ಸ್ವದೇ

ಶಾಭಿಮಾನಿ, ವಿಶ್ವ ಕರ್ಣಾಟಕ, ವಿಶ್ವ ಬಂಧು, ವೃತ್ತಾಂತ ಪತ್ರಿಕೆ, ಒಕ್ಕಲಿಗನೂ ಒಕ್ಕಲತನವೂ, ಕನ್ನಡ ಸಹಕಾರ, ಕಾದಂಬರೀ ಸಂಗ್ರಹ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಜಯ ಕರ್ಣಾಟಕ, ದೇಶೀಯ ವಿದ್ಯಾಶಾಲಾ ಪತ್ರಿಕೆ, ಪ್ರಬುದ್ಧ ಕರ್ಣಾಟಕ, ರಂಗ ಭೂಮಿ, ಸುಧಾರಕ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕ ಸಂಘದ ಪತ್ರಿಕೆ, ಕಥಾಂಜಲಿ.

**ತೆಲುಗು.**—ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ.

**ಮರಾಠಿ.**—ವಿವಿಧ ಜ್ಞಾನ ವಿಸ್ತಾರ.

**ಇಂಗ್ಲೀಷು.**—The Swarajya, The Hindu, The Evening Mail, Mysore Gazette, Indian Antiquary, Modern Review, School Folk, The Volunteer, Quarterly Journal of the Mythic Society, The Andhra Historical Research Institute Magazine.

**೮. ಹೋದ ಸಮ್ಮೇಳನದ ನಿರ್ಣಯಗಳ ವಿಷಯವಾಗಿ ನಡೆಯಿಸಿದ ಕಾರ್ಯಕ್ರಮ.—**

**ನಿರ್ಣಯ ೧.**—ಮುಂಬೈ ಕಾಲೇಜಿನ ಪ್ರಥಮ ಪರೀಕ್ಷೆಗೂ, ಇಂಟರ್ ಪರೀಕ್ಷೆಗೂ ಕನ್ನಡವನ್ನು ಇಡದೆ ಬಿಟ್ಟು ಮುಂದೆ ಬಿ.ಎ. ಪರೀಕ್ಷೆಗೆ ಕನ್ನಡವನ್ನು ಐಚ್ಛಿಕವಾಗಿ ಇಟ್ಟಿರುವುದರಿಂದ, ಮೆಟ್ರಿಕ್ ಪರೀಕ್ಷೆಯಲ್ಲಿ ಕನ್ನಡ ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಮುಂದೆ ಕಾಲೇಜ್ ತರಗತಿಗಳಲ್ಲಿ ಪ್ರವೇಶ ದೊರೆಯುವುದು ಕಷ್ಟವಾಗುವುದಲ್ಲದೆ, ಪ್ರವೇಶ ದೊರೆತರೂ ಕನ್ನಡವನ್ನು ಬಿಟ್ಟು ಸಂಸ್ಕೃತವನ್ನೇ ತೆಗೆದುಕೊಳ್ಳಬೇಕೆಂಬ ನಿರ್ಬಂಧವಿರುವುದರಿಂದ, ನಡುವೆ ಎರಡು ವರ್ಷ ಕಾಲ ಕನ್ನಡದ ಸಂಪರ್ಕ ತಪ್ಪಿದ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ತಕ್ಕಷ್ಟು ಯೋಗ್ಯತೆ ಯಿಲ್ಲವಾಗುವುದು. ಆದಕಾರಣ ಕನ್ನಡವನ್ನು, ಮದರಾಸು, ಮೈಸೂರು ಯೂನಿವರ್ಸಿಟಿಗಳಲ್ಲಿ ಏರ್ಪಡಿಸಿರುವಂತೆ, ಕಾಲೇಜಿನ ಎಲ್ಲಾ ತರಗತಿಗಳಲ್ಲಿಯೂ ನಿರ್ಬಂಧವಾದ ಭಾಷೆಗಳಲ್ಲೊಂದಾಗಿ ಪರಿಗಣಿಸಬೇಕೆಂದು ಮುಂಬೈ ಸರ್ಕಾರಕ್ಕೂ ಮುಂಬೈ ವಿಶ್ವವಿದ್ಯಾಲಯಕ್ಕೂ ಈ ಸಮ್ಮೇಳನವು ಏಕಕಂಠದಿಂದ ಬಿನ್ನವಿಸುತ್ತದೆ.

ಇದನ್ನು ಮುಂಬಯಿ ಸರಕಾರದ ಛೀಫ್ ಸೆಕ್ರಿಟೆರಿಯವರಿಗೂ ಮುಂಬೈ ವಿಶ್ವ ವಿದ್ಯಾಲಯದ ರೆಜಿಸ್ಟ್ರಾರವರಿಗೂ ಕಳುಹಿಸಲಾಯಿತು; ಮುಂಬಯಿ ಸರಕಾರದ ಛೀಫ್ ಸೆಕ್ರಿಟೆರಿಯವರು ಪತ್ರವು ತಲುಪಿರುತ್ತದೆಂದು ಮಾತ್ರ ತಿಳಿಸಿರುತ್ತಾರೆ.

**ನಿರ್ಣಯ ೨.**—ಕನ್ನಡವನ್ನು ಇಂಗ್ಲಿಷ್, ಜರ್ಮನ್, ಫ್ರೆಂಚ್ ಮುಂತಾದ ಭಾಷೆಗಳಂತೆ ಪಟ್ಟಪ್ರತಿಷ್ಠಾ ಪರೀಕ್ಷೆಗೆ (B.A. Hons.) ಏಕಭಾಷಾ ವ್ಯಾಸಂಗವಾಗಿ ಏರ್ಪಡಿಸುವುದಲ್ಲದೆ ಪ್ರಧಾನವಾದ ಕನ್ನಡ ಭಾಷೆಯೊಡನೆ

ಸಂಸ್ಕೃತ, ಇಂಗ್ಲಿಷ್, ಇತರ ದೇಶಭಾಷೆಗಳಲ್ಲೊಂದು—ಇವುಗಳಲ್ಲಿ ಯಾವುದಾದರೂ ಒಂದನ್ನು ದ್ವಿತೀಯ ಭಾಷೆಯಾಗಿ ತೆಗೆದುಕೊಂಡು ಕೂಡ ಈ ಪರೀಕ್ಷೆಗೆ ವ್ಯಾಸಂಗ ಮಾಡಲು ಸೌಕರ್ಯವನ್ನು ಕಲ್ಪಿಸಿಕೊಡಬೇಕೆಂದು ಈ ಸಮ್ಮೇಳನವು ಮುಂಬೈ, ಮದರಾಸು ವಿಶ್ವವಿದ್ಯಾನಿಲಯದವರಿಗೆ ಬಿನ್ನವಿಸುತ್ತದೆ.

ಈ ಠರಾವನ್ನು ಮದರಾಸು, ಮುಂಬಯಿ ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರುಗಳಿಗೆ ಕಳುಹಿಸಲಾಯಿತು; ಇದುವರೆಗೆ ಯಾವ ಪ್ರತ್ಯುತ್ತರವೂ ಬಂದಿರುವುದಿಲ್ಲ.

**ನಿರ್ಣಯ ೩.**—ಕನ್ನಡ ನಡೆನುಡಿಗಳ ಇತಿಹಾಸ ರಚನೆಯಲ್ಲಿ ಪ್ರೌಢ ಪರಿಶೋಧನ ಕಾರ್ಯವನ್ನು ಕೈಕೊಳ್ಳಲು ಅನುಕೂಲಿಸುವಂತೆ ಕನ್ನಡದಲ್ಲಿ ಪಟ್ಟಾಗ್ರ ವ್ಯಾಸಂಗ ಕ್ರಮವನ್ನು (Post-Graduate Study) ಏರ್ಪಡಿಸಬೇಕೆಂದು ಮುಂಬೈ, ಮದರಾಸು, ಮೈಸೂರು ಸರ್ಕಾರದವರನ್ನೂ ವಿಶ್ವವಿದ್ಯಾನಿಲಯದವರನ್ನೂ ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಇದನ್ನು ಮುಂಬೈ, ಮದರಾಸು, ಮೈಸೂರು ಸರ್ಕಾರಗಳ ಮುಖ್ಯ ಕಾರ್ಯದರ್ಶಿಯವರಿಗೂ, ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರುಗಳಿಗೂ ಕಳುಹಿಸಲಾಯಿತು. ಮುಂಬಯಿ ಸರ್ಕಾರದವರು ನಿರ್ಣಯವು ತಲುಪಿದೆಯೆಂದೂ, ಮದರಾಸು ಸರ್ಕಾರದವರು ಮೇಲಣ ಈ ನಿರ್ಣಯವನ್ನು ಮದರಾಸು ವಿಶ್ವವಿದ್ಯಾನಿಲಯದ ವೈಸ್-ಛಾನ್ಸೆಲರವರಿಗೆ ಕಳುಹಿಸಿದೆ ಎಂದೂ, ಮೈಸೂರು ಸರ್ಕಾರದವರು ಮೈಸೂರು ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರವರಿಗೆ ಕಳುಹಿಸಿದೆ ಎಂದೂ ಜವಾಬು ಕೊಟ್ಟಿರುತ್ತಾರೆ.

ಮೈಸೂರು ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರವರು ಮಾತ್ರ ಈ ನಿರ್ಣಯದ ವಿಚಾರದಲ್ಲಿ ಜವಾಬನ್ನು ಈ ರೀತಿ ಕೊಟ್ಟಿರುತ್ತಾರೆ:—ಮೈಸೂರು ವಿಶ್ವವಿದ್ಯಾನಿಲಯದವರು ೧೯೩೭ನೆಯ ಜೂಲೈ ಪ್ರಾರಂಭದಿಂದ ಎಮ್.ಎ. ಡಿಗ್ರೀ ಪರೀಕ್ಷೆಯ ತರಗತಿಗಳನ್ನು ತಮ್ಮ ವಿಶ್ವವಿದ್ಯಾನಿಲಯದಲ್ಲಿ ತೆರೆದಿರುವರೆಂದೂ, ಆ ಪರೀಕ್ಷೆಯು ೧೯೩೯ನೆಯ ಮಾರ್ಚಿ ತಿಂಗಳಲ್ಲಿ ನಡೆಯುತ್ತೆಂದೂ, ಕನ್ನಡವನ್ನು ಐಚ್ಛಿಕ ಭಾಷೆಯಾಗಿ ಬಿ.ಎ. 'ಪ್ಯಾಸ್' ತರಗತಿಗೆ ಗೊತ್ತುಮಾಡಿರುವುದೆಂದೂ, ಬಿ.ಎ. 'ಆನರ್ಸ್' ತರಗತಿಯನ್ನು ೧೯೩೯ನೆಯ ಜೂಲೈ ತಿಂಗಳಿಂದ ಹೊಸದಾಗಿ ಸ್ಥಾಪಿಸಿರುವುದೆಂದೂ ತಿಳಿಸಿರುತ್ತಾರೆ.

**ನಿರ್ಣಯ ೪.**—ಮುಂಬಯಿ ಕರ್ಣಾಟಕದಲ್ಲಿಯ ಬೆಳಗಾಂವಿ, ಧಾರವಾಡ ಪೋಸ್ಟಲ್ ಡಿವಿಜನ್‌ಗಳನ್ನು ಮದರಾಸು ಸರ್ಕಲ್ಲಿಗೆ ಸೇರಿಸಿದರೆ ಇಡೀ ಕರ್ಣಾಟಕವು ಪೋಸ್ಟಿನ ಆಡಳಿತೆಯ ಮಟ್ಟಿಗೆ ಒಂದೇ ಅಧಿಕಾರಕ್ಕೆ ಒಳಗಾಗುವುದರಿಂದ, ಈ ಬದಲಾವಣೆಯನ್ನು ತೀವ್ರವೇ ಮಾಡಬೇಕೆಂದು ಈ ಸಮ್ಮೇಳನವು ಅಂಚೆಯ ಮುಖ್ಯಾಧಿಕಾರಿಗಳಿಗೆ ಬಿನ್ನವಿಸುತ್ತದೆ.

ಈ ಠರಾವನ್ನು ಮುಂಬಯಿ ಮತ್ತು ಮದರಾಸು ಪೋಸ್ಟ್‌ಮಾಸ್ಟರ್ ಜನರಲ್ ಅವರಿಗೆ ಕಳುಹಿಸಲಾಯಿತು; ಈ ನಿರ್ಣಯದಲ್ಲಿ ಕಾಣಿಸಿರುವ ಪ್ರಾರ್ಥನೆಯನ್ನು ಮಂಜೂರ್ಮಾಡಲು ಸಾಧ್ಯವಿಲ್ಲವೆಂದು ಮುಂಬಯಿ ಪೋಸ್ಟಮಾಸ್ಟರ್ ಜನರಲ್ ಅವರು ಉತ್ತರ ಬರೆದಿರುತ್ತಾರೆ.

**ನಿರ್ಣಯ ೫.**—ಬೆಳಗಾಂವಿ ಜಿಲ್ಲೆಯ ಯಾವತ್ತು ಕೋರ್ಟುಗಳಲ್ಲಿ ಮೊದಲಿನಿಂದಲೂ ದೇಶಭಾಷೆಯಾದ ಕನ್ನಡವೇ ಕೋರ್ಟಿನ ಭಾಷೆಯಾಗಿದ್ದು, ಇತ್ತೀಚೆಗೆ ಕೋರ್ಟಿನ ವ್ಯವಹಾರಗಳು ಮರಾಟಿ ಭಾಷೆಯಲ್ಲಿಯೂ ನಡೆಯ ಬಹುದೆಂದು ಮುಂಬಯಿ ಹೈಕೋರ್ಟಿನವರು ನಿರ್ಣಯಿಸಿರುವುದರಿಂದ ಇಲ್ಲಿಯ ಕನ್ನಡ ಜನಕ್ಕೆ ಅನನುಕೂಲತೆಯುಂಟಾಗಿದೆ. ಈ ಜಿಲ್ಲೆಯಲ್ಲಿ ಮೊದಲಿನಂತೆಯೇ ಎಲ್ಲ ಕೋರ್ಟುಗಳಲ್ಲಿ ಎಲ್ಲ ವ್ಯವಹಾರಗಳೂ ಕನ್ನಡದಲ್ಲಿಯೇ ನಡೆಯುವಂತೆ ಅಪ್ಪಣೆ ಮಾಡಬೇಕೆಂದು ಹೈಕೋರ್ಟಿನ ಅಧಿಕಾರಿಗಳಿಗೆ ಈ ಸಮ್ಮೇಳನವು ವಿಜ್ಞಾಪಿಸುತ್ತದೆ.

ಮೇಲಣ ನಿರ್ಣಯವನ್ನು ಮುಂಬಯಿ ಸರಕಾರಕ್ಕೂ, ಮುಂಬಯಿ ಹೈಕೋರ್ಟು ರೆಜಿಸ್ಟ್ರಾರವರಿಗೂ ಕಳುಹಿಸಿದುದಾಯಿತು. ಮುಂಬಯಿ ಹೈಕೋರ್ಟು ರೆಜಿಸ್ಟ್ರಾರವರು ಈ ವಿಚಾರದಲ್ಲಿ ಈ ರೀತಿ ಜವಾಬು ಕೊಟ್ಟಿರುವರು :—

ಬೆಳಗಾಂವಿ ಮತ್ತು ಚಿಕ್ಕೋಡಿ ಕೋರ್ಟುಗಳಲ್ಲಿ ಮಾತ್ರ ಕೋರ್ಟು ಭಾಷೆಯಾಗಿ ಕನ್ನಡದ ಜೊತೆಗೆ ಮರಾಟಿಯನ್ನೂ ವ್ಯವಹರಿಸಬೇಕೆಂದು ಗೊತ್ತುಮಾಡಿರುತ್ತದೆ. ಈ ಕೋರ್ಟುಗಳಲ್ಲಿ ಜಾರಿಯಿರತಕ್ಕ ಮುಂಬಯಿ 'ಹೋಂ ಡಿಪಾರ್ಟುಮೆಂಟ್' ೧೯೨೭ನೆಯ ಸೆಪ್ಟಂಬರು ೨೧ನೆಯ ಮರ್ಕುಂ ೨೪೩೩ ೨ನೆಯ ನಂಬರು ನೋಟಿಫಿಕೇಷನ್ನನ್ನು ಬದಲಾಯಿಸಲು ಕಾರಣಗಳು ಕಂಡುಬಂದಿರುವುದಿಲ್ಲ.

**ನಿರ್ಣಯ ೬.**—ಕರ್ಣಾಟಕ ರಾಷ್ಟ್ರಗೀತೆಯನ್ನು ನಿರ್ಧರಿಸಿ ಅದನ್ನು ಅಖಿಲ ಕರ್ಣಾಟಕದ ಪಾಠಶಾಲೆಗಳಲ್ಲಿ ವಾಡಿಕೆಗೆ ತರುವ ಬಗ್ಗೆ ಈ ಸಮ್ಮೇಳನವು ಕೆಳಗೆ ಕಂಡ ಸದಸ್ಯರನ್ನೊಳಕೊಂಡ ಒಂದು ಮಂಡಲವನ್ನು ಏರ್ಪಡಿಸುತ್ತದೆ:—

ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು
,, ಮಾಸ್ತಿ ವೆಂಕಟೇಶಯ್ಯಂಗಾರ್ಯರು
,, ಬೇಂದ್ರೆ ದತ್ತರಾಯರು
,, ವಿ. ಸೀತಾರಾಮಯ್ಯನವರು (ಕಾರ್ಯದರ್ಶಿ)
,, ಬೆಟ್ಟಗೇರಿ ಕೃಷ್ಣಶರ್ಮರು
,, ಎಂ. ಎನ್. ಕಾಮತ್
,, ಅಥಣಿ ಹನುಮಂತಾಚಾರ್ಯರು
,, ಕಟ್ಟೀಮನಿ
,, ಟಿ. ಎಸ್. ಚಿಕ್ಕೋಡಿಯವರು

ಈ ನಿರ್ಣಯದ ವಿಚಾರವಾಗಿ ಈ ಉಪಸಭೆಯ ಕಾರ್ಯದರ್ಶಿಯವರಾದ ಮ॥ ರಾ॥ ವಿ ಸೀತಾರಾಮಯ್ಯನವರು ಬಹಳ ಉತ್ಸಾಹದಿಂದ ಕೆಲಸಮಾಡುತ್ತಿರುತ್ತಾರೆ. ರಾಷ್ಟ್ರಗೀತೆಗಳನ್ನು ಸಂಗ್ರಹಿಸಲು ಕರ್ಣಾಟಕದ ಎಲ್ಲ ಪ್ರಾಂತಗಳ ಮುಖ್ಯ ಮುಖ್ಯವಾದ ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟಿಸಿ, ರಾಷ್ಟ್ರಗೀತೆಗೆ ಸಂಬಂಧಪಟ್ಟ ಕವನಗಳನ್ನೆಲ್ಲ ಅಖಿಲ ಕರ್ಣಾಟಕದ ಕವಿಗಳಿಂದ ಸಂಗ್ರಹಿಸಲು ಪ್ರಯತ್ನ ನಡೆದಿದೆ.

**ನಿರ್ಣಯ ೭.**—ಬೆಳಗಾಂವಿ ಜಿಲ್ಲೆಯ ಹಲವು ಗ್ರಾಮಗಳಲ್ಲಿ ಮೊದಲು ಇದ್ದ ಕನ್ನಡ ಶಾಲೆಗಳನ್ನು ತೆಗೆದುಹಾಕಿ ಅಲ್ಲಿ ಮರಾಠೀ ಶಾಲೆಗಳನ್ನು ಏರ್ಪಡಿಸಿರುವುದು ಕನ್ನಡ ಜನರಿಗೆ ಬಹಳ ಅಸನುಕೂಲವಾಗಿದೆ. ಆದುದರಿಂದ ಇಂಥ ಸ್ಥಳಗಳಲ್ಲಿ ಮತ್ತೆ ಕನ್ನಡ ಶಾಲೆಗಳನ್ನೇ ಏರ್ಪಡಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಈ ಠರಾವನ್ನು ಮುಂಬಯಿ ವಿದ್ಯಾ ಇಲಾಖೆಯ ಡೈರೆಕ್ಟರವರಿಗೆ ಕಳುಹಿಸಿರಲಾಗಿ ಅವರು ಈ ವಿಚಾರವನ್ನು ಬೆಳಗಾಂವಿ ಡಿಸ್ಟ್ರಿಕ್ಟ ಲೋಕಲ್ ಬೋರ್ಡು ಪ್ರೆಸಿಡೆಂಟರವರಲ್ಲಿ ವಿನಂತಿಮಾಡಿಕೊಳ್ಳತಕ್ಕದ್ದೆಂದು ತಿಳಿಸಿರುತ್ತಾರೆ.

**ನಿರ್ಣಯ ೮.**—ಚಾಲುಕ್ಯ ರಾಷ್ಟ್ರಕೂಟರೇ ಮುಂತಾದ ಕನ್ನಡ ರಾಜರ ಹಲವು ಶಿಲಾಲೇಖನಗಳೂ ತಾಮ್ರಶಾಸನಗಳೂ ನಿಜಾಂ ಕರ್ಣಾಟಕದಲ್ಲಿದ್ದು ಅವುಗಳಲ್ಲಿ ಅತ್ಯಲ್ಪವೇ ಹೊರಗೆ ಬಂದಿರುವುದರಿಂದ ಬಹುಸಂಖ್ಯಾತವಾದ ಈ ಪುರಾತನ ಶಾಸನಗಳನ್ನು ವರ್ಷಕ್ಕೆ ಒಂದೊಂದು ಸಂಪುಟದಂತೆಯಾದರೂ ಪ್ರಕಟಿಸುವ ಏರ್ಪಾಡು ಮಾಡಿಸಬೇಕೆಂದು ಈ ಸಮ್ಮೇಳನವು ಹೈದರಾಬಾದು ಸರ್ಕಾರವನ್ನು ಪ್ರಾರ್ಥಿಸುತ್ತದೆ.

ಈ ನಿರ್ಣಯವನ್ನು ಹೈದರಾಬಾದು ಸಂಸ್ಥಾನದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ಅದಕ್ಕೆ ಪ್ರತ್ಯುತ್ತರವೇನೂ ಬಂದಿರುವುದಿಲ್ಲ.

**ನಿರ್ಣಯ ೯.**—ಬೆಳಗಾಂವಿ ಜಿಲ್ಲೆಯಲ್ಲಿಯ ಅನೇಕ ಕನ್ನಡ ಹಳ್ಳಿಗಳಲ್ಲಿ ಗ್ರಾಮದ ನೌಕರರು ಲೆಕ್ಕಪತ್ರಗಳನ್ನು ಕನ್ನಡದಲ್ಲಿ ಇಡುವುದಿಲ್ಲ. ಆದುದರಿಂದ ಕನ್ನಡದಲ್ಲಿಯೇ ಆಯಾ ಗ್ರಾಮದ ಲೆಕ್ಕಗಳನ್ನು ಇಡಬೇಕೆಂದು ಸರ್ಕಾರದವರು ಅವರಿಗೆ ಆಜ್ಞಾಪಿಸಬೇಕಾಗಿ ಈ ಸಮ್ಮೇಳನವು ಆಗ್ರಹದ ವಿನಂತಿ ಮಾಡಿಕೊಳ್ಳುತ್ತದೆ.

ಈ ನಿರ್ಣಯವನ್ನು ಮುಂಬಯಿ ಸರಕಾರಕ್ಕೆ ಕಳುಹಿಸಲಾಯಿತು; ನಮ್ಮ ಪತ್ರವು ತಲಪಿರುತ್ತದೆ ಎಂದು ಮಾತ್ರ ಉತ್ತರ ಬಂದಿದೆ.

**ನಿರ್ಣಯ ೧೦.**—ಕನ್ನಡ ಗ್ರಾಂಥಿಕ ಭಾಷೆಯ ಏಕೀಕರಣಕ್ಕಾಗಿ ಅಖಿಲ ಕರ್ಣಾಟಕದ ಬೇರೆ ಬೇರೆ ಭಾಗಗಳ ಶಿಷ್ಟ ಪ್ರಯೋಗಗಳನ್ನು ಆಧಾರವಾಗಿಟ್ಟುಕೊಂಡು, ಪಾಠಶಾಲೆಯಲ್ಲಿ ಅಭ್ಯಾಸ ಪುಸ್ತಕವಾಗುವಂತೆ ಹೊಸಗನ್ನಡ ವ್ಯಾಕರಣವೊಂದನ್ನು ಶಾಸ್ತ್ರೀಯ ಮಾರ್ಗದಿಂದ ರಚಿಸಬೇಕಾಗಿದೆ. ಅದಕ್ಕಾಗಿ ಈ ಸಮ್ಮೇಳನವು ಕೆಳಗೆ ಕಾಣಿಸಿದ ಉಪಸಭೆಯನ್ನು ಏರ್ಪಡಿಸುತ್ತದೆ:—

ಮ|| ರಾ|| ಟಿ. ಎಸ್. ವೆಂಕಣ್ಣಯ್ಯನವರು
,, ಪಂಡಿತ ಶ್ರೀನಿವಾಸರಾಘವಾಚಾರ್ಯರು
,, ಮುಳಿಯ ತಿಮ್ಮಪ್ಪಯ್ಯನವರು
,, ಕಡೆಂಗೋಡ್ಲು ಶಂಕರಭಟ್ಟರು
,, ರಾಜಪುರೋಹಿತ ನಾರಾಯಣರಾಯರು

ಮ॥ ರಾ॥ ಪಂಡಿತ ಕೇಶವಶರ್ಮಾ ಗಲಿಗಲಿ
,, ಬೇಂದ್ರೆ ದತ್ತರಾಯರು
,, ಉಗಾರಣ ಮಂಗೇಶರಾಯರು
,, ಪೂಜಾರ ಮಹಾದೇವ ಪ್ರಭಾಕರರು
,, ಕಟ್ಟೀಮನಿ
,, ಕೆ. ಜಿ. ಕುಂದಣಗಾರರು

ಈ ನಿರ್ಣಯವನ್ನು ಉಪಸಭೆಯ ಸದಸ್ಯರುಗಳಿಗೆ ಕಳುಹಿಸಲಾಯಿತು. ಕೆಲವು ಸದಸ್ಯರುಗಳು ಮಾತ್ರ ಉತ್ತರ ಬರೆದಿರುವರು ; ಯಾರೂ ಮುಂದಾಳಾಗಿ ಬಾರದಿರುವುದ ರಿಂದ ಯಾವ ಕೆಲಸವನ್ನು ಮಾಡಲೂ ಸಾಧ್ಯವಿಲ್ಲದಿದೆ.

**ನಿರ್ಣಯ ೧೧.**—ಮುಂಬೈ ಕರ್ನಾಟಕದ ಹಳ್ಳಿಗಳಲ್ಲಿರುವ ಅಂಚೆಯ ಕೆಲಸವು ಅಲ್ಲಲ್ಲಿಯ ಪಾಠಶಾಲೆಯ ಉಪಾಧ್ಯಾಯರುಗಳ ಕಡೆಗೆ ಇದ್ದು, ಮೇಲಣ ಅಧಿಕಾರಿಗಳು ಮರಾಟಿಗರಾಗಿರುವುದರಿಂದ ಅದರ ವ್ಯವಹಾರವನ್ನೆಲ್ಲ ಅನೇಕ ಸ್ಥಳಗಳಲ್ಲಿ ಮರಾಟಿಯಲ್ಲಿಯೇ ಸಾಗಿಸಬೇಕಾಗಿರುತ್ತದೆ. ಪೋಸ್ಟಿನ ವ್ಯವಹಾರವು ಆಯಾ ಪ್ರಾಂತೀಯ ಭಾಷೆಯಲ್ಲಿಯೇ ನಡೆಯಬೇಕೆಂದು ಇರುವ ನಿಯಮವನ್ನು ಯೋಗ್ಯ ರೀತಿಯಿಂದ ಪ್ರಚಾರದಲ್ಲಿ ತರುವಂತೆ ಮಾಡಬೇಕೆಂದು ಅಂಚೆಯ ಮುಖ್ಯಾಧಿಕಾರಿಗಳನ್ನು ಈ ಸಮ್ಮೇಳನವು ಕೇಳಿಕೊಳ್ಳುತ್ತದೆ.

ಈ ನಿರ್ಣಯವನ್ನು ಮುಂಬಯಿ ಪೋಸ್ಟ್ ಮಾಸ್ಟರ್ ಜನರಲ್ ಅವರಿಗೆ ಕಳುಹಿಸ ಲಾಯಿತು. ಅವರಿಂದ ಉತ್ತರವೇನೂ ಬಂದಿರುವುದಿಲ್ಲ.

**ನಿರ್ಣಯ ೧೨.**—ಮುಂಬೈ ಕರ್ನಾಟಕದಲ್ಲಿಯ 'ಪಬ್ಲಿಕ್ ವರ್ಕ್ಸ ಡಿಪಾರ್ಟ್‌ಮೆಂಟಿ'ನವರೂ ಮತ್ತು ಜಿಲ್ಲಾ ಬೋರ್ಡಿನವರೂ ದಾರಿಯಲ್ಲಿರುವ ಮೈಲಿಕಲ್ಲು, ಫರ್ಲಾಂಗು ಕಲ್ಲು, ಹಲಗೆ ಮುಂತಾದುವುಗಳನ್ನು ಇಂಗ್ಲಿಷಿನಲ್ಲಿ ಹಾಕುತ್ತಿದ್ದು, ಅದರಿಂದ ಇಂಗ್ಲಿಷ್ ಬಾರದವರಿಗೆ ಯಾವ ಪ್ರಯೋಜನವೂ ಆಗದಿರುವುದರಿಂದ ಅವುಗಳಲ್ಲಿ ಕನ್ನಡವನ್ನೂ ಸೇರಿಸಬೇಕೆಂದು ಈ ಸಮ್ಮೇಳನವು ಆ ಇಲಾಖೆಯವರಿಗೆ ತಿಳಿಸುತ್ತದೆ.

ಈ ನಿರ್ಣಯವನ್ನು ಧಾರವಾಡ, ಬೆಳಗಾಂವಿ, ಬಿಜಾಪುರ ಡಿಸ್ಟ್ರಿಕ್ಟ್ ಬೋರ್ಡು ಪ್ರೆಸಿಡೆಂಟರುಗಳಿಗೂ, ಸೂಪರಿಂಟೆಂಡಿಂಗ್ ಎಂಜನಿಯರುಗಳಿಗೂ ಕಳುಹಿಸಲಾಯಿತು ; ಕೆಲವರು ಮಾತ್ರ ಈ ನಿರ್ಣಯವನ್ನು ಅನುಮೋದಿಸಿ ಉತ್ತರ ಬರೆದಿರುತ್ತಾರೆ.

**ನಿರ್ಣಯ ೧೩.**—(೧) (ಅ) ನಿಜಾಂ ಕರ್ನಾಟಕದಲ್ಲಿರುವ ಗುಲ್ಬರ್ಗ, ರಾಯಚೂರು, ಬೀದರ ಮುಂತಾದ ಜಿಲ್ಲೆಗಳು ಕನ್ನಡ ಜಿಲ್ಲೆಗಳಾದುದರಿಂದ ಆ ಭಾಗಗಳಲ್ಲಿರುವ ಕೋರ್ಟು ಕಚೇರಿಗಳ ಭಾಷೆಯು ಕನ್ನಡವಿರಬೇಕೆಂದು ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

(ಇ) ರೈಲ್ವೆ ಸ್ಟೇಷನುಗಳಲ್ಲಿ ಸ್ಟೇಷನುಗಳ ಹೆಸರು ಮುಂತಾದುವುಗಳು ಕನ್ನಡದಲ್ಲಿರಲು ವಿನಂತಿಮಾಡಿಕೊಳ್ಳತಕ್ಕದ್ದು.

ಈ ನಿರ್ಣಯಗಳನ್ನು ಹೈದರಾಬಾದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು. ಅದಕ್ಕೆ ಯಾವ ಉತ್ತರವೂ ಬಂದಿಲ್ಲ.

(೨) ನಿಜಾಂ ಕರ್ಣಾಟಕದಲ್ಲಿಯ ಎಲ್ಲ ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಣವೂ ಕನ್ನಡ ಬಾಲಕರ ಮಾತೃಭಾಷೆಯಲ್ಲದ ಭಾಷೆಗಳಲ್ಲಿ ನಡೆಯುತ್ತಿರುವುದರಿಂದ ಶಿಕ್ಷಣ ಪ್ರಗತಿಯು ಅತಿಶಯ ಕುಂಠಿತವಾಗುತ್ತಿದೆ. ಆದುದರಿಂದ, ಆ ಪ್ರಾಥಮಿಕ ಶಿಕ್ಷಣವೆಲ್ಲವೂ ಕನ್ನಡದಲ್ಲಿಯೇ ಇರಬೇಕೆಂದೂ, ಮುಂದೆ ಅದು ಅವ್ಯಾಹತವಾಗಿ ಸಾಗುವಂತೆ ಏರ್ಪಾಡು ಮಾಡಬೇಕೆಂದೂ ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

(೩) ನಿಜಾಂ ಕರ್ಣಾಟಕದ ಗುಲ್ಬರ್ಗ, ಬೀದರ ಮುಂತಾದ ಜಿಲ್ಲೆಗಳಲ್ಲಿ ಗ್ರಾಮಸ್ಥರ ದಫ್ತರಗಳು ಮರಾಠಿಯಲ್ಲಿರುವುದರಿಂದ ಕನ್ನಡ ಪ್ರಾಥಮಿಕ ಶಿಕ್ಷಣಕ್ಕೆ ಬಹಳ ತೊಂದರೆಯಾಗಿರುವುದು. ಆದಕಾರಣ, ಈ ಭಾಗಗಳಲ್ಲಿಯೂ ಗ್ರಾಮಸ್ಥರ ದಫ್ತರಗಳು ಕನ್ನಡದಲ್ಲಿಯೇ ಇರುವಂತೆ ನಿಜಾಂ ಸರ್ಕಾರದವರು ಅಪ್ಪಣೆಕೊಡಿಸಿ ತೀವ್ರ ಜಾರಿಯಲ್ಲಿ ತರಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಈ ನಿರ್ಣಯಗಳನ್ನು ನಿಜಾಂ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು ; ಉತ್ತರವೇನೂ ಬಂದಿಲ್ಲ.

**ನಿರ್ಣಯ ೧೪.**—ಮುಂಬೈ ಕರ್ಣಾಟಕದಲ್ಲಿ ಅನೇಕ ವರ್ಷಗಳ ಹಿಂದಿನಿಂದಲೂ ಸಂಗ್ರಹಿಸಿ ಇಡುತ್ತ ಬಂದಿರುವ ಹಲವು ಶಿಲಾಲೇಖಸ ತಾಮ್ರಶಾಸನಗಳನ್ನು ಆದಷ್ಟು ತೀವ್ರವಾಗಿ ವರ್ಷಕ್ಕೆ ಒಂದೊಂದು ಸಂಪುಟದಂತೆಯಾದರೂ ಪ್ರಕಟಿಸುವುದಕ್ಕೆ ಏರ್ಪಡಿಸಿ, ತಾಳೆಯೋಲೆಯ ಪ್ರಾಚೀನ ಗ್ರಂಥಗಳನ್ನು ಕೂಡಿಹಾಕಲು ಸಮರ್ಥರಾದ ಇಬ್ಬರು ಕನ್ನಡ ಪಂಡಿತರನ್ನು ನೇಮಿಸಬೇಕೆಂದು ಮುಂಬೈ ಸರಕಾರದವರನ್ನೂ, ಮುಂಬೈ ಶಾಸನ ಸಭೆಯ ಕರ್ಣಾಟಕ ಸದಸ್ಯರನ್ನೂ ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಈ ತೀರ್ಮಾನವನ್ನು ಮುಂಬೈ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು ; ಅವರು ಪತ್ರವು ತಲಪಿದೆಯೆಂದು ಮಾತ್ರ ಉತ್ತರ ಬರೆದಿರುತ್ತಾರೆ.

**ನಿರ್ಣಯ ೧೫.**—(೧) ನಿಜಾಂ ಸಂಸ್ಥಾನದ ಕನ್ನಡ ಜಿಲ್ಲೆಗಳ ಭಾಗವನ್ನು ಮೊದಲಿದ್ದಂತೆ 'ಕರ್ಣಾಟಕ ಸುಬಾ' ಎಂದು ಬೇರೆ ಮಾಡಿ ಆ ಭಾಗದಲ್ಲಿ ರಾಜಕೀಯ ವ್ಯವಹಾರಗಳನ್ನೂ ಕೋರ್ಟು ಭಾಷೆಯನ್ನೂ ಕನ್ನಡವನ್ನಾಗಿ ಮಾಡುವಂತೆ ಈ ಸಮ್ಮೇಳನವು ನಿಜಾಂ ಸರ್ಕಾರವನ್ನು ಪ್ರಾರ್ಥಿಸುತ್ತದೆ.

(೨) ಹೈದರಾಬಾದ್ ಗೆಜೆಟ್ (ಜರೀದಾ) ಉರ್ದು ಭಾಷೆಯಲ್ಲಿ ಪ್ರಕಟವಾಗುತ್ತಿರುವುದರಿಂದ ಬಹು ಸಂಖ್ಯೆಯವರಾದ ಕನ್ನಡ ಪ್ರಜೆಗಳಿಗೆ ಸರ್ಕಾರದ ಯಾವ ವಿಷಯಗಳೂ ತಿಳಿಯದೆ ಇರುವುದರಿಂದ ಗೆಜೆಟ್ಟಿನಲ್ಲಿ ಬರುವ ಸರ್ಕಾರಿ

ಹುಕುಮುಗಳೂ ಕಾನೂನುಗಳೂ ಕನ್ನಡದಲ್ಲಿ ಪ್ರಕಟನೆಯಾಗುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನವು ಆ ಸರ್ಕಾರವನ್ನು ಪ್ರಾರ್ಥಿಸುತ್ತದೆ.

ಮೇಲಣ ತೀರ್ಮಾನಗಳನ್ನು ನಿಜಾಂ ಸರ್ಕಾರದವರಿಗೆ ಬರೆದು ಕಳುಹಿಸಲಾಯಿತು; ಉತ್ತರವಾವುದೂ ಬಂದಿರುವುದಿಲ್ಲ.

**ನಿರ್ಣಯ ೧೬.**—ಮುಧೋಳ, ಜತ್ತು, ಅಕ್ಕಲಕೋಟೆ ಮತ್ತು ಸೊಂಡೂರು ಸಂಸ್ಥಾನಗಳೊಳಗಿನ ಪ್ರಜೆಗಳು ಕನ್ನಡ ಭಾಷೆಯವರಾಗಿದ್ದು ಪ್ರಾಥಮಿಕ ಶಿಕ್ಷಣವನ್ನು ಅವರಿಗೆ ಕನ್ನಡ ಭಾಷೆಯಲ್ಲಿ ಕೊಡದೆ ಮರಾಠೀ ಭಾಷೆಯಲ್ಲಿ ಕೊಡುವುದರಿಂದ ಪ್ರಜೆಗಳಿಗೆ ಶಿಕ್ಷಣದ ಲಾಭ ದೊರೆಯುವುದಿಲ್ಲ; ಮತ್ತು ರಾಜಕೀಯ ದರಬಾರೀ ದಫ್ತರವನ್ನು ಕನ್ನಡ ಭಾಷೆಯಲ್ಲಿಡದೆ ಮರಾಠಿಯಲ್ಲಿಟ್ಟಿರುವುದರಿಂದ ಬಹಳ ತೊಂದರೆಗಳು ಸಂಭವಿಸುತ್ತವೆ. ಆದುದರಿಂದ ಆ ಸಂಸ್ಥಾನಗಳ ಕನ್ನಡ ಪ್ರಜೆಗಳಿಗೆ ಶಿಕ್ಷಣವನ್ನು ಕನ್ನಡದಲ್ಲಿಯೇ ಕೊಡಬೇಕೆಂದೂ, ರಾಜಕೀಯ ದರ್ಬಾರಿ ದಫ್ತರವನ್ನು ಕನ್ನಡದಲ್ಲಿಯೇ ಇರಿಸಬೇಕೆಂದೂ ಈ ಸಮ್ಮೇಳನವು ಈ ಸರಕಾರಗಳಿಗೆ ಬಿನ್ನವಿಸುತ್ತದೆ.

ಈ ನಿರ್ಣಯವನ್ನು ಮೇಲೆ ಹೇಳಿರುವ ಸಂಸ್ಥಾನಗಳ ದಿವಾನರುಗಳಿಗೆ ಬರೆದು ಕಳುಹಲಾಯಿತು; ಅವರಿಂದ ಯಾವ ಜವಾಬೂ ಬಂದಿರುವುದಿಲ್ಲ.

**ನಿರ್ಣಯ ೧೭.**—ಮುಂಬಯಿ ಕರ್ಣಾಟಕದಲ್ಲಿ ವಕೀಲಿ ಮಾಡುವ ಜನರಿಗೆ ವಕೀಲಿಯ ಸನ್ನದು ಕೊಡುವ ಮೊದಲು ಹೈಕೋರ್ಟಿನವರು ಅವರು ಕನ್ನಡವನ್ನು ಬರೆಯಬಲ್ಲರೆಂಬ ಬಗ್ಗೆ ಸರ್ಟಿಫಿಕೇಟ್ ತರಬೇಕೆಂದು ನಿರ್ಣಯಿಸಿರುತ್ತಾರೆ; ಆದರೆ ಈ ಸರ್ಟಿಫಿಕೇಟು ನೆಪ ಮಾತ್ರವಾಗಿರುವುದರಿಂದ ಜನರಿಗೆ ಪ್ರಯೋಜನವಿಲ್ಲ. ಸರ್ಕಾರದ ಅಧಿಕಾರಿಗಳಿಗೆ ಇಲ್ಲಿ ಇರುವಂತೆ ಅವರಿಗೂ ಕನ್ನಡದ ಒಂದು ಪರೀಕ್ಷೆಯನ್ನು ನಡೆಯಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಈ ನಿರ್ಣಯವನ್ನು ಮುಂಬಯಿ ಹೈಕೋರ್ಟಿಗೂ, ಹೈಕೋರ್ಟು ರೆಜಿಸ್ಟ್ರಾರವರಿಗೂ ಕಳುಹಿಸಲಾಯಿತು. ಅವರು ತಮ್ಮ ೬-೯-೨೯ನೆಯ ತಾರೀಖಿನ ೨೭೬೩ನೆಯ ನಂಬರು ಪತ್ರದಲ್ಲಿ ಈಗ ಇರುವ ಪದ್ಧತಿಯು ಸಮರ್ಪಕವಾಗಿ ನಡೆಯುತ್ತಿರುವುದರಿಂದ ನಿರ್ಣಯದ ಪ್ರಕಾರ ಬದಲಾವಣೆಯನ್ನು ಮಾಡಬೇಕಾದ ಸಂಭವ ತೋರಿಬಂದಿಲ್ಲವೆಂದು ತಿಳಿಸಿರುತ್ತಾರೆ.

**ನಿರ್ಣಯ ೧೮.**—ಮುಂಬಯಿ ಕರ್ಣಾಟಕದಲ್ಲಿ ವಿದ್ಯಾಖಾತೆಯ ಇನ್‌ಸ್ಪೆಕ್ಟರ್ ಮೊದಲಾದ ನೌಕರರುಗಳೆಲ್ಲರೂ ಕನ್ನಡಿಗರಾಗಿರತಕ್ಕುದು ಅತ್ಯಾವಶ್ಯಕವೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಈ ನಿರ್ಣಯವನ್ನು ಮುಂಬಯಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ಅವರು ಪತ್ರವು ತಲಪಿದೆಯೆಂದೂ, ಈ ವಿಚಾರದಲ್ಲಿ ಗಮನವನ್ನು ಕೊಡಲಾಗುವುದೆಂದೂ ತಿಳಿಸಿರುತ್ತಾರೆ.

**ನಿರ್ಣಯ ೧೯.**—ಮುಂಬಯಿ ಕರ್ನಾಟಕದ ಕನ್ನಡ ಟ್ರೈನಿಂಗು ಕಾಲೇಜಿನಲ್ಲಿ ಮೂರು ತರಗತಿಗಳಿದ್ದುದನ್ನು ವಜಾ ಮಾಡಿ ಒಂದೇ ತರಗತಿಯನ್ನಿಟ್ಟಿರುವುದರಿಂದ ಶಿಕ್ಷಣ ಪ್ರಾವೀಣ್ಯದ ಅಭ್ಯಾಸಕ್ಕೆ ಹಾನಿಯುಂಟಾಗಿದೆ; ಆದುದರಿಂದ ಮೊದಲಿನಂತೆ ಮೂರು ವರ್ಷದ ಅಭ್ಯಾಸವನ್ನು ಏರ್ಪಡಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಈ ನಿರ್ಣಯವನ್ನು ಮುಂಬಯಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ನಮ್ಮ ಪತ್ರವು ತಲಪಿರುತ್ತದೆಂದು ಮಾತ್ರ ಉತ್ತರ ಬಂದಿದೆ.

**ನಿರ್ಣಯ ೨೦.**—ಮುಂಬಯಿ ಕರ್ನಾಟಕದಲ್ಲಿಯ 'ವರ್ನಾಕ್ಯುಲರ್ ಸ್ಕೂಲ್ ಫೈನಲ್' ಪರೀಕ್ಷೆಗೆ ಬಹು ವರ್ಷಗಳಿಂದಲೂ ಒಂದೇ ಪಠ್ಯ ಪುಸ್ತಕವನ್ನು ನೇಮಿಸಿರುವುದರಿಂದ, ಹಾಗಿರುವುದು ಕರ್ನಾಟಕ ಸಾಹಿತ್ಯ ಜ್ಞಾನ ವಿಕಾಸಕ್ಕೆ ಅವಕಾಶವನ್ನು ತಪ್ಪಿಸುವುದಾದ ಕಾರಣ, ಬೇರೆ ಬೇರೆ ಪುಸ್ತಕಗಳನ್ನು ಪ್ರತಿ ವರ್ಷವೂ ಬದಲಾಯಿಸಿ ಇಡಬೇಕೆಂದು ಈ ಸಮ್ಮೇಳನವು ಮುಂಬಯಿ ಸರ್ಕಾರವನ್ನೂ ಸ್ಥಾನಿಕ ಸರ್ಕಾರವನ್ನೂ ಕೇಳಿಕೊಳ್ಳುತ್ತದೆ.

ಈ ನಿರ್ಣಯವನ್ನು ಮುಂಬಯಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೂ, ಧಾರವಾಡ, ಬೆಳಗಾಂವಿ, ಬಿಜಾಪುರ ಡಿಸ್ಟ್ರಿಕ್ಟುಗಳ ಬೋರ್ಡು ಪ್ರೆಸಿಡೆಂಟರವರಿಗೂ ಕಳುಹಿಸಲಾಯಿತು. ಸರ್ಕಾರದವರು ಮಾತ್ರ ನಮ್ಮ ಪತ್ರವು ತಲಪಿರುತ್ತದೆಂದು ಉತ್ತರ ಕೊಟ್ಟಿರುತ್ತಾರೆ.

**ನಿರ್ಣಯ ೨೧.**—ಕನ್ನಡದಲ್ಲಿ ಮೈಸೂರು, ಮದರಾಸು ಇಲಾಖೆಗಳಲ್ಲಿರುವ ಪಂಡಿತ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಬಂದವರನ್ನು ಮುಂಬಯಿ, ನಿಜಾಂ ಇಲಾಖೆಗಳಲ್ಲಿರುವ ಹೈಸ್ಕೂಲು ಮುಂತಾದುವುಗಳಲ್ಲಿ ನೇಮಿಸಿಕೊಂಡು, ಅವರ ಪಾಂಡಿತ್ಯದ ಲಾಭವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡುವುದು ಇಷ್ಟವಾಗಿರುವುದರಿಂದ ಆ ಎರಡೂ ಸರ್ಕಾರದವರು ಆ ಪ್ರಕಾರ ನೇಮಿಸಿಕೊಳ್ಳಬೇಕೆಂದು ಈ ಸಮ್ಮೇಳನವು ಮುಂಬಯಿ, ನಿಜಾಂ ಸರ್ಕಾರದವರನ್ನು ಕೇಳಿಕೊಳ್ಳುತ್ತದೆ.

ಈ ನಿರ್ಣಯವನ್ನು ಮುಂಬಯಿ ಮತ್ತು ನಿಜಾಂ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಲಾಯಿತು; ಮುಂಬಯಿ ಸರ್ಕಾರದವರು ನಮ್ಮ ಪತ್ರವು ತಲಪಿದೆ ಎಂದು ಮಾತ್ರ ತಿಳಿಸಿದ್ದಾರೆ.

**ನಿರ್ಣಯ ೨೨.**—ಕನ್ನಡ ಗಡಿನಾಡಿನ ಅನೇಕ ಭಾಗಗಳಲ್ಲಿ ಬಹು ಮಂದಿ ಕನ್ನಡಿಗರಿರುವರಾದರೂ ಅವರಲ್ಲನೇಕರಿಗೆ ಕನ್ನಡ ಲಿಪಿಯೂ ವಾಚನವೂ ಗೊತ್ತಿಲ್ಲದೆ ಕನ್ನಡವು ಜೀರ್ಣವಾಗುತ್ತಲಿದೆ. ಇದಕ್ಕಾಗಿ ಈ ಪ್ರಾಂತಗಳಲ್ಲಿ ಕನ್ನಡ ಪ್ರಸಾರಣೆಯ ಬಗ್ಗೆ ಒಬ್ಬ ಪ್ರಚಾರಕರನ್ನು ಸಾಹಿತ್ಯ ಪರಿಷತ್ತು ಕೂಡಲೆ ಗೊತ್ತುಪಡಿಸತಕ್ಕದ್ದು.

ಗಡಿನಾಡುಗಳಲ್ಲಿರುವ ಕನ್ನಡಿಗರಿಗೆ ಕನ್ನಡದಲ್ಲಿ ಅಭಿರುಚಿಯನ್ನು ಹುಟ್ಟುವಂತೆ ಮಾಡುವುದಕ್ಕಾಗಿ ಅಲ್ಲಲ್ಲಿ ಭಾರತ ಪಠನವನ್ನು ಮಾಡಲು ಮೈಸೂರಿನ

ಮ॥ ರಾ॥ ಎಸ್. ಜ. ಬಿಂದೂರಾಯರನ್ನು ನಿಯಮಿಸಿ ಗಡಿನಾಡುಗಳಿಗೆ ಕಳುಹಿಸಿದೆ. ಇವರು ಈ ವರ್ಷದಲ್ಲಿ ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗಗಳನ್ನು ಸಂದರ್ಶಿಸಿ ಪ್ರಚಾರ ಕಾರ್ಯವನ್ನು ಮಾಡಿರುವರು. ಇನ್ನುಮುಂದೆ ಗಡಿನಾಡುಗಳಲ್ಲಿ ಕೆಲಸ ಮಾಡಲು ಹೊರಡುವವರಾಗಿದ್ದಾರೆ.

**ನಿರ್ಣಯ ೨೩.**—ಉತ್ತರ ಕನ್ನಡ ಜಿಲ್ಲೆಯಲ್ಲಿ ಕೆಲವು ಊರುಗಳಲ್ಲಿ ಮರಾಠಿ ಶಾಲೆಗಳಿದ್ದು ಅದರಿಂದ ಕನ್ನಡ ಭಾಷಾಭಿವೃದ್ಧಿಗೂ ವ್ಯವಹಾರಕ್ಕೂ ಆತಂಕ ವಾಗಿರುವುದರಿಂದ ಆ ಶಾಲೆಗಳನ್ನು ಕನ್ನಡದವುಗಳಾಗಿ ಮಾಡಬೇಕೆಂದೂ, ಅನಿವಾರ್ಯ ಪಕ್ಷದಲ್ಲಿ ಕನ್ನಡವನ್ನು ನಿರ್ಬಂಧದಿಂದ ಕಲಿಸಬೇಕೆಂದೂ ಈ ಸಮ್ಮೇಳನವು ಅಲ್ಲಿಯ ಬೋರ್ಡಿಗೆ ವಿಜ್ಞಾಪನೆ ಮಾಡಿಕೊಳ್ಳುತ್ತದೆ.

ಈ ನಿರ್ಣಯವನ್ನು ಉತ್ತರ ಕನ್ನಡ ಡಿಸ್ಟ್ರಿಕ್ಟ್ ಬೋರ್ಡು ಪ್ರೆಸಿಡೆಂಟರವರಿಗೂ, ಆ ಜಿಲ್ಲೆಯ ತಾಲ್ಲೂಕು ಬೋರ್ಡು ಪ್ರೆಸಿಡೆಂಟರುಗಳಿಗೂ ಕಳುಹಿಸಲಾಯಿತು. ಸಿರ್ಸಿ, ಸಿದ್ದಾಪುರ, ಹೊನ್ನಾವರ, ಯಲ್ಲಾಪುರ ಮತ್ತು ಕುಮಟದ ತಾಲ್ಲೂಕು ಪ್ರೆಸಿಡೆಂಟರುಗಳು ಅವರವರ ತಾಲ್ಲೂಕಿನಲ್ಲಿ ಮರಾಠಿ ಶಾಲೆಗಳು ಇಲ್ಲವೆಂತಲೂ ಕನ್ನಡ ಪಾಠಶಾಲೆಗಳಿದ್ದು ಕನ್ನಡವನ್ನೇ ಕಲಿಸಲು ಏರ್ಪಾಡು ಇದೆಯೆಂತಲೂ ತಿಳಿಸಿರುತ್ತಾರೆ.

ಕುಮಟದ ತಾಲ್ಲೂಕು ಪ್ರೆಸಿಡೆಂಟರವರು ತಮ್ಮ ೫–೩–೩೦ನೆಯ ತಾರೀಖಿನ ೧೬೯೦ನೆಯ ನಂಬರು ಪತ್ರದಲ್ಲಿ ಮರಾಠೀ ಸ್ಕೂಲುಗಳಲ್ಲಿ ಕ್ರಮೇಣ ಕನ್ನಡ ಕಲಿಸುವ ಪ್ರಯತ್ನ ಮಾಡಲು ಸ್ಕೂಲು ಬೋರ್ಡಿಗೆ ಬರೆಯುವಂತೆ ನಿರ್ಣಯ ಮಾಡಿ ಅವರಿಗೆ ನಿರ್ಣಯವನ್ನು ಕಳುಹಿಸಿರುವುದಾಗಿ ತಿಳಿಸಿರುತ್ತಾರೆ.

**೯. ಆಯ ವ್ಯಯ.**—ಇದರ ಪಟ್ಟಿಯನ್ನು ೨೦–೨೧ನೆಯ ಪುಟಗಳಲ್ಲಿ ಕೊಟ್ಟಿದೆ. ಸಂವತ್ಸರಾದಿಯಲ್ಲಿ ನಮ್ಮಲ್ಲಿದ್ದ ಮೊಬಲಗು ರೂ. ೧೬,೨೯೦–೧೩–೭; ಈ ವರ್ಷ ವಸೂಲಾದದ್ದು ರೂ. ೩,೪೩೪–೮–೧೦; ಈ ವರ್ಷ ಪರಿಷತ್ತಿನಿಂದ ವೆಚ್ಚವಾದ ಮೊಬಲಗು ೩,೯೭೭–೧೩–೦; ಆಯಕ್ಕಿಂತಲೂ ವ್ಯಯವು ೫೪೩–೪–೨ ಹೆಚ್ಚಾಗಿದೆ: 'ಜ್ಯೋತಿರ್ವಿನೋದಿನಿ' ಪುಸ್ತಕವನ್ನು ಮುದ್ರಿಸಲು ಕಾಗದಕ್ಕೂ ಚಿತ್ರಗಳಿಗೂ ರೂ. ೬೦೦–೨–೬ ಈ ವರ್ಷದಲ್ಲಿ ವೆಚ್ಚವಾಗಿದೆ.

ಶುಕ್ಲ ಸಂವತ್ಸರದ ನಮ್ಮ ಲೆಕ್ಕದ ಪಟ್ಟಿಗಳನ್ನು ಪರಿಶೀಲಿಸಿ ಕೊಟ್ಟುದ ಕ್ಕಾಗಿ ಬೆಂಗಳೂರಿನ ಮ॥ ರಾ॥ ಕೆ. ಎಸ್. ಕೃಷ್ಣಯ್ಯರ್, ಬಿ.ಎ. ಅವರಿಗೆ ಪರಿಷತ್ತು ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸಬೇಕಾಗಿದೆ.

**೧೦. ಪರಿಷತ್ತಿನ ಕಟ್ಟಡ.**—ನಮ್ಮ ಉಪಾಧ್ಯಕ್ಷರಾದ ರಾಜಸಭಾ ಭೂಷಣ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರು ಇದಕ್ಕೆ ಮೂಲ ಕಾರಣ ರಾಗಿ, ಕಟ್ಟಡವನ್ನು ಬೇಗ ಕಟ್ಟಬೇಕೆಂದು ಕೇವಲ ಉತ್ಸಾಹದೊಡನೆ ಪ್ರಯತ್ನ ಪಡುತ್ತಿರುವುದು ಸರಿಯಷ್ಟೆ. ಪ್ಲ್ಯಾನ್ ಮೊದಲಾದುವೆಲ್ಲವೂ ತಯಾರಾಗಿ ಅದಕ್ಕೆ ನಮ್ಮ ಅಧ್ಯಕ್ಷರ ಅನುಮತಿಯೂ ದೊರೆತಿರುವುದು. ಈ ಕಟ್ಟಡದ ಕೆಲಸವನ್ನು ಸರ್ಕಾರದ 'ಪಬ್ಲಿಕ್ ವರ್ಕ್ಸ್' ಇಲಾಖೆಗೇ ವಹಿಸಲಾಗಿದೆ. ನಮ್ಮ

ಉಪಾಧ್ಯಕ್ಷರು, ತಮ್ಮ ದೇಹಾರೋಗ್ಯವು ಬಹಳ ಹೀನಸ್ಥಿತಿಯಲ್ಲಿರುವ ಈಗಿನ ಸಂದರ್ಭದಲ್ಲಿಯೂ, ಛೀಫ್ ಎನ್‌ಜಿನಿಯರ್ ಮೊದಲಾದ ಅಧಿಕಾರಿಗಳನ್ನು ಈ ಕಟ್ಟಡದ ಕೆಲಸವನ್ನು ಬೇಗನೆ ಪ್ರಾರಂಭಿಸುವಂತೆ ಸ್ವತಃ ಕೇಳಿಕೊಳ್ಳುತ್ತಿರುವರು. ಈ ಮಹನೀಯರಿಗೆ ಭಗವಂತನು ಆರೋಗ್ಯ ಭಾಗ್ಯವನ್ನಿತ್ತು ಪರಿಷತ್ತನ್ನು ಇನ್ನೂ ಉತ್ತಮ ಸ್ಥಿತಿಗೆ ತರುವಂತೆ ಮಾಡಬೇಕೆಂಬುದೇ ನಮ್ಮೆಲ್ಲರ ಪ್ರಾರ್ಥನೆಯಾಗಿದೆ.

೧೧. **ಉಪಸಂಹಾರ.**—ಮಹನೀಯರೇ! ಇದುವರೆಗೂ ಶ್ರುತಪಡಿಸಿದ ಸಂಗತಿಗಳಿಂದ ಪರಿಷತ್ತಿನ ಬಡತನದ ಬವಣೆಯು ತಮ್ಮೆಲ್ಲರಿಗೂ ಮನಮುಟ್ಟಿ ಗೋಚರಕ್ಕೆ ಬಂದಿರಬಹುದು. ಯಾವ ಘನತರವಾದ ಉದ್ದೇಶಗಳಿಂದ ಪರಿಷತ್ತು ಸ್ಥಾಪಿಸಲ್ಪಟ್ಟಿತೋ ಅವುಗಳನ್ನೆಲ್ಲ ಸಾಂಗವಾಗಿ ಪೂರೈಸಬೇಕೆಂಬ ಆಶೆಯು ಮೊದಲಿನಿಂದಲೂ ಪರಿಷತ್ತಿಗೆ ಇದ್ದೇ ಇದೆ. ಈ ಆಶೆಯು ಸಂಪೂರ್ಣವಾಗಿ ಈಡೇರಲು ದ್ರವ್ಯಾಭಾವದ ಕೊರತೆಯಿಂದ ಕೇವಲ ಮುಗ್ಗಟ್ಟಾಗಿದೆ. ಆದರೂ ಪರಿಷತ್ತು ನಿರಾಶೆಯಿಂದ ಕೈಕಟ್ಟಿಕೊಂಡು ಕುಳಿತಿಲ್ಲ; ಯಥಾ ಶಕ್ತಿಯಾಗಿ ಶ್ರಮಿಸುತ್ತ, ತನ್ನಿಂದ ಸಾಧ್ಯವಿರುವುದನ್ನೆಲ್ಲ ಮಾಡುತ್ತ

> ಕಸ್ಯಾತ್ಯನ್ತಂ ಸುಖಮುಪನತಂ ದುಃಖಮೇಕಾಂತತೋ ವಾ।
> ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರ ನೇಮಿ ಕ್ರಮೇಣ ॥

ಎಂಬ ಕವಿ ಸಾರ್ವಭೌಮ ಕಾಳಿದಾಸೋಕ್ತಿಯನ್ನೇ ಸ್ಮರಿಸುತ್ತ, ಮುಂದಾದರೂ ಅನುಕೂಲ ಕಾಲವು ಒದಗೀತೆಂದು ಹಾರೈಸುತ್ತಲಿದೆ. ಈ ಹಾರೈಕೆಯು ಕಾರ್ಯತಃ ಫಲಿಸುವಂತೆ ಮಾಡಿ, ಪರಿಷತ್ತಿನಿಂದ ಸೇವೆಯನ್ನು ಸಮರ್ಪಿಸಿಕೊಳ್ಳುವುದು ಕನ್ನಡಿಗರನ್ನೇ ಸೇರಿದೆ. ಎಲ್ಲಿ ನೋಡಿದರೂ, ಯಾರನ್ನು ನೋಡಿದರೂ, "ಪರಿಷತ್ತಿನವರು ಮಾಡುತ್ತಿರುವುದೇನು?" ಎಂಬ ಪ್ರಶ್ನೆಯನ್ನೇ ಪದೇ ಪದೇ ಕೇಳುತ್ತಿದ್ದಾರೆ. ಹೀಗೆ ಕೇಳುವವರು ಅಲ್ಪ ಸ್ವಲ್ಪವಾಗಿ ಸಹಾಯ ಮಾಡಿದ್ದರೂ, ಪರಿಷತ್ತಿನಿಂದ ಇದುವರೆಗೆ ನಡೆದಿರುವುದಕ್ಕಿಂತ ಇನ್ನೂ ಹೆಚ್ಚು ಕೆಲಸವು ಎಂದೋ ನಡೆದುಹೋಗುತ್ತಿದ್ದಿತು. ಮುಂದಾದರೂ ಅವರು ಆ ರೀತಿ ಮಾಡಬೇಕೆಂದು ಬೇಡಿಕೊಳ್ಳುವೆವು. ಮೇಲು ಕೀಳೆಂಬ ಭಾವನೆಯಿಲ್ಲದೆ ಜಾತಿ ಮತ ಭೇದವಿಲ್ಲದೆ, ನಮುಸ್ತರಿಗೂ ಸೇರಿದ ಸಂಸ್ಥೆಯೆಂದರೆ ಅದು ನಮ್ಮ ಪರಿಷತ್ತು. ಆದಕಾರಣ, ಒಟ್ಟು ಕರ್ಣಾಟಕದ ಅಶೇಷ ಮಹಾ ಜನರೂ ಪರಿಷತ್ತಿಗೆ ಆದರದಿಂದ ಅವಲಂಬನವನ್ನಿತ್ತು ತನ್ಮೂಲಕ ಕರ್ಣಾಟಕ ಜನನಿಯ ಸೇವೆಯಿಂದ ಧನ್ಯರಾಗಬೇಕಾದುದು ಕೇವಲ ಆವಶ್ಯಕ. ಒಮ್ಮೆ ಭಾರತವರ್ಷದ ಸಮ್ರಾಜನಾದ ಶ್ರೀಹರ್ಷದೇವನನ್ನು ಕೂಡ ಜಯಿಸಿದ್ದ ಅತುಳ ಪರಾಕ್ರಮಿಯಾದ ಪುಲಿಕೇಶಿಯ ಅಂತರಾತ್ಮವು ಇಂದಿನ ಕರ್ಣಾಟಕದ ಚೈತನ್ಯ ರಹಿತವಾದ ವಿಪನ್ನಾವಸ್ಥೆಯನ್ನು ಕಂಡು ಎಷ್ಟು ಮನ ಮರುಗುವುದೋ! "ಕರ್ಣಾಟಕದ ನಾಡು, ವೈಭವದ ಬೀಡು" ಎಂಬ ಪಲ್ಲವಿಯನ್ನೇ ಹಾಡುತ್ತ ಪರಂಧಾಮವನ್ನೈದಿದರೋ ಎಂಬಂತೆ ತೋರುವ ವಿಜಯನಗರದ ಸಮ್ರಾಜರು ಅಂದಿನ ಕರ್ಣಾಟಕಕ್ಕೂ ಇಂದಿನ ಕರ್ಣಾಟಕಕ್ಕೂ ಇರುವ ಅಂತರವನ್ನು ನೋಡಿ

ಸ್ವರ್ಗದಲ್ಲಿದ್ದೂ ಎಷ್ಟು ಸಂಕಟಪಡುತ್ತಿರುವರೋ! ದೇಶದ ಖ್ಯಾತಿಯನ್ನುಳಿಸಲು ಜೀವವನ್ನೇ ಪಣವಾಗಿಟ್ಟು ತಂಜಾವೂರಿನ ಜೆಟ್ಟಿಯ ಪ್ರಾಣವನ್ನು ಮಲ್ಲಯುದ್ಧದಲ್ಲಿ ಸೂರೆಗೊಂಡು ವಿಜಯ ಕೀರ್ತಿಗಳೊಡನೆ ಮೈಸೂರಿಗೆ ಹಿಂದಿರುಗಿದ ರಣಧೀರ ಕಂಠೀರವ ನರಸರಾಜ ಒಡೆಯರು ಇಂದು ನಮ್ಮನ್ನು ನೋಡಿ ಏನೆನ್ನಬೇಕು? ಆರ್ಯರೆ! ಕನ್ನಡಿಗರೆಂಬ ಹೆಸರಿಗೆ ತಕ್ಕಂತೆ ಇನ್ನಾದರೂ ನಾವು ಯೋಗ್ಯ ರೀತಿಯಲ್ಲಿ ಹೆಮ್ಮೆಯಿಂದ ವರ್ತಿಸಬೇಡವೆ? ಎಲ್ಲ ಕ್ಷೇತ್ರಗಳಲ್ಲಿಯೂ ಇತರೋಪ್ಯಧಿಕವಾಗಿ ಹೋರಾಡಿ ವಿಜಯಮಾಲೆಯನ್ನು ಸಾಧಿಸಬೇಡವೆ? ಕನ್ನಡಿಗರೆಲ್ಲರೂ ಮನಸ್ಸುಮಾಡಿದರೆ, ಪರಿಷತ್ತಿನ ಕಾರ್ಪಣ್ಯ ಜೀವನವು ಮಾಯವಾಗುವುದೊಂದು ಕಷ್ಟವೆ? ಆದಕಾರಣ, ಮುಂದಣ ವರುಷಗಳಲ್ಲಿ ಈ ವಿಧದ ಪ್ರಸಂಗಕ್ಕೇ ಅವಕಾಶವಿಲ್ಲದಂತೆ ಕನ್ನಡಿಗರೆಲ್ಲರೂ ಒಮ್ಮನಸ್ಸಿನಿಂದ ತಮತಮಗೆ ಸಾಧ್ಯವಾದ ಸಹಾಯವನ್ನು ನೀಡಬೇಕೆಂದು ಬೇಡಿಕೊಳ್ಳುವೆವು. ಸಂಸ್ಕೃತಿಯ ಮತ್ತು ಸಾಹಿತ್ಯದ ದೃಷ್ಟಿಯಿಂದಲಾದರೂ ಕರ್ಣಾಟಕದಲ್ಲಿ ಆದಷ್ಟು ತೀವ್ರವಾಗಿ ಏಕೀಕರಣವು ನಡೆದು, ಕರ್ಣಾಟಕ ಸಾಹಿತ್ಯ ಪರಿಷತ್ತು ಈ ವಿಚಾರದಲ್ಲಿ ಕರ್ಣಾಟಕ ಮಾತೆಯ ಕಂಠಾಭರಣವಾದ ಮಂಗಳ ಸೂತ್ರ ವೆನಿಸುವಂತೆ ಪರಿಣಾಮಗೊಳಿಸಬೇಕೆಂದು ಕನ್ನಡಿಗರೆಲ್ಲರನ್ನೂ ಪ್ರೀತಿ ಭಕ್ತಿಗಳಿಂದ ಬೇಡಿಕೊಳ್ಳುವೆವು.

**ಸಿ. ಕೆ. ವೆಂಕಟರಾಮಯ್ಯ,**
ಗೌರವ ಕಾರ್ಯದರ್ಶಿ.

# ಕರ್ಣಾಟಕ ಸಾಹಿತ್ಯ ಪರಿಷತ್ತು

## ಆಸ್ತಿ ಋಣಗಳ ಪಟ್ಟಿ

(೧೯೩೦ನೆಯ ಏಪ್ರಿಲ್ ೧ನೆಯ ತಾರೀಖಿನಲ್ಲಿದ್ದಂತೆ)

| ಆಸ್ತಿ | ರೂ. ಆ. ಪೈ. | ಋಣ | ರೂ. ಆ. ಪೈ |
|---|---|---|---|
| ಪುಸ್ತಕ ವ್ಯಾಪಾರಿಗಳಿಂದ | ೦—೦—೦ | ಸಿಬ್ಬಂದಿಯ ವೆಚ್ಚ | ೫೯—೦—೦ |
| ಇತರರಿಂದ | ೧೦–೧೦—೦ | ದೀಪದ ವೆಚ್ಚ | ೩—೪—೬ |
| ಸರ್ಕಾರದ ಗ್ರಾಂಟು | ೧೫೦—೦—೦ | ಸಹಾಯಕರ ಮತ್ತು ಆಜೀವ ಸದಸ್ಯರ ಚಂದಾ ಮೊಬಲಗು | ೪,೪೮೪—೪—೦ |
| ಬರಬಹುದಾದ ಚಂದಾ ಮೊಬಲಗು | ೧,೫೨೧–೧೨—೦ | | |
| ಡಿಪಾಜಿಟ್ಟುಗಳು | ೧೫,೬೭೯–೧೨—೭ | | |
| ನಗದು ಹಣ | ೭೭–೧೨–೧೧ | ಕಟ್ಟಡದ ಹಣ | ೯,೬೦೦—೦—೦ |
| ಡಿಪಾಜಿಟ್ಟುಗಳ ಬಡ್ಡಿ (ಸುಮಾರು) | ೧೦೦—೦—೦ | ಗ್ರಂಥ ಮುದ್ರಣದ ಹಣ | ೨,೪೫೦—೦—೦ |
| ಕೈಯಲ್ಲಿರುವ ಅಚ್ಚಿನ ಕಾಗದ (ಸುಮಾರು) | ೧೦—೦—೦ | ಋಣಕ್ಕಿಂತಲೂ ಆಸ್ತಿಯ ಹೆಚ್ಚು | ೭,೪೯೩—೬–೧೧ |
| ಕೈಯಲ್ಲಿರುವ ಪುಸ್ತಕಗಳ ಬೆಲೆ (ಸುಮಾರು) | ೧,೧೫೦—೦—೦ | | |
| ಪುಸ್ತಕ ಭಾಂಡಾಗಾರ (ಸುಮಾರು) | ೩,೯೦೦—೦—೦ | | |
| ಸಾಮಾನುಗಳು ವಗೈರೆ (ಸುಮಾರು) | ೧,೪೦೦—೦—೦ | | |
| ಆರಾ ಲೈಬ್ರೆರಿಯ ಪಂಪ ಭಾರತಕ್ಕಾಗಿ ಡಿಪಾಜಿಟ್ಟು | ೧೦೦—೦—೦ | | |
| ಒಟ್ಟು ರೂ. .. | ೨೪,೦೮೯–೧೫—೫ | ಒಟ್ಟು ರೂ. .. | ೨೪,೦೮೯–೧೫—೫ |

**ಕರ್ಣಾಟಕ ಸಾಹಿತ್ಯ**

ಶುಕ್ಲ ಸಂವತ್ಸರದ

## ಆಯ

| | | ರೂ. ಆ. ಪೈ. |
|---|---|---|
| ೧. | ಹೋದ ವರ್ಷದ ಶಿಲ್ಕು .. | ೧೬,೨೯೦–೧೩–೭ |
| ೨. | ತಿಂಗಳುಗಟ್ಟಲೆ ಸರ್ಕಾರದಿಂದ ಬಂದ ಸಹಾಯ ದ್ರವ್ಯ .. .. | ೧,೮೦೦–೦–೦ |
| ೩. | ಪರಿಷತ್ತಿನ ಸದಸ್ಯರಿಂದ ಬಂಗ ಚಂದಾ ಹಣ .. | ೪೧೧–೦–೦ |
| ೪. | ಪರಿಷತ್ಪತ್ರಿಕೆಯ ಚಂದಾ ಹಣ .. | ೧೭೦–೦–೦ |
| ೫. | ಪರಿಷತ್ತಿನ ಪುಸ್ತಕಗಳ ಮಾರಾಟದಿಂದ ಬಂದ ಹಣ | ೨೯೮–೧೩–೬ |
| ೬. | ಡಿಪಾಜಿಟ್ಟುಗಳ ಮೇಲೆ ಬಂದ ಬಡ್ಡಿ .. | ೭೧೯–೧೩–೧೦ |
| ೭. | ಅಂಚೆಯ ಹಾಸಲು ವಸೂಲಾದದ್ದು .. | ೬–೧೩–೬ |
| ೮. | ಕೊಠಡಿಯ ಬಾಡಿಗೆ .. | ೨೮–೦–೦ |
| | ಒಟ್ಟು .. | ೧೯,೭೨೫–೬–೫ |

I have gone through the accounts and I certify that the above Statements of Receipts and Expenses are correct.

(Sd.) K. S. KRISHNA IYER, B.A.,
*Auditor.*

**ಪರಿಷತ್ತು, ಬೆಂಗಳೂರು**

ಆಯ ವ್ಯಯದ ಪಟ್ಟಿ

## ವ್ಯಯ

| | | ರೂ. ಆ. ಪೈ. |
|---|---|---|
| ೧. | ಪರಿಷತ್ತಿನ ಆಫೀಸಿನ ಸಿಬ್ಬಂದಿಗಾಗಿ .. | ೬೯೭—೦—೦ |
| ೨. | ಪರಿಷನ್ಮಂದಿರದ ಬಾಡಿಗೆ .. .. | ೩೬೦—೦—೦ |
| ೩. | ದೀಪದ ವೆಚ್ಚ .. .. | ೪೪—೬—೦ |
| ೪. | ಬರೆವಣಿಗೆಯ ಸಾಮುಗ್ರಿ .. .. | ೩೨—೧೩—೬ |
| ೫. | ಅಂಚೆಯ ಮತ್ತು ಟೆಲಿಗ್ರಾಫು ಹಾಸಲು .. | ೧೭೫—೧೩—೦ |
| ೬. | ಕಾಗದ, ಮುದ್ರಣ ಮತ್ತು ಬೈಂಡಿಗಾಗಿ .. | ೮೪೫—೪—೦ |
| ೭. | ಪುಸ್ತಕ ಭಾಂಡಾಗಾರಕ್ಕಾಗಿ .. .. | ೯೬—೧೦—೦ |
| ೮. | ವಾಚನ ಮಂದಿರದ ಪತ್ರಿಕೆಗಳ ಚಂದಾ .. | ೭೮—೪—೦ |
| ೯. | ಮರದ ಮತ್ತು ಇತರ ಚಿಲ್ಲರೆಯ ಸಾಮಾನಿಗಾಗಿ | ೧೬೨—೦—೦ |
| ೧೦. | ಸಮ್ಮೇಳನಕ್ಕಾಗಿ .. .. | ೧೧೬—೧೧—೦ |
| ೧೧. | ಪ್ರಚಾರ ಕಾರ್ಯಕ್ಕಾಗಿ .. .. | ೧೧೫—೦—೦ |
| ೧೨. | ಸಾಹಿತ್ಯ ಸೇವೆಯ ಬಹುಮಾನಕ್ಕಾಗಿ .. | ೧೫೦—೦—೦ |
| ೧೩. | 'ಜ್ಯೋತಿರ್ವಿನೋದಿನಿ'ಯ ಗ್ರಂಥಕರ್ತರಿಗೆ .. | ೨೫೦—೦—೦ |
| ೧೪. | ಮಾರಾಟಕ್ಕಾಗಿ ಕೊಂಡ 'ಶಬ್ದಮಣಿದರ್ಪಣ'ದ ಬೆಲೆ | ೧೧೨—೮—೦ |
| ೧೫. | ಪಂಪ ಭಾರತದ ಕಾರ್ಯಕ್ಕಾಗಿ .. | ೧೦೮—೧೪—೦ |
| ೧೬. | 'ಜ್ಯೋತಿರ್ವಿನೋದಿನಿ'ಯ ಮುದ್ರಣ, ಕಾಗದ ಮತ್ತು ಚಿತ್ರಗಳಿಗಾಗಿ .. .. | ೬೦೦—೨—೬ |
| ೧೭. | ಇತರ ಚಿಲ್ಲರೆಯ ವೆಚ್ಚಗಳಿಗಾಗಿ .. .. | ೩೨—೭—೦ |
| | ಒಟ್ಟು .. | ೩,೯೭೭—೧೩—೦ |
| | * ಶಿಲ್ಕು ನಿಂತಿರುವುದು .. | ೧೫,೭೪೭—೯—೫ |
| | ಒಟ್ಟು .. | ೧೯,೭೨೫—೬—೫ |

* ಶಿಲ್ಕಿಗೆ ತಪಸೀಲು :—

| | |
|---|---|
| ಬೆಂಗಳೂರು ಸಿಟಿ ಕೋ॥ ಸೊಸೈಟಿಯಲ್ಲಿ ಫಿ॥ ಡಿಪಾಜಿಟ್ಟು | ೧೫,೦೦೦—೦—೦ |
| ಸೇವಿಂಗ್ಸು ಬ್ಯಾಂಕು ಡಿ॥ | ೬೬೯—೧೨—೭ |
| ಗೌ॥ ಕಾರ್ಯದರ್ಶಿಯವರ ಬಳಿ ನಗದು | ೭೭—೧೨—೧೦ |
| ಒಟ್ಟು ರೂ. | ೧೫,೭೪೭ ೯ ೫ |

(Sd.) C. K. VENKATARAMAIYA, M.A., LL.B.
*Honorary Secretary.*

(Sd.) B. VENKATANARANAPPA, M.A.
*Honorary Treasurer.*

# ಪರಿಶಿಷ್ಟ

## ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಸದಸ್ಯರ ಪಟ್ಟಿ

(೧೯೩೦ನೆಯ ಇಸವಿ ಏಪ್ರಿಲ್ ಮೊದಲನೆಯ ತಾರೀಖಿನಲ್ಲಿದ್ದಂತೆ)

---

### ಪ್ರದಾತೃಗಳು

*‡೧. ರಾಜಸಭಾ ಭೂಷಣ ಮ|| ರಾ|| ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ., ರಿ|| ಛೀಫ್ ಎಂಜನಿಯರ್, ಬೆಂಗಳೂರು.

### ಸಹಾಯಕರು

*೨. ಮ|| ರಾ|| ಕೃಷ್ಣಾಜೀ ಗೋವಿಂದ ಗೆಜ್ಜ, ಬಿ.ಎ., ಎಲ್‌ಎಲ್.ಬಿ., ಬೆಳಗಾಂವಿ.

*೩. ಮ|| ರಾ|| ನಾರಾಯಣಸ್ವಾಮಿ ರಾವ್ ಲೋಕೂರ, ಬೆಳಗಾಂವಿ.

೪. ರಾಜಸಭಾ ಭೂಷಣ ದಿವಾನ್ ಬಹಾದ್ದೂರ್ ಸರ್ ಕೆ. ಪಿ. ಪುಟ್ಟಣ್ಣಸೆಟ್ಟರು, ಕೆಟಿ., ಸಿ.ಐ.ಇ., ರಿ|| ಕೌನ್ಸಿಲರ್, ಬೆಂಗಳೂರು.

*೫. ಮ|| ರಾ|| ಶ್ರೀನಿವಾಸರಾವ್ ಕೌಜಲಗಿ, ಬಿ.ಎ., ಎಲ್‌ಎಲ್.ಬಿ., ಬಿಜಾಪುರ.

### ಆಜೀವ ಸದಸ್ಯರು

(ಮೈಸೂರು ದೇಶದ ಸದಸ್ಯರು)

ಮ|| ರಾ|| ಗಳಾದ

೬. ಎಸ್. ಎ. ಅಪ್ಪಣ್ಣಯ್ಯಂಗಾರ್ಯರು, ಬಿ.ಎ., ಬಿ.ಎಲ್., ಕೋಲಾರ.

೭. ಪಿ. ಅಪ್ಪಾಜೀರಾಯರು, ಬಿ.ಎಸ್‌ಸಿ., 11/B, ಆರ್ಪತಿ ಲೇನ್, ಕಲ್ಕತ್ತ.

*೮. ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಬೆಂಗಳೂರು.

೯. ಡಿ. ಆದೆಪ್ಪನವರು, ಸಾಹುಕಾರರು, 'ಚೂಡಾಮಣಿ', ಬಸವನಗುಡಿ, ಬೆಂಗಳೂರು.

೧೦. ಮಾಗಡಿ ಕರಣಿಕ ಕೃಷ್ಣಮೂರ್ತಿರಾಯರು, ಜಮೀನ್ದಾರರು, ಬಸವನಗುಡಿ.

೧೧. ಸಿ. ಕೃಷ್ಣರಾಯರು, ಬಿ.ಎ., ವಿದ್ಯಾ|| ರಿ|| ಡೆ|| ಇನ್|| ಜನರಲ್, ತುಮಕೂರು.

೧೨. ಪಿ. ಕೇಶವಯ್ಯನವರು, ರಿ|| ಸ್ಕೂಲ್ ಮಾಸ್ಟರು, ಚಿಕ್ಕಬಳ್ಳಾಪುರ.

೧೩. ಡಿ. ಕೊಂಗಾಡಿಯಪ್ಪನವರು, ರಿ|| ಹೆ|| ಮಾಸ್ಟರ್, ದೊಡ್ಡಬಳ್ಳಾಪುರ.

೧೪. ಎಂ. ಎನ್. ಗೋಪಾಲರಾಯರು, ಎಲೆಕ್ಟ್ರಿಕಲ್ ಡಿಪಾರ್ಟ್‌ಮೆಂಟ್, ಮಲ್ಲೇಶ್ವರ.

೧೫. ವಿ. ಆರ್. ತ್ಯಾಗರಾಜ ಅಯ್ಯರವರು, ಎಂ.ಎ., ರಿ|| ಎ|| ಕಮಿಷನರ್, ಬಸವನಗುಡಿ.

---

* ಈ ಗುರುತು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರನ್ನು ತೋರಿಸುತ್ತದೆ.

‡ ಇವರು ಸಾಮಾನ್ಯ ಸದಸ್ಯರಾಗಿಯೂ ಇರುವರು.

ಮ|| ರಾ|| ಗಳಾದ

೧೬. ವೈ. ನರಸಿಂಗರಾಯರು, ಬಿ.ಎ., ಬಿ.ಎಲ್., ಸೀ|| ಅ|| ಕ|| ಬೆಂಗಳೂರು.

೧೭. ಸಿ. ಆರ್. ನರಸಿಂಹಯ್ಯಂಗಾರ್ಯರು, ಬಿ.ಎ., ಜಿಯಾಲೊಜಿಸ್ಟ್, ಕಡಕೊಳ.

*೧೮. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರು, ಎಂ.ಎ., ರಿ|| ಡೈರೆಕ್ಟರು, ಶಾಸನದ ಇಲಾಖೆ, ಮಲ್ಲೇಶ್ವರ.

೧೯. ಬಿ. ನರಹರಿ ಶಾಸ್ತ್ರಿಗಳು, ಹೆ|| ಮಾಸ್ಟರ್, ಬಸವನಗುಡಿ.

೨೦. ಎಂ. ಎಸ್. ಪುಟ್ಟಣ್ಣನವರು, ಬಿ.ಎ., ರಿ|| ಅಮಲ್ದಾರರು, ಬಸವನಗುಡಿ.

೨೧. ಡಿ. ಕೆ. ಭಾರದ್ವಾಜರು, ವಿದ್ಯಾಭೂಷಣ, ಬಸವನಗುಡಿ.

೨೨. ವೈ. ಕೆ. ರಾಮಚಂದ್ರರಾಯರು, ಬಿ.ಎ., ಎಲ್.ಸಿ.ಇ., ರೈಲ್ವೆ ಎಂಜ|| ಮೈಸೂರು.

೨೩. ರಾವ್ ಸಾಹೆಬ್ ಎಂ. ರಾಮರಾಯರು, ರಿ|| ಫಾರೆಸ್ಟ್ ಆಫಿಸರ್, ಬಸವನಗುಡಿ.

೨೪. ಎಂ. ಎ. ರಾಮಾನುಜಯ್ಯಂಗಾರ್ಯರು, ''ಕಾವ್ಯಕಲಾನಿಧಿ''ಯ ಸಂ|| ಮೈಸೂರು.

೨೫. ವೀಣೆ ರಂಗಸ್ವಾಮಯ್ಯಂಗಾರ್ಯರು, ಜಮೀನ್‌ದಾರರು, ಶ್ರೀರಂಗಪಟ್ಟಣ.

೨೬. ರಾಜ ಕವಿ ಭೂಷಣ ಎಚ್. ಲಿಂಗರಾಜ ಅರಸಿನವರು, ಮೈಸೂರು.

೨೭. ಎಚ್. ಕೆ. ವೀರಬಸವಯ್ಯನವರು, ಬಿ.ಎ., ಬಿ.ಎಲ್., ಸ್ಪೆ|| ಮ್ಯಾ|| ಕೋಲಾರ.

೨೮. ಎಂ. ವೆಂಕಟಕೃಷ್ಣಯ್ಯನವರು, ''ಸಾಧ್ವೀ'' ಸಂಪಾದಕರು, ಮೈಸೂರು.

*೨೯. ಬಿ. ವೆಂಕಟನಾರಾಯಣಪ್ಪನವರು, ಎಂ.ಎ., ರಿ|| ಕಾಲೇಜು ಪ್ರೊ|| ಬಸವನಗುಡಿ.

*೩೦. ಎನ್. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., ರಿ|| ಮಿಾಟಿಯೊರೊಲಾಜಿಕಲ್ ರಿಪೋರ್ಟರು, ಚಾಮರಾಜಪೇಟೆ, ಬೆಂಗಳೂರು.

೩೧. ಬಿ. ವೆಂಕಟೇಶಾಚಾರ್ಯರು, ಎಂ.ಎ., ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು.

೩೨. ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್., ಡಿ|| ಜಡ್ಜ್, ಮೈಸೂರು.

*೩೩. ಬಿ. ಎಮ್. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಯೂನಿ|| ರೆ|| ಮೈಸೂರು.

೩೪. ಕೆ. ಶ್ರೀನರಸಿಂಹಯ್ಯನವರು, ಎಂ.ಎ., ಎಲ್.ಟಿ. ವಿದ್ಯಾಭ್ಯಾಸದ ಇಲಾಖಾ ಡೆಪ್ಯುಟಿ ಡೈರೆಕ್ಟರು, ಮೈಸೂರು.

೩೫. ಟಿ. ಶ್ರೀನಿವಾಸರಾಘವಾಚಾರ್ಯರು, ರಿ|| ಕನ್ನಡ ಪಂಡಿತರು, ಮೈಸೂರು.

೩೬. ಎಂ. ಶ್ರೀನಿವಾಸರಾಯರು, ಬಿ.ಎ., ರಿ|| ಸರ್ಕಲ್ ಇನ್‌ಸ್ಪೆಕ್ಟರು, ಮೈಸೂರು.

೩೭. ಎ. ಸದಾಶಿವನ್, ಮೈಸೂರು ರೈಲ್ವೆ ಛೀಫ್ ಸ್ಟೋರು ಕೀಪರು, ಮೈಸೂರು.

*೩೮. ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಕನ್ನಡ ಪ್ರೊಫೆಸರು, ಮೈಸೂರು

(ಮುಂಬಯಿ ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೩೯. ದಿವಾನ್ ಬಹಾದ್ದೂರ್ ಅಣ್ಣಾರಾವ್ ಬಿ. ಲಠ್ಠೆ, ಎಂ.ಎ., ಎಲ್‌ಎಲ್.ಬಿ., ಕೊಲ್ಹಾಪುರ.

*೪೦. ವಿ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ., ಸಾಧನಕೇರಿ, ಧಾರವಾಡ.

೪೧. ಕೆ. ಜಿ. ಕುಂದಣಗಾರ, ಎಂ.ಎ., ಕೊಲ್ಹಾಪುರ.

*೪೨. ಎಚ್. ಚೆನ್ನಕೇಶವಯ್ಯಂಗಾರ್ಯರು, ಕನ್ನಡ ಪ್ರೊಫೆಸರ್, ಧಾರವಾಡ.

ಮ|| ರಾ|| ಗಳಾದ

೪೩. ಆರ್. ಎ. ಜಹಗೀರ್‌ದಾರ್, ಎಂ.ಎ., ಎಲ್‌ಎಲ್.ಬಿ., ಹೈ|| ವಕೀಲ್, ಮುಂಬಯಿ.

೪೪. ರಾವ್ ಬಹಾದ್ದೂರ್ ವಿ. ಬಿ. ಜೋಶಿ, ಬಿ.ಎ., ರಿ|| ಪ್ರಿನ್ಸಿಪಾಲ್, ಧಾರವಾಡ.

೪೫. ಎಸ್. ಆರ್. ದೇಶಪಾಂಡೆ, ಬಿ.ಎ., ಎಲ್‌ಎಲ್.ಬಿ., ಪ್ಲೀಡರು, ಧಾರವಾಡ.

೪೬. ರಾ. ಹ. ದೇಶಪಾಂಡೆ, ಎಂ.ಎ., ಮಾಳಮಡ್ಡಿ, ಧಾರವಾಡ.

೪೭. ವಿ. ಬಿ. ಧಾರವಾರಕರ್, ಬಿ.ಎ., ಕಾಮನ ಕಟ್ಟಿ, ಧಾರವಾಡ.

೪೮. ನಾರಾಯಣ ಗುರುರಾವ್ ಜೋಷಿ, ಬಿ.ಎ., ಎಲ್‌ಎಲ್. ಬಿ., ವಕೀಲ್, ಬೆಳಗಾಂವಿ.

*೪೯. ನಾರಾಯಣ ಶ್ರೀನಿವಾಸ ರಾಜಪುರೋಹಿತರು, ಶುಕ್ರವಾರ ಪೇಟೆ, ಧಾರವಾಡ.

*೫೦. ಆರ್. ಬಿ. ಪೋದ್ದಾರ್, ಬಿ.ಎ., ಕಾರವಾರ.

೫೧. ಎಸ್. ಆರ್. ಪೋದ್ದಾರ್, ಮಾಳಮಡ್ಡಿ, ಧಾರವಾಡ.

೫೨. ಬಿ. ಬಿ. ಬಾಗಿ, ಲೆಕ್ಚರರ್, ಕರ್ನಾಟಕ ಕಾಲೇಜು, ಧಾರವಾಡ.

೫೩. ಬಿ. ಎಸ್. ಬೆಟಿಗೇರಿ, ಸೇರಗಲ್ಲಿ, ಬೆಳಗಾಂವಿ.

೫೪. ವಿ. ಎಸ್. ಮುಗದಾಳ್, ಬಿ.ಎ., ಅಸಿಸ್ಟೆಂಟು ಎಜ್ಯುಕೇಷನಲ್ ಇನ್ಸ್ಪೆಕ್ಟರು, ಬೆಳಗಾಂವಿ

೫೫. ರಾವ್ ಬಹಾದ್ದೂರ್ ಕೆಂಭಾವಿ ರಾಘವೇಂದ್ರರಾಯರು, ಪ್ಲೀಡರು, ಬಿಜಾಪುರ.

೫೬. ವೆಂಕಟೇಶ ತಿರಕೋ ಕುಲಕರಣಿ ಗಳಗನಾಥರು, ಹಾವೇರಿ.

೫೭. ಶ್ರೀನಿವಾಸ ಪಾಂಡುರಂಗ ಕೋಟೀ, ಫಾರೆಸ್ಟು ಆಫಿ|| ಪಾಟಣ (ಬೆಳಗಾಂ ಡಿ||).

೫೮. ಶ್ರೀನಿವಾಸ ರಾಜೇರಾವ ಮಂಗಳವೇಡೆ, ಪತ್ರಿಕಾ ಕರ್ತರು, ಬಾಗಲಕೋಟೆ.

೫೯. ಸಣ್ಣಪ್ಪನಾಯಿಕ ರಾಮಚಂದ್ರನಾಯಿಕ ಪಡಕೂಟ, ಹಲಸಿಗೆ (ಬೆಳಗಾಂ ಡಿ||).

*೬೦. ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ., ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಪ್ಲೀಡರ್, ಬಿಜಾಪುರ.

(ಉತ್ತರ ಕರ್ನಾಟಕ ಸಂಸ್ಥಾನಗಳ ಸದಸ್ಯರು)

ಮ|| ರಾ|| ಗಳಾದ

*೬೧. ತಮ್ಮಪ್ಪ ಸಕ್ಕಪ್ಪ ಚಿಕ್ಕೋಡಿ, ವರ್ತಕರು, ಬನಹಟ್ಟಿ (ಬೆಳಗಾಂ ಡಿ||).

*೬೨. ರಾಮಚಂದ್ರ ಶಂಕರ ಮುಂಗಸೂಳಿ, ಶಿರಹಟ್ಟಿ (ಧಾರವಾಡ ಡಿ||).

(ಹೈದರಾಬಾದು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೬೩. ಬಿ. ವಿ. ಕೃಷ್ಣಯ್ಯಂಗಾರ್ಯರು, ಎ|| ಎಂಜನಿಯರ್, ಐ.ಬಿ., ನಲಗೊಂದ, ಹೈದರಾಬಾದು.

೬೪. ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರೀ, ಕೊಪ್ಪಳ.

*೬೫. ರಾಘವೇಂದ್ರರಾವ್ ಚಾಕಲಬ್ಬಿ, ವಕೀಲರು, ಕೊಪ್ಪಳ.

೬೬. ಟಿ. ಆರ್. ರಾಮರಾಯರು, ಬಿ.ಎ., ಕನ್ನಡ ಪ್ರೊಫೆಸರ್, ಹೈದರಾಬಾದು.

೬೭. ಎಂ. ಎಸ್. ಲಕ್ಷ್ಮೀನಾರಾಯಣರಾಯರು, ಬಿ.ಎ., ಎಲ್‌ಎಲ್.ಬಿ., ಹೈಕೋರ್ಟು ವಕೀಲರು, ಹೈದರಾಬಾದು.

ಮ|| ರಾ|| ಗಳಾದ

೬೮. ಕೆ. ವೆಂಕಟರಾಯರು, ಕೋ-ಆಪರೆಟಿವ್ ಸೊಸೈಟಿಗಳ ಇನ್ಸ್‌ಪೆಕ್ಟರು, C. o ಕೆ. ರಾಮರಾಯರು, ಆಬಕಾರಿ ಕಂಟ್ರಾಕ್ಟರು, ಷಂಷಾಬಾದ್, ಪರಿಘ, ಹೈದರಾಬಾದು.

೬೯. ಶಂಕರರಾವ್ ಗೋಪಾಲರಾಯರು, ಮನ್ಸಬ್ದಾರ್, ಗುಲ್ಬರ್ಗ.

(ಮದರಾಸು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೭೦. ಆರ್. ತಾತಾಚಾರ್ಯರು, ಎಂ.ಎ., ಎಲ್.ಟಿ., ಡಿಸ್ಟ್ರಿಕ್ಟು ಎಜ್ಯುಕೇಷನಲ್ ಆಫಿಸರು, ಮಂಗಳೂರು.

*೭೧. ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್., ಹೈ|| ವಕೀಲ್, ಬಳ್ಳಾರಿ.

*೭೨. ಎನ್. ರಾಜಗೋಪಾಲಕೃಷ್ಣರಾಯರು, ಜಮೀನ್ದಾರರು, ಉಡಿಪಿ.

*೭೩. ಬಿ. ರಾಮರಾಯರು, ಎಂ.ಎ., ಎಲ್‌ಎಲ್.ಬಿ., ಸೀ|| ಟ್ರಾನ್ಸ್|| ಮದರಾಸು.

೭೪. ಪತ್ತಿಕೊಂಡ ವೆಂಗಣ್ಣನವರು, ವರ್ತಕರು, ಹೊಸಪೇಟೆ.

(ಸದಸ್ಯತ್ವಕ್ಕೆ ದರಖಾಸ್ತು ಕಳುಹಿಸದಿರುವವರು)



ಮ|| ರಾ|| ಗಳಾದ

೭೫. ಜಾವಳಿ ಗಣೇಶರಾಯರು, ಜಾವಳಿ (ಕಡೂರು ಡಿಸ್ಟ್ರಿಕ್ಟು).

೭೬. ತಿಮ್ಮೇಗೌಡರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೭೭. ಪುರದಪ್ಪನವರು, ಪಟೇಲರು, ಶಿವನೆ (ಕಡೂರು ಡಿಸ್ಟ್ರಿಕ್ಟು).

೭೮. ರಾಮಸ್ವಾಮಯ್ಯನವರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೭೯. ಹನುಮಾ ಬೋಯಿಯವರು, ಕಂಟ್ರಾಕ್ಟರು, ಲಕ್ಕವಳ್ಳಿ (ಕಡೂರು ಡಿಸ್ಟ್ರಿಕ್ಟು).

## ಸಾಮಾನ್ಯ ಸದಸ್ಯರು

(ಮೈಸೂರು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

*೮೦. ಕೆ. ಕೃಷ್ಣಯ್ಯಂಗಾರ್ರು, ಬಿ.ಎ., ನ್ಯಾಷನಲ್ ಹೈಸ್ಕೂಲು, ಬೆಂಗಳೂರು.

*೮೧. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಸೆಂಟ್ರಲ್ ಕಾಲೇಜು, ಬೆಂಗಳೂರು.

೮೨. ಬೇಲೂರು ಕೇಶವದಾಸರು, ಕೀರ್ತನಕಾರರು, ಮೈಸೂರು.

೮೩. ಪಿ. ಎಸ್. ಗೋವಿಂದರಾಯರು, ರಿ|| ಡೆ|| ಕನ್ಸರ್‌ವೇಟರ್, ಮೈಸೂರು.

೮೪. ಎಂ. ಚೆನ್ನಕೃಷ್ಣಯ್ಯನವರು, ಕನ್ನಡ ಪಂಡಿತರು, ಹೈಸ್ಕೂಲ್, ಕೋಲಾರ.

*೮೫. ತಿರುಮಲೆ ತಾತಾಚಾರ್ಯ ಶರ್ಮರು, ಸಂ|| "ವಿಶ್ವಕರ್ಣಾಟಕ", ಬೆಂಗಳೂರು.

೮೬. ಕೆ. ದುಗ್ಗಪ್ಪಯ್ಯನವರು, ರಿಟೈರ್ಡ್ ರೆವಿನ್ಯೂ ಇನ್ಸ್‌ಪೆಕ್ಟರ್, ಅಗ್ರಹಾರ, ಸಾಗರ.

೮೭. ಎನ್. ನರಸಿಂಹಮೂರ್ತಿಯವರು, ಎಂ.ಎ., ಬಿ.ಎಲ್., ಯೂನಿವರ್ಸಿಟಿ ಲೈಬ್ರೇರಿಯನ್. ಮೈಸೂರು.

೮೮. ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಸೆಕ್ರೆಟರಿ, ಟೆಕ್ಸ್ಟ್‌ಬುಕ್ ಕಮಿಟಿ, ಬೆಂಗಳೂರು.

ಮ|| ರಾ|| ಗಳಾದ

೮೯. ಎಸ್. ಕೆ. ನರಸಿಂಹಯ್ಯನವರು, ವರ್ತಕರು, ಶಂಕರಪುರ, ಬೆಂಗಳೂರು.

೯೦. ಕೆ. ನಂಜುಂಡ ಶಾಸ್ತ್ರಿಗಳು, ಕರ್ಣಾಟಕ ಸಾಹಿತ್ಯ ಪರಿಷತ್ಪಂಡಿತರು, ಬಸವನಗುಡಿ.

೯೧. ಪಿ. ಪದ್ಮನಾಭಯ್ಯನವರು, ಹೆಡ್‌ಮಾಸ್ಟರ್, ಸೂಲಿಕುಂಟೆ (ಕೋಲಾರ ಡಿ||).

೯೨. ಡಿ. ಕೆ. ದಾರಾಷಾ, ಬಿ.ಎ., ರಿ|| ಸೂಪರಿಂಟೆಂಡೆಂಟರು, ರೆವಿನ್ಯೂ ಸರ್ವೆ, ಮೈಸೂರು.

೯೩. ಬಿ. ಪುಟ್ಟಯ್ಯನವರು, ಬಿ.ಎ., ಸೂಪರಿಂಟೆಂಡೆಂಟರು, ಗ|| ಪ್ರೆಸ್, ಬೆಂಗಳೂರು.

೯೪. ಎಸ್. ಜಿ. ಬಿಂದೂರಾಯರು, ಮೈಸೂರು.

*೯೫. ರಾವ್ ಬಹಾದ್ದೂರ್ ಡಾ|| ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ., ಬಸವನಗುಡಿ.

೯೬. ಬಿ. ವಿ. ಲಕ್ಷ್ಮಣರಾಯರು, ರಿ|| ಅ|| ಕಮಿಷನರು, ಶಂಕರಪುರ, ಬೆಂಗಳೂರು.

೯೭. ಕೆ. ಲಕ್ಷ್ಮೀನರಸಿಂಹಯ್ಯನವರು, ಪೋಸ್ಟುಮಾಸ್ಟರು, ಬರೋಡ.

೯೮. ಸಿ. ವಾಸುದೇವಯ್ಯನವರು, ವಿದ್ಯಾಭ್ಯಾಸದ ಇಲಾಖೆಯ ರಿ|| ಅಸಿಸ್ಟೆಂಟರು, ಮಲ್ಲೇಶ್ವರ.

೯೯. ಎಂ. ವೆಂಕಟನಾರಣಪ್ಪನವರು, ಬಿ.ಎ., ಕಬ್ಬಿಣದ ಕಾರ್ಖಾನೆ, ಭದ್ರಾವತಿ.

೧೦೦. ಸಿ. ವೆಂಕಟರಮಣಶಾಸ್ತ್ರಿಗಳು, "ಕಾದಂಬರೀ ಸಂಗ್ರಹ"ದ ಸಂಪಾದಕರು, ಚಾಮರಾಜನಗರ.

*೧೦೧. ಮಾಸ್ತಿ ವೆಂಕಟೇಶಯ್ಯಂಗಾರ್ಯರು, ಎಂ.ಎ., ಸೀನಿಯರ್ ಅ|| ಕಮಿಷನರು, ಬೆಂಗಳೂರು.

೧೦೨. ಶ್ರೀಮತಿ ಶಲ್ಲಮ್ಮನವರು, ಪರಿಮಳ ವಿಲಾಸ ಬುಕ್ ಡಿಪೋ, ಮೈಸೂರು.

೧೦೩. ಬಿ. ಐ. ಶಾಮರಾಯರು, ರಿ|| ಫಾರೆಸ್ಟ್ ಆಫಿಸರ್, ಬಸವನಗುಡಿ.

೧೦೪. ರಾಜಕಾರ್ಯ ಪ್ರಸಕ್ತ ರಾವ್ ಬಹಾದ್ದೂರ್ ಎಂ. ಶಾಮರಾಯರು, ಎಂ.ಎ., ವಿದ್ಯಾಭ್ಯಾಸದ ರಿ|| ಇ|| ಜನರಲ್, ಚಾಮರಾಜಪೇಟೆ, ಬೆಂಗಳೂರು.

೧೦೫. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಹೆ|| ಮಾ|| ಡಿ|| ನಾರ್ಮಲ್ ಸ್ಕೂಲ್, ಬೆಂಗಳೂರು.

೧೦೬. ಸಿಟ್ಟೂರು ಶ್ರೀನಿವಾಸರಾಯರು, ಬಿ ಎಸ್‌ಸಿ., ಬಿ.ಎಲ್., ಅಡ್ವೊಕೇಟ್, ಬಸವನಗುಡಿ.

೧೦೭. ತಿರುಮಲೆ ಶ್ರೀನಿವಾಸಾಚಾರ್ಯರು, ಹೆ|| ಕ್ಲಾ||, ಸ್ಪೆಷಲ್ ಕೋರ್ಟು, ಹಾಸನ.

೧೦೮. ಸಿ. ಶೇಷಾಚಾರ್ಯರು, ಎಂ.ಎ., ಮಿಟಿಯೊರೊಲಾಜಿಕಲ್ ರಿಪೋರ್ಟರು, ಬಸವನಗುಡಿ,

*೧೦೯. ವಿ. ಸೀತಾರಾಮಯ್ಯನವರು, ಎಂ.ಎ., ಇಂಟರ್‌ಮೀಡಿಯೆಟ್ ಕಾಲೇಜು, ಚಾಮರಾಜಪೇಟೆ, ಬೆಂಗಳೂರು.

*೧೧೦. ಕೆ. ಸಂಪದ್ಗಿರಿರಾಯರು, ಎಂ.ಎ., ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.

೧೧೧. ಎಚ್. ಹನುಮಂತಯ್ಯನವರು, ಸ್ಕೂ|| ಹೆ|| ಮಾ|| ಹೆಸರುಘಟ್ಟ (ಬೆಂಗಳೂರು ತಾ||).

೧೧೨. ಎಚ್. ಹನುಮಂತರಾಯರು, ಹೈಸ್ಕೂಲು ರಿ|| ಕನ್ನಡ ಪಂಡಿತರು, ಮಂಡಗೆರೆ.

೧೧೩. ಎಸ್. ಹಿರಿಯಣ್ಣಯ್ಯನವರು, ಎಂ.ಎ., ಬಿ.ಎಲ್., ಪ್ರೊ|| ಇ|| ಜ|| ಬೆಂಗಳೂರು.

*೧೧೪. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಗ|| ಕನ್ನಡ ಟ್ರಾನ್ಸ್‌ಲೇಟರ್, ವಿಶ್ವೇಶ್ವರಪುರ, ಬೆಂಗಳೂರು.

೧೧೫. ದೇವುಡು ನರಸಿಂಹಶಾಸ್ತ್ರಿಗಳು, ಎಂ.ಎ., ಮಲ್ಲೇಶ್ವರ.

(ಮುಂಬಯಿ ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೧೧೬. ಪಂಡಿತ ಕೇಶವಶರ್ಮಾ ಗಲಗಲಿ, ಗಲಗಲಿ (ಬಿಜಾಪುರ ಡಿ||).

೧೧೭. ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ., ಧಾರವಾಡ.

*೧೧೮. ಜಿ. ಮಹಾಲಿಂಗಪ್ಪ ವಿರ್ಜಿ, ಬಿ.ಎ., ಎಲ್‌ಎಲ್.ಬಿ., ಹೈ|| ವಕೀಲ್, ಹುಬ್ಬಳ್ಳಿ.

೧೧೯. ಆರ್. ಎಸ್. ಮೂಡಕಟ್ಟೆ, ಬಿ.ಎ., ಮಾಮಲತ್‌ದಾರರು, ಕಾರವಾರ.

೧೨೦. ಎಂ. ಕೆ. ಹುಯಿಲ್‌ಗೋಳ್, ಬಿ.ಎ., ಎಲ್‌ಎಲ್.ಬಿ., ಪ್ಲೀಡರ್, ಗದಗ.

೧೨೧. ವಾಮನ ಗೋವಿಂದರಾವ್ ಅಬಳೀಕರ್, ಜಮಖಂಡಿ.

೧೨೨. ಮೊಹರೆ ಹನುಮಂತರಾಯರು, 'ಕರ್ನಾಟಕ ವೈಭವ'ದ ಸಂಪಾದಕರು, ಬಿಜಾಪುರ

(ಮದರಾಸು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೧೨೩. ರಾವ್ ಬಹಾದ್ದೂರ್ ಎಚ್. ನಾರಾಯಣರಾಯರು, ಎಂ.ಎ., ರಿ|| ಪ್ರೊಫೆಸರ್ 'ಶಂಕರಬಾಗ್', ಕೀಲ್ಪಾಕ್, ಮದರಾಸು.

೧೨೪. ಉಳ್ಳಾಳ ಮಂಗೇಶರಾಯರು, ಹೆ|| ಮಾ|| ಟ್ರೈನಿಂಗ್ ಸ್ಕೂಲ್, ಮಂಗಳೂರು.

(ಕೊಡಗಿನ ಸದಸ್ಯರು)

ಮ|| ರಾ|| ಗಳಾದ

೧೨೫. ಸಿ. ಎಂ. ವೆಂಕಪ್ಪಯ್ಯನವರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಮಡಿಕೇರಿ.

*೧೨೬. ಎಂ. ಆರ್. ಸುಬ್ಬಣ್ಣಯ್ಯನವರು, ಕಾಫೀ ಪ್ಲಾಂಟರು, ನಿಡತ (ಕೊಡಗು).

೧೨೭. ಎಂ. ಎಸ್. ಸುಬ್ಬರಾಯರು, ಸ್ಕೂ|| ಮಾ|| ನಾಪೋಕ್ಲು (ಕೊಡಗು).

(ಹೈದರಾಬಾದು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

*೧೨೮. ಕೃಷ್ಣರಾವ್ ಕಪಟರಾಳ್, ಪ್ಲೀಡರ್, ಗುಲ್ಬರ್ಗ.

೧೨೯. ರೆ|| ಕೆ. ನಾನಪ್ಪ ದೇಸಾಯಿ, ಸುರಪುರ (ಹೈದರಾಬಾದು).

೧೩೦. ಭೀಮಾಚಾರ್ಯ ಕೃಷ್ಣಾಚಾರ್ಯ, ವಕೀಲರು, ಜವರಿಗಿ (ಗುಲ್ಬರ್ಗ ಡಿ||).

೧೩೧. ಎಂ. ಸಿ. ರಂಗಯ್ಯಂಗಾರ್ಯರು, ಅಸಿಸ್ಟೆಂಟು ಸೂ|| ಪಿ.ಡಬ್ಲ್ಯು., ಹೈದರಾಬಾದು.

೧೩೨. ಕೆ. ವೀರಪ್ಪ, ಕ್ಲಾರ್ಕ್, ಮಹಬೂಬ್‌ಸಾಹಿ ಮಿಲ್ಸ್, ಗುಲ್ಬರ್ಗ.

೧೩೩. ಹಳ್ಳೇರಾಯ ಕಕ್ಕೇರಿ, ಬಿ.ಎ., ಸ್ಕೂಲ್ಮಾಸ್ಟರು, ಉಸ್ಮಾನಾಬಾದ್ (ಹೈದರಾಬಾದು).

---

ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ.

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೫] ಪ್ರಮೋದ ಸಂ॥ ಚೈತ್ರ ಮಾಸ [ಸಂಚಿಕೆ ೧

[ಪ್ರಾಕ್ತನ ವಿಮರ್ಶವಿಚಕ್ಷಣ, ರಾವ್ ಬಹಾದೂರ್
ಮ॥ ರಾ॥ ರಾ. ನರಸಿಂಹಾಚಾರ್ಯ, ಎಂ.ಎ. ಅವರಿಂದ]

## ಕರ್ಣಾಟಕ ಕವಿಚರಿತೆಯ ಅನುಬಂಧ



### ಶಾಂತಿನಾಥ, ಸು. ೧೧೨೦

ಈತನು ಚೆಬ್ರೋಲು ಎಂಬ ಸ್ಥಳದಲ್ಲಿರುವ ಒಂದು ಶಾಸನವನ್ನು (ದಕ್ಷಿಣ ಇಂಡಿಯಾ ಶಾಸನಗಳು, VI, ಶಾಸನ ಸಂಖ್ಯೆ ೧೧೨–೧೧೩) ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ—"ರಾಯದೇವೇಂದ್ರಂ ಶ್ರೀಮತ್ತ್ರಿಭುವನಮಲ್ಲದೇವರುಂ ದಾನವಿನೋದಂ ದಣ್ಡನಾಯಕ ಚೂಡಾಮಣಿ ಅನಂತಪಾಳನುಂ ಸುಖವಿರ್ಕೆ ಕಳ್ಪಾಯುವರಂ। ಅವರ ಕೀರ್ತನೆಯಂ ಬರೆದಂ ಸಂಧಿವಿಗ್ರಹಿ ಪಾರ್ಶ್ವನಾಥನ ತನಯಂ ಶಾಂತಿನಾಥಂ" ಎಂಬ ಭಾಗದಿಂದ ತಿಳಿಯುತ್ತದೆ. ಇವನು ಜೈನಕವಿ. ಈ ಶಾಸನವು ಚಾಳುಕ್ಯರಾಜನಾದ ತ್ರಿಭುವನಮಲ್ಲನ (೧೦೭೬–೧೧೨೬) ಆಳಿಕೆಯಲ್ಲಿ ಬರೆದುದು; ಇದರಲ್ಲಿ ಆ ದೊರೆಯ ದಂಡನಾಯಕನಾದ ಅನಂತಪಾಳನು ಆವುದೋ ಒಂದು ದೇವಾಲಯಕ್ಕೆ ಇತರ ದಂಡನಾಯಕರೊಡನೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಅನಂತಪಾಳನ ತಾಯಿ ಪಂಪಾದೇವಿ

**ಕಂ॥ ಆ ವಿಭುವಿನ ವಲ್ಲಭೆ ಭೂ।**
**ದೇವಿ ವಚೋದೇವಿ ಲಕ್ಷ್ಮೀದೇವಿಯೆನಲ್ ಪೆಂ॥**
**ಪಾವಗಮಮರ್ದಿರೆ ಪಂಪಾ।**
**ದೇವಿ ಪೊಗಱ್ತೆಯ ನೆಗಱ್ತೆಯಂ ತಳೆದಿರ್ದಳ್॥**

ಅನಂತಪಾಳ

ಕಂ॥ ಆ ವಧುವುಂ ವರನುಂ ನಾ।
ನಾ ವಿಧದಿಂ ನೋಂತು ವೈಷ್ಣವಾರಾಧನೆಯಂ॥
ತಾವೊಸೆದು ಮಾಡಿ ಪಡೆದರ್।
ಶ್ರೀವರನೆನೆ ನೆಗಳ್ದಿನಂತದಂಡಾಧಿಪನಂ॥

ಅಂತಾ ನಾಲ್ವರೊಳಂ ವಿ।
ಕ್ರಾಂತ ಧನಂಜಯನನಂತಪಾಳಂ ನಿಜ ಭೂ॥
ಕಾಂತನ ಮನೆಯೊಳ್ ನೆಗಳ್ದಿಂ।
ಕುಂತಳ ನರಪಾಳ ರಾಜ್ಯ ಭರ ಧೌರೇಯಂ॥

ಉ॥ ಏಳಿದ ದಂಡನಾಯಕರನೇವೆಸವೇಳ್ದಿಪೆ ಚೋಳರಾಜ್ಯ ನಿ।
ರ್ಮೂಳನನಂಧ್ರ ಮಂಡಳಿಕ ಮಸ್ತಕ ಶೂಳನ ಚಕ್ರಕೂಟ ಸಂ॥
ಚಾಳನ ಗೂರ್ಜರ ಪ್ರಳಯ ಕಾಳನನಗ್ಗದನಂತಪಾಳನಂ।
ಪೇಳಿ ಚಳುಕ್ಯ ಕುಂತಳ ನರೇಂದ್ರ ಮಹೇಶ್ವರನಂಕಕಾಱನಂ॥

---

## ತ್ರಿವಿಕ್ರಮ ಪಂಡಿತ (ಕವಿಚರಿತೆ 1, 283), ೧೧೪೯

ಈತನು ಬರೆದಿರುವ ಶಾಸನಗಳನ್ನೆಲ್ಲ ೩ನೆಯ ಸಂಪುಟದ ಕೊನೆಯಲ್ಲಿ ಕೊಟ್ಟಿರುವ ೧ನೆಯ ಸಂಪುಟದ ಗ್ರಂಥ ಶುದ್ಧಿಯಲ್ಲಿ ತಿಳಿಸಿದ್ದೇವೆ. ಈ ಶಾಸನಗಳಲ್ಲದೆ, ಈತನು ಮೈಸೂರು ಶಾಸನ ಇಲಾಖೆಯ ೧೯೩೪ನೆಯ ವರ್ಷದ ವರದಿಯಲ್ಲಿಯ ೧೦ನೆಯ ಶಾಸನವನ್ನೂ ಬರೆದಂತೆ ಆ ಶಾಸನದ ಅಂತ್ಯದಲ್ಲಿರುವ "ತ್ರಿವಿಕ್ರಮ ಪಂಡಿತರ ಪದ್ಯ" ಎಂಬ ಭಾಗದಿಂದ ವ್ಯಕ್ತವಾಗುತ್ತದೆ.* ಈ ಶಾಸನದಲ್ಲಿ ಹೊಯ್ಸಳ ರಾಜನಾದ ೨ನೆಯ ಬಲ್ಲಾಳನು ಅರಸಿಯಕೆರೆಯಲ್ಲಿ ಬಲ್ಲಾಳೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಹೊಯ್ಸಳ ವಂಶ

ಸ್ರ॥ ಸ್ವಸ್ತಿ ಶ್ರೀ ಸತ್ಪಥೋದ್ಯಚ್ಚರಿತಮುದಿತ ಸತ್ಯ ಸ್ಫುರದ್ವಿಶ್ವ ಧಾತ್ರೀ।
ವಿಸ್ತಾರೋದಾತ್ತ ತೇಜಂ ಜನ ಹೃದಯ ವಿಕಾಸೋದಯಂ ವೀರ ವಿದ್ವಿಟ್॥
ನಿಸ್ತಾರಾನೂನ ದಾನಾರ್ದಿತ ತಮಮುಮಳಂ ವಿಶ್ವ ವೇದಾಂಗ ಲೋಕ।
ಪ್ರಸ್ತುತ್ಯಂ ತಾನೆನಲ್ ಭಾನುವಿನವೊಲೆಸೆಗುಂ ಪೊಯ್ಸಳೋರ್ವೀಶ ವಂಶಂ॥

ವಿನಯಾದಿತ್ಯ

ಮ॥ ಪದೆದಾ ಪೊಯ್ಸಳವಂಶದೊಳ್ ಶಶಿ ಕಲಾ ನೈರ್ಮಲ್ಯಮಂ ದೇವ ಭೂ।
ಜದ ದಾನೋನ್ನತಿಯಂ ಪ್ರಭಾಕರನ ತೇಜೋರಾಶಿಯಂ ರಮ್ಯ ಪೂ॥

* ಅರಸಿಯಕೆರೆ 38, 39ನೆಯ ಶಾಸನಗಳಲ್ಲಿ ಈತನ ಪದ್ಯಗಳು ದೊರೆವುದರಿಂದ ಆ ಶಾಸನಗಳೂ ಏತತ್ಕೃತವೆಂದು ಊಹಿಸಬಹುದಾಗಿದೆ. ಆದರೆ ಅವುಗಳ ಅಂತ್ಯದಲ್ಲಿ ಈತನ ಹೆಸರಿಲ್ಲ.

ರ್ವ ದಿಶಾಧೀಶ ಗಜೇಂದ್ರದೊಂದು ಮದಮುಂ ತನ್ನೞ್ಕಿಱಿಂ ತಾಳ್ದಿ ಪು ।
ಟ್ಟಿದನುದ್ಯದ್ವಿನಯಾಂಬುರಾಶಿ ವಿನಯಾದಿತ್ಯಾವನೀಪಾಲಕಂ ॥

### ಎರೆಯಂಗ

ಕಂ॥ ಎಱಿಗುವರಿನ್ನೃಪರ್ಗೆ ಸಿಡಿಲವೊ ।
ಲೆಱಿಗುವನೆಱಿಗಿಸುವನಮರ ರಮಣಿಯರನಡೇ ॥
ನೆಱೆಯಂಗ ನೃಪತಿ ಗುಣ ಗಣ ।
ದೆಱೆಯನೊ ಮಾಡಿದರ್ಗೆ ಮಾೞ್ಪಿರಿಲ್ಲೀ ಜಗದೊಳ್ ॥

### ವಿಷ್ಣುನೃಪ

ಮುನಿಸಿಂದರುಣತೆ ಕಡೆಗ ।
ಣ್ಗೆನಿಸೊದವೆ ವಿರೋಧಿ ನರಪ ಸಪ್ತಾಂಗಂ ವಿ ॥
ಷ್ಣು ನೃಪಾಲಂಗಪ್ಪುವು ನೋ ।
ಡನುಪಮಮುವನಳವಿಯಿತರರಳವಿಯೆ ಜಗದೊಳ್ ॥

ಮ॥ ಬುಧಲೋಕಾಶ್ರಯನೆಂಬ ತಾರ್ಕ್ಷ್ಯ ರಥನೆಂಬಬ್ಜಾಯತಾಕ್ಷಂ ದಲೆಂ ।
ಬ ಧರಾಧಾರಕನೆಂಬ ಭೋಗಯುತನೆಂಬುದ್ಯದ್ಬಲಾನ್ವಿತನೆಂ ॥
ಬ ಧರಿತ್ರೀ ವರನೆಂಬ ಲೋಕನುತನೆಂಬೀ ಪೆರ್ಮೆಯಿಂ ನೋಡೆ ವಿ ।
ಷ್ಣು ಧರೇಶಂ ಸಲೆ ವಿಷ್ಣುವೋಲ್ ಸೊಗಯಿಪಂ ಲಕ್ಷ್ಮೀ ಮನೋವಲ್ಲಭಂ ॥

### ನಾರಸಿಂಹ I

ಚಂ॥ ಕದನದೊಳಾಂತರಾತಿಗಳ ದಂತಿಯ ದಂತಮನೊತ್ತಿ ಕಿೞ್ತು ತ ।
ದ್ಬಿದುವನೆ ಪೊಯ್ಯೆ ಪೋೞ್ದು ಪೊಱಪೊಣ್ಮೆ ಸರಕ್ತಕ ಮೌಕ್ತಿಕಂಗಳಾ ॥
ಪದದೊಳವಂ ಜಯಾಂಗನೆಗೆ ಹಾರಮನೊಪ್ಪಿರೆ ಮಾೞ್ಪನೆಂದೊಡಾರ್ ।
ಕದನದೊಳಾಂಪಿದಿರ್ಚುವದಟರ್ ಜಗದೊಳ್ ನರಸಿಂಹದೇವನಂ ॥

ಕಂ॥ ಕದನದೊಳಿದಿರ್ಚಿದರಿ ನೃಪ ।
ಮದ ರದನಿಯ ರದನದಲ್ಲಿ ನಟ್ಟ ಸರಲ್ ವಾ ॥
ಲದ ಮೊದಲೊಳುಚ್ಚಳಿಸುವೊಂ ।
ದದಟವನಿಪ ನಾರಸಿಂಹದೇವಂಗೆ ನಿಜಂ ॥

### ಬಲ್ಲಾಳ II

ಮ॥ ಸ್ರ॥ ಮುನಿಸಿಂ ಬಲ್ಲಾಳ ಭೂಪಂ ಕಿೞ್ತಿಯಸಿಲತೆಯಂ ಕೀೞ್ತಿರನ್ಯಾವನೀ ಪಾ ।
ಳ ನಿಕಾಯಂ ಸ್ಥಾನದಿಂದಂ ಜಡಿಯೆ ನಡುಗುವರ್ ಭೀತಿಯಿಂ ನೋೞ್ಪೊಡೀ ಪಾಂ ॥
ಗು ನಿತಾಂತಂ ಚೋದ್ಯಮಿಂತೀ ತೆಱಿನನಱಿದೆ ನಾನೀಗಳೆಂತೆಂದೊಡಿಂತೀ ।
ತನ ಖಡ್ಗಕ್ಕಂ ವಿರೋಧಿ ಪ್ರತತಿಗ. . . . . . . .ದಕ್ಕುಮೆಂದುಂ ॥

ಫಣಿನಾಥಂ ಪಾಟಿ ಭೋಗಕ್ಕಮರ ಪತಿ ಸಮಂ ರೂಪ ಸಂಪತ್ತಿಗಬ್ಜೇ ।
ಕ್ಷಣನುದ್ಯದ್ವಿಕ್ರಮಾಡಂಬರಕೆ ದೊರೆ ಮಹೇಶಂ ನಿಜಾಜ್ಞಾ ವಿಶೇಷ ॥

ಕ್ಕೆಣೆ ಧೀರೋದಾತ್ತ ಚಿತ್ರಕ್ಕಮುಮ ಸರಿ ದಶಾಸ್ಯಾರಿ ದಾನಕ್ಕೆ ಮತ್ತಂ ।
ತೊಣೆ ಕರ್ಣಂ ತಾನೆನಲ್ಕೀ ವಸುಧೆಯೊಳೆಸೆದಂ ವೀರಬಲ್ಲಾಳ ಭೂಪಂ ॥

ಉಮಾದೇವಿ

ಮ॥ ಲಲನಾ ನಿರ್ಮಿತಿ ಕೌಶಲಂ ಪಲವು ಕಾಲಕ್ಕಬ್ಜಜಂಗಿಂದು ಸ ।
ತ್ಫಲಮಾಯ್ತುತ್ತಮ ರೂಪೆಯಂ ವಿಮಳೆಯಂ ಬಲ್ಲಾಳ ವಿಶ್ವಂಭರೇ ॥
ಶ ಲಸತ್ಕಾಮಿನಿಯಂ ಬುಧಾಳಿಗನಿಶಂ ಕೂರ್ತೀವುಮಾದೇವಿಯಂ ।
ಲಲನಾ ರತ್ನಮನುದ್ಧ ಕೀರ್ತಿ ಯುತೆಯಂ ಪೆತ್ತುತ್ತಮ ಪ್ರೌಢಿಯಿಂ ॥

ಅರಸಿಯ ಕೆರೆ

ಮ॥ ಸ್ರ॥ ಪರಮೇಷ್ಠಿ ಪ್ರಖ್ಯ ವಿಪ್ರ ಪ್ರತತಿಗಳಿನಿಳಾಪ್ರಖ್ಯ ಶೂದ್ರಾಳಿಯಿಂ ಖೇ ।
ಚರ ಕಾಂತ ಪ್ರಖ್ಯರಪ್ಪಾ ವಣಿಜರಿನಿನಜ ಪ್ರಖ್ಯ ಕೊಯ್ಲಾಳ್ಗಳಿಂ ಸಾ ॥
ಗರಮಂ ಪೋಲ್ವೀ ತಟಾಕಂಗಳಿನಮರ ಪುರೋದ್ಯಾನಮಂ ಪೋಲ್ತು ಶೋಭಾ ।
ಕರಮಪ್ಪುದ್ಯಾನದಿಂದೀಯರಸಿಯ ಕೆಱೆ ಭೂಭಾಗದೊಳ್ ಶೋಭಿಸಿರ್ಕುಂ ॥

---

## ಮಾರಮರಸ, ೧೧೯೯

ಈತನು ಹಂಪೆಯ ವಿರೂಪಾಕ್ಷ ದೇವಸ್ಥಾನದೊಳಗೆ ದುರ್ಗಾದೇವಿಯ ಗುಡಿಯ ಬಳಿ ಇರುವ ಒಂದು ಶಾಸನವನ್ನು (ದಕ್ಷಿಣ ಇಂಡಿಯಾ ಶಾಸನಗಳು IV, ಶಾಸನ ಸಂಖ್ಯೆ ೨೬೦) ಬರದುದಾಗಿ ಆ ಶಾಸನದ ಕೊನೆಯಲ್ಲಿರುವ "ಒಳ್ಗವಿ ತಿಳಕಂ ರೇವರಸರ ಮಗಂ ಮಾರಮರಸಂ ಹೇೞ್ದು ತಾನೆ ಬರೆದ ಶಾಸನಂ" ಎಂಬ ವಾಕ್ಯದಿಂದ ತಿಳಿಯುತ್ತದೆ. ಅಲ್ಲದೆ, ಈ ವಾಕ್ಯವು ಕವಿಯ ವಿಷಯವಾಗಿ, ಆತನು ಕವಿಶ್ರೇಷ್ಠನು, ರೇವರಸನ ಮಗನು, ಈ ಶಾಸನ ಪದ್ಯಗಳನ್ನು ರಚಿಸಿ ತಾನೇ ಲಿಖಿಸಿದನು, ಎಂಬ ಅಂಶಗಳನ್ನೂ ತಿಳಿಸುತ್ತದೆ. ಕವಿ ಬ್ರಾಹ್ಮಣನಾಗಿರಬಹುದೆಂದು ತೋರುತ್ತದೆ. ಈ ಶಾಸನವು ಶಕ ೧೧೨೧ನೆಯ ಸಿದ್ಧಾರ್ಥಿ ಸಂವತ್ಸರದಲ್ಲಿ, ಎಂದರೆ ೧೧೯೯ರಲ್ಲಿ ಬರೆದುದು. ಇದರಲ್ಲಿ ಕುರುಗೋಡ ಪ್ರಭುವಾದ ಚೌಡಯ್ಯನು ಹಂಪೆಯ ವಿರೂಪಾಕ್ಷ ದೇವರಿಗೂ ಪಂಪಾಂಬಿಕಾ ದೇವಿಗೂ ಕಳಶ, ಗಂಟೆ ಮುಂತಾದ ಸೇವೆಗಳನ್ನು ಮಾಡಿ ಭೂಮಿಯನ್ನೂ ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಪಂಪಾಂಬಿಕೆ

ಮ॥ ನಳಿತೋಳ್ ಶಾಖೆಗಳಂ ತಳಂ ತಳಿರ್ಗಳಂ ವೃತ್ತಸ್ತನಂ ಪೌಷ್ಪಮಂ ।
ವಿಳಸತ್ಕುಂತಳ ಮಾಳೆ ಭೃಂಗ ತತಿಯಂ ನೀಳ್ದೋಳ್ವೆರಲ್ ಕುಟ್ಮಳಂ ॥
ಗಳ ಚೆಲ್ವಂ ಗೆಲೆ ಕಲ್ಪವೃಕ್ಷದವೊಲಾ ಪಂಪಾಂಬಿಕಾ ದೇವಿ ಕೋ ।
ಮಳೆ ಚೌಡಯ್ಯನ ಕಾಂತೆ ಹಾಚಲೆಗೆ ಮಾೞ್ಕಿಷ್ಟಾರ್ಥ ಸಂಸಿದ್ಧಿಯಂ ॥

## ಪಂಪಾ ಕ್ಷೇತ್ರ

ಮ ॥ ಅದು ಪುಣ್ಯೋದಯ ಜನ್ಮಭೂಮಿ ದುರಿತೌಘಚ್ಛೇದನಾವಾಸಮ ।
ಭ್ಯುದಯಾನೀಕ ಫಲಪ್ರದಂ ಸುಖ ಲತಾ ಸಂವರ್ಧನ ಕ್ಷೇತ್ರಮುಂ ॥
ತದು ಭಕ್ತರ್ಗಭಿವಾಂಛಿತಾರ್ಥ ಸುಖಮಂ ತಾನೀವ ಸಂಸ್ಥಾನಮೆಂ ।
ಬುದು ಲೋಕಂ ಭುವನತ್ರಯೈಕ ಹಿತಮಂ ಪಂಪಾ ವರ ಕ್ಷೇತ್ರಮಂ ॥

## ಸಾಮಂತ ಲಕ್ಷ್ಮಣ

ಕಂ ॥ ಸಿಡಿಲೆಸೆವ ಕಾಯ್ಪನೀಶನ ।
ಕಡುಗೋಪಮನಂತಕನ ಲಸನ್ಮಸಕಮನಾ ॥
ಯ್ಡೊಡಗೂಡಿ ಲಕ್ಷ್ಮಣನ ತಾಂ ।
ಪಡೆದಂ ಮುಂ ಧಾತೃ ಬಱಿಕೆ ಜಗಮುಂ ಪಡೆದಂ ॥

## ಸಾಮಂತ ಮಾಧವ

ಶರ ವರ್ಷಮನರಿ ಸೇನೆಗೆ ।
ಹಿರಣ್ಯ ವರ್ಷಮನೆ ಬುಧರ್ಗೆ ಕರ್ಪೂರದ ಬ ॥
ಲ್ಸರಿಯುಂ ಸಮಸ್ತ ಜನಕಾ ।
ದರದಿಂದಂ ಕಱೆವುದಲ್ತೆ ಮಾಧವ ಹಸ್ತಂ ॥

## ಆಚಿಗಾಂಕ

ಬಿಲ್ವಿಡಿದವರ್ಗಳ್ ತೆಗೆಯಲ್ ।
ಕಲ್ವರ್ ಧಾರಿಣಿಯೊಳೆಲ್ಲಮಿದು ವಿಪರೀತಂ ॥
ಬಿಲ್ವಿದ್ದೆಯಾಚಿಗಾಂಕಂ ।
ಬಿಲ್ವಿಡಿದೊಡೆ ತೆಗೆವುದಹಿತ ಮಂಡಲಮತ್ತಲ್ ॥

## ಚೌಡಯ್ಯ

ಉ ॥ ಆತನ ಬಲ್ಪನಾತನವುದಾರ್ಯಮನಾತನ ತೇಜಮುಂ ಸಮಂ ।
ತಾತನ ಪುಣ್ಯದುನ್ನತಿಯನಾತನ ಲಕ್ಷ್ಮಿಯನಾತನೊಳ್ಗುಣ ॥
ವ್ರಾತಮನಾತನುದ್ಭವಮನಾತನ ಧರ್ಮ ರತತ್ವಮಂ ದಲಿಂ ।
ತೀತೆಱನೆಂದು ಬಣ್ಣಿಪೊಡೆ ವಾಸುಗಿಯಲ್ಲದೆ ಮಿಕ್ಕರಾರ್ಪರೇ ॥

ಕಂ ॥ ಹರಲಲ್ಲದ ಚಿಂತಾಮಣಿ ।
ಮರನಲ್ಲದ ಕಲ್ಪ ಭೂರುಹಂ ಪಶುತೆಯನಾಂ ॥
ತಿರದ ಸುರ ಧೇನುವೆಂದೀ ।
ಧರೆ ಪೊಗೞ್ಗಂ ಚೌಡಿಗಾಂಕನೀವುನ್ನತಿಯಂ ॥

ಒಲಿಸುವುದರಿದಬಲೆಯರಂ ।
ಸಲೆ ಮೆಲ್ಪಿಂ ಬಲ್ಪಿನಿಂದೆ ಸಂಗರದೊಳ್ ತ ॥

ನ್ನಲಗಿನ ಮೊನೆಯೊಳೆ ಚಾವುಡಣ ।
ನೊಲಿಸಿದ ಪರಿ ಹೊಸತು ನೋಡೆ ವಿಜಯಶ್ರೀಯಂ ॥

ಚಂ॥ ಸೆಡೆದು ದನಾನಳಂ ನಡೆಯುತಿರ್ಪುದು ಪುಲ್ಗಿಡಿದಾಂತ ಭೀತಿಯಿಂ ।
ಮಿಡುಕುವುದಲ್ತು ನೀರೊಳಗಣಿಂ ಬಡಬಾನಳನಪ್ಪಿ ಶಂಭುವಂ ॥
ಬಿಡದೆ ಲಲಾಟ ನೇತ್ರಶಿಖಿಯಾದುದು ಚಾವುಡನ ತೇಜದೇಱಿಗ್ಗಿಯು ।
ಗ್ಗಡಕಗಿದುಗ್ರ ವಹ್ನಿಯೆನಲಾರ್ ಗಳ ತೇಜಮನಾಂತು ಬಾೞ್ವಿವರ್ ॥

ಮ॥ ಸ್ರ॥ ಹರಿದೆಯ್ದಿತ್ತಟ್ಟಿ ಮುಟ್ಟಿತ್ತಡಸಿ ಹಿಡಿದುದೊತ್ತಿತ್ತು ಸುತ್ತಿತ್ತು ಕುತ್ತಿ ।
ತ್ತೊರಸಿತ್ತೆತ್ತಿತ್ತು ಬೀಸಿತ್ತೊಗೆದುದೊದೆದುದೀಡಾಡಿತೌಂಕಿತ್ತುರುಳ್ಚಿ ॥
ತ್ತುರಮಂ ಮೆಟ್ಟಿತ್ತು ಮಾಱಾಂತರನಡಿಯಿಡೆ ಹೊಯ್ದೊಕ್ಕಲಿಕ್ಕಿತ್ತು ಕಾಯ್ಪಿಂ ।
ಧುರದೊಳ್ ಸಾಮಂತ ಲಕ್ಷ್ಮೀಧರನ ಮಯಿದುನಂ ಚಾವುಡನೆಂಬಾ ಮದೇಭಂ ॥

ಕಂ॥ ಅಂಕುಸಕೆ ನಿಲ್ವುವಾನೆಗ ।
ಳಂಕುಸಕಿದು ನಿಲ್ವುದಲ್ತು ಲಕ್ಷ್ಮನ ನುಡಿಯಿಂ ॥
ಬಂಕುಸಕೆ ನಿಲ್ವುದುಕ್ಕಿನ ।
ಡೊಂಕಿಗೆ ನಿಂದಪುದೆ ಚಾವುಡನೆಂಬ ಮದೇಭಂ ॥

ಹರಿ ತನುವಿನ ಶಶಿ ಬಿಂಬದ ।
ಹರ ಕಂಠದ ಕರ್ಪು ಪಿಂಗೆ ಚವುಡನ ಜಸದಿಂ ॥
ಸಿರಿ ಹರಿಯಂ ಕುಮುದಿನಿ ಶಶ ।
ಧರನಂ ಶಂಕರನನಗಜೆಯಱಿಯಳ್ ಕುಱುಪಿಂ ॥

## ಅವನ ಹೆಂಡತಿ ಹಾಚಲೆ

ಮ॥ ಸ್ರ॥ ದೊರೆಯೇ ಚಾವುಡಯ್ಯನುದ್ಯತ್ಸತಿಯೆನಿಸಿದ ಹಾಚವ್ವೆಗೀ ಧಾತ್ರಿಯೊಳ್ ಭಾ ।
ಸುರ ಚಾತುರ್ಯೋಕ್ತಿಯಿಂ ವಾಗ್ವಧು ಸೊಬಗಿನೊಳಾ ರಂಭೆ ಸೌಭಾಗ್ಯದಿಂದಂ ॥
ವರ ಗಂಗಾ ದೇವಿ ಶೌಚ ವ್ರತದೊಳೆ ನೆಗೞ್ದಾ ಸೀತೆಯೌದಾರ್ಯದಿಂದಂ ।
ಸುರ ಭೂಜಂ ರೂಪಿನಿಂದಂ ರತಿ ಸಿರಿ ವಿಳಸಲ್ಲಕ್ಷಣಾನೀಕದಿಂದಂ ॥

ಚಂ॥ ಅನುಪಮ ಪಾತ್ರ ದಾನ ವರ ಹಸ್ತಿನಿ ಶಂಭು ಪದಾರವಿಂದ ಚಿ ।
ತ್ತಿನಿ ದುರಿತೌಘ ಶಂಕಿನಿ ಲಸಚ್ಚವುಡಯ್ಯನ ಹೃತ್ಸರೋಜ ಪ ॥
ದ್ಮಿನಿಯೆನೆ ನಾಲ್ಕು ಜಾತಿಯಬಳಾ ಗುಣಮಂ ಗುಣದಿಂದೆ ತಾಳ್ದಿದಳ್ ।
ವಿನಯ ನಿಧಾನೆ ಹೆಗ್ಗಡಿತಿ ಹಾಚಲೆಯೆಂಬುದು ಧಾರಿಣೀ ಜನಂ ॥

ಕಂ॥ ಅಯ್ದೆ ಮದನಾಸ್ತ್ರದಂತಿರ ।
ಲಯ್ದುದ ಬಿಂದುಗಳನಾಂತ ಶುಕ್ತಿಕೆಪೋಲ್ ಮು ॥
ತ್ತಯ್ದೆಯೆನಿಪ್ಪಳ್ ಲಕ್ಮನ ।
ಮಯ್ದುನ ಚಾವುಡಣನ ವನಿತೆ ಹಾಚಲೆಯೆಂದುಂ ॥

ಈ ದಂಪತಿಗಳ ಸೇವೆ

ಚಂ॥ ಸೊಗಯಿಪ ಗಂಟೆಯಡ್ಡಣಿಗೆಯಾರತಿ ಧೂಪ ಘಟಂ ಸುಪರ್ಣ್ಯಣಂ ।
ಜಗಕತಿ ಚೆಲ್ವನಪ್ಪ ಕಳಶಂ ತಿಳಿವಟ್ಟಲೆಸಪ್ಪ ಚಂದನಂ ॥
ಮೃಗಮುದದಣ್ಪನಿಕ್ಕುವ ಸುಗಂಧದ ಸಿಪ್ಪು ಸುವಸ್ತ್ರ ಭೂಷಣಾ ।
ದಿಗಳನನೇಕಮಂ ಮುದದೆ ಮಯ್ಯುನ ಚೌಡಣನಿತ್ತನೊಪ್ಪಿರಲ್ ॥

ಕಂ॥ ಪತಿ ಮಾಳ್ಪಿ ಧರ್ಮ ಕಾರ್ಯೋ ।
ನ್ನತಿಯಂ ತಾಂ ಮುಂದುವರಿದು ಮಾಡುವ ಗುಣದು ॥
ನ್ನತಿಯಿಂ ಹಾಚಲೆ ಪಡೆದಳ್ ।
ಕ್ಷಿತಿಯೊಳ್ ಸ್ತ್ರೀರತ್ನಮಾಕೆಯೆಂಬೊಳ್ಪೆಸರಂ ॥
ಪಡೆದೊಡಮೆಯುಪ್ಪುದೆಂತುಂ ।
ಕಿಡುವುದೆ ಕಿಡದೊಡಮೆ ಧರ್ಮಮೆಂದಾರ್ಜಿಸುವರ್ ॥
ತಡೆಯದೆ ಧರ್ಮಮ(ನವ)ರೇಂ ।
ಕಡು ಜಾಣರೊ ಚೌಡಿಗಾಂಕನುಂ ಹಾಚಲೆಯುಂ ॥

---

## ಹಂಪೆಯಲ್ಲಿ ಕೃಷ್ಣಸ್ವಾಮಿ ದೇವಸ್ಥಾನದ ಬಳಿ ಇರುವ ಶಾಸನ, ೧೪೧೦

(ದಕ್ಷಿಣ ಇಂಡಿಯಾ ಶಾಸನಗಳು IV, ಶಾಸನ ಸಂಖ್ಯೆ ೨೬೭)

ಈ ಶಾಸನವು ಮಧುರ ಕವಿಯಿಂದ ರಚಿತವಾದುದೆಂದು ಹೇಳಿ, ಇದರಿಂದ ಕೆಲವು ಪದ್ಯಗಳನ್ನು ೩ನೆಯ ಸಂಪುಟದಲ್ಲಿ (೩೭೬–೩೭೮) ಉದಾಹರಿಸಿದ್ದೇವೆ. ಅಲ್ಲಿ ಹೇಳಿರುವಂತೆ ದೇವರಾಯನಿಗೆ ಬಂದಿದ್ದ ಅಪಾಯವನ್ನು ನಿವಾರಣೆ ಮಾಡಿದವನು ಮಧುರನಲ್ಲ, ಲಕ್ಷ್ಮೀಧರನು. ಈ ಶಾಸನವು ಮಧುರನಿಂದ ರಚಿಸಲ್ಪಟ್ಟಿತು ಎಂಬಂಶವು—

ಕಂ॥ ಪಿಂಗದೆ ಲಕ್ಷ್ಮೀಧರ ಸಚಿ ।
ವಂಗಾಚಂದ್ರಾರ್ಕಮೊದವಿದಾಯುಂ ಶ್ರೀಯುಂ ॥
ಸಂಗತಿವಡೆದಿರೆ ಬರೆದಂ ।
ಮಂಗಳಮಯಮಾಗೆ ಮಧುರನೀ ಶಾಸನಮಂ ॥

ಎಂಬ ಪದ್ಯದಿಂದ ವ್ಯಕ್ತವಾಗುತ್ತದೆ. ಈ ಕವಿಯ ಸ್ತುತಿರೂಪವಾದ ಎರಡು ಪದ್ಯಗಳು ಶಾಸನದ ಕೊನೆಯಲ್ಲಿವೆ. ಒಂದನೆಯದರಲ್ಲಿ ಲಕ್ಷ್ಮೀಧರ ಮಂತ್ರಿ ಕವೀಂದ್ರಾಭರಣನಾದ ಮಧುರನನ್ನು ತನಗಿಂತ ಹೆಚ್ಚಾಗಿ ಭಾವಿಸಿ ಪ್ರೀತಿಸಿದಂತೆ ಹೇಳಿದೆ. ಎರಡನೆಯದರಲ್ಲಿ ಮಧುರನ ಕವಿತಾ ಚಾತುರ್ಯವನ್ನೂ ಪ್ರಸಿದ್ಧಿಯನ್ನೂ ಹೀಗೆ ತಿಳಿಸಿದೆ:—

ಮ॥ ಗಣೆದಂಗೊಳ್ಳೊಡೆ ಮಿಕ್ಕಿನಕ್ಕರದ ಮಾತಂತಿರ್ಕೆ ತನ್ನಾಣೆ ಗೋ ।
ಸಣೆ ಸಲ್ಗುಂ ಸುಕವೀಂದ್ರ ವೃಂದ ಸಭೆಯೊಳ್ ತಾನೆಂದೊಡಮ್ಮಮ್ಮ ಥಾ ॥
ರಿಣಿಯೊಳ್ ಕೇಳ್ದಱಿಯಾ ಜಡಾ ಮಧುರನಂ..............

ಈ ಶಾಸನದಿಂದ ಕೆಲವು ಪದ್ಯಗಳನ್ನು ಮಾತ್ರ ಒಸೆಯ ಸಂಪುಟದಲ್ಲಿ ಉದಾಹರಿಸಿದ್ದೇವೆ. ಇಲ್ಲಿ ಇನ್ನೂ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಗಣೇಶ

ಸ್ರ॥ ಶ್ರೀಮತ್ಸಿಂಧೂರ ಬಂಧಾರುಣ ಬಿದು ನವ ಸಂಧ್ಯಾಂಬುದಂ ಪುಷ್ಕರಪ್ರೋ ।
ದ್ಧಾಮಾಂಭಃ ಶೀಕರಂ ತಳ್ತುಡು ಗಣಮುರು ದಂಷ್ಟ್ರಾಂಕುರಂ ಬಾಲ ಚಂದ್ರಂ ॥
ಪೋ ಮಾತೇನೆಂಬ ನೇರ್ಪಿಂ ನಭಮನಣಕಿಪಂತಿರ್ದ ನಿತ್ಯೋನ್ನಮತ್ತೇ ।
ಜೋಮೂರ್ತಿ ಶ್ರೀ ಮಹೇಭಾನನನನವರತಂ ಕೂರ್ತು ರಕ್ಷಿಕ್ಕೆ ನಿಮ್ಮಂ ॥

ಚಂ॥ ತಣಿಯೆ ಸದಾಳಿಯಂ ಪೊರೆವ ದಾನ ಗುಣಂ ಪರಿಪೂರ್ಣ ಭದ್ರ ಲ ।
ಕ್ಷಣಮಳವಟ್ಟ ಶಕ್ತಿ ಸುಮನಸ್ಸುತಮಾದನವದ್ಯ ವಿದ್ಯೆ ಸಂ ॥
ದಣಿಯುರವಾವನೊಳ್ ನೆಗಟ್ದಿವೆನ್ನವೊಲೆಂದು ಮುದಂ ಮಿಗಲ್ ಮಹಾ ।
ಗಣಪತಿ ಕೂರ್ಮೆಯಿಂ ಕುಡುಗೆ ಲಕ್ಷ್ಮಣ ಮಂತ್ರಿಗಭೀಷ್ಟ ಸಿದ್ಧಿಯಂ ॥

ಆದಿ ವರಾಹ

ಕಂ॥ ಪೊಂಬೆಟ್ಟಮೆ ಪೊಸ ಕೇಸರ ।
ಮೆಂಬವೊಲೆಳವಟ್ಟ ಕುವಲಯಂ ಕುವಲಯದಂ ॥
ತಿಂಬಾಗಿರೆ ತನ್ನಯ ತುದಿ ।
ಗೊಂಬಿನೊಳಂಬುಧಿಯೊಳೆಸೆದನಾದಿ ವರಾಹಂ ॥

ಸ್ರ॥ ಆ ಮಾಯಾ ಪೋತ್ರಿ ಧಾತ್ರೀ ಭರಮನಪ್ಪಿಸಿ ತುಳ್ಕಾಡಿದಂದಾರ್ದಮರ್ತ್ಯ ।
ಸ್ತೋಮಂ ಮಂಥಾದ್ರಿಯಂ ಮುನ್ನಿಸದೊಡಗಡೆದಂದಿಂಬುಗೊಂಡೋವದಂಬಿಂ ॥
ರಾಮಂ ಕೈವೋಗದೆಚ್ಚಂದಳವಳಿಯದೆ ಗಾಂಭೀರ್ಯ ಧಾಮಂ ತಿತಿಕ್ಷಾ ।
ಸೀಮಂ ಭೂಮಂಡಲಕ್ಕಾಭರಣಮೆನಿಸಿದಂ ಭೂರಿ ಭದ್ರಂ ಸಮುದ್ರಂ ॥

ಬ್ರಹ್ಮ

ಉ॥ ಅಂತೆಸೆವಂಬುರಾಶಿಯ ಮಗಳ್ ಸಿರಿ ತನ್ನಯ ರಾಣಿಯಾಗಲೋ ।
ರಂತಿರನಂತ ತಳ್ಪ ತಳದೊಳ್ ನಿಜ ಲೀಲೆಯನಿಂಬುಗೊಂಡು ನಿ ॥
ಶ್ಚಿಂತೆಯಿನಿರ್ದ ನೀರರುಹ ನಾಭನ ನಾಭಿ ಸರೋಜದೊಳ್ ಜಗ ।
ತ್ಕಾಂತನಲಂಪಿನಿಂದೊಗೆದನೂರ್ಜಿತ ಶಾಸನನಂಬುಜಾಸನಂ ॥

ಹರಿಹರ II

ಕಂ॥ ಆತಂಗೆ ಜನಿಸಿದಂ ವಿ ।
ಖ್ಯಾತಂ ನಳ ನಹುಷ ನೃಗ ಭಗೀರಥರೊರೆಗೇ ॥
ಮಾತೊ ಸರಿ ಮಿಗಿಲೆನಲ್ ಧ ।
ರ್ಮಾತತ ರೂಪಂ ಪ್ರತಾಪ ಹರಿಹರ ಭೂಪಂ ॥

ಕಂ ॥ ದಾನವ ಮರ್ದನನಂತಿರೆ ।
ಮಾನಾಗದೆ ಸಂದಿಯಾಗದಪ್ರತಿ ರೂಪಂ ॥
ತಾನಾ ಪ್ರತಾಪ ಹರಿಹರ ।
ಸೇನುದ್ಧರಿಸಿದನೊ ವೇದಮಂ ಮೇದಿನಿಯಂ ॥

ದೇವರಾಜ

ಸ್ರ॥ ಆ ಭೂಮಿಪಾಲ ಪುಣ್ಯಾಂಕುರಮದು ಪುರುಷಾಕಾರದಿಂ ಪುಟ್ಟಿದಂತಾ ।
ಶಾ ಭಾಗ ಪ್ರಸ್ಫುರತ್ಪಾವನ ಯಶನಶನಿ ಪ್ರೌಢ ಬಾಹು ಪ್ರತಾಪಂ ॥
ಸೌಭಾಗ್ಯ ಶ್ರೀ ನಿವಾಸಂ ಜನಿಯಿಸಿ ಸಕಲ ಕ್ಷತ್ರ ಚೂಡಾಧಿರೂಢಾ ।
ಜ್ಞಾ ಭಾರಂ ಸಾರ್ವಭೌಮೋನ್ನತಿಯೊಳೆಸೆದಪಂ ದೇವರಾಜಾವನೀಂದ್ರಂ ॥

ಮ॥ ಮಱಿ ಮಾತೇಂ ಪಗೆಗೊಂಡ ಪಾರ್ಥಿವರನತ್ಯುಗ್ರಾಜಿಯೊಳ್ ಕಾಯ್ದು ತ ।
ಳ್ತಱಿವಾಗಳ್ ನೆಗಱ್ದಿಟ್ಟವಂಬೆರಸು ಭೇತಾಳಾಳಿ ಚೆನ್ನೆತ್ತರಂ ॥
ಸುಱಿದಿರ್ಪಾಱಿದ ಕೈಗಳಿಂ ಕಡೆವರಂ ದಿಗ್ಭಿತ್ತಿಯೊಳ್ ಕೂಡಿ ಚ ।
ಟ್ಟಱಿದಂತಿರ್ದಪುದಪ್ರತರ್ಕ್ಯತರ ತೇಜಂ ದೇವರಾಜೇಂದ್ರನಾ ॥

ಕಂ॥ ಪೊಡಕರಿಪ ಗಂಡ ಗುಣದು ।
ಗ್ಗಡಮೆಂತುಟೊ ಬಿಡದೆ ಜಡಿಯೆ ಜಯವಧುವತ್ತಿ ॥
ತ್ತಡಿಯಿಡದೆ ಬಾಳ ಬಾಯೊಳೆ ।
ನಡೆವಳ್ ಶ್ರೀ ದೇವರಾಯ ಭೂವಲ್ಲಭನಾ ॥

ಮಾಧವ ಸಾಯಣರು

ಉ॥ ತೋಡದ ಬಾವಿಯಿಲ್ಲಮರೆ ಕಟ್ಟದ ಪೆರ್ಗೆಱೆಯಿಲ್ಲ ಲೀಲೆಯಿಂ ।
ಮಾಡದ ದೇವತಾ ಭವನಮಿಲ್ಲೊಲವಿಂ ಬಿಡದಗ್ರಹಾರಮಿ ॥
ಲ್ಲಾಡಲದೇನೊ ಭೂ ಭುವನ ಭುಂಭುಕಮಾದುದು ಕೀರ್ತಿ ಬಾಪು ನಾ ।
ಡಾಡಿಯೆ ಸೈಪು ಮಾದರಸ ಸಾಯಣರೆಂಬ ಮಹಾ ಪ್ರಧಾನರಾ ॥

ಲಕ್ಷ್ಮೀಧರ

ಕಂ॥ ಆ ಮೆಱೆವೈವರೊಳಾಂತಂ ।
ಶ್ರೀಮದ್ಭೀಮ ಪ್ರತಾಪನರ್ಜುನ ಕೀರ್ತಿ ॥
ಪ್ರೇಮಂ ಲಕ್ಷ್ಮೀಧರನೆನ ।
ಲೀ ಮಹಿಯೊಳ್ ಧರ್ಮ ಸಂಭವ ಸ್ವಾಭವಮಂ ॥

ಮ॥ ಕೆಱೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ ।
ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ ॥
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ ।
ಯೆಱೆದಳ್ ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಚಂ || ಒಡಮೆಯನೋವಿ ನೋಡಿ ಬಿಡಲಾಱದೆ ಚರ್ಮಮನೆಲ್ವನೊಳ್ಪುವೆ ।
ತೊಡಲನಗಲ್ಚಿ ಕೊಟ್ಟಱಿದರಂತಕಟಾ ಸಚಿವೇಂದ್ರ ಲಕ್ಷ್ಮಣಂ ॥
ಪೊಡವಿಯೊಳಂದೆ ಪುಟ್ಟಿದೊಡೆ ವಂದಿಗಳಿಷ್ಟಮನಿತ್ತು ಜೀವಮಂ ।
ಪಡೆಯನೆ ಸೂತಜಾತನ ದಧೀಚಿಯ ಖೇಚರ ಚಕ್ರವರ್ತಿಯಾ ॥

ಮ || ಸ್ರ|| ಸುಮನೋ ವಿನ್ಯಾಸದಿಂ ವಿಶ್ರುತ ವಿಬುಧಜನಾನೂನ ಸನ್ಮಾನ ದಾನ ।
ಕ್ರಮದಿಂದೀ ರಾಮಚಂದ್ರಾತ್ಮಜ ಸಚಿವ ಶಿರೋರತ್ನ ಲಕ್ಷ್ಮೀಧರಂಗಾರ್ ॥
ಸಮರೆಂದಾನಱಿಯೆಂ ಕೇಳ್ದೊಡೆ ಬಿಡು ಪೊಸತೇಂ ಪೋಗಿಯುಂ ಬಂದು ಕಲ್ಪ ।
ದ್ರುಮಮೊಂದಂ ಪೇೞ್ವ ಮತ್ತುಳ್ಳೊಡೆ ನುಡಿ ಜಗತೀಚಕ್ರದೊಳ್ ಸತ್ಯವೀಂದ್ರಾ ॥

ಮ || ಪುಸಿದಾನರ್ಜಿಸುವರ್ಥಮೇಂ ಮುನಿದ ಕೈಯೊಳ್ ಪೇೞಿಲೇ ವಂದಿ ವಾ ।
ದಿಸದಿರ್ ವಂಶ ವಿಶುದ್ಧಿಯೊಳ್ ವಿಭವದೊಳ್ ವಿಖ್ಯಾತಿಯೊಳ್ ನೀತಿಯೊಳ್ ॥
ಜಸದೊಳ್ ಜಾಣ್ಮೆಯೊಳತ್ಯುದಾರ ಗುಣದೊಳ್ ಗಾಂಭೀರ್ಯದೊಳ್ ಕೂರ್ತು ಲ ।
ಕ್ಷಿಸೆ ಲಕ್ಷ್ಮೀಧರನಲ್ಲದುಂಟೆ ಸಭೆಯೊಳ್ ಶ್ರೀದೇವರಾಜೇಂದ್ರನಾ ॥

ಕಂ || ಓದಿ ಪರವಂಚನಂ ಗೆ ।
ಯ್ವೋದುಗಳಂತಿರ್ಕೆ ಲಕ್ಷ್ಮಣಾಮಾತ್ಯನವೋ ॥
ಲಾದರಿಸಿ ಸಚಿವರಾದವ ।
ರೋದುವುದೋರಂತೆ ಪತಿ ಹಿತಾರ್ಥಾಗಮಮಂ ॥

ನೆಲದೊಳ್ ಪತಿಹಿತರಾವೆಂ ।
ದುಲಿವರ ನಾಲಗೆಯನಲುಗಲೀಯದ ಬಲ್ಲಂ ॥
ಕಲೆಯಾದುದು ಮುಂ ಕೀರ್ತಿಯ ।
ಕಲೆ ಮೂಜಗವಱಿಯೆ ಮಂತ್ರಿ ಲಕ್ಷ್ಮೀಧರನಾ ॥

ಆರಾನುಂ ದಾನೋದಕ ।
ಧಾರೆಯನೊಸೆದಾಂಪರವನಿ ಸುರರೊಳ್ ಸೆರಗಂ ॥
ಪಾರದೆ ಲಕ್ಷ್ಮಣನಂ ತಪಿ ।
ಧಾರೆಯನಾಂಪವರ್ಗಳುಂಟೆ ವಸುಧಾತಳದೊಳ್ ॥

ಮ || ಗಣನಾ ಮಾತ್ರಮೆ ದೇವರಾಯ ನರನಾಥಾಸ್ಥಾನದೊಳ್ ಮಾನವಾ ।
ಗ್ರಣಿಗಳ್ ಸೈತೆ ವಿಚಾರಿಪಾಗಳುಪಧಾ ಸಂಶುದ್ಧಿಯಿಂ ಬುದ್ಧಿಯಿಂ ॥
ಗುಣದಿಂ ಗೌರವದಿಂ ಪೊದಱ್ದಿಸೆವ ಮುದ್ರಾಮಾತ್ಯ ಯೋಗಂಧರಾ ।
ಯಣ ಚಾಣಕ್ಯ ಸುಮಂತ್ರರೊಳ್ ದೊರೆಗೆ ವಂದಂ ಮಂತ್ರಿ ಲಕ್ಷ್ಮೀಧರಂ ॥

ಮ || ಸ್ರ|| ಗುರು ದೈವಂ ಮೆಚ್ಚೆ ಸಿಚ್ಚಂ ಬಗೆ ದಣಿವ ಮನೋ ಭಕ್ತಿ ವಿದ್ವಜ್ಜನಂ ಬಾ ।
ಪುರೆ ಬಾಪೆಂದೆತ್ತಿ ಕೊಂಡಾಡುವ ವಿವಿಧಕಲಾ ಪ್ರೌಢಿ ಮಂದಿ ವ್ರಜಂ ಕಂ ॥
ಡಿರದಿಷ್ಟಾರ್ಥಂಗಳಂ ಕೊಂಡಡರೆ ಪೊಗೞ್ವ ವಿಶ್ರಾಣನಂ ವಿಶ್ವ ವಂದ್ಯಂ ।
ಚರಿತಂ ತಾನಾಗಲೀಸುನ್ನತಿವಡೆದನೊ ಲಕ್ಷ್ಮೀಧರಾಮಾತ್ಯ ವರ್ಯಂ ॥

ಕಂ॥ ಅವನಿಯನಾಕ್ರಮಿಪುದು ದಾ ।
ನ ವಿಚಿತ್ರಂ ಲೋಕವಱಿಯೆ ಶುಚಿಯೆನಿಸಿರ್ದುಂ ॥
ಶಿವನುಟ್ಟ ಸೀರೆಯುಂ ಪಿಡಿ ।
ದವಗಡಿಪಳ್ ಕೀರ್ತಿಲಕ್ಷ್ಮಿ ಲಕ್ಷ್ಮೀಧರನಾ ॥

ಅವನ ಹೆಂಡತಿ ದೇವಕಿ

ಪಿರಿಯಳೆನೆ ಸಂದ ಪೆರ್ಮೆಯೆ ।
ಪಿರಿಯಳ್ ಸೌಭಾಗ್ಯದಿಂದೆ ಪಿರಿಯಳ್ ಗುಣದಿಂ ॥
ಪಿರಿಯಳ್ ಪಾತಿವ್ರತ್ಯದೆ ।
ಪಿರಿಯಳೆನಲ್ ಪಿರಿಯಳಮುಮ ದೇವಕಿ ನೆಗಳ್ದಿಳ್ ॥

ಉ॥ ಪೂವಿನ ಮಾಲೆ ತುಂಬಿಗುರುಳ್ಗೀಶನ ಜೂಟಕೆ ಚಂದ್ರಲೇಖೆ ಲ ।
ಕ್ಷ್ಮೀ ವರನಾಳ್ದುರಕ್ಕೆ ವನ ಮಾಲೆ ಸಮಂತಮರ್ದಂತೆ ವಿಶ್ವ ಧಾ ॥
ತ್ರೀ ವಿನುತ ಪ್ರಸಿದ್ಧ ಗುಣ ಲಕ್ಷ್ಮಣ ಮಂತ್ರಿಗೆ ತಾನೆ ಸತ್ಕಳಾ ।
ಭಾವಕಿ ಸೇಸೆವೆತ್ತೆಸೆದ ದೇವಕಿ ವಲ್ಲಭೆಯಾದಳಾವಗಂ ॥

ತುಂಗಭದ್ರೆ

ಕಂ॥ ಎಡದ ಮಡದಿಗೆ ಬಿಗುರ್ತಾ ।
ಗೆಡೆವೆಱಿಗೊಂಡಮರ ನದಿಯದೇ ಸೊಬಗೆನೆ ನೇ ॥
ರ್ಪಡೆ ತುಂಗಭದ್ರೆ ದೇವನ ।
ಬಿಡದಡಸಿದ ವಾಮ ಭಾಗದೊಳ್ ಸೊಗಯಿಸುಗುಂ ॥

ಜಲಮಮೃತಮಯಂ ಸೊಗಯಿಪ ।
ಜಲ ವಿಹಗಂ ಪರಮ ಹಂಸಮಯಮೆಂದುಂ ತ ॥
ಜ್ಜಲಚರಮನಿಮಿಷಮಯಮೆನ ।
ಲ್ಕೆಳೆ ಬಣ್ಣಿಪನಾವನದಱ ತೀರದ ಸಿರಿಯಂ ॥

### ಭಾಸ ಮಹಾಕವಿಯ

# ಅಭಿಷೇಕ ನಾಟಕ

### (ಕನ್ನಡದ ಪರಿವರ್ತನೆ)

## *ದ್ವಿತೀಯಾಂಕ

(ಅನಂತರದಲ್ಲಿ ಕಕುಭನು ಪ್ರವೇಶಿಸುವನು)

ಕಕುಭ.—ಮಾಡತಕ್ಕ ಕೆಲಸಗಳು ಪ್ರಾಯಿಕವಾಗಿ ಮುಗಿದುದರಿಂದ ಸಕಲ ವಾನರ ಸೇನಾನಾಯಕರೂ ಆಹಾರ ಕಾರ್ಯದಲ್ಲಿ ಮಗ್ನರಾಗಿರುವರು. ಆದಕಾರಣ ನಾನೂ ಸ್ವಲ್ಪ ಆಹಾರವನ್ನು ತೆಗೆದುಕೊಳ್ಳುವೆನು. (ಹಾಗೆಯೇ ಮಾಡುವನು.)

ಬಿಲಮುಖ.—(ಪ್ರವೇಶಿಸಿ) ಮಹಾರಾಜನಾದ ಸುಗ್ರೀವನು ಹೀಗೆ ಅಪ್ಪಣೆ ಮಾಡಿರುವನು : 'ಪೂಜ್ಯನಾದ ರಾಮನ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುವ ನಿಮಿತ್ತವಾಗಿ ಎಲ್ಲ ದಿಕ್ಕುಗಳಲ್ಲಿಯೂ ಸೀತೆಯನ್ನು ಹುಡುಕಲು ಅಪ್ಪಣೆಕೊಡಿಸಿದ್ದ ವಾನರರೆಲ್ಲರೂ ಹಿಂದಿರುಗಿದರು. ಅವರಲ್ಲಿ ದಕ್ಷಿಣ ದಿಕ್ಕಿಗೆ ಹೋದ ಕುಮಾರ ಅಂಗದನ ವಿಷಯವನ್ನು ತಿಳಿದು ಶೀಘ್ರವಾಗಿ ಬರುವವನಾಗು' ಎಂದು. ಆದರೆ ಕುಮಾರನು ಎಲ್ಲಿ ಹೋಗಿರಬಹುದು ? (ಮುಂದೆ ಹೋಗಿ ನೋಡಿ) ಓಹೊ! ಇವನು ಆರ್ಯ ಕಕುಭನು ; ಈತನನ್ನು ಕೇಳಿ ತಿಳಿಯುವೆನು. (ಹತ್ತಿರಕ್ಕೆ ಹೋಗಿ) ಆರ್ಯನು ಕ್ಷೇಮವೆ?

ಕಕುಭ.—ಓಹೊ! ಬಿಲಮುಖ! ನೀನೆಲ್ಲಿಂದ?

ಬಿಲಮುಖ.—ಆರ್ಯನೆ! ಮಹಾರಾಜನಾಜ್ಞೆಯಿಂದ ಕುಮಾರನಾದ ಅಂಗದನನ್ನು ನೋಡಲು ಬಂದಿರುವೆನು.

ಕಕುಭ.—ಪೂಜ್ಯನಾದ ರಾಮನೂ ಮಹಾರಾಜನೂ ಕುಶಲರಷ್ಟೆ?

ಬಿಲಮುಖ.—ಅಹುದು.

ಕಕುಭ.—ಮಹಾರಾಜನ ಅಭಿಪ್ರಾಯವೇನು ?

ಬಿಲಮುಖ.—ಮಹಾರಾಜನಾದ ಸುಗ್ರೀವನು ಹೀಗೆ ಅಪ್ಪಣೆಮಾಡಿರುವನು— (ಎಂದು ಮೊದಲಿನಂತೆಯೇ ಹೇಳುವನು).

ಕಕುಭ.—ಸರಿ! ಅರ್ಧ ಕಾರ್ಯವಾಯಿತೆಂದರಿಯೆಯಾ?

ಬಿಲಮುಖ.—ಏನು? ಏನು?

ಕಕುಭ.—ಕೇಳು.

* ಕ. ಸಾ. ಪ. ಪತ್ರಿಕೆಯ ೧೪ನೆಯ ಸಂಪುಟದ ೩ನೆಯ ಸಂಚಿಕೆಯ ಪುಟ ೧೯೪ರಿಂದ ಮುಂದುವರಿದುದು.

ಚಂ॥ ಖಗ ಪತಿಯಿಂದೆ ಕೇಳ್ದು ರಘುನಾಥನ ಪತ್ನಿಯ ವೃತ್ತಮೆಲ್ಲಮಂ ।
ನಗ ವರಮಂ ಗಜೇಂದ್ರ ಯುತಮಂ ಸುಮಹೇಂದ್ರಮನಾಂತು ಕಾಯದ ॥
ಲ್ಲುಗುವ ವಿಶೇಷ ವೀರ್ಯ ಭರದಿಂದಮಮಾ ಅತಿ ಶೀಘ್ರದಿಂದೆ ಲಂ ।
ಕೆಗೆ ತೆರಬಿಲ್ಕೆ ಸಾಗರಮನೀಗಳೆ ದಾಂಟಿದನಲ್ತೆ ವಾಯುಜಂ ॥೧॥

ಆದಕಾರಣ ನಡೆ, ಕುಮಾರನ ಪಾದಮೂಲವನ್ನೇ ಸೇರುವ (ಎಂದಿರ್ವರೂ ತೆರಳುವರು).

(ಇದು ವಿಷ್ಕಂಭಕವು)

(ಬಳಿಕ ರಾಕ್ಷಸೀ ಗಣ ಪರಿವೃತೆಯಾದ ಸೀತೆಯು ಪ್ರವೇಶಿಸುವಳು)

ಸೀತೆ.—ಹಾ! ಅಯ್ಯೋ! ಮಂದ ಭಾಗಿನಿಯಾದ ನಾನು ಅತಿ ಧೀರೆಯಾಗಿರುವೆ ನಲ್ಲವೆ! ಆರ್ಯಪುತ್ರನನ್ನು ಬಿಟ್ಟು, ರಾಕ್ಷಸ ರಾಜ ಭವನಕ್ಕುಯ್ಯಲ್ಪಟ್ಟು, ಹಿತವೂ ಯೋಗ್ಯವೂ ಅಲ್ಲದ ಸ್ವೇಚ್ಛಾಲಾಪಗಳನ್ನು ಕೇಳುತ್ತಿದ್ದರೂ ಭಾಗ್ಯಹೀನೆಯು ಬದುಕಿರುವೆನಲ್ಲಾ! ಅಥವಾ, ಆರ್ಯಪುತ್ರನ ಕಣಿಯ ನಂಬಿಕೆಯಿಂದ ಹೇಗಾದರೂ ಪ್ರಾಣವನ್ನುಳಿಸಿಕೊಂಡಿರುವೆನು. ಆಹಾ! ಇದೇನಿದು! ಜ್ವಲಿಸುತ್ತಿರುವ ಕುಲಿಮೆಯ ಉರಿಯಲ್ಲಿ ನೀರನ್ನು ಚೆಲ್ಲಿದಂತೆ ಈಗ ತಾನೇ ನನ್ನ ಮನಸ್ಸಿಗೆ ಸ್ವಲ್ಪ ಮಟ್ಟಿಗೆ ನೆಮ್ಮದಿಯುಂಟಾಗುತ್ತಿರುವುದು. ಒಂದು ವೇಳೆ ಆರ್ಯಪುತ್ರನು ನನ್ನ ವಿಷಯದಲ್ಲಿ ಪ್ರಸನ್ನನಾಗಿರಬಹುದೆ?

(ಆಮೇಲೆ ಕೈಯಲ್ಲಿ ಉಂಗುರವನ್ನು ಹಿಡಿದ ಹನುಮಂತನು ಪ್ರವೇಶಿಸುವನು)

ಹನೂ.—(ಲಂಕೆಯನ್ನು ಪ್ರವೇಶಿಸಿ) ಅಹಾ! ರಾವಣನ ಮನೆಯ ಸೌಂದರ್ಯವು ಸೊಗಸಾಗಿರುವುದು.—

ಚಂ॥ ಕನಕದೆ ಗೆಯ್ದ ಚಿತ್ರತರ ತೋರಣದೋಳಿಯನಾಂತು ಮುತ್ತೆಯುಂ ।
ಘನತರಮಾದ ರನ್ನ ಪವಳಂಗಳಿನೊಪ್ಪುವ ಭೂಮಿ ಭಾಗದಿಂ ॥
ದನುಗೊಳಿಸುತ್ತುಮಿಟ್ಟ ಸುವಿನಿರ್ಮಲಮಾದ ವಿಮಾನ ಪಙ್ಕ್ತಿಯಿಂ ।
ದನಿಮಿಷ ರಾಜಧಾನಿಯವೊಲಂಬರದೊಳ್ ಗಡ ಲಂಕೆ ರಾಜಿಕುಂ ॥೨॥

ಅಹಹಾ—

ಕಂ॥ ವರ ರಾಜಲಕ್ಷ್ಮಿಯಂ ಮೇಣ್ ।
ಪರತರವಿಾ ಪುರಿಯನೊಂದಿಯುಂ ದಶಗ್ರೀವಂ ॥
ನೆರೆ ದುರ್ಮಾರ್ಗದೊಳಡಿಯಿ ।
ಟ್ಟಿರುವಿಕೆಗೆ ಸಮೂಲಮಾಗಿ ಕೇಡಂ ಕಜಿಪಂ ॥೩॥

(ಎಂದು ಸುತ್ತಲೂ ಸಂಚರಿಸಿ) ಲಂಕೆಯನ್ನೆಲ್ಲ ನಾನು ಸುತ್ತಿ ನೋಡಿದಂತಾಯಿತು.

ಚಂ॥ ಒಳಹೊರಗೋಣೆಗಳ್ ಬಳಿಯ ಸಾಲೆ ವಿಮಾನಗಳೋಳಿ ವಿಾಯುವ ।
ಸ್ಥಳವರಸಿರ್ಪಗಾರಮುರು ದೇವಕುಲಂ ಕರುಮಾಡಮಂಗಳಂ ॥

ಪಳವನೆ ಪಾನಶಾಲೆ ಪವಡಿಪ್ಪೆಡೆಯಂ ಬಲವಂದೆನೆಲ್ಲಮಂ।
ಬಳಸಿದೆನಾದೊಡಂ ನೃಪತಿಪತ್ನಿಯನೀಕ್ಷಿಸದಾದೆನಕ್ಕಟಾ ॥ ೪॥

ಅಯ್ಯೋ! ನನ್ನ ಶ್ರಮವೆಲ್ಲವೂ ವ್ಯರ್ಥವಾಯಿತು. ಇರಲಿ, ಈಯುಪ್ಪರಿಗೆಯ ತುದಿಯನ್ನು ಸೇರಿ ನೋಡುವೆನು. (ಹಾಗೆಯೇ ಮಾಡಿ) ಓ! ಇದು ಪ್ರಮದವನ ರಾಶಿಯು. ಇದನ್ನು ಪ್ರವೇಶಿಸಿ ಪರೀಕ್ಷಿಸಿ ನೋಡುವೆನು. (ಪ್ರವೇಶಿಸಿ ನೋಡಿ) ಆಶ್ಚರ್ಯ! ಪ್ರಮದವನ ಸಮೃದ್ಧಿಯು! ಇಲ್ಲಿಯಾದರೊ—

ಕಂ॥ ಕನಕಂ ಪವಳಂ ಪಚ್ಚೆಯಿ।
ನನುಗೊಳಿಸಿದ ಪೆರ್ಮರಂಗಳಿಂದೆಸೆವ ತಳಂ॥
ಮಿನುಪಗಗಳ್ ಗಗನದೊಳಿ।
ರ್ಪನಿಮಿಷಪತಿ ವಿಹರಿಪೆಡೆಗೆ ಸಮನಾಗೆಸೆಗುಂ ॥ ೫॥

ಮತ್ತಂ—

ಮ॥ ಸಲೆ ಕಂಡೆಂ ಸುವಿಚಿತ್ರ ಧಾತುರಸದಿಂ ರಂಜಿಪ್ಪ ಶೈಲಂಗಳಂ।
ಪಲವುಂ ವಾರಿಚರಾಂಡಜಂಗಳಿನಮೋಘಂ ತೋರ್ಪ ಕಾಸಾರಸಂ॥
ಕುಲಮಂ ಪುಷ್ಪಫಲಾಳಿಯಂ ಸತತಮಾಂತಿರ್ಪ ದ್ರುಮಸ್ಥಾನಮಂ।
ಫಲವೇಂ ಪಾರ್ದೊಡಿವಂ ಖಳಾಲಯದೊಳಾ ವೈದೇಹಿಯಂ ಕಾಣದಾಂ॥ ೬॥

ಓವೊ! ಇದೇನು ಈ ಪ್ರದೇಶದಲ್ಲಿ ಬೆಳಕಿನಂತೆ ಕಾಣುತ್ತಿರುವುದು? ಇರಲಿ, ಅದನ್ನು ನೋಡುವೆನು. (ಹೋಗಿ ನೋಡಿ) ಆಶ್ಚರ್ಯ! ಈಕೆ ಯಾರು?

ಕಂ॥ ಸವಿಕೃತಿ ರೂಪಿಣಿಯರ್ ದಾ।
ನವಿಯರ ಬಳಿಸಿಂದೆಯಿಾ ಸುಮಧ್ಯಮೆ ನೀಲ॥
ಚ್ಛವಿ ಮೇಘ ಮಧ್ಯದೊಳ್ ಮಿನು।
ಗುವ ವಿದ್ಯುಲ್ಲೇಖೆಯಂತೆ ಶೋಭಿಸುತಿರ್ಪಳ್ ॥ ೭॥

ಈಕೆಯು—

ಚಂ॥ ಅಸಿತ ಸರೀಸೃಪಕ್ಕೆ ಸಮನಪ್ಪ ಸುವೇಣಿಯನೊಂದನಾಂತು ಸೈ।
ತೆಸೆವ ತಳೋದರಂಬಡೆದು ಸಂತತಮೋಪನೊಳಿಟ್ಟ ಚಿತ್ತನಂ॥
ಬಿಸುಟುಣಿಸಂ ಬಬಿಲ್ದು ಬಡವಾಗುತೆ ಬಾಷ್ಪದೆ ನಾಂದ ವಕ್ತ್ರದಿಂ।
ಬಿಸಿಲೊಳಗಂದಮಂ ಕಳೆದ ತಾಮರೆವೂಸರದಂತೆ ತೋರ್ದಪಳ್ ॥ ೮॥

ಆ! ಇದೇನು ದೀವಟಿಗೆಗಳ ಸಾಲು! (ನೋಡಿ) ಓಹೋ! ರಾವಣನು.—

ಮ॥ ಮಣಿಯಿಂದೊಪ್ಪುವ ಮೌಳಿಯಿಂ ಮಿನುಗುತುಂ ಕೆಂಪಾಂತ ಕೆರ್ಗಣ್ಗಳಿಂ।
ದೆಸೆಸಲ್ಕಾಡೆ ಮದಾಭಿಯುಕ್ತ ಗತಿಯಿಂ ಮತ್ತೇಭ ಸಲ್ಲೀಲೆಯಿಂ॥
ಗಣಿತಾಶೇಷ ವಧೂಜನಂಗಳೊಡನೈತರ್ಪೀ ಖಳಾಧೀಶನೀ।
ಕ್ಷಣಕಪ್ಪಂ ಹರಿಣೀ ಸಮೂಹ ಸಯುತಂ ಕಂಠೀರವಂಬೋಲ್ ಕರಂ ॥ ೯॥

ಈಗ ನಾನೇನು ಮಾಡಲಿ? (ಚಿಂತಿಸಿ ನೋಡಿ) ಸರಿ! ತಿಳಿಯಿತು. ಈಯಸುಗೆಯ ಮರವನ್ನೇರಿ ಪೊಟ್ಟರೆಯೊಳಗೆ ಕುಳಿತು ವರ್ತಮಾನವನ್ನೆಲ್ಲ ಚೆನ್ನಾಗಿ ತಿಳಿಯುವೆನು. (ಹಾಗೆಯೇ ಮಾಡುವನು).

(ಅನಂತರ ರಾವಣನು ಪರಿವಾರದೊಡನೆ ಬರುವನು)

ಮ ॥ ಧುರದೊಳ್ ಕ್ರುದ್ಧ ಸುರೇಭ ದಂತ ಕುಲಿಶ ವ್ಯಾಲೀಢ ವಕ್ಷಸ್ಥಳಂ ।
ಶರದೊಳ್ ನಿರ್ಜರ ದೈತ್ಯ ದಾನವ ಚಮೂ ವಿದ್ರಾವಣಂ ರಾವಣೇ ॥
ಶ್ವರನೆನ್ನಂ ತೊರೆದೀ ವಿವೇಕ ರಹಿತಳ್ ಮುಗ್ಧಾಕ್ಷಿ ಯಾ ಸೀತೆಯಾ ।
ನರನೊಳ್ ರಾಗದಿನಿರ್ಪುದಕ್ಕಟಮಿದೆಲ್ಲಂ ದೈವ ವಿಘ್ನಂ ದಿಟಂ ॥ ೧೦ ॥

(ಮೇಲೆ ನೋಡಿ) ಇವನು—ಈ ಚಂದ್ರಮನು—

ಕಂ ॥ ವರ ರೂಪ್ಯ ರಚಿತ ಮುಕುರ ।
ಪ್ರರುಚಂ ಕುಮುದಾಪ್ತ ಬಂಧುವಿದೆಕೋ ಚಂದ್ರಂ ॥
ಕಿರಣಾಳಿಯಿನೆನ್ನೆರ್ದೆಯಂ ।
ಕೊರೆಯುತೆ ಬಾನೊಳಗೆ ಸೊಗದೆ ಮೂಡುತ್ತಿರ್ಪಂ ॥ ೧೧ ॥

(ಮುಂದೆ ಬಂದು) ಈ ಸೀತೆಯು ಮರದ ಬುಡವನ್ನು ಸೇರಿ ಧ್ಯಾನ ಸಂಪೀತ ಚಿತ್ತೆಯಾಗಿ, ಉಪವಾಸದಿಂದ ಕಳೆಗುಂದಿದ ಮುಖವುಳ್ಳವಳಾಗಿ, ತನ್ನ ದೇಹದಲ್ಲಿಯೇ ಹುದುಗಿಕೊಳ್ಳುತ್ತಿರುವಳೋ ಎಂಬಂತೆ ಅತಿ ಗೂಢವಾಗಿಯೂ ಕೃಶವಾಗಿಯೂ ಇರುವ ಉದರವನ್ನು ಹೊಂದಿ, ರಕ್ಕಸಿಯರ ನಡುವೆ, ಮೋಡ ಮುಚ್ಚಿದಂದಿನ ಚಂದ್ರ ಲೇಖೆಯಂತೆ ಕುಳಿತಿರುವಳು. ಇವಳಾದರೊ—

ಕಂ ॥ ಭೋಗವುನೆನ್ನುಮನೀ ಭೂ ।
ಭಾಗ್ಯಮುಮಂ ತೊರೆಯುತಾ ಮನುಷ್ಯನೊಳೇ ಸೈ ॥
ತಾಗಿಸಿ ಮಾನಸಮಂ ಬಸ ।
ಮಾಗದೆಯಿರ್ಪಳ್ ಗಡಾ ಇದಕ್ಕಾನೇವೆಂ ॥ ೧೨ ॥

ಹನೂಮಾನ್.—ಓಹೊ! ಚೆನ್ನಾಗಿ ತಿಳಿಯಿತು.

ಕಂ ॥ ಇವಳೇ ಮೈಥಿಲಿಯಾ ಅರ ।
ಗುವರಿ ಸಮಂತೆಮ್ಮ ರಾಮ ಹೃದಯೇಶ್ವರಿ ದಲ್ ॥
ತವೆ ಸಿಂಗಮನೀಕ್ಷಿಸಿ ಮಿಡು ।
ಕುವ ಮೃಗಿಯಂದದೊಳೆ ಸುಗಿದು ತಪಿಸುತ್ತಿರ್ಪಳ್ ॥ ೧೩ ॥

ರಾವಣ.—(ಹತ್ತಿರಕ್ಕೆ ಬಂದು)

ಕಂ ॥ ಬಿಡು ಭಾಮಿನಿ ಕಡು ನೋಂಪಿಯ ।
ನೊಡೆವೆರೆ ಸಕಲಾವಯವದಿನೆನ್ನಂ ಸೀತೇ ॥
ತಡೆಯದೆ ತೊಱೆಯೆುರಸಿಕನಂ ।
ಜಡಜಾಕ್ಷಿ ಗತಾಯುಷಂ ಮನುಷ್ಯನನವನಂ ॥ ೧೪ ॥

ಸೀತೆ.—(ಸ್ವಗತ) ಛೀ! ಈ ದುರುಳ ರಾವಣನು ಸಗೋಪಾದವನಲ್ಲವೆ! ವಚನ ಸಿದ್ಧಿಯೆಂಬುದನ್ನೂ ಅರಿಯದಿರುವನು.

ಹನೂಮಾನ್.—(ಕ್ರೋಧದಿಂದ–ಸ್ವಗತ) ಆಃ! ಈ ರಾವಣನು ಎಷ್ಟು ಕೊಬ್ಬಿರುವನು!

ಕಂ ॥ ಇನ ಕುಲ ಸಂಭವನಾ ರಾ ।
ಮನ ತೋಳ್ಬಲಮುಂ ಮಹಾ ಶರಾಸನಮುಂ ಮೇಣ್ ॥
ಘನ ಸಾಯಕಮುಮನಱಿಯದೆ ।
ತನುವೆರ್ಚಿಂತುಟು ಗತಾಯುಷಂ ಗಡ ನೊಲ್ವಂ ॥ ೧೫ ॥

ಆಹಾ! ರೋಷವನ್ನು ತಡೆದುಕೊಳ್ಳಲಾರೆನು. ಆಗಲಿ, ಪೂಜ್ಯನಾದ ರಾಮನ ಕೆಲಸವನ್ನು ನಾನೇ ಸಾಧಿಸುವೆನು; ಅಥವಾ,

ಕಂ ॥ ರಾವಣನಂ ನಾಂ ಕೊಂದೊಡೆ ।
ಯಾವಿರ್ಭವಿಸುವುದು ಕಾರ್ಯಸಿದ್ಧಿ ದಿಟಂ ಮೇಣ್ ॥
ಭಾವಿಸಲಂತಾಗದೆಯುವ ।
ನೇ ವಧಿಸಿದೊಡೆನ್ನನಳಿಗುಮುರು ಕಾರ್ಯ ಭರಂ ॥ ೧೬ ॥

ರಾವಣ.—

ಕಂ ॥ ವರ ತನು ತನು ಗಾತ್ರಿ ಮನೋ ।
ಹರ ನೇತ್ರೇ ಕುವಲಯಸ್ರುಜಕ್ಕೆಣೆ ಜಡೆಯಂ ॥
ಧರಿಸುತೆ ಬಹು ವಿಧ ಮಣಿ ಶ್ರೇ ।
ಖರನೀ ದಶಶಿರನನೊಂದು ಮನಪುಡು ದೇವೀ ॥ ೧೭ ॥

ಸೀತೆ.—ಹಾ! ವಿಧಿಯೇ! ಈ ಪಾಪಿ ರಕ್ಕಸನಿನ್ನೂ ಜೀವಿಸಿರುವುದನ್ನು ನೋಡಿದರೆ ಧರ್ಮವೇ ಬದಲಾಯಿಸಿದ ಹಾಗಿದೆಯಲ್ಲಾ!

ರಾವಣ.—ಎಲೌ ದೇವಿ!

ಸೀತೆ.—ಶಾಪವು.

ರಾವಣ.—ಹಾ! ಹಾ!! ಹಾ!!! ಪತಿವ್ರತೆಯ ತೇಜಸ್ಸು ಆಶ್ಚರ್ಯಕರವು.

ಕಂ ॥ ಸುರಪಾದಿ ದೇವರುಂ ದನು ।
ಜರುಮೆನ್ನಿಂ ಭಗ್ನರಾದರಾಜಿಯೊಳಿಂತಾ ॥
ಗಿರುತಿರೆ ಸೀತೆಯ ಮೂಱಿ ।
ಕ್ಷರಂಗಳಿಂ ಮೋಹವಾಂತೆನಾ ನಾನೀಗಳ್ ॥ ೧೮ ॥

(ತೆರೆಯಲ್ಲಿ) ಮಹಾರಾಜನಿಗೆ ಜಯವಾಗಲಿ. ಭೋ! ದೇವಾ! ಸ್ವಾಮಿನ್! ಲಂಕೇಶ್ವರಾ! ಹತ್ತು ಗಳಿಗೆಗಳಾದುವು; ಸ್ನಾನ ವೇಳೆಯು ಮೀರುತ್ತಿರುವುದು; ಹೀಗೆ ಬಿಜಯಮಾಡಿಸಬೇಕು. (ಪರಿವಾರದೊಡನೆ ರಾವಣನು ತೆರಳುವನು).

ಹನೂಮಾನ್.—ಆಃ! ರಾವಣನು ತೆರಳಿದನು; ರಕ್ಕಸಿಯರೂ ನಿದ್ರಿಸಿದರು. ದೇವಿಯನ್ನು ಸೇವಿಸಲು ಇದೇ ಸಮಯವು. (ಕೋಟರದಿಂದ ಹೊರಗೆ ಬಂದು) ಕಲ್ಯಾಣೀ! ವಿಜಯವಾಗಲಿ.

ಕಂ ॥ ಅಟ್ಟಿದನೆನ್ನಂ ರಾಮಂ ।
ಧಿಟ್ಟರಸಂ ನೇಱಿದಂ ಸಮಂತುರೆ ನಿನ್ನಾ ॥
ಕಟ್ಟಿರಕದ ಬೇಗೆಯೊಳಳ ।
ವಟ್ಟೆಗಳ್ ಕೊಱಗಿ ಕೊಱಗಿ ಕುಂದಿದ ವಗೆಯಂ ॥ ೧೯ ॥

ಸೀತೆ.—(ಆತ್ಮಗತ) ಇವನಾವನು? ಪಾಪಿ ರಾಕ್ಷಸನೇನಾದರೂ ತಾನು ಆರ್ಯಪುತ್ರನ ಸಂಬಂಧಿಯೆಂದು ನೆವಮಾಡಿಕೊಂಡು ಕಪಿ ರೂಪದಿಂದ ನನ್ನನ್ನು ಮೋಸಗೊಳಿಸಲು ಬಂದಿರಬಹುದೆ? ಆಗಲಿ! ಸುಮ್ಮನೆಯೇ ಇರುವೆನು.

ಹನೂಮಾನ್.—ಇದೇನು! ಪೂಜ್ಯೆಯು ನಂಬದಿರುವಳು. ತಾಯೇ! ಬೇರೆ ಎಣಿಸಬೇಡ, ಕೇಳು—

ಕಂ ॥ ಇಕ್ಷ್ವಾಕು ವಂಶ ದೀಪನ ।
ಪಕ್ಷಂಬಿಡಿದಾ ಹರೀಶ್ವರಂ ನಿನ್ನಂ ಪ್ರ ॥
ತ್ಯಕ್ಷಿಸೆ ಕಳುಪಿದನೆನ್ನಂ ।
ಲಕ್ಷಿಪುದಿದು ನನ್ನಿ ತಾಯೆ ನಾಂ ಹನುಮಂತಂ ॥ ೨೦ ॥

ಸೀತೆ.—(ಸ್ವಗತ) ಯಾರಾದರೂ ಆಗಿರಲಿ; ಆರ್ಯಪುತ್ರನ ಹೆಸರನ್ನು ಕೊಂಡಾಡುವುದರಿಂದ ಇವನೊಡನೆ ಮಾತಾಡುವೆನು. (ಪ್ರಕಾಶ) ಭದ್ರ! ಆರ್ಯಪುತ್ರನ ವರ್ತಮಾನವೇನು?

ಹನೂಮಾನ್.—ಮಾತೆ! ಲಾಲಿಸು.

ಮ ॥ ಉಣಿಸಂ ಬಿಟ್ಟು ಬಱಿಲ್ದು ಬೆಱ್ಪುವಡೆದುಂ ಕ್ಲಾಮಾನನಂದಾಱ್ದುಮೇ ।
ಕ್ಷಣದೊಳ್ ನಿನ್ನ ಗುಣಂಗಳಂ ಗಣಿಸುತುಂ ಕಂಗೆಟ್ಟು ಲಾವಣ್ಯದಿಂ ॥
ದೆಣಿಸುತ್ತುಂ ತನು ಹೇಯಮೆಂದು ಧೃತಿಗುಂದುತ್ತುಂ ಮನೋಜಾತನೈ ।
ಗಣೆಯಿಂದಂ ಕಡು ನೊಂದು ಕಂಬನಿಯನೊಂದಿರ್ಪಕ್ಷಿಯಿಂದಿರ್ಪಂ ॥ ೨೧ ॥

ಸೀತೆ.—(ತನ್ನಲ್ಲಿಯೇ) ಹಾಹಾ! ಆರ್ಯಪುತ್ರನು ಹೀಗೆ ಅಱಿಲುವನೆಂಬುದನ್ನು ಆಲಿಸಿ ನಿರ್ಭಾಗ್ಯೆಯು ನಾಚಿಕೆಪಡುವೆನು. ಈ ವಾನರನು ಹೇಳುವುದು ನಿಜವೇ ಆಗಿದ್ದರೆ ಆರ್ಯಪುತ್ರನ ವಿರಹ ಪರಿಶ್ರಮವೂ ಕೂಡ ನನಗೆ ಸಫಲವಾಯಿತೆಂದೇ ಅಱಿಯುವೆನು. ಈ ಜನದ ವಿಷಯದಲ್ಲಿ ಆರ್ಯಪುತ್ರನಿಗಿರುವ ಮರುಕವನ್ನೂ ಬಱಿಲಿಕೆಯನ್ನೂ ಕೇಳಿ ನನ್ನ ಚಿತ್ತವು ಸುಖ ದುಃಖಗಳ ಮಧ್ಯದಲ್ಲಿ ತೂಗಾಡುವಂತಿರುವುದು. (ಪ್ರಕಾಶ) ಭದ್ರ! ಆರ್ಯಪುತ್ರನನ್ನು ನೀವು ಸೇರಿದ ಬಗೆ ಹೇಗೆ?

ಹನೂಮಾನ್.—ದೇವಿ! ಚಿತ್ತವಿಸು—

ಮ || ಇರಿದುಂ ದಾನವರಾಜನಂ ಸಮರದೊಳ್ ತ್ವತ್ಕಾರಣಂ ರಾಮನಾ ।
ಧರೆಯೆಲ್ಲಕ್ಕಧಿನಾಥನಂ ಗೆಯ್ಯುಲೊಡಂ ಸುಗ್ರೀವನೆಮ್ಮೆಲ್ಲರಂ ||
ಭರದಿಂದಟ್ಟಿದನಿಂತು ನಿನ್ನನರಸಲ್ ದಿಗ್ಭಾಗಮೆಲ್ಲಕ್ಕಮಾಂ ।
ಬರುತಾ ಪರ್ದಿನ ಮಾತಿನಿಂದೆ ಬಳಿಯಂ ಸಾರ್ದೆಂ ನೃಪೇಂದ್ರಾತ್ಮಜೇ || ೨೨ ||

ಮತ್ತು, ಹೀಗೆಯೇ........

ಸೀತೆ.—ಆಹಾ! ಆರ್ಯಪುತ್ರನನ್ನು ಈ ರೀತಿ ದುಃಖಕ್ಕೆ ಗುರಿಗೆಯ್ದ ದೈವವು ನಿಜವಾಗಿಯೂ ನಿಷ್ಕರುಣೆಯು.

ಹನೂಮಾನ್.—ಆರ್ಯೆ! ಅಳಲಿದಿರು. ರಾಮನಾದರೊ—

ಕಂ || ಆಂತು ಮಹಾಧನುವಂ ಬಳಿ ।
ಸಾಂತು ಮಹಾಕಪಿಕದಂಬಮಂ ರಾವಣನಂ ||
ಸ್ವಾಂತಾಭಿಮತಂ ಕೊಲ್ಲ ।
ಲ್ಕೆಂತುಂ ಲಂಕಾಪುರಕ್ಕೆ ತಲ್ಪಿದೆ ಬರ್ಪಂ || ೨೩ ||

ಸೀತೆ.—ಆ! ನಾನೇನಾದರೂ ಕನಸನ್ನು ಕಂಡೆನೇ! ಭದ್ರ! ಇದು ದಿಟವೇ? ನಾನರಿಯೆನು.

ಹನೂಮಾನ್.—(ತನ್ನಲ್ಲಿ) ಅಯ್ಯೋ! ಕಷ್ಟ! ಕಷ್ಟ!

ಕಂ || ಪತಿವತ್ಸಲೆಯಾದೀ ಸತಿ ।
ಪತಿಯ ಪರಾಕ್ರಮವನಱಿತುಮಿಂತುಟು ಶೋಕಾ ||
ವೃತೆಯಾಗಿ ಶರೀರಾಂತರ ।
ಗತೆಯಂದದೆ ಪೇಳ್ದಳಿ ನೆಚ್ಚದಿರ್ದಪಳಾಹಾ || ೨೪ ||

(ಪ್ರಕಾಶ) ಪೂಜ್ಯೆ! ಇದೊ, ಈಗಲೇ—

ಕಂ || ವರ ಚಾಪ ಹಸ್ತನಂ ನಿ ।
ನ್ನರಸನನರಗುವರಿಯಿಲ್ಲಿಗಾಂ ಕರೆತರ್ಪೆಂ ||
ತೊರೆ ಸಂದೇಹಮನೆನ್ನೊಳ್ ।
ನರವರನೊಡನಿರ್ದು ದುಗುಡಮಂ ಪರಿಹರಿಸೌ || ೨೫ ||

ಸೀತೆ.—ಭದ್ರ! ನನ್ನ ಈಯವಸ್ಥೆಯನ್ನು ಕೇಳಿ ಆರ್ಯಪುತ್ರನು ದುಃಖ ಪರವಶನಾಗದ ಹಾಗೆ ನನ್ನ ವೃತ್ತಾಂತವನ್ನಾತನಿಗೆ ಬಿನ್ನವಿಸು.

ಹನೂಮಾನ್.—ದೇವಿಯಪ್ಪಣೆಯಂತಾಗಲಿ.

ಸೀತೆ.—ನಡೆ, ಕಾರ್ಯವು ಕೈಗೂಡಲಿ.

ಹನೂಮಾನ್.—ಅನುಗೃಹೀತನಾದೆನು. (ನಡೆದು) ನಾನು ಬಂದುದನ್ನು ರಾವಣನಿಗೆ ಹೇಗೆ ತಿಳಿಯಿಸಲಿ? (ಚಿಂತಿಸಿ) ಗೊತ್ತಾಯಿತು.

ಉ ॥ ಕೋಗಿಲೆವಿಂಡಿನಿಂ ಕಲೆತು ತಾವರೆ ತಂಡದಿಸಿಂಬುವೆತ್ತು ಸೊಂ ।
ಪಾಗೆಸೆವಾವನೀಜ ತತಿಯಿಂ ಮಿಸುಪೀ ವನಮುಂ ತ್ರಿಕೂಟಮುಂ ॥
ಬೀ ಗಿರಿಯುಂ ಮುಗಿಲ್ಸಿರಿಯುನೆನ್ನಡಿ ಕೈಗಳಿನಿಕ್ಕಿ ಧೂಳಿಯುಂ ।
ತಾಗಿಸಿ ರಾವಣಂ ಮನದೆ ಪರ್ಜನ್ಯಗೆಯಂ ಪಡುವಂತೆ ಮಾಡುವೆಂ ॥ ೨೬ ॥

---

## ತೃತೀಯಾಂಕ

ಶಂಕುಕರ್ಣ.—(ಪ್ರವೇಶಿಸಿ) ಯಾರದು ಕಾಂಚನ ತೋರಣದ ಬಾಗಿಲನ್ನು ಕಾಯುವವರು ?

ಪ್ರತಿಹಾರಿ.—(ಪ್ರವೇಶಿಸಿ) ಅಯ್ಯಾ ! ನಾನು ವಿಜಯೆಯು; ಮಾಡತಕ್ಕುದೇನು ?

ಶಂಕುಕರ್ಣ.—ವಿಜಯೇ ! ಮಹಾರಾಜನಾದ ಲಂಕೇಶ್ವರನ ಸನ್ನಿಧಿಗೆ ಬೇಗ ಹೋಗಿ ಅಶೋಕವನವೆಲ್ಲವೂ ಹಾಳಾಯಿತೆಂದು ಹೀಗೆ ಅರಿಕೆಮಾಡು :—

ಉ ॥ ಆದರ ಭಾವಮುಳ್ಳ ಕತದಿಂದೆಯುದಾವೆಡೆ ರಾಜಪತ್ನಿ ಮುಂ ।
ಡೋದರಿ ಕೊಯ್ಯಳೋ ತಳಿರ್ಗಳಂ ಮಿಗೆ ಸಿಂಗರದಬ್ಬಿಯಿರ್ದೊಡಂ ॥
ಮೋದುತೆ ತೀಡನೆಲ್ಲಿ ಮಲಯಾನಿಲನಂಜುತೆ ಬಾಲಶಾಖಿ ಮುಂ ।
ತಾದುವನಾ ಅಶೋಕ ವನದೊಳ್ ಸಕಲಂ ಸಲೆ ಭಗ್ನಮೆಂದೆನಲ್ ॥ ೧ ॥

ಪ್ರತಿಹಾರಿ.—ಅಯ್ಯಾ ! ನಿತ್ಯವೂ ಪ್ರಭುವಿನ ಪಾದಮೂಲದಲ್ಲಿಯೇ ಸೇವಿಸುತ್ತಿರುವ ಜನದ ಅಪೂರ್ವ ಸಂಭ್ರಮವಿದಾವುದು ?

ಶಂಕುಕರ್ಣ.—ಎಲೌ ! ಕೆಲಸವು ಕೆಡುವುದು, ಬೇಗನೆ ಹೋಗಿ ಬಿನ್ನವಿಸು.

ಪ್ರತಿಹಾರಿ.—ಇದೊ ಬಿನ್ನವಿಸುವೆನು. (ತೆರಳುವಳು)

ಶಂಕುಕರ್ಣ.—(ಮುಂದೆ ನೋಡಿ) ಓ ! ಮಹಾರಾಜನಾದ ಲಂಕೇಶ್ವರನು ಇತ್ತಲಾಗಿಯೇ ಬರುತ್ತಿರುವನು. ಇವನಾದರೊ—

ಕಂ ॥ ವರ ವಿಮಲ ಕಮಲ ಸಮ ಭೀ ।
ಕರ ನೇತ್ರಂ ಮಿಸುಪ ಮಿಸುನಿ ದೀವಿಗೆವೆಳಕಿಂ ॥
ತ್ವರಿತದಿನಿದೆ ಕೊಳ್ ಕೋಪದೆ ।
ಬರುತಿರ್ಪಂ ಪ್ರಳಯ ಕಾಲದಾದಿತ್ಯಂಬೋಲ್ ॥ ೨ ॥

(ಆಮೇಲೆ, ಮೇಲೆ ಹೇಳಿದ ಹಾಗೆ ರಾವಣನು ಬರುವನು)

ರಾವಣ.—

ಕಂ ॥ ಆಯೇನಿದು ಪೊಸನುಡಿ ಸರಿ ।
ಯಾಯೆಲ್ಲಮುಸಿರ ಬೇಗದಿಂದಂ ಘಡಯೇಂ ॥
ಸಾಯಲ್ಕಿಚ್ಛಿಪ ಧೀರಂ ।
ಸೈಯಾವಂ ವನ ವಿಭಂಗದೇಡಿಪನೆನ್ನಂ ॥ ೩ ॥

ಶಂಕುಕರ್ಣ.—(ಸಮೀಪಿಸಿ) ಮಹಾರಾಜನೆ! ವಿಜಯಿಯಾಗು. ಎಲ್ಲಿಂದಲೋ ಇಲ್ಲಿಗೊಂದು ಕೋಡಗವು ಬಂದು ಅಶೋಕ ವನವನ್ನೆಲ್ಲವನ್ನೂ ಧೂಳಿ ಮಾಡಿಬಿಟ್ಟಿತು.

ರಾವಣ.—(ತಿರಸ್ಕಾರದಿಂದ) ಏನು? ಕೋಡಗವೆ? ಸರಿ! ಹೋಗಿ ಹಿಡಿದು ಕೊಂಡು ಬೇಗ ಬಾ.

ಶಂಕುಕರ್ಣ.—ಮಹಾರಾಜನಾಜ್ಞೆ. (ಎಂದು ತೆರಳುವನು)

ರಾವಣ.—

ಕಂ ॥ ರಣದೊಳ್ ಮೂಲೋಕಮನುರೆ ।
ದಣಿಯಿಸಿದೆನಗಾ ಸುರರ್ ಕುಮುದವಿದನೆಂತೋ ॥
ಎಣಿಸಿರಲೊಡನೆಯೆ ಪಡೆಗಮ ।
ದುರ್ಣಿಗಳ್ ಸಲೆ ತಮ್ಮ ಮೌಢ್ಯಕೆಣೆಯುಂ ಫಲಮುಂ ॥ ೪ ॥

ಶಂಕುಕರ್ಣ.—(ಬಂದು) ಮಹಾರಾಜನೇ! ಆ ವಾನರನು ಮಹಾ ಪರಾಕ್ರಮಿ ಯಾಗಿರುವನು. ಸಾಲ ವೃಕ್ಷಗಳನ್ನೆಲ್ಲ ತಾವರೆಯ ದಂಟಿನಂತೆ ಕಿತ್ತುಹಾಕಿದನು; ಮುಷ್ಟಿಯಿಂದ ದಾರು ಪರ್ವತವನ್ನು ಪುಡಿಮಾಡಿದನು; ಅಂಗೈಗಳಿಂದ ಬಳ್ಳಿಮನೆಗಳ ನ್ನೆಲ್ಲ ಹೊಸಕಿಬಿಟ್ಟನು; ಆರ್ಭಟಿಸಿ ಪ್ರಮದ ವನ ಪಾಲರನ್ನು ಮೂರ್ಛೆ ಕೆಡವಿದನು; ಅವನನ್ನು ಹಿಡಿಯಲು ಬಲವಾದ ಸೇನೆಗೇ ಆಜ್ಞಾಪಿಸಬೇಕು.

ರಾವಣ.—ಹಾಗಾದರೆ ಆ ಕಪಿಯನ್ನು ಹಿಡಿತರಲು ಸಾವಿರ ದಂಡಾಳುಗಳನ್ನು ಕಳುಹಿಸು.

ಶಂಕುಕರ್ಣ.—ಮಹಾರಾಜನಾಜ್ಞೆ. (ಹೋಗಿ ಬಂದು) ಮಹಾರಾಜನೇ!

ಕಂ ॥ ತರು ಯೋಧಿಯಾದವಂ ವಾ ।
ನರನೆಮ್ಮಯ ಪೆರ್ಮರಂಗಳಿಂದೆಮ್ಮಯ ಕಿಂ ॥
ಕರ ಸೇನಾ ಬಲಮನಿತಂ ।
ತುರಿಪದೊಳೇ ಕೊಂದನೊಂದನುಳಿಯದ ತೆಱದಿಂ ॥ ೫ ॥

ರಾವಣ.—ಹೇಗೆ? ಎಲ್ಲರನ್ನೂ ಕೊಂದನೇ? ಹಾಗಾದರೆ ಆ ಕೋಡಗವನ್ನು ಹಿಡಿತರಲು ನಮ್ಮ ಅಕ್ಷಕುಮಾರನಿಗೆ ತಿಳಿಯಿಸು.

ಶಂಕುಕರ್ಣ.—ಮಹಾರಾಜನಾಜ್ಞೆ. (ಹೋಗುವನು)

ರಾವಣ.—(ಆಲೋಚಿಸಿ)

ಕಂ ॥ ಕುವರಂ ಕಣೆಯೊಳ್ ನೆರೆ ಕ ।
ಲ್ತವನುಂ ಶೂರನುಮದಲ್ಲದೆಯೆ ಬಲ್ಲಿದನುಂ ॥
ತವೆಯುದಱಿಂದಾ ಕಪಿಯುಂ ।
ತವಕದೆ ಪಿಡಿತರ್ಪನಿಲ್ಲದಿರೆ ಕೊಲ್ವಂ ದಲ್ ॥ ೬ ॥

ಶಂಕುಕರ್ಣ.—ಮಹಾರಾಜನೇ! ಮತ್ತೊಂದು ಸೈನ್ಯವನ್ನು ಕಳುಹಿಸಬೇಕು.

ರಾವಣ.—ಏಕೆ?

ಶಂಕುಕರ್ಣ.—ಮಹಾರಾಜನು ಲಾಲಿಸಬೇಕು: ಕಪಿಯನ್ನು ಹಿಡಿತರಲು ಹೊರಟ ಕುಮಾರನನ್ನು ಕಂಡು, ಮಹಾರಾಜನಾಜ್ಞೆಯಿಲ್ಲದಿದ್ದರೂ ಐವರು ಸೇನಾಪತಿಗಳು ಅವನನ್ನು ಬೆಂಬಳಿವಿಡಿದರು.

ರಾವಣ.—ಆಮೇಲಾಮೇಲೆ?

ಶಂಕುಕರ್ಣ.—ಆಮೇಲೆ ಆ ಕಪಿಯು ಇದಿರಾಗಿ ಬರುತ್ತಿರುವ ಅವರನ್ನು ಕಂಡು ಸ್ವಲ್ಪ ಹೆದರಿಕೊಂಡವನಂತೆ ನಟಿಸುತ್ತ ತೋರಣವನ್ನು ಸೇರಿ ಚಿನ್ನದ ಪರಿಘಗಳಿಂದ ಸೇನಾಪತಿಗಳೈವರನ್ನೂ ಹೊಡೆದು ಕೆಡಹಿದನು.

ರಾವಣ.—ಆಮೇಲೆ ಆಮೇಲೆ?

ಶಂಕುಕರ್ಣ.—ಅಕ್ಷಕುಮಾರನನ್ನು

ಮ॥ ಸ್ರ ॥ ಕಿಸಿಸಿಂ ಕಣ್ಕೆಂಕಮಾಗಲ್ ತುಡಿಪದೆ ರಥವಾಹಂಗಳಂ ಪೋಗಲಟ್ಟು ।
ತ್ತಿನಸುಂ ನೀಲಾಭ್ರಕಲ್ಪಂ ಪರಮ ಲಘುತರಂ ಬಾಣ ಜಾಲಂಗಳಂ ತ॥
ಳ್ತ್ತಿ ಸಿಸಲ್ಕಾ ಅಂಜನೆಲ್ಲಂ ಕೊಸವಿ ಕೆಡಪುತುಂ ಕೋಡಗಂ ತೇರ್ಗೆ ಚಿಮ್ಮು ।
ತ್ತಿ ನಡುಂಗಟ್ಟಿಂ ಪಿಡುಂಗಾನನಮುಳಸುವವೋಲ್ ಮುಷ್ಟಿಯಿಂ
ಕುತ್ತಿ ಕೊಂದಂ ॥ ೭ ॥

ರಾವಣ.—(ರೋಷದಿಂದ) ಆಃ! ಹೇಗೆ ಹೇಗೆ? ಕೊಂದನೆಂದೇ?

ಕಂ ॥ ಅರರೇ ನೀಸಿರ ನಾನೇ ।
ತೆರಳುತೆಯಾ ದುರುಳನೆನಿಪ ಕರ್ಗೋಡಗನಂ ॥
ಭರದಿಂ ಬೂದಿಯನಾಗಿಪೆ ।
ಸುರಿವೆನ್ನೀ ಮುಳಿಸುವೆಂಕೆ ಕಿಡಿಗಡಣಗಳಿಂ ॥ ೮ ॥

ಶಂಕುಕರ್ಣ.—ಮಹಾರಾಜನೇ! ಶಾಂತನಾಗು. ಅಕ್ಷಕುಮಾರನನ್ನು ಕೊಂದುದನ್ನು ಕೇಳಿ ಮುಳಿಸಿನಿಂದ ಕೂಡಿದೆದೆಯುಳ್ಳವನಾಗಿ ಇಂದ್ರಜಿತ್ಕುಮಾರನು ಕಪಿಗಿದುರಾಗಿ ಹೊರಟಿರುವನು.

ರಾವಣ.—ಹಾಗಾದರೆ ಹೋಗಿ ಮುಂದಿನ ಸಂಗತಿಯನ್ನು ತಿಳಿದು ಬಾ.

ಶಂಕುಕರ್ಣ.—ಮಹಾರಾಜನಾಜ್ಞೆ. (ಹೋಗುವನು)

ರಾವಣ.—ಕುಮಾರನಾದರೆ ಅಸ್ತ್ರವಿದ್ಯಾ ನಿಪುಣನು—

ಕಂ ॥ ತುಳಿಲಾಳ್ಜನಕ್ಕೆ ಬವರದೊ ।
ಳಳಿವೋ ಮೇಣ್ ಗೆಲ್ವೊ ಬಯಕೆ ದಿಟಮಾದೊಡೆಯುಂ ॥
ಕೊಳುಗುಳವಿದು ತಗದೆಸಕಂ ।
ಕಳವಳಮಾದಪುದು ಮನದ ಬೇನೆಯಿನೆನಗಂ ॥ ೯ ॥

ಶಂಕುಕರ್ಣ.—(ಪ್ರವೇಶಿಸಿ) ಮಹಾರಾಜಾ! ಲಂಕೇಶ್ವರಾ! ಭದ್ರಮುಖಾ! ವಿಜಯವು ವಿಜಯವು!

ಕಂ ॥ ಕುವರಂಗಂ ಕೋಡಗಕಂ ।
ಬವರಂ ಬಿಡುವಿಲ್ಲದಂತೆ ನಡೆದುದು ಮತ್ತಂ ॥
ತವಕದೊಳೀಗಳೆ ಕಪಿಯುಂ ।
ಕವಿದುಂ ನೇಣಿಂದೆ ಕಟ್ಟಿದಂ ಸುಕುಮಾರಂ ॥ ೧೦ ॥

ರಾವಣ.—(ತಲೆದೂಗುತ್ತ) ಇಂದ್ರಜಿತನು ಶಾಖಾಮೃಗವನ್ನು ಕಟ್ಟಿದನೆಂಬುವುದರಲ್ಲಿ ಆಶ್ಚರ್ಯವೇನು? ಯಾರಲ್ಲಿ?

ರಾಕ್ಷಸ.—(ಪ್ರವೇಶಿಸಿ) ಮಹಾರಾಜನಿಗೆ ವಿಜಯವಾಗಲಿ.

ರಾವಣ.—ಹೋಗಿ ವಿಭೀಷಣನನ್ನಿಲ್ಲಿಗೆ ಬರಹೇಳು.

ರಾಕ್ಷಸ.—ಮಹಾರಾಜನಾಜ್ಞೆ. (ಹೋಗುವನು)

ರಾವಣ.—(ಶಂಕುಕರ್ಣನೊಡನೆ) ನೀನೂ ಹೋಗಿ ಆ ಕೋತಿಯನ್ನಿಲ್ಲಿಗೆ ಕರೆತರುವುದು.

ಶಂಕುಕರ್ಣ.—ಮಹಾರಾಜನಾಜ್ಞೆ. (ತೆರಳುವನು)

ರಾವಣ.—(ಚಿಂತಿಸಿ) ಹಾ! ಕಷ್ಟವು.

ಕಂ ॥ ಬಿಡುಗಣ್ಣರುಮಡಗುಣಿಗಳು ।
ಮೊಡವೆರೆದೊಡಮುಱಿದು ಲಂಕೆ ಬಗೆಯೊಳಮೆಣಿಸಲ್ ॥
ನುಡಿಯಿಂತಿರೆ ರಾವಣನಂ ।
ಕಡೆಗಣಿಸುತೆ ವಾನರಂ ಪ್ರವೇಶಿಸಿದನಲೇ ॥ ೧೧ ॥

ಮ॥ ಸ್ರ॥ ನೆರೆ ಮೂಲೋಕಂಗಳಂ ದಾನವ ಸುರ ಸಹಿತಂ ಯುದ್ಧದೊಳ್ ಗೆಲ್ದು ಗರ್ವಂ ।
ಪಿರಿದಾಗಲ್ ಬೆಳ್ಳಿವೆಟ್ಟಂ ಶಿವಗಣ ಯುತನುಂ ಭುಲ್ಲಸಳ್ಳಾಡಿಸುತ್ತುಂ ॥
ವರಮುಂ ತಾಬ್ದಿತ್ತಣಿಂ ಮತ್ತಗ ಸುತೆ ಶಿವ ವಾಹಂಗಳಂ ನೋಡದಾನ್ನೈ ।
ತರೆಯಾಗಳಾ ಶಾಪಮುಂ ನೀಡಲನರದುವೆ ಯಾರೂಪವಿಂದೈಗುವಿಾಗಳ್ ॥ ೧೨ ॥

(ಬಳಿಕ ವಿಭೀಷಣನು ಬರುವನು)

ವಿಭೀಷಣ.—(ವಿಚಾರಪಡುತ್ತ) ಅಯ್ಯೋ! ಮಹಾರಾಜನ ಬುದ್ಧಿಯು ವಿಪರೀತವೇ ಆಯಿತಲ್ಲಾ!

ಕಂ ॥ ಬಹು ವಿಧದಿಂ ಬೋಧಿಸಿದೆಂ ।
ಮಹೀಜೆಯುಂ ಮರಬ್ದಿ ಪತಿಯು ಸನ್ನಿಧಿಗಟ್ಟೆ ॥
ದಹಹಾ ಏವೆಂ ಕೇಳಿಯು ।
ಗರ್ಹಿತಮದೆನುತೆನ್ನ ನುಡಿಯನಾಲಿಸನರಸಂ ॥ ೧೩ ॥

(ಬಳಿಗೆ ಬಂದು) ಮಹಾರಾಜನಿಗೆ ಜಯವಾಗಲಿ.

ರಾವಣ.—ವಿಭೀಷಣಾ! ಬಾ ಬಾ, ಕುಳಿತುಕೊ.

ವಿಭೀಷಣ.—ಇದೊ ಕುಳಿತುಕೊಳ್ಳುವೆನು. (ಕುಳಿತುಕೊಳ್ಳುವನು)

ರಾವಣ.—ವಿಭೀಷಣಾ! ಇದೇನು? ಖಿನ್ನನಾಗಿ ಕಾಣುತ್ತಿರುವೆಯಲ್ಲಾ!

ವಿಭೀಷಣ.—ಆಶ್ರಯಗೊಂಡ ಭೃತ್ಯಜನದ ಮಾತನ್ನು ಸ್ವಾಮಿಯು ಗ್ರಹಿಸದಿದ್ದರೆ ಖಿನ್ನತೆಯೇ ಅಲ್ಲವೆ?

ರಾವಣ.—ವಿಭೀಷಣಾ! ಈ ಕಥೆಯನ್ನಿಲ್ಲಿಗೆ ನಿಲ್ಲಿಸಿಬಿಡು. ನೀನೂ ಸಹ ಹೋಗಿ ಆ ವಾನರನನ್ನು ಹಿಡಿದುಕೊಂಡು ಬಾ.

ವಿಭೀಷಣ.—ಮಹಾರಾಜನಾಜ್ಞೆ. (ತೆರಳುವನು)

(ಆಮೇಲೆ ರಾಕ್ಷಸರು ಹನುಮಂತನನ್ನು ಹಿಡಿದುಕೊಂಡು ಬರುವರು)

ಎಲ್ಲರೂ.—ಆಃ! ಇತ್ತ! ಇತ್ತ!

ಹನೂಮಾನ್.—

ಕಂ ॥ ದುರುಳಂ ರಕ್ಕಸನೆನ್ನಂ ।
ಸೆರೆವಿಡಿಯಲ್ಕಾರ್ತನಿಲ್ಲ ಮೇಣ್ ರಾವಣನಂ ॥
ಕರವಿಾಕ್ಷಿಪ ಮನದಾಸೆಯಿ ।
ನಿರದಾನೆಯಪೇಕ್ಷಿಸಿಂತು ಸಿಲ್ಕಿದನಾದೆಂ ॥ ೧೪ ॥

(ಬಳಿಸಾರ್ದು) ಎಲೈ! ರಾಜನೆ! ಚೆನ್ನಾಗಿರುವೆಯಾ!

ರಾವಣ.—(ತಿರಸ್ಕಾರದಿಂದ) ವಿಭೀಷಣಾ! ಇದೇ ಏನು ಇವನ ಕೆಲಸ?

ವಿಭೀಷಣ.—ಮಹಾರಾಜನೆ! ಇದಕ್ಕಿಂತಲೂ ಹೆಚ್ಚಿನದುಂಟು.

ರಾವಣ.—ನೀನು ಹೇಗೆ ಬಲ್ಲೆ?

ವಿಭೀಷಣ.—ಮಹಾರಾಜನು ಇವನನ್ನು ನೀನಾರೆಂದು ಪ್ರಶ್ನೆ ಮಾಡುವವನಾಗಲಿ.

ರಾವಣ.—ಎಲಾ ಕಪಿಯೆ! ನೀನಾರು? ಯಾವ ಕಾರಣದಿಂದೆ ನಮ್ಮ ಅಂತಃಪುರಕ್ಕೆ ಬಂದೆ?

ಹನೂಮಾನ್.—ಅಯ್ಯಾ!

ಕಂ ॥ ಅರಿಯೈ ಆಂ ಹನುಮಂತಂ ।
ಮರುತಾಂಜನೆಯರ್ಗೆ ಪುಟ್ಟಿದೌರಸ ಪುತ್ರಂ ॥
ವರ ರಘುರಾಮಂ ಕಳುಪಲ್ ।
ಭರದಿಂದೈತಂದೆನಿಲ್ಲಿಗಾನತಿ ಮುದದಿಂ ॥ ೧೫ ॥

ವಿಭೀಷಣ.—ಮಹಾರಾಜನೆ! ಕೇಳಿದೆಯಾ?

ರಾವಣ.—ಕೇಳಿದರೇನು?

ವಿಭೀಷಣ.—ಹನೂಮಾನ್! ಪೂಜ್ಯನಾದ ರಾಘವನು ಹೇಳಿದುದೇನು?

ಹನೂಮಾನ್.—ಎಲೈ! ರಾಮನಪ್ಪಣೆಯನ್ನು ಕೇಳು.

ರಾವಣ.—ಹೇಗೆ? ಹೇಗೆ? ರಾಮನಪ್ಪಣೆಯೆಂದುಸಿರುವೆಯಾ? ಆಃ! ಈ ಕಪಿಯನ್ನು ಕೊಲ್ಲಿರಿ.

ವಿಭೀಷಣ.—ಮಹಾರಾಜನೆ! ಸೈರಿಸು, ಶಾಂತನಾಗು. ಎಲ್ಲಾ ತಪ್ಪುಗಳಲ್ಲಿಯೂ ದೂತರು ಕೊಲೆಗೆ ತಕ್ಕವರಲ್ಲ. ಅಥವಾ, ರಾಮನ ಮಾತನ್ನು ಕೇಳಿ ಬಳಿಕ ಚಿತ್ತಾನುಸಾರವಾಗಿ ಮಾಡಬಹುದು.

ರಾವಣ.—ಎಲಾ ವಾನರ! ಆ ಮನುಷ್ಯನೆಂದುದೇನು?

ಹನೂಮಾನ್.—ಎಲೈ! ಕೇಳು—

ಕಂ || ಪರ ಶಿವನೊಳೆ ಮರೆಯಂ ಪಡೆ ।
ಯಿರದಿರೆಯುತಿದುರ್ಗಮಂ ರಸಾತಲಮನೆ ಸೇರ್ ||
ಶರದಿಂದಂ ತನುವೆಲ್ಲಮು ।
ನಿರಿಯುತೆಯಂತಕನ ಮನೆಯ ಪುಗಿಪೆಂ ನಿನ್ನಂ || ೧೬ ||

ಎಂದು.

ರಾವಣ.—ಹ್ಹ! ಹ್ಹ!! ಹ್ಹ!!!

ಮ || ಸ್ರ|| ಸಲೆ ದಿವ್ಯಾಸ್ತ್ರಂಗಳಿಂದಂ ಸುರರಸಿಬರುಮಂ ಸೋಲಿಸಿರ್ಪೆಂ ಸಿತಾಂತಂ ।
ನಲವಿಂ ದೈತ್ಯೇಂದ್ರರೆಲ್ಲರ್ ಬಳಿಯೊಳೆ ಬಸವಾಗಿರ್ದಪರ್ ಮತ್ತೆ ನೋಡ ||
ಲ್ಕಲಕಾಧೀಶಂ ವಿಶೇಷಂ ಕಳೆಗಳೆದೆಸೆವಂ ಪುಷ್ಪಕಂಗಿತ್ತುಕೊಳ್ಳ ।
ಲ್ಕೆಲೆಲೋ ಇಂತಾಗಿರಲ್ಕೆಂತಿದಿರಿಸುವನವಂ ಮಾನುಷಂ ರಾಮನೆನ್ನಂ || ೧೭ ||

ಹನೂಮಾನ್.—ಹೀಗಿದ್ದ ನೀನು ಅವನ ಮಡದಿಯನ್ನು ಮೋಸದಿಂದ ಕದ್ದು ತಂದೆಯೇಕೆ?

ವಿಭೀಷಣ.—ಹನುಮಂತನು ಚೆನ್ನಾಗಿ ಹೇಳಿದನು.

ಕಂ || ಅಸುರವರಾ ನೀಂ ಬೇಜಾ ।
ಗಿಸಿ ರಾಮನನಂದು ಮಾಯೆಯಿಂದಂ ಮೇಣ್ ಯಾ ||
ಚಿಸುವವನಾಕೃತಿಯೊಂದುತೆ ।
ರಸೆಯಣುಗಿಯನಪಹರಿಸಿದೆಯಲ್ತೇ ಛಲದಿಂ || ೧೮ ||

ರಾವಣ.—ವಿಭೀಷಣಾ! ಏನು? ಹಗೆಯ ಪಕ್ಷವನ್ನು ಸೇರುವೆಯಾ?

ವಿಭೀಷಣ.—

ಕಂ || ಮನ್ನಿಪುದರಸಾ ಹಿತವಿಾ ।
ಯೆನ್ನಯ ನುಡಿ ರಾಮನರಸಿಯಂ ಬೀಡಿತ್ತೊಡು ಕೇ ||
ಳಿನ್ನಿತ್ತಲ್ ರಾಕ್ಷಸ ವರ ।
ನಿನ್ನಿಂದೀ ಬಂಶಮುಳಿಗುಮೆಂಬುದನೆಳಸೆಂ || ೧೯ ||

ರಾವಣ.—ವಿಭೀಷಣಾ! ಸಾಕು, ಅಂಜದಿರು.

ಕಂ ॥ ಮೃಗವೆನಿಪುದು ಕೇಸರಿಯುಂ ।
ತಗುಲಿಸಿ ಕೀೞ್ಗಿಡಪುದೆಂಬುದೆಂತುಟು ಪೇೞಾ ॥
ಜಗದೊಳ್ ಮದಿಸಿದ ಗಜಮಂ ।
ಸೃಗಾಲ ಶಾಬಕವಿದಿರ್ಚಿ ಕೊಲ್ವುದುಮುಂಟೇ ॥ ೨೦ ॥

ಹನೂಮಾನ್.—ಆ! ರಾವಣಾ! ಸಿರಿ ತೊಲಗಿದ ನೀನು ರಾಘವನನ್ನು ಕುರಿತು ಹೀಗೆನ್ನುವುದು ತರವೆ? ಬೇಡ ಬೇಡ.

ಕಂ ॥ ಕಲಿಗಳ ತಿಲಕನನಾಖಂ ।
ಡಲ ಸಮನಂ ಭುವನೈಕ ನಾಥನಂ ರಾಘವನಂ ॥
ಬಲ ಹೀನಂ ನೀಂ ಪೇೞ್ವಿದು ।
ಸಲೆ ಸರಿಯೇ ಖೂಳ ನೀಚ ರಾವಣ ದುರುಳಾ ॥ ೨೧ ॥

ರಾವಣ.—ಏನಿದೇನಿದು? ಹೆಸರು ಹಿಡಿದು ಹೇಳುತ್ತಿರುವನು! ಈ ಕೋತಿಯನ್ನು ಕೊಲ್ಲಿರಿ, ಅಥವಾ, ದೂತವಧೆಯು ತರವಲ್ಲ; ಶಂಕುಕರ್ಣಾ! ಬಾಲವನ್ನು ಹೊತ್ತಿಸಿ ಈ ಕೋತಿಯನ್ನು ಓಡಿಸಿಬಿಡಿ.

ಶಂಕುಕರ್ಣ.—ಮಹಾರಾಜನಾಜ್ಞೆ. ಹೀಗೆ ಹೀಗೆ—

ರಾವಣ.—ಅಥವಾ, ಅವನಿಲ್ಲಿ ಬರಲಿ.

ಹನೂಮಾನ್.—ಇದೋ ಬಂದಿರುವೆನು.

ರಾವಣ.—ಆ ಮನುಷ್ಯನಿಗೆ ನನ್ನ ಈ ಮಾತುಗಳನ್ನು ಹೇಳು—

ಕಂ ॥ ಮಡದಿಯನಪಹರಿಪುದಱಿಂ ।
ದಡಗಿಸಿದೆಂ ನಿನ್ನ ಕೊರ್ವನನಿತಂ ರಾಮಾ ॥
ಪಡೆದಿರ್ದೊಡೆ ಬಿಲ್ಗಳಕಮು ।
ನೊಡನೆಯೆ ಕುಡು ನನಗೆ ಪಿರಿಯ ಬವರಮನೊಂದಂ ॥ ೨೨ ॥

ಹನೂಮಾನ್.—ಕೂಡಲೇ ನೋಡುವೆಯಂತೆ; ಕೇಳು—

ಕಂ ॥ ಎಲ್ಲೆಡೆಯೊಳ್ ಕೋಡಗವಡೆ ।
ಯುಲ್ಲಸದಿಂ ಸುತ್ತಿ ಕೋಂಟೆ ಬನಮಾ ಪುರಿಯಿಂ ॥
ತೆಲ್ಲಮನಳಿಸಲ್ ರಾಮಂ ।
ಬಿಲ್ಲಿನ ದನಿಯಿಂದೆಯಲ್ತೆ ಗೆಲ್ವಂ ನಿನ್ನಂ ॥ ೨೩ ॥

ರಾವಣ.—ಆಃ! ಈ ಕಪಿಯನ್ನು ಅಟ್ಟಿಬಿಡಿರಿ.

ರಾಕ್ಷಸರು.—ಹೀಗೆ, ಹೀಗೆ. (ರಾಕ್ಷಸರೊಡನೆ ಹನುಮಂತನು ಹೋಗುವನು)

ವಿಭೀಷಣ.—ಮಹಾರಾಜನೆ! ಚಿತ್ತೈಸು. ನಿನ್ನ ಹಿತಕ್ಕಾಗಿ ಹೇಳಬೇಕಾದ ಬಯಕೆಯೊಂದು ನನಗುಂಟು.

ರಾವಣ.—ಏನದು? ಹೇಳು. ಆ ಹಿತವನ್ನು ನಾವೂ ಕೇಳಬಯಸುವೆವು.

ವಿಭೀಷಣ.—ಎಲ್ಲ ವಿಧದಿಂದಲೂ ರಾಕ್ಷಸ ಕುಲಕ್ಕೆ ವಿನಾಶವು ಬರುವುದೆಂದು ತಿಳಿಯುವೆನು.

ರಾವಣ.—ಯಾವ ಕಾರಣದಿಂದ?

ವಿಭೀಷಣ.—ಮಹಾರಾಜನ ವಿಪ್ರತಿಪತ್ತಿಯಿಂದ.

ರಾವಣ.—ಅದಾವುದಾ ನನ್ನ ವಿಪ್ರತಿಪತ್ತಿಯು?

ವಿಭೀಷಣ.—ಸೀತಾಪಹರಣವೇ ಅಲ್ಲವೆ!

ರಾವಣ.—ಸೀತಾಪಹರಣದಿಂದ ದೋಷವಾವುದು?

ವಿಭೀಷಣ.—ಅಧರ್ಮವೂ,

ರಾವಣ.—ಸಮುಚ್ಚಯದಿಂದ ನಿನ್ನ ಮಾತಿನ್ನೂ ಉಳಿದಿರುವುದು; ಅದನ್ನೂ ಹೇಳು.

ವಿಭೀಷಣ.—ಅದೇ! ಹೇಳಿದೆನಲ್ಲವೆ?

ರಾವಣ.—ವಿಭೀಷಣಾ! ಏಕೆ ಮರೆಮಾಚುವೆ? ದಿಟವನ್ನು ಹೇಳದಿರುವೆಯಾದರೆ ನನ್ನ ಜೀವದ ಮೇಲಾಣೆ.

ವಿಭೀಷಣ.—ಮಹಾರಾಜನು ಅಭಯವನ್ನು ಕೊಡಬೇಕು.

ರಾವಣ.—ಅಭಯವನ್ನು ಕೊಟ್ಟಿರುವೆನು, ಹೇಳು.

ವಿಭೀಷಣ.—ಬಲವದ್ವಿಗ್ರಹವೂ

ರಾವಣ.—ಹೇಗೆ ಹೇಗೆ? ಬಲವದ್ವಿಗ್ರಹವೆ?

ಕಂ॥ ಅರರೇ ಈಯಬಿರಕ್ಕಸ।
ನಿರದೆನ್ನಯ ಶತ್ರು ಪಕ್ಷಮಂ ಸೇರ್ದನಗಂ॥
ನೆರೆ ಕೋಪಮುನುರು ಜವದಿಂ।
ಬಿರಿಸಿಂತುಟು ಧೈರ್ಯಮಾಗಿ ಗಳಹುತ್ತಿರ್ಪಂ ॥ ೨೪ ॥

ಯಾರಲ್ಲಿ?

ಕಂ॥ ಒಡವುಟ್ಟಿದ ನಂಟಂ ಗಡ।
ಕಡೆ ಲಕ್ಷಿಸಿ ಶತ್ರು ಪಕ್ಷಮಂ ಸೇರ್ದಿವನೊಳ್ ಕ॥
ಣ್ಗಡೆಯಿರಿಸೆಂ ನಾನದಱಿಂ।
ತಡೆಯದೆ ಪೊರಡಿಸುಗೆಯಿವನನೀ ಬಳಿಯಿಂದಂ ॥ ೨೫ ॥

ವಿಭೀಷಣ.—ಮಹಾರಾಜನೆ! ತಾಳ್ಮೆಯೊಂದು, ಪ್ರಸನ್ನನಾಗು; ನಾನೇ ಹೊರಟುಹೋಗುವೆನು.

ಕಂ॥ ಅರಸನೆ ನೀಂ ಬೆಸಸಿದೆಯಲೆ।
ಪೊರಮಡುವೆಂ ಕೇಳ ದೋಷಿಯಲ್ಲಾಂ ನೀನಿಂ॥
ತೊರೆಯುತೆ ಮುಳಿಸಾಸೆಗಳಂ।
ನಿರವಿಸು ಮನಕೊಪ್ಪಿದಂತೆ ಕಾರ್ಯ ಕ್ರಮಮಂ ॥ ೨೬ ॥

(ಹೊರಟು ಬಂದು) ನಾನೀಗಲೇ—

ಉ ॥ ತಾವರೆಗಣ್ಣನಂ ಪರಮ ಭೀಕರ ಚಾಪನನಾಶ್ರಿತರ್ಗೆ ಸೈ ।
ತಾವಗವಿಷ್ಟಮಂ ನೆರಪುವುಜ್ಜುಗದಿಂದಲೆ ಕೀರ್ತಿವೆತ್ತನಂ ॥
ರಾವಣನಂ ಕೊಲಲ್ಕೆ ಮನದಂದನನಾ ನರ ರೂಪ ರಾಮನಂ ।
ಸೇವಿಸಿ ಕಾಪನೊಂದಿಯಬಿಪೀ ಖಳ ವಂಶಮನುದ್ಧರಿಪ್ಪೆನಾಂ ॥ ೨೭ ॥

(ಎಂದು ತೆರಳುವನು)

ರಾವಣ.—ಆಹ! ವಿಭೀಷಣನು ಹೊರಟುಹೋದನು. ನಾನಿನ್ನು ನಗರ ರಕ್ಷಣೆಯನ್ನು ಮಾಡಿಸುವೆನು. (ಎಂದು ತೆರಳುವನು)

**ಪಂಡಿತ ಬಿ. ನಂಜುಂಡಸ್ವಾಮಿ.**

(ಮುಂದುವರಿಯುವುದು)

---

# ವೀರಮಾರ್ತಂಡ ಚಾವುಂಡರಾಯ

ಚಾವುಂಡರಾಯನು ಬ್ರಹ್ಮಕ್ಷತ್ರಿಯ ವಂಶದಲ್ಲಿ ಹುಟ್ಟಿದವನು. ಅಜಿತಸೇನಾಚಾರ್ಯರ ಶಿಷ್ಯನಾದ "ಗಂಗಕುಲಾಬ್ಧಿ ಚಂದ್ರ", "ಗಂಗಕುಲ ಚೂಡಾಮಣಿ", "ಜಗದೇಕ ವೀರ", ಆದಿ ಬಿರುದುಗಳಿಂದ ಅಲಂಕೃತನಾದ ರಾಚಮಲ್ಲ, ಯಾ ರಾಜಮಲ್ಲ ಚತುರ್ಥನೇ ಇವನ ಸ್ವಾಮಿ. ಯಾವ ಗಂಗ ವಂಶದ ರಾಜ್ಯವು ಮೈಸೂರು ಪ್ರಾಂತದಲ್ಲಿ ಸುಮಾರು ಕ್ರಿ. ಶ. ನಾಲ್ಕನೆಯ ಶತಮಾನದಿಂದ ಹನ್ನೊಂದನೆಯ ಶತಮಾನದ ವರೆಗೆ ಸುಚಾರು ರೂಪವಾಗಿ ನೆಲಸಿದ್ದಿತ್ತೋ ರಾಚಮಲ್ಲನು ಅದೇ ಗಂಗ ವಂಶೀಯ ರಾಜನಾದ ಮಾರಸಿಂಹನ ಉತ್ತರಾಧಿಕಾರಿಯು. ಗಂಗರಾಜರ ರಾಜ್ಯಾಡಳಿತೆಯಲ್ಲಿ ವರ್ತಮಾನ ಮೈಸೂರು ರಾಜ್ಯದ ಬಹು ಭಾಗವು ಅವರ ರಾಜ್ಯದಲ್ಲಿಯೇ ಅಂತರ್ಗತವಾಗಿದ್ದಿತು. ಅದು ಆ ಸಮಯದಲ್ಲಿ "ಗಂಗವಾಡಿ" ಎಂದು ಕರೆಯಲ್ಪಡುತ್ತಿದ್ದಿತು. ಪ್ರಥಮದಿಂದಲೇ ಜೈನ ಧರ್ಮದೊಡನೆ ಗಂಗರಾಜ್ಯದ ಸಂಬಂಧವು ಘನಿಷ್ಠವಾಗಿದ್ದಿತೆಂಬುದು ನಿಸ್ಸಂದೇಹವಾದ ಮಾತು. ಇಷ್ಟೇ ಅಲ್ಲ, ಶ್ರವಣಬೆಳ್ಗೊಳದ ಲೇಖ ಸಂ. ೫೪ (೬೭), ಹಾಗೆಯೇ ಗಂಗ ವಂಶಕ್ಕೆ ಸಂಬಂಧಪಟ್ಟ ಅನ್ಯಾನ್ಯ ಹಲವು ದಾನ ಪತ್ರಗಳಿಂದ* ಗಂಗ ವಂಶದ ಮೂಲ ಸಂಸ್ಥಾಪಕರು ಜೈನಾಚಾರ್ಯರಾದ ಸಿಂಹನಂದಿಗಳೇ ಎಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಈ ಮಾತನ್ನು ಗೊಮ್ಮಟಸಾರವೃತ್ತಿಯ ಕರ್ತರಾದ ಅಭಯಚಂದ್ರ ತ್ರೈವಿದ್ಯ ಚಕ್ರವರ್ತಿಗಳೂ ಸ್ವೀಕಾರಮಾಡಿದ್ದಾರೆ.† ಪ್ರಸಿದ್ಧ ಜೈನಾಚಾರ್ಯರಾದ ಪೂಜ್ಯಪಾದರು ಇದೇ ವಂಶದ ಏಳನೆಯ ನರೇಶನಾದ ದುರ್ವಿನೀತನ (ಕ್ರಿ. ೪೭೮–೫೧೩) ಗುರುವಾಗಿದ್ದರೆಂದು ಹೆಬ್ಬೂರು ತಾಮ್ರ ಶಾಸನದಿಂದ ತಿಳಿಯಬರುವುದಾಗಿ ಮಿ॥ ರೈಸ್ ಬರೆದಿದ್ದಾರೆ.‡ ಜೈನ ಧರ್ಮೋಪಾಸಕರಾದ ಗಂಗ ವಂಶೀಯ ರಾಜರಲ್ಲಿ ರಾಚಮಲ್ಲನ ಪೂರ್ವಾಧಿಕಾರಿಯಾದ ಮಾರಸಿಂಹನ ಹೆಸರೂ ಉಲ್ಲೇಖನೀಯವಾಗಿದೆ. ಇವನು ಹಲವು ಜೈನ ಬಸದಿಗಳನ್ನೂ ಸ್ತಂಭಗಳನ್ನೂ ನಿರ್ಮಾಣ ಮಾಡಿಸಿ ಕೊನೆಗೆ ಅಜಿತ ಭಟ್ಟಾರಕರ ನಿಕಟ ಸಮಾಧಿ ಮರಣಪೂರ್ವಕವಾಗಿ ಬಂಕಾಪುರದಲ್ಲಿ ಶರೀರ ತ್ಯಾಗ ಮಾಡಿದನು. ಇವರ ಹೊರತು ಬುಲ್ಲ, ನಾಗವರ್ಮ ಮುಂತಾದ ವ್ಯಕ್ತಿಗಳ ಹೆಸರೂ ಸ್ಮರಣಾರ್ಹವಾಗಿದೆ.§

* (1) "Epigraphia Carnatica" 7, Shimoga 4 and 8; Nagar 35-36. (2) "Mysore Archæological Report", 1921. P. 29. (3) "South Indian Inscriptions" 2, 387.

† "ಶ್ರೀಮದಪ್ರತಿಹತ ಪ್ರಭಾವ ಸ್ಯಾದ್ವಾದ ಶಾಸನ ಗುಹಾಭ್ಯಂತರನಿವಾಸಿ ಪ್ರವಾದಿ ಸಿಂಧುರ ಸಿಂಹಾಯಮಾನ ಸಿಂಹನಂದಿ ಮುನೀಂದ್ರಾಭಿನಂದಿತ ಗಂಗವಂಶಲಲಾಮ ರಾಜ ಸರ್ವಜ್ಞಾದ್ಯನೇಕ ಗುಣ ನಾಮಧೇಯ ಭಾಗಧೇಯ ಶ್ರೀಮದ್ರಾಜಮಲ್ಲ ದೇವ ಮಹೀವಲ್ಲಭ ಮಹಾಮಾತ್ಯ ಪದ ವಿರಾಜಮಾನ" —ಆದಿ.

‡ ಶಬ್ದಾನುಶಾಸನದ ಉಪೋದ್ಘಾತ, ಪುಟ ೧೮.

§ ಜೈನ ಶಿಲಾ ಲೇಖ ಸಂಗ್ರಹ—ಶ್ರವಣಬೆಳ್ಗೊಳದ ಶಿಲಾ ಲೇಖಗಳ ಹಿಂದಿ ಅನುವಾದ, ಪುಟ ೭೪–೭೫.

ಇರಲಿ, ಚಾವುಂಡರಾಯನು ಉಲ್ಲಿಖಿತ ರಾಜಮಲ್ಲನಲ್ಲಿ ಸೇನಾನಾಯಕನಾಗಿಯೂ ಮಂತ್ರಿಯಾಗಿಯೂ ಇದ್ದನು. ಇವನೂ ಅಜಿತಸೇನಾಚಾರ್ಯರ ಶಿಷ್ಯನು.* ಇವನಿಂದಲೇ ಅಪರಿಮಿತವಾಗಿ ದ್ರವ್ಯವ್ಯಯಮಾಡಿ ಶ್ರವಣಬೆಳ್ಗೊಳದಲ್ಲಿರುವ ಗೊಮ್ಮಟೇಶ್ವರ ಸ್ವಾಮಿಯ ಪ್ರತಿಷ್ಠೆಯು ಮಾಡಲ್ಪಟ್ಟಿತ್ತು.† ಈ ಮೂರ್ತಿಯು ಏಶಿಯಾ ಖಂಡ ಮಾತ್ರವೇ ಅಲ್ಲ, ಇಡೀ ಪ್ರಪಂಚದಲ್ಲಿರುವ ಆಶ್ಚರ್ಯಕಾರಿ ವಸ್ತುಗಳಲ್ಲಿ ಒಂದಾಗಿದೆ. ಇದನ್ನು ಹೋಲುವ ಮೂರ್ತಿಯು ದೃಷ್ಟಿಗತವಾಗುವುದು ಅತಿ ವಿರಳ. ಮೂರ್ತಿ ನಿರ್ಮಾಪಕನು ತನ್ನ ಈ ಅಪೂರ್ವ ಉದ್ಯೋಗದಲ್ಲಿ ಪೂರ್ಣತಃ ಸಫಲತೆಯನ್ನು ಹೊಂದಿದ್ದಾನೆಂಬುದರಲ್ಲಿ ಸಂದೇಹವಿಲ್ಲ. ಗೊಮ್ಮಟಸ್ವಾಮಿಯ ದೃಶ್ಯವು ಅತ್ಯಧಿಕ ಮನೋಜ್ಞವೂ ಚಿತ್ತಾಕರ್ಷಕವೂ ಆಗಿದೆ. ಮೂರ್ತಿಯ ಅನುಪಮ ಶಾಂತಿಯನ್ನೂ ಮುಖದಲ್ಲಿಯ ಅಮೇಯ ಕಾಂತಿಯನ್ನೂ ನೋಡಿ ದೊಡ್ಡ ದೊಡ್ಡ ಪಶ್ಚಿಮೀಯ ವಿದ್ವಾಂಸರೂ ಮುಗ್ಧರಾಗಿ ಮುಕ್ತಕಂಠದಿಂದ ಮೂರ್ತಿಯ ಶಿಲ್ಪಕಲೆಯನ್ನು ಹೊಗಳತೊಡಗುತ್ತಾರೆ. ಮೂರ್ತಿಯ ಪ್ರತ್ಯೇಕ ಅಂಗೋಪಾಂಗಗಳು ಶಾಸ್ತ್ರೋಕ್ತವಾದ ಅಳತೆಯಲ್ಲಿ ನಿರ್ಮಿಸಲ್ಪಟ್ಟಿರುವುದರಿಂದ ಅದು ನೋಡುವುದಕ್ಕೆ ಬಹಳ ಸುಂದರವಾಗಿದೆ.

೫೭ ಅಡಿ ಉನ್ನತವೂ ವಿಶಾಲವೂ ಆದ ಈ ಖಡ್ಗಾಸನ ಮೂರ್ತಿಯು ಮೈದಾನದಿಂದ ಸುಮಾರು ೪೭೦ ಅಡಿ ಎತ್ತರವಾದ ವಿಂಧ್ಯಗಿರಿಯಲ್ಲಿ ಶೋಭಿಸುತ್ತಿದೆ. ಅದು ತನ್ನ ಅಪೂರ್ವವಾದ ಪ್ರಭಾವದಿಂದ ಅಲ್ಲಿಯ ಸಮಸ್ತ ಭೂಭಾಗವನ್ನೂ ಪವಿತ್ರಮಾಡುತ್ತಿದೆ. ಈ ಮೂರ್ತಿಯಿಂದ ಸುಜ್ಞ ಪಾಠಕರು ಇದರ ಸುಸಂಸ್ಥಾಪಕನಾದ ಚಾವುಂಡರಾಯನ ಶಿಲ್ಪ ನೈಪುಣ್ಯವನ್ನು ಸ್ವಯಂ ತಿಳಿದುಕೊಳ್ಳದಿರಲಾರರು. ರಾಜಮಲ್ಲನು ಈತನ ಈ ಔದಾರ್ಯಕ್ಕೆ ಮೆಚ್ಚಿಯೇ "ರಾಯ" ಎಂಬ ಬಿರುದನ್ನು ಕೊಟ್ಟನು. ಈ ಉಪಾಧಿಯು ಧರ್ಮಮೂರ್ತಿಯಾದ ಚಾವುಂಡರಾಯನಿಗೆ ಸರ್ವಥಾ ಯೋಗ್ಯವಾಗಿದ್ದಿತು.

ಚಾವುಂಡರಾಯನು ಮಹಾ ಉದಾರಿಯು. ಈತನ ಈ ಔದಾರ್ಯ ಗುಣವನ್ನು, ಅಪರಿಮಿತ ವ್ಯಯ ಸಾಧ್ಯ ಗೊಮ್ಮಟೇಶ್ವರ ಮೂರ್ತಿಯೂ ಚಂದ್ರಗಿರಿಯಲ್ಲಿರುವ ಇವನ ಬಸದಿಯೂ ತಾವೇ ಹೇಳುತ್ತವೆ. ಚಂದ್ರಗಿರಿಯಲ್ಲಿರುವ ಈ ಬಸದಿಯು ಪರ್ವತದಲ್ಲಿಯ ಚೈತ್ಯಾಲಯಗಳಲ್ಲೆಲ್ಲ ಮನೋಹರವಾಗಿದೆ. ವೀರಮಾರ್ತಂಡನು ಉಲ್ಲಿಖಿತ ಸ್ಮಾರಕಗಳ ಶಾಶ್ವತ, ಏವಂ, ಸುದೃಢವಾದ ವ್ಯವಸ್ಥೆಗಾಗಿ ಹಲವು ಗ್ರಾಮಗಳನ್ನು ಉಂಬಳಿ ಬಿಟ್ಟಿದ್ದನು. ಇಷ್ಟೇ ಅಲ್ಲ; ಇವನೇ ಕವಿಚಕ್ರವರ್ತಿಯಾದ ರನ್ನನ ಪೋಷಕನು. ರನ್ನನು ವಿದ್ಯಾಧ್ಯಯನ ನಿಮಿತ್ತವಾಗಿ ಸ್ವಬಂಧುಗಳನ್ನೂ ಸ್ವಜನ್ಮ ಭೂಮಿಯನ್ನೂ ತ್ಯಾಗಮಾಡಿ ಗಂಗರಾಜ್ಯಕ್ಕೆ ಬಂದು ತಲುಪಿದಾಗ ಚಾವುಂಡರಾಯನು ಇವನ ವಿದ್ಯಾ

* (೧) ಚಾವುಂಡರಾಯ ಪುರಾಣ, ಮುದ್ರಿತ ಪ್ರತಿ. ಪುಟ ೫. (೨) ಗೊಮ್ಮಟಸಾರ. (೩) ಚಾರಿತ್ರಸಾರ.

† ಶ್ರವಣಬೆಳ್ಗೊಳದ ಶಿಲಾ ಲೇಖ, ನಂ. ೧೭೫, ೧೭೬, ೧೭೯, ೨೩೪, ೨೫೪, ಮತ್ತು ಗೊ. ಕರ್ಮಕಾಂಡ ಗಾಥಾ ೯೬೮.

ರುಚಿ, ನುಡಿದ ಕಾಂತಿ, ಚಾಕಚಕ್ಯಾದಿ ಗುಣಗಳನ್ನು ತಿಳಿದು ಈತನನ್ನು ತನ್ನ ಬಳಿಯಲ್ಲಿರಿಸಿಕೊಂಡು ಇವನ ವಿದ್ಯಾಧ್ಯಯನಕ್ಕೆ ಬೇಕಾದ ಯೋಗ್ಯವಾದ ಸಲಕರಣೆಗಳನ್ನು ಒದಗಿಸಿಕೊಟ್ಟನು.* ಯಾವ ಕವಿ ಪುಂಗವನ ಗುಣ ಗಾನವನ್ನು ಇಂದೂ ಅಖಿಲ ಕರ್ಣಾಟಕ ಭೂಭಾಗವು ಹಾಡುತ್ತಿದೆಯೋ ಆ ಕವಿ ಪಿತಾಮಹನಾದ ರನ್ನನು ಈತನ ಆಶ್ರಯದಿಂದಲೇ ಒಬ್ಬ ಅದ್ವಿತೀಯ ವಿದ್ವಾಂಸನೆನಿಸಿಕೊಂಡು ಕರ್ಣಾಟಕ ಭೂಮಾತೆಯ ಸೇವೆಯನ್ನು ಕೈಕೊಳ್ಳಲು ಸಮರ್ಥನಾದನು. ಇವನು ಕರ್ಣಾಟಕ ಕವಿ ರತ್ನ ತ್ರಯಗಳಲ್ಲಿ ಒಬ್ಬನು. ಈತನ ಕವಿತಾ ರಸದಿಂದ ಮುಗ್ಧನಾಗಿಯೇ ತೈಲಪನು ಇವನಿಗೆ ಕವಿಚಕ್ರವರ್ತಿಯ ಬಿರುದನ್ನಿತ್ತನು. ಒಂದು ವೇಳೆ ವೀರಮಾರ್ತಂಡನು ನಿರಾಶ್ರಿತನಾದ ರನ್ನನಿಗೆ ಆ ಸಮಯದಲ್ಲಿ ಆಶ್ರಯವನ್ನು ಕೊಡದಿರುತ್ತಿದ್ದರೆ ಇಂದು ಸಮಸ್ತ ಕರ್ಣಾಟಕಕ್ಕೆ ಈತನ ಅಮೃತಮಯ ಕವಿತಾ ರಸವನ್ನು ಆಸ್ವಾದನೆ ಮಾಡುವ ಸೌಭಾಗ್ಯವು ಎಂದೂ ಪ್ರಾಪ್ತವಾಗುತ್ತಿರಲಿಲ್ಲ.

ಅಸ್ತು; ಚಾವುಂಡರಾಯನು ಒಬ್ಬ ದೊಡ್ಡ ವೀರ ವ್ಯಕ್ತಿಯು. "ಸಮರ ಧುರಂಧರ", "ವೀರಮಾರ್ತಂಡ", "ರಣರಂಗ ಸಿಂಹ", "ವೈರಿಕುಲ ಕಾಲದಂಡ", "ಭುಜ ವಿಕ್ರಮ", "ಸಮರ ಪರಶುರಾಮ", "ಪ್ರತಿಪಕ್ಷ ರಾಕ್ಷಸ", "ಸುಭಟ ಚೂಡಾಮಣಿ" ಆದಿ ಅನ್ಯಾನ್ಯ ಅವಸರಗಳಲ್ಲಿ ಪ್ರಾಪ್ತವಾದ ಅವನ ಬಿರುದುಗಳೇ ಈ ಮಾತನ್ನು ನಿರ್ವಿವಾದಶಃ ಸಿದ್ಧಮಾಡುತ್ತವೆ. ಈ ಬಿರುದುಗಳು ಮುಖಸ್ತುತಿರೂಪವಾದ ಅಲ್ಪ ಮೂಲ್ಯದಿಂದ ನಗಣ್ಯ ಇಪ್ಪತ್ತು ಇಪ್ಪತ್ತೈದು ವ್ಯಕ್ತಿಗಳ ದ್ವಾರವಾಗಿ ಪಾತ್ರಾಪಾತ್ರದ ವಿವೇಚನೆಯಿಲ್ಲದೆ ಜನಸಾಮಾನ್ಯಕ್ಕೆ ಸುಲಭವಾಗಿ ಪ್ರಾಪ್ತವಾಗುವ ಈಗಿನ ಬಿರುದುಗಳ ಹಾಗಲ್ಲ. ಕಿಂತು ಉಲ್ಲಿಖಿತ ಈತನ ಆ ಬಿರುದುಗಳು ಬೇರೆ ಬೇರೆ ರಣಕ್ಷೇತ್ರಗಳಲ್ಲಿ ಅಜೇಯ ಪ್ರತಿಪಕ್ಷ ದಳವನ್ನು ಜಯಿಸಿದುದರ ಉಪಲಕ್ಷವಾಗಿಯೇ ಪ್ರಾಪ್ತವಾಗಿದ್ದುವು. ಇದರ ವಿಶದ ವಿವರಣೆಯು ಶ್ರವಣಬೆಳ್ಗೊಳದ ವಿಂಧ್ಯಗಿರಿಯಲ್ಲಿರುವ ೧೦೯ (೨೮೧)ನೆಯ ಶಿಲಾ ಲೇಖದಲ್ಲಿಯೂ ಚಾವುಂಡರಾಯ ಪುರಾಣದಲ್ಲಿಯೂ ದೊರೆಯುತ್ತದೆ.† ಲೇಖನವು ವಿಸ್ತಾರವಾಗುವುದೆಂಬ ಭಯದಿಂದ ಆ ವಿವರಣೆಯನ್ನು ಇಲ್ಲಿ ಎತ್ತಿ ಬರೆಯಲಿಲ್ಲ. ಚಾವುಂಡರಾಯನಿಗೆ ಪೂರ್ವೋಕ್ತ ಬಿರುದುಗಳ ಹೊರತು "ಸಮ್ಯಕ್ತ್ವ ರತ್ನಾಕರ", "ಶೌಚಾಭರಣ", "ಸತ್ಯ ಯುಧಿಷ್ಠಿರ", "ಗುಣರತ್ನ ಭೂಷಣ" ಎಂಬ ಬಿರುದುಗಳೂ ಇದ್ದುವು. ಇವು ತನ್ನ ಸದಾಚಾರ ಪೂರ್ಣವಾದ ಧಾರ್ಮಿಕ ಜೀವನಕ್ಕೆ ಪರ್ಯಾಪ್ತ ಉಜ್ವಲ ನಿದರ್ಶನಗಳಾಗಿವೆ. ಈಗ ವೀರಮಾರ್ತಂಡನ ಕವಿತ್ವ ಶಕ್ತಿಯ ವಿಷಯದಲ್ಲಿಯೂ ಒಂದೆರಡು ಮಾತುಗಳನ್ನು ಉಲ್ಲೇಖಿಸಿ ಈ ನಿಬಂಧವನ್ನು ಪೂರ್ಣಮಾಡುವೆನು. ಪ್ರಕೃತ, ಚಾವುಂಡರಾಯನ ಎರಡೇ ಗ್ರಂಥಗಳು ಉಪಲಬ್ಧವಾಗಿವೆ. ಇವೆರಡೂ ಗದ್ಯ ಗ್ರಂಥಗಳು. ಆದರೆ ಇವುಗಳ ಆದ್ಯಂತಗಳಲ್ಲಿಯೂ ಮಧ್ಯದಲ್ಲಿಯೂ ಕೆಲವು ಪದ್ಯಗಳು ಸಿಕ್ಕುತ್ತವೆ. ಇವು

* ರನ್ನ ಕವಿ ಪ್ರಶಸ್ತಿ.

† ಗೊಮ್ಮಟಸಾರ ವೃತ್ತಿಯ ಆದಿಯಲ್ಲಿ ಈ ಪ್ರಕಾರವಾಗಿದೆ:—"ರಣರಂಗ ಮಲ್ಲ, ಅಸಹಾಯ ಪರಾಕ್ರಮ, ಗುಣರತ್ನ ಭೂಷಣ, ಸಮ್ಯಕ್ತ್ವ ರತ್ನ ನಿಲಯ."

ಗಳಿಂದಲೇ ಈತನ ಪದ್ಯ ರಚನೆಯ ಕಲೆಯು ಸ್ಪಷ್ಟವಾಗುವುದು. ಇವನ ಗ್ರಂಥಗಳೆರಡರಲ್ಲಿ ಒಂದು ಸಂಸ್ಕೃತವೂ ಮತ್ತೊಂದು ಕನ್ನಡವೂ ಆಗಿದೆ. ಸಂಸ್ಕೃತ ಗ್ರಂಥದ ಹೆಸರು ಚಾರಿತ್ರಸಾರವೆಂದೂ, ಕನ್ನಡ ಗ್ರಂಥದ ಹೆಸರು ಚಾವುಂಡರಾಯ ಪುರಾಣವೆಂದೂ ಎಲ್ಲರಿಗೂ ತಿಳಿದ ಅಂಶ. ಚಾವುಂಡರಾಯ ಪುರಾಣದಲ್ಲಿ ೨೪ ತೀರ್ಥಂಕರರ ಜೀವನ ಘಟನೆಗಳು ವರ್ಣಿಸಲ್ಪಟ್ಟಿವೆ. ಈ ಗ್ರಂಥವು ಕ್ರಿ. ೯೭೮ರಲ್ಲಿ ಸಮಾಪ್ತವಾಗಿದ್ದಿತು.* ಈ ಗ್ರಂಥದ ವಿಷಯದಲ್ಲಿ, "ಈಗ ದೊರೆತಿರುವ ಗದ್ಯ ಗ್ರಂಥಗಳಲ್ಲಿ ಚಾವುಂಡರಾಯ ಪುರಾಣವೇ ಅತಿ ಪುರಾತನವಾದುದು. ಈ ದೊಡ್ಡ ಗದ್ಯ ಗ್ರಂಥವು ಹತ್ತನೆಯ ಶತಮಾನದ ಭಾಷಾಶೈಲಿಯನ್ನು ತಿಳಿವುದಕ್ಕೆ ಬಹಳ ಉಪಯೋಗವಾದ ಸಾಧನವಾಗಿದೆ" ಎಂದು ವಯೋವೃದ್ಧರೂ ಕನ್ನಡ ಭಾಷಾ ತತ್ತ್ವಜ್ಞರೂ ಅನುಭವಿಗಳೂ ಆದ ಶ್ರೀಯುತ ಪ್ರಾಕ್ತನ ವಿಮರ್ಶ ವಿಚಕ್ಷಣ ರಾ. ನರಸಿಂಹಾಚಾರ್ಯರ ಮತವಾಗಿದೆ.

ಎರಡನೆಯ ಚಾರಿತ್ರಸಾರದಲ್ಲಿ ಅಣುವ್ರತ, ಶಿಕ್ಷಾವ್ರತ, ಸಂಯಮ, ಭಾವನಾ, ಪರೀಷಹ ಜಯ, ಧ್ಯಾನ, ಅನುಪ್ರೇಕ್ಷೆ ಮುಂತಾದ ಗೃಹಸ್ಥ ಮತ್ತು ಮುನಿಗಳ ಚಾರಿತ್ರವು ವರ್ಣಿಸಲ್ಪಟ್ಟಿದೆ. ವೀರಮಾರ್ತಂಡನ ಸಂಸ್ಕೃತ ಭಾಷಾ ಪಾಂಡಿತ್ಯವನ್ನೂ ವಾಚಕರ ಮುಂದಿಡುವುದು ಮುಖ್ಯವೆಂದು ತಿಳಿದು ಈ ಗ್ರಂಥದಿಂದ ನಿಮ್ನ ಲಿಖಿತ ಕೆಲವು ಶ್ಲೋಕಗಳು ಎತ್ತಿ ಬರೆಯಲ್ಪಟ್ಟಿವೆ :—

ಅರಿ ಹನನ ರಜೋ ಹನನ ರಹಸ್ಯ ಹರಂ ಪೂಜನಾರ್ಹಮರ್ಹಂತಂ ।
ಸಿದ್ಧಾನ್ ಸಿದ್ಧಾಷ್ಟ ಗುಣಾನ್ ರತ್ನತ್ರಯ ಸಾಧಕಾನ್ ಸ್ತುವೇ ಸಾಧೂನ್ ॥ ೧ ॥

ಶ್ರೀಮಜ್ಜಿನೇಂದ್ರ ಕಥಿತಾಯ ಸುಮಂಗಲಾಯ ಲೋಕೋತ್ತಮಾಯ ಶರಣಾಯ
ವಿನೇಯ ಜಂತೋಃ ।
ಧರ್ಮಾಯ ಕಾಯ ವಚನಾಶಯ ಶುದ್ಧಿತೋಹಂ ಸ್ವರ್ಗಾಪವರ್ಗ ಫಲದಾಯ
ನಮಸ್ಕರೋಮಿ ॥ ೨ ॥

ಈ ಆದಿಯ ಮಂಗಳ ಶ್ಲೋಕಗಳೆರಡೂ ಮಾಧುರ್ಯ ಸೌಕುಮಾರ್ಯಾದಿ ಕಾವ್ಯೋಚಿತ ಗುಣಗಳಿಂದ ಓತಪ್ರೋತವಾಗಿವೆ.

ಸಮ್ಯಕ್ತ್ವಮಂಗ ಹೀನಂ ರಾಜ್ಯಮಿವ ಶ್ರೇಯಸೇ ಭವೇನ್ನೈವ ।
ನ್ಯೂನಾಕ್ಷರೋಹಿ ಮಂತ್ರೋ ನಾಲಂ ವಿಷ ವೇದನಾಚ್ಛಿತ್ಯೈ† ॥

* ಕನ್ನಡ ಕವಿಚರಿತೆ, ಪ್ರಥಮ ಸಂಪುಟ, ಪುಟ ೩೯.

† ಈ ಎರಡೂ ಶ್ಲೋಕಗಳು ಕ್ರಮವಾಗಿ ಸಮಂತಭದ್ರರ ನಿಮ್ನ ಲಿಖಿತ ಶ್ಲೋಕಗಳ ಅಭಿಪ್ರಾಯವನ್ನೇ ಪ್ರಕಟಮಾಡುವುವು :—

ನಾಂಗ ಹೀನಮಲಂ ಚ್ಛೇತುಂ ದರ್ಶನಂ ಜನ್ಮ ಸಂತತೇಃ ।
ನಹಿ ಮಂತ್ರೋಕ್ಷರನ್ಯೂನೋ ನಿಹಂತಿ ವಿಷ ವೇದನಾಂ ॥
ದರ್ಶನಂ ಜ್ಞಾನ ಚಾರಿತ್ರಾತ್ಸಾಧಿಮಾನಮುಪಾಶ್ನುತೇ ।
ದರ್ಶನಂ ಕರ್ಣಧಾರಂ ತನ್ಮೋಕ್ಷ ಮಾರ್ಗೇ ಪ್ರಚಕ್ಷ್ಯತೇ ॥

(ರತ್ನಕರಂಡ)

ಈ ಶ್ಲೋಕದಲ್ಲಿ ಕವಿಯು ಅಂಗಹೀನವಾದ ರಾಜ್ಯದಂತೆ ಅಂಗರಹಿತವಾದ ಸಮ್ಯಕ್ತ್ವವು ಫಲಕಾರಿಯಾಗುವುದಿಲ್ಲವೆಂದು ಅಂಗರಹಿತವಾದ ಸಮ್ಯಕ್ತ್ವವನ್ನು ಅಂಗಹೀನವಾದ ರಾಜ್ಯಕ್ಕೆ ಹೋಲಿಸಿದ್ದಾನೆ. ಇದರಿಂದ ಚಾವುಂಡರಾಯನ ರಾಜ್ಯಕಾರ್ಯಪಟುತ್ವವೂ ಅನುಭವವೂ ಸ್ವಯಂ ವ್ಯಕ್ತವಾಗುವುವು.

ಭವಾಬ್ಧೌ ಭವ್ಯ ಸಾರ್ಥಸ್ಯ ನಿರ್ವಾಣದ್ವೀಪ ಯಾಯಿನಃ ।
ಚಾರಿತ್ರ ಯಾನ ಪಾತ್ರಸ್ಯ ಕರ್ಣಧಾರೋಹಿ ದರ್ಶನಂ† ॥

ಈ ಶ್ಲೋಕದಲ್ಲಿ ಅರ್ಥವಿಶಿಷ್ಟತೆಯು ಇಲ್ಲದಿದ್ದರೂ ಬಂಧನವು ಸುಂದರವಾಗಿದೆ.

ತತ್ತ್ವಾರ್ಥ ರಾದ್ಧಾಂತ ಮಹಾಪುರಾಣೇಷ್ವಾಚಾರ ಶಾಸ್ತ್ರೇಷು ಚ ವಿಸ್ತರೋಕ್ತಂ ।
ಆಖ್ಯಾತ್ಸಮಾಸಾದಸುಯೋಗವೇದಿ ಚಾರಿತ್ರಸಾರಂ ರಣರಂಗಸಿಂಹಃ ॥

ಈ ಅಂತಿಮ ಶ್ಲೋಕದಲ್ಲಿ ಕವಿಯು ತನ್ನ ರಣರಂಗಸಿಂಹ ಬಿರುದನ್ನು ಸ್ವಯಂ ಹೇಳಿಕೊಂಡಿದ್ದಾನೆ.

**ಕೆ. ಭುಜಬಲಿಶಾಸ್ತ್ರೀ, ಆರಾ.**

---

# ಕನ್ನಡ ಸಾಹಿತ್ಯದಲ್ಲಿ ಕರ್ಣಾಟಕ ಚಿತ್ರ ಕಲೆ

ಈ ಪ್ರಪಂಚದಲ್ಲಿ ಜೀವನು ತನ್ನ ಸುತ್ತುಮುತ್ತಲಿರುವ ವಸ್ತು ಜಾತಗಳನ್ನೂ ಜೀವ ಜಾತಗಳನ್ನೂ ನೋಡಿ, ತನ್ನ ಒಳಗೂ ಹೊರಗೂ ತುಂಬಿರುವ ಶಕ್ತಿಗಳ ಲೀಲೆಯನ್ನು ಅನುಭವಿಸಿ, ಕೆಲವೊಂದು ಭಾವನೆ—ಕೆಲವೊಂದು ವಿಚಾರವುಳ್ಳವನಾಗುತ್ತಾನೆ. ಅದನ್ನು ಅವನು ತನ್ನಿಂದ ಇತರರಾದವರ ಮನಸ್ಸಿನಲ್ಲಿ ಬಿಂಬಿಸುವಂತೆ—ತನಗಾದ ಅನುಭವದ ಸದೃಶವಾದ ಅನುಭವವು ಅವರಲ್ಲುಂಟಾಗುವಂತೆ—ಪ್ರಯತ್ನಿಸುವನು. ಈ ಪ್ರಯತ್ನವನ್ನು ಪ್ರತಿ ಜೀವನೂ ಕ್ಷಣ ಕ್ಷಣಕ್ಕೂ ಮಾಡುತ್ತಿರುತ್ತಾನೆ. ಆದರೆ ಯಾವನು ಇದನ್ನು ಅತಿ ಕುಶಲವಾಗಿ ಮಾಡುವನೋ ಅವನೇ ಶಿಲ್ಪಿ. ತನ್ನ ರಸ-ಭಾವಗಳ, ವಿಚಾರ-ವಿಕಾರಗಳ ಮೂರ್ತಿಯನ್ನು ಕಲ್ಲಿನಲ್ಲಿ ಕೆತ್ತಲಿ, ಬಣ್ಣದಲ್ಲಿ ಬರೆಯಲಿ, ಮಾತಿನಲ್ಲಿ ಮೂಡಿಸಲಿ, ಇಂಚರದಲ್ಲಿ ಸೊಲ್ಲಿಸಲಿ, ಅವನಾವುದೇ ಹಾದಿಯನ್ನು ಹಿಡಿದರೂ ಅವನು ಶಿಲ್ಪಿ. ಅವನ ಕೌಶಲದ ಉಚ್ಚ ನೀಚತೆಯಂತೆ ಅವನ ಹಿರಿ-ಕಿರಿತನಗಳು ಗೊತ್ತಾಗುವುವು. ಆದಕಾರಣ, ಸಾಹಿತ್ಯ-ಸಂಗೀತ, ವಾಸ್ತು-ವಿಗ್ರಹ, ಚಿತ್ರ-ನೃತ್ಯಾದಿ ಕಲೆಗಳೆಲ್ಲ ಒಂದೇ ಅನುಭವ ಮೂರ್ತಿಯ ಭಿನ್ನ ಮುಖಗಳು.

**ಜಾತಿ ಜೀವನವೂ ಕಲಾಭಿವೃದ್ಧಿಯೂ.**—ಕನ್ನಡಿಗ, ತೆಲುಗ, ತಮಿಳ ಮೊದಲಾದ ಜಾತಿಗಳು ಅಭ್ಯುದಯವನ್ನು ಹೊಂದುತ್ತಿರುವಾಗ ಅವರವರ ಜಾತಿ ಜೀವನವು, ಸಾಹಿತ್ಯ-ಸಂಗೀತ, ವಾಸ್ತು-ವಿಗ್ರಹ, ಚಿತ್ರ-ನೃತ್ಯಾದಿ ಕಲೆಗಳಲ್ಲಿ ವಿವಿಧಾಕಾರವಾಗಿ ರೂಪುಗೊಳ್ಳುವುದು. ಒಂದೊಂದು ಕಾಲಕ್ಕೆ ಒಂದೊಂದು ಕಲೆಯು ಹೆಚ್ಚು ಹೆಚ್ಚಳವನ್ನು ಹೊಂದಿದರೂ ಇವೆಲ್ಲವೂ ಒಂದೇ ಕಾಲಕ್ಕೆ ಹೆಚ್ಚುಕಡಿಮೆಯಾಗಿ ಇರತಕ್ಕವುಗಳೇ. ಜಾತಿ ಜೀವನದ ಇಳಿತ ಏರಿತಗಳನ್ನು ಕಲೆಗಳ ವೃದ್ಧಿಕ್ಷಯದಿಂದ ತಿಳಿದುಕೊಳ್ಳಬಹುದು. ಮನುಷ್ಯನಿಗೆ ಮುಖವು ಹೇಗೋ ಹಾಗೆ ನಾಡಿಗೆ ಕಲೆಗಳು. ಅವರವರ ಸುಖದುಃಖಗಳು ಅವರವರ ಮುಖದಲ್ಲಿ ಹೇಗೆ ಮೂಡುವುವೋ ಹಾಗೆ ಬೇರೆ ಬೇರೆ ನಾಡಿನ ವಿವಿಧ ಸುಖದುಃಖಗಳು ಅಲ್ಲಲ್ಲಿಯ ಕಲೆಗಳಲ್ಲಿ ಮೈದೋರುವುದುಂಟು. ಆಯಾ ನಾಡಿನ ಕಲಾಚರಿತ್ರೆಯು ಅಲ್ಲಲ್ಲಿಯ ಜನಾಂಗದ ಚಿತ್ತದ ಚಿತ್ರಶಾಲೆಯು, ಅಂತಃಕರಣದ ತರಂಗಮಾಲೆಯು, ಮನದ ಉಯ್ಯಾಲೆಯು, ಬುದ್ಧಿಯ ನಿಶ್ಚಲತೆಯ ಚರಿತೆಯೇ ಆಗಿರುವುದು. ಹೀಗೆ ಕಲೆಗಳು ನಾಡಿನ ಮನಶ್ಚಂದ್ರನ ಕಲೆಗಳಿದ್ದಂತೆ. ದೇವರ ಮನಸ್ಸಿನಿಂದ ಚಂದ್ರಕಲೆ ಹುಟ್ಟಿತೆಂದು ನಮ್ಮ ಶ್ರುತಿಗಳು ಹೇಳುವುವು. ಜನಾಂಗದ ಮನಸ್ಸಿನಿಂದ ಕಲಾಚಂದ್ರನು ಉದಯಿಸುವನೆಂದು ನಾವು ಹೇಳಬಹುದು. ಚಂದ್ರನ ವೃದ್ಧಿಕ್ಷಯವು ಜಗತ್ತಿನ ಶುಕ್ಲ ಕೃಷ್ಣ ಪಕ್ಷವಾಗುವಂತೆ, ಕಲಾಚಂದ್ರನ ವೃದ್ಧಿಕ್ಷಯವು ನಾಡಿನ ಚರಿತೆಯಲ್ಲಿ ಶುಕ್ಲ ಕೃಷ್ಣ ಪಕ್ಷಗಳನ್ನುಂಟು ಮಾಡುವುವು. ಚಿಕದೇವರಾಯನ ಕಾಲದನಂತರದಿಂದ ಕರ್ನಾಟಕದ ಚರಿತೆಯಲ್ಲಿ

ಕೃಷ್ಣಪಕ್ಷವುಂಟಾಗಿದೆ. ಏಕೆಂದರೆ, ಜೀವನದ ಅಧೋಗತಿಯು ಕಲೆಗಳ ಅಧೋಗತಿಯೇ.

**ಕಲೆಗಳು ಒಂದನ್ನೊಂದು ಪರಿಪೋಷಿಸುವುವು.**—ನಮ್ಮ ವಿಗ್ರಹಗಳಲ್ಲಿ—ಮೂರ್ತಿಗಳಲ್ಲಿ—ಕೆತ್ತನೆಯ ಗೊಂಬೆಗಳಲ್ಲಿ ಕಂಡುಬರುವ ಒಂದು ವಿಧವಾದ ವಾಸ್ತವ ರೀತಿಯು (Realism) ನಮ್ಮ ಕವಿಗಳ ವರ್ಣನಾ ಪದ್ಧತಿಯಲ್ಲಿಯೂ ಕಾಣಬಹುದು. ನಮ್ಮ ಕಾವ್ಯಗಳಲ್ಲಿ ಕಂಡುಬರುವ ಉಪಮಾ, ಉತ್ಪ್ರೇಕ್ಷಾ, ರೂಪಕಗಳ ರೀತಿಯನ್ನು ವಾಸ್ತು ವಿಗ್ರಹ ಶಿಲ್ಪದಲ್ಲಿಯೂ ಚಿತ್ರಶಿಲ್ಪದಲ್ಲಯೂ ಕಾಣಬಹುದು. ಕರ್ಣಾಟಕ ಸಂಗೀತದ ಮಾಧುರ್ಯ ಪ್ರೀತಿಯನ್ನೂ, ತಾಲ ಲಯದ ರೀತಿಯನ್ನೂ, ಕನ್ನಡ ಕಾವ್ಯಗಳೊಳಗಿನ ಅನುನಾಸಿಕಗಳ ವಿವಿಧತೆಯಲ್ಲಿಯೂ, ಮೃದುವರ್ಣಗಳ ವಿಮಲತೆಯಲ್ಲಿಯೂ, ಷಟ್ಪದಿ, ಸಾಂಗತ್ಯ, ತ್ರಿಪದಿಗಳ ನಿರ್ಮಿತಿಯಲ್ಲಿಯೂ ಕಾಣಬಹುದು. ಪ್ರಸ್ತುತ ನಿಬಂಧದಲ್ಲಿ ನಮ್ಮ ಕಾವ್ಯಗಳಲ್ಲಿ ಕಂಡುಬರುವ ಚಿತ್ರಕಲಾ ಸಂಸ್ಕಾರವನ್ನು ದಿಗ್ದರ್ಶಿಸಲು ಯತ್ನಿಸಿದ್ದೇನೆ.

**ಕರ್ಣಾಟಕದಲ್ಲಿ ಚಿತ್ರಕಲೆ.**—ಇತ್ತೀಚೆಯ ನಮ್ಮ ಚಿತ್ರಕಲೆಯ ಬಗ್ಗೆ ನಮಗೇನೂ ಗೊತ್ತಿಲ್ಲವೆಂದರೂ ಸಲ್ಲುವುದು. ಮುಮ್ಮಡಿ ಕೃಷ್ಣರಾಜರ ಆಸ್ಥಾನದಲ್ಲಿದ್ದ ಚಿತ್ರಗಾರ ತಿಪ್ಪಣ್ಣನವರ ಹೆಸರು ಜಗನ್ಮೋಹನ ಪ್ರಾಸಾದದಲ್ಲಿರುವ ಕೆಲವೊಂದು ಚಿತ್ರಗಳೂ, ಹಂಪೆಯ ವಿರೂಪಾಕ್ಷೇಶ್ವರನ ರಂಗ ಮಂಟಪದ ಮೇಲ್ಗಡೆ ಬರೆಯಲ್ಪಟ್ಟ ಎರಡು ವಿಶಾಲ ಚಿತ್ರಗಳೂ, ವಿಜಾಪುರ ವಸ್ತು ಸಂಗ್ರಹಾಲಯದೊಳಗಿನ ಕೆಲ ಚಿತ್ರಗಳೂ—ಇವಷ್ಟನ್ನು ಬಿಟ್ಟರೆ ನಮ್ಮ ಚಿತ್ರಗಾರರು ಬರೆದ ಚಿತ್ರಗಳು ಎಂದು ತೋರಿಸಲು ಇನ್ನು ಬೇರೆ ಇಲ್ಲವೇ ಇಲ್ಲವೆಂದರೆ ತಪ್ಪಾಗಲಾರದು.

"ಕರ್ನಾಟಕ ಧುರೀಣ"ದ ವಿಶೇಷ ಸಂಚಿಕೆಯಲ್ಲಿ "ಜಿಜ್ಞಾಸೆ" ಎಂಬ ತಮ್ಮ ಒಂದು ಲೇಖನದಲ್ಲಿ "ಗೆಳೆಯರ ಗುಂಪಿ"ನ ದತ್ತಾತ್ರೇಯ ಬೇಂದ್ರೆಯವರು ಪ್ರತಿಪಾದಿಸಿದಂತೆ, "ಚೀರಘಟ್ಟಿ"ಯು ಕರ್ಣಾಟಕ ಐತಿಹಾಸಿಕ ಪುರುಷನೆಂದೇ ನಿರ್ಣೀತವಾದರೆ, ಭಾರತೀಯ ಚಿತ್ರಶಿಲ್ಪ ಪರಂಪರೆಯೆಂದು ನಾವು ಹೆಮ್ಮೆಯಿಂದ ಹೇಳಿಕೊಳ್ಳುವ ಅಜಂತಾ ಚಿತ್ರಶಿಲ್ಪಿಗಳ ಮಹಾಗುರುವು—ಮೂಲಪುರುಷನು, ನಮ್ಮ ಕರ್ಣಾಟಕದ "ಚೀರಘಟ್ಟಿ"ಯೇ ಎಂದು ಹೇಳಲು ಯಾವ ಪ್ರತ್ಯವಾಯವೂ ಇಲ್ಲ. ಬಾದಾಮಿಯ ಚಾಲುಕ್ಯ ಇಮ್ಮಡಿ ಪುಲಿಕೇಶಿಯಿಂದ ಮೊದಲ್ಗೊಂಡು ಕಲ್ಯಾಣದ ಚಾಲುಕ್ಯ ವಿಕ್ರಮನ ವರೆಗೂ ಅಜಂತಾ ಗುಹೆಗಳಲ್ಲಿ ಕನ್ನಡ ಚಿತ್ರಶಿಲ್ಪಿಗಳು ತಮ್ಮ ಕೈಕುಸುರಿನ ಕೈವಾಡದ ಒಪ್ಪವಿಟ್ಟಿದ್ದಾರೆ! ಹೀಗಿದ್ದೂ, ಇಂಥ ಕರ್ಣಾಟಕ ಚಿತ್ರಶಿಲ್ಪಿಗಳ ಪರಂಪರೆಯವರು ರಚಿಸಿದ ಕೃತಿಗಳು, ಚಾಲುಕ್ಯ ವಿಕ್ರಮನಿಂದೀಚೆಗೆ ಸಿಕ್ಕಬೇಕಾದಷ್ಟೇಕೆ ಸಿಕ್ಕಿಲ್ಲವೋ ತಿಳಿಯದಾಗಿದೆ. ಅಜಂತಾ ಚಿತ್ರಪದ್ಧತಿಯು ಕರ್ಣಾಟಕದಲ್ಲಿ ಕಾಲಮಾನಕ್ಕನುಸರಿಸಿ ಮಾರ್ಪಡುತ್ತ ಬಂದುದು ೧೫ನೆಯ ಶತಮಾನದಿಂದೀಚೆಗೆ "ನಾಗಪದ್ಧತಿ" ಎಂಬುದೊಂದು ವಿಕೃತ ಸ್ವರೂಪದಿಂದ ತಿಳಿದು ಬರುವಹಾಗಿದೆ. ಇರಲಿ; ಇವೆಲ್ಲವುಗಳ ಚರ್ಚೆಗೆ ಇಲ್ಲಿ ಅನುವಿಲ್ಲ. ನಮ್ಮ ಕನ್ನಡ

ಸಾಹಿತ್ಯದಲ್ಲಿ ನಮ್ಮ ಕವಿಗಳು ಚಿತ್ರಗಳನ್ನು ಹೇಗೆ ಮನೋಹರವಾಗಿ ಬರೆದಿದ್ದಾರೆಂಬುದನ್ನು ನೋಡುವ.

ಪಂಪ, ಅಭಿನವ ಪಂಪ, ಚಾವುಂಡರಸ, ವೃತ್ತಿವಿಲಾಸ, ಅಗ್ಗಳ, ಪಾರ್ಶ್ವಪಂಡಿತ ಸೋಮರಾಜ, ನಾಗರಾಜ, ನೇಮಿಚಂದ್ರ, ಹರಿಹರ, ಎರೆಯ ಗುಣವರ್ಮ, ಜನ್ನ, ಪೊನ್ನ, ಲಕ್ಷ್ಮೀಶ, ರುದ್ರಭಟ್ಟ, ಮಂಗರಸ ಮೊದಲಾದ ಈ ಎಲ್ಲ ಕವಿಗಳ ಕೃತಿಗಳಲ್ಲಿಯೂ, ಸಂದರ್ಭೋಚಿತವಾಗಿ ಚಿತ್ರ ನಿರ್ಮಿತಿಯನ್ನು ಮಾಡಿದುದುಂಟು. ಅನುವರಿತು ಕೆಲವು ಕವಿಗಳ ಕೆಲವು ಚಿತ್ರಗಳನ್ನು ಮಾತ್ರ ಇಲ್ಲಿ ವರ್ಣಿಸಲು ಯತ್ನಿಸುತ್ತೇನೆ.

"ಮಲ್ಲಿನಾಥ ಪುರಾಣ"ದಲ್ಲಿ ಅಭಿನವ ಪಂಪನು "ಉದ್ಯಾನ ಮಾಲೆ" ಯೊಂದನ್ನು "ರಸ ಚಿತ್ರ"ವಾಗಿ (Painting) ಬರೆದಿದ್ದಾನೆ: "ನವ ಯೌವನ ಸೌವರ್ನಪೂರ್ವ ಚಿತ್ರಕಂ ತನ್ನ ಪಿಂತೆ ಮೆಲ್ಲನೆ ಬಂದು ಕೆಲದೊಳಿರ್ದ ಕನ್ನೆಯ ಕಯ್ಯ ಚಿತ್ರಪಟಮಂ ಕೊಂಡು ತನ್ನರಸನ ಪದ ಪಯೋಜ ಪಾರ್ಶ್ವದೊಳ್ ಪಸರಿಸು"ವಂತೆ ಕಲ್ಪಿಸಿದ್ದಾನೆ. ಅರಸನ "ಪದ ನಖ ಮಯೂಖ ಲೇಖೆ"ಯೇ ಆ ಚಿತ್ರಕನ ಚಿತ್ರದ "ನಿರ್ವಾಣ ರೇಖೆ*"ಯಾಯಿತಂತೆ. ಎಂದರೆ, ಸೀಮಾ ರೇಖೆ (Border Line) ಆಯಿತಂತೆ. ಈ ಪಟದಲ್ಲಿ ಕವಿಯು, ಗಿಳಿ, ಕೋಕಿಳ, ಕಳಹಂಸ, ರಥಾಂಗ ಮಿಥುನ, ಬರ್ಹಿ ಮಂಡಳ—ಇವುಗಳ ಚಿತ್ರವನ್ನು, "ಕಂದರ್ಪನ ಬಾಣ ಪಂಚಕದವೊಲ್ ಚಿತ್ರಕ್ಕಲೆ ಶ್ಶೋಭೆ"ಯನ್ನುಂಟುಮಾಡುವಂತೆ ಒಟ್ಟಾಗಿ ಬರೆಯಬೇಕೆಂದಿದ್ದಾನೆ. ಹೀಗೆ ಚಿತ್ರಕ್ಕೆ ಶ್ಶೋಭೆಯಾಗುವ ಹಾಗೆ ಮಾಡಬೇಕಾದರೆ ಸುಮ್ಮನೆ ಎಲ್ಲಾದರೂ ನಾಲ್ಕು ಕಡೆಗಳಲ್ಲಿ ಗಿಳಿ ಕೋಕಿಳ ಕಳಹಂಸಗಳನ್ನು ಬರೆದುಬಿಟ್ಟರಾದೀತೆ? ಚಿತ್ರದ "ಸಮುದಾಯ ಶೋಭೆ" (Composition of the Whole Picture) "ಲೋಚನಾಕೃಷ್ಟಿಯಂ ಪುಟ್ಟಿಸು"ವ ಹಾಗಿರಬೇಡವೆ? ಅದಕ್ಕಾಗಿ, ವಿವಿಧ ತರು ಲತಾ ಗುಲ್ಮಗಳ—ಮಾವಿನ ಮರಗಳ, ಕಮಲ ಕುಟ್ಮಲಗಳ, ತಿಳಿನೀರ ಕೊಳದ "ಉದ್ಯಾನ ಮಾಲೆ"ಯೊಂದನ್ನು—ನಿಸರ್ಗ ಚಿತ್ರವೊಂದನ್ನು (Landscape) ಬರೆದು ಗಿಳಿ ಕೋಕಿಳ ಕಳಹಂಸಾದಿಗಳನ್ನು ಅಲ್ಲಲ್ಲಿ ಬಗೆಬಗೆಯ ಭಂಗಿಗಳಲ್ಲಿ ಸೇರ್ಕೆಗೊಳಿಸಿದ್ದಾನೆ. ಅದು ಹೇಗೆಂಬುದು ಮುಂದಿನ ನಾಲ್ಕು ನುಡಿಗಳಲ್ಲಿ ಬಣ್ಣಿಸಲ್ಪಟ್ಟಿದೆ. "ಅಪರಸ್ಥಲ"ದಲ್ಲಿ, ಎಂದರೆ "ಹಿನ್ನೆಲೆ"ಯಲ್ಲಿ (Back-ground) ಬಳ್ಳಿ, ಮಾವು, ಅಸುಗೆ, ಕೊಸಗೆ, ವಸಂತ ದೂತಿ, ಸುರಹೊನ್ನೆ, ದವನ, ತಮಾಳ, ಮುರುಗ—ಇತ್ಯಾದಿ ವಿವಿಧ ತರುಲತೆಗಳ ಇರವನ್ನು ಸೂಚಿಸಿ ಮುಂದೆ ಹೀಗೆ ಚಿತ್ರಿಸಿದ್ದಾನೆ:—

ತಿರಿದು ಕೊಳಲ್ಕೆ ಬಂದಪುವು ಕೆಂದಳಿರಂ ಗಿಳಿ ತಾಮ್ರ ತುಂಡದಿಂ
ದಿರಿದಪುದಾಮ್ರದೊಳ್ಮಿಡಿಗಳಂ ಬಿಸ ಕಾಂಡಮನಂಚೆ ಚಂಚುವಿಂ
ಕಿರಿ ಕಿರಿದಾಗಿ ಕರ್ಚಿ ಕುಡುಕಂ ಮರಿಗಿತ್ತಪುವು........

* ಇದೇ ಅರ್ಥದಲ್ಲಿ ರುದ್ರಭಟ್ಟನು, ಒಮ್ಮೆ "ನಿರ್ವಹಣ ರೇಖೆ" ಯೆಂದೂ, ಒಮ್ಮೆ "ನಿರ್ವಾಣ ರೇಖೆ" ಎಂದೂ ಪ್ರಯೋಗಿಸಿದ್ದಾನೆ.

ಎಂಬ ಚಿತ್ರದ ಬಲ್ಮೆಯ ವಿಮರ್ಶೆಯನ್ನು ಅಭಿನವ ಪಂಪನು, 'ಕಣ್ಸೆರೆದಪ್ಪೊಲ್' ಇದ್ದಿತೆಂದೂ ಚಿತ್ರಕನ ಚಿತ್ರದ 'ಚಿತ್ರವಿಧ'ಕ್ಕೆ ಅರಸು ಮೆಚ್ಚಿದನೆಂದೂ ಒಂದೆರಡು ಮಾತುಗಳಲ್ಲಿಯೇ ಮನಮೊಗುವಂತೆ ಮಾಡಿದ್ದಾನೆ. ಚಿತ್ರಕನ ಚಿತ್ರದ "ಚಿತ್ರವಿಧ"ಕ್ಕೆ ಅರಸು ಮೆಚ್ಚಿದನು ಎಂಬ ಮಾತನ್ನು "The King was enchanted by the marvellous technique of the artist" ಎಂಬುದಾಗಿ ಹೇಳಿದರೆ ಚೆನ್ನಾಗಿ ತಿಳಿದೀತು. ಆ ಚಿತ್ರಕನ "ರಸಚಿತ್ರ"ವಂತಿರಲಿ. ಅಭಿನವ ಪಂಪನ ಶಬ್ದಚಿತ್ರವು ಕೂಡ ಎದ್ದು ಬರುವಂತಿರುವುದು. ಆತನ 'ವರ್ಣವ್ಯಕ್ತಿ'ಯ ಕೌಶಲವು, ಎಂದರೆ "ವರ್ಣಕ್ರಮ"ವು (Colour Scheme) ಶಬ್ದಗಳಲ್ಲಿಯೂ ಸಹ ಸ್ಪಷ್ಟವಾಗಿ ತೋರುವುದು. ಕೆಂದಳಿರಲ್ಲಿ ಹಚ್ಚನೆಯ ಗಿಳಿಯನ್ನು ಕುಳ್ಳಿರಿಸಿದ್ದಾನೆ; ಹಚ್ಚನೆಯ ಮಾವಿಂಡಿಯನ್ನು ತಾಮ್ರತುಂಡದಿಂದ ಕುಕ್ಕಿಸಿದ್ದಾನೆ; ಅಂಚೆಯ ಕರ್ಬುರಚ್ಛವಿಯ ಚುಂಚುವಿನಿಂದ ತಿಳಿ ಹಸಿರಿನ ಬಿಸ ಕಾಂಡವನ್ನು ಕಚ್ಚಿಸಿದ್ದಾನೆ; ಕೆಂಪಿನ ನಡುವೆ ಹಸಿರು ಮೂಡಿಸಿ ಹಸಿರಿನ ನಡುವೆ ಮತ್ತೆ ಕೆಂಪು ಕೂಡಿಸಿ ಒಂದರಲ್ಲಿ ಒಂದರ ರೂಪು ಒಡೆದು ಕಾಣುವ ಹಾಗೆ ಮಾಡಿದ್ದಾನೆ. ಹಸಿರು ಕೆಂಪುಗಳ "ಅಪರಸ್ಥಲ"ದಲ್ಲಿ ಅರಸಂಚೆಯೊಂದನ್ನಿರಿಸಿ ಅದೂ ಒಡೆದು ಕಾಣುವ ಹಾಗೆ ಬರೆದಿದ್ದಾನೆ. ಅರಸಂಚೆಯು ತನ್ನ ಮರಿಗೆ ಗುಟುಕು ಕೊಡುವ ಹಾಗೆ ಯೋಜಿಸಿ ದೊಡ್ಡದರ ಮುಂದೆ ಸಣ್ಣದನ್ನು ವಿಂಗಡಿಸಿ ತೋರಿಸಿದ್ದಾನೆ. ಕವಿಯೆಂದಂತೆ ಇದು ಚಿತ್ರಕನ ಚಿತ್ರದ "ಚಿತ್ರವಿಧ" ಎನ್ನುವುದಕ್ಕಿಂತ ಕವಿಯ ಚಿತ್ರದ "ಚಿತ್ರವಿಧ" ಎಂದರೆ ಒಪ್ಪುವುದು. ಇರಲಿ; "ಅಜನುಂ ಬರೆಯಲ್ಕೆ ಬಲ್ಲನಿಲ್ಲದ" ಪೂಗೊಳವನೊಂದನ್ನು ಪಂಪನು ಅದೇ ಪಟದಲ್ಲಿ ಇಂತು ಚಿತ್ರಿಸಿದ್ದಾನೆ:—

ಚಂ|| ತೆರೆ ಕರೆಗಣ್ಮಿದಪ್ಪುವಿವೆ ತಣ್ಣೆಲರೀ ತಡಿಯೊಳ್ ರಥಾಂಗವೀ ।
ನೆರೆವುವೆ ರಾಜಹಂಸ ಚರಣಾಹತಿಯಿಂ ಜಳಬುದ್ಬುದಂಗಳುಂ ॥
ನೊರೆಗಳುಮಿಾತೆರಳ್ದಪುವೆ ಹೇಮ ಸರೋರುಹ ಕುಟ್ಮಲಂಗಳೀ ।
ಬಿರಿವುವೆ ಪೋಲೆ ಪೂಗೊಳನನಿಂತಜನುಂ ಬರೆಯಲ್ಕೆ ಬಲ್ಲನೇ ॥

ಎಂದು ಹೇಳಿ, ಸರೋವರದಲ್ಲಿ ತೆಂಗಾಳಿಯಿಂದ ತೆರೆಗಳಲೆದಂತೆ, ನೊರೆಗಳು ನೀರುಗುಳ್ಳೆಗಳು ಎದ್ದಂತೆ, ರಥಾಂಗ ಮಿಥುನಗಳೂ ರಾಜಹಂಸಗಳೂ ಕ್ರೀಡಿಸಿದಂತೆ, ನೀರ್ವೂಗಳು ಇದೇ ನಮ್ಮೆದುರಿನಲ್ಲಿಯೇ ಅರಳಿದುವೆಂಬಂತೆ, ಓದುಗರ ಕಣ್ಣೆದುರಿನಲ್ಲಿ ಕಟ್ಟುವ ಹಾಗೆ ಮಾಡಿಬಿಡುವನು.

ಮೇಲೆ ಅಭಿನವ ಪಂಪನ "ವರ್ಣಕ್ರಮ"ದ (Colour Scheme) ಒಂದು ಮಾದರಿಯನ್ನು ನೋಡಿದಂತೆ, ಇತ್ತ ಇನ್ನೊಂದರಲ್ಲಿ ಅವನ "ರೂಪ ನಿಷ್ಪಾದನ" ವಿಧಿಯನ್ನೂ ನೋಡಬಹುದು.—

ಉ|| ಬಟ್ಟಿದುವಾದ ಕಣ್ಣ ಕರಿಯಾಲಿಯ ಸುತ್ತಣ ಸಣ್ಣ ಬೆಳ್ಪು ನೇ ।
ರ್ಪಟ್ಟುದು ಕರ್ಬುರಚ್ಛವಿಯ ಚುಂಚು ಮನಂಗೊಳಿಸಿತ್ತು ಮೆಯ್ಯ ಬಿ ॥
ಳ್ಪಿಟ್ಟಳವಾಯ್ತು ಕಾಲ್ಗಳರಿದಾಳದ ಮೇಗಣ ಕೆಂಪಿನಣ್ಕೆಯಿಂ ।
ದಿಟ್ಟಿಗೆ ಬಂದುದಾರ್ಬರೆವರಿಂತಳವಟ್ಟಿರೆ ರಾಜಹಂಸನಂ ॥

ಮತ್ತೊಂದರಲ್ಲಿ ಅವನು ಬರೆದ ರೂಪಗಳ 'ಭಂಗಿ,' 'ವಿನ್ಯಾಸ' ವಿಧಿಯನ್ನು ಬೇಕಾದರೂ ನೋಡಬಹುದು.—

ಇಂಗುಳಿಕದಣ್ಕೆಯಿಂ ನಯ।
ನಂಗಳ್ ಕಾಡಿಗೆಯ ತೊಡಪದಿಂ ಸರ್ವಾಂಗಂ ರಂಜಿಸೆ ॥

ಒಂದು ಕೋಕಿಲವು

ಕಂ॥ ಕುಡಿದಳಿರನುಗುರ ಮೊನೆಯೊಳ್ ।
ಪಿಡಿದುದು ನತ ಚುಂಚು ನೀಡಿ ಗಳ ಕಂದಳಮಂ ॥
ಮಡಗೆದರಿ ನವಾಮ್ರದ ಪೂ ।
ಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ ॥

ಒಂದು ಕೋಕಿಲದ ಬಾಯಲ್ಲಿದ್ದ ಹೊಸ ಮಾವಿನ ಹೂವಿುಡಿಯನ್ನು ಇನ್ನೊಂದು ಕೋಕಿಲವು ಕುಡಿದಳಿರನ್ನು ತನ್ನುಗುರು ಕೊನೆಯಲ್ಲಿ ಹಿಡಿದು ನಮ್ಮ ಮುಂದೆ ಬಾಗಿ ಕೊರಳು ನೀಡಿ ಚುಂಚು ಚಾಚಿ ಗರಿಗೆದರಿ ಕುಕ್ಕುವಾಗಿನ "ಭಂಗಿ"ಯಲ್ಲಿ ಅದೆಷ್ಟು "ರೇಖಾ ವಿಲಾಸ"ವಿದೆ ಕಂಡಿರಾ? ಇದೀಗ ಅಭಿನವ ಪಂಪನು ಬರೆದ ಪೂರ್ಣ ಚಿತ್ರವಾಯ್ತು. ಇಲ್ಲಿ ಚಿತ್ರವನ್ನು ನಿರೀಕ್ಷಿಸುವ ಅರಸು ಕುಲ ರಸಿಕನಿದ್ದಂತೆ ಕ್ರೂರ ವಿಮರ್ಶಕನೂ ಇದ್ದಾನೆ. ಅರಸು ಚಿತ್ರಕ್ಕೆ ಸುಮ್ಮನೆ ತಲೆದೂಗಿಲ್ಲ; ಒಂದೊಂದನ್ನೂ ಕೂಲಂಕಷವಾಗಿ ಪರೀಕ್ಷಿಸಿದ್ದಾನೆ. "ಸಮುದಾಯ ಶೋಭೆ" ಲೋಚನಾ ಕೃಷ್ಟಿಯಂ ಪುಟ್ಟಿಸುವುದೇ ಎಂದು ನೋಡಿದ್ದಾನೆ. ಬಳ್ಳಿ ಮಾವಿನ, ಪಂಚ ಪಲ್ಲವದ, ಪಲವುಂ ಬಣ್ಣದ ಬೆರಕೆ ಸರಿಯಾಗಿದೆ ಎಂದು ಒಪ್ಪಿದ್ದಾನೆ. ಚಿತ್ರಕನು ತನ್ನ ಚಿತ್ರ ಪಟದಲ್ಲಿ ಬರೆದ ಅಸುಗೆಯ ಪೊಸದಳಿರ ಇಂಗುಳಿಕವೂ, ಕೊಸಗಿನೆಸಳ (ಬೆಟ್ಟದಾವರೆಯ) ಪೊಂಬಣ್ಣವೂ, ವಸಂತ ದೂತಿಯ (ಅದಿಮುರ್ತ್ತೆಯ) ಕಪೋತ ಕಾಂತಿಯೂ, ಸುರ ಹೊನ್ನೆಯ ತಿಲಕದರಲ ಬಿಳುಪೂ, ದವನದ ತಮಾಳ ವನದ ಕಪ್ಪೂ, ಮರುಗದ ಮಯಿಂದವಾಳೆಯ ಹಸಿರೂ, ಅಲ್ಲದೆ ಇನ್ನೂ ಆ ಪಟದಲ್ಲಿ ಬರೆದ ವಿವಿಧ ತರು ಲತಾ ಗುಲ್ಮ ಜಾತಿಯ "ಜಾತಿ ವ್ಯಕ್ತಿ"ಯೂ, ಅವವುಗಳ ವರ್ಣಗಳು ಅಲ್ಲಲ್ಲಿ ಅನುಗುಣವಾಗಿವೆಯೋ ಇಲ್ಲವೋ ಎಂದು ಬೇರೆ ಬೇರೆಯಾಗಿಯೇ 'ಭಾವಿಸಿ' ನೋಡಿದ್ದಾನೆ. "ರೇಖಾ ಶುದ್ಧಿ"ಯನ್ನೂ, "ರೇಖಾ ವಿಲಾಸ"ವನ್ನೂ "ಪರಿಭಾವಿಸಿ" ನೋಡಿ, ಇನ್ನೂ ಅದೆಷ್ಟೆಷ್ಟೋ ಬರೆ ಹಚ್ಚಿ ಸಮುದಾಯ ಶೋಭೆ ಲೋಚನಾಕೃಷ್ಟಿಯಂ ಪುಟ್ಟಿಸುವಂತೆ ಪಟವು ಶಿಲ್ಪ ಶಾಸ್ತ್ರಕ್ಕೂ ಸಮ್ಮತವಾಗಿದೆಯೆಂದರಿತು, ಆಮೇಲೆ ಕಟ್ಟ ಕಡಗ, ಅತನ ವಜ್ರ ಕುಂಡಲಗಳ ಕಾಂತಿ ತಳತಳಿಸಿ ತಲೆಯಂ ತೂಗಿ ಪುಳಕಿತನಾಗಿ—

ತರಳ॥ ಅಕಟ ರೇಖೆಯಿನಪ್ಪ ವರ್ಣದ ಮಿಶ್ರ ವರ್ಣದೊಳಾದ ಕೌ।
ತುಕಮೆ ವೃಕ್ಷ ಲತಾದಿ ಜಾತಿಯೊಳೋಜೆಯಂ ಗೆಡೆಗೊಂಡ ಚಿ ॥
ತ್ರಕನ ಭಾವಮೆ ಪತ್ರಭಂಗದ ಭಂಗಿಯೇ ಮಝುಭಾಪು ಲೌ ।
ಕಿಕಮಮಾನುಷಂ........................॥

“ಚೀರಘಟ್ಟಿಯ ಮಹಾಂತಪ್ಪನ ವಿಶ್ವಕರ್ಮನಸಳವಲ್ತು ಎಂಬನ್ನ ಮುದ್ದ್ಯಾಸ ಮಾಲೆಯುಂ ರಸ ಚಿತ್ರಮಾಗೆ ಆವಂ ಬರೆವಂ?” ಎಂದು ಮೊದಲಾಗಿ ಆನಂದೋದ್ಗಾರವನ್ನು ತೆಗೆದಿದ್ದಾನೆ!

ಚಂ|| ನರೆದಲೆ ಜೋಲ್ದ ಪುರ್ಬು ಕುಳಿದಕ್ಷಿ ಯುಗಂ ತುಟಿಯರ್ತ ಬೋಡಬಾಯ್ |
ತೆರೆಮಸಗಿರ್ದ ಮೋರೆಯುಡುಗಿರ್ದುರಮಕ್ಕುಳಿಸಿರ್ದ ಪೊಟ್ಟೆ ಮೇ ||
ಲ್ಸಿರೆ ಮಸಗಿರ್ದ ಕಾಲ್ ಮುರಿದ ಬೆನ್ನುರೆ ಕಂಪಿಪ ಹಸ್ತ ಮಸ್ತಕಂ|
..............................||

ಎಂಬುದಾಗಿ ಬಣ್ಣಿಸಿ ವೃತ್ತವಿಲಾಸನು ಒರ್ವ ಮುದುಕನ ರೂಪ ನಿಷ್ಪತ್ತಿಯನ್ನು ಮಾಡುವಲ್ಲಿ ವಿಜಯಿಯಾಗಿದ್ದಾನೆ. ಚಿತ್ರಕನು ಕ್ರಮವರಿತು ಒಂದೊಂದಾಗಿ ಚಿತ್ರಿಸುವಂತೆ ವೃತ್ತವಿಲಾಸನೂ ಇಲ್ಲಿ—ಮುದುಕನ ರೂಪ ರೇಖೆಯಲ್ಲಿ—ತಲೆಯಿಂದ ಕಾಲವರೆಗೆ ಒಂದು ಕ್ರಮವನ್ನಿರಿಸಿದ್ದಾನೆ. ಬಿಳಿದಲೆ, ಜೋಲುವ ಹುಬ್ಬು, ಮುಚ್ಚಿದ ಕಣ್ಣು, ಹಲ್ಲಿಲ್ಲದ ಬಚ್ಚಬಾಯಿ, ಸಡಿಲಿದ ತುಟಿ, ಸುಕ್ಕು ಸುಕ್ಕಾದ ಮೋರೆ, ಮುದುಡಿ ಗೂಡುಗಟ್ಟಿಹೋದ ಎದೆ, ಒಳಸಟ್ಟ ಹೊಟ್ಟೆ, ಉಬ್ಬಿದ ನರಗಳ ಜಾಳಿಗೆಯಿಂದ ಸುತ್ತಿದ ಕಾಲು, ಗೂನು ಬೆನ್ನು, ನಡುಗುವ ಹಸ್ತ, ಮಸ್ತಕ—ಇವೆಲ್ಲವೂ ಒಂದೊಂದಾಗಿ, ಕ್ರಮದಿಂದ, ಮೂಡಿ ಮುಪ್ಪಿನ ಮುದುಕನೊರ್ವನನ್ನು ಎಲ್ಲಿದ್ದರೂ ಹಿಡಿದೆಳೆದು ತಂದು ಕಣ್ಣೆದುರಿಗೆ ನಿಲ್ಲಿಸಿ ಕಟ್ಟಿಬಿಡುವುದಿಲ್ಲವೆ! ನಾಗರಾಜನೂ ಒಬ್ಬ ಮುದುಕನನ್ನೇ ಚಿತ್ರಿಸಹೋಗಿದ್ದಾನೆ. ಆದರೆ ಆತನ ಮುದುಕನು ಅಷ್ಟು ನಿಚ್ಚಳವಾಗಿ ಮನದಲ್ಲಿ ಮೂಡುವುದಿಲ್ಲ. ನಾಗರಾಜನ ರೇಖಾ ಪದ್ಧತಿಯಲ್ಲಿ ಚಿತ್ರಕನ ಕ್ರಮವೂ ಇಲ್ಲ. ಕಣ್ಣಿನ ಗುಷ್ಟೆಯನ್ನು ಬರೆದು ಅದನ್ನಷ್ಟಕ್ಕೇ ಬಿಟ್ಟು, ಹುಬ್ಬು ತಿದ್ದದ ಮುನ್ನವೇ ತಲೆಯ ಗೆರೆಯೆಳೆಯುತ್ತಾನೆ. ಆಮೇಲೆ ಮುಖದ ಇನ್ನುಳಿದ ಅಂಗಗಳನ್ನು ಬರೆಯದೆ ಜೋಲುವ ಮೈದೊಗಲು ಹೊಟ್ಟೆಗಳನ್ನು ಬರೆಯಹೋಗುತ್ತಾನೆ. ಅನಂತರ, ತಟ್ಟನೆ ಮೂಗು ಹುಬ್ಬು ಮುಖಗಳ ನೆನಪಾಗಿ—ಅಯ್ಯೋ ಅವನ್ನೇ ಬರೆದಿಲ್ಲವಲ್ಲಾ! ಎಂದು ಅವನ್ನು ಆಮೇಲೆ ಚಿತ್ರಿಸಹೋಗುತ್ತಾನೆ. ಹೀಗಾಗಿ ಕ್ರಮಗೆಟ್ಟು, ಚಿಕ್ಕ ಮಕ್ಕಳ ಚಿತ್ರದಂತೆ ನಾಗರಾಜನ ಮುದುಕನು ನಗೆಗೀಡಾಗಿದ್ದಾನೆ. ಇವನ ಈ ಚಿತ್ರದಲ್ಲಿ ರೂಪನಿಷ್ಪತ್ತಿಯು ಸಾಧಿಸದೆ ಹೋಗಿದೆ. ಅಹುದೇನೋ ನೋಡಿಕೊಳ್ಳಿರಿ—

ಚಂ|| ಮಿನಿಮಿನಿಗಣ್ ತೆರಂಟುದಲೆ ಜೋಲ್ದಿಹ ಮೆಯ್ದೊವಲ್ಗಳ್ದ ಪೊಟ್ಟೆ ಮೂ |
ಗಿನ ಪನಿ ಬಿದ್ದ ಪುರ್ಬು ತೆರೆಗೊಂಡ ಮುಖಂ ನಡುಗುತ್ತುಮಿರ್ಪ ಕೈ ||
ಕುನುಗಿದ ಬೆನ್ನು ಬೀಡೆವರಿದಿರ್ದ ಮಡಂ ಸೆರೆಗೊಂಡ ಕಾಲ್......|
..................................||

ಶೃಂಗಾರ ಸಾರದ ಕರ್ತೃವಾದ ಸೋಮರಾಜನ ಈ ಕೆಳಗಿನ ಗಿಳಿಯ ಚಿತ್ರದಲ್ಲಿ ರೂಪ ನಿಷ್ಪಾದನ ವಿಧಿಯು ಉಪಮಾ ರಮ್ಯವಾಗಿ ಸಾಧಿಸಿದೆ. ಇದರಲ್ಲಿ ವರ್ಣವ್ಯಕ್ತಿಯು (Colour Scheme) ಸುಷ್ಠುವಾಗಿದೆ.—

ಕಂ॥ ಒಡಲ ಪಸುರ್ ಮೂಗಿನ ಕೆಂ ।
ಪಡಿಗಳ ಬೆಳ್ಪಮರ್ದ ಕೊರಲ ಕರ್ಪೆಲ್ಲಂ ಸಂ ॥
ಗಡಿಸಿರೆ ಸುರ ಧನುವಿಳೆಯೊಳ್ ।
ಕೆಡೆವವೊಲಿಳಿದತ್ತದೊಂದು ಗಿಳಿವಿಂಡು....॥

ಕಾಮನ ಬಿಲ್ಲಿನ (ಇಂದ್ರ ಧನುವಿನ) ಆಕೃತಿಯಲ್ಲಿಳಿದು ಬರುವ ಒಂದು ಗಿಳಿ ಹಿಂಡಿನ ಚಿತ್ರವನ್ನು ಚಿಕ್ಕ ಚಿಕ್ಕ ನಾಲ್ಕೇ ಚರಣಗಳಲ್ಲಿ ಮನೋಹರವಾಗಿ ಬಣ್ಣಿಸಿದ್ದಾನೆ. ಹರಿಹರನೂ ಗಿಳಿಯನ್ನು ಕಂದದಲ್ಲಿಯೇ ಬಣ್ಣಿಸಿದ್ದಾನೆ. ಅದನ್ನೋದುವುದರಿಂದ ಸುಖವೇನೋ ಎನಿಸುವುದು. ಅದರಲ್ಲಿ ಭಾವ ತರಂಗದ ತುಳುಕು ಹೆಚ್ಚಾಗಿದೆಯೇ ಹೊರತು ಚಿತ್ರವು ಚೆನ್ನಾಗಿ ಒಡೆದು ಮೂಡಿಲ್ಲ.—

ಕಂ॥ ಬಿಗಿಯಪ್ಪಿ ಮೊಗಮನಿಟ್ಟಾ ।
ಲಿಗಳಂ ನಸು ಮುಚ್ಚಿ ಪಕ್ಷ ಯುಗಮೆಳಲೆ ರಸಂ ॥
ದೆಗೆವ ದನಿ ನಿಮಿರೆ ನಾಲಗೆ ।
ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ ॥

ಭಾವವನ್ನು ಹೊಮ್ಮಿಸುವಲ್ಲಿದ್ದ ಜಾಣ್ಮೆ ಹರಿಹರನಿಗೆ ಚಿತ್ರ ಬರೆವಲ್ಲಿಲ್ಲ. ಈತನಿಗೆ ಅಷ್ಟೊಂದು ಚಿತ್ರಕಲಾ ಸಂಸ್ಕಾರವು ಇಲ್ಲವೇ ಇಲ್ಲವೆಂದರೂ ಸಲ್ಲುವುದು. ಇದನ್ನು ಆತನು ಬರೆದ 'ಪಾರಿವಾಳ', 'ಚಾತಕ'ಗಳಲ್ಲಿಯೂ ಮನಗಾಣಬಹುದು.—

ಕಂ॥ ನಲಿದು ಕೊರಲೆತ್ತಿ ಕುಕಿಲಿರಿ ।
ದುಲಿದುರೆ ಸುಳಿದೆಳಸಿ ಬಳಸಿ ಬಳಿಸಂದು ಪಳಂ ॥
ಚಲಿದೊಲೆದು ಪಕ್ಕಮಂ ಬಿ ।
ರ್ಚಿ ಎಲ್ಲೆಗೈದತ್ತು ಪಾರಿವಂ ಪಾರಿವದೊಳ್ ॥

ಚಂ॥ ನೆಗೆದುದು ಸಾರ್ದು ಪೊರ್ದಿತಮರ್ದತ್ತು ತುಳುಂಕಿತು ಬೆಂಗೆ ನೀರ ಧಾ ।
ರೆಗಳುರೆ ನಾಂಟಲೀಂಟಿದುದು ನೇಹದೆ ನೋಡಿತುದಂಚ ಚಂಚುವಿಂ ॥
ದುಗಿದುದು ಪಕ್ಕದಿಂ ತೊಡೆದುದಂಘ್ರಿಗಳಿಂದೊದೆದತ್ತು ನೆತ್ತಿಯಿಂ।
ನೆಗಪಿದುದಪ್ಪಿ ತಳ್ಕಿರಿದುದಂಬು ಕಣಂಗಳನೊಂದು ಚಾತಕಂ ॥

ಈ ಪದ್ಯಗಳು ಆತನ ಭಾವ ನಿರ್ಭರಕ್ಕೆ ಸಾಕ್ಷಿಯಲ್ಲದೆ ಚಿತ್ರಕ್ಕಲ್ಲ.

ನೇಮಿಚಂದ್ರನು ನೀರು ಕುಡಿಯಲಿರುವ ಜಿಗರೆಯ ಚಿತ್ರವನ್ನು ಸುಂದರವಾಗಿ ತೆಗೆದಿದ್ದಾನೆ. ಅದರ ಆ ಭಂಗಿಯನ್ನೂ ಆ ಅಂಗ ವಿನ್ಯಾಸವನ್ನೂ ನೋಡಿ ಬೇಟೆಗೆ ಬಂದ ಅರಸನೊಬ್ಬನು ಅದನ್ನು ಮೈಮರೆತು ನೋಡತೊಡಗಿದ್ದಾನೆ.—

ಚಂ॥ ನಿಮಿರ್ದ ಕೊರಲ್ ಮರಲ್ದು ಮಡಿದೂರಿದ ಮುಂದಣ ಕಾಲ್ಗಳೆಳ್ದ ಪ।
ಶ್ಚಿಮ ತನು ಜೋಲ್ದುದರಂ ಪೆರಗನಪ್ಪಿದ ಕೊಂಬುಗಳಾಲಿಸುತ್ತೆ ವಿ॥
ಶ್ರಮಿಸುವ ಕರ್ಣಮುಂ ಮುಗುಳ್ವ ಕಣ್ ಮಿಡುಕೋಡುವ ಕಂಠ ನಾಳಮಂ ।
ದಮರ್ದಿರೆ ನೀರನುಣ್ಬೆರಲೆಯಂ ಬರಲೊಲ್ಲದೆ ನೋಡಿದಂ ನೃಪಂ ॥

ಸೋಮರಾಜನು ಕೊಲ್ಲಟಿಗರ ಬೀಡಿನ ರೇಖಾ ಚಿತ್ರವನ್ನು ಬಹು ಸೊಗಸಾಗಿ ತೆಗೆದಿದ್ದಾನೆ.—

ಕಂ|| ನೂಲ್ಗಟ್ಟಿ ಪೊಯ್ದು ಪೊಸ ಗುಡಿ ।
ಸಲ್ಗಳ್ ತವೆ ನಟ್ಟ ಗಳೆಗಳಿರಿಸಿದ ದೋಳ್ಗಳ್ ॥
ಕಾಲ್ಗಟ್ಟಿ ಮೇವ ಕಳ್ತೆಯ ।
ಸಾಲ್ಗಳಿರಲ್ ಕೊಲ್ಲಟಿಗರ ಬೀಡೆಸೆದಿರ್ಕುಂ ॥

ಹೀಗೆ ಓದುತ್ತಲೇ ಗುಡಿಸಲುಗಳು, ನೆಟ್ಟ ಗಳೆಗಳೂ, ಅಲ್ಲಿ ಕಟ್ಟಿದ ಕತ್ತೆಯ ಸಾಲುಗಳೂ ಎದುರು ಬಂದು, ಹಿಂದೊಮ್ಮೆ ಎಂದೋ ಇಂಥ ಒಂದು ರೇಖಾ ಚಿತ್ರವನ್ನು ನಾವೆಲ್ಲರೂ ನೋಡಿರುವೆವೇನೋ ಎಂದೆನಿಸುತ್ತದೆ.

"ದಿಕ್ಚಯಂ ಬಿರಿವಂತು ಗರ್ಜಿಸುತುಂ ನಿಕುಂಜಮಂ" ಪೊರಮಡುವ ಒಂದು ಪುಲಿಯ ಚಿತ್ರವನ್ನು ಸೋಮರಾಜನು ಇಂತು ತೋರಿಸಿದ್ದಾನೆ :—

ಉ|| ಕೆಂಪಿಡಿದಕ್ಷಿ ರೌದ್ರ ವದನಂ ಮಿಗೆ ಪೊಣ್ಮುವ ನಿಷ್ಠುರ ಸ್ವನಂ ।
ಕಂಪಿಪ ಮೀಸೆ ನೀಡಿ ನಿಮಿರ್ದಿಕ್ಕುವ ಕಾಲ್ ಮಹಿಯಂ ಮಹೋಗ್ರದಿಂ ॥
ದಂ ಪೊಡೆವಗ್ರ ವಾಲಮಿರದೇಳ್ವ ಕೊಡಂಕೆಗಳಿಂ ನಿಕುಂಜಮಂ ।
ತಾಂ ಪೊರಮಟ್ಟುದೊಂದು ಪುಲಿ ಗರ್ಜಿಸುತುಂ ಬಿರಿವಂತು ದಿಕ್ಚಯಂ ॥

ಹರಿಹರನು ಒಂದು ಕಪ್ಪು ಬಣ್ಣದಲ್ಲಿಯೇ ಅದರ ಅನೇಕ ಛಾಯೆಗಳನ್ನು ಹೀಗೆ ವಿಂಗಡಿಸಿದ್ದಾನೆ:—

ಕಂ|| ಎಣ್ಣೆಯೊಳರನೇರಿಲ ತನಿ ।
ವಣ್ಣಂ ನುಣ್ಣಿಸಿದನಬ್ಜ ಭವನೆನಿಸುವ ಮೈ ॥
ವಣ್ಣದ ಶಬರಿ ತಮಾಲದ ।
ತಣ್ಣೆಳಲೊಳ್ ಕಣ್ಣ ಬೆಳಗೆ ಬೆಳಗಾಗಿರ್ದಳ್ ॥

ಶಬರಿಯ ಮೈಬಣ್ಣವು ಎಣ್ಣೆಯಲ್ಲಿ ನುಣ್ಣಿಸಿದ ನೇರಿಲ ಹಣ್ಣಿನಂತಹುದು, ಎಂದರೆ ತೀರ ಕಪ್ಪು. ಆಕೆ ಕುಳಿತಿದ್ದುದು ತಮಾಲ ವೃಕ್ಷದ ಕೆಳಗೆ; ಅದೂ ಕಪ್ಪೇ; ಆದರೆ ಅವಳ ಮೈಬಣ್ಣದಷ್ಟಲ್ಲ. ತಮಾಲದ ನೆರಳು ಇವಳ ಮೇಲೆ ಬಿದ್ದಿತ್ತಷ್ಟೆ! ಅದೂ ಕಪ್ಪೇ; ಆದರೆ ಅವಳ ಮೈಬಣ್ಣ, ಹಾಗೂ ತಮಾಲದ ಬಣ್ಣದಿಂದ ಭಿನ್ನವಾದುದು, ಎಂದರೆ ತಮಾಲವನ್ನು ಅಪರಸ್ಥಲದಲ್ಲಿರಿಸಿ (Back-ground) ಅದರ ನೆರಳಲ್ಲಿ ಕಾಡಿಗೆಗಪ್ಪಿನ ಶಬರಿಯನ್ನು ಒಡೆದು ಕಾಣುವಂತೆ ಚಿತ್ರಿಸಬೇಕಾದರೆ, ಯಾವ ಅಳತೆಯ ಆಳದ ಬಣ್ಣವನ್ನೂ ಯಾವ ಅಳತೆಯ ತಿಳಿ ಬಣ್ಣವನ್ನೂ ಎಲ್ಲೆಲ್ಲಿ ಉಪಯೋಗಿಸಬೇಕೆಂಬುದರ ಲೆಕ್ಕವು ಚಿತ್ರಕರಿಗೆ ಚೆನ್ನಾಗಿ ಗೊತ್ತು.

ಸಿಂಹಿಯ ದುಃಖ ಪ್ರಸವ ಸಮಯದೊಳ್ಸಹ, ಜನ್ನನು ಅನಕ್ಕೊಂಡಲಂಪಂ ತಂದೊದಗಿಸಿದ್ದಾನೆ. ಇದರಲ್ಲಿ ಬಣ್ಣಿಸಿದ ವಿಷಯವು ಚಿತ್ರಶಿಲ್ಪಕ್ಕಿಂತ, ಮೂರ್ತಿಶಿಲ್ಪಕ್ಕೆ ಹೆಚ್ಚು ಒಪ್ಪುವುದು. ಇದನ್ನು ಕುಶಲ ಶಿಲ್ಪಿಗಳು ಕಲ್ಲಿನಲ್ಲೋ ಕಟ್ಟಿಗೆ

ಯಲ್ಲೋ ಬಹು ಸೊಗಸಾಗಿ ಕೆತ್ತಬಹುದು. ಸಿಂಹಿಯ ಪ್ರಸವ ದುಃಖದಲ್ಲಿ ಸುಖದ ಭಾವವನ್ನು ಮೂಡಿಸಬೇಕಾಗಿದೆಯಾದುದರಿಂದ ಸಾಮಾನ್ಯ ಶಿಲ್ಪಿಯು ಇದನ್ನು ಸಮರ್ಪಕವಾಗಿ ಕೆತ್ತಲಾರನೆಂದೇ ಹೇಳಬಹುದು.—

ಮ॥ ಸ್ರ॥ ಕಡೆನಾಯಂ ಬಿರ್ಚಿ ಬೆನ್ನಂ ಕುಸಿದು ನೆಗಪಿ ವಾಲಾಗ್ರಮಂ ಬೇನೆಯಿಂದೂ।
ಳಿಡುತುಂ ಶೈಲಾಗ್ರದೊಳ್ಕುಕ್ಕುರಿಸಿ ಮರುಕದಿಂದೀಂಬ ಸಿಂಹೀ ಕಿಶೋರಂ॥
ನಡು ಸೂಲೊಳ್ ಸಿಲ್ಕಿ ಕಣ್ಣಂ ತೆರೆದಿಭ ಪತಿಯಂ ತಾರಲೊಳ್ಕಂಡು ಕಾಯ್ಪಿಂ।
ನಡುವಾಯ್ತಾ ತಾಯ್ಗೆ ದುಃಖ ಪ್ರಸವ ಸಮಯದೊಳ್ ತಂದುದಂತೊಂದಲಂಪಂ॥

ಕಟಬಾಯನ್ನು ಬಿಚ್ಚಿ, ಬೆನ್ನು ಕುಸಿದು ಬಾಗಿಸಿ, ಬಾಲವನ್ನೆತ್ತಿ, ಶೈಲಾಗ್ರದಲ್ಲಿ ಕಾಲ್ಗೆದರಿ ಕುಕ್ಕುರಿಸಿ, ಹೆರಿಗೆಯ ಅಸಹ್ಯ ವೇದನೆಯಿಂದ ಗೋಳಿಡುತ್ತ ಸಿಂಹಿಯೊಂದಿದೆ. ಅದರ ಮರಿ ಅರ್ಧ ಒಳಗೆ, ಅರ್ಧ ಹೊರಗೆ, ನಡುಸೂಲಲ್ಲಿಯೇ ಸಿಕ್ಕಿಕೊಂಡು ಕಣ್ದೆರೆದಿದೆ; ಕಣ್ಣು ತೆರೆಯುತ್ತಲೆ ಅತ್ತಣ ಗಿಡಗೆಂಟೆಗಳಲ್ಲಿ ಒಂದು ಆನೆ ಕಂಡುಬಂದಿದೆ. ಆಗಲೇ ನಡುಸೂಲಲ್ಲಿದ್ದ ಆ ಮರಿ ಕೆರಳಿ ಕಾಯ್ಪೇರಿ ಕೆಂಗಣ್ಣಿನಿಂದ ದುರುಗುಟ್ಟಿ ನೋಡ ತೊಡಗಿದೆ. ತನ್ನ ಮರಿಯ ಈ ಬಿಂಕ, ಈ ಹೆಮ್ಮೆ, ಸಿಂಹಿಗೆ ದುಃಖ ಪ್ರಸವ ಸಮಯ ದೊಳ್ಸಹ ಒಂದಲಂಪಂ ತಂದುದು ಏನಾಶ್ಚರ್ಯ?

ಇಮ್ಮಡಿ ಗುಣವರ್ಮನ ಗಜಪ್ರಸವದಲ್ಲಿಯೂ ಮನೋಮೋಹಕತೆ ಯುಂಟು.—

ಉ॥ ಬೇನೆಯಿನಕ್ಷಿಗಳ್ ನಸು ಮುಗುಳ್ತಿರೆ ಪಿಂತು ಕುನುಂಗೆ ಜೋಲೆ ಪೇ।
ರಾನೆಯ ಕರ್ಣ ವಾಯು ಚಿಮರಾರಿಸೆ ತಾಯ್ಪಿಡಿ ನೀವೆ ಹಸ್ತದಿಂ॥
ತಾನವಳಂಬಿಸಿರ್ದು ವಟ ಭೂಜದಳೊಂದು ಕರೇಣು ಸೂಲಿಸು।
ತ್ತೇನಣಮಲ್ಲಿ ಮಾಡಿದುದೊ ಬೇಡರೊಳಂ ಕರುಣಾನುಭಾವಮಂ॥

ಆಲದ ಗಿಡದಡಿಯಲ್ಲಿ ಮೂರು ವಿಧ ಭಂಗಿಗಳಲ್ಲಿದ್ದ ಮೂರು ಆನೆಗಳ ಚಿತ್ರ. ಹೆರಿಗೆಯಿಂದ ಅರೆಮುಚ್ಚಿದ ಕಣ್ಣು, ನೈಹುದುಗಿಸಿ ತನ್ನ ತಾಯಾನೆಯನ್ನು ನೆಮ್ಮಿದ ಭಂಗಿ, ತನ್ನ ಮಗಳಿಗೆ ಆಸರೆಗೊಟ್ಟು ಹೆರಿಸಿಕೊಳ್ಳುತ್ತಿರುವ ಆ ತಾಯಾನೆಯ ಪ್ರೀತಿ, ಆತುರ ಅಸಮಾಧಾನದ ಮಿಶ್ರಭಾವಗಳನ್ನು ತೋರ್ಪಡಿಸುವ ರೀತಿ, ಪೇರಾನೆಯು ಕೆಲದಲ್ಲಿದ್ದು ತನ್ನ ಕಿವಿಗಳನ್ನು ಬೀಸಿ ಚಿಮರಾರಿಸುವ ವಿಧ, ಗಜಪ್ರಸವ ವೇದನೆಯನ್ನು ದೂರದೆ ನಿಂತು ಕರುಣಾನುಭಾವದಿಂದ ನೋಡುತ್ತಲಿರುವಂತೆ ಬೇಡರ ಚಿತ್ರ—ಹೀಗೆ ಎಲ್ಲವನ್ನೂ ಬರೆದು, ಇಲ್ಲವೆ ಕೊರೆದು, ಸಮುದಾಯ ಶೋಭೆ, ನೋಟಕರ ಲೋಚನಾಕೃಷ್ಟಿಯಂ ಪುಟ್ಟಿಸುವಂತೆ ಮಾಡಬೇಕಾದರೆ ಕಲಾ ಪ್ರಪಂಚದ ಪ್ರಭುಪಟ್ಟವೇರಿದ ಚೀರಗಟ್ಟಿಯಂಥ ಅವನೀಂದ್ರರೇ ಸರಿ, ಇಲ್ಲವೆ, ಅವನೀಂದ್ರರಾದ ನಂದಲಾಲ ವೆಂಕಟಪ್ಪನವರೇ ಸರಿ. ಇವರಲ್ಲದೆ, ಇಂತು ಬರೆಯಲ್ "ಆರ್ಗಮೇಂ ತೀರ್ಗುಮೇ?"

ಉಷೆಯು ಕೆಳಗಿಯಾದ ಚಿತ್ರಲೇಖೆ ನೆಲೆನಾಡಿನ ಭೂಮಿಯಿಂದಾಕಾಶಕ್ಕೆ "ನವ ವಿದ್ಯುಲ್ಲೇಖೆವೋಲ್" ನೆಗೆದ ಚಿತ್ರವನ್ನು ರುದ್ರಭಟ್ಟನು ಇಂತು ಮುದ್ದಾಗಿ ಬರೆದಿದ್ದಾನೆ :—

ಮ॥ ಮಿಳಿರಲ್ ಮೇಲುದರಂಚಲಂ ಪೊಡರಲುತ್ತುಂಗ ಸ್ತನದ್ವಂದ್ವಮು ।
ಚ್ಚಳಿಸಲ್ಕಂತೆ ವಿಲೋಚನಾಂಶು ನಿಮಿರಲ್ ನೀಲಾಲಕೌಘಂ ಕಿಡಲ್ ॥
ವಳಿಗಳ್ ಪಿಂತಲೆಯಲ್ ಬಳಲ್ಮುಡಿಯೆ ತೂಗಲ್ ಕರ್ಣಪೂರಂ ವಿಯ ।
ತ್ತಳದೊಳ್ ಮಿಳ್ಳಿಸಿ ಚಿತ್ರಲೇಖೆ ನವ ವಿದ್ಯುಲ್ಲೇಖೆವೋಲ್ ಪಾರಿದಳ್ ॥

ರಂಗ ಭೂಮಿಯಲ್ಲಿ 'ಬಿಸ ಸಂಧ್ಯಾ ಪ್ರಯೋಗ'ವೆಂಬ ಚಿತ್ರವನ್ನು ನೀವು ನೋಡಿರುವಿರಷ್ಟೆ! ಅದೇ ಮಾದರಿಯ ಚಿತ್ರವೊಂದನ್ನು ರುದ್ರಭಟ್ಟನು ರಸ ಭಾವಂಗಳೊಳಾದ ಚೆಲ್ವು ಸೂಸುತಿರುವಂತೆ ಬರೆದಿದ್ದಾನೆ. ಇದು ಪ್ರಯೋಗ ಚಿತ್ರವಲ್ಲ, ವಿಲಸ ಚಿತ್ರ. ಕವಿಯು ಇಲ್ಲಿ ಉಪಾಸಿರುದ್ಧರ ವಿಲಸ ಚಿತ್ರವನ್ನು ರೇಖಿಸಿದ್ದಾನೆ.—

ಮ॥ ಸ್ರ॥ ಬೆಳವಾರ್ಯೊಳ್ ಬಾರ್ಯ ಘನೋರುದ್ವಯದೊಳತಿ ಘನೋರುದ್ವಯಂ ನೀಳ್ದ ತೋಳೊಳ್ ।
ನಳಿತೋಳ್ಗಳ್ ಮುಯ್ವೊಳಾ ಮುಯ್ವುರದೊಳುರಸಿಜಂ ತಳ್ತಿರಲ್ ತಳ್ತುಮಾ ಕೋ ॥
ಮಲೆಯೊಳ್ ಕೂಡಿರ್ದನಾತ್ಮಾಕೃತಿಯೆನೆ ಸುಖದಿಂದಿರ್ದು ದೈತೇಯ ಕೋಳಾ ।
ಹಳಮಂ ಕೇಳ್ದೋವಳಪ್ಪಂ ಸಡಿಲಿಸಿ ನಡೆದಂ ಕಾದಲೇಕಾಂಗ ವೀರಂ ॥

ಈ ವರೆಗಿನವು Realistic ಚಿತ್ರಗಳ ಮಾದರಿಯಾಯ್ತು. ಇನ್ನು ಒಂದೆರಡು Idealistic ಚಿತ್ರಗಳ ಮಾದರಿಯನ್ನು ನೋಡುವ.—

ಲಕ್ಷ್ಮೀಶನ ವಾಲ್ಮೀಕಿಗೆ, ವನ ವಾಸಿನಿಯಾಗಿ, "ಗದ್ಗದ ಕಂಠೆಯಾಗಿ ರೋದಿಸುತಿರ್ದ ವೈದೇಹಿ", "ಪಾಡಳಿದ ಗ್ರೀಷ್ಮ ಋತುವಿನ ಕಾಂತಾರದಧಿದೇವಿ ತಾನೆನಲ್" ಕಂಡಳಂತೆ! ಕವಿಯು ಎರಡೇ ಮಾತುಗಳಲ್ಲಿ ಚಿತ್ರಕನಿಗೆ ಒಂದು Idealistic ಚಿತ್ರದ ಕಲ್ಪನೆಯನ್ನು ಕೊಟ್ಟಿದ್ದಾನೆ. ಗ್ರೀಷ್ಮದ ವಿವರ್ಣವಾದ, ಶುಷ್ಕವಾದ ಕಾಂತಾರವನ್ನು ಅಪರಸ್ಥಲದಲ್ಲಿರಿಸಿ, ಬಾಯಾರಿ ಕಂಗೆಟ್ಟ, "ಭಯ ಶೋಕದಿಂದ ಬಸವಳಿದ, ಮೂಲವಂ ಕೊಯ್ದಳೆಯ ಬಳ್ಳಿಯಂತೆ ಬಾಡಿ ಬತ್ತಿದ, ಗದ್ಗದ ಕಂಠೆಯಾಗಿ ರೋದಿಸುತಿರ್ದ" ವೈದೇಹಿಯ ಚಿತ್ರವನ್ನು, ಕೈಕೂತ ಕಲೆಗಾರನಾಗಿದ್ದರೆ, "ಕಲ್ಮರಂ ಕರಗುವಂತೆ" ನಾನೇ ಬರೆದುಬಿಡುತ್ತಿದ್ದೆನು. ಆದರೇನು? ಕಣ್ಣಿಗಿದ್ದುದು ಕೈಗಿಲ್ಲ. ಇರಲಿ; ಈ ಚಿತ್ರದಲ್ಲಿ ವೈದೇಹಿಯಷ್ಟೇ ಶೋಕಾಕುಲಳಾಗಿ ಬಾಡಿ ಬಸವಳಿದು ಬತ್ತಿಲ್ಲ; ವೈದೇಹಿಯಷ್ಟೇ ಕಾಂತಾರವೂ ಕೂಡ ಬಾಡಿ ಬಸವಳಿದು ಬತ್ತಿಹೋದುದು ಕಾಣುವುದು. ಅಂತೇ ಇಲ್ಲಿ ಸೀತೆ ಇಂಥ ಕಾಂತಾರದಧಿದೇವಿ.

ಇದು ನೋಡಿರಿ ಇಲ್ಲಿ ಈ ಸೋಜಿಗವನ್ನು! ಚಾಂಡರಸನು ಸುಳಿ ಗಾಳಿಯನ್ನು ಕಣ್ಣಿಗೆ ಕಾಣುವ ಹಾಗೆ ಚಿತ್ರದಲ್ಲಿ ಹಿಡಿದುಹಾಕಿಬಿಟ್ಟಿದ್ದಾನೆ.—

ಚಂ॥ ಅಲರ್ವಲರ್ದೊಂಗಲಂ ಕುಣಿಸುತುಂ ಸೊನೆ ಸೋನೆಯನೆಯ್ದೆ ಸೂಸುತುಂ ।
ತಳಿರ್ಗಳಿರುಂಬಿನಿಂ ನುಸುಳುತುಂ ಮಕರಂದಮನಪ್ಪುತುಂ ಕೊಳಂ ॥

ಗಳ ತಡಿಯೊಳ್ ವಿಹಾರಿಸುತೆ ಪಾಡುವ ಸೋಗೆಗಳಂ ಬಿದಿರ್ಚುತುಂ।
ಪಲವು ವಿನೋದದಿಂ ಸುಳಿವುದಾ ಬನದೊಳ್ ಮಿಗೆ ಮಂದ ಮಾರುತಂ॥

ಅಲರ್ದೊಂಗಲನ್ನೂ ತಳಿರ್ಗೊಂಚಲನ್ನೂ ಸೊಸೆಯ ಸೋನೆಯ ಧಾರೆಯನ್ನೂ ಒಂದೇ ಕಡೆಗೆ ಒಲೆದಂತೆ, ಅಲೆದಂತೆ, ಹಾರಿದಂತೆ ಬರೆದು, ಕೊಳದ ತಡಿಯಲ್ಲಿಯ ತೆರೆಗಳು ಎದ್ದು–ಬಿದ್ದು, ಮೂಡಿ–ಮುಳುಗಿ, ಒಂದೇ ಕಡೆಗೆ ಸಾಗಿಹೋಗಿವೆಯೆಂಬ ಹಾಗೆ ಸೂಚಿಸಿ, ಗರಿಗೆದರದೆ ನಿಂತ ಸೋಗೆಗಳ ಪಕ್ಕಗಳಲ್ಲಿ ಹೊಕ್ಕು ಗಾಳಿಯು ಅದರ ಎಳೆಯ ಪಿಂಛಗಳನ್ನು ತೂರಿಸಿದಂತೆ ತೋರಿಸಿ ಚಿತ್ರವನ್ನು ಬರೆದಿದ್ದಾದರೆ, ಆ ಬನದಲ್ಲಿ ವಿಹಾರಿಸುತೆ ವಿನೋದದಿಂ ಸುಳಿವ ಮಂದ ಮಾರುತನನ್ನು ಮುಟ್ಟಿ ಕಟ್ಟಿ ಕೈಯಲ್ಲಿ ಕೊಟ್ಟಂತಾಗುವುದಿಲ್ಲವೆ?

ಸೋಮರಾಜನ ಅದ್ಭುತ ರಮ್ಯವಾದ, ನವ ಮೋಹನವಾದ ಇನ್ನೊಂದು ಚಿತ್ರವನ್ನು ತೋರಿಸಲೆ?—

ಕಂ॥ ಗಗನಾಂಗನೆ ಕುಡುಮಿಂಚೆಂ।
ಬುಗುರ್ಗೊನೆಯಿಂ ಮುಗಿಲೆನಿಪ್ಪ ಮುಡಿಯಂ ಪಿಕ್ಕಲ್॥
ಮಿಗೆ ಮುಂ ತುರುಂಬಿದೊಳ್ಪಲ।
ರುಗುವವೊಲಿರ್ದತ್ತು ಕರಕ ನಿಕರಮದಿಳೆಯೊಳ್॥

ಗಗನಶ್ರೀಯು ಕುಡಿಮಿಂಚೆಂಬ ಉಗುರ್ಗೊನೆಯಿಂದ ಮೋಡವೆಂಬ ಮುಡಿಯನ್ನು ಪಿಕ್ಕಲು, ಮುನ್ನ ಮುಡಿದ ಮಲರುಗಳು ಉದುರಿದಂತೆ ಆಲಿಗಲ್ಲುಗಳು ಸುರಿದುವಂತೆ!

ಹೀಗೆಯೇ ಇನ್ನೂ ನೋಟಕರ ಕಣ್ಣಾಪಿಗಾಗಿ ಬೇಕಾದಷ್ಟು ಚಿತ್ರಗಳನ್ನು ಆಯ್ದಾಯ್ದು ತೋರಿಸಬಹುದು. ಆದರೆ ಕನ್ನಡ ಸಾಹಿತ್ಯದಲ್ಲಿಯ ಚಿತ್ರ ಕಲೆಯ ದಿಗ್ದರ್ಶನವನ್ನು ಮಾತ್ರ ಮಾಡುವೆನೆಂಬುದಾಗಿ ಸಂಕಲ್ಪಿಸಿ ಹೊರಟಿರುವೆನಾದುದರಿಂದ ಇದಕ್ಕೂ ಹೆಚ್ಚಿನ ಕೆಲಸಕ್ಕೆ ಆಸ್ಪದವಿಲ್ಲ.

ಚಿತ್ರ ಶಿಲ್ಪದ ಪರಿಭಾಷೆಯೂ ಶಾಸ್ತ್ರವೂ ಕನ್ನಡ ಕಾವ್ಯಗಳಲ್ಲಿ ತುಂಬ ಬಂದುಬಿಟ್ಟಿದೆ; ಸಂಕ್ಷೇಪವಾಗಿ ವಿವೇಚಿಸಲು ಸಾಧ್ಯವಿಲ್ಲವಾಗಿ ಬಿಡಬೇಕಾಯಿತ್ತು. ಈ ನನ್ನ ಲೇಖನದಲ್ಲಿ ಕೆಲವು ಪರಿಭಾಷೆಗಳನ್ನು ಅಲ್ಲಿಂದಲೇ ಆಯ್ದುಕೊಂಡು ಬಳಸಿದ್ದೇನೆ. ಇರಲಿ; ಕನ್ನಡ ಕವಿಗಳು ಚಿತ್ರ ವಿಮರ್ಶಾ ಕುಶಲರೂ ಆಗಿದ್ದರೆಂದು ಪಂಪ ಪೊನ್ನರ ಈ ಎರಡು ಉದಾಹರಣೆಗಳಿಂದ ಗೊತ್ತಾಗುವುದು.

ಜನರ ನೆರವಿಯೊಂದು ವಿಸ್ಮಯಬಟ್ಟಿದೇನೋ ಎಂದು ನೋಡುವುದನ್ನು ಕಂಡು ಪಂಪನ ರಾಜಕುಮಾರನು, "ಏನಾನುಮೊಂದು ಕೌತುಕಮಾಗಲೆವೇಳ್ಕುಮೆಂದೆಯ್ದೆವಂದು ನೋಳ್ಪನ್ನೆಗಮಲ್ಲಿ ಪಸರಿಸಿದ ಚಿತ್ರಪಟಮಂ ಛೀಂಕನೆ ಕಂಡು" ಇಂತು ಮುಂತಾಗಿ ವಿಮರ್ಶಿಸುತ್ತಾನೆ.—

ಮ|| ರಸಭಾವಂಗಳೊಳಾದ ಚೆಲ್ವು ನುಡಿವಂತಾದಳ್ಕರಿಂ ನೋಡುವಂ ।
ತುಸಿರ್ವಂತಿರ್ದುದು ರೇಖೆ ಕೋಮಳತೆಯಂ ತಾಳ್ದಿತ್ತು ವರ್ಣಕ್ರಮಂ ॥
ರಸವತ್ಕಾಂತಿಯನಾಂತು ನಿಂದುದೆಸೆವೀ ನಿಮ್ನೋನ್ನತಂಗಳ್ ವಿರಾ ।
ಜಿಸಿ ಚೆಲ್ವಿಂಗೆಡೆಗೊಂಡುವಿಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ॥

ಪೊನ್ನನು ತಾನು ನೋಡಿದ ವನಚಿತ್ರ ವಿಮರ್ಶೆಯನ್ನು ಇಂತು ಮಾಡಿದ್ದಾನೆ:-

ಚಂ|| ನಯಮಳವಟ್ಟ ಪಚ್ಚೆ ಸಹಕಾರದೊಳಿಂಗುಳಿಕಂ ತಳಿರ್ತಶೋ ।
ಕೆಯೊಳರಿದಾಳಮುಳ್ಳಲರ್ದ ಸಂಪಗೆಯೊಳ್ ಕಡುಗರ್ಪು ಭೃಂಗಕೋ ॥
ಟಿಯೊಳೆಸೆದಿರ್ದ ನೀಲಗಿರಿ ಮಲ್ಲಿಗೆಯೊಳ್ ಸಮನಾಗೆ ಚೀರಘ ।
ಟ್ಟಿಯೆ ಬರೆದಿಟ್ಟ ಚಿತ್ರದ ಬನಕ್ಕೆಣೆಯಾಯ್ತು ಬನಂ ವಿದೇಹದೊಳ್ ॥

ಇಷ್ಟರಿಂದ ಕರ್ಣಾಟಕದಲ್ಲಿ ಚಿತ್ರಕಲೆಯು ಎಂದೆಂದಿಗೂ ಉನ್ನತಿಪೆತ್ತೇ ಇದ್ದಿತೆಂದೂ, ಕವಿಗಳಿಗೆಲ್ಲ ಸಾಮಾನ್ಯವಾಗಿ ಹೆಚ್ಚು ಕಡಿಮೆ ಕಲಾಸಂಸ್ಕಾರವು ಇದ್ದೇ ಇದ್ದಿತೆಂದೂ ತಿಳಿದು ಬರುವ ಹಾಗಿದೆ. ಇಷ್ಟನ್ನು ತಿಳಿಸಿಕೊಡುವುದಕ್ಕಾಗಿಯೇ ನಾನು ಇಷ್ಟೊಂದು ಹೆಣಗಾಡಿದುದು. ಇಷ್ಟು, ನನ್ನಿಂದಿತರರಾದವರಿಗೆ ತಿಳಿದಿದ್ದರೆ ನನ್ನ ಕೆಲಸ ಕೈಗೂಡಿಯೇಬಿಟ್ಟಿದೆ.

"ರಸಯೋಗಿ"
(ಗೆಳೆಯರ ಗುಂಪು)

---

# ಹಳ್ಳಿಗರ ಹಾಡುಗಳು

---

## ಬೀಸುವಕಲ್ಲಿನ ಪದಗಳು

**೧. ಮೊದಲು ಮಾತು.**—ನಮ್ಮ ನಾಡಿನಲ್ಲಿ ಸುಶಿಕ್ಷಿತರಾದ ಪಂಡಿತರನೇಕರು ಕಾವ್ಯಗಳನ್ನು ರಚಿಸಿದಂತೆಯೇ ಅಶಿಕ್ಷಿತರಾದ ಹಳ್ಳಿಗರು, ಅವರಲ್ಲಿಯೂ ಹೆಂಗಸರು, ಹಲವು ಬಗೆಯ ಕವನಗಳನ್ನು ರಚಿಸಿರುವರು. ಇವರಿಬ್ಬರಲ್ಲಿಯ ಸುಶಿಕ್ಷಿತತೆ ಅಶಿಕ್ಷಿತತೆಗಳನ್ನು ಅವರವರ ಕೃತಿಯಲ್ಲಿಯ ಭಾಷಾ ಪದ್ಧತಿ, ಕಾವ್ಯ ಸಂಪ್ರದಾಯ, ಅಲಂಕಾರ, ಲಕ್ಷಣ ಮೊದಲಾದ ಹೊರಗಿನ ಕಾರಣಗಳಿಂದಲೇ ಗುರುತಿಸಬಹುದಲ್ಲದೆ ತಿರುಳಿನ ತಿರುಳಾದ ರಸ ಭಾವ ಕಲ್ಪನೆಗಳಿಂದ ಕಂಡುಹಿಡಿಯುವುದಕ್ಕಾಗುವುದಿಲ್ಲ. ತಮ್ಮಲ್ಲಿರುವ ಗುಣ ವಿಶೇಷದಿಂದ ಈ ಹಳ್ಳಿಗರ ಹಲವು ಕವಿತೆಗಳು ಎಂತೆಂತಹ ಬಲ್ಲಿದರನ್ನೂ ಬೆರಗುಗೊಳಿಸಿಬಿಡುತ್ತವೆ. ಇದಕ್ಕೆ ಕಾರಣವು ಅಕ್ಷರ ಶಿಕ್ಷಣದ ಸಂಸ್ಕಾರವಲ್ಲ; ಮನಸ್ಸು ಬುದ್ಧಿ ಹೃದಯಗಳಿಗಾಗಿದ್ದ ಸ್ವಾಭಾವಿಕ ಸಂಸ್ಕಾರವು. ಈ ಬಗೆಯ ಸಂಸ್ಕಾರವು ನಮ್ಮ ನಾಡಿಗರಲ್ಲಿ, ಕಲಿತವರಿಗೂ ಕಲಿಯದವರಿಗೂ ಸಾಮಾನ್ಯವಾಗಿದೆಯೆಂಬುದನ್ನು ಈಗ ಪ್ರಚಾರದಲ್ಲಿರುವ ಹಳ್ಳಿಗರ ಹಾಡು ಕವಿತೆ ಕತೆಗಳನ್ನು ವಿಮರ್ಶಿಸಿ ಕಂಡುಹಿಡಿಯಬಹುದಾಗಿದೆ. ಇದನ್ನೆಲ್ಲ ಕಣ್ಣಿಟ್ಟು ನೋಡಿ ಕಂಡುಕೊಂಡವನಾದುದರಿಂದಲೇ ರಾಜಕವಿ ನೃಪತುಂಗನು ಕನ್ನಡ ನಾಡನ್ನು ಬಣ್ಣಿಸುವಾಗ—

ಕಂ॥ ಪದನರಿದು ನುಡಿಯಲುಂ ನುಡಿ ।
ದುದನರಿದಾರಯಲುಮಾರ್ಪರಾ ನಾಡವರ್ಗಳ್ ॥
ಚದುರರ್ ನಿಜದಿಂ ಕುರಿತೋ ।
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ॥

ಎಂತಲೂ,

ಕಂ॥ ಕುರಿತವರಲ್ಲದೆ ಮತ್ತಂ ।
ಪೆರರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್ ॥
ಕಿರು ಮಕ್ಕಳ್ ಮಾಮೂಗರು ।
ಮರಿಪಲ್ ನೆರೆವರ್ ವಿವೇಕಮಂ ಮಾತುಗಳಂ ॥

ಎಂತಲೂ ಹೇಳಿರುವನು. ಈ ಮಾತುಗಳು ಬರಿಯ ಅಭಿಮಾನದ ಮಾತುಗಳಲ್ಲವೆಂಬುದು ಅನುಭವಕ್ಕೆ ಬರಬಹುದಾದ ಸಂಗತಿಯಾಗಿದೆ.

ಪ್ರಪಂಚದಲ್ಲಿರುವ ಸತ್ಯ ಸೌಂದರ್ಯಗಳನ್ನು ಕಾಣುವ ಒಳಗಣ್ಣು, ಕಲಿತವರಿಗೂ ಇರುವುದು, ಕಲಿಯದವರಿಗೂ ಇರುವುದು. ಹೊರಗಣ್ಣಿನಂತೆಯೇ ಒಳ

ಗಣ್ಣಿನ ರೀತಿ. ಓದು ಬರೆಹ ಕಲಿತು ಕೆಲವು ಪುಸ್ತಕಗಳನ್ನು ನೋಡಿದ ಮಾತ್ರದಿಂದ ನಮ್ಮ ಕಣ್ಣೋಟವು ಇನ್ನಿಷ್ಟು ಹೆಚ್ಚಾಗುವುದಿಲ್ಲ. ಕಲಿಯದೆ ಇದ್ದರೆ ಇದ್ದ ಕಣ್ಣುಗಳು ಕುರುಡಾಗಿಹೋಗುವುದಿಲ್ಲ. ಇದರಂತೆಯೇ ಒಳಗಣ್ಣು; ಮರವೆಯ ತೆರೆಯಿಂದ ಎಲ್ಲರ ಒಳಗಣ್ಣೂ ಮುಚ್ಚಿಹೋಗಿರುವುದು. ಆ ಮುಚ್ಚಿದ ಕಣ್ಣು ತೆರೆಯಲು ಕೊಂಚ ಕಾಲವು ಬೇಕು, ಕಾರಣಗಳೂ ಕೆಲವು ಒದಗಬೇಕು. ಓದು ಬರೆಹ ಕಲಿತಷ್ಟಕ್ಕೇ ಒಳಗಣ್ಣು ತೆರೆಯದು. ಬಾಳುವೆಯಲ್ಲಿಯ ಏಳು ಬೀಳುಗಳ, ಸುಖದುಃಖಗಳ ಅನುಭವದ ಏಟುಗಳು ಬಿದ್ದಂತೆಲ್ಲ ಅದು ತೆರೆಯುತ್ತ ಬರುವುದು. ಹೆಚ್ಚು ಹೆಚ್ಚು ಅನುಭವಸ್ಥನಾದಂತೆ ಮನುಷ್ಯನು ಹೆಚ್ಚು ಹೆಚ್ಚಾಗಿ ಒಳನೋಟವನ್ನು ಪಡೆಯುತ್ತಾನೆ. ಆ ಒಳನೋಟವು ತಾನೆ ತಾನಾಗಿ ಮನುಷ್ಯನಿಂದ ಮಾತನಾಡಿಸುವ ಕೆಲಸವನ್ನು ಮಾಡಿಸತೊಡಗಿತೆಂದರೆ ಆ ಕೆಲಸವೇ ಕವಿತೆಯೆನಿಸುವುದು. ಕಲಿತವರೆಲ್ಲರೂ ಕವಿಗಳಾದುದನ್ನು ಕಂಡವರಾರೂ ಇಲ್ಲ. ಆದರೆ ಕಲಿಯದವರು ಹಲವು ಜನರು ಹೆಸರಾದ ಕವಿಗಳಾದುದನ್ನು ಎಲ್ಲ ಕಡೆಯಲ್ಲಿಯೂ ಕಾಣಬಹುದು.

ಆನಂದದ ಕಲ್ಪನೆಯು ಕಲಿತವರಿಗೂ ಕಲಿಯದವರಿಗೂ ಸಾಮಾನ್ಯವಾಗಿರುವುದು. ಎಲ್ಲರೂ ಮನವಾರೆ ಬಯಸುವರಾ ಆನಂದವನ್ನು. ಬಾಳುವೆಯ ಗೊಂದಲದಿಂದ ಬೇಸತ್ತು ಬಳಲಿದ ಮನಸ್ಸಿಗೆ ತಣಿವನೊಂದಿಸುವುದಕ್ಕಾಗಿ ಜನರು ಅದೆಷ್ಟೋ ಬಗೆಯ ಸಾಧನಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಅಂತಹ ಸಾಧನಗಳಲ್ಲಿ ಹಾಡು ಕವಿತೆ ಕತೆಗಳು ಮೇಲಿನ ತರಗತಿಗೆ ಸೇರಿದುವುಗಳು. ಕನ್ನಡ ಭಾಷೆಯಲ್ಲಿ ತಮ್ಮ ತಮ್ಮ ಸಂಸ್ಕಾರಕ್ಕನುಗುಣವಾಗಿ ಕಲಿತವರೂ ಕಲಿಯದವರೂ ಈ ಬಗೆಯ ಹಾಡು ಕವಿತೆ ಕತೆಗಳನ್ನು ರಚಿಸುತ್ತ ಬಂದಿದ್ದಾರೆ. ಕಲಿತವರು ಅಕ್ಷರವನ್ನರಿತವರಾದುದರಿಂದ ಅವರು ರಚಿಸಿದುದೆಲ್ಲ ಬರೆಯಲ್ಪಟ್ಟು ಪುಸ್ತಕ ರೂಪವಾಗಿ ಉಳಿದುಕೊಂಡಿದೆ. ಹಳ್ಳಿಗರು ಅಕ್ಷರವನ್ನರಿಯದವರಾದುದರಿಂದ ಅವರು ರಚಿಸಿದುದೆಲ್ಲ ಜನರ ಬಾಯಲ್ಲಿ ಉಳಿದುಕೊಂಡು ಬಂದಿದೆ. ಇದರಲ್ಲಿ ಕರ್ಣ ಪರಂಪರೆಯಿಂದ ಇದುವರೆಗೆ ಉಳಿದುಕೊಂಡಿರುವುದೆಷ್ಟೋ! ಪರಂಪರೆಯು ನಷ್ಟವಾಗಿ ಅದರೊಡನೆಯೇ ಹಾಳಾಗಿಹೋದುದೆಷ್ಟೋ! ಬಲ್ಲವರಾರು? ಉಳಿದುವುಗಳನ್ನಾದರೂ ಒಂದೇ ಕಡೆಗೆ ಸೇರಿಸಿ ಕಾಯ್ದಿಡಲು ನಾವೆಲ್ಲರೂ ಹೆಣಗಬೇಕಾಗಿರುವುದೀಗ.

೨. **ಹಾಡುಗಳ ವೈವಿಧ್ಯ.**—ಹಳ್ಳಿಗರ ಹಾಡುಗಳಲ್ಲಿ ಗಂಡಸರ ಹಾಡುಗಳು ಬೇರೆ, ಹೆಂಗಸರ ಹಾಡುಗಳು ಬೇರೆ. ಗಂಡಸರು ಕೆಲಸವಿಲ್ಲದಾಗ ಲಾವಣಿ ಪದ, ಆಟ್ಟದ ಆಟ ಮೊದಲಾದುವುಗಳಿಂದ ಮನವನ್ನು ರಂಜಿಸಿಕೊಳ್ಳುವರು. ಅಲ್ಲದೆ, ಬೇಸಾಯದ ಬೇರೆ ಬೇರೆ ಕೆಲಸ ಮಾಡುವಾಗ, ಯಾತದಿಂದ ನೀರೆತ್ತುವಾಗ, ಬಂಡಿಗಳನ್ನು ನಡೆಯಿಸುವಾಗ, ಧಾನ್ಯದ ರಾಶಿಯನ್ನು ಮಾಡುವಾಗ, ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾದ ಅರ್ಥದಿಂದ ಕೂಡಿದ ಪದಗಳನ್ನು, ಒಂದೊಂದು ಸಂದರ್ಭದಲ್ಲಿ ಒಂದೊಂದು ವಿಧವಾದ ರಾಗಗಳಿಂದ ಹೇಳುವರು. ಅವರ ಆಗಿನ ಆ ರಾಗಗಳಿಗೆ ನಿಯಮವಿಲ್ಲ, ನಿರ್ಬಂಧವಿಲ್ಲ; ಶಾಸ್ತ್ರವಿಲ್ಲ, ಸಂಗೀತವಿಲ್ಲ. ಆದರೂ ಕೇಳ

ಲಿಕ್ಕೇನೋ ಒಂದು ಬಗೆಯದಾಗಿದ್ದು ಬಲು ಇಂಪಾಗಿರುವುದು, ಹಿತವಾಗಿರುವುದು; ಆ ರಾಗದ ಏಕತಾನತೆಯಲ್ಲಿ, ಕೆಲಸದಿಂದಾಗುತ್ತಿರುವ ದೇಹಶ್ರಮವನ್ನು ಮರೆಯಿಸಿ ಬಿಡುವ ಗುಣವಿರುವುದು. ಇದರಂತೆಯೇ, ಹೆಂಗಸರು ಬೀಸುವಾಗ, ಕುಟ್ಟುವಾಗ, ನೂಲುವಾಗ, ಮಕ್ಕಳನ್ನಾಡಿಸುವಾಗ, ತೊಟ್ಟಿಲು ತೂಗುವಾಗ, ಬೇರೆ ಬೇರೆ ಮಂಗಳ ಕಾರ್ಯಗಳು ನಡೆವಾಗ, ಸಂದರ್ಭೋಚಿತ ಭಾವಗಳುಳ್ಳ ಹಾಡುಗಳನ್ನು ಹಲವು ಬಗೆಯ ಧಾಟಿಗಳಿಂದ ಹೇಳುವರು. ಶಾಸ್ತ್ರದಿಂದ ಅದೆಷ್ಟೋ ದೂರದಲ್ಲಿದ್ದ ಅವರ ಸ್ವಾಭಾವಿಕ ಸಂಗೀತವು ಕೇಳುವವರನ್ನು ತಲ್ಲೀನರನ್ನಾಗಿ ಮಾಡಿಬಿಡುತ್ತದೆ. ಹೆಂಗಸರು ಬೀಸುತಿರುವಾಗ ಹೇಳುವ ಹಾಡುಗಳ ವಿಚಾರದಲ್ಲಿಯೇ ನಾನೀಗ ಬರೆಯಬೇಕೆಂದಿರುವೆನು. ಮೊದಲು, ಆ ಹಾಡುಗಳು ಯಾವ ಜಾತಿಗೆ ಸೇರಿದುವುಗಳೆಂಬುದನ್ನು ವಿವರಿಸುವೆನು.

ತನ್ನಲ್ಲಿ ತಾನು ಕಂಡುದನ್ನು ಇತರರೂ ಕಾಣುವಂತೆ ನೋಟವನ್ನು ಕೊಡುವ, ತಾನು ಅನುಭವಿಸಿದುದನ್ನು ಉಳಿದವರೂ ಅನುಭವಿಸುವಂತೆ ಭಾವಗಳನ್ನುಕ್ಕಿಸುವ ಮಾತುಗಳ ಹೆಣಿಕೆಯೇ ನಿಜವಾದ ಕವಿತೆ. ಅಂತಹ ಹೆಣಿಕೆಗಾರನೇ ಬಲ್ಲಿದನಾದ ಕಬ್ಬಿಗನು. ನಿಜವಾದ ಕವಿತೆಗೆ ವ್ಯಾಕರಣದ ಸೂತ್ರಗಳಿಂದ ಬಿಗಿದು ಬಿಗಿದು ಕಟ್ಟಿದ ಭಾಷೆಯೇ ಇರಬೇಕಾದ ಕಾರಣವಿಲ್ಲ. ನಾವು ಮಾತನಾಡುವ ನಿತ್ಯದ ವ್ಯವಹಾರದ ಭಾಷೆಯನ್ನೇ, ಅರ್ಥದ ಔಚಿತ್ಯವನ್ನರಿತು, ನಾದದ ಮಾಧುರ್ಯವನ್ನು ತಿಳಿದು, ಉಪಯೋಗಿಸಿದರೂ ಸಾಕು. ಅರ್ಥಾಲಂಕಾರದ ತೊಡಕು ಬಲೆಗಳೂ ಶಬ್ದಾಲಂಕಾರದ ಬಯಲ ಬೆಡಗೂ ಇರಲೇಬೇಕೆಂಬ ನಿಯಮವಿಲ್ಲ. ಹೇಳಬೇಕಾಗಿದ್ದ ವಿಷಯವು ಮನದಲ್ಲಿ ಮೂಡಿ, ಬುದ್ಧಿಯಲ್ಲಿ ಬೆಳೆದು, ಹೃದಯವನ್ನು ನಿಲುಕಿ, ತಲೆಯನ್ನು ತೂಗಿಸಿದರೆ ಕೆಲಸವಾಯಿತು. ಕೃತ್ರಿಮಗಳೆಂದು ಕಂಡುಬರುವ ಕವಿಸಮಯವೂ ಕಾವ್ಯಸಂಪ್ರದಾಯಗಳ ಬಡಿವಾರದ ಬಣ್ಣನೆಯೂ ಅಷ್ಟೊಂದು ಆವಶ್ಯಕವಾದುವಲ್ಲ; ಅಕೃತ್ರಿಮವಾದ ರೀತಿಯಿಂದ ರಸಾನುಭವವನ್ನುಂಟುಮಾಡುವ ಸ್ವಾಭಾವಿಕ ವರ್ಣನೆಯಿದ್ದರೂ ಸಾಕು. ಛಂದಶ್ಶಾಸ್ತ್ರದ ಬಂಧನಕ್ಕೆ ಸಿಲುಕಿದ ನಿಯಮಿತ ವೃತ್ತಗಳೇ ಇರಬೇಕೆಂಬುದರ ನಿರ್ಬಂಧವಿಲ್ಲ. ಭಾವಕ್ಕೆ ಅನುಗುಣವಾದ ಪದವಿನ್ಯಾಸವಿದ್ದು ಕಿವಿಗೆ ಸವಿಯಾಗಿರುವ ಎಂತಹ ಪದ್ಯಗಳಿಂದಲೂ ಕೆಲಸವನ್ನು ನಡೆಯಿಸಬಹುದು. ಹಳ್ಳಿಗರ ಹಾಡುಗಳೆಲ್ಲ ಈ ಜಾತಿಗೆ ಸೇರಿದುವುಗಳು. ಯಾವ ಬಗೆಯ ಕೃತ್ರಿಮತೆಯ ನೋಂಕೂ ಇವುಗಳಿಗೆ ತಾಗಿದುದು ಕಂಡುಬರುವುದಿಲ್ಲ. ಹಳ್ಳಿಗರ ಭಾಷೆಯಲ್ಲಿಯೇ ಹೇಳಬೇಕೆಂದರೆ, ಅವರ ಹಾಡುಗಳೆಲ್ಲ "ಕರೆದ ನೊರೆಹಾಲಿ"ನಂತಹವು, *"ತೊಂಬುಚ್ಚಿ ಬಿದ್ದ ಮಗೆ ಮಾವಿನ ಹಣ್ಣಿ"ನಂತಹವು; ಸಕ್ಕರೆ ಕೇಸರಿ ದ್ರಾಕ್ಷೆಗಳನ್ನು ಸೇರಿಸಿ ಕಾಯಿಸಿದ ಹಾಲಿನಂತಹವಲ್ಲ; ಕಸುಗಾಯಿಯನ್ನೇ ಕಿತ್ತು ತಂದು ಒತ್ತಿ ಒತ್ತಿ ಮಾಡಿದ ಮಾವಿನ ಹಣ್ಣಿನಂತಹವಲ್ಲ.

೩. **ಭಾಷೆಯ ಬಗೆ.**—ಈ ಹಳ್ಳಿಗರ ಹಾಡುಗಳಲ್ಲಿರುವ ಭಾಷೆಯು ಬಲು ಸೊಗಸಾಗಿದೆ; ಎಲ್ಲವೂ ಅಚ್ಚಗನ್ನಡ ಪದಗಳು; ಇನ್ನುಳಿದ ಭಾಷೆಗಳ ನೋಂಕೇ

* ತೊಟ್ಟು ಕಳಚಿ ಬಿದ್ದ ಇಮ್ಮಾವು.

ಇಲ್ಲವೆಂದರೂ ಸಲ್ಲುವುದು; ಸಂಸ್ಕೃತ ಭಾಷೆಯನ್ನು ಮುಟ್ಟುವುದೇ ಇಲ್ಲವೆಂದು ಆಣೆ ಮಾಡಿ ಕಾವ್ಯ ರಚನೆಗಾಗಿ ಹೊರಟ ಆಂಡಯ್ಯನ ಭಾಷೆಯನ್ನೂ ಒಂದು ಗರಿ ಏಣಿ ಮುಂದುವರಿದಿರುವುದು. ಆಂಡಯ್ಯನ ಭಾಷೆಯು ಚಿಪ್ಪಿನೊಳಗಿರುವ ಕೊಬ್ಬರಿಯಂತಹುದು. ಆದರೆ ಬೀಸುವ ಹಾಡುಗಳ ಭಾಷೆಯು ಸುಲಿದ ಬಾಳೆಯ ಹಣ್ಣಿನಂತಹುದು; ಕಳೆದ ಸಿಗುರಿನ ಕಬ್ಬಿನಂತಹುದು. ಹೇಳಬೇಕಾದ ಶೈಲಿಯೂ ಸರಳವಾದುದು. ವಾಕ್ಯಗಳನ್ನನುಸರಿಸಿ ಉಸಿರುಗಟ್ಟಿಕೊಂಡು ಎರಡೆರಡು ಮೈಲಿ ಓಡಿಹೋಗಬೇಕಾದ ಸಂದರ್ಭವೇನೂ ಇಲ್ಲ. ಎಲ್ಲವೂ ಮೂರೋ ನಾಲ್ಕೋ ಪದಗಳಿಂದ ಕೂಡಿದ ಪುಟ್ಟ ಪುಟ್ಟ ವಾಕ್ಯಗಳು. ನೃಪತುಂಗನು ಹೇಳಿದಂತೆ, "ಕಿರಿದರೊಳ್ ಪಿರಿದುಮರ್ಥವನರಿಪಲ್ನೆರೆವ" ಸಾಮರ್ಥ್ಯವನ್ನು ಸಂಪಾದಿಸಿದುವುಗಳು. ಶಬ್ದಗಳು ಕುಣಿಕುಣಿಯುತ್ತಲೇ ತಮ್ಮ ತಮ್ಮ ಕಾರ್ಯವನ್ನು ಪೂರ್ತಿಗೊಳಿಸುತ್ತಿರುವುವು; ತಿಳುಹಿಸಬೇಕಾದ ಹುರುಳನ್ನೆಲ್ಲ ಮುಚ್ಚು ಮರೆಯಿಲ್ಲದೆ ನಿಚ್ಚಳವಾಗಿ ತಿಳುಹಿಸಿಬಿಡುವುದು ಈ ಹಾಡುಗಳ ಭಾಷೆಯ ಹೆಚ್ಚುಗಾರಿಕೆ. ಇಷ್ಟೆಲ್ಲವೂ ಇದ್ದು ಕಿವಿಗಳನ್ನು ಚುಚ್ಚಿ ನೋಯಿಸುವ ಕಕ್ಕಸ ನುಡಿಯೂ ಅಲ್ಲವದು; ತಾಯಿಯು ಇನಿದಾಗಿ ಹೇಳುವ ಜೋಗುಳ ಹಾಡಿನಂತೆ ಕಿವಿಗೆ ಸವಿಯಾಗಿರುವುದು. ಇಲ್ಲಿ ಬರೆದ ಹಾಡಿನ ಭಾಷೆಯನ್ನು ನೋಡಿರಿ.—

ಬಡತನವು ಬಂದಾಗ ಬಡಿಬೇಡ ಮಕ್ಕಳನು ।
ಅಡಿಯಾಡಿ ಬಂದು ತೊಡೆಮೇಲೆ ॥
ಅಡಿಯಾಡಿ ಬಂದು ತೊಡೆಮೇಲೆ ಮಲಗಿದರೆ ।
ಬಂದ ಬಡತನವು ಬಯಲಾಯ್ತೋ ॥

ಪಿರಿಯಳೊಬ್ಬಳು ಕಿರಿಯಳಾದವಳಿಗೆ ಹೇಳಿದ ಅನುಭವದ ಮಾತುಗಳು ಈ ಹಾಡಿನಲ್ಲಿ ಉಂಟು. ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ ಹಾಡಿನಲ್ಲಿ ಒಂದು ಸಂಸ್ಕೃತ ಪದವೂ ಸಿಕ್ಕದು; ಅದರಂತೆಯೇ ತಿಳಿದುಕೊಳ್ಳಲು ಕಷ್ಟವಾದ ಹಳಗನ್ನಡ ಪದವೊಂದೂ ದೊರೆಯದು. "ಬಂದ ಬಡತನವು ಬಯಲಾಯ್ತೋ" ಎಂಬ ಮೂರೇ ಮೂರು ಪದಗಳುಳ್ಳ ಮಾತು ಅದೆಷ್ಟು ಅರ್ಥವನ್ನು ಒಳಕೊಂಡಿರುವುದೆಂಬುದನ್ನು ನೋಡಿರಿ.

ಸರದಾರ ನನ್ನಣ್ಣ ಕರೆದು ತಾ ಹೇಳಿದನು ।
ನೆರೆಹೊರೆಯ ಮನೆಗೆ ಹೊಗಬೇಡ ॥
ನೆರೆಹೊರೆಯ ಮನೆಗೆ ಹೊಗಬೇಡ ನನ ತಂಗಿ ।
ಬರಬಾರದಾ ಮಾತು ಬರುತಾವೆ ॥

ತನ್ನ ಅಣ್ಣನು ತನಗೆ ಹೇಳಿದುದನ್ನು ಒಬ್ಬ ಹೆಣ್ಣುಮಗಳು ಇನ್ನೊಬ್ಬರಿಗಾರಿಗೋ ಹೇಳಿದಂತೆ ಈ ಹಾಡಿನಲ್ಲಿದೆ. ಇದರಲ್ಲಿರುವ "ಬರಬಾರದಾ ಮಾತು ಬರುತಾವೆ" ಎಂಬ ಮಾತು, ವಿಸ್ತೃತವಾದ ಅರ್ಥವನ್ನು ಸ್ವಲ್ಪದರಲ್ಲಿಯೇ ಅದೆಷ್ಟು ಉಚಿತ ರೀತಿಯಿಂದ ಸ್ಪಷ್ಟಗೊಳಿಸುತ್ತದೆಯೆಂಬುದನ್ನು ನೋಡಿ ಬೆರಗುಪಡಬಹು

ದಾಗಿದೆ. ಬೇರೆ ಬೇರೆ ಬಗೆಯ ವರ್ಣನೆಯನ್ನು ಮಾಡುವಾಗಲಾದರೂ ಈ ಹಾಡುಕಾರರು ಬಳಸಿದ ಭಾಷೆಯು ಕಠಿನವಿರುವುದೇ?—

ನಡೆದರೆ ನಡು ಸಣ್ಣ ಪದುಮ ಜಾತಿಯ ಹೆಣ್ಣು ।
ಮಾವಿನಾ ಹೋಳು ನಿನ ಕಣ್ಣು ॥
ಮಾವಿನಾ ಹೋಳು ನಿನ ಕಣ್ಣು ಕಂದಮ್ಮ ।
ಮಾವ ಬಂದಿಹನು ಒಳಗ್ಹೋಗೇ ॥

ಕಟ್ಯಾಣಿ ಕಟ್ಟಿಹಳು ಕಟ್ಟಿ ಮೇಲಿ ನಿಂತಿಹಳು ।
ಬಟ್ಟಲಗಣ್ಣು ತಿರುಹುವಳು ॥
ಬಟ್ಟಲಗಣ್ಣು ತಿರುಹುವಳು ಕಂದಮ್ಮ ।
ದಿಟ್ಟಿ ಸೋಂಕ್ಯಾವು ಒಳಗ್ಹೋಗೇ ॥

ತಾಯಿಯು ಮಗಳನ್ನುದ್ದೇಶಿಸಿ ಹೇಳಿದ ಮಾತುಗಳು ಈ ಪದ್ಯಗಳಲ್ಲಿವೆ. ಇವುಗಳಲ್ಲಿರುವ ಶಬ್ದಗಳು ಆ ಮಗಳ ಚೆಲುವಿನ ಚಿತ್ರವನ್ನು ರಮಣೀಯವಾಗಿ ತೆಗೆದಿರುವುವು. ಸುಶಿಕ್ಷಿತ ಕವಿಗಳು ಮಾಡುವ ವರ್ಣನೆಗಿಂತ ಕಡಿಮೆಯಾಗಿರುವುದೇನಿದರಲ್ಲಿ? ಇನ್ನುಳಿದ ಕವಿಗಳಂತೆ ಇಲ್ಲಿ ಕಣ್ಣನ್ನು ಕಮಲದೊಡನೆ ಹೋಲಿಕೆಮಾಡಿಲ್ಲ, ಭೃಂಗಕ್ಕೂ ಹೋಲಿಸಿಲ್ಲ. ಇಲ್ಲಿ ಕಣ್ಣಿಗೆ ಉಪಮೆಗಳೆಂದರೆ ಮಾವಿನ ಹೋಳು; ದುಂಡಗಿರುವ ಬಟ್ಟಲು. ಇವೆಂತಹ ಉಪಮೆಗಳೆಂದು ಮೂಗು ಮುದುಡಿಸುವಂತೆ ಆಗುವುದೇನಿಲ್ಲಿ?

ಸೇದು ಬಾವಿಯ ಮೇಲೆ ಸೀರೆ ಸೆಳೆವವಳಾರೆ ।
ಕಾಡಿಗೇಗಣ್ಣ ನಡು ಸಣ್ಣ ॥
ಕಾಡಿಗೇಗಣ್ಣ ನಡು ಸಣ್ಣಗಿನ ತಂಗಿ ।
ರಾಯ ಕರೆಯುವನು ಮನೆಗ್ಹೋಗೆ ॥

ಹಸುರು ಕುಬುಸದ ಮೇಲಿ ಎಸಳುಗೂದಲ ಬಿಟ್ಟು ।
ಬಿಸಿಲಿಗೆ ಬೆನ್ನ ತೆರೆದಿಹಳು ॥
ಬಿಸಿಲಿಗೆ ಬೆನ್ನ ತೆರೆದಿಹಳು ನನ ತಂಗಿ ।
ಹಸುಳ ಕಂದಯ್ಯನ ಬಯಕೆಯಲಿ ॥

ಅಕ್ಕನು ತನ್ನ ಒಲವಿನ ತಂಗಿಯನ್ನು ಬಣ್ಣಿಸಿ ಹೇಳಿದ ಮಾತುಗಳಿವೆ ಈ ಪದ್ಯಗಳಲ್ಲಿ. ಮೊದಲನೆಯ ಪದ್ಯದಲ್ಲಿಯ "ಕಾಡಿಗೆಗಣ್ಣ ನಡು ಸಣ್ಣಗಿನ ತಂಗಿಯು" ಸೇದುವ ಬಾವಿಯ ಮೇಲೆ ನಿಂತು ಸೀರೆ ಸೆಳೆಯುವ ಚಿತ್ರವು ಮನಸ್ಸನ್ನು ಮರುಳುಗೊಳಿಸದೆ ಬಿಡದು. ಎರಡನೆಯ ಪದ್ಯದಲ್ಲಿಯ "ಹಸುಳ ಕಂದಯ್ಯನ ಬಯಕೆಯಲಿ, ಹಸುರು ಕುಬುಸದ ಮೇಲಿ ಎಸಳುಗೂದಲ ಬಿಟ್ಟು ಬಿಸಿಲಿಗೆ ಬೆನ್ನ ತೆರೆದು" ಕುಳಿತ ತಂಗಿಯ ಚಿತ್ರವು, ಕಣ್ಣ ಮುಂದೆ ಕಟ್ಟಿದಂತಾಗಿ ಅದಾರಿಗೆ ಭಾವೋದ್ರೇಕವನ್ನುಂಟು ಮಾಡಲಿಕ್ಕಿಲ್ಲ? ಒಳ್ಳೆಯ ಚಿತ್ರಕಾರನು ಈ ಪದ್ಯವನ್ನು ನೋಡಿದರೆ ಇದರಲ್ಲಿರುವ

ಶಾಬ್ದಿಕ ಚಿತ್ರವನ್ನು ದೃಶ್ಯ ಚಿತ್ರವನ್ನಾಗಿ ಬರೆಯುದೆಬಡಸು. ಬೀಸುವ ಕಲ್ಲಿನ ಹಾಡುಗಳೆಲ್ಲದರ ಭಾಷೆಯೂ ಈ ಬಗೆಯುದಾಗಿದೆ; ವ್ಯಾಕರಣ ಶಾಸ್ತ್ರಿಗಳ ಬರೆಗೆ ಮಾತ್ರ ಇದು ಇಳಿಯಲಾರದು. ಆದರೇನು? ಮಾಡಬೇಕಾದ ಕೆಲಸವನ್ನು ತಲೆದೂಗಿಸುವಂತಹ ರೀತಿಯಿಂದ ಮಾಡಿ ಮುಗಿಸುವುದೀ ಹಾಡುಗಳ ಭಾಷೆಯು. ಹೆಚ್ಚಿನದನ್ನು ತೆಗೆದುಕೊಂಡು ನಾವೇನು ಮಾಡಬೇಕಾಗಿದೆ?

೪. **ಛಂದಸ್ಸು.**—ಬೀಸುವ ಹಾಡುಗಳು ಛಂದಸ್ಸಿನ ಮರ್ಯಾದೆಯನ್ನೂ ಮೀರಿ ಹೊರಟವುಗಳಲ್ಲ; ಒಂದೊಂದು ಬಗೆಯ ನಿಯಮವನ್ನಿಟ್ಟುಕೊಂಡಿರುವುವು. ಸಾಮಾನ್ಯವಾಗಿ ಎಲ್ಲ ಹಾಡುಗಳೂ "ತ್ರಿಪದಿ" ಎಂಬ ವೃತ್ತದಲ್ಲಿರುವುದು. ತ್ರಿಪದಿಯು ಮಾತ್ರಾವೃತ್ತ, ಅಚ್ಚಗನ್ನಡ ಛಂದಸ್ಸಿಗೆ ಸೇರಿದುದು. ಭಾವಗಳನ್ನು ಉಚಿತ ರೀತಿಯಿಂದ ಸ್ಫುಟಗೊಳಿಸುವುದಕ್ಕೆ ತ್ರಿಪದಿಯನ್ನು ಬಿಟ್ಟರೆ ಬೇರೆ ವೃತ್ತವಿಲ್ಲ. ಕನ್ನಡಿಗರ ಹುಟ್ಟಿನೊಡನೆಯೇ ಬಂದ ವೃತ್ತವಿದು; ಎಲ್ಲರಿಗೂ ಅಚ್ಚುಮೆಚ್ಚಿನದು. ಆದುದರಿಂದಲೇ, ಬಗೆಗಾರರಲ್ಲಿ ಬಲ್ಲಿದನಾದ ಸರ್ವಜ್ಞಮೂರ್ತಿಯು ಎಲ್ಲವನ್ನೂ ಬದಿಗೊತ್ತಿ ತ್ರಿಪದಿಯನ್ನು ಸ್ವೀಕರಿಸಿದ್ದಾನೆ. ಹೆಂಗಸರು ತ್ರಿಪದಿಯಲ್ಲಿರುವ ಈ ಬೀಸುವ ಹಾಡುಗಳನ್ನು ಹೇಳುವಾಗ ಒಂದು ಬಗೆಯಿಂದ ಹಿಗ್ಗಿಸಿ ಹೇಳಿ ಚೌಪದಿಯನ್ನಾಗಿ ಮಾಡುವರು.—

ಸೂಳೆಯಂತಹ ಹೆಣ್ಣೆ ಸುಳಿಯಬೇಡೋಣಿಯಲಿ ।
ಸೂರ್ಯನಂತವನು ನನ ತಮ್ಮ ನೋಡಿದರೆ ।
ಸೂರೆಮಾಡುವನು ಮನೆಮಾರು ॥

ಎಂದಿರುವ ತ್ರಿಪದಿಯನ್ನೇ

ಸೂಳೆಯಂತಹ ಹೆಣ್ಣೆ ಸುಳಿಯಬೇಡೋಣಿಯಲಿ ।
ಸೂರ್ಯನಂತವನು ನನ ತಮ್ಮ ॥
ಸೂರ್ಯನಂತವನು ನನ ತಮ್ಮ ನೋಡಿದರೆ ।
ಸೂರೆ ಮಾಡುವನು ಮನೆ ಮಾರು ॥

ಎಂದು ಹಿಗ್ಗಿಸಿ ನಾಲ್ಕು ಚರಣಗಳಲ್ಲಿ ಹೇಳುವರು. ತಾಳದ ಅನುಕೂಲತೆಗಾಗಿ ತ್ರಿಪದಿಯು ಹಳ್ಳಿಗರ ಬಾಯಲ್ಲಿಯೇ ಚೌಪದಿಯಾಯಿತು. ಬಳಿಕ ಈ ಚೌಪದಿಗೆ "ಸಾಂಗತ್ಯ"ವೆಂಬ ಸ್ವತಂತ್ರ ನಾಮವನ್ನು ಕೊಟ್ಟು ಮಧ್ಯಕಾಲದ ಕವಿಗಳು ಸಾಹಿತ್ಯದಲ್ಲಿಯೂ ಸೇರಿಸಿಕೊಂಡುಬಿಟ್ಟಿರುವರು.

ಈ ಹಾಡುಗಳಲ್ಲಿ ಮುಖ್ಯ ಪ್ರಾಸವು ಬಹಳವಾಗಿ ಇರುವುದಾದರೂ ಇದ್ದೇ ತೀರಬೇಕೆಂಬ ನಿರ್ಬಂಧವನ್ನೇನೂ ಇಟ್ಟುಕೊಂಡಂತೆ ತೋರುವುದಿಲ್ಲ. ಮುಖ್ಯ ಪ್ರಾಸವಿಲ್ಲದ ಕಡೆಯಲ್ಲಿ ಪದ್ಯ ರಚನೆಯ ಸೌಂದರ್ಯಕ್ಕೆ ಕುಂದು ಬಂದಿರುವಂತೇನೂ ಕಾಣುವುದಿಲ್ಲ. ಇಷ್ಟೇ ಅಲ್ಲದೆ, ಪ್ರಾಸದ ನಿಯಮವನ್ನು ಇಲ್ಲಿ ಮೀರಲಾಗಿದೆಯೆಂದು ಕಲ್ಪನೆಯೂ ಬರುವಂತಿಲ್ಲ.—

ಸಣ್ಣಂಗಿ ಸರದಾರ ಬೆಳ್ಳಿಯಾ ಉಡುದಾರ ।
ಚಿನ್ನದಾ ಚೌಕ ಶಿವದಾರ ॥
ಚಿನ್ನದಾ ಚೌಕ ಶಿವದಾರದಣ್ಣಯ್ಯ ।
ಕರಣಾಟ ನಾಡ ಸಾವ್ಕಾರ ॥

ಈ ಹಾಡಿನ ಎಲ್ಲ ಚರಣಗಳಲ್ಲಿಯೂ ದ್ವಿತೀಯಾಕ್ಷರ ಪ್ರಾಸದ ನಿಯಮವನ್ನು ಅನುಸರಿಸಲಾಗಿದೆ; ಕೊನೆಯ ಚರಣದಲ್ಲಿ ಮಾತ್ರ ಇಲ್ಲ. ಇದರಿಂದ ಬಂಧದ ಅಂದ ವೇನಾದರೂ ಕೆಟ್ಟುಹೋಗಿದೆಯೇ?

ಅಕ್ಕತಂಗೆರು ಜೋಡು ಸೀರೆ ಕುಪ್ಪುಸ ಜೋಡು ।
ಓಲೆಗೆ ಜೋಡು *ಚೆಳತುಂಬು ॥
ಓಲೆಗೆ ಜೋಡು ಚೆಳತುಂಬು ನನ ತಂಗಿ ।
ನಾವಿಬ್ಬರು ಜೋಡು ತವರಿಗೆ ॥

ಈ ಹಾಡಿನಲ್ಲಿ ದ್ವಿತೀಯಾಕ್ಷರದ ನಿಯಮವನ್ನು ಸಂಪೂರ್ಣವಾಗಿ ಬಿಟ್ಟುಬಿಡಲಾಗಿದೆ. ಆದುದರಿಂದ ಕಿವಿಗೇನಾದರೂ ಕರ್ಕಶವಾಗಿ ಕೇಳುವುದೇನು? "ಅಯ್ಯೋ! ಪ್ರಾಸವಿಲ್ಲ" ಎಂಬ ಜುಗುಪ್ಸೆಯನ್ನೇನಾದರೂ ಹುಟ್ಟಿಸುವುದೇನು? ಯತಿ ಭಂಗವು ಮಾತ್ರ ಈ ಹಾಡುಗಳಲ್ಲಿ ಎಲ್ಲಿಯೂ ಕಾಣಬರುವುದಿಲ್ಲ; ಇದೊಂದು ಹೆಚ್ಚುಗಾರಿಕೆ ಇವುಗಳಲ್ಲಿ. ಯತಿಯ ನಿಯಮವನ್ನು ಕಾಯ್ದುಕೊಂಡುದರಿಂದಲೇ ಇವುಗಳ ಕಳೆಯು ಹೆಚ್ಚಾಗಿರುವುದು. ಯತಿಯೇ ಇವುಗಳ ಮುಖ್ಯ ಜೀವಾಳ ವಾಗಿರುವುದು.

**೫. ಹಾಡು ಹೇಳುವ ರೀತಿ.**—ಹೆಣ್ಣುಮಕ್ಕಳು ಈ ಬೀಸುವ ಹಾಡುಗಳನ್ನು ಹಲವು ಬಗೆಯ ಧಾಟಿಗಳಲ್ಲಿ ಹೇಳುವರು. ಒಂದೊಂದು ಧಾಟಿಗೂ ಒಂದೊಂದು ಪಲ್ಲವಿಯನ್ನು ಸೇರಿಸುವರು. ಅನೇಕ ಕಡೆಗೆ ಪಲ್ಲವಿಯೊಡನೆ ಅನುಪಲ್ಲವಿಯೂ ಇರುವುದು. ಆ ಪಲ್ಲವಿ ಅನುಪಲ್ಲವಿಗಳೂ ಒಂದೊಂದು ಸಂದರ್ಭವನ್ನು ಕುರಿತು ಆಡಿದ ಮನಸ್ಸಿನ ಮಾತುಗಳು. ಸೃಷ್ಟಿಯ ಸೊಬಗನ್ನು ಬಣ್ಣಿಸಿ ಹೇಳಿದ ಪಲ್ಲವಿ ಅನುಪಲ್ಲವಿಗಳೂ ಕೆಲವು ಉಂಟು. ಹಾಡಿನ ಎರಡೆರಡು ಚರಣಗಳನ್ನು ಹೇಳಿ, ಬಳಿಕ ಈ ಪಲ್ಲವಿಯನ್ನು ಹೇಳುವರು. ಅನುಪಲ್ಲವಿಯನ್ನು ನಡುನಡುವೆ ಯಾವಾಗಲಾದರೊಮ್ಮೆ ಹೇಳುವರು. ಪಲ್ಲವಿ ಅನುಪಲ್ಲವಿಗಳನ್ನು ಸೇರಿಸಿ ಹೇಗೆ ಹಾಡುವರೆಂಬುದಕ್ಕೆ ಮಾದರಿಯಾಗಿ ಇಲ್ಲಿ ಒಂದೆರಡು ಹಾಡುಗಳನ್ನು ಉದಾಹರಿಸುವೆನು:—

ಹಿಂಡು ಮಕ್ಕಳ ಒಳಗೆ ಪುಂಡ ನನ್ನ ಕಂದಯ್ಯ ।
ದುಂಡುಮಲ್ಲಿಗೆಯ ಮರವೇರಿ ॥
ಈ ತೋಟದೊಳಗೆ ಹೂವಿಲ್ಲ ಕಂದಾ ಕಾಡಬೇಡೋ ॥

* ಕಿವಿಯಲ್ಲಿ ಒಂದು ತೊಡವು.

ದುಂಡುಮಲ್ಲಿಗೆಯ ಮರವೇರಿ ಹೂ ಕೊಯ್ದ
ಗಂಡನುಳ್ಳ ಬಾಲೆ ತುರುಬಿಗೆ ||
ಈ ತೋಟದೊಳಗೆ ಹೂವಿಲ್ಲ ಕಂದಾ ಕಾಡಬೇಡೋ ||

ಈ ಪದ್ಯದಲ್ಲಿಯ "ಈ ತೋಟದೊಳಗೆ ಹೂವಿಲ್ಲ ಕಂದಾ ಕಾಡಬೇಡೋ" ಎಂಬುದೇ ಪಲ್ಲವಿಯು. ಎಲ್ಲ ಹಾಡುಗಳಿಗೂ ಈ ಪಲ್ಲವಿಯನ್ನು ಸೇರಿಸಲು ಬರುವುದು.

೧

ಗೋದಿಯನು ಬೀಸಲಿಕೆ ನಾದಿನಿಯು ಜಾಣಳು ।
ನಾಗರ್ಹೆಡೆಯಂತೆ ನಲಿ ನಲಿದು ||   ಪಾರಿಜಾತದ ಹೂವು.
ನಾಗರಾ ಹೆಡೆಯಂತೆ ನಲಿ ನಲಿದು ಬೀಸುವಳು ।
ಸೋದರಳಿಯನ ಮದುವೆಗೆ ||   ಪಾರಿಜಾತದ ಹೂವು.
ಪಾರಿಜಾತದ ಹೂವು ನಾರದನು ತಂದಿದ್ದ ।
ನಾರಿ ರುಕ್ಮಿಣಿಗೆ ಮುಡಿಸಿದ ||   ಪಾರಿಜಾತದ ಹೂವು.

೨

ಸವತಿ ಸಣ್ಣವಳಲ್ಲ ಭಾಗಾದಿ ಬಡವಲ್ಲ ।
ಕಚ್ಚುವ ಚೇಳು ಮರಿಯಲ್ಲ ||   ನಮ್ಮ ದುರಿಗಿನ್ಯಾಕೆ.
ಕಚ್ಚುವ ಚೇಳು ಮರಿಯಲ್ಲ ಅಣ್ಣಯ್ಯಗೆ ।
ಮೆಚ್ಚಿ ಬಂದವಳು ಮಡದ್ಯಲ್ಲ ||   ನಮ್ಮ ದುರಿಗಿನ್ಯಾಕೆ.
ಎದುರಿಗೆ ಇನ್ಯಾಕೆ ಚದರಂಗಾಡುದು ಸಾಕೆ ।
ನಾಚಿಕಿಲ್ಲೇನೆ ಈ ಮನಕೆ ||   ನಮ್ಮ ದುರಿಗಿನ್ಯಾಕೆ.

೩

ಕಣ್ಣು ಮೂಗಲಿ ನನ್ನ ಹೆಣ್ಣುಮಗಳು ಚೆಲುವೆ ।
ಬಣ್ಣದಲಿ ನನ್ನ ಸೊಸೆ ಚೆಲುವೆ ||   ಯಾರೇನಂದರೆ ನಿನಗೆ?
ಬಣ್ಣದಲ್ಲೀ ನನ್ನ ಸೊಸೆ ಚೆಲುವೆ ದಸರೆಯದ ।
ಬನ್ನಿಯಾ ಮುಡಿವ ಮಗ ಚೆಲುವ ||   ಯಾರೇನಂದರೆ ನಿನಗೆ?
ಯಾರೇನಂದರೆ ನಿನಗೆ ಮೋರೇಕೆ ಬಾಡಿದೆಯೆ? ।
ನೀರು ಕಣ್ಣಲ್ಲಿ ಹರಿಯುತಿದೆ ||   ಯಾರೇನಂದರೆ ನಿನಗೆ?

ಈ ಹಾಡುಗಳಲ್ಲಿರುವ ಪಲ್ಲವಿ ಅನುಪಲ್ಲವಿಗಳನ್ನು, ಓದುವವರು ಗುರುತಿಸಬಹುದು. ಇದೇ ಮಾದರಿಯ ಬೇರೆ ಬೇರೆ ಧಾಟಿಗಳನ್ನುಂಟುಮಾಡುವ ಪಲ್ಲವಿ ಅನುಪಲ್ಲವಿಗಳು ಅಳತೆಯಿಲ್ಲದಷ್ಟು ಪ್ರಚಾರದಲ್ಲಿರುವುವು. ಒಮ್ಮೊಮ್ಮೆ ಈ ಪಲ್ಲವಿಗಳಿಲ್ಲದೆ ಬರಿಯ ಹಾಡುಗಳನ್ನೇ ಬೇರೆ ಬೇರೆ ರಾಗಗಳಲ್ಲಿ ಹೇಳುವ ವಾಡಿಕೆಯೂ ಉಂಟು.

ಬೀಸುವ ವೇಳೆಯೆಂದರೆ ಸಾಮಾನ್ಯವಾಗಿ ರಾತ್ರಿಯ ಕೊನೆಯ ಜಾವದ ಸಮಯ. ಆಗ ಎಲ್ಲೆಲ್ಲಿಯೂ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಿರುವುದು; ಎಲ್ಲ ಪ್ರಾಣಿಗಳಿಗೂ ಸಕ್ಕರೆ ನಿದ್ದೆಯ ಕಾಲವದು. ಆಗಲೇ, ಹಳ್ಳಿಯ ಹೆಂಗಸರು ಎದ್ದು ಬೀಸುವುದಕ್ಕೆ ಮೊದಲುಮಾಡುವರು. ಸೃಷ್ಟಿಯು ತನ್ನ ನೈಸರ್ಗಿಕ ಸಂಗೀತಮಯ ವಾತಾವರಣದಿಂದ ಮೊದಲೇ ಕೂಡಿಕೊಂಡಿರುವುದು. ಅದರಲ್ಲಿಯೇ, ಬೀಸುವ ಕಲ್ಲು ಎಡೆಬಿಡದೆ ಮಂದ್ರ ಷಡ್ಜದಲ್ಲಿ ಸ್ವರವನ್ನು ಹಿಡಿದು ನಡೆದಿರುವುದು. "ನಾಗರ ಹೆಡೆಯಂತೆ ನಲಿ ನಲಿದು ಬೀಸುವ" ನಾರಿಯರು ಆ ಸ್ವರದಲ್ಲಿ ಸ್ವರವನ್ನು ಬೆರೆಯಿಸಿ ಕೈ ಬಳೆಗಳ "ಗಲಕು ಗಲಕು" ಎಂಬ ಸಪ್ಪುಳುವೇ ತಾಳಗಳನ್ನು ಹಾಕುತ್ತಿರಲು, ವೀಣೆ ಕೊಳಲುಗಳನ್ನು ಮೂದಲಿಸುವ ಮಂಜುಲ ಕಂಠದಿಂದ ಚೆಲುವು ಒಲವುಗಳನ್ನು ಬಣ್ಣಿಸಿ ಬಣ್ಣಿಸಿ ಹಾಡುತ್ತಿರುವರು. ಅಂತಹ ಸಂಗೀತ ಸಂಯೋಗವು ಅದಾರ ಮನವನ್ನು ಸೆಳೆದುಕೊಳ್ಳದಿರುವುದು? ಅಳುತಿರುವ ಎಳೆಯ ಹಸುಳೆಗಳು ಆ ಸಂಗೀತವನ್ನು ಕೇಳಿ ಅಳುವನ್ನು ನಿಲ್ಲಿಸಿ ಸಮಾಧಾನಗೊಂಡು ನಿದ್ರೆಹೋಗುವುವು. ಅರೆ ನಿದ್ದೆಯಲ್ಲಿರುವವರು ಆ ಸಂಗೀತದಿಂದ ಸೂಸುತ್ತಿರುವ ಸಂತೋಷ ತರಂಗದಲ್ಲಿ ಓಲಾಡಿ ಓಲಾಡಿ ಮೈಮರೆಯುತ್ತಲಿರುವರು. ಮನಸ್ಸಿನ ದುಗುಡವನ್ನು ಹೊಡೆದೋಡಿಸಿ ಅದನ್ನು ಪ್ರಸನ್ನತೆಯ ಕಡೆಗೆ ತಿರುಗಿಸುವುದಾ ಮೋಹಿನೀ ಮಂತ್ರವು. ಇಂತಹ ಸಂತೋಷವನ್ನು ನಿತ್ಯನಿತ್ಯವೂ ಅನುಭವಿಸುತಿರುವವರೆಂತಹ ಪುಣ್ಯಶಾಲಿಗಳೋ! ಜೀವಿತ ಕಾಲದಲ್ಲಿ ಒಮ್ಮೆಯಾದರೂ ನಾವದನ್ನು ಅನುಭವಿಸಿಯೇ ತೀರಬೇಕು.

೬. ***ಹಾಡುಗಳು.**—ಬೀಸುವ ಹಾಡುಗಳನ್ನು ರಚಿಸಿದವರೆಲ್ಲ ಬಹುತರವಾಗಿ ಹೆಣ್ಣುಮಕ್ಕಳೇ ಇರಬಹುದು. ಇವುಗಳಲ್ಲಿ ಸ್ತ್ರೀಯರ ಹೃದಯದ ಚಿತ್ರಗಳನ್ನೇ ನಾವು ನೋಡುವೆವು. ಅವರ ಸ್ವಭಾವವಾದ ಸ್ವಭಾವವನ್ನೇ ಈ ಹಾಡುಗಳು ಸೆರೆಹಿಡಿದು ಬಿಟ್ಟಿರುವುವು. ಇವುಗಳಲ್ಲಿರುವ ವಿಷಯವೆಂದರೆ, ಬೇಕಾದ ಜನರ ಹೊಗಳಿಕೆ, ಬೇಡವಾದವರ ತೆಗಳಿಕೆ, ಸಂತಾನೇಚ್ಛೆಯ ಸಂಭ್ರಮ, ಮಕ್ಕಳಲ್ಲಿಯ ಮಮತೆ, ಚೆಲುವು ಗೆಲವುಗಳ ಬಯಕೆ, ಒಲವು ನಲಿವುಗಳ ಹಾರಯ್ಕೆ, ಅನುಕೂಲ ದಾಂಪತ್ಯದ ಆದರ್ಶ ಚಿತ್ರ, ಪ್ರತಿಕೂಲ ದಾಂಪತ್ಯದ ವಿಕೃತ ಚಿತ್ರ, ಬಾಳುವೆಯಲ್ಲಿಯ ಸುಖದುಃಖದ ಸಂಗತಿ, ಅವುಗಳ ಅನುಭವದಿಂದ ಕಂಡುಕೊಂಡ ನನ್ನಿಯ ರೀತಿ, ಹೆಂಗಸರು ತಿಳಿದಿರಬೇಕಾದ ಧರ್ಮ ನೀತಿ—ಇವೇ ಮೊದಲಾದುವುಗಳು. ತಮಗೆ ಬೇಕಾದವರನ್ನು ಬಗೆ ಬಗೆಯಾಗಿ ಹೊಗಳುವ ಹೆಣ್ಣುಮಕ್ಕಳ ನೈಸರ್ಗಿಕವಾದ ನಡತೆಯನ್ನು ಕೆಳಗೆ ಕೊಟ್ಟಿರುವ ಪದ್ಯಗಳಲ್ಲಿ ಸರಿಯಾಗಿ ಕಂಡುಕೊಳ್ಳಬಹುದು:—

**ತಾಯಿ**

ಬೇಸಗೆಯ ದಿವಸಕ್ಕೆ ಬೇವಿನಾ ಮರ ತಂಪು ।
ಭೀಮರಥಿಯೆಂಬ ನದಿ ತಂಪು ॥

* ಇಲ್ಲಿ ಹೇಳಿದ ಹಾಡುಗಳೆಲ್ಲ ಹೆಚ್ಚಾಗಿ ಉತ್ತರ ಕರ್ನಾಟಕದಲ್ಲಿ ಪ್ರಚಾರದಲ್ಲಿರುವುವು.

ಭೀಮರಥಿಯೆಂಬ ನದಿ ತಂಪು ಹಡೆದಮ್ಮ ।
ನೀನಿರಲು ತಂಪು ತವರಿಗೆ || ೧ ||

ಹಲ್ಲು ಸುಲಿಯಲು ಬೇಕು ಒಳ್ಳೆ ವೀಳ್ಯವು ಬೇಕು ।
ಮಲ್ಲಿಗೆಯು ಬೇಕು ತುರುಬಿಗೆ ||
ಮಲ್ಲಿಗೆಯು ಬೇಕು ತುರುಬಿಗೇ ಹಡೆದಮ್ಮ ।
ನೀ ಬೇಕು ನನ್ನ ತವರಿಗೆ || ೨ ||

ತಾಯಿ ಮಕ್ಕಳ ನಡುವೆ ಅದೇತಕ್ಕೋ ಜಗಳ ಬಂದಿದೆ. ಕೋಪಗೊಂಡ ತಾಯಿಗೆ ದೈನ್ಯ ಭಾವದಿಂದ ಮಗಳು ಬಿನ್ನವಿಸಿಕೊಳ್ಳುವುದನ್ನು ನೋಡಿರಿ.—

ತಾಯಿ ಮಕ್ಕಳ ಜಗಳ ನ್ಯಾಯ ಮಾಡುವರಾರೆ ।
ವಾಲೆಗೆ ಮುತ್ತು *ವಜನೇನೆ ||
ವಾಲೆಗೆ ಮುತ್ತು ವಜನೇನೆ ಹಡೆದಮ್ಮ ।
ನಾ ಆಡಿದ ಮಾತು ನಿಜವೇನೆ || ೩ ||

ಈ ಪದ್ಯದಲ್ಲಿಯ "ವಾಲೆಗೆ ಮುತ್ತು ವಜನೇನೆ?" ಎಂಬ ಮಾತು ಬಲು ಮನೋಹರವಾದ ಅರ್ಥದಿಂದ ಕೂಡಿರುವುದು.

## ತಂದೆ

ಉಂಡು ಕೂತಿಹ ನನ್ನ ದುಂಡ ಮೋರೆಯ ತಂದೆ ।
ಬಿಂದುಲಿಯ ಬೇಡು ನನ ಕಂದಾ ||
ಬಿಂದುಲಿಯ ಬೇಡು ನನ ಕಂದ ನಿಮ್ಮಜ್ಜ ।
ಬಿಂದಿಗ್ಹೊನ್ನಿರುವ ದೊರೆ ಕಾಣೋ || ೧ ||

## ಮಗ

ಅಂಗ†ಕೊರೆಯಾ ಅಂಗಿ ಸಿಂಗರದ ಟೊಪ್ಪೀಗೆ ।
ಅಂಗಳದ ಒಳಗೆ ನಲಿ ನಲಿದು ||
ಅಂಗಳದಿ ಕಂದ ನಲಿದಾಡುವುದ ಕಂಡು ।
ರಂಭೆಯರು ಬಸಿರ ಬಯಸಿದರು || ೧ ||

ಚೆಲುವ ನನ್ನ ಕಂದಯ್ಯ ಹುಲಿಯ ಬೇಟೆಗೆ ಹೋದ ।
ತಲೆಬಾಗಿಲಲ್ಲಿ ಅವರಕ್ಕ ||
ತಲೆಬಾಗಿಲಲ್ಲಿ ಅವರಕ್ಕ ನಿಂತುಕೊಂಡು ।
ಚೆಲುವನಾ ದೃಷ್ಟಿ ತೆಗೆದಳು || ೨ ||

* ವಜನ=ಭಾರ. † ಒರೆಯಾ ಅಂಗಿ=ಆಳತೆಗೆ ಸರಿಯಾದ ಅಂಗಿ.

ಚಿಕ್ಕ ನನ ಕಂದಯ್ಯ ಚಿಣಿದಾಂಡು ಆಡಿದನು ।
ಚಿಕ್ಕ ಹೊಳೆ ದಾಟಿ *ತೊರಗಲ್ಲು ॥
ಚಿಕ್ಕ ಹೊಳೆ ದಾಟಿ ತೊರಗಲ್ಲ ಬಾಲೆಯರ ।
ಚಿತ್ರದಾ ಕೊಡಕೆ ಚಿಣಿ ಬಡೆದ ॥ ೩ ॥

ಹಡೆದಮ್ಮ ಹಾರುವತಿ ಒಳಗೇನ ಮಾಡುತಿ ।
ನೋಡು ಬಾ ನನ್ನ ಮಗನಾಟ ॥
ನೋಡು ಬಾ ನನ್ನ ಮಗನಾಟ ಕಂದಯ್ಯ ।
ಗುಲುಗಂಜ ಗುರಿಯ ಇಡುತಾನೆ ॥ ೪ ॥

## ಮಗಳು

ಅರಿಸಿಣ್ಣಚ್ಚಿದ ಮೋರೆ ಸರಪಣ್ಣಚ್ಚಿದ ಓಲೆ ।
ಅಗಸಿಯಲಿ ನನಗೆ ಎದುರಾದೆ ॥
ಅಗಸಿಯಲಿ ನನಗೆ ಎದುರಾದೆ ಕಂದಮ್ಮ ।
ಅರಸ ಬಂದಿಹನು ಒಳಗ್ಹೋಗೆ ॥ ೧ ॥

ಇಂದು ನನ್ನ ಕಂದಮ್ಮನ ಗಂಡ ಕರೆಯಲು ಬಂದ ।
ಗೊಂಡೆಯದ ಸೆರಗ ಒಲೆಯುತ ॥
ಗೊಂಡೆಯದ ಸೆರಗ ಒಲೆಯುತಲಿ ಕಂದಮ್ಮ ।
ಪಂಡಿತನ ಕೂಡ ಹೊರ ಹೊರಡೇ ॥ ೨ ॥

ಮಗಳು ಅತ್ತೆಯ ಮನೆಗೆ ಹೊರಟು ನಿಂತಿರಲು, ತಾಯಿಯು ನಾಲ್ಕು ಮಾತುಗಳನ್ನು ಹೇಳಿದಂತಿರುವುದೀ ಕೆಳಗಿನ ಹಾಡಿನಲ್ಲಿ:—

ಅತ್ತೆಯಾ ಮನೆಯೊಳಗೆ ಮುತ್ತಿನಂತಿರಬೇಕೆ ।
ಹೊತ್ತ ಹಾಕಿದರು ಉಣಬೇಕೆ ॥
ಹೊತ್ತ ಹಾಕಿದರು ಉಣಬೇಕೆ ಕಂದಮ್ಮ ।
ಹೆತ್ತ ಮನೆ ಹೆಸರು ತರಬೇಕೆ ॥ ೩ ॥

ರಮಣೀಯವಾಗಿರುವುದೀ ಪದ್ಯವು. ಶಕುಂತಲೆಯು ಅತ್ತೆಯ ಮನೆಗೆ ಹೋಗುವಾಗ ಕಣ್ವನು ಹೇಳಿದ ಮಾತುಗಳ ನೆನಪಾಗುವುದಿಲ್ಲ. ಮುತ್ತಿನಂತೆ ಇರಬೇಕಂತೆ! ಹೊತ್ತಿದನ್ನ ಹಾಕಿದರೂ ತಿಂದು ತಾಳಿಕೊಂಡಿರಬೇಕಂತೆ! ತನ್ನ ಸುಗುಣಗಳಿಂದ ''ಹೆತ್ತಮನೆ''ಯ ಹೆಸರನ್ನು ಮುಂದಕ್ಕೆ ತರಬೇಕಂತೆ! ಭಾವ ಭಾಷೆಗಳೆರಡೂ ಎದೆಯನ್ನರಳಿಸುವುವಿಲ್ಲಿ.

* ಮಲಾಪಹಾರಿ ನದಿಯ ದಂಡೆಯಲ್ಲಿಯದೊಂದು ಊರಿದು; ಒಬ್ಬ ಸಣ್ಣ ಸಂಸ್ಥಾನಿಕನಿಗೆ ಉಂಬಳಿಯಾಗಿದೆ.

## ತಂಗಿ

ತಂಗಿಯನ್ನು ಬಣ್ಣಿಸಿದ ಎರಡು ಮೂರು ಪದ್ಯಗಳನ್ನು ಈ ಮೊದಲೇ ಬೇರೆ ಬೇರೆ ಕಡೆಯಲ್ಲಿ ಉದಾಹರಿಸಲಾಗಿದೆ. ಮುಂದೆ ಬರೆದಿರುವ ಪದ್ಯದಲ್ಲಿ, ಕೋಪ ಗೊಂಡ ತಂಗಿಯನ್ನು ಅಕ್ಕನು ಸಂತವಿಡುತ್ತಿರುವಂತಿದೆ.—

ಮಾತು ಮಾತಾಡುತಲೆ ಮೋರೆ ರಂಗಿಗೆ ತಂದೆ।
ಬೇಡ ನನ್ನ ತಂಗಿ ಕದನವು ॥
ಬೇಡ ನನ್ನ ತಂಗಿ ಕದನ ಕಾಳಗದಿಂದ ।
ಜೋಡಿನಾ ಹಕ್ಕಿ ಅಗಲುವೆವೆ ॥ ೧ ॥

ಇಲ್ಲಿ "ಜೋಡಿನಾ ಹಕ್ಕಿ ಅಗಲುವೆವೆ" ಎಂಬ ಮಾತು ದೈನ್ಯ ಭಾವದಿಂದ ತುಂಬಿ ತುಂಬಿ ತುಳುಕುತ್ತಿರುವುದು. ಈ ಮಾತನ್ನು ಹೇಳುವಾಗ ಅಕ್ಕನ ಕಂಠವು ಬಿಗಿದು ಬಂದಿರಬಹುದು; ಕಣ್ಣಿಂದ ಒಂದೆರಡು ಹನಿ ನೀರೂ ಉದುರಿರಬಹುದು.

ಅಣ್ಣ ತಮ್ಮರನ್ನು ಬಣ್ಣಿಸಿದ ಹಾಡುಗಳಲ್ಲೆಲ್ಲ ಸಹೋದರ ಪ್ರೀತಿಯು ಉಕ್ಕಿ ಉಕ್ಕಿ ಹೊರಸೂಸಿರುತ್ತದೆ.—

ಹೆಣ್ಣಿನಾ ಜನ್ಮಕ್ಕೆ ಅಣ್ಣ ತಮ್ಮರಬೇಕು ।
ಬೆನ್ನ ಕಟ್ಟುವರು ಸಭೆಯೊಳಗೆ ॥
ಬೆನ್ನ ಕಟ್ಟುವರು ಸಭೆಯೊಳಗೆ ಸಾವಿರ ।
ಹೊನ್ನ ಕಟ್ಟುವರು ಉಡಿಯೊಳಗೆ ॥

ಹೆಂಗಸರು ಮನವಾರೆ ಅಣ್ಣತಮ್ಮಂದಿರನ್ನು ಅಪೇಕ್ಷಿಸಿರುವುದನ್ನು ಹೇಳಿರುವುದೀ ಹಾಡಿನಲ್ಲಿ. ಈ ಹಾಡುಗಳಲ್ಲಿ ಬರುವ ಅಣ್ಣನು ಚೆಲುವನು, ಸಿರಿವಂತನು, ಉದಾರನು, ಗಂಭೀರನು, ತಂಗಿಯಲ್ಲಿ ವಿಶೇಷ ಮಮತೆಯುಳ್ಳವನು. ತಮ್ಮನು ಈ ಎಲ್ಲ ಗುಣ ಗಳಿಂದ ಕೂಡಿರುವನಲ್ಲದೆ ಅವನಲ್ಲಿ ಧೈರ್ಯ ಶೌರ್ಯ ಸಾಹಸಗಳು ಹೆಚ್ಚಾಗಿರುವುವು. ಕಿರಿಯತನದ ಮೂಲಕ ಆತನಿಗೆ ವಿವೇಕವು ಕೊಂಚ ಕಡಿಮೆ. "ಸೂಳೆಯಂತಹ ಹೆಣ್ಣನ್ನು" ಕಂಡರೆ ಮನೆಮಾರನ್ನು ಆತನು "ಸೂರೆಮಾಡುವನು" ಎಂದು ಸಂದೇಹವು ಅಕ್ಕನಿಗೆ. ಎಂತಲೇ, ಅಂತಹ ಹೆಣ್ಣಿಗೆ "ಸುಳಿಯಬೇಡ ಓಣಿಯಲಿ" ಎಂದು ಸಿಟ್ಟಿನಿಂದ ಹೇಳಿದುದೂ ಉಂಟು. (ಈ ಅರ್ಥದ ಪದ್ಯವು ಹಿಂದೆಯೇ ಬಂದಿದೆ.)

## ಅಣ್ಣ

ನನಗೆ ಯಾರಿಲ್ಲೆಂದು ಮನದೊಳಗೆ ಮರುಗಿದೆನು ।
ಪರನಾಡಲೊಬ್ಬ ಪ್ರತಿ ಸೂರ್ಯ ॥
ಪರನಾಡಲೊಬ್ಬ ಪ್ರತಿ ಸೂರ್ಯ ನನ್ನಣ್ಣ ।
ಬಿದಿಗೆ ಚೆಂದ್ರಾಮ ಉದಯಾದ ॥ ೧ ॥

ಅಣ್ಣ ಬಂದನು ಎಂದು ಚಿನ್ನಿ ಸಕ್ಕರೆ ತಂದೆ ।
ಸಣ್ಣ ಸೇವಿಗೆಗೆ ಎಸರಿಟ್ಟೆ ॥
ಸಣ್ಣ ಸೇವಿಗೆಗೆ ಎಸರಿಟ್ಟೆ ಅಣ್ಣಯನ ।
ಹೊನ್ನ ಪಲ್ಲಕ್ಕಿ ತರುಬಿದೆ ॥ ೨ ॥

ದೇಸಾಯಿ ಬಾವಿಯಲಿ ಈಸು ಬಿದ್ದವನ್ಯಾರೆ ।
ರೇಸಿಮೆಯ ಬಣ್ಣ ಮೈಬಣ್ಣ ॥
ರೇಸಿಮೆಯ ಬಣ್ಣ ಮೈಬಣ್ಣದಣ್ಣಯ್ಯ ।
ದೇಸಾಯಿ ದೊರೆಯು ಹೌದೇನೇ ॥ ೩ ॥

ಹೋಗಬೇಡಣ್ಣಯ್ಯ ಹೋಳಿಗೆಯ ಮಾಡುವೆನು ।
ನಾಳೆ ನನ್ನ ಮಗಳ ಮದುವೆಯು ॥
ನಾಳೆ ನನ್ನ ಮಗಳ ಮದುವೆ ಹಂದರದೊಳಗೆ ।
ಸೋದರಾ ಮಾವನಿರಬೇಕು ॥ ೪ ॥

ಅವರಿಗೆ ಅವರಣ್ಣ ಅವಲಕ್ಕಿ ಕಳಿಸಿದನು ।
ನಮ್ಮ ಅಣ್ಣಯ್ಯ ಬಡವೇನೇ ॥
ನಮ್ಮ ಅಣ್ಣಯ್ಯ ಬಡವೇನೆ ಕೇದಗಿಯ ।
ಗರಿಯೊಳಗೆ ಫಳಿಗೆ ಕಳಿಸಿಹನೆ ॥ ೫ ॥

ಕೇದಗೆಯ ಗರಿಯೊಳಗೆ ಸೀರೆಯ "ಫಳಿಗೆ"ಯನ್ನು ಕಳಿಸಿದನಂತೆ! ಸೀರೆಯ ಸೂಕ್ಷ್ಮತೆಯನ್ನು ಸೂಚಿಸಲು ಹೇಳಿದ ಮಾತಿನ ಸೊಗಸನ್ನು ನೋಡಿರಿ.

## ತಮ್ಮ

ಕುದುರೆಯನು ಕುಣಿಸುತ ಆನೆಯನು ನಡಿಸುತ ।
ಅರಗಿಳಿಗೆ ಮಾತ ಕಲಿಸುತ ॥
ಮರಿಗುದುರೆ ಫೇರೆ ತಿರುಹುತ ಬರುತಾನೆ ।
ಬರಿಗೊಡದಮ್ಮ ಬದಿಗಾಗೆ ॥ ೧ ॥

ಸರಕಾರವೆಂಬುವುದು *ದರಕಾರ ನಮಗಿಲ್ಲ ।
ಸರಕಾರದೊಳಗೆ ಸರಿಪಾಲು ॥
ಸರಕಾರದೊಳಗೆ ಸರಿಪಾಲು ತರುವಂಥ ।
ಸರಜ ತಮ್ಮಯ್ಯ ಮನೆಯೊಳಗೆ ॥ ೨ ॥

ಸರಿಗೆ ಕೊಂಡೆಯ ಹಾಗೆ ತಿರುಗಿ ಬಂದಿವೆ ಮೀಸೆ ।
ಕರಿದಿನಲಿ ಬಾಳ ಚೆಲುವನು ॥
ಕರಿದಿನಲಿ ಬಾಳ ಚೆಲುವ ನನ್ನ ತಮ್ಮಯಗೆ ।
ಕರಿಬೇವಿನ ದೃಷ್ಟಿ ಮುರಿದೇನು ॥ ೩ ॥

* ದರಕಾರ = ಲಕ್ಷ್ಯ.

ಇಲ್ಲಿ ಪಿಹಾಸೆಯ ವರ್ಣನೆಯು ಮನಸನ್ನೆಳೆದುಕೊಳ್ಳುವಂತಹುದಾಗಿದೆ.

ಚಿಕ್ಕ ನನ್ನ ಮೈದುನ ಚಿಕ್ಕ ಹೊಳೆ ದಂಡೆಯಲಿ ।
*ಚಿಕ್ಕಾಡು ಕೊಂದು ಅಳುತಾನೆ ॥
ಚಿಕ್ಕಾಡು ಕೊಂದು ಅಳುತಾನೆ ನನ ತಮ್ಮ ।
ಹುಲಿ ಕೊಂದು ದೊರೆಯು ನಗುತಾನೆ ॥ ೪ ॥

ಇಲ್ಲಿ ಬೇಡವಾದ ಮೈದುನನನ್ನು ನಗೆಮಾತಿನಿಂದ ಹೀಳುಗಳೆದು ಬೇಕಾದ ತಮ್ಮನ ಹೆಚ್ಚಳವನ್ನು ಹಾಡಿ ಹೊಗಳಿದಂತಿದೆ. ಮಾತಿನ ರೀತಿ ಬಲು ವಿನೋದವಾಗಿದೆ.

## ದಾಂಪತ್ಯ ಪ್ರೇಮ

ಹಚ್ಚೆಬೊಟ್ಟಿನ ಮೇಲೆ ಹರಿದಾಡೆ ಕುಂಕುಮ ।
ಇಚ್ಛೆಯಾ ರಾಯ ಎದುರಿಗೆ ॥
ಇಚ್ಛೆಯಾ ರಾಯ ಎದುರಿಗೆ ಬಂದರೆ ।
ಹೆಚ್ಚಿನಾ ತವರ ಮರೆತೇನೆ ॥ ೧ ॥

ಕಲ್ಪನೆಯು ಹೃದಯಂಗಮವಾಗಿದೆ. ಮನೆಗೆಲಸವನ್ನು ಮಾಡಿ ಮಾಡಿ ದಣಿದು, ಮೈಯೆಲ್ಲ ಬೆವರಿ, ಹಣೆಯ ಕುಂಕುಮವು ಹಚ್ಚೆಬೊಟ್ಟಿನಮೇಲೆ ಹರಿದಾಡುತ್ತಲಿದೆ ಯೊಬ್ಬ ಗರತಿಗೆ. ಮೈಮನಸಕ್ಕೆ ತುಂಬ ಆಯಾಸವುಂಟಾಗಿದೆ. ಇಂತಹ ವೇಳೆಯಲ್ಲಿ, "ಇಚ್ಛೆಯ ರಾಯ"ನು ಎದುರಿಗೆ ಬಂದನು. ಅವನ ದರ್ಶನದಿಂದ ಹೆಣ್ಣುಮಕ್ಕಳಿಗೆ ಅತಿ ಪ್ರಿಯವಾದ ತವರಮನೆಯನ್ನು ಕೂಡ ಮರೆತುಬಿಡುವಷ್ಟು ಅವಳಿಗೆ ಆನಂದವಾಯಿತು. ಈ ಪದ್ಯದಲ್ಲಿ ಆ ಗರತಿಯು ತನ್ನ ಅನುಭವವನ್ನು ಹೇಳಿದಂತಿದೆ.—

ಹಾಸಿಗೆಯ ಹಾಸೆಂದ ಮಲ್ಲಿಗೆಯ ಮುಡಿಯೆಂದ ।
ಬೇಸತ್ತರೆ ಮಡದಿ ಮಲಗೆಂದ ॥
ಬೇಸತ್ತರೆ ಮಡದಿ ಮಲಗೆಂದ ನನ್ನ ರಾಯ ।
ನನ್ನ ನೋಡಿ ತವರ ಮರೆಯೆಂದ ॥ ೨ ॥

ಹೀಗೆ ಹೇಳುವಂತಹ ಪತಿಯೇ ಸಿಕ್ಕಬೇಕೆಂದು ಹೆಂಗಸರೆಲ್ಲರೂ ಬಯಸಿದಲ್ಲಿ ಅದರೊಳಗೆ ಅಚ್ಚರಿಪಡಬೇಕಾದುದೇನೂ ಇಲ್ಲವಲ್ಲವೆ? ಮುಂದಿನ ಪದ್ಯದ ಸೊಗಸು ನೋಡಿರಿ:—

ಮಾರಾಯ ಬೈದರೆ ಬಾರವು ಕಣ್ಣೀರು ।
ಮಾರಾಯನ ತಮ್ಮ ಮೈದುನ ॥
ಮಾರಾಯನ ತಮ್ಮ ಮೈದುನನು ಬೈದರೆ ।
ಮಾಡಿಲ್ಲದೆ ಮಳೆಯು ಸುರಿದ್ಹಾಂಗೆ ॥ ೩ ॥

ಇವು ಯಾವಳೋ ಒಬ್ಬಳು ಅನುಭವಿಸಿ ಆಡಿದ ಮಾತುಗಳು.

* ಚಿಕ್ಕಾಡು = ಚಿಗಟ.

ಇನ್ನು ಒಂದು ಸಣ್ಣ ಕತೆ: ಗಂಡ ಹೆಂಡತಿ ಇದ್ದರು. ಯಾವುದೋ ಕಾರಣದಿಂದ ಗಂಡನು ಒಂದು ದಿನ

ಮಡದಿಯನು ಬಡಿದನು ಮನದೊಳಗೆ ಮರುಗಿದನು ।
ಒಳಗ್ಹೋಗಿ ಸೆರಗ ಹಿಡಿದಾನು ॥
ಒಳಗ್ಹೋಗಿ ಸೆರಗ ಹಿಡಿದು ತಾ ಕೇಳಿದನು ।
ನಾ ಹೆಚ್ಚೊ ನಿನ್ನ ತವರ್ಹೆಚ್ಚೊ ॥ ೪ ॥

ಎಂಬುದಾಗಿ ಪಶ್ಚಾತ್ತಾಪದ ದನಿಯಿಂದ ಮರುಗುತ್ತಿರುವ ಮನದಿಂದ, ಚಿಕ್ಕದಾದ ಮೋರೆಯಿಂದ, ಮೈಮೇಲೆ ಕೈಯಾಡಿಸುತ್ತ ಕೇಳಿದನು. ಅದಕ್ಕೆ ಹೆಂಡತಿಯು ಹೀಗೆ ಹೇಳಿದಳು :—

ತಾಯಿದ್ದರೆ ತವರ್ಹೆಚ್ಚು ತಂದೆಯಿದ್ದರೆ ಬಳಗ್ಹೆಚ್ಚು ।
ಸಾವಿರಕೆ ಹೆಚ್ಚು ಪತಿ ಪುರುಷ ॥
ಸಾವಿರಕೆ ಹೆಚ್ಚು ಪತಿಯು ಬಸುರಿಲಿ ಬಂದ ।
ಮಾಣಿಕದ ಹರಳು ಮಗು ಹೆಚ್ಚು ॥ ೫ ॥

ಅಳುವುದನ್ನು ನಿಲ್ಲಿಸಿ ಅರಳಿದ ಮೋರೆಯಿಂದ ಹೆಂಡತಿಯು ಹೀಗೆ ಹೇಳಲು, ಗಂಡನು ಅದೆಷ್ಟು ಹಿರಿಹಿರಿ ಹಿಗ್ಗಿರಬಹುದು! ಆ ಹಿಗ್ಗಿನ ಭರದಲ್ಲಿ ಆತನು ಹೆಂಡತಿಗೊಂದು ಅಮೂಲ್ಯವಾದ ಮೆಚ್ಚನ್ನು ಕೊಟ್ಟಿದ್ದರೂ ಕೊಟ್ಟಿರಬಹುದು: ಅದು ನಮಗೆ ತಿಳಿಯದು; ಮುಗಿದುಹೋಯಿತು ಕತೆಯಿಲ್ಲಿಗೆ.

ಇನ್ನೊಂದು ಸಣ್ಣ ಕತೆ: ಅತ್ತೆಯ ಮನೆಯ ಸೊಸೆಯೊಬ್ಬಳು; ಗಂಡನೆಲ್ಲಿಯೋ ಬೇರೆಯೂರಿಗೆ ಹೋಗಿದ್ದನು. ಮನೆಯವರೆಲ್ಲರೂ ಅವಳನ್ನು ಪರಿಪರಿಯಿಂದ ಪೀಡಿಸಿದರು, ಬಗೆಬಗೆಯಾಗಿ ಬೈದರು; ಪಾಪ! ಅವಳು ಯಾರಿಗೆ ದೂರನ್ನು ಹೇಳಬೇಕು? ಮನದಲ್ಲಿಯೇ ನೊಂದಳು, ಬಗೆಯಲ್ಲಿಯೇ ಬೆಂದಳು, ಗಂಡನೆದುರಿಗೆ ಹೇಳಬೇಕೆಂದು ಹುಡುಕಾಡಿದಳು; ಎಲ್ಲಿಯೂ ಕಾಣಲಿಲ್ಲ. ಆತನ ದಾರಿಯನ್ನೇ ಕಾಯುತ್ತ ಬಾಗಿಲ ಬಳಿಯಲ್ಲಿಯೇ ನಿಂತಿರಲು, ಕುದುರೆಯ ಮೇಲೆ ಕುಳಿತುಕೊಂಡು ಗಂಡನು ಮನೆಯ ಕಡೆಗೆ ಬರುವುದನ್ನು ನೋಡಿದಳು; ಬೇಗಬೇಗನೆ ಬಳಿಗೆ ಹೋಗಿ ಹೀಗೆ ಹೇಳಿದಳು :—

ಎಲ್ಲಿ ಹೋಗಿದ್ದೆ ನನ್ನ ಮಲ್ಲಿಗೆಯಂತಾ ರಾಯ ।
ಎಲ್ಲಾರು ನನ್ನ ಬೈದರು ॥
ಎಲ್ಲಾರು ನನ್ನ ಬೈದಿರುವ ಬೈಗುಳನು ।
ನಿಲ್ಲಿಸಿ ಕೇಳು ನಿನ್ನ ಕುದುರೆ ॥ ೬ ॥

ಹೆಂಡತಿಯ ಮಾತನ್ನು ಕೇಳಿ, ಪಾಪ! ಅವನೂ ನೊಂದುಕೊಂಡಿರಬಹುದು. ಮನೆಗೆ ಬಂದು ಯಾರಿಗೂ ಕಾಣದಂತೆ ಮರೆಯಲ್ಲಿ ಕುಳಿತು ಮುಂಗುರುಳ ನೇವರಿಸುತ್ತ

ಸವಿಮಾತಿನಿಂದ ಅವಳನ್ನು ಸಂತಯಿಟ್ಟಿರಬಹುದು. ಹೈದವರೆಲ್ಲ ಹಿರಿಯರು; ಅವರನ್ನೇನು ಮಾಡುವಂತಿದೆ? ಈ ಕತೆಯೂ ಮುಗಿದುಹೋಯಿತು.

## ಅನುಕೂಲ ಸಂಬಂಧದ ಆಶೆ

ಆಕಳಿನಂಥಾ ಅತ್ತೆ ಗೋಕುಲದಂಥಾ ಮಾವ ।
ಶ್ರೀಕೃಷ್ಣನಂಥ ಪತಿರಾಜ ॥
ಶ್ರೀಕೃಷ್ಣನಂಥ ಪತಿರಾಜನಿದ್ದರೆ ।
ಸಾಕಿದಾ ತವರ ಮರೆತೇನೆ ॥ ೧ ॥

ಅಲ್ಲದಂತಹ ಅತ್ತೆ ಬೆಲ್ಲದಂತಹ ಮಾವ ।
ನೆಲ್ಲಿಕಾಯಂತ ನಗೆ ಹೆಣ್ಣೆ ॥
ನೆಲ್ಲಿಕಾಯಂತ ನಗೆಹೆಣ್ಣೆಯಿದ್ದರೆ ।
ಮಲ್ನಾಡ ತವರ ಮರತೇನೆ ॥ ೨ ॥

ಒಳ್ಳೆಯ ಒಗೆತನವು (ಸಂಸಾರವು) ಕೂಡಿಬಂದರೆ ಹೆಣ್ಣುಮಕ್ಕಳು ಸಾಕಿದ ತವರನ್ನು ಮರೆಯಲಿಕ್ಕೂ ಸಿದ್ಧರು. ಅದರಲ್ಲಿಯೂ, ಸರ್ವಜ್ಞಮೂರ್ತಿಯು ಹಾಡಿ ಹೊಗಳಿದ, "ಅಲ್ಲ ಅರಿಸಿನವಿರುವ, ಬೆಲ್ಲ ಬಿಳಿಯೆಲೆಯಿರುವ, ಒಳ್ಳೆ ಹಲಸಿರುವ" ಮಲೆನಾಡಿನ ತವರನ್ನೂ ಮರೆತುಬಿಡಲು ಹಿಂದೆ ಮುಂದೆ ನೋಡರು.

## ಪ್ರತಿಕೂಲ ಸಂಬಂಧ

ಅತ್ತೆಯ ಮನೆಯಲ್ಲಿಯ ಕುಂದು ಕೊರತೆಗಳನ್ನೆಲ್ಲ ಒಬ್ಬ ಹೆಣ್ಣುಮಗಳು ಬಿಸಿಯುಸಿರ ಬಿಡುತ್ತ, ಕಂಬನಿಗರೆಯುತ್ತ ತನ್ನ ತಾಯಿಯ ಬಳಿಯಲ್ಲಿ ಹೇಳುತ್ತಿರುವಳೀ ಬಗೆಯಾಗಿ:—

ಮಾತಿಗೆ ಮಲಕಿಲ್ಲ ರೇಸಿಮೆಗೆ ತೊಡಕಿಲ್ಲ ।
ಸಾಸಿವೆಯ ಕಾಳು ಹುಳುಕಿಲ್ಲ ॥
ಸಾಸಿವೆಯ ಕಾಳು ಹುಳುಕಿಲ್ಲತ್ತೆಯ ಮುಂದೆ ।
ಸೋಸಿ ನಡೆದರೆಯು ಅರಿಕಿಲ್ಲ ॥ ೧ ॥

ಎಳ್ಳು ಬಿತ್ತಲಿಲ್ಲ ಎಳ್ಳು ಬೆಳೆಯಲಿಲ್ಲ ।
ಎಳ್ಳ ಹೂ ಸೀರೆಯುಡಲಿಲ್ಲ ॥
ಎಳ್ಳ ಹೂ ಸೀರೆಯುಡಲಿಲ್ಲ ಹಡೆದಪ್ಪ ।
ಒಳ್ಳೆ ಮನೆ ನೋಡಿ ಕೊಡಲಿಲ್ಲ ॥ ೨ ॥

*ಚಿಂತಾಕು ಇಡಲಿಲ್ಲ ಚಿಂತೆ ಬಿಟ್ಟಿರಲಿಲ್ಲ ।
ಎಂತಲ್ಲೆ ಕೊಟ್ಟೆ ಹಡೆದಮ್ಮ ॥
ಎಂತಲ್ಲೆ ಕೊಟ್ಟೆ ಹಡೆದಮ್ಮ ನಡು ಮನೆಯ ।
ಜಂತೆ ಜರಿದಂತೆ ಜರಿದೆನು ॥ ೩ ॥

* ಕತ್ತಿನ ಆಭರಣವೊಂದು.

ಅತ್ತರೆ ಅಳು ಹೀನ ನಕ್ಕರೆ ನಗೆಗೇಡು ।
*ಜಾಡಿಸಿ ನಡೆದರೆ ಜನ ಹರಲೆ ॥
ಜಾಡಿಸಿ ನಡೆದರೆ ಜನ ಹರಲೆ ಹಡೆದಮ್ಮ ।
ಹ್ಯಾಂಗೀಸಿ ಬರಲೆ ಜನದೊಳಗೆ ॥ ೪ ॥

ಮಗಳ ಮಾತುಗಳನ್ನೆಲ್ಲ ತಾಯಿ ಕೇಳಿದಳು ; ಬೆಂದು ಬೇಗುದಿಗೊಂಡಳು ; ನೊಂದು ನಿಟ್ಟುಸಿರಿಟ್ಟಳು ; ಕರುಣ ರಸದಲ್ಲಿ ಅದ್ದಿ ಅದ್ದಿ ತೆಗೆದಂತಹ ಈ ಮುಂದಿನ ಮಾತುಗಳನ್ನು ತನ್ನಲ್ಲಿ ತಾನೇ ಹೇಳಿಕೊಂಡಳು :—

ಮಲ್ಲಿಗೆಯಂಥ ಮಗಳಿಗೆ ಎಲ್ಲಿತ್ತೊ ಒಗೆತಾನ ।
ಹುಲ್ಲೊಳಗೆ ಬೆಂಕೆ ಹೊರೆದ್ಹಾಂಗೆ ॥
ಹುಲ್ಲೊಳಗೆ ಬೆಂಕೆ ಹೊರೆದ್ಹಾಂಗೆ ಗುಡ್ಡದ ।
ಕಲ್ಲಿಗೆ ಧಾರೆಯೆರೆದ್ಹಾಂಗೆ ॥

ಇಲ್ಲಿಯ ಭಾವವನ್ನು ಬಣ್ಣಿಸಿರುವ ಬಗೆಯೂ ಮಾತಿನ ಚಾತುರ್ಯವೂ ಎಂಥೆಂಥ ವರನ್ನೂ ತಲೆದೂಗಿಸಿಬಿಡುವಂತಹದಿದೆ.

## ಅತ್ತಿಗೆ

ಈ ಹಾಡುಗಳಲ್ಲಿ ಹೇಳಿರುವ ಅತ್ತಿಗೆಯು ತುಂಬ ಗಡುಸುಗಾತಿ; ತನ್ನ ನಾದಿನಿಯ ವಿಷಯದಲ್ಲಿ ಆದರವೇ ಇಲ್ಲದವಳು ; ಅಣ್ಣನನ್ನು ತನ್ನ ಕೈಗೊಂಬೆ ಯನ್ನಾಗಿ ಮಾಡಿಕೊಂಡವಳು ; ಕಪಟಿಯು, ತಂತ್ರಿಯು. ಅವಳಿಗಾಗಿ ಪ್ರೀತಿಯ ಅಣ್ಣನು ಸಹ ಒಮ್ಮೊಮ್ಮೆ ತಂಗಿಯಿಂದ ಬೈಗುಳನ್ನು ತಿನ್ನಬೇಕಾಗುತ್ತದೆ. ಅಣ್ಣನ ಮೇಲೆ ಎಷ್ಟೊಂದು ಪ್ರೀತಿಯೋ, ಅತ್ತಿಗೆಯಲ್ಲಿ ಅಷ್ಟೊಂದು ಅಪ್ರೀತಿ. ಅತ್ತಿಗೆಯ ವಿಷಯದಲ್ಲಿ ಆಡಿಕೊಂಡ ಮಾತುಗಳಿವು ನೋಡಿರಿ:—

ಅಣ್ಣನಾ ಹೆಂಡತಿಯು ಕಣ್ಣಿಗೆ ಒಳ್ಳೆವಳು ।
ಸುಣ್ಣದಾ ನೀರ ಒಲೆ ಮುಂದೆ ॥
ಸುಣ್ಣದಾ ನೀರ ಒಲೆ ಮುಂದೆ ಇಟ್ಟುಕೊಂಡು ।
ಎಮ್ಮೆ ಹಾಲೆಂದು ಬಡಿಸಿದಳು ॥ ೧ ॥

ಹಳ್ಳದಾ ದಂಡೆಯಲಿ ಹಸುರು ಮೆಣಸಿನ ಕಾಯಿ ।
ದಣಿಸ್ಯಾಡುತಾವೆ ಗಿಳಿ ಹಿಂಡು ॥
ದಣಿಸ್ಯಾಡುತಾವೆ ಗಿಳಿ ಹಿಂಡು ಅಣ್ಣಯನ ।
ಕುಣಿಸ್ಯಾಡುತಾಳೆ ಅತ್ತಿಗೆ ॥ ೨ ॥

ಹಡೆದಮ್ಮನಿಹಳೆಂದು ದಡ ದಡನೆ ನಾ ಬಂದೆ ।
ಒಳಗೆ ಅಣ್ಣಯ್ಯನ ಮಡದೆಮ್ಮ ॥

* ಯಾವುದನ್ನೂ ಮನಸ್ಸಿಗೆ ತಂದುಕೊಳ್ಳದೆ.

ಒಳಗೆ ಅಣ್ಣಯನ ಮಡದಿ ಸಪ್ಪುಳ ಕೇಳಿ ।
ತಲೆಬಾಗಿಲಿಂದೆ ತಿರುಗಿದೆನು ॥ ೩ ॥

ಹಡೆದಮ್ಮ ಇರುವನಕ ನಡುಮನೆ ನನದಿತ್ತು ।
ಕಡಗದ ಕೈಯ್ಯ ಸೊಸೆ ಬಂದು ॥
ಕಡಗದ ಕೈಯ್ಯ ಸೊಸೆಬಂದು ನಡೆದಾಗ ।
ತುದಿಗಟ್ಟೆ ನನಗೆ ಎರವಾಯ್ತು ॥ ೪ ॥

ಯಾತಕ್ಕೋಗಲಿ ಇನ್ನು ಘಾತಕಣ್ಣನ ಮನೆಗೆ ।
*ತಾಟಗಿತಿಯವನ ಮನೆಯೊಳಗೆ ॥
ತಾಟಗಿತಿಯವನ ಮನೆಯೊಳಿರುವುದ ಕಂಡು ।
ತೋಟದೊಳಗುಂಡು ತಿರುಗಿದೆನು ॥ ೫ ॥

ಬೇಡವಾದ ಅತ್ತಿಗೆಯು ಗಂಡನಾದ ಕಾರಣ, ಬೇಕಾದ ಒಲವಿನ ಅಣ್ಣಯ್ಯನೂ "ಘಾತುಕ"ನಾಗಿಬಿಟ್ಟನು ; ಸೂಳೆಯ ಪಾಪ ಸಂನ್ಯಾಸಿಗೆ ತಗುಲಿದಂತೆ.

## ಸಂತಾನದ ಬಯಕೆ

ಬೇನೆಯನು ತಿನುವಾಗ ಬೇಡಯ್ಯ ಮಕ್ಕಳು ।
ಬಾಗಿ ಬಚ್ಚಲನು ಹೊಗುವಾಗ ॥
ಬಾಗಿ ಬಚ್ಚಲನು ಹೊಗುವಾಗ ಬಯಸುವರು ।
ನೂರೊಂದು ಫಲವ ಕೊಡು ಶಿವನೇ ॥ ೧ ॥

ಈ ಹಾಡು ಹೆಂಗಸರ ಸ್ವಭಾವವನ್ನು ಬಲು ಸೊಗಸಾದ ರೀತಿಯಿಂದ ಸ್ಫುಟಗೊಳಿಸುವುದು.

ಬಂಜೆ ಬಾಗಿಲ ಮುಂದೆ ಅಂಜೂರಿ ಗಿಡ ನಾಟಿ ।
ಟೊಂಗೆಗೊಂದೊಂದು ಗಿಳಿ ಕುಳಿತು ॥
ಟೊಂಗೆಗೊಂದೊಂದು ಗಿಳಿ ಕುಳಿತು ಹೇಳಿದುವು ।
ಬಂಜೆ ನಿನ ಬದುಕು ಹೆರವರಿಗೆ ॥ ೨ ॥

ಮಕ್ಕಳಿಲ್ಲದ ಜನುಮ ಇಟ್ಟೇನು ತೊಟ್ಟೇನು ।
ಬಾಡಿಗೆಯ ಎತ್ತು ದುಡಿದ್ಹಾಂಗೆ ॥
ಬಾಡಿಗೆಯ ಎತ್ತು ದುಡಿದ್ಹಾಂಗೆ ಬಾಳೆಲಿಯ ।
ಹಾಸ್ಯುಂಡು ಬೀಸಿ ಒಗೆದ್ಹಾಂಗೆ ॥ ೩ ॥

ಈ ಎರಡು ಪದ್ಯಗಳಲ್ಲಿರುವ ಬಂಜೆಯ ಬಾಳಿನ ಬಣ್ಣನೆಯು ಎದೆಯನ್ನು ಕೊರೆಯುವಂತಹುದಾಗಿದೆ. "ಬಂಜೆ ನಿನ್ನ ಬದುಕು ಹೆರವರಿಗೆ" ಎಂಬ ಮೊದಲನೆಯ ಪದ್ಯದಲ್ಲಿರುವ ಮಾತು ನಿಜವಾಗಿಯೂ ಮಕ್ಕಳಿಲ್ಲದವರ ಎದೆಗೆ ಬರೆಯನ್ನೆಳೆಯುವಂತಹದಿದೆ. ಎರಡನೆಯ ಪದ್ಯದಲ್ಲಿ "ಬಾಡಿಗೆಯೆತ್ತಿನ ದುಡಿತ" ವನ್ನೂ, "ಹಾಸಿ

* ಚಂಡಿ,

ಉಂಡು ಬೀಸಿ ಒಗೆದ ಬಾಳೆಯ ಎಲೆ" ಯನ್ನೂ ಬಂಜೆಯ ಬಾಳಿಗೆ ಹೋಲಿಸಿದುದರಲ್ಲಿ ಔಚಿತ್ಯವೆಷ್ಟಿರುವುದೆಂಬುದನ್ನು ನೋಡಿರಿ.

## ಲೋಕಾನುಭವ

ಮದುವೆ ಮಾಡಿಕೊಳ್ಳುವಾಗ ಹೆಣ್ಣಿನ ಬಣ್ಣಕ್ಕೆ ಮನಸೋಲಕೂಡದೆಂದು ಅನುಭವಸ್ಥಳಾದ ತಾಯಿಯೊಬ್ಬಳು ಮಗನಿಗೆ ಹೀಗೆ ಉಪದೇಶಿಸಿದಳು :—

ಕಪ್ಪು ಹೆಂಡತಿಯೆಂದು ಕರಕರೆಯ ಮಾಡದಿರು।
ನೇರಿಲದ ಹಣ್ಣು ಬಲು ಕಪ್ಪು ॥
ನೇರಿಲದ ಹಣ್ಣು ಬಲು ಕಪ್ಪು ನನ ಕಂದ।
ತಿಂದು ನೋಡಿದರೆ ರುಚಿ ಬಾಳ ॥ ೧ ॥

ಕೆಂಪು ಹೆಂಡತಿಯೆಂದು ಸಂತಸವ ಪಡಬೇಡ।
ಅತ್ತಿಯಾ ಹಣ್ಣು ಅತಿ ಕೆಂಪು॥
ಅತ್ತಿಯಾ ಹಣ್ಣು ಅತಿ ಕೆಂಪು ಕಂದಯ್ಯ।
ಒಡೆದು ನೋಡಿದರೆ ಹುಳು ಬಾಳ ॥ ೨ ॥

ಒಂದನ್ನು ತಿಂದು ನೋಡಿದರೆಯೇ ರುಚಿ ತಿಳಿಯುವುದು; ಅದು ವರೆಗೂ ಅಂದಗೇಡಿ. ಇನ್ನೊಂದು, ಕೈಯಿಂದ ಮುಟ್ಟಿ ಚುಚ್ಚಿ ನೋಡಿದರೆ ಸಾಕು; ಹುಳುಗಳ ಹುತ್ತ. ಅರ್ಥ ಗರ್ಭಿತವಾಗಿರುವುದಿಲ್ಲ ಆಡಿದ ಮಾತು.

ಸಾವಿರ ಕೊಟ್ಟರೂ ಸವತಿರುವ ಮನೆ ಬೇಡ।
ಸಾವಿರದ ಮೇಲೆ ಐನೂರು॥
ಸಾವಿರದ ಮೇಲೆ ಐನೂರು ಕೊಟ್ಟರು।
ಮಲಮಕ್ಕಳಿರುವ ಮನೆ ಬೇಡ ॥ ೩ ॥

ಮಗಳಿಗೆ ಮನೆಯನ್ನು ಹುಡುಕಲು ತಂದೆಯೊಬ್ಬನು ಹೊರಟಾಗ "ಮನೆಯಲ್ಲಿ" ಕೊಟ್ಟ ಎಚ್ಚರಿಕೆಯ ಮಾತುಗಳಿವೆ ಮೇಲಿನ ಕವಿತೆಯಲ್ಲಿ.

ಊರ ಮಹಾಲಕ್ಷ್ಮಿಯ ತೇರೆಳೆಯುತಿರುವಾಗ।
ತೀರಲಿಲ್ಲ ನನ್ನ ಮನೆಗೆಲಸ॥
ತೀರಲಿಲ್ಲ ನನ್ನ ಮನೆಗೆಲಸ ನನ್ನ ದೇವಿ।
ದೂರಿಂದೆ ಕೈಯ ಮುಗಿಯುವೆ ॥ ೪ ॥

ಮನೆವಾಳ್ತೆಯನ್ನು ಸರಿಯಾಗಿ ನಡೆಯಿಸಿಕೊಂಡು ಹೋಗುವುದು ದೇವರ ಸೇವೆಗಿಂತಲೂ ಹೆಚ್ಚಿನದೆಂಬ ಭಾವವನ್ನು ಹೊರಗೆಡಹುವುದಲ್ಲವೇ ಈ ಹಾಡು?

## ಹಾರಯ್ಕೆ

ಅತ್ತಿಗೆಯು ಹಡೆಯಲಿ ಹತ್ತೆಮ್ಮೆ ಕರೆಯಲಿ।
ಹಿತ್ತಿಲಿನ ಬಾಳೆ ಚಿಗುರಲಿ॥

ಹಿತ್ತಿಲಿನ ಬಾಳೆ ಚಿಗುರಲತ್ತಿಗೆ ಮಗಳು ।
ಅತ್ತೆ ಎಂದು ನನ್ನ ಕರೆಯಲಿ || ೧ ||

ಈ ಹಾರಯ್ಕೆಯು ಬಲು ಬುದ್ಧಿವಂತಿಕೆಯದಾಗಿ ಇದೆ. "ಅತ್ತಿಗೆಯ ಮಗಳು ಅತ್ತೆ ಎಂದು ನನ್ನ ಕರೆಯಲಿ" ಎಂದಿರುವ ಮಾತೇನೋ ಚಿಕ್ಕದು. ಆದರೆ ಅದರೊಳಗೆ ಅಡಗಿದ ಆಶೆಯು ಆನೆಯಂತಹದು.

ಹಸುಗೂಸು ಹುಟ್ಟಲಿ ಹೊಸಪೇಟೆ ಕಟ್ಟಲಿ ।
ರಸಬಾಳೆ ಕಬ್ಬು ಬೆಳೆಯಲಿ ||
ರಸಬಾಳೆ ಕಬ್ಬು ಬೆಳೆಯಲಿ ನಮ್ಮೂರ ।
ಬಸವಣ್ಣನ ತೇರು ಎಳೆಯಲಿ || ೨ ||

ಇಲ್ಲಿ ಸಂತಾನ, ಸಂಪತ್ತು, ಸುಗ್ರಾಸ, ಸುಖಜೀವನಗಳನ್ನು ಎಷ್ಟೊಂದು ಸುಲಭವಾದ ಮಾತಿನಲ್ಲಿ ಹಾರಯಿಸಲಾಗಿದೆಯೆಂಬುದನ್ನು ನಾವಿಲ್ಲಿ ನೋಡಬಹುದು. ಎಲ್ಲರೂ ಹಾರಯಿಸುವುದು ಇದನ್ನೇ. ಆದರೆ ಎಲ್ಲರಿಗೂ ಇಂತಹ ಶಬ್ದ ಸೌಲಭ್ಯವು ಮಾತ್ರ ಸಿಕ್ಕಲಾರದು.

*ಭಾಗಾದಿ ಬಲಕಿರಲಿ ವೈರಿಯು ಎಡಕಿರಲಿ ।
†ಛಾಡಿ ನಿನ್ನ ಮನೆಯು ಎದುರಿರಲಿ ||
ಛಾಡಿ ನಿನ್ನ ಮನೆಯು ಎದುರಿರಲಿ ಬಲ ಭೀಮ ।
ದೇವ ನನ್ನ ಮೇಲೆ ದಯವಿರಲಿ || ೩ ||

ಪರಮಾತ್ಮನ ದಯೆಯೊಂದಿದ್ದಲ್ಲಿ ಎಂತೆಂತಹ ತೊಂದರೆ ತೊಡಕುಗಳನ್ನೂ ಲೆಕ್ಕಿಸುವುದಿಲ್ಲವೆಂಬ ಅತ್ಯುಚ್ಚ ಭಾವವು ಮೇಲಿನ ಹಾಡಿನಲ್ಲಿರುವುದು.

ಅಂಗೈಲಿ ಪೂಜಿಸುವ ಲಿಂಗಯ್ಯ ಸ್ವಾಮಿಗೆ ।
ಮಂಗಳಾರತಿಯ ಬೆಳಗುವೆನು ||
ಮಂಗಳಾರತಿಯ ಬೆಳಗಿ ನಾ ಬೇಡುವೆನು ।
ಮಹಾರಾಯನ ಮುಂದೆ ಮರಣವನು || ೪ ||

ಈ ಹಾಡಿನಲ್ಲಿಯ ಹಾರಯಿಕೆಯಂತೂ ಶಿಖರಕ್ಕೇರಿಬಿಟ್ಟಿದೆ. ಕೇಳುತ್ತಿರುವಾಗಲೇ ಹೃದಯವು ಎಂತೆಂತಹ ಭಾವಗಳನ್ನೋ ಅನುಭವಿಸುವುದು. ಮನಸ್ಸು ಒಮ್ಮೆ ಮರುಗುವುದು, ಮತ್ತೊಮ್ಮೆ ಬೆರಗಾಗುವುದು. "ಧನ್ಯ ಧನ್ಯ ಮಹಿಳಾಮಣಿಯರೇ!" ಎಂದು ಹೇಳಲು ನಾಲಗೆಯು ಹಾತೊರೆಯುವುದು. ಮಂಗಳಾರತಿಯನ್ನು ಬೆಳಗುತ್ತ, "ಮಹಾರಾಯನ ಮುಂದೆ ಮರಣವನ್ನು" ಬೇಡುವ ಮಹಾಸತಿಯ ಚಿತ್ರವೊಂದನ್ನು ಕಣ್ಣುಗಳು ಕಾಣುವುವು. ಆಕೆಯ ಅಡಿಗಳಿಗೆರಗುವುದಕ್ಕೆ ತಲೆಯು ತಾನಾಗಿಯೇ ಬಾಗಿಬಿಡುವುದು.

* ಭಾಗಾದಿ=ದಾಯಾದಿ. † ಛಾಡಿ=ಚಾಡಿಯ ಮಾತು ಹೇಳುವವಳು.

### ಕೊನೆಯ ಹಾಡು

ಆದ ಮುಕ್ತಿಗೆ ನನ್ನ ಸೋದರನೆ ಹಾಡುವೆನು ।
ಸೋದರನ ತಂಗಿ ಹಡೆದಮ್ಮ ॥
ಸೋದರನ ತಂಗಿ ಹಡೆದಮ್ಮ ನಿನ್ನ ಹಾಡಿ ।
ಜಾಡಿಸೀ ರಥವ ನಿಲಿಸುವೆನು ॥

ಬೀಸುವ ಕಲ್ಲಿಗೆ ಪರ್ಯಾಯ ಪದವನ್ನಾಗಿ "ರಥ" ಎಂಬುದನ್ನು ಉಪಯೋಗಿಸಲಾಗಿದೆ. ಪರಮಾತ್ಮನ ರಥವನ್ನೆಳೆದ ಪುಣ್ಯಕಾರ್ಯಕ್ಕೆ ಈ ಬೀಸುವ ಕೆಲಸವು ಸಮಾನವಾದುದೆಂಬ ಭಾವವು ಹೊರಪಡುವುದಲ್ಲವೇ ಈ ಹಾಡಿನಲ್ಲಿ?

**೭. ತುದಿಗೆ ಮೊದಲು.**—ಬೀಸುವ ಹಾಡುಗಳ ಬಗೆಗೆ ನಾನು ಹೇಳಬೇಕೆಂದಿದ್ದುದನ್ನು ಮುಗಿಸುವೆನಿಲ್ಲಿಗೆ. ಕೊನೆಯದೊಂದು ನನ್ನ ಮಾತು: ಇಂತಹ ಹಾಡುಗಳು ನಮ್ಮ ನಾಡಿನಲ್ಲಿ ಹುಡುಕಿದರೆ ರಾಶಿ ರಾಶಿಯಾಗಿ ಸಿಕ್ಕುವುವು. ಬಡವರಾದವರ ಬಾಳುವೆಯ ಗೋಳಾಟ, ಹೊಟ್ಟೆಯ ಹೋರೆಯ ಹೋರಾಟಗಳಲ್ಲಿಯೂ, ಸಿರಿವಂತರ ಸೋಮಾರಿತನ, ಅಲಸಿಕೆ, ಆಡಂಬರಗಳಲ್ಲಿಯೂ ನಮ್ಮ ಪರಂಪರೆಯ ಹುರುಳುಳ್ಳ ಭಾಗವೆಷ್ಟೋ ಹಾಳಾಗಿಹೋಗುತ್ತಲಿದೆ; ಈಗಾಗಲೇ ಅದೆಷ್ಟೋ ಹೋಗಿಯೂ ಬಿಟ್ಟಿದೆ. ಎಲ್ಲದರಂತೆ ಈ ಹಳ್ಳಿಯ ಹಾಡುಗಳ ಹಾಡೂ ಆಗಿದೆ. ಇವೆಲ್ಲವೂ ಹಾಳಾಗಿಹೋದರೆ ನಮ್ಮ ಸಾಹಿತ್ಯದಲ್ಲಿಯ ಒಂದು ಬಗೆಯ ಸೊಗಸನ್ನು ನಾವಾಗಿಯೇ ಕಳೆದುಕೊಂಡಂತಾಗುವುದಿಲ್ಲವೆ? ಹಾಗಾದರೆ, ಈಗಲೇ ಎಚ್ಚತ್ತು ಹಳ್ಳಿಯ ಹಾಡುಗಳನ್ನು ಕೂಡಿಸಿ ಕಾಯ್ದಿಡಲು ಕಲಿತ ಕನ್ನಡಿಗರೆಲ್ಲರೂ ಅನುಗೊಳಬೇಕಲ್ಲವೆ?

**ಬೆಟಗೇರಿ ಕೃಷ್ಣಶರ್ಮಾ.**

---

# ಕಬೀರನ ಕವಿತೆಗಳು

ಕಬೀರನನ್ನರಿಯದ ಕನ್ನಡಿಗರು ವಿರಳ. ಕರ್ಣಾಟಕದ ಕನಕ, ಪುರಂದರ ದಾಸರು—ಇವರಂತೆ ಕಬೀರನೂ ಎಲ್ಲರಿಗೂ ಬೇಕಾದವನು. ಉತ್ತರ ಹಿಂದೂಸ್ಥಾನದಲ್ಲಿ ಈತನ ಕವಿತೆಗಳನ್ನರಿಯದವರು ಇಲ್ಲವೆಂದರೂ ನಡೆಯುವುದು. ಕರ್ಣಾಟಕದಲ್ಲಿ ಮಾತ್ರ ಅನೇಕರು ಈತನ ಚರಿತ್ರೆಯನ್ನು ಬಲ್ಲವರಾದರೂ ಈತನ ಮನವನ್ನರಿತವರು ತೀರ ಕಡಿಮೆ. ಕನ್ನಡಿಗರಿಗೆ ಈತನ ಮನದ ಮನೆಯ ಬಾಗಿಲುಗಳನ್ನು ತೆರೆದಿಡುವುದೇ ಈ ಬರೆಹದ ಉದ್ದೇಶ. ಆಂಗ್ಲಭಾಷೆಯನ್ನರಿತವರಿಗೆ ಕವೀಂದ್ರ ರವೀಂದ್ರರು ಮೊದಲೇ ಪ್ರವೇಶಮಾರ್ಗವನ್ನು ತೆರೆದಿರುವರು. ಹಿಂದೂಸ್ಥಾನಿಯನ್ನು ಬಲ್ಲವರಿಗೆ ಸ್ವತಃ ಕಬೀರರೇ ರಾಜಮಾರ್ಗವನ್ನು ಮಾಡಿರುವರು. ಕನ್ನಡಿಗರಿಗೆ ಮಾತ್ರ ಯಾರೂ ಸರಳವಾದ ಹಾದಿಯನ್ನು ಈವರೆಗೆ ಮಾಡದಿರುವ ಕಾರಣ, ತಿಳಿದ ಮಟ್ಟಿಗೆ ಅವರಿಗೆ ಕಬೀರನ ಬಗೆಯ ಬೀಗವನ್ನು ಬಿಚ್ಚಿಡುವೆನು.

## * ಕಬೀರ ದಾಸನ ವಚನಗಳು

೧

ಎಲೋ ದಾಸನೇ ! ನನ್ನನರಸುವೆ ಎಲ್ಲಿ ?
ನೋಡು ನಿನ್ನೆಡೆಯಲ್ಲಿಯೇ ನನ್ನಿರವು.
ನಾನು ಗುಡಿಯಲ್ಲಿಲ್ಲ, ಮಸೀದೆಯಲ್ಲಿಲ್ಲ, ಕಾಬಾದಲ್ಲಿಲ್ಲ, ಕೈಲಾಸದಲ್ಲಿಲ್ಲ ;
ನಾನು ವಿಧಾನಗಳಲ್ಲಿಯೂ ಇಲ್ಲ, ನಿಯಮಗಳಲ್ಲಿಯೂ ಇಲ್ಲ,
ಯೋಗದಲ್ಲಿಯೂ ಇಲ್ಲ, ತ್ಯಾಗದಲ್ಲಿಯೂ ಇಲ್ಲ.
ನಿನಗೆ ನಿಜವಾಗಿ ನನ್ನ ಹಂಬಲವಿದ್ದರೆ ನನ್ನನ್ನು ಒಮ್ಮೆಲೆ ಕಾಣುವೆ.
ಅರೆ ನಿಮಿಷದಲ್ಲಿ ನನ್ನನ್ನು ಹೊಂದುವೆ.

ಕಬೀರ.—"ದೇವರು ಜೀವಿಗಳೆಲ್ಲರ ಜೀವಾಳ"

೨

ಸಾಧುಗಳ ಕುಲವನ್ನೆಣಿಸಕೂಡದು.
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮುಂತಾದ ಹದಿನೆಂಟು ಕುಲಗಳೆಲ್ಲ
ಒಂದೇ ರೀತಿಯಲ್ಲಿ ದೇವರನ್ನು ಹುಡುಕುತ್ತಿರುವುವು.
ಶರಣರ ಕುಲವನ್ನು ಕೇಳುವುದು ಕೇವಲ ತಿಳಿಗೇಡಿತನವು.
ಹಡಪಿಗನು, ಮಡಿವಾಳಿತಿಯು, ಬಡಿಗನು ಕೂಡ
ದೇವರನ್ನು ಕಂಡಿರುವರು.
ರಾಯದಾಸನೂ ಈಶನ ಹಂಬಲವಿದ್ದವನು.

* ಈ ವಚನಗಳು ಕವೀಂದ್ರ ರವೀಂದ್ರರ "One Hundred Poems of Kabir" ಎಂಬ ಪುಸ್ತಕದೊಳಗಿನ ಆಯಾ ಪದ್ಯಗಳ ಅನುವಾದವಾಗಿದೆ.

ಶ್ವಪಚ ಋಷಿಯು ಚಮಗಾರನಲ್ಲವೆ?
ಅಭೇದವಾದ ಗುರಿಯನ್ನು ಹಿಂದೂಗಳೂ ಮುಸಲ್ಮಾನರೂ
ಒಂದೇ ಬಗೆಯಾಗಿ ಗುರುತಿಸಿರುವರು.

೩

ಗೆಳೆಯಾ! ಜೀವಿಸಿರುವಾಗಲೇ ಈಶನ ಆಶೆಯನ್ನು ಹಿಡಿ;
ಆತನನ್ನು ತಿಳಿದು ಗುರುತಿಸು.
ಜೀವನದಲ್ಲಿಯೇ ಜೀವನ್ಮುಕ್ತಿ.
ಜೀವಿಸುವಾಗ ಬಂಧನದಿಂದ ಬಿಡುಗಡೆಯಾಗದಿದ್ದರೆ
ಮರಣದಲ್ಲಿ ಮುಕುತಿಯಾಶೆಯೆಂತು?
ದೇಹದಿಂದ ಜೀವನು ಬಿಡುಗಡೆಹೊಂದಿ
ಬ್ರಹ್ಮನಲ್ಲಿ ಬೆರೆಯುವನೆಂಬುದೊಂದು ಜೊಳ್ಳು ಕನಸು.
ಇಲ್ಲಿ ಅವನು ದೊರೆತರೆ ಅಲ್ಲಿಯೂ ದೊರೆಯುವನು;
ಇಲ್ಲವಾದರೆ ನಾವು ಯಮ ನಗರವನ್ನು ಸೇರಲೇ ಬೇಕು.
ಆತನಲ್ಲಿ ನೀನು ಇಹದಲ್ಲಿ ಬೆರೆತರೆ,
ಪರದಲ್ಲಿಯೂ ಬೆರೆಯುವೆ.
ನನ್ನಿಯಲ್ಲಿ ಮಿಾಯಿ, ಸದ್ಗುರುವನ್ನು ಕಾಣು,
'ತತ್ಸತ್ತಿ'ನಲ್ಲಿ ಭಕ್ತಿಯನ್ನು ಬೇರೂರಿಸು.

ಕಬೀರ.—"ಭಕ್ತಿಯ ಬಲವೇ ಬೆಂಬಲವು.
ನಾನು ಭಕ್ತರ ಆಳು." (ಅಪೂರ್ಣ)

೪

ಹೂದೋಟಕ್ಕೆ ಹೋಗಬೇಡ;
ಗೆಳೆಯನೇ! ಅಲ್ಲಿಗೆ ಹೋಗಕೂಡದು:
ನಿನ್ನ ದೇಹದಲ್ಲಿಯೇ ಹೂದೋಟವಿದೆ.
ಸಹಸ್ರದಳ ಕಮಲದಲ್ಲಿ ನಿನ್ನ ಆಸನವನ್ನೇರ್ಪಡಿಸು;
ಅಲ್ಲಿಂದ 'ಅನಂತಸೌಂದರ್ಯ'ವನ್ನು ನೋಡು.

೫

ಅಣ್ಣಾ! ಮಾಯೆಯನ್ನು ಹೇಗೆ ಬಿಡಲಿ?
ಲಾಡಿ ಕಟ್ಟುವುದನ್ನು ಬಿಟ್ಟರೂ ಹೊದಿಕೆಯನ್ನು ಹೊದ್ದುಕೊಂಡೆನು.
ಹೊದಿಕೆಯನ್ನು ಬಿಟ್ಟಾಗ ನನ್ನಲ್ಲಿಯೇ ಮೆಯ್ಯನ್ನು ಮುದುಡಿಕೊಂಡೆನು.
ಕಾಮವನು ತೊರೆಯೆ ಕ್ರೋಧವುಳಿವುದು;
ಕೋಪವನು ಬಿಡೆ ಲೋಭವಳಿಯದು;
ಲೋಭವಳಿಯೆ, ಮದಮತ್ಸರಗಳಡಗವು.
ಮನಸ್ಸು ವಿಯುಕ್ತವಿದ್ದು ಮಾಯಾತೀತವಾದರೂ
ಮಾಯೆಯ ಛಾಯೆಯನ್ನು ಕಾಣದಿರದು.

ಕಬೀರ.—"ಸತ್ಯಮಾರ್ಗವು ಸಿಕ್ಕುವುದು ಬಹು ಅಪೂರ್ವ."

೬

ಒಡಲಲ್ಲಿಯೇ ತಿಂಗಳನು ಬೆಳಗಿದರೂ
ನನ್ನ ಕುರುಡು ಕಣ್ಣುಗಳು ಅದನ್ನು ಕಾಣವು.
ಚಂದಿರನಂತೆ ನೇಸರೂ ನನ್ನಲ್ಲಿರುವನು.
ಎಂದೂ ಬಾರಿಸದ ಬ್ರಹ್ಮ ಭೇರಿಯು ನನ್ನಲ್ಲಿ ಮೊಳಗಿದರೂ
ನನ್ನ ಕಿವುಡು ಕಿವಿಗಳು ಕೇಳವು.
ಮಾನವನಲ್ಲಿಯ 'ಮಮಕಾರ'ವು ಮಾಯವಾಗುವವರೆಗೆ
ಆತನ ಕರ್ಮಗಳೆಲ್ಲ ಜೊಳ್ಳು.
'ಅಹಂಭಾವನೆ'ಯೆಲ್ಲವಳಿದಾಗ
ಈಶನ ಕೆಲಸವನ್ನು ಮಾಡಲರ್ಹನಾಗುವೆ.
ಕರ್ಮದ ಗುರಿಯು ಅರುಹಿನರಮನೆ ಸೇರುವುದು;
ಅರುಹಿನ ಕುರುಹನ್ನರಿಯಲು ಕರ್ಮವು ಕೆಲಸಾರುವುದು.
ಫಲದ ಸಲುವಾಗಿ ಹೂವರಳುವುದು, ಫಲವಾಗಲುದುರುವುದು.
ತನ್ನಲ್ಲಿಯೇ ಕಸ್ತೂರಿಯಿರುವುದನ್ನರಿಯದೆ
ಮೃಗವು ಹುಲ್ಲು ಹುಡುಕಲೆಳಸುವುದು.

೭

ತನ್ನನ್ನು ತಾನು ತಿಳಿದಮೇಲೆ
ಬ್ರಹ್ಮವು ಅಗೋಚರವನ್ನು ಗೋಚರಿಸುವುದು.
ಗಿಡದಲ್ಲಿ ಬೀಜವಿದ್ದಂತೆ, ಮರದಲ್ಲಿ ನೆಳಲಿದ್ದಂತೆ,
ಆಕಾಶದಲ್ಲಿ ಶೂನ್ಯತೆಯಿದ್ದಂತೆ, ಶೂನ್ಯತೆಯಲ್ಲಿ ಅನಂತ ವಸ್ತುಗಳಿದ್ದಂತೆ
ಬ್ರಹ್ಮನಲ್ಲಿ ಆತ್ಮನೂ, ಆತ್ಮನಲ್ಲಿ ಜೀವನೂ ಜನಿಸುವರು.
ಜೀವನು ಶಿವನಲ್ಲಿರುವನು, ಶಿವನು ಜೀವನಲ್ಲಿರುವನು.
ಅವರು ಯಾವಾಗಲೂ ಎರಡಾಗಿ ಕಂಡರೂ, ಒಂದಾಗಿರುವರು.
ಆತನೇ ವೃಕ್ಷವು, ಬೀಜವು, ಹಾಗೂ ಅಂಕುರವು;
ಆತನೇ ಹೂ, ಕಾಯಿ ಮತ್ತು ನೆಳಲು;
ಆತನೇ ಸೂರ್ಯನ ಪ್ರಕಾಶವು ಮತ್ತು ಪ್ರಕಾಶಿತನು;
ಆತನೇ ಬ್ರಹ್ಮನು, ಆತನೇ ಜೀವ, ಆತನೇ ಮಾಯೆ;
ಅಸಂಖ್ಯ ರೂಪಗಳುಳ್ಳವನೂ ವಿಶ್ವವ್ಯಾಪಿಯೂ ಆತನೇ.
ಆತನೇ ಶ್ವಾಸ, ಶಬ್ದ ಮತ್ತು ಅರ್ಥ;
ಆತನೇ ಅಂತನು, ಹಾಗು ಅನಂತನು.
ಅಂತಾನಂತಗಳಾಚೆಗಿರುವ ಪವಿತ್ರ ವಸ್ತುವೇ ಆತನು.
ಶಿವಜೀವರ ಹೃದಯುವೇ ಆತನು.
ಆತ್ಮನಲ್ಲಿಯೇ ಪರಮಾತ್ಮನು ಪ್ರಕಾಶಿಸುವನು;

ಬಿಂದುವು ಪರಮಾತ್ಮನಲ್ಲಿಯೇ ತೋರುವುದು ;
ಬಿಂದುವಿನಲ್ಲಿಯೇ ಬ್ರಹ್ಮನು ಪ್ರತಿಬಿಂಬಿಸುವನು.
ದಿವ್ಯದೃಷ್ಟಿಯನ್ನು ಪಡೆದ ಕಬೀರನೇ ಪುನೀತನು.		(ಸೋಮಾನುಜ)

೧೧

ಗೆಳೆಯರೊಡನೆ ಹಗಲಿರುಳುಗಳನ್ನು
ಆಟದಲ್ಲಿ ಕಳೆದ ನನಗೆ ಈಗ ಬಹಳ ಭೀತಿಯುಂಟಾಗಿದೆ.
ಬಹು ಎತ್ತರಿರುವ ಪ್ರಭುವಿನ ಪ್ರಾಸಾದ ಸೋಪಾನಗಳನ್ನೇರಲು
ಹೃದಯವು ಹಿಂಜರಿಯುವುದು ;
ಆತನ ಸಮಾಗಮ ಸುಖವನ್ನು ಸವಿಯಬೇಕಾದರೆ ಹಿಂಜರಿಯಲಾಗದು.
ನನ್ನ ಹೃದಯವು ಪ್ರಿಯಕರನಲ್ಲಿ ಬೆರೆಯಬೇಕು ;
ಮುಸುಕನ್ನು ತೆರೆದು ಮೈಮರೆತು ನಾನು ಆತನನ್ನು ಸಂಧಿಸಬೇಕು ;
ಪ್ರೇಮ ದೀಪೋತ್ಸವವನ್ನು ನನ್ನ ನಯನಂಗಳು ಜರುಗಿಸಬೇಕು.
ಕಬೀರ.—“ ನಿಜವಾದ ಪ್ರೇಮವುಳ್ಳವನೇ ಆತನನ್ನರಿಯುವನು.
ಪ್ರಿಯಕರನಲ್ಲಿ ಪ್ರೇಮವನ್ನು ಬೀರದಿದ್ದರೆ,
ಅಂಗವನ್ನು ಸಿಂಗರಿಸುವುದೂ
ಕಣ್ಣಿಗೆ ಕಾಡಿಗೆಯನ್ನಿಡುವುದೂ ವ್ಯರ್ಥವಾಗಿದೆ.”

೧೭

ಅರಿವು ಮರೆವುಗಳೆಂಬ ಕಂಬಗಳ ನಡುವೆ ಮನಸಿನುಯ್ಯಾಲೆಯು.
ಯಾವತ್ತೂ ಅಲೆದಾಡುವ ಉಯ್ಯಾಲೆಯಲ್ಲಿಯೇ
ಸರ್ವಜೀವರಾಶಿಯೂ ಸಮಸ್ತ ಲೋಕಗಳೂ ತೂಗಾಡುವುವು ;
ಲಕ್ಷಾವಧಿ ಜೀವಕೋಟಿಯು ಅಲ್ಲಿರುವುದು ;
ಸೂರ್ಯ ಚಂದ್ರರೂ ಅದರಲ್ಲಿಯೇ ಗತಿಸುತ್ತಿರುವರು.
ಅಸಂಖ್ಯ ಯುಗಗಳಾದರೂ ಉಯ್ಯಾಲೆಯು ನೇಲುತ್ತಲೇ ಇದೆ.
ಆಕಾಶ, ಪೃಥ್ವಿ, ವಾಯು, ಅಪ್ಪುಗಳು ಅಂತರಿಕ್ಷದಲ್ಲಿಯೇ ಇರುವುವು.
ಪರಮಾತ್ಮನು ಕೂಡ ಅವತಾರವನ್ನೆತ್ತುವನು.
ಈ ನೋಟವೇ ಕಬೀರನನ್ನು ದಾಸನಾಗಮಾಡಿದೆ.

(ಎಸ್. ವಿ. ಅಡ್ಡಂಗಿ)

---

# ಜೈಮಿನಿ ಭಾರತ (ಆಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಐದನೆಯ ಅಧ್ಯಾಯ

ವೃಷಕೇತುವು ಹೇಳಿದುದನ್ನು ಯೌವನಾಶ್ವನು ಕೇಳಿ, "ಎಲೈ ವೃಷಕೇತುವೇ! ನೀನು ಧನ್ಯನು; ನೀನು ಮೊದಲು ನನ್ನನ್ನು ಹೊಡೆ; ನೀನು ಬಾಲನು, ಚಪಲನು; ಆದಕಾರಣ ನಿನ್ನನ್ನು ನಾನು ಹೊಡೆಯುವುದಿಲ್ಲ" ಎಂದು ಹೇಳಲು, ಅದಕ್ಕೆ ವೃಷಕೇತುವು, "ಎಲೈ ರಾಜೇಂದ್ರನೇ! ನೀನು ನನಗಿಂತ ಹಿರಿಯನು; ನಿನಗೆ ಬಹು ಮಂದಿ ಮಕ್ಕಳಿರುವರು. ನೀನು ಕೃಷ್ಣ ಸಂದರ್ಶನವಿಲ್ಲದವನಾದುದರಿಂದ ನನಗಿಂತ ನೀನು ಶಕ್ತಿ ಹೀನನು; ನಿನ್ನ ದೇಹದಲ್ಲಿ ಸ್ವಲ್ಪವೂ ಬಲವಿಲ್ಲ; ನಾನು ಯೌವನಸ್ಥನು, ನೀನು ವೃದ್ಧನು" ಎಂದನು.

ಆ ಮಾತನ್ನು ಕೇಳಿ ಯೌವನಾಶ್ವನು ನಗುತ್ತ ವೃಷಕೇತುವಿನ ಎದೆಗೆ ಹತ್ತು ಬಾಣಗಳನ್ನು ಹೊಡೆದನು. ಆ ಬಾಣಗಳನ್ನು ವೃಷಕೇತುವು ಒಂದೇ ಬಾಣದಿಂದ ಕತ್ತರಿಸಿ ಅವನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳು ದೊರೆಯನ್ನು ತಗುಲಿ, ಕೂಟ ಸಾಕ್ಷಿಯನ್ನು ಹೇಳಿದವರು ಅಧೋಗತಿಯನ್ನು ಹೊಂದುವಂತೆ, ನೆಲವನ್ನು ಹೊಕ್ಕುವು. ಅವನು ಪುನಃ ಅರ್ಧಚಂದ್ರ ಬಾಣದಿಂದ ದೊರೆಯ ಬಿಲ್ಲನ್ನೂ ಮೌರ್ವಿಯನ್ನೂ ಛತ್ರ ಚಾಮರ ವ್ಯಜನಗಳನ್ನೂ ಕತ್ತರಿಸಿದನು. ಕ್ರೂರನಾದ ಕಾಮುಕನು ಪ್ರೀತಿ ಗುಣಗಳನ್ನು ನಾಶಮಾಡುವಂತೆ, ಆ ಬಾಲಕನ ಒಂದೇ ಬಾಣವು ದೊರೆಯ ಬಿಲ್ಲು ಮೊದಲಾದುವೆಲ್ಲವನ್ನೂ ಕತ್ತರಿಸಿತು. ದೊರೆಯು ಮತ್ತೊಂದು ಧನುವನ್ನು ಕೊಂಡು ಏರಿಸಿ, ಹರಿತವಾದ ಅರವತ್ತು ಬಾಣಗಳಿಂದ ಅವನನ್ನು ಹೊಡೆದನು. ಅವು, ಸೂರ್ಯ ಕಿರಣಗಳು ವೇಗವಾಗಿ ನೀರನ್ನು ಹೀರುವಂತೆ ಅವನ ಹೃದಯವನ್ನು ಭೇದಿಸಿ ರಕ್ತ ಪಾನ ಮಾಡಿದುವು. ಬಳಿಕ ವೃಷಕೇತುವು ಬಹಳ ಮಂದಿಯೊಡನೆ ತನ್ನನ್ನು ಮುತ್ತಿದ ದೊರೆಯನ್ನು ಯುದ್ಧದಲ್ಲಿ ನೋಯಿಸಿ ನಾಲ್ಕು ಬಾಣಗಳಿಂದ ಅವನ ಕುದುರೆಗಳನ್ನು ಕೊಂದನು. ಅವನ ಸಾರಥಿಯ ತಲೆಯು ನೆಲಕ್ಕೆ ಬಿದ್ದಿತು. ವೃಷಕೇತುವು ವಿನೋದವಾಗಿ, ಬಾಣಗಳಿಂದ ಕತ್ತಲೆ ಕವಿಯುವಂತೆ ಮಾಡಲು, ಯುದ್ಧ ಭೂಮಿಯಲ್ಲಿ ದೊರೆಯು ಯಾವ ಯೋಧರ ಕಣ್ಣಿಗೂ ಕಾಣಿಸದೆಹೋದುದರಿಂದ, ದೊರೆಯು ಮೃತನಾದನೆಂಬ ಶಬ್ದವು ಹುಟ್ಟಿತು. ವೃಷಕೇತುವು ಶತ್ರುವಿನೆದುರಿಗೆ ತನಗೂ ತನ್ನ ತಾತನಿಗೂ ವಿನಾಶವುಂಟಾಗುವುದೆಂದು ನಾಚಿಕೆಯಿಂದ, ಕ್ರೂರವಾದ ಆಗ್ನೇಯಾಸ್ತ್ರವನ್ನು ಸಮಂತ್ರಕವಾಗಿ ಸಂಧಾನ ಮಾಡಿ ಪ್ರಯೋಗಿಸಿ, ಬೆಂಕಿಯಿಂದ

---

* ಕ. ಸಾ. ಪರಿಷತ್ಪತ್ರಿಕೆಯ ಅಕ್ಷಯ ಸಂವತ್ಸರದ (೧೧ನೆಯ ಸಂಪುಟದ) ೪ನೆಯ ಸಂಚಿಕೆಯ ೨೮೦ ನೆಯ ಪುಟದಿಂದ ಮುಂದುವರಿದುದು.

ಪ್ರಕಾಶವುಂಟಾಗುವಂತೆ ಮಾಡಿದನು. ದೊರೆಯು ವಾರುಣಾಸ್ತ್ರದಿಂದ ಆ ಅಗ್ನಿಯನ್ನು ಶಾಂತಿಗೊಳಿಸಿದನು. ವೃಷಕೇತುವು ಪವನಾಸ್ತ್ರದಿಂದ ವಾರುಣಾಸ್ತ್ರವನ್ನು ಕತ್ತರಿಸಿ ಸಿಂಹನಾದ ಮಾಡಿದನು. ಯೌವನಾಶ್ವನು ಮನುಷ್ಯ ಮಾತ್ರದವನ ಪರಾಕ್ರಮವನ್ನು ನೋಡಿ ಕೋಪದಿಂದ ಬೇರೆ ರಥವನ್ನು ಹತ್ತಿ ಮಾರುತಾಸ್ತ್ರವನ್ನು ಪರ್ವತಾಸ್ತ್ರದಿಂದ ನಾಶಗೊಳಿಸಿ ವೃಷಕೇತುವನ್ನು ನೋಯಿಸಿದನು. ಸಾವಿರಾರು ಬಂಡೆಗಳು ಮೇಲಿನಿಂದ ನೆಲಕ್ಕೆ ಬಿದ್ದುವು. ದೊರೆಯು ವೃಷಕೇತುವಿನ ಮೇಲೆ ಅನೇಕ ಬಾಣಗಳನ್ನೆಸೆದನು. ಆ ಬಾಣಗಳು ವೃಷಕೇತುವನ್ನು ಮುತ್ತಿ ಆ ಯುದ್ಧಭೂಮಿಯಲ್ಲಿ ಅವನನ್ನು ಕಾಣದಂತೆ ಮಾಡಿದುವು. ಅದನ್ನು ನೋಡಿ ಭೀಮನು ಕುಪಿತನಾಗಿ ತನ್ನ ಮಗನನ್ನು ಬಿಡಿಸುವುದಕ್ಕೆ ಹೋದನು.

ಯುದ್ಧಕ್ಕೆ ಹೊರಟ ಭೀಮನನ್ನು ನೋಡಿ ವೃಷಕೇತುವು ನಸು ನಕ್ಕು, ಬೇಗನೆ ದೊರೆಯ ಬಾಣಗಳನ್ನು ಮುರಿದು ಚಕ್ರಾಯುಧದಿಂದ ಪರ್ವತಾಸ್ತ್ರವನ್ನು ಕತ್ತರಿಸಿದನು. ಆ ಬಾಣವು ವ್ಯರ್ಥವಾದುದನ್ನು ನೋಡಿ ಯೌವನಾಶ್ವನು ವೃಷಕೇತುವಿನ ಎದೆಯನ್ನು ಬಾಣದಿಂದ ಸೀಳಲು, ಮಹಾ ಬಲನಾದ ವೃಷಕೇತುವು ಆಗ ಮೂರ್ಛಿತನಾಗಿ ನೆಲಕ್ಕೆ ಬಿದ್ದನು. ಅದನ್ನು ನೋಡಿ ಭೀಮನು ಕುಪಿತನಾಗಿ, "ಅಯ್ಯೋ! ವೃಷಕೇತುವನ್ನು ಕಳೆದುಕೊಂಡು ನಾನು ಹಿಂದಿರುಗಿ ಧರ್ಮ, ಕುಂತೀ, ಕೃಷ್ಣಾರ್ಜುನರಿಗೆ ಏನು ಹೇಳಲಿ?" ಎಂದು ಚಿಂತಿಸುತ್ತ ಕೂಡಲೆ ದೊಡ್ಡ ಗದೆಯನ್ನು ತೆಗೆದುಕೊಂಡು ದೊರೆಯ ಸೈನ್ಯವನ್ನು ಕಾಲ ರುದ್ರನಂತೆ ವೇಗದಿಂದ ಹೊಡೆದು ಕೆಡಹಿದನು; ನಿಮಿಷ ಮಾತ್ರದಲ್ಲಿ ಆನೆಯ ಹಿಂಡಿನ ಕುಂಭಸ್ಥಳಗಳನ್ನು ಸೀಳಿಹಾಕಿದನು; ರಥಾಶ್ವ ಪದಾತಿಗಳನ್ನು ನೆಲಕ್ಕುರುಳಿಸಿದನು. ಭೀಮನ ತೊಡೆಯ ವೇಗದಲ್ಲಿ ಹುಟ್ಟಿದ ಗಾಳಿಯು ಗಜ ರಥ ತುರಗಗಳನ್ನು ಹಾರಿಸಿಕೊಂಡು ಹೋಗಿ ಆಕಾಶದಲ್ಲಿ ಸುತ್ತಿಸುತ್ತಿದ್ದಿತು. ರಾಕ್ಷಸರಂತೆ ತಲೆಗೆದರಿದ ಯೋಧರು ಮೇಲೆ ಸುತ್ತಿ ತಿರುಗುತ್ತಿದ್ದರು. ಮೇಲಿನಿಂದ ಆನೆಗಳ ಮೇಲೆ ಆನೆಗಳು ಬಂದು ಕೆಳಗೆ ಬೀಳುತ್ತಿದ್ದುವು. ವಾಸುದೇವನ ಮಹಿಮೆಯನ್ನರಿಯದೆ ಜಗತ್ತು ಭ್ರಾಂತಿಗೊಳ್ಳುವಂತೆ, ದೊರೆಯ ಸೈನ್ಯವು ಅಲ್ಲಲ್ಲಿ ಸುತ್ತುತ್ತಿದ್ದಿತು. ಭೂಷಣ ರಹಿತರೂ ವಸ್ತ್ರ ಹೀನರೂ ಬಾಡಿದ ಮುಖವುಳ್ಳವರೂ ರಕ್ತ ಸೋರುತ್ತಿರುವವರೂ ಆದ ಗಜಾರೋಹಕರೂ, ತಲೆಯೊಡೆದು ರಕ್ತವು ಸುರಿಯುತ್ತಿರುವ ರಾಜಪುತ್ರರೂ, ಪುಣ್ಯಕ್ಷಯವನ್ನು ಹೊಂದಿದ ಮನುಷ್ಯರಂತೆ ತಲೆ ಕೆಳಗಾಗಿಯೂ ಕಾಲು ಮೇಲಾಗಿಯೂ, ಆಕಾಶದಿಂದ ನೆಲಕ್ಕೆ ಬಿದ್ದುಹೋದರು. ಗಜಾಶ್ವ ನರ ದೇಹಗಳಿಂದ ಸಾವಿರಾರು ರಕ್ತ ಪ್ರವಾಹಗಳು ನೆಲದ ಮೇಲೆ ಹರಿದುವು.

ಬಳಿಕ, ದೊರೆಯ ಮಗನಾದ ಸುವೇಗನೆಂಬ ಶೂರನು ಭೀಮನ ಮೇಲೆ ಯುದ್ಧಕ್ಕೆ ಬಂದು ಕ್ರೋಧ ವಶನಾಗಿ ಭೀಮನನ್ನು ಕುರಿತು, "ಯೌವನಾಶ್ವನ ಪುತ್ರನಾಗಿಯೂ ಮಹಾ ಬಲಿಷ್ಠನಾಗಿಯೂ ಇರುವ ನನ್ನನ್ನು ಸುವೇಗನೆಂದು ತಿಳಿ. ಎಲ್ಲಿ ಹೋಗುವೆ? ನನ್ನೊಡನೆ ಯುದ್ಧಮಾಡು" ಎಂದು ಹೇಳಿ ರಥವಿಂದಿಳಿದು ದೊಡ್ಡ ಗದೆಯನ್ನು ತೆಗೆದುಕೊಂಡು ಭೀಮನ ತಲೆಯ ಮೇಲೆಯೂ ಎದೆಯ ಮೇಲೆಯೂ ಹೊಡೆದನು.

ಭೀಮನೂ ಅವನನ್ನು ಗದೆಯಿಂದ ಹೊಡೆಯಲು, ಅವರಿಬ್ಬರೂ ಕ್ರೋಧ ಮೂರ್ಛಿತರಾಗಿ ಒಬ್ಬರೊಬ್ಬರು ಹೊಡೆದಾಡಿದರು. ಬಳಿಕ ಭೀಮನು ಸುವೇಗನನ್ನು ತೆಗೆದೆತ್ತಿ ಗರ ಗರನೆ ತಿರುಗಿಸಿ ಪುಡಿ ಪುಡಿಯಾಗುವಂತೆ ನೆಲಕ್ಕೆ ಬಡಿದನು. ಸುವೇಗನು ಮತ್ತೆ ಎದ್ದು ಭೀಮನನ್ನು ನೆಲಕ್ಕೆ ಬಡಿದನು. ಯುದ್ಧವು ಮಹಾದ್ಭುತವಾಯಿತು. ಭೀಮನು ಸುವೇಗನ ಮೇಲೆ ಒಂದು ಆನೆಯನ್ನು ತೆಗೆದೆಸೆಯಲು, ಅದನ್ನೇ ಅವನು ಭೀಮನ ಮೇಲೆಸೆದನು. ಹೀಗೆ ಆ ಆನೆಯನ್ನು ಒಬ್ಬರೊಬ್ಬರು ಎಸೆದಾಡಿ, ಮುಷ್ಟಿಗಳಿಂದಲೂ ಮೊಳಕಾಲುಗಳಿಂದಲೂ ಒಬ್ಬರನ್ನೊಬ್ಬರು ಹೊಡೆದಾಡಿ ಬಿದ್ದುಹೋದರು.

ಅಷ್ಟರಲ್ಲಿ, ವೃಷಕೇತು ಮೂರ್ಛೆಯಿಂದೆಚ್ಚತ್ತು ಐದು ಬಾಣಗಳನ್ನು ಆಕರ್ಣಾಂತವಾಗಿ ಸೆಳೆದು ಯೌವನಾಶ್ವನನ್ನು ಹೊಡೆದನು. ಮಹಾ ಬಲಶಾಲಿಯಾದ ಯೌವನಾಶ್ವನು ಅದರಿಂದ ಮೂರ್ಛೆಹೊಂದಿ ಮೈಮರೆತಿರುವುದನ್ನು ಕಂಡು, ವೃಷಕೇತುವು ಅವನ ಹತ್ತಿರಕ್ಕೆ ಬಂದು ಬಟ್ಟೆಯಿಂದ ಗಾಳಿಯನ್ನು ಬೀಸುತ್ತ, "ಕೃಷ್ಣನ ಭಜನೆಯಿಂದುಂಟಾದ ಪುಣ್ಯವು ಕಿಂಚಿತ್ತಾದರೂ ಈ ದೊರೆಗೆ ಇದ್ದರೆ ಅದರ ಬಲದಿಂದ ಪುನಃ ಇವನು ಜೀವಿಸಲಿ. ಇವನು ಬದುಕದಿದ್ದರೆ ನನ್ನ ಪರಾಕ್ರಮವನ್ನು ತಿಳಿಯುವರಾರು?" ಎಂದು ಹೇಳುತ್ತಿರಲು, ದೊರೆಯು ಎಚ್ಚತ್ತು "ಯುದ್ಧಕ್ಕೆ ನಿಲ್ಲು" ಎಂದು ಹೇಳುತ್ತ, ಹಾಗೆಯೇ ತನ್ನ ಬಳಿಯಲ್ಲಿದ್ದ ವೃಷಕೇತುವನ್ನು ಆಲಂಗಿಸಿ, "ಎಲೈ ವೃಷಕೇತುವೇ! ನೀನು ನನ್ನ ಪ್ರಾಣವನ್ನುಳಿಸಿದವನಾದಕಾರಣ ನಮ್ರವನಾಗಿದ್ದೀಯೆ; ನೀನು ಹೇಳುವ ಮಾತನ್ನು ಕೇಳಿಯೂ ಯುದ್ಧ ಮಾಡಿದರೆ ಇನ್ನು ನನಗಿಂತಲೂ ನಿಂದ್ಯನು ಯಾರು? ನಾನೂ ನನ್ನ ರಾಜ್ಯವೂ ಎಲ್ಲವೂ ನಿನ್ನದು. ನಿನ್ನ ಅನುಗ್ರಹದಿಂದ ಶ್ರೀಹರಿ ದರ್ಶನವನ್ನು ಮಾಡುವೆನು. ಭೀಮನನ್ನು ತೋರಿಸು. ಮನುಷ್ಯರಲ್ಲೆಲ್ಲ ಕರ್ಣನು ದಾತೃವೆಂಬುದು ಪ್ರಖ್ಯಾತವಾದುದು. ಅಂತಹ ದಾತೃತ್ವವನ್ನು ಅವನ ಮಗನಾದ ನೀನು ತೋರಿಸಿ ನನ್ನನ್ನು ಯುದ್ಧದಲ್ಲಿ ಬದುಕಿಸಿದೆ. ಸುವೇಗನೂ ಭೀಮನೂ ಮೂರ್ಛಿತರಾಗಿ ಬಿದ್ದಿರುವೆಡೆಗೆ ಹೋಗೋಣ. ನೀನೂ ನನ್ನೊಡನೆ ಬಾ" ಎಂದನು.

ಇಂತು ಯೌವನಾಶ್ವ ಪರಾಜಯವೆಂಬ ಐದನೆಯ ಅಧ್ಯಾಯವು.

---

## ಆರನೆಯ ಅಧ್ಯಾಯ

ಬಳಿಕ ಎಚ್ಚತ್ತ ವೀರರಿಬ್ಬರೂ ಯುದ್ಧ ಮಾಡದಂತೆ ಯೌವನಾಶ್ವನು ತಡೆದು, ಭೀಮನನ್ನು ಬಹಳವಾಗಿ ಹೊಗಳಿ ತನ್ನ ಪಟ್ಟಣಕ್ಕೆ ಕರೆತಂದನು. ಮೇಘವರ್ಣನಾದರೋ, ಕುದುರೆಯನ್ನು ಹಿಡಿದುಕೊಂಡು ಭೀಮನ ಬಳಿಯಲ್ಲಿಯೇ ಇದ್ದು ನಗುತ್ತ, "ಅಯ್ಯಾ! ಸರ್ವತೋಮುಖನಾದ ಹರಿಯನ್ನು ಬಹು ವಿಧದಿಂದ ಧ್ಯಾನಿಸುತ್ತ ಈ ಶ್ರೇಯಸ್ಕರವಾದ ಕಾರ್ಯವನ್ನು ಮಾಡಿದೆಯಾ?" ಎಂದು ಕೇಳಲು, ಅದಕ್ಕೆ ದೊರೆಯು ಶೂರನಾದ ವೃಷಕೇತುವನ್ನು ಸ್ತುತಿಸಿ ಪ್ರಸನ್ನಮುಖನಾಗಿ ಇಂತೆಂದನು:—"ಎಲೈ ಭೀಮಸೇನನೇ! ಈ ವೃಷಕೇತುವಿನ ಮಹಾ ಬಲವನ್ನು ನೋಡಿದೆಯಾ? ಸಾಧುವಾಗಿಯೂ ಕರುಣಾಳುವಾಗಿಯೂ ಇರುವ

ಇವನು ನನ್ನನ್ನು ಯುದ್ಧದಲ್ಲಿ ಬದುಕಿಸಿದನು. ಜೀವ ದಾನ ಮಾಡಿದವನ ಮೇಲೆ ಪುನಃ ಯುದ್ಧ ಮಾಡಬಹುದೇ? ಆದಕಾರಣ, ನನ್ನನ್ನು ಗೋವಿಂದನ ಬಳಿಗೆ ಕರೆದು ಕೊಂಡು ಹೋಗು. ಧರ್ಮ ಕಾರ್ಯಕ್ಕಾಗಿ ನನ್ನ ಮನಸ್ಸು ತ್ವರೆಪಡುತ್ತಿರುವುದು. ಶ್ರೀಕೃಷ್ಣನಲ್ಲಿ ಭಕ್ತಿಯನ್ನು ಮಾಡುವುದು ಮುಕ್ತಿಗಿಂತಲೂ ದೊಡ್ಡದು. ನನ್ನ ದಾಗಿರುವ ಧನವನ್ನೂ ಪುತ್ರ ಪೌತ್ರಾದಿಗಳನ್ನೂ ಈ ರಾಜ್ಯವನ್ನೂ ನನ್ನ ದೇಹವನ್ನೂ ಕೃಷ್ಣನ ವಶ ಮಾಡು. ನನ್ನಲ್ಲಿ ಹತ್ತು ಸಾವಿರ ಬಿಳಿಯ ಆನೆಗಳಿವೆ. ಈ ಯಜ್ಞಾಶ್ವದ ರಕ್ಷಣೆಗೆ ಹೊರಟು ಧರ್ಮರಾಜನಿಗಾಗಿ ಯುದ್ಧದಲ್ಲಿ ನನ್ನ ತಲೆಯನ್ನೊಪ್ಪಿಸಲು ಸಿದ್ಧನಾಗಿರುವೆನು. ನೀನು ನನ್ನೊಡನೆ ಈ ಧವಳ ಗಜವನ್ನೇರು. ಈ ವೃಷಕೇತುವೂ ಮೇಘವರ್ಣನೂ ಈ ಬಿಳಿಯಾನೆಗಳನ್ನು ಹತ್ತಲಿ. ನನ್ನ ಇಷ್ಟಾನುಸಾರವಾಗಿ ನೀವೆಲ್ಲರೂ ನನ್ನ ಪಟ್ಟಣಕ್ಕೆ ಬನ್ನಿರಿ. ಪಟ್ಟಣವನ್ನು ಚಿತ್ರ ಧ್ವಜಗಳಿಂದಲಂಕರಿಸಿ ಗಂಧೋದಕ ಸೇಚನೆಯಿಂದ ಶೀತಲವನ್ನಾಗಿ ಮಾಡಲು ನನ್ನ ಪರಿವಾರವು ಪಟ್ಟಣಕ್ಕೆ ಮುಂದೆ ತೆರಳಲಿ. ನನ್ನ ಪತ್ನಿಯಾದ ಪ್ರಭಾವತಿಯು ಭೀಮಸೇನನಿಗೆ ಆರತಿಯ ನ್ನೆತ್ತಲಿ; ಕನ್ಯೆಯರು ಲಾಜಾಕ್ಷತೆಗಳನ್ನೂ ಪುಷ್ಪಗಳನ್ನೂ ಎರಚಿ ಆದರಿಸಲಿ" ಎಂದು ಅಪ್ಪಣೆ ಮಾಡಿ ಸಂತೋಷದಿಂದ ವೃಷಕೇತು ಮೇಘವರ್ಣ ಭೀಮರೊಡನೆ ಪಟ್ಟಣಕ್ಕೆ ಹೊರಟನು.

ಅರಮನೆಗೆ ಬರುತ್ತಿರುವ ಭೀಮನನ್ನು ಪ್ರಭಾವತಿಯು ನೋಡಿ, ಸುವರ್ಣ ಪಾತ್ರೆಯಲ್ಲಿ ಐದು ಮುಖವುಳ್ಳ ಮಂಗಳ ದೀಪವನ್ನು ಕರ್ಪೂರದ ಆರತಿಯೊಡನೆ ತೆಗೆದುಕೊಂಡು ಬಂದು, ಸ್ತ್ರೀಯರೊಡನೆ ಅವನನ್ನು ಎದುರುಗೊಂಡಳು. ಭೀಮಾದಿ ಗಳಿಗೆ ಆರತಿಯನ್ನೆತ್ತಿ, "ನನ್ನ ಮಂಗಳ ಸೂತ್ರವನ್ನುಳಿಸಿದ ವೃಷಕೇತುವಿನ ಕೀರ್ತಿಯು ದೊಡ್ಡದು" ಎಂದು ಹೇಳಿದಳು. ನೀರಾಜನವಾದ ಬಳಿಕ ಎಲ್ಲರೂ ಉತ್ತಮವಾದ ಆಸನಗಳಲ್ಲಿ ಕುಳಿತು ಅನೇಕ ಕಥಾಲಾಪಗಳಾದ ಮೇಲೆ ಭೋಜನ ಮಾಡಿ ಮಲಗಿದರು. ಬೆಳಗಾದ ಮೇಲೆ ಧರ್ಮಜ್ಞನಾದ ದೊರೆಯು ನಿತ್ಯ ಕರ್ಮವನ್ನು ತೀರಿಸಿಕೊಂಡು ಭೀಮ ನೊಡನೆ ಸಭೆಯಲ್ಲಿ ಕುಳಿತು ನಗರ ವಾಸಿಗಳನ್ನು ಕುರಿತು ಹೀಗೆ ಆಜ್ಞೆಮಾಡಿದನು:— "ಎಲೈ ಪುರ ವಾಸಿಗಳಿರಾ! ನಮ್ಮ ಪಟ್ಟಣದಲ್ಲಿ ಚಾತುರ್ವರ್ಣ್ಯದವರೂ ಚಂಡಾಲರೂ ಯಾರೊಬ್ಬರೂ ತಪ್ಪದೆ ಕೃಷ್ಣ ಧರ್ಮರಾಜರಿರುವೆಡೆಗೆ ನಡೆಯಿರಿ; ಇದಕ್ಕೆ ತಪ್ಪಿದವರು ವಧ್ಯರಾಗುವರು". ಈ ಪ್ರಕಾರವಾಗಿ ಭೇರೀ ಧ್ವನಿಯಿಂದ ಪಟ್ಟಣದಲ್ಲೆಲ್ಲ ಸಾರಿಸಿ, "ದ್ರೌಪದೀ ರುಕ್ಮಿಣಿಯರ ದರ್ಶನಕ್ಕಾಗಿ ನಮ್ಮ ಪರಿವಾರವೆಲ್ಲವೂ ದಾರಾ ಪುತ್ರಾ ದಿಗಳೊಡನೆ ಹೊರಡಲಿ. ಪ್ರಭಾವತಿಯೂ ಹತ್ತು ಸಾವಿರ ಮಂದಿ ಸ್ತ್ರೀಯರೊಡನೆ ಧರ್ಮರಾಜನ ಪಟ್ಟಣವಾದ ಹಸ್ತಿನಾವತಿಗೆ ಪ್ರಯಾಣ ಮಾಡಲಿ. ಸಹಸ್ರ ಸ್ತಂಭ ಗಳುಳ್ಳ ನಮ್ಮ ದೊಡ್ಡ ಡೇರೆಯು ನಮ್ಮ ಪ್ರಯಾಣಕ್ಕಾಗಿ ಪಶ್ಚಿಮ ದಿಕ್ಕಿನಲ್ಲಿ ಸಿದ್ಧವಾಗಿರಲಿ. ನಮ್ಮ ಬಂಡಿಗಳೂ ಎತ್ತುಗಳೂ ಒಂಟೆಗಳೂ ಧನವನ್ನು ಹೊತ್ತು ಕೊಂಡು ಹೊರಡಲಿ. ಹೆಚ್ಚೇನು! ನಮ್ಮ ಸರ್ವಸ್ವವನ್ನೂ ಕೃಷ್ಣನ ಬಳಿಗೆ ಸಾಗಿಸಿ ಕೊಂಡು ನಡೆಯಿರಿ. ಗಂಗಾ ತೀರವೂ, ಶ್ರೀಹರಿ ಸನ್ನಿಧಿಯೂ, ನಮ್ಮೆಲ್ಲರ ಸಮಾ ಗಮವೂ ಆದರೆ ಯಾರಿಗೆ ತಾನೆ ಮನಸ್ಸಂತೋಷವಾಗದಿರುವುದು? ಎಂದು ಹೇಳಿ

ಸುದೇವನನ್ನು ಕರೆದು, "ನೀನು ನಮ್ಮ ಪಟ್ಟಣದ ಐಶ್ವರ್ಯಶಾಲಿಗಳೆಲ್ಲರನ್ನೂ ಅವರವರ ಧನ ರಾಶಿಯೊಡನೆ ಹಸ್ತಿನಪುರಕ್ಕೆ ಹೊರಡಿಸಿಕೊಂಡು ನಡೆ" ಎಂದು ಆಜ್ಞೆಮಾಡಿದನು. ಆಗ ಸುದೇವನು ದೊರೆಯ ಆಜ್ಞಾನುಸಾರವಾಗಿ ತನ್ನೆದುರಿಗಿದ್ದ ಜನರನ್ನು ನೋಡಿ, "ನೀವೆಲ್ಲರೂ ಕೃಷ್ಣನೂ ಪಾಂಡವರೂ ಇರುವ ಆ ಹಸ್ತಿನಾಪತಿಗೆ ನಡೆಯಿರಿ. ಅಲ್ಲಿ ಧರ್ಮರಾಜನು ಶುಭಕರವಾದ ಅಶ್ವಮೇಧ ಯಾಗವನ್ನು ನಡೆಯಿಸುವನು" ಎಂದು ಹೇಳಲು, ಅದನ್ನು ಕೇಳಿ ಎಲ್ಲರೂ ಹರ್ಷಿತರಾದರು.

ಸುದೇವನು ವೃದ್ಧಳಾದ ತನ್ನ ಅಜ್ಜಿಗೆ ನಮಸ್ಕರಿಸಿ, "ಅಜ್ಜೀ! ದೊರೆಯು ನನ್ನನ್ನು ಧರ್ಮರಾಜನ ಅಶ್ವಮೇಧ ಯಾಗಕ್ಕೆ ಕರೆದುಕೊಂಡುಹೋಗುವನು" ಎಂದು ಹೇಳಲು, ಆಕೆಯು ತನ್ನ ಮೊಮ್ಮಗನು ಹೇಳುವ ಮಾತನ್ನು ಕೇಳಿ ಇಷ್ಟವಿಲ್ಲದೆ, "ಎಲೈ ಮಗುವೇ! ನೀನು ಅಲ್ಲಿಗೆ ಹೋಗಕೂಡದು. ನಾನು ಬದುಕಿರುವವರೆಗೂ ಧನವ್ಯಯವನ್ನು ಮಾಡಬೇಡ; ಧನ ಹೀನಳಾಗಿ ನಾನು ಬದುಕಿರಲಾರೆನು" ಎಂದಳು. ಅದಕ್ಕೆ ಸುದೇವನು, "ಅಮ್ಮಾ! ಅದು ಗಂಗಾ ತೀರವು. ಸಾಕ್ಷಾದ್ಭಗವಂತನಾದ ಕೃಷ್ಣನು ತಮ್ಮ ಅಣ್ಣನೊಡನೆ ಅಲ್ಲಿರುವನು. ಬಹಳ ಮಂದಿ ಸತ್ಪುರುಷರು ಅಲ್ಲಿಗೆ ಬರುವರು. ಧರ್ಮರಾಜನು ಮಾಡುವ ಯಜ್ಞಕ್ಕಾಗಿ ಅಲ್ಲಿಗೆ ಬಹುಜನ ಋಷಿ ಶ್ರೇಷ್ಠರೂ ಬಂದಿರುವರು. ನೀನೂ ಆ ಕೃಷ್ಣನ ದರ್ಶನವನ್ನು ಮಾಡಬಹುದು, ಹೊರಡು" ಎಂದನು. ಅದನ್ನು ಕೇಳಿ ಆಕೆಯು, "ಎಲೈ ಸುದೇವನೇ! ನೀನು ನನಗೆ ಹೇಳಬೇಡ. ಧರ್ಮ, ದೇವರು ಎಂಬುದನ್ನು ನಾನೆಂದಿಗೂ ಕೇಳಿಲ್ಲ. ನಮ್ಮ ತಂದೆಯಾಗಲಿ ನನ್ನ ಪತಿಯಾಗಲಿ ಹಿಂದೆ ಎಂದೂ ಧರ್ಮವನ್ನು ಮಾಡಲಿಲ್ಲ. ನೀನು ಯಾರ ಮಾತನ್ನು ಕೇಳಿ ಹೀಗೆ ಧನವನ್ನು ನಾಶ ಮಾಡುವುದಕ್ಕೆ ಪ್ರಯತ್ನಿಸಿದ್ದೀಯೆ? ಯಜ್ಞ ದಾನಾದಿ ಕರ್ಮಗಳೆಲ್ಲವೂ ವಂಚನಾರ್ಥಗಳಾಗಿವೆ ಎಂದು ಭಾವಿಸುವೆನು. ವೇದವು ಅರ್ಥವಾದವುಳ್ಳದು. ಬ್ರಾಹ್ಮಣರು ಲೋಕ ವಂಚಕರು. ಪ್ರಾಣವನ್ನು ಕಳೆದುಕೊಂಡು ಸಂಪಾದಿಸಿದ ಧನವನ್ನು ಯಾವನು ನಾಶಮಾಡಲೆಳಸುವನು? ಧರ್ಮವು ನಮ್ಮ ವಂಶಕ್ಕೆ ಸುಖಪ್ರದವಾಗುವುದಿಲ್ಲ. ವೃದ್ಧಳಾದ ನಾನು ಈಗ ಧರ್ಮಮಾಡುವುದು ಹೇಗಾದೀತು? ಈ ಅಕಾರ್ಯವನ್ನು ನಾನೆಂದಿಗೂ ಮಾಡಲೊಲ್ಲೆನು; ಇದು ಸತ್ಯವು" ಎಂದಳು.

ಆಕೆಯಾಡಿದ ಮಾತನ್ನು ಕೇಳಿ, ಸುದೇವನು ತಂದೆಯ ಬಳಿಗೆ ಬಂದು ಈ ಹಾಸ್ಯಾಸ್ಪದವಾದ ಮಾತನ್ನು ಆತನೊಡನೆ ಹೇಳಲು, ಅದನ್ನು ಕೇಳಿ ದೊರೆಯು ಜರದ್ಗವೆಯೆಂಬ ತನ್ನ ತಾಯಿಯನ್ನು ಕರೆಯಿಸಿ ಆಕೆಗೆ ಇಷ್ಟವಾಗುವಂತೆ, "ಅಮ್ಮಾ! ಕೃಷ್ಣಪಾಂಡವರಿರುವ ಆ ಸ್ಥಳಕ್ಕೆ ಎಲ್ಲರೂ ಹೋಗುವರು. ನೀನೂ ಆ ಹಸ್ತಿನಪುರಕ್ಕೆ ಬಂದು ಪುಣ್ಯ ಸಂಪಾದನೆಮಾಡು. ಅಲ್ಲಿ ಕೃಷ್ಣನೂ ಸ್ತ್ರೀಜನದೊಡನೆ ಕೂಡಿದ ರುಕ್ಮಿಣಿಯೂ ಇರುವರು. ಅಲ್ಲದೆ, ಬಹಳ ಮಂದಿ ಕುಲಸ್ತ್ರೀಯರೂ ಬಂದಿರುವರು. ಸತ್ಪುರುಷರ ದರ್ಶನ ಮಾತ್ರದಿಂದಲೇ ಜನರ ಪಾಪವೆಲ್ಲವೂ ನಾಶವಾಗುವುದು, ಇದಕ್ಕೆ ಸಂದೇಹವಿಲ್ಲ" ಎಂದನು. ಅದಕ್ಕೆ ಆತನ ತಾಯಿಯು, "ರಾಜೇಂದ್ರನೇ! ನಾನು ಬರುವುದಿಲ್ಲ; ಬಂದರೆ ನನ್ನ ಧನವೆಲ್ಲವೂ ಹೋಗುವುದು. ದುಷ್ಟರಾದ ನನ್ನ ಸೊಸೆಯರು

ಮನೆಯನ್ನು ಹಾಳುಮಾಡುವರು. ಈಗ ನಮ್ಮ ಗೋಧಿಯ ಗದ್ದೆಯು ಕೊಯ್ಲಿಗೆ ಬಂದಿರುವುದು. ನಮ್ಮ ಭಾಗದ ಬೆಣ್ಣೆಯೆಲ್ಲವನ್ನೂ ಗೊಲ್ಲರು ತಿಂದುಹಾಕಿಬಿಡುವರು. ಕ್ರೂರರಾದ ದಾಸ ದಾಸೀ ಜನರು ಸ್ವೇಚ್ಛೆಯಾಗಿ ಬಂದು ಹೋಗುವರು. ಈ ಮನೆಯು ನನ್ನಿಂದಲೇ ನಿಂತಿರುವುದು. ಕೃಷ್ಣನಿಂದ ನನಗೇನಾಗಬೇಕು? ಈಗ ನನಗೆ ಧರ್ಮವು ಬೇಕಾಗಿಲ್ಲ. ಕೃಷ್ಣಧರ್ಮಾದಿಗಳು ತಮ್ಮ ತಮ್ಮ ಕೆಲಸದಲ್ಲಿ ಆಸಕ್ತರಾಗಿರುವಂತೆ ನಾನು ನನ್ನ ಗೃಹ ಕಾರ್ಯದಲ್ಲಿ ನಿರತಳಾಗಿರುವೆನು. ನೀನು ರಾಜಕಾರ್ಯವನ್ನು ಬಿಟ್ಟು ವೃಥಾ ಅಲ್ಲಿಗೆ ಹೋಗುತ್ತೀಯೆ, ನೀನು ಮೂಢನು; ಇದರಿಂದ ನಿನಗೆ ಧನ ಹಾನಿಯಾಗುವುದರಲ್ಲಿ ಸಂದೇಹವಿಲ್ಲ. ಪ್ರಾಣ ಹೋದರೂ ಚಿಂತೆಯಿಲ್ಲ; ಧನ ಹಾನಿಯಾದರೆ ಲೋಕಕ್ಕೆ ಕ್ಲೇಶವುಂಟಾಗುವುದು'' ಎಂದು ಹೇಳಿದಳು.

ಹೀಗೆ ಹೇಳುತ್ತಿರುವ ತಾಯಿಯ ಮಾತನ್ನು ಕೇಳಿ ದೊರೆಯು ಆ ಜರದ್ಗವೆಯನ್ನು ಬಲಾತ್ಕಾರದಿಂದ ಹಿಡಿದು ಕಟ್ಟಿ, ಅಳುತ್ತಿದ್ದರೂ ಬಿಡದೆ ಡೋಲಿಯ ಮೇಲೆ ಆಕೆಯನ್ನು ಸಾಗಿಸಿಕೊಂಡು ಹೊರಟನು. ಬಳಿಕ ಆತನು ನಸು ನಕ್ಕು, ಆಕೆಯನ್ನು ನಿಂದಿಸುತ್ತ, ಮನೋಭ್ರಾಂತಿಕರವಾದ ಜರದ್ಗವೆಯ ನಡತೆಯನ್ನು ಭೀಮನಿಗೆ ಹೀಗೆ ಹೇಳಿದನು:—''ಎಲೈ ಭೀಮನೇ! ಆಶೆಯೆಂಬುದು ಬಲವಾಗಿಯೂ ಆಶ್ಚರ್ಯಕರವಾಗಿಯೂ ಇರುವ ಶೃಂಖಲೆಯಂತಿರುವುದು. ಇದಕ್ಕೆ ಕಟ್ಟುಬಿದ್ದವರು ಸಿಕ್ಕಿ ನರಳುವರು; ಕಟ್ಟುಬೀಳದವರು ಕುಂಟರಂತೆ ಸ್ಥಿರವಾಗಿರುವರು. ಜೀರ್ಣನಾದ ಮನುಷ್ಯನ ಕೇಶ ದಂತ ಚಕ್ಷುಃಶ್ರೋತ್ರಗಳೆಲ್ಲವೂ ಜೀರ್ಣವಾಗುವುವು; ಆಶೆಯು ಮಾತ್ರ ಜೀರ್ಣವಾಗದು; ಅದು ಕಷ್ಟತರವಾದುದು; ಅದರ ತ್ಯಾಗವು ಪರಮ ಸುಖಕರವಾದುದು'' ಎಂದು ಹೇಳಲು, ಭೀಮನು ಆ ಮಾತಿಗೆ ಸಂತೋಷಪಟ್ಟನು. ಹೀಗೆ ದೊರೆಯು ಅಲ್ಲಿ ಐದು ರಾತ್ರಿಗಳಿದ್ದು ದೊಡ್ಡ ಬಲದೊಡನೆ ಹೊರಟು ಅಲ್ಲಿಗೆ ಇಪ್ಪತ್ತು ಯೋಜನ ದೂರದಲ್ಲಿರುವ ಹಸ್ತಿನಪುರಕ್ಕೆ ಪ್ರಯಾಣ ಮಾಡುತ್ತಿರುವಲ್ಲಿ ಭೀಮನು ತಾನು ಮುಂದಾಗಿ ಹೋಗಿ ದೊರೆಯು ಸೇನಾ ಸಮೇತನಾಗಿ ಬರುತ್ತಿರುವುದನ್ನು ಧರ್ಮರಾಜನಿಗೆ ತಿಳಿಸುವುದಾಗಿಯೂ, ವೃಷಕೇತುವು ದೊರೆಯ ಶುಶ್ರೂಷಾರ್ಥವಾಗಿ ಅವನೊಡನಿರುವುದಾಗಿಯೂ ಹೇಳಿ ಬೇಗನೆ ಹೊರಟನು. ಹಸ್ತಿನಪುರಕ್ಕೆ ಹೋಗಿ, ತಮ್ಮಂದಿರೊಡನೆ ಕುಳಿತಿದ್ದ ಧರ್ಮರಾಜನನ್ನು ಕಂಡು, ಆತನಿಗೆ ನಮಸ್ಕರಿಸಿ, ಉಳಿದವರನ್ನಾಲಿಂಗಿಸಿ ಭೀಮನು, ''ಜೀಯಾ! ನಿನ್ನ ಅನುಗ್ರಹದಿಂದ ನಾವು ಯಾವಾಗಲೂ ಕುಶಲರು. ಆ ಯಜ್ಞಾಶ್ವವನ್ನು ಯೌವನಾಶ್ವ ಸಮೇತವಾಗಿ ಕರೆತಂದಿರುವೆವು. ವೃಷಕೇತುವು ಯುದ್ಧದಲ್ಲಿ ಆ ದೊರೆಯನ್ನು ಸಂತೋಷಪಡಿಸಿದನು. ಪುತ್ರ ಮಿತ್ರ ಬಾಂಧವ ಸೇನಾ ಸಹಿತನಾಗಿ ಯೌವನಾಶ್ವನು ನಿನ್ನ ದರ್ಶನಕ್ಕೆ ಬರುತ್ತಿರುವನು. ಆತನ ಪತ್ನಿಯಾದ ಪ್ರಭಾವತಿಯು ವಿಷ್ಣುಭಕ್ತಿಯಂತೆ ಶಾಂತಿ ಕ್ಷಾಂತಿಯುಕ್ತಳಾಗಿ ಸಮಸ್ತೈಶ್ವರ್ಯದೊಡನೆ ಬಹು ಸಂಭ್ರಮದಿಂದ ಅನೇಕ ಸ್ತ್ರೀಯರನ್ನು ಕರೆದುಕೊಂಡು ದ್ರೌಪದಿಯ ದರ್ಶನಕ್ಕಾಗಿ ಬಂದಿರುವಳು'' ಎಂದು ಹೇಳಿದನು.

ಇಂತು ಭೀಮಾಗಮವೆಂಬ ಆರನೆಯ ಅಧ್ಯಾಯವು.

## ಏಳನೆಯ ಅಧ್ಯಾಯ

ಯೌವನಾಶ್ವನು ಬಂದ ಸಂಗತಿಯನ್ನು ಕೇಳಿ ಧರ್ಮರಾಜನು ಸಂತೋಷಪಟ್ಟು ಭೀಮಸನ್ನು ಕುರಿತು, "ಎಲೈ ಭೀಮನೇ! ನೀನು ದ್ರೌಪದಿಯ ಬಳಿಗೆ ಹೋಗಿ ಪ್ರಭಾವತಿಯನ್ನು ನೋಡುವುದಕ್ಕಾಗಿ ಅಲಂಕಾರಮಾಡಿಕೊಳ್ಳುವಂತೆ ತಿಳಿಸು" ಎಂದನು. ಭೀಮಸೇನನು ದ್ರೌಪದಿಯಿದ್ದೆಡೆಗೆ ಬರಲು, ಆಕೆಯು ಭೀಮನು ಬಂದುದನ್ನು ಕಂಡು ಹರ್ಷಿತಳಾಗಿ ನಿಂತು ಭೀಮನ ಸುಖಾಗಮನವನ್ನು ಕೇಳುತ್ತ, ಶಸ್ತ್ರಾಸ್ತ್ರಗಳಿಂದ ಗಾಯವಾಗಿದ್ದ ಆತನ ದೇಹವನ್ನು ನೋಡಿ ತಾನು ಕುಳಿತಿದ್ದ ಪೀಠವನ್ನು ಆತನಿಗೆ ಕೊಟ್ಟು ಕುಶಲ ಪ್ರಶ್ನೆ ಮಾಡಿ, ವೃಷಕೇತು ಮೇಘವರ್ಣರ ಕುಶಲವನ್ನೂ ಕೇಳಿದಳು. ಆಗ ಭೀಮನು, "ದೇವೀ! ಯೌವನಾಶ್ವನು ಪತ್ನೀ ಪುತ್ರಾದಿಗಳೊಡನೆಯೂ ಚತುರ್ಬಲಗಳೊಡನೆಯೂ ಬಹು ಸಂತೋಷದಿಂದ ಬಂದಿರುವನು. ಆತನ ಹೆಂಡಿತಿಯಾದ ಪ್ರಭಾವತಿಯು ಪೂಜ್ಯಳಾದ ನಿನ್ನ ದರ್ಶನಕ್ಕಾಗಿ ಸ್ತ್ರೀ ಸಹಸ್ರದೊಡನೆ ಇಲ್ಲಿಗೆ ಬರುವಳು. ಆದಕಾರಣ, ನೀನೂ ಅಲಂಕರಿಸಿಕೊಂಡು ನಿನ್ನ ಸಖಿಯರೊಡನೆ ಆ ದೊರೆಯನ್ನೆದುರುಗೊಳ್ಳುವುದಕ್ಕೆ ಹೋಗು. ಕೃಷ್ಣನು ದ್ವಾರಾವತಿಯನ್ನು ಬಿಟ್ಟು ಧರ್ಮರಾಜನ ಬಳಿಗೆ ಬಂದಿರುವನು. ಕೃಷ್ಣನನ್ನು ಬಿಟ್ಟು ನಿನಗೆ ಭೂಷಣವು ಹೇಗಾಗುವುದು? ಯೌವನಾಶ್ವನ ಹೆಂಡಿತಿಯು ಸಂಪೂರ್ಣೈಶ್ವರ್ಯವುಳ್ಳವಳು. ಆಕೆಗೆ ಸಮವಾಗಿಯೂ ನನಗೆ ಆಶ್ಚರ್ಯಕರವಾಗುವಂತೆಯೂ ಇರುವ ಅಂತಹ ರೂಪವು ನಿನಗೆ ಹೇಗುಂಟಾಗುವುದು?" ಎಂದನು.

ದ್ರೌಪದಿಯು ಆ ಮಾತನ್ನು ಕೇಳಿ, "ಎಲೈ ಪಾಂಡವನೇ! ಶ್ರೀಕೃಷ್ಣನು ನಮ್ಮ ಮನೆಯೊಳಗಿರುವನಷ್ಟೆ! ಅವರಿಂದಲೇ ನಮಗೆ ಎಲ್ಲ ಅಲಂಕಾರವೂ ಆಗುವುದಲ್ಲವೆ! ಹೊರಡೋಣ" ಎಂದಳು. ಬಳಿಕ, ಶ್ರೀಕೃಷ್ಣನು ಸಪರಿವಾರನಾಗಿ ಬಂದಿದ್ದ ಯೌವನಾಶ್ವನನ್ನು ಆದರಿಸಲು ಧರ್ಮರಾಜನೊಡನೆ ಹೊರಟನು. ಹೂಗಳಿಂದ ತುಂಬಿರುವ ಸಂಪಗೆಯ ಗಿಡಗಳು ಪ್ರಕಾಶಿಸುತ್ತಿದ್ದ ಒಂದು ಪ್ರದೇಶದಲ್ಲಿ ಯೌವನಾಶ್ವನು ವೃಷಕೇತುವನ್ನೂ ಯಜ್ಞಾಶ್ವವನ್ನೂ ನಿಲ್ಲಿಸಿಕೊಂಡು ಧರ್ಮರಾಜನ ಆಗಮನವನ್ನು ನಿರೀಕ್ಷಿಸುತ್ತ ಕಾದಿದ್ದನು. ಅಷ್ಟರಲ್ಲಿ, ನಾನಾ ವಾದ್ಯಗಳ ಧ್ವನಿಯಿಂದ ಭೂಮಿಯು ಕಂಪಿಸುವಂತಾಗಲು, ಧರ್ಮರಾಜನು ಬಂದು ಸಕಲ ಸೈನ್ಯದಿಂದ ಕೂಡಿದ್ದ ಯೌವನಾಶ್ವನನ್ನು ಕಂಡು ವಾಹನದಿಂದಿಳಿದು ದೊರೆಯನ್ನಾಲಿಂಗಿಸಿದನು. ಯೌವನಾಶ್ವನು ಧರ್ಮರಾಜನ ಕಾಲ್ಗೆರಗಲು, ಧರ್ಮನಂದನನು, "ಎಲೈ ರಾಜೇಂದ್ರನೇ! ನನಗೆ ಭೀಮಾದಿಗಳು ಹೇಗೋ ನೀನೂ ಹಾಗೆಯೇ; ಸಂದೇಹವಿಲ್ಲ. ನೀನು ಶ್ರೀಕೃಷ್ಣನ ದರ್ಶನವನ್ನು ಮಾಡು; ಪ್ರಭಾವತಿಯೂ ದ್ರೌಪದಿಯನ್ನೂ ಕುಂತಿಯನ್ನೂ ಕೂಡಲೆ ದರ್ಶನಮಾಡಲಿ" ಎಂದು ಹೇಳಿದನು.

ಯೌವನಾಶ್ವನು ಶ್ರೀಕೃಷ್ಣನನ್ನು ಕಂಡು ನಮಸ್ಕರಿಸಿ, ನಗೆ ಮೊಗದಿಂದ ಕೂಡಿ ಧರ್ಮರಾಜನು ಕೇಳುವಂತೆ, "ಎಲೈ ದೇವನೇ! ನಾನು ಧನ್ಯನಾದೆನು. ಶೂರರಾದ ಭೀಮಾದಿಗಳು ಮೂವರೂ ಯಾವುದನ್ನಪೇಕ್ಷಿಸಿ ನಮ್ಮ ಪುರಕ್ಕೆ

ಬಂದರೋ ಅಂತಹ ಈ ಯಜ್ಞಾಶ್ವವೂ ಧನ್ಯವಾಯಿತು. ಯುದ್ಧಭೂಮಿಯಲ್ಲಿ ಕರುಣಾಶಾಲಿಯಾಗಿದ್ದು ನನ್ನ ಪ್ರಾಣವನ್ನುಳಿಸಿದ ಈ ವೃಷಕೇತುವೂ ಧನ್ಯನು" ಎಂದು ಹೇಳಿ, "ನಿನ್ನೊಡನೆ ಸೇರಿ ಕುರುಕ್ಷೇತ್ರ ಯುದ್ಧದಲ್ಲಿ ಜಯವನ್ನು ಪಡೆದು ನಿನ್ನನ್ನು ಪಾಪಹಾರಕನೆಂದು ಲೋಕಕ್ಕೆಲ್ಲ ತೋರ್ಪಡಿಸಿದ ನಿನ್ನ ಮಿತ್ರನೂ ವೈಷ್ಣವಾಗ್ರಣಿಯೂ ಆದ ಆ ಅರ್ಜುನನೆಲ್ಲಿ?" ಎಂದು ಕೇಳಿದನು. ಪ್ರಭಾವತಿಯೂ ಸಹ ಕುಂತಿಯನ್ನೂ ದ್ರೌಪದೀ ರುಕ್ಮಿಣಿಯರನ್ನೂ ಆಲಿಂಗಿಸಿ ಹರ್ಷದಿಂದಿದ್ದಳು. ಆಗ ಅರ್ಜುನನು ಯೌವನಾಶ್ವನನ್ನು ಕುರಿತು, "ಅಯ್ಯಾ! ನಮಗೆ ನೀನು ಧರ್ಮರಾಜನು ಹೇಗೋ ಹಾಗೆ. ವೃದ್ಧನೂ ಪೂಜ್ಯನೂ ಆದ ನೀನು ದೈವವಶಾತ್ ನಮ್ಮ ಬಳಿಗೆ ಬಂದು ದರ್ಶನವನ್ನು ಕೊಟ್ಟೆ" ಎಂದು ಹೇಳಿದನು. ಸುವೇಗನೂ ಶ್ರೀಕೃಷ್ಣನೇ ಮೊದಲಾದವರೆಲ್ಲರಿಗೂ ನಮಸ್ಕಾರ ಮಾಡಿ, ಧರ್ಮರಾಜನನ್ನು ನೋಡಿ, "ಎಲೈ ರಾಜೇಂದ್ರನೇ! ನಮಗೆ ಶ್ರೀಕೃಷ್ಣನ ದರ್ಶನವನ್ನು ಮಾಡಿಸಿದ ಈ ಮಹಾತ್ಮನಾದ ವೃಷಕೇತುವಿನ ಮಹಿಮೆಯನ್ನು ಎಷ್ಟೆಂದು ಹೇಳಲಿ? ಶ್ರೀಕೃಷ್ಣನಿಲ್ಲದೆ ಮಾನವನು ಅನುಭವಿಸುವ ರಾಜ್ಯವೂ ಧನವೂ ದೇಹವೂ ಎಲ್ಲವೂ ಶ್ಮಶಾನಕ್ಕೆ ಸಮಾನವು. ಆದಕಾರಣ, ನಿನ್ನ ಪಾದಪದ್ಮವನ್ನು ಇನ್ನು ಬಿಟ್ಟಿರಲಾರೆನು. ಯಜ್ಞಾರ್ಥವಾಗಿ ಈ ಕುದುರೆಯನ್ನು ಬಿಡಿಸು" ಎಂದನು.

ಬಳಿಕ ಶ್ರೀಕೃಷ್ಣನು ಅವನ ಮಾತನ್ನು ಕೇಳಿ ಹರ್ಷಿತನಾಗಿ ಅವನೊಡನಿದ್ದ ವೃಷಕೇತುವನ್ನಾಲಿಂಗಿಸಿ, ಧರ್ಮನಂದನನೊಡನೆ ಪಟ್ಟಣಕ್ಕೆ ಹೋಗಿ ಒಂದು ತಿಂಗಳಿದ್ದು ಧರ್ಮರಾಜನನ್ನು ಕುರಿತು, "ಎಲೈ ಮಹಾರಾಜನೇ! ಚೈತ್ರ ಶುದ್ಧ ಪೌರ್ಣಿಮೆಯು ಸಮೀಪವಾಯಿತು. ಯಜ್ಞ ಮಾಡಬೇಕಾದ ಕಾಲವು ಇನ್ನೂ ಹನ್ನೊಂದು ತಿಂಗಳ ದೂರದಲ್ಲಿರುವುದು; ಆದಕಾರಣ, ಯಾದವರ ಬಳಿಗೆ ದ್ವಾರಾವತಿಗೆ ಹೊರಡುವೆನು; ಅಲ್ಲಿ ನನ್ನನ್ನು ಬಿಟ್ಟರೆ ರಕ್ಷಕರು ಯಾರೂ ಇಲ್ಲ; ನಾನು ಅಲ್ಲಿಗೆ ಹೋದರೆ ಯಾದವರೆಲ್ಲ ಸಂತುಷ್ಟರಾಗುವರು. ಯಜ್ಞಕಾಲದವರೆಗೂ ಯೌವನಾಶ್ವನೊಡನೆ ಈ ಕುದುರೆಯನ್ನು ರಕ್ಷಿಸಿಕೊಂಡಿರು. ನೀನು ಮಾಡುವ ಅಶ್ವಮೇಧ ಯಜ್ಞಕ್ಕೆ ನಮ್ಮೆಲ್ಲರನ್ನೂ ಕರೆದಿರುವೆಯಷ್ಟೆ! ಬೇಗನೆ ಬರುವೆವು; ಹಾಗೆ ಮಾಡು" ಎಂದನು.

ಅದನ್ನು ಕೇಳಿ, ಧರ್ಮನಂದನನು ಕೃಷ್ಣನ ಅಭಿಪ್ರಾಯವನ್ನು ತಿಳಿದು, ಅವನ ಇಷ್ಟಾನುಸಾರವಾಗಿ ಸಮ್ಮತಿಸಿದನು. ಶ್ರೀಕೃಷ್ಣನು ಪ್ರಯಾಣ ಮಾಡಲು, ಧರ್ಮಪುತ್ರನು ವ್ಯಾಸ ಸಮೇತನಾಗಿ ಯೌವನಾಶ್ವನಿಂದಲೂ ತನ್ನ ತಮ್ಮಂದಿರಿಂದಲೂ ಕೂಡಿ ಕುದುರೆಯನ್ನು ರಕ್ಷಿಸುತ್ತಿದ್ದನು. ನೂರೆಯು ಸಭಾಮಂಟಪವನ್ನು ಕಟ್ಟಿಸಿ, ಸಭೆಯಲ್ಲಿ ವ್ಯಾಸನನ್ನು ಕುರಿತು ಮರುತ್ತ ರಾಜನ ವೃತ್ತಾಂತವನ್ನು ಕೇಳಿದನು. ವ್ಯಾಸನು ಇಂತೆಂದು ಹೇಳಿದನು:—"ಪೂರ್ವದಲ್ಲಿ ಮರುತ್ತನು ಮಹಾ ಯಜ್ಞವನ್ನು ಮಾಡಬೇಕೆಂದು ದೇವಗುರುವನ್ನು ಕರೆಯಿಸಿ ಕೇಳಲು, ಮನುಷ್ಯನಿಗೆ ಯಜ್ಞವನ್ನು ಮಾಡಿಸಕೂಡದೆಂದು ಇಂದ್ರನು ತಡೆದನು. ಬಳಿಕ ಮರುತ್ತನು

ಸಂವರ್ತನೆಂಬ ಮುನಿಯ ಸಹಾಯದಿಂದ ಯಜ್ಞವು ಸಾಂಗವಾಗಿ ನೆರವೇರುವುದೆಂಬುದನ್ನು ನಾರದನಿಂದ ತಿಳಿದು, ಆ ಮುನಿಯ ಬಲದಿಂದ ವರವನ್ನು ಪಡೆದು, ಇಂದ್ರಾಗ್ನಿಗಳನ್ನು ತಡೆದು, ಯಜ್ಞವನ್ನು ಪೂರಯಿಸಿ ಅವಭೃಥ ಸ್ನಾನ ಮಾಡಿ ಸ್ವರ್ಗಕ್ಕೆ ಹೋದನು" ಎಂದು ಹೇಳಿದನು. ಬಳಿಕ, ಯುಧಿಷ್ಠಿರನು ಪರಿಶುದ್ಧಗಳಾದ ಅನೇಕ ಧರ್ಮಗಳನ್ನು ವ್ಯಾಸರಿಂದ ಕೇಳಿ ತಿಳಿದುಕೊಂಡನು.

ಇಂತು ಮರುತ್ತ ಯಜ್ಞ ಕಥನವೆಂಬ ಏಳನೆಯ ಅಧ್ಯಾಯವು.

---

## ಎಂಟನೆಯ ಅಧ್ಯಾಯ

ಹೀಗೆ ಅನೇಕ ಧರ್ಮಗಳನ್ನು ವ್ಯಾಸರಿಂದ ತಿಳಿದು, ಧರ್ಮನಂದನನು ಆತನನ್ನು ಕುರಿತು, "ಎಲೈ ವ್ಯಾಸ ಮಹಾಮುನಿಯೇ! ಸಂಸಾರ ಭಯ ಭೀತರಾದವರು ಇಹ ಪರ ಸೌಖ್ಯಗಳನ್ನು ಪಡೆಯಲು ಏನು ಮಾಡಬೇಕು? ಭಗವಂತನಾದ ವಾಸುದೇವನನ್ನು ತುಷ್ಟಿಗೊಳಿಸುವ ಬಗೆ ಹೇಗೆ?" ಎಂದು ಕೇಳಲು, ಅದಕ್ಕೆ ವ್ಯಾಸ ಮುನಿಯು, "ಅಯ್ಯಾ ಧರ್ಮರಾಜನೇ! ಬ್ರಾಹ್ಮಣನು ಧರ್ಮಶಾಸ್ತ್ರಗಳನ್ನರಿತು, ಅಕಾರ್ಯವನ್ನು ಮಾಡದೆ ಶುಭ ಕರ್ಮಗಳನ್ನು ಮಾಡುತ್ತ ಬಂದರೆ ಇಹ ಪರ ಲೋಕಗಳಲ್ಲಿ ಸುಖಪಡುವನು. ಕ್ಷತ್ರಿಯನಾದವನು ಪರಾಪವಾದಕ್ಕೆ ಹೆದರಿ, ಪರಸ್ತ್ರೀಯನ್ನು ಬಯಸದೆಯೂ ಅವಳ ಮಾತನ್ನು ಕೇಳದೆಯೂ ಅವಳ ಸಂಗ ಮಾಡದೆಯೂ ಇರುತ್ತ, ಸರ್ವ ಧರ್ಮಗಳನ್ನೂ ತಿಳಿದವನಾಗಿಯೂ ಉದಾರನಾಗಿಯೂ ಆತ್ಮವಂತನಾಗಿಯೂ ಯುದ್ಧ ಪರಾಯಣನಾಗಿಯೂ ಇದ್ದು ಯುದ್ಧ ಮುಖದಲ್ಲಿ ಪ್ರಾಣವನ್ನು ಬಿಟ್ಟರೆ ಇಹ ಪರಗಳಲ್ಲಿ ಕೀರ್ತಿಯನ್ನೂ ಸುಖವನ್ನೂ ಹೊಂದುವನು. ವೈಶ್ಯನು ಧನಿಕನಾಗಿಯೂ ಸತ್ಯಸಂಧನಾಗಿಯೂ ಅತಿಥಿ ಸತ್ಕಾರ ಮಾಡುವವನಾಗಿಯೂ ಗೋ ಸೇವಾ ತತ್ಪರನಾಗಿಯೂ ಪ್ರಾಣಿ ದಯಾಪರನಾಗಿಯೂ ದೇವತಾ ಸೇವೆಯಲ್ಲಿ ಆಸಕ್ತನಾಗಿಯೂ ಇದ್ದರೆ ಇಹ ಪರ ಸುಖಗಳನ್ನನುಭವಿಸುವನು. ಶೂದ್ರನು ಶ್ರದ್ಧೆಯಿಂದ ಬ್ರಾಹ್ಮಣ ಸೇವೆ ಮಾಡುತ್ತ ಅವರಿಗೆ ಅವಮಾನ ಮಾಡದೆ ದೇವರ ಭಜನೆಯನ್ನು ಮಾಡುತ್ತಿದ್ದರೆ ಯಶಸ್ವಿಯಾಗುವನು.

ವಿಧವೆಯು ಕಾಮ ಭೋಗಗಳನ್ನನುಭವಿಸುತ್ತ ಹಿರಿಯರನ್ನು ಧಿಕ್ಕರಿಸಿ ದುಷ್ಟಳೆನಿಸಿಕೊಂಡು ಪರ ಪುರುಷಾಸಕ್ತಳಾಗಿಯೂ ಧನಾಢ್ಯಳಾಗಿಯೂ ರೆಕ್ಕೆ ಬಂದ ಸರ್ಪದಂತಿದ್ದರೆ ಆ ರಂಡೆಯು ದೇಹ ವಿಕ್ರಯ ದೋಷದಿಂದ ತಾನೂ ತನ್ನ ಗಂಡನೊಡನೆ ದುರ್ಗತಿಗೆ ಬೀಳುವಳು; ಅವಳಲ್ಲಿ ಅನುರಕ್ತನಾದ ಪುರುಷನೂ ನರಕ ಭಾಜನನಾಗುವುದರಲ್ಲಿ ಸಂದೇಹವಿಲ್ಲ. ಸ್ನಾನ ಶುದ್ಧಳಾಗಿಯೂ ತನ್ನ ಪತಿಯ ಇಷ್ಟಾನುಸಾರವಾಗಿ ಭೋಜ್ಯ ಪಾನೀಯ ಚಂದನ ತಾಂಬೂಲ ಶಯ್ಯಾಸನಗಳುಳ್ಳವಳಾಗಿಯೂ, ಧರ್ಮ ಪರಾಯಣಳಾಗಿ ಗೃಹ ಕಾರ್ಯಗಳನ್ನು ಸರಿಯಾಗಿ ನಿರ್ವರ್ತಿಸುತ್ತ ಅತ್ತೆ ಮಾವಂದಿರಿಗೆ ನಮಸ್ಕರಿಸಿ ಅಕ್ಕನನ್ನೂ ಭಾವನನ್ನೂ ಅನುಸರಿಸಿ

ನಡೆಯುತ್ತಿರುವ ಸ್ತ್ರೀಯು ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಪಡೆವಳು. ಪತಿ ಸಂಬಂಧಕ್ಕೆ ಹಾನಿಯನ್ನುಂಟುಮಾಡುವ ಹೆಂಗುಸು ಪೂರ್ವ ಜನ್ಮದ ದುರ್ಯೋಗದಿಂದ ಕಪ್ಪು ಬಣ್ಣದ ದಪಡೆ ನಾಲಗೆಗಳನ್ನು ಪಡೆದು ತನ್ನ ಬೆರಲಿನಿಂದ ಯಾವಾಗಲೂ ನೆಲವನ್ನು ಮುಟ್ಟುತ್ತಿರುವ ದುರ್ಲಕ್ಷಣವುಳ್ಳವಳಾಗಿರು ವಳು. ಅಂತಹವಳ ಸಂಬಂಧವು ಅವಳ ಪತಿಗೆ ಪೂರ್ವದ ದುಷ್ಕರ್ಮ ವಶದಿಂದಲೇ ಉಂಟಾಗುವುದು. ಈ ದುರ್ಲಕ್ಷಣವುಳ್ಳ ಹೆಂಗುಸು ತಂದೆಯ ಮನೆಯಲ್ಲಿಯೇ ಇರಬೇಕು, ಅನ್ಯರ ಮನೆಗೆ ಹೋಗಕೂಡದು. ಕೊಳೆಯಿಂದ ಮಲಿನವಾದ ಜಡೆ ಯುಳ್ಳವಳಾಗಿಯೂ ಪಾಪಿಷ್ಠಳಾಗಿಯೂ ಅನಾಚಾರವುಳ್ಳವಳಾಗಿಯೂ ತಿಂಡಿ ಪೋತಳಾಗಿಯೂ ಇರುವ ಹೆಂಗುಸು ಸುಖ ಹೊಂದಳು.

"ಹೆಂಗುಸಿಗೆ ಬಾಲ್ಯದಲ್ಲಿ ತಂದೆಯೂ ಯೌವನದಲ್ಲಿ ಪತಿಯೂ ಮುಪ್ಪಿನಲ್ಲಿ ಮಗನೂ ರಕ್ಷಕರು. ಅವಳಿಗೆ ಸ್ವಾತಂತ್ರ್ಯವು ಸುಖಕರವಲ್ಲ. ವಿಧವೆಯು ಕೃಚ್ಛ್ರ, ಅತಿ ಕೃಚ್ಛ್ರ, ಪರಾಕ ಮೊದಲಾದ ವ್ರತ ವಿಶೇಷದಿಂದ ದೇಹ ಶೋಷಣೆಮಾಡುತ್ತ ಬಂದರೆ ಇಹ ಪರದಲ್ಲಿ ಸುಖಪಡುವಳು; ಅವಳು ತೀರ್ಥ ಯಾತ್ರೆಗಳನ್ನೂ ಶುಭ ವ್ರತಗಳನ್ನೂ ಮಾಡಿದರೆ ನರಕ ಭಾಜನಳಾಗುವಳು. ಅವಳು ಉಪವಾಸಾದಿಗಳಿಂದ ನಿತ್ಯವೂ ದೇಹ ಶೋಷಣೆ ಮಾಡುತ್ತ ಶಾಂತಿಯನ್ನು ಸಂಪಾದಿಸಬೇಕು. ಸ್ತ್ರೀಯ ರಿಗೆ ದುರಾಚಾರದಿಂದ ಬಹಳ ದೋಷವುಂಟಾಗುವುದು. ಸ್ತ್ರೀಯರಲ್ಲಿ ಎಂದಿಗೂ ನಂಬಿಕೆಯನ್ನಿಡಬಾರದು; ಒಬ್ಬನನ್ನಾಶ್ರಯಿಸಿ ಮತ್ತೊಬ್ಬನಲ್ಲಿ ಮನಸ್ಸುಳ್ಳವರ ನಂಬಿಕೆಯು ಸುಖಪ್ರದವಲ್ಲ. ಯಾವಳು ಅಡಿಗಡಿಗೆ ನಗುತ್ತಲೂ ಮಕ್ಕಳನ್ನು ಮುದ್ದಿಸುತ್ತಲೂ ಗಂಡುಸನ್ನು ನೋಡಿದ ಕೂಡಲೆ ಜಾರಿ ಓಡುತ್ತಲೂ ಮಧುರ ಸ್ವರದಿಂದ ಹಾಡುತ್ತಲೂ ಮೇಲು ಹೊದಿಕೆಯಿಲ್ಲದೆ ಕಿವಿಯನ್ನೂ ತಲೆಯನ್ನೂ ನಡುವನ್ನೂ ಕೆರೆಯುತ್ತಲೂ ಅಕಾರಣವಾಗಿ ನಗುತ್ತಲೂ ಇರುವಳೋ ಅವಳನ್ನು ವ್ಯಭಿಚಾರಿಣಿಯೆಂದು ತಿಳಿಯಬೇಕು. ನಿಷ್ಕಾರಣವಾಗಿ ಪರ ಗೃಹಕ್ಕೆ ಹೋಗುತ್ತಲೂ ಪರ ಪುರುಷನನ್ನು ನೋಡುತ್ತಲೂ ದೂತಿಯನ್ನು ತನ್ನ ತಾಯಿಯಂತೆ ಭಾವಿಸಿ ಅವಳಲ್ಲಿ ಹೆಚ್ಚಾದ ಪ್ರೀತಿಯನ್ನಿಡುತ್ತಲೂ ಇರುವವಳು, ಹೂವಾಡಿಗಿತ್ತಿ, ಕ್ಷೌರಕಿ, ನರ್ತಕಿ, ಸಂನ್ಯಾಸಿನಿ, ವೀಳಯದೆಲೆಯನ್ನು ಮಾರುವವಳು, ಸೈರಂಧ್ರಿ, ದಾಸಿ, ವಿಧವೆ, ಪತಿಹೀನಳಾಗಿಯೂ ಪ್ರಸೂತಿಯುಳ್ಳವಳು, ಕಾಪಾಲಿಕೆ, ವ್ಯಭಿಚಾರಿಣಿ— ಇಂತಹವರ ಸಹವಾಸದಿಂದ ಸಂತೋಷಪಡುವ ಸ್ವಭಾವವು ತನ್ನ ರಾಣಿಯ ದಾಗಿದ್ದರೆ ಅದನ್ನು ತಿಳಿದು ರಾಜನು ಅಂತಹ ಸಂಗವನ್ನು ಬಿಡಿಸುವುದಕ್ಕೆ ಯತ್ನಿಸ ಬೇಕು.

"ಹೊಟ್ಟೆಕಿಚ್ಚು, ಚಾಡಿ, ನಾಸ್ತಿಕತೆ, ಮೋಸ—ಇವುಗಳುಳ್ಳವನು ದೊರೆಯ ಬಳಿಯಲ್ಲಿ ಸೇರಿದರೆ ಪ್ರಜೆಗಳಿಗೆ ಸುಖವಿಲ್ಲ. ಎಲೈ ಧರ್ಮನಂದನನೆ! ನೀನು ಚೆನ್ನಾಗಿ ಪ್ರಜಾ ಪಾಲನೆಯನ್ನು ಮಾಡು; ಪ್ರಜಾ ನಷ್ಟವಾದರೆ ರಾಜನು ನಾಶಹೊಂದುವನು. ಯಾವ ರಾಜನ ಬ್ರಾಹ್ಮಣಾದಿ ಪ್ರಜೆಗಳು ಧರ್ಮಾಚರಣೆಯೂ

ದೈವ ಚಿಂತನೆಯೂ ಇಲ್ಲದಿರುವರೋ ಅಂತಹವರನ್ನು ನಾಸ್ತಿಕರನ್ನಾಗಿಯೂ ಸರ್ವ ಧರ್ಮ ಬಹಿಷ್ಕೃತರನ್ನಾಗಿಯೂ ತಿಳಿಯಬೇಕು; ಅಂತಹವರ ಬಳಿಯಲ್ಲಿ ಕುಳಿತು ಕೊಳ್ಳುವುದನ್ನೂ ಅವರ ಸ್ಪರ್ಶವನ್ನೂ ಮನಸ್ಸಿನಲ್ಲಿಯೂ ನೆನೆಯಬಾರದು. ಮುಕ್ತಿ ದಾಯಕನಾದ ಶ್ರೀಹರಿಯನ್ನು ಯಾರು ಆರಾಧಿಸುವರೋ ಅವರು ದೇವತೆಗಳಿಗೆ ಸಮಾನರು. ತನ್ನ ಭಕ್ತನು ಚಂಡಾಲನಾದರೂ ಶ್ರೀಹರಿಯು ಅವನಲ್ಲಿ ಪ್ರೀತಿ ಯಿಡುವನು.”

ಇಂತು ವ್ಯಾಸ ವಾಕ್ಯವೆಂಬ ಎಂಟನೆಯ ಅಧ್ಯಾಯವು.

---

## ಒಂಬತ್ತನೆಯ ಅಧ್ಯಾಯ

ಬಳಿಕ ಧರ್ಮರಾಜನು ವ್ಯಾಸಮುನಿಯನ್ನು ಕುರಿತು, “ಸ್ವಾಮಿ! ಪ್ರಾಣಿಗಳ ಮನೆಯಲ್ಲಿ ಲಕ್ಷ್ಮಿಯು ಸ್ಥಿರವಾಗಿ ನೆಲಸುವ ಬಗೆ ಹೇಗೆ? ಗೋವಿಂದನೊಡನೆ ವಾಸ ಮಾಡುವುದು ಹೇಗೆ ಸಾಧ್ಯವಾಗುವುದು?” ಎಂದು ಪ್ರಶ್ನೆಮಾಡಲು ಅದಕ್ಕೆ ವ್ಯಾಸಮುನಿಯು, “ಎಲೈ ರಾಜೇಂದ್ರನೇ! ಕೇಳು: ಎಲ್ಲಿ ಸತ್ಯ, ಶುಚಿತ್ವ, ಭೂತ ದಯೆ—ಇವು ನೆಲಸಿರುವುವೋ ಅಲ್ಲಿ ಐಶ್ವರ್ಯ ಲಕ್ಷ್ಮಿಯೂ ಶ್ರೀಮನ್ನಾರಾಯ ಣನೂ ನೆಲಸಿರುವರು. ತಾಯಿ, ತಂದೆ, ಅಣ್ಣ, ಬಂಧುಗಳು—ಇವರನ್ನು ಯಾರು ಆದರಿಸುತ್ತಿರುವರೋ ಅಂತಹವನ ಮನೆಯಲ್ಲಿಯೂ, ಪತಿ ಪರಾಯಣಳಾದ ಪತ್ನಿಯೂ ಕ್ರೋಧಕ್ಕೊಳಗಾಗದ ಪತಿಯೂ ಇರುವೆಡೆಯಲ್ಲಿಯೂ, ಸುಳ್ಳು ಸಾಕ್ಷ್ಯವನ್ನು ಹೇಳದೆಯೂ ಕೃತಜ್ಞನಾಗಿಯೂ ಇರುವವನಲ್ಲಿಯೂ, ಸಂಬಂಧನನ್ನು ಪಿತ್ರಾರ್ಜಿತ ಧನದಲ್ಲಿ ಲೋಭವುಳ್ಳವನಾಗಿ ವಂಚಿಸದವನು, ಭಕ್ತಿಶ್ರದ್ಧೆಯಿಂದ ಕರ್ಮವನ್ನಾಚರಿಸುವವನು, ದಾನ ಮಾಡಿ ಅದನ್ನು ಹೇಳಿಕೊಳ್ಳದವನು, ಯುದ್ಧ ದಲ್ಲಿ ಪರಾಕ್ರಮವನ್ನು ತೋರಿಸಿ ಅದನ್ನು ಹೊಗಳಿಕೊಳ್ಳದವನು, ಪರ ಸ್ತ್ರೀಯನ್ನು ತಾಯಿಯಂತೆ ಭಾವಿಸಿ ನಮಸ್ಕರಿಸುವವನು, ವನ, ಕೊಳ, ಬಾವಿ, ಕೆರೆ, ಮಠ, ಸತ್ರ, ದೇವಸ್ಥಾನ, ಅಗ್ರಹಾರ—ಇವುಗಳನ್ನು ಕಟ್ಟಿಸಿದವನು, ಕನ್ಯಾದಾನ ವನ್ನೂ ತೀರ್ಥ ಯಾತ್ರೆಯನ್ನೂ ದಾನ ಧರ್ಮಗಳನ್ನೂ ಸರ್ವದಾ ಮಾಡುತ್ತಿರುವವನು, ಪಾಪ ಕಾರ್ಯ ಮಾಡದವನು—ಇಂತಹ ನರಶ್ರೇಷ್ಠನನ್ನು ಲಕ್ಷ್ಮಿಯು ಆಶ್ರಯಿಸು ವಳು. ದುಷ್ಟನೂ, ಚಾಡಿಕೋರನೂ, ಶೂದ್ರ ಸ್ತ್ರೀ ಸಂಗ ಮಾಡುವವನೂ, ಜೂಜಾಡುವವನೂ—ಇವರನ್ನು ಲಕ್ಷ್ಮಿಯು ಬಿಟ್ಟುಹೋಗುವಳು.

“ಎಲೈ ದೊರೆಯೇ! ನಿನಗೆ ದ್ಯೂತದಲ್ಲಿ ಬಹಳ ಇಷ್ಟವು. ರಾಜಬಂಧು ಗಳೆಲ್ಲರೂ ಬೇಡವೆಂದು ತಡೆದರೂ ಬಿಡದೆ ನೀನು ಅಲ್ಪರಾದ ದುರ್ಯೋಧನಾದಿಗಳೊಡನೆ ಪಗಡೆಯ ಜೂಜನ್ನಾಡಿದೆ. ಅಧಮರಾದ ಕೌರವರು ಗೆದ್ದರೆಂದು ಸೂಚಿಸುವ ಅಶುಭವನ್ನು ಹೇಳಿದಾಗಲೇ ನಾನು ಕೌರವರಿಗೆ ನಾಶವು ಸಿದ್ಧವೆಂದು ತಿಳಿದು ಕೊಂಡೆನು. ದ್ಯೂತದೋಷದಿಂದ ನೀನು ಐಶ್ವರ್ಯ ಹೀನನಾದೆ. ಸರ್ವದಾ ಪರಾನ್ನ

ಭೋಜನದಲ್ಲಿ ಲಂಪಟನಾದವನು, ಮದ್ಯಪಾನದಿಂದ ಮದಿಸಿರುವವನು, ಜೇಟಿಯಲ್ಲಿಯೇ ಆಸಕ್ತಿಯುಳ್ಳವನು, ಸುಜನರನ್ನು ನಿಂದಿಸುವವನು, ತೋಟ ಮೊದಲಾದುವುಗಳನ್ನು ಕಡಿಸಿಹಾಕುವವನು, ಸುವರ್ಣಾದಿ ಲೋಹಗಳು, ಧಾತು ವಸ್ತು, ರಸಗಳು, ಧಾನ್ಯ, ಪುಸ್ತಕ, ಹುಲ್ಲು, ಸೌದೆ, ಹಣ್ಣು, ಇವುಗಳನ್ನು ಕದಿಯುವವನು —ಇವರೆಲ್ಲರೂ ಐಶ್ವರ್ಯ ಹೀನರಾಗುವರು. ಅಮಾವಾಸ್ಯೆ, ಸಂಕ್ರಮಣ, ವೈಧೃತಿ, ವ್ಯತೀಪಾತ, ಪಿತೃ ಶ್ರಾದ್ಧ ದಿನ, ತೀರ್ಥ ಯಾತ್ರಾ ದಿನ—ಇಂತಹ ಕಾಲಗಳಲ್ಲಿ ಸ್ತ್ರೀ ಸಂಗ ಮಾಡುವವನನ್ನು ಲಕ್ಷ್ಮಿ ಬಿಡುವಳು. ಈ ಧರ್ಮಗಳನ್ನೆಲ್ಲ ನಿನಗೆ ಹೇಳಿದ್ದೇನೆ; ಮುಂದೆಯೂ ಹೇಳುವೆನು ಕೇಳು: ಯಜ್ಞವು ನೆರವೇರುವುದಕ್ಕಾಗಿ ಶ್ರೀಕೃಷ್ಣನನ್ನು ಕರೆಯಿಸು; ಆತನನ್ನು ಬಿಟ್ಟು ವಾಸ ಮಾಡುವುದು ನಿನಗೆ ಸುಖಕರವಾಗುವುದಿಲ್ಲ" ಎಂದು ಹೇಳಿದನು.

ಆ ಮುನಿಯ ಮಾತನ್ನು ಕೇಳಿ ವಿನಯ ಸಂಪನ್ನನಾದ ಧರ್ಮನಂದನನು ಭೀಮನನ್ನು ಕುರಿತು, "ಎಲೈ ಭೀಮನೇ! ನೀನು ನನ್ನ ಅಪ್ಪಣೆಯ ಪ್ರಕಾರ ಈಗಲೇ ಕೃಷ್ಣನ ಬಳಿಗೆ ಹೋಗು; ಪುತ್ರ ಪೌತ್ರ ಸಮೇತನಾದ ಶ್ರೀಕೃಷ್ಣನನ್ನೂ, ಯಶೋದೆ, ದೇವಕಿ, ಸತ್ಯಭಾಮೆ, ರುಕ್ಮಿಣಿಯರನ್ನೂ ಕರೆದುಕೊಂಡುಬಾ" ಎಂದನು. ಅದನ್ನು ಕೇಳಿ ಭೀಮನು ಧರ್ಮರಾಜನಿಗೆ ನಮಸ್ಕರಿಸಿ ದ್ವಾರಕೆಗೆ ಹೊರಟು, ಮಾರ್ಗದಲ್ಲಿ ದೊರೆತ ನಾನಾ ದೇಶಗಳನ್ನೂ, ರಮ್ಯವಾದ ಅನೇಕ ವನಗಳನ್ನೂ, ಶಿಖರಗಳಿಂದ ರಮ್ಯವಾದ ಪರ್ವತಗಳನ್ನೂ, ವೇಗವಾಗಿ ಹರಿಯುತ್ತಿರುವ ವಿಸ್ತಾರವಾದ ನದಿಗಳನ್ನೂ ದಾಟಿ, ಬೇಗ ಪ್ರಯಾಣ ಮಾಡಿ ದೂರದಿಂದ ದ್ವಾರಕಾ ಪಟ್ಟಣವನ್ನು ಕಂಡನು. ಆ ಪುರವು ಅನೇಕ ಸುವರ್ಣ ಕಲಶಗಳಿಂದಲೂ ತೋರಣಗಳಿಂದಲೂ ಗಂಧೋದಕವನ್ನು ಚೆಲ್ಲಿರುವ ಬೀದಿಗಳಿಂದಲೂ ಧನವಂತರಾಗಿ ಸಂತೋಷದಿಂದಿರುವ ಪುರವಾಸಿಗಳಿಂದಲೂ ಮೆರೆಯುತ್ತಿದ್ದಿತು. ಅದನ್ನು ಉಗ್ರಸೇನನು ಆಳುತ್ತಿದ್ದನು. ಬಗೆ ಬಗೆಯ ಗಿಡ ಬಳ್ಳಿಗಳಿಂದ ಪ್ರಕಾಶಿಸುತ್ತಿರುವ ಕ್ರೀಡಾ ವನಗಳು ಅಲ್ಲಿ ಶೋಭಿಸುತ್ತಿದ್ದುವು. ಕೋಟಿ ಕಂದಕಗಳಿಂದ ಮನೋಹರವಾಗಿದ್ದ ಆ ದ್ವಾರಕೆಯಲ್ಲಿ ವಾಸಿಸುತ್ತಿದ್ದ ಗರುಡ ಧ್ವಜನಾದ ಶ್ರೀಮನ್ನಾರಾಯಣನನ್ನು ಅಕ್ರೂರಾದಿ ಮಹಾ ಭಕ್ತರೂ ರುಕ್ಮಿಣೀ ಸತ್ಯಭಾಮೆ ಮೊದಲಾದ ಸ್ತ್ರೀಯರೂ ಪ್ರೀತಿಯಿಂದ ಸರ್ವದಾ ಸೇವಿಸುತ್ತಿದ್ದರು. ಹೀಗಿರುವ ಆ ದ್ವಾರಕಾ ಪುರವನ್ನು ಕಂಡು ಭೀಮನು ಬಹಳ ಸಂತೋಷಪಟ್ಟನು.

ಆ ಪುರದ ಹೊರ ಭಾಗದಲ್ಲಿರುವ ರಮ್ಯವಾದ ಸರೋವರದಲ್ಲಿ ಸ್ನಾನ ಮಾಡಿ ಆಹ್ನಿಕವನ್ನು ತೀರಿಸಿಕೊಂಡು ಭೀಮನು ಜೇರ ಬಾಗಿಲಿನಿಂದ ಪಟ್ಟಣವನ್ನು ಹೊಕ್ಕು ಶ್ರೀಕೃಷ್ಣನ ಮನೆಯನ್ನು ಸೇರಲು, ಆಗ ಶ್ರೀಕೃಷ್ಣನು ಅಲ್ಲಿ ಬಹು ಜನರೊಡನೆ ಕುಳಿತು ಭೋಜನ ಮಾಡುತ್ತಿದ್ದನು. ಆತನು ದೇವಕಿಯು ಕೊಟ್ಟ ಅರುವತ್ತು ನಾಲ್ಕು ಎಲೆಗಳನ್ನು ಕೂಡಿಸಿ ಮಾಡಿರುವ ಸುವರ್ಣ ಪಾತ್ರೆಯನ್ನು ತೆಗೆದುಕೊಂಡು ಭೋಜನಕ್ಕೆ ಕುಳಿತಿದ್ದನು. ಪಾತ್ರೆಯಲ್ಲಿ ಚಂದ್ರನಂತೆ ಬೆಳ್ಳಗೆ ಹೊಳೆಯುತ್ತಿರುವ

ಸಕ್ಕರೆಯನ್ನು ಹಾಕಿದ ಹೆಸರು ಬೇಳೆಯ ಪಾಯಸವನ್ನು ಬಡಿಸಿದ್ದರು. ಜೇನಿನ ರಸ, ಹಸಿಯ ಶುಂಠಿಯ ರಸ—ಇವುಗಳೊಡನೆ ಬಗೆ ಬಗೆಯ ಕಾಯಿಗಳನ್ನೂ ಬೇರುಗಳನ್ನೂ ಸೇರಿಸಿ ನಾನಾ ವಿಧವಾದ ಚಟ್ಟಣಿ, ಗೊಜ್ಜು, ಉಪ್ಪಿನ ಕಾಯಿ ಮೊದಲಾದ ವ್ಯಂಜನ ಪದಾರ್ಥಗಳನ್ನು ಮೂರು ಸಾಲಾಗಿ ಬಡಿಸಿದ್ದರು. ಬಾಳೆಯ ಹಣ್ಣು, ಸಕ್ಕರೆ, ಮೆಣಸು, ಹಿಪ್ಪಲಿ—ಇವುಗಳನ್ನೂ, ಕಾಯಿಸಿ ಸಕ್ಕರೆಯನ್ನೂ ತುಪ್ಪವನ್ನೂ ಕೂಡಿಸಿದ ಹಾಲನ್ನೂ ಯಶೋದೆಯು ಪ್ರೀತಿಯಿಂದ ಕೃಷ್ಣನಿಗೆ ಕೊಟ್ಟಳು. ಹಾಲು ಹಾಕಿ ಮಾಡಿದ ಪೂರಿಯನ್ನೂ, ದ್ರಾಕ್ಷೆ, ಕಮರಕದ ಹಣ್ಣು, ಮಾವಿನ ಹಣ್ಣು, ಮೆಣಸು, ಹಿಪ್ಪಲಿ, ಪಚ್ಚಕರ್ಪೂರ, ಏಲಕ್ಕಿ ಮೊದಲಾದುವುಗಳನ್ನು ಸೇರಿಸಿ ಪಕ್ವ ಮಾಡಿದುವುಗಳಾಗಿಯೂ, ಬಗೆ ಬಗೆಯ ಹೂಗಳ ಸುವಾಸನೆಯುಳ್ಳವುಗಳಾಗಿಯೂ ರಸವತ್ತಾಗಿಯೂ ಇರುವ ಲೇಹ್ಯ ವಸ್ತುಗಳನ್ನು ತಟ್ಟೆಯಲ್ಲಿ ಬಡಿಸಿದ್ದರು. ಗುಂಡಾಗಿರುವ ಮುಂಡಿಗೆಗಳನ್ನು ತುಪ್ಪ ಜೇನುತುಪ್ಪಗಳೊಡನೆ ಕೂಡಿಸಿ ಪಾತ್ರೆ ಯಲ್ಲಿಟ್ಟಿದ್ದರು. ಚಿನ್ನದಂತೆ ಹೊಂಬಣ್ಣವುಳ್ಳ ದಿವ್ಯವಾದ ಹಸುವಿನ ತುಪ್ಪವನ್ನು ಯಶೋದೆಯು ಕೃಷ್ಣನಿಗಾಗಿ ಪಾತ್ರೆಯಲ್ಲ ತಂದಿಟ್ಟಿರಲು, ಗೋಧಿಯ ಹಿಟ್ಟು, ಕರ್ಪೂರ—ಇವುಗಳು ಮಿಶ್ರವಾದ ಆ ತುಪ್ಪವು ಚಿನ್ನದ ಪಾತ್ರೆಯ ಕಾಂತಿಯಿಂದ ಕೂಡಿ ಸಮಾನ ವರ್ಣವುಳ್ಳದಾಗಿದ್ದುದರಿಂದ, ಆ ಪಾತ್ರೆಯು ಕಾಣಿಸದಂತಿದ್ದಿತು. ಪೂರಿ, ದೋಸೆ, ಅನಾರಸ, ಜಿಲೇಬಿ, ಬಟ್ಟಿ, ಸೇವಗೆ, ಜಾಜಿಯ ಹೂವಿನಾಕಾರವುಳ್ಳ ಭಕ್ಷ್ಯ, ಹಪ್ಪಳ ಮೊದಲಾದುವನ್ನೂ, ಕುಂಬಳಕಾಯಿ, ಉದ್ದು ಮೊದಲಾದುವು ಗಳಿಂದ ಮಾಡಿದ ಪಲ್ಯದಿಂದ ಕೂಡಿದ ದೋಸೆಯನ್ನೂ ಶ್ರೀಕೃಷ್ಣನು ಭೋಜನ ಮಾಡಿದನು. ಹಿಂಗು, ಹಸಿ ಶುಂಠಿ, ಮೆಣಸು, ಜಳಿಯ ಉಪ್ಪು—ಇವುಗಳನ್ನು ಸೇರಿಸಿ ಒಳ್ಳೆಣ್ಣೆಯಲ್ಲಿ ಮಾಡಿದ ಗೊಜ್ಜು ಮೊದಲಾದುವು, ಗಾಯವನ್ನು ಹೊಂದಿದ ದುರ್ಜನರಂತೆ, ಕುಂಕುಮ ವರ್ಣದಿಂದ ಕೂಡಿ ಸ್ನೇಹ ಹೀನವಾಗಿ ಹೊಳೆಯುತ್ತಿದ್ದುವು. ಹಾಲು ಮೊಸರಿನಿಂದಲೂ, ಹುಣಿಸೆ ಹಣ್ಣು, ಮಾವಿನ ಕಾಯಿ—ಇವುಗಳಿಂದಲೂ, ದ್ರಾಕ್ಷಾ ರಸದಿಂದಲೂ, ಸಾಸಿವೆ ಸಕ್ಕರೆ ಮೊದಲಾದುವುಗಳಿಂದಲೂ ಕೂಡಿ, ವಜ್ರ ದಂತೆಯೂ ಚಿನ್ನದಂತೆಯೂ ಹೊಳೆವ ಚಾರ ಪಪ್ಪು, ತೆಂಗಿನ ಕಾಯಿ, ಲವಂಗ— ಇವುಗಳಿಂದ ಕೂಡಿದ ನಾಲ್ಕು ಬಗೆಯ ರಸವುಳ್ಳ ವಸ್ತುಗಳೂ, ಇತರ ಬಂಜತ್ತು ಬಗೆಯ ಪದಾರ್ಥಗಳೂ ಸಿದ್ಧವಾಗಿದ್ದುವು.

ಹಾಲು, ತುಪ್ಪ, ಸಕ್ಕರೆ—ಇವುಗಳನ್ನು ಕೂಡಿಸಿ ಕಡಾಯಿಯಲ್ಲಿ ತುಂಬಿಟ್ಟಿ ದ್ದರು. ಸಕ್ಕರೆ, ಎಳ್ಳು ಪುಡಿ, ಕೆನೆ—ಇವುಗಳಿಂದ ಕೂಡಿದ ಸುಖೋಷ್ಣವುಳ್ಳ ಫೇಣಿ ಗಳನ್ನೂ, ಚಾರ ಪಪ್ಪು, ಸಕ್ಕರೆ, ಹಾಲು, ತುಪ್ಪ, ತೆಂಗಿನ ಕಾಯಿ, ಗಿಡಗಳ ರಸ, ಕಡಲೆ, ಎಳ್ಳು, ಕಡಲೆಯ ಬೇಳೆ ಮೊದಲಾದುವುಗಳಿಂದ ಮಾಡಿದ ಕಡುಬುಗಳನ್ನೂ, ಹಂದಿ, ಮೊಲ, ಜಿಂಕೆ, ಚಿತ್ತಲ, ಆಡು, ವಿಹಾನು, ಲಾವನ ಹಕ್ಕಿ, ತಿತ್ತಿರಿ ಮೊದಲಾದ ಜಲಚರ ಮೃಗ ಪಕ್ಷಿಗಳ ಶ್ರೇಷ್ಠವಾದ ಪಕ್ವ ಮಾಂಸಗಳನ್ನೂ, ಸೂರಣ ಗೆಡ್ಡೆ, ಬಿದಿರು ಬೇರು, ಲಕ್ಕಿಯ ಸೊಪ್ಪು, ದೇವದಾರುವಿನ ಬೇರು, ಹೇರಿಳೆ, ಪಡವಲ ಕಾಯಿ,

ಕೌಕುರಿ ಕಾಯಿ, ಸೌತೆ, ಬೇವಿನ ಕಾಯಿ, ಟೆಂಟೆಯ ಕಾಯಿ, ಲವಂಗ, ಬಿಲ್ವಪತ್ರೆಯ ಕಾಯಿ, ನೀರಕಲ್ಕ, ಶಿಲಾವಲ್ಕ, ಬದಿರು ಕಳಲೆ, ಕಾಯಫಲ, ನೆಲ್ಲಿಯ ಕಾಯಿ, ಬಾದಾಮಿ, ಹಿಪ್ಪಲಿ, ಮೆಣಸು, ಅಂಬಾಡಕ, ಮಾವು, ಹಲಸು, ಬಾಳೆ, ದ್ರಾಕ್ಷೆ ಮೊದಲಾದ ಬಗೆ ಬಗೆಯ ಕಾಯಿ ಬೇರು ಹಣ್ಣುಗಳನ್ನೂ ಬಿಳಿಯ ಸಾಸಿವೆಯ ಎಣ್ಣೆಯನ್ನೂ ಕರಿ ಸಾಸಿವೆಯನ್ನೂ ಸೇರಿಸಿ ಮೂರು ವರ್ಷ ಮಡಕೆಯಲ್ಲಿಟ್ಟಿದ್ದು ಮಾಗಿಸಿದ ಉಪ್ಪಿನ ಕಾಯಿ ಮುಂತಾದ ವ್ಯಂಜನಗಳನ್ನೂ ಸೇವಿಸುತ್ತ ಶ್ರೀಕೃಷ್ಣನು ಭುಂಜಿಸುತ್ತ ವಿನೋದವಾಗಿ ದೇವಕೀ ದೇವಿಯೊಡನೆ ಮಾತನಾಡುತ್ತಿದ್ದನು.

ಮನೋಹರವಾಗಿ ಶಬ್ದ ಮಾಡುತ್ತಿರುವ ಕೈಕಡಗ ಕಾಲ್ಕಡಗಗಳಿಂದಲೂ ಕೇಯೂರ ಹಾರಾದಿಗಳಿಂದಲೂ ಅಲಂಕೃತರಾಗಿ ಪಾರಿಜಾತ ಪುಷ್ಪಗಳನ್ನು ಮುಡಿದು ಕೃಷ್ಣನ ಪಾರ್ಶ್ವಗಳಲ್ಲಿ ನಿಂತು ಚಾಮರಗಳನ್ನು ಬೀಸುತ್ತ, ಒಬ್ಬರನ್ನೊಬ್ಬರು ನೋಡುತ್ತ, ನಸು ನಗುತ್ತ ರುಕ್ಮಿಣೀ, ಸತ್ಯಭಾಮಾ, ಲಕ್ಷ್ಮಣಾ, ಜಾಂಬವತಿಯರು ಬಗೆ ಬಗೆಯ ಕಥೆಗಳನ್ನು ಹೇಳುತ್ತ ಸೇವೆ ಮಾಡುತ್ತಿದ್ದರು. ಆಗ ಸತ್ಯಭಾಮೆಯು ನಗುತ್ತ ಶ್ರೀಕೃಷ್ಣನನ್ನು ಕುರಿತು, "ನೀನು ಗೋಪಾಲನಾಗಿದ್ದಾಗ ನಮ್ರತೆಯನ್ನು ತೋರಿಸಿ, ಕಾಸಿದ ಹಾಲನ್ನೂ ಮಜ್ಜಿಗೆಯನ್ನೂ ನೀರನ್ನೂ ಕುಡಿದು ಕಾಡಿಗೆ ಓಡಿ ಹೋಗಿ ಕಾಳಿಂದೀ ನದೀ ತೀರದಲ್ಲಿದ್ದ ಗೋಪಾಲಕರ ಬುತ್ತಿಯನ್ನಪಹರಿಸುತ್ತಿದ್ದುದನ್ನು ಮರೆತು ಈಗ ಗೋಪಾಲತ್ವವನ್ನು ಬಿಟ್ಟುದರಿಂದ ನಿನ್ನ ಭೋಜನವು ಒಳ್ಳೆಯ ಅಭ್ಯಾಸವುಳ್ಳುದಾಗಿ ಬಹಳ ಚೆನ್ನಾಗಿದೆ. ಈಗ ನೀನು ಧರ್ಮನಂದನನ ಸಹವಾಸದಿಂದ ಮನುಷ್ಯರ ನಡತೆಯನ್ನೆಲ್ಲ ಚೆನ್ನಾಗಿ ತಿಳಿದಿದ್ದೀಯೆ. ಚಾಮರಗಳಿಂದ ಬೀಸುತ್ತಿರುವ ರುಕ್ಮಿಣಿಯ ವೈಭವವನ್ನು ನೋಡು; ನನ್ನ ಪ್ರಾರಬ್ಧ ಕರ್ಮವು ನಿನ್ನ ಸೇವೆಯಿಂದ ಪರಿಹಾರವಾಗುವುದು. ಕರ್ಮಫಲವನ್ನನುಭವಿಸುತ್ತಿರುವ ನನ್ನನ್ನೂ ನನಗಿಂತಲೂ ಹೆಚ್ಚಿನ ಪಟ್ಟಮಹಿಷಿಯನ್ನೂ ಈಕೆಯು ನೋಡುವುದಿಲ್ಲ. ನಾನು ಮುಂದೆಯೇ ಸುಳಿದಾಡುತ್ತಿದ್ದರೂ ಕೃಷ್ಣನು ನನ್ನನ್ನು ತಡೆಮಾಡುವುದಿಲ್ಲ. ವೇದ ವಚನವನ್ನು ಕೇಳಿ ನನ್ನ ಮನಸ್ಸು ಆತನಲ್ಲಿ ಸರ್ವದಾ ವಿನೋದಿಸುತ್ತಿರುವುದು. ಆದಕಾರಣ ನಾನೂ ಆತನ ಸೇವೆಯನ್ನು ಯಾವಾಗಲೂ ಮಾಡುತ್ತಿರುವೆನು" ಎಂದು ಹೇಳಿದಳು.

ಅದನ್ನು ಕೇಳಿ ದೇವಕಿಯು, "ಎಲೈ ಸತ್ಯಭಾಮೆಯೇ! ಶ್ರೀಕೃಷ್ಣನ ವಿಷಯದಲ್ಲಿ ಹೀಗೆ ಹೇಳಲು ನಿನಗೆ ನಾಚಿಕೆಯಾಗುವುದಿಲ್ಲವೇ? ನಾನು ಅವನ ತಾಯಿ, ವಸುದೇವನು ಅವನ ತಂದೆ; ನಾವಿಬ್ಬರೂ ಅವನ ತುಷ್ಟ್ಯರ್ಥವಾಗಿ ಕೆಲಸ ಮಾಡುತ್ತಿರುವೆವು. ಪೂರ್ವದಲ್ಲಿ ನಾನು ವಿಶ್ವರೂಪನಾದ ಈತನನ್ನು ಸುಲಭವಾಗಿ ಗರ್ಭದಲ್ಲಿ ಧರಿಸಿದ್ದೆನು. ನಾನೂ ಈತನ ಸೇವೆಯನ್ನು ಮಾಡುತ್ತಿರುವೆನು. ನೀನು ನಾಚಿಕೆಯಿಲ್ಲದೆ ಹೇಳಿಕೊಳ್ಳುತ್ತಿರುವೆ. ಈತನು ನನ್ನ ಗರ್ಭಗತನಾದ ಕೂಡಲೆ ವೀರನಾದ ವಸುದೇವನಿಗೆ ಬಂಧನವುಂಟಾಯಿತು. ಅವನ ಕರ್ಮಫಲವನ್ನು ನೋಡು: ಶತ್ರು ಸಂಹಾರಕನಾಗಿದ್ದರೂ ಯಾರಿಗೂ ಗುರುತು ತಿಳಿಯದಂತೆ ಮರೆಯಲ್ಲಿ ಸೇರಿಕೊಂಡಿರಬೇಕಾಗಿ ಬಂದಿತು. ಆದಕಾರಣ, ಇವನ ತಂದೆಯೂ ತಾಯಿಯೂ ಹೆಂಡತಿಯೂ ಸುಖವನ್ನು

ನಡೆಯಲಿಲ್ಲ. ಲೋಕದಲ್ಲಿ ಮನುಷ್ಯರೆಲ್ಲರೂ ತಮ್ಮ ತಮ್ಮ ಕರ್ಮಾನುಗುಣವಾಗಿ ಜೀವಿಸುತ್ತಾರೆ. ಶ್ರೀಕೃಷ್ಣನನ್ನು ಯಾರು ಭಜಿಸುವರೋ ಅವರು ಸುಖಿಗಳಾಗುವರು" ಎಂದು ಹೇಳಿದಳು. ಅದಕ್ಕೆ ಸತ್ಯಭಾಮೆಯು ದೇವಕಿಯನ್ನು ನೋಡಿ "ಅಮ್ಮಾ! ನೀನು ಶ್ರೀಕೃಷ್ಣನೆದುರಿಗೆ ಚೆನ್ನಾಗಿ ಹೇಳಿದೆ. ಹಾಗಾದರೆ ಬ್ರಾಹ್ಮಣರೆಲ್ಲರೂ ಈತನನ್ನು ನಿನ್ನ ಮಗನೆಂದು ಹೊಗಳುತ್ತಿರಲು ಕಾರಣವೇನು? ಅಲ್ಲದೆ, ಇದೊಂದು ಸಂದೇಹವೂ ನನಗಿದೆ: ಮಹಾ ಪಾಪಗಳನ್ನು ನಾಶಮಾಡುವ ಈ ದೇವನು ನಿನ್ನ ಹೊಟ್ಟೆಯಲ್ಲಿದ್ದಾಗ, ನೀನು ಪಡುತ್ತಿರುವ ಕಷ್ಟಗಳನ್ನು ತಿಳಿದಿದ್ದರೂ, ನಿನಗೆ ಏಕೆ ದರ್ಶನವನ್ನು ಕೊಡಲಿಲ್ಲ? ನಾನು ನನ್ನ ಮನಸ್ಸಿನಲ್ಲಿಯೇ ಆತನನ್ನು ಧರಿಸಿರುತ್ತೇನೆ; ನನ್ನ ಮನಸ್ಸಿಗೆ ಗೋಚರನಾಗುತ್ತಿರುವನು. ಈತನು ನಿನ್ನ ಕರ್ಮಗಳನ್ನು ಪರಿಹರಿಸುವನು" ಎಂದು ಹೇಳಲು, ಅದನ್ನು ಕೇಳಿ ಶ್ರೀಕೃಷ್ಣನು ನಸು ನಗುತ್ತ ಅದಕ್ಕೆ ಉತ್ತರವನ್ನು ಹೇಳುವಷ್ಟರಲ್ಲಿ ಭೀಮನು ಅಲ್ಲಿಗೆ ಬಂದನು. ಅದನ್ನು ನೋಡಿ ಶ್ರೀಕೃಷ್ಣನು ಆ ವಿಷಯವನ್ನು ಸೈರಂಧ್ರೀ ವಿಷಯಕವಾದ ಮಾತಿಗೆ ತಿರುಗಿಸಿ, ಅದನ್ನು ಕೇಳಿ ಭೀಮನು ಏನು ಹೇಳುತ್ತಾನೋ ಕೇಳಬೇಕೆಂಬ ಕುತೂಹಲವುಳ್ಳವನಾಗಿದ್ದನು.

ಇಂತು ಭೀಮಾಗಮವೆಂಬ ಒಂಬತ್ತನೆಯ ಅಧ್ಯಾಯವು.

---

## ಹತ್ತನೆಯ ಅಧ್ಯಾಯ

ಶ್ರೀಕೃಷ್ಣನು ಮೊದಲಾಡುತ್ತಿದ್ದ ಮಾತನ್ನು ನಿಲ್ಲಿಸಿ ಬೇರೆಯಾದ ಮಾತನ್ನಾಡಲಾರಂಭಿಸಿದುದನ್ನು ತಿಳಿದು ಭೀಮನು ಅವಮಾನ ಹೊಂದಿದವನಂತಾಗಿ ನಗುತ್ತ, ಮೇಘದಂತೆ ಗಂಭೀರವಾದ ಧ್ವನಿಯಿಂದ, "ಶ್ರೀಕೃಷ್ಣನು ನನ್ನನ್ನು ಕಡೆಗಣಿಸಿ ಸೈರಂಧ್ರಿಯಂತೆ ಅಯೋಗ್ಯವಾದ ಸ್ಥಳದಲ್ಲಿ ಕುಳಿತು ಭೋಜನಮಾಡುತ್ತಿರುವನಷ್ಟೆ! ಏಕೆ ಹೀಗೆ ಮಾಡುತ್ತಿರುವನು? ದೇವಕಿ ಸತ್ಯಭಾಮೆಯರಲ್ಲಿ ಯಾರಾದರೂ ಮೃತರಾದರೇ? ದೇಶದಲ್ಲಿ ಸರಿಯಾಗಿ ಮಳೆಯಾಗದೆ ಧಾನ್ಯಗಳು ತಗ್ಗಾಗಿ ಬರಗಾಲವು ಬಂದಿದೆಯೇ? ಅಥವಾ, ಇವನ ಮಕ್ಕಳು ಮೊಮ್ಮಕ್ಕಳನ್ನು ರಾಕ್ಷಸರು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋದರೇ? ಈತನು ಸ್ತ್ರೀಯರೊಡನೆ ಕುಳಿತು ಭೋಜನಮಾಡುತ್ತಿರಲು ಕಾರಣವೇನು?" ಎಂದು ಕೇಳಿದನು. ಶ್ರೀಕೃಷ್ಣನು ಆ ಮಾತನ್ನು ಕೇಳಿ ವಿನೋದಾರ್ಥವಾಗಿ, ಭೀಮನಿಗೆ ಬಹಳವಾಗಿ ಸದ್ದು ಕೇಳಿಸುವಂತೆ ಫೇಣಿ ಹಪ್ಪಳಗಳನ್ನು ಅಗಿದು ತಿನ್ನುತ್ತ, ಗಂಜಿಯನ್ನು ಬಾರಿಸಿದಂತೆ ಶಬ್ದವಾಗುವ ಹಾಗೆ ಪಾಯಸವನ್ನು ಸುರಿ ಸುರಿದುಕೊಂಡು ಕುಡಿಯುತ್ತ, ತುಟಿಗಳನ್ನು ತೋರಿಸುತ್ತ ಅವನನ್ನು ರೇಗಿಸಿದನು.

ಆಗ ಭೀಮಸೇನನು ನಗುತ್ತ, "ಪೂರ್ವದಲ್ಲಿ ಮಜ್ಜಿಗೆಯನ್ನು ಕುಡಿಯುತ್ತಿದ್ದವನಿಗೆ ಈಗ ಪಕ್ವವಸ್ತುಗಳು ಹೇಗೆ ರುಚಿಸಿದುವು? ಈತನ ಕಂಠಧ್ವನಿಯನ್ನು ಹೆಚ್ಚಿಸಿದ ಆ ಬಾಣಂತಿ ಯಾರೋ ಕಾಣೆನು. ಆ ಪಾಪಿಷ್ಠಳ ಮೂಗನ್ನು ನ್ಯಾಯ

ವಾಗಿ ಹೆಬ್ಬೆರಲಿನಿಂದ ಚಿವುಟಿ ಹಾಕಬೇಕು ; ಇಲ್ಲವೇ, ಅವಳನ್ನು ಒನಕೆಯಿಂದಲೋ ನೇಗಿಲಿನಿಂದಲೋ ಹೊಡೆದು ಕೊಲ್ಲಬೇಕು" ಎಂದನು. ಅಷ್ಟರಲ್ಲಿ ಯಾವ ಸದ್ದೂ ಕೇಳಿಸದಿರಲು ಪುನಃ, "ಕೃಷ್ಣನ ಗಂಟಲಲ್ಲಿ ದೋಸೆಯೇನಾದರೂ ಸಿಕ್ಕಿಕೊಂಡಿದೆಯೋ ಏನೊ? ಗದೆಯಿಂದ ತಿವಿದು ನುಂಗಿಸಲೇ? ಛೀ ಛೀ? ನನ್ನ ಊಹೆಯು ಯುಕ್ತವಲ್ಲ. ಪ್ರಳಯ ಕಾಲಗಳಲ್ಲಿ ಯಾವನು ಪರ್ವತಗಳನ್ನು ತಡೆಯಿಲ್ಲದೆ ನುಂಗಿಬಿಡುವನೋ ಅಂತಹವನ ಗಂಟಲಲ್ಲಿ ಈ ಅತ್ಯಲ್ಪವಾದ ದೋಸೆಯು ಸಿಕ್ಕಿಕೊಳ್ಳುವುದೆಂದರೇನು? ಅದರ ಗಣನೆಯುಂಟೇ? ಎಲೈ ಗೋವಿಂದನೇ! ಆ ಅಭ್ಯಾಸ ಬಲದಿಂದ ಕುಟುಂಬವನ್ನೇ ನುಂಗಿಬಿಟ್ಟೀಯೆ; ಬೇಡ ಬೇಡ; ದೂರ ದೇಶದಿಂದ ಬಂದಿರತಕ್ಕ ನನ್ನನ್ನು ನುಂಗಬೇಡ; ನುಂಗಿದರೆ ಅದರಿಂದ ನಿನಗೆ ಕಷ್ಟವಾಗುವುದು. ನಾನು ಕೆಳಕ್ಕಿಳಿಯುವವನಲ್ಲ; ಮೇಲಕ್ಕೇರಿ ನಿನ್ನ ತಲೆಯನ್ನು ಸೇರುವೆನು; ಅಲ್ಲಿಗೆ ಹೊಕ್ಕರೆ ಚರಾಚರಾತ್ಮಕ ಪ್ರಪಂಚವನ್ನು ನೋಡುವೆನು. ಧರ್ಮನಂದನನು ಕಾರ್ಯಾರ್ಥವಾಗಿ ಕಳುಹಿಸಲು, ಏಕಾಕಿಯಾಗಿ ನಿನ್ನ ಸಮೀಪಕ್ಕೆ ಬಂದ ಪಾಂಡವನಾದ ಭೀಮನನ್ನು ದುರಾಶೆಯಿಂದ ನುಂಗಿಬಿಟ್ಟನೆಂದು ನಿನ್ನನ್ನೇ ಲೋಕವು ಆಗ ನಿಂದಿಸುವುದು. ಬಳಿಕ, ಧರ್ಮರಾಜನಿಂದ ರಕ್ಷಿತವಾಗಿದ್ದು ಈಗ ನಿನ್ನಿಂದ ನಾಶ ಹೊಂದಿದ, ತನ್ನ ಪುತ್ರನಾದ ಭೀಮನನ್ನು ಕಳೆದುಕೊಂಡು ಕುಂತಿಯು ಭೂಮಿಯಲ್ಲಿ ಹೇಗೆ ಬದುಕಿರುವಳು? ಆದಕಾರಣ, ಕುಂತಿಯನ್ನು ಅವಳ ಪುತ್ರ ಸಹಿತವಾಗಿ ನುಂಗಿ ಸುಖದಿಂದಿರು. ಇದನ್ನು ಕೇಳಿ ನಿನ್ನ ತಂಗಿಯಾದ ಸುಭದ್ರೆಯು ನಿನ್ನನ್ನು ರಾಕ್ಷಸನೆಂದು ಭಾವಿಸುವಳು. ಪುತ್ರ ವಿಯೋಗ ದುಃಖಿತಳಾದ ಆಕೆಯು ಯಾರೊಡನೆ ಹೇಳಿಕೊಳ್ಳಬೇಕು? ನೀನು ಎಲ್ಲರನ್ನೂ ಸಂಹರಿಸುತ್ತೀಯೆ; ಅದು ನಿನ್ನ ದೋಷವಲ್ಲ. ಪುನಃ ನೀನೇ ಅವರನ್ನು ಸೃಷ್ಟಿಸುತ್ತೀಯೆ. ಆದರೆ ಭೀಮನನ್ನು ಮಾತ್ರ ಪುನಃ ಸೃಷ್ಟಿಸಬೇಡ; ನನ್ನನ್ನು ಒಂದು ವೇಳೆ ಸೃಷ್ಟಿಸಿದರೂ ನಿನ್ನ ದಾಸನಾಗಿ ಸೃಷ್ಟಿಸುವುದು ವ್ಯರ್ಥ" ಎಂದು ಹೇಳಿದನು.

ಅದನ್ನು ಕೇಳಿ ಶ್ರೀಕೃಷ್ಣನು ವಿಸ್ಮಿತನಾಗಿ ಮುಗುಳ್ನಗೆಯಿಂದ, "ಎಲೈ ಭೀಮನೇ! ನಿನಗೆ ಸ್ವಾಗತವೇ? ಧರ್ಮರಾಜನು ಕ್ಷೇಮದಿಂದಿರುವನೇ? ಏಳು, ನನ್ನೊಡನೆ ಕುಳಿತು ಭೋಜನಮಾಡು" ಎಂದನು. ಅದನ್ನು ಕೇಳಿ ಭೀಮನು, "ಎಲೈ ಕೃಷ್ಣನೇ! ನೀನು ಮೊದಲು ಭೋಜನದಿಂದ ತೃಪ್ತನಾಗಿ ಬಳಿಕ ಆದರದಿಂದ ನನ್ನನ್ನು ವಿಚಾರಿಸುವೆ. ಜಗನ್ನಾಯಕನಾದ ನೀನು ತೃಪ್ತನಾದುದರಿಂದ ನಾನೂ ತೃಪ್ತನಾಗಿದ್ದೇನೆ" ಎಂದನು. ಆಗ ಕೃಷ್ಣನು, "ನಾನು ಬಡಿಸುತ್ತೇನೆ, ನೀನು ಊಟ ಮಾಡು. ಪಾರ್ಥನಾದ ಅರ್ಜುನನಿಗಿಂತ ನನಗೆ ನನ್ನ ಹೆಂಡತಿ, ಮಕ್ಕಳು, ಮಿತ್ರರು, ಬಾಂಧವರು, ಮತ್ತೆ ಯಾರೂ ಇಷ್ಟರಾದವರಲ್ಲ" ಎಂದು ಹೇಳಿ ಅವನ ಕೈಯನ್ನು ಹಿಡಿದು ಕರೆದುಕೊಂಡು ಹೋಗಿ ಭೋಜನಮಾಡಿಸಿ ಅವನೊಡನೆ ಎದ್ದು ಹೊರಟು, ಗಂಧಾಕ್ಷತೆ, ತಾಂಬೂಲ, ದಿವ್ಯ ಚಂದನ ಕರ್ಪೂರಗಳಿಂದ ಕೂಡಿದ ಮುಖವಾಸನಾ ದ್ರವ್ಯಗಳನ್ನು ತೆಗೆದು ಭೀಮಸೇನನಿಗೆ ಕೊಟ್ಟು ಬಳಿಕ ಅಕ್ರೂರ, ಸಾಂಬ,

ಪ್ರದ್ಯುಮ್ನ, ಅನಿರುದ್ಧ, ಶಠ, ನಿಶಠ, ಕೃತವರ್ಮಾದಿಗಳನ್ನು ಕುರಿತು, "ನನ್ನ ಆಜ್ಞಾನುಸಾರವಾಗಿ ಮಹಾಜನನೆಲ್ಲವೂ ಧರ್ಮರಾಜನ ಅಶ್ವಮೇಧವನ್ನು ನೋಡುವುದಕ್ಕಾಗಿ ಹಸ್ತಿನಪುರಕ್ಕೆ ಹೊರಡಬೇಕೆಂದು ಡಂಗುರವನ್ನು ಹಾಕಿಸಿರಿ; ದೇವಕಿ ಮೊದಲಾದ ನಮ್ಮ ತಾಯಿಯರೂ, ರುಕ್ಮಿಣಿ ಸತ್ಯಭಾಮೆ ಮೊದಲಾದ ಸ್ತ್ರೀಯರೂ ಹೊರಡಲಿ; ವಸುದೇವನೊಡನೆ ಬಲರಾಮನೊಬ್ಬನು ಇಲ್ಲಿದ್ದು ಸುಖದಿಂದ ದ್ವಾರಕೆಯನ್ನು ರಕ್ಷಿಸಿಕೊಂಡಿರಲಿ. ಧರ್ಮಪುತ್ರನು ಅಶ್ವಮೇಧವನ್ನು ಮಾಡುವನು. ನಾನಿರುವೆಡೆಯಲ್ಲಿ ದಾರಿದ್ರ್ಯವೆಲ್ಲಿ ಬರುವುದು? ನಮ್ಮಲ್ಲಿರುವ ಹಣವನ್ನೂ ಚಿನ್ನ ಬೆಳ್ಳಿ ಮುತ್ತು ರತ್ನ—ಇವುಗಳನ್ನೂ ಗಾಡಿ, ಕುದುರೆ, ಒಂಟೆ, ಎತ್ತು—ಇವುಗಳ ಮೇಲೆ ಹಸ್ತಿನಪುರಕ್ಕೆ ಸಾಗಿಸಬೇಕು" ಎಂದು ಅಪ್ಪಣೆಮಾಡಿದನು.

ಬಳಿಕ ಕೃತವರ್ಮನು ಭೇರೀ ಧ್ವನಿಯನ್ನು ಮಾಡಿಸಿ ಸ್ವಜನರನ್ನು ಕುರಿತು, "ಎಲೈ ಯಾದವರಿರಾ! ಶ್ರೀಕೃಷ್ಣನ ಆಜ್ಞಾನುಸಾರವಾಗಿ ನೀವು ಹೆಂಗುಸರು ಗಂಡುಸರು ಆದಿಯಾಗಿ ಎಲ್ಲರೂ ಧರ್ಮರಾಜನ ಅಶ್ವಮೇಧ ಯಾಗವನ್ನು ನೋಡುವುದಕ್ಕಾಗಿ ಹಸ್ತಿನಪುರಕ್ಕೆ ಪ್ರಯಾಣ ಮಾಡಿರಿ" ಎಂದು ತಿಳಿಸಿದನು.

ಆಗ ಆ ಮಾತನ್ನು ಕೇಳಿ ದ್ವಾರಕಾ ಪುರ ನಿವಾಸಿಗಳೆಲ್ಲರೂ ಕೃಷ್ಣನ ಆಜ್ಞೆಯಂತೆ ಅಶ್ವಮೇಧ ಯಾಗವನ್ನು ನೋಡಬೇಕೆಂಬ ಕುತೂಹಲದಿಂದ ಗಜಪುರಕ್ಕೆ ಹೊರಟರು. ವೇದ ಶಾಸ್ತ್ರ ಸಂಪನ್ನರಾಗಿಯೂ ಧರ್ಮಜ್ಞರಾಗಿಯೂ ಕರ್ಮಠರಾಗಿಯೂ ಪರಿಶುದ್ಧರಾಗಿಯೂ ಸಮ ದೃಷ್ಟಿಯುಳ್ಳವರಾಗಿಯೂ ತಮ್ಮ ಹೆಂಡತಿ ಮಕ್ಕಳು, ಬಹು ಮಂದಿ ಶಿಷ್ಯರು—ಇವರೊಡನೆ ಕೂಡಿದವರಾಗಿಯೂ ಇರುವ ಬ್ರಾಹ್ಮಣರೂ, ಧನಿಕರಾದ ವೈಶ್ಯರೂ ಕೃಷ್ಣನ ಆಜ್ಞೆಯಂತೆ ಹೊರಟರು. ಬ್ರಾಹ್ಮಣ ಸೇವಾಸಕ್ತರಾದ ಶೂದ್ರರೂ, ಬಗೆ ಬಗೆಯ ಪಾತ್ರೆಗಳನ್ನು ತೆಗೆದುಕೊಂಡು ಕಂಚಗಾರರೂ, ಮುತ್ತು ರತ್ನಗಳನ್ನು ಪರೀಕ್ಷಿಸುವುದರಲ್ಲಿ ನಿಪುಣರಾದ ರತ್ನ ಪರೀಕ್ಷಕರೂ, ತಮ್ಮ ಅಗ್ಗಿಷ್ಟಿಕೆಗಳೊಡನೆ ಅಕ್ಕಸಾಲಿಗರೂ ದ್ವಾರಕಾ ಪುರವನ್ನು ಬಿಟ್ಟು ಹೊರಟರು. ರತ್ನವನ್ನು ಸಾಣೆ ಹಿಡಿಯುವವರು, ಸೀಸದ ಕೆಲಸ ಮಾಡುವವರು, ಧಾನ್ಯ ವಿಕ್ರಯ ಮಾಡುವವರು, ಅಗಸರು, ಅಡಕೆಲೆಯನ್ನು ಸಿದ್ಧ ಮಾಡುವವರು, ಹೂವಾಡಿಗರು, ಗಾಣಿಗರು, ನೂಲುವವರು, ನೆಯ್ಗೆಯವರು, ರೇಷ್ಮೆ ಮಾಡುವವರು, ರೇಷ್ಮೆಯ ಬಟ್ಟೆಯನ್ನು ನೆಯ್ಯುವವರು, ಧಾನ್ಯದ ಒಡೆಗಳನ್ನು ಮಾಡುವವರು, ಬಡಗಿಯವರು, ಇಟ್ಟಿಗೆ ಮಾಡುವವರು, ಆಯುಧಗಳನ್ನು ಮಾಡುವವರು, ಕುಂಬಾರರು, ನೀರು ಹೊರುವವರು, ನಟರು, ಕ್ಷೌರಕರು, ಗೋಡೆ ಹಾಕುವವರು, ಚಿತ್ರಕಾರರು, ಮದ್ಯವನ್ನು ಮಾಡುವವರು, ರಥಕಾರರು, ಚರ್ಮದ ಕೆಲಸಗಾರರು, ಬೇಟೆಗಾರರು ಮೊದಲಾದವರು ಕೃಷ್ಣನ ಆಜ್ಞೆಯಂತೆ ತಂತಮ್ಮ ಆಯುಧಗಳೊಡನೆ ಹೊರಟರು. ತಲೆಹಿಡುಕಿಯರು, ನಾನಾ ಭಾವಗಳನ್ನು ತೋರಿಸಿ ಜನರನ್ನು ಮರುಳುಗೊಳಿಸುವ ವೇಶ್ಯೆಯರು, ದೊರೆಗೆ ಅಲಂಕಾರ ಮಾಡುವವರು, ಜಟ್ಟಿಗಳು, ಹೊಗಳುಭಟ್ಟರು, ವೈದ್ಯರು, ನಟರು, ಮಾಗಧರು, ಎಲ್ಲ ಜಾತಿಯವರನ್ನೂ ಆಶ್ರಯಿಸಿ

ಜೀವಿಸುವವರು, ಐಂದ್ರಜಾಲಿಕರು, ಕಥೆಗಳನ್ನು ಹೇಳುವವರು, ಸ್ತುತಿಪಾಠಕರು, ವಿಷವೈದ್ಯರು, ದೊರೆಗೆ ಕ್ಷೌರಮಾಡುವವರು, ಪಂಜರಸಹಿತರಾದ ಬೇಡರು, ಶ್ರೀಕೃಷ್ಣನ ಬಳಿಯಲ್ಲಿ ಸೇವೆಮಾಡಿಕೊಂಡಿದ್ದು ಹುಲ್ಲನ್ನೂ ನೀರನ್ನೂ ಹೊರುವವರು, ಸೈರಂಧ್ರಿಯರು, ದಾಸಿಯರು, ಕಂಚುಕಿಗಳು, ಮಾತಾಳಿಗಳು, ಶಸ್ತ್ರವೈದ್ಯರು, ಅಂಬಿಗರು ಮೊದಲಾದವರು ಕೃಷ್ಣನ ಅಪ್ಪಣೆಯಂತೆ ಸಂತೋಷದಿಂದ ಹೊರಟರು. ಅಸಂಖ್ಯಾತವಾದ ಚತುರಂಗ ಸೈನ್ಯವು ಹೊರಟಿತು. ಧೂಳಿಯು ಅಂತರಿಕ್ಷವನ್ನು ವ್ಯಾಪಿಸಿ ಸೂರ್ಯನನ್ನು ಮುಚ್ಚಿಬಿಟ್ಟಿತು. ಸೈನ್ಯವು ಪ್ರಯಾಣ ಹೊರಡಲು, ಮಹಾ ಶಬ್ದವು ದಿಕ್ಕು ದಿಕ್ಕನ್ನೂ ವ್ಯಾಪಿಸಿತು. ವರ್ತಕರ ಸಾಮಾನಿನ ಗಾಡಿಗಳು, ಇತರ ಜನರು, ಹುಲಿಗಳನ್ನೂ ಪಕ್ಷಿಗಳನ್ನೂ ಹತ್ತಿಕೊಂಡು ಹೋಗುತ್ತಿರುವವರು—ಇವರಿಂದ ಮಾರ್ಗಸ್ಥರಿಗೆ ದಾರಿಯೇ ದೊರೆಯದಂತಾಯಿತು.

ಆಗ, ಮುದುಕಿಯಾದ ಕುಂಟಣಿಯೊಬ್ಬಳು ನಸು ನಕ್ಕು ತನ್ನ ಸಖಿಯರೊಡನೆ, "ಏಕೆ ವೃಥಾ ಶ್ರಮಪಡುತ್ತೀರಿ? ಅವಿವೇಕಿಯಾದ ಈ ಕೃಷ್ಣನು ಧನವನ್ನು ಯಾರಿಗೂ ಕೊಡುವವನಲ್ಲ; ಯಾರಲ್ಲಿ ಪ್ರೀತಿಸುವನೋ ಅವರ ಧನವನ್ನೇ ಅವನು ಅಪಹರಿಸುವನು" ಎಂದು ಹೇಳುತ್ತ ವಿನೋದವಾಗಿ ಎತ್ತಿನ ಮೇಲೆ ಕುಳಿತು ಹೋಗುತ್ತಿರುವಾಗ, ಅವಳ ಎತ್ತು ದಾರಿಯಲ್ಲಿ ಒಂದು ಒಂಟೆಯನ್ನು ಕಂಡು ಹೆದರಿ ಓಡುತ್ತ ಅವಳನ್ನು ಕೆಳಗೆ ಕೆಡವಿಬಿಟ್ಟಿತು. ಅವಳು ಬಿದ್ದುದನ್ನು ನೋಡಿ ಸೈನಿಕರು, "ಈ ದುಷ್ಟಳು ಶ್ರೀಕೃಷ್ಣನನ್ನು ಈಗ ತಾನೆ ನಿಂದಿಸಿದಳು; ಆ ಪಾಪದಿಂದ ಇವಳು ಎತ್ತಿನ ಮೇಲಿನಿಂದ ನೆಲಕ್ಕೆ ಬಿದ್ದುಹೋದಳು. ಪಾಪಿಗಳಿಗೆ ಅಧಃಪತನವು ಯುಕ್ತವಾದುದೇ ಸರಿ" ಎಂದು ಹೇಳಿಕೊಳ್ಳುತ್ತಿರಲು, ಆ ಕುಂಟಣಿಯು ಅವರ ಮಾತನ್ನು ಕೇಳಿ ಪುನಃ ಎದ್ದು ಸೈನಿಕರನ್ನು ಕುರಿತು ಒಳ್ಳೆಯ ಮಾತನ್ನಾಡುತ್ತ, "ನಾನು ಶ್ರೀಕೃಷ್ಣನನ್ನು ಇಲ್ಲಿ ನೋಡಿ ಪುನಃ ವೃಷಭವನ್ನೇರಿದೆನು; ಈ ಮೂಢರು ಇದನ್ನರಿಯದೆಹೋದರು. ಪತಿತರನ್ನು ಪಾವನರನ್ನಾಗಿ ಮಾಡುವುದರಲ್ಲಿ ಶ್ರೀಕೃಷ್ಣನ ಸ್ಮರಣೆಯೊಂದಲ್ಲದೆ ಅವನಿಗಿಂತ ಬೇರೆಯಾದುದನ್ನು ಕಾಣೆನು" ಎಂದು ಹೇಳಿದಳು.

ಬಳಿಕ ಶ್ರೀಕೃಷ್ಣನು ಬಿಳಿಯ ಕುದುರೆಯನ್ನೇರಿ ಮಧ್ಯಾಹ್ನಕಾಲದಲ್ಲಿ ಸಂತೋಷದಿಂದ ಪುರವನ್ನು ಬಿಟ್ಟು ಹೊರಟು, ಎರಡೆಳೆಯಿಂದ ಹೊಸೆದ ಕಶೆಯನ್ನು ಹಿಡಿದು ಎಲ್ಲರ ಮುಂದೆ ಬಂದು ಧರ್ಮರಾಜನ ಊರಿಗೆ ಮಾರ್ಗವನ್ನು ತೋರಿಸುತ್ತಿರಲು, ಆ ಮಾರ್ಗವಾಗಿ ಎಲ್ಲರೂ ಪ್ರಯಾಣಮಾಡಿದರು. ಹೀಗೆ ಶ್ರೀಕೃಷ್ಣನು ಅನೇಕ ಕೋಟಿ ಗಜ ರಥ ಪದಾತಿಗಳಿಂದ ಪರಿವೃತನಾಗಿ ಸಕುಟುಂಬ ಪರಿವಾರನಾಗಿ ಭೀಮನೊಡನೆ ಹೊರಡಲು, ದ್ವಾರಕಾವಾಸಿಗಳೆಲ್ಲರೂ ಕೃಷ್ಣನನ್ನು ಬಿಟ್ಟಿರಲಾರದೆ, ಸಂತೋಷದಿಂದ ಸ್ವೇಚ್ಛೆಯಾಗಿ ಅವನ ಹಿಂದೆಯೇ ಹೊರಟರು. ಹೂವಾಡಿಗಿತ್ತಿಯೊಬ್ಬಳು ಕೃಷ್ಣನನ್ನು ನೋಡಿ ಹರ್ಷದೊಡನೆ, "ಎಲೈ ಶ್ರೀಕೃಷ್ಣನೇ! ಈ ಮಧ್ಯಾಹ್ನದಲ್ಲಿ ಎಲ್ಲರೂ ತಮ್ಮ ಜೀವನ ಪದಾರ್ಥಗಳೊಡನೆ ಹೀಗೆ ಪ್ರಯಾಣ

ಹೊರಟಿರುವರು; ಇವರಿಗೇನೂ ಬಾಧೆಯಿಲ್ಲ. ಹೂವನ್ನು ಮಾರಿ ಜೀವಿಸುವ ನಮಗಲ್ಲವೇ ಈಗ ಕಷ್ಟವೊದಗಿರುವುದು! ನಿನಗಾಗಿ ಕಟ್ಟಿ ತಂದಿರುವ ಈ ಹೂಗಳು ಬಾಡಿಹೋಗುತ್ತಿವೆ. ನೀನು ಛತ್ರ ಛಾಯೆಯಲ್ಲಿ ನಡೆಯುತ್ತಿರುವೆ. ನಾನು ಈ ಬಿಸಿಲಿನಲ್ಲಿ ಬರುವುದು ಹೇಗೆ? ಈ ಕಟ್ಟಿದ ಹೂವನ್ನು ನೀನು ತೆಗೆದುಕೊಂಡು ನನಗೆ ಮುತ್ತುಗಳನ್ನು ಕೊಡು" ಎಂದಳು. ಶ್ರೀಕೃಷ್ಣನು, "ಎಲೀ ಭದ್ರೆ! ನಿನ್ನ ಇಷ್ಟದಂತೆ ಹಣವನ್ನೂ ಮುತ್ತುಗಳನ್ನೂ ನಿನಗೆ ಕೊಡುವೆನು. ನಿನ್ನ ಧರ್ಮವನ್ನು ನೀನು ನಡೆಯಿಸಿದರೆ ನನ್ನ ಮನಸ್ಸಿಗೆ ಸಂತೋಷವಾಗುವುದು" ಎಂದನು. ಕೃಷ್ಣನು ಹೀಗೆ ಹೇಳುತ್ತಿರುವಷ್ಟರಲ್ಲಿ ಎಣ್ಣೆಯನ್ನು ತೆಗೆದುಕೊಂಡು ಹಿಂದೆ ಬರುತ್ತಿದ್ದ ಗಾಣಿಗಿತ್ತಿಯೊಬ್ಬಳು ಬಂದು, "ಪ್ರಭುವೇ! ಹಳೆಯ ಗಡಿಗೆ ಯೊಡೆದು ನನ್ನ ಎಣ್ಣೆಯೆಲ್ಲ ಸೋರಿಹೋಗುತ್ತಿದೆ. ಈಗ ತಾನೆ ಗಾಣವಾಡಿ ಎಣ್ಣೆಯನ್ನು ತೆಗೆದ ನನ್ನ ಶ್ರಮವನ್ನು ನೀನರಿಯೆ. ಎಣ್ಣೆಯನ್ನು ತುಂಬಿದ ಗಾಡಿಗಳ ಮಧ್ಯದಲ್ಲಿ ನನಗೆ ಮಾರ್ಗವೇ ಸಿಕ್ಕದಂತಾಗಿದೆ, ನಡೆಯಲಾರೆನು. ನನಗೇನಾದರೂ ಅನುಕೂಲವಾಗುವಂತೆ ಮಾಡು" ಎಂದು ಕೇಳಿಕೊಂಡಳು.

ಇಂತು ಶ್ರೀಕೃಷ್ಣ ಪ್ರಯಾಣವೆಂಬ ಹತ್ತನೆಯ ಅಧ್ಯಾಯವು.

---

# ಗ್ರಂಥ ವಿಮರ್ಶೆ

## ೧. ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ವಿಳಾಸಂ

ಲೇಖಕರು.—ಬಿ. ಶಿವಮೂರ್ತಿಶಾಸ್ತ್ರಿಗಳು, ಹುಲುಕುಂಟೆ ಮಠ, ತುಮಕೂರು.

ಕ್ರೌ೯ ಅಷ್ಟಪತ್ರ ಪುಟಗಳು 5+22; ಬೆಂಗಳೂರು ಸಿಟಿ ಮಾಡಲ್ ಮುದ್ರಾಕ್ಷರ ಶಾಲಾ; ೧೯೨೯; ಬೆಲೆ ೮ ಆಣೆ.

ಇದೊಂದು ಚಂಪೂ ಕವಿತೆ. ಇದರ ಮೊದಲನೆಯ ತರಂಗದಲ್ಲಿ ಭರತಖಂಡದ ಮತ್ತು ಕರ್ಣಾಟಕದ ವರ್ಣನೆಯೂ, ಎರಡನೆಯದರಲ್ಲಿ ಯದು ವಂಶದ ರಾಜರುಗಳ ಚರಿತ್ರೆಯೂ, ಮೂರನೆಯದರಲ್ಲಿ ನಮ್ಮ ಶ್ರೀಮನ್ಮಹಾರಾಜರವರ ಗುಣಾತಿಶಯ ಗಳೂ, ನಾಲ್ಕನೆಯದರಲ್ಲಿ ಈ ಆಳಿಕೆಯಲ್ಲಾದ ದೇಶಾಭಿವೃದ್ಧಿ ಕಾರ್ಯಗಳೂ ವರ್ಣಿತ ವಾಗಿವೆ. ಆಯಾ ವಿಷಯಕ್ಕೆ ಸಂಬಂಧಪಟ್ಟ ಹತ್ತು ಅಂದವಾದ ಚಿತ್ರಪಟಗಳು ಈ ಪುಸ್ತಕದಲ್ಲಿ ಸೇರಿವೆ. ಕವಿತಾ ಶೈಲಿಯು ಸುಲಭವಾಗಿಯೂ ಸರಳವಾಗಿಯೂ ಲಲಿತ ವಾಗಿಯೂ ಇದೆ; ರಾಜಭಕ್ತಿಯು ಇದರಲ್ಲಿ ಸ್ಪಷ್ಟವಾಗಿ ವ್ಯಕ್ತಪಡುವಂತಿದೆ.

ಕೆಲವು ಅಶುದ್ಧಗಳು ಅಲ್ಲಲ್ಲಿ ಕಾಣಬರುವುವು; ಅವನ್ನು ಮುಂದಣ ಮುದ್ರಣ ದಲ್ಲಿ ಗ್ರಂಥಕರ್ತರು ನೇರ್ಪಡಿಸುವರೆಂದು ಕೋರುತ್ತೇವೆ; ಕೆಲವನ್ನು ಇಲ್ಲಿ ತೋರಿಸುವೆವು:—

**ಉಪಮಾನಾದ್ಯಲಂಕಾರಗಳು** (ಉ. i), **ಶ್ರೀಮನ್ ಮಹಾರಾಜರು** (ಪೀ. i), **ಬಲಗೊಂಬೆಂ** (ಪು. 1), **ಪೊಂದಿರ್ಪುದೀ** (2), **ಮಾತೆಯೋರ್ವಳ್** (3), **ಪೇರ್ವೆಟ್ಟು ಗಳುಂ** (4), **ಶರಾವತಿಯುಳ್ತೇ** (5), **ವಿಾಳ್ಗಳ** (5), **ಅತಿ ಬಿನದಂ** (5), **ವೇದಾಂತ ದೊಲ್** (11), **ಕಾರ್ಜೊನ್ನಂ** (16), **ಕೋಲಾರಕ್ಕುಂ** (19), **ಲಸದ್ವೀಶ್ವೇಶ್ವರಾರ್ಯಂ** (20), **ಶೇಷಾದ್ರ್ಯಾರ್ಯಂ** (20).

---

## ೨. ಸೆಳವು

ಲೇಖಕರು.—ಗೆಳೆಯರ ಗುಂಪಿನ ವಿನಾಯಕ, ಧಾರವಾಡ.

ಫೂಲ್‌ಸ್ಕ್ಯಾಪ್ ಅಷ್ಟಪತ್ರ ಪುಟ ೧೭; ಕ. ಪ್ರಿಂ. ವರ್ಕ್ಸ್, ಧಾರವಾಡ; ಬೆಲೆ ೨ ಆಣೆ.

ಇದು ದ್ವಿಪದಿಯಂತಿರುವ ಒಂದು ಚಿಕ್ಕ ಕವಿತೆ; "ಶಕ್ತಿ ವ್ಯಕ್ತಿಗಳ ಸಂಘರ್ಷ" ಎಂದರೆ, 'ಶಕ್ತಿ'ಗೂ 'ವ್ಯಕ್ತಿ'ಗೂ ಸಂವಾದ ರೂಪದಲ್ಲಿರುವುದು. ಶಕ್ತಿಯು ತನ್ನ ಸಾಮರ್ಥ್ಯವನ್ನೂ ಪ್ರಯೋಜನವನ್ನೂ ವಿವರಿಸಿ ವ್ಯಕ್ತಿಯನ್ನು ಸ್ವಾಧೀನಪಡಿಸಿ ಕೊಳ್ಳಲು ಪ್ರಯತ್ನ ಮಾಡುವುದು. ವ್ಯಕ್ತಿಯು ಅದಕ್ಕೆ ಅಧೀನವಾಗದೆ ಶಕ್ತಿ ಯಿಂದಾಗುವ ಪ್ರಯೋಜನಗಳೆಲ್ಲವನ್ನೂ ತಿರಸ್ಕರಿಸಿ ಸ್ವಾತಂತ್ರ್ಯವನ್ನು ಸ್ಥಾಪಿಸಿ ಕೊಳ್ಳುವುದಕ್ಕೆ ತಕ್ಕ ಸಾಮರ್ಥ್ಯವು ತನ್ನಲ್ಲಿರುವುದನ್ನು ಸ್ಪಷ್ಟಪಡಿಸಿಕೊಳ್ಳುವುದು.

ಇದರಿಂದ ತಾತ್ಕಾಲಿಕ ಸಾಮಾಜಿಕ ವ್ಯಾಪಾರವು ಸ್ಪಷ್ಟವಾಗುವುದು. ಭಾಷಾ ಶೈಲಿಯು ಸುಲಭವಾಗಿಯೂ ಸರಳವಾಗಿಯೂ ಇದೆ. ದ್ವಿತೀಯಾಕ್ಷರ ಪ್ರಾಸವು ಕೆಲವೆಡೆಗಳಲ್ಲಿ ಮಾತ್ರ ಕ್ರಮವಾಗಿ ಬಂದಿದೆ; ಅಂತ್ಯಪ್ರಾಸವು ಸರ್ವತ್ರ ಬಂದಿದೆ. ವಿಷಯ ಜೋಡಣೆಯನ್ನೇ ಮುಖ್ಯವಾಗಿಟ್ಟುಕೊಂಡು ಭಾಷಾ ಪಾರಿ ಶುದ್ಧ್ಯಕ್ಕೂ ವ್ಯಾಕರಣಕ್ಕೂ ಅಷ್ಟು ಗಮನ ಕೊಟ್ಟಂತಿಲ್ಲ.

---

## ೩. ಗಾಂಧಿ ಮಹಾತ್ಮನ ತತ್ತ್ವಬೋಧೆ, ೪. ಲಾಲಾ ಲಜಪತ ರಾಯರ ಚರಮ ಶ್ಲೋಕಾವಳಿ, ೫. ನನ್ನ ತಾಯಿ ನಾಡು

ಲೇಖಕರು.—ಬಿ. ಶಿವಮೂರ್ತಿ ಶಾಸ್ತ್ರಿಗಳು, ಕೀರ್ತನಕೇಸರಿ, ಕವಿರತ್ನ, ಹುಲುಕುಂಟೆ ಮಠ, ತುಮಕೂರು.

(೩) ಫೂಲ್‌ಸ್ಕ್ಯಾಪ್ ಅಷ್ಟಪತ್ರ ಪುಟ ೨೪; (೪) ಕ್ರೌ॥ ಅಷ್ಟಪತ್ರ ಪುಟ ೪; (೫) ಕ್ರೌ॥ ಅಷ್ಟಪತ್ರ ಪುಟ ೪; ೧೯೨೮, ೧೯೨೯; (೩) ಬೆಲೆ ೨ ಆಣೆ; (೫) ಅರ್ಧಾಣೆ.

ಮೊದಲನೆಯದು, ಗಾಂಧಿಯವರು "ತುಮಕೂರಿಗೆ ದಯಮಾಡಿಸಿದುದರ ಸ್ಮರಣಾರ್ಥವಾಗಿ" ರಚಿಸಲ್ಪಟ್ಟು, ಆ ಮಹಾತ್ಮರ "ಬೋಧೆಯನ್ನೂ ಅವರು ಮಾಡಿದ ಕೆಲವು ಕೆಲಸ ಕಾರ್ಯಗಳನ್ನೂ ಸಂಕ್ಷಿಪ್ತವಾಗಿ" ಒಳಕೊಂಡಿದೆ. ಇದರಲ್ಲಿ, ೪೧ ಭಾಮಿನೀ ಷಟ್ಪದಿಗಳೂ ೯ ಕಂದಗಳೂ ಗಾಂಧಿಯವರ ವಿಷಯವಾಗಿಯೂ, ೧೮ ಕಂದಗಳು ಚಿತ್ತರಂಜನ ದಾಸರ ಚರಮ ಶ್ಲೋಕಗಳಾಗಿಯೂ ಇವೆ; ಗಾಂಧಿಯವರ ಮತ್ತು ದಾಸರವರ ಚಿತ್ರಪಟಗಳಿವೆ. ಕಾಗದವೂ ಮುದ್ರಣವೂ ಅಂದವಾಗಿವೆ. ಇದು ಎರಡನೆಯ ಮುದ್ರಣ.

ಎರಡನೆಯದರಲ್ಲಿ, ಲಾಲಾ ಲಜಪತರಾಯರ ಸ್ತೋತ್ರ ರೂಪವಾದ ಎರಡು ವೃತ್ತಗಳೂ ೧೬ ಕಂದಗಳೂ ಇವೆ.

ಮೂರನೆಯದರಲ್ಲಿ, ವಿಶಿಷ್ಟ ಕನ್ನಡ ನಾಡಿನ ಮಹತ್ತ್ವವನ್ನು ಮೂರು ವೃತ್ತಗಳಿಂದಲೂ, ಈ ನಾಡಿನ ಪುಣ್ಯಸ್ಥಳಗಳನ್ನೂ ಕವಿವರ್ಯರನ್ನೂ ಐದು ಕಂದಗಳಿಂದಲೂ, ಒಂದು ಕಂದದಿಂದ ಕರ್ಣಾಟ ಮಾತೆಯನ್ನೂ ಲೇಖಕರು ಸ್ತುತಿಸಿದ್ದಾರೆ; ಮಿಕ್ಕ ೬ ಭಾಮಿನೀ ಷಟ್ಪದಿಗಳಲ್ಲಿಯೂ ಒಂದು ಕಂದದಲ್ಲಿಯೂ ಕಡಪಾ ರಾಘವೇಂದ್ರರಾಯರನ್ನು ಗಣಪತಿಯ ಅವತಾರವೆಂದು ವರ್ಣಿಸಿದ್ದಾರೆ.

ಲೇಖಕರ ಕವಿತಾ ಶೈಲಿಯು ಚೆನ್ನಾಗಿರುವುದು. ರಾಜಕೀಯ ವಿಷಯಗಳನ್ನೊಳಕೊಂಡ ಕವಿತೆಗಳಾಗಿರುವುದರಿಂದ ಭಾಷೆಗೆ ಅಷ್ಟು ಹೆಚ್ಚು ಗಮನ ಕೊಟ್ಟಂತಿಲ್ಲ.

ಕೆಲವು ಅಶುದ್ಧ ಪ್ರಯೋಗಗಳು :—

ಪಿತರ್ಗಳ, ಭಾರತೇಯ, ಕಳಕೊಂಡು, ಧಾರಿಣಿಯೋಳ್, ಸುತಗಂ, ಕಂತು ವಿಮರ್ಧನಂ ; ಜಸಂ ತಾಳ್ದಪಂ, ಧೈರ್ಯದಿ ನೀಂ, ಧಿಃಕರಿಸಿದರಂ, ಭಾರತೆಯೀಗಳ್, ಸ್ಥಿರ ಮಲ್ಲದ ಯೀಮಾರ್ಗಂ.

---

## ೬. ಶ್ರೀ ಪ್ರಭುದೇವರ ಸಾಂಗತ್ಯ

ಶೋಧಕರು ಮತ್ತು ಪ್ರಕಾಶಕರು.—ಬುದ್ಧಯ್ಯಾ ಮಗೆಯ್ಯಾ ಪುರಾಣೀಕ, ತೇರದಾಳ.

ಕ್ರೌನ್ ಅಷ್ಟಪತ್ರ ಪುಟಗಳು ೨+೭೮; ತೋಂಟದಾರ್ಯ ಮುದ್ರಾಲಯ, ಧಾರವಾಡ; ೧೯೩೦.

ಇದು "ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆ"ಯ ಐದನೆಯ ಪುಷ್ಪ; ಇದರ ಮೊದಲು ಮೂರು 'ಪುಷ್ಪ'ಗಳ ವಿಮರ್ಶೆಯನ್ನು ಪರಿಷತ್ಪತ್ರಿಕೆಯ ೧೪ನೆಯ ಸಂಪುಟದ ೨ನೆಯ ಸಂಚಿಕೆಯ ೧೪೭ನೆಯ ಪುಟದಲ್ಲಿ ಕೊಟ್ಟಿದೆ. ಅಲ್ಲಮ ಪ್ರಭು ದೇವರ ಲೀಲಾ ಮಹಿಮೆಯನ್ನು ವರ್ಣಿಸಿರುವ ಈ ಸಾಂಗತ್ಯ ಗ್ರಂಥದಲ್ಲಿ ೫ ಸಂಧಿಗಳೂ, ೯೪೫ ಪದ್ಯಗಳೂ ಇರುವುವು. ಇದನ್ನು ಬರೆದ ಕವಿ ಯಾರೋ ಗೊತ್ತಿಲ್ಲ. ಕವಿತೆಯ ಸರಣಿಯು ಅಷ್ಟು ಸರಳವಾಗಿಯೂ ಸುಲಭವಾಗಿಯೂ ಇಲ್ಲ. ಮುದ್ರಣವು ಅಂದ ವಾಗಿಲ್ಲ. ಅಶುದ್ಧಗಳು ಹೆಚ್ಚಾಗಿವೆಯೆಂದೇ ಹೇಳಬೇಕು.

ಕೆಲವು ಅಶುದ್ಧಗಳು:—

ಪ್ರಸ್ಥಾವನೆ, ಪ್ರತಿವೊಂದು, ಜಲ್ಧಿಯ, ಕೃತಿಪೇಳ್ದ, ವಾರುಧಿ, ಮಚ್ಚವು, ನಿತ್ಯವೆ ದೆಂಬ, ನಟಣೆ, ಪರುಷ, ಚಂದ್ರಾರ್ಕಳು, ಉರುಗರೂ. . . . .

---

## ೭. ಆಧುನಿಕ ಕನ್ನಡ ಕವಿತೆ

ಲೇಖಕರು.—ಸಂಗಪ್ಪ ಸಾಸನೂರ, ಬಿ.ಎ., ಲಾ ಕಾಲೇಜ, ಪುಣೆ.

ಕ್ರೌನ್ ಅಷ್ಟಪತ್ರ ಪುಟಗಳು ೪೫ ; ವಿದ್ಯಾರಣ್ಯ ಮುದ್ರಾ ಮಂದಿರ, ಬಾಗಲಕೋಟೆ ; ೧೯೩೦ ; ಬೆಲೆ ೪ ಆಣೆ.

ಇದು ಆಧುನಿಕ ಕನ್ನಡ ಕವಿತೆಗಳ ವಿಮರ್ಶಾ ರೂಪವಾದ ಗ್ರಂಥ; 'ಡೆಕ್ಕನ್ ಕಾಲೇಜಿನ ನಿಬಂಧ ಸ್ಪರ್ಧೆ'ಗೆಂದು ಬರೆದು ಬಹುಮಾನವನ್ನು ಪಡೆದುದು. ಇದರಲ್ಲಿ ಪೂರ್ವ ಕವಿಗಳ ಗುಣ ದೋಷಗಳನ್ನು ತಕ್ಕ ಮಟ್ಟಿಗೆ ತಿಳಿಸಿ, ಈಗಿನ ಕವಿಗಳ ಕವಿತಾ ವಿಷಯವನ್ನು ನಿದರ್ಶನಗಳೊಡನೆ ವಿಮರ್ಶಿಸಿದೆ. ಹೊಸ ಕವಿತೆಗಳನ್ನು ಭಾವೋ ದ್ದ್ಯೋತಕ, ಸ್ಫೂರ್ತಿದಾಯಕ, ಆತ್ಮ ವಿಷಯಕ, ಪ್ರಕೃತಿ ವಿಷಯಕ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿ, ಹೊಸ ಮಾದರಿಯ ಕವಿತೆಗಳುದ್ಭವಿಸುವುದಕ್ಕೆ ಪಾಶ್ಚಾತ್ಯ ಸಾಹಿತ್ಯ ಸಂಪರ್ಕ ಸಂಸ್ಕಾರಗಳೇ ಕಾರಣವೆಂದು ತಿಳಿಸಿ, ಲೇಖಕರು ಈಗಿನ ಕವಿತೆಗಳ

ಸೊಬಗು, ಭಾವಸ್ಫೂರ್ತಿ, ಪ್ರತಿಭೆ, ವಸ್ತುಸ್ವರೂಪ ಕಥನ, ವಾಚನಾಭಿರುಚಿ ಮೊದಲಾದುವನ್ನು ಸ್ಪಷ್ಟವಾಗಿ ನಿರೂಪಿಸಿ, ಪ್ರಾಚೀನ ಕವಿತೆಗಳಿಗಿಂತ ಇವುಗಳಲ್ಲಿ ಉತ್ಕರ್ಷತೆಯುಂಟೆಂಬುದನ್ನು ತಿಳಿಸಿರುತ್ತಾರೆ. ಅನೇಕ ಆಧುನಿಕ ಕವಿತೆಗಳನ್ನು ಪರಿಶೀಲಿಸಿ "ಸಹೃದಯತೆ"ಯಿಂದ ಬರೆದಿರುವ ಈ ವಿಮರ್ಶಾತ್ಮಕವಾದ ಲೇಖನವು ಸಾಮಾನ್ಯ ವಾಚಕರನ್ನು ಆಧುನಿಕ ಕನ್ನಡ ಕವಿಗಳೊಡನೆ ಸೇರಿಸುವ "ಸೇತುವೆ" ಯಾಗಿ ಪರಿಣಮಿಸುವುದೆಂದು ಮುನ್ನುಡಿಯನ್ನು ಬರೆದ ಶ್ರೀ ಬೇಂದ್ರೆಯವರ ಅಭಿಪ್ರಾಯ.

---

## ೮. ಸುರತ ನಗರದ ಶ್ರೇಷ್ಠಿಯು

ಲೇಖಕರು.—ದಿವಂಗತ ಕೆರೂರು ವಾಸುದೇವಾಚಾರ್ಯರು.

ಪ್ರಕಾಶಕರು.—ಸ್ವಾಮಿ, ರಾ. ಕೆರೂರ ಇವರು, ಬಾಗಿಲಕೋಟೆ.

ಕ್ರೌ ಅಷ್ಟಪತ್ರ ಪುಟಗಳು ೧೨೧+೮; ಬೆಂಗಳೂರು ಪ್ರೆಸ್; ೧೯೩೦; ಬೆಲೆ ರೂ. ೧—೪—೦.

ಈ ಗದ್ಯಗ್ರಂಥವು ಜಗತ್ಪ್ರಸಿದ್ಧನಾದ ಷೇಕ್ಸ್‌ಪಿಯರ್ ಮಹಾಕವಿಯ "ದಿ ಮರ್ಚೆಂಟ್ ಆಫ್ ವೆನಿಸ್" ಎಂಬ ದೃಶ್ಯಕಾವ್ಯದ ಕನ್ನಡದ ಅನುವಾದ. ಗ್ರಂಥ ಕರ್ತರು ಅರಿತ ಸುರಿತ ಲೇಖಕರಲ್ಲೊಬ್ಬರೆಂದು ಹೆಸರುವಾಸಿಯನ್ನು ಪಡೆದವರು. ಶ್ರೀಮಾನ್ ರಂಗನಾಥರು ಈ ಗ್ರಂಥಕ್ಕೆ ಹಿನ್ನುಡಿಯನ್ನು ಬರೆದಿದ್ದಾರೆ. ಒಟ್ಟಿನ ಮೇಲೆ, ಭಾಷಾಂತರವು ಚೆನ್ನಾಗಿದೆ, ಮುದ್ರಣವು ಅಂದವಾಗಿದೆ. ಇದೇ ಲೇಖಕರು ಬರೆದಿರುವ 'ಯದು ಮಹಾರಾಜ', 'ನೀಳ್ಗತೆಗಳು' ಮುಂತಾದ ಗ್ರಂಥಗಳ ಸವಿಯೇ ಪ್ರಸ್ತುತ ಗ್ರಂಥದಲ್ಲಿಯೂ ಕಂಡುಬರುವುದು. ಆದರೂ, ಅನ್ಯಭಾಷೆಯಿಂದ ಪರಿವರ್ತಿಸಿದ ಗ್ರಂಥಗಳಿಗೆ ಸಹಜವಾದ ದೋಷಗಳೂ ಈ ಪುಸ್ತಕದಲ್ಲಿವೆ. ವೆನಿಸ್ ನಗರದ ರೀತಿ ನೀತಿಗಳಿಗೂ, ಹಿಂದಣ ಕಾಲದ ಅಲ್ಲಿಯ ಜನಜೀವನಕ್ಕೂ ಉಚಿತವೆನಿಸಿ ಸರಿಹೋಗುವ ಸನ್ನಿವೇಶಗಳನ್ನು ಭಾರತೀಯ ಜನಜೀವನಕ್ಕೆ ಹೊಂದಿಸಿ, ಅಲ್ಲಿಯ ಪಾತ್ರಗಳಿಗೆ ಇಲ್ಲಿಯ ಹೆಸರುಗಳನ್ನು ಕೊಟ್ಟು ದೃಶ್ಯಕಾವ್ಯವನ್ನು ಬರೆಯುವುದು ಅತ್ಯಂತ ಕಷ್ಟಸಾಧ್ಯವಾದ ವಿಷಯ. ಕೆಲವೆಡೆಗಳಲ್ಲಿ ಲೇಖಕರ ಪ್ರಯತ್ನವು ಸಾರ್ಥಕ ವೆನಿಸಿದ್ದರೂ ಉಳಿದೆಡೆಗಳಲ್ಲಿ, ದೋತರವನ್ನುಟ್ಟಾತನ ತಲೆಗೆ 'ಹ್ಯಾಟ'ನ್ನಿಟ್ಟಂತಿದೆ. ಗ್ರಂಥಕ್ಕಿಟ್ಟಿರುವ ಹೆಸರು ಕೇವಲ ಅರ್ಥದುಷ್ಟವಾಗಿದೆ. 'ಸುರತ ನಗರ'ವೆಂಬುದಕ್ಕೆ ಪ್ರತಿಯಾಗಿ ಮತ್ತೆ ಯಾವ ಹೆಸರನ್ನಾದರೂ ಆರಿಸಿದ್ದರೆ ಚೆನ್ನಾಗಿದ್ದಿತು.

ಮುಂದೆ ಕೊಡುವ ವಾಕ್ಯಗಳಲ್ಲಿ ಔಚಿತ್ಯವಿಲ್ಲವೆಂದು ವಿಷಾದದಿಂದ ಹೇಳ ಬೇಕಾಗುತ್ತದೆ:—

> ಬಾಲ ಸಂನ್ಯಾಸಿನಿಯಳೊಬ್ಬಳೇ ಮೌನವನ್ನಾಚರಿಸಬೇಕು.
> ಇವನು ಅಳುಬುರಕನಾದ ವೇದಾಂತಿಯಾಗತಕ್ಕವನು.
> ಓ! ಇವನು ನನ್ನ ತಂದೆಯು, ನನ್ನನ್ನು ಹುಟ್ಟಿಸಿದವನು!

ಹುಚ್ಚ ನನ್ನ ಮಗನೆ! ಆ ಜನರು ಊಟಕ್ಕೆ ಸಿದ್ಧರಾಗಿರುವುದನ್ನು ನಾನು ಕೇಳಲಿಲ್ಲ.
ಗೋಕರ್ಣದಲ್ಲಿ ಸ್ವಲ್ಪ ಸೀಕರಣೆ ತಂದರೆ ವ್ಯಾಕರಣವಾಗದು.

ಪ್ರಾಂತಿಕ ಪ್ರಯೋಗಗಳು :—

ಕಾಲಿಲೊದ್ದುಬಿಡು, ವೃದ್ಧಾಪ್ಯನೂ, ಮಿಕ್ಕಿದ, ವೀರಗಚ್ಚೆಯ, ಹೋಗಿಕೋ, ಒಟ್ಟಿನೊಳಗಿಂದ, ಹೇಳಲಿಯಾ......

ಒಟ್ಟಿನಲ್ಲಿ ನೋಡಿದರೆ, ಕೆಲವೆಡೆಗಳಲ್ಲಿ ಭಾಷಾಂತರವು ರಮಣೀಯವಾಗಿದೆ: ತಾರಾದೇವಿಯು (ಮೂಲ ಗ್ರಂಥದ 'ಪೋರ್ಷಿಯಾ') ಕರುಣೆಯ ವಿಷಯವಾಗಿ ಮಾಡುವ ಭಾಷಣವನ್ನು ಇದಕ್ಕೆ ಒಂದು ನಿದರ್ಶನವಾಗಿ ಹೇಳಬಹುದು. ಪಾತ್ರಗಳಿಗೆ ಮೂಲ ಗ್ರಂಥದಲ್ಲಿಯ ಹೆಸರುಗಳನ್ನೇ ಕೊಟ್ಟು, ಅಲ್ಲಿಯ ವಾತಾವರಣವೇ ಇರುವಂತೆ ರಚಿಸಿದ್ದರೆ ಗ್ರಂಥವು ಮತ್ತಷ್ಟು ಚೆನ್ನಾಗಿರುತ್ತಿದ್ದಿತು, ಹೆಚ್ಚಿನ ಉಪಕಾರವೂ ಆಗುತ್ತಿದ್ದಿತು. ಕಾಳಿದಾಸ ಮಹಾಕವಿಯ ಶಾಕುಂತಲ ನಾಟಕವನ್ನು ಭಾಷಾಂತರಕಾರರು ಯಾರಾದರೂ, ಪಾತ್ರಗಳ ಹೆಸರನ್ನು ಬದಲಾಯಿಸಿ, ಇಂಗ್ಲಿಷು ಭಾಷೆಗೆ ಪರಿವರ್ತಿಸಿದ್ದರೆ ಉಚಿತವಾಗಿ ತೋರುತ್ತಿದ್ದಿತೆ?

ಸಿ. ಕೆ. ವೆಂ.

---

## ೯. ಗೀತಾರ್ಥ ಚಂದ್ರಿಕೆ

ಲೇಖಕರು.—ಹೊಸಕೆರೆ ಚಿದಂಬರಯ್ಯನವರು, ಬೆಂಗಳೂರು.

ಕ್ರೌ ಅಷ್ಟಪತ್ರ ಪುಟಗಳು ೨೬+೪೩೨; ಅಧ್ಯಾತ್ಮ ಪ್ರಕಾಶ ಮುದ್ರಣಾಲಯ, ಬೆಂಗಳೂರು; ೧೯೩೦; ಬೆಲೆ ರೂ. ೨—೮—೦.

ಈ ಗ್ರಂಥದಲ್ಲಿ ಭಗವದ್ಗೀತೆಯ ಶ್ಲೋಕಗಳನ್ನು ಕನ್ನಡಾಕ್ಷರಗಳಲ್ಲಿ ಕೊಟ್ಟು, ಅವಕ್ಕೆ ಅನ್ವಯಕ್ರಮವಾಗಿ ಪ್ರತಿ ಪದವನ್ನೂ ಬತ್ತಿ ಕನ್ನಡದಲ್ಲಿ ಅರ್ಥವನ್ನೂ, ಆವಶ್ಯಕವಾದೆಡೆಯಲ್ಲಿ ವಿವರಣೆಯನ್ನೂ ಸುಲಭ ಶೈಲಿಯಲ್ಲಿ ಬರೆದಿದೆ. ಇದರ "ವ್ಯಾಖ್ಯಾನವು ಈಗ ಇರುವ ವ್ಯಾಖ್ಯಾನಗಳಲ್ಲೆಲ್ಲ ಅತ್ಯಂತ ಪುರಾತನವಾದ ಶಾಂಕರ ಸಂಪ್ರದಾಯದ ಹೆಜ್ಜೆಯನ್ನು ಹಿಡಿದು ಬರೆದದ್ದಾಗಿರುವದು" ಎಂದು ಲೇಖಕರು ಮುನ್ನುಡಿಯಲ್ಲಿ ಹೇಳಿದ್ದಾರೆ. ಭಗವದ್ಗೀತೆಯನ್ನು ತಕ್ಕ ಮಟ್ಟಿಗೆ ಅರ್ಥಮಾಡಿಕೊಳ್ಳಬೇಕೆಂಬ ಅಪೇಕ್ಷೆಯುಳ್ಳ ಸಂಸ್ಕೃತ ತಿಳಿಯದ ಕನ್ನಡಿಗರಿಗೆ ಈ ಗ್ರಂಥವು ಬಹಳ ಉಪಯೋಗಕರವಾದುದೆಂದು ಹೇಳಬೇಕಾಗಿಲ್ಲ. ಮುದ್ರಣವು ಅಂದವಾಗಿದೆ; ಮುದ್ರಣದ ತಪ್ಪುಗಳು ಕೇವಲ ವಿರಳ. ಪುಸ್ತಕದ ಆಕಾರವೂ ಒಳ್ಳೆಯ ರಕ್ಷಾವರಣವೂ ಶ್ಲಾಘ್ಯವಾಗಿವೆ. ಪುಸ್ತಕದ ಕೊನೆಯಲ್ಲಿ ಶ್ಲೋಕಾನುಕ್ರಮಣಿಕೆಯನ್ನು ಕೊಟ್ಟಿದೆ. ಈ ಪುಸ್ತಕಕ್ಕೆ ಕನ್ನಡಿಗರು ತಕ್ಕಷ್ಟು ಪ್ರೋತ್ಸಾಹವನ್ನಿತ್ತು ಪ್ರಸಿದ್ಧರಾದ ಈ ಗ್ರಂಥಕರ್ತರ ಶ್ರಮವನ್ನು ಸಾರ್ಥಕಗೊಳಿಸುವರೆಂದು ಹಾರೈಸುತ್ತೇವೆ.

---

## ೧೦. ಶ್ರೀಮದ್ಭಗವದ್ಗೀತೆಯು

(ಅಧ್ಯಾಯಗಳು ೧–೩)

ಅನುವಾದಕರು.—ವೈ. ಸುಬ್ಬರಾಯರು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಬೆಂಗಳೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೮+೧೪೮; ಅಧ್ಯಾತ್ಮ ಪ್ರಕಾಶ ಮುದ್ರಣಾಲಯ, ಬೆಂಗಳೂರು; ೧೯೩೦; ಬೆಲೆ ರೂ. ೧–೪–೦.



ಈ ಗ್ರಂಥದಲ್ಲಿ ಭಗವದ್ಗೀತೆಯ ಶ್ಲೋಕಗಳನ್ನು ಕಪ್ಪಕ್ಷರಗಳಲ್ಲಿ ಕೊಟ್ಟು, ಪ್ರತಿ ಶ್ಲೋಕಕ್ಕೂ ಕನ್ನಡದಲ್ಲಿ ಮೊದಲು ಭಾವಾರ್ಥವನ್ನೂ, ತರುವಾಯ ಶ್ರೀ ಶಾಂಕರ ಭಾಷ್ಯದ ವಿಚಾರಗಳನ್ನೂ ವಿಶದವಾಗಿ ಬರೆದಿದೆ; ವಿಷಯಗಳನ್ನು ಸ್ಪಷ್ಟಪಡಿಸುವುದ ಕ್ಕಾಗಿ ಕೆಳಗೆ ಸಣ್ಣ ಅಕ್ಷರಗಳಲ್ಲಿ ಟಿಪ್ಪಣಿಗಳನ್ನು ಕೊಟ್ಟಿದೆ. ಅನುವಾದದ ಶೈಲಿಯು ಸ್ಪಷ್ಟವಾಗಿಯೂ ಸರಳವಾಗಿಯೂ ಸುಲಭವಾಗಿಯೂ ಇದೆ. ಲೇಖಕರು ಅನೇಕ ಉಪಯುಕ್ತಾಂಶಗಳನ್ನು ಶ್ರಮಪಟ್ಟು ಸಂಗ್ರಹಿಸಿ ಬರೆದಿರುತ್ತಾರೆ. ಭಗವದ್ಗೀತೆಯ ವಿಷಯಗಳನ್ನು ವಿಶದವಾಗಿ ತಿಳಿದುಕೊಳ್ಳಲಪೇಕ್ಷಿಸುವ ಸಂಸ್ಕೃತ ತಿಳಿಯದ ಕನ್ನಡಿಗರಿಗೆ ಇದು ಬಹಳ ಉಪಯೋಗಕರವಾಗಿರುವುದು. ಕಾಗದವೂ ಮುದ್ರಣವೂ ಅಂದವಾಗಿವೆ: ಮುದ್ರಣದ ತಪ್ಪುಗಳು ಬಹಳ ವಿರಳ. ಈ ಪುಸ್ತಕವು ಕನ್ನಡಿಗರ ಮನ್ನಣೆಗೂ ಆದರಣೆಗೂ ಅರ್ಹವಾದುದೆಂದು ನಮ್ಮ ಅಭಿಪ್ರಾಯ.

---

## ೧೧. ಶ್ರೀ ಶಂಕರ ಮಹಾ ಮನನ

ಲೇಖಕರು.—ವೈ. ಸುಬ್ಬರಾಯರು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಬೆಂಗಳೂರು.

ಡೆಮ್ಮೈ ಷೋಡಶ ಪತ್ರ ಪುಟಗಳು ೪೮; ಅಧ್ಯಾತ್ಮ ಪ್ರಕಾಶ ಮುದ್ರಣಾಲಯ, ಬೆಂಗಳೂರು; ೧೯೩೦; ಬೆಲೆ ರೂ. ೦–೨–೬.

"ಈ ಚಿಕ್ಕ ಪುಸ್ತಕದಲ್ಲಿ ವೇದಾಂತ ಪ್ರಕ್ರಿಯೆಯ ಗುಟ್ಟನ್ನೆಲ್ಲ ಶ್ರೀ ಶಂಕರ ಭಗವತ್ಪಾದರವರ ಅಮೃತ ವಾಣಿಯ ಆಧಾರದಿಂದಲೆ ಹೊರಗೆಡವಿರುತ್ತದೆ" ಎಂದು ಪೀಠಿಕೆಯಲ್ಲಿ ಹೇಳಿದೆ. ಇದರಲ್ಲಿ ಲೇಖಕರು ಬ್ರಹ್ಮವಿದ್ಯೆ, ಬ್ರಹ್ಮ, ಪ್ರಪಂಚ ಮೊದಲಾದ ೪೬ ವೇದಾಂತ ವಿಷಯಗಳನ್ನು ವಿವರಿಸಿ, ಅವಕ್ಕೆ ಆಧಾರವಾಗಿ ಅಲ್ಲಲ್ಲಿ ಭಗವದ್ಗೀತೆ, ಬ್ರಹ್ಮಸೂತ್ರ, ಬೃಹದಾರಣ್ಯಕಾದಿ ಉಪನಿಷತ್ತುಗಳು—ಇವುಗಳ ಭಾಷ್ಯದಿಂದಲೂ, ಉಪದೇಶ ಸಾಹಸ್ರೀ ಎಂಬ ಗದ್ಯ ಗ್ರಂಥದಿಂದಲೂ ಉದಾಹರಣೆ ಗಳನ್ನು ಕೊಟ್ಟು ವಿಷಯಗಳು ಸ್ಪಷ್ಟವಾಗುವಂತೆ ಬರೆದಿದ್ದಾರೆ; ಬಹು ಶ್ರಮಪಟ್ಟು ಅನೇಕ ವಿಷಯಗಳನ್ನು ಸ್ವಲ್ಪದರಲ್ಲಿ ಸಂಗ್ರಹಿಸಿರುವುದಲ್ಲದೆ ಸ್ಪಷ್ಟವಾಗುವಂತೆ ವಿಷಯ ನಿರೂಪಣೆಯನ್ನೂ ಮಾಡಿರುವುದರಿಂದ ಶಂಕರ ಸಿದ್ಧಾಂತ ಪರಿಚಯಕ್ಕೆ ಈ ಚಿಕ್ಕ ಪುಸ್ತಕವು ಬಹು ಮಟ್ಟಿಗೆ ಸಹಾಯಕವಾಗುವುದು.

---

## ೧೨. ರಘುವಂಶ

(ಒಂದನೆಯ ಸರ್ಗ)

ಪ್ರಕಾಶಕರು.—ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟಗಳು ೧೬+೧೨೦; ಬೆಲೆ (ಸಾದಾ ಕಾಗದ) ೬ ಆಣೆ,

(ಹೊಳಪು ಕಾಗದ) ೮ ಆಣೆ.

ಸಂಸ್ಕೃತದಲ್ಲಿ ಕಾಳಿದಾಸನು ಬರೆದಿರುವ 'ರಘುವಂಶ'ದ ಶ್ಲೋಕಗಳಿಗೆ ಕನ್ನಡದಲ್ಲಿ "ಪ್ರತಿಪದಾರ್ಥ, ತಾತ್ಪರ್ಯ, ವಿಗ್ರಹ ವಾಕ್ಯ, ವ್ಯಾಕರಣ ವಿಶೇಷ ವಿಚಾರ, ವಿಶೇಷ ಶಬ್ದಗಳು, ಕ್ರಿಯಾ ರೂಪಗಳು, ಕಥಾ ಸಂದರ್ಭ—ಮುಂತಾದ ವಿಷಯ"ಗಳನ್ನು ಈ ಪುಸ್ತಕದಲ್ಲಿ ಕೊಟ್ಟಿದೆ. ಮೊದಲಲ್ಲಿ 'ಕಾಳಿದಾಸನ ವಿಚಾರ'ವೂ ರಘುವಂಶದ (ಒಂದನೆಯ ಸರ್ಗದ) ಮೂಲವೂ ಕನ್ನಡ ಅಕ್ಷರದಲ್ಲಿದೆ. ತರುವಾಯ, ಗ್ರಂಥದಲ್ಲಿ ಪ್ರತಿ ಶ್ಲೋಕವನ್ನೂ ದೇವನಾಗರಿಯಕ್ಷರಗಳಲ್ಲಿ ಬರೆದು ಅದರ ವಿಚಾರವನ್ನೆಲ್ಲ ಹೇಳಲಾಗಿದೆ. ಕೊನೆಯಲ್ಲಿ ಕೊಟ್ಟಿರುವ 'ಪರಿಶಿಷ್ಟ'ದಲ್ಲಿ, ವಿಷಯಗಳ ವಿಂಗಡವೂ, ವ್ಯಾಕರಣ, ಛಂದಸ್ಸು, ಅಲಂಕಾರ—ಇವುಗಳ ವಿಚಾರವೂ, ಪರೀಕ್ಷೆಯ ಪ್ರಶ್ನೆಗಳೂ, ತಿದ್ದುಪಡಿಯೂ ಇವೆ.

ಇದು ಸಂಸ್ಕೃತ ವಿದ್ಯಾರ್ಥಿಗಳಿಗೆ ಬಹಳ ಉಪಯೋಗಕರವಾಗಿರುವುದಲ್ಲದೆ ಸ್ವತಃ ಸಂಸ್ಕೃತಾಭ್ಯಾಸ ಮಾಡಲಪೇಕ್ಷೆಯುಳ್ಳ ಇತರರಿಗೂ ಬಹಳ ಉಪಯುಕ್ತವಾಗಿರುವುದು. ಕನ್ನಡಿಗರು ಇದಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಟ್ಟು ಮುಂದಣ ಸರ್ಗಗಳೂ ಬೇಗನೆ ಪ್ರಕಟವಾಗುವಂತೆ ಮಾಡುವರೆಂದು ಹಾರೈಸುತ್ತೇವೆ.

---

## ೧೩. ಶ್ರೀ ಕರ್ಣಾಟಕ ಸ್ಕಾಂದ ಮಹಾ ಪುರಾಣ

ಗ್ರಂಥಕರ್ತರು.—ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳು, ಬೆಂಗಳೂರು.

ಬಿ. ಬಿ. ಡಿ. ಪವರ್ ಪ್ರೆಸ್, ಬೆಂಗಳೂರು; ೧೯೨೮; ಬೆಲೆ ರೂ. ೧—೮—೦.

ವ್ಯಾಸರು ಸಂಸ್ಕೃತದಲ್ಲಿ ರಚಿಸಿರುವ ಅಷ್ಟಾದಶ ಪುರಾಣಗಳಲ್ಲೊಂದಾದ ಸ್ಕಾಂದ ಪುರಾಣದ ಕನ್ನಡದ ಅನುವಾದವಿದು. ಇದರಲ್ಲಿ 'ಮಾಹೇಶ್ವರ ಖಂಡದ ೧ನೆಯ ಕೇದಾರ ಖಂಡ'ವಿದೆ. ಲೇಖಕರು ಮುನ್ನುಡಿಯಲ್ಲಿ, "ಆಂಗ್ಲ ವಾತಾವರಣದಿಂದ ಸಂಸ್ಕೃತ ಭಾಷೆಯು ನಾಶವಾಗಿ, ಆ ಭಾಷೆಯಲ್ಲಿರುವ ಪುರಾಣಗಳು ಯಾರಿಗೂ ತಿಳಿಯದೇ ಇರುವುದರಿಂದ ಆರ್ಯ ಧರ್ಮಗಳೂ ಖಿಲವಾಗುತ್ತ ಬಂದಿರುವವು.....ಆದುದರಿಂದ ಕೈಲಾದಷ್ಟು ಮಟ್ಟಿಗೆ ಕರ್ಣಾಟಕ ಭಾಷಾ ಸೇವೆಯನ್ನೂ, ದೇಶಸೇವೆಯನ್ನೂ ಮಾಡಲೆಳಸಿ ಶಿವೋತ್ಕೃಷ್ಟತ್ವವನ್ನು ವಿವರಿಸುವ ಈ ಸ್ಕಾಂದ ಮಹಾ ಪುರಾಣವನ್ನು" ಬರೆದಿರುವುದಾಗಿ ತಿಳಿಸುತ್ತಾರೆ. ಈ ಪುರಾಣದ ಕಥೆಗಳು ರಾಮಾಯಣಾದಿಗಳಷ್ಟು ರೂಢಿಯಲ್ಲಿಲ್ಲದುದರಿಂದ, ಇವುಗಳ ವಿಚಾರವನ್ನು ತಿಳಿಯಲು ಕುತೂಹಲವುಳ್ಳ ಕನ್ನಡಿಗರಿಗೆ ಈ ಗ್ರಂಥವು ಅತ್ಯಂತೋಪಕಾರಕವಾಗಿರುವುದು.

ಭಾಷಾ ಶೈಲಿಯು ಸುಲಭವಾಗಿಯೂ ಸರಳವಾಗಿಯೂ ಇರುವ ತಿಳಿಗನ್ನಡವಾಗಿರುವುದರಿಂದ ಆಬಾಲವೃದ್ಧರೂ ಈ ಗ್ರಂಥವನ್ನು ಓದಬಹುದಾಗಿದೆ. ಪುಸ್ತಕದ ಕಾಗದವೂ ಮುದ್ರಣವೂ ಬಟ್ಟೆಯ ರಕ್ಷಾವರಣವೂ ಬಹಳ ಅಂದವಾಗಿದ್ದು ಕನ್ನಡ ಪುಸ್ತಕ ಭಾಂಡಾಗಾರಕ್ಕೆ ಅಲಂಕಾರಪ್ರಾಯವಾಗಿರುವುದು. ಆದರೆ, ಭಾಷಾ ನ್ಯೂನತೆಯೂ ಅಶುದ್ಧ ಪ್ರಯೋಗಗಳೂ ಅಲ್ಲಲ್ಲಿ ಕಾಣಬರುವುವು. ಇವನ್ನು ಗ್ರಂಥಕರ್ತರು ಮುಂದಣ ಮುದ್ರಣದಲ್ಲಿ ನೇರ್ಪಡಿಸುವರೆಂದು ಕೋರುತ್ತೇವೆ.

ಮೊದಲು ಕೆಲವು ಪುಟಗಳಲ್ಲಿಯ ಅಶುದ್ಧ ಪ್ರಯೋಗಗಳು :—

ಭಾರತೇಯ, ಪಸಾತವಾಗಿ, ಅನೇಕವುಗಳನ್ನು, ಕೈಲಾದಷ್ಟು, ಭಗರ್ವಾ ವ್ಯಾಸರು (ಮು. ೩); ನಿಶ್ಮೀಮರೂ (ಪು. ೬); ಋಷ್ಟಿಕರಾದರು (೮); ರಕ್ತ ಮಳೆ (೧೬); ದುರ್ನಡತೆ (೧೭).

ಮುಂದೆ ಕೊಡುವ ವಾಕ್ಯಗಳು ಅಷ್ಟು ಸಮಂಜಸವಾಗಿ ತೋರುವುದಿಲ್ಲ:—

(ಪು. ೧೬) ಗಾಳಿಯು ಸಕ್ಕರೆಯಿಂದ ಮಿಶ್ರವಾಗಿ ವಕ್ರ ವಕ್ರವಾಗಿ ಬೀಸತೊಡಗಿತು. ಪರ್ಜನೀ ದೇವತೆಯು ರಕ್ತ ಮಳೆಯನ್ನು ಸುರಿಸಲಾರಂಭಿಸಿತು. ಸಾವಿರಾರು ಉಲ್ಕಾಪಾತಗಳು ಬೀಳಲಾರಂಭಿಸಿದವು.

(ಪು. ೧೯) ನಿರುೃತಿಯು ಪ್ರೇತವನ್ನು ಹತ್ತಿಕೊಂಡನು.

---

## ೧೪. ಭಾರತದ ಸವಿಕಟ್ಟು

ಲೇಖಕರು.—ಹೊಸಕೆರೆ ಶ್ರೀನಿವಾಸಮೂರ್ತಿಗಳು, ವೇದಾಂತ ಶಿರೋಮಣಿ, ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟಗಳು ೧೨೮ ; ಅಧ್ಯಾತ್ಮ ಪ್ರಕಾಶ ಮುದ್ರಣಾಲಯ, ಬೆಂಗಳೂರು ; ೧೯೨೯ ; ಬೆಲೆ ೧೨ ಆಣೆ.

ಮಹಾಭಾರತದ ವಿಸ್ತಾರವಾದ ಕಥೆಯನ್ನು ಸಂಗ್ರಹವಾಗಿ ತಿಳಿಸಬೇಕೆಂಬ ಉದ್ದೇಶದಿಂದ ಲೇಖಕರು ಶ್ರೀಮದನಂತಕವಿ ವಿರಚಿತ ಸಂಸ್ಕೃತ ಚಂಪೂ ಕಾವ್ಯವನ್ನು ಗದ್ಯರೂಪದಲ್ಲಿ ಕನ್ನಡಿಸಿರುತ್ತಾರೆ; 'ಸವಿ ಕಟ್ಟು' ಎಂಬ ಪದ ಪ್ರಯೋಗದಿಂದ, ಲೇಖಕರು ಅನಂತ ಕವಿಯ ಕಾವ್ಯವನ್ನು ಮಹಾಭಾರತದ ಅತ್ಯುತ್ತಮವಾದ ಸಂಗ್ರಹವೆಂದು ಹೇಳಿದಂತಾಯಿತು.

ಭಾಷಾ ಶೈಲಿಯು ಸುಲಭವಾಗಿಯೂ ಸರಳವಾಗಿಯೂ ಇದೆ. ಮೂಲ ಗ್ರಂಥದ ವಿಶೇಷ ವರ್ಣನಾ ಭಾಗಗಳನ್ನೂ ಶ್ಲೇಷಾದಿಗಳನ್ನೂ ಬಿಟ್ಟು ಕೇವಲ ಕಥಾ ಭಾಗವನ್ನೇ ಲೇಖಕರು ಎತ್ತಿಕೊಂಡಿರುತ್ತಾರೆ. ಭಾಷೆಯು ಜನರು ಸಾಮಾನ್ಯವಾಗಿ ಮಾತನಾಡುವಂತಿರುವುದರಿಂದ ಶಬ್ದ ರೂಪಗಳು, ವ್ಯಾಕರಣ ಮೊದಲಾದುವಕ್ಕೆ

ಅಷ್ಟು ಗಮನಕೊಟ್ಟಂತಿಲ್ಲ. ಕಾಗದವೂ ಮುದ್ರಣವೂ ಅಂದವಾಗಿವೆ. ಮುದ್ರಣದ ತಪ್ಪುಗಳು ಬಹಳ ಕಡಿಮೆ.

ಮೊದಲನೆಯ ಕೆಲವು ಪುಟಗಳಲ್ಲಿಯ ಕೆಲವು ಅಶುದ್ಧ ರೂಪಗಳು :—

ಯಾಲಕ್ಕಿ, ಕೇಸರಿ (ಮು. ೧); ಆದ್ದರಿಂದ, ಬರೀ ಕಥೆ (ಮು. ೨); ಬರದೆ (ಮು. ೩); ನಾಲಿಗೆ (ಮು. ೪); ಬೆಳಿದಿತ್ತು (ಪು. ೧); ಆಯಸ್ಸು (೪); ನಿರ್ದೋಷಿಯಾದ ಕುಂತಿ (೭); ಹಸಿವೆಗೊಂಡು (೮); ಮಲಪಿನಿಂದ (೧೧)......



## ೧೫. ತುಲಸೀದಾಸ ರಾಮಾಯಣ

(ಬಾಲಕಾಂಡ)

ಅನುವಾದಕರು.—ದತ್ತಾತ್ರೇಯ ಕೃಷ್ಣ ಭಾರದ್ವಾಜರು, ಬೆಂಗಳೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೩೪+೨೫೮+೧೬೩; ಫೀನಿಕ್ಸ್ ಪ್ರಿಂಟಿಂಗ್ ಹೌಸ್, ಬೆಂಗಳೂರು.

ಇದು ಶ್ರೀಮದ್ಗೋಸ್ವಾಮಿ ತುಳಸೀದಾಸರು ಹಿಂದಿಯಲ್ಲಿ ಬರೆದಿರುವ ರಾಮಾಯಣದ ಕನ್ನಡದ ಅನುವಾದವು; ಕರ್ಣಾಟಕ ಟೀಕೆ, ಟಿಪ್ಪಣಿ, ಗೂಢಾರ್ಥ ಕೋಶ, ರಾಮ ಶಲಾಕ ಪ್ರಶ್ನೆ, ತುಳಸೀದಾಸರ ಜೀವನಚರಿತ್ರೆ—ಇವುಗಳನ್ನು ಕೊಟ್ಟಿರುವುದಲ್ಲದೆ, ಹಿಂದೀ ಮೂಲವನ್ನೂ, ಸಂದರ್ಭಕ್ಕೆ ತಕ್ಕಂತೆ ಅಲ್ಲಲ್ಲಿ ಚಿತ್ರಗಳನ್ನೂ ಸೇರಿಸಿದೆ. ಈ ಗ್ರಂಥದ ಮೊದಲನೆಯ ೬೪ ಪುಟಗಳ ಸಂಚಿಕೆಯನ್ನು ಪರಿಷತ್ಪತ್ರಿಕೆಯ ೧೦ನೆಯ ಸಂಪುಟದ ೨೪೨ನೆಯ ಪುಟದಲ್ಲಿ ವಿಮರ್ಶೆ ಮಾಡಿದೆ. ರಾಮಾಯಣದ ಕಥೆಯನ್ನು ಪ್ರಕಾರಾಂತರವಾಗಿ ವಿವರಿಸಿರುವ ಈ ಗ್ರಂಥವು ಆದರಣೀಯವಾಗಿರುವುದು.

## ೧೬. ಬಾಲರಂಜನ

ಲೇಖಕರು.—ಪುಣೆ ನರಸಿಂಹಾಚಾರ್ಯರು, ಕಾವ್ಯಾನಂದ, ಇತ್ಯಾದಿ.

ಸಂಪಾದಕರು.—ದೇಶಪಾಂಡೆ ರಾಮರಾಯರು, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೧೪ : ವಿಜಯ ಮುದ್ರಣಾಲಯ, ಧಾರವಾಡ; ೧೯೩೦ ; ಬೆಲೆ ೧ ಆಣೆ.

ಇದು "ಕರಿನಾಡಿನ ಬಾಲಬಾಲಕಿಯರಿಗೆ ಓದುವ ಅಭಿರುಚಿ ಬೆಳೆಸಲು" ಬರೆದ ಪುಸ್ತಕವೆಂದೂ, "ವರಣ ಬೆರೆತ ವರಣ ಹಾಕದೆ ಇರುವ ಈ ತರದ ಸಾಹಸವು ಕರಿನಾಡ ನುಡಿಯೊಳು ಇದೇ ಮೊದಲನೆಯದು" ಎಂದೂ ಸಂಪಾದಕರು ಹೇಳುತ್ತಾರೆ. ಈ ಪುಸ್ತಕದಲ್ಲಿ ೨೦ ಸಣ್ಣ ನೀತಿ ಕಥೆಗಳಿವೆ; ಪ್ರತಿ ಕಥೆಯ ಕೊನೆಯಲ್ಲಿಯೂ ಅದೇ ವಿಚಾರದ ಹೊಸಗನ್ನಡದ ಒಂದು ಕಂದಪದ್ಯವಿದೆ.

## ೧೭. ಸತ್ಯಾಗ್ರಹ ವಿಜಯ

ಲೇಖಕರು.—ಶೇಷಶರ್ಮಾ ಹೆಬ್ಬಾಳಕರ, ಸುರಪುರ.

ಫೂಲ್‌ಸ್ಕ್ಯಾಪ್ ಅಷ್ಟಪತ್ರ ಪುಟ ೧೨ ; ಕರ್ಮವೀರ ಮುದ್ರಾಲಯ ; ೧೯೨೯ ; ಬೆಲೆ ೧ ಆಣೆ.

ಈ ಸಣ್ಣ ಪುಸ್ತಕದಲ್ಲಿ ಪ್ರಹ್ಲಾದನ ವಿಚಾರವನ್ನು ನಾಟಕ ರೂಪದಲ್ಲಿ ವಿವರಿಸಿ ಈಗಿನ 'ಸತ್ಯಾಗ್ರಹ'ಕ್ಕೆ ಮಾದರಿಯಾಗಿ ತೋರಿಸಿದೆ.

---

## ೧೮. ಖಾದಿಯ ಅರ್ಥಶಾಸ್ತ್ರ

ಅನುವಾದಕರು.—ಅನಂತ ಅಣ್ಣಾಜಿ ಚಿಕ್ಕೋಡಿ.

ಪ್ರಕಾಶಕರು.—ವೆಂಕಟೇಶ ಶ್ರೀನಿವಾಸ ಪಂಡಿತ, ಬೆಳಗಾಂವಿ.

ಕ್ರೌ ಅಷ್ಟಪತ್ರ ಪುಟಗಳು ೪೧ ; ಸೀತಾರಾಮ ಮುದ್ರಣಾಲಯ, ಬೆಳಗಾಂವಿ ; ಬೆಲೆ ೪ ಆಣೆ.

ಇದು 'ಖಾದೀ ತ್ರಿಮೂರ್ತಿ'ಗಳಲ್ಲೊಬ್ಬರಾಗಿರುವ ಬಾಬೂ ರಾಜೇಂದ್ರ ಪ್ರಸಾದರವರು ಆಂಗ್ಲ ಭಾಷೆಯಲ್ಲಿ ಬರೆದಿರುವ 'Economics of Khadi' ಎಂಬ ಹೊತ್ತಿಗೆಯ ಕನ್ನಡ ಅನುವಾದವೆಂದು ಮುನ್ನುಡಿಯಲ್ಲಿ ಹೇಳಿದೆ.

---

## ೧೯. ದಿವ್ಯ ಜ್ಯೋತಿ

(ಎರಡನೆಯ ಸಂಪುಟದ ಸಂಚಿಕೆಗಳು ೧೦, ೧೧, ೧೨)

ಸಂಪಾದಕರು.—ಕೆ. ವೆಂಕಟರಾಮಯ್ಯನವರು, ಬಸವನಗುಡಿ, ಬೆಂಗಳೂರು.

ಡೆಮ್ಮೈ ಅಷ್ಟಪತ್ರ ಪುಟಗಳು (ಪ್ರತಿ ಸಂಚಿಕೆಯಲ್ಲಿಯೂ) ೩೨ ;

ಶ್ರೀ ಲಕ್ಷ್ಮೀನರಸಿಂಹ ಪ್ರೆಸ್, ಬೆಂಗಳೂರು ; ೧೯೨೯ ; ವಾರ್ಷಿಕ ಚಂದಾ ೧ ರೂಪಾಯಿ.

"ಇದು ಬ್ರಹ್ಮವಿದ್ಯಾ ಸಮಾಜ ಮತ್ತು ಜಗದ್ಗುರು ಸೇವಾ ಸಂಘಗಳ ಕರ್ನಾಟಕ ಶಾಖೆಯಿಂದ ಹೊರಡುವ ಮಾಸಪತ್ರಿಕೆ." ಮಾನವ ಜೀವನ ವಿಚಾರ, ಸತ್ಪ್ರವೃತ್ತಿ ಸದಾಚಾರಗಳು, ಜ್ಞಾನಾರ್ಜನೆ, ಐಹಿಕಾಮುಷ್ಮಿಕ ಸುಖ ಸಂಪಾದನೆ, ಪಾರಮಾರ್ಥಿಕತೆ, ಪರೋಪಕಾರ—ಇವೇ ಮೊದಲಾದ ವಿಷಯಗಳನ್ನು ಜನರಿಗೆ ತಿಳಿಸಿ ಪರಿಸಬೇಕೆಂಬುದೇ ಈ ಪತ್ರಿಕೆಯ ಉದ್ದೇಶವೆಂದು ತೋರುವುದು.

---

## ೨೦. ಕಲಾ

(ಸಂಪುಟ ೧, ಸಂಚಿಕೆ ೨; ಏಪ್ರಿಲ್ ೧೯೩೦)

ಸಂಪಾದಕರು.—ಎ. ಎನ್. ಸುಬ್ಬರಾಯರು, ಕಲಾ ಮಂದಿರ, ಬೆಂಗಳೂರು.

ಕ್ರೌ ಚತುಷ್ಪತ್ರ ಪುಟ ೩೨ ; ಮಕ್ಕಳ ಪುಸ್ತಕದ ಪ್ರೆಸ್, ಬೆಂಗಳೂರು; ೧೯೩೦;

ವಾರ್ಷಿಕ ಚಂದಾ ರೂ. ೩—೮—೦.

ಇದು "ಕನ್ನಡ ನಾಡಿನ ವಿದ್ಯಾ, ಲಲಿತ ಕಲೆ ಮತ್ತು ಕುಶಲ ವಿದ್ಯೆಗಳ ಸಚಿತ್ರ ಮಾಸ ಪತ್ರಿಕೆ." "ಸ್ವತಂತ್ರವೇ ಸ್ವರ್ಗ, ಸ್ವಾವಲಂಬನೆಯೇ ಸ್ವರ್ಗದ ಹಾದಿ" ಎಂಬುದು ಈ ಪತ್ರಿಕೆಯ ಆದರ್ಶ ವಾಕ್ಯವೆಂದು ತೋರುವುದು. ಪ್ರಕೃತ ಸಂಚಿಕೆ

ಯಲ್ಲಿ ಮಕ್ಕಳು, ಸಹಜ ಶಿಕ್ಷಣ, ಕಲೆಯ ಹೊಸ ಹಾದಿ, ಚಿತ್ರದ ಚದುರ, ಪ್ರಾಣಿ ಹಿಂಸಾ ನಿರೋಧ, ಚಿತ್ರ ಕಲಾ, ರಂಗವಲ್ಲೀ ಕಲೆ, ಮಹಿಳಾಮೋದ—ಎಂಬ ಲೇಖನ ಗಳೂ, ಸಂಪದಭ್ಯುದಯ ಸಮ್ಮೇಳನ, ನಿರುದ್ಯೋಗದ ಸಮಸ್ಯೆ, ಮಕ್ಕಳ ಮಾತು, ಗಾಂಧಿಯವರಿಗೆ ಅಜ್ಜಿಯ ಆಶೀರ್ವಾದ—ಇವೇ ಮೊದಲಾದ ಪ್ರಾಪಂಚಿಕ ವಿಷಯ ಗಳೂ, ಕಲಾವಿದರೂ, ಪಂಡಿತರೂ, ವಿದ್ಯಾಭಿಮಾನಿಗಳೂ—ಇವರ ಪ್ರಶಂಸೆಯೂ, 'ಕಲಾ ಪಂಥದ ಚೌಕಗಳೂ' ಇವೆ. ಇಂತಹ ಪತ್ರಿಕೆಯು ಈಗಿನ ಕಾಲಕ್ಕೆ ಬಹಳ ಆವಶ್ಯಕವಾದುದೆಂದು ಹೇಳಬೇಕಾಗಿಲ್ಲ. ಬಾಲಕ ಬಾಲಿಕೆಯರು ಮೊದಲಾಗಿ ಎಲ್ಲರಿಗೂ ಕಲೆಗಳಲ್ಲಿ ಆಸಕ್ತಿಯನ್ನು ಹುಟ್ಟಿಸಬೇಕೆಂಬುದೇ ಈ ಪತ್ರಿಕೆಯ ಉದ್ದೇಶವು. ಹೊಸ ಮಾದರಿಯ ಪತ್ರಿಕೆಯಾದುದರಿಂದ ಕನ್ನಡಿಗರೆಲ್ಲರೂ ಇದಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಡಬೇಕೆಂಬುದೇ ನಮ್ಮ ಹಾರೈಕೆ.

ಕೆಲವು ಕುಂದು ಕೊರತೆಗಳನ್ನು ತೋರಿಸದಿದ್ದರೆ ವಿಮರ್ಶೆಯನ್ನು ಸರಿಯಾಗಿ ಮಾಡಿದಂತಾಗುವುದಿಲ್ಲ. ಇಂತಹ ಪತ್ರಿಕೆಯ ಮುದ್ರಣವೂ ಚಿತ್ರಗಳೂ ಬಹಳ ಅಂದವಾಗಿರಬೇಕು; ಮುದ್ರಣ ಮೊದಲಾದ ದೋಷಗಳು ಇರಬಾರದು; ಸಾಧ್ಯವಾದ ಮಟ್ಟಿಗೆ ಭಾಷಾ ಸೌಷ್ಠವವನ್ನು ಉಳಿಸಿಕೊಳ್ಳಬೇಕು. ಆದರೆ, ಇವೆಲ್ಲಕ್ಕೂ ಹೆಚ್ಚು ಹಣ ಬೇಕು. ಇದನ್ನು ದೇಶಾಭಿಮಾನಿಗಳು ಒದಗಿಸಿಕೊಟ್ಟು, ಸಂಪಾದಕರು ಈ ವಿಷಯಗಳೆಲ್ಲಕ್ಕೂ ಹೆಚ್ಚು ಗಮನಕೊಡುವಂತೆ ಮಾಡಬೇಕೆಂಬುದೇ ನಮ್ಮ ಪ್ರಾರ್ಥನೆ.

ಕೆಲವು ತಪ್ಪುಗಳನ್ನೂ ಕುಂದುಗಳನ್ನೂ ಮಾತ್ರ ನಿರ್ದೇಶಿಸುವೆವು; ಇವನ್ನು ನೇರ್ಪಡಿಸಬೇಕೆಂಬ ಅಭಿಪ್ರಾಯದಿಂದಲ್ಲದೆ ಅನ್ಯಥಾ ಅಭಿಪ್ರಾಯದಿಂದಲೂ ಅಲ್ಲ.

(೧) ವಿರಾಮ ಚಿಹ್ನೆಗಳನ್ನು ಉಪಯೋಗಿಸಿದ್ದರೂ ಅವುಗಳ ಸೌಷ್ಠವಕ್ಕೆ ಅಷ್ಟು ಗಮನ ಕೊಟ್ಟಿಲ್ಲ. ಇದಕ್ಕೆ ಸಾಮಾನ್ಯವಾಗಿ ಲೇಖಕರು ಗಮನ ಕೊಡ ದಿರುವುದು ಶೋಚನೀಯವಾದ ವಿಷಯ.

ಉದಾ.—(ಪುಟ ೩೪) ತಂದೆಗೂ ಮಗನಿಗೂ ಕೇಶಾಕೇಶಿ. ದಂಡಾದಂಡಿ. ಅದು ಉತ್ತರ ರೂಪ.

(೪೧) ಸರಳತೆ ಎಂದರೇನು :—ಎಂಬುದನ್ನು ಸ್ವಲ್ಪ ವಿವರಿಸಲೇ ಬೇಕಾಗಿದೆ.

(೪೩) ಅವರ ಮಾತು ಬಲು ರುಚಿ, ಊರ ಜನರು; ಅವರಿಗೆ ಅಡ್ಡಬಿದ್ದು. . . .

(೪೪) ಮಗೂ ಪಟ್ಟಣಗಳು ನೋಡಲು ಅಂದ.

(೪೭) ನನ್ನೊಡೆಯ ಅಪ್ಪಣೆಯಾದರೆ ಅರಗಳಿಗೆಯಲ್ಲಿ ಮಾಡಿ ತೋರಿಸುವೆನು.

(೫೩) ರಂಗವಲ್ಲಿಯು ಬಾರದ ಹೆಂಗಸು ಹೆಂಗಸೇ ಅಲ್ಲ, ಎಂಬ ಭಾವನೆಯುಂಟು.

(೫೫) ಸ್ತ್ರೀಯರ ಕರ್ತವ್ಯವೇನು? ಸಂಸಾರದಲ್ಲಿಯೂ, ಸಮಾಜದಲ್ಲಿಯೂ, ಇವರ ತರಗತಿ ಯಾವುದು, ಪೂರ್ವಕಾಲದಲ್ಲಿ ಇವರ ಸ್ಥಿತಿಯು ಹೇಗಿದ್ದಿತು? ಈಗ ಹೇಗಿದೆ. ಈ ವಿಷಯದಲ್ಲಿ ವಿಮರ್ಶೆ ಮಾಡಲು ಆಶಿಸುವೆನು.

(೫೮) ಪ್ರಕೃತ ಬೆಂಗಳೂರಲ್ಲಿ ಸಂಗೀತ ಕಲಾಧ್ಯಾಪಕರಾಗಿರುವರು. ೧೯೨೩ರಲ್ಲಿ ನಡೆದ ಸಂಗೀತದ ಪ್ರೌಢ ಪರೀಕ್ಷೆಯಲ್ಲಿಯೂ ಉತ್ತೀರ್ಣರಾಗಿರುವರು.

೧೯೨೫ನೆಯ ಸಂವತ್ಸರದಲ್ಲಿ ನಮ್ಮ ಶ್ರೀಮನ್ ಮಹಾರಾಜರವರ ಆಸ್ಥಾನ ದಲ್ಲಿ ತಮ್ಮ ವಿದ್ವತ್ತನ್ನು ಪ್ರಕಾಶಗೊಳಿಸಿ ಅವರಿಂದ ಬಹುಮಾನ ಪಡೆದಿರುವರು.

(೨) ಅಸ್ಪಷ್ಟ ರೂಪಗಳು—

ಕೂಸೇಯಂತೆ (ಪು. ೩೪), ಹಿಂತಿರುಗು (೩೫), ಪಾಶ್ಚಿಮಾತ್ಯ (೩೫), ರಸಲ್ ರವರು (೩೫), ಉತ್ತಮ ನಡತೆ (೩೬), ಬೆಳೆಸತಕ್ಕ (೩೬), ಬಲೋದ್ಬಂದಿ (೩೬), ಪುಸ್ತುಕ (೩೭), ಅನೌಲ್ಯವಾದ (೩೮, ೫೯), ಉತ್ತುಮ (೩೮, ೩೯, ೫೩), ನಡೆಸು (೩೮), ಕಠಿಣ (೩೯), ಹಿಂತೆಗೆ (೩೯), ಪ್ರಾಶಸ್ತ್ಯ (೪೧), ದಾರಿದ್ರದ (೪೧), ಪೈಶಾಚಕ (೪೧), ಚಿತ್ರಪಠ (೪೭), ನಾಜೋಕಿಗೂ (ಚಿ.ಕ. ೭), ಅವಶ್ಯಕತೆ (೫೩), ತಿರಳು (೫೫), ಬೊಂಬಾಯಿನ (೫೮).

(೩) ಮುದ್ರಣದ ತಪ್ಪುಗಳು—

ನಿಯವ (೩೬), ವ್ಯತ್ತಿಜ್ಞಾನ (೫೩), ಬರವರು (ಚಿ.ಕ. ೬), ಸಾಸ್ತ್ರದಲ್ಲಿ (ಚಿ.ಕ. ೭), ಹಿಂದುಮುಂದಿನ (೫೫), ವ್ಯಾಕ್ಯ (೫೬), ಭೋಧನ (೫೯), ವಿದ್ವಾಂದರೂ (೫೯).

(೪) ಮುಂದೆ ಕೊಡುವ ರೂಪಗಳಲ್ಲಿ ಯಾವುದು ಸರಿಯಾದುದು?

ಬೆಳವಣಿಕೆ, ಬೆಳವಳಿಕೆ (೩೬); ಕೊಟಡಿ, ಕೊಠಡಿ (೩೬); ಟೆಕ್ನಲಾಜಕಲ್, ಟೆಕ್ನಲಾಜಿಕಲ್ (೩೯,೫೭); ಮಿದುಳು, ಮೆದುಳು (ಚಿ.ಕ. ೭).

(೫) ರೂಢಿಯಲ್ಲದ ಪದಗಳು—ಹಳಾಹಳಸಲು (೩೪), ವಸಾಹತಿ (೩೮).

(೬) (a) ಎಂದು <u>ಅದನ್ನು</u> ಅವರ ಕೈಗೆ <u>ಅದನ್ನು</u> ಕೊಟ್ಟನು (೪೭).

(b)....ಹಲ್ಲಿಗಳಾದರೂ ಸರಿ, ಮರವನ್ನೇ <u>ಮನೆಯನ್ನಾಗಿ ಮನೆಯನ್ನಾಗಿ</u> ಮಾಡಿಕೊಂಡಿರುವ ಅಳಿಲುಗಳಾದರೂ ಸರಿ...(೫೨).

(c) <u>ರಂಗವಲ್ಲಿಯು</u> ಮೃದುವಾದ ಬಿಳಿಯಕಲ್ಲಿನ <u>ಪುಡಿಯು.</u>

(೭) 'ಹಿಂದುಗಳು', 'ಹಿಂದೂಗಳು' (೫೩) ಎಂಬ ಪದಗಳನ್ನು ನಮ್ಮ ಜನರಿಗೆ ಪರಂಗಿಯವರು ಉಪಯೋಗಿಸಿದರೆ, ಈ ವಿಕಾರವಾದ ಪದಗಳನ್ನು ನಾವು ಏಕೆ ಉಪಯೋಗಿಸಬೇಕು? 'ಭಾರತೀಯರು' ಎನ್ನಬಾರದೆ?

(೮) ಪುಟ ೩೭, ೪೨, ೪೯, (ಚಿ.ಕ.) ೫, ೬, ೮—ಈ ಪುಟಗಳಲ್ಲಿ ಕೊಟ್ಟಿರುವ ಚಿತ್ರಗಳು, ಸ್ಥಳವನ್ನು ಉಳಿಸಿಕೊಳ್ಳಬೇಕೆಂಬ ಅಪೇಕ್ಷೆಯಿಂದ, ಲೇಖನಗಳ ಮಧ್ಯೆಯೋ, ಇಲ್ಲದೆ, ಅವಕ್ಕೆ ಸೇರಿದಂತೆಯೋ ಕೊಟ್ಟಿರುವುದು 'ಕಲಾ' ಪತ್ರಿಕೆಗೆ ಒಪ್ಪುವುದಿಲ್ಲ. ಇವು ಪ್ರತ್ಯೇಕವೆಂದು ತೋರಿಸುವುದಕ್ಕೆ, ಮಧ್ಯೇ ಸ್ವಲ್ಪ ಸ್ಥಳ ಬಿಟ್ಟು ಬೇರೆ ಮುದ್ರಣಾಕ್ಷರಗಳನ್ನು ಉಪಯೋಗಿಸಿದರೆ ಸರಿಹೋಗುವುದು.

(೯) ಚಿತ್ರಕಾರರು ಚಿತ್ರಗಳನ್ನು ಬರೆಯುವರು. ವರ್ಣಕಾರರು ಭಾವಚಿತ್ರಗಳನ್ನು ತಯಾರಿಸುವರು.

ಇವುಗಳ ವ್ಯತ್ಯಾಸವು ಅರ್ಥವಾಗುವಂತಿಲ್ಲ.

(೧೦) ರಕ್ಷಾಪತ್ರದ ಮೇಲಿರುವ (ದೊಡ್ಡಕ್ಷರದ) ಪತ್ರಿಕೆಯ ಹೆಸರು ಕಲೆಗೆ ಅಷ್ಟು ಅಂದವನ್ನು ಕೊಡುವಂತಿಲ್ಲ.

---

ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ ೧೫] ಪ್ರಮೋದ ಸಂ॥ ಆಷಾಢ ಮಾಸ [ಸಂಚಿಕೆ ೨

## ಶೋಕ ಸಾಹಿತ್ಯವು

---

ನವ ರಸಗಳಲ್ಲಿ ಕರುಣ ರಸವು ಶ್ರೇಷ್ಠವಾದದ್ದೆಂದೇ ಕೆಲವು ಸಾಹಿತ್ಯಜ್ಞರ ಅಭಿಪ್ರಾಯವಿದೆ. ಕರುಣ ರಸದಲ್ಲಿ ಸಿದ್ಧಹಸ್ತನಾದ ಭವಭೂತಿಯು—

**ಏಕೋ ರಸಃ ಕರುಣ ಏವ ನಿಮಿತ್ತ ಭೇದಾತ್ ।**
**ಭಿನ್ನಃ ಪೃಥಕ್ ಪೃಥಗಿವ ಶ್ರಯತೇ ವಿವರ್ತಾ ॥**
**ಆವರ್ತ ಬುದ್ಬುದ ತರಂಗ ಮಯಾ ವಿಕಾರಾ ।**
**ಅಂಭೋ ಯಥಾ ಸಲಿಲಮೇವ ಹಿ ತತ್ ಸಮಸ್ತಂ ॥**

ಕರುಣ ರಸವೊಂದೇ, ನಿಮಿತ್ತ ಭೇದದಿಂದ ಭಿನ್ನವಾಗಿ ವಿವರ್ತವನ್ನು ಹೊಂದುವುದು. ಸುಳಿ, ಗುಳ್ಳೆಗಳು—ಇವೆಲ್ಲ ಒಂದೇ ನೀರಿನ ವಿಕಾರಗಳೇ ಅಲ್ಲವೆ? ಭವಭೂತಿಯು ಈ ಸಂದರ್ಭದಲ್ಲಿ ಕರುಣ ರಸಕ್ಕೆ ಅತೀವ ಶ್ರೇಷ್ಠ ಸ್ಥಾನವನ್ನು ಕೊಟ್ಟಿದ್ದಾನೆಂದು ಬೇರೆ ಹೇಳಲಿಕ್ಕೆ ಬೇಡ. ಪ್ರಪಂಚದಲ್ಲಿ ಶೋಕವುಂಟಾದರೆ ಅದು ಅತೀವ ತಾಪದಾಯಕವಾಗಬಹುದು. ಆದರೆ ಕಾವ್ಯದಲ್ಲಿ ಅದು ಅನುಪಮ ಆನಂದವನ್ನೇ ಉಂಟುಮಾಡುವುದು. ಭವಭೂತಿಯ ಉತ್ತರರಾಮಚರಿತದ ಮೂರನೆಯ ಅಂಕವನ್ನು ನೋಡಿದರೆ, ರಾಮನ ಶೋಕ ರಸವು ಎಷ್ಟೊಂದು ಪುಟ ಪರಿಪಾಕವನ್ನು ಹೊಂದಿರುವುದೆಂಬುದು ಕಂಡುಬರುವುದು; ವಾಸಂತಿಯ ಮತ್ತು ರಾಮನ ಉದ್ಗಾರಗಳನ್ನು ನೋಡಿದರೆ ಇಂತಹ ಶೋಕ ಸೃಷ್ಟಿಯನ್ನು ಸಾಹಿತ್ಯ ಪ್ರಪಂಚದಲ್ಲಿ ಮತ್ತಾರಾದರೂ ಮಾಡಿರುವರೇ ಎಂದೆನಿಸುವುದು. ಮೊದಲನೆಯ ಅಂಕದಲ್ಲಿ ರಾಮನು ನಿದ್ರಿತಳಾದ ಸೀತೆಯನ್ನು ಬಿಟ್ಟುಹೋಗುವ ಮುಂದೆ ಕಳವಳಪಡುವ ಅವನ ಹೃದಯವನ್ನು ಕಂಡರೆ ಉಕ್ಕಿನ ಎದೆಯವನೂ ಕಂಬನಿಗಳನ್ನು ಸುರಿಸಬೇಕಾಗುವುದು. ರಾಮನ ಕೆಳಗಣ ಉದ್ಗಾರವನ್ನು ನೋಡಿರಿ:—

ಅಪೂರ್ವ ಕರ್ಮ ಚಂಡಾಲಮಯಿ ಮುಗ್ಧೇ ವಿಮುಂಚತಾಂ ।
ಶ್ರಿತಾಸಿ ಚಂದನ ಭ್ರಾಂತ್ಯಾ ದುರ್ವಿಪಾಕಂ ವಿಷದ್ರುಮಂ ॥

ಅಪೂರ್ವ ಕರ್ಮ ಚಂಡಾಲನು ನಾನು; ಸುಂದರಿಯೇ! ನನ್ನನ್ನು ಬಿಟ್ಟುಬಿಡು. ಚಂದನ ತರುವಾದ ನಾನು ಇರುವೆನೆಂಬ ಭ್ರಾಂತಿಯಿಂದ ನನ್ನನ್ನು ನೀನು ಆಶ್ರಯಿಸಿದೆ; ಆದರೆ ನಾನು ದುರ್ವಿಪಾಕವಾದ ವಿಷ ವೃಕ್ಷವು.

ಮನೆಯಲ್ಲಿ ಪ್ರೇಮದಿಂದ ಸಾಕಿ ಸಲಹಿದ ಪಕ್ಷಿಯನ್ನು ಇಂದು ಮೃತ್ಯುವಿಗೆ ಬಲಿಗೊಡುವೆನು. ವಿಶ್ವಾಸದಿಂದ ಎದೆಯ ಮೇಲೆ ಮಲಗಿದ ಗೃಹ ಲಕ್ಷ್ಮಿಯಂತಿರುವ ಸೀತೆಯನ್ನು ಮಾಂಸಾಶನ ಮಾಡುವ ರಾಕ್ಷಸರಿಗೆ ಬಲಿಗೊಡಲುದ್ಯುಕ್ತನಾಗಿರುವೆನು.

ಪುನಃ ಮೂರನೆಯ ಅಂಕದಲ್ಲಿರುವ, "ಹಾ ಹಾ ದೇವಿ ಸ್ಫುಟತಿ ಹೃದಯಂ ಧ್ವಂಸತೇ ದೇಹ ಬಂಧಃ"—ಇತ್ಯಾದಿ ಉದ್ಗಾರಗಳಲ್ಲಿ, ಕರುಣ ರಸದ ಪರಮಾವಧಿಯನ್ನು ಕಾಣುತ್ತೇವೆ. ನಾಟಕದ ನಾಯಕನಾದ ರಾಮನು ಧೀರೋದಾತ್ತನೇನೋ ಅಹುದು, ಆದರೆ, ಅವನ "ಹಾ ಹಾ ದೇವಿ ಸ್ಫುಟತಿ ಹೃದಯಂ" ಮೊದಲಾದ ಉನ್ಮುಕ್ತ ಕಂಠದ ಪ್ರಳಾಪವನ್ನು ನೋಡಿದರೆ ವಾಚಕರು ಅವನ ಧೀರೋದಾತ್ತತೆಯ ಬಗ್ಗೆ ಶಂಕಿಸಬೇಕಾಗುತ್ತದೆ. ಭವಭೂತಿಯ ಕರುಣ ರಸದ ವರ್ಣನದಲ್ಲಿ ವೈಖರಿಯಿದೆ, ಪ್ರೌಢತೆಯಿದೆ, ಸ್ಫೋಟಕ ಶಕ್ತಿಯಿದೆ. "ಕಾರುಣ್ಯಂ ಭವಭೂತಿರೇವ ತನುತೇ" ಎಂಬ ಬಿರುದೂ ಅವನಿಗೆ ಕೊಟ್ಟದ್ದು ಯಥಾರ್ಥವಿದೆ. ಆದರೆ ಅವನ ಕರುಣ ರಸ ವರ್ಣನದಲ್ಲಿ ಅಷ್ಟೊಂದು ಗಭೀರತೆಯಿಲ್ಲ. ನೀರವವಾದ ಗಭೀರ ಶೋಕವು ಇದಕ್ಕೂ ಬೆಲೆಯುಳ್ಳದ್ದು.

ಶಂಕುವಿನ ಆಕಾರದ ಜ್ವಾಲಾಮುಖಿ ಪರ್ವತದ ಸ್ಫೋಟವಾಗಿ ಸತ್ತರೂ ಚಿಂತೆಯಿಲ್ಲ; ಆ ಚಮತ್ಕಾರವನ್ನು ನೋಡಬೇಕೆಂದು ಕುತೂಹಲವು ಹುಟ್ಟುತ್ತದೆ. ಭವಭೂತಿಯ ಶಬ್ದಗಳು ತೋಫಿನ ಗುಂಡುಗಳಂತಿರುವುವು. ಅವುಗಳೊಳಗಿಂದ ಶೋಕ ಜ್ವಾಲೆಯು, ಜ್ವಾಲಾಮುಖಿ ಪರ್ವತದಿಂದ ಹೊರಟಂತೆ ಹೊರಡುವುದು. ಆ ಅಗ್ನಿ ಗರ್ಭ ವರ್ಣದಲ್ಲಿ ಕುತೂಹಲ ಜನಕ ಶಕ್ತಿಯಿದೆ. ಪಾಶ್ಚಾತ್ಯ ಕವಿಯಾದ ಷೇಕ್ಸಪಿಯರನ ಶೋಕ ಸಾಹಿತ್ಯದಲ್ಲಿಯೂ ಇಂತಹ ಅದ್ಭುತ ಶೋಕ ರಸವಿದೆ. ಭವಭೂತಿಗಿಂತ ಕಾಳಿದಾಸನ ಶೋಕ ಸಾಹಿತ್ಯದಲ್ಲಿ ಇದಕ್ಕೂ ಗಭೀರ ಭಾವನೆಯಿರುವುದು: ಶಕುಂತಲೆಯನ್ನು ಅತ್ತೆಯ ಮನೆಗೆ ಕಳುಹಿಸುವಾಗ ತರು ಲತಾದಿಗಳು ಕಣ್ಣೊಡನೆ ಗಭೀರ ಶೋಕ ವೇದನೆಯನ್ನು ವ್ಯಕ್ತಗೊಳಿಸಿರುತ್ತವೆ. ಮುಂದೆ,

ಸಾ ನಿಂದಂತೀ ಸ್ವಾನಿ ಭಾಗ್ಯಾನಿ ಬಾಲಾ ।
ಬಾಹೂತ್ಕ್ಷೇಪಂ ಕ್ರಂದಿತುಂ ಚ ಪ್ರವೃತ್ತಾ ॥

ಶಾಕುಂತಲದ ಪದ್ಯಗಳಲ್ಲಿ ಶೋಕ ರಸವು ಘಟಿತವಾದದ್ದು ಸ್ತ್ರೀ ಸ್ವಭಾವದ ಮೂಲಕ; ಅದೂ ಅಂತಹ ಅಸಹಾಯ ಸ್ಥಿತಿಯಲ್ಲ. ಅಂತೂ, ಕಾಳಿದಾಸನು ಭವಭೂತಿಗಿಂತ ಶೋಕ ರಸವನ್ನು ಗಭೀರವಾಗಿ, ನೀರವವಾಗಿ ವ್ಯಕ್ತಪಡಿಸಿರುವನು.

ಇನ್ನು, ಕಾಳಿದಾಸನ ಶೋಕ ಸಾಹಿತ್ಯದಲ್ಲಿ ಹೆಸರಾದ ಕುಮಾರಸಂಭವದಲ್ಲಿಯ 'ರತಿ ಪ್ರಳಾಪ', ರಘುವಂಶದಲ್ಲಿಯ 'ಅಜ ವಿಲಾಪ'ಗಳನ್ನು ನೋಡಿರಿ. ಅಂತು, ಶೋಕವು ಎಷ್ಟರ ಮಟ್ಟಿಗೆ ಮಾನವ ಹೃದಯದ ಮೇಲೆ ಪರಿಣಾಮವನ್ನು ಮಾಡಬಲ್ಲದೆಂಬುದನ್ನು ಕವಿಯು ಜಾಣ್ಮೆಯಿಂದ ತೋರಿಸಿರುವನು. ಸಂಸ್ಕೃತದ ಶೋಕ ಸಾಹಿತ್ಯದಲ್ಲಿ, ಇವೆರಡೂ ಆದರ್ಶಭೂತವಾದ ಉದಾಹರಣಗಳು. ಕಾಳಿದಾಸನಂಥ ಕವಿಯ ಮೃದು ಮಧುರವಾದ ಪದಗಳು, ಹೃದಯವನ್ನು ಕರಗಿಸುವ ವಿಯೋಗಿನೀ ವೃತ್ತವು, ಪ್ರಣಯಿ ಜನರ ವಿಯೋಗದಂಥ ಹೃದಯವಿದಾರಕ ಸಂದರ್ಭವು, ಬಳಿಕ ಕೇಳುವುದೇನು? ರತಿ ಪ್ರಳಾಪದಲ್ಲಿಯ ಕೆಳಗಿನ ಒಂದೇ ಉದಾಹರಣವನ್ನು ನೋಡಿರಿ:—

ಅಯಿ ಜೀವಿತ ನಾಥ ಜೀವಸೀ ।
ತ್ಯಭಿಧಾಯೋತ್ಥಿತಯಾ ತಯಾ ಪುರಃ ॥
ದದೃಶೇ ಪುರುಷಾಕೃತಿ ಕ್ಷಿತೌ ।
ಹರ ಕೋಪಾನಲ ಭಸ್ಮ ಕೇವಲಂ ॥

ಮೂರ್ಛೆಹೋದ ರತಿಯು ಎಚ್ಚತ್ತ ಬಳಿಕ; "ಎಲೈ ಜೀವದೊಡೆಯನೇ! ಬದುಕಿರುವೆಯಾ?" ಎಂದು ಎದ್ದು ನಿಂತು ನೋಡುತ್ತಾಳೆ. ಅಲ್ಲೇನಿದೆ? ಆಕೆಯ ಮುಂದೆ ಹರನ ಕೋಪಾಗ್ನಿಯಿಂದ ಸುಟ್ಟು ಬೂದಿಯಾದ ಪುರುಷಾಕಾರದ ಭಸ್ಮ ರಾಶಿಯು!

ರತಿಯು ಪಲ ತೆರದಿಂದ ಹಲುಬಿದ್ದಾಳೆ. ಕಾಳಿದಾಸನ ವರ್ಣನಾ ಚಾತುರ್ಯವನ್ನು ಕಂಡರೆ ಅದೆಂತಹ ಕಟು ವಿಮರ್ಶಕನೂ ಕೂಡ ಕೊಂಡಾಡಬೇಕಾಗುತ್ತದೆ. ಇದರಂತೆಯೇ 'ಅಜ ವಿಲಾಪ'ವೂ:—

ಈ ಹೂವಿನ ಮಾಲೆಯಲ್ಲಿ ಜೀವ ಹಾರಕ ಶಕ್ತಿಯೇ ಇದ್ದರೆ ಅದನ್ನು ನಾನು ಎದೆಯಲ್ಲಿ ಇಟ್ಟುಕೊಳ್ಳುವೆನು; ಅದು ನನ್ನನ್ನೇಕೆ ಕೊಲ್ಲಲಾರದು? ಈಶ್ವರೇಚ್ಛೆಯಿಂದ ವಿಷವು ಅಮೃತವಾಗುವುದು ಒಂದೆಡೆಗೆ, ಮತ್ತೊಂದೆಡೆಗೆ ಅಮೃತವು ವಿಷವಾಗುವುದು....

ಇವು ರಮಣೀಯವಾದ ಉಪಮೆಗಳು. ಕಾಳಿದಾಸನ ಈ ಶೋಕ ರಸದಲ್ಲಿ ಅಷ್ಟೊಂದು ಗಭೀರ ವೇದನೆಯಿಲ್ಲ, ಸ್ಫೋಟಕ ಶಕ್ತಿಯಿಲ್ಲ. ಹೃದಯವನ್ನು ಮೆಲ್ಲನೆ ಕರಗಿಸಿದಂತೆ ಕೊರೆಯುವುದು.

ಕನ್ನಡದಲ್ಲಿಯೂ ಶೋಕ ಸಾಹಿತ್ಯವಿಲ್ಲವೆಂದಲ್ಲ; ಕೆಲವರು ಶ್ರೇಷ್ಠ ಕವಿಗಳು ಈ ಸಾಹಿತ್ಯವನ್ನು ನಿರ್ಮಿಸಿ ಇಟ್ಟಿರುವರು: ಷಡಕ್ಷರಿಯು ತಿರುಕೊಳವಿನಾಚಿಯ ಪ್ರಳಾಪದಿಂದ, ರಾಘವಾಂಕನು ತಾರಾಮತಿಯ ಪ್ರಳಾಪದಿಂದ, ಲಕ್ಷ್ಮೀಶನು ಚಂದ್ರಹಾಸನ ಬಗ್ಗೆ ತೆಗೆದ ಉದ್ಗಾರಗಳಿಂದ, ಉತ್ತಮ ಶೋಕ ಸಾಹಿತ್ಯವನ್ನು ನಿರ್ಮಿಸಿರುವರೆಂದು ನಾವು ಹೇಳಬಹುದಾಗಿದೆ. ತಿರುಕೊಳವಿನಾಚಿಯು ಮಗನ ಬಗ್ಗೆ ಹಲುಬುವಾಗ ತೆಗೆದ ಉದ್ಗಾರಗಳು ಪ್ರಶಂಸನೀಯವಾಗಿವೆ. ಆದರೂ, ಆಕೆಯ ಉದ್ಗಾರಗಳಲ್ಲಿ ಅಷ್ಟೊಂದು ಗಭೀರತೆಯಿಲ್ಲ. ಇಷ್ಟೇ ಅಲ್ಲ, ಸತ್ತ ಮಗನ ಬಗ್ಗೆ—

ಕರೆದೆಯೊ ಮರೆದೆಯೊ ದೋಷಾ ।
ಕರೆಯೆಂದೇಂ ತೊರೆದೆಯೋ ತನೂಜನೆ ಪೇಳೈ......॥

"ಹಾ ಮಗನೇ! ಹಾ ಮನೋಜ್ಞನೇ!" ಇತ್ಯಾದಿ ವಿಶೇಷಣಗಳ ಸಾಲುಗಳನ್ನು ಜೋಡಿಸುವಾಗ ಸಹಜ ಭಾವಾವಿರ್ಭಾವ ಪ್ರಕಟನೆಯುಂಟಾಗುವುದಿಲ್ಲ. ಆದರೂ, ಷಡಕ್ಷರಿಯ ವರ್ಣನದಲ್ಲಿ ಬಹಳ ಮನೋಹರತೆಯಿದೆ. ರಾಘವಾಂಕನ ಸ್ವಾಭಾವಿಕತೆಯು ಇವನಿಗಿಂತ ಹೆಚ್ಚಿನದು. ತಾರಾಮತಿಯು ರೋಹಿತಾಶ್ವನ ಬಗ್ಗೆ ಪ್ರಳಪಿಸುವಾಗ—

"ಹಾವು ಕಡಿಯೆ ಹಾ ಎಂದೆಯೋ ಮಗನೇ! ಸಾವಾಗ ಅವ್ವಾ! ಎಂದೆಯೊ ಮಗನೇ! ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೇ! ನೋಡುವ ಕಣ್ಣೊಳು ಸುಣ್ಣವ ಹೊಯ್ದೆ! ಮಾತಾಡುವ ಬಾಯೊಳು ಮಣ್ಣನು ಹೊಯ್ದೆ!"

ಇತ್ಯಾದಿ ಉದ್ಗಾರಗಳಲ್ಲಿ ಸಹಜ ಸೌಂದರ್ಯವಿರುವುದು. ಲಕ್ಷ್ಮೀಶನ ಕವಿತ್ವದಲ್ಲಿ ನಟನ ನೈಪುಣ್ಯವು ಹೆಚ್ಚಾಗಿರುವುದು.—

ಲಾಲಿಸಿ ನಲಿವ ತಂದೆತಾಯ್ಗಳಿಲ್ಲ, ಇಡೆ ತೊಟ್ಟಲಿಲ್ಲಾಡಿಸುವರಿಲ್ಲ, ನಿನಗೆ ಪೊಂದೊಡಿಗೆಯಿಲ್ಲ, ಪಾಲ್‌ಬೆಣ್ಣೆಗಳಿಲ್ಲ.

ಇತ್ಯಾದಿ.

ಬಸವಣ್ಣನವರೂ ತಮ್ಮ ಮಗನು ತೀರಿಹೋದಾಗ ಉದ್ಗರಿಸಿದ ಒಂದು ವಚನವಿರುವುದು. ಅದು ಉತ್ಕೃಷ್ಟ ಸಾಹಿತ್ಯದ ಮಾದರಿಯಾಗಿದೆ:—

ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು, ಪಕ್ವ ಫಲವಿದ್ದಂತೆ ಕಸುಗಾಯ ಕೊಯ್ದ ಶಿವನು.......

ಅಲ್ಪಾಕ್ಷರಮಸಂದಿಗ್ಧಮೆಂಬಂತೆ ಇಲ್ಲಿ ಸೂತ್ರರೂಪ ಶೋಕವಿದೆ. ದೊಡ್ಡವರು ಅಲ್ಪದರಲ್ಲಿಯೇ ಹೇಳುತ್ತಾರೆ. ಶೋಕದಲ್ಲಿಯೂ ಕೂಡ ಬಸವಣ್ಣನವರ ಶಿವಾರ್ಪಣ ಬುದ್ಧಿಯು ಪ್ರಶಂಸನೀಯವಾಗಿರುವುದು. ಆದರೂ, ಹೃದಯದಲ್ಲಿರುವ ಕರುಣರಸದ ಸ್ಥಾಯಿಭಾವಗಳನ್ನು ವಿಭಾವಾನುಭಾವಗಳಿಂದ ರಸ ಪರಿಪಾಕಕ್ಕೆ ಒಯ್ಯುವ ಅಪೂರ್ವ ಕವಿತ್ವವು ಇದರಲ್ಲಿ ಸಂಪೂರ್ಣವಾಗಿ ವಿಕಸಿತವಾಗಿದೆಯೆಂದೇನೂ ನಾವು ಹೇಳುವುದಿಲ್ಲ. ಕೆಲವರಿಲ್ಲಿ ಅತಿಶಯೋಕ್ತಿಯಿಂದ ಬಣ್ಣಿಸಿ ಬಣ್ಣಿಸಿ ಹೇಳಿದ್ದಾರೆ; ನಮ್ಮದೆಂದು ನಾವು ಅಭಿಮಾನಪಡುವುದೇನೋ ಸಹಜ. ಆದರೆ ಅದಕ್ಕೂ ಮಿತಿಯಿದೆ. ಪರ ಸಾಹಿತ್ಯದಲ್ಲಿ ಇದಕ್ಕೂ ಹೆಚ್ಚಿನ ಸೌಂದರ್ಯವಿದ್ದರೆ ಒಪಂಬಡಲೇ ಬೇಕು. ಶ್ರೀಮಾನ್ ಶ್ರೀಕಂಠಯ್ಯನವರು ಹೇಳುವಂತೆ, 'ಪರರ ಮಕ್ಕಳ ಸೌಂದರ್ಯವನ್ನು, ನಮ್ಮ ಹೊಟ್ಟೆಯುರಿದರೂ ಚಿಂತೆಯಿಲ್ಲ, ಒಪ್ಪಿಕೊಳ್ಳುವಾ.' ಉತ್ಕೃಷ್ಟ ಶೋಕ ಸಾಹಿತ್ಯದ ಗಭೀರತೆಯ ಮಾದರಿಯನ್ನು ನೋಡಬೇಕಾಗಿದ್ದರೆ ನಾವು ರವೀಂದ್ರರ ಕಡೆಗೆ ತೆರಳಬೇಕು. ರವೀಂದ್ರರು ವಚನ ವಾಙ್ಮಯದಲ್ಲಿಂದು ಉತ್ಕೃಷ್ಟವಾದ ಶೋಕ

ಸಾಹಿತ್ಯವನ್ನು ನಿರ್ಮಿಸಿರುವರು. ಅವರ ಆ ಶೋಕ ಗೀತಗಳನ್ನು ನೋಡಿದರೆ ಕಾಳಿದಾಸನನ್ನೂ ಭವಭೂತಿಯನ್ನೂ ಕೂಡ ಕ್ಷಣ ಹೊತ್ತು ಮರೆಯಬೇಕೆಂದೆನಿಸುತ್ತದೆ.

ಭಾವನೋದ್ದೀಪ್ತವಾದ ರವೀಂದ್ರರ ಕವಿತ್ವವನ್ನು ನೋಡಿರಿ: 'ಚೈತಾಲಿ,' 'ಕ್ಷಣಿಕಾ,' 'ಗೀತಾಂಜಲಿ'—ಇವುಗಳಲ್ಲಿ ಒಂದೆರಡು ಶೋಕ ಗೀತಗಳು ಅಲ್ಲಲ್ಲಿರುವುವು. ರವೀಂದ್ರರ ಕವಿತ್ವವು 'ಅಲ್ಪಾಕ್ಷರಮಸಂದಿಗ್ಧ'ವೆಂಬಂತೆ, ಸೂತ್ರರೂಪವಾಗಿದ್ದರೂ ವಿಪುಲ ಭಾವನಾ ಪ್ರವಾಹವು ಹರಿಯುತ್ತಿರುವುದು.

ಪ್ರೇಯಸಿಯ ವಿಯೋಗದಲ್ಲಿ ಪ್ರಣಯಿಯ ಉದ್ಗಾರಗಳಿವು:—

> ಆಕೆಯು ಮಾಡಿದ ಉಪಕಾರವನ್ನೆಲ್ಲ ತೀರಿಸಬೇಕೆನ್ನುವಷ್ಟರಲ್ಲಿಯೇ ಆ ಕಾಲವು ಕಳೆದುಹೋದುದು; ರಾತ್ರಿಯು ಬೆಳಗಾಯಿತು. ಅವಳನ್ನು ನೀನು ನಿನ್ನ ಸನಿಯದಲ್ಲಿ ಕರೆದುಕೊಂಡೆ. ಆದುದರಿಂದ, ನನ್ನ ಕೃತಜ್ಞತೆಯನ್ನೂ ಅವಳಿಗರ್ಪಿಸುವ ಕಾಣಿಕೆಗಳನ್ನೂ ನಿನಗೇ ಈಗ ಅರ್ಪಿಸಿಬಿಡುವೆನು. ಅವಳಿಗೆ ನಾನೇನನ್ನಾದರೂ ಮನೋವ್ಯಥೆಯನ್ನುಂಟುಮಾಡಿದ್ದರೆ, ನಾನು ಅಪರಾಧವನ್ನು ಮಾಡಿದ್ದರೆ, ನಿನ್ನನ್ನೇ ಈಗ ಕ್ಷಮೆಗಾಗಿ ಬೇಡಿಕೊಳ್ಳುವೆನು. ಅರಳುವ ಕುಸುಮಗಳನ್ನು ಮಾಲೆಗಾಗಿ ನಿರೀಕ್ಷಿಸಿದ್ದಳು; ಆಗ ಅವು ಅರಳಲಿಲ್ಲ; ಅರಳಿರುವುವು ಈಗ. ಅವುಗಳನ್ನು ಈಗ ನಿನ್ನ ಪೂಜೆಗಾಗಿ ತಂದಿರುವೆನು.

ರವೀಂದ್ರರು ಇಲ್ಲಿ ಏನ ಹೇಳಬೇಕಾಗಿದ್ದಿತೋ ಅದೆಲ್ಲವನ್ನೂ ವ್ಯಂಗ್ಯದಿಂದ ಸೂಚಿಸಿರುವರು. ಮಾನವೀಯ ಜೀವಿತವು ಕ್ಷಣಿಕವಾಗಿದೆ. ಮಾನವನ ಆಕಾಂಕ್ಷೆಗಳು ಪೂರ್ಣವಾಗುವುದರೊಳಗಾಗಿ ಬೆಳಗಾಗುವುದು. "ನಳಿನೀ ದಳ ಗತ ಸಲಿಲ" ದಂತೆ ಜೀವಿತವು ಚಪಲವಾಗಿ, ಅರಳುವ ಕಾರ್ಯವು ಪೂರ್ಣವಾಗುವಷ್ಟು ಸಹ ಅವಕಾಶವಿಲ್ಲ. 'ಕೃತಜ್ಞತೆ ಕಾಣಿಕೆಗಳನ್ನು ನಿನಗೇ ಅರ್ಪಿಸುವೆ'ನೆಂಬಲ್ಲಿ ಕವಿಯ ಈಶ್ವರಾರ್ಪಣ ಬುದ್ಧಿಯ ಪಾವಿತ್ರ್ಯವು ತೋರುವುದು. ಎಲ್ಲವನ್ನೂ ಜರುಗಿಸುವವನು ನೀನು. ಈಶ್ವರೇಚ್ಛೆಗೆ ಅಧೀನನಾಗಿ ನಮ್ರವಾಗಿ ನಡೆಯುವುದರಲ್ಲಿಯೇ ಮಾನವನ ಉಚ್ಚ ಶೀಲವಿದೆ. ಪ್ರಣಯ ಧ್ವನಿಯು ಭಕ್ತಿಯ ಧ್ವನಿಯಲ್ಲಿ ಪರಿಣತವಾಗುವ ಈ ಶೋಕ ಗೀತದ ಬೆಲೆಯನ್ನು ಕಟ್ಟುವರಾರು? ನಮ್ಮ ಕನ್ನಡ ಪ್ರಾಕ್ತನ ಕವಿಗಳಿಗೆ ಕನಸಿನಲ್ಲಿ ಕೂಡ ಕಾಣದ ಭಾವಗಳನ್ನು ರವೀಂದ್ರರು ಗಭೀರವಾಗಿ ವ್ಯಕ್ತಪಡಿಸಿರುವರು. ರವೀಂದ್ರರ ಶೋಕ ಸಾಹಿತ್ಯವು ಈ ಮಾದರಿಯದು:—

> ಅವಳ ಪೆಟ್ಟಿಗೆಯಲ್ಲಿ ಕಾಳಜಿಯಿಂದ ಕಾದಿಟ್ಟ ಕೆಲವು ನನ್ನ ಹಳೆಯ ಪತ್ರಗಳೂ, ಕೆಲವು ಆಟದ ವಸ್ತುಗಳೂ ನನಗೆ ಸಿಕ್ಕಿದುವು. ದಂಗೆಗಾರನಾದ ಕಾಲನ ಕರಾಳ ಪ್ರವಾಹದಿಂದ ಅವಳು ಈ ಕ್ಷುಲ್ಲಕ ವಸ್ತುಗಳನ್ನು ಭಯ ಪೂರ್ಣ ಹೃದಯದಿಂದ ಕದಿಯಲು ಯತ್ನಿಸಿದಳು; 'ಅವು ನನ್ನವು' ಎಂದೂ ನುಡಿಯುತ್ತಿದ್ದಳು.
>
> ಅಕಟಾ! ಈಗ ಅವುಗಳು ನನ್ನವೆಂದು ಅಧಿಕಾರದಿಂದ ನುಡಿಯುವವರು ಯಾರೂ ಇಲ್ಲ. ಅವುಗಳಿಗೆ ಈಗ ಪ್ರೇಮ ಪೂರಿತ ಚಿಂತೆಯಿಂದ ಬೆಲೆಯನ್ನು ಕೊಡುವವರು ಯಾರಿದ್ದಾರೆ? ಆದರೂ ಅವು ಇಲ್ಲಿ ಇನ್ನೂ ಇರುವುವು.

ನಿಜವಾಗಿ, ಈ ಜಗದಲ್ಲಿ ಪ್ರೇಮವೊಂದಿರುವುದು. ಆ ವಸ್ತುಗಳನ್ನು ಅತ್ಯಂತ ಹಾನಿಯಿಂದ ರಕ್ಷಿಸಲಿಕ್ಕೆ, ಯಾವಳ ಪ್ರೇಮವು ಈ ಪತ್ರಗಳನ್ನು ಇಂತಹ ಪ್ರಿಯವಾದ ಚಿಂತೆಯಿಂದ ಸಂರಕ್ಷಿಸಿತೋ ಅಂತಹ ಪ್ರೇಮವನ್ನು ನಾಶಪಡಿಸುವರಾರು?

ರವೀಂದ್ರರ ಕವಿತ್ವದಲ್ಲಿ ನಾವೀನ್ಯವಿದೆ; ಇಷ್ಟೇ ಅಲ್ಲ, ಯಥಾರ್ಥ ಚಿತ್ರವಿದೆ; ಇಲ್ಲದ ಸಲ್ಲದ ಕಲ್ಪನೆಗಳಿಂದ ಬುರುಡೆ ಉರುಳಿಸುವ ಹಸ್ತಚಮತ್ಕಾರದ ಲಾಘವವವರಲ್ಲಿಲ್ಲ. ಇವಕ್ಕೆನ್ನಬೇಕು ವರ ಕವಿತ್ವವೆಂದು.—

ರಮಣಿಯೇ! ನೀನು ಜೀವಿಸಿರುವಾಗ ನನ್ನ ಮನೆಯಲ್ಲಿ ಯಾವ ಸುವ್ಯವಸ್ಥೆ ಸೌಂದರ್ಯಗಳಿದ್ದುವೋ ಅವುಗಳನ್ನು ನನ್ನ ನಿರ್ಗತಿಕವಾದ ಜೀವನದಲ್ಲಿ ತೆಗೆದುಕೊಂಡು ಬಾ. ಬೇಗ ಬಾ! ತಾಸುಗಳ ಧೂಳಿಮಯ ತುಣುಕುಗಳನ್ನು ಮಾರ್ಜನಿಯಿಂದ ಶೋಧಿಸಿಬಿಡು; ಖಾಲಿಯಾದ ಪಾತ್ರಗಳನ್ನು ತುಂಬಿಬಿಡು; ಅಲಕ್ಷಿತವಾದುದೆಲ್ಲವನ್ನೂ ಪರಿಷ್ಕರಿಸು. ಬಳಿಕ, ದೈವಾಯತನದ ಅಂತರ್ಗೃಹದ ಬಾಗಿಲನ್ನು ತೆರೆ; ದೀಪವನ್ನು ಹಚ್ಚು; ನಿಸ್ತಬ್ಧತೆಯಿಂದ ನಮ್ಮ ದೇವರ ಮುಂದೆ ನಾವಿರ್ವರೂ ಒಡಗೂಡುವ!

ಗೃಹಿಣಿಯು ಜೀವಿಸಿರುವಾಗ ಮನೆಯಲ್ಲಿರುವ ಸೌಂದರ್ಯ ಸುವ್ಯವಸ್ಥೆಗಳನ್ನೂ ಅವಳ ಪಾವಿತ್ರ್ಯವನ್ನೂ ಅದರಿಂದುಂಟಾದ ಮನೆಯ ಶೋಭೆಯನ್ನೂ ಕವಿಯು ಹೇಳಿರುವನು. ಈ ಶೋಕ ಶ್ಲೋಕದಲ್ಲಿಯೂ ಅವನದೆಷ್ಟು ಭಾವನಾ ಪ್ರದೀಪ್ತಿಯಿದೆ ನೋಡಿರಿ!

ಗೀತಾಂಜಲಿಯಲ್ಲಿಯೂ ಒಂದು ಶೋಕ ಗೀತವಿರುವುದು. ಅದರ ಭಾವವು ಹೀಗಿರುವುದು:—

ನಿರಾಶೆಯಿಂದ ಕಂಗೆಟ್ಟ ಮನದಿಂದ ನಾನು ಅವಳನ್ನು ಮನೆಯ ಮೂಲೆ ಮೂಲೆಗಳಲ್ಲಿ ಹುಡುಕಿದೆನು; ಅವಳು ನನಗೆ ಸಿಕ್ಕಲಿಲ್ಲ. ನನ್ನ ಮನೆಯು ಸಣ್ಣದು; ಒಮ್ಮೆ ಒಂದು ಒಡವೆ ಹೋದರೆ ಅದು ಸಿಕ್ಕಲಾರದು ಪುನಃ.

ಆದರೆ, ನನ್ನ ಒಡೆಯನೇ! ನಿನ್ನ ಅರಮನೆ ಅನಂತವಾಗಿರುವುದು. ಅದರಿಂದ ಅವಳನ್ನು ಹುಡುಕುತ್ತ ನಿನ್ನ ರಾಜ ಭವನಕ್ಕೆ ಬಂದೆನು.

ನಾನು ಬಂಗಾರದ ಛತ್ರಿ. ಆಕಾಶದ ಕೆಳಗೆ ನಿಂತು ನನ್ನ ಕುತೂಹಲ ಪೂರ್ಣ ದೃಷ್ಟಿಯನ್ನು ಚೆಲ್ಲುವೆನು ನಿನ್ನ ಮುಖದ ಕಡೆಗೆ!

ಅನಂತ್ಯದ ತುಟ್ಟತುದಿಗೇ ಬಂದಿದ್ದೇನೆ; ಅಲ್ಲಿಂದ ಯಾವುದೂ ಅಂತರ್ಧಾನವನ್ನು ಹೊಂದಲಾರದು. ಆಶೆಯಿಲ್ಲ, ಸುಖವಿಲ್ಲ, ಕಣ್ಣುಗಳು ಅಶ್ರುಗಳಿಂದ ತುಂಬಿಕೊಂಡದ್ದರಿಂದ ಮುಖದ ದೃಶ್ಯವು ಕಾಣಿಸದು.

ಮಹಾ ಸಾಗರದಲ್ಲೊಮ್ಮೆ ನನ್ನ ಶೂನ್ಯ ಜೀವನವನ್ನು ಮುಳುಗಿಸಿಬಿಡುವೆನು, ಪೂರ್ಣವಾಗಿ ಅದ್ದಿಬಿಡುವೆನು. ವಿಶ್ವದ ಸಮಗ್ರತೆಯಲ್ಲಿ ಆ ಕಳೆದುಕೊಂಡ ನನ್ನ ಮಧುರ ಸ್ಪರ್ಶವು ಇನ್ನೊಮ್ಮೆ ನನ್ನ ಮೈಗೆ ತಾಕಲಿ.

ಆಹಾ! ಅದೆಂತಹ ಶೋಕದ ಮಹಿಮೆಯೊ! ಮೋಹವು ತತ್ತ್ವಜ್ಞಾನಿಯನ್ನು ಕೂಡ ಬಿಡುವುದಿಲ್ಲವೇನೊ! ಪರಿಪೂರ್ಣವಾದ ಆನಂತ್ಯದ ಸಾಗರದಲ್ಲಿ ಮುಳುಗಲು ಬಯಸುವವನನ್ನು ಕೂಡ, ಕಳೆದುಕೊಂಡ ಕಾಂತೆಯ ಮಧುರ ಸ್ಪರ್ಶವನ್ನು ಇನ್ನೊಮ್ಮೆ ಪಡೆಯಲು ಮೋಹಗೊಳಿಸುವುದೋ ಏನೊ! ಅಥವಾ, ವಿಶ್ವಪ್ರೇಮದಲ್ಲಿ ಕಾಂತಾ ಪ್ರೇಮವನ್ನೇ ಮುಳುಗಿಸಲು ಬಯಸುವನೊ!

ಕ್ಷಣಿಕ ಕಾವ್ಯದಲ್ಲಿಯೂ ಕೂಡ ರವೀಂದ್ರರ ಕೆಲವು ಉತ್ತಮ ಶೋಕ ಗೀತಗಳಿರುವುವು. ರವೀಂದ್ರರ ವರ್ಣನಾ ವೈಖರಿಯನ್ನು ನೋಡಿರಿ:—

ಅಂತ್ಯ ಸಂಸ್ಕಾರವನ್ನು ನೆರವೇರಿಸಿ ತಂದೆಯು ಮನೆಗೆ ತಿರುಗಿ ಬಂದನು.

ಕಿಟಕಿಯ ಹತ್ತಿರ ಅವನ ಏಳು ವರುಷದ ಮಗುವು ನಿಂತುಕೊಂಡಿದ್ದಿತು; ತನ್ನ ಆಯತವಾದ ಕಣ್ಣುಗಳನ್ನು ಅರಳಿಸಿ ಮುಂದಿನ ಆಯುಷ್ಯ ಹೇಗೆ ಕಳೆಯಬೇಕೆಂದು ಆಲೋಚಿಸುವಂತೆ ಕಂಡಿತು; ಕೊರಳಲ್ಲಿ ಬಂಗಾರದ ತಾಯತವು ಜೋಲಾಡುತ್ತಿದ್ದಿತು.

ತಂದೆಯು ತೊಡೆಯ ಮೇಲೆ ಹುಡುಗನನ್ನು ಕುಳ್ಳಿರಿಸಿಕೊಂಡನು. ಹುಡುಗನು ಕೇಳಿದನು: 'ಅಪ್ಪಾ! ಅವ್ವನು ಎಲ್ಲಿರುವಳು?'

ಆಕಾಶದ ಕಡೆಗೆ ಬೆರಳು ತೋರಿಸಿ 'ಸಗ್ಗದಲ್ಲಿ' ಎಂದು ತಂದೆಯು ಉತ್ತರ ಕೊಟ್ಟನು

ರಾತ್ರಿಯಲ್ಲಿ ತಂದೆಯೂ ದುಃಖದಿಂದ ಲಘು ನಿದ್ರೆಯಲ್ಲಿ ನರಳಿದನು.

ಮಲಗುವ ಕೋಣೆಯ ಬಾಗಿಲ ಬಳಿಯಲ್ಲಿ ಕಂದೀಲು ಮಂದವಾಗಿ ಉರಿಯುತ್ತಿದ್ದಿತು.

ಬಾಲಕನು ನಿದ್ದೆಯಿಂದ ಎಚ್ಚತ್ತನು. ಕೈಗಳಿಗೆ ಹಾಸಿಗೆಯಲ್ಲಿ ಶೂನ್ಯತೆಯು ಹತ್ತಿದಂತಾಯಿತು. ತೆರೆದ ಉಪ್ಪರಿಗೆಗೆ ಮೆಲ್ಲನೆ ಎದ್ದು ನಡೆದನು.

ಆಕಾಶದ ಕಡೆಗೆ ದೃಷ್ಟಿಯಿಟ್ಟು ನೋಡಿದನು; ದೀರ್ಘವಾಗಿ ಸುಮ್ಮನೆ ದೃಷ್ಟಿಯಿಟ್ಟನು. ಅವನ ಕಳವಳಗೊಂಡ ಮನವು ರಾತ್ರಿಯೊಳಗೆ ಒಂದು ಪ್ರಶ್ನವನ್ನು ಕಳುಹಿಸಿತು: 'ಎಲ್ಲಿದೆ ಸ್ವರ್ಗವು?'

ಉತ್ತರವು ಬರಲಿಲ್ಲ. ನಕ್ಷತ್ರಗಳು ಆ ಅಜ್ಞಾನಿಯಾದ ಕಾರ್ಗತ್ತಲೆಯ ತಪ್ತವಾದ ಅಶ್ರುಬಿಂದುಗಳಂತೆ ಕಂಡವು.

ಸೀತೆಯ ದುಃಖವನ್ನು ಕಂಡು ಪಕ್ಷಿಮೃಗಗಳೂ ಕಂಬನಿಗರೆದುವೆಂದು ಲಕ್ಷ್ಮೀಶನು ಬಣ್ಣಿಸಿದ್ದಾನೆ. ಮಗುವಿನ ಶೋಕದಿಂದ ಚೇತನಾ ಹೀನವಾದ ಕಾರ್ಗತ್ತಲೆಯೂ ತಾರಕೆಗಳೆಂಬ ಅಶ್ರುಬಿಂದುಗಳ ರೂಪದಿಂದ ಶೋಕಿಸಬಾರದೇಕೆ? ಇಲ್ಲಿ ಶೋಕವು ಎಷ್ಟು ತೀವ್ರವಾಗಿದೆ! ಗಭೀರವಾಗಿದೆ! ವಾಚಕರೇ! ಸಮಾಲೋಚಿಸಿರಿ:

ರಾತ್ರಿಯು ಬಾಡುವ ಸಮಯದಲ್ಲಿ ಅವಳು ಹೊರಟುಹೋದಳು.

ನನ್ನ ಮನಸ್ಸು, 'ಎಲ್ಲವೂ ವೃಥಾ ಇರುವುದು' ಎಂದು ಹೇಳಿ ನನ್ನನ್ನು ಸಮಾಧಾನಪಡಿಸಲು ಯತ್ನಿಸಿತು.

ನಾನು ಸಿಟ್ಟುಗೊಂಡು ನುಡಿದೆನು: 'ಅವಳ ಹೆಸರಿನಿಂದ ಪ್ರಾರಂಭಿಸಲ್ಪಟ್ಟು ತೆರೆದಿಡದಿದ್ದ ಆ ಪತ್ರವೂ, ಕೆಂಪು ರೇಶಿಮೆಯ ದಾರದಿಂದ ಅವಳ ಕೈಯಿಂದ ಅಂಚಿನಲ್ಲಿ ಹೆಣೆಯಲ್ಪಟ್ಟಿದ್ದ ಈ ತಾಲವೃಂತವೂ (ಬೀಸಣಿಗೆಯೂ)—ಇವು ನಿಜವಾದ ವಸ್ತುಗಳಲ್ಲವೇ? ಇವು ಮಿಥ್ಯೆಯೇನು?'

ಹಗಲು ಕಳೆಯಿತು; ನನ್ನ ಮಿತ್ರನು ಬಂದು ನುಡಿದನು: 'ಉತ್ತಮವಾಗಿರುವುದೆಲ್ಲ ನಿಜವಾಗಿರುತ್ತದೆ; ಅದು ಎಂದೂ ವಿನಾಶವನ್ನು ಹೊಂದಲಾರದು.'

ಅಸಹನೆಯಿಂದ ನಾನು ನುಡಿದೆನು: 'ಅದನ್ನು ನೀನು ಹೇಗೆ ಹೇಳಬಲ್ಲೆ? ಈ ದೇಹವು, ಯಾವುದು ಕಡೆಯ ವರೆಗೆ ಕಳೆದು (ನಿನಾಶವಾಗಿ) ಹೋಯಿತೋ ಅದು ಉತ್ತಮವಾಗಿರಲಿಲ್ಲವೋ?'

ಹಠ ಹಿಡಿದ ಕೂಸು ತನ್ನ ತಾಯನ್ನು ಪೀಡಿಸುವಂತೆ, ಯಾವಾಗಲೂ ನನ್ನ ಬಳಿಯಲ್ಲಿದ್ದು, ಸುತ್ತಲೂ ಇದ್ದ, ಒಳಗೆ ಇದ್ದ ಆಶ್ರಯಗಳನ್ನು ಭಂಗಪಡಿಸಲು ಯತ್ನಿಸುತ್ತ ನುಡಿದೆನು: 'ಈ ಜಗತ್ತು ದ್ರೋಹಿಯಾಗಿರುವುದು.' ಕೂಡಲೆ ಒಂದು ಧ್ವನಿಯು ನುಡಿದಂತೆ ನನಗೆ ಭಾಸವಾಯಿತು: 'ಕೃತಘ್ನನೇ!'

ಕಿಟಕಿಯೊಳಗಿನಿಂದ ನೋಡಿದೆನು. ಎರಚಿದಂತಿರುವ ನಕ್ಷತ್ರಗಳಿಂದ ಕೂಡಿದ ರಾತ್ರಿಯಿಂದ ಒಂದು ನಿಂದೆಯು ಬರುವಂತೆ ಕಂಡಿತು: 'ನಾನಿಲ್ಲವೆಂಬುದರ ಶೂನ್ಯತೆಯೊಳಗಿಂದ ನಾನು ಬಂದೆನೆಂಬುದರ ಸತ್ಯದಲ್ಲಿ ನಿನ್ನ ವಿಶ್ವಾಸವನ್ನು ಸುರಿದುಕೊಳ್ಳುತ್ತಿರುವೆ.'

ಕವಿಯ ದುಃಖದ ಗೂಢ ಭಾವನೆಯು ಮತ್ತಿಷ್ಟು ತೀವ್ರತೆಯನ್ನು ವ್ಯಕ್ತಪಡಿಸುತ್ತಿರುವುದು. ಕವಿತ್ವವು ಎಷ್ಟು ಗಭೀರವಾಗಿರಬೇಕೆಂಬುದನ್ನು ಇಲ್ಲಿ ನೋಡಬಹುದಾಗಿದೆ.

ರಾಮನು ವನಕ್ಕೆ ತೆರಳಿದಾಗ ದಶರಥನು ಪ್ರಳಪಿಸಿರುವನು:—

ವತ್ಸಾ! ನಿನ್ನನ್ನು ಎಲ್ಲೆಡೆಯಲ್ಲಿ ನಾನು (ಭ್ರಾಂತಿಯಿಂದ) ನೋಡುವೆನು. ನೀನು ನನ್ನನ್ನು ಬಿಟ್ಟುಹೋದೆ ಎಂದು ಹೇಗೆ ಹೇಳಲಿ?

"ವತ್ಸ ರಾಮ ಗತೋಸೀತಿ ಸಂತಾಪೇನಾನುಮೀಯತೇ" ಎಂದು ಆದಿಕವಿಯಾದ ವಾಲ್ಮೀಕಿಯು ಬಣ್ಣಿಸಿದಂತೆ, ರವೀಂದ್ರರ ಶೋಕಗೀತಗಳಲ್ಲಿ ಹಲವೆಡೆಗೆ ಹೃದಯದ ತೀವ್ರ ವೇದನೆಯಿಂದಲೇ ಸಂತಾಪವು ಅನುಮಿತವಾಗುತ್ತದೆ.

ಕೆಳಗಿನ ಕವಿತ್ವದಲ್ಲಿಯಂತೂ ಅತೀವ ಸುಂದರ ಭಾವನೆಯಿರುವುದು. ಶೋಕವು ಕೆಲ ಕಾಲದ ಮೇಲೆ ಶಾಂತಿಯಲ್ಲಿ ಪರಿಣಮಿಸಿತೆಂಬುದನ್ನು ಕವಿಯು ಸರಸವಾಗಿ ಬಣ್ಣಿಸಿರುವನು:—

ತೃಣಾಚ್ಛಾದಿತವಾದ ಮಾರ್ಗದಲ್ಲಿ ನಡೆಯುತ್ತಿರುವಾಗ, ನಾನು ಒಮ್ಮೆ ಹಿಂದಿನಿಂದ ಒಬ್ಬರು ನುಡಿದುದನ್ನು ಕೇಳಿದೆನು : 'ನೋಡು ! ನನ್ನ ಪರಿಚಯವಿರುವುದೋ ನಿನಗೆ?' ನಾನು ತಿರುಗಿ ಅವಳ ಕಡೆಗೆ ನೋಡಿ ನುಡಿದೆನು : 'ನನಗೀಗ ನಿನ್ನ ಹೆಸರಿನ ನೆನಪು ಆಗಲೊಲ್ಲದು.'

ಅವಳು ನುಡಿದಳು : 'ನಾನು ಮೊದಲು ದುಃಖಸ್ವರೂಪದಲ್ಲಿದ್ದೆನು. ನೀನು ತರುಣನಾಗಿರುವಾಗಲೇ ನಾನು ನಿನಗೆ ಕಾಣಿಸಿಕೊಂಡಿದ್ದೆನು.'

ಇನ್ನೂ ಹವೆಯಲ್ಲಿ ಇಬ್ಬನಿ ಇರುವಾಗಿನ ಪ್ರಭಾತದಂತೆ, ಅವಳ ಕಣ್ಣುಗಳು ತೋರಿದುವು.

ಕೆಲಹೊತ್ತು ಸ್ತಬ್ಧನಾಗಿ ನಿಂತು ಬಳಿಕ ನುಡಿದೆನು : 'ಅಶ್ರುಗಳ ಮಹಾ ಭಾರವನ್ನೆಲ್ಲ ನೀನು ಕಳೆದುಕೊಂಡೆಯಾ ?'

ಅವಳು ಮುಗುಳು ನಗೆ ನಕ್ಕಳು, ಏನನ್ನೂ ನುಡಿಯಲಿಲ್ಲ. ಅವಳ ಅಶ್ರುಗಳು ನಗೆಯ ಭಾಷೆಯನ್ನು ಕಲಿಯಲಿಕ್ಕೆ ಇನ್ನೂ ಕಾಲವಿದ್ದಿತೆಂದು ನನಗೆನಿಸಿತು.

ಬಹು ಕಾಲದ ವರೆಗೆ ನಿನ್ನ ದುಃಖವನ್ನು ರಕ್ಷಿಸಿಡು ಎಂದು ನೀನು ಒಮ್ಮೆ ನುಡಿದೆಯಲ್ಲವೇ ? ಎಂದು ಅವಳು ಕೇಳಿದಳು.

ನಾನು ನಾಚಿಕೊಂಡು ನುಡಿದೆನು : 'ಅಹುದು, ವರುಷಗಳು ಕಳೆದು ಹೋದುವು, ನಾನು ಅದನ್ನು ಮರೆತೆನು'. ಬಳಿಕ ನಾನು ಅವಳ ಕೈಯನ್ನು ನನ್ನ ಕೈಯಲ್ಲಿ ತೆಗೆದುಕೊಂಡು ನುಡಿದೆನು : 'ನಿನ್ನ ಆಕೃತಿಯಲ್ಲಿ ವಿಪರಿಣಾಮವಾಗಿದೆ, ನಿನ್ನ ಗುರುತು ಹತ್ತಲಿಲ್ಲ.'

'ಒಮ್ಮೆ ದುಃಖಸ್ವರೂಪದಲ್ಲಿದ್ದವಳೇ ಈಗ ಶಾಂತಿಯಾಗಿ ಪರಿಣಮಿಸಿದ್ದಾಳೆ' ಎಂದು ಅವಳು ನುಡಿದಳು.

**ಪಂಡಿತ ಕೇಶವ ಶರ್ಮಾ ಗಲಗಲಿ**

---

# ಶ್ರೃಂಗೇರಿಯ ಕೈಫಿಯತ್ತು

(ಸಂಪುಟ ೧೩, ಸಂಚಿಕೆ ೧, ಪುಟ ೭೭ರಿಂದ ಮುಂದುವರಿದುದು)



---

೧. ಈ ಲೋಕದಲ್ಲಿ ತ್ರೈಮೂರ್ತಿಗಳು ಯಾರೆಂದರೆ ಅದಕ್ಕೆ ವಿವರ—

ಈ ಚತುರ್ದಶ ಭುವನದಲ್ಲಿ ಸೃಷ್ಟಿ ಸ್ಥಿತಿ ಲಯ ಕಾರ್ಯ ಕಾರಣಕ್ಕೆ ನಿಯಾಮಕನಾದ ಸಾಕ್ಷಾತ್ ವಿಷ್ಣೋ (?) ಸರ್ವೋತ್ತಮ ವಿರಾಟ್ ಪುರುಷ ಆದಿನಾರಾಯಣ ದೇವರು.

೧. ಇವರ ಆಜ್ಞೆಯಿಂದ ಸೃಷ್ಟಿಗೋಸ್ಕರ ವಟಪತ್ರ ಶಾಯಿಯಾದ ಭಗವಂತನ ನಾಭಿ ಕಮಲದಲ್ಲಿ ಬ್ರಹ್ಮದೇವರು ಅವತಾರ ಮಾಡಿ ಪ್ರಪಂಚಾದಿ ಸೃಷ್ಟಿಗಳ ಮಾಡಿದರು.

ಈ ಸೃಷ್ಟಿಯಾದಂತಹ ಜನರಿಗೆ ರಕ್ಷಣೆ ಮಾಡತಕ್ಕ ಬಗ್ಗೆ ಶ್ರೀಪುರುಷನ (ವೇಷವನ್ನು?) ತಾಳಿ ಪರಿಪಾಲನೆ ಮಾಡಿದ—

೧. ಪ್ರಳಯ ಕಾಲದಲ್ಲಿ ಸಂಹಾರ ಮಾಡುವ ಬಗ್ಗೆ ರುದ್ರ ವೇಷವುಳ್ಳವನಾಗಿ ಅವತರಿಸಿದ ಮಹೇಶ್ವರ ರೂಪು. ಈ ಮೇರೆ ಬ್ರಹ್ಮ ವಿಷ್ಣು ಮಹೇಶ್ವರರು ಎನ್ನುವಂತಹ ದೇವರ ಹೆಸರು—

೧. ಈ ರಾಜ್ಯದಲ್ಲಿ.........ಮುಂತಾದ ವ್ಯವಹಾರಗಳನ್ನು ವಿಚಾರಿಸುವುದಕ್ಕೆ ಪ್ರಭುತ್ವ ಮಾಡುವ ತಮ್ಮ ತಾಬೆದಾರಿಯಿಂದ ಸರಕಾರ ಸಂಬಳ ತಂದು ಚಾಕರಿಯಲ್ಲಿ ಖುಜುವಿಲ್ಲದೆ ಲಂಚ ಲಾವಣಿ ತೆಗೆದುಕೊಂಡು ಸರಕಾರದ ಕೆಲಸ ಕೆಡಿಸಿ ............ಮಾಡಿದರೆ ಅವರಿಗೆ ನಗರದ ಪ್ರಭುತ್ವ ಮಾಡುವ ಯಜಮಾನರು ಕೇಳಿ ಚಾಕರಿ ಬರತರ್ಫು ಮಾಡಿ ಅವರಿಗೆ ಮಾಡತಕ್ಕ ಸಶಿಯತುಗಳು ಸಹಾ ಯಜಮಾನನಾಗಿರುವಂತಹವರೆ ಸರಿ. ಇದು ಶಿವಾಯಿ ಅಣ್ಣ ತಮ್ಮಂದಿರು ವ್ಯಾಜ್ಯ ಸಾಲ ಸೋಲದ ವ್ಯಾಜ್ಯ ಸ್ವಾಸ್ತಿ ವೃತ್ತಿಗಳ ವ್ಯಾಜ್ಯವನ್ನು ಲೋಕದಲ್ಲಿರುವ ಅನೇಕ ವ್ಯಾಜ್ಯಗಳು ಮುಂತಾದುವನ್ನು ಪೇಟೆ(ಯ) ಶೆಟ್ಟಿ ವರ್ತಕರು ಅಗ್ರಹಾರದ ಬ್ರಾಹ್ಮಣರು ರೈತರು ಮುಂತಾಗಿ ಕುಳಿತು ವ್ಯಾಜ್ಯಗಳ(ನ್ನು) ಕೇಳಿ, ಪಕ್ಷ ಪರಪಕ್ಷವಿಲ್ಲದ ರೀತಿ ವ್ಯಾಜ್ಯಗಳ ಮಾತನಾಡಿಕೊಂಡು ಪ್ರಭುತ್ವ ಮಾಡುವವರಿಗೆ ಅರಿಕೆ ಮಾಡಿಕೊಂಡಲ್ಲಿ, ವಿಹಿತವಿದ್ದ ಹಾಗೆ ತೀರಿಸಿಬಿಡುವುದೇ ಹೊರತು ಸರಕಾರದಿಂದ ಸಂಬಳದವರನ್ನಿಟ್ಟು ಈ ವ್ಯಾಜ್ಯಗಳಂ ತೀರಿಸುವಂತಹುದು ಈ ರಾಜ್ಯ ನಡತೆಯಲ್ಲ ಎಂಬ ಕಲಂ.

೧. ಜರ್ನಲ ಮಾತಿಶನು (ಜನರಲ್ ಮಾಥ್ಯೂಸನು?) ಸೇಕ ಅಯಾಜನು ವಿಕವಾಗಿ ಕೊಡಿಟ್ಟರಿಂದ ಸೇಕ್ ಅಯಾ(ಜ)ನು ನಗರದ ಕೋಟೆಯನ್ನು ಮುತ್ತಿಕ

Mathews)ಗೆ ಕೊಟ್ಟು ಲತ್ತಾನುಜ ಬಹ (?) ಯೇರಿಹೋದುದರಿಂದ ತಾವು ಈ ವರ್ತಮಾನ ಟಿಪ್ಪುಸುಲ್ತಾನರು ಕೇಳಿ ತಮ್ಮ ದಂಡು ಸಹಾ ಬಂದು, ನಗರದ ಕೋಟೆ(ಗೆ) ನಾಲ್ಕು ಕಡೆಯಿಂದ ಮೋರ್ಜೆ ಕಟ್ಟಿಕೊಂಡು ಒಳಗಣ ಜನ ಹೊರಗೆ ಬಿಡದೆ ಹೊರಗಿನ ಜನ ಒಳಗೆ ಬಿಡದೆ ಗೇರಾಯಿಸಿಕೊಂಡುದರಿಂದಲೂ ಇದರ ಮೇಲೆ ಕವುಲಿನ ಬಗ್ಗೆ ಹೇಳಿಕಳುಹಿಸಿದುದರಿಂದಲೂ ಜರ್ನ ಮತಿ (Gen. Mathews) ಟಿಪ್ಪು ಸುಲ್ತಾನರಿಗೆ ಹೇಳಿಕಳುಹಿಸಿದ ವಿವರ—ನಿಮ್ಮ ಸಾಮಾನು ಸರಂಜಾಮು ಮುಂತಾಗಿ ಏನು ಹೋಗಿದ್ದಾಗ್ಗೂ ನಾವು ಕೊಡುತ್ತೇವೆ; ನಮ್ಮ ಕಡೆ ಜನ ಆಯುಧಪಾಣಿ ಸಹಾ ನಮ್ಮ (ನಮಗೆ?) ಬಿಡಿ ಎಂಬದಾಗಿ ಹೇಳಿಕಳುಹಿಸಿದುದರಿಂದ, ಆ ಬಗ್ಗೆ ಟಿಪ್ಪುಸುಲ್ತಾನರು ಒಪ್ಪಿಕೊಂಡು ಕೌಲಿನ ಪ್ರಕಾರ ಇಳಿಯಿಸಿಕೊಂಡು ಆಮೇಲೆ ಟಿಪ್ಪುಸುಲ್ತಾನರು ಮತಿಸ ಸಾಹೇಬರಿಗೆ ಹೇಳಿಕಳುಹಿಸಿದ ವಿವರ:—"ನಮ್ಮ ಸಾಮಾನು ಕೂಡಿದ ಜನಗಳಲ್ಲಿ ಹೋದದ್ದು ಹೋಯಿತು. ಸೇಕ್ ಅಯಾಜಾ ಎಂಬುವನು ನಮ್ಮ ಚಾಕರಿವಾನ. ಅವನೊಬ್ಬ ಮಾತ್ರ........ಕೇಳಿದುದರಿಂದ ಇಂತಹ ಜರ್ನಲರು ಬಹಳ ಆದೀತು ಹೋದೀತು, ಇಂತಹ ನಗರಗಳು ಬಂದರಗಳು ಬಹಳ ಹೇರಳವಾಗಿ ಸಿಕ್ಕೀತು ಹೋದೀತು, ಮರೆಬಿದ್ದವನನ್ನು ಕೊಡುವುದಿಲ್ಲಯೆಂಬುದಾಗಿಯೂ ಟಿಪ್ಪುಸುಲ್ತಾನ ಹೇಳಿದ ಮಾತು. ಬಾಯಿಯಿಂದ ಹೇಳಿದ ಮಾತಲ್ಲ, ಪುಕುಳಿಯಿಂದ ಹೇಳಿದ ಮಾತೇ ಸರಿ" ಎಂಬದಾಗಿ ಬಾಯಿಗೆ ಬಲ್ಲಹಾಗೆ ಬೈದುದರಿಂದ ಈ ವರ್ತಮಾನ(ವನ್ನು) ಟಿಪ್ಪುಸುಲ್ತಾನನು ಕೇಳಿ ಬಹಳ ಸಿಟ್ಟುಮಾಡಿಕೊಂಡು, ಮತ್ತಿಸ ಸಾಹೇಬರು (ರನ್ನು?) ಬೇಡಿ ಹಾಕಿ ಡೋಲಿಯಲ್ಲಿಟ್ಟು ಪಹರೆಯಿಂದ ಶ್ರೀರಂಗಪಟ್ಟಣದಲ್ಲಿ ಬಂದೀಖಾನೆ(ಗೆ) ಹಾಕಿ ಎಂಬದಾಗಿ ಹೇಳಿ, ಆ ಪ್ರಕಾರ ರವಾನೆ ಮಾಡಿದುದರಿಂದ, ಶ್ರೀರಂಗಪಟ್ಟಣದ ಮಾರ್ಗದಲ್ಲಿ ಚನ್ನಯಪಟ್ಟಣವೆಂಬ ಗಡಿಯಿದೆ. ಅಲ್ಲಿ ಮೃತವಾದವರು ಮತ್ತಿಸು (Mathews) ಸಾಹೇಬರು. ಇನ್ನು ಕೆಲವರು ಗಡಿಗಳಲ್ಲಿ ಹಾಕಿದುದರಿಂದ ಅಲ್ಲಲ್ಲಿಯೇ ಸತ್ತುಹೋದರು ಎಂಬ ಕಲಂ.

೧. ಕೊಡೆಯಾಲದಲ್ಲಿ ಜಹಜ್ ಒಡೆದುದರಿಂದ ಅದರಲ್ಲಿದ್ದಂತಹ ಜನದಲ್ಲಿ ಇಬ್ಬರು ಇಂಗ್ರೇಜಿ ಸರಕಾರು ಬಂದು ಸೇರಿದ್ದರಿಂದ, ಟಿಪ್ಪುಸುಲ್ತಾನರು ಸಿಕ್ಕಿದ ಸರಕಾರ ಜನರಿಬ್ಬರನ್ನು ನಗರದ ಕೋಟೆಯಲ್ಲಿ ಬೇಡಿಹಾಕಿಸಿ ದಿನ ೧ಕ್ಕೆ ರಾಗಿಹಿಟ್ಟಿನ ರೊಟ್ಟಿ ಸೇರಿನ ಪ್ರಕಾರ ಕೊಡುತ್ತಾ ಇಟ್ಟುಕೊಂಡು, ಆಮೇಲೆ ಕೆಲವು ದಿನದ ಮೇಲೆ ನಗರದಲ್ಲಿದ್ದ ಕಿಲ್ಲೇದಾರರು ಆದಂಖಾನ್ ಲಾವಣಿ ಹೆಡ್ರೈಟರಾ ತಿರುಮಲರಾಯರಿಗೆ ಸಹಾ ಟಿಪ್ಪುಸುಲ್ತಾನರು ಪರವಾನೆ ಬರೆದು ಕಳುಹಿಸಿದ ವಿವರ:—ಕೋಟೆಯಲ್ಲಿಬ್ಬರು ಇಂಗ್ರೇಜಿ ಸರ(ದಾ)ರ(ರನ್ನು) ಖೈದಿನಲ್ಲಿಟ್ಟಿದ್ದುದು ಸರಿಯಷ್ಟೆ. ಅವರನ್ನು—ಅಪ್ಪಣೆ ಬಂದಿದೆ ನಿಮ್ಮ ಕೊಡಿಯಾಲಕ್ಕೆ ಕಳುಹಿಸುವ ಹಾಗೆ—(ಎಂದು) ಹೇಳಿ ರಾತ್ರಿಕಾಲದಲ್ಲಿ, ಸದ್ದಿಲ್ಲದ ವೇಳೆಯಲ್ಲಿ, ಒಬ್ಬರಿಗೂ ತಿಳಿಯದ ಹಾಗೆ ಇಬ್ಬರು ಸರದಾರರನ್ನು ಕೊಂದುಹಾಕುವ ಹಾಗೆ ಬರೆದುಬಂದುದರಿಂದ, ಈ ಸರದಾರರ ಬಳಿಗೆ ಕಿಲ್ಲೇದಾರಾ ಸಿರಸ್ತೇದಾರರು ಬಂದು, 'ನಿಮ್ಮನ್ನು ಕಳುಹಿಸುವ ಹಾಗೆ ನಮಗೆ ಬರೆದು ಬಂದು ಇದೆ, ನೀವು ಯೋಚನೆ ಮಾಡಬೇಡಿ'—ಎಂಬದಾಗಿ ನಿಮಗೆ ಡೋಲಿ ಆಳುಗಳು ಸಹಾ

ಕಳುಹಿಸುತ್ತೇವೆಂಬುದಾಗಿ ಹೇಳಿದುದರಿಂದ ಆ ಸರದಾರರು ಸಂತೋಷಪಟ್ಟುಕೊಂಡು ಇದ್ದರು. ಆ ದಿವಸ ರಾತ್ರಿಯಲ್ಲಿ ಇವರನ್ನು ಕೊಲ್ಲತಕ್ಕ ಬಗ್ಗೆ ಬಾರೂದ್ ಖಾನೆ ಬಳಿಯ ಒಂದು ಮನೆಯನ್ನು ಮಾಟಿ ಆ ಬಳಿಯ ಕಳ್ಳಜನ ಹಬ್ಬಸೇರು (ಹಬಸಿಯರು) ಸಹಾ ಇಟ್ಟು, ರಾತ್ರಿ ಜನ ಸಂಚಾರ ನಿಂತ ಮೇಲೆ ಈ ಸರದಾರರ ಬಳಿಗೆ ಡೋಲಿ ಆಳು ಸಹಾ ಕಳುಹಿಸಿಕೊಟ್ಟು, ರಾತ್ರಿವೇಳೆ ಸಾವಕಾಶವಾಗಿ ಹೋಗುವ ಹಾಗೆ ಹೇಳಿ, ಡೋಲಿಯಲ್ಲಿ ಇಬ್ಬರು ಸರದಾರರನ್ನು ಸಹಾ ತೆಗೆದುಕೊಂಡು ಕಿಲ್ಲೆ ಹೊರಗಾಗಿ ಬಾಳೆಕೊಪ್ಪ ಮಾರ್ಗವಾಗಿ ರಾತ್ರೆ ಜಾವ ಹೊತ್ತು ಪರ್ಯಂತರ ಗಲ್ಲಿಗ(ಳ)ಲ್ಲಿ ತಿರುಗಿಸಿ, ಎರಡು ಮೂರು ಹರದಾರಿ ನೆಲ ಬಂದ ಹಾಗೆ ತೋರಿಸಿ, ಆ ತರುವಾಯ ಬಾರುದ್ ಖಾನೆ ಬಳಿ ಮಾಡಿದ ಮನೆಗೆ ಕರೆದುಕೊಂಡುಹೋಗಿ ಇಳಿಯಿಸಿ, ಆ ಮನೇ ಕೂಡಿ(?) ಈ ಕಳ್ಳಜನರು ಹಬಸೇರು ಸಹ ಮನೆಯಲ್ಲಿ ಕೂಡಿದ್ದುದರಿಂದ, ಇಬ್ಬರು ಸರದಾರರನ್ನೂ ಕುತ್ತಿಗೆ ಒತ್ತಿ ಕೊಂದುಬಿಟ್ಟರು. ಕಲಾ(ಕಿಲ್ಲಾ?)ನಗರದಲ್ಲಿ ಶಹರು ತುಂಜಿ ಹೇರಳ ದಿವಸದಿಂದ ಚೆನ್ನಾಗಿತ್ತು. ಈಚೆಗೆ ಶುಭಕೃತು ಸಂವತ್ಸರದಲ್ಲಿ ದೊಡ್ಡ ನವಾಬು ಸತ್ತುಹೋದ ಮೇಲೆ ಟಿಪ್ಪುಸಾಹೇಬರು ದೊರೆತನ ಮಾಡಿಕೊಂಡು ಬರುವುದರೊಳಗೆ, ಸೇಖಲ್ಲಿಯಾಜನು ಕಿಲ್ಲೇ(ಯನ್ನು) ಇಂಗ್ರೇಜಿಗಳಿಗೆ ಕೊಟ್ಟು ತಾನು ಹೋಗುವಾಗ, ಆ ವೇಳೆಯಲ್ಲಿದ್ದ ಜನಗಳು ಗಾಬರಿಯಾಗಿ ವಲಸೆ ತೆಗೆದು ಊರಂ ಬಿಟ್ಟುಹೋದುದರಿಂದ, ಅದರ ಮೇಲೆ ತುಕಡಿ ತುಕಡಿ ಎಂಬದಾಗಿ ಮಾಡಿ ಅಸಫರನ್ನು ಇಟ್ಟಿದ್ದರಿಂದ, ಇವರು ನಜರಾ ನಾವಾ ಮುಗವಳಿ ಮುಂತಾಗಿ ಪ್ರಜೆಗಳ ಸುಖ ಶಕ್ತಿಯಾದವರ ಕೈಯ್ಯಲ್ಲಿ ಸಹ ತೆಗೆಯಿಸಿಕೊಂಡುದರಿಂದ ನಿಭಾಯಿಸಲಾರದೆ ಹೊರಟುಹೋದರು. ಊರು ಹಾಳಾಯಿತು.

೧. ಈ ಸೀಮೆಯಲ್ಲಿ ಒಂದು ವರ್ಷ ಜನರಿಗೆ ಬಹಳ ಜಡನಾಗಿ ಸಕಲಾಗುವಂತದಕ್ಕೆ ನಿಮಿತ್ತವೇನೆಂದರೆ, ಹನ್ನೆರಡು ವರ್ಷಕ್ಕೊಂದು ಸಾರಿ ಪ್ರಚಂಡ ವಾಯುತ(?) ಮಾರಿ ಎಂಬದಾಗಿ ಬರುತ್ತಿದ್ದು ಆ ಕಾಲದಲ್ಲಿ ಜನರಿಗೆ ಎರಡು ದಫಾ ವಾಂತಿ ಭ್ರಾಂತಿ ಆಗುವುದು, ಕೈಕಾಲು ತಣ್ಣಗಾಗಿ ಸಾಯುತ್ತಾರೆ. ಇದರ ಶಿವಾಯಿ ಮೈಲಿ ಉಪದ್ರವಗಳು ಆಗಿಯೂ ಬಹಳ ಲಯವಾಗುತ್ತಾ ಇದೆ.

೧. ಧೋಂಡಜಿ(ಯು) ನಗರಕ್ಕೆ ಬಂದ ಮೇಲೆ ಒಳ್ಳೇ(ಯ)ದು ಏನು ಮಾಡಿದ್ದು? ಕೆಟ್ಟದ್ದು ಏನು ಮಾಡಿದ(ನು)? ಎಂಬ ಬಗ್ಗೆ ಒಳ್ಳೇಯದು ಮಾಡಿದ್ದು ದೇವ ಬ್ರಾಹ್ಮಣರಿಗೆ ಸರ್ವಮಾನ್ಯ ಬಿಟ್ಟುಕೊಟ್ಟು ದೇವ ಬ್ರಾಹ್ಮಣರಿಗೆ ದಾನ ಧರ್ಮಗಳಂ ಮಾಡಿದ(ನು). ಶಿಪಾಯಿಗಳಿಗೆ ಸಂಬಳ ಹೆಚ್ಚಿ ಮಾಡಿಕೊಟ್ಟು ಇನಾಮುಗಳು ಕೊಟ್ಟ(ನು). ಕೆಟ್ಟ ಕೆಲಸ ಮಾಡಿದ್ದು ಯಾವುದು ಎಂದರೆ ಈ ತಾಲ್ಲೂಕಿನಲ್ಲಿ ಇದ್ದಂತಹ ಅಸಫರು ಅಮಲದಾರ ಸಹ ಪತ್ತೆ ಹತ್ತಿಸಿ ಹಿಡಿದು, ಅವರ ಜಿಂದಗಾನೆಯನ್ನು ಲೂಟಿಸಿಕೊಂಡು, ನಗರಕ್ಕೆ ಬಂದಾಕ್ಷಣ ವಿಚಾರಿಸದೆ ಮಹದೀನ್ ಖಾಜಿಮ್ಮನ ಕಿಲ್ಲೆದಾರರ(ನ್ನು) ಹೊಡೆದುಹಾಕಿದ(ನು). ಇನ್ನು ಎಂದರೆ. . . . ರಗಳಲ್ಲಿ(?) ಆಸಾಮಿಗಳನ್ನು ನೋಡಿ ದಂಡವನ್ನು ಕಟ್ಟಿದ(ನು). ಈ ಧೊಂಡು ಮಾಡಿದ ಕಲಂಗಳು.—

೧. ಈ ಸೀಮೆಗೆ ಗಂಧಕ, ಪೆಟ್ಟಿಗೆ ಉಪ್ಪು ಎಲ್ಲಿಂದ ಬರುತ್ತಾ ಇದೆ ಎಂದರೆ, ಗಂಧಕ ಬರುವಂತಹುದು ಕೊಡಿಯಾಲ, ಕುಂದಾಪುರ, ತಲಚೇರಿ ಮುಂತಾದ ಬಂದರಿಂದ ಬಂದಲ್ಲಿ ಖರೀದಿಗೆ ತೆಗೆದುಕೊಂಡು ಕಾರ್ಖಾನೆಗೆ ಕೊಡುತ್ತಾ ಇತ್ತು. ಪೆಟ್ಲುಪ್ಪು ಬಳ್ಳಾರಿ ಸೀಮೆಯಲ್ಲಿ ಆಗುತ್ತಾ ಇದೆ; ಹುಬ್ಬಹಳ್ಳಿ ಮುಂತಾದ ಸೀಮೆ ಯಿಂದ ಬಂದಲ್ಲಿ ಕ್ರಯಕ್ಕೆ ತೆಗೆದುಕೊಂಡು ಕಾರ್ಖಾನೆಗೆ ಕೊಡುತ್ತಾ ಇತ್ತು.—

೧. ನಗರ ಬಾರುದ್‌ಖಾನೆಯಲ್ಲಿ ಚಕ್ರ ಯಾರು ಮಾಡಿದರು ಎಂದರೆ, ಮುಂಬೈ ಯಿಂದ ಇಲ್ಲಿಗೆ ಮಹಮ್ಮದ್ ಹಂಜಾನು ಎಂಬ ಕರೇಮನುಷ್ಯ(ನು) ದರೋಗಿ ಮಾಡಿಕೊಂಡು ಸರ್ಕಾರದಲ್ಲಿ ಸಂಬಳಕ್ಕಿದ್ದನು. ಈತನು ಮುಂಬೈಯಿಂದ ತಮ್ಮ ನಂಟರನ್ನು ಕರೆಯಿಸಿ ಬಿಟ್ಟು, ಚಕ್ರವನ್ನು ಮಾಡಿಸಿ ಕಾರೆ(ಕಾರು ?)ಖಾನೆಯಲ್ಲಿಟ್ಟು ಇದ್ದ ಈ ಹಂಗಾಮದಲ್ಲಿ ಊರ ಬಿಟ್ಟು ಹೋದನು. ಈಗ ಎಲ್ಲಿದ್ದಾನೋ ಅವನು ಗೊತ್ತಿಲ್ಲ ಎಂಬ ಕಲಂ.—

೧. ನಗರದಲ್ಲಿ ತೋಫ್‌ಖಾನೆ ಬಂದೂಕ್ ಸಹಾ ಯಾರ ದಿವಸದಲ್ಲಿ ಯಾಯಿತೋ? ಅದನ್ನು ಮಾಡಿದ ಜನಗಳೆಲ್ಲಿದ್ದಾರೋ? ಈ ಬಗ್ಗೆ ಪ್ರಾಕ್ ಪಾರ್ಥಿವ ಸಂವತ್ಸರದವರೆಗೆ ಬೆಂಗಳೂರು ಸೀಮೆಯಿಂದ ಕೊಂಗರು ಬಂದು ಪಂಚಖುಷಿ ತೋಪು ಎರೆಯುತ್ತಾ ಇದ್ದರು. ಆ ತೋಪುಗಳು ದುರಸ್ತಾಗದೆ ಜಯಗಳಾದುದರಿಂದ ಪ್ರಧಾನ ವೆಂಕಪ್ಪಯ್ಯನವರು ಸದರ ಹು............ಮುಹಮ್ಮದ್ ಹಂಚನ ಮುಖಾಂತರ ಬೊಂಬೈಯಿಂದ ಕರೆಸಿದ(ನು). ರಾಯುಲಶೆಟ್ಟಿಯೆಂಬುವನು ಗೊತ್ತುಗಾರ. ಇವನಿಗೆ ಮುನ್ನೂರು ವರಹ ಅಡ್ವಾನ್ಸು ಕೊಟ್ಟು, ಇವರ ಸಂಗಡ ಬರತಕ್ಕ ಜನಗಳಿಗೆ...............ಅಡ್ವಾನ್ಸ್ ಕೊಟ್ಟು, ಈ ಮೇರೆ ಹದಿಮೂರು ಜನ ಬಂದುದರಿಂದ ಇವರಿಗೆ ಬೇಕಾದ ಸರಂಜಾಮು ಮಾಡಿಕೊಟ್ಟು, ಇವರು ತಯಾರುಮಾಡಿದ್ದು ತೋಪುಗಳು, ಗರ್ನಲ ಗುಂಡುಗಳು, ಮಕರಡಬ್ಬಿ, ಬೀಡಿನ ಗುಂಡುಗಳು, ತಲಮಂಡಲ, ಕಡಾಯಿ—ಮುಂತಾಗಿ ನಗಗಳು ಮಾಡುತ್ತಾ ಇದ್ದರೆಂಬ ಕಲಂ.—

೧. ಈ ಕಾರ್ಖಾನೆ ನಿಂತ ಬಳಿಕ ಹೊಸದಾಗಿ ಟಿಪ್ಪುಸುಲ್ತಾನ್ ದಿವಸದಲ್ಲಿ ಅವರು ವಿಶ್ವಾವಸು ಸಂವತ್ಸರದಲ್ಲಿ ಬನಾರಿ ಕಾರ್ಖಾನೆ ಮಾಡಿದ್ದು ಸೈದ್ ದಾಊದ್ ಎಂಬುವನು ನಗರದಲ್ಲಿಂದ ಹಜೂರಿಗೆ ಹೋಗಿ ಕಾರಿಗಾರು ಕರೆದುಕೊಂಡು ಬಂದದ್ದು. ಅರ್ಕಾಟ್ ಸೀಮೆ ಬಡಾಯಿ ಅಕ್ಕಸ್ನ ೧, ಪಂಚಾಳ ಸೊನ್ನಾಚಾರಿ ೧, ಈ ಎರಡು ಜನವನ್ನು ಕರೆತಂದಿಟ್ಟು, ಇವರ ತಾಬಕೆಯಲ್ಲಿ ಲೋಹದ ಬಡಾಯಿ ಜನಗಳ(ನ್ನು) ಸಹಾ ಕೊಟ್ಟು, ತಯಾರು ಮಾಡಿಸಂತಹ...........ನಗು ಬಂದೂಕು, ತಲವಾರು, ತೊಸ್ತಾಸು, ಕೋಪಿಸ ಜೇನು, ತ್ರೈ (ಕೈ?) ಗಾಡಿ, ರಣಗಾಡಿ, ಮುಂತಾಗಿ ಆಗುತ್ತಾ ಇದ್ದಿತೆಂಬ ಕಲಂ.—

೧. ರಾಣುಗು (ವೆ?) ಸಿಂಬಯ್ಯನು ಯಾವ ಬಗ್ಗೆ ಆಪ್ತನಾಗಿದ್ದನೆಂದರೆ, ಮೊದಲು ಸಿಂಬಯ್ಯನೆಂಬುವನು ರೋಪಿಲಿ ಲಿಂಗಣ್ಣನ ತಮ್ಮ. ಅವನು ಬಹು ಚಂದ

ವುಳ್ಳವನು. ಅರಸು ಬಸಪ್ಪನಾಯಕರು ಗೌಡಿಗಳ ಹೆಣ್ಣು ಹುಡುಗಿಯರನ್ನು ಸಾಕಿದ್ದರು. ಆ ಹೆಣ್ಣು ಹುಡುಗಿಯರನ್ನು ಈತನಿಗೆ ಮದುವೆ ಮಾಡಿಕೊಟ್ಟು ಮಕ್ಕಳ ಹಾಗೆ ಕಾಪಾಡಿಕೊಂಡು ಬರುತ್ತ ಇದ್ದರು. ಈತನಿಗೆ ಚಿಕ್ಕರಮನೆ ಮೂರುಸಾವಿರ ಮಂದಿಗೆ ಸರದಾರಿಕೆ ಮಾಡಿಕೊಟ್ಟು ಅತಿ ಪ್ರೀತಿಯಿಂದಿಟ್ಟುಕೊಂಡು ಇದ್ದ(ರು). ಅರಸು ಸತ್ತುಹೋದ ಮೇಲೆ ಈತನ ಹೆಂಡಿತಿ ರಾಣಿಯು ಸಣ್ಣ ಹುಡುಗನನ್ನು ಸಾಕಿ ಕೊಂಡಿದ್ದುದರಿಂದ, ಮಗನಿಗೆ ಸಮಾನವಾದುದರಿಂದ, ಅಂತರಂಗ ಆಲೋಚನೆ ಕೆಲಸಗಳು ಸಹ ಇವನ ಸಂಗಡ ತೆಗೆದುಕೊಳ್ಳುತ್ತಿದ್ದಳು. ಇವನು ಬುದ್ಧಿವಂತ. ಇವನಿಗೆ ಆಗದವರು ಬಹಳ ಜನವಾದುದರಿಂದ ಅಪವಾದ ಮಾತು. ಅದರ ಹೊರತು ಮತ್ತೇನೂ ಇಲ್ಲ ಎಂಬ (ಕಲಂ?)......

## ನಗರದ ದೊರೆತನ ಆಳಿದ(ವ)ರು

೧. **ಕೆಳದಿಹಳ್ಳಿ ಬೈಲ** ಗ್ರಾಮದಲ್ಲಿದ್ದ **ಬಸಪ್ಪನ** ಮಗ **ಚೌಡ, ಭದ್ರಪ್ಪ** ನೆಂಬ ಇಬ್ಬರು ಮಕ್ಕಳು ಇರುವಲ್ಲಿ ಈಶ್ವರನನುಜ್ಞೆಯಾಗಿ ನಿಕ್ಷೇಪ, **ನಾಗರಮುರಿ** ಯೆಂಬ ಕತ್ತಿ ಸಹಾ ಸಿಕ್ಕಿದುದರಿಂದ, ಈತನು ಹೀಗೆ ಇರಲಾಗಿ, **ರಾಯರ** ಸಂಸ್ಥಾನಕ್ಕೆ ಅರಿಕೆಯಾಗಿ, ಆಗ್ಗೆ ಇವರನ್ನು ಕರೆಯಿಸಿ ಅಲ್ಲಿ ಇವರಿಗೆ ಬಹುಮಾನವಂ ಮಾಡಿ ಈ ರಾಜ್ಯಕ್ಕೆ ದೊರೆಯನ್ನಾ(ಗಿ)ಸಿಕೊಂಡು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ ೧೪೨೨ನೇ ವರ್ತಮಾನಕ್ಕೆ ಸಲ್ಲುವ **ಸಿದ್ಧಾರ್ಥಿ** ಸಂವತ್ಸರ ಮಾಘ ಶುದ್ಧ ೩ರಲ್ಲಿ **ಚೌಡಪ್ಪ**ನಿಗೆ ಪಟ್ಟಾಭಿಷೇಕವಾಗಿ **ಇಕ್ಕೇರಿ** ಮೊದಲಾದ ಎಂಟು ಮಾಗಣಿಯನ್ನು ಆಳಿಕೊಂಡು **ಇಕ್ಕೇರಿ**ಯಲ್ಲಿ ಕೋಟೆ ಅರಮನೆ ಸಹ ಕಟ್ಟಿಸಿಕೊಂಡು ಈ ಮಾಘ ಶುದ್ಧ ೩ ಆರಭ್ಯ ಶ್ರೀಮುಖ ಸಂವತ್ಸರದ ಶ್ರಾವಣ ಶು॥ ೨ರ ವರೆಗೆ ವರ್ಷ ೧೩, ತಿಂಗಳು ೭ ಪರಿಯಂತರ ರಾಜ್ಯವನ್ನಾಳಿದನು.

೨ನೆಯ ದೊರೆ.—ಈ ತರುವಾಯ **ಚೌಡಪ್ಪನಾಯಕ**ರ ಮಗ **ಸದಾಶಿವ ನಾಯಕ**ರಿಗೆ **ಇಕ್ಕೇರಿ**ಯರಮನೆಯಲ್ಲಿ ಪಟ್ಟವಾದದ್ದು ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ಆರಭ್ಯ ವಿಶ್ವಾವಸು ಸಂವತ್ಸರ ವೈಶಾಖ ಶು॥ ೪ರ ವರೆಗೆ ವರ್ಷ ೩೧, ತಿಂಗಳು ೯ ಪರಿಯಂತರಕ್ಕು ದೊರೆತನ ಮಾಡಿ ಸ್ವಾಮಿಕಾರ್ಯದ ಮೇಲೆ ಜಗು ಪಾಳ್ಯ ಎಂಬ ಸ್ಥಳದಲ್ಲಿ ಈಶ್ವರಾಧೀನವಾದನು.

೩ನೆಯ ದೊರೆ.—ಈ **ಸದಾಶಿವರಾಯ**ನಾಯಕನ ಮಗ **ದೊಡ್ಡಸಂಕಣ್ಣ ನಾಯಕ**ನಿಗೆ ಪಟ್ಟವಾಗಿದ್ದು ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ ಆರಭ್ಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೪ರ ವರೆಗೆ ವರುಷ ೧೩, ತಿಂಗಳು ೫ ಪರಿಯಂತರ ತಮ್ಮ ತಂದೆ ಆಳಿದ ರಾಜ್ಯ ಯಾವತನ್ನೂ ಪರಿಪಾಲನೆ ಮಾಡಿಕೊಂಡು ಸುಖದಿಂದಿದ್ದನು.

೪ನೆಯ ದೊರೆತನ.—**ಸಂಕಣ್ಣನಾಯಕ**ರ ತಮ್ಮ **ಚಿಕ್ಕಸಂಕಣ್ಣನಾಯಕ** ರಿಗೆ ಪಟ್ಟವಾದುದು ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶು॥ ೫ ಆರಭ್ಯ

ಪ್ರಮಾದಿ ಸಂವತ್ಸರದ ಕಾರ್ತಿಕ ಶು॥ ೪ರ ವರೆಗೆ ವರುಷ ೧೨, ತಿಂಗಳು ೧ ಪರಿಯಂತರ ತಮ್ಮ ಅಣ್ಣನಾಳಿದ ರಾಜ್ಯದ ದೊರೆತನವನ್ನು ಸುಖದಿಂದ ಮಾಡಿದನು.

೫. **ಚಿಕ್ಕಸಂಕಣ್ಣನಾಯಕ**ರ ಅಣ್ಣ **ದೊಡ್ಡಸಂಕಣ್ಣನಾಯಕ**ರ ಮಗ **ರಾಮರಾಜನಾಯಕ** ಎಂಬುವನಿಗೆ ಪಟ್ಟವಾಗಿದ್ದು ಪ್ರಮಾದಿ ಸಂವತ್ಸರದ ಕಾರ್ತೀಕ ಶು॥ ೫ ಆ ರಾಜ್ಯ ಚಿತ್ರಭಾನು ಸಂವತ್ಸರದ ಮಾರ್ಗಶಿರ ಶು॥ ೪ರ ವರೆಗೆ ವರ್ಷ ೧೨, ತಿಂಗಳು ೧ ಪರಿಯಂತರ ತಮ್ಮ ಚಿಕ್ಕಯ್ಯನಾಳಿದಂತಹ ಸೀಮೆಯ ದೊರೆತನವನ್ನು (ಪ್ರಜಾ ಪರಿಪಾಲನೆ) ಮಾಡಿಕೊಂಡು ಇದ್ದು **ಗೇರುಸೊಪ್ಪೆ** ಎಂಬ ಬಳಿಯಲ್ಲಿ ದೈವಾಧೀನರಾದರು.

೬. ಈ **ರಾಮರಾಜನಾಯಕ**ನ ತಮ್ಮನಾದ **ಹಿರೇವೆಂಕಟಪ್ಪನಾಯಕ**ರಿಗೆ ಪಟ್ಟವಾದುದು ಚಿತ್ರಭಾನು ಸಂವತ್ಸರದ ಮಾರ್ಗಶಿರ ಶು॥ ೫ ಆರಭ್ಯ ಶುಕ್ಲ ಸಂವತ್ಸರದ ಕಾರ್ತೀಕ ಬಹುಳ ೩ರ ವರೆಗೆ ವರ್ಷ **೪೬**, ತಿಂಗಳು ೧೧, ದಿನ **೨೫** ಪರಿಯಂತರಕ್ಕೂ ರಾಜ್ಯವನ್ನಾಳಿಕೊಂಡು ದೈವಾಧೀನವಾಗಿ—

೭. ಈ **ವೆಂಕಟಪ್ಪನಾಯಕ**ನ ಮೊಮ್ಮಗ (**ಭದ್ರಪ್ಪನಾಯಕ**ರ ಮಗ) **ವೀರಭದ್ರಪ್ಪನಾಯಕ**ನಿಗೆ ಯಡೇರಿಯ ಅರಮನೆಯಲ್ಲಿ ಪಟ್ಟವಾದದ್ದು ಶುಕ್ಲ ಸಂವತ್ಸರದ ಮಾರ್ಗಶಿರ ಶುದ್ಧ ೧ ಆರಭ್ಯ ಪಾರ್ಥಿವ ಸಂವತ್ಸರ ಮಾರ್ಗಶಿರ ಶು॥ ೧೧ ಪರಿಯಂತರ ವರ್ಷ ೧೬, ತಿಂಗಳು ೧೧ ರ ವರೆಗೆ ರಾಜ್ಯಪರಿಪಾಲನೆ ಮಾಡಿ ತನ್ನೂರಲ್ಲಿ ನಿಂತನು.

೮. **ಚಿಕ್ಕಸಂಕಣ್ಣನಾಯಕ**ರ ಜ್ಯೇಷ್ಠ ಕುಮಾರನಾದ **ಶಿವಪ್ಪನಾಯಕ**ನಿಗೆ **ಬಿದನೂರು** ಅರಮನೆಯಲ್ಲಿ ಪಟ್ಟವಾದದ್ದು ಪಾರ್ಥಿವ ಸಂವತ್ಸರದ ಮಾರ್ಗಶಿರ ಶು॥ ೧೨ ಆರಭ್ಯ ಶಾರ್ವರಿ ಸಂವತ್ಸರದ ಆಶ್ವಯುಜ ಶು॥ ೧ ವರೆಗೆ ವರ್ಷ ೧೪ಕ್ಕೆ ತಿಂಗಳು ೯, ದಿನ ೨೦ ಪರಿಯಂತರ ರಾಜ್ಯವಾಳಿ ದೈವಾಧೀನನಾದನು.

೯. **ಶಿವಪ್ಪನಾಯಕ**ನ ತಮ್ಮ **ಚಿಕ್ಕವೆಂಕಟಪ್ಪನಾಯಕ**ರಿಗೆ **ಬಿದನೂರ** ಅರಮನೆಯಲ್ಲಿ ಪಟ್ಟವಾದದ್ದು ಶಾರ್ವರಿ ಸಂವತ್ಸರದ ಆಶ್ವಯುಜ ಶು॥ ೨ ಆರಭ್ಯ ಪ್ಲವ ಸಂವತ್ಸರ ಭಾದ್ರಪದ ಶುದ್ಧ ೪ರ ವರೆಗ ತಿಂಗಳು ೧೧, ದಿನ ೧೪ ವರೆಗೆ ರಾಜ್ಯವಾಳಿ ಶಿವಾಧೀನನಾದನು.

೧೦. ಈ **ಚಿಕ್ಕವೆಂಕಟಪ್ಪನಾಯಕ**ರ ತರುವಾಯ **ಶಿವಪ್ಪನಾಯಕ**ರ ಹಿರಿಯ ಮಗನಾದ **ಭದ್ರಪ್ಪನಾಯಕ**ರಿಗೆ **ಬಿದನೂರು** ಅರಮನೆಯಲ್ಲಿ ಪಟ್ಟವಾದದ್ದು ಪ್ಲವ ಸಂವತ್ಸರದ ಭಾದ್ರಪದ ಶು॥ ೫ ಆರಭ್ಯ ಶೋಭಕೃತ್ ಸಂವತ್ಸರದ ಭಾದ್ರಪದ ಶುದ್ಧ ೧೦ರ ವರೆಗೆ ವರ್ಷ ೨ಕ್ಕೆ, ತಿಂಗಳು ೫, ದಿನ ೨೫ರ ವರೆಗೆ ರಾಜ್ಯವಾಳಿದನು.

೧೧. **ಭದ್ರನಾಯಕ**ರ ಸಹೋದರನಾದ **ಸೋಮಶೇಖರನಾಯಕ**ರಿಗೆ **ಬಿದನೂರು** ಅರಮನೆಯಲ್ಲಿ ಪಟ್ಟವಾಗಿ ಶುಭಕೃತ್ ಸಂವತ್ಸರದ ಫಾಲ್ಗುಣ ಶು॥

೧೧ ಆರಭ್ಯ ಈಶ್ವರ ಸಂವತ್ಸರದ ಶ್ರಾವಣ ಶು|| ೪ರ ವರೆಗೆ, ಈ **ಸೋಮಶೇಖರ ನಾಯಕ**ರು ರಾಜ್ಯಪರಿಪಾಲನೆ ಮಾಡುತ್ತಿರುವಲ್ಲಿ, ಕೆಲವು ದಿವಸದಲ್ಲಿ ಈ ಅರಸು ಗಳಿಗೆ ಭ್ರಮೆ ಹುಟ್ಟಿದುದರಿಂದ, ಈ ಸಂಸ್ಥಾನದಲ್ಲಿ ಇದ್ದಂತಹ ತುಂಟ ಜನಗಳು ಬಂದಾಗ ಆ **ದಾಸಪ್ಪ** (ಆಭಾಸ ಬಸಪ್ಪ?) **ನಾಯಕ** ಎಂಬುವರಿಗೆ ದೊರೆತನವನ್ನು ಕೊಟ್ಟುದರಿಂದ, ಈತನು ಎಂಟು ವರ್ಷ ಪರಿಯಂತರ ರಾಜ್ಯವನ್ನಾಳುತ್ತಾ ಇದ್ದಲ್ಲಿ, **ಸೋಮಶೇಖರ**ನಾಯಕರ ಪತ್ನಿ **ಚೆನ್ನಮ್ಮಾಜಿ**ಯವರು ಈ ಸಂಸ್ಥಾನದ(ಕ್ಕೆ?) ಹೊಂದಿದ ಸಾಮಾಜಿಕ ಜನರು ಸಹಿತವಾಗಿ ಶತ್ರುಗಳಾದಂತಹ **ಆಭಾಸ ಬಸಪ್ಪ ನಾಯಕ** ಮುಂತಾದ ತುಂಟ ಜನಗಳನ್ನು ನಿರ್ನಯವನ್ನು ಮಾಡಿ ಈ **ಸೋಮ ಶೇಖರ**ನೆಂಬರಸಿಗೆ ಸಾಕುಮಗ **ಬಸಪ್ಪನಾಯಕ** ಎಂಬವನ ಮಾಡಿಕೊಂಡು ಈ **ಚೆನ್ನಮ್ಮಾಜಿ**ಯವರು ಆಳಿದ್ದು ಸಹಾ ವರ್ಷ ೩೩, ತಿಂಗಳು ೫, ದಿನ ಮೂರಕ್ಕೆ ಈ ದೊರೆಗಳು ಆಳಿದರು.

೧೨. ಈ **ಹಿರೇಸೋಮಶೇಖರನಾಯಕ**ರ ಪತ್ನಿಯಾದ **ಚೆನ್ನಮ್ಮಾಜಿ** ಯವರ ಮಗನಾದ **ಬಸಪ್ಪನಾಯಕ**ರಿಗೆ ಪಟ್ಟವಾದದ್ದು **ಬಿದರೂರು** ಅರಮನೆ ಯಲ್ಲಿ. ಈ ಸಂವತ್ಸರದ ಶ್ರಾವಣ ಶುದ್ಧ ೪. .ಆರಭ್ಯ ಜಯ ಸಂವತ್ಸರದ ಪುಷ್ಯ ಬಹುಳ ೧೦ ವರೆಗೆ ವರ್ಷ ೧೭, ತಿಂಗಳು ೫, ದಿನ ೧೧ ಪರಿಯಂತರ ರಾಜ್ಯವನ್ನು ಪರಿಪಾಲನೆ ಮಾಡಿಕೊಂಡು ಆ ತರುವಾಯ ದೈವಾಧೀನನಾದನು.

೧೩. ಈ **ಬಸಪ್ಪನಾಯಕ**ರ ಜ್ಯೇಷ್ಠ ಪುತ್ರರಾದ **ಸೋಮಶೇಖರ ನಾಯಕ**ರಿಗೆ ಬಿದನೂರರಮನೆಯಲ್ಲಿ **ಗಗನಮಹಲ**ಲ್ಲಿ ಚಾವಡಿಯಲ್ಲಿ ಪಟ್ಟಾಭಿ ಷೇಕವಾದದ್ದು ಜಯ ಸಂವತ್ಸರದ ಪುಷ್ಯ ಬಹುಳ ೧೦ ಆರಭ್ಯ ಸಿದ್ದಾರ್ಥಿ ಸಂವತ್ಸ ರದ ಜ್ಯೇ|| ಬ|| ೪ರ ವರೆಗೆ ವರ್ಷ ೨೪, ತಿಂಗಳು ೪, ದಿನ ೨೩ ಪರಿಯಂತರ ರಾಜ್ಯಪರಿಪಾಲನೆ ಮಾಡಿದರು.

೧೪. ಈ **ಸೋಮಶೇಖರನಾಯಕ**ರ ತಮ್ಮ **ವೀರಭದ್ರನಾಯಕ**ರ ಮಗ **ಬಸಪ್ಪನಾಯಕ**ರು ರಾಜ್ಯವಾಳಿದ್ದು ಸಿದ್ದಾರ್ಥಿ ಸಂವತ್ಸರದ ಜ್ಯೇಷ್ಠ ಬಹುಳ ೫ ಆರಭ್ಯ ಭಾವ ಸಂವತ್ಸರದ ಕಾರ್ತೀಕ ಶು|| ೫ರ ವರೆಗೆ, ವರ್ಷ ೧೫, ತಿಂಗಳು ೪, ದಿನ ೨೪ರ ವರೆಗೆ ರಾಜ್ಯವನ್ನಾಳಿದನು.

೧೫. ಈ **ಬಸಪ್ಪನಾಯಕ**ರ ಸಾಕುಮಗನಾದ **ನಿರ್ವಾಣಯ್ಯ**ನ ಮುಮ್ಮಗನಾದ **ಚೆನ್ನಬಸಪ್ಪ**ನಾಯಕನು ರಾಜ್ಯಭಾರ ಮಾಡಿಕೊಂಡಿದ್ದುದ್ದು ಭಾವ ಸಂವತ್ಸರದ ಕಾರ್ತೀಕ ಶು|| ೫ ಆರಭ್ಯ ಈಶ್ವರ ಸಂವತ್ಸರದ ಶ್ರಾವಣ ಶು|| ೨ರ ವರೆಗೆ ವರ್ಷ ೨, ತಿಂಗಳು ೮, ದಿನ ೨೭ಕ್ಕೆ ರಾಜ್ಯವನ್ನು ಆಳಿ ದೈವಾಧೀನ ನಾದನು.

೧೬. **ಬಸಪ್ಪನಾಯಕ**ರ ಪತ್ನಿಯಾದ **ವೀರಮ್ಮಾಜಿ**ಯು ತಮ್ಮ ಸೋದರ ಮಾವನಾದ ಬೆಂಕಿಪುರದ **ಪಟ್ಟಣಸೆಟ್ಟಿ ಚಿನ್ನವೀರಪ್ಪ**ನ ಮಕ್ಕಳು ನಾಯಕ (ನಾಲಕು ?) ಮಂದಿಯಲ್ಲಿ ಹಿರೀ (ಕಿರೀ ?) ಮಗ ಬುದ್ಧಿಶಾಲಿಯಾದ ಕಾರಣ ಆತನಂ

ತೆಗೆದುಕೊಂಡು **ಸೋಮಶೇಖರನಾಯಕ**ನೆಂದು ಆ ಹುಡುಗನಿಗೆ ಹೆಸರಿಟ್ಟು ಅವನಿಗೆ ಪಟ್ಟಾಭಿಷೇಕ ಮಾಡಿ ಸಣ್ಣವನಾದುದರಿಂದ **ವೀರಮ್ಮಾಜಿ**ಯವರು ರಾಜ್ಯ ಪರಿಪಾಲನೆ ಮಾಡಿದರು. ಈಶ್ವರ ಸಂವತ್ಸರದ ಶ್ರಾವಣ ಶು॥ ೩ ಆರಭ್ಯ ಚಿತ್ರಭಾನು ಸಂವತ್ಸರದ ಪುಷ್ಯಮಾಸದ ವರೆಗೆ ವರ್ಷ ೫, ತಿಂಗಳು ೬, ದಿನ ೩೭ ವರೆಗೆ (ಸೋಮ ಶೇಖರನಾಯಕನು) ರಾಜ್ಯವಾಳಿದನು.

೧೬. ಅಂತು ಹದಿನಾರು.

ಈ ಪ್ರಕಾರ ಚಿತ್ರಭಾನು ಸಂವತ್ಸರದ ವರೆಗೆ ನಗರದ ದೊರೆಗಳು ಧರ್ಮದಿಂದ ರಾಜ್ಯ ಪರಿಪಾಲನೆ ಮಾಡಿಕೊಂಡು ಬಂದರು.

೧. **ನವಾಬ್ ಹೈದರಲ್ಲಿ** ಸಾಹೇಬರು ಪಟ್ಣ ಸೀಮೆಯನ್ನು ತೆಗೆದುಕೊಂಡ ತರುವಾಯ, ಈ ನಗರ ಸಂಸ್ಥಾನವನ್ನು ಹೆಂಗಸು ಆಳುತ್ತಾಳೆಂಬ ವರ್ತಮಾನವಂ ಕೇಳಿ, ಈ ನಗರವನ್ನು ತೆಗೆದುಕೊಳ್ಳಬೇಕೆಂಬ ದುರಾಸೆಯಿಂದ **ಚಿತ್ರದುರ್ಗ**ಕ್ಕೆ ಬಂದು ತಮ್ಮ ಸಹಾಯಕ್ಕೆ **ಮದಕೆರೆನಾಯಕ**ನಂ ಸಹಾ ಕರೆದುಕೊಂಡು, ಈ ಸಂಸ್ಥಾನಕ್ಕೆ ಬಾಳತಕ್ಕ ಈ ಅರಸುಗಳ ಮಗನು ತಮ್ಮ ಸಮೂಹಕ್ಕೆ ಬಂದಿದ್ದುದ ರಿಂದ ಈತನ ಸಹಾಯಕ್ಕೆ ತಾವು ಬಂದವರೆನಿಸಿಕೊಂಡು, ಈ ಅರಸನ್ನು ಮ (ಸ?)ಹಾ ಸಮೂದು ಮಾಡಿಕೊಂಡು ರಾಣಿ ಆಳುವಂತಹ ಸೀಮೆಗಳ(ಲ್ಲಿ) ಅರಸಿನ ನಿಶಾನಿ ಗಳನ್ನು ಏರಿ(ಸಿ), ತಮ್ಮ ಮಂದಿಗಳ ಠಾಣ್ಯದಲ್ಲಿಟ್ಟು ಗಡಿಗಳಂ ಸ್ವಾಧೀನ ಮಾಡಿ ಕೊಂಡು, **ನಗರ**ದ ಸಮೀಪದಲ್ಲಿರುವ **ಮಾವಿನಕುಳೀ**(ಹೊಳೆ?)ಗೆ ಬಂದು ಫೌಜು ಸಹಿತ ಇಳಿದುಕೊಂಡು ಇದ್ದ ವರ್ತಮಾನವನ್ನು **ನಗರ**ದ ಕೋಟೆಯಲ್ಲಿದ್ದ ರಾಣಿಯು ತಿಳಿದು, ತಮ್ಮ ಕಡೆ **ಶಂಕರನಾರಣಯ್ಯ** ಎಂಬುವರನ್ನು ಕೊಟ್ಟು ಪಂಡಿಗೆ, ಬಹದರ ಬಳಿಗೆ, ಕಳುಹಿಸಿಕೊಟ್ಟು—ನನಗೂ ನಿಮಗೂ ಜಗಳವೇತಕ್ಕೆ? ನಿಮಗೆ ಬಿದ್ದ ಖರ್ಚು ನಾವು ಕೊಡುತ್ತೇವೆಂದು ಹೇಳಿಕಳಿಹಿಸಿದಲ್ಲಿ, ಈ ಮಾತಿಗೆ ಬಾಹದರವರು ಒಡಂಬಡದೆ ಬಂದಂತಹವರನ್ನು ಹಿಂದಕ್ಕೆ ಕಳುಹಿಸಿ,—ತಾವು ಫೌಜು ಸಹಿತ ಬಂದು ಲಡಾಯಿ ಮಾಡಿ—ಎಂಬದಾಗಿ ಹೇಳಿ, ಬಹದರು ಲಡಾಯಕ್ಕೆ ಹೊರಟು **ನಗರ**ಕ್ಕೆ ಬಂದುದರಿಂದ, ಇದನ್ನು ಕಂಡು ರಾಣಿಯು ಈ ಕೋಟೆ (ಯ)ಲ್ಲಿ ನಿಲ್ಲುವುದಕ್ಕೆ ಚೈತನ್ಯವಿಲ್ಲವೆಂದು ತನ್ನ ಮಂದಿ ಕುದುರೆ ಸಾಮಾಜಿಕರು ಮುಂತಾದ ಸಾಕುಮಗನ ಸಹ ತೆಗೆದುಕೊಂಡು, ಕವ್ವಲೆ ದುರ್ಗಕ್ಕೆ ಹೋಗಿ ಸೇರಿ ದಳು. ನವಾಬ್ ಬಹದರವರು ನಗರದ ಕೋಟೆಯನ್ನು ತೆಗೆದುಕೊಂಡು ಠಾಣ್ಯ ಹಾಕಿ, ಶಹರಿನಲ್ಲಿರುವಂತಹ ಜನರಿಗೆ ಕೌಲು ಕರಾರು ಕೊಟ್ಟು,........ಹೇಳಿ, ಇಲ್ಲಿಂದ ರಾಣಿಯನ್ನು ಕೈಸೆರೆ ಹಿಡಿಯಬೇಕೆಂದು ಆಲೋಚನೆಯಂ ಮಾಡಿ, ನಗರವಂ ಬಿಟ್ಟು ಹೊರಟಲ್ಲಿ, ಈ ವರ್ತಮಾನವಂ ದುರ್ಗದಲ್ಲಿದ್ದ ರಾಣಿಯು ಕೇಳಿ, ದುರ್ಗದಲ್ಲಿ ನಿಭಾಯಿಸಲಾರೆನೆಂಬದಾಗಿ ತಿಳಿದುಕೊಂಡು, ಅಲ್ಲಿಂದ ಹೊರಟು ಮಂದಿ ಕುದುರೆ ಮುಂತಾದ ಸಾಮಾಜಿಕರು ಮುಖ್ಯವಾಗಿ ಬರುವಂತಹವರಂ ಕರೆದುಕೊಂಡು **ಬಲ್ಲಾಳರಾಯನದುರ್ಗ**ಕ್ಕೆ ಬಂದು ಸೇರಿದಳು.

ಸವಾಬರು **ಕವುಲೆದುರ್ಗ**ವನ್ನು ತೆಗೆದುಕೊಂಡು ಅಲ್ಲಿ ತಮ್ಮ ಠಾಣ್ಯ ವನ್ನಿಟ್ಟು **ನಗರ** ಸೀಮೆಗೆ ಸೇರಿದ ಸೀಮೆಗಳನ್ನು ತಮ್ಮ ಸ್ವಾಧೀನ ಮಾಡಿಕೊಂಡು, ರಾಣಿಯಲ್ಲಿ **ಬಲ್ಲಾಳರಾಯನದುರ್ಗ**ಕ್ಕೆ ಫೌಜು ಸಹಾ ಕಳುಹಿಸಿಕೊಟ್ಟು ಕೈಸೆರೆ ತರಬೇಕೆಂದು ಯತ್ನಮಾಡಿದ್ದಲ್ಲಿ, **ಬಲ್ಲಾಳರಾಯದುರ್ಗ** ಮಹಾಬಲ ವಂತವಾದುದರಿಂದ ಉಪಾಯದಲ್ಲಿ ಇಳಿಸಬೇಕೆಂದು ಯೋಚಿಸಿ ತಮ್ಮ ಕಡೆಯಿಂದ **ತಾತಿಶಹ** ಎಂಬ **ಪೀರಜಾದೆ**ಯವರು (ರನ್ನು) ಕಳುಹಿಸಿಕೊಟ್ಟು,—"ನೀನು ಯಾವ ದಕ್ಕೂ ಯೋಚನೆಮಾಡಬೇಡ, ನಿನ್ನ ಮಗನನ್ನು ಸಹಾ ನೀನು ಕರೆದುಕೊಂಡು ಬಂದಲ್ಲಿ ನಿನ್ನ ಮಗನಿಗೆ ಪಟ್ಟಾ ಕಟ್ಟಿ ಸಂಸ್ಥಾನದಲ್ಲಿಟ್ಟು ಹೋಗುತ್ತೇವೆಂ"ಬದಾಗಿ **ಪೀರ್ ಜಾದೇ**ರ ಮುಖಾಂತರವಾಗಿ ಹೇಳಿಕಳುಹಿಸಿದುದರಿಂದ, ಅವರ ಕೌಲಿನ ಮೇಲೆ ಈ ರಾಣಿ ಇಳಿದು, ತನ್ನ ಮಗನಂ ಸಹಾ ಕರೆದುಕೊಂಡು ಬಂದು, ದಂಡಿಗೆ ದಾಖಲಾದಳು. ಆಗ್ಗೆ **ಬಲ್ಲಾಳರಾಯನದುರ್ಗ**ಕ್ಕೆ ಸರಕಾರದ ಠಾಣ್ಯ ಹಾಕಿ, ಇನ್ನು ನಗರ ಸೇರಿದ ಸೀಮೆ ಯಾವ ಯಾವುದು ಬರತಕ್ಕದ್ದು ಇದೆಯೋ (ಅವನ್ನು), ಈ ರಾಣಿ, ರಾಣಿ ಮಗನ ಸಹಾ ಸಂಗಡಲೇ ಇಟ್ಟುಕೊಂಡು, ಘಟ್ಟದ ಕೆಳಗೆ **ಕೊಡಿಯಾಲ** ಮುಂತಾದ ಶೀಮೆಗಳು ಯಾವತ್ತು ತಮ್ಮ ವಶ ಮಾಡಿಕೊಂಡು, ಆ ತರುವಾಯ ಈ ರಾಣಿ, ರಾಣಿ ಮಗನ ಸಹಾ ಜೈಲಸಿಂದ **ಮದ್ದಗಿರಿ**ಗೆ ಕಳುಹಿಸಿ, ಅಲ್ಲಿ ಕಿಲ್ಲೆಯಲ್ಲಿ ಇರುವಹಾಗೆ ಕಳುಹಿಸಿಕೊಟ್ಟು, ತಾವು **ನಗ(ರ)**ಕ್ಕೆ ಬಂದು **ನಗರ** ಸೀಮೆ ಬಂದೋಬಸ್ತು ಮಾಡಿದರು. **ಮದ್ದಗಿರಿ**ಯಲ್ಲಿದ್ದ ರಾಣಿಯನ್ನು ಮರಾಟರ ಫೌಜು ಬಂದ ವೇಳೆಯಲ್ಲಿ **ಮದ್ದಗಿರಿ**ಯನ್ನು ತೆಗೆದುಕೊಂಡಾಗ್ಗೆ ಆವಾಗ ಅವರ ಸಂಗಡ ಮರಾಟರ ಸೀಮೆಗೆ ರಾಣಿ, ರಾಣಿ ಮಗ ಸಹಾ ಹೋದರು. ಆ ಸೀಮೆಯಲ್ಲಿ ಆ ಹುಡುಗನಿಗೆ ಸಿಡುಬು ಕಜ್ಜಿಯೆದ್ದು ಸತ್ತುಹೋದ ಮೇಲೆ ಈ ರಾಣಿಯು ಸತ್ತುಹೋದಳು.

೧. ರಾಜ್ಯದಲ್ಲಿ ಅಗ್ರಹಾರಗಳು ಯಾರ ಯಾರ ದಿವಸದಲ್ಲಿ ಬಿಟ್ಟಿದ್ದು ಎಂಬ ದಾಗಿ ಕೇಳಿದುದಕ್ಕೆ ವಿವರ:—

ಈ ರಾಜ್ಯದಲ್ಲಿ ಬಿಟ್ಟಿರುವುದು ಒಟ್ಟು **ಅಗ್ರಹಾರ** ೧೦೬. ಇದಕ್ಕೆ ವಿವರ— ಈಗ ನಡೆಯುವಂಥಾದ್ದು ೮೯, ಅಗ್ರಹಾರ ನಡೆಯದೆ ಹೋದವು ೧೭—ಇದಕ್ಕೆ ವಿವರ:—

| | | | |
|---|---|---|---|
| ೯ | ನಗರದ ಹೋಬಳಿ | ೧ | ಇಕ್ಕೇರಿ ಸಾಗರದಲ್ಲಿ |
| ೨ | ಸೊರಬುದಲು (ಬದಲ್ಲಿ?) | ೫ | ಆನವಟ್ಟಿಯಲ್ಲಿ |
| ೧ | ಉಡುಗುಣಿ | ೧ | ಶಿಕಾರಪುರದಲ್ಲಿ |
| ೬ | ಬಿದರೆ ಹೊಸ್ನಾಡಿ | ೧೫ | ಶಿವಮೊಗ್ಗೆಯಲ್ಲಿ |
| ೩೩ | ಮುಂಡಗೆರೆ | ೩ | ದಾನಿವಾಸ |
| ೧೧ | ಕೊಪ | | |

೧೦೬ ಕ್ಕೆ ವಿವರ:—

**ಆನೆಗೊಂದಿ** ಸಂಸ್ಥಾನದ ದೊರೆಗಳು

೪೪ ರಾಯದತ್ತ ಅಗ್ರಹಾರ

೨೩ ಅಚುತಾರಾಯ ವೈಶ್ಯರಾಯರು ಬಿಟ್ಟದ್ದು

| | | | |
|---|---|---|---|
| ೨ | ನಗರ | ೧೧ | ಮಂಡಹರಲಿ |
| ೪ | ಶಿವಮೊಗ್ಗೆ | ೩ | ಹೊನ್ನಾಳಿ |
| ೩ | ಕೌಲೆದುರ್ಗ | | |
| | | ೨೩ | |

೫ ನೀಲಕಂಠರಾಯರು ಬಿಟ್ಟದ್ದು—ಆನವಟ್ಟಿ ಸೀಮೆಯಲ್ಲಿ

೨ ಬುಕ್ಕರಾಯರು ಬಿಟ್ಟದ್ದು—

೧ ಉನುಗುಣಿ ೧ ಕೊಪ್ಪ

೮ ಹರಿಹರರಾಯರು ಬಿಟ್ಟದ್ದು—

೧ ಶಿವಮೊಗ್ಗೆ ೧ ಮೂಡಗೆರೆ ೬ ಕೊಪ್ಪ

೩ ವೀರಬಲ್ಲಾಳರಾಯ ಬಿಟ್ಟದ್ದು—ಶಿವಮೊಗ್ಗೆಯಲ್ಲಿ

೩ ವೀರಣ್ಣವೊಡೆಯರು ಬಿಟ್ಟದ್ದು—ಕೊಪ್ಪದಲ್ಲಿ

೪೪

೫ ಜನಮೇಜಯರಾಯರು ಬಿಟ್ಟದ್ದು—

೧ ಕರನಂದಿ ೩ ಅನಂತಪುರ ೧ ಶಿಕಾರಪುರ

೧೮ ನಗರ ಸಂಸ್ಥಾನದಲ್ಲಿದ್ದರಸುಗಳು ಬಿಟ್ಟದ್ದು—

೨ ವೀರಭದ್ರನಾಯಕರು ಬಿಟ್ಟದ್ದು—

೧ ನಗರ ೧ ಮುಂಡಗೆರೆ

೯ ವೆಂಕಟಪ್ಪನಾಯಕರು ಬಿಟ್ಟದ್ದು—

| | | | |
|---|---|---|---|
| ೧ | ನಗರ ಕಸಬೆ | ೧ | ಇಕ್ಕೇರಿ ಸಾಗರ |
| ೨ | ಸೊರಬ | ೨ | ಶಿವಮೊಗ್ಗೆ |
| ೧ | ಕರಲಿದುರ್ಗ | ೧ | ಲಕ್ಕುವಳ್ಳಿ |
| ೧ | ಮುಂಡಗೆರ | | |
| | | ೯ | |

೨ ಭದ್ರಪ್ಪನಾಯಕ ಬಿಟ್ಟದ್ದು—ಮುಂಡಗೆರೆ ಪುತ್ತಿ

೧ ಸೋಮಶೇಖರನಾಯಕರು ಬಿಟ್ಟದ್ದು—ರಾಣಿವಾಸದಲ್ಲಿ

೨ ಚೆನ್ನಮ್ಮಾಜಿ ಬಿಟ್ಟದ್ದು—ಶಿವಮೊಗ್ಗೆಯಲ್ಲಿ
೩ ಶಿವಪ್ಪನಾಯಕ ಬಿಟ್ಟದ್ದು—
೨ ಕೌಲೆದುರ್ಗ ೯, ೧.

೬ ಸ್ವಾಮಿಗಳು ಬಿಟ್ಟ ಅಗ್ರಹಾರ

೧ ಶೃಂಗೇರಿ ನರಸಿಂಹಭಾರತಿ ಸ್ವಾಮಿಗಳು—ಶಿವಮೊಗ್ಗೆಯಲ್ಲಿ
೧ ಮಹಿಸಿ ಸಕಾನಾದ ಸ್ವಾಮಿಗಳು—ಮೂಡಗೆರೆಯಲ್ಲಿ
೨ ಸುಮಂತೇಂದ್ರ ಸ್ವಾಮಿಗಳು—ಮಂಡಗೆರೆಯಲ್ಲಿ
೧ ವ್ಯಾಸರಾಯ ಸ್ವಾಮಿಗಳು—ಕೌಲೆದುರ್ಗದಲ್ಲಿ
೧ ರಾಮಚಂದ್ರ ಸ್ವಾಮಿಗಳು—ಕೌಲೆದುರ್ಗದಲ್ಲಿ

೬

೩೩ ನಗರ ಸಂಸ್ಥಾನದಲ್ಲಿದ್ದಂತಹ ಅಧಿಕಾರಸ್ಥರು ಮಾಡಿಕೊಟ್ಟ ಅಗ್ರಹಾರಗಳು—

೪ ನಗರದ ಕಸಬೆಯಲ್ಲಿ ಬಿಟ್ಟಿರುವುದು—

೧ ರಾಯಸ್ತ ಗಂಗರಸಯ್ಯ    ೧ ಜೋಸ್ಯ ಶ್ರೀನಿವಾಸಯ್ಯ
೧ ನಿಗಳ ಲಕ್ಷ್ಮಯ್ಯ    ೧ ನಾಗಪ್ಪ

೪

೩ ಶಿವಮೊಗ್ಗೆಯಲ್ಲಿ ಬಿಟ್ಟಿರುವುದು—

೧ ಗಾಜನೂರು ತಿಮ್ಮಣ್ಣ    ೧ ಚಿನ್ನಿಬಂಡಾರ ಸಾಂಬಯ್ಯ
೧ ಹನ್ನೀಶುನಾಯಕ ಮಾಡಿದ್ದು

೩

೬ ಕೌಲೆದುರ್ಗದಲ್ಲಿ—

೧ ನಲೂರ ವೆಂಕಪ್ಪ  ೧ ಮಲ್ಲಯ್ಯ  ೧ ತಿಮ್ಮರಸಯ್ಯ
೧ ಪರಮೇಶ್ವರಯ್ಯ  ೧ ಚೀನಿಬಂಡಾಥ ಸಾಂಬಯ್ಯ  ೧ ರಾಯಸ್ತವರು ಮಾಡಿದ್ದು

೧೬ ಮಂಡಗೆರೆಯಲ್ಲಿ ಬಿಟ್ಟದ್ದು—

೧ ನಾರಾಯಣ ನಾಯಕ  ೧ ಭೀಮಣ್ಣ ರಾಯಸ  ೨ ಕೊಲಾ ರಾಮಪ್ಪಯ್ಯ
೧ ಬೊಮ್ಮರಸಯ್ಯ  ೧ ರಾಮಾಜಿ ಪಂತ  ೧ ಪಟ್ಟರಂಗಯ್ಯ
೧ ಆವಿನಹಳ್ಳಿ ಪುಟ್ಟಯ್ಯ  ೧ ಸುಬ್ಬರಾಯ  ೧ ಪಣಿಯಪ್ಪಯ್ಯ
೧ ಜೋತಿಷ್ಯದ ಸಂತಯ್ಯ  ೧ ಚನ್ನಪ್ಪಯ್ಯ  ೧ ತುಂಕೂಪಂತ
೧ ಗೋಪಾಲಯ್ಯ  ೧ ಕಲ್ಯಾಣಿ ವೆಂಕಪ್ಪ  ೧ ಸವಾಯಿ ಕೊನಯ್ಯ

೧೬

೧ ಕೊಪ್ಪ ತಾಲ್ಲೂಕದಲ್ಲಿ ಮಾಡಿದ್ದು—ಶಂಕರನಾರಣಯ್ಯ ಮಾಡಿದ್ದು
೩ ಹೊನ್ನಾಳಿಯಲ್ಲಿ ಮಾಡಿದ್ದು—
೨ ಮೊರೆಪಂತ　　　　೧ ತಿಪ್ಪರಾಯ

೩೩

೧೦೬ ಅಂತು ಅಗ್ರಹಾರ.

ಈ ಪ್ರಕಾರ ಕಲಂಗಳನ್ನು ತಯಾರು ಮಾಡಿ ಬರೆಯಿಸಿದವರು ನಗರದ ಸೀಮೆ ಕೊಪ್ಪದ ಹೋಬಳಿಯಲ್ಲಿರುವ ಮೇಲುಬಂಗಾಡಿ ತಾಲ್ಲೂಕ್ ಶಿರಸ್ತೇದಾರ್ ಕೃಷ್ಣರಾಯರು ಬರೆಯಿಸಿದರು.

ರುಧಿರೋದ್ಗಾರಿ ಸಂವತ್ಸರದ ಫಾಲ್ಗುಣ ಶು॥ ೩ ಮಂಗಳವಾರ ಬರೆಯಿಸಿದ್ದಾರೆ.

**ಬಿ. ರಾಮರಾವ್, ಎಂ.ಎ., ಎಲ್‌ಎಲ್.ಬಿ.**

# ನೈಷಧೀಯ ಚರಿತಂ

(ಪರಿಷತ್ಪತ್ರಿಕೆ, ಸಂಪುಟ ೧೩, ಸಂಚಿಕೆ ೪, ಪುಟ ೨೯೯ರಿಂದ ಮುಂದುವರಿದುದು)

## ಏಕಾದಶ ಸರ್ಗವು

ತರುವಾಯ ದಮಯಂತಿಯು ಪ್ರಸಾದಯುಕ್ತವಾದ ಮುಖಮಂಡಲವುಳ್ಳವಳಾಗಿ, ಬಹು ಪ್ರೇಮದಿಂದ ತೆರೆದ ಕಣ್ಣನ್ನು ಮುಚ್ಚದೆ ತಾನು ಹಿಂದೆ ಮನಸಾ ವರಿಸಿದ್ದ ವರನನ್ನು ದೇವತೆಯಂತೆ ಮನಸ್ಸಿನಲ್ಲಿ ಪೂಜಿಸುತ್ತ ಆತನನ್ನು ಪ್ರತ್ಯಕ್ಷ ಸಂಪಾದಿಸುವುದಕ್ಕಾಗಿ ಆ ರಾಜಸಭೆಯ ಕಡೆಗೆ ತೆರಳಿದಳು. ಆಗ ಅಲ್ಲಿ ಕುಳಿತಿರುವ ರಾಜ ಸಮೂಹಗಳೆಲ್ಲ ಆಕೆಯನ್ನು ನೋಡತೊಡಗಿ ಅವರ ಕಣ್ಣುಗಳು ಮಾತ್ರ ಆಕೆಯ ಸೌಂದರ್ಯದಲ್ಲಿ ಮುಳುಗಿದುದಲ್ಲ, ಮನಸ್ಸು ಮಾತ್ರ ಅವಳಲ್ಲಿ ನಟ್ಟುದೂ ಅಲ್ಲ, ಆಕೆಯ ಗಂಡಸ್ಥಳವೇ ಮೊದಲಾದ ಅವಯವ ಭಿತ್ತಿಗಳಲ್ಲಿಯೂ ಆಕೆಯು ಧರಿಸಿರುವ ಭೂಷಾ ರತ್ನಗಳಲ್ಲಿಯೂ ರಾಜ ಸಮೂಹಗಳು ಪ್ರತಿಫಲಿಸುವ ನೆವದಿಂದ ಸರ್ವಾಂಗದಿಂದಲೂ ಸರ್ವಾತ್ಮದಿಂದಲೂ ಆಕೆಯಲ್ಲಿ ಮಗ್ನರಾದಂತೆ ತೋರಿತು. ಹಿಂದೆ, ಗಾಧಿ ಪುತ್ರನಾದ ವಿಶ್ವಾಮಿತ್ರನು ಭೂ ಸ್ವರ್ಗಗಳ ನಡುವೆ ತನ್ನ ತಪೋಬಲದಿಂದ ಬೇರೊಂದು ಹೊಸ ಸ್ವರ್ಗವನ್ನುಂಟುಮಾಡಿರುವನಷ್ಟೆ! ಈಗ ಆಕಾಶದಲ್ಲಿ ದಮಯಂತಿಯ ಸ್ವಯಂವರದ ದರ್ಶನಕ್ಕಾಗಿ ಬಂದು ಸೇರಿರುವ ದೇವತೆಗಳ ವಿಮಾನ ಸಂದೋಹಗಳನ್ನು ಕಾಣುವಾಗ, ಆ ಸುಂದರವಾದ ನೂತನ ಸ್ವರ್ಗವೇ ಇದೆಂಬಂತೆ ತೋರುತ್ತಿದ್ದಿತು. ಬಂದಿರುವ ರಾಜಲೋಕದ ಸುತ್ತಲೂ ಚಾಮರಗಳನ್ನು ಬೀಸುತ್ತಿದ್ದರು. ಹೀಗೆ ಬೀಸುತ್ತಿದ್ದ ಚಾಮರಗಳಿಂದುಂಟಾದ ವಾಯುವಿಗೆ ಸ್ವಯಂವರ ಮಂಟಪದಲ್ಲಿ ಉರಿಸುತ್ತಿದ್ದ ಧೂಪಗಳಿಂದ ಪರಿಮಳವು ವ್ಯಾಪಿಸಿ ಸ್ವಯಂವರ ದರ್ಶನಾರ್ಥವಾಗಿ ಆಕಾಶದಲ್ಲಿ ಸಂಚರಿಸುತ್ತಿದ್ದ ದೇವತೆಗಳಿಗೆ ಆ ಮಂಟಪದಲ್ಲಿಯೇ ಪೂಜಾವಿಧಿಯನ್ನು ನಡೆಯಿಸುತ್ತಿದ್ದರೋ ಎಂಬಂತೆ ತೋರುತ್ತಿದ್ದಿತು. ಅಲ್ಲಿ ಸ್ವಯಂವರ ಮಂಟಪದಲ್ಲಿ ಕುಳಿತಿರುವ ರಾಜ ಸಮೂಹವು ಮೈಗೆ ಲೇಪಿಸಿಕೊಂಡಿರುವ ಪಚ್ಚಕರ್ಪೂರ ಮೊದಲಾದ ಪರಿಮಳ ದ್ರವ್ಯಗಳ ಪರಿಮಳದಿಂದ ಗಮಗಮಿಸುತ್ತಿದ್ದ ವಾಯು ಪ್ರವಾಹವನ್ನು, ಆ ರಾಜರ ಕಡೆಗೆ ಶ್ರೇಣೀಬದ್ಧವಾಗಿ ಬರುತ್ತಿರುವ ಮನ್ಮಥನ ಬಾಣಗಳಂತೆ ತೋರುತ್ತಿದ್ದ ಭ್ರಮರ ಪಙ್ಕ್ತಿಗಳು ಹೊಕ್ಕು ದಿಕ್ಕು ತೋರದಂತಾದುವು. ವಿವಾಹಾರ್ಥವಾಗಿ ಗಟ್ಟಿಯಾಗಿ ಹೊಡೆಯುತ್ತಿದ್ದ ಮಂಗಳ ವಾದ್ಯಗಳು ಅಲ್ಲಿಯ ರಾಜಪ್ರಾಸಾದ ಪಙ್ಕ್ತಿಗಳಲ್ಲಿ ಪ್ರತಿಫಲಿಸಿ, ಆ ಪ್ರಾಸಾದಗಳ ಮೇಲೆ ವಾಯುವಶದಿಂದ ಚಲಿಸುತ್ತಿರುವ ಪತಾಕಗಳನ್ನು ಕಂಡಾಗ, ಆ ವಾದ್ಯಧ್ವನಿಗನುಸಾರವಾಗಿ ಹಸ್ತಾಭಿನಯಗಳನ್ನು ತೋರಿಸುತ್ತ ಈ ಪ್ರಾಸಾದ ಪಙ್ಕ್ತಿಗಳು ನರ್ತಿಸುವಂತೆ ತೋರುತ್ತಿದ್ದಿತು. ಆಗ ಹದಿನಾಲ್ಕು ಜಗತ್ತಿಗೂ ಪೂಜ್ಯತಮಳಾದ

ವಾಗ್ದೇವತೆಯು ಆ ರಾಜ ಸಭೆಯಲ್ಲಿ ನಮ್ರಗ್ರೀವಳಾಗಿ ನಿಂತಿರುವ ದಮಯಂತಿಯ ಬಲಭಾಗವನ್ನು ಸೇರಿ ತತ್ಕಾಲೋಚಿತವಾದ ಸಂಭಾಷಣೆಗೆ ತೊಡಗಿದಳು.—

"ವತ್ಸೆ! ಇಕೋ ಈ ಕಡೆಗೆ ನೋಡು, ಸಾವಿರಾರು ಮಂದಿ ದೇವತೆಗಳು ಬಂದು ಸೇರಿರುವರು. ಇವರಲ್ಲೊಬ್ಬನನ್ನೇ ವರ್ಣಿಸುತ್ತ ಹೋದಲ್ಲಿ ನೂರಾರು ವರ್ಷಗಳು ಕಳೆದರೂ ಮುಗಿಯದು. ಆದಕಾರಣ ನಿನಗೆ ಇವರಲ್ಲಾರನ್ನಾದರೂ ವರಿಸಬಹುದಾಗಿ ಮನಸ್ಸಿಗೆ ತೋರಿದರೆ ಹಾಗೆ ಮಾಡು. ಹೇ! ಸುಂದರಿ! ಈ ದೇವತೆಗಳು ಸ್ವಭಾವದಿಂದ ಅನಿಮಿಷರಾಗಿದ್ದರೂ ನಿನ್ನಲ್ಲಿರುವ ಪ್ರೇಮದಿಂದ ನಿನ್ನನ್ನು ಎಡೆಬಿಡದೆ ನೋಡುವ ಬಯಕೆಯಿಂದಲೂ ಅನಿಮಿಷರಾಗಿರುವರು. ಅಂತೆಯೇ, ಇವರು ಚಂದ್ರನಲ್ಲಿರುವ ಅಮೃತವನ್ನು ಪಾನಮಾಡತಕ್ಕವರಾದರೂ ನಿನ್ನ ಮುಖಚಂದ್ರನಲ್ಲಿರುವ ಅಧರಾಮೃತವನ್ನು ಪಾನಮಾಡುವುದರಲ್ಲಿಯೂ ಲೋಲುಪರಾಗಿರುವರು. ಎಲೈ ದಮಯಂತೀ! ಧಾರಕನ ಇಷ್ಟಾರ್ಥವನ್ನು ಸಂಪಾದಿಸಿಕೊಡತಕ್ಕುದಾದ ಕಾರಣ ಮುಕ್ತಾಫಲವೆಂದು ಕರೆಯಿಸಿಕೊಳ್ಳುವ ಮುತ್ತುಗಳಿಂದ ವ್ಯಾಪಿಸಿರುವ ಆ ಪ್ರಸಿದ್ಧವಾದ ಕಲ್ಪವೃಕ್ಷವು ಹಿಂದೆ ಗೋರೂಪಧಾರಿಯಾದ ಭೂಮಿಯು ಹಾಲನ್ನು, ವತ್ಸರೂಪಧಾರಿಯಾದ ಹಿಮಾಲಯನ ಮೂಲಕ ಕರೆದುದು ನಿನಗೆ ತಿಳಿದಿರಬಹುದು. ಈಗ ಆ ಕಲ್ಪವೃಕ್ಷವು ಕ್ಷೀರಬಿಂದುಗಳು ಹತ್ತಿರುವ ಹಿಮಾಲಯದ ಹಸ್ತದಂತೆ ತೋರುತ್ತಿರುವುದು. ನೀನು ಈ ದೇವತೆಗಳಲ್ಲೊಬ್ಬನನ್ನು ವಿವಾಹವಾದಲ್ಲಿ ಈ ಸಂಪತ್ತುಗಳೆಲ್ಲವೂ ನಿನ್ನ ಕೈಸೇರುವುವು."

ಈ ಪ್ರಕಾರ ಸರಸ್ವತಿಯು ದೇವತೆಗಳನ್ನು ಹೊಗಳಲು, ದಮಯಂತಿಯು ಮುಖಚಂದ್ರನ ಸಾನ್ನಿಧ್ಯದಿಂದ ಮುಚ್ಚಿಹೋದ ಪದ್ಮದ್ವಂದ್ವಗಳೋ ಎಂಬಂತೆ ಉಭಯ ಹಸ್ತಗಳನ್ನು ತನ್ನ ತಲೆಯ ಮೇಲೆ ಜೋಡಿಸಿ ಅವರನ್ನು ವರಿಸದ ಅಪರಾಧಕ್ಕಾಗಿ ಭಯಪಟ್ಟಂತೆ ಚಂಚಲದೃಷ್ಟಿಯಿಂದ ಕಾಣುತ್ತ ಬೇರೆ ಕಡೆಗೆ ಹೋಗುವ ಉದ್ದೇಶದಿಂದ ಅವರ ದಯಾರೂಪವಾದ ಅನುಮತಿಯನ್ನು ಬೇಡಿದಳು. ಇತ್ತ, ಶಿಬಿಕಾರೋಹಕರಿಗೆ ದಮಯಂತಿಯು ದೇವತೆಗಳಲ್ಲಿ ವಿರಾಗಗೊಂಡುದು ಸ್ವಲ್ಪವೂ ತಿಳಿಯಲಿಲ್ಲ; ಆದರೆ, ಆ ದೇವತೆಗಳ ಮುಖದ ಮೇಲೆ ಕಾಣಿಸುವ ಅಪ್ರಸನ್ನಸ್ಥಿತಿಯಿಂದ ಈಕೆಯು ದೇವತೆಗಳನ್ನು ವರಿಸಲಿಲ್ಲವೆಂದು ತಿಳಿದರು. ದಮಯಂತಿಯ ಶಿಬಿಕೆಯನ್ನು ಹೊತ್ತವರು, ರಾಕ್ಷಸ ಸಮೂಹದಲ್ಲಿ ಸ್ವರಕ್ಷಣೆಯ ವಿಷಯದಲ್ಲಿ ಸಂದೇಹಗೊಂಡು, ವಿದ್ಯಾಧರರನ್ನು ದೇಹಸೌಂದರ್ಯ ವಿಷಯದಲ್ಲಿ ದಮಯಂತಿಗಿಂತ ಕಡೆಯಾಗಿ ತಿಳಿದು, ಗಂಧರ್ವರ ಸಭೆಯಲ್ಲಿ ಅವರ ಸ್ವರವು ಸ್ವಲ್ಪವಾದರೂ ದಮಯಂತಿಯ ಕಂಠವನ್ನು ಹೋಲುವಂತಿಲ್ಲವೆಂಬ ಕಾರಣದಮೇಲೆ, ಅವರ ಸ್ಥಳದಿಂದ ವಿಮುಖರಾಗಿ ಮುಂದುವರಿದರು. ಲೋಕದಲ್ಲಿ ದೀನಜನರು ಇರುತ್ತಿದ್ದರೂ ಅವರಿಗೆ ಔದಾರ್ಯವನ್ನು ತೋರದೆ ವ್ಯರ್ಥವಾಗಿ ವಿತ್ತವನ್ನು ರಕ್ಷಿಸಿಕೊಂಡಿರುವ ಯಕ್ಷರು, ಭೂಮಿಯಲ್ಲಿ ಅವತರಿಸಿರುವ ಕಲ್ಪಲತೆಯಂತಿರುವ ದಮಯಂತಿಯನ್ನು ಕಾಣಲಾರದೆ, ಲಜ್ಜೆಯಿಂದ ಮುಖವನ್ನು ಮರೆಯಿಸಿಕೊಂಡರು.

ಅನಂತರ, ವಧೂ ಭೃತ್ಯರಾದ ಆ ವಾಹಕ ಜನರು ಮಂಜಿಟಿಯ ವರ್ಣದಂತೆ ಅತಿ ಕೆಂಪಾಗಿರುವ ಪಾದಗಳೂ ತುಟಿಯೂ ಉಳ್ಳ ದಮಯಂತಿಯನ್ನು, ನೂತನವಾದ ಮೇಘ ಪಙ್ಕ್ತಿಗಳು ತಮ್ಮ ವರ್ಷದಿಂದ ಹಂಸ ಸಮೂಹವನ್ನು ಮಾನಸ ಸರೋವರ ದಿಂದ ತೊಲಗಿಸಿಬಿಡುವಂತೆ, ಆಕೆಯನ್ನೂ ಆ ದೇವ ಸಂಘದಿಂದ ತೊಲಗಿಸಿ ಸರ್ಪರಾಜ ನಾದ ವಾಸುಕಿಯ ಬಳಿಗೆ ಒಯ್ದರು. ಈ ಲೋಕದಲ್ಲಿರುವ ವಾಙ್ಮಯಗಳೆಲ್ಲ ಮಹಾ ಶಕ್ತಳಾದ ಯಾವ ದೇವಿಯ ರೂಪಾಂತರಗಳೆಂದು ವ್ಯಾಸಾದಿ ಮಹಾಮುನಿಗಳ ಹೇಳಿರುವರೋ ಆ ಸರಸ್ವತೀ ದೇವಿಯು ಚಂದ್ರಾರ್ಧದಂತೆ ಸುಂದರವಾದ ಹಣೆಯುಳ್ಳ ಭೀಮ ಕುಮಾರಿಯೊಡನೆ ಹೀಗೆ ನುಡಿದಳು:—"ಹೇ ದೇವಿ! ಈ ಮುಂದೆ ಕಾಣ ತ್ತಿರುವ ಶುಭ್ರ ಕಾಂತಿಯುಳ್ಳ ವಾಸುಕಿಯು ಶಿವನ ಯಜ್ಞೋಪವೀತದ ಸ್ಥಾನವನ್ನು ಹೊಂದಿ, ಶಿವನು ಪಾರ್ವತಿಯ ಆಲಿಂಗನ ಮಾಡಿಕೊಳ್ಳುವ ವೇಳೆ ಆಕೆಯ ಕುಚ ಕುಂಕುಮದಿಂದ ಪಟ್ಟೆಯ ದಾರದ ಪರಿವೇಷ್ಟನದಂತೆ ಕೆಂಪಾಗಿ, ಸದಾ ಶಿವ ಸೇವೆಯಲ್ಲಿ ಆಸಕ್ತನಾಗಿರುವನು: ಇವನನ್ನು ನೋಡು. ಫಣಾಮಂಡಲವುಳ್ಳ ಈ ವಾಸುಕಿಯು ಶಿವನ ಹಸ್ತಗಳಿಗೆ ಮನೋಹರವಾದ ರತ್ನ ಕಂಕಣವಾಗಿಯೂ, ಅವನ ಕಪರ್ದ ಬಂಧನದ ರಜ್ಜುವಾಗಿಯೂ, ಧನುಸ್ಸಿನ ಹೆದೆಯಾಗಿಯೂ, ಅವನಿಗೆ ಯೋಗ ಪಟ್ಟವಾಗಿಯೂ, ಈ ಪ್ರಕಾರ ಬಗೆ ಬಗೆಯ ಸ್ವರೂಪದಿಂದ ಶಿವ ಸೇವೆಯನ್ನು ಮಾಡುತ್ತಿರುವನು; ಈ ವಾಸುಕಿಯನ್ನಾದರೂ ವರಿಸು. ಅಲ್ಲದೆ, ದ್ವಿಜಿಹ್ವೆಯುಳ್ಳ ಈ ವಾಸುಕಿಯು ಒಂದು ರಸನೆಯಿಂದ ಶಿವನ ಚೂಡಾರತ್ನವಾದ ಚಂದ್ರನ ಅಮೃತವನ್ನು ಸವಿಯುತ್ತ, ಇನ್ನೊಂದು ರಸನೆಯಿಂದ ನಿನ್ನ ಅಧರಾಮೃತವನ್ನು ಪಾನಮಾಡುತ್ತ, ಇವೆರಡರ ಭೇದಾಭೇದವನ್ನು ಹೇಳುವಂತಾಗಲಿ. ಎಲೈ ದಮಯಂತಿ! ಇವನು ವಿಷಧರನಾದ ಕಾರಣ ಸುರತದ ವೇಳೆ ನಿನ್ನ ಅಧರವನ್ನು ಕಚ್ಚಿದಲ್ಲಿ ಅನರ್ಥವಾಗಬಹುದೆಂದು ಬೆದರಬೇಡ; ಏಕೆಂದರೆ, ಅಮೃತ ಸಾರದಿಂದ ನಿರ್ಮಿತವಾದ ನಿನ್ನ ತುಟಿಯನ್ನು ಕಚ್ಚಿ ಈತನು ಯಾವ ಬಾಧೆಯನ್ನೂ ಮಾಡಲಾರನು."

ಈ ಪ್ರಕಾರ, ಸರಸ್ವತೀ ದೇವಿಯು ನುಡಿಯುವಷ್ಟಕ್ಕೆ ವಾಸುಕಿಯ ವಿಸ್ತಾರ ವಾದ ಫಣಾ ಮಂಡಲಗಳನ್ನು ಕಂಡು ಭಯಗೊಂಡ ದಮಯಂತಿಗೆ ಮೈಯಲ್ಲಿ ಕಂಪವುಂಟಾಯಿತು. ಈ ಕಂಪವನ್ನೂ ರೋಮಾಂಚವನ್ನೂ ಕಂಡು ದಮಯಂತಿ ಯಲ್ಲಿ ಶೃಂಗಾರ ಸಾತ್ವಿಕ ಭಾವಗಳುಂಟಾದುವೆಂಬ ಭ್ರಾಂತಿಯಿಂದ ಕುಣಿಯುತ್ತಿ ರುವ ತನ್ನ ಭೃತ್ಯರನ್ನು ಕಂಡು ರಾಜ ಕುಮಾರಿಯ ಭಾವವನ್ನರಿತ ವಾಸುಕಿಯು ಆ ನರ್ತನವನ್ನು ನಿಲ್ಲಿಸಿದನು. ಹೀಗೆ ವಾಸುಕಿಯು ನಿರಾಶೆಗೊಂಡುದನ್ನು ಕಂಡು, ಕರ್ಕೋಟಕಾದಿ ಉಳಿದ ನಾಗರು ನಿರಾಶೆಯಿಂದ ನಿಟ್ಟುಸಿರುಬಿಟ್ಟರು. ಈ ನಿಟ್ಟು ಸಿರು ಅವರಿಗೆ ಮಹಾ ಅನರ್ಥ ಹೇತುವಾಗಿ ಪರಿಣಮಿಸಿತು: ಎಂದರೆ, ಆ ದಮ ಯಂತಿಯು ಆ ಕರ್ಕೋಟಕಾದಿ ನಾಗರ ಬಳಿಗೆ ಹೋಗುವ ಇಷ್ಟವುಳ್ಳವಳಾ ಗಿದ್ದರೂ, ಶಿಬಿಕಾ ವಾಹಕರಾದ ಜನರು ಆ ಸರ್ಪಗಳ ನಿಶ್ವಾಸ ಮಾರುತದಿಂದುಂಟಾದ ಇದಿರುಗಾಳಿಯಿಂದ ತಡೆಯಲ್ಪಟ್ಟವರಾಗಿ ಅದೊಂದು ದುಃಶಕುನವೆಂದರಿತು ದೂರ

ದಲ್ಲಿಯೇ ತಿರುಗಿ ಹೊರಟುಹೋದರು. ಇತ್ತ, ವಾಸುಕಿಯು ಲಜ್ಜೆಯಿಂದ ತನ್ನ ಫಣಾ ಮಂಡಲಗಳನ್ನು ಸಂಕೋಚಿಸಿಕೊಳ್ಳಲಾಗಿ ಅತ್ತ ಶಿಬಿಕಾ ವಾಹಕರು, ಚಂದ್ರ ಕಿರಣಗಳು ಸಂಧ್ಯಾ ಕಾಲದಲ್ಲಿ ಸಂಕೋಚಗೊಳ್ಳತಕ್ಕ ದಳ ಮಂಡಲವುಳ್ಳ ಕಮಲದ ದೆಸೆಯಿಂದ ವಿಕಾಸ ಲಕ್ಷ್ಮಿಯನ್ನು ಸೆಳೆದು ಸೌಗಂಧಿಕ ಪುಷ್ಪದ ಕಡೆಗೆ ಬರುವಂತೆ, ರಾಜ ಸಮೂಹದ ಕಡೆಗೆ ಬಂದರು.

ಹೀಗೆ ರಾಜ ಮಂಡಲದ ಬಳಿಗೆ ದಮಯಂತಿಯ ಶಿಬಿಗೆಯು ಬರುತ್ತಲೇ ವಾಗ್ದೇವಿಯು ಹೀಗೆ ನುಡಿದಳು :—"ಎಲೈ ಭೀರು! ನನ್ನ ಮಾತುಗಳನ್ನು ಅವಧಾನ ದಿಂದ ಕೇಳು. ಹೇ ಭೂಪಾಲಕರೇ! ನೀವೂ ಕೂಡ ಈ ಭೈಮಿಯ ಈಕ್ಷಣದ ಆಶೆಯನ್ನು ಬಿಟ್ಟುಬಿಡಿ; ಏಕೆಂದರೆ, ನೀವು ಈಕೆಯನ್ನು ಕೋಟಿ ವರುಷಗಳ ವರೆಗೆ ನೋಡುತ್ತ ದೃಷ್ಟಿಯಿಂದ ಕುಡಿಯುತ್ತ ಬಂದರೂ ಈಕೆಯ ದರ್ಶನೇಚ್ಛೆಯು ನಿಮಗೆ ಪರಿಹಾರವಾಗದು. ಅದರಿಂದ ನೀವು ಈಕೆಯನ್ನು ನೋಡುವುದನ್ನು ಬಿಟ್ಟು ನನ್ನ ವಾಕ್ಯಗಳನ್ನು ಮಾತ್ರ ಕೇಳಿರಿ: ಯಾವ ಮನ್ಮಥನು ಬ್ರಹ್ಮ, ವಿಷ್ಣು, ಮಹೇಶ್ವರ ರನ್ನು ಕೂಡ ಶೃಂಗಾರ ರಸದಿಂದ ಜರ್ಜರಿತರಾದ ವೈರಾಗ್ಯವುಳ್ಳವರನ್ನಾಗಿ ಮಾಡಿ ದನೋ, ಅಲ್ಲದೆ, ತನ್ನಲ್ಲಿರುವ ಪಂಚ ಬಾಣಗಳಿಂದ ಜಗತ್ತಿನ ಪಂಚೇಂದ್ರಿಯ ಗಳನ್ನು ಕ್ಷೋಭಗೊಳಿಸುತ್ತಿರುವನೋ, ಆ ಮನ್ಮಥನು ನಿಮಗೆ ಆನಂದವನ್ನುಂಟು ಮಾಡಲಿ. ಹೇ ಶೃಂಗಾರ ಸರ್ವಸ್ವೆ! ನೀನು ಪುಷ್ಪಧನ್ವನಾದ ಮನ್ಮಥನು ಬಾಣ ಮೋಕ್ಷಣ ಕಾಲದಲ್ಲಿ ಕೋಪದಿಂದ ಜಪಿಸತಕ್ಕ ಹುಂಕಾರವೆಂಬ ಮಂತ್ರಬಲದಿಂದ ಭಸ್ಮೀಕೃತವಾದ ಇಂದ್ರಿಯ ನಿಗ್ರಹ ಸಾಮರ್ಥ್ಯವುಳ್ಳ ಈ ದ್ವೀಪಾಧಿಪರನ್ನು ನೋಡು. ಎಲೈ ಕಮಲ ಲೋಚನೆಯೇ! ಸ್ವಾದೂದಕ ಸಮುದ್ರದಲ್ಲಿ ಈ ಸವನ ನೆಂಬ ರಾಜನೊಡನೆ ಮನೋಹರವಾದ ಜಲಕ್ರೀಡಾ ವಿನೋದವನ್ನನುಭವಿಸು ವವಳಾಗು. ಇದಕ್ಕಾಗಿ ಪುಷ್ಕರ ದ್ವೀಪಾಧೀಶ್ವರನಾದ ಈ ಸವನ ರಾಜನನ್ನು ವರಿಸು ವವಳಾಗು. ಸುಂದರಿ! ಈ ರಾಜನ ದೇಶವು ಭೂಮಿಯಲ್ಲಿರುವ ಸ್ವರ್ಗವೆಂಬಂತಿರುವ ಕಾರಣ, ಈ ರಾಜನು ಆ ಭೂ ಸ್ವರ್ಗದ ಇಂದ್ರನು. ನೀನು ಈ ರಾಜನ ಕೈಹಿಡಿದು ಇವನ ಗೃಹದಲ್ಲಿ ಶಾಂತಿಯ ಸೌಭಾಗ್ಯವನ್ನನುಭವಿಸುವವಳಾಗು. ಆ ಪುಷ್ಕರ ದ್ವೀಪದಲ್ಲಿ ಹಿಮದಂತೆ ಶೀತಲವಾದ ವಟ ವೃಕ್ಷದ ಕೆಳಗಡೆ ಸ್ವಯಂಭುವಾದ ಬ್ರಹ್ಮನು ಸಾಕ್ಷಾತ್ತಾಗಿ ಬದುಕುತ್ತಿರುವನು. ಆ ಬ್ರಹ್ಮನು ತನ್ನ ಅನನ್ಯ ಸಾಧಾರಣ ಶಿಲ್ಪ ವಾದ ನಿನ್ನನ್ನು ಕಂಡು ಸರ್ವ ಶಿಲ್ಪಗಳಲ್ಲಿಯೂ ತನ್ನ ಕೈ ಚಮತ್ಕಾರಕ್ಕಾಗಿ ಅಹಂಕಾರಪಡಲಿ. ಹೇ ದೇವಿ! ತನ್ನ ಕೆಳಗಡೆ ಇರುವ ಪ್ರದೇಶಗಳಿಗೆ ವರ್ಷಾತಪ ಗಳ ಬಾಧೆಯಾಗದಂತೆ ತಡೆಯುತ್ತಿರುವ ಕಾರಣದಿಂದ ನ್ಯಗ್ರೋಧವೆಂದು ಹೆಸರು ಪಡೆದ ಆ ವೃಕ್ಷವು ಕೆಳಗಿಳಿದ ತನ್ನ ಶಾಖೆಗಳ ಬೇರುಗಳಿಂದ ಆ ಶಾಖೆಗಳ ಭಾರ ವನ್ನೂ ಪಕ್ವವಾದ ಹಣ್ಣುಗಳ ಮತ್ತು ನೀಲವಾದ ದಳಗಳ ಭಾರವನ್ನೂ ಹೊತ್ತು, ಪುಷ್ಕರದ್ವೀಪ ಸಂಬಂಧಿಯಾದ ನವಿಲುಗರಿಯ ಕೊಡೆಯನ್ನು ಹೋಲುತ್ತ ಕಣ್ಣಿಗೆ ಆಶ್ಚರ್ಯವನ್ನುಂಟುಮಾಡುತ್ತಿರುವುದು. ಈ ರಾಜನನ್ನು ವರಿಸುವುದರಿಂದ ಈ

ವಿಧವಾದ ದರ್ಶನೋತ್ಸವ ಲಾಭವು ನಿನಗೆ ದೊರೆಯುವುದು. ಅಲ್ಲದೆ, ಈ ರಾಜನ ಇಷ್ಟತಮೆಯಂತಿರುವ ಕೀರ್ತಿಯು ನೀರ ಮೇಲೆಯೂ ನೆಲದ ಮೇಲೆಯೂ ಹರಡಿ ಸರ್ವವನ್ನೂ ಬಿಳುಪಾಗಿ ಮಾಡಿರುವುದು. ನೀರನ್ನೂ ಹಾಲಿನಂತೆ ಬಿಳುಪಾಗಿ ಮಾಡಿದ ಕಾರಣ ನೀರನ್ನೂ ಹಾಲನ್ನೂ ವಿಂಗಡಿಸಿ ತಿಳಿಯುವುದು ಅಸಾಧ್ಯವಾಗಿರುವುದು.” ಆ ಸಮಸ ರಾಜನು ಶೂರನೂ, ವಿದ್ವತ್ ಸಭೆಗಳಲ್ಲಿ ಅಗ್ರ ಪೂಜಾರ್ಹನೂ, ಶೃಂಗಾರ ವಿಲಾಸಿಯೂ, ಸಕಲ ವಿದ್ಯಾ ನಿದಾನಭೂತನೂ ಆಗಿದ್ದರೂ, ಅತಿ ಕೋಮಲವಾಗಿಯೂ ಕರ್ಣಾಮೃತವಾಗಿಯೂ ಇರುವ ನಳನೆಂಬ ಹೆಸರು ಆತನಿಗಿಲ್ಲವೆಂಬ ಕಾರಣದಿಂದ ಆತನು ದಮಯಂತಿಯ ದೃಷ್ಟಿಗೆ ದೂಷಣಾರ್ಹನಾಗಿ ತೋರಿಬಂದನು. ಇದರಿಂದ ಮಹಾ ಪ್ರಾಜ್ಞಳಾದ ಆ ದಮಯಂತಿಯು ತನ್ನ ಭ್ರೂವಲ್ಲಿಯ ನಿಕುಂಚನದಿಂದಲೆ ತನಗೆ ಆ ರಾಜನ ವಿಷಯದಲ್ಲಿ ಉಂಟಾದ ಅನಾದರವನ್ನು ಸೂಚಿಸಲಾಗಿ, ಆ ರಾಜನ ಮನಸ್ಸಿನಲ್ಲಿ ದಮಯಂತಿಯ ಅಲಾಭದಿಂದ ಉಂಟಾದ ಸಂತಾಪಾಗ್ನಿಯ ಧೂಮವೆಂಬಂತೆ ಅವನ ಮುಖದ ಮೇಲೆ ವೈವರ್ಣ್ಯವು ಕಾಣಿಸಿಕೊಂಡಿತು.

ದಮಯಂತಿಗೆ ಆ ರಾಜನಲ್ಲಿ ಉಂಟಾದ ಬೇಸರವನ್ನು ತಿಳಿದು ಸೇವಕರು ಆಕೆಯ ಸವಿಗೆಯನ್ನು ಬೇರೆ ಕಡೆಗೆ ಒಯ್ದರು. ಸಮರ್ಥರಾಗಿಯೂ ನಿಷ್ಕಪಟಿಗಳಾಗಿಯೂ ಇರುವ ಭೃತ್ಯರು ಕಾರ್ಯಗಳನ್ನು ನಡೆಯಿಸುವ ವೇಳೆ ಯಜಮಾನರು ಆಗಾಗ ಅಪ್ಪಣೆಗಳನ್ನು ಕೊಡುವ ಅವಶ್ಯವೇ ಇರದು. ಭಗವತಿಯಾದ ಭಾರತಿಯು, ರೂಪದಲ್ಲಿ ಅಶ್ವಿನೀ ದೇವತೆಗಳನ್ನು ತಿರಸ್ಕರಿಸತಕ್ಕ ಬೇರೊಬ್ಬ ರಾಯನನ್ನು ದಮಯಂತಿಗೆ ತೋರಿಸಿ, “ರಾಜಕುಮಾರಿ! ಈ ರಾಯನು ಬಹಳ ಶೀಲವಂತನು. ಇವನನ್ನು ಒಮ್ಮೆಯಾದರೂ ತಲೆಯೆತ್ತಿ ನೋಡು. ವತ್ಸೆ! ಇವನ ಮುಂಗಡೆ ಶ್ರಮವಿಲ್ಲದೆ ಹೊಗಳುತ್ತಿರುವ ಸ್ತುತಿಪಾಠಕರ ವಾಗಾಡಂಬರದಿಂದ ಶಬ್ದಗುಣವುಳ್ಳ ಈ ಆಕಾಶದಲ್ಲಿ ಅವಕಾಶವಿಲ್ಲದಂತಾಗಿರುವುದು. ಹೀಗಿರುತ್ತ ನನ್ನ ಮಾತುಗಳಿಗೆ ಎಲ್ಲಿ ಅವಕಾಶವು ದೊರೆಯುವುದು? ಅಲ್ಲದೆ, ನಾನು ಈ ರಾಜನ ವಿಷಯವಾಗಿ ಏನು ಹೇಳಿದರೂ ಅದು ಪುನರುಕ್ತಿಯಾಗುವುದಲ್ಲದೆ ನನ್ನ ವಾಕ್ಯಗಳಿಗೆ ಪ್ರಯೋಜನವಿಲ್ಲದೆಹೋಗುವುದು. ಹವ್ಯನೆಂದು ಪ್ರಸಿದ್ಧವಾದ ಹೆಸರಿರುವ ಶಾಕ ದ್ವೀಪಾಧಿಪತಿಯಾದ ಈ ರಾಜನ ವಿಷಯದಲ್ಲಿ ಮಹಾ ವಿದುಷಿಯಾದ ನಿನ್ನ ಅಂತರಂಗದಲ್ಲಿ ಈತನ ಬಿರುದುಗಳನ್ನು ಹೊಗಳುತ್ತಿರುವ ವಂದಿಗಳ ವಾಕ್ಯಗಳಿಗೆ ಅವಕಾಶವು ದೊರೆಯಲಾರದೇ? ಆ ಶಾಕ ದ್ವೀಪದಲ್ಲಿ ಗಿಳಿಯ ರೆಕ್ಕೆಗಳಂತೆ ಹಸುರಾದ ಪತ್ರಗಳನ್ನು ಧರಿಸಿರುವ ಶಾಕ ವೃಕ್ಷದ ಪತ್ರಗಳ ಹಸುರು ಬಣ್ಣದಿಂದ ದಿಕ್ಕುಗಳೆಲ್ಲ ಹರಿದ್ವರ್ಣವಾದ ಕಾರಣ, ದಿಕ್ಕುಗಳಿಗೆ ಹರಿತ್ ಎಂಬ ಹೆಸರೇ ಪ್ರಸಿದ್ಧವಾಯಿತು. ಈ ರಾಜನನ್ನು ವರಿಸಿ ಆ ಶೋಭೆಯನ್ನು ನೋಡುವ ಇಷ್ಟವು ನಿನಗಿಲ್ಲವೇ? ಅಲ್ಲದೆ, ಆ ಶಾಕ ವೃಕ್ಷದ ಪತ್ರಗಳಿಂದ ಹುಟ್ಟಿಬರುವ ದಿವ್ಯವಾದ ಮಂದಮಾರುತನ ಸ್ಪರ್ಶದಿಂದ ಯಾರಿಗೆ ಆನಂದವಾಗಲಾರದು? ಈ ಆನಂದವನ್ನು ಅನುಭವಿಸಿ, ಹೇ ದೇವಿ! ಪರಾಶರ ಋಷಿಯು ವಿಷ್ಣುಪುರಾಣದಲ್ಲಿ ಹೇಳಿದ—

*ಶಾಕಸ್ತತ್ರ ಮಹಾ ವೃಕ್ಷಃ ಸಿದ್ಧ ಗಂಧರ್ವ ಸೇವಿತಃ ।
ಯತ್ ಪತ್ರ ವಾತ ಸಂಸ್ಪರ್ಶಾದಾಹ್ಲಾದೋ ಜಾಯತೇ ಪರಃ ॥

ಎಂಬ ವಾಕ್ಯದಲ್ಲಿ ಶ್ರದ್ಧೆಯನ್ನಿಡುವವಳಾಗು. ಎಲೈ ಆಯತಾಕ್ಷಿ! ಆ ಶಾಕ ದ್ವೀಪದ ಸುತ್ತಲಿರುವ ಕ್ಷೀರಾರ್ಣವವು ನಿನ್ನ ಕಟಾಕ್ಷ ರುಚಿಯ ಸಂಬಂಧದಿಂದ ವಿಕಟ ಭಾವವನ್ನು ತಾಳಲು, ಅದರ ತೀರದಲ್ಲಿರುವ ವನ ಪಙ್ಕ್ತಿಯ ಪ್ರತಿಬಿಂಬದಿಂದ ವಿಚಿತ್ರ ವರ್ಣವನ್ನು ಹೊಂದಿದ ತರಂಗ ಪಙ್ಕ್ತಿಗಳ ಮನೋಹರತ್ವ ಚಂಚಲತ್ವಗಳಿಂದ ನಿನ್ನ ನೇತ್ರಗಳ ಸೌಂದರ್ಯವನ್ನೂ ಚಾಂಚಲ್ಯವನ್ನೂ ಸ್ಮರಿಸಲಿ. ಅದೂ ಅಲ್ಲದೆ, ಆ ಕ್ಷೀರ ಸಾಗರದಲ್ಲಿ ಸದಾ ಚಲಿಸುತ್ತಿರುವ ತರಂಗ ಸಮೂಹದ ಚಲನದಿಂದ ಪ್ರಾಪ್ತವಾದ ಕ್ಷೀರಾಸ್ವಾದನದಿಂದ ಸ್ಥೂಲವಾಗಿ ಬೆಳೆದ ಆ ಪ್ರಸಿದ್ಧನಾದ ಆದಿಶೇಷನು ಈ ಕ್ಷೀರಾರ್ಣವದಲ್ಲಿ ಕುಂಡಲಾಕಾರದ ಮಹಾ ಮೂರ್ತಿಯಾಗಿ ಮಧುಸೂದನನಾದ ಮಹಾ ವಿಷ್ಣುವಿಗೆ ಶಯ್ಯೆಯಾದನು. ಅದಲ್ಲದೆ, ಈ ಕ್ಷೀರೋದಧಿಯಲ್ಲಿ ಲಕ್ಷ್ಮಿಯು ನಿನ್ನ ರೂಪ ಸಂಪತ್ತನ್ನು ಕಂಡು ತನ್ನ ಪತಿಯಾದ ವಿಷ್ಣುವಿನಲ್ಲಿ ಶಂಕೆಗೊಂಡು, 'ಈತನು ಇಲ್ಲಿಯೇ ಬಹು ಕಾಲ ಸುಖವಾಗಿ ನಿದ್ರಿಸುತ್ತಿರಲಿ' ಎಂಬ ಯೋಚನೆಯಿಂದ ತನ್ನ ಮೃದುವಾದ ಕರಾಂಗುಲಿಗಳಿಂದ ಆತನ ಪಾದಾಬ್ಜಗಳನ್ನು ತಿಕ್ಕುತ್ತಿರುವಳು. ಅದೂ ಅಲ್ಲದೆ, ಆ ಶಾಕ ದ್ವೀಪದಲ್ಲಿ ಉದಯಾಚಲದ ಶಿಲೆಗಳು ಎಳವಿಸಿಲಿಂದ ನಿನ್ನ ಲೀಲಾ ವಿಹಾರದ ವೇಳೆ ಉಂಟಾದ ಶ್ರಮವಾರಿ ಬಿಂದುಗಳನ್ನು ಧರಿಸಿರುವ ಕಾಲು ಬೆರಳುಗಳಿಂದ ಸುರಿಯುತ್ತಿರುವ ಲಾಕ್ಷಾ ರಸದಿಂದಲೂ ದ್ವಿಗುಣಿತವಾಗಿ ಕೃತ್ರಿಮ ಗೈರಿಕ ಧಾತುಗಳುಳ್ಳವಾಗಲಿ. ಹೇ ಸುಂದರಾಂಗಿ! ಆ ದ್ವೀಪದಲ್ಲಿ ಸಂಚರಿಸುತ್ತಿರುವ ನಿನ್ನ ಕುಂಕುಮಾನುಲೇಪನದಿಂದ ಮನೋಹರವಾದ ಮುಖವು ಅಲ್ಲಿಯ ಸಂತೋಷ ಚಿತ್ತರಾದ ಜನರಿಗೆ ಉದಯಾದ್ರಿ ಶಿಖರದಲ್ಲುದಯಿಸುತ್ತಿರುವ ಶಶಾಂಕನೆಂಬ ಶಂಕೆಯನ್ನುಂಟುಮಾಡಲಿ. ಅಲ್ಲದೆ, ಈ ಹವ್ಯನೆಂಬ ರಾಜನು ನಿನ್ನ ವಿರಹಾಗ್ನಿಯನ್ನು ಹೊಂದಿ ತನ್ನ ಸ್ವಕೀಯವಾದ ಹವ್ಯವೆಂಬ ನಾಮವನ್ನು ಸರಿಯಾಗಿ ಅನುಭವಿಸುವವನಾಗಲಿ. ಈ ಪ್ರಕಾರ ನಿನ್ನಲ್ಲಿ ಅನುರಕ್ತನಾದ ಆ ರಾಜನನ್ನು ನೀನು ಅಂಗೀಕರಿಸಿದೆಯಾದರೆ ಆಗ ಆ ರಾಯನು ನಿನ್ನ ಪುತ್ರ ಪೌತ್ರಾದಿಗಳಿಂದ ತನ್ನ ವಂಶವು ಪ್ರತಿಷ್ಠೆಗೊಂಡುದಾಗಿ ತಿಳಿಯುವನು.'' ಆ ರಾಜನು ಲಕ್ಷ್ಮೀ ಎಂಬ ಲತೆಗೆ ಆಧಾರವಾದ ಭುಜವೆಂಬ ವೃಕ್ಷವುಳ್ಳವನಾದರೂ, ಸರಸ್ವತಿಗೆ ಸ್ಥಾನವಾದ ಮುಖಾಂಬುಜವುಳ್ಳವನಾಗಿ ಲಕ್ಷ್ಮೀ ಸರಸ್ವತಿಯರಿಗೆ ಏಕತ್ರ ಸ್ಥಾನವಾಗಿದ್ದರೂ, ಆತನ ಬಳಿಗೆ ಪೂಜ್ಯನಾದ ಇಂದ್ರನು ಅರ್ಥಿಯಾಗಿ ಬರಲಿಲ್ಲವೆಂಬ ಒಂದೇ ಒಂದು ದೋಷದಿಂದ ದಮಯಂತಿಯು ಆತನಲ್ಲಿ ವಿರಕ್ತಳಾದಳು.

---

* ಆ ಶಾಕ ದ್ವೀಪದಲ್ಲಿ ಶಾಕವೆಂಬುದೊಂದು ದೊಡ್ಡ ಮರವಿರುವುದು. ಆ ಮರವನ್ನು ಸಿದ್ಧರೂ ಗಂಧರ್ವರೂ ಆಶ್ರಯಿಸಿರುವರು. ಆದರ ಎಲೆಗಳಿಂದ ಬೀಸಿ ಬರುವ ವಾಯುವಿನ ತಗಲುವಿಕೆಯಿಂದ ವಿಶೇಷವಾಗಿ ಆನಂದವುಂಟಾಗುವುದು.

ಮುಂದೆ, ಶಿಬಿಕಾ ವಾಹಕರಾದ ಜನರು, ಲೋಕದಲ್ಲಿ ಸೌಂದರ್ಯಾದಿ ಗುಣಗಳಿಂದ ಪ್ರಸಿದ್ಧಿಗೊಂಡ ಆ ದಮಯಂತಿಯನ್ನು, ವಾಯುವು ಸೌರಭ ಸಂಪತ್ತನ್ನು ಲಕ್ಷ್ಮಿಯ ವಿಲಾಸ ಗೃಹವಾದ ಕಮಲದಿಂದ ಸೆಳೆದು ಅನ್ಯ ಪುಷ್ಪದ ಕಡೆಗೆ ಒಯ್ಯುವಂತೆ, ಒಯ್ದರು. ಇದನ್ನು ಕಂಡು ವಾಙ್ಮಯ ದೇವತೆಯಾದ ಆ ಸರಸ್ವತಿಯು ಭಂಗಾರದಂತೆ ಮೈಬಣ್ಣವುಳ್ಳ ಆ ದಮಯಂತಿಗೆ, "ಹೇ ಸುದತಿ! ತನ್ನ ಬಾಹು ಬಲದಿಂದ ಹಲವು ಸಲ ಶತ್ರುಗಳನ್ನು ಗೆದ್ದ ಮಹಾ ವೀರನಾದ ಈ ರಾಜನನ್ನಾದರೂ ಅನುಮತಿಸುವವಳಾಗು: ಇವನು ದ್ಯುತಿಮಂತನೆಂಬ ಹೆಸರಿನ ಕ್ರೌಂಚ ದ್ವೀಪಾಧಿಪತಿಯು. ಈ ರಾಜನನ್ನು ನಿನ್ನ ವಿಲಾಸ ಯುಕ್ತವಾದ ಕಟಾಕ್ಷದಿಂದ ಕಾಣು. ಆ ಪ್ರಸಿದ್ಧವಾದ ಕ್ರೌಂಚ ದ್ವೀಪದ ಸನ್ನಿವೇಶದಲ್ಲಿ ಆ ಪಯೋಧಿಯ ತುಂಬ ವರ್ತುಳವಾಗಿ ಪಾಂಡು ವರ್ಣದ ದಧಿ ಮಂಡವು ಪ್ರಕಾಶಿಸುತ್ತಿರುವುದು. ಅಲ್ಲದೆ, ಆ ದ್ವೀಪದಲ್ಲಿ, ಸುಂದರಿ! ನಿನ್ನ ಪಾದ ಸ್ಪರ್ಶವನ್ನು ಬಯಸಿ ಕ್ರೌಂಚವೆಂಬ ಒಂದಾನೊಂದು ಪರ್ವತವಿರುವುದು. ಆ ಪರ್ವತವು ಹಂಸ ಪಕ್ಷಿಗಳ ಕಲ ಕಲವೆಂಬ ವಚನಗಳಿಂದ ಕುಮಾರಸ್ವಾಮಿಯ ಬಾಣ ವಿವರಗಳೆಂಬ ಮುಖಗಳ ಮೂಲಕ ನಿನ್ನ ಗುಣಗಳನ್ನು ವ್ಯಾಖ್ಯಾನ ಮಾಡುವ ಇಷ್ಟವುಳ್ಳುದಾಗಿ ಕಾಣಿಸಿಕೊಳ್ಳುತ್ತಿರುವುದು. ವೈದರ್ಭಿ! ಈ ದ್ವೀಪದಲ್ಲಿ ಪರಮೇಶ್ವರನ ಸಾನ್ನಿಧ್ಯವಿರುವುದು. ಆ ಪರಮೇಶ್ವರನನ್ನು ಒಂದೇ ಒಂದು ಕುಶ ಪತ್ರದಿಂದ ಮಾತ್ರವಾದರೂ ಪೂಜಿಸಿದಲ್ಲಿ ಅಂತಹ ಮನುಷ್ಯನಿಗೆ ತಿರುಗಿ ತಾಯಿಯ ಗರ್ಭದ ಪ್ರವೇಶವಿಲ್ಲದೆ ಮೋಕ್ಷ ಪದವು ಲಭ್ಯವಾಗುವುದೆಂದಮೇಲೆ ಕಮಲ ದಳಾದಿಗಳಿಂದ ಪೂಜಿಸಿದವರಿಗೆ ಯಾವ ಗತಿಯಾಗಬೇಕೆಂಬುವುದನ್ನು ನೀನೇ ಭಾವಿಸು. ನೀನು ಈ ದ್ವೀಪಾಧಿಪನನ್ನು ವರಿಸಿ ಆ ಪರಮೇಶ್ವರನನ್ನು ಪೂಜಿಸು. ಆ ದ್ವೀಪ ವಾಸಿಗಳೆಲ್ಲ ಏಕ ದೇವಾರಾಧಕರಾಗಿ ಶಿವನನ್ನಲ್ಲದೆ ಇತರ ದೈವತವನ್ನು ಆರಾಧಿಸತಕ್ಕವರಲ್ಲ. ಆ ಸ್ಥಳದಲ್ಲಿ ಬಾಲೇಂದುಶೇಖರನಾದ ಶಿವನಿಗೆ, ಶಿಖರಾಗ್ರವನ್ನು ಹೊಂದಿರುವ ಸೂರ್ಯನುಳ್ಳ ಉದಯ ಪರ್ವತಕ್ಕೆ ಸಮಾನವಾದ ಕನಕ ಕಲಶಗಳಿಂದ ಶೋಭಿಸುವ ಮನೋಹರಗಳಾದ ಹಲವು ಶಿವಾಲಯಗಳನ್ನು ಕಟ್ಟಿಸಿ, ಆ ಪರಮೇಶ್ವರನನ್ನು ಭಜಿಸುವವಳಾಗು. ಹೇ ದಮಯಂತಿ! ಆ ದ್ವೀಪದಲ್ಲಿ ದಧಿ ಮಹೋದಧಿಯ ಕಲ್ಲೋಲಗಳೆಂಬ ಚಾಮರಗಳಿಂದುಂಟಾದ ವಾಯುವೆಂಬ ಕಳ್ಳನು ನಿನ್ನ ಶಯ್ಯಾ ಗೃಹದ ಗವಾಕ್ಷ ರಂಧ್ರಗಳಿಂದ ಪ್ರವೇಶಿಸಿ ಸ್ಮರ ಕ್ರೀಡೆಯಿಂದುಂಟಾದ ಘರ್ಮ ಬಿಂದುಗಳೆಂಬ ಮೌಕ್ತಿಕ ಮಾಲೆಯನ್ನು ಅಪಹರಿಸಲಿ. ನೂತನವಾದ ಹಂಸ ವ್ಯಾಪಾರವುಳ್ಳ ಈ ರಾಜನ ಕೀರ್ತಿಯು, ಸಣ್ಣ ಸಣ್ಣ ಹಳ್ಳಗಳನ್ನು ದಾಟಿ ದೂರವಾಗಿ ಗಮಿಸುವ ಕ್ರಮದಿಂದ, ಈ ದೇಶದಿಂದ ಹೊರಟು ಯಾವ ಶ್ರಮವೂ ಇಲ್ಲದೆ ಸಮುದ್ರಗಳನ್ನು ದಾಟುವುದಕ್ಕೂ ಸಕಲ ದಿಗಂತಗಳನ್ನು ಸೇರುವುದಕ್ಕೂ ಅಭ್ಯಾಸಮಾಡುತ್ತಿರುವುದೋ ಎಂಬಂತೆ, ಸಕಲ ದಿಕ್ಕುಗಳಿಗೂ ವ್ಯಾಪಿಸುತ್ತಿರುವುದು."

ಈ ಪ್ರಕಾರ ಸರಸ್ವತಿಯು ಆ ದ್ಯುತಿಮಂತ ರಾಯನನ್ನು ಹೊಗಳಿದಳು. ಆ ರಾಯನು ಅಸಂಖ್ಯಾತವಾದ ಸದ್ಗುಣಗಳಿಂದ ಪರಿಪೂರ್ಣನಾಗಿದ್ದರೂ ಕೃಶಾಂಗಿ

ಯಾದ ಆ ದಮಯಂತಿಗೆ ಮಾತ್ರ ಆತನಲ್ಲಿ ಮನಃಸಂಗವುಂಟಾಗದೆಹೋಯಿತು. ದೈವವು ತಡೆಮಾಡುತ್ತಿರುವ ವೇಳೆ ದುಷ್ಕರಗಳಾದ ಪೌರುಷಗಳಿಂದ ಯಾವ ಕಾರ್ಯವೂ ಕೈಗೂಡದು. ದಮಯಂತಿಯ ಮನಸ್ಸು ಆ ರಾಜನಲ್ಲಿ ಕೂಡದುದನ್ನು ಕಂಡು ಶಿಬಿಕಾ ವಾಹಕರಾದ ಜನರು, ದೇವಾನುಚರರಾದ ಜನರು ಸಮುದ್ರ ಮಥನದ ವೇಳೆ ಉಂಟಾದ ಚಂದ್ರರೇಖೆಯನ್ನು ಸಮುದ್ರದಿಂದ ಶಿವ ಶಿರಸ್ಸಿಗೆ ಒಯ್ದಂತೆ, ಈ ದಮಯಂತಿಯನ್ನು ಆ ರಾಜನ ಬಳಿಯಿಂದ ಬೇರೊಬ್ಬ ಅರಸನ ಬಳಿಗೆ ಒಯ್ದರು. ಆಗ ಜಗದ್ವಂದ್ಯಳಾದ ಸರಸ್ವತಿಯು ಗುಣಾಢ್ಯನಾಗಿಯೂ ನಿರ್ದೋಷಿಯಾಗಿಯೂ ಇದ್ದ ಒಬ್ಬೊಬ್ಬ ರಾಜನನ್ನೇ ತೋರಿಸಿ ವಿವರಿಸುತ್ತ, ಆಯಾ ರಾಜನಲ್ಲಿ ದಮಯಂತಿಯ ಮನಸ್ಸು ಕೂಡದುದನ್ನು ಕಂಡು ಮುಂದುವರಿಯುತ್ತ, ಈ ಪ್ರಕಾರ ಅಚ್ಯುತನಾದ ಮಹಾವಿಷ್ಣುವಿನ ಭುಜಾಂತರದಿಂದ ಚ್ಯುತಿಯನ್ನು ಹೊಂದಿದ ಸಾಕ್ಷಾತ್ ಲಕ್ಷ್ಮಿಯಂತಿದ್ದ ದಮಯಂತಿಯನ್ನು ಕಂಡು, "ಕಮಲಾನನೆ! ಈ ಮುಂದೆ ತೋರುವ ರಾಜನು ದರ್ಭಸ್ತಂಬದಿಂದ ಚಿಹ್ನಿತವಾದ ಕಾರಣ ಕುಶದ್ವೀಪವೆಂದು ಹೆಸರಾದ ಮಹಾದ್ವೀಪದ ರಾಜನು. ಈತನಲ್ಲಿ ನಿನಗೆ ಇಷ್ಟವಾಗುವಂತಿದ್ದರೆ ಒಪ್ಪು. ಆಗ ಜ್ಯೋತಿಷ್ಮಂತನೆಂಬ ಹೆಸರುಳ್ಳ ಈ ರಾಜನೊಡನೆ ಸುತ್ತಲೂ ನಿಬಿಡವಾದ ವನಗಳಿಂದ ಸೇರಿದ ಘೃತ ಸಮುದ್ರದ ತೀರಗಳಲ್ಲಿ ನಿನ್ನ ಚಿತ್ತಕ್ಕೆ ವಿನೋದವನ್ನು ಹುಟ್ಟಿಸಿಕೊಳ್ಳಬಹುದು. ಅಮ್ಮಾ! ದಮಯಂತಿ! ಆ ದ್ವೀಪದ ವಿಶೇಷತ್ವವನ್ನು ಹೇಳುತ್ತೇನೆ ಕೇಳು:—ಆಕಾಶವನ್ನು ಮುಟ್ಟತಕ್ಕ ಬಲು ಎತ್ತರವಾದ ತುದಿಯುಳ್ಳ ಕತ್ತಿಯಂತಿರುವ ಆ ದರ್ಭಸ್ತಂಬದ ದಳಗಳು ಗಾಳಿಯಿಂದ ಅತ್ತಿತ್ತ ಅಲ್ಲಾಡುತ್ತ ಮೇಘಮಂಡಲವನ್ನು ಕತ್ತರಿಸುತ್ತಿರಲಾಗಿ, ಅಲ್ಲಿಂದ ಸುರಿಯುತ್ತಿರುವ ನೀರಿನಿಂದ ಸೇಕವನ್ನು ಹೊಂದತಕ್ಕ ಆ ದ್ವೀಪದ ಚಿಹ್ನವಾದ ಕುಶಸ್ತಂಬವು ನಿನ್ನ ನೇತ್ರಗಳಿಗೆ ವಿಸ್ಮಯವನ್ನುಂಟುಮಾಡದಿರದು. ಅದೂ ಅಲ್ಲದೆ, ಆ ದ್ವೀಪದಲ್ಲಿ, ಸಮುದ್ರ ಮಥನದ ಸಮಯದಲ್ಲಿ ಹುಟ್ಟಿದ ಲಕ್ಷ್ಮಿಯ ಚರಣ ಕಮಲಗಳ ಅರ್ಪಣದಿಂದ ಪವಿತ್ರಗಳಾದ ಶಿಲೆಗಳುಳ್ಳ ಮಂದರ ಕಂದರಗಳಲ್ಲಿ ಪತಿಯೊಡನೆ ವಿಹಾರಸ್ವರೂಪವಾದ ವಿನೋದಗಳಿಂದ ಸಂತೋಷಪಡುವವಳಾಗು. ಎಲೇ ಸುವರ್ಣಾಂಗಿ! ಆ ಕುಶದ್ವೀಪದಲ್ಲಿ ವಾಸುಕಿಯ ವೇಷ್ಟನ ಶತದ ಘರ್ಷಣದಿಂದ, ಆ ಮಂದರ ಪರ್ವತದ ಶಿಲೆಗಳಲ್ಲುಂಟಾದ ಭೋಗವೇಷ್ಟನ ಮಾರ್ಗಗಳೆಂಬ ಸೋಪಾನಗಳಿಂದ ಆ ಮಂದರಾದ್ರಿಯು ನಿನ್ನ ಏರಿಕೆಗೆ ಸಿದ್ಧವಾದಂತೆ ಕಾಣಿಸುತ್ತಿರುವುದು. ಭುಜಗ ಪ್ರಭುವಾದ ಆ ವಾಸುಕಿಯ ವೇಷ್ಟನಗಳಿಂದುಂಟಾದ ಘರ್ಷಣ ರೇಖೆಗಳಲ್ಲಿ ಹರಿಯುತ್ತಿರುವ ಶುಭ್ರವಾದ ನಿರ್ಝರ ಧಾರೆಯುಳ್ಳ ಆ ಮಂದರಾದ್ರಿಯು ನಿನ್ನ ನೇತ್ರಗಳಿಗೆ ಮಂದರಾದ್ರಿಯ ಭಾರದಿಂದ ಕುಂಚಿತವಾದ ತಲೆಗಳುಳ್ಳ ಶೇಷನ ಉಳಿದ ಮೈಯಿಂದ ಸುತ್ತಿಕೊಂಡಿರುವಂತೆ ಭ್ರಮೆಯನ್ನುಂಟುಮಾಡಲಿ. ಹೇ ಸುಂದರಿ! ಆ ಮಂದರಾದ್ರಿಯು ನಿನ್ನ ಸ್ತನಯುಗದಿಂದ ಐರಾವತದ ಕುಂಭಸ್ಥಳಗಳನ್ನೂ, ಹಸ್ತದಿಂದ ಕಲ್ಪವೃಕ್ಷದ ಚಿಗುರುಗಳನ್ನೂ, ಮುಖದಿಂದ ಚಂದ್ರನನ್ನೂ, ಈ ಪ್ರಕಾರ ನಿನ್ನ ಸಕಲಾವಯವಗಳಿಂದಲೂ ಹಿಂದೆ ತನ್ನಿಂದ

ಸಮುದ್ರ ಮಥನದಲ್ಲುಂಟಾದ ವಸ್ತುಗಳನ್ನು ಸ್ಮರಿಸುವಂತಾಗುವುದು.'' ಸಮಸ್ತ ವೇದಗಳಿಂದಲೂ, ವೇದ ತುಲ್ಯಗಳಾದ ಸತ್ಪುರುಷರ ವಾಕ್ಯಗಳಿಂದಲೂ ಸಂಪಾದಿ ಸಲ್ಪಟ್ಟ ಕೀರ್ತಿ ರತ್ನನಾದ, ಅಲ್ಲದೆ ನಿರ್ಹೇತುಕವಾಗಿ ಸದಾ ಪರಾರ್ಥ ಪರಾಯಣ ನಾದ ಈ ಜ್ಯೋತಿಷ್ಮಂತನೆಂಬ ರಾಜನನ್ನು, ಶಿವನನ್ನು ಪೂರ್ವಮೀಮಾಂಸಾ ಶಾಸ್ತ್ರವು ಒಪ್ಪದಂತೆ, ದಮಯಂತಿಯು ಒಪ್ಪದೆ ಹೋದಳು.

ಅನಂತರ, ವಾಹನ ವಾಹಕರು, ಸ್ತ್ರೀಗೆ ಅನುರೂಪವಾದ ಚರಣ ಚೇಷ್ಟೆಗಳಿಂದ ಬೇರೆ ಕಡೆಗೆ ಹೋಗುವುದನ್ನು ಸೂಚಿಸುತ್ತಿರುವ ಕೃಶಾಂಗಿಯಾದ ಈ ಭೈಮಿಯನ್ನು ಆ ರಾಜನ ಸಮ್ಮುಖದಿಂದ ಒಯ್ದು, ಅರ್ಥಿಯಾದೊಬ್ಬನು ನಿರ್ಧನನಾದ ಪುರುಷನನ್ನು ಯಾಚಿಸಿ ಅವನು ನಿರ್ಧನನೆಂದು ತಿಳಿದಮೇಲೆ ಅಲ್ಲಿಂದ ಹೊರಟು ಧನಾಢ್ಯನಾದ ಅನ್ಯನ ಬಳಿಗೆ ಹೋಗುವಂತೆ, ಬೇರೊಬ್ಬ ರಾಜನ ಬಳಿಗೆ ಆಕೆಯನ್ನು ಒಯ್ದರು. ಆಗ ಚತುರ್ಭುಜನಾದ ಮಹಾವಿಷ್ಣುವಿನ ಪಕ್ಕದಲ್ಲಿ ನಿಂತು ಸೇವಿಸುತ್ತ ಆತನ ದೇಹದ ಎಡಭಾಗವನ್ನು ಪರಿಶುದ್ಧವನ್ನಾಗಿ ಮಾಡುವ ಆ ಸರಸ್ವತಿಯು ಗುಣ ರೂಪಾದಿಗಳ ಗೌರವದಿಂದ ಮನೋಹರಳಾದ ಆ ದಮಯಂತಿಯನ್ನು ಕುರಿತು ತಿರುಗಿ ಹೇಳಿ ದಳು:—''ಮಗಳೇ! ಶತ್ರುಗಳಲ್ಲಿ ನಿಷ್ಠುರವಾದ ಕೃಪಾಣವನ್ನು ಧರಿಸಿದ ಈ ರಾಜನ ಗುಣಗಳು ಇವನ ಪಾಣಿಗ್ರಹಣದ ತರುವಾಯ ನಿನಗೆ ತಿಳಿಯುವುದಲ್ಲದೆ ಈಗ ತಿಳಿಯದು. ಹೇ ಕುಸುಮ ನಾಸೆ! ಈ ರಾಜನು ಸುರಾ ಸಮುದ್ರದಿಂದ ಸುತ್ತಲ್ಪಟ್ಟ ಶಾಲ್ಮಲವೆಂಬ ದ್ವೀಪದ ರಾಜನು. ಗುಣಾಬ್ಧಿಯಾದ ಈತನ ಹೆಸರು ವಪುಷ್ಮಾನೆಂದು. ಈತನಲ್ಲಿ ನೀನು ಅನುರಕ್ತಳೋ ಅನನುರಕ್ತಳೋ? ಹಿಂದೆ ಬ್ರಾಹ್ಮಣನಾದ ಅಗಸ್ತ್ಯನು ಸಮುದ್ರ ಪಾನ ಮಾಡುತ್ತಿರುವ ವೇಳೆ, ಉಳಿದ ಐದು ಸಮುದ್ರಗಳು ತಮ್ಮನ್ನೂ ಕುಡಿಯುವನೋ ಎಂಬ ಭಯದಿಂದ ನಡುಗುತ್ತಿರು ವಾಗ, ಬ್ರಾಹ್ಮಣನು ಸುರೆಯನ್ನು ಪಾನಮಾಡಲಾರನೆಂಬ ನಿಶ್ಚಯದಿಂದ ಆ ಸಮುದ್ರವು ಧೈರ್ಯವಾಗಿದ್ದಿತು. ನೀನು ಈತನನ್ನು ಮದುವೆಯಾದರೆ ಈ ರಾಯ ನೊಡನೆಯೂ ನಿನ್ನ ಗೆಳತಿಯರೊಡನೆಯೂ ಈ ಸಮುದ್ರದಲ್ಲಿ ಮಧುರವಾದ ಮಧುಪಾನ ಕ್ರೀಡೆಯನ್ನು ನಡೆಯಿಸಬಹುದು. 'ಅದೂ ಅಲ್ಲದೆ, ಆ ಶಾಲ್ಮಲಿ ದ್ವೀಪದಲ್ಲಿ ತೃಣಜ್ಯೋತಿಷಗಳ ದೀಪ್ತಿಗಳಿಂದ ಆ ದ್ವೀಪದ ದೀಪದಂತೆ ತೋರು ತ್ತಿರುವ ಬೆಟ್ಟದ ಶಿಖರದಲ್ಲಿ ಬಂದು ಸೇರಿದ ಮೋಡಗಳಿಂದ ಕಾಡಿಗೆಯಂತೆ ಮನೋಹರ ವಾಗಿ ಕಾಣಿಸುತ್ತಿರುವ ದೃಷ್ಟಿಪ್ರಿಯವಾದ ಆ ದ್ರೋಣ ಪರ್ವತವು ನಿನಗೆ ಔಷಧ ಸಾಧ್ಯವಾದ ವಶೀಕರಣ ಕರ್ಮವನ್ನು ಉಪಾಯವಾಗಿ ಕೊಡುವುದು. ಎಲೆ ಕಮಲ ಕೋಮಲೆಯೇ! ಆ ದ್ವೀಪ ಚಿಹ್ನವಾದ ಮಹಾ ಶಾಲ್ಮಲಿ ವೃಕ್ಷವು ಗಾಳಿ ಯಿಂದ ಅಳ್ಳಾಡಿಸಲ್ಪಟ್ಟುದಾಗಿ, ಒಡೆದು ಹಾರಿದ ಹತ್ತಿಯಿಂದ ದ್ವೀಪದ ಭೂಮಿಯೆಲ್ಲ ಮೃದುವಾಗಲಾಗಿ, ನಿನ್ನ ವಿಹಾರ ಸಮಯದಲ್ಲಿ ಎಲ್ಲಿ ಅಡಿಯಿಟ್ಟರೂ ನೋವಾಗದಂತೆ ನಿನ್ನ ಚರಣ ನ್ಯಾಸಕ್ಕೆ ಯೋಗ್ಯವಾಗುವುದು.'' ವಾಗ್ದೇವಿಯು ಈ ಪ್ರಕಾರ ವರ್ಣಿ ಸಿದರೂ ದಮಯಂತಿಗೆ ಆ ರಾಜನಲ್ಲಿ ಅನುರಾಗವುಂಟಾಗದುದನ್ನು ಶಿಬಿಕಾ ವಾಹಕರು ಆಕೆಯ ಕಡೆಗಣ್ಣ ಸಂಕೋಚದಿಂದ ತಿಳಿದು, ಆ ವಧುವನ್ನು ಬೇರೊಬ್ಬ ರಾಜನ

ಬಳಿಗೆ ಬಪ್ಪರು. ಆಗ ಸರಸ್ವತಿಯು, “ಹೇ ಭೈಮಿ! ಈ ರಾಜನನ್ನು ನೋಡು: ಈತನ ಮೇಲಿನ ಜನಾನುರಾಗವು ಕುಂಕುಮ ಪಂಕದಂತೆ ಈತನ ಮೈಗೆ ಹತ್ತಿರುವುದು. ದಿಕ್ಕುಗಳನ್ನು ಜಯಿಸಿದುದರಿಂದ ಬಂದ ದಿಗ್ವಿಜಯ ಕೀರ್ತಿಯು ಇವನ ಭುಜಗಳನ್ನು ಚಂದನ ಲೇಪನದ ರೂಪದಿಂದ ಅಂಟಿರುವುದು. ಇಂತಹ ಮಹಾನುಭಾವನಾದ ಈ ರಾಜನಲ್ಲಾದರೂ ನಿನ್ನ ಅನುರಾಗವನ್ನಿಡು. ಎಲೈ ಮತ್ತಕಾಶಿನಿ! ಈ ರಾಜನು ಪ್ಲಕ್ಷವೃಕ್ಷಗಳಿಂದ ಚಿಹ್ನಿತವಾದ ಪ್ಲಕ್ಷದ್ವೀಪವನ್ನು ಆಳತಕ್ಕವನು. ಮೇಧಾತಿಥಿಯೆಂದು ಪ್ರಸಿದ್ಧನಾದ ಈ ರಾಜನ ಎದೆಯಲ್ಲಿ ನೀನು ಸ್ವಷ್ಟ ಸೌಖ್ಯವನ್ನು ಅನುಭವಿಸುವವಳಾದರೆ ಯಮಳಾರ್ಜುನ ಭಂಜಿತನಾದ ಮಹಾವಿಷ್ಣುವಿನ ಎದೆಯಲ್ಲಿ ಸಾಕ್ಷಾತ್ ಲಕ್ಷ್ಮಿಯಂತೆ ಶೋಭಿಸುವೆ. ಅಲ್ಲದೆ, ಆ ಪ್ಲಕ್ಷದ್ವೀಪದಲ್ಲಿ ಶಾಖೆಗಳಿಂದ ತೂಗುತ್ತಿರುವ ಉಯ್ಯಾಲೆಗಳಲ್ಲಿ ಕುಳಿತು, ತೂಗಿಸಿಕೊಳ್ಳುವ ಜನ ಸಮೂಹದಿಂದ ಅನುರಾಗವನ್ನು ಪಡೆದಿರುವ ಭೂಮಂಡಲಕ್ಕೇ ಕೊಡೆಯನ್ನು ಎತ್ತಿ ಹಿಡಿದಂತೆ ತೋರುವ ಮಹತ್ತರವಾದ ಪ್ಲಕ್ಷ ವೃಕ್ಷವನ್ನು ನೋಡಲಾಗಿ, ನಿನಗೂ ಕೂಡ ಅಲ್ಲಿ ಆಂದೋಲ ಕ್ರೀಡೆಯನ್ನಾಡಲು ಇಷ್ಟವುಂಟಾಗದಿರದು. ಹೇ ಚಕೋರಾಕ್ಷಿ! ಭೂಚಂದ್ರನಂತೆ ಶೋಭಿಸುವ ಈ ಪ್ಲಕ್ಷ ದ್ವೀಪಾಧಿಪತಿಯು ನಿನ್ನ ಅಧರಾಮೃತವನ್ನು ಪಾನ ಮಾಡಿದ ಮೇಲೆ ಆ ದ್ವೀಪವನ್ನು ಪರಿಧಿಯ ಆಕಾರದಲ್ಲಿ ಸುತ್ತಿರುವ ಇಕ್ಷುರಸಾಬ್ಧಿಯ ಸವಿಯನ್ನು ಎಂದಿಗೂ ಆಶಿಸನು. ಅಲ್ಲದೆ, ಆ ಪ್ಲಕ್ಷದ್ವೀಪ ವಾಸಿಗಳು ಚಂದ್ರನನ್ನು ಬಿಟ್ಟು ಉಳಿದ ದೇವತೆಗಳನ್ನು ಪೂಜಿಸತಕ್ಕವರಲ್ಲ. ಅಲ್ಲಿ ಯಾವನಾದರೊಬ್ಬ ಸೂರ್ಯಭಕ್ತನು ಇರುತ್ತಿದ್ದರೆ ಆತನು ಕೂಡ ಸೂರ್ಯನಂತೆಯೇ ಚಂದ್ರ ದರ್ಶನವಿಲ್ಲದೆ ಭೋಜನ ಮಾಡನು. ಆ ಜನರಿಗೆ, ಹೇ ದೇವಿ! ನಿನ್ನ ಮುಖಚಂದ್ರನ ದರ್ಶನದಿಂದ, ಅಮಾವಾಸ್ಯೆಯಲ್ಲಿ ಕೂಡ ಚಂದ್ರ ದರ್ಶನವಾಗುತ್ತಿರುವ ಕಾರಣ, ಅಮಾವಾಸ್ಯೆಯ ಭೋಜನದಿಂದ ಕೂಡ ಅವರಿಗೆ ಅವಕೀರ್ಣವೆಂಬ ವ್ರತಹಾನಿಯುಂಟಾಗಲಾರದು. ಆ ದ್ವೀಪದಲ್ಲಿ ವಿಪಾಶವೆಂಬ ಮನೋಹರವಾದ ನದಿಯೊಂದು ಹರಿಯುತ್ತಿರುವುದು. ಆ ನದಿಯಲ್ಲಿ ಹುಟ್ಟಿರುವ ನೂತನವಾದ ಪದ್ಮಪಙ್ಕ್ತಿಗಳು ನಿನ್ನ ನೇತ್ರಗಳಿಗೆ ನೀರಾಜನಗಳಾಗಲಿ. ಇದರಿಂದ, ಈ ಮೇಧಾತಿಥಿ ರಾಜನನ್ನು ನೀನು ಅವಶ್ಯವಾಗಿ ವರಿಸಬೇಕು. ಈತನ ಕೀರ್ತಿಯಿಂದ ಆ ದ್ವೀಪದೊಳಗಿನ ನೀರೆಲ್ಲ ಕ್ಷೀರವಾಗಿ ಮಾರ್ಪಡಲು, ಈಗ ಅಲ್ಲಿ ಹಂಸಗಳು ನೀರ ಕ್ಷೀರ ವಿಭಾಗದಲ್ಲಿ ಮುಗ್ಧಗಳಾಗಿರುವುವು. ಈ ಕಾರಣದಿಂದಲೇ ನಾನಾರ್ಥ ನಿಘಂಟುಗಳಲ್ಲಿ, ಕ್ಷೀರವೆಂಬ ಪದವನ್ನು ಪಯವೆಂಬರ್ಥದಲ್ಲಿಯೂ, ಪಯವೆಂಬ ಪದವನ್ನು ಕ್ಷೀರವೆಂಬರ್ಥದಲ್ಲಿಯೂ ಉಪಯೋಗಿಸಲು ಕಾರಣವಾಯಿತು. ಹಾಗಿಲ್ಲದೆಹೋಗಿದ್ದರೆ, ನೀರನ್ನು ಕ್ಷೀರವೆಂದು ಕರೆಯುತ್ತಿರಲಿಲ್ಲ. ಈ ರಾಜನನ್ನು ನಳನ ಸಮಾನಸ್ಕಂಧನೆಂದೇ ತಿಳಿ. ಅಲ್ಲದೆ, ಈ ಮೇಧಾತಿಥಿಯ ಮಾಹಾತ್ಮ್ಯವನ್ನು ಏನು ಹೇಳಲಿ! ಈ ಇಬ್ಬರು ರಾಜರ ಕೀರ್ತಿಯೂ ಜಂಬೂ ಪ್ಲಕ್ಷ ದ್ವೀಪಗಳಲ್ಲಿ ಮಾತ್ರವಲ್ಲ, ಅವುಗಳ ಆಚೆಗೂ ಹರಡಿರುವುದು.”

ಈ ಪ್ರಕಾರ, ಸರಸ್ವತಿಯು ಮೇಧಾತಿಥಿ ರಾಜನನ್ನು ವರ್ಣಿಸಲು, ಅಂಭೋಜಗರ್ಭನಂತೆ ರಮ್ಯವಾದ ದೃಷ್ಟಿಯುಳ್ಳ ದಮಯಂತಿಯು, ಸೌಂದರ್ಯದಲ್ಲಿ ಮೂರು

ಲೋಕವನ್ನು ಗೆದ್ದಿರುವ ಮನ್ಮಥನನ್ನು ಕೂಡ ಗೆದ್ದವನಾಗಿಯೂ, ಪೂರ್ವ ವಯಸ್ಕನಾಗಿಯೂ ಇರುವ ಆ ಮೇಧಾತಿಥಿಯನ್ನು, ಮನ್ಮಥನನ್ನು ಪುರತ್ರಯ ರಿಪುವಾದ ಪರಮೇಶ್ವರನ ನೇತ್ರಗಳಂತೆ, ವೈರಾಗ್ಯ ಸೂಚಕವಾದ ಪರುಷ ದೃಷ್ಟಿಗಳಿಂದ ನೋಡಿದಳು. ಆಗ, ದಮಯಂತಿಯ ಭಾವವನ್ನರಿತ ವಾಹನ ವಾಹಕರು ಉದಯೋನ್ಮುಖವಾದ ಚಂದ್ರರೇಖೆಯನ್ನು, ಕೈರವ ವನದ ಭಾಗ್ಯ ವಿಲಾಸಗಳು ಜಗತ್ತಿನ ದೀಪವಾದ ಸೂರ್ಯನ ಕಿರಣದಿಂದ ಒಯ್ಯುವಂತೆ, ಆಕೆಯನ್ನು ಮೇಧಾತಿಥಿಯ ಬಳಿಯಿಂದ ಒಯ್ದರು.

ಹೀಗೆ, ಆ ದ್ವೀಪಾಧಿಪತಿಗಳಲ್ಲಿ ಯಾರಲ್ಲಿಯೂ ಸ್ವಲ್ಪವೂ ಮನಸ್ಸಿಡದ ದಮಯಂತಿಯನ್ನು ಕಂಡು ಮಾಧುರ್ಯಾದಿ ವಿಶಿಷ್ಟ ಗುಣ ಯುಕ್ತವಾದ ವಚನಗಳಿಂದ ವಾಗ್ದೇವತೆಯಾದ ಆ ಸರಸ್ವತಿಯು ತಿರುಗಿ ಹೇಳತೊಡಗಿದಳು :—"ಭೈಮಿ! ನೀನು ಈ ಜಂಬೂ ದ್ವೀಪಾಭಿಮಾನಿ ದೇವತೆಯ ಶಿರೋರತ್ನದಂತಿರುವವಳು. ಈಗ ಈ ಜಂಬೂ ದ್ವೀಪವು ನಿನಗಾಗಿಯೇ ಬಂದು ಸೇರಿದ ರಾಜಕುಮಾರರಿಂದ, ಶಿವ ಭಯದಿಂದ ಕಂಪಿಸಿ ಸ್ವರ್ಗದಿಂದ ಕೆಳಗೆ ಬಿದ್ದ ಕಾಮ ಲೋಕದಂತೆ, ತೋರುತ್ತಿರುವುದು. ಹೇ ದೇವಿ! ಈ ಜಂಬೂ ದ್ವೀಪವು ಪ್ಲಕ್ಷಾದಿ ದ್ವೀಪಗಳೆಂಬ ಪರಿವಾರದೊಡನೆ ಮೇರು ಪರ್ವತವೆಂಬ ಕನಕ ದಂಡದ ಆತಪತ್ರವೂ ಕೈಲಾಸದ ರಶ್ಮಿ ಸಮೂಹವೆಂಬ ಚಾಮರ ಜಾಲವೂ ಉಳ್ಳುದಾಗಿ ಸಮಸ್ತ ದ್ವೀಪಗಳ ರಾಜನಂತೆ ಶೋಭಿಸುತ್ತಿದೆಯಲ್ಲವೆ? ಈ ಜಂಬೂ ದ್ವೀಪಕ್ಕೆ ಇಲ್ಲಿಯ ರಾಜ ಜಂಬೂ ವೃಕ್ಷದಿಂದಲೇ ಈ ಹೆಸರು ಬಂದಿತು. ಆ ವೃಕ್ಷದಲ್ಲಿಯ ದೊಡ್ಡ ಗಂಡ ಶೈಲದಂತಿರುವ ಹಣ್ಣುಗಳನ್ನು ಕಂಡು, ಅದರ ಸುತ್ತುಮುತ್ತು ತಿರುಗುವ ಸಿದ್ಧ ಸ್ತ್ರೀಯರು ಈ ಮರದ ಮೇಲೆ ಆ ಆನೆಯ ಹಿಂಡುಗಳು ಯಾವ ಮಾರ್ಗದಿಂದ ಏರಿಹೋದುವೆಂದು ಆಶ್ಚರ್ಯಪಡುತ್ತಿದ್ದಾರೆ. ಸುಂದರಿ! ಆ ಜಂಬೂ ಫಲಗಳು ಕೆಳಗೆ ಉದುರಿ ಒಡೆದು ಹೊರಟ ರಸದಿಂದ ಅಮೃತದಂತೆ ಸವಿಯಾದ ಜಂಬೂ ನದಿಯೆಂಬ ನದಿಯು ಈ ದ್ವೀಪದ ಉತ್ತರ ಪ್ರಾಂತದಲ್ಲಿ ಹರಿಯುತ್ತಿರುವುದು. ಆ ನದಿಯ ಸುತ್ತುಮುತ್ತಿನ ಮಣ್ಣೆಲ್ಲ ನಿನ್ನ ಮೈಬಣ್ಣಕ್ಕೆ ಸೋತ ಜಾಂಬೂನದವೆಂಬ ಬಂಗಾರವೆಂದು ಲೋಕ ಪ್ರಸಿದ್ಧವಾಗಿರುವುದು. ಹೇ! ರಂಭೋರು? ಈ ಜಂಬೂ ದ್ವೀಪದ ಸಾವಿರಾರು ಮಂದಿ ರಾಜರು ಬಂದು ಇಲ್ಲಿ ಸೇರಿರುವರು. ಇವರು ತಮ್ಮ ಅಸ್ತ್ರಗಳಿಂದ ಶತ್ರುಗಳ ಮೈಯಲ್ಲಿ ರಕ್ತವನ್ನೂ ಶತ್ರು ಪತ್ನಿಯರ ಕಣ್ಣಲ್ಲಿ ನೀರನ್ನೂ ಹೊರಡಿಸಿದ ಮಹಾ ವೀರರು. ಇವರಲ್ಲಿ ನಿನಗೊಪ್ಪುವ ಯಾವನನ್ನಾದರೂ ಆರಿಸಿಕೊ. ಅವರನ್ನು ವರ್ಣಿಸಿ ಹೇಳುತ್ತೇನೆ ಕೇಳು: ದಮಯಂತೀ! ಈ ಮುಂದೆ ತೋರುವವನೇ ಅವಂತೀಶ್ವರನು. ಶತ್ರು ಪತ್ನಿಯರು ಧರಿಸಿದ ತಮಾಲ ಮಾಲೆಗಳಿಂದ ಹೊರಟ ಕತ್ತಲೆಯನ್ನು ತನ್ನ ಶೌರ್ಯವೆಂಬ ಸೂರ್ಯಾತಪದಿಂದ ಪರಿಹರಿಸಿದ ಅನೇಕ ಗುಣ ಸಂಪತ್ತುಗಳಿಗೆ ವಿಶ್ರಮ ಸ್ಥಾನವಾದ ಈ ರಾಜನ ಕಡೆಗೆ ನೋಡು. ಅದಲ್ಲದೆ, ತಪಸ್ವಿಗಳಾದ ಮಹರ್ಷಿಗಳು ವಾಸವಾಗಿರುವ ಅರಣ್ಯ ಪಙ್ಕ್ತಿಗಳನ್ನು ತೀರದಲ್ಲುಳ್ಳ ಸಿಪ್ರಾ ನದಿಯು ಜಲಕ್ರೀಡೆಯ ವೇಳೆಯಲ್ಲಿ ತನ್ನ ತೆರೆಗಳೆಂಬ ಬಾಹುಗಳಿಂದ ನಿನ್ನನ್ನು ಅಪ್ಪಿಕೊಳ್ಳುವ ಕಲ್ಲದೆ ವಿಕಸಿತವಾದ ತಾವರೆಗಳೆಂಬ ಮುಖಗಳಿಂದ ನಿನ್ನನ್ನು ಹಾಸ್ಯ ಯುಕ್ತವಾ

ನೋಡುತ್ತ ನಿನ್ನೊಡನೆ ಸಖೀತ್ವವನ್ನು ತೋರಿಸುವಳು. ಅಲ್ಲದೆ, ಶಿವ ಪತ್ನಿಯಾದ ಭವಾನಿಯು ಈ ರಾಜನ ಉಜ್ಜಯಿನೀ ನಗರದಲ್ಲಿ ವಾಸವಾಗಿದ್ದು, ಸದಾ ಶೋಭಿಸುತ್ತಿರುವಳು. ಯಾವ ಭವಾನಿಯು ಪತಿ ಪ್ರಿಯರಾದ ಯುವತಿ ಸಮೂಹಕ್ಕೆ ಶಿರೋಭೂಷಣಳಾಗಿರುವಳೋ ಆ ಭವಾನಿಯು ಸದಾ ಶಿವನ ಅರ್ಧ ದೇಹವನ್ನು ಆವರಿಸಿಕೊಂಡಿರುವಳು. ಮೃಗಾಕ್ಷೀ! ನೀನು ಆ ಭವಾನಿಯ ಪರಿಚರ್ಯೆಯಿಂದ ಅವಳ ಶಿಷ್ಯಳಾಗುವುದರಲ್ಲಿ ಸಂದೇಹವಿಲ್ಲ. ಆ ಉಜ್ಜಯಿನೀ ನಗರದಲ್ಲಿ, ದೇವನಾದ ರುದ್ರನು ಸುದೃಶರಾದ ಸುಂದರಿಯರ ಹೃದಯಗಳಲ್ಲಿ ತನ್ನ ತಲೆಯಮೇಲಿನ ಚಂದ್ರನ ಕಿರಣಗಳೆಂಬ ಅಮೃತದ ಸೇಚನೆಯಿಂದ ಮನ್ಮಥಾಂಕುರವನ್ನು ತಿರುಗಿ ಬೆಳೆಯಿಸುತ್ತಿರುವನೋ ಎಂಬಂತಿರುವನು. ಇಂತಹ ಶಿವನು ತಾನು ಮಾಡಿರುವ ಮನ್ಮಥ ದಾಹವನ್ನು ಕುರಿತು ಏನು ಹೇಳುವನೋ ನನಗೆ ತಿಳಿಯದು. ತನ್ನ ಫಾಲಾಗ್ನಿಯಿಂದ ದಹಿಸಿದ ಚಂದ್ರನನ್ನು ಶಿರಶ್ಚಂದ್ರಿಕಾನೇಕದಿಂದ ತಿರುಗಿ ಹುಟ್ಟಿಸುವುದೆಂದಾದ ಮೇಲೆ ಹಿಂದೆ ಸುಟ್ಟ ಪ್ರಯಾಸಕ್ಕೆ ಫಲವೇನೋ ತಿಳಿಯದು. ನಿತ್ಯವೂ ಪ್ರದೀಪ್ತವಾದ ಮನ್ಮಥಾವೇಗವುಳ್ಳ ಸ್ತ್ರೀಯರು ತಮಗೆ ಅನೇಕ ಅಪರಾಧಗಳನ್ನು ಮಾಡುತ್ತಿರುವ ಈ ರಾಜನಿಗೆ ಒಮ್ಮೆಯಾದರೂ ನಿಷ್ಠುರವಾದ ಮಾತುಗಳನ್ನು ನುಡಿದವರಲ್ಲ. ಇದರ ಕಾರಣವೇನೆಂದರೆ, ಶುಕ್ಲ ಪ್ರತಿಪದವು ಅನಧ್ಯಾಯ ದಿನವೆಂದು ಕರೆಯಲ್ಪಡುವುದು; ಆದರೆ ಉಜ್ಜಯಿನಿಯು ಮಹಾ ಕಾಲ ನಾಮಕನಾದ ಪರಮೇಶ್ವರನ ಆವಾಸ ಭೂಮಿಯಾಗಿ ಅವನ ಶಿರೋಭೂಷಣವಾದ ಚಂದ್ರಲೇಖೆಯಿಂದ ಅಲ್ಲಿ ಸದಾ ಶುಕ್ಲ ಪ್ರತಿಪದವೇ ನಡೆಯುತ್ತಿರುವ ಕಾರಣ, ಪರುಷಾಕ್ಷರಗಳಿಂದ ಕೂಡಿದ ಕ್ರೂರ ವಾಕ್ಯಗಳಿಗೆ ಅಲ್ಲಿ ಸದಾ ಅನಧ್ಯಯನವು.''

ಈ ಪ್ರಕಾರ ಅವಂತೀನಾಥನನ್ನು ವಾಗ್ದೇವಿಯು ವಿವರಿಸಿ ಹೇಳಿದರೂ ಭೀಮರಾಜ ಕುಮಾರಿಯಾದ ಆ ದಮಯಂತಿಯು ರಾಗಾಸಕ್ತನಾದ ಆ ರಾಯನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಅನ್ಯಾನುರಾಗದಿಂದ ವಿರಸವಾದ ದೃಷ್ಟಿಯಿಂದ ಕಾಣುವುದಕ್ಕಿಂತ ಕಾಣದಿರುವುದೇ ಉತ್ತಮವು.

ಈ ಪ್ರಕಾರ ದಮಯಂತಿಯು ಅವಂತೀನಾಥನನ್ನು ತಿರಸ್ಕರಿಸಿದ ವಿಷಯವನ್ನು ಕೆಳಗಡೆ ಶಿಬಿಕಾ ವಾಹಕರಾದ ಜನರು ಪ್ರತ್ಯಕ್ಷ ತಿಳಿಯದೆಹೋದರೂ ಆ ಅವಂತಿರಾಜನ ಭೂಷಣ ಮಣಿಗಳಲ್ಲಿ ಪ್ರತಿಬಿಂಬಿಸಿದ ದಮಯಂತಿಯ ಪ್ರತಿಬಿಂಬದಿಂದ ಈ ವಿಷಯವನ್ನು ಸ್ಪಷ್ಟವಾಗಿ ತಿಳಿದರು.

ಮುಂದೆ ಆ ವಾಹಕರು, ಪುಟವಿಟ್ಟ ಭಂಗಾರದಂತೆ ಹೊಳೆಯುವ ಬಣ್ಣದ ಕುಚಗಳುಳ್ಳವಳಾಗಿಯೂ ಮುಕ್ತಾಹಾರ ಚೂಡಗ ಮೊದಲಾದ ಆಭರಣಗಳನ್ನು ತೊಟ್ಟವಳಾಗಿಯೂ ಇರುವ ಆ ದಮಯಂತಿಯನ್ನು, ಹಿಂದೆ ರಘುವಂಶ ದೀಪಕನಾದ ಭಗೀರಥನು ಗಂಗಾ ಪ್ರವಾಹವನ್ನು ಭೂಮಿಗೆ ಒಯ್ದಂತೆ, ಬೇರೊಬ್ಬ ರಾಜನ ಬಳಿಗೆ ಒಯ್ದರು.

ಆಗ, ವಾಗ್ದೇವತೆಯಾದ ಆ ಸರಸ್ವತಿಯು, ಮತ್ಸ್ಯಲಾಂಛನನಾದ ಕಾಮನ ಚಾಪದಂತೆ ಸುಂದರವಾದ ಹುಬ್ಬುಗಳುಳ್ಳ ಆ ದಮಯಂತಿಯೊಡನೆ, "ಹೇ ಲಜ್ಜಾಲಸೆಯಾದ ದಮಯಂತಿಯೇ! ಇಕೋ ಈ ಮುಂದೆ ಕಾಣುವವನು ಗೌಡ ದೇಶದ ರಾಯನು. ಇವನೊಡನೆ ನಿನ್ನ ಕ್ರೀಡಾ ರಾಗವನ್ನು ವಹಿಸುವ ಇಷ್ಟವಿದ್ದರೆ ಇವನ ಕಡೆಗೆ ನೋಡು. ಈ ಗೌಡರಾಜನ ಕೀರ್ತಿಯಿಂದ ತುಷಾರ ಕಿರಣನಾದ ಚಂದ್ರನ ನಿರ್ಮಲವಾದ ಕಿರಣಗಳು ತೃಣೀಕೃತಗಳಾದುವು ಎಂಬ ಮಾತು ನಿಜವೆಂದು ತಿಳಿ. ಏಕೆಂದರೆ, ಆ ಚಂದ್ರನಲ್ಲಿರುವ ರಂಕುವೆಂಬ ಅಂಕ ಮೃಗವು, ತೃಣವು ಸಮೃದ್ಧಿಯಾಗಿದ್ದು ಅಮೃತೋದಕದಿಂದ ಶ್ಲಾಘ್ಯವಾದ ಆ ಚಂದ್ರನಲ್ಲಿ, ಎಂದರೆ ತೃಣೋದಕ ಸಂಪನ್ನವಾದ ಸ್ಥಳದಲ್ಲಿ ಮೃಗಗಳು ವಾಸಮಾಡುವುದು ಸಹಜವೆಂಬಂತೆ, ವಾಸವಾಗಿರುವುದಲ್ಲವೆ? ಅಲ್ಲದೆ, ಪದ್ಮರೇಖಾ ಯುಕ್ತವಾದ ಹಸ್ತಗಳುಳ್ಳ ನಿನ್ನನ್ನು ಈ ರಾಜನು ಆಲಿಂಗಿಸಲಾಗಿ ಶ್ಯಾಮ ವರ್ಣವಾದ ಮೇಘ ಪಙ್ಕ್ತಿಗಳು ಮೇರು ಪರ್ವತದ ಶಿಖರವನ್ನು ಆಲಿಂಗಿಸಿದಂತೆ ತೋರುವುದಲ್ಲದೆ, ನೀನೇ ಆತನನ್ನು ಆಲಿಂಗಿಸಿದಲ್ಲಿ ಮನ್ಮಥನ ಕೇಶಾಲಂಕಾರವಾದ ಸಂಪಗೆಯ ಮಾಲೆಯಂತೆ ನಿನ್ನ ಅಂಗವು ಅವನ ದೇಹಕಾಂತಿಯಿಂದ ಕಂಚುಕವನ್ನು ತೊಟ್ಟಂತೆ ಅಂದವಾಗಿ ತೋರುವುದರಲ್ಲಿ ಸಂದೇಹವಿಲ್ಲ. ಅದೂ ಅಲ್ಲದೆ, ರಣಭೂಮಿಯಲ್ಲಿ ಈ ರಾಜನ ಕತ್ತಿಯ ಪೆಟ್ಟಿನಿಂದ ಒಡೆದುಹೋದ ಕುಂಭಸ್ಥಳಗಳುಳ್ಳ ಶತ್ರುಗಳ ಆನೆಗಳ ತಲೆಗಳಿಂದ ಕೆದರಿಬಿದ್ದ ಮುತ್ತುಗಳು ಈ ರಾಜನ ಭುಜ ಪ್ರತಾಪದಿಂದ ಸಂತಾಪಿತಳಾದ ಶತ್ರು ರಾಜರ ರಾಜಲಕ್ಷ್ಮಿಯ ಮೈಯಿಂದ ಉದುರಿದ ಬೆವರಿನ ಹನಿಗಳಂತೆ ಕಾಣಿಸುವುದು. ಅಲ್ಲದೆ, ಈ ರಾಜನ ಆಜಾನು ಬಾಹುಗಳಿಂದುಂಟಾದ ಈತನ ಪ್ರತಾಪವು ದಿಗಂತದವರೆಗೂ ವ್ಯಾಪಿಸಿರುವುದು. ಈತನು ಸದಾ ತನ್ನ ಕೈಗಳಿಂದ ವಿಸ್ತರಿಸುತ್ತಿರುವ ಸಪ್ತ ತಂತುಗಳಿಂದಾದ ಈತನ ಯಶಃಪಟವು ಹದಿನಾಲ್ಕು ಲೋಕಗಳನ್ನು ವ್ಯಾಪಿಸಿತೆಂಬುವುದು ಅತ್ಯಾಶ್ಚರ್ಯಕರವಾದ ವಿಷಯವು."

ಈ ಪ್ರಕಾರ ವಾಗ್ದೇವಿಯು ಗೌಡ ರಾಯನನ್ನು ವರ್ಣಿಸುತ್ತಿರುವಾಗ ದಮಯಂತಿಯ ಮನಸ್ಸಿನಲ್ಲಿ ಉಂಟಾದ ಔದಾಸೀನ್ಯ ಭಾವವನ್ನು ವಾಹಕರು ಆಕೆಯ ಮುಖ ಲಕ್ಷಣದಿಂದಲೇ ತಿಳಿದು, ಆಕೆಯ ಶಿಬಿಕೆಯನ್ನು ಆ ಮುಂದಿನ ಬೇರೊಬ್ಬ ರಾಜನ ಬಳಿಗೆ ಒಯ್ದರು: ಲೋಕದಲ್ಲಿ ಬುದ್ಧಿವಂತರಿಗೆ ಬಾಯಿಂದ ಹೇಳುವ ಅಗತ್ಯವಿಲ್ಲ; ಆಕಾರದಿಂದಲೆ ಇಂಗಿತವನ್ನು ತಿಳಿದುಕೊಂಡು ಅದರಂತೆ ನಡೆಯುವರು. ಹೀಗೆ ಕುಮಾರಿಯ ಶಿವಿಗೆಯು, ಆ ರಾಯನ ಬಳಿಗೆ ಬರುತ್ತಲೇ ಸರಸ್ವತಿಯು, "ಎಲೆ ಕಮಲ ಮುಖಿಯೇ! ಈ ರಾಜನನ್ನಾದರೂ ವಿಕಸಿತವಾದ ಕಮಲವನ್ನು ಹೋಲುವ ನಿನ್ನ ವಿಶಾಲವಾದ ಕಣ್ಣುಗಳಿಂದ ಗಾಢವಾಗಿ ಆಲಿಂಗಿಸುವವಳಾಗು. ಈ ರಾಜನು ಶತ್ರು ಭೂಪಾಲರೆಂಬ ಸಮುದ್ರವನ್ನು ಮಥಿಸಲು ತಕ್ಕ ಮಂಥನ ಪರ್ವತವೆಂದು ಕೀರ್ತಿಗೊಂಡವನು. ಮಥುರಾ ನಾಥನಾದ ಈ ರಾಯನಿಗೆ ಇನ್ನೂ ಗಡ್ಡ ಮೀಸೆಗಳು ಚೆನ್ನಾಗಿ ಮೊಳೆಯಲಿಲ್ಲ. ಇದರಿಂದಲೇ, ಇವನ ಮುಖವು ಕಲಂಕದಿಂದ ರಹಿತವಾಗ

ನಾದ ಚಂದ್ರನನ್ನು ಹೋಲುವುದಿಲ್ಲವೆಂದು ಹೇಳಬೇಕು. ಸಕಲಂಕನಾದ ಚಂದ್ರನಿಗೂ ನಿಷ್ಕಲಂಕವಾದ ಈ ರಾಯನ ಮುಖಕ್ಕೂ ಎಲ್ಲಿಯ ಸಾಮ್ಯವು! ಪ್ರವಾಳಾಧರೆ! ಇಷ್ಟೇ ಸರಿಯೆಂದು ತಿಳಿಯಬೇಡ; ಇವನ ಹಸ್ತದಲ್ಲಿ ಜಗಜ್ಜಯದ ವಶೀಕರಣೌಷಧಿಯ ಗಂಟಿನಂತೆ ಜ್ಯಾ ಘಾತದಿಂದುಂಟಾದ ಕಿಣದಿಂದ ಕೆಂಪಾದ, ಮತ್ತು ಶತ್ರು ಸಮೂಹಕ್ಕೆ ಧೂಮಕೇತುವಿನಂತಿರುವ ಕಂಕಣ ಮಾಣಿಕ್ಯವನ್ನು ನೋಡು. ಈ ರಾಜನ ಭುಜಗಳೆಂಬ ಅರಣಿಯಲ್ಲಿ ಉಂಟಾದ ವಿಕ್ರಮಾಗ್ನಿಯ ಗುರುತೆಂಬಂತೆ ಇವನ ಭುಜಗಳಲ್ಲಿ ಜ್ಯಾಘಾತ ರೇಖೆಯೆಂಬ ಧೂಮ ರೇಖೆಯು ವಿರಾಜಿಸುತ್ತಿರುವುದು ನೋಡು. ಆ ಧೂಮ ರೇಖೆಯು ಶತ್ರು ಸಮೂಹಗಳೆಂಬ ಮಶಕಗಳ ನಾಶಕ್ಕಾಗಿಯೂ ಶತ್ರು ಸ್ತ್ರೀಯರ ನಯನಾರವಿಂದಗಳಿಂದ ಅಶ್ರು ವರ್ಷವನ್ನು ಸುರಿಸುವುದಕ್ಕಾಗಿಯೂ ಉಂಟಾಯಿತೆಂದು ತಿಳಿ. ಈ ರಾಯನ ಕೈ ಹಿಡಿದಲ್ಲಿ ಮಧುರಾ ನಗರದ ಸ್ತ್ರೀಯರು ಜಲಕ್ರೀಡೆಗಳಲ್ಲಿ ತೊಳೆದ ಕಸ್ತೂರಿಯಿಂದ ಕಪ್ಪಾದ ಮಧ್ಯ ಪ್ರದೇಶವುಳ್ಳುದಾಗಿ, ಕಾಳೀಯ ಹೃದಯವೆಂಬ ನಾಭಿಯುಳ್ಳುದಾಗಿ, ಭೂದೇವಿಯ ಬಳೆಯಂತೆ ತೋರುತ್ತಿರುವ ಯಮುನಾ ಪ್ರವಾಹವನ್ನು ಕಂಡು ಆನಂದಿಸಬಹುದಲ್ಲವೇ? ಆ ವೃಂದಾವನದ ಗೋವರ್ಧನ ಪರ್ವತದಲ್ಲಿ ಕಲಾಪಿಗಳ ಸಂಚಾರದಿಂದ ಭುಜಂಗ ಮಂಡಲಗಳೆಲ್ಲ ಹೊರಟುಹೋಗಿರುವುದರಿಂದಲೂ, ಸಾಂದ್ರವಾದ ವೃಕ್ಷ ವಿಶೇಷಗಳಿಂದ ಆತಪ ರಹಿತವಾಗಿರುವುದರಿಂದಲೂ ಅದು ಸಂಚಾರ ಯೋಗ್ಯವಾಗಿರುವುದು. ಈ ವೃಂದಾವನದಲ್ಲಿ ಪೂರ್ವ ಕಾಲದಲ್ಲಿ ಗೋಪಾಲ ಮೂರ್ತಿಯಾದ ಶ್ರೀಕೃಷ್ಣನು ವಿಹರಿಸಿರುವನು. ಆ ಸ್ಥಳದಲ್ಲಿ ನೀನೂ ಕೂಡ ಈ ರಾಜನೊಡನೆ ಸೇರಿ ಸಂತೋಷದಿಂದ ವನ ವಿಹಾರ ಕ್ರೀಡೆಯನ್ನನುಭವಿಸುವವಳಾಗು. ಅಲ್ಲದೆ, ನಿನ್ನ ಮುಖದಿಂದ ಅಪಹರಿಸಲ್ಪಟ್ಟ ಕಾಂತಿ ಸರ್ವಸ್ವವುಳ್ಳವನಾದ ಕಾರಣ ಪಾಂಡುಚ್ಛಾಯವನ್ನು ಅನುಕರಿಸುತ್ತಿರುವ ಚಂದ್ರನನ್ನು ಹೋಲುವ, ಆನೆಯ ದಂತಗಳಿಂದ ಮಾಡಲ್ಪಟ್ಟ, ಕಂಕಣವು ವೃಂದಾವನದ ನಡುವಣ ವಲ್ಲಿಗಳ ಪಲ್ಲವವನ್ನು ಕೊಯ್ಯುತ್ತಿರುವ ವೇಳೆ, ಇದು ಹಸ್ತವು, ಇದು ಪಲ್ಲವವು ಎಂದು ಭೇದವನ್ನು ತಿಳಿಯುವುದಕ್ಕೆ ಸಹಾಯವಾಗುವುದು. ಅತಿ ಶ್ರಾಂತನಾದ ಪಥಿಕನು ಕಂಟಕ ಶ್ಲಿಷ್ಟವಾದ ಪ್ರದೇಶದಲ್ಲಿ ಪಂಕಿಲವಾಗಿದ್ದ ನೀರನ್ನು ಕೂಡ ಹೇಗೆ ಹೊಟ್ಟೆ ತುಂಬ ಕುಡಿಯುವನೋ ಹಾಗೆಯೇ, ಹೇ ಸುಂದರಿ! ಆ ವೃಂದಾವನದಲ್ಲಿ ಸುರತಾಂತ್ಯದಲ್ಲುಂಟಾದ ಆನಂದದಿಂದ ರೋಮಾಂಚಗೊಂಡ ನಿನ್ನ ಸ್ತನಯುಗಳದಲ್ಲಿ ಮೆಲ್ಲ ಮೆಲ್ಲಗೆ ಸಂಚರಿಸುತ್ತ ತೃಷಿತನಾದ ಪಥಿಕನಂತಿರುವ ವಾಯುವು ಕಸ್ತೂರಿಯಿಂದ ಪಂಕಿಲವಾದ ಸ್ವೇದೋದಕವನ್ನು ಸಂಕೋಚವಿಲ್ಲದೆ ಕುಡಿಯುವನು. ಅಲ್ಲದೆ, ದೇವತೆಗಳ ಪೂಜಾ ವಿಧಿಯಾದ ಯಜ್ಞಾದಿ ಕರ್ಮಗಳಲ್ಲಿ ಪ್ರತಿಗ್ರಹೋಪಯುಕ್ತಗಳಾದ ವಿದ್ವಾಂಸರ ಹಸ್ತಗಳು ಕಮಲದಂತೆ ನಿರ್ಮಲವಾದ ಕಾಂತಿ ಯುಕ್ತಗಳಾಗಿದ್ದು, ಶ್ರೀಮಂತನಾದ ಈ ರಾಜನು ಪ್ರತಿ ದಿನವೂ ಕೊಡುತ್ತಿರುವ ಸುವರ್ಣಗಳಿಂದ ಆ ಕಮಲದೊಳಗಿನ ಕರ್ಣಿಕಾ ಸಂಪತ್ತಿಯನ್ನು ಪಡೆಯುತ್ತಿರುವುವು. ಲೋಕೈಕ ವೀರನಾದ ಈ ಮಧುರಾ ನಾಥನು ಸದಾ ವೈರಿ ಸಂಪತ್ತಿನ ಕಡೆಗೆ ಲಕ್ಷ್ಯವಿಟ್ಟು ಬಾಹು ಯುದ್ಧವನ್ನು ಮಾಡುತ್ತಿರುವನು. ಆ ಶತ್ರುಲಕ್ಷ್ಮಿಯ

ಆಲಿಂಗನವು ದೊರೆಯದೆ ಹೋದಲ್ಲಿ ಇವನಿಗೆ ಸ್ವಲ್ಪವೂ ತೃಪ್ತಿಯಿರಲಾರದು. ಅಂತಹ ಸಮರ್ಥನಾದ ಈ ರಾಜನು ನಿನ್ನನ್ನು ಹೊಂದಿ ಮದನನಿಂದ ಎಸೆಯಲ್ಪಡತಕ್ಕ ಇಷು ಕುಸುಮಗಳಿಂದ ಇಳಿಯುವ ಮಕರಂದವನ್ನು ಕುಡಿದಂತೆ ತೃಪ್ತಿಗೊಳ್ಳುವವನಾಗಲಿ.''

ಈ ಪ್ರಕಾರ ಸರಸ್ವತಿಯು ಮಧುರಾ ನಾಥನ ವರ್ಣನೆಯನ್ನು ಮಾಡಿದರೂ ದಮಯಂತಿಯ ಮನಸ್ಸಿಗೆ ಅದು ಸೇರದೆ, ಆ ಕಡೆಯಿಂದ ತನ್ನ ದೃಷ್ಟಿಯನ್ನು ತಿರುಗಿಸಿ ಮುಂದಿನ ದಾರಿಯನ್ನು ನೋಡಲಾಗಿ, ಶಿಬಿಕಾ ವಾಹಕರಾದ ಜನರು ಈ ಅಭಿಪ್ರಾಯವನ್ನರಿತು ಆ ವಾಹನವನ್ನು ಬೇರೆ ಕಡೆಗೆ ಒಯ್ಯುವುದರಿಂದಲೇ ತಮ್ಮ ಜಾಣತನವನ್ನು ವ್ಯಕ್ತಪಡಿಸಿದರು.

ಆಗ ಭಾರತಿಯು, ಭಯಗೊಂಡ ಹೆಣ್ಣು ಜಿಂಕೆಯ ನೇತ್ರದಂತೆ ಚಂಚಲವಾದ ನೇತ್ರವುಳ್ಳ ದಮಯಂತಿಯನ್ನು ಕಂಡು, ''ಹೇ! ಖಂಜನಾಕ್ಷಿ! ಈ ಮುಂದೆ ಕುಳಿತಿರುವವನು ಕಾಶೀರಾಜನು ಇವನ ಸೌಂದರ್ಯವನ್ನಾದರೂ ಕಂಡು ನಿನ್ನ ಕಣ್ಣುಗಳಿಗೆ ಸುಖವನ್ನು ಸಂಪಾದಿಸಿಕೊ. ಸಂಸಾರಾರ್ಣವದ ತಾರಣಕ್ಕೆ ಕಾರಣವಾದ ಧರ್ಮಾರ್ಥವೆಂಬ ನಾವೆಗೆ ಕರ್ಣಧಾರನಂತಿರುವ ಪರಮೇಶ್ವರನ ಕ್ಷೇತ್ರವಾದ ಆ ಕಾಶಿಯು ಈ ರಾಜನ ಕುಲಾಗತವಾದ ರಾಜಧಾನಿಯು. ಮಹಾ ಪಾಪವನ್ನು ಮಾಡಿದ ಘೋರ ಪಾತಕಿಯಾದರೂ ಆ ಕಾಶಿಯನ್ನು ಸೇರಿದ ಮಾತ್ರಕ್ಕೇ ಬಹು ಕಾಲದಿಂದ ಸಂಚಿತವಾದ ಪಾಪನೆಲ್ಲ ಪರಿಹಾರವಾಗಿ ಮುಕ್ತಿಯನ್ನು ಪಡೆಯುವನು. ಪ್ರಾಚೀನ ಕಾಲದಲ್ಲಿ ರುದ್ರನು, ಮುಂದೆ ಬ್ರಹ್ಮನು ನಿರ್ಮಿಸತಕ್ಕ ಪ್ರಾಣಿ ಸಮೂಹಗಳ ದುಃಖವನ್ನು ಮನಸ್ಸಿಗೆ ತಂದು ದಯೆಗೊಂಡು ಕಣ್ಣೀರಿಟ್ಟನು. ಈ ರೋದನದ ನಿಮಿತ್ತವಾಗಿಯೇ ಶಿವನಿಗೆ ರುದ್ರನೆಂಬ ಹೆಸರಾಯಿತು. ಈ ಶಿವನ ರೋದನವೆನ್ನುವುದು ನೆವಮಾತ್ರವಲ್ಲದೆ ನಿಜವಲ್ಲ. ಏಕೆಂದರೆ, ಪ್ರಾಣಿಗಳ ಸಂಸಾರ ಬಂಧವನ್ನು ತಪ್ಪಿಸಿ ಮೋಕ್ಷವನ್ನುಂಟುಮಾಡತಕ್ಕ ಈ ಕಾಶೀ ಕ್ಷೇತ್ರವನ್ನು ನಿರ್ಮಿಸಿದ ಮೇಲೆ ಆತನಿಗೆ ಅಳುವ ಕಾರಣವಾದರೂ ಏನು? ಆದರೆ, ದಯಾಳುಗಳ ಸ್ವಭಾವವೇ ಹೀಗೆ: ಅವರು ಪರ ದುಃಖವನ್ನು ಕಂಡಾಗ ತಾವೂ ದುಃಖಗೊಳ್ಳುವರು. ಕರುಣಾಳುವಾದ ಪರಮೇಶ್ವರನು ಕೃಪೆಯಿಂದ ರೋದಿಸಿ ಅದಕ್ಕಾಗಿಯೇ ಕಾಶಿಯನ್ನು ನಿರ್ಮಿಸಿದನು. ಎಲೆ ದಮಯಂತಿ! ಭವಾಬ್ಧಿಯ ಜಲಜಂತುಗಳಂತಿರುವ ಪ್ರಾಣಿಗಳೆಲ್ಲ ಪರಮೇಶ್ವರನ ನಿವಾಸ ಭೂಮಿಯಾದ ಆ ನಗರಿಯನ್ನು ಸೇರಿ ಶಿವ ಸಾಯುಜ್ಯವನ್ನು ಪಡೆಯುತ್ತಿರುವುವು. ಇತರ ಕಡೆಗಳಲ್ಲಿ ಸಂನ್ಯಾಸದಿಂದ ಮೋಕ್ಷ ಸಾಧನವಾಗುತ್ತಿದ್ದರೆ, ಆ ಕಾಶಿಯಲ್ಲಿ ವಿಷಯೋಪಭೋಗಗಳಿಂದಲೇ ಮೋಕ್ಷ ಪ್ರಾಪ್ತವಾಗುವುದು. ಇದಲ್ಲದೆ, ಆ ಕಾಶಿಯಲ್ಲಿ ವಾಸ ಮಾಡುವ ಸ್ತ್ರೀ ಪುರುಷರು ಇಹದಲ್ಲಿ ವಿಷಯೋಪಭೋಗಗಳನ್ನನುಭವಿಸುತ್ತ, ಅಂತ್ಯದಲ್ಲಿ ಗೌರೀ ಗಿರೀಶರ ಐಕ್ಯದಿಂದ ಸಾಯುಜ್ಯ ಸುಖವನ್ನನುಭವಿಸುವರು. ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವಿಲ್ಲವೆಂತಾದರೆ ನಾನು ಪ್ರಮಾಣಗೊಳ್ಳುವೆನು. ನಿನ್ನಲ್ಲಿರುವ ಪ್ರೇಮಾತಿಶಯದಿಂದ ಇದನ್ನು ವಿವರಿಸಿದೆನು. ಮೇಘ ವಾಹನನಾದ ಇಂದ್ರನು ಸ್ವರ್ಗಾಧಿಪತಿಯಾಗಿದ್ದರೂ ಭೂಸ್ವರ್ಗವೆಂದು ಪ್ರಸಿದ್ಧವಾದ ಆ ಕಾಶಿಗೆ

ಸ್ವರ್ಗವು ಸರಿಯಲ್ಲ. ಅಂತೆಯೇ, ಭೂಸ್ವರ್ಗಾಧಿಪತಿಯಾದ ಈ ರಾಜನು ಇಂದ್ರನಿಗಿಂತ ಮೇಲಾದವನು. ಭೈಮಿ! ನೀನು ಬಹಳ ಜ್ಞಾನಿಯಾದವಳು. ಈ ರಾಜನ ಕೈಹಿಡಿದು ಕಾಶಿಯಲ್ಲಿ ಸುಕೃತಗಳನ್ನು ಸಂಪಾದಿಸು. ಇನ್ನು ಹಲವು ಮಾತುಗಳಿಂದ ಉಪಯೋಗವಿಲ್ಲ. ಆ ಕಾಶಿಯಲ್ಲಿ ಯಾರು ಮೃತ್ಯು ದರ್ಶನವನ್ನು ಮಾಡುವರೋ ಅವರು ಸದ್ಯದಲ್ಲಿಯೇ ಮೃತ್ಯುಂಜಯತ್ವವನ್ನು ಪಡೆಯುವರು. ಇನ್ನೇನಾಗಬೇಕು! ಅಲ್ಲಿ ಸದಾ ಅರ್ಥಿಗಳಿಗಾಗಿ ಮೋಕ್ಷ ಸತ್ರವೇ ತೆರೆದಿರುವುದು. ಮೃಗಾಕ್ಷಿ! ನೀನು ಈ ಕಾಶೀರಾಜನ ಮೂರ್ತಿಮತ್ತಾದ ರತಿದೇವಿಯಾಗು; ಈ ರಾಜನು ನಿನಗೆ ಮೂರ್ತಿಮತ್ತಾದ ಕುಸುಮಾಯುಧನಾಗಲಿ. ಹೀಗಾದರೆ, ಪೂರ್ವದಲ್ಲಿ ಶಿವನೊಂದಿಗೆ ದ್ವೇಷವನ್ನು ಕಟ್ಟಿಕೊಂಡ ರತಿ ಮನ್ಮಥರು ಈಗ ಶಿವಾರಾಧನೆಗಾಗಿಯೇ ಕಾಶಿಯಲ್ಲಿ ಅವತರಿಸಿದಂತೆ ತೋರುವುದು. ನೂರಾರು ಕಾಮ ಶಾಸ್ತ್ರಗಳನ್ನರಿತಿರುವ ಈ ರಾಜನು, ಏಕಾಂತದ ವೇಳೆ ಕೋಪಗೊಂಡ ಪಾರ್ವತಿಯ ಚರಣ ಕುಂಕುಮ ಪಂಕದ ಕೆಂಬಣ್ಣದಿಂದ ಮಿಶ್ರಿತವಾದ, ಶಿವನ ಶಿರೋಭೂಷವಾದ ಚಂದ್ರಕಲೆಯನ್ನು ಹೋಲುವ ನಖ ಪದಗಳಿಂದ ನಿನ್ನ ಸ್ತನಗಳನ್ನು ಪೂಜಿಸುವವನಾಗಲಿ. ಧನುಸ್ಸಿನ ಮೂಲಕ ಸಂಪಾದಿಸಿದ ಕೀರ್ತಿಯುಳ್ಳವನಾಗಿಯೂ ಯುದ್ಧದಲ್ಲಿ ತನ್ನನ್ನು ಇದಿರಿಸಿದ ಶತ್ರುಗಳ ಕಂಠ ನಾಳಗಳನ್ನು ಕತ್ತರಿಸತಕ್ಕ ಪ್ರತಾಪಶಾಲಿಯಾಗಿಯೂ ಇರುವ ಈ ರಾಜನು ನಿನ್ನನ್ನು ಆಲಿಂಗಿಸಿ ನಿನ್ನ ಅನಂಗ ತಾಪವನ್ನು ಪರಿಹರಿಸುವವನಾಗಲಿ. ಈ ರಾಜನ ಹೃದಯವು ನಿನ್ನ ವಿರಹದಿಂದ ಒಡೆಯುದೆಯೂ ಶತ್ರುಗಳ ಬಾಣಗಳಿಗೆ ಮಣಿಯದೆಯೂ ವಜ್ರ ಸಾರವಾಗಿರುವುದು. ಅಂತಹ ವಜ್ರ ಸಾರವಾದ ಹೃದಯವೆಂಬ ಮೂಲದಿಂದ ಹೊರಟ ಅಂಕುರಗಳಂತಿರುವ ಈ ರಾಜನ ಭುಜಗಳ ಪ್ರತಾಪಾಗ್ನಿಯು ಶತ್ರು ಸ್ತ್ರೀಯರ ಕಣ್ಣೀರಿನಿಂದಲೂ ಶಮನವಾಗತಕ್ಕುದಲ್ಲ. ಈ ಪ್ರಪಂಚದಲ್ಲಿ ಪಾತ್ರಾಪಾತ್ರ ವಿಚಾರವಿಲ್ಲದೆ ಕಾಗೆಗೂ ಕೋಗಿಲೆಗೂ ಒಂದೇ ವಿಧವಾಗಿ ಫಲ ದಾನವನ್ನು ಮಾಡುತ್ತಿರುವ ವೃಕ್ಷಗಳು ಲಕ್ಷ ಸಂಖ್ಯಾಕವಾಗಿ ಇರುವುದಿಲ್ಲವೇ? ಆದರೆ, ಅಮೃತೈಕ ವೃತ್ತಿಗಳಾದ ವಿಬುಧರನ್ನು ಮಾತ್ರ ಫಲ ಸಂಪ್ರದಾನಗಳಿಂದ ತೃಪ್ತಿಪಡಿಸತಕ್ಕ ಕಲ್ಪವೃಕ್ಷವು ಒಂದೇ ಅಲ್ಲವೆ? ಅದರಂತೆಯೇ, ಪಾತ್ರಾಪಾತ್ರ ವಿಚಾರವನ್ನರಿತ ಈ ರಾಜನು ಸ್ತೋತ್ರಾರ್ಹನು. ಅಕಸ್ಮಾತ್, ಯಾವ ರಾಜನಾದರೂ ಈ ಕಾಶೀಶ್ವರನಿಗೆ ಕಪ್ಪವನ್ನೀಯಲು ತಪ್ಪಿದಲ್ಲಿ ತತ್‌ಕ್ಷಣವೇ ಈತನ ಕೃಪಾಣವು ಅವನ ಕರವನ್ನು ಸೇರುವುದು. ಈತನ ಲಕ್ಷಾವಧಿ ಕುದುರೆಗಳು ಸಂಚರಿಸುತ್ತಿರುವ ವೇಳೆ ಭೂಮಿಗೆ ಅವುಗಳ ಖುರಾಗ್ರ ಸ್ಪರ್ಶವಾಗುವುದು ಅಗೋಚರವಾಗಿ, ಅವುಗಳ ನಭೋ ಗತಿಯು ಮಾತ್ರ ಸರ್ವ ಭೂ ಗೋಚರವಾಗುತ್ತಿರುವ ಕಾರಣ, ಸಹಸ್ರಾಕ್ಷನಾದ ಇಂದ್ರನ ಉಚ್ಚೈಃಶ್ರವವೆಂಬ ಕುದುರೆಯ ಗರ್ವವು ಲೋಪವಾಯಿತು. ಅದೂ ಅಲ್ಲದೆ, ಸಹಸ್ರಾಕ್ಷನ ಬಳಿಯಲ್ಲಿ ಒಂದೇ ಉಚ್ಚೈಃಶ್ರವಸ್ಸಿದ್ದರೆ ಈ ರಾಜನ ಬಳಿಯಲ್ಲಿ ಖೇಚರಗಳಾದ ಹಲವು ಅಶ್ವಗಳಿರುವುವು.''

ಈ ಪ್ರಕಾರ ವಾಗ್ದೇವಿಯು ಕಾಶೀರಾಜನನ್ನು ದಮಯಂತಿಯ ಮುಂದೆ ಹೊಗಳುತ್ತಿರುವ ವೇಳೆ ಆಕೆಯು ಅಲ್ಲಿ ನೆರೆದಿದ್ದ ಜನಗಳ ಶೋಭೆಯನ್ನು ನೋಡುವ

ನೆವದಿಂದ ಆ ರಾಜನನ್ನು ತಿರಸ್ಕರಿಸಿದಳು. ಅಭಿಮಾನಿಯಾದ ಆ ರಾಜನು ಗುಣವತಿಯಾದ ಈ ದಮಯಂತಿಯಿಂದ ರಾಜಸಭೆಯಲ್ಲಿ ತಿರಸ್ಕರಿಸಲ್ಪಟ್ಟ ಕಾರಣ ಆ ಅಪಕೀರ್ತಿಯಿಂದ ಮುಖ ಬಾಡಿ ಬೇಸರಗೊಂಡನು. ಮುಂದೆ ಆ ದಮಯಂತಿಯು, ವೇದಾಂತ ವಾಕ್ಯವು ಪೃಥಿವೀ ವಿಕಾರಗಳಾದ ಪದಾರ್ಥಗಳನ್ನೆಲ್ಲ ಬಿಟ್ಟು ಪರಮಾತ್ಮನೊಬ್ಬನನ್ನೇ ಹುಡುಕುವಂತೆ, ಅಪರಿಮಿತರೂ ಭಾಗ್ಯವಂತರೂ ಆದ ಇಂದ್ರಾದಿ ದೇವತೆಗಳನ್ನೂ ಪಾರ್ಥಿವರಾದ ರಾಜರ ಸಮೂಹಗಳನ್ನೂ ಬಿಟ್ಟು ಪುರುಷ ಶ್ರೇಷ್ಠನಾದ ಆ ಅದ್ವಿತೀಯ ಪುರುಷನೊಬ್ಬನನ್ನು ಹುಡುಕುತ್ತ ಮುಂದುವರಿದಳು.

[ಮುಂದುವರಿಯುವುದು]

---

# ಜೈಮಿನಿ ಭಾರತ (ಅಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಹನ್ನೊಂದನೆಯ ಅಧ್ಯಾಯ

ಬಳಿಕ ಭೀಮನು ಕೃಷ್ಣನನ್ನು ಕುರಿತು, "ಎಲೈ ಬುದ್ಧಿಶಾಲಿಯಾದ ಶ್ರೀಕೃಷ್ಣನೇ! ನಿನಗೆ ಬಹಳ ಇಷ್ಟರಾದ ಈ ಸ್ತ್ರೀಯರೆಲ್ಲರೂ ಬಿಸಿಲಿನಿಂದ ಬಾಡಿದ ಮುಖವುಳ್ಳವರಾಗಿ ಸಂತಾಪಪಡುತ್ತಿರುವರು, ನೋಡು; ಇವರ ಬಳಲಿಕೆಯನ್ನು ಹೋಗಲಾಡಿಸು" ಎನ್ನಲು, ಶ್ರೀಕೃಷ್ಣನು ತನ್ನ ಪಟ್ಟಣಕ್ಕೆ ಸಮೀಪದಲ್ಲಿಯೇ ಒಂದೆಡೆಯಲ್ಲಿ ನಿಂತು ಎಲ್ಲರಿಗೂ ವಿಶ್ರಾಂತಿಯುಂಟಾಗುವಂತೆ ಮಾಡಿದನು. ಆಗ ಭೀಮಸೇನನು ಕೃಷ್ಣನನ್ನು ನೋಡಿ ವಿನೋದಾರ್ಥವಾಗಿ, "ಎಲೈ ಮಹಾಬಾಹುವಾದ ಕೃಷ್ಣನೇ! ಈ ಸ್ತ್ರೀಯರೆಲ್ಲರಿಗೂ ಬಹುಶಃ ನೀನೇ ಪತಿಯಾಗಿರುವಂತೆ ತೋರುವುದು. ಈ ಹೂವಾಡಿಗಿತ್ತಿಯೂ ಗಾಣಿಗಿತ್ತಿಯೂ ನಾಪಿತೆಯೂ ತಲೆಹಿಡುಕಿಯೂ ನಿನ್ನನ್ನು ತಮ್ಮ ಪತಿಗಿಂತಲೂ ಹೆಚ್ಚಾಗಿ ಭಾವಿಸುತ್ತಿರುವರು" ಎಂದನು. ಅದನ್ನು ಕೇಳಿ ಶ್ರೀಕೃಷ್ಣನು, "ಎಲೈ ವೃಕೋದರನೇ! ನಿನಗೆ ಅಂತಹ ಪೌರುಷ ವಿದ್ದರೆ ನೀನೇ ಸರ್ವದಾ ಅವರನ್ನು ಸ್ವೀಕರಿಸು" ಎಂದು ಹೇಳಿ, "ಎಲೈ ಮುದುಕಿಯಾದ ಕುಟ್ಟನಿಯೇ! ನೀನು ಸ್ಥೂಲೋದರನಾದ ಈ ಭೀಮನನ್ನು ಪತಿಯನ್ನಾಗಿ ವರಿಸು, ಬೇಗನೆ ಹೋಗು" ಎಂದನು. ಅದಕ್ಕೆ ಭೀಮನು, "ಇವಳು ನಮ್ಮ ಮನೆಗೆ ಹೋದರೆ ರಾಕ್ಷಸಿಯಾದ ನನ್ನ ಹೆಂಡತಿಯು ಇವಳನ್ನು ತಿಂದುಹಾಕುವಳು. ಆದಕಾರಣ, ಹಲ್ಲಿಲ್ಲದ ಈ ಮುದುಕಿಯರೆಲ್ಲರೂ ಕೃಷ್ಣನನ್ನೇ ಆಶ್ರಯಿಸಿಕೊಂಡಿರಲಿ. ಕೃಷ್ಣನಲ್ಲಿ ಅನುರಾಗವುಳ್ಳವರಿಗೆ ಎಲ್ಲಿಯೂ ಸುಖವೇ ಅಲ್ಲವೆ! ರುಕ್ಮಿಣಿ ಮೊದಲಾದ ಗುಣವತಿಯರಾದ ನಿನ್ನ ಹೆಂಡತಿಯರು ಯಾವಾಗಲೂ ಕೃಷ್ಣನಲ್ಲಿಯೇ ಏಕಾಗ್ರಚಿತ್ತವುಳ್ಳವರು; ಆದಕಾರಣ, ಇವರು ಈರ್ಷ್ಯೆಪಡತಕ್ಕವರಲ್ಲ. ಹೀಗಿರುವುದನ್ನು ನೋಡಿ ಶ್ರೀಕೃಷ್ಣನು ಸಂತೋಷಪಡಲಿ. ಎಲೈ ಕೃಷ್ಣನೇ! ಜಾಂಬವತಿಯು ಅಸೂಯೆಯಿಲ್ಲದೆ ನಿನ್ನಲ್ಲಿ ನಡೆದುಕೊಳ್ಳುತ್ತಿರುವುದರಿಂದ ನಿನ್ನ ಸವತಿಯರು ಪರಸ್ಪರ ಕ್ರೋಧವಿಲ್ಲದೆ ಅನ್ಯೋನ್ಯ ಪ್ರೀತಿಯುಳ್ಳವರಾಗಿರುವರು. ಯಾರು ನಿನ್ನನ್ನು ಆಶ್ರಯಿಸಿಕೊಂಡು ಸುಖದಿಂದಿರುವರೋ ಅಂತಹವರು ಪುನಃ ಭೂಮಿಯಲ್ಲಿ ನಿರ್ಗತಿಕರಾಗಿ ಹೇಗೆ ಹುಟ್ಟುವರು?" ಎಂದನು. ಅದಕ್ಕೆ ಕೃಷ್ಣನು, "ಸ್ಥಾನಭ್ರಷ್ಟರಾದವರಿಗೆ ಭೀಮನೇ ಗೊತ್ತುಗಾರನು; ಅವನನ್ನು ನನ್ನ ಬಳಿಗೆ ಕರೆದುಕೊಂಡು ಬಾ" ಎಂದು ಆ ತಲೆಹಿಡುಕಿಗೆ ಹೇಳಿ ಮುಂದಕ್ಕೆ ಹೊರಡಲು, ಅಷ್ಟರಲ್ಲಿ

* ಕ. ಸಾ. ಪರಿಷತ್ಪತ್ರಿಕೆಯ ಪ್ರಮೋದ ಸಂವತ್ಸರದ (೧೫ನೆಯ ಸಂಪುಟದ) ೧ನೆಯ ಸಂಚಿಕೆಯ ೮೮ನೆಯ ಪುಟದಿಂದ ಮುಂದುವರಿದುದು.

ಬಾಣಂತಿಯೊಬ್ಬಳು ಒಂಟೆಯ ಮೇಲೆ ಕುಳಿತು ಹೋಗುತ್ತಿರುವಾಗ, ಅದು ಓಡುತ್ತ ಅವಳನ್ನು ನೆಲಕ್ಕೆ ಕೆಡಹಿತು. ಆಗ ಅವಳು, "ಎಲೈ ಶ್ರೀಕೃಷ್ಣನೇ! ವಸುದೇವಾದಿ ಈ ಯಾದವರೆಲ್ಲರೂ ನಿಮ್ಮವರಾಗಿರುವರು; ಅವರಲ್ಲಿ ನಾನೊಬ್ಬಳು ಬಾಣಂತಿ. ನಿಮ್ಮ ತಾಯಿಯು ನನ್ನನ್ನು ವಂಚಿಸಿದಳು; ನನ್ನನ್ನು ರಕ್ಷಿಸು. ದೇವಕಿಯು ನಿನ್ನನ್ನು ಪ್ರಸವಿಸಿದಳು; ನಿನ್ನಿಂದ ನೀನೇ ನಿನ್ನನ್ನು ಸೃಜಿಸುತ್ತೀಯೆ; ಈ ಯಾದವರು ಹಾಗೆ ಸೃಷ್ಟಿಮಾಡಲಾರರು; ಅದರಿಂದ ನಾನು ಜೀವಿಸಿದ್ದೇನೆ" ಎಂದು ಹೇಳಲು, ಕೃಷ್ಣನು ಅವಳ ಮಾತನ್ನು ಕೇಳಿ ಭೀಮನನ್ನು ಕುರಿತು, "ಎಲೈ ಭೀಮನೇ! ನೀನು ಇವಳನ್ನು ಎಬ್ಬಿಸು, ವಸುದೇವನು ಬರುತ್ತಿರುವನು ನೋಡು" ಎನ್ನಲು, ಬಂದ ವಸುದೇವನನ್ನು ಅವನು ನೋಡಿ ಅವಳನ್ನು ಎಬ್ಬಿಸಿದನು. ಭೀಮನೂ ಕೃಷ್ಣನೂ ವಸುದೇವನಿಗೆ ನಮಸ್ಕರಿಸಿ ಅಂಜಲಿ ಬದ್ಧರಾಗಿ, "ನಿನ್ನ ಅಪ್ಪಣೆಯಾದರೆ ಧರ್ಮರಾಜನ ಬಳಿಗೆ ಹೊರಡುವೆವು" ಎಂದರು.

ವಸುದೇವನು ಆಗಬಹುದೆಂದು ಹೇಳಿ ತಾನು ಹಿಂದಕ್ಕೆ ಹೊರಟು ಕೃಷ್ಣನನ್ನು ಕುರಿತು, "ಎಲೈ ಕೃಷ್ಣನೇ! ನನ್ನ ಆಜ್ಞಾನುಸಾರವಾಗಿ ನೀನು ಹಸ್ತಿನಪುರಕ್ಕೆ ಹೋಗಿಬಾ. ಅಲ್ಲಿ ವೇದ ಶಾಸ್ತ್ರಾಧ್ಯಯನ ಸಂಪನ್ನರಾಗಿಯೂ ಪರನಿಂದೆಗೆ ವಿಮುಖರಾಗಿಯೂ ಸದಾಚಾರ ಸಂಪನ್ನರಾಗಿಯೂ ಇರುವ ಬ್ರಾಹ್ಮಣರಿಗೆ ದಾನ ಮಾಡು. ಅವರು ಮಣ್ಣಿನಲ್ಲಿಯೂ ಚಿನ್ನದಲ್ಲಿಯೂ ಒಂದೇ ಭಾವನೆಯನ್ನಿಟ್ಟಿರುವ ಸಮ ದೃಷ್ಟಿಯುಳ್ಳವರು. ಆದಕಾರಣ ಅಂತಹ ಬ್ರಾಹ್ಮಣರನ್ನೇ ನೀನು ನಿನ್ನೊಡನೆ ಅಲ್ಲಿಗೆ ಕರೆದುಕೊಂಡು ಹೋಗು. ಕೊಳೆಬಟ್ಟೆಯುಳ್ಳವನಿಗೂ ಆಚಾರ ಹೀನನಿಗೂ ದಾನ ಮಾಡಬಾರದು. ಧರ್ಮರಾಜನು ಸತ್ಪಾತ್ರವನ್ನೇ ಪೂಜಿಸುವನಾದುದರಿಂದ ನೀನೂ ಹಾಗೆಯೇ ಮಾಡು. ದಾನ ಧರ್ಮಪರರಾಗಿಯೂ ಯುದ್ಧದಲ್ಲಿ ಕುಶಲರಾಗಿಯೂ ಶೂರರಾಗಿಯೂ ಕ್ಷತ್ರ ಧರ್ಮ ಪರಾಯಣರಾಗಿಯೂ ಇರುವ ಕ್ಷತ್ರಿಯರನ್ನು ನಿನ್ನೊಡನೆ ಕರೆದುಕೊಂಡು ಹೋಗು. ದುರಹಂಕಾರವುಳ್ಳವರು, ಹೆಂಗುಸಿಗೆ ಸೋಲುವವರು, ಕೆಟ್ಟ ಸಹವಾಸ ಮಾಡುವವರು, ಪರ ನಿಂದೆಯನ್ನೂ ಆತ್ಮ ಸ್ತುತಿಯನ್ನೂ ಮಾಡಿಕೊಳ್ಳುವವರು, ಪರರನ್ನು ದುಃಖಪಡಿಸುವವರು, ಸರ್ವದಾ ಕಾಮ ಪೀಡಿತರಾದವರು, ಮಾವನ, ಅಥವಾ ಅಳಿಯನ ಹಣದಿಂದ ಜೀವನ ಮಾಡುವವರು, ಮಕ್ಕಳಿಲ್ಲದವನ ಆಸ್ತಿಯನ್ನು ಬಲಾತ್ಕಾರವಾಗಿ ಅಪಹರಿಸುವವರು, ಜೂಜುಗಾರರು, ಹಿಂದು ಮುಂದು ನೋಡದೆ ಕೆಲಸ ಮಾಡುವವರು, ನಾಸ್ತಿಕರು, ಗರ್ಭಿಣೀ ಸಂಗ ಮಾಡುವವರು, ಋತು ಕಾಲದಲ್ಲಿ ಪತ್ನಿಯನ್ನು ಮತ್ತಶಯಿಂದ ಬಿಟ್ಟಿರುವವರು, ಹೆಂಗುಸರೊಡನೆ ಕುಳಿತು ಭೋಜನ ಮಾಡುವವರು, ಅಲ್ಪಸ್ತ್ರೀ ಸಂಗ ಮಾಡುವವರು, ಪಾಪಿಷ್ಠರು, ಚಾಡಿಕೋರರು, ಪರಸ್ತ್ರೀ ವ್ಯಾಮೋಹವುಳ್ಳವರು, ಸಜ್ಜನರನ್ನು ನಿಂದಿಸುವವರು, ಮಹಾ ಪಾತಕಗಳನ್ನು ಮಾಡಿದವರು, ಶುದ್ಧರನ್ನು ದೂಷಿಸುವವರು, ನಾನೋಪವಾಸ ಮಾಡುತ್ತ ಪತಿವ್ರತೆಯಾಗಿರುವವಳನ್ನು ಬಯುಸುವವರು, ತಾವು ಧನಿಕರಾಗಿದ್ದರೂ ಯಾಚಕರನ್ನು ವಿಮುಖರನ್ನಾಗಿ ಮಾಡುವವರು, ದರಿದ್ರರು, ತಪಸ್ಸನ್ನಾಚರಿಸದವರು, ಚಂಚಲರು, ಬಹುವಾಗಿ ಹರಟುವವರು—ಇವರೇ

ಮೊದಲಾದ ಕ್ಷತ್ರಿಯರನ್ನೂ, ಪತಿಗೆ ವಂಚಕಳಾಗಿಯೂ ಮನೆಗೆಲಸಗಳಲ್ಲಿ ಆಸಕ್ತಿಯಿಲ್ಲದವಳಾಗಿಯೂ ಸತ್ಯ ಶೌಚಗಳಿಲ್ಲದವಳಾಗಿಯೂ ಇರುವ ಪಾಪಿಷ್ಠಳಾದ ಸ್ತ್ರೀಯನ್ನೂ ನೀನು ಕರೆದುಕೊಂಡು ಹೋಗಕೂಡದು" ಎಂದು ಹೇಳುತ್ತಿರುವ ತಂದೆಯ ಮಾತನ್ನು ಕೇಳಿ ಕೃಷ್ಣನು ತಂದೆಗೆ ನಮಸ್ಕರಿಸಿ ಪ್ರದಕ್ಷಿಣೆ ಮಾಡಿ, "ಎಲೈ ತಂದೆಯೇ! ನೀನು ಹೇಳಿದುದೆಲ್ಲವೂ ನನಗೆ ಹಿತಕರವಾದುದು; ಅದರಂತೆಯೇ ಎಲ್ಲವನ್ನೂ ನಡೆಯಿಸುತ್ತೇನೆ. ಪಾಪಿಷ್ಠರೆಲ್ಲರನ್ನೂ ಬಿಟ್ಟು ನಾನು ಯುಧಿಷ್ಠಿರನ ಬಳಿಗೆ ಹೋಗುವೆನು" ಎಂದು ಹೇಳಿದನು.

ಆಗ ಭೀಮಸೇನನು ಕೃಷ್ಣನನ್ನು ನೋಡಿ, "ಎಲೈ ಕೃಷ್ಣನೇ! ಎಲ್ಲರನ್ನೂ ಇಲ್ಲಿಯೇ ಬಿಟ್ಟುಹೋಗಬೇಕೆಂದು ಈ ವೃದ್ಧನಾದ ವಸುದೇವನು ಹೇಳಿದ ಮಾತು ನನಗೆ ಯುಕ್ತವಾಗಿ ತೋರಲಿಲ್ಲ. ಸಾಧುಗಳು ಎಲ್ಲಿರುವರೋ ಅಲ್ಲಿಯೇ ನೀನು ಯಾವಾಗಲೂ ಇರುತ್ತೀಯೆ. ಇಲ್ಲಿ ಆಶ್ಚರ್ಯವೇನು? ದುಷ್ಟರಲ್ಲಿ ನೀನು ಮನಸ್ಸಿಡು; ಉಪಕಾರಿಗಳಲ್ಲಿ ಸಾಧುವಾಗಿರುವವನ ಸಾಧುತ್ವದಿಂದೇನು ಪ್ರಯೋಜನ? ಅಪಕಾರ ಮಾಡುವವರಲ್ಲಿ ಸಾಧುತ್ವವನ್ನು ತೋರಿಸುವವನೇ ಸಾಧುವೆಂದು ಸಜ್ಜನರು ಹೇಳುವರು. ಎಲೈ ಶ್ರೀಕೃಷ್ಣನೇ! ನೀನು ಸರ್ವ ಭೂತಗಳಲ್ಲಿಯೂ ಸಮ ದೃಷ್ಟಿಯುಳ್ಳವನಾಗಿರು" ಎಂದು ಹೇಳಿದನು. ಇದನ್ನು ಕೇಳಿ ವಸುದೇವನೇ ಮೊದಲಾದವರು "ಸರಿ, ಸರಿ" ಎಂದು ಹೇಳುತ್ತ ಪಟ್ಟಣಕ್ಕೆ ಹಿಂದಿರುಗಿದರು. ಬಲರಾಮನೊಡನೆ ಹೋಗುತ್ತ ಬುದ್ಧಿಶಾಲಿಯಾದ ವಸುದೇವನು ಕೃಷ್ಣನಲ್ಲಿ ತನಗಿರುವ ಪ್ರೀತಿಯಿಂದ ಅವನನ್ನು ಅಗಲಿರಲಾರದೆ ದುಃಖಿಸುತ್ತ, "ಎಲೈ ಕೃಷ್ಣನೇ! ಪೂರ್ವದಲ್ಲಿ ದಶರಥನು ರಾಮನನ್ನಗಲಿ ಹೇಗೆ ಬದುಕಿರಲಾರದೆ ಹೋದನೋ ಹಾಗೆ ನಾನೂ ನಿನ್ನ ವಿಯೋಗದಿಂದ ಬದುಕಿರುವುದು ಅಸಾಧ್ಯವಾಗಿದೆ. ಏನುಮಾಡಲಿ? ಇಲ್ಲಿಯ ಕೆಲಸವನ್ನು ಬಿಟ್ಟು ನಿನ್ನೊಡನೆ ಬಂದರೆ ಎಲ್ಲವೂ ನಷ್ಟವಾಗುವುದು. ದೊರೆಯಾದ ದಶರಥನು ಮಗನಾದ ರಾಮನ ವಿಯೋಗ ದುಃಖದಿಂದ ಪ್ರಾಣವನ್ನೇ ಬಿಟ್ಟನು" ಎಂದು ಹೇಳಿ ಮಗನನ್ನು ತಬ್ಬಿಕೊಂಡು ಅವನನ್ನು ಪರಿವಾರದೊಡನೆ ಬೇಗ ಹೊರಡೆಂದು ಕಳುಹಿಸಿದನು.

ಬಳಿಕ ಬಹು ಕಷ್ಟದಿಂದ ವಸುದೇವನು ದ್ವಾರಕೆಗೆ ಹಿಂದಿರುಗಿದನು. ಶ್ರೀಕೃಷ್ಣನು ಅಂತಃಪುರ ಸಹಿತನಾಗಿ ಭೀಮನೊಡನೆ ಹೊರಟು ನಡೆಯುತ್ತಿರಲು, ದಾರಿಯಲ್ಲಿ ಒಂದು ದೊಡ್ಡ ಸರೋವರವು ಹಂಸ ಕಾರಂಡ ಚಕ್ರವಾಕ ಮೊದಲಾದ ಪಕ್ಷಿಗಳಿಂದಲೂ ಬಾಡದಿರುವ ಕಮಲಗಳಿಂದಲೂ ರಮ್ಯವಾಗಿ ಕಾಣಿಸುತ್ತಿದ್ದಿತು. ಅಲ್ಲಿದ್ದ ಕಮಲ ಲತೆಯನ್ನು ನೋಡಿ ಕೃಷ್ಣನು ರುಕ್ಮಿಣಿಯನ್ನು ಕರೆದು, "ಆನೆಗಳಿಂದ ಎಳೆದಾಡಿಸಿಕೊಳ್ಳುತ್ತ, ಹಂಸೆಗಳಿಂದ ಕಚ್ಚಿಸಿಕೊಂಡು ದಳಗಳಿಲ್ಲದಂತಾಗುತ್ತ, ಎರಡು ತುಂಬಿಗಳಿಂದ ಆವರಿಸಲ್ಪಡುತ್ತಿರುವವಳಾದರೂ ನಿಂದೆಗೊಳಗಾಗದ ಈ ಕಮಲಿನಿಯನ್ನು ನೋಡು. ಸ್ತ್ರೀಯರ ಮನಸ್ಸು ಚಂಚಲವಾದುದು; ತಮ್ಮ ಪತಿಯನ್ನು ವಂಚಿಸಿ ಪರ ಪುರುಷರನ್ನು ಬಯಸುವರು; ತಮ್ಮ ಪತಿಯನ್ನು ರಾತ್ರಿಯಲ್ಲಿ ಕಾಣದ

ಹೋದರೆ ದುಃಖದಿಂದ ಬಳಲಿದವರಂತೆ ಕಾಣಿಸಿಕೊಳ್ಳುವರು; ಮನಸ್ಸಿನಲ್ಲಿ ಕೋಪವನ್ನು ತಾಳಿ ಮುಖವನ್ನು ಕೆಳಗೆ ಮಾಡಿ ಮಲಗುವರು; ಪತಿಯು ಬಂದರೆ ಹರ್ಷಗೊಳ್ಳುವರು. ಸ್ತ್ರೀಯರ ಮನಸ್ಸು ನನಗೆ ವಿಚಿತ್ರವಾಗಿ ತೋರುವುದು. ಪಂಕದಲ್ಲಿಯೇ ಪದ್ಮಿನಿಯರ ಉತ್ಪತ್ತಿಯಾಗುವುದು. ಹಾಗೆಯೇ, ಸ್ತ್ರೀಯರ ಮನಸ್ಸು ಮಲಿನವೆಂಬುದು ಈ ಮೂಲ ಕಾರಣದಿಂದಲೇ ವ್ಯಕ್ತವಾಗುವುದು. ಅವರ ಮನಸ್ಸು ಹಗಲು ರಾತ್ರಿ ಚಂಚಲತೆಯಿಂದ ಪರರು ತಮ್ಮನ್ನು ವ್ಯಾಕುಲಪಡಿಸಿದಂತೆ ನಡುಗುತ್ತಿರುವುದು. ಸ್ತ್ರೀಯು ಪತಿಯ ಭಯದಿಂದ, ಧನಿಕಳು ಹೆದರುವಂತೆ, ಭೀತಿಗೊಳ್ಳುವಳು" ಎಂದು ಹೇಳುತ್ತಿರುವ ಶ್ರೀಕೃಷ್ಣನ ಮಾತನ್ನು ಕೇಳಿ, ರುಕ್ಮಿಣಿಯು ನಕ್ಕು ಅವನನ್ನು ಕುರಿತು ವಕ್ರೋಕ್ತಿಯಿಂದ, "ಎಲೈ ಶ್ರೀಕೃಷ್ಣನೇ! ಪದ್ಮಲೋಚನೆಯಾದ ಪದ್ಮಿನಿಯು ಹರಿಯನ್ನು ಪತಿಯನ್ನಾಗಿ ತಿಳಿದಿರುವಳು; ತನ್ನ ಮನೆಗೆ ಬಂದ ತುಂಬಿ ಮೊದಲಾದವರನ್ನು ತನ್ನ ಮಕ್ಕಳು ಮೊಮ್ಮಕ್ಕಳೆಂದು ತಿಳಿದು ಪೋಷಿಸುವಳು. ಈ ಎರಡು ಭ್ರಮರಗಳೂ ಅಳುತ್ತ, ಬಾಲಕರಂತೆ ಪದ್ಮಿನಿಯ ಬಳಿಯಲ್ಲಿದ್ದು, ಆಕೆಯ ಸ್ತನ್ಯ ಪಾನ ಮಾಡುತ್ತಿರುವುವು. ಕೃಷ್ಣನೇ! ಇಲ್ಲಿ ಆಕೆಯ ದೋಷವೇನಿರುವುದು? ಆಕೆಯು ಯುಕ್ತವಾದುದನ್ನೇ ಮಾಡುತ್ತಾಳೆ. ಪತಿಯು ದೂರ ಗತನಾಗಿರುವುದನ್ನು ಕಂಡು ಆಕೆಯ ಮನಸ್ಸು ಚಪಲವಾಗುವುದು; ಪತಿಯನ್ನು ವಂಚಿಸಿ ಪರರಲ್ಲಿ ಕ್ರೀಡಿಸುವುದಿಲ್ಲ. ಪದ್ಮಿನಿಯ ಈ ನಡವಳಿಯು ಶ್ರೇಷ್ಠವಾದುದೆಂದು ಸತ್ಪುರುಷರ ಅಭಿಪ್ರಾಯವು. ಪತಿಯು ಅನ್ಯತ್ರ ಹೋದರೆ ಪತ್ನಿಯು ವ್ಯಥೆಯಿಂದ ಕೊರಗದಿರುವಳೇ? ಅವಳು ಬಾಲನಾದ ತುಂಬಿಯೊಡನೆ ಕೂಡಿ ರಾತ್ರಿಯನ್ನೆಲ್ಲ ಪತಿ ವಿಯೋಗ ದುಃಖದಿಂದ ಕಳೆಯುತ್ತಿರುವಳು. ಈ ಧರ್ಮವು ಅನಾದಿಯಾದುದು. ಪದ್ಮಿನೀ ಕುಚ ಸ್ಪರ್ಶದಿಂದ, ವಿರಹಾಗ್ನಿಯಲ್ಲಿ ಸುಟ್ಟು ಮುಖವು ಕಪ್ಪಗಾಗಿ ಭ್ರಮರವು ಸಾಯಬಹುದು; ಕೃಷ್ಣಹೃದಯರು ಯಾರು ತಾನೇ ಬದುಕುವರು? ತನ್ನ ಪ್ರಿಯನನ್ನು ಕಂಡರೆ ಪದ್ಮಿನಿಯು ಅರಳುವುದು; ಆ ಕಮಲವು ಶಿವನ ಶಿರವನ್ನೇರಲು ಯೋಗ್ಯವಾಗುವುದು. ಕಮಲಿನಿಯನ್ನು ನೋಡಿ ನೀನು ಈಗ ವಿಸ್ಮೃತನಾಗಿದ್ದೀಯೆ! ಪೂರ್ವದಲ್ಲಿ ಭೂಮಿಯು ಹರಿಯ ಕಾಲಿನ ತುಳಿತದಿಂದ ರಜೋಮಯವಾಯ್ತಷ್ಟೆ! ಹರಿಯ ಪಾದದಿಂದ ಜಾರಿದ ಧೂಳಿಯು ನೀರಿಗೆ ಬಿದ್ದಿತು. ನೀರೂ ಧೂಳಿಯೂ ಸೇರಿ ಆಗ ಕೆಸರಾಯ್ತು. ಕೆಸರನ್ನು ನೋಡಿ ಕಾರಣವನ್ನು ಕಾಣದೆ ತಟ್ಟನೆ ಭೀಮಸೇನನೆದುರಿಗೆ ನೀನು ಹೀಗೆ ಹೇಳಿದೆಯಲ್ಲವೆ? ಸರ್ವಗತನಾಗಿರುವ ನೀನು ಇದನ್ನರಿಯೆಯಾ? ಅನ್ಯ ಸ್ತ್ರೀಯರು ನಿನಗೆ ಬಹು ಮಂದಿ ಇದ್ದರೂ ನಿತ್ಯವೂ ನೀನು ನನ್ನನ್ನು ಆದರಿಸುತ್ತಿಲ್ಲವೇ! ನಾನು ಅನನ್ಯ ಭಾವನೆಯಿಂದ ಜನಾರ್ದನನಾದ ನಿನ್ನನ್ನೇ ಚಿಂತಿಸುತ್ತಿರುವೆನು. ಲೋಕದಲ್ಲಿ ಕಾಣಬರುವ ಎಲ್ಲ ವಸ್ತುಗಳಲ್ಲಿಯೂ ನೀನೇ ವ್ಯಾಪಿಸಿರುವಂತೆ ಕಾಣುತ್ತಿದೆಯಲ್ಲವೆ!" ಎಂದು ಹೇಳಿದಳು.

ಶ್ರೀಕೃಷ್ಣನು ಆ ಮಾತನ್ನು ಕೇಳಿ ಹರ್ಷಗೊಂಡು, ಕುದುರೆಯಿಂದಿಳಿದು ಸೇನಾಪತಿಯನ್ನು ಕರೆದು, ಪ್ರಯಾಣಭೇರಿಯನ್ನು ಹೊಡೆಯಿಸೆಂದು ಆಜ್ಞೆ

ಮಾಡಲು, ಕೃತವರ್ಮನು ಹಾಗೆಯೇ ಮಾಡಿಸಿದನು. ಆ ರಾತ್ರಿ ಕೃಷ್ಣನು ತನ್ನ ಪರಿಜನರೊಡನೆ ಅಲ್ಲಿದ್ದು, ಬೆಳಗಾದ ಕೂಡಲೆ ಎದ್ದು ಆಹ್ನಿಕಗಳನ್ನು ತೀರಿಸಿದ ಬಳಿಕ ತನ್ನ ಸೇನೆಯನ್ನು ಹೊರಡಿಸಿಕೊಂಡು ಮೆಲ್ಲಮೆಲ್ಲನೆ ಪ್ರಯಾಣ ಮಾಡುತ್ತ ಧರ್ಮರಾಜನ ದೇಶವನ್ನು ಸೇರಿದನು. ಮಾರ್ಗದಲ್ಲಿ ಬರುತ್ತಿರುವ ಶ್ರೀಕೃಷ್ಣನನ್ನು ಕಂಡು ಪಾಮರರಾದ ಗೋಪಾಲಕರೂ ಗೊಲ್ಲರ ಹಳ್ಳಿಯ ಗೊಲ್ಲರೂ ಕೈಯಲ್ಲಿ ಬಿದಿರು ಕೋಲನ್ನು ಹಿಡಿದು, ಗುಲಗಂಜಿಯ ಆಭರಣಗಳನ್ನು ಧರಿಸಿ, ತಂತಮ್ಮ ವಾದ್ಯಗಳನ್ನು ಬಾರಿಸುತ್ತ, ನಂದಗೋಪ ಪುತ್ರನಾದ ಈ ಶ್ರೀಕೃಷ್ಣನು ನಮಗೆ ಪ್ರಮುಖನಾದವನು ಎಂದು ಹೇಳುತ್ತ, ಕೆಲವರು ಅವನನ್ನು ತಬ್ಬಿಕೊಂಡು ಅವನನ್ನು ಮಾತನಾಡಿಸುತ್ತಲೂ, ಅವನೊಡನೆ ವಿನೋದದಿಂದ ನಗುತ್ತಲೂ, ಕೆಲವರು ಅವನಿಗೆ ಮೊಸರನ್ನವನ್ನು ಕೊಟ್ಟು ನಮಸ್ಕರಿಸುತ್ತಲೂ ಇದ್ದರು. ಅವರಲ್ಲೊಬ್ಬನು ಕೃಷ್ಣನನ್ನು ನೋಡಿ, "ಎಲೈ ಕೃಷ್ಣನೇ! ಸೊಗಸಾಗಿರುವ ನನ್ನ ಈ ಕೊಳಲನ್ನು ನೋಡು. ನಾನು ಕಾಯುತ್ತಿರುವ ದನಗಳು ಇತ್ತತ್ತ ಚದರಿಹೋಗುತ್ತಿದ್ದು ದುರ್ಧರನಾದ ನಿನ್ನನ್ನು ನೋಡಿ ತಾವಾಗಿ ಇಲ್ಲಿಗೆ ಬಂದು ಸೇರಿದುವು. ಅವುಗಳಿಗೆ ಲೋಭ ಮೋಹಗಳೆಂಬ ಹುಲಿಗಳ ಭಯವನ್ನು ನನ್ನ ಮಿತ್ರನಾದ ನೀನು ಈಗ ಪರಿಹರಿಸಿದೆ. ಈಗ ನೀನು ಸ್ತ್ರೀಯರೊಡನೆ ಸೇರಿ ಕುದುರೆಯನ್ನೇರಿ ಎಲ್ಲಿಗೆ ಹೊರಟಿರುವೆ? ಈ ಕೌಸ್ತುಭ ಮಣಿಯೂ ಪದಕವೂ ಆನೆಗಳೂ ಎಲ್ಲಿ ಸಿಕ್ಕಿದುವು?" ಎಂದು ಕೇಳಿದನು. ಅದಕ್ಕೆ ಮತ್ತೊಬ್ಬನು, "ಅಯ್ಯೋ ಮೂಢ! ಶ್ರೀವತ್ಸವೆಂಬ ಚಿಹ್ನೆಯು ಅವನಿಗೆ ಇರುವುದರಿಂದ ಅವನು ಶ್ರೀಮಂತನಾದನು. ಆದರಿಂದ ಅವನಿಗೆ ದೊರೆಯದುದಾವುದು? ಅದನ್ನು ನೀನರಿಯೆಯಾ" ಎಂದನು.

ಹೀಗೆ ಗೋಪಾಲಕರು ಆಡಿಕೊಳ್ಳುತ್ತಿರುವ ಮಾತುಗಳನ್ನು ಕೇಳಿ ಕೃಷ್ಣನು ಸಂತೋಷಿಸಿ ಅವರನ್ನು ಆದರಿಸಿದನು. ಶ್ರೀಕೃಷ್ಣ ದರ್ಶನಾರ್ಥವಾಗಿ ಸ್ತ್ರೀಯರೆಲ್ಲರೂ ದೀಪಗಳಿಂದ ಬೆಳಗುವ ಆರತಿಗಳನ್ನು ಹಿಡಿದು ತಂತಮ್ಮ ಮನೆಗಳಿಂದ ಬೇಗನೆ ಬರುತ್ತಿದ್ದರು. ಒಬ್ಬಳು ಮೊಸರನ್ನು ಕಡೆಯುತ್ತಿದ್ದು ಹಾಗೆಯೇ ಬಿಟ್ಟು ಓಡಿ ಬಂದಳು; ಮತ್ತೊಬ್ಬಳು ತನ್ನ ಮೈಯೆಲ್ಲ ಸಗಣಿಯಾಗಿರಲು ಹಾಗೆಯೇ ಬಂದಳು; ಒಬ್ಬಳು ಪುಷ್ಪ ಮಾಲಿಕೆಯನ್ನು ತಂದು ಕೃಷ್ಣನಿಗೆ ಮುಡಿಸಿದಳು; ಇನ್ನೊಬ್ಬಳು ಮನೆಯ ಕೆಲಸಗಳನ್ನೆಲ್ಲ ಬಿಟ್ಟು ಕೃಷ್ಣನ ಬಳಿಗೆ ಬಂದಳು. ರಜಸ್ವಲೆಯೊಬ್ಬಳು ಕೃಷ್ಣನನ್ನು ನೋಡುವುದಕ್ಕಾಗಿ ಬರುತ್ತಿರಲು, ಮತ್ತೊಬ್ಬಳು ಅವಳನ್ನು ನೋಡಿ, 'ನೀನು ರಜಸ್ವಲೆಯಾಗಿದ್ದರೂ ಹೀಗೆ ಹೋಗಲು ನಿನಗೆ ನಾಚಿಕೆಯಿಲ್ಲವೇ? ಸ್ನಾನ ಮಾಡಿ ಹೋಗು" ಎಂದಳು. ಅದಕ್ಕೆ ಅವಳು, "ಎಲೈ ಮೂಢಳೇ! ನಾನು ಸ್ನಾನವನ್ನು ಮಾಡಿದ್ದೇನೆ; ಆದರೂ ಮಾಲಿನ್ಯವು ಹೋಗಲಿಲ್ಲ. ಕರ್ಮವಶದಿಂದ ಕೊಳೆಯಾದ ದೇಹವನ್ನು ತೊಳೆದು ಶುದ್ಧ ಮಾಡುವುದು ಸಾಧ್ಯವಲ್ಲ. ಮನೆಯಲ್ಲಿ ಜೀವವನ್ನು ಹೊರೆದುದಾಯಿತು, ಉಳಿದ ಕೊಳೆಯು ನಿಂತಿದೆ. ಆದಕಾರಣ, ಈಗ ನಾನು ರಜೋಮಲಿನಳಾಗಿದ್ದರೂ ಗೋವಿಂದನ ಬಳಿಗೆ ಹೋಗುವೆನು. ಅಶುಚಿಯಾದವರು

ಯಥೇಚ್ಛವಾಗಿ ನೀರೆಲ್ಲಿದೆಯೋ ಅಲ್ಲಿಗೆ ಹೋಗಿ ಅಲ್ಲಿ ಹಾಸುಬಂಡೆಯ ಮೇಲೆಯೋ ಕಲ್ಲುಮಣೆಯ ಮೇಲೆಯೋ ಕೊಳೆಯನ್ನು ಹೋಗಲಾಡಿಸುವರು. ಈಗ ನಾಚಿಕೆಯನ್ನು ಬಿಟ್ಟು ಶ್ರೀಕೃಷ್ಣನ ಪಾದಪೀಠದಲ್ಲಿ, ಮಲಿನವಾದ ಈ ದೇಹದ ಕೊಳೆಯನ್ನು ಕಳೆದು ಶುದ್ಧಿಗೊಳಿಸುವೆನು" ಎಂದು ಹೇಳುತ್ತ, ಶ್ರೀಕೃಷ್ಣನ ಬಳಿಗೆ ಬಂದು ನಗುತ್ತ ಆತನನ್ನು ಕುರಿತು, "ಎಲೈ ಕೃಷ್ಣನೇ! ಪೂರ್ವದಲ್ಲಿ ಯಶೋದೆಯು ನಿನಗೆ ಬೆಣ್ಣೆಯನ್ನು ತಿನ್ನಿಸಿದಳು; ನಾನೇ ಕಡೆದು ತಂದಿರುವ ಈ ಬೆಣ್ಣೆಯನ್ನು ತೆಗೆದುಕೊ; ಆಕೆಯು ಬೆಣ್ಣೆಯನ್ನು ತಿನ್ನಿಸಿ ನಿನ್ನಲ್ಲಿ ಜಗತ್ತೆಲ್ಲವನ್ನೂ ಹೇಗೆ ಕಂಡಳೋ ಹಾಗೆ ನಾನೂ ನಿನ್ನಲ್ಲಿ ಪ್ರಪಂಚವನ್ನು ನೋಡುವೆನು. ಜಗತ್ತನ್ನು ಬಾಯಲ್ಲಿ ತೋರಿಸುವ ಸಾಮರ್ಥ್ಯವು ನಿನ್ನನ್ನುಳಿದು ಮತ್ತಾರಲ್ಲಿರುವುದು?" ಎಂದಳು. ಅಷ್ಟರಲ್ಲಿ ಮತ್ತೊಬ್ಬಳು ಬಂದು ಕೃಷ್ಣನನ್ನು ನೋಡಿ ಸಂತೋಷದಿಂದ, "ಎಲೈ ಗೋವಿಂದನೇ? ನಿನ್ನ ಬಳಿಗೆ ಬಂದ ಕೂಡಲೆ ನನ್ನ ಪ್ರಾಚೀನ ಕರ್ಮ ಸಂಸ್ಕಾರದ ಭಯವೆಲ್ಲವೂ ತೊಲಗಿತು. ಇದೇನಾಶ್ಚರ್ಯ!" ಎಂದು ಹೇಳುತ್ತ ನಿಂತುಕೊಂಡಳು. ಬಳಿಕ ಶ್ರೀಕೃಷ್ಣನು ಕಾಳಿಂದೀ ತೀರದಲ್ಲಿ ರಮ್ಯವಾಗಿರುವ ಮಹಾ ವನಕ್ಕೆ ಬಂದನು.

ಅಲ್ಲಿ ರಮ್ಯವಾದೊಂದು ಪ್ರದೇಶದಲ್ಲಿ ಅಂತಃಪುರ ಸ್ತ್ರೀಯರ ಮೇನಾಗಳನ್ನು ಇಳಿಸಿ ಸೇನೆಯನ್ನು ಬಿಡಿಸಿ ತನ್ನ ಇಷ್ಟಜನರನ್ನು ಕರೆದು, ತಾಯಂದಿರಾದ ದೇವಕಿ ಯಶೋದೆಯರನ್ನೂ ರುಕ್ಮಿಣಿಯನ್ನೂ ಕುರಿತು, "ನೀವು ವಸುದೇವನ ಸಹೋದರಿಯೂ ಅರ್ಜುನನ ತಾಯಿಯೂ ಆದ ಆ ಕುಂತಿಗೆ ಪ್ರತಿ ದಿನವೂ ಸೇವೆ ಮಾಡಬೇಕು; ಅನಸೂಯೆ ಅರುಂಧತಿ ಮೊದಲಾಗಿ ಋಷಿ ಪತ್ನಿಯರಾದ ಮುತ್ತೈದೆಯರು ಬರುವರು, ಅವರ ಶುಶ್ರೂಷೆಯನ್ನು ಮಾಡಬೇಕು." ತರುವಾಯ ಪ್ರದ್ಯುಮ್ನ ಮೊದಲಾದವರವನ್ನು ಕುರಿತು, "ಧರ್ಮರಾಜನ ಪಟ್ಟಣದಲ್ಲಿ ಯಜ್ಞವನ್ನು ನೋಡುವುಕ್ಕಾಗಿ ಬಹು ಮಂದಿ ಶೂರರೂ ಇತರ ಜನರೂ ಬಂದು ಸೇರುವರು; ಅವರಲ್ಲಿ ದೊಡ್ಡವರಾದವರನ್ನು ನೀವು ಪೂಜಿಸಬೇಕು. ಸಿಂಹರಾಶಿಗೆ ಗುರು ಬರಲು, ಗೌತಮೀ ನದೀ ದರ್ಶನವಾಗುವ ವರೆಗೂ ಪಾಪ ಪರಿಹಾರಕಗಳಾದ ಇತರ ತೀರ್ಥಗಳೆಲ್ಲ ಮೊರೆಯುತ್ತಿರುವಂತೆ, ಅರ್ಜುನನನ್ನು ನೋಡುವ ವರೆಗೂ ವೀರರ ತೇಜಸ್ಸು ಪ್ರಕಾಶಿಸುತ್ತಿರುವುದು. ಎಲೈ ಪ್ರದ್ಯುಮ್ನನೇ! ನೀನು ಹಸ್ತಿನಪುರಕ್ಕೆ ಎಂದೂ ಹೋಗಿರಲಲ್ಲ. ನಮ್ಮ ದೇಶದಲ್ಲಿ ನೀನು ವಿನೋದವಾಗಿದ್ದಂತೆ, ಬುದ್ಧಿಶಾಲಿಯಾಗಿಯೂ ಪರಿಶುದ್ಧನಾಗಿಯೂ ಇರುವ ಭೀಮಸೇನನು ವಾಸಮಾಡುವ ಈ ಗಜಪುರದಲ್ಲಿ ಇರುವುದು ಸಾಧ್ಯವಲ್ಲ. ನಿಮಗೆ ಮಾತ್ರ ಸಮಾನವಾಗಿಯೂ ನನ್ನ ಸಹೋದರಿಯಾಗಿಯೂ ಇರುವ ದ್ರೌಪದಿಯು ಹತ್ತುಸಾವಿರ ಮಂದಿ ಸ್ತ್ರೀಯರಿಂದ ಸೇವಿತಳಾಗಿದ್ದರೂ ನೀವು ದೀಪ ಹಸ್ತರಾಗಿ ಯಜ್ಞಕಾಲದಲ್ಲಿ ಆಕೆಯನ್ನು ಸೇವಿಸಿರಿ. ನಾನು ಮೊದಲು ನಮ್ಮ ಬಂಧುಗಳನ್ನಾದರಿಸಲು ಧರ್ಮರಾಜನ ಬಳಿಗೆ ಹೋಗುವೆನು; ನೀವೂ ಹಿಂದೆಯೇ ಹೊರಟುಬನ್ನಿರಿ."

ಈ ಪ್ರಕಾರವಾಗಿ ಬುದ್ಧಿಶಾಲಿಯಾದ ಶ್ರೀಕೃಷ್ಣನು ತನ್ನ ಇಷ್ಟಜನರೆಲ್ಲರಿಗೂ ತಿಳಿಸಿ ಸೇನೆಯ ಬಳಿಯಲ್ಲಿ ಭೀಮನನ್ನು ನೇಮಿಸಿ ತಾನೊಬ್ಬನೇ ಕುದುರೆಯ ಮೇಲೆ

ಹತ್ತಿ ಹಿತ ಪರಿವಾರದೊಡನೆ ಹಸ್ತಿನಪುರಕ್ಕೆ ಹೋದನು. ಪುರ ನಿವಾಸಿಗಳೆಲ್ಲರೂ ಶ್ರೀಕೃಷ್ಣನ ಆಗಮನವನ್ನು ಕಂಡು ಬಹಳ ಹರ್ಷದೊಡನೆ ಇದಿರ್ಗೊಂಡರು. ಆಗ ಯಾಜ್ಞಿಕರಾದ ಸೋಮಯಾಜಿಗಳು, "ನಾವು ಭೂಲೋಕದಲ್ಲಿ ಸ್ವರ್ಗಾಪೇಕ್ಷೆಯಿಂದ ಯಜ್ಞಾದಿ ಕರ್ಮಗಳನ್ನು ಮಾಡುತ್ತಿರುವೆವು. ಅಗ್ನಿಷ್ಟೋಮಾದಿ ಯಜ್ಞಗಳಿಗಾಗಿ ಶ್ರೀಕೃಷ್ಣನು ಸ್ವರ್ಗಗಳನ್ನು ಕಲ್ಪಿಸಿರುವನು. ಯಜ್ಞಕರ್ತೃವೂ ಯಜ್ಞಭೋಕ್ತೃವೂ ಯಜ್ಞಫಲದಾತೃವೂ ಆದ ಆ ಯಜ್ಞೇಶ್ವರನೇ ಇಲ್ಲಿಗೆ ಬರುತ್ತಿರುವನು. ಹೊಗೆಯಿಂದ ಮುಚ್ಚಿಹೋದ ಕಣ್ಣುಗಳಿಗೆ ಆ ಯಜ್ಞನಾಯಕನು ಹೇಗೆ ಗೋಚರನಾಗುವನು? ಭಕ್ತನಾದ ಧರ್ಮನಂದನನು ಈ ಜನಾರ್ದನನನ್ನು ಹೇಗೆ ತೋರಿಸಿದನೋ ಹಾಗೆ ಯಜ್ಞದಲ್ಲಿ ನಮ್ಮಿಂದ ಬಹಳ ತೃಪ್ತನಾದ ಅಗ್ನಿಯೂ ತೋರಿಸಲಿಲ್ಲ. ಸಪ್ತಜಿಹ್ವನೆಂದು ಪ್ರಸಿದ್ಧನಾದ ಅಗ್ನಿಯು ಕೃಷ್ಣನನ್ನರಿಯನೇನು? ದ್ವಿಜಿಹ್ವನು (ಸರ್ಪವು) ಸಾಕ್ಷಾತ್ತಾಗಿ ಕ್ಷೀರವನ್ನು ಪಾನಮಾಡಿ ವಿಷವನ್ನು ಕಕ್ಕುವನು. ಇನ್ನು, ಸಪ್ತಜಿಹ್ವನು ಅಗ್ನಿಯಿಂದ ಶ್ರೀಕೃಷ್ಣನನ್ನು ಹೇಗೆ ತೋರಿಸಬಲ್ಲನು?" ಎಂದು ಹೇಳಿಕೊಳ್ಳುತ್ತಿದ್ದರು. ಅವರಲ್ಲೊಬ್ಬ ಬ್ರಾಹ್ಮಣನು, "ಇದು ಅಗ್ನಿಯ ದೋಷವಲ್ಲ; ನಾವು ಮಾಡುವ ಕರ್ಮಗಳನ್ನು ಭಗವದರ್ಪಣ ಮಾಡದಿರುವ ನಮ್ಮ ತಪ್ಪು" ಎಂದು ನುಡಿದನು. ಮತ್ತೊಬ್ಬನು ಅವರೆಲ್ಲರನ್ನೂ ಕುರಿತು, "ಎಲ್ಲರೂ ಶ್ರೀಕೃಷ್ಣನ ದರ್ಶನ ಮಾಡಿರಿ; ಯಜ್ಞಾರ್ಜಿತವಾದ ಪುಣ್ಯವೆಲ್ಲವನ್ನೂ ಆತನಿಗೆ ಕೂಡಲೆ ಸಮರ್ಪಿಸಿರಿ; ಯಾವಾಗ ಬಿದ್ದುಹೋಗುವೆವೋ ಎಂಬ ಭಯವುಳ್ಳ ನಶ್ವರವಾದ ಆ ಸ್ವರ್ಗದಿಂದ ಪ್ರಯೋಜನವೇನು? ಶ್ರೀಕೃಷ್ಣನೊಡನೆ ನಾವೆಲ್ಲರೂ ನಿರ್ಭಯವಾಗಿ ಸಂಚರಿಸೋಣ" ಎಂದನು.

ಹೀಗೆ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತ ಶ್ರೀಕೃಷ್ಣನನ್ನು ಕಂಡರು. ಆತನು ಇವರೆಲ್ಲರಿಗೂ ನಮಸ್ಕರಿಸಲು, "ಎಲೈ ಚರಾಚರಗಳಿಗೊಡೆಯನಾಗಿಯೂ ಜಗತ್ಪತಿಯಾಗಿಯೂ ಇರುವ ಶ್ರೀಕೃಷ್ಣನೇ! ನೀನು ಬ್ರಾಹ್ಮಣಾಶೀರ್ವಾದ ಬಲದಿಂದ ಗಮ್ಯಾಗಮ್ಯಗಳನ್ನು ತಿಳಿದಿರು; ನಿನಗೆ ಮಂಗಳವಾಗಲಿ" ಎಂದು ಹೇಳಿದರು. ತಮಗೆ ನಮಸ್ಕರಿಸಿದ ಶ್ರೀಕೃಷ್ಣನನ್ನು ನೋಡಿ ಸಂನ್ಯಾಸಿಗಳೆಲ್ಲರೂ "ನಮೋ ನಾರಾಯಣ" ಎಂದು ಹೇಳುತ್ತ, "ಎಲೈ ಕೃಷ್ಣನೇ! ನೀನು ನಾರಾಯಣನು; ನೀನು ನಿನ್ನಿಂದಲೇ ನಮಸ್ಕೃತನಾಗುತ್ತೀಯೆ. ವೇದ ವಾಕ್ಯಗಳೂ ನಿನ್ನನ್ನು ಕಾಣದೆ ವಿಮುಖಗಳಾಗುತ್ತಿರುವುದರಿಂದ ನಿನ್ನನ್ನು ನಾರಾಯಣ ಎಂದು ಮಾತಿನಿಂದ ಹೇಳುವುದಕ್ಕೂ ನಮಗೆ ಸಾಧ್ಯವಲ್ಲ. ಅಂತಹ ನೀನು ನಮ್ಮ ಪಾದಗಳಿಗೆ ನಮಸ್ಕರಿಸಿದೆ. ವೇದಾಂತ ವೇದ್ಯನಾಗಿಯೂ ಭಯ ನಾಶಕನಾಗಿಯೂ ಇರುವ ನಿನ್ನನ್ನು ನಾವು ಸೇವಿಸುತ್ತೇವೆ. ವಾಸುದೇವನಾದ ನಿನಗೆ ಚಲನೆಂದೂ ಅಚಲನೆಂದೂ ಎರಡು ರೂಪಗಳುಂಟು: ಸಂನ್ಯಾಸಿಗಳ ರೂಪವೇ ಚಲವು, ಪ್ರತಿಮೆ ಮೊದಲಾದುವು ಅಚಲವು. ನಾವು ಪ್ರಣವಾಭ್ಯಾಸ ನಿರತರು. ಪ್ರಣವವಾದರೋ ಸರ್ವದಾ ನಿನ್ನ ಪಾದವನ್ನೇ ನೆನೆಯುತ್ತ ಈಗಲೂ ನಿನ್ನ ಪಾದವನ್ನರಿಯದಾಗಿದೆ" ಎಂದರು. ಅದಕ್ಕೆ ಶ್ರೀಕೃಷ್ಣನು, "ಕರ್ಮ ಫಲ ಪರಿತ್ಯಾಗದಿಂದ

ಶ್ರೀಹರಿಯ ದೇಹವು ಪೋಷಿತವಾಗಿದೆ. ಅದು ಧ್ಯಾನಾರೂಢರಾದ ನಿಮ್ಮಿಂದ ಏಕಸ್ವರೂಪವೆನಿಸಿಕೊಳ್ಳುವುದು. ನೀವು ಹಂಸರೆಂದು ಲೋಕದಲ್ಲಿ ಪ್ರಖ್ಯಾತಿ ಪಡೆದಿರುವಂತೆಯೇ ನಾನೂ ಕೃಷ್ಣನೆನಿಸಿರುವೆನು. ನಮ್ಮಿಬ್ಬರ ಸಮಾಗಮವು ಸರ್ವದಾ ಹಸ್ತಿನಪುರದಲ್ಲಾಗಲಿ" ಎಂದು ಹೇಳಿ, ಅವರ ಅನುಜ್ಞೆಯನ್ನು ಪಡೆದು ರಾಜಮಾರ್ಗದಲ್ಲಿ ನಡೆದನು. ಪುರಸ್ತ್ರೀಯರೂ ವೇಶ್ಯಾಂಗನೆಯರೂ ಪ್ರಾಸಾದಗಳ ಮೇಲೆ ನಿಂತು ಶ್ರೀಕೃಷ್ಣನನ್ನು ನೋಡುತ್ತಿದ್ದರು. ವೇಶ್ಯೆಯರು ಶ್ರೀಕೃಷ್ಣನನ್ನು ನೋಡಿ, "ಶುಭಕರನೂ ದಾತೃವೂ ಕಾಮುಕನೂ ವಂಚಕನೂ ಆದ ಶ್ರೀಕೃಷ್ಣನು ಬರುತ್ತಿರುವನು; ಅವನನ್ನು ಹಿಡಿದುಕೊಳ್ಳಿರಿ. ಕಮಲಲೋಚನನೂ ಸುಂದರನೂ ಬಲಶಾಲಿಯೂ ಧನಿಕನೂ ಆದ ಆತನು ಸದಾ ಸ್ತ್ರೀಲೋಲನು" ಎಂದು ಹೇಳಿಕೊಂಡರು. ಅವರಲ್ಲಿ ಕುಂಟಣಿಯೊಬ್ಬಳು, "ಈ ನಾರಿಯರು ಪುರಾಣ ಪುರುಷನಾದ ಈತನನ್ನು ಹಿಡಿಯಲು ವ್ಯರ್ಥವಾಗಿ ಚಿಂತಿಸುತ್ತಿರುವರು. ಹಿಡಿಯಲು ಇವನು ಸಾಧ್ಯನಲ್ಲ, ಮುಕ್ತನಾಗಿದ್ದಾನೆ. ಇಂತಹವನನ್ನು ನಿರ್ಬಂಧಿಸುವುದು ಹೇಗೆ? ಪೂರ್ವದಲ್ಲಿ ಇವನು ಯೌವನಸ್ಥನಾಗಿದ್ದಾಗ ಭೂಲೋಕದಲ್ಲಿ ಹದಿನಾರು ಸಾವಿರ ಮಂದಿ ಸ್ತ್ರೀಯರನ್ನುಪಭೋಗಿಸಿದನು. ಬಹು ಮಂದಿ ಮಕ್ಕಳನ್ನು ಪಡೆದು ಈಗ ವೃದ್ಧನಾಗಿರುವ ಈತನಿಂದ ಫಲವೇನು? ಆದರೆ ಈತನನ್ನು ಹಿಡಿಯಲು ನಮಗೊಂದು ಕಾರಣವುಂಟು: ಹಾಗೆ ಹಿಡಿಯುವುದರಿಂದ ನಾವು ಪೂರ್ಣ ಕಾಮರಾಗಿ ಮುಕ್ತರಾಗುವೆವು; ಆ ಪುರಾಣ ಪುರುಷನಿಂದ ನಮಗೆ ಪರಮ ಪ್ರಯೋಜನವಾಗುವುದು. ಪುರುಷನು ಯೌವನಸ್ಥನಾಗಲಿ ವೃದ್ಧನಾಗಲಿ ಆತನ ಸಂಗದಲ್ಲಿ ನಮಗೆ ಆಸೆಯೇನೂ ಇಲ್ಲ. ಯುವತಿಯರಾಗಲಿ ವೃದ್ಧೆಯರಾಗಲಿ ಶ್ರೀಕೃಷ್ಣನನ್ನು ಬಿಡಕೂಡದು. ಈತನಿಗಿಂತ ವೃದ್ಧರಾದ ಜನರು ಯಾರೂ ಇಲ್ಲವೆಂದು ಮೂಢ ಜನವು ಹೇಳುತ್ತಿರುವುದು. ಈತನ ಚೇಷ್ಟೆಯನ್ನು ನಾನು ಚೆನ್ನಾಗಿ ಬಲ್ಲೆನು, ಮತ್ತಾವಳೂ ಅರಿಯಳು: ಕುಬ್ಜೆಯನ್ನೂ ವಾನರ ಕನ್ಯೆಯನ್ನೂ ಬಯಸಿದ ಈ ಕೃಷ್ಣನು ಸುಂದರಿಯರಾದ ಸ್ತ್ರೀಯರನ್ನು ಬಿಡುವುದುಂಟೇ?" ಎಂದು ಹೇಳುತ್ತ ಅವಳು ಎಲ್ಲ ಸ್ತ್ರೀಯರನ್ನೂ ಕರೆದುಕೊಂಡು ತಾನು ಮುಂದೆ ಹೊರಟು ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ನಿಲ್ಲಲು, ಆತನು ಅವಳನ್ನು ಆದರಿಸಿದನು. ಶ್ರೀಕೃಷ್ಣನ ಬಳಿಯಲ್ಲಿ ವಂದಿಗಳ ದೊಡ್ಡ ಗುಂಪಿದ್ದಿತು. ಅವರಲ್ಲಿ ವೃದ್ಧನಾದವನೊಬ್ಬನು ಶ್ರೀಕೃಷ್ಣನನ್ನು ಸ್ತುತಿಸುತ್ತ ಇಂತೆಂದನು :—

"ಕಂಸ ಮರ್ದನನಾದ ಶ್ರೀಕೃಷ್ಣನು ಬಂದಿರುವನು. ಈಗ ಯಾಚಕರ ಸಂಸಾರ ದುಃಖವು ತೊಲಗುವುದು. ಮೋಹವೆಂಬ ರೋಗದಿಂದ ಪೀಡಿತರಾದ ಜನಗಳು ತಮಗೆ ಬೇಕಾದ ಇಷ್ಟಾರ್ಥಗಳನ್ನು ಬಯಸುವರು. ತನ್ನ ನಾಮೋಚ್ಚಾರಣೆಯೆಂಬ ಔಷಧವನ್ನು ಕೊಡುವ ಈ ಕೃಷ್ಣನೆಂಬ ವೈದ್ಯನಿಂದ ಅವರೆಲ್ಲರೂ ಸಂದೇಹವಿಲ್ಲದೆ ರೋಗ ರಹಿತರಾಗಿ ಸುಖವನ್ನು ಪಡೆವರು, ಇದು ಸತ್ಯವು. ನಾವಾಗಿ ಬಯಸುತ್ತಿರುವುದರಿಂದುಂಟಾಗುವ ವ್ಯಾಧಿಗಳೆಲ್ಲವೂ ಆತನನ್ನು ನೆನೆವುದರಿಂದ ನಾಶ ಹೊಂದುವುವು. ಶ್ರೀಹರಿಯನ್ನು ಬಿಟ್ಟು ಯಾವಾಗಲೂ ಹೇಗೆ ಇರಬಲ್ಲೆವು?

ಅವನ ನಾಭಿ ಕಮಲದಲ್ಲಿ ಬ್ರಹ್ಮನು ಹುಟ್ಟಿದನು. ಹೀಗಿರುವಾಗ, ಹರಿಯ ತಾತನೂ ಪಿತಾಮಹನೂ ಯಾರಾಗಿರಬಹುದೋ ತಿಳಿಯದು. ನಮ್ಮ ಇಷ್ಟಸಿದ್ಧಿಗಾಗಿ ಆತನ ನಾಮ ಸ್ಮರಣೆಯನ್ನೇ ಮಾಡಬೇಕಾದುದು ಆವಶ್ಯಕವು. ಆತನ ನಾಮದ ಮಹಿಮೆಯನ್ನು ವರ್ಣಿಸಲರಿಯೆನು. ಆತನ ಪ್ರತಾಪಗಳನ್ನು ಸೂಚಿಸುವ ನಾಮಗಳು ಲೋಕದಲ್ಲಿ ಅಪಾರವಾಗಿವೆ. ಶಂಖನು ವೇದಗಳನ್ನು ಕದ್ದೊಯ್ದುದನ್ನು ಕಂಡು ಆತನು ಆದಿ ಮತ್ಸ್ಯನಾದನು. ಆ ವಿಷ್ಣುವಿನ ಜನ್ಮವನ್ನು ಮನುಷ್ಯ ಮಧ್ಯದಲ್ಲಿ ವರ್ಣಿಸುವುದು ಹೇಗೆ? ಕೂರ್ಮನೂ ವರಾಹನೂ ಆಗಿ ಅವತಾರ ಮಾಡಿದ ಆತನ ಪರಾಕ್ರಮವೂ ಪ್ರಸಿದ್ಧವಾಗಿದೆ. ಆತನು ಅರ್ಧ ಸಿಂಹ ರೂಪನಾಗಿಯೂ ಬ್ರಾಹ್ಮಣ ವಟುವಾಗಿಯೂ ಇದ್ದನು. ಆ ಮಹಾತ್ಮನ ಈ ಜನ್ಮಗಳನ್ನು ಕೇಳಿದವನು ಸಕಲ ಸಂಪತ್ತುಗಳನ್ನೂ ಪಡೆವುದರಲ್ಲಿ ಸಂಶಯವಿಲ್ಲ. ನಾನು ಹೇಳಿದ ಮಾತಿನಿಂದಾಗಲಿ, ಅಥವಾ ಮತ್ತೊಬ್ಬ ರಾಮನ ಮಾತಿನಿಂದಾಗಲಿ ಕೃಷ್ಣನು ದೋಷ ರಹಿತನೆಂಬುದು ವ್ಯಕ್ತವಾಗುವುದು. 'ಈ ವಂದಿಯು ಕುರೂಪವಾದ ನನ್ನ ಜನ್ಮಗಳನ್ನು ಸತ್ಯವೆಂದು ತಿಳಿದು ಎಲ್ಲರಿಗೂ ಹೇಳಿದನಲ್ಲಾ!' ಎಂದು ಶ್ರೀಕೃಷ್ಣನು ಕೋಪಿಸಿಕೊಳ್ಳಬಹುದು. ಅದರಿಂದೇನು? ನನ್ನ ವಾಗ್ದೋಷವನ್ನಲ್ಲದೆ ಕಾಯಿಕ ಮಾನಸಿಕ ದೋಷಗಳೆಲ್ಲವನ್ನೂ ಅದು ಪರಿಹರಿಸುವುದರಲ್ಲಿ ಸಂದೇಹವಿಲ್ಲ. 'ರಾಮ', 'ರಾಮ' ಎಂದು ಆತನ ನಾಮಗಳನ್ನು ಪುನಃ ಕೀರ್ತನೆ ಮಾಡುವೆನು. ಸರ್ವಜ್ಞನಾದ ಶಂಕರನೂ ರಾಮ ನಾಮ ಸಂಕೀರ್ತನೆಯಿಂದ ಸಂತುಷ್ಟನಾಗುವನು; ಗೋಪಾಲ ಮೂರ್ತಿಯಾದ ಶ್ರೀಕೃಷ್ಣನು ಸಂತುಷ್ಟನಾಗದಿರುವನೇ?" ಎಂದು ಹೇಳುತ್ತಿರುವ ವಂದಿಯನ್ನಾದರಿಸಿ ಶ್ರೀಕೃಷ್ಣನು ತನ್ನ ಕಂಠದಲ್ಲಿ ಧರಿಸಿದ್ದ ಮುಕ್ತಾಹಾರವನ್ನು ಆತನಿಗೆ ಕೊಟ್ಟು, ಉಳಿದವರೆಲ್ಲರಿಗೂ ಮುಕ್ತಾಫಲಗಳನ್ನು ಕೊಟ್ಟು, ಅಲ್ಲಿದ್ದ ಧರ್ಮಾಧಿಕಾರಿಗಳನ್ನು ಕಂಡು ಅವರೆಲ್ಲರೊಡನೆ ಸೇರಿ ಅಲ್ಲಿಂದ ಹೊರಟನು.

ಇಂತು ಶ್ರೀಕೃಷ್ಣ ಹಸ್ತಿನಪುರ ಪ್ರವೇಶವೆಂಬ ಹನ್ನೊಂದನೆಯ ಅಧ್ಯಾಯವು.

---

## ಹನ್ನೆರಡನೆಯ ಅಧ್ಯಾಯ

ಅನಂತರದಲ್ಲಿ ಜನಮೇಜಯನು ಜೈಮಿನಿ ಮುನಿಯನ್ನು ಕುರಿತು, "ಎಲೈ ಜೈಮಿನಿಯೇ! ಮುಂದೆ ನಡೆದ ಸಂಗತಿಯೇನು? ಸದಾಚಾರ ಸಂಪನ್ನರಾದ ಜನರು ಶ್ರೀಕೃಷ್ಣನೊಡನೆ ಆಡಿದ ಮಾತುಗಳೇನು? ಅದಕ್ಕೆ ಆತನು ಹೇಳಿದ ಉತ್ತರವೇನು?" ಎಂದು ಕೇಳಲು, ಅದಕ್ಕೆ ಜೈಮಿನಿಯು, "ಎಲೈ ರಾಜೇಂದ್ರನೇ! ಕೇಳು, ಆ ಹಸ್ತಿನಪುರದಲ್ಲಿ ಆಚಾರಶೀಲರಾದ ಬ್ರಾಹ್ಮಣರು ಶ್ರೀಕೃಷ್ಣನನ್ನು ನೋಡಿ, "ಎಲೈ ಕೃಷ್ಣನೇ! ನಮ್ಮ ಸದಾಚಾರ ಸತ್ಕರ್ಮಗಳಿಂದಲೂ ಪ್ರಾಯಶ್ಚಿತ್ತ ದಾನಾದಿಗಳಿಂದಲೂ ನಮಗೆ ನಿನ್ನ ದರ್ಶನವಾಯಿತು; ಧರ್ಮರಾಜನ ಆಜ್ಞಾನುಸಾರವಾಗಿ ಪ್ರಜೆಗಳೆಲ್ಲರೂ ಧರ್ಮ ಮಾರ್ಗ ಪ್ರವರ್ತಕರಾಗಿರುವರು. ಲೋಕದಲ್ಲಿ ಧರ್ಮ ಸಂರಕ್ಷಣಾರ್ಥವಾಗಿಯೇ ನೀನು ಅವತಾರ ಮಾಡಿರುವೆ. ಬ್ರಹ್ಮಹತ್ಯೆ, ಸ್ವರ್ಣ

ಸ್ತೇಯ, ಸುರಾಪಾನ, ಗುರು ತಲ್ಪಗಮನ, ಈ ನಾಲ್ಕು ಪಾಪಗಳನ್ನು ಮಾಡುವವನ ಸಹವಾಸ—ಈ ಐದೂ ಮಹಾ ಪಾತಕಗಳೆನಿಸುವುವು. ಇಂತಹ ಮಹಾ ಪಾತಕ ಮಾಡಿದವರ ಪಾಪವೆಲ್ಲವೂ ನಿನ್ನ ನಾಮವನ್ನು ಸ್ಮರಿಸಿದ ಮಾತ್ರಕ್ಕೆ ನಾಶವಾಗಿ ಅಂತಹ ಪಾಪಿಷ್ಠರೂ ಪರಿಶುದ್ಧರಾಗುವರು. 'ನೀವು ನಮಗೆ ಯಾವ ಪ್ರಾಯಶ್ಚಿತ್ತವನ್ನು ದಯಮಾಡಿ ವಿಧಿಸುವಿರೋ ಅದೆಲ್ಲಕ್ಕಿಂತಲೂ ಭಗವನ್ನಾಮ ಸ್ಮರಣೆಯು ಶ್ರೇಷ್ಠವಾದುದಲ್ಲವೇ?' ಎಂದು ಇವರೆಲ್ಲರೂ ನಮ್ಮನ್ನು ಕೇಳುವರು. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸಬೇಕು. ಮೇಲೆ ಹೇಳಿದ ಪಾತಕಗಳೆಲ್ಲವೂ ಹರಿ ನಾಮ ಸ್ಮರಣೆಯ ಫಲದ ದೃಷ್ಟಿಯಿಂದ ಅಲ್ಪ ದೋಷಗಳೆನಿಸುವುವು. ದ್ವಾದಶಾಬ್ದ ಮೊದಲಾದ ವ್ರತಗಳನ್ನಾಚರಿಸುವುದರಿಂದ ಆಯಾ ಪಾತಕಗಳು ನಾಶವಾಗುವುವು; ಇವುಗಳಿಂದ ಶುದ್ಧರಾದವರ ದೇಹಗಳು ಮಾತ್ರ ನಾಶವಾಗದೆ ನಿಲ್ಲುವುವು. ಭಗವನ್ನಾಮ ಸಂಕೀರ್ತನೆಯಿಂದ ದೇಹವೇ ನಷ್ಟವಾಗುವುದರಿಂದ ಆ ದೇಹಕ್ಕೆ ಪಾಪ ಸಂಪರ್ಕ ವುಂಟಾಗಲವಕಾಶವೇ ಇಲ್ಲ. ಆದರೆ ಪ್ರಾಯಶ್ಚಿತ್ತಾದಿಗಳಿಂದ ಹೋಗಲಾರದ ದೋಷವೊಂದಿರುವುದೆಂಬ ಸಂಶಯವು ಮನಸ್ಸಿನಲ್ಲಿ ಸರ್ವದಾ ನಿಂತುಹೋಗಿರುವುದು: ಹರಿ ನಾಮ ಸ್ಮರಣೆ ಮಾಡದೆ ಅಜ್ಞಾನದಿಂದ ಮೋಹಿತರಾದ ಆತ್ಮದ್ರೋಹಿಗಳಿಗೆ ಪ್ರಾಯಶ್ಚಿತ್ತವೆಲ್ಲಿಯದು; ಎಲೈ ಕೃಷ್ಣನೆ! ಎಲ್ಲ ಪಾತಕಗಳಿಗೂ ಪ್ರಾಯಶ್ಚಿತ್ತ ವುಂಟು; ನಿನ್ನನ್ನು ಸ್ಮರಣೆ ಮಾಡದ ಅಧಮರಿಗೆ ಯಾವ ಧರ್ಮಶಾಸ್ತ್ರಗಳನ್ನು ಹುಡುಕಿದರೂ ಪ್ರಾಯಶ್ಚಿತ್ತವೊಂದೂ ದೊರೆಯಲಾರದು'' ಎಂದು ಹೇಳಿದರು.

ಶ್ರೀಕೃಷ್ಣನು ಇವರ ಮಾತುಗಳನ್ನು ಕೇಳಿ ಪ್ರಸನ್ನನಾಗಿ ಅವರೊಡನೆ ಮುಂದಕ್ಕೆ ನಡೆಯುತ್ತ, ಮುಂದಿರುವ ನರ್ತಕಿಯರ ಗುಂಪನ್ನು ನೋಡಿ, ಶ್ರೀಕೃಷ್ಣನ ಆಗಮನವನ್ನೇ ನಿರೀಕ್ಷಿಸುತ್ತ ನಾಟ್ಯವಾಡುತ್ತಿರುವ ಆ ಸ್ತ್ರೀಯರ ಆರು ಬಗೆಯ ತಾಳ ಭೇದದಿಂದ ಕೂಡಿದ ನಾಟ್ಯಕ್ಕೆ ತೃಪ್ತನಾಗಿರಲು, ಆಗ ನರ್ತಕಿಯೊಬ್ಬಳು ಕೃಷ್ಣನನ್ನು ಕಂಡು, ಉದ್ಯಾನ ವನದಲ್ಲಿ ಪುಷ್ಪಾಲಂಕಾರವನ್ನು ಹೊಂದಿ ಕೈಗಳನ್ನುಳಿದ ಲತೆಯು ಶೋಭಿಸುವಂತೆ ಪ್ರಕಾಶಿಸುತ್ತ, ಭ್ರಮರಗಳಂತಿರುವ ಕಣ್ಣುಗಳನ್ನು ಬಾರಿ ಬಾರಿಗೂ ತಿರುಗಿಸುತ್ತ ಕೀಚಕ ಧ್ವನಿಯಂತೆ ಮೃದು ಮಧುರವಾದ ಮೃದಂಗ ಶಬ್ದದಿಂದ ಶ್ರೀಕೃಷ್ಣನನ್ನು ಸಂತೋಷಗೊಳಿಸುತ್ತಿರುವವಳಾಗಿ, ಶ್ರೀಕೃಷ್ಣನನ್ನು ಕುರಿತು, "ಎಲೈ ಶ್ರೀಕೃಷ್ಣನೇ! ನಿನ್ನೆದುರಿಗೆ ನರ್ತಿಸುತ್ತಿರುವ ನನ್ನನ್ನು ನೋಡಿ ಎಲ್ಲರೂ ನಗುತ್ತಿರುವರು. ನನ್ನ ನಾಟ್ಯದಿಂದ ಶ್ರೀಹರಿಯು ಸುಪ್ರೀತನಾಗುವನೆಂಬುದನ್ನು ಆ ಮೂಢರು ಅರಿಯರು. ಗೋವಿಂದನನ್ನು ಈ ಲೋಕದಲ್ಲಿ ದರ್ಶನ ಮಾಡಲು ಯಾವ ಧ್ಯಾನ ದಾನ ತಪೋವ್ರತಗಳೂ ಇಲ್ಲ; ಯೋಗಿಗಳೂ ಧ್ಯಾನದಿಂದ ಸುಲಭವಾಗಿ ಕಾಣಲಾರರು. ನನ್ನ ನಾಟ್ಯವನ್ನು ನೋಡುತ್ತ ಇಲ್ಲಿಯೇ ನಿಂತಿರುವ ಶ್ರೀಹರಿಯನ್ನು ಅವರೆಲ್ಲರೂ ನೋಡಲಿ. ನೃತ್ತ ಗೀತ ವಾದ್ಯಗಳನ್ನು ಮಾಡುತ್ತಿರುವವರಿಗೆ ಸಂತುಷ್ಟನಾಗುವಂತೆ, ದೇವರು ಧ್ಯಾನಾದಿಗಳಿಗೆ ಮೆಚ್ಚುವುದಿಲ್ಲವೆಂದು ತಿಳಿದವರು ಹೇಳುತ್ತಾರೆ. ಎಲೈ ಜನಾರ್ದನನೇ! ನಿನ್ನ ಕೈಯಲ್ಲಿ ಸುದರ್ಶನ ಚಕ್ರವೊಂದೇ

ಇರುವುದು; ನನ್ನ ಕೈ ಕಾಲುಗಳಲ್ಲಿ ನಾಲ್ಕು ಚಕ್ರಗಳಿರುವುವು, ನೋಡು! ನಿನ್ನ ಪಾದದಲ್ಲಿ ಗಂಗೆಯಿರುವುದು; ನನ್ನ ಕಪೋಲದಲ್ಲಿಯೂ ತಲೆಯಲ್ಲಿಯೂ ಗಂಗೆ ನೆಲಸಿರುವಳು. ನೀನು ಅಚಲನು; ಅಬಲೆಯಾದ ನಾನು ಸರ್ವದಾ ಚಂಚಲೆಯಾಗಿದ್ದೇನೆ. ನೀನು ಒಂದು ಬ್ರಹ್ಮಾಂಡವನ್ನು ಚಲಿಸುವಂತೆ ಮಾಡುವೆ; ನಿನ್ನೆದುರಿಗೆ ನಾನು ಏಳು ಗೋಳಗಳನ್ನು ಚಲಿಸುವಂತೆ ಮಾಡುತ್ತೇನೆ. ನಿನ್ನ ದೃಷ್ಟಿಗೆ ಇಪ್ಪತ್ತಾರು ಭಾವಗಳುಂಟೆಂದು ತಿಳಿದಿದೆ; ನಾನು ಅವೆಲ್ಲವನ್ನೂ ಮಾಡುವುದಿಲ್ಲ, ಏಕಭಾವದಿಂದ ನಿನ್ನನ್ನು ನೋಡುತ್ತೇನೆ. ನೆಲದ ಮೇಲಿರುವ ಎರಡು ಹೂಗಳನ್ನು ನನ್ನೆರಡು ಕಣ್ಣುಗಳಿಂದ ತೆಗೆದುಕೊಳ್ಳುತ್ತ ನಿನ್ನನ್ನು ನೋಡುತ್ತಿರುವೆನು; ಇದು ನನಗೆ ವಿಸ್ಮಯವನ್ನುಂಟುಮಾಡುತ್ತದೆ'' ಎಂದು ಹೇಳಿದಳು. ಅದನ್ನು ಕೇಳಿ ಶ್ರೀಕೃಷ್ಣನು, ''ಎಲೆ ಸುಂದರೀ! ನೀನು ನನ್ನ ನಾಮಗಳನ್ನು ಹಾಡಿಕೊಂಡು ನರ್ತಿಸುತ್ತ ನಮ್ಮ ಮನೆಯಲ್ಲಿಯೇ ಇರು, ಮತ್ತೆಲ್ಲಿಯೂ ಹೋಗಬೇಡ'' ಎಂದು ಹೇಳಿ ಅಲ್ಲಿಂದ ಹೊರಟು ಧರ್ಮರಾಜನ ಮನೆಗೆ ಬಂದನು.

ಅಲ್ಲಿ ಧೃತರಾಷ್ಟ್ರ, ವಿದುರ, ಕೃಪರೊಡನೆ ಕುಳಿತಿದ್ದ ವೀರನಾದ ಧರ್ಮರಾಜನನ್ನು ನೋಡಿ, ಶ್ರೀಕೃಷ್ಣನು ಎಲ್ಲರಿಗೂ ನಮಸ್ಕರಿಸಿ ಸುಖಾಸನದಲ್ಲಿ ಕುಳಿತುಕೊಂಡನು. ಉಳಿದ ಪಾಂಡವರು ಶ್ರೀಕೃಷ್ಣನಿಗೆ ನಮಸ್ಕರಿಸಲು, ಆತನು ಅವರೆಲ್ಲರನ್ನೂ ಹರಸಿ ಆಲಿಂಗಿಸಿದನು. ಧರ್ಮರಾಜನು ಶ್ರೀಕೃಷ್ಣನನ್ನು ಮೂರ್ಧಾಘ್ರಾಣ ಮಾಡಿ ಬಹು ಸಂತೋಷಗೊಳಿಸಿದನು. ಸಂತೋಷ ಚಿತ್ತರಾಗಿರುವ ಕುಂತಿಯನ್ನೂ ದ್ರೌಪದಿಯನ್ನೂ ನೋಡಿ ಹರ್ಷದಿಂದ ಧರ್ಮಪುತ್ರನು ಶ್ರೀಕೃಷ್ಣನನ್ನು, ''ಎಲೈ ಶ್ರೀಕೃಷ್ಣನೇ! ನಾನು ಮಾಡಬೇಕಾದ ಯಾಗ ಕಾರ್ಯಕ್ಕಾಗಿ ನಿನ್ನನ್ನು ಭೀಮಸೇನನ ಮೂಲಕ ಇಲ್ಲಿಗೆ ಕರೆಯಿಸಿಕೊಂಡೆನು. ವಸುದೇವಾದಿಗಳೆಲ್ಲರೂ ಕುಶಲರಾಗಿರುವರೇ! ನಿಮ್ಮ ತಾಯಿಯೂ ಭಾರ್ಯೆಯರೂ ಇತರ ಸ್ತ್ರೀಯರೂ ಬರಲಿಲ್ಲವಲ್ಲಾ!'' ಎಂದು ಕೇಳಿದನು. ಅದಕ್ಕೆ ಕೃಷ್ಣನು, ''ವಸುದೇವನೂ ಬಲರಾಮನೂ ದ್ವಾರಕೆಯಲ್ಲಿಯೇ ಇರುವರು; ಉಳಿದ ಸ್ತ್ರೀ ಪುರುಷರೆಲ್ಲರೂ ಬಂದಿರುವರು; ಅವರೆಲ್ಲರೂ ಭೀಮನೊಡನೆ ಗಂಗಾ ನದಿಯ ದಡದಲ್ಲಿ ಬಂದಿಳಿದಿರುವರು; ನಾನು ನಿನ್ನನ್ನು ನೋಡಬೇಕೆಂಬ ಕುತೂಹಲದಿಂದ ಮುಂದೆ ಬಂದೆನು'' ಎಂದು ಹೇಳಿದನು. ಆಗ ಧರ್ಮರಾಜನು, ''ಎಲೈ ಅರ್ಜುನನೇ! ಶ್ರೀಕೃಷ್ಣನು ಹೇಳಿದಂತೆ ಎಲ್ಲರೂ ಬಂದಿರುವರೇ ನೋಡು. ನಮ್ಮ ನಾಥನಾದ ಶ್ರೀಕೃಷ್ಣನಿಂದ ಲೋಕದಲ್ಲಿ ನಾವು ಧನ್ಯರೆಂಬುದಕ್ಕೆ ಸಂಶಯವಿಲ್ಲ. ನಾವು ಆ ನಮ್ಮ ಸ್ನೇಹಿತರನ್ನು ಎದುರುಗೊಳ್ಳಲು ಈಗಲೇ ಹೊರಡೋಣ. ಕುಂತಿಯೂ ಪ್ರಭಾವತಿಯೂ ದ್ರೌಪದಿಯೂ ದೇವಕಿಯನ್ನೆದುರುಗೊಳ್ಳಲು ಹೊರಡಲಿ. ಸ್ವಜನನನ್ನು ಆದರಿಸಲು ಮಹಾಜನವೆಲ್ಲವೂ ನನ್ನ ಆಜ್ಞೆಯಂತೆ ಹೊರಡಲಿ'' ಎಂದಾಜ್ಞಾಪಿಸಿ, ಶ್ರೀಕೃಷ್ಣನೊಡನೆ ತಾನೂ ಹೊರಟನು. ಪುರದ ಬಹಿರ್ಭಾಗದಲ್ಲಿ ಶೂರನಾದ ಯೌವನಾಶ್ವನು ಸೇನಾ ಸಮೇತನಾಗಿ ಎದುರುಗೊಳ್ಳುವ ಸಮಾರಂಭದಲ್ಲಿ ಸಕಲ ವಾದ್ಯಗಳನ್ನೂ ಬಾರಿಸುವಂತೆ ತನ್ನ ಪರಿವಾರದವರಿಗೆ ತಿಳಿಸಿದನು. ದ್ರೌಪದಿಯು ಶ್ರೀಕೃಷ್ಣನೊಡನೆ ರಥದಲ್ಲಿ ಕುಳಿತು

ಮುಂದೆ ಹೊರಟಳು. ಆಗ ಗಾಯಕರು ಗಾನ ಮಾಡುತ್ತಿದ್ದರು, ನಾಟ್ಯಕುಶಲರು ನರ್ತನ ಮಾಡುತ್ತಿದ್ದರು, ವಂದಿಗಳೂ ಸೂತ ಮಾಗಧಿಗಳೂ ಸ್ತುತಿ ಪಾಠಗಳನ್ನು ಹೇಳುತ್ತಿದ್ದರು. ಧರ್ಮರಾಜನ ಸೈನ್ಯವು ಹೊರಡಲು, ಶಂಖ, ದುಂದುಭಿ ಮೊದಲಾದ ವಾದ್ಯಗಳು ಮೊಳಗುತ್ತಿದ್ದುವು. ಇತರ ಜನರೆಲ್ಲರೂ ಸಂತೋಷದಿಂದ ಉಬ್ಬಿ ನಾನಾವಿಧ ಚೇಷ್ಟೆಗಳನ್ನು ಮಾಡುತ್ತ ಹೊರಟರು. ಪ್ರಭಾವತಿಯು ದೇವಕಿ ರುಕ್ಮಿಣಿಯರನ್ನು ನೋಡುವುದಕ್ಕಾಗಿ ರತ್ನಾದಿಗಳನ್ನು ತೆಗೆದುಕೊಂಡು ತನ್ನ ಬಂಧುಗಳೊಡನೆ ಹೊರಟಳು; ನಾನಾಲಂಕಾರ ಭೂಷಿತರಾದ ಹತ್ತುಸಾವಿರ ಮಂದಿ ಇತರ ಸ್ತ್ರೀಯರೂ ಹೊರಟರು.

ಬಳಿಕ ಯಾದವರೆಲ್ಲರೂ ಸೇನೆಯನ್ನು ಸನ್ನಾಹಗೊಳಿಸುತ್ತಿದ್ದರು. ದೇವಕಿ ಮೊದಲಾದವರಿಗೆ ಸ್ವರ್ಣ ರತ್ನ ಖಚಿತವಾಗಿಯೂ ಚಿತ್ರ ಚೀನಾಂಬರಗಳನ್ನು ಸುತ್ತಿ ಅಲಂಕೃತವಾಗಿಯೂ ಇರುವ ಪಲ್ಲಕ್ಕಿಗಳು ಸಿದ್ಧವಾದುವು. ಕೈಯಲ್ಲಿ ಚಾಮರ ವ್ಯಜನಗಳನ್ನು ಹಿಡಿದು ಸೇವಿಸುತ್ತಿರುವ ನಾರೀ ಶತದಿಂದ ಪರಿವೃತವಾದ ಪಲ್ಲಕ್ಕಿಯೊಂದರಲ್ಲಿ ಕುಳಿತಿರುವ ದೇವಕಿಯನ್ನು ನೋಡಿ ಧರ್ಮರಾಜನು ಬಂದು ನಮಸ್ಕರಿಸಿ, ಭೃತ್ಯನಂತೆ ಮುಂದೆ ನಿಂತನು. ಭೀಮನು ನೆಲದ ಮೇಲೆ ನಿಂತಿರುವ ಧರ್ಮನಂದನನನ್ನು ನೋಡಿ ಆನೆಯಿಂದಿಳಿದು ಆತನ ಪಾದಕ್ಕೆರಗಿದನು ; ಪ್ರದ್ಯುಮ್ನಾದಿ ವೀರರು ಧರ್ಮರಾಜನಿಗೆ ನಮಸ್ಕರಿಸಿದರು ; ಅರ್ಜುನಾದಿ ಪಾಂಡವರು ದೇವಕಿಗೆ ನಮಸ್ಕರಿಸಿದರು; ಯಶೋದೆಯೂ ದೇವಕಿಯೂ ಕುಂತಿಗೆ ನಮಸ್ಕರಿಸಿ, ಪ್ರಭಾವತಿಗೂ ಕುಂತಿಗೂ ಉಡುಗೊರೆಗಳನ್ನು ಕೊಟ್ಟರು. ದ್ರೌಪದಿಯು ಪ್ರಭಾವತಿಯೊಡನೆ ದೇವಕೀ ದೇವಿಗೆ ನಮಸ್ಕರಿಸಿ ಕಾಣಿಕೆಗಳನ್ನೊಪ್ಪಿಸಿದಳು. ರುಕ್ಮಿಣಿಯೇ ಮೊದಲಾದ ಶ್ರೀಕೃಷ್ಣನ ಸ್ತ್ರೀಯರೆಲ್ಲ ಕುಂತಿಯನ್ನಾದರಿಸಿ ನಮಸ್ಕಾರ ಮಾಡಿ ಕಾಣಿಕೆಗಳನ್ನೊಪ್ಪಿಸಿ, ದ್ರೌಪದಿಯನ್ನು ನೋಡುವುದಕ್ಕಾಗಿ ಹೊರಟು, ರತ್ನ ಚಂದನ ವಸ್ತ್ರಾದಿಗಳನ್ನು ತೆಗೆದುಕೊಂಡು ಹೋಗಿ ಕೊಟ್ಟು ಆದರಿಸಿದರು. ಸತ್ಯಭಾಮೆಯು ನಸು ನಗುತ್ತ ದ್ರೌಪದಿಯನ್ನು ಕುರಿತು, "ಎಲೈ ದ್ರೌಪದಿಯೇ! ಜಗತ್ಪತಿಯಾದ ಶ್ರೀಕೃಷ್ಣನೊಬ್ಬನನ್ನು ಸ್ವಾಧೀನ ಮಾಡಿಕೊಳ್ಳುವುದೇ ನಮಗೆ ಅಸಾಧ್ಯವಾಗಿರುವಾಗ ನೀನು ಐದು ಮಂದಿ ಪತಿಗಳನ್ನು ಹೇಗೆ ವಶಪಡಿಸಿಕೊಂಡಿರುವೆ? ಶ್ರೀಕೃಷ್ಣನನ್ನು ನೀನು ವಶ ಮಾಡಿಕೊಂಡಿರುವ ಹಾಗಿದೆ. ತಂಗಿಯಾದ ನಿನ್ನನ್ನು ಆತನು ಬಿಟ್ಟಿರಲಾರನು; ನೀನೂ ಅವನನ್ನುಳಿದು ಜೀವಿಸಲಾರೆ. ನಿನ್ನ ಆಂತರ್ಯಕ್ಕೊಳಗಾಗಿರುವ ನಿನ್ನ ಪತಿಗಳೈದು ಮಂದಿಗಳಿದುರಿಗೆ ಯಾವ ಉಪಾಯದಿಂದ ಶ್ರೀಕೃಷ್ಣನನ್ನೊಲಿಸಿಕೊಂಡಿದ್ದೀಯೆ? ಅದನ್ನು ನನಗೆ ತಿಳಿಸು. ಇಂತಹ ಕಾರ್ಯ ಮಾಡುತ್ತಿದ್ದರೂ ಜನಕ್ಕೆ ನೀನು ನಾಚುವುದಿಲ್ಲ, ನಮಗೆ ಹೆದರುವುದಿಲ್ಲ, ಧರ್ಮ ಪರರಾದವರ ಆದರಣೆಗೊಳಗಾಗಿದ್ದೀಯೆ ; ಅದು ಹೇಗೆ?" ಎಂದು ಕೇಳಿದಳು.

ಅದನ್ನು ಕೇಳಿ ದ್ರೌಪದಿಯು ಸತ್ಯಭಾಮೆಯನ್ನು ಕುರಿತು, "ಎಲೈ ಸತ್ಯಭಾಮೆಯೇ! ನಿನ್ನ ಮನಸ್ಸು ಶ್ರೀಕೃಷ್ಣನನ್ನು ಬಿಟ್ಟು ಸವತಿಯಲ್ಲಿ ಪ್ರವೇಶಿಸುವುದು; ಇದು ಪ್ರಬಲವಾದ ದುಷ್ಕರ್ಮದ ಫಲವು. ಕೃಷ್ಣನನ್ನು ನೀನು ಅವಮಾನಗೊಳಿಸುವೆ;

ನಾನು ಆತನನ್ನು ಆಶ್ರಯಿಸುವೆನು. ಆದಕಾರಣ ಆತನು ತನ್ನ ಮನೋಗತವನ್ನೆಲ್ಲ ನನಗೆ ತಿಳಿಸುವನು. ದುರ್ಯೋಧನ ಸಭಾ ಮಧ್ಯದಲ್ಲಿ ಅಕ್ಷಯ ವಸ್ತ್ರವನ್ನು ಕೊಟ್ಟು ನನ್ನ ಮಾನವನ್ನು ರಕ್ಷಿಸಿದವನು ಶ್ರೀಕೃಷ್ಣನೊಬ್ಬನೇ. ನೀನು ಹಾಗೆ ವಸ್ತ್ರ ಮೊದಲಾದುವನ್ನು ಕೊಡಲಾರೆ. ನಮ್ಮಣ್ಣನು ನಿನ್ನನ್ನು ವಂಚಿಸಿ ನನಗೆ ವಸ್ತ್ರಗಳನ್ನು ಕೊಟ್ಟನು. ಅಂತಹ ಧರ್ಮಜ್ಞನಾದ ನಿನ್ನ ಪತಿಯನ್ನು ನೀನು ಎಲ್ಲರೆದುರಿಗೂ ನಾರದನಿಗೆ ದಾನ ಮಾಡಿದೆ; ಹಿಂದೆ, ದೇವತೆಗಳ ಅಲಂಕಾರಾರ್ಥವಾಗಿದ್ದ ಪಾರಿಜಾತ ವನ್ನು ಹರಣ ಮಾಡಿಸಿದೆ. ದೇವ ಬ್ರಾಹ್ಮಣ ಗುರು ದ್ರವ್ಯವನ್ನು ವಿವೇಕಿಗಳು ಆಕ್ರಮಿಸರು; ನೀನು ಹಾಗೆ ಅಪಹರಿಸಿದ್ದರೂ ನಿನಗೆ ನಾಚಿಕೆಯಿಲ್ಲ. ಕೃಷ್ಣ ದಾನ ವನ್ನು ಪರಿಗ್ರಹಿಸಿ ಪುನಃ ದತ್ತಾಪಹಾರ ರೂಪವಾಗಿ ಶ್ರೀಕೃಷ್ಣನನ್ನು ನಿನ್ನ ಸ್ವಾಧೀನ ಮಾಡಿದ ಮೂಢನಾದ ಆ ನಾರದನು ನಿಂದ್ಯನಲ್ಲವೇ? ನಾರದನಿಗೆ ಶ್ರೀಕೃಷ್ಣನಿಗಿಂತ ಹೆಚ್ಚಾದ ವಸ್ತುವು ಯಾವುದು ಸಿಕ್ಕಿತು? ಇದರಿಂದಲೇ, 'ವಿಪ್ರಾಃ ಪಶ್ಚಿಮ ಬುದ್ಧಯಃ' ಎಂಬ ನೀತಿ ವಾಕ್ಯವು ಸಿದ್ಧವಾಗುವುದು'' ಎಂದು ಹೇಳಿದಳು.

ಹೀಗೆ ಹೇಳುತ್ತಿರುವ ದ್ರೌಪದಿಯನ್ನು ನೋಡಿ ಬಾಣ ಪುತ್ರಿಯಾದ ಉಷೆಯು ಆಕೆಗೆ ನಮಸ್ಕರಿಸಿ, ಕುಂತಿಯ ಬಳಿಗೆ ಬಂದು ಆಕೆಗೆ ನಮಸ್ಕಾರ ಮಾಡಿ, ದುಕೂಲ ರತ್ನ ಭೂಷಣಗಳನ್ನೊಪ್ಪಿಸಿದಳು. ಆಗ ಸತ್ಯಭಾಮೆಯು ಸಖಿಯರೊಡನೆ ಮೇನಾ ವನ್ನು ಹತ್ತಿ ಕುಳಿತು, ''ನಾವೆಲ್ಲರೂ ದೇವಕಿಯೊಡನೆ ಹೊರಟು ಯಜ್ಞಾಶ್ವವನ್ನು ನೋಡಿಬರಬೇಕೆಂಬ ಕುತೂಹಲವಿದೆ'' ಎಂದು ಹೇಳಲು, ಕೃಷ್ಣನು ಧರ್ಮರಾಜ ನನ್ನು ನೋಡಿ, ''ಅಯ್ಯಾ ಧರ್ಮನಂದನನೇ! ದೇವಕಿ ಮೊದಲಾದ ನಮ್ಮ ಸ್ತ್ರೀಯ ರೆಲ್ಲರೂ ಅಶ್ವವನ್ನು ನೋಡಬೇಕೆಂದು ಕುತೂಹಲಪಡುವರು'' ಎಂದು ಹೇಳಿದನು. ಆಗ ಧರ್ಮರಾಜನು ತನ್ನ ಪರಿವಾರದವರನ್ನು ನೋಡಿ, ''ಎಲೈ ವೀರರಿರಾ! ಈ ಸ್ತ್ರೀಯರೆಲ್ಲರೂ ಅಶ್ವವನ್ನು ನೋಡಬೇಕೆಂದಿರುವರು; ಇವರೆಲ್ಲರಿಂದಲೂ ಧೌಮ್ಯನು ಅಶ್ವ ಪೂಜೆಯನ್ನು ಮಾಡಿಸಲಿ; ಆಗ ಇವರೆಲ್ಲರೂ ಅದನ್ನು ನೋಡಿ ಸಂತೋಷಪಡಲಿ. ನೀವು ಆ ವರೆಗೂ ಶಸ್ತ್ರ ಪಾಣಿಗಳಾಗಿ ಆನೆಗಳ ಮೇಲೆಯೂ ರಥಗಳ ಮೇಲೆಯೂ ಅಂಗ ರಕ್ಷಕರಾಗಿದ್ದು ನೋಡಿಕೊಳ್ಳುತ್ತಿರಿ'' ಎಂದು ಆಜ್ಞೆ ಮಾಡಿದನು. ಸ್ತ್ರೀಯ ರೆಲ್ಲರೂ ಅಶ್ವವನ್ನು ಪೂಜಿಸುತ್ತಿರುವಾಗ ವೀರರೆಲ್ಲರೂ ಆಯುಧ ಪಾಣಿಗಳಾಗಿ ಕಾವಲಿದ್ದರು. ಆಗ ಸ್ತ್ರೀಯರು ಮೇನಾಗಳನ್ನು ಹತ್ತಿ ಅದರ ಕಿಟಕಿಗಳಿಂದ, ನೆಲದ ಮೇಲೆ ಕುಣಿದಾಡುತ್ತಿದ್ದ ಕುದುರೆಯನ್ನು ವಿನೋದವಾಗಿ ನೋಡುತ್ತಿದ್ದರು.

ಅಷ್ಟರಲ್ಲಿ, ಅನುಸಾಲ್ವನೆಂಬ ದೊರೆಯು ದೊಡ್ಡ ಸೇನೆಯೊಡನೆ ಅಲ್ಲಿಗೆ ಬಂದು, ತನ್ನ ಅಣ್ಣನ ವೈರವನ್ನು ನೆನೆದು, ಶ್ರೀಕೃಷ್ಣನು ಹಸ್ತಿನಪುರದಲ್ಲಿರುವುದನ್ನು ಕಂಡು ಹರ್ಷಿಸಿ, ಅವನ ಮೇಲಣ ಹಗೆಯನ್ನು ಸಾಧಿಸುತ್ತ ನಸು ನಕ್ಕು, ಆ ಯಜ್ಞಾಶ್ವ ವನ್ನು ಹಿಡಿದುಕೊಂಡು ತನ್ನ ಹಿಂದೆ ಕಟ್ಟಿಹಾಕಿ, ಗೃಧ್ರ ವ್ಯೂಹವನ್ನು ರಚಿಸಿ, ತನ್ನ ಮಂತ್ರಿಯಾದ ಸುರಥನನ್ನು ಕರೆದು—''ಶ್ರೀಕೃಷ್ಣನು ನಮ್ಮ ಅಣ್ಣನಾದ ಸಾಲ್ವ ನನ್ನು ನೀರಿನಲ್ಲಿ ಸಂಹರಿಸಿ, ವಿಮಾನವನ್ನು ಹತ್ತಿ ಹೋಗಿ ದೇವ ಲೋಕದಲ್ಲಿ ಈಗಲೂ

ಕಾಣಿಸುತ್ತಿರುವನು; ಈಗ ಧರ್ಮರಾಜನ ಯಜ್ಞಾರ್ಥವಾಗಿ ಸಂಸಾರ ಸಮೇತ ವಾಗಿ ಬಂದಿದ್ದಾನೆ. ಅವನು ಈಗ ಹೋಗದೆ ಇರಲಿ. ಗೃಧ್ರನನ್ನು ನೋಡಿ ಗರುಡನು ಯುದ್ಧಕ್ಕೆ ಸಿದ್ಧವಾಗಿ ನಿಲ್ಲಬೇಕಷ್ಟೆ! ಶ್ರೀಕೃಷ್ಣನನ್ನೂ ಧರ್ಮರಾಜನನ್ನೂ ನೆರೆ ಹಿಡಿಯಬೇಕು. ಅದಕ್ಕೆ ಅನುಕೂಲವಾಗುವಂತೆ ನಮ್ಮ ಸೇನೆಯನ್ನೇರ್ಪಡಿಸು. ಶೂರರಾದ ಭೀಮಾದಿಗಳು ಪ್ರದ್ಯುಮ್ನಾದಿಗಳೊಡನೆ ಸೇರಿ ಧರ್ಮರಾಜನ ಸೇನೆಯನ್ನು ರಕ್ಷಿಸುತ್ತಿರುವರು. ಆದಕಾರಣ ನಮ್ಮವರೆಲ್ಲರೂ ಸೇರಿ ಆ ಬಂಧು ಘಾತುಕನಾದ ಕೃಷ್ಣನನ್ನು ಬಿಡಕೂಡದು. ಯುದ್ಧದಲ್ಲಿ ಯಾವನು ಕೃಷ್ಣನನ್ನು ರಕ್ಷಿಸುವುದಕ್ಕೆ ಶಕ್ತನಾಗುವನೋ ಆ ದುಷ್ಟನನ್ನು ಹೊಡೆದು ಕೆಡಹುವೆನು. ಕೃಷ್ಣನನ್ನು ಹಿಡಿಯದವನು ಸಹೋದರನಾಗಲಿ ಮಗನಾಗಲಿ ಮಿತ್ರನಾಗಲಿ ನನಗೆ ಅವನಲ್ಲಿ ಇಷ್ಟವಿಲ್ಲ. ಆ ಕಾರ್ಯವನ್ನು ಮಾಡದ ಚತುರಂಗ ಸೈನ್ಯದಿಂದ ಪ್ರಯೋಜನವೇನು? ಈವರೆಗೆ ಸೇನೆಯವರು ರಾಜ ದ್ರವ್ಯಾಪಹಾರಕವಾದ ಅಕಾರ್ಯಗಳೆಷ್ಟನ್ನೇ ಮಾಡಿರಲಿ, ಈಗ ಅವರು ಕೃಷ್ಣನನ್ನು ಹಿಡಿದುಕೊಂಡರೆ ಅವೆಲ್ಲವನ್ನೂ ಕ್ಷಮಿಸಿಬಿಡುವೆನು. ನಮ್ಮ ಭೃತ್ಯರು ಯಾರೇ ಆಗಲಿ ಶ್ರೀಕೃಷ್ಣನ ಎದುರಿಗೆ ನಿಂತು ಶತ್ರುಗಳೊಡನೆ ಯುದ್ಧ ಮಾಡಿದರೆ ಅವರು ಯಾವ ಅಪರಾಧಕ್ಕೂ ಗುರಿಯಾಗರು; ಅಂತಹವರಿಗೆ ನಾನು ಯಥೇಚ್ಛವಾಗಿ ಧನವನ್ನು ಕೊಡುವೆನು. ದೊರೆಯು ಕುಲೀನರಾಗಿಯೂ ಧರ್ಮಾತ್ಮರಾಗಿಯೂ ಯುದ್ಧ ಪರಾಯಣರಾಗಿಯೂ ಇರುವ ಶೂರರಿಗೆ ತನ್ನ ಸರ್ವಸ್ವವನ್ನೂ ಕೊಟ್ಟು ಯುದ್ಧಕ್ಕೆ ನಿಲ್ಲಿಸಬೇಕು; ಅವರು ಯುದ್ಧದಲ್ಲಿ ಜಯಶೀಲರಾಗಿ ದೊರೆಗೆ ಕೀರ್ತಿಯನ್ನು ತರುವರು. ಶ್ರೀಕೃಷ್ಣನಲ್ಲದೆ ನಮ್ಮ ಸುಖವನ್ನು ನಾಶ ಮಾಡುವವರು ಯಾರೂ ಇಲ್ಲ. ಆದಕಾರಣ, ಎಲ್ಲರೂ ಸೇರಿ ಅವನ ಮೇಲೆ ಬಿದ್ದು ಅವನನ್ನು ಹಿಡಿಯಿರಿ; ಇದರಿಂದ ಯಾವ ದೋಷವೂ ಇಲ್ಲ; ಇದೇ ಯುಕ್ತವಾದ ಧರ್ಮವು. ಈ ಕೃಷ್ಣನು ದಾತೃವಾಗಿ, ಯಾವ ಯಾಚಕನಿಗೂ ವಿಮುಖನಾಗದೆ ಪ್ರಸನ್ನನಾಗಿರುವನು; ಇವನು ಯಾವಾಗಲೂ ಆಯುಧ ಪಾಣಿಯಾಗಿಯೇ ಇರುವನು; ರಥವಿದ್ದರೂ ಪಕ್ಷಿ ವಾಹನನಾಗಿರುವನು; ಇವನು ಯಾವಾಗಲೂ ಭೇದಿಸುವುದಕ್ಕೂ ದಹಿಸುವುದಕ್ಕೂ ನೆನೆಯಿಸುವುದಕ್ಕೂ ಸಾಧ್ಯನಲ್ಲ. ಇಂತಹವನನ್ನು ಒಬ್ಬನೇ ಯುದ್ಧದಲ್ಲಿ ಜಯಿಸುವುದಕ್ಕೆ ಹೇಗೆ ಸಾಧ್ಯವು? ಇವನನ್ನು ಸ್ವಾಧೀನ ಮಾಡಿಕೊಳ್ಳುವ ರೀತಿಯನ್ನು ಧ್ರುವನು ಬಲ್ಲನು; ಆ ಹುಡುಗನು ದೂರದಲ್ಲಿರುವನು; ಬಲಿಯು ಪಾತಾಳ ಲೋಕದಲ್ಲಿರುವನು; ವಿಭೀಷಣನೂ ಸ್ವಲ್ಪ ಬಲ್ಲನು; ಪ್ರಹ್ಲಾದನು ಚೆನ್ನಾಗಿ ತಿಳಿದಿರುವನು. ಸತ್ಯಭಾಮೆಯು ತನ್ನ ಕೈಗೆ ಒಪ್ಪಿಸಿ ಕೊಟ್ಟ ಕೃಷ್ಣನನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕೆ ಶಕ್ತಿಯಿಲ್ಲದೆ ಪುನಃ ಹಿಂದಕ್ಕೆ ಕೊಟ್ಟನಾದ ಕಾರಣ, ನಾರದನು ಈತನನ್ನು ಸ್ವಾಧೀನಪಡಿಸಿಕೊಂಡಿರುವನೆಂದು ಹೇಳುವ ಮಾತು ಸುಳ್ಳು. ಈಗ ಶ್ರೀಕೃಷ್ಣನನ್ನು ಹಿಡಿದುಕೊಳ್ಳುವ ಸಾಮರ್ಥ್ಯವು ಯಾರಿಗೂ ಇಲ್ಲವೆಂದು ಬಲ್ಲೆನು. ಆದಕಾರಣ ನಾನು ಸ್ವಶಕ್ತಿಯಿಂದಲೇ ಈತನನ್ನು ಅವನ ಸೇನೆಯ ಸಹಿತವಾಗಿ ಹಿಡಿದುಕೊಳ್ಳುವೆನು" ಎಂದು ಹೇಳಿ ಆ ದೊರೆಯು ಯುದ್ಧಕ್ಕೆ ನಿಂತು, ಗೃಧ್ರವ್ಯೂಹ ರಚನೆ ಮಾಡಿ, ಶ್ವೇತಚ್ಛತ್ರ ಧವ

ಸಾಗಿದ್ದನು ; ಆನೆಗಳು ಬೃಂಹಿತ ಧ್ವನಿ ಮಾಡಿದುವು, ಕುದುರೆಗಳು ಹೇಷಾ ರವವನ್ನು ಮಾಡಿದುವು, ರಥ ಚಕ್ರಗಳು ಚೀತ್ಕಾರ ಶಬ್ದ ಮಾಡಿದುವು, ಪದಾತಿಗಳು ಸಿಂಹ ನಾದ ಮಾಡುತ್ತಿದ್ದರು ; ಎಲ್ಲರೂ ದಿವ್ಯಾಂಬರಗಳನ್ನು ಧರಿಸಿ ಪ್ರಳಯ ಕಾಲದ ಸೂರ್ಯನಂತೆ ಹೊಳೆಯುತ್ತ, ಕೋಪದಿಂದ, "ಅರ್ಜುನನೆಲ್ಲಿ? ಕೃಷ್ಣನೆಲ್ಲಿ?" ಎಂದು ಆರ್ಭಟಿಸುತ್ತ ಕೃಷ್ಣನು ಬರುವ ಮಾರ್ಗವನ್ನೇ ನೋಡುತ್ತ ಕುದುರೆಯನ್ನು ರಕ್ಷಿಸುತ್ತಿದ್ದರು.

ಇಂತು ಅನುಸಾಲ್ವ ಗಮನವೆಂಬ ಹನ್ನೆರಡನೆಯ ಅಧ್ಯಾಯವು.

[ಮುಂದುವರಿಯುವುದು]

---

# ಗ್ರಂಥ ವಿಮರ್ಶೆ

---

## ೧. ಶ್ರೀ ಪ್ರಭುದೇವರ ನಟನ ತಾರಾವಳಿ

ಶೋಧಕರು ಮತ್ತು ಪ್ರಕಾಶಕರು.—ಬುದ್ಧಯ್ಯಾ ಮಗೆಯ್ಯಾ ಪುರಾಣೀಕ, ತೇರದಾಳ.

ಕ್ರೌ ಅಷ್ಟಪತ್ರ ಪುಟಗಳು ೧೮; ತೋಂಟದಾರ್ಯ ಮುದ್ರಣಾಲಯ, ಧಾರವಾಡ; ೧೯೩೦.

ಇದು ಶ್ರೀಮನ್ನಿರಂಜನ ಜಗದ್ಗುರು ಗ್ರಂಥ ಮಾಲೆಯ ೬ನೆಯ ಪುಷ್ಪ. "ಇದು ಕನ್ನಡ ಕಾಂಬೋದಿ ರಾಗದಲ್ಲಿ ಹಾಡಿನ ರೂಪವಾಗಿದೆ. ಇದರಲ್ಲಿ ಇಪ್ಪತ್ತೇಳು ನುಡಿಗಳಿವೆ. ಈ ಗ್ರಂಥದಲ್ಲಿ ಮುಖ್ಯವಾಗಿ ಶ್ರೀ ಪ್ರಭುದೇವನು ಬನವಾಸಿಯ ಮಧುಕೇಶ್ವರನ ಮುಂದೆ ಒಂದು ಮದ್ದಳೆಯನ್ನು ಹಗಲೊಳಾಂತು ನರ್ತಿಸಲು, ಅದು ಮಾಯೆಗೆ ತಿಳಿದು ಅವನನ್ನು ಕರೆಯಿಸಿ ತನ್ನ ಮದ್ದಳಿಗನನ್ನಾಗಿ ಮಾಡಿಕೊಳ್ಳಲು, ಅವನು ಅವಳ ನರ್ತನಕ್ಕೆ ಮದ್ದಳೆಯನ್ನು ಬಾರಿಸಿದಾಗ ಅವಳು ಮೋಹಿತಳಾದ ಮೊದಲಾದ ವಿಷಯಗಳು ಹೇಳಿವೆ"—ಎಂದು ಪೀಠಿಕೆಯಲ್ಲಿದೆ.

ಈ ಗ್ರಂಥ ಮಾಲೆಯ ಹಿಂದಣ ಗ್ರಂಥಗಳನ್ನು ವಿಮರ್ಶಿಸುವಾಗ, ಅವುಗಳಲ್ಲಿ ಮುದ್ರಣದ ತಪ್ಪುಗಳು ಹೆಚ್ಚಾಗಿರುವುವೆಂದು ಹೇಳಿದ್ದೆವು; ಪ್ರಕೃತ ಗ್ರಂಥದಲ್ಲಿ ಅಷ್ಟು ಹೆಚ್ಚಾಗಿಲ್ಲದಿದ್ದರೂ ಇನ್ನೂ ಇರುವುವು. ತಪ್ಪುಗಳೇ ಇಲ್ಲದಂತೆ ಜೋಕೆಯಿಂದ ಮುದ್ರಣ ಮಾಡಿಸಿದಲ್ಲಿ ಪಾಠಕರಿಗೆ ಹೆಚ್ಚು ಪ್ರಯೋಜನವುಂಟಾಗುವುದು.

ಪಾಠಕರು ಈ ಗ್ರಂಥಗಳಿಗೆ ಪ್ರೋತ್ಸಾಹ ಕೊಟ್ಟು ಪ್ರಕಾಶಕರ ಶ್ರಮವನ್ನು ಸಾರ್ಥಕಗೊಳಿಸುವರೆಂದು ಹಾರೈಸುತ್ತೇವೆ.

---

## ೨. ಆರೋಗ್ಯ ಪ್ರತಾಪ

ಗ್ರಂಥಕರ್ತರು.—ಕೊರಡ್ಕಲ್ ಶ್ರೀನಿವಾಸರಾಯರು, ಉಡಿಪಿ.

ಕ್ರೌ ಅಷ್ಟಪತ್ರ ಪುಟಗಳು 24+96+8; ಬೆಲೆ ೧೦ ಆಣೆ; ಸದಾನಂದ ಕೋ-ಆಪರೆಟಿವ್ ಮುದ್ರಣಾಲಯ, ಮಂಗಳೂರು; ೧೯೩೦.

ಇಂದಿಗೆ ಸುಮಾರು ಹದಿನೆಂಟು ಹತ್ತೊಂಭತ್ತು ವರುಷಗಳ ಹಿಂದೆ, ಎಂದರೆ, ಶಿಶು ಸಪ್ತಾಹ ಸಂಘಗಳೂ, ಶಿಶು ರಕ್ಷಣ ಸಂಘಗಳೂ ಸ್ಥಾಪಿತವಾಗುವುದಕ್ಕೆ ಮುಂಚೆ,

ಡಾಕ್ಟರು ಪದ್ಮನಾಭ ಪಲ್ಪು ಅವರು ಬೆಂಗಳೂರಿನಲ್ಲಿ ಆರೋಗ್ಯಾಧಿಕಾರಿಗಳಾಗಿದ್ದಾಗ, ಮೈಸೂರು ದಸರಾ ಮಹೋತ್ಸವ ಕಾಲದಲ್ಲಿ ಆರೋಗ್ಯ ಪ್ರದರ್ಶನವೊಂದನ್ನು (Health Exhibition) ಅಲ್ಲಿಯ ರಂಗಾಚಾರ್ಲು ಮೆಮೋರಿಯಲ್ ಹಾಲಿನಲ್ಲಿ ಏರ್ಪಡಿಸಿದ್ದರು; ಆರೋಗ್ಯ ನಾಟಕ (Health Drama) ವೆಂಬ ನಾಟಕವೊಂದನ್ನು ಕನ್ನಡದಲ್ಲಿ ಬರೆಯಿಸಿದ್ದರು. ಅದನ್ನು 'ರತ್ನಾವಳಿ ನಾಟಕ ಸಂಘ'ದವರು ಅದೇ ಮೆಮೋರಿಯಲ್ ಹಾಲಿನಲ್ಲಿ ಅಭಿನಯಿಸಿದರು. ನಾನೂ ನಾಟಕಕ್ಕೆ ಹೋಗಿದ್ದೆನು. ನಾಟಕವು ಬಹಳ ಸ್ವಾರಸ್ಯವಾಗಿದ್ದಿತು. ಅನೇಕ ಜನರು ಬಂದಿದ್ದು ನೋಡಿ ಸಂತೋಷಪಟ್ಟುದು ನನಗೆ ಜ್ಞಾಪಕವಿದೆ. ಆದರೆ, ಆ ನಾಟಕವು ಅಚ್ಚಾಗಲಿಲ್ಲವೆಂದು ತೋರುತ್ತದೆ. ಅಲ್ಲಿಂದೀಚೆಗೆ ಇಂದಿನ ವರೆಗೆ ಅಂತಹ ನಾಟಕವನ್ನು ಕನ್ನಡದಲ್ಲಿ ಅಭಿನಯಿಸಿದುದನ್ನು ನಾನು ನೋಡಿಯೂ ಇಲ್ಲ, ಅಚ್ಚಾದ ಅಂತಹ ನಾಟಕವನ್ನು ಓದಿಯೂ ಇಲ್ಲ.

ಜನಗಳಲ್ಲಿ ತಿಳಿವಳಿಕೆಯು ಹರಡುವುದಕ್ಕೆ, ವಿಷಯಗಳನ್ನು ನಾಟಕ ರೂಪದಲ್ಲಿ ಅವರ ಕಣ್ಣ ಮುಂದೆ ಅಭಿನಯಿಸುವುದರಿಂದುಂಟಾಗುವ ಪರಿಣಾಮದ ಹಾಗೆ ಮತ್ತಾವ ವಿಧದಿಂದಲೂ ಆಗಲಾರದು. ಓದುವುದರಿಂದ, ನಾಟಕವನ್ನು ಓದಿದವನಿಗೆ ಮಾತ್ರ ಪ್ರಯೋಜನವಾಗುವುದೇ ವಿನಾ ಇತರರಿಗಿಲ್ಲ. ಆದರೆ, ಅದನ್ನು ರಂಗಸ್ಥಳದಲ್ಲಿ ಅಭಿನಯಿಸಿದರೆ ಸಾವಿರಾರು ಮಂದಿಗೆ, ಅವರು ಅಕ್ಷರಜ್ಞರಾಗಿರಲಿ, ಅಕ್ಷರಜ್ಞರಲ್ಲದಿರಲಿ, ಜ್ಞಾನಬೋಧೆಯುಂಟಾಗುತ್ತದೆ.

ನಮ್ಮ ಆಯುರ್ವೇದ ಶಾಸ್ತ್ರದಲ್ಲಿ ಮೋಕ್ಷಸಾಧನವಾದೀ ಮಾನವ ಶರೀರವನ್ನು ಆರೋಗ್ಯಸ್ಥಿತಿಯಲ್ಲಿ ಕಾಪಾಡಿಕೊಳ್ಳುವುದಕ್ಕಾಗಿ ಅನುಸರಿಸಬೇಕಾದ ಆರೋಗ್ಯ ಸೂತ್ರಗಳು ಹೇರಳವಾಗಿವೆ. ಭಾರತೀಯರ ಆಚಾರಗಳೆಲ್ಲವೂ ಆರೋಗ್ಯಕ್ಕೆ ಸಂಬಂಧ ಪಾದುವು. ಎಂಜಲು ಮಾಡಬೇಡವೆಂದು ಮಕ್ಕಳಿಗೆ ಹೇಳಿಕೊಡುತ್ತೇವೆ, ಉಗುರುಗಳನ್ನು ಕಡಿಯಕೂಡದೆಂದು ಹೇಳುತ್ತೇವೆ, ಕಂಡಕಡೆ ಉಗುಳಕೂಡದೆಂದೂ, ಹೇಸಿಗೆ ಮಾಡಕೂಡದೆಂದೂ, ಮಲಮೂತ್ರಗಳ ವಿಸರ್ಜನೆಯಾದನಂತರ ಪ್ರಕ್ಷಾಳನ ಮಾಡಿಕೊಳ್ಳಬೇಕೆಂದೂ, ಮಾರ್ಕಟ್ಟಿನಲ್ಲಿ ತರಕಾರಿಯನ್ನು ಕೊಂಡು ಅದನ್ನು ಮನೆಗೆ ತಂದೊಡನೆಯೇ ಶುಭ್ರವಾದ ನೀರಿನಲ್ಲಿ ಚೆನ್ನಾಗಿ ತೊಳೆದು ಉಗ್ರಾಣದಲ್ಲಿಡಬೇಕೆಂದೂ, ಹೊರಗೆ ಹೋಗಿ ಸುತ್ತಿಕೊಂಡು ಬಂದರೆ ಕಾಲುಗಳನ್ನು ತೊಳೆದುಕೊಂಡು ಕೋಣೆಯೊಳಕ್ಕೆ ಹೋಗಬೇಕೆಂದೂ, ಬಬ್ಬನು ಎಂಜಲು ಮಾಡಿದ ಲೋಟಾವನ್ನು ಮತ್ತೊಬ್ಬನು ಚೆನ್ನಾಗಿ ತೊಳೆಯದೆ ಉಪಯೋಗಿಸಕೂಡದೆಂದೂ, ರೋಗಿಯನ್ನು ಮುಟ್ಟಿದರೆ ಕೈತೊಳೆದುಕೊಳ್ಳಬೇಕೆಂದೂ, ಮದ್ಯವನ್ನು ಸೇವಿಸಕೂಡದೆಂದೂ ಹೇಳುತ್ತೇವಷ್ಟೆ! ಆದರೆ, ಈ ನಿಯಮಗಳನ್ನು ಉಲ್ಲಂಘಿಸುವುದರಿಂದಾಗುವ ಕೆಡಕನ್ನು ನಾವು ಜನಗಳಿಗೆ ತಕ್ಕ ರೀತಿಯಲ್ಲಿ ತಿಳಿಸುವುದಿಲ್ಲ. ಇದನ್ನು ನಾಟಕ ರೂಪದಲ್ಲಿ ತಿಳಿಸಿದರೆ ಜನರಲ್ಲಿ ಜ್ಞಾನೋದಯವೂ ಆರೋಗ್ಯ ವಿಷಯದಲ್ಲಿ ಎಚ್ಚರಿಕೆಯೂ ಉಂಟಾಗಿ, ಸದಾಚಾರದಿಂದ ಅವರ ಆರೋಗ್ಯವು ಮೇಲಾಗುವುದರಲ್ಲಿ ಸಂಶಯವಿಲ್ಲ. ಈ ಕಾರ್ಯವನ್ನು

ಮ|| ರಾ|| ಕೊರಡ್ಕಲ್ ಶ್ರೀನಿವಾಸರಾಯರು ನಮ್ಮ ಮುಂದಿರುವ 'ಆರೋಗ್ಯ ಪ್ರತಾಪ' ನಾಟಕವಲ್ಲಿ ಬಹಳ ಚತುರತೆಯಿಂದ ನಿರ್ಮಿಸಿದ್ದಾರೆ. ಕುಡುಕ ಸುರೇಂದ್ರನ ಗತಿ ಕೊನೆಗೇನಾಯಿತೆಂಬುದನ್ನು ಓದಿದ, ಕೆನ್ನೆ ಹಿಂಡಿದರೆ ಹೆಂಡ ಸೂಸುವ, ಭಂಡ ಖದೀಮ ಕುಡುಕನ ಮನಸ್ಸು ಕೂಡ ಬದಲಾಯಿಸದೆ ಇರದು. ಈಗಣ ಪಟ್ಟಣಗಳಲ್ಲಿ ಮಾರಿಗೊಂಡದರಂತೆ ಇರುವ ಕಾಫಿ ಕ್ಲಬ್ಬುಗಳಲ್ಲಿ ನಡೆಯುವ ಅನಾಚಾರಗಳನ್ನು ಬಣ್ಣಿಸಲು ಹತ್ತು ನಾಲಗೆಗಳಿದ್ದರೂ ಸಾಲದು. ಸೂಳೆಯರ ಮೋಹ ಪಾಶಕ್ಕೆ ಕಟ್ಟುಬೀಳುವುದರಿಂದ ಪ್ರಾಪ್ತವಾಗುವ ಮನೆ ಹಾಳೂ, ವಂಶ ಪಾರಂಪರ್ಯವಾಗಿ ಸಂಭವಿಸುವ ನರಕ ಯಾತನೆಯೂ ತಿಮ್ಮಣ್ಣ, ಮಂಜಣ್ಣ—ಇವರುಗಳ ಸಂವಾದದಿಂದ ಮನಮುಟ್ಟುತ್ತದೆ. ನಾಟಕದಲ್ಲಿರುವ ಹಾಡುಗಳೂ ಪದ್ಯಗಳೂ ನಾಟಕಕ್ಕೆ ಹೆಚ್ಚು ಕಳೆಯನ್ನು ಕೊಡುತ್ತವೆ. ಈ ನಾಟಕವನ್ನು ಆಬಾಲ ವೃದ್ಧರೂ ಓದಬೇಕು; ಅಲ್ಲದೆ, ಜಾತ್ರೆಗಳೂ ಪ್ರದರ್ಶನಗಳೂ ನಡೆಯುವ ಕಡೆಗಳಲ್ಲಿ ಅಭಿನಯಿಸಿ ಜನಸಾಮಾನ್ಯಕ್ಕೆ ಆರೋಗ್ಯ ವಿಷಯದಲ್ಲಿ ಎಚ್ಚರಿಕೆಯನ್ನುಂಟುಮಾಡಬೇಕಾದುದು ಅತ್ಯಾವಶ್ಯಕವು. ಮ|| ರಾ|| ಕೊರಡ್ಕಲ್ ಶ್ರೀನಿವಾಸರಾಯರು ಈ ನಾಟಕ ರಚನೆಯಿಂದ ಕನ್ನಡಿಗರಿಗೆ ಮಹೋಪಕಾರವನ್ನು ಮಾಡಿರುವರೆಂಬುದು ನಮ್ಮ ಅಭಿಪ್ರಾಯ. ಅದಕ್ಕಾಗಿ ಅವರನ್ನು ನಾವು ಅಭಿನಂದಿಸುತ್ತೇವೆ.

ಪುಸ್ತಕವು ಅಂದವಾಗಿ ಅಚ್ಚಾಗಿದೆ; ಆದರೆ ಮುದ್ರಣದ ತಪ್ಪುಗಳು ಹೆಚ್ಚು. ಈ ಮುದ್ರಣವು ಬೇಗನೆ ಖರ್ಚಾಗಿ, ಮುಂದಣದು ತಪ್ಪುಗಳಿಲ್ಲದೆ ಮುದ್ರಿತವಾಗಿ ಪ್ರಚುರವಾಗುವುದೆಂಬುದು ನಮ್ಮ ಕೋರಿಕೆ. **ನಂ. ವೆಂ.**

---

## ೩. ಪ್ರತಿಜ್ಞಾ ಪಾಲನ

ಲೇಖಕರು.—ರಾಘವೇಂದ್ರ ಭೀಮರಾವ ಮನಸಬ್ದಾರ, ಸುರಪುರ.

ಕ್ರೌನ್ ಅಷ್ಟಪತ್ರ ಪುಟಗಳು ೧೦+೧೧೪; ಬೆಲೆ ೧ ರೂಪಾಯಿ; ಬೆಂಗಳೂರು ಪ್ರೆಸ್; ೧೯೩೦.

ಕನ್ನಡ ಕಡುಗಲಿಗಳಲ್ಲಿ ಕನ್ನಡಿಗರಿಗೆ ಈ ವೇಳೆಗೆ ಪರಿಚಿತವಾಗಿರುವ ಎಚ್ಚಮನಾಯಕನ ಕಥೆಯೇ ಈ ನಾಟಕದ ವಸ್ತು. "ದೇಶಭಾಷೆಯ ಸದಭಿಮಾನದಿಂದ ಪ್ರೇರಿತರಾಗಿ" ಸಮಾಜ ಸೇವೆಯೆಂದು ದೃಶ್ಯ ಕಾವ್ಯ ರಚನೆಯನ್ನು ಕೈಕೊಂಡ ಉತ್ಸಾಹಿ ತರುಣರು ಕವಿಗಳು. ಕರ್ಣಾಟಕದ ನವ ಜಾಗೃತಿಯ ಶುಭ ಸೂಚನೆಯಾದ ಈ ಪ್ರಯತ್ನಕ್ಕೆ ನಾವು ಅತ್ಯಾನಂದದಿಂದ ಸ್ವಾಗತವನ್ನೀಯುವೆವು.

"ಈ ನಾಟಕವು ಕಥಾನಕಕ್ಕಾಗಿಯೂ ಕೆಲ ಮಟ್ಟಿಗೆ ಭಾಷೆಯ ವಿಚಾರಗಳಿಗಾಗಿಯೂ ಶ್ರೀಮಾನ್ ಗಳಗನಾಥರವರ 'ಕುಮುದಿನಿ' ಎಂಬ ಕಾದಂಬರಿಗೆ ಋಣಿಯಾಗಿದೆ" ಎಂದು ಮ|| ರಾ|| ದ. ರಾ. ಬೇಂದ್ರೆ, ಬಿ.ಎ. ಅವರೂ, "ಭಾಷೆಯು

ತಟ್ಟನೇ ಮನಸ್ಸಿಗೆ ಅರ್ಥವಾಗುವಂತಿದ್ದುದರಿಂದ ಭಾವನೆಗಳು ಸರಳವಾಗಿ ಎದೆಯನ್ನೇ ಸೇರುವುವು. ಸ್ವದೇಶ ಪ್ರೀತಿಯು ಪ್ರತಿಯೊಂದು ಮಾತಿನಲ್ಲಿಯೂ ಓತಪ್ರೋತವಾಗಿ ತುಂಬಿಕೊಂಡಿದ್ದನ್ನು ನೋಡಿ ಪರಮ ಸಂತೋಷವಾಯ್ತು" ಎಂದು ಮ॥ ರಾ॥ ಏ. ಬಿ. ನಾಯಕ, ಎಂ.ಎ. ಅವರೂ ಪ್ರಸ್ತಾವನೆಯಲ್ಲಿ ಹೇಳಿದ್ದಾರೆ.

ಈ ಲೇಖಕರಿಗೆ ನಟಹೃದಯವುಂಟೆಂಬುದು ಗ್ರಂಥದಲ್ಲಿಯ ಸನ್ನಿವೇಶಗಳಿಂದಲೂ ಭಾಷಣಗಳಿಂದಲೂ ವ್ಯಕ್ತವಾಗುತ್ತದೆ.

ಭಾಷಾ ಸರಣಿಯೂ ಶೈಲಿಯೂ ಸಮರ್ಪಕವಾಗಿರುವುವು. ಮುದ್ರಣದ ತಪ್ಪುಗಳು ವಿರಳವಾಗಿರುವುದೂ, ಮುದ್ರಣವು ಅಂದವಾಗಿರುವುದೂ, ಅಲ್ಲಲ್ಲಿ ಚಿತ್ರಪಟಗಳಿರುವುದೂ ಪುಸ್ತಕಕ್ಕೆ ಸೊಬಗನ್ನೀಯುವುವು. ಈ ಲೇಖಕರ 'ಪ್ರತಿಜ್ಞಾಪಾಲನ'ಕ್ಕೆ ತಕ್ಕ ಪ್ರೋತ್ಸಾಹವು ದೊರೆತು ಉತ್ತಮ ಲೇಖಕರಲ್ಲಿ ಇವರೂ ಒಬ್ಬರಾಗಲೆಂದು ಹಾರೈಸುತ್ತೇವೆ.

ಮುಂದೆ ಕೊಡುವಂತಹ ನ್ಯೂನತೆಗಳನ್ನು ಲೇಖಕರು ನೇರ್ಪಡಿಸಿಕೊಳ್ಳಬೇಕೆಂದು ಸೂಚಿಸುವೆವು. ಇವನ್ನು ಮೊದಲನೆಯ ೨೫ ಪುಟಗಳಿಂದ ಮಾತ್ರ ಆರಿಸಿರುವೆವು:—

(೧) ಸರಿಯಲ್ಲದ ರೂಪಗಳು.—

ನೇತೃತ್ವ (ಪುಟ vii), ವಿರುಪಾಕ್ಷ (೧), ನಾಲಿಗೆ (೩), ಪೂಷ್ಣೆಯನ (೫), ಚನ್ನಾಗಿ (೮), ವೈಶಿಷ್ಠ (೮), ಸಹಾಯವನ್ನೀಯರಿ (೧೦), ಓರ್ವ (೧೨).

(೨) ಧಾರವಾಡ ಪ್ರಾಂತದ ಪ್ರಯೋಗಗಳು.—

ನಾಟಕವನ್ನು ಆಡಿ ತೋರಿಸದ ಹೊರತು (v), ಬೆಳವು (೧), ಕೆಳಗಿನಲ್ಲಿ (೧೦), ಕಿತ್ತಲೆತ್ನಿಸಿದರೂ (೧೪), ದರಬಾರದಲ್ಲಿ(೧೪), ಬೆಳದಿಂಗಳದಿಂದ (೧೬), ಅವಳನ್ನು ತೋರಿಸೊಂದು ತೋರಿಸು (೧೭), ಮಾತ್ರ ಎಲೈ ಪದ್ಮನಾಭನೇ (೨೦), ಆದರೆ ಇಷ್ಟರಲ್ಲಿಯೇ ಚಂದ್ರಗಿರಿಯಿಂದ ವೇಂಕಟಾಧಿಪತಿಗಳು ಮೃತ್ಯುಶಯ್ಯೆಯ ಮೇಲಿರುವರು (೨೦), ಮುಯ್ಯಕ್ಕೆ ಮುಯ್ಯ (೨೫).

(೩) 'ಉದು,' 'ಅದು' ಎಂಬ ಪ್ರತ್ಯಯಗಳ ಮಿಶ್ರಣ.—

ಮಾಡುವದು, ತೀರ್ಥವಾಗುವುದು (೧೬), ಇತ್ಯಾದಿ.

(೪) ಅಪ್ರಕೃತವಾದ ದೀರ್ಘಗಳು.—

ಅದಲ್ಲದೇ (೭), ಏನಿದೇ, ತಗ್ಗಿಸುವೇ, ತೋರಿಸಲಾರೇ (೧೦).

---

## ೪. ಕರ್ನಾಟದ ವೀರರತ್ನಗಳು

ಲೇಖಕರು.—ವೆಂಕಟೇಶ ಭೀಮರಾವ ಆಲೂರ, ಬಿ.ಎ., ಎಲ್‌ಎಲ್.ಬಿ., ಧಾರವಾಡ.

ಪ್ರಕಾಶಕರು.—ರಾಮರಾವ ಹುಕ್ಕೇರಿ, ಎಂ.ಎ., ಕಾರ್ಯದರ್ಶಿ, ಕರ್ನಾಟಕ ಶಿಕ್ಷಣ ಸಮಿತಿ, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೪+೧೪೩+೮+೮; ಯೂನಿವರ್ಸಲ್ ಪವರ್ ಪ್ರೆಸ್, ಬೆಂಗಳೂರು; ೧೯೩೦; ಬೆಲೆ ೧ ರೂಪಾಯಿ.

ಕನ್ನಡ ನಾಡಿನ ಗತವೃತ್ತಾಂತವು ಸಾಮಾನ್ಯವಾಗಿ ಅನೇಕರಿಗೆ ತಿಳಿದಿಲ್ಲ. ತರುಣರಿಗಂತೂ ಪೂರ್ವ ಕಾಲದ ವೀರರ ವೃತ್ತಾಂತವು ಅತ್ಯಾವಶ್ಯಕ. ಆದುದರಿಂದ ಈ ಪುಸ್ತಕವು ಬಹಳ ಉಪಯೋಗವಾದುದು. ಈ ಸಣ್ಣ ಪುಸ್ತಕದಲ್ಲಿ ಶ್ರೀ ಆಲೂರರವರು ಹತ್ತೊಂಬತ್ತು ಮಂದಿ ವೀರ ಪುರುಷರ ಮತ್ತು ಇಬ್ಬರು ವೀರ ರಮಣಿಯರ ವೃತ್ತಾಂತವನ್ನು ಉತ್ಸಾಹದಿಂದ ಬರೆದಿದ್ದಾರೆ. "ಈ ವೀರರ ಚರಿತ್ರೆಗಳನ್ನು ಇತಿಹಾಸಕ್ಕೆ ಬಿಡದಂತೆಯೂ ಓದಲಿಕ್ಕೆ ಮನೋರಂಜಕವಾಗುವಂತೆಯೂ" ವರ್ಣಿಸಿ, "ಕನ್ನಡ ವಾಙ್ಮಯದಲ್ಲಿ ಹೊಸ ತರಹದ ವೀರ ಭಾಷಾ ಶೈಲಿಯೊಂದನ್ನು ಹುಟ್ಟಿಸುವುದಕ್ಕೆ" ಪ್ರಯತ್ನಿಸಿದ್ದಾರೆ; ಶಾಸನಗಳಲ್ಲಿಯೂ ಪೂರ್ವ ಸಾಹಿತ್ಯದಲ್ಲಿಯೂ ತೋರಿಬಂದಿರುವ ಮಾತುಗಳನ್ನೂ ಉತ್ಪ್ರೇಕ್ಷಾದ್ಯಲಂಕಾರಗಳನ್ನೂ ರಣ ವರ್ಣನೆಯ ಸಂದರ್ಭಗಳಲ್ಲಿ ಉಪಯೋಗಿಸಿದ್ದಾರೆ; ಅಲ್ಲದೆ, ಕ್ಲಿಷ್ಟವಾದ ಮಾತುಗಳಿಗೆ ಅರ್ಥವನ್ನು ಒದಗಿಸಿದ್ದಾರೆ.

ಈ ಪ್ರಯತ್ನವು ಸ್ತುತ್ಯರ್ಹವಾದುದು, ಅಗತ್ಯವಾದುದು. ಗ್ರಂಥಕರ್ತರು ಇದನ್ನು ಅತ್ಯುತ್ಸಾಹ ಭರಿತರಾಗಿ ಬರೆದಿದ್ದಾರೆ. ಆದರೆ ಬಹುಶಃ ಉತ್ಸಾಹದೊಂದಿಗೆ ಆತುರವೂ ಸೇರಿದ್ದರಿಂದಲೋ ಏನೊ, ಹಲ ಕೆಲವು ದೋಷಗಳು ತಲೆಯೆತ್ತಿಕೊಂಡಿವೆ. ಕಡೆಯಲ್ಲಿ ಕಾಣುವ ಶುದ್ಧೀಕರಣದ ಎಂಟು ಪುಟಗಳೇ ಇದನ್ನು ಸೂಚಿಸುತ್ತವೆ. ಸಾಮಾನ್ಯ ಪ್ರಯೋಗಗಳಲ್ಲಿಯೂ ಐತಿಹಾಸಿಕದ ಹೆಸರುಗಳಲ್ಲಿಯೂ ಅಲ್ಲಲ್ಲಿ ರೂಪ ಕೆಟ್ಟಿದೆ:—

ಸಾಮಾನ್ಯ.—ಜಲ್ಲಿ, ಪ್ರತಿಕಕ್ಷಿ, ನಾಡದು, ಚಿಗಪ್ಪ, ಕಿತ್ತಿ, ಮಾಳವೆಯ, ಕಾರಾಗ್ರಹ, ಮುದುಕವಾಗಿ, ಕಪ್ಪುಕಾಣಿಕೆ, ಸುಮಾರಕ್ಕೆ—ಇತ್ಯಾದಿ.

ಐತಿಹಾಸಿಕ.—ಅಲೂಪ (ಆಳುಪ), ಹ್ಯುವೆನ್‌ತ್ಸಾಂಗ (ಹಿಯನ್ತ್ಸಾಂಗ), ಬಡ್ಡಿಗ (ಬದ್ದೆಗ), ತಂಜಾವರ (ತಂಜಾವೂರು), ಮೈಲಾಳ ದೇವಿ (ಮೈಳಲ ದೇವಿ), ತ್ರಾವಣಕೋರ (ತಿರುವಾಂಕೋಡು), ತೊಡವ (ತೊದವ), ಕ್ರಾಯಿಸ್ಟ (ಕ್ರಿಸ್ತ), ಆನೆಗೊಂದೆ (ಆನೆಗೊಂದಿ), ಓರೆಗಲ್ಲು, ಒರಂಗಲ್ಲು, ವರಂಗಲ್ಲು (ಓರುಗಲ್ಲು), ಮಲಬಾರ (ಮಲೆಯಾಳ), ಗ್ಯಾಸುದ್ದೀನ (ಘಯಾಸುದ್ದೀನ್), ಶ್ಯಾಮಸುದ್ದೀನ

(ಸಂಸುದ್ದೀನ), ಫಿರೂರ್ಝು (ಫಿರೂಸ್), ಕಾಲೀಕತ್ತೆ (ಕಲ್ಲೀಕೋಟೆ), ಒಡಿಸಾ (ಓಢ್ರ, ಅಥವಾ ಉತ್ಕಲ), ಸಾಲಸತ್ತ (ಸಾಷ್ಟಿ), ಸಾಳ್ವ (ಸಾಳುವ), ಕಲಬುರ್ಗೆ (ಕಲ್ಬುರುಗಿ), ಕನೋಜ (ಕಾನ್ಯಕುಬ್ಜ)—ಇತ್ಯಾದಿ.

ಮೊದಲಿನ ೯೦ ಪುಟಗಳಿಗಿಂತ ಉಳಿದ ೫೩ ಪುಟಗಳು ಚಿತ್ತಾಕರ್ಷಕವಾಗಿವೆ. ಇದಕ್ಕೆ ಈಚಿನ ವೃತ್ತಾಂತಗಳಲ್ಲಿ ಹೆಚ್ಚು ಹೆಚ್ಚಾದ ವಿವರವು ತಿಳಿದಿದೆಯೆಂಬುದೊಂದೇ ಕಾರಣವಲ್ಲ; ಗ್ರಂಥಕರ್ತರು ಆರಿಸಿಕೊಂಡಿರುವ ಶೈಲಿಯೂ ಕಾರಣವೇ. ಸಂಗತಿಗಳು ಸ್ಪಷ್ಟವೂ ವಿವರವೂ ಆಗಿಲ್ಲದಿರುವ ಸಂದರ್ಭಗಳಲ್ಲಿ, ಬಲವಂತದಿಂದ ವೀರ ಶೈಲಿಯನ್ನು ಎಳೆದೆಳೆದು ಬರೆದಂತೆ ಮೊದಲಿನ ಭಾಗವು ತೋರುವುದು. ಮಾತುಗಳೂ ಅಲಂಕಾರಗಳೂ ಶಾಸನಗಳಲ್ಲಿರತಕ್ಕವೆಂಬುದು ದಿಟ; ಆದರೆ ಪರಿಣಾಮವು ಬೇರೆಯಾಗುವ ಸಂಭವವುಂಟು. ಬಲವಂತದಿಂದ ಈ ರೀತಿ ಬರೆದಾಗ ಮನಸ್ಸಿಗೆ ಸುಲಭವಾಗಿ ಏಡಂಬನೆಯಂತೆ ತೋರಿಬಿಡುವುದು. ಕೆಲವು ಕಡೆ ಈ ವಿಪತ್ತು ಪ್ರತ್ಯಕ್ಷವಾಗುವಂತಿದೆ. ಸುಲಭವಾದ ರೀತಿಯಲ್ಲಿಯೇ ಸಂಗತಿಗಳನ್ನು ವಿವರವಾಗಿ ವರ್ಣಿಸಿದಾಗ ಈ ಹಾನಿಯಿರುವುದಿಲ್ಲ; ಮತ್ತು ಎಲ್ಲರ ಮನಸ್ಸಿಗೂ ಸೊಗಯಿಸುವುದು.

"ಇತಿಹಾಸಕ್ಕೆ ಏಡದಂತೆ" ಬರೆಯಲು ಶುದ್ಧವಾದ ಪ್ರಯತ್ನವಿದ್ದಾಗ್ಯೂ ಅಲ್ಲಲ್ಲಿ ಪ್ರಮಾದಗಳು ಕಾಣುತ್ತವೆ. ಕೆಲವು ವಾಕ್ಯಗಳು ನಿರಾಧಾರವಾದುವು. ಕೆಲವು ಉದಾಹರಣೆಗಳು :—

ಪುಟ ೫—"ಪಲ್ಲವೇಂದ್ರನು ತಾನೇ ಅಲ್ಲಿಗೆ ಬಂದು ಪಟ್ಟಬಂಧ ಸಂಪೂಜೆಯನ್ನು ನೆರವೇರಿಸಬೇಕೆಂದು ಆಜ್ಞಾಪಿಸಿದನು."

ಪುಟ ೧೧—"ಜಯಸಿಂಹನ ಹೆಂಡತಿ ಗರ್ಭಿಣಿ. . . ."(ಇದಕ್ಕೇನು ಆಧಾರ?)

ಪುಟ ೧೪—"ಇಟಲಿಯ ರೋಮನ್ನ ಜನರು ಇರಾಣವನ್ನು ಕೊಳ್ಳೆ ಹೊಡೆಯುತ್ತಿದ್ದರು." (ಆ ಸಂದರ್ಭದಲ್ಲಿ ರೋಮಕ ಸಾಮ್ರಾಜ್ಯವು ಧ್ವಂಸವಾಗಿ ೧೫೦ ವರ್ಷಗಳಾಗಿದ್ದುವು.)

ಪುಟ ೫೭—"ಆತನ ತಾಯಿಯ ಮೂಗನ್ನು ಕತ್ತರಿಸಿದ್ದನು." (ಆಧಾರವೇನು?)

ಪುಟ ೭೨—"ಬಂಗಾಲ ಅಸಾಮ ಪ್ರಾಂತಗಳ ಪೃಥ್ವೀಶರೂ ಈತನ ಬೆಂಬಲವನ್ನು ಅಪೇಕ್ಷಿಸಿದರು." (ಆಧಾರವಿಲ್ಲ.)

ಪುಟ ೯೩—"ಮಹಮ್ಮದ್ ತೊಗಲಖನು ಕುಮಾರ ರಾಮನು ತನ್ನ ಮಗಳ ಪಾಣಿ ಗ್ರಹಣ ಮಾಡಬೇಕೆಂದು ಕಂಪಿಲನನ್ನು ಕೇಳಿದನು." (ಆಧಾರ??)

ಪುಟ ೧೩೦—"ರಣದುಲ್ಲಾಖಾನನು ನರಸ ರಾಜನಿಗೆ ಮೊರೆ ಹೊಕ್ಕ" (ಆಧಾರ?)

ಇಂತಹವೇ ಅಲ್ಲದೆ ಅಲ್ಲಲ್ಲಿ ಉತ್ಪ್ರೇಕ್ಷೆಯ ಪ್ರಭಾವದಿಂದ ಓದುವವರನ್ನು ತಪ್ಪುದಾರಿಗೊಯ್ಯುವ ವಾಕ್ಯಗಳೂ ಇವೆ; ಇವು ಗುರುತರವಾದ ದೋಷಗಳು;

ಏಕೆಂದರೆ, ಇಂತಹ ಪುಸ್ತಕಗಳಲ್ಲಿ ಚರಿತ್ರೆಯನ್ನು ಬಿಡಬಾರದು. ಕರ್ಣಾಟಕ ಪ್ರಾಂತವೇ ಆಗಲಿ, ಯಾವ ಪ್ರಾಂತವೇ ಆಗಲಿ, ಪ್ರಾಂತ ಭಕ್ತಿಯು ನೆರೆ ಹೊರೆಯ ಪ್ರಾಂತಗಳಲ್ಲಿ ತಿರಸ್ಕಾರವಾಗಿ ಪರಿಣಮಿಸಬಾರದು.

ಪೂರ್ವ ಸಾಹಿತ್ಯದ ಶಬ್ದಾಲಂಕಾರ ಸಂಪತ್ತಿಯನ್ನು ಹವಣಿಸಿಕೊಂಡು ಬರೆಯುತ್ತ ಮಧ್ಯೇ ಮಧ್ಯೇ ಕೆಲವು ನೂತನ ಅಲಂಕಾರಗಳನ್ನು ಉಪಯೋಗಿಸಿರುವುದು, (ಸೊಪ್ಪು ಹಾಕಲಿಲ್ಲ, ಬಾಯಲ್ಲಿ ಹುಲ್ಲು ಕಚ್ಚಿಕೊಂಡು, ಜೇಳೆ ಚೆನ್ನಾಗಿ 'ಬಿಯ್ಯು'ತ್ತದೆ–ಇತ್ಯಾದಿ) ರಸಾಭಾಸಕ್ಕೆ ಕಾರಣ.

**ಕಂ. ಕೃ.**

---

## ೫. ಹಿಂದುಸ್ಥಾನದ ಇತಿಹಾಸ

(ಪ್ರಾಚೀನ ಕಾಲದಿಂದ ೧೯೩೮ರ ವರೆಗೆ)

ಲೇಖಕರು.—ಶಿ. ಶಿ. ಬಸವನಾಳ, ಎಂ.ಎ. ಮತ್ತು ಹ. ಚ. ಹಲಗಲಿ, ಬಿ.ಎ., ಬಿ.ಟಿ., ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೧೦+೩೯೬; ತೋಂಟದಾರ್ಯ ಮುದ್ರಾಲಯ, ಧಾರವಾಡ; ೧೯೩೯; (ಚಿತ್ರ, ನಕಾಶೆಗಳಿಂದ ಕೂಡಿದೆ); ಬೆಲೆ ರೂ. ೧–೮–೦.

ನಮ್ಮ ದೇಶದ ಇತಿಹಾಸವನ್ನು ವಿವರಿಸುವ ಗ್ರಂಥಗಳು ಕನ್ನಡದಲ್ಲಿ ಬಲು ವಿರಳ. ಆ ಕೊರತೆಯನ್ನು ನೀಗಿಸಲು ನಡೆಯುವ ಪ್ರಯತ್ನಗಳೆಲ್ಲವೂ ಆದರಣೀಯವೇ. ವರ್ಷೇ ವರ್ಷೇ ಮುಂದುವರಿಯುತ್ತಿರುವ ಶೋಧನೆಯ ಕೆಲಸವೊಂದು ಕಡೆ, ಸಂಕುಚಿತ ದೃಷ್ಟಿಯಿಂದ ನಮ್ಮ ಚರಿತ್ರೆಯನ್ನು ಇತರರು ಬರೆಯುವ ಅವಾಂತರವಿನ್ನೊಂದು ಕಡೆ,—ಹೀಗಿರುವಾಗ ತೃಪ್ತಿಕರವಾದ ಗ್ರಂಥವನ್ನು ಒದಗಿಸುವುದು ಪ್ರಯಾಸದ ಕೆಲಸ. ಭಾರತೀಯ ಚರಿತ್ರೆಯೆನ್ನುವುದು ಮಹಾ ಸಾಗರದಂತೆಯೇ ಇರುವ ಸಂಗತಿಯೆಂಬುದು ವಿಷಯವನ್ನು ಸ್ವಲ್ಪ ತಿಳಿದವರಿಗೂ ಸ್ಪಷ್ಟ. ಈ ಸ್ಥಿತಿಯಲ್ಲಿ ಪಠ್ಯ ಪುಸ್ತಕವನ್ನು ಬರೆಯುವುದು ಸುಲಭವಲ್ಲ, ಸಾಹಸದ ಕೆಲಸ.

ಈ ಪುಸ್ತಕವನ್ನು ಪಠ್ಯ ಪುಸ್ತಕವೆಂದೇ ಗ್ರಂಥಕರ್ತರು ಬರೆದಿರುತ್ತಾರೆ. ಪಠ್ಯ ಪುಸ್ತಕವನ್ನು ವಿಮರ್ಶೆ ಮಾಡುವಾಗ ವಿಮರ್ಶಕರು ಇತಿಹಾಸ ದೃಷ್ಟಿಯಿಂದಲೂ ಕಾಣಬೇಕು, ಶಿಕ್ಷಣ ದೃಷ್ಟಿಯಿಂದಲೂ ಕಾಣಬೇಕು. ಪ್ರೌಢ ಗ್ರಂಥಗಳಲ್ಲಿ ಒಂದೆರಡು ಸ್ಖಾಲಿತ್ಯಗಳಿದ್ದರೂ ಅಷ್ಟು ಪ್ರಮಾದವೆನಿಸುವುದಿಲ್ಲ; ಪಠ್ಯಪುಸ್ತಕದಲ್ಲಾದರೋ ಎಷ್ಟು ಚಿಕ್ಕ ತಪ್ಪಾದರೂ ಪ್ರಮಾದವೇ.

ಶ್ರೀ ಬಸವನಾಳ ಮತ್ತು ಹಲಗಲಿಯವರ ಪ್ರಯತ್ನವು ಶ್ಲಾಘನೀಯವಾದರೂ ಸಮರ್ಪಕವಾಗಿ ಪರಿಣಮಿಸಿದೆಯೆಂದು ಹೇಳಲು ಸಾಧ್ಯವಿಲ್ಲ. ಅಚ್ಚಿನ ತಪ್ಪುಗಳು

ಹೋಗಲಿ, ಪಠ್ಯ ಪುಸ್ತಕದಲ್ಲಿ ಮಾತುಗಳೂ ಹೆಸರುಗಳೂ ಶುದ್ಧವಾಗಿರಬೇಡವೆ? 'ಕೊಡಲೆಯ ತಲೆ, ಗೋರೆಗಳು, ಅಂಕೆಗಳು, ಬೆಂಕೆ, ಗೆದೆಯುವುದು' ಎಂಬಂತಹ ಪ್ರಯೋಗಗಳೂ, 'ಡರಾಯಸ, ಹಿಡ್ಯಾಸ್ಪಸ, ಅಫಗಾಣ, ಗಿಝ್ನಿ, ಲೋದಿ, ವರಂಗಲ್ಲ' ಎಂಬಂತಹ ವಿಚಿತ್ರ ರೂಪಗಳೂ ಹೇರಳವಾಗಿವೆ. ಚರಿತ್ರೆಯ ಪುಸ್ತಕಗಳಲ್ಲಿ ಕಥಕ ಶೈಲಿ, ಅಥವಾ ಏಕಧಾರಾ ರೂಪವಾದ ರೀತಿ ಇಲ್ಲದಿದ್ದರೆ ದೊಡ್ಡ ಲೋಪವಾಗುವುದು. ಸಂಗತಿಗಳನ್ನು ಎಳೆದೆಳೆದು ಜೋಡಿಸಿ ರಾಶಿ ಮಾಡಿದರೆ ಅದು ಸಂಗತಿಗಳ ತಿಪ್ಪೆಯಾಗುವುದೇ ವಿನಾ ಚಿತ್ತರಂಜಕವಾದ ಚರಿತ್ರೆಯಾಗುವುದಿಲ್ಲ. ಬಾಲಕ ಬಾಲಿಕೆಯರಿಗಾಗಿ ಬರೆಯುವಾಗಲಂತೂ ಚರಿತ್ರೆಯ ಈ ಸಹಜ ಗುಣವನ್ನು ಎಳ್ಳಷ್ಟೂ ಬಿಡಲಾಗದು. ಈ ಪುಸ್ತಕದಲ್ಲಿ ಕೆಲವೆಡೆಗಳಲ್ಲಿ ಮಾತ್ರ ತೊಡಕಿಲ್ಲದ ಗತಿಯು ಕಾಣುತ್ತದೆ. ಶಿಕ್ಷಣ ದೃಷ್ಟಿಯಿಂದ ಪುಸ್ತಕವು ದೋಷ ರಹಿತವಾದುದಲ್ಲವೆಂದು ಬರೆಯಲು ವಿಷಾದಪಡುತ್ತೇವೆ.

ಚರ್ಚಾಸ್ಪದವಾದ ವಿಷಯಗಳು ಪಠ್ಯ ಪುಸ್ತಕಗಳಲ್ಲಿ ತಲೆಯೆತ್ತದಿರುವುದೇ ಎಲ್ಲರಿಗೂ ಒಪ್ಪಿದ ಮಾರ್ಗ. ಈ ಪುಸ್ತಕದಲ್ಲಿ ಅಂತಹ ವಿಷಯಗಳು ತೋರಿಕೊಂಡಿರುವುದಲ್ಲದೆ ಸಿದ್ಧಾಂತಗಳಾದ ವಿಷಯಗಳಿಗೆ ವ್ಯತಿರಿಕ್ತವಾದ ಬರೆಹವೂ ಅಲ್ಲಲ್ಲಿ ತಲೆಯೆತ್ತಿಕೊಂಡಿದೆ. ಉದಾ.—

"ಅಲೆಕ್ಝಾಂಡರನ ಅಧಿಕಾರಿಗಳಲ್ಲಿ ಒಬ್ಬನಾದ ಟೋಲೆಮಿ ಎಂಬವನು ಬರೆದ ಗ್ರಂಥಗಳಲ್ಲಿ ಹಿಂದುಸ್ಥಾನದ ವರ್ಣನೆಯು ದೊರೆಯುತ್ತದೆ." "ಸಿರಿಯಾ, ಇಜಿಪ್ತ ದೇಶಗಳ ಅರಸರು ಕಳಿಸಿದ ರಾಯಭಾರಿಗಳು. . . . ಈ ದೇಶದ ಬಗ್ಗೆ ಅತಿಮಹತ್ವದ ಸಂಗತಿಗಳನ್ನು ಬರೆದಿರುವರು."

ಆರ್ಯರ ಮೂಲ ನಿವಾಸ ಸ್ಥಾನವು "ಯುರೋಪ ಮತ್ತು ಏಶಿಯಾ ಖಂಡಗಳ ಗಡಿನಾಡಾದ ರಶಿಯಾ ಪ್ರಾಂತದ ದಕ್ಷಿಣದ ಗುಡ್ಡಗಾಡ ಪ್ರದೇಶ"ವಾಗಿರಬೇಕೆಂದು ತೋರುತ್ತದೆ.

"ವಾಲ್ಮೀಕಿಯಿಂದ ರಚಿತವಾದ ರಾಮಾಯಣದಲ್ಲಿದ್ದ ಕಥೆಯು ಮಹಾಭಾರತದ ತರುವಾಯದ್ದೆಂದು ಕಾಣುತ್ತದೆ. ಏಕೆಂದರೆ ಆಗಿನ ಕಾಲಕ್ಕೆ ಅರಸರು ಬ್ರಾಹ್ಮಣರಿಗೆ ಮರ್ಯಾದೆಯನ್ನು ಕೊಡುತ್ತಿದ್ದರೆಂಬ ಸಂಗತಿಯು" ರಾಮಾಯಣದಲ್ಲಿದೆ, ಮಹಾಭಾರತದಲ್ಲಿಲ್ಲ.—ಇತ್ಯಾದಿ, ಇತ್ಯಾದಿ.

೫೭ನೆಯ ಪುಟದಲ್ಲಿ ಬಾಲಕರಿಗೆ ಕಥೆಗಳು ರುಚಿಕರವೆಂದೋ ಏನೊ ಒಂದು ಕಥೆಯನ್ನು ಉದ್ಧರಿಸಿರುವರು! ಅದನ್ನು ಇಲ್ಲಿ ಉದ್ಧರಿಸಲಾರೆವು. ಪಲ್ಲವರು ಪರಕೀಯರಂತೆ! ಸಳನು ಬ್ರಾಹ್ಮಣ ಗುರುವಿನ ಬಳಿ ವಿದ್ಯಾಭ್ಯಾಸ ಮಾಡಿದನಂತೆ!

ಪರಿಮಾಣ ದೃಷ್ಟಿಯೂ ಕೆಲವೆಡೆಗಳಲ್ಲಿ ಲೋಪವಾಗಿದೆ. ಪೀಟರ್ ಮಂಡಿ, ಕ್ಯಾರೆರಿ ಮುಂತಾದವರ ವರ್ಣನೆಯೇಕೆ? ಅವರಿಗಿಂತ ಪ್ರಸಿದ್ಧರಾದ ಬರ್ನಿಯರ್, ಟಾವರ್ನಿಯರ್, ಮ್ಯಾನುಚಿ ಮುಂತಾದವರೆಲ್ಲರ ವರ್ಣನೆಯನ್ನು ಈ ರೀತಿ ಬರೆದರೆ ಬಾಲಕರ ಗತಿಯೇನು? ಷಾಜಹಾನನ ವೈಭವದ ವರ್ಣನೆಯೇ ಇಲ್ಲದೆಹೋಯಿತು ಪುಸ್ತಕದಲ್ಲಿ.

ಉದಾಹರಣೆಗಳಿಷ್ಟೇ ಸಾಕು. ಮುಂದೆ ಸಾಗುತ್ತ ಸಾಗುತ್ತ ಸಾಧಾರಣವಾಗಿ ಆಂಗ್ಲೇಯರು ಬರೆದಿರುವ ಪುಸ್ತಕಗಳಲ್ಲಿ ಕಾಣುವ ದೃಷ್ಟಿ ರೋಗವೇ ಇಲ್ಲಿಯೂ ಅಂಟಿರುವುದು ಕಾಣುತ್ತದೆ. ನಮ್ಮ ನಾಡಿನ ಚರಿತ್ರೆಯು ಎಂದಿಗೆ ತರುಣರಿಗೆ ಸಹಜವಾದ ಮತ್ತು ಶುದ್ಧವಾದ ರೀತಿಯಲ್ಲಿ ಲಭ್ಯವಾದೀತೆಂದು ತವಕಪಡುವವರಿಗೆ ಈ ಪುಸ್ತಕದಿಂದ ಖೇದ ಹುಟ್ಟುವುದೇ ವಿನಾ ಸಂತೋಷವು ತೋರುವುದಿಲ್ಲ. ಗ್ರಂಥ ಕರ್ತರುಗಳ ಉತ್ಸಾಹಕ್ಕೆ ತಕ್ಕಷ್ಟು ವಿಷಯ ಪರಿಚಯವಿಲ್ಲದಿರುವುದು ಅಲ್ಲಲ್ಲಿ ಕಾಣುತ್ತದೆ.

ಮತ್ತೊಂದು ಮಾತು : ಕರ್ಣಾಟಕದ ಗತ ವೈಭವವು ಕನ್ನಡಿಗ ತರುಣರ ಮನಸ್ಸಿಗೆ ತೋರಿಬರುವಂತೆ ಬರೆದಿರುವುದೇ ಈ ಪುಸ್ತಕದ ವಿಶೇಷವೆಂದು ಮುನ್ನುಡಿಯಲ್ಲಿರುವುದು. ಅದಕ್ಕನುಸಾರವಾಗಿ ಕನ್ನಡ ನಾಡಿನ ಚರಿತ್ರೆಗೆ ಹೆಚ್ಚು ಸ್ಥಳವನ್ನು ಕೊಟ್ಟಿದೆ. ಕನ್ನಡಿಗ ತರುಣರಿಗೆ ಕನ್ನಡ ನಾಡಿನ ಪೂರ್ವೇತಿಹಾಸದ ಅರಿವು ಅತ್ಯವಶ್ಯವಾದುದೇ ಸರಿ. ಆ ಕಾರಣದಿಂದ ಹಿಂದುಸ್ಥಾನದ ಇತಿಹಾಸದಲ್ಲಿ ಕನ್ನಡ ನಾಡಿನ ವೃತ್ತಾಂತವನ್ನು ಬಳೆಯಿಸಿದಾಗ ಆ ಉದ್ದೇಶವು ಸಮರ್ಪಕವಾಗಿ ಪೂರ್ತಿಯಾಗಲಾರದುದೇ ಅಲ್ಲದೆ ಗ್ರಂಥ ಭಾಗಗಳ ಪರಸ್ಪರ ಪರಿಮಾಣದಲ್ಲಿ ದೋಷ ತೋರಿಕೊಳ್ಳುವುದು. ಭಾರತ ಮಾತೆಯ ಚಿತ್ರದಲ್ಲಿ ಯಾವುದೋ ಒಂದಂಗವನ್ನು ದೊಡ್ಡದಾಗಿ ತೋರಿಸಿದರೆ ಒಟ್ಟಿನ ಪರಿಣಾಮ ಹೇಗಾದೀತು? ಪ್ರಾಂತಿಕ ಚರಿತ್ರೆಯನ್ನು ಪ್ರತ್ಯೇಕವಾಗಿ ಓದಿಸಬೇಕೆಂಬುದೇ ನಮ್ಮ ಮತ.

ಕಂ. ಕೃ.

---

## ೬. ಬೆರಳು ಗುರುತಿನ ಶಾಸ್ತ್ರ

ಲೇಖಕರು.—ಎ. ಎಸ್. ರಾಮಣ್ಣ, ಬಿ.ಎ., ಬೆಂಗಳೂರು ಸಿಟಿ.

**ಕ್ರೌನ್ ಅಷ್ಟಪತ್ರ ಪುಟಗಳು 12+27 ; ಬೆಂಗಳೂರು ಪ್ರೆಸ್ ; ೧೯೩೦ ; ಬೆಲೆ ೧೨ ಆಣೆ.**

ಈ ಪುಸ್ತಕದಲ್ಲಿ, ಬೆರಳು ಗುರುತಿನಿಂದ ಮನುಷ್ಯನನ್ನು ಗುರುತಿಸುವುದು ಹೇಗೆ ಎಂಬ ವಿಷಯವನ್ನು ಸ್ಪಷ್ಟವಾಗಿ ವಿವರಿಸಿದೆ. ಪತ್ರಗಳು ಮೊದಲಾದುವಕ್ಕೆ ಬೆರಳು ಗುರುತನ್ನು ಹೇಗೆ ಹಾಕಿಸಬೇಕು? ಅಲಕ್ಷ್ಯವಾಗಿ ಹಾಕಿಸಿದರೆ ತೊಂದರೆಯೇನು? ಸರಿಯಾಗಿ ಹಾಕಿಸಿದಲ್ಲಿ ತಪ್ಪು ಮಾಡದೆ ಮನುಷ್ಯನನ್ನು ಗುರುತಿಸಬಹುದೆ?—ಎಂಬ ವಿಷಯಗಳನ್ನು ಲೇಖಕರು ಬಹಳ ವಿಶದವಾಗಿ, ಎಲ್ಲರಿಗೂ ತಿಳಿಯುವಂತೆ, ಸುಲಭವಾದ ಭಾಷೆಯಲ್ಲಿ ಬರೆದಿರುತ್ತಾರೆ. 'ಹೆಬ್ಬೆಟ್ಟಿನ ಗುರುತಿಗೆ' ಗಮನ ಕೊಡಬೇಕಾದ ಪ್ರತಿಯೊಬ್ಬರೂ ಈ ಪುಸ್ತಕವನ್ನು ಓದುವುದರಿಂದ ಬಹಳ ಪ್ರಯೋಜನವನ್ನು ಪಡೆಯಬಹುದು. ಅದಕ್ಕೆ ಸಂಬಂಧಪಟ್ಟ ಇಲಾಖೆಯಲ್ಲಿದ್ದು, ತಮ್ಮ ಅನುಭವವನ್ನು ಇತರರ ಉಪಯೋಗಕ್ಕಾಗಿ ಈ ಪುಸ್ತಕದ ಮೂಲಕ ಪ್ರಕಟಪಡಿಸಿರುವುದಕ್ಕಾಗಿ ಕನ್ನಡಿಗರು ಈ ಗ್ರಂಥಕರ್ತರಿಗೆ ಕೃತಜ್ಞರಾಗಿರಬೇಕು.

---

## ೭. ವಿಚಾರ ತರಂಗಿಣೀ

ಸಂಪಾದಕರು ಮತ್ತು ಪ್ರಕಾಶಕರು.—ಟಿ. ಚಿದಂಬರ ಪಂಡಿತರು, ಬೇರೂರು.

ಡೆಮ್ಮಿ ಅಷ್ಟಪತ್ರ ಪುಟಗಳು (ಸಂಚಿಕೆಯೊಂದಕ್ಕೆ) ೪೮ ; ೧೯೨೯; ವಾರ್ಷಿಕ ಚಂದಾ ರೂ. ೨—೮—೦.

ಈ ಮಾಸ ಪತ್ರಿಕೆಯು ಹಿಂದೆ 'ಕರ್ಣಾಟಕ ಕಥಾ ಸರಿತ್ಸಾಗರ' ಎಂಬ ಹೆಸರಿನಿಂದ ಇದೇ ಸಂಪಾದಕರು ಪ್ರಕಟಮಾಡುತ್ತಿದ್ದ ಮಾಸ ಪತ್ರಿಕೆಯ ರೂಪಾಂತರವಾಗಿದೆ. "ಬರೀ ಕಥಾ ಭಾಗವನ್ನೇ ಬರೆಯುವುದಕ್ಕಿಂತ, ಜನರಿಗೆ ನಿತ್ಯ ಅತ್ಯವಶ್ಯಕವಾದ ಆರೋಗ್ಯ ವಿಚಾರಗಳನ್ನೂ......ಇತರ ಲೋಕಹಿತಕರಗಳಾದ ವಿಷಯಗಳನ್ನೂ ಚರ್ಚಿಸಬೇಕೆಂಬ" ಅಭಿಪ್ರಾಯದಿಂದ, ಸಂಪಾದಕರು ಪತ್ರಿಕೆಯ ವಿಷಯವನ್ನೂ ಹೆಸರನ್ನೂ ಮಾರ್ಪಡಿಸಿರುತ್ತಾರೆ. ಪ್ರತಿ ಸಂಚಿಕೆಯಲ್ಲಿಯೂ 'ಕಥಾ ಸರಿತ್ಸಾಗರ'ದ ಭಾಗವು ಸೇರಿರುವುದಲ್ಲದೆ, 'ಸಾರಾಸಾರ ವಿವೇಕ', 'ಪ್ರಾಚೀನ ಚರ್ಯ' ಎಂಬ ಭಾಗಗಳೂ ಇವೆ. ಆರೋಗ್ಯ ವಿಚಾರ, ಸನಾತನ ಧರ್ಮ ಪದ್ಧತಿ, ನಮ್ಮ ಪೂರ್ವಿಕರ ಆಚಾರ ವ್ಯವಹಾರ—ಇವೇ ಮೊದಲಾದ ವಿಷಯಗಳನ್ನು ಪ್ರಕಟಿಸುವುದರಿಂದ ಜನರಿಗೆ ಈ ಮಾಸ ಪತ್ರಿಕೆಯು ಅನೇಕ ಉಪಯುಕ್ತವಾದ ಸಂಗತಿಗಳನ್ನು ತಿಳಿಯಪಡಿಸುವುದು. ಆದರೆ ಮುದ್ರಣದ ತಪ್ಪುಗಳೂ ಅಶುದ್ಧ ರೂಪಗಳೂ ಹೆಚ್ಚಾಗಿಯೇ ಇರುವುದು ಒಂದು ದೊಡ್ಡ ಕೊರತೆ. ಇದನ್ನು ಸಂಪಾದಕರು ನೇರ್ಪಡಿಸುವರೆಂದು ಹಾರೈಸುತ್ತೇವೆ.

---

## ೮. ಶ್ರೀ ಜಿನ ವಿಜಯ

(ವರ್ಷ ೨೪, ಸಂಚಿಕೆ ೪)

ಸಂಪಾದಕರು.—ಅಂಕಲೆ ಯಶವಂತರಾಯರು, ಬಿ.ಎ., ಎಲ್‌ಎಲ್.ಬಿ. ಮತ್ತು
ಪಾಟೀಲ ಕೃಷ್ಣರಾಯರು, ಬಿ.ಎ., ಎಲ್‌ಎಲ್.ಬಿ.

ಡೆಮ್ಮಿ ಅಷ್ಟಪತ್ರ ಪುಟಗಳು (ಪ್ರತಿ ಸಂಚಿಕೆಯಲ್ಲಿಯೂ) ೨೪ ;
ಶ್ರೀ ಮಹಾವೀರ ಮುದ್ರಣಾಲಯ, ಬೆಳಗಾಂವಿ ; ೧೯೨೯ ; ವಾರ್ಷಿಕ ಚಂದಾ ೨ ರೂಪಾಯಿ.

ಇದು ದಕ್ಷಿಣ ಮಹಾರಾಷ್ಟ್ರ ಜೈನ ಸಭೆಯಿಂದ ಪ್ರಕಟಿಸಲ್ಪಡುವ ಮಾಸ ಪತ್ರಿಕೆ. ಜೈನ ಸಂಪ್ರದಾಯಾಚಾರಾದಿ ವಿಚಾರಗಳು, ಕವಿಗಳು, ಕವಿತೆಗಳು, ಪ್ರಕೃತಕ್ಕೆ ಬೇಕಾದ ರಾಜಕೀಯ ಲೌಕಿಕ ವಿಚಾರಗಳು—ಇವೇ ಮೊದಲಾದುವನ್ನು ಪ್ರಕಟಿಸುವುದೇ ಈ ಪತ್ರಿಕೆಯ ಮುಖ್ಯೋದ್ದೇಶವೆಂದು ತೋರುವುದು.

ಪ್ರಕೃತ ಸಂಚಿಕೆಯಲ್ಲಿ ಕೊಟ್ಟಿರುವ ವಿಷಯಗಳು :—

(೧) ದೇವ ಪೂಜೆ, (೨) ಶ್ಯಾಮಕುಂದಾಚಾರ್ಯ, ತುಂಬುಳೂರಾಚಾರ್ಯ, ಸಮಂತಭದ್ರಾಚಾರ್ಯರು, (೩) ನಾಡವರೆಂದರೆ ಯಾರು? (೪) ಅಪಶ್ಯದ ವ್ರತ, (೫) ಪಂಪ ಮಹಾಕವಿಯ ಸ್ಮಾರಕೋತ್ಸವ, (೬) ಬಾಲ ವಿವಾಹ ನಿರೋಧಕ ಕಾನೂನು, (೭) ಬಿಡಿ ನುಡಿಗಳು.

ಕನ್ನಡದಲ್ಲಿ ೨೪ ವರುಷಗಳಿಂದ ಈ ಪತ್ರಿಕೆಯನ್ನು ಬಿಡದೆ ನಡೆಯಿಸಿಕೊಂಡು ಬಂದಿರುವುದಕ್ಕಾಗಿ ಈ ಸಭೆಯವರ ಶಕ್ತ್ಯುತ್ಸಾಹಗಳನ್ನು ಎಷ್ಟು ಕೊಂಡಾಡಿದರೂ ತೀರದು.

---

## ೯. ಅನೇಕಾನ್ತ

(ಮಾಸ ಪತ್ರಿಕೆ)

ಸಂಪಾದಕರು.—ಜುಗಲ ಕಿಶೋರ ಮುಖ್ತಾರ, ಸಮಂತಭದ್ರಾಶ್ರಮ, ದೆಹಲಿ.

ಪ್ರಕಾಶಕ.—ಅಯೋಧ್ಯಾ ಪ್ರಸಾದ ಗೋಯಲೀಯ, ಗಯದತ್ತ ಪ್ರೆಸ್, ದೆಹಲಿ.

ಕ್ರೌ ಚತುಷ್ಪತ್ರ ಪುಟಗಳು 64 ; ೧೯೨೯ ; ವಾರ್ಷಿಕ ಚಂದಾ ರೂ. ೪—೦—೦.

ಇದು ಜೈನ ಪ್ರಕ್ರಿಯಾ ಸಂಬಂಧವಾದ ಹಿಂದೀ ಮಾಸ ಪತ್ರಿಕೆಯ ಮೊದಲನೆಯ ಸಂಚಿಕೆ; ಇದರಲ್ಲಿ ಮಹಾವೀರ ಕಾಲ ವಿಚಾರವೂ, ನೀತಿ ವಿಚಾರಗಳೂ, ಆರೋಗ್ಯ ವಿಷಯಗಳೂ, ಪದ್ಯಗಳೂ—ಇವೇ ಮೊದಲಾದುವು ದೇವನಾಗರಿ ಲಿಪಿಯಲ್ಲಿ ಕೊಟ್ಟಿದೆ. ಮುಖ ಪತ್ರದಲ್ಲಿರುವ ಮಹಾವೀರ ಜಿನದೀಕ್ಷೆಯ ಚಿತ್ರಪಟವು ನಾನಾ ವರ್ಣಗಳಿಂದ ಕೂಡಿದುದಾಗಿ ಬಹಳ ಅಂದವಾಗಿದೆ. ಈ ಮಾಸ ಪತ್ರಿಕೆಯು ಮುಖ್ಯವಾಗಿ ಜೈನ ಮತಾವಲಂಬಿಗಳಿಗೆ ಉಪಯೋಗವಾದುದೆಂದು ತೋರುವುದು.

---

## ತಿದ್ದುಪಡಿ

ಪರಿಷತ್ಪತ್ರಿಕೆಯ ೧೫ನೆಯ ಸಂಪುಟದ ೧ನೆಯ ಸಂಚಿಕೆಯಲ್ಲಿ—

ಪುಟ ೨೪, ಪಙ್ಕ್ತಿ ೧೦—"ನಿರಿಯುತೆಯಂತಕನ ಮನೆಯ ಪುಗಿಪೆಂ ನಿನ್ನಂ" ಎಂಬುದಕ್ಕೆ ಬದಲಾಗಿ "ನಿರಿಯುತೆ ಯಮ ಸದನಕಟ್ಟುವೆಂ ಗಡ ನಿನ್ನಂ" ಎಂದೂ,

ಪುಟ ೨೫, ಪಙ್ಕ್ತಿ ೯—"ಡಲ ಸಮನಂ ಭುವನೈಕ ನಾಥನಂ ರಾಘವನಂ" ಎಂಬುದಕ್ಕೆ ಬದಲಾಗಿ, "ಡಲ ಸಮನಂ ಲೋಕ ನಾಥನಂ ರಾಘವನಂ" ಎಂದೂ ತಿದ್ದಿಕೊಳ್ಳಬೇಕು.

ಗ್ರಂಥಕರ್ತ

---

ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ ೧೫]  ಪ್ರಮೋದ ಸಂ॥ ಆಶ್ವಯುಜ ಮಾಸ  [ಸಂಚಿಕೆ ೩

## ಹದಿನಾರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನ

---

ಈ ಸಾರಿ ಈ ಸಮ್ಮೇಳನವು ಮೈಸೂರು ದೇಶದ ರಾಜಧಾನಿಯಾದ ಮೈಸೂರು ಪಟ್ಟಣದಲ್ಲಿ ೧೯೩೦ನೆಯ ಇಸವಿ ಅಕ್ಟೋಬರ್ ತಿಂಗಳು ೫ನೆಯ ತಾರೀಖು ಭಾನುವಾರ ಮೊದಲ್ಗೊಂಡು ಮೂರು ದಿನಗಳು ನೆರೆದಿದ್ದಿತು. ಆರಂಭೋತ್ಸವವು ಮೈಸೂರು ಟೌನ್ ಹಾಲಿನ ಸಭಾ ಮಂದಿರದಲ್ಲಿ ಬಹಳ ವಿಜೃಂಭಣೆಯಿಂದ ನಡೆಯಿತು. ಭಾಷಾಭಿಮಾನಿಗಳೂ ಗಣ್ಯರೂ ಆದ ಮೈಸೂರು ಸಂಸ್ಥಾನದ ಬಹಳ ಮಂದಿ ದೊಡ್ಡಮನುಷ್ಯರೂ, ಮುಂಬಯಿ, ಮದರಾಸು, ಉತ್ತರ ಕರ್ಣಾಟಕ, ಹೈದರಾಬಾದು ಮೊದಲಾದ ಇತರ ಕರ್ಣಾಟಕ ದೇಶಸ್ಥರಾದ ಆಸ್ತಿಕ ಮಹಾಶಯರೂ ಸಭೆಯನ್ನಲಂಕರಿಸಿದ್ದರು. ಕಾರ್ಯಾರಂಭದಲ್ಲಿ ದೇವತಾ ಪ್ರಾರ್ಥನೆಯೂ ಸ್ವಾಗತ ಗೀತವೂ ನಡೆದ ಬಳಿಕ ಸಮ್ಮೇಳನದ ಆರಂಭೋತ್ಸವವನ್ನು ಮೈಸೂರು ಸಂಸ್ಥಾನದ ದಿವಾನರಾದ ರಾಜಕಾರ್ಯಪ್ರಸಕ್ತ, ದಿವಾನ್ ಬಹಾದ್ದೂರ್ ಎಂ. ಎನ್. ಕೃಷ್ಣರಾಯರವರು ನೆರವೇರಿಸಿ, ಅಮೋಘವಾದ ಭಾಷಣವನ್ನು ಮಾಡಿದರು. (ಈ ಭಾಷಣವನ್ನು ಮುಂದೆ ಕೊಟ್ಟಿದೆ.)

ಸ್ವಾಗತ ಮಂಡಲಿಯ ಅಧ್ಯಕ್ಷರಾದ ಮ॥ ರಾ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಸಮ್ಮೇಳನಕ್ಕೆ ದಯಮಾಡಿಸಿದ್ದ ಪ್ರತಿನಿಧಿಗಳ ಮತ್ತು ಸದಸ್ಯರ ಸ್ವಾಗತವನ್ನು ಅಭಿನಂದಿಸಿ, ತಮ್ಮ ಉಜ್ಜ್ವಲ ಭಾಷಣದಿಂದ, ಸಮ್ಮೇಳನ ಕಾರ್ಯವನ್ನು ಸಾಂಗವಾಗಿ ನಡೆಯಿಸಿಕೊಡಬೇಕೆಂದು ಪ್ರಾರ್ಥಿಸಿದರು. (ಈ ಭಾಷಣವನ್ನು ಮುಂದೆ ಕೊಟ್ಟಿದೆ.)

ಬಳಿಕ, ಮೈಸೂರಿನ ಡಿಸ್ಟ್ರಿಕ್ಟ್ ಜಡ್ಜಿಯವರಾಗಿರುವ ಮ॥ ರಾ॥ ಕೆ. ಶಂಕರ ನಾರಾಯಣರಾವ್, ಎಂ.ಎ., ಬಿ.ಎಲ್. ಅವರು ಮ॥ ರಾ॥ ಎ. ಬಿ. ಆಲೂರು ವೆಂಕಟರಾಯರವರ ಪಾಂಡಿತ್ಯವನ್ನು ಕೊಂಡಾಡಿ, ಅವರ ಗುಣಕಥನ ಮಾಡಿ, ಅವರು

ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನಲಂಕರಿಸಲು ಸರ್ವ ವಿಧದಲ್ಲಿಯೂ ಅರ್ಹರೆಂಬುದನ್ನು ಪ್ರತಿಪಾದಿಸಿ, ಅಧ್ಯಕ್ಷತೆಯನ್ನು ವಹಿಸಬೇಕೆಂದು ಪ್ರಾರ್ಥಿಸಿದರು. ಈ ಸೂಚನೆಯನ್ನು ಉತ್ತರ ಕರ್ಣಾಟಕದ ಮ|| ರಾ|| ಆತ್ಮಾರಾಮ ಶಾಸ್ತ್ರಿಗಳು ಅನುಮೋದಿಸಲು, ಕೊಪ್ಪಳದ ಮ|| ರಾ|| ನಾರಾಯಣಶಾಸ್ತ್ರೀ ಭಾವೂಶಾಸ್ತ್ರಿಗಳವರೂ, ಮೈಸೂರಿನ ಟ್ರೈನಿಂಗು ಕಾಲೇಜಿನ ಅಧ್ಯಕ್ಷರಾದ ಮ|| ರಾ|| ಸಿದ್ಧಲಿಂಗಯ್ಯನವರೂ, ಧಾರವಾಡದ ಮ|| ರಾ|| ಮುದುವೇಡಕರ್ ಕೃಷ್ಣರಾಯರವರೂ ಪುಷ್ಟೀಕರಿಸಿದರು. ತರುವಾಯ, ಮ|| ರಾ|| ವಿ. ಜಿ. ಆಲೂರರವರು ಜಯಘೋಷ ಪುರಸ್ಸರವಾಗಿ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಿ ಆ ಸ್ಥಳವನ್ನು ತಮಗೆ ವಹಿಸಿಕೊಟ್ಟುದಕ್ಕಾಗಿ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಿದರು. ಇದಾದ ಬಳಿಕ, ಕಾರ್ಯಕ್ರಮ ಪ್ರಕಾರವಾಗಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಶುಕ್ಲ ಸಂವತ್ಸರದ ವರದಿಯನ್ನು ಪರಿಷತ್ತಿನ ಕಾರ್ಯದರ್ಶಿಯವರು ಓದಿದರು. (ಇದನ್ನು ಮುಂದೆ ಕೊಟ್ಟಿದೆ.) ಅನಂತರ, ಸಮ್ಮೇಳನದಲ್ಲಿ ನೆರೆದಿರುವವರ ಪರವಾದ ಅಭಿನಂದನವನ್ನು ಶ್ರೀಮನ್ಮಹಾರಾಜರವರಿಗೆ ಸಮರ್ಪಿಸಬೇಕೆಂದು ತೀರ್ಮಾನವಾಯಿತು. ಆಮೇಲೆ, ಈ ಸಮ್ಮೇಳನಕ್ಕೆ ಕಾರ್ಯಾಂತರದಿಂದ ಬರುವುದಕ್ಕವಕಾಶವಾಗದೆ ಹೋದುದಕ್ಕಾಗಿ ತಮ್ಮ ವಿಷಾದವನ್ನು ಸೂಚಿಸಿ ಸಮ್ಮೇಳನವು ಯಶಸ್ವಿಯಾಗಲೆಂದು ಹಾರೈಸಿ ಬರೆದು ಬಂದಿದ್ದ ಕೆಲವರು ಮಹನೀಯರ ಪತ್ರಗಳನ್ನು ಓದಿ ತಿಳಿಸಲಾಯಿತು. ಬಳಿಕ, ಅಧ್ಯಕ್ಷರು ಸುರಸವಾಗಿಯೂ ನವ ಭಾವ ಯುಕ್ತವಾಗಿಯೂ ಇರುವ ತಮ್ಮ ಭಾಷಣವನ್ನೋದಿ ಸಭ್ಯರನ್ನಾನಂದಗೊಳಿಸಿದರು. (ಈ ಭಾಷಣವನ್ನು ಮುಂದೆ ಕೊಟ್ಟಿದೆ.) ಇದಾದ ಬಳಿಕ, ಸಮ್ಮೇಳನದಲ್ಲಿ ಚರ್ಚಿಸಬೇಕಾದ ವಿಷಯಗಳನ್ನು ಗೊತ್ತುಮಾಡಲು ಮಧ್ಯಾಹ್ನ ೨|| ಗಂಟೆಗೆ ಶ್ರೀಮನ್ಮಹಾರಾಜರವರ ಕಾಲೇಜಿನಲ್ಲಿ ವಿಷಯ ನಿರ್ಧಾರಣ ಸಭೆಯು ಸೇರಬೇಕೆಂದು ನಿರ್ಣಯವಾಯಿತು. ಅದೇ ಪ್ರಕಾರ, ಮಧ್ಯಾಹ್ನದಲ್ಲಿ ಸಭೆ ಸೇರಿ ಚರ್ಚಿಸಬೇಕಾದ ಸೂಚನೆಗಳಾವುವೆಂಬುದನ್ನು ನಿರ್ಧರಿಸಲಾಯಿತು. ಈ ದಿನ ರಾತ್ರಿ ಮಹಾರಾಜರವರ ಕಾಲೇಜಿನ ವಿದ್ಯಾರ್ಥಿಗಳು **ಎರಡು ಹೆಚ್ಚು, ಅಥವಾ ಸಾವಿನ ಸಮಸ್ಯೆ** ಎಂಬ ಹಾಸ್ಯ ನಾಟಕವನ್ನಭಿನಯಿಸಿದರು.

---

## ಎರಡನೆಯ ದಿನ (೬-೧೦-೩೦)

ಹಿಂದಣ ದಿವಸ ಗೊತ್ತುಮಾಡಿದ್ದಂತೆ, ಬೆಳಗಿನ ೮|| ಗಂಟೆಗೆ ಶ್ರೀಮನ್ಮಹಾರಾಜರವರ ಕಾಲೇಜಿನ ಸಭಾ ಮಂದಿರದಲ್ಲಿ ಸಮ್ಮೇಳನವು ಸೇರಿತು. ಸಮ್ಮೇಳನಕ್ಕಾಗಿ ಬರೆದುಬಂದಿದ್ದ ಕೆಲವು ಉಪನ್ಯಾಸಗಳನ್ನು ಓದುವುದಲ್ಲದೆ ಕೆಲವು ಠರಾವುಗಳು ಚರ್ಚಿತವಾಗಿ ಅಂಗೀಕೃತವಾದುವು.—

**ಉಪನ್ಯಾಸಗಳು—**

೧. ಎರಡಱುನೂಱಿರ ನಾಡು ಯಾವುದು? ಮ॥ ಶ್ರೀನಿವಾಸ ರಾಜಪುರೋಹಿತರು, ಧಾರವಾಡ.

೨. ಪಂಪ ಭಾರತದ ವಿಚಾರ ,, ಎಸ್. ವಿ. ರಂಗಣ್ಣ, ಎಂ.ಎ. ಅವರು, ತುಮಕೂರು.

೩. ಜನಪದ ಸಾಹಿತ್ಯ (ಹಾಡಿನ ಕವಿತೆ) ,, ದ. ರಾ. ಬೇಂದ್ರೆ, ಬಿ.ಎ. ಅವರು, ಧಾರವಾಡ.

**ನಿರ್ಣಯಗಳು—**

**೧.** ಕನ್ನಡ ಪಂಡಿತರಿಗೂ ವಿಶ್ವವಿದ್ಯಾನಿಲಯದ ಗ್ರಾಜ್ಯುಯೇಟುಗಳಿಗೆ ದೊರೆಯುವ ಸನ್ಮಾನ ಪ್ರೋತ್ಸಾಹಗಳು ದೊರೆಯುವಂತೆ ಆಗಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಚಂದ್ರಶೇಖರ ಶಾಸ್ತ್ರಿಗಳು, ಮೈಸೂರು.

ಅನುಮೋದಕರು :—ಮ॥ ರಾ॥ ಎಂ. ಎ. ರಾಮಾನುಜಯ್ಯಂಗಾರ್ಯರು, ಮೈಸೂರು.

ಈ ನಿರ್ಣಯವು ಸರ್ವಾನುಮತದಿಂದ ಅಂಗೀಕೃತವಾಯಿತು.

**೨.** ಮೈಸೂರು, ಮುಂಬಯಿ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದಲ್ಲಿ ಓರಿಯಂಟಲ್ ಪರೀಕ್ಷೆಗಳನ್ನಿಡಬೇಕೆಂದು ಆಯಾ ವಿದ್ಯಾಪೀಠಗಳನ್ನು ಪ್ರಾರ್ಥಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಚಂದ್ರಶೇಖರ ಶಾಸ್ತ್ರಿಗಳು, ಮೈಸೂರು.

ಅನುಮೋದಕರು :—ಮ॥ ರಾ॥ ಎಂ. ಎ. ರಾಮಾನುಜಯ್ಯಂಗಾರ್ಯರು, ಮೈಸೂರು.

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

**೩.** (೧) ಕನ್ನಡ ನಾಡಿನಲ್ಲಿ ಈಗ ಎರಡು ಭಾಷೆಗಳ ಶಾಲೆಗಳಿರುತ್ತವೆ; ಕ್ರಮವಾಗಿಯೂ ಆದಷ್ಟು ತೀವ್ರವಾಗಿಯೂ ಕನ್ನಡ ಶಾಲೆಗಳು ಮಾತ್ರವೇ ಇರುವಂತೆ ಮಾಡಲು ಕನ್ನಡ ನಾಡಿನ ಎಲ್ಲ ಸರ್ಕಾರಗಳಿಗೂ ಮ್ಯುನಿಸಿಪಾಲಿಟಿ ಮತ್ತು ಲೋಕಲ್ ಬೋರ್ಡುಗಳಿಗೂ ಆಗ್ರಹದ ವಿನಂತಿಯನ್ನು ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

(೨) ಕರ್ಣಾಟಕ ಭಾಗಗಳಲ್ಲಿ, ಈಗಿರುವ ಪರಪ್ರಾಂತೀಯ ಭಾಷೆಯ ಶಾಲೆಗಳಲ್ಲಿ ಮೊದಲಿನಿಂದಲೂ ಕನ್ನಡವನ್ನೇ ಹೆಚ್ಚಾಗಿ ಕಲಿಸುವ ಏರ್ಪಾಡು ಮಾಡಿ, ಕನಿಷ್ಠಪಕ್ಷಕ್ಕೆ ಕನ್ನಡವನ್ನು ಎರಡನೆಯ ಆವಶ್ಯಕ ಭಾಷೆಯಾಗಿಯಾದರೂ ಮಾಡಬೇಕೆಂದು ಆಯಾ ಸಂಸ್ಥೆಗಳಿಗೆ ಆಗ್ರಹ ಪೂರ್ವಕವಾಗಿ ಬಿನ್ನವಿಸಬೇಕಾಗಿ ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಮುದುವೀಡು ಕೃಷ್ಣರಾಯರು, ಧಾರವಾಡ.

ಅನುಮೋದಕರು :—ಮ॥ ರಾ॥ ಡಿ. ಕೊಂಗಾಡಿಯಪ್ಪನವರು, ದೊಡ್ಡಬಳ್ಳಾಪುರ.

ಈ ಸೂಚನೆಯು ಸರ್ವಾನುಮತದಿಂದ ಅಂಗೀಕೃತವಾಯಿತು.

ಮಧ್ಯಾಹ್ನ ೨.೦ ಗಂಟೆಗೆ ಸರಿಯಾಗಿ ಪುನಃ ಸಭೆ ಸೇರಿದ ಮೇಲೆ ಈ ಸಮ್ಮೇಳನ ಸಮಾರಂಭದ ಸನ್ನಿವೇಶದಲ್ಲಿಯೇ ಕುಮಾರವ್ಯಾಸ ಜಯಂತ್ಯುತ್ಸವವೂ, ತರುಣ ಲೇಖಕರ ಗೋಷ್ಠಿಯೂ ಬಹಳ ವೈಭವದಿಂದ ನಡೆದುವು ; ಕೆಲವು ಉಪನ್ಯಾಸಗಳೂ ಭಾರತ ಪಠನವೂ ನಡೆದುವು.—

**ಉಪನ್ಯಾಸಗಳು—**

೪. ಮ|| ರಾ|| ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರು, ಕುಮಾರವ್ಯಾಸನ ಪರಿಚಯ.
೫. ,, ಎಸ್. ವಿ. ರಂಗಣ್ಣ, ಎಂ.ಎ. ಅವರು, ಕುಮಾರವ್ಯಾಸನ ಶೈಲಿ.
೬. ,, ದ. ರಾ. ಬೇಂದ್ರೆ, ಬಿ.ಎ. ಅವರು, ಉತ್ತರನ ವಿಚಾರ.
೭. ,, ಎಮ್. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರು, ಭಾರತ ಜೀವತತ್ತ್ವ.

**ಭಾರತ ಪಠನ—**

೧. ಮ|| ರಾ|| ಎಸ್. ಜಿ. ಬಿಂದೂರಾಯರು ಮಂಗಳಾಚರಣೆ.
೨. ,, ಅನಂತಯ್ಯಂಗಾರ್ಯರು ಶಿಶುಪಾಲ ದೂಷಣೆ.
೩. ,, ಕೆ. ಕೃಷ್ಣರಾಯರು ಕರ್ಣ ಕೃಷ್ಣ ಸಂವಾದ.
೪. ,, ವೀರಭದ್ರ ಶಾಸ್ತ್ರಿಗಳು ಕರ್ಣ ಸಮರ ಭಾಷಣ.
೫. ,, ಸಂಪತ್ಕುಮಾರಾಚಾರ್ಯರು ಕರ್ಣ ಪ್ರಲಾಪ.
೬. ,, ತಮ್ಮಯ್ಯನವರು ಉತ್ತರನ ಪ್ರತಾಪ.
೭. ,, ರಾಮಕೃಷ್ಣ ಶಾಸ್ತ್ರಿಗಳು ಉತ್ತರನ ಹೇಡಿತನ.
೮. ,, ಮಾಯಗೌಡರು ಊರ್ವಶೀ ಅರ್ಜುನ ವಿಚಾರ.
೯. ,, ದೇವುಡು ನರಸಿಂಹ ಶಾಸ್ತ್ರಿಗಳು ಕಿರಾತಾರ್ಜುನೀಯ.
೧೦. ಶ್ರೀಮತಿ ನಾಗಮ್ಮನವರು ದ್ರೌಪದೀ ವಸ್ತ್ರಾಪಹರಣ.

ಭಾರತ ಪಠನೆಯು ರಸಭಾವಾನುಗುಣವಾದ ರಾಗ ಗಮಕ ಶೈಲಿಗಳಿಂದ ಮನೋಹರವಾಗಿದ್ದು ಸಭ್ಯರೆಲ್ಲರೂ ಆನಂದದಿಂದ ತಲೆದೂಗುವಂತಿದ್ದಿತು. ಇದಾದ ಬಳಿಕ, ಗಾನವಿಶಾರದ ಮ|| ರಾ|| ಪಿ. ಕೃಷ್ಣಪ್ಪನವರು ಶ್ರೀ ಪುರಂದರ ದಾಸರವರ ಕೀರ್ತನೆಗಳನ್ನು ಬಹಳ ಶ್ರಾವ್ಯವಾಗಿ ಹಾಡಿ ಸಭಾಸದರೆಲ್ಲರಿಗೂ ಕರ್ಣಾನಂದವನ್ನುಂಟುಮಾಡಿದರು.

——

## ಮೂರನೆಯ ದಿನ (೭-೧೦-೩೦)

ಹಿಂದಣ ದಿನದ ಗೊತ್ತಾಗಿದ್ದಂತೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನವು ಅರಸು ಬೋರ್ಡಿಂಗ್ ಹೋಮಿನಲ್ಲಿ ಪ್ರಾತಃಕಾಲ ೯ ಗಂಟೆಗೆ ನಡೆಯಿತು. (ಇದರ ಕಾರ್ಯವಿವರವನ್ನು ಮುಂದೆ ಕೊಟ್ಟಿದೆ.)

ಮಧ್ಯಾಹ್ನ ೪ ಗಂಟೆಗೆ ಸರಿಯಾಗಿ ಕಾಲೇಜಿನ ಸಭಾ ಮಂದಿರದಲ್ಲಿ ಪುನಃ ಸಭೆ ಸೇರಿ ಉಳಿದಿದ್ದ ಕೆಲವು ಉಪನ್ಯಾಸಗಳನ್ನು ಓದಿದುದಲ್ಲದೆ ಕೆಲವು ಸೂಚನೆಗಳನ್ನು ಚರ್ಚಿಸಿ ನಿರ್ಣಯಿಸಲಾಯಿತು.—

**ಉಪನ್ಯಾಸಗಳು—**

೮. ಮ॥ ರಾ॥ ಡಿ. ಎಲ್. ನರಸಿಂಹಾಚಾರ್ಯರು, ಎಂ.ಎ., ಮೈಸೂರು, ಜನ್ನನ ಯಶೋಧರ ಚರಿತ್ರೆಯ ವಿಚಾರ.

೯. ,, ತೀ. ನಂ. ಶ್ರೀಕಂಠಯ್ಯನವರು, ಎಂ.ಎ., ಮೈಸೂರು, ಹೊಸ ಮಟ್ಟುಗಳು.

೧೦. ,, ಚಂದ್ರಶೇಖರ ಶಾಸ್ತ್ರಿಗಳು, ಮೈಸೂರು, .. ಕಾವ್ಯ.

೧೧. ,, ಶ್ರೀನಿವಾಸರಂಗಾಚಾರ್ಯರು, ಮೈಸೂರು, ಪ್ರಾಚೀನ ವ್ಯಾಖ್ಯಾನ ಪದ್ಧತಿ.

೧೨. ,, ಅನಂತರಂಗಾಚಾರ್ಯರು, ಮೈಸೂರು, ಅಜಿತನಾಥ ಪುರಾಣ.

೧೩. ,, ಶಂಕರ ನರಸಿಂಹ ಕುಲಕರ್ಣಿ, ಧಾರವಾಡ, ಕುಮಾರವ್ಯಾಸ ವಿಚಾರ.

೧೪. ,, ಸೋಸಲೆ ಕೃಷ್ಣಸ್ವಾಮಿ ಶಾಸ್ತ್ರಿಗಳು, ಮೈಸೂರು, ಪರಿಷತ್ಪ್ರಶಂಸೆ.

೧೫. ,, ಜಿ. ಪಿ. ರಾಜರತ್ನಂ, ಬಿ.ಎ., ಮೈಸೂರು, ಕನ್ನಡ ಕವಿ ಕಾವ್ಯ ಪ್ರಸಂಗ.

**ನಿರ್ಣಯವಾದ ಸೂಚನೆಗಳು—**

**೪.** ಮುಂಬಯಿ, ಮದರಾಸು, ಮೈಸೂರು, ಹೈದರಾಬಾದು ಸರಕಾರಗಳಲ್ಲಿ ಯಾವುದರಿಂದಾಗಲಿ ಕನ್ನಡದ ಪಾಠಶಾಲೆಗಳ ಉಪಯೋಗಕ್ಕಾಗಿ ಸ್ವೀಕೃತವಾದ ಪುಸ್ತಕಗಳನ್ನು, ಉಳಿದವರೆಲ್ಲರೂ ಇಡುವಂತೆ ಬೇರೆ ಬೇರೆ ಸರಕಾರದವರನ್ನು ಪರಿಷತ್ತಿನವರು ಕೇಳಿಕೊಳ್ಳಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ತಿರುಮಲೆ ತಾತಾಚಾರ್ಯ ಶರ್ಮರು, ಬೆಂಗಳೂರು.

ಅನುಮೋದಕರು :—ಮ॥ ರಾ॥ ಮಹಿಷಿ ಅಶ್ವತ್ಥರಾಯರು.

**೫.** ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನದ ಆಶ್ರಯದಲ್ಲಿ ನಾಟಕ ಸಮ್ಮೇಳನ, ಕವಿ ಸಮ್ಮೇಳನ, ಕೀರ್ತನ ಸಮ್ಮೇಳನ ಮತ್ತು ಗಾಯಕ ಸಮ್ಮೇಳನ ಮುಂತಾದುವು ಮುಂದಿನ ವರ್ಷದಿಂದ ನಡೆಯಲು ತಕ್ಕ ಏರ್ಪಾಡನ್ನು ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಎನ್. ಎಸ್. ವೆಂಕಟಸುಬ್ಬರಾಯರು.

ಅನುಮೋದಕರು :—ಮ॥ ರಾ॥ ಎಂ. ಎ. ದೊರೆಸ್ವಾಮಯ್ಯಂಗಾರ್ಯರು, ಎಂ.ಎ., ಬಿ.ಎಲ್., ಮೈಸೂರು.

ಮ॥ ರಾ॥ ಸದಾಶಿವ ಗರುಡರು, ಬೆಳಗಾಂವಿ.

ಮ॥ ರಾ॥ ಶಂಕರ ನರಸಿಂಹ ಕುಲಕರಣಿ, ಧಾರವಾಡ.

೬. (೧) ಈ ಸಮ್ಮೇಳನವು ಅಲಿ ಜನಾಬ್ ಸಾಲಾರಜಂಗ ಬಹಾದ್ದೂರರವರನ್ನು ಅವರ ಸಂಸ್ಥಾನದಲ್ಲಿ ಕನ್ನಡದ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿ ಉತ್ತೇಜನ ಕೊಟ್ಟುದಕ್ಕಾಗಿ ಅಭಿನಂದಿಸುತ್ತದೆ.

(೨) ಅದರಂತೆ, ಪ್ರಾಥಮಿಕ ಶಿಕ್ಷಣದ ಫೀಜನ್ನು ಬಾಲಕರಿಂದ ವಸೂಲ್ಮಾಡದೆ ಮಾಫೀ ಮಾಡಬೇಕೆಂದು ಈ ಸಮ್ಮೇಳನವು ಬಿನ್ನವಿಸುತ್ತದೆ.    (ಅಧ್ಯಕ್ಷರಿಂದ)

೭. ಮುದ್ರಿತವಾದ ಪ್ರಾಚೀನ ಅರ್ವಾಚೀನ ಕನ್ನಡ ಪುಸ್ತಕಗಳೆಲ್ಲವೂ ಒಂದು ಕಡೆ ಇರುವಂತೆ ಸಾಹಿತ್ಯಪರಿಷತ್ತಿನವರು ಒಂದು ದೊಡ್ಡ ಪುಸ್ತಕಾಲಯ ವನ್ನೇರ್ಪಡಿಸಬೇಕೆಂದು ಈ ಸಮ್ಮೇಳನವು ಪರಿಷತ್ತಿನವರಿಗೆ ಆಗ್ರಹ ಪೂರ್ವಕವಾಗಿ ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ನಾ. ಶ್ರೀ. ರಾಜಪುರೋಹಿತರು,    ಧಾರವಾಡ.

ಅನುಮೋದಕರು :—ಮ॥ ರಾ॥ ಓಡ್ಲಮನೆ ಆತ್ಮಾರಾಮ ಶಾಸ್ತ್ರಿಗಳು, ಕೊಡಗು.

೮. ಕನ್ನಡ ದೇಶದಲ್ಲಿ ನಡೆಯುವ ಸರಕಾರದ ಎಲ್ಲ ವ್ಯವಹಾರಗಳನ್ನೂ ಕನ್ನಡದಲ್ಲಿಯೇ ನಡೆಯಿಸುವಂತೆ ಸರಕಾರದವರನ್ನು ಕೇಳಿಕೊಳ್ಳಬೇಕೆಂದು ಈ ಸಮ್ಮೇಳನವು ಸಲಹೆ ಮಾಡುತ್ತದೆ.

ಸೂಚಕರು :—ಮ॥ ರಾ॥ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ, ಬನಹಟ್ಟಿ.

ಅನುಮೋದಕರು :—ಮ॥ ರಾ॥ ಎಂ. ಎ. ದೊರೆಸ್ವಾಮಯ್ಯಂಗಾರ್ಯರು, ಎಂ.ಎ., ಬಿ.ಎಲ್., ಮೈಸೂರು.

೯. ವಿದ್ಯಾರ್ಥಿಗಳ ಅನುಕೂಲ್ಯಕ್ಕಾಗಿ ಸಾಹಿತ್ಯ ಪರಿಷತ್ಪತ್ರಿಕೆಗಳ ಸಂಚಿಕೆ ಗಳನ್ನು ಬೆಲೆಯಲ್ಲಿ ಕನಿಷ್ಠಪಕ್ಷ ಕಾಲುವಾಸಿಯಾದರೂ ರಿಯಾಯತಿ ತೋರಿಸಿಕೊಟ್ಟು, ಆ ಮೂಲಕ ವಿದ್ಯಾರ್ಥಿಗಳು ಹೆಚ್ಚುಮಂದಿ ಚಂದಾದಾರರಾಗುವಂತೆ ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ವೆಂಕಟರಮಣ ಶಾಸ್ತ್ರಿಗಳು, ಚಾಮರಾಜನಗರ.

ಅನುಮೋದಕರು :—ಮ॥ ರಾ॥ ಮನ್‌ಸಬ್ದಾರರು, ಹೈದರಾಬಾದು.

೧೦. ಅಖಿಲ ಕರ್ಣಾಟಕಕ್ಕೆ ಒಂದೇ ವಿಶ್ವವಿದ್ಯಾನಿಲಯವಾಗುವ ವಿಷಯದಲ್ಲಿ ಪರಿಷತ್ತಿನವರು ಒಂದು ಮಂಡಲವನ್ನೇರ್ಪಡಿಸಿ ತಮ್ಮ ಮುಖಾಂತರವಾಗಿ ಮೈಸೂರು ವಿಶ್ವವಿದ್ಯಾನಿಲಯವೇ ಆ ನಿಲಯವಾಗುವಂತೆ ಮಾಡಲು ಆವಶ್ಯಕವಾದ ಎಲ್ಲ ಪ್ರಯತ್ನಗಳನ್ನೂ ಆದಷ್ಟು ಕ್ಷಿಪ್ರದಲ್ಲಿ ಮಾಡಬೇಕೆಂದು ಈ ಸಮ್ಮೇಳನವು ಸೂಚಿಸು ತ್ತದೆ. ಈ ಕಾರ್ಯವನ್ನು ಕೈಕೊಳ್ಳಲು ಕೆಳಗೆ ಕಂಡ ಉಪಮಂಡಲವೊಂದನ್ನು ನಿಯಮಿಸುತ್ತದೆ:—

೧. ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಅಧ್ಯಕ್ಷರು)

೨. ,, ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ., ಧಾರವಾಡ.

೩. ,, ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್., ಮೈಸೂರು.

೪. ,, ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ., ಮದರಾಸು.
೫. ,, ಕೆ. ಸಂಪದ್ಗಿರಿರಾಯರು, ಎಂ.ಎ., ಬೆಂಗಳೂರು.
೬. ,, ಕೆ. ಗುರುರಾಜಾರಾಯರು, ಬಿ.ಎ., ಎಲ್‌ಎಲ್.ಬಿ., ಬಳ್ಳಾರಿ.

ಸೂಚಕರು :—ಮ॥ ರಾ॥ ಪೋದ್ದಾರ್ ರಂಗಪ್ಪನವರು, ಬಿ.ಎ., ಕಾರವಾರ.
ಅನುಮೋದಕರು :—ಮ॥ ರಾ॥ ನಾ. ಶ್ರೀ. ರಾಜಪುರೋಹಿತರು, ಧಾರವಾಡ.

೧೧. ಕರ್ಣಾಟಕದ ಹೈಸ್ಕೂಲುಗಳಲ್ಲಿಯ ಶಿಕ್ಷಣಕ್ರಮದಲ್ಲಿ ಇಂಗ್ಲಿಷ್ ಭಾಷಾ ವಿಷಯವೊಂದನ್ನು ಬಿಟ್ಟು ಎಲ್ಲಾ ವಿಷಯಗಳೆಲ್ಲವೂ ಕನ್ನಡ ಭಾಷೆಯ ಮುಖಾಂತರವಾಗಿಯೇ ಕಲಿಸಲ್ಪಡಬೇಕೆಂದು ಈ ಸಮ್ಮೇಳನವು ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳಿಗೆ ಬಿನ್ನವಿಸುತ್ತದೆ.

ಸೂಚಕರು :—ಮ॥ ರಾ॥ ಟಿ. ಎಸ್. ಸುಬ್ಬರಾಯ ಶಾಸ್ತ್ರಿಗಳು, ಮೈಸೂರು.
ಅನುಮೋದಕರು :—ಮ॥ ರಾ॥ ಎಂ. ಕೆ. ವೆಂಕಟಸುಬ್ಬಯ್ಯನವರು,
ಮ॥ ರಾ॥ ದತ್ತಾತ್ರೇಯ ಕುಲಕರಣಿ, ಧಾರವಾಡ.

ಇದಾದ ಮೇಲೆ, ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪುಸ್ತಕ ಭಂಡಾರಕ್ಕಾಗಿ ಮೈಸೂರಿನ ಮ॥ ರಾ॥ ಪಂಡಿತ ಶ್ರೀನಿವಾಸರಾಘವಾಚಾರ್ಯರು ೫೦೦ ರೂಪಾಯಿಗಳ ಬೆಲೆ ಬಾಳುವಷ್ಟು ಪುಸ್ತಕಗಳನ್ನು ಕೊಡುವುದಾಗಿ ಮಾಡಿದ ವಾಗ್ದಾನವನ್ನೂ, ಮೈಸೂರಿನ ಮ॥ ರಾ॥ ಎಂ. ಎ. ರಾಮಾನುಜಯ್ಯಂಗಾರ್ಯರು ತಾವು ಪ್ರಕಟಿಸಿರುವ 'ಕಾವ್ಯಕಲಾನಿಧಿ' ಗ್ರಂಥಮಾಲೆಯ ಪುಸ್ತಕಗಳಲ್ಲಿ ಈಗ ಪರಿಷತ್ತಿನ ಕಾರ್ಯಾಲಯ ದಲ್ಲಿಲ್ಲದಿರುವ ಪುಸ್ತಕಗಳೆಲ್ಲವನ್ನೂ ಕೊಡುವಂತೆ ವಾಗ್ದಾನ ಮಾಡಿದುದನ್ನೂ,

ಧಾರವಾಡದ ಮ॥ ರಾ॥ ನಾರಾಯಣ ಶ್ರೀನಿವಾಸ ರಾಜಪುರೋಹಿತರು ನೂರು ಪುಸ್ತಕಗಳನ್ನು ಕೊಡುವುದಾಗಿ ವಾಗ್ದಾನ ಮಾಡಿದುದನ್ನೂ,

ಬೆಳಗಾಂವಿಯ ಮ॥ ರಾ॥ ಸದಾಶಿವ ಗರುಡರವರು ಐವತ್ತು ರೂಪಾಯಿ ಬೆಲೆ ಬಾಳುವಷ್ಟು ನಾಟಕ ಸಂಬಂಧವಾದ ಪುಸ್ತಕಗಳನ್ನು ಕೊಡುವಂತೆ ವಾಗ್ದಾನ ಮಾಡಿದುದನ್ನೂ,

ಚಾಮರಾಜನಗರದ ಮ॥ ರಾ॥ ಚಾ. ವೆಂಕಟರಮಣ ಶಾಸ್ತ್ರಿಗಳವರು ಐವತ್ತು ರೂಪಾಯಿ ಬೆಲೆಯಾಗುವಷ್ಟು ಪುಸ್ತಕಗಳನ್ನು ಕೊಡುವುದಾಗಿ ವಾಗ್ದಾನ ಮಾಡಿ ದುದನ್ನೂ,

ವಿಶೇಷ ಕೃತಜ್ಞತೆಯಿಂದ ವಂದನಾ ಪೂರ್ವಕವಾಗಿ ಸ್ವೀಕರಿಸಲಾಯಿತು.

ಬಳಿಕ, ಅಧ್ಯಕ್ಷರು ಉಪಸಂಹಾರ ಭಾಷಣವನ್ನು ಮಾಡಿದರು. ಆಮೇಲೆ ಸ್ವಾಗತ ಮಂಡಲಿಯ ಪರವಾಗಿ ಅದರ ಕಾರ್ಯದರ್ಶಿಯವರು ಕೃತಜ್ಞತಾ ಪೂರ್ವಕ ವಾದ ವಂದನೆಗಳನ್ನರ್ಪಿಸಿದರು; ಪರಿಷತ್ತಿನ ಪರವಾಗಿ ಪರಿಷತ್ತಿನ ಕಾರ್ಯದರ್ಶಿ ಯವರು ಧನ್ಯವಾದಗಳನ್ನರ್ಪಿಸಿದರು. ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆ ಯನ್ನು ಮಾಡಿದನಂತರ ಸಮ್ಮೇಳನ ಕಾರ್ಯವು ಪೂರಯಿಸಿತು.

---

## ಸ್ವಾಗತ ಗೀತ

೧

ಗೆಳೆಯ ಕನ್ನಡಿಗರೇ, ಸ್ವಾಗತವು ನಿಮಗೆ !
ಬೆಳೆವ ಸಿರಿಗನ್ನಡದ ಬಳ್ಳಿ ಪಡೆದರಳುಗಳೆ,
ಸ್ವಾಗತವು ನಿಮಗೆ !

೨

ಒಬ್ಬ ಕನ್ನಡ ದೇವಿಯುದರದಿಂದೊಗೆದು,
ಒಬ್ಬ ಕನ್ನಡ ಜನನಿ ಯೆದೆ ಹಾಲ ವೊಗೆದು,
ಒಬ್ಬ ಮಾತೆಯ ಮಡಿಲು ತೊಡೆಗಳಲಿ ಕುಣಿದು,
ಒಬ್ಬ ತಾಯುಲಿಗಳನೆ ತೊದಲಿ ನುಡಿದು,
ಬೆಳೆದ ಕನ್ನಡಿಗರೇ, ಬಂಧು ಕನ್ನಡಿಗರೇ
ಇನಿಯ ಕನ್ನಡಿಗರೇ, ಸ್ವಾಗತವು ನಿಮಗೆ!

೩

ಪಡುಗಡಲ ತೆರೆ ವೊಳಗಿ, ಹಲವು ಹೊಳೆಗಳು ಮಿನುಗಿ,
ಸೊಬಗು ಸುಳಿಯುವ, ಸುಖದ ಬೀಡಿನಿಂದ,
ತುಳು ನೆರೆಯ ನಾಡಿನಿಂದ—
ಕನ್ನಡದ ಕಲಿಗಳನು, ಕನ್ನಡದ ಕವಿಗಳನು
ತನ್ನ ಬಸಿರಲಿ ಮುನ್ನ ಹೊರೆದು, ಜಗದಲಿ ಮೆರೆದು
ಮತ್ತೆ ಮಿಗುವುತ್ಸಹದ ಕೊಯಲಿನಿಂದ,
ಬೆಳವಲದ ಬಯಲಿನಿಂದ—
ವನದೇವಿ ಜಲದೇವಿಯರಿಗೆ ತೌರೂರೆನಿಸಿ,
ಜನದ ಕಣ್ ಮನಗಳನು ಸೆಳೆದು ಸೆರೆ ಸಿಕ್ಕಿಸುವ
ಪ್ರಕೃತಿ ರಚನೆಯ ಬೆಗಡು ಬೆಡಗಿನಿಂದ,
ಮಲೆನಾಡು ಕೊಡಗಿನಿಂದ,—
ಹೆರರು ಕೊಡುವಟ್ಟುಳಿಗೆ ಹಿಮ್ಮೆಟ್ಟದೆಯೆ ನಿಂತು
ಸಿರಿಗನ್ನಡ ಧ್ವಜವನೆತ್ತಿ ಮೆರೆಯಿಸುತಿರುವ
ಗಂಡುಮೆಟ್ಟಿನ ನೆಲದ ತಡಿಗಳಿಂದ,
ಕನ್ನಡದ ಗಡಿಗಳಿಂದ—
ಬಂದಿಹಿರಿ, ಬಂದಿಹಿರಿ ಕನ್ನಡದ ಮಣಿಗಳಿರ,
ಬಂದಿಹಿರಿ ಕನ್ನಡದ ದೇವಿಯಾರಾಧನೆಗೆ,
ಇಂದು ಸ್ವಾಗತವು ನಿಮಗೆ !
ತಂದಿಹಿರಿ ನೀವಿಂದು ಹೊಸದೊಂದು ಭಾಗ್ಯವನು
ಈ ನಮ್ಮ ಮೈಸೂರಿಗೆ !

೪

ಬೆಟ್ಟ ತುದಿಯಲಿ ನಿಂತು ಬೆಳಗಿ ದೆಸೆ ದೆಸೆಗೆ,
ಭಕ್ತರಳಲೆಲ್ಲವನು ತುಳಿದು ನೆಲದಡಿಗೆ,
ಒಲುಮೆಯಲಿ ಸಲುಮೆಯಲಿ ಚಾಮುಂಡಿ ದೇವಿ,
ಕನ್ನಡಿಗರಧಿದೇವಿ ಶುಭಗಳನು ತೀವಿ
ಕಾಯುತಿರುವೀ ನಮ್ಮ ಮೈಸೂರಿಗೆ,
ಇಂದು ಸ್ವಾಗತವು ನಿಮಗೆ!
ಕನ್ನಡದ ರಸಿಕತೆಗೆ ತಾನು ನೆಲೆಯೆನಿಸಿ,
ಕನ್ನಡದ ನಲ್ನುಡಿಗೆ ಮನ್ನಣೆಯ ಸಲಿಸಿ,
ಕೃಷ್ಣಪ್ರಭುವಾಳುವೀ ಮೈಸೂರಿಗೆ,
ಇಂದು ಸ್ವಾಗತವು ನಿಮಗೆ!

೫

ಇಲ್ಲಿ ಕೆರೆ, ಅಲ್ಲಿ ಗಿರಿ; ಎಲ್ಲೆಲ್ಲಿ ನೋಡಿದರೆ
ಅಲ್ಲಲ್ಲಿ ತಂಪೆರಚುವುಪವನಗಳು.
ಬನ್ನಿ, ವಿಶ್ರಮಿಸಿಕೊಳ್ಳಿ, ಬಳಲಿಕೆಯ ಹರಿಸಿಕೊಳ್ಳಿ—
ಎಂದು ಅದೊ ಕರೆಯುತಿಹವು!
ತನ್ನಂತರಂಗವನು ತೆರೆದು ತೋರಿಸಿ ಬೆಳಗಿ
ತನ್ನ ನಲವನು ನಿಮಗೆ ಪುರವರುಹುವಂತಿರುವ
ಉರಿವ ದೀಪದ ಹಿರಿಯ ಬೀದಿ ಸಾಲು
ಸ್ವಾಗತವ ಬಯಸುತಿಹುದು!—ನಿಮಗಿದೋ
ಮೈಸೂರು ಬಯಸುತಿಹುದು!

೬

ಕನ್ನಡದ ಸೇವೆಯಲಿ ನುರುಗಿ ಹಣ್ಣಾದವರೆ,
ಹಿರಿಯ ಕನ್ನಡ ಧೀರರೇ,
ಕನ್ನಡದ ಮೇಲ್ಮೆಯಾ ಕನಸ ನನಸಾಗಿಸುವ
ತರುಣ ಕನ್ನಡ ವೀರರೇ,
ಕನ್ನಡದ ಸೊಂಪು ಸವಿಯುಗುವ ರಸ ಕಾವ್ಯಗಳ
ಬರೆವ, ಬರೆಯಿಸುತಿರುವ ಸುಂದರಿಯರೇ
ಆರ್ಯ ಮಹಿಳೆಯರೇ,
ಸ್ವಾಗತವು ನಿಮಗಿಂದು ಮೈಸೂರಿಗೆ!

೭

ನಾವೆಲ್ಲರೊಡಗೂಡಿ, ಒಡನಾಡಿ, ಕಲೆತು,
ಕನ್ನಡದ ಸೇವೆಯಲಿ ನಮ್ಮ ಮೈಮರೆತು,

ಕುಂದು ಕೊರತೆಗಳೊಂದಕಿಂಬಿಲ್ಲದಂತೆ,
ನಮ್ಮ ಸಖ್ಯದ ಮೊಗ್ಗು ಬಿರಿದರಳುವಂತೆ,
ದೇವಿ ಕರುಣಿಸಲಿ ವರವ!—ಕನ್ನಡದ
ದೇವಿ ಕೈಕೊಳಲಿ ಫಲವ!

೮

ಕನ್ನಡಿಗ ಸೋದರರೆ, ಸ್ವಾಗತವು ನಿಮಗೆ!
ಕನ್ನಡದ ಸಿರಿ ಬಳ್ಳಿ ಹೊಮ್ಮಿಸಿರುವರಳುಗಳೆ,
ಇಂದು ಸ್ವಾಗತವು ನಿಮಗೆ!—ನಿಮಗಾಗಿ
ಕಾದಿರುವ ಮೈಸೂರಿಗೆ!

---

ರಾಜಕಾರ್ಯಪ್ರಸಕ್ತ, ದಿವಾನ್ ಬಹದ್ದೂರ್

## ಮ|| ರಾ|| ಎಂ. ಎನ್. ಕೃಷ್ಣರಾಯರವರ ಭಾಷಣ

ಮಹನೀಯರೆ, ಈ ದಿವಸ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನಾರನೆಯ ವಾರ್ಷಿಕ ಸಮ್ಮೇಳನದ ಆರಂಭೋತ್ಸವವನ್ನು ನಡೆಯಿಸಲು ನನ್ನನ್ನು ಕರೆದುದಕ್ಕಾಗಿ ನಾನು ತಮ್ಮೆಲ್ಲರಿಗೂ ಕೃತಜ್ಞನಾಗಿದ್ದೇನೆ. ಕನ್ನಡ ಸಾಹಿತ್ಯದಲ್ಲಿ ವಿಶೇಷ ಪರಿಶ್ರಮವುಳ್ಳ ತಮ್ಮಗಳ ಮಧ್ಯೇ ಬಂದು ಈ ಕಾರ್ಯವನ್ನು ಕೈಕೊಳ್ಳಲು ನನಗೆ ತಾಯ್ನುಡಿಯಾದ ಕನ್ನಡದಲ್ಲಿ ಸಹಜವಾಗಿರುವ ಮಮತೆ, ಅದರ ಪುರೋವೃದ್ಧಿಯಲ್ಲಿರುವ ಆಸಕ್ತಿ ಮತ್ತು ಇವುಗಳಿಗಿಂತ ಹೆಚ್ಚಾಗಿ ತಾವು ನನ್ನ ವಿಷಯದಲ್ಲಿ ತೋರಿರುವ ಪ್ರೀತಿ ವಿಶ್ವಾಸಗಳು—ಇವುಗಳ ಹೊರತು ನನಗಿನ್ನಾವ ಅಧಿಕಾರವನ್ನೂ ಕಾಣೆನು.

ಈ ಪರಿಷತ್ತು ಸ್ಥಾಪಿತವಾದಂದಿನಿಂದ ಅದು ತನ್ನ ಉದ್ದೇಶಗಳ ಸಾಧನೆಗಾಗಿ ಮಾಡಿರುವ ಕೆಲಸವು ಅಲ್ಪವಾಗಿಲ್ಲ: ಪರಿಷತ್ತಿನ ಅಧಿವೇಶನಗಳನ್ನು ಕರ್ಣಾಟಕದ ಮುಖ್ಯ ಪಟ್ಟಣಗಳಲ್ಲೆಲ್ಲ ಕೂಡಿಸಿ ನಾಡಿನ ಜನರಲ್ಲೆಲ್ಲ ಐಕ್ಯ ಭಾವವನ್ನು ಹುಟ್ಟಿಸಿಯೂ, ಹಲವು ಬಳ್ಳಿಯ ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿಯೂ, ಆಧುನಿಕ ಗ್ರಂಥಗಳನ್ನು ಪಂಡಿತರಿಂದ ವಿಮರ್ಶೆ ಮಾಡಿಸಿ ಸಾಹಿತ್ಯದ ಬೆಳೆವಣಿಗೆಗೆ ದಾರಿ ತೋರಿಸಿಯೂ, ಉತ್ತಮ ಗ್ರಂಥಗಳನ್ನು ರಚಿಸಿದವರಿಗೆ ಯೋಗ್ಯವಾದ ಮನ್ನಣೆಯನ್ನು ಮಾಡಿ ಪ್ರೋತ್ಸಾಹಿಸಿಯೂ ಇನ್ನೂ ಇತರ ರೀತಿಗಳಲ್ಲಿಯೂ ಈ ಪರಿಷತ್ತು ಕರ್ಣಾಟಕದ ಪುನರುಜ್ಜೀವನ ಕಾರ್ಯವನ್ನು ಮುಂದುವರಿಸಿದೆ.

ಹೀಗೆ ಅನೇಕ ಅಭಿನಂದನೀಯ ಕಾರ್ಯಗಳು ನಡೆಯುತ್ತಿವೆಯಾದರೂ ಪರಿಷತ್ತು ಮಾಡಬೇಕಾದ ಕೆಲಸಗಳು ಬಹಳವಾಗಿವೆ. ಇವುಗಳಲ್ಲಿ ಕೆಲವನ್ನು ನನಗೆ ತಿಳಿದ ಮಟ್ಟಿಗೆ ಸ್ಥೂಲವಾಗಿ ಸೂಚಿಸಲಪೇಕ್ಷಿಸುತ್ತೇನೆ.—

ಈ ಪರಿಷತ್ತಿನಂತೆಯೇ ಆಂಧ್ರ, ವಂಗ, ಮಹಾರಾಷ್ಟ್ರ ಪ್ರಾಂತಗಳಲ್ಲಿ ಸಂಸ್ಥೆಗಳು ಸ್ಥಾಪಿಸಲ್ಪಟ್ಟು ಸಾಹಿತ್ಯದ ಬೆಳವಣಿಗೆಗಾಗಿ ಶ್ರಮಿಸುತ್ತಿವೆ. ಭರತ ಖಂಡದ ಇತರ ಪ್ರಾಂತಗಳಿಗಿಂತ ಮುಂಚೆಯೇ ವಂಗ ದೇಶದಲ್ಲಿ ನವ ಚೈತನ್ಯ ಪ್ರವಾಹವು ಹರಿಯುತೊಡಗಿತೆಂಬುದು ತಮ್ಮೆಲ್ಲರಿಗೂ ತಿಳಿದ ಅಂಶವಾಗಿದೆ. ಮಹಾ ರಾಷ್ಟ್ರದಲ್ಲಿಯೂ ಆಂಧ್ರ ದೇಶದಲ್ಲಿಯೂ ಆಗಿರುವ ಸಾಹಿತ್ಯ ಜಾಗೃತಿಯು ಕೂಡ ವಿಶೇಷವಾದುದೇ. ಉಳಿದ ಪರಿಷತ್ತುಗಳೂ ನಮ್ಮ ಪರಿಷತ್ತಿಗಿಂತ ಹೆಚ್ಚು ಕಾಲದಿಂದ ಕೆಲಸ ಮಾಡುತ್ತಿವೆ. ಭರತವರ್ಷದ ನಾನಾ ಪ್ರಾಂತಗಳ ಭಾಷೆ ಗಳಲ್ಲಿಯೂ ರೀತಿ ನೀತಿಗಳಲ್ಲಿಯೂ ಅಂತರವಿದ್ದರೂ ಅವೆಲ್ಲಕ್ಕೂ ತಳಹದಿಯಾದ ಸಂಸ್ಕೃತಿಯು ಒಂದೇ. ಈ ದೇಶದ ಇತರ ಭಾಷೆಗಳಿಗೂ ಕನ್ನಡಕ್ಕೆ ಒದಗಿದಂತೆಯೇ ಅವನತಿಯೊದಗಿ ಅವೂ ಅದರಂತೆಯೇ ಪುನಃ ತಲೆಯೆತ್ತತೊಡಗಿವೆ. ಪುನರುತ್ಥಾನ ಮಾರ್ಗದಲ್ಲಿ ಒಂದು ಹಜ್ಜೆ ಮುಂದಿರುವುವು ಕೆಲವು, ಒಂದು ಹಜ್ಜೆ ಹಿಂದಿರುವುವು ಕೆಲವು. ಇವುಗಳ ಗುರಿಯೂ ಇವು ಜಯಿಸಬೇಕಾದ ತೊಡಕುಗಳೂ ಒಂದೇ ರೀತಿಯವು. ಆದುದರಿಂದ ಈ ಎಲ್ಲ ಸಂಸ್ಥೆಗಳೊಡನೆಯೂ ನಾವು ನಿಕಟ ಸಂಬಂಧ ವನ್ನು ಬೆಳೆಯಿಸಿದರೆ ಅದು ಫಲದಾಯಕವಾಗುವುದರಲ್ಲಿ ಸಂಶಯವಿಲ್ಲ.

ಜನ ಜೀವನದ ಉತ್ತಮಾಂಶಗಳನ್ನು ಪ್ರತಿಬಿಂಬಿಸಿ ಜನಪದದ ಪ್ರಗತಿಗೆ ದಾರಿ ತೋರಿಸುವ ಕಲೆಯೇ ಉತ್ತಮ ಕಲೆಯು. ಉತ್ತಮ ಕಲೆಯ ಪ್ರಭಾವವು ಜನತೆಯ ಮೇಲೆ ಬೀಳದಿದ್ದರೆ ಅದಕ್ಕೆ ಏಳಿಗೆಯಿಲ್ಲ. ಜನ ಜೀವನದ ತಿರುಳನ್ನೊಳ ಕೊಳ್ಳದ ಕಲೆಗೆ ಜೀವವಿಲ್ಲ. ಜೀವನ ಕ್ಷೇತ್ರದಲ್ಲಿ ಅತ್ಯಧಿಕ ಮಹಿಮೆಯನ್ನು ಬೀರತಕ್ಕ ಕಲೆಯೆಂದರೆ ಸಾಹಿತ್ಯ. ಈ ಕಲೆಗೂ ಜನ ಜೀವನಕ್ಕೂ ಇರುವ ಪರಸ್ಪರ ಸಂಬಂಧ ವನ್ನು ಪುಷ್ಟೀಕರಿಸಲು ಭಾಷೆಯು ಸಾಕಾದಷ್ಟು ಮಟ್ಟಿಗೆ ಬೆಳೆಯುತ್ತಿರಬೇಕು. ಚೈತನ್ಯ ಪೂರ್ಣವಾದ ಜನಾಂಗದಲ್ಲಿ ಇಂತಹ ಬೆಳವಣಿಗೆಯು ಸ್ವಾಭಾವಿಕವಾಗಿಯೇ ಆಗುತ್ತದೆ. ಅದು ನಿಯತವಾದ, ತನ್ನ ಸಹಜ ಸೌಂದರ್ಯವನ್ನು ಭಂಗಗೊಳಿಸದ, ಸಾಧುವಾದ, ಸುಗಮವಾದ ಮಾರ್ಗದಲ್ಲಿ ಪ್ರವಹಿಸುವಂತೆ ಮಾಡುವುದು ಇಂತಹ ಸಂಸ್ಥೆಗಳ ಕೆಲಸ. ಪಾಶ್ಚಾತ್ಯ ನಾಗರಿಕತೆಯ ಪ್ರಬಲ ಸಂಘರ್ಷಣದಿಂದಲೂ, ಪ್ರಪಂಚದಲ್ಲಿ ಎಲ್ಲೆಡೆಯೂ ಹರಡುತ್ತಿರುವ ಹೊಸ ಭಾವಗಳಿಂದಲೂ ಹಿಂದೆ ತಿಳಿಯದ ಎಷ್ಟೋ ವಿಷಯಗಳು ನಮ್ಮ ಭೌತಿಕ ಪ್ರಪಂಚವನ್ನೂ ಭಾವ ಪ್ರಪಂಚವನ್ನೂ ಪ್ರವೇಶಿಸಿವೆ; ನಮ್ಮ ಜೀವನದ ಬಣ್ಣವೇ ಬದಲಾಯಿಸಿದೆ. ಆದುದರಿಂದ ಇದೆಲ್ಲಕ್ಕೆ ತಕ್ಕಂತೆ ನಮ್ಮ ವಾಕ್ಸಂಪತ್ತಿಯೂ ಹೆಚ್ಚಬೇಕು. ಅದಿಲ್ಲದೆ ಈ ಹೊಸ ಭಾವನೆಗಳು ಜನಸಾಮಾನ್ಯದಲ್ಲಿ ಹರಡುವುದು ಸಾಧ್ಯವಲ್ಲ. ಇದಕ್ಕೆ ವಿಜ್ಞಾನ ವಿಷಯಗಳನ್ನು ದೃಷ್ಟಾಂತವಾಗಿ ತೆಗೆದುಕೊಳ್ಳಬಹುದು. ಇವಕ್ಕೆ ಸಂಬಂಧಪಟ್ಟ ಹುಟ್ಟು ಮಾತುಗಳು ಕನ್ನಡದಲ್ಲಿ ಉಪಯೋಗದಲ್ಲಿದ್ದುದು ಬಹು ಕಡಿಮೆ; ಈಚೆಗೆ ಕೆಲವು ಉಪಯೋಗಕ್ಕೆ ಬಂದಿವೆ. ಆದರೆ ಒಂದು ವಿಷಯವನ್ನು ನಿರ್ದೇಶಿಸಲು ನಾಲ್ಕು ಮಂದಿ ನಾಲ್ಕು ಹೊಸ ಶಬ್ದಗಳನ್ನು ಪ್ರಯೋಗಿಸಿದರೆ ಅದರಿಂದ ಸಾಮಾನ್ಯ ಜನರಿಗೆ ಭ್ರಮೆಯುಂಟಾಗುವುದು ಖಂಡಿತ. ಅರ್ಥಶಾಸ್ತ್ರ,

ರಾಜಕೀಯ ತತ್ತ್ವಶಾಸ್ತ್ರ—ಇವೇ ಮೊದಲಾದುವುಗಳ ವಿಷಯದಲ್ಲಿಯೂ ಹೀಗೆಯೇ. ಆಯಾ ಶಾಸ್ತ್ರಗಳಿಗೆ ಸಂಬಂಧಪಟ್ಟ ಶಬ್ದಗಳ ಕೈಪಿಡಿಗಳನ್ನು ರಚಿಸಿ ಅವು ಎಲ್ಲರಿಗೂ ದೊರೆಯುವಂತೆ ಮಾಡುವುದು ಅತ್ಯಾವಶ್ಯಕವೆಂದು ನನಗೆ ತೋರುತ್ತದೆ. ಇದಲ್ಲದೆ, ಸಾಹಿತ್ಯ ವಿಷಯಗಳಿಗೆ ಸಂಬಂಧಪಟ್ಟ, ಭಾವ ಬಾಂಧವ್ಯಕ್ಕೆ ಅನುಗುಣವಾಗಿ ವಿಂಗಡಿಸಿದ ಶಬ್ದ ಸಂಗ್ರಹವೊಂದನ್ನು ರಚಿಸಿದರೆ ಅದು ಕನ್ನಡದಲ್ಲಿ ಹೊಸದಾಗಿ ಬರೆಯತೊಡಗುವವರಿಗೂ ಇತರರಿಗೂ ಬಹು ಸಹಾಯಕವಾಗುವುದೆಂಬುದರಲ್ಲಿ ಸಂಶಯವಿಲ್ಲ.

ಯಾವ ಸಾಹಿತ್ಯ ಸಂಸ್ಥೆಯೇ ಆಗಲಿ, ಕೇವಲ ಪ್ರೌಢ ಗ್ರಂಥಗಳನ್ನು ಮಾತ್ರವೇ ತನ್ನ ಲಕ್ಷ್ಯದಲ್ಲಿಟ್ಟುಕೊಳ್ಳುವುದು ಉಚಿತವಲ್ಲ. ಸಾಮಾನ್ಯ ಜನರಲ್ಲಿ ಪ್ರಚಲಿತವಾದ ಗಾದೆಗಳು, ದಾಸರ ಪದಗಳು, ಯಕ್ಷಗಾನಗಳು—ಇವೇ ಮುಂತಾದುವುಗಳಲ್ಲಿ ಉತ್ತಮವಾದುವುಗಳನ್ನು ಶೇಖರಿಸಿ ಪರಿಶೋಧಿಸಿ ಪ್ರಕಟಿಸುವುದು ಕನ್ನಡ ಭಾಷಾಭಿಮಾನಿಗಳು ಕೈಕೊಳ್ಳಬೇಕಾದ ಕೆಲಸವೆಂದು ನನಗೆ ತೋರುತ್ತದೆ.

ನನಗೆ ತಿಳಿದಮಟ್ಟಿಗೂ ಕನ್ನಡದಲ್ಲಿ ಪ್ರಕಟವಾಗಿರುವ ಪುಸ್ತಕಗಳನ್ನೆಲ್ಲವನ್ನೂ ಒಳಕೊಂಡ ಕೇಂದ್ರ ಭಂಡಾರವಾವುದೂ ಇಲ್ಲ. ಕರ್ಣಾಟಕದಲ್ಲಿರುವ ಎಲ್ಲಾ ಗ್ರಂಥ ಕರ್ತರೂ ಪುಸ್ತಕಪ್ರಕಾಶಕರೂ ತಮ್ಮ ತಮ್ಮ ಪುಸ್ತಕಗಳ ಒಂದು ಪ್ರತಿಯನ್ನು ಪರಿಷತ್ತಿಗೆ ಕಳುಹಿಸುವಂತೆ ವ್ಯವಸ್ಥೆ ಮಾಡಿದರೆ ಈ ಉದ್ದೇಶವು ಸಫಲವಾಗುವುದು.

ಮಹಾಶಯರೆ, ಕನ್ನಡ ಸಾಹಿತ್ಯವು ಅತಿ ಪ್ರಾಚೀನವಾದುದು. ಸಾವಿರಾರು ವರ್ಷಗಳ ಹಿಂದೆಯೇ ಅದು ಅತ್ಯುನ್ನತ ಸ್ಥಿತಿಯನ್ನೈದಿತು. ಮೊದ ಮೊದಲು ಕೇವಲ ರಾಜಾಸ್ಥಾನಕ್ಕೂ ಪಂಡಿತವರ್ಗಕ್ಕೂ ಸೇರಿದುದಾಗಿದ್ದು, ಮತಸ್ಥಾಪಕರ ಮತ್ತು ಅವರ ಅನುಯಾಯಿಗಳ ಪ್ರಭಾವದಿಂದ ಧರ್ಮಪ್ರಚಾರ ರೂಪದಲ್ಲಿ ಪಾಮರ ಪ್ರಪಂಚವನ್ನು ಹೊಕ್ಕಿತು. ಅದು ಈಗ ಜನ ಜೀವನಕ್ಕೆ ನವ ಚೈತನ್ಯವನ್ನೀವ ದೆಸೆಯನ್ನೈದಿದೆ. ಕನ್ನಡ ನಾಡಿನ ವಿದ್ವಾಂಸರಲ್ಲಿ ಇಂದು ಅಭೂತ ಪೂರ್ವವಾದ ಐಕ್ಯಭಾವವು ತಲೆದೋರುತ್ತಿದೆ. ಕನ್ನಡ ನುಡಿಯನ್ನು ಕನ್ನಡ ನಾಡಿನ ಎಲ್ಲಾ ಭಾಗಗಳಲ್ಲಿಯೂ ಒಂದೇ ರೂಪಕ್ಕೆ ತರಬೇಕೆಂಬ ಉತ್ಸಾಹವು ಎಲ್ಲೆಲ್ಲಿಯೂ ಅಂಕುರಿಸಿದೆ. ಭರತಖಂಡದ ಸಾಂಸ್ಕೃತಿಕ ಇತಿಹಾಸದಲ್ಲಿ ಕರ್ಣಾಟಕದ ಸ್ಥಾನವೇನೂ ಅಗಣ್ಯವಾದುದಲ್ಲವೆಂಬ ಅಭಿಮಾನವು ರೂಪುಗೊಂಡು ಆ ಸ್ಥಾನವು ಮುಂದಣ ಇತಿಹಾಸದಲ್ಲಿ ಇನ್ನೂ ಮಹತ್ತ್ವದ್ದಾಗಿರಬೇಕೆಂಬ ಹುರುಪು ಉದಯಿಸಿದೆ. ಇತ್ತೀಚೆಗೆ ಕರ್ಣಾಟಕದಲ್ಲಿ ಅನೇಕ ಸಂಘಗಳು ಕನ್ನಡ ಭಾಷೋಜ್ಜೀವನ ಪ್ರಯತ್ನಗಳನ್ನು ಉತ್ಸಾಹದಿಂದ ನಡೆಯಿಸುತ್ತ ಈ ಹಿರಿಯ ಕೂಟದ ಹಜ್ಜೆಯನ್ನು ಅನುಸರಿಸುತ್ತಿವೆ. ಮದರಾಸು, ಪೂನಾ, ಬೊಂಬಾಯಿ, ಕಲ್ಕತ್ತಾ ಮುಂತಾದ ದೂರ ಪಟ್ಟಣಗಳಲ್ಲಿ ವಾಸಿಸುತ್ತಿರುವ ಕನ್ನಡಿಗರು ಕೂಡ ಕರ್ಣಾಟಕ ಸಂಸ್ಥೆಗಳನ್ನೇರ್ಪಡಿಸಿಕೊಂಡು ಕನ್ನಡ ನುಡಿಯ ಜೀವ ಕಳೆಯು ಎಲ್ಲೆಲ್ಲಿಯೂ ಬೆಳಗುವಂತೆ ಮಾಡಿದ್ದಾರೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇಂದು ಆಶಾದಾಯಕ ಶುಭ ಚಿಹ್ನೆಗಳು ಕಾಣಬರುತ್ತಿವೆ; ಕನ್ನಡ ಸಾಹಿತ್ಯದಲ್ಲಿ ಅನೇಕ ನವೀನ ಸಾಹಿತ್ಯ ರೂಪಗಳು ತಲೆದೋರುತ್ತಿವೆ; ಹೊಸ ಹೊಸ ಛಂದಸ್ಸಿನಲ್ಲಿ ಕವಿತೆಗಳು ಹುಟ್ಟುತ್ತಿವೆ. ಪ್ರಾಚೀನ ಕಾವ್ಯಗಳನ್ನು ಕುರಿತ ವಿಮರ್ಶಾತ್ಮಕ ಲೇಖನಗಳು ಹೊಸದೊಂದು ಸಂಪ್ರದಾಯವನ್ನೇ ಸ್ಥಾಪಿಸಿವೆ. ಇಂದಿನ ಪರಿಸ್ಥಿತಿಯು ಹೀಗಿರುವಲ್ಲಿ, ಕನ್ನಡದ ಭವಿಷ್ಯತ್ತಿನ ವಿಷಯವಾಗಿ ಶಂಕಿಸಲು ಯಾವ ಕಾರಣವೂ ಇಲ್ಲ.

ಈ ಸಂಧಿಯಲ್ಲಿ, ಸಾಹಿತ್ಯೋಪಾಸಕರ ಕಾರ್ಯವು ಹಿರಿಯದು, ಸೂಕ್ಷ್ಮತಮವಾದುದು. ಕನ್ನಡದ ಶ್ರೇಯಸ್ಸನ್ನು ಕೋರುವವರು ಇತರ ಭಾಷೆಗಳನ್ನು ಅಲ್ಲಗಳೆಯುವುದರಿಂದಾಗಲಿ, ಅವುಗಳ ಸಾಹಿತ್ಯದಿಂದ ತಾವು ಕಲಿಯಬೇಕಾದುದು ಏನೂ ಇಲ್ಲವೆಂದು ಹೆಮ್ಮೆಪಡುವುದರಿಂದಲಾಗಲಿ ತಮ್ಮ ಉದ್ದೇಶವನ್ನು ಸಾಧಿಸಲಾರರು. ಈ ಮಹಾ ಕಾರ್ಯದಲ್ಲಿ ಪ್ರಾಂತಿಕವಾದ ಅಸೂಯೆಗಾಗಲಿ, ದುರಭಿಮಾನಕ್ಕಾಗಲಿ ಎಡೆಯಿಲ್ಲ. ಭರತಖಂಡದ ಉತ್ತರೋತ್ತರ ರಾಷ್ಟ್ರ ಜೀವನದಲ್ಲಿ ಕರ್ಣಾಟಕವು ಎಂದಿನಂತೆಯೇ ಸಚೇತನ ಅಂಗವಾಗಿದ್ದು ಅದರ ಪ್ರಗತಿಯಲ್ಲಿ ಹೆಚ್ಚು ಹೆಚ್ಚು ಭಾಗವುಳ್ಳದ್ದಾಗುತ್ತ ಬರಬೇಕೆಂಬ ಧ್ಯೇಯವನ್ನು ನಾವು ಎಂದಿಗೂ ಮರೆಯಕೂಡದು.

ಪ್ರಪಂಚದ ಎಲ್ಲಾ ಭಾಷೆಗಳೂ ಗೀರ್ವಾಣಗಳೇ. ಏಕೆಂದರೆ ಅವೆಲ್ಲವುಗಳ ಚೈತನ್ಯವೂ ಪರಮೇಶ್ವರನ ಕೃಪೆಯಿಂದ ಲಭಿಸಿದುದು. ಕನ್ನಡವು ಸಂಸ್ಕೃತದ ಸಾಕುಮಗುವಾದುದರಿಂದ ಅದರ ಬೆಂಬಲವನ್ನು ನಾವು ಎಂದಿಗೂ ಕಳೆದುಕೊಳ್ಳಲಾರೆವು. ಇಂಗ್ಲಿಷ್ ಭಾಷೆಯು ಪಾಶ್ಚಾತ್ಯ ಜ್ಞಾನಭಂಡಾರಕ್ಕೆ ಬೀಗದಕೈಯಂತಿರುವುದರಿಂದ ಅದನ್ನು ನಾವು ತಿರಸ್ಕರಿಸಲಾರೆವು. ಇವೆರಡರ ಸಹಾಯವೂ ನಮಗೆ ಬೇಕು. ಇವುಗಳ ಸಮನ್ವಯದಿಂದಲೇ ಕನ್ನಡವು ನಾಡಿನ ಪುನರುಜ್ಜೀವನ ಸಾಧನವಾಗಬಲ್ಲುದು. ಹಾಗೆಯೇ ನಮ್ಮ ಪ್ರಾಚೀನ ಪದ್ಧತಿಯ ಪಾಂಡಿತ್ಯದ ಬೆಂಬಲವಿಲ್ಲದೆ ಕನ್ನಡದ ಪುರೋಭಿವೃದ್ಧಿಯು ನೆರವೇರಲಾರದು. ಆ ಪದ್ಧತಿಯನ್ನನುಸರಿಸಿ ಅಭ್ಯಾಸಮಾಡಿರುವ ಪಂಡಿತರಿಂದಲೇ ಸಾಧ್ಯವಾದ ಕೆಲಸವು ಎಷ್ಟೋ ಇದೆ. ಕನ್ನಡ ಸಾಹಿತ್ಯವು ಮುಂದೆ ಎಷ್ಟೇ ವಿಶಾಲವಾಗಿ ಬೆಳೆದರೂ ಪ್ರಾಚೀನ ಪಾಂಡಿತ್ಯವೇ ಅದರ ಅಸ್ತಿಭಾರವೆಂಬುದನ್ನು ನಾವು ಮರೆಯಬಾರದು.

ಈ ಮಹಾ ಕಾರ್ಯದಲ್ಲಿ ಭಾಗಿಗಳಾಗುವುದು ಕವಿತಾ ಸ್ಫೂರ್ತಿಯುಳ್ಳವರಿಗೆ, ಪ್ರತಿಭಾಶಾಲಿಗಳಿಗೆ, ಪ್ರಚಂಡ ಭಾಷಣಶೀಲರಿಗೆ ಮಾತ್ರ ಸಾಧ್ಯವೆಂದೆಣಿಸಿ ಯಾರೂ ಹಿಮ್ಮೆಟ್ಟದಿರಲಿ. ಕನ್ನಡಿಗರ ಜ್ಞಾನ ಪ್ರಪಂಚವನ್ನು ವಿಸ್ತರಿಸಬೇಕಾದ ಈ ಸಮಯದಲ್ಲಿ ಸರಳವಾದ ಭಾಷೆಯಲ್ಲಿ ಭಾವಗಳನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸುವ ಯೋಗ್ಯತೆಯುಳ್ಳವರೆಲ್ಲರೂ ತಮ್ಮ ಕೈಯಲ್ಲಾದ ಅಳಿಲ ಸೇವೆಯನ್ನು ಮಾಡಬೇಕು. ವಿಷಯ ಜ್ಞಾನವುಳ್ಳವರು ತಮಗೆ ಕನ್ನಡದಲ್ಲಿ ಬರೆಯುವ ಚೈತನ್ಯವಿಲ್ಲವೆಂದು ಅಧೈರ್ಯಪಟ್ಟುಕೊಳ್ಳಲು ಕಾರಣವಿಲ್ಲ. ಒಳಗಡೆ ತಿಳಿವೊಂದಿದ್ದರೆ ಅದನ್ನು ವ್ಯಕ್ತಪಡಿಸುವುದೇನೂ ಅಸಾಧ್ಯವಲ್ಲ.

ಕರ್ಣಾಟಕದಲ್ಲಿ ಭಾಷಾ ಜಾಗೃತಿಗಾಗಿ ಹತ್ತಾರು ವರುಷದಿಂದ ಹಗಲೆನ್ನದೆ, ಇರುಳೆನ್ನದೆ ದುಡಿದಿರುವ ಶ್ರೀ ಆಲೂರ ವೆಂಕಟರಾಯರಂತಹ ವಿದ್ವಾಂಸರನ್ನು ತಾವು ಈ ಅಧಿವೇಶನದ ಅಧ್ಯಕ್ಷರನ್ನಾಗಿ ಪಡೆದುದು ಪರಿಷತ್ತಿನ ಸೌಭಾಗ್ಯವೆಂದೇ ಹೇಳಬೇಕು. ಅವರ ನೇತೃತ್ವದಲ್ಲಿ ತಮ್ಮ ಕಾರ್ಯಕ್ರಮವು ಸಾಂಗವಾಗಿ ನೆರವೇರಲೆಂದು ಹಾರೈಸುತ್ತೇನೆ.

ಈ ಉತ್ಸವದಲ್ಲಿ ಭಾಗಿಯಾಗಲೂ, ಕನ್ನಡಿಗರೆಲ್ಲರಿಗೂ ಅತ್ಯಂತ ಪ್ರಿಯವಾದ ಈ ಸಮಾರಂಭದಲ್ಲಿ ನನಗಿರುವ ಆಸಕ್ತಿಯನ್ನು ವ್ಯಕ್ತಪಡಿಸಲೂ ನನಗೆ ಅವಕಾಶ ಕೊಟ್ಟುದಕ್ಕಾಗಿ ನಾನು ತಮ್ಮೆಲ್ಲರನ್ನೂ ವಂದಿಸುತ್ತೇನೆ.

---

## ಸ್ವಾಗತ ಮಂಡಲಿಯ ಅಧ್ಯಕ್ಷರ ಭಾಷಣ

ಕರ್ಣಾಟಕ ಭಕ್ತ ಮಹಾಶಯರೆ, ಹದಿನಾರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನವು ತಮ್ಮ ಆತಿಥ್ಯದಲ್ಲಿ ನಡೆಯಬೇಕೆಂದು ಆಹ್ವಾನವಿತ್ತ ಮೈಸೂರು ವಿಶ್ವವಿದ್ಯಾನಿಲಯದ ಸಲುವಾಗಿಯೂ, ಆ ವಿದ್ಯಾಪೀಠದ ಪ್ರತಿನಿಧಿಗಳೂ ರಾಜಧಾನಿಯ ಮಹಾಜನರ ಪ್ರತಿನಿಧಿಗಳೂ ವಿಶ್ವಾಸದಿಂದ ಕಲೆತು ಸಹಕರಿಸಿರುವ ಸ್ವಾಗತ ಮಂಡಲಿಯ ಸಲುವಾಗಿಯೂ, ಕರ್ಣಾಟಕದ ಸಮಸ್ತ ಪ್ರಾಂತಗಳಿಂದಲೂ ಈ ಮಹೋತ್ಸವಕ್ಕೆ ದಯೆಮಾಡಿಸಿರುವ ಮಹನೀಯರಾದ ತಮ್ಮೆಲ್ಲರಿಗೂ ಸುಖಾಗಮನವನ್ನು ಬಯಸುವ ಪುಣ್ಯವು ನನಗೆ ಲಭಿಸಿದ್ದಕ್ಕಾಗಿ ನಾನು ಧನ್ಯನು. ಎಷ್ಟು ಶ್ರದ್ಧೆಯಿಂದ ನಾವು ಸೇವೆಮಾಡಿದರೂ ಅದರಲ್ಲಿ ಇರಬಹುದಾದ ನ್ಯೂನತೆಗಳನ್ನು ಉದಾರ ಚಿತ್ತರಾದ ತಾವು ಮನಸ್ಸಿಗೆ ತಂದುಕೊಳ್ಳದೆ ಅಮೋಘವಾದ ತಮ್ಮ ದೇಶಭಕ್ತಿಯನ್ನೂ ಭಾಷಾಭಿಮಾನವನ್ನೂ ಮುಂದಿಟ್ಟುಕೊಂಡು ಸುಪ್ರೀತರಾಗುತ್ತೀರೆಂದು ದೃಢವಾಗಿ ನಂಬಿದ್ದೇನೆ. ತಾವು ನಮ್ಮ ಊರಿಗೆ ದಯೆಮಾಡಿಸಿರುವ ಕಾಲ ನಮ್ಮೆಲ್ಲರ ದೊಡ್ಡ ಉತ್ಸವ ಕಾಲ, ನಮ್ಮ ಕನ್ನಡ ನಾಡಿನ ಮುಖ್ಯವಾದ ಹಬ್ಬ, ನವರಾತ್ರಿ. ಸರ್ವ ಕಾಲದಲ್ಲಿಯೂ ಚೇತೋಹಾರಿಯಾದ ನಮ್ಮ ನಗರಲಕ್ಷ್ಮಿ ಈಗಲಂತೂ ಹಬ್ಬದ ಉಡಿಗೆ ತೊಡಿಗೆಗಳಿಂದ ಅಲಂಕೃತಳಾಗಿ, ಹಸನ್ಮುಖಿಯಾಗಿ, ಪ್ರಸನ್ನ ಹೃದಯಳಾಗಿ, ಉಜ್ಜ್ವಲ ಕಾಂತಿಯಿಂದ ಬೆಳಗುತ್ತಿರುವಳು. ಯಾರ ಕೃಪಾ ಕಟಾಕ್ಷದಿಂದ ನಮ್ಮ ನಗರಿ ಸಾಧಾರಣ ವೈಭವದಿಂದ ಮಹದೈಶ್ವರ್ಯಕ್ಕೆ ಏರಿದಳೋ, ಯಾರ ಪೂರ್ಣ ಕಲಾ ಪ್ರತಿಭೆಯಿಂದ ಆಕೆ ಭವನಗಳ ನಗರಿ, ಉದ್ಯಾನಗಳ ನಗರಿ, ಜ್ಯೋತಿರ್ಮಯಿ, ಶಾಂತಿಯ ನೆಲೆವೀಡು ಎಂಬುದಾಗಿ ಪ್ರಖ್ಯಾತಳಾಗಿರುವಳೋ, ಆ ನಮ್ಮ ಸರ್ವ ಕರ್ಣಾಟಕ ಪ್ರಿಯರಾದ, ಸರ್ವ ಕರ್ಣಾಟಕ ಪೂಜ್ಯರಾದ, ದಯಾಶೀಲರು, ಆದರ್ಶ ರಾಜರು, ಪುರಾತನ ನೂತನ ಸಂಸ್ಕೃತಿ ಸಮನ್ವಯಾಚಾರ್ಯರು, ಕರ್ಮ ಸಂನ್ಯಾಸಿಗಳು, ರಾಜರ್ಷಿಗಳು ಎಂಬುದಾಗಿ ಸರ್ವತ್ರ ಪ್ರಶಸ್ತರಾದ ನಮ್ಮ ಶ್ರೀಮನ್ಮಹಾರಾಜರವರ ಘನ ಸನ್ನಿಧಾನದಲ್ಲಿ ತಾವೆಲ್ಲರೂ ಆನಂದ ಪೂರಿತವಾದ ಹೃದಯದಿಂದ ನ

ರಾಗಿದ್ದೀರೆಂದೂ, ಉದ್ದೀಪಿತವಾದ ದೇಶಭಾಷಾ ವಾತ್ಸಲ್ಯಗಳುಳ್ಳವರಾಗಿದ್ದೀರೆಂದೂ ಭಾರತ ಭೂಮಿಯಲ್ಲಿ ಈಗ ಜ್ವಲಿಸುತ್ತಿರುವ ನೂತನ ಜೀವಕಳೆಯನ್ನೂ, ನೂತನ ಧ್ಯೇಯ ಕಾರ್ಯ ಶಕ್ತಿಗಳನ್ನೂ ಗಾಂಭೀರ್ಯದೊಡನೆ ಕೂಡಿದ ಒಂದು ಸಂಯಮ ಶಕ್ತಿಯೊಡನೆ ಸಂಪೂರ್ಣವಾಗಿ ಇಲ್ಲಿಯೂ ಅನುಭವಿಸಿ, ತಾವೂ ನಾವೂ ಎಲ್ಲರೂ ಒಂದೇ ಎಂಬ ಉದಾರ ಭಾವನೆಯಿಂದ ಕೂಡಿದವರಾಗಿರುತ್ತೇವೆಂದೂ ನಾನು ನಿಸ್ಸಂದೇಹವಾಗಿ ಹೇಳಬಲ್ಲೆನು.

ಈ ಹೊಸ ಜೀವದ ಮತ್ತು ಹೊಸ ಧ್ಯೇಯದ ಸುಪ್ರೇರಣೆ ಸಾಹಿತ್ಯದಲ್ಲಿಯೂ ತನ್ನ ಪ್ರಭಾವವನ್ನು ತೋರಿಸುವುದು ಸಹಜವೇ ಆಗಿದೆ. ಪುನರುಜ್ಜೀವನವೆಂದು ಕೆಲವರು, ಸುಧಾರಣೆ ಎಂದು ಕೆಲವರು, ವಿಪ್ಲವ ಎಂದು ಕೆಲವರು ಈ ಮಾರ್ಪಾಟನ್ನು ಕರೆಯಬಹುದು. ಹೇಗೆ ಕರೆದರೂ ಒಂದು ಜನಪದವೂ, ಒಂದು ಸಾಹಿತ್ಯವೂ ನವ ಯುಗಕ್ಕೆ ಪ್ರವೇಶ ಮಾಡುವಾಗ ಹಿಂದಿನದರಲ್ಲಿ ಜೀವದಾಯಕವಾದ ಸಾರವನ್ನು ಉಳಿಸಿಕೊಳ್ಳುವುದೂ, ಮಲಿನವಾಗಿ ಜಾಡ್ಯ ಮುಸುಕಿರುವ ಬುದ್ಧಿಯನ್ನು ತಿದ್ದಿ ಹೊಸ ಮಾರ್ಗಕ್ಕೆ ಎಳೆದುಕೊಳ್ಳುವುದೂ, ಕೊಳೆತು ಕೆಟ್ಟು ಒದುಕಾಗದ ಕೆಲಸಕ್ಕೆ ಅಡ್ಡಿಯಾಗಿ ಬರುವ ಭಾವಗಳನ್ನು ಕೊಯ್ದುಹಾಕಿ, ನಿರ್ಮೂಲ ಮಾಡಿ, ಹೊಸ ನಡತೆಗಳನ್ನು ನೆಡುವುದಕ್ಕೆ ಅವಕಾಶ ಮಾಡಿಕೊಳ್ಳುವುದೂ ಆವಶ್ಯಕವಾದ ಕ್ರಿಯೆಗಳಾಗಿವೆ. ಕರ್ಣಾಟಕ ದೇಶದಲ್ಲಿ ಈ ನವ ಚೈತನ್ಯವು ಬೇರೂರಿ ಜಾಗ್ರತೆಯಾಗಿ ಬೆಳೆದು ಕಾರ್ಯಕ್ಷೇತ್ರದಲ್ಲಿ ವ್ಯಾಪಿಸಿಕೊಳ್ಳುತ್ತಿದೆ; ಮತ್ತು ಚರಿತ್ರ ಕಾರಣವಾಗಿ ಹೆಚ್ಚು ಸಂಪರ್ಕಕ್ಕೆ ಅವಕಾಶವಿಲ್ಲದಿರುವ ಕರ್ಣಾಟಕ ದೇಶದ ಬೇರೆ ಬೇರೆ ಪ್ರಾಂತಗಳು ಬೇರೆ ಬೇರೆ ರೀತಿಗಳಲ್ಲಿ ಬೇರೆ ಬೇರೆ ಶಕ್ತಿಗಳೊಡನೆ ಕೆಲಸ ಮಾಡುತ್ತಿದ್ದರೂ, ಎಲ್ಲರ ಧ್ಯೇಯವೂ, ಆಸೆಯೂ, ಗುರಿಯೂ ಒಂದೇ ಆಗಿರುತ್ತದೆ: ಕನ್ನಡ ಸಾಹಿತ್ಯವು ಶ್ರೇಷ್ಠವಾಗಬೇಕೆನ್ನುವುದು; ಕನ್ನಡಿಗರು ಗಣ್ಯತೆಯಲ್ಲಿ ಯಾರಿಗೂ ಹಿಂದಾಗಬಾರದೆನ್ನುವುದು. ಈ ನಾನಾ ಪ್ರಾಂತಗಳನ್ನೂ, ರೀತಿಗಳನ್ನೂ, ಶಕ್ತಿಗಳನ್ನೂ ಒಂದುಗೂಡಿಸಿ ಸರ್ವ ಕರ್ಣಾಟಕವೂ ಈ ಮಹಾ ಕಾರ್ಯದಲ್ಲಿ ಹೆಮ್ಮೆಯಿಂದಲೂ ಅಕ್ಕರೆಯಿಂದಲೂ ಭಾಗಿಯಾಗಲು ಸಾಧ್ಯವಾದ ಮಟ್ಟಿಗೂ ಅವಕಾಶವನ್ನು ಕಲ್ಪಿಸಿಕೊಡಬೇಕೆನ್ನುವುದೇ ನಮ್ಮ ಸಮ್ಮೇಳನದ ಉದ್ದೇಶ. ಈ ಸಮ್ಮೇಳನವು ನಮ್ಮ ಏಕಭಾವದ ಚಿಹ್ನೆ, ಚಿನ್ನದ ಕಟ್ಟು.

ಈ ಸಮ್ಮೇಳನಗಳಿಗೆ ಮೂಲಾಧಾರವಾದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕರು ಶ್ರೀಮನ್ಮಹಾರಾಜರವರ ಘನ ಸರ್ಕಾರದವರು. ಮೊದಲು, ಸಹಜವಾಗಿ, ಈ ಸಮ್ಮೇಳನವು ಮೈಸೂರು, ಬೆಂಗಳೂರು ರಾಜಧಾನಿಗಳಲ್ಲಿ ಸಭೆ ಮಾಡಿ, ಬಳಿಕ ತನ್ನ ಬೆಳಕನ್ನು ಕನ್ನಡ ನಾಡಿನಲ್ಲೆಲ್ಲ ಬೀರುವುದಕ್ಕೆ ಹೊರಟು, ಪ್ರಧಾನ ನಗರಗಳಾದ ಧಾರವಾಡ, ಬೆಳಗಾಂವಿ, ಬಿಜಾಪುರ, ಬಳ್ಳಾರಿ, ಕಲ್ಬುರ್ಗಿ, ಮಂಗಳೂರು ಮುಂತಾದ ಮಹಾರಾಷ್ಟ್ರದ ಮತ್ತು ಗಡಿ ಪ್ರಾಂತಗಳ ತೇಜಸ್ಸನ್ನೂ ಸ್ವೀಕರಿಸಿ ಕಳೆದುಬಂತು, ಮತ್ತೆ ಕರ್ಣಾಟಕ ಕೇಂದ್ರಸ್ಥಾನವಾದ ಮೈಸೂರು

ನಗರಿಗೆ ವಿಶ್ವವಿದ್ಯಾನಿಲಯದ ಅಧಿಕಾರಿಗಳ ಅಭಿಮಾನದಿಂದ ಈ ಸಲ ಬಂದು ಸೇರಿರುವುದು. ಈ ಹದಿನಾರು ವರ್ಷಗಳ ಸಾಧನೆಯನ್ನು ಸಂಕ್ಷೇಪವಾಗಿ ಇಲ್ಲಿ ಪ್ರಸ್ತಾವಿಸಿದರೆ ಅಪ್ರಕೃತವಾಗಲಾರದೆಂದು ಎಣಿಸುತ್ತೇನೆ. ಇದಕ್ಕೆ ಹಿಂದಿನ ಕಾಲದ ಸಾಹಿತ್ಯದ ಚರಿತ್ರೆಯನ್ನೂ ಸ್ವಲ್ಪ ಮಟ್ಟಿಗೆ ಗಮನಿಸುವುದು ಆವಶ್ಯಕವಾಗಿರುವುದು.

ಸಾಹಿತ್ಯವು ರಾಜಾಶ್ರಯವನ್ನು ಪೂರ್ವದಿಂದಲೂ ಅನುಸರಿಸಿರುವುದೆಂಬುದು ಎಲ್ಲರೂ ಬಲ್ಲ ವಿಷಯ. ಎಲ್ಲಿ ಪ್ರಬಲವಾದ ರಾಜಾಸ್ಥಾನವೋ ಅಲ್ಲಿ ಪ್ರೌಢ ಸಾಹಿತ್ಯ. ಸಾರ್ವಭೌಮರು, ಮಹಾ ಮಂಡಲೇಶ್ವರರು, ಪ್ರಧಾನರು, ದಂಡನಾಯಕರು, ಮುಖ್ಯ ಮಠಾಧಿಪತಿಗಳು, ಯೋಗಿಗಳು ನೆಲಸಿರುವ ಸ್ಥಳಗಳಲ್ಲಿ ದೇಶದ ಹಿತಚಿಂತಕರಾದ ಪಂಡಿತರೂ ಕವಿಗಳೂ ಬಂದು ನೆರೆಯುವರು. ಸಾಮ್ರಾಜ್ಯಲಕ್ಷ್ಮಿ ಒಂದು ಕಡೆ ಬಹು ಕಾಲ ನೆಲಸಿರುವಳಲ್ಲವಾದುದರಿಂದ ರಾಷ್ಟ್ರಕೂಟರ ಮತ್ತು ಚಾಳುಕ್ಯರ ಆಧಿಪತ್ಯದಲ್ಲಿ ಉತ್ತರ ಕರ್ನಾಟಕವೇ ಕನ್ನಡ ಸಾಹಿತ್ಯಕ್ಕೆ ಅಸ್ತಿಭಾರವನ್ನು ಹಾಕುವ ಪುಣ್ಯವನ್ನು ಪಡೆಯಿತು. ಗಂಗರು ಉನ್ನತ ಸ್ಥಿತಿಗೆ ಬಂದಮೇಲೆ ಜೈನರ ಪವಿತ್ರ ಕ್ಷೇತ್ರವಾದ ಶ್ರವಣಬೆಳ್ಗೊಳದ ಅಭ್ಯುದಯದ ದಿವಸಗಳಲ್ಲಿ ದಕ್ಷಿಣ ಕರ್ನಾಟಕಕ್ಕೂ ಸಾಹಿತ್ಯ ಸೇವೆಯನ್ನು ಮಾಡುವ ಅದೃಷ್ಟವೊದಗಿತು. ಕಾಲ ಪರಿವರ್ತನೆಯಿಂದ ಕಳಚೂರ್ಯರು ಉತ್ತರದಲ್ಲಿ, ಹೊಯ್ಸಳರು ದಕ್ಷಿಣದಲ್ಲಿ, ವಿಜಯನಗರದರಸರು ಉತ್ತರದಲ್ಲಿ, ಮೈಸೂರು ಮಹಾರಾಜರು ದಕ್ಷಿಣದಲ್ಲಿ ಪ್ರವೃದ್ಧಿಗೆ ಬಂದ ಬಂದ ಹಾಗೆಲ್ಲ ಒಮ್ಮೆ ಇತ್ತ ಕಡೆ, ಒಮ್ಮೆ ಅತ್ತ ಕಡೆ ಸಾಹಿತ್ಯದ ತೊಲೆ ತೂಗುತ್ತಿತ್ತು. ಒಟ್ಟಿನ ಮೇಲೆ ೧೦ನೆಯ ಶತಮಾನದಿಂದ ೧೭ನೆಯ ಶತಮಾನದ ವರೆಗೂ ಸಾಹಿತ್ಯಕ್ಕೆ ಹೆಚ್ಚು ಸೇವೆ ಉತ್ತರ ಕರ್ನಾಟಕದಿಂದಲೇ ನಡೆಯಿತು; ನಾಗಚಂದ್ರ, ಲಕ್ಷ್ಮೀಶ ಮುಂತಾದ ಚರ್ಚಾಸ್ಪದರಾಗಿರುವ ಕೆಲವು ಕವಿಗಳನ್ನು ಬಿಟ್ಟರೆ, ಪಂಪ, ಪೊನ್ನ, ರನ್ನ, ಮಧುರ, ರತ್ನಾಕರ, ಬಸವೇಶ್ವರ, ಹರೀಶ್ವರ, ರಾಘವಾಂಕ, ಚಾಮರಸ, ಭೀಮ, ವಿರೂಪಾಕ್ಷ, ಕುಮಾರವ್ಯಾಸ, ಕುಮಾರವಾಲ್ಮೀಕಿ, ನಿತ್ಯಾತ್ಮಶುಕ ಮುಂತಾದ ಉದ್ದಾಮ ಕವಿಗಳು ಉತ್ತರ ಕರ್ನಾಟಕದವರು; ಚಾವುಂಡರಾಯ, ನಾಗವರ್ಮ, ನೇಮಿಚಂದ್ರ, ಜನ್ನ, ಮಲ್ಲಣಾರ್ಯ, ಷಡಕ್ಷರಿ, ರುದ್ರಭಟ್ಟ ಮುಂತಾದವರು ದಕ್ಷಿಣ ಕರ್ನಾಟಕದವರು. ಸ್ಥಳ ದೃಷ್ಟಿಯಿಂದ ಮಾತ್ರ ಈ ವಿಭಾಗವನ್ನು ನಾನು ಹೇಳುತ್ತಿರುವುದು, ಕರ್ನಾಟಕ ಸೇವಾ ದೃಷ್ಟಿಯಿಂದಲ್ಲ.

೧೭ನೆಯ ಶತಮಾನದಿಂದೀಚೆಗೆ ವಿಜಯನಗರದ ಸಿಂಹಾಸನವು ಮೈಸೂರು ಮಹಾರಾಜರುಗಳ ವಶವಾದದ್ದು ದಕ್ಷಿಣ ಕರ್ನಾಟಕಕ್ಕೆ ಸಾಹಿತ್ಯ ಕೃಷಿಗೆ ಹೆಚ್ಚು ಅನುಕೂಲ್ಯ ದೊರೆಯಿತು. ಈ ಕಾರ್ಯ ನವಾರಂಭದಲ್ಲಿ ಮೂವರು ಪ್ರಸಿದ್ಧ ರಾಜರ ಹೆಸರನ್ನು ಹಿಡಿದು, ಮೂರು ಘಟ್ಟಗಳನ್ನು ವಿಂಗಡಿಸಬಹುದು. ಮೊದಲು, ಚಿಕ್ಕದೇವರಾಜ ಒಡೆಯರ ಕಾಲ ಶ್ರೀರಂಗಪಟ್ಟಣದಲ್ಲಿ, ಶ್ರೀರಂಗನಾಥ ಸ್ವಾಮಿಯವರ ಸಾನ್ನಿಧ್ಯದಲ್ಲಿ. ಶ್ರೀರಂಗಪಟ್ಟಣದ ಕಾವೇರಿಯ ನೀರನ್ನು ಕುಡಿದು ಜೀವನನಾದ ನಾನು ಈ ಅಂಶವನ್ನು ಸ್ವಲ್ಪ ಉತ್ಸಾಹ ಪೂರ್ವಕವಾಗಿ ವಿಸ್ತರಿಸಿದರೆ ತಾವು

ಮನ್ನಿಸುವವರೇ ಆಗಿದ್ದೀರಿ. ಚಿಕ್ಕದೇವರಾಜರ ಪ್ರೇರಣೆಯಿಂದ ಅವರ ಅಚ್ಚುಮೆಚ್ಚಿನ ಗೆಳೆಯರಾದ ತಿರುಮಲಾರ್ಯ್ಯರ ಸಹಾಯದಿಂದ, ಕನ್ನಡ ಸಾಹಿತ್ಯಕ್ಕೆ ಪ್ರಬಲವಾದ ಪ್ರೋತ್ಸಾಹ ಸಿಕ್ಕಿತು ; ಹಳಗನ್ನಡ ಗ್ರಂಥಗಳನ್ನು ಸಂಗ್ರಹಿಸಿ ಪ್ರತಿಗಳನ್ನು ಮಾಡಿಸಿದರು ; ಹಳಗನ್ನಡದಲ್ಲಿ ಕಾವ್ಯಗಳನ್ನು ಬರೆಯಿಸಿದರು, ತಾವೇ ಬರೆದರು ; ಸನಾತನ ಧರ್ಮದ ತಿರುಳನ್ನೂ, ಶ್ರೀವೈಷ್ಣವ ಮತದ ಸಾರವನ್ನೂ, ಆಳ್ವಾರ್ ಅವರ ದಿವ್ಯ ಚರಿತ್ರೆಗಳನ್ನೂ ಜನರಿಗೆ ಕನ್ನಡದಲ್ಲಿ ತಿಳಿಸಿದರು; ನಾಟಕವನ್ನು—ಹಿಂದಿನ ಸಾಹಿತ್ಯದಲ್ಲಿ ನಮಗೆ ಇದುವರೆಗೆ ದೊರೆತಿರುವ ನಾಟಕವು ತಿರುಮಲಾರ್ಯ್ಯರ ತಮ್ಮ ಸಿಂಗರಾರ್ಯ್ಯನ **ಮಿತ್ರವಿಂದಾ ಗೋವಿಂದ** ಎಂಬುದೊಂದೇ—ಹೂಡಿಸಿದರು ; ಚರಿತ್ರೆಯನ್ನು ಶಿಲಾ ಲೇಖಗಳ, ವಂಶಾವಳಿಗಳ ಆಧಾರದ ಮೇಲೆ ಕೂಡಿಸಿದರು ; ಪುರಾಣೇತಿಹಾಸ ಭಗವದ್ಗೀತಾದಿಗಳನ್ನು ಕನ್ನಡ ಗದ್ಯದಲ್ಲಿ ಹರಡಿದರು ; ಎಲ್ಲಾ ಮತದ ಕವಿಗಳಿಗೂ ಆಶ್ರಯವನ್ನಿತ್ತರು ; ರಾಣಿವಾಸದ ಊಳಿಗದವಳಾದ ಸಂಚಿಯ ಹೊನ್ನಮ್ಮನಿಂದ **ಹದಿಬದೆಯ ಧರ್ಮ**ವೆಂಬ ಸಾಂಗತ್ಯವನ್ನು ಹಾಡಿಸಿ ಪೂರ್ವದಲ್ಲಿ ಸ್ತ್ರೀಯರೂ ಸಾಹಿತ್ಯ ಸಾಧಕರಾಗಿದ್ದುದನ್ನು ಸ್ಥಿರೀಕರಿಸಿದರು. ಎರಡನೆಯ ಘಟ್ಟವಾಗಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲವನ್ನು ಹೇಳಬಹುದು. ಈ ರಾಜರ ಪ್ರೋತ್ಸಾಹದಲ್ಲಿ ಆರ್ಯರ ಅಪಾರವಾದ ಸಂಸ್ಕೃತ ಸಾಹಿತ್ಯ ಸಮುದ್ರದ ಶಿರೋರತ್ನಗಳಾದ ಭಾರತ, ರಾಮಾಯಣ ಪುರಾಣ ಕಾವ್ಯಗಳನ್ನು ಆಯ್ದು ಕನ್ನಡ ವಚನದಲ್ಲಿ ಕನ್ನಡಿಗರಿಗೆ ಹೃದ್ಗತವಾಗುವಂತೆ ಮಾಡಿದರು. ಚಾಮರಾಜ ಒಡೆಯರ ಕಾಲದಲ್ಲಿ ಈ ಸಂಸ್ಕೃತ ಸಾಹಿತ್ಯದ ಸಂಪಾದನೆಯು ಜೊತೆಗೆ ಮುನ್ನೇ ಒದಗಿದ ಇಂಗ್ಲಿಷ್ ವಿದ್ಯಾಭ್ಯಾಸ ಸಾಹಿತ್ಯ ಸಂಸ್ಕೃತಿಗಳ ಪ್ರಾಬಲ್ಯದಿಂದ ಹೊಸ ಅಭಿರುಚಿಗಳೂ, ದೃಷ್ಟಿಗಳೂ ಉಂಟಾಗಿ, ಧಾರ್ಮಿಕ ಸಾಹಿತ್ಯದ ಪಕ್ಕದಲ್ಲಿ ಲೌಕಿಕ ಸಾಹಿತ್ಯವೂ ವೃದ್ಧಿಯಾಗುತ್ತ ಬಂದಿತು. ಕಾಳಿದಾಸ ಮುಂತಾದ ಸಂಸ್ಕೃತ ಮಹಾ ಕವಿಗಳ ನಾಟಕಗಳೂ, ಷೇಕ್ಸ್‌ಪಿಯರ್ ಮುಂತಾದ ಇಂಗ್ಲಿಷ್ ಮಹಾ ಕವಿಗಳ ನಾಟಕಗಳೂ ಕನ್ನಡವಾದುವು. ಅನೇಕ ವಿದ್ವನ್ಮಣಿಗಳು ಹೊಸ ಸಾಹಿತ್ಯ ಸೃಷ್ಟಿಯಲ್ಲಿ ಬದ್ಧ ಕಂಕಣರಾದರು. ಪೂರ್ವದ ಶ್ರೇಷ್ಠ ಕಾವ್ಯಗಳು ಪ್ರಕಾಶಕ್ಕೆ ಬಂದುವು. ಮದರಾಸು ಬೊಂಬಾಯಿ ವಿಶ್ವವಿದ್ಯಾನಿಲಯಗಳೂ, ಧಾರವಾಡದ ಕರ್ಣಾಟಕ ವಿದ್ಯಾವರ್ಧಕ ಸಂಘವೂ ಕನ್ನಡ ವಿದ್ಯೆಯ ಪ್ರಚಾರಣೆಯನ್ನು ಅವಕಾಶ ಸಿಕ್ಕಿದ ಹಾಗೆಲ್ಲ ಹುರಿಗೊಳಿಸುತ್ತ ಬಂದುವು. ಸ್ವದೇಶದವರಾದ ರಾಜರಿಲ್ಲದ ಕಡೆ ಪ್ರಜೆಗಳೇ ಹೆಚ್ಚು ಕಾರ್ಯ ಭಾರವನ್ನು ವಹಿಸಿದರು ; ಮೈಸೂರು, ಮಂಗಳೂರು, ಧಾರವಾಡ—ಈ ಪ್ರಾಂತದ ಸಾಹಿತ್ಯ ಸೇವಕರು ಏಕೀಭವಿಸಿ ಕೆಲಸಮಾಡಲು ಆರಂಭಿಸಿದರು ; ಕನ್ನಡ ನಾಡು ಸಂಸ್ಕೃತಿಯಲ್ಲಿ, ಸಾಹಿತ್ಯದಲ್ಲಿ ಒಂದುಗೂಡುತ್ತ ಬಂದಿತು.

ನಮ್ಮ ಸ್ವಾಮಿಯವರಾದ ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರ್ ಮಹಾಸ್ವಾಮಿಯವರ ರಾಜ್ಯ ಪರಿಪಾಲನೆಯಲ್ಲಿ ಸಂಸ್ಕೃತ ಇಂಗ್ಲಿಷ್ ವಿದ್ಯೆಗಳಿಗೆ ಇರುವ ಪೋಷಣೆಯೂ ಗೌರವವೂ ಕನ್ನಡಕ್ಕೂ ಶಾಶ್ವತವಾಗಿ ಬಂದು ನೆಲಸಿದುವು. ಪೂರ್ವದ ಆರಂಭಕ್ಕೆಲ್ಲ ಸುಪ್ರವೃತ್ತಿಯಾಗಿ ಪೂರ್ಣ ಫಲವನ್ನು ಭೋಗಿಸುವ ದಶೆ ತಿರುಗಿತು. ಸರ್ಕಾರದವರು

ಪರಿಷತ್ತನ್ನು ಏರ್ಪಡಿಸಿ ಸಾಹಿತ್ಯ ಕಾರ್ಯವನ್ನು ಒಂದು ನಿಬಂಧನೆಗೆ ತಂದರು. ವಿಶ್ವ ವಿದ್ಯಾನಿಲಯವೂ ಶಿಕ್ಷಣ ಶಾಖೆಯೂ ಗ್ರಂಥಕರ್ತರಿಗೆ ಪ್ರೋತ್ಸಾಹವನ್ನೀಯುತ್ತಲೂ, ಹಳೆಯ ಗ್ರಂಥಗಳನ್ನು ಪರಿಶೋಧಿಸಿ ಮುದ್ರಣಗೊಳಿಸುತ್ತಲೂ, ನವೀನ ಕಾಲದ ನಡವಳಿಕೆಗೆ ಬೇಕಾದ ರೀತಿಯಲ್ಲಿ ಹೊಸ ಪುಸ್ತಕಗಳನ್ನು ಬರೆಯಿಸುತ್ತಲೂ ಭಾಷಾಭಿ ವೃದ್ಧಿ ಕಾರ್ಯವನ್ನು ಕೈಗೊಂಡಿರುವರು. ಹಲವರು ದೇಶ ಭಕ್ತರು ಕಷ್ಟ ನಷ್ಟಗಳನ್ನು ಲಕ್ಷ್ಯಮಾಡದೆ ಮಾಸಪತ್ರಿಕೆ ವೃತ್ತಾಂತಪತ್ರಿಕೆಗಳ ಮೂಲಕ ಕನ್ನಡದ ಶೈಲಿಯನ್ನೂ, ಭಾವಗಳನ್ನೂ, ಚೈತನ್ಯವನ್ನೂ ಹುರುಪುಗೊಳಿಸುತ್ತಿರುವರು. ಎಲ್ಲಕ್ಕಿಂತ ಅತಿಶಯ ವಾಗಿ ವಿದ್ಯಾರ್ಥಿಗಳು ಕರ್ಣಾಟಕದ ಎಲ್ಲಾ ಭಾಗಗಳಲ್ಲಿಯೂ, ಕಡೆಗೆ ಹತ್ತು ಜನ ಕನ್ನಡ ವಿದ್ಯಾರ್ಥಿಗಳು ಸೇರಿದ ಪರಸ್ಥಳಗಳಲ್ಲಿ ಕೂಡ ಕನ್ನಡ ಸಂಘಗಳನ್ನು ಸ್ಥಾಪಿಸಿ ಕೊಂಡು ಭಾಷಾ ಸೇವೆಗೆ ಸಿದ್ಧವಾಗುತ್ತಿದ್ದಾರೆ. ಇಂತಹ ಉತ್ಸಾಹ ಭರಿತರಾದ ಯುವಕ ವೀರರ ಕೈಗೆ ಹಿರಿಯರಾದ ಭಾಷಾ ಪ್ರೇಮಿಗಳ ಕಯ್ಯಿಂದ ಸಾಹಿತ್ಯ ಜ್ಯೋತಿ ಸಾಗುತ್ತಿದೆ. ಈ ಯುವಕರ ಸ್ವದೇಶ ಭಕ್ತಿ ಸಾಹಸಗಳನ್ನು ನೋಡಿದ ಯಾವ ವೃದ್ಧ ನಿಗೆ ತಾನೇ ಹೃದಯದಲ್ಲಿ ರಕ್ತವು ಮತ್ತೆ ಬಿಸಿಯಾಗಿ ಯೌವನವು ಮತ್ತೊಮ್ಮೆ ಚಿಮ್ಮದೆ ಇದ್ದೀತು?

ಮಹಾಶಯರೆ, ಪೂರ್ವ ಕಾವ್ಯ ರಾಶಿ ಪ್ರಕಾಶಕ್ಕೆ ಬಂದು, ನಮ್ಮ ಹಿರಿಯರು ಕೂಡಿಸಿಟ್ಟಿದ್ದ ನಿಕ್ಷೇಪವು ಹಸ್ತಗತವಾಗಿ, ಸರ್ವರಿಗೂ ಸಮಾನವಾದ ಸಾಹಿತ್ಯವಾಗಿ, ಜೈನ ಕಾವ್ಯವೇ ಆಗಲಿ, ವೀರಶೈವ ಕಾವ್ಯವೇ ಆಗಲಿ, ಬ್ರಾಹ್ಮಣ ಕಾವ್ಯವೇ ಆಗಲಿ, ಆಗಲೇ ಸಿದ್ಧವಾಗಿರುವ ಕನ್ನಡದ ಬೈಬಲ್ ಜೊತೆಗೆ ಒಂದು ಕ್ರೈಸ್ತ ಕಾವ್ಯಮಾಲೆಯೂ ಮತ್ತು ಮುಹಮ್ಮದೀಯರ ಕಾವ್ಯಮಾಲೆಯೂ ಶೀಘ್ರದಲ್ಲಿಯೇ ನಮ್ಮ ಇತರ ಸಾಹಿತ್ಯ ವಾಹಿನಿಗಳೊಡನೆ ತಾವೂ ಬಂದು ಕೂಡುವುವೆಂದು ನಾನು ಹಾರೈಸು ತ್ತೇನೆ. ಯಾವ ಸಾಹಿತ್ಯದ ಶಾಖೆಯೇ ಆಗಲಿ ಎಲ್ಲವೂ ನಮ್ಮ ಕನ್ನಡವೆಂದೂ, ಆದುದರಿಂದ ನಮ್ಮದೆಂದೂ ಆದರಿಸುವ ಕಾಲ ಇದು. ಎಲ್ಲಾ ಸಂಸ್ಕೃತಿಗಳಲ್ಲಿಯೂ, ಎಲ್ಲಾ ಧರ್ಮಗಳಲ್ಲಿಯೂ, ಎಲ್ಲಾ ಕವಿತಾ ಮಾರ್ಗಗಳಲ್ಲಿಯೂ ವಿಮರ್ಶನ ಪೂರ್ವಕ ವಾದ ವಿಶ್ವಾಸವಿಟ್ಟು ಎಲ್ಲಾ ಕಡೆಗಳಿಂದಲೂ ಉತ್ತಮ ಪಕ್ಷವನ್ನು ಸ್ವೀಕಾರ ಮಾಡುವ ವಿಶಾಲ ಹೃದಯದ ಕಾಲ ಇದು. ಸಾರ್ವಜನಿಕವಾದ ಉದ್ಯಮಗಳಿಗೂ, ಯೋಗಕ್ಷೇಮಗಳಿಗೂ ಪ್ರಾಧಾನ್ಯವನ್ನು ಕೊಟ್ಟು, "ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ" ಎಂಬ ಭಾರತೀಯರ, "ಮಾನುಷಿಕವಾದದ್ದು ಯಾವುದೂ ನನಗೆ ಹೊರಗಲ್ಲ" ಎಂಬ ಪಾಶ್ಚಾತ್ಯರ ಆರ್ಯೋಕ್ತಿಗಳ ತತ್ತ್ವವನ್ನನು ಸರಿಸಿ ಜಗತ್ತಿನಲ್ಲೆಲ್ಲ ಮೈತ್ರಿಯೂ, ಶಾಂತಿಯೂ, ಸಮಾನ ಧರ್ಮವೂ, ಶ್ರೇಯಸ್ಸೂ ವರ್ಧಿಸಲಿ ಎಂದು ದೀಕ್ಷೆಗೊಳ್ಳುವ ಕಾಲ ಇದು. ಮಲಗಿದ್ದ ಜನರು ಎಚ್ಚತ್ತಿ ದ್ದಾರೆ; ಹಳೆಯ ಆತ್ಮದಿಂದ ಹೊಸ ಆತ್ಮವನ್ನು ಸೃಷ್ಟಿಮಾಡುತ್ತಿದ್ದಾರೆ; ಸತ್ಯ, ಸೌಂದರ್ಯ, ಸ್ವಾತಂತ್ರ್ಯ, ಸ್ವಾರ್ಥತ್ಯಾಗ, ಸೇವೆ—ಇವೇ ನಮ್ಮ ಜೀವಮಾನದ ದೀಪಿಕೆಗಳೆಂದು ಸಾರುತ್ತಿದ್ದಾರೆ. ಇಂತಹ ಸ್ವರ್ಣ ಯುಗದಲ್ಲಿ, ಇಂತಹ ವಿಶ್ವ ವ್ಯಾಪಕವಾದ ಆತ್ಮ ಘರ್ಷಣದಲ್ಲಿ ದಿವ್ಯ ಜ್ಯೋತಿಗಳೂ, ಮಹಾ ಮಹಾತ್ಮರೂ

ಅವತರಿಸುವುದು ಏನಾಶ್ಚರ್ಯ? ಒಬ್ಬ ಮಹಾತ್ಮನಿಂದ ಒಂದು ದೇಶವೇ ಪವಿತ್ರವಾಗಿ ಪೂಜ್ಯ ಸ್ಥಾನಕ್ಕೆ ಏರುವುದಲ್ಲವೇ? ಸಾಹಿತ್ಯ ಪ್ರೇಮಿಗಳಿಗೆ, ಸಾಹಿತ್ಯ ಸೇವಕರಿಗೆ, ಸಾಹಿತ್ಯ ಕರ್ತೃಗಳಿಗೆ ನಾನು ವಿನಯ ಪೂರ್ವಕವಾಗಿ ಬಿನ್ನಹ ಮಾಡಿಕೊಳ್ಳಬಹುದಾದರೆ, ಹೀಗೆ ಬಿನ್ನೈಸಿಕೊಳ್ಳಬಹುದಲ್ಲವೇ? ಕರ್ಣಾಟಕ ಮಾತೆಯ ವೀರ ಪುತ್ರರಿರಾ, ಪುತ್ರಿಯರಿರಾ,

ಓಂ ತತ್ಸವಿತುರ್ವರೇಣ್ಯಂ ।
ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥

ಎಂದು ಸದಾ ಪ್ರಾರ್ಥಿಸಿರಿ. ಈ ದಿವ್ಯ ಮಂತ್ರವು ಏಕ ದೇಶಕ್ಕೆ ಮಾತ್ರ ಸೇರಿದ್ದಲ್ಲ. ಇಡಿಯ ಜಗತ್ತನ್ನೆಲ್ಲ ವ್ಯಾಪಿಸತಕ್ಕ ಸರ್ವ ಸಂಜೀವನ ಮಂತ್ರ. ಭಗವಾನ್ ಸೂರ್ಯದೇವನು ಎಲ್ಲಾ ಕಡೆಯಲ್ಲಿಯೂ ಬೆಳಗುವನು; ಎಲ್ಲರ ಹೃದಯದಲ್ಲಿಯೂ ಹೊಳೆಯುವನು. ಎತ್ತ ಕಡೆಗೂ ಕಣ್ಣು ಮುಚ್ಚಬಾರದು, ಎತ್ತ ಕಡೆಗೂ ಹೃದಯದ ಬಾಗಿಲನ್ನು ಕಿರಿ ಕಿರಿದು ಮಾಡುತ್ತ ಮುಚ್ಚಿಡಬಾರದು. ನಮ್ಮ ಚಿತ್ತ ಶುದ್ಧಿ, ನಮ್ಮ ಆತ್ಮ ವಿಶಾಲತೆ ಪೂರ್ಣತ್ವದ ಸಾನ್ನಿಧ್ಯಕ್ಕೆ ಬಂದಹಾಗೆಲ್ಲ ನಮ್ಮಿಂದ ಉತ್ತಮ ಸಾಹಿತ್ಯವೂ ಉತ್ತಮ ಸಾಹಿತ್ಯದಿಂದ ಉತ್ತಮ ಜನ್ಮವೂ ಹೊಮ್ಮುವುದು. ಮಿಲ್ಟನ್ ಮಹಾಕವಿ ತನ್ನ ಅನುಭವದಿಂದ ಹೇಳಿದ್ದಾನೆ:—“ಉತ್ತಮ ಕಾವ್ಯವು ಶ್ರೇಷ್ಠವಾದ ಆತ್ಮದ ಅಮೂಲ್ಯವಾದ ಜೀವಸಾರ” ಎಂದು. ನಮ್ಮ ಹಿರಿಯರು ಹೇಳಿದ್ದಾರೆ:—“ಕವಿಗಳು ಋಷಿಗಳು, ಬ್ರಹ್ಮರು” ಎಂದು. ಈ ಉತ್ತಮ ಪದವಿ ಸುಲಭವಾಗಿ ಸಿಕ್ಕಬಹುದೆ? ಆತುರಪಡಬಾರದು, ಅಹಂಕಾರಪಡಬಾರದು, ಅಸೂಯೆಪಡಬಾರದು; ಶಿಕ್ಷಣವನ್ನು ಪಡೆಯಬೇಕು, ಅಧಿಕಾರವನ್ನು ಪಡೆಯಬೇಕು, ದೈನ್ಯವನ್ನು ಪಡೆಯಬೇಕು. ಭಗವತ್ಕೃಪೆಯಿಂದ ನಮ್ಮ ಕಯ್ಯಲ್ಲಾದ ಕೈಂಕರ್ಯವನ್ನು—ನಮ್ಮ ದೇಶಕ್ಕೇ ಎಂದು ವೀರ ಭಾವದಿಂದ ನಾನು ಹೇಳುವುದಿಲ್ಲ—ಸಾಧ್ಯವಾದರೆ ಜಗತ್ತಿಗೇ ಮಾಡಬೇಕು. ಅಣ್ಣ ತಮ್ಮಂದಿರಾಗಿ ಎಲ್ಲರೂ ಜನಕ್ಕೆ ಸೇರಿದ ಸಾಹಿತ್ಯವನ್ನು ಜನಕ್ಕಾಗಿ ಜನರಿಂದ ಮಾಡಿಸಬೇಕು.

ಸಮ್ಮೇಳನದ ಪ್ರತಿನಿಧಿಗಳಿರಾ, ಮಾನ್ಯ ಸದಸ್ಯರಿರಾ, ನನ್ನ ಈ ಭಾಷಣದಿಂದ ತಮ್ಮನ್ನು ದಣಿಸಿದೆ. ಮತ್ತೊಮ್ಮೆ ತಮ್ಮೆಲ್ಲರಿಗೂ ಸ್ವಾಗತವನ್ನು ಬಯಸಿ, ಸಮ್ಮೇಳನದ ಕಾರ್ಯಗಳನ್ನು ಸಾಂಗವಾಗಿ ಸುಖವಾಗಿ ನೆರವೇರುವಂತೆ ನಡೆಯಿಸಿ ಕೊಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

---

## ಸಮ್ಮೇಳನದ ಅಧ್ಯಕ್ಷರ ಆರಂಭ ಭಾಷಣ

“ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಂ”

ಸ್ವಸ್ತಿ ಶ್ರೀಮತ್ಕರ್ನಾಟಕ ವಾಙ್ಮಯ ದೇವತಾ ಪೂಜೆಗೆ ಸನ್ನದ್ಧರಾದ ಮಹಾಜನಗಳ ಚರಣ ಸನ್ನಿಧಿಯಲ್ಲಿ—ಸರಸ್ವತಿಯ ಪಾದ ಪದ್ಮಾರಾಧಕನಾದ ನಾನು ತಮ್ಮೆಲ್ಲರಿಗೆ ಸಹಸ್ರ ವಂದನೆಗಳನ್ನು ಸಮರ್ಪಿಸಿ ಅರಿಕೆಮಾಡಿಕೊಳ್ಳುವುದೇನೆಂದರೆ:—

ನಾನು ಮಾತೃಭಾಷಾ ಪುತ್ರರಲ್ಲೊಬ್ಬನೆಂಬ ಪ್ರೇಮದಿಂದ ತಾವೆಲ್ಲರೂ ನನ್ನನ್ನು ಈ ಸಮ್ಮೇಳನದ ಪ್ರಾಣ ಪ್ರತಿಷ್ಠಾಚಾರ್ಯನಾಗಲು ಆಜ್ಞಾಪಿಸಿರುವಿರಿ. ಆ ಮಹಾ ಪದವಿಗೆ ನಾನು ತೀರ ಅಯೋಗ್ಯನಿರುವೆನೆಂಬುದು ನನಗೆ ಗೊತ್ತಿದ್ದರೂ, ತಮ್ಮ ಅಪ್ಪಣೆಯನ್ನು ಮೀರಲು ಮನಸ್ಸಿಲ್ಲದ್ದರಿಂದ ಅದನ್ನು ಅಂಗೀಕರಿಸಿರುವೆನು. ಹಿಂದಕ್ಕೆ ಈ ಪೀಠವನ್ನಲಂಕರಿಸಿದವರು ಅನೇಕ ವಿಧವಾಗಿ ಆಕೆಯ ಪೂಜೆಯನ್ನು ಕಟ್ಟಿರುತ್ತಾರೆ; ಕೆಲವರು ಜ್ಞಾನ ದೀಪದಿಂದ ಆಕೆಗೆ ಆರತಿಯನ್ನೆತ್ತಿರುತ್ತಾರೆ; ಕೆಲವರು ಅನನ್ಯವಾದ ಭಕ್ತಿಯಿಂದ ಆಕೆಯ ಗುಣಗಳನ್ನು ಗಾನ ಮಾಡಿ ಆಕೆಯ ಪ್ರಸಾದವನ್ನು ಪಡೆದಿರುತ್ತಾರೆ; ಕೆಲವರು ತಮ್ಮ ಸ್ನಿಗ್ಧ ಮಧುರ ಕಾವ್ಯಮಯ ವಾಣಿಯಿಂದ ಆಕೆಗೆ ಪಂಚಾಮೃತಾಭಿಷೇಕ ಮಾಡಿರುತ್ತಾರೆ; ಕೆಲವರು ಸಂಶೋಧನದ ನಂದಾದೀಪಗಳನ್ನಿಟ್ಟು ಆಕೆಯ ಮೂರ್ತಿಯನ್ನು ಪ್ರಕಾಶಮಾನವಾಗಿ ಮಾಡಿರುತ್ತಾರೆ; ಮತ್ತೆ ಕೆಲವರು, ಶ್ರೀಮನ್ಮಹಾರಾಜರವರ ಕೃಪಾ ಜಲ ಪೋಷಿತವಾದ ಸುಂದರವಾದ ಉದ್ಯಾನಗಳಿಂದ ಸುಗಂಧ ಪುಷ್ಪಗಳನ್ನು ತೆಗೆದುಕೊಂಡು ಆಕೆಯನ್ನು ಪೂಜಿಸಿರುತ್ತಾರೆ. ನಾನಾದರೋ, ಇವುಗಳಲ್ಲೊಂದನ್ನೂ ಮಾಡಲಾರೆ. ಗಾನದಿಂದ ಹೃದಯವನ್ನು ಸೆಳೆಯಲರಿಯೆ, ಜ್ಞಾನದಿಂದ ಬಗೆಯನ್ನರಳಿಸಲರಿಯೆ, ಸಂಶೋಧನ ದೀಪದಿಂದ ಬೆಳಗಲರಿಯೆ; ಕರ್ನಾಟಕ ಸಾಹಿತ್ಯ ಸಾಗರದಲ್ಲಿ ಸ್ನಾನಮಾಡಿ ಶುಚಿರ್ಭೂತನಾದವನೂ ನಾನಲ್ಲ. ಆದಕಾರಣ, ಪಾವನತರವಾದ ಆಕೆಯ ಮೂರ್ತಿಯನ್ನು ಮುಟ್ಟಿ, ಆಕೆಯನ್ನು ಭ್ರಷ್ಟಗೊಳಿಸಲಿಚ್ಛಿಸುವುದಿಲ್ಲ. ಸುಗಂಧ ಪುಷ್ಪಗಳನ್ನಾದರೂ ಏರಿಸಬೇಕೆಂದರೆ, ಸಹಾನುಭೂತಿಯ ದ್ರವವು ಕೂಡ ಇಲ್ಲದ ಮರುಭೂಮಿಯಲ್ಲಿ ಹುಟ್ಟಿದ ನನ್ನ ಬಳಿಯಲ್ಲಿ ಹೂವುಗಳೆಲ್ಲಿಂದ ಬರಬೇಕು? ಆದರೆ, ನನಗೆ ಪೂಜೆ ಮಾಡಲಿಕ್ಕೆ ಬೇರೊಂದು ಬಗೆಯ ಅಧಿಕಾರವಿದೆ: ನಾನು ಆರ್ತ ಭಕ್ತನು; ಆದುದರಿಂದ ಆರ್ತಧ್ವನಿಯಿಂದ ಕೂಗಿಕೊಂಡು, ದೂರದಿಂದಲೇ ನಾಲ್ಕು ದೂರ್ವಾ ಪತ್ರಗಳನ್ನೇರಿಸಿ ಪೂಜೆಮಾಡುವೆನು.

ಆದರೆ, ಹೀಗೆ ವಾಗ್ದೇವತೆಯ ಪೂಜೆ ಮಾಡುವ ಮುಂಚೆ, ನಾವು ಆಕೆಯ ನಿಜ ಸ್ವರೂಪವನ್ನರಿತುಕೊಳ್ಳಬೇಕಲ್ಲವೆ? ದೇವತಾ ಸಮುದಾಯದಲ್ಲಿ ಆಕೆಯ ಸ್ಥಾನವಾವುದು? ಆಕೆ ಬ್ರಹ್ಮನ ಮಗಳೂ ಅಹುದು, ಪಟ್ಟದ ರಾಣಿಯೂ ಅಹುದು. ಇಡೀ ಸೃಷ್ಟಿಯನ್ನು ಹುಟ್ಟಿಸಿದಾತನು ಬ್ರಹ್ಮನು. ಇಡೀ ಸೃಷ್ಟಿಯನ್ನು ಹುಟ್ಟಿಸುವಾಗ ಆತನು ಅರ್ಥಾತ್ ವಾಣಿಯನ್ನೂ ಹುಟ್ಟಿಸಿದನು. ಆದುದರಿಂದ ಆಕೆಯು

ಆತನ ಮಗಳು. ಆದರೆ, ಮುಂದೆ ಸೃಷ್ಟಿಯೊಳಗಿನ ಸರ್ವ ವಾಚಸಿಕ ವ್ಯವಹಾರಕ್ಕೆ ಆಕೆಯ ಆವಶ್ಯಕತೆಯುಂಟಾದುದರಿಂದ, ಆಕೆಗೂ ಬ್ರಹ್ಮನಿಗೂ ನಿತ್ಯ ಸಂಬಂಧವುಂಟಾಯಿತು, ಎಂದರೆ ಆಕೆಯು ಆತನ ಪಟ್ಟದ ರಾಣಿಯಾದಳು. ಇದನ್ನೇ ಈಗ ರೂಢವಾಗಿರುವ ಅಜ್ಕೈತಸ್ಯ ಭಾಷೆಯಲ್ಲಿ ಹೇಳುವುದಾದರೆ, ಮನುಷ್ಯನ ಮನಸ್ಸಿನಲ್ಲಿ ಹುಟ್ಟುವ ಯಾವತ್ತು ವಿಕಾರಗಳಿಗೂ ವಿಚಾರಗಳಿಗೂ ವಾಣಿಯ ಆವಶ್ಯಕತೆಯುಂಟು; ಇಲ್ಲದಿದ್ದರೆ, ವ್ಯವಹಾರವೆಲ್ಲವೂ ಕಟ್ಟಾಗುವುದು. ಮನದೊಳಗೆ ಜನಿಸಿದ ಹೊಸ ಭಾವನೆ, ಹೊಸ ಕಲ್ಪನೆ, ಹೊಸ ವಿಚಾರ—ಇವುಗಳಿಗೆಲ್ಲಕ್ಕೂ ಮೂರ್ತ ಸ್ವರೂಪವನ್ನು ಕೊಡುವುದು ವಾಣಿಯು. ಈ ಕಾರ್ಯವನ್ನು ಉತ್ಕೃಷ್ಟವಾಗಿ ನೆರವೇರಿಸುವ ವಾಙ್ಮಯವೇ ಉಜ್ಜ್ವಲ ವಾಙ್ಮಯವು.

ವಾಙ್ಮಯದ ಈ ಧರ್ಮದ ಮೂಲಕವೇ, ಜನಾಂಗಕ್ಕೂ ವಾಙ್ಮಯಕ್ಕೂ ನಿತ್ಯವಾದ ಸಂಬಂಧವುಂಟಾಗುತ್ತದೆ. ಮನುಷ್ಯನು ಯಾವಾಗಲೂ ಸಮಾಜದಲ್ಲಿ ವಿಹರಿಸುವ ಪ್ರಾಣಿಯಾದುದರಿಂದ, ಅವನ ವಾಙ್ಮಯವು ಜನಜೀವನವನ್ನು ಪ್ರತಿಬಿಂಬಿಸುತ್ತದೆ. ಆದುದರಿಂದ, ನಿರ್ಜೀವವಾದ ಜನಾಂಗದಲ್ಲಿ ಸಜೀವವಾದ ವಾಙ್ಮಯವು ಹುಟ್ಟಲಾರದು. ಭರತಖಂಡದ ಜನತೆಯ ಜೀವನ, ಅಭ್ಯುದಯ, ಉತ್ಕರ್ಷ, ಇವೆಲ್ಲವುಗಳ ಮೇಲೆ ನಮ್ಮ ವಾಙ್ಮಯವು ಅವಲಂಬಿಸಿರುತ್ತದೆ. ಕರ್ನಾಟಕದ ವಾಙ್ಮಯವೆಂದರೆ ಭರತಭೂಮಿಯ ಜನಜೀವನವನ್ನು ಒಂದು ವಿಶಿಷ್ಟವಾದ ಎರಕದಲ್ಲಿ ಹಾಕಿ ಮಾಡಿದ ಮೂರ್ತಿ. ಆದುದರಿಂದ, ಕರ್ನಾಟಕದ ವಾಙ್ಮಯದಲ್ಲಿ ಇವೆರಡೂ ಸಂಸ್ಕೃತಿಗಳು, ಎಂದರೆ ಭರತಖಂಡ ಮತ್ತು ಕರ್ನಾಟಕ ಇವೆರಡೂ ಸಂಸ್ಕೃತಿಗಳು ಪ್ರತಿಫಲಿತವಾಗಿರಬೇಕು. ನಮ್ಮ ರೋಮ ರೋಮಗಳಲ್ಲಿ ರಾಷ್ಟ್ರೀಯತ್ವವೂ ಕರ್ನಾಟಕತ್ವವೂ ತುಂಬಿದ್ದರೆ ಮಾತ್ರವೇ ನಮ್ಮಿಂದ ಅತ್ಯಂತ ಉಜ್ಜ್ವಲವಾದ ವಾಙ್ಮಯವು ಹುಟ್ಟಬಹುದು; ಇಲ್ಲದಿದ್ದರೆ ಎಂದೂ ಹುಟ್ಟಲಾರದು. ಸಾರಾಂಶವೇನೆಂದರೆ—ನಾವು ವಿಶ್ವಸಂಸ್ಕೃತಿಯನ್ನೊಳಕೊಂಡ ರಾಷ್ಟ್ರೀಯತ್ವವನ್ನೂ ಕರ್ನಾಟಕತ್ವವನ್ನೂ ಯಾವಾಗಲೂ ಅನುಸಂಧಾನ ಮಾಡಿಕೊಂಡೇ ವಾಙ್ಮಯವನ್ನು ಹುಟ್ಟಿಸುವುದಕ್ಕೆ ಪ್ರವೃತ್ತರಾಗಬೇಕು.

## ೧. ವಾಙ್ಮಯದ ಅಂತಃಪ್ರಭಾವ

### ವಾಙ್ಮಯದ ಯಜ್ಞ ದಾನ ತಪ

ಈ ರೀತಿಯ ಅನುಸಂಧಾನವನ್ನು ನಾವು ಮೂರು ವಿಧವಾಗಿ ಮಾಡಬಹುದು. ಅವು ಯಾವುವೆಂದರೆ:—ವಾಙ್ಮಯ ಯಜ್ಞ, ವಾಙ್ಮಯ ದಾನ ಮತ್ತು ವಾಙ್ಮಯ ತಪ. ವಾಙ್ಮಯವನ್ನು ಹುಟ್ಟಿಸುವಾಗ ನಮ್ಮ ಮನಸ್ಸಿನಲ್ಲಿ ಯಾವ ತೆರದ ಪ್ರಯೋಜನಾಪೇಕ್ಷೆಯೂ ಇರದೆ, ಅದು ಕೇವಲ ಪರಮಾತ್ಮನ ಪೂಜೆಯೆಂದೂ, ಅದರಿಂದಲೇ ಆತನು ತೃಪ್ತನಾಗುತ್ತಾನೆಂದೂ ಭಾವನೆಯನ್ನು ತಾಳಿ, ನಮಗೆ ದೇವರು ಕೊಟ್ಟಿರುವ ಸಕಲ ವಿಧ ಶಕ್ತಿಗಳನ್ನೂ ವಾಗ್ದೇವತೆಯ ಪಾದಾರವಿಂದದಲ್ಲಿ ಸಮರ್ಪಿಸುವುದೇ ವಾಙ್ಮಯ ಯಜ್ಞ. ಈ ತೆರದ ವಿಶಿಷ್ಟ ಬುದ್ಧಿಯಿಲ್ಲದೆ, ಯಾವುದೋ ಒಂದು ಪ್ರಯೋಜನಾಪೇಕ್ಷೆ

ಯಿಂದ ಹುಟ್ಟಿದ ವಾಙ್ಮಯವು ನಿಜವಾದ ವಾಙ್ಮಯವಾಗಲಾರದು. ಆದುದರಿಂದ, ಗ್ರಂಥ ಕರ್ತರು ಮತ್ತು ಲೇಖಕರು ವಾಗ್ದೇವತೆಯ ಸೇವೆಯೆಂದೇ ಗ್ರಂಥಗಳನ್ನು, ಅಥವಾ ಲೇಖಗಳನ್ನು ಬರೆಯುವುದಕ್ಕೆ ಪ್ರವೃತ್ತರಾಗಬೇಕು. ಹೀಗೆ ಮಾಡಿದರೆ ಮಾತ್ರ, ಅವರ ವಾಙ್ಮಯವು ತೇಜೋವಂತವಾಗುವುದು. ವಾಙ್ಮಯ ದಾನವೆಂದರೆ ನಾವು ಸಂಪಾದಿಸಿದ ಜ್ಞಾನವನ್ನು ಅನ್ಯರಿಗೆ ಕೊಡುವುದು; ಎಂದರೆ, ಜ್ಞಾನ ಪ್ರಸಾರವು. ವಾಙ್ಮಯ ತಪವೆಂದರೆ ಆ ಜ್ಞಾನವನ್ನು ಗಳಿಸುವುದಕ್ಕೆ ಮಾಡಬೇಕಾದ ಸ್ವಾಧ್ಯಾಯ ಮತ್ತು ಅಭ್ಯಾಸ. ಈ ಬಗೆಯಾಗಿ, ನಾವು ವಿಶುದ್ಧವಾದ ಬುದ್ಧಿಯಿಂದ ಅಧ್ಯಯನಾದಿಗಳನ್ನು ಮಾಡಿ ಜ್ಞಾನ ಸಂಪಾದಿಸಿ ಜ್ಞಾನ ಪ್ರಸಾರವನ್ನು ಮಾಡಬೇಕು.

## ಕರ್ನಾಟಕದ ಪಂಚ ಕೋಶಗಳ ವಿಕಾಸ

ಈ ಪ್ರಕಾರದ ಯಜ್ಞ ದಾನ ತಪಗಳಿಂದ ವಾಙ್ಮಯದ ಮುಖಾಂತರವಾಗಿ ನಾವು ಕರ್ನಾಟಕದ ಪಂಚ ಕೋಶಗಳನ್ನೂ ವಿಕಾಸಗೊಳಿಸಬೇಕು. ಆ ಪಂಚ ಕೋಶಗಳು ಯಾವುವೆಂದರೆ:—ಕರ್ನಾಟಕದ ಶರೀರ, ಪ್ರಾಣ, ಮನಸ್ಸು, ವಿಜ್ಞಾನ ಮತ್ತು ಆನಂದ. ಇದರಿಂದ ನಮ್ಮ ವಾಙ್ಮಯದಲ್ಲಿ ಯಾವತ್ತು ತೆರದ ಗ್ರಂಥಗಳೂ ಹುಟ್ಟುವುವು. ಕರ್ನಾಟಕ ಭೂಗೋಳದ ಜನಸಂಖ್ಯೆ, ಭೂಗುಣ, ಖನಿಜ ಸಂಪತ್ತು, ಇವೇ ಮುಂತಾದವುಗಳಿಂದ ಕರ್ನಾಟಕದ ಭೌತಿಕ ಶರೀರದ ವಿಕಾಸವಾಗುವುದು. ಆದರೆ, ಇಂಥ ವಾಙ್ಮಯದಲ್ಲಿ ಪ್ರಾಣ ಶಕ್ತಿಯ ಸಂಚಾರವು ಸಾಕಾದಷ್ಟು ಇರದಿದ್ದರೆ, ಈಗಿನ ನಮ್ಮ ನಿರ್ಜೀವ ಪಠ್ಯಪುಸ್ತಕಗಳಂತೆ ಅವು ನಿಃಸತ್ವವಾಗುವುವು. ಯಾವತ್ತು ವಾಙ್ಮಯಕ್ಕೆ ಪ್ರಾಣವೇ ಮುಖ್ಯ. ಆದಕಾರಣ ನಮ್ಮ ಯಾವತ್ತು ತೆರದ ವಾಙ್ಮಯದಲ್ಲಿ ಪ್ರಾಣ ಸಂಚಾಲನವಾಗುವಂತೆ ನಾವು ಎಚ್ಚರಪಡಬೇಕು. ಆದರೆ ಮನುಷ್ಯನು ಪ್ರಾಣವನ್ನಷ್ಟೆ ಹಿಡಿದುಕೊಂಡು ಜೀವಿಸಿದರೆ, ಅದು ಹೇಗೆ ಉಚ್ಚ ಜೀವನವಾಗುವುದಿಲ್ಲವೋ ಹಾಗೆ, ವಾಙ್ಮಯದಲ್ಲಿ ಮನಸ್ಸಿನ ವಿಕಾಸಕ್ಕೆ ಎಡೆಯಿರದಿದ್ದರೆ ಅದು ಉಚ್ಚ ವಾಙ್ಮಯವೆನಿಸುವುದಿಲ್ಲ. ಆದುದರಿಂದ, ವಾಙ್ಮಯದ ಉನ್ನತಿಯನ್ನು ಬಯಸುವವರು ಸಮಾಜದ ಮನಸ್ಸನ್ನು ಸಂಪೂರ್ಣವಾಗಿ ವಿಕಾಸಗೊಳಿಸುವುದಕ್ಕೆ ತಕ್ಕ ಗ್ರಂಥಗಳನ್ನು ಬರೆಯಬೇಕು. ಇದರಿಂದ ನಮ್ಮ ವಾಙ್ಮಯದಲ್ಲಿ ಮಾನಸಶಾಸ್ತ್ರ, ಚರಿತ್ರೆ, ಇತಿಹಾಸ, ಕಥೆ, ಕಾದಂಬರಿ, ನಾಟ್ಯಶಾಸ್ತ್ರ, ಅಭಿನಯಶಾಸ್ತ್ರ, ಸಂಗೀತಶಾಸ್ತ್ರ ಮುಂತಾದ ಗ್ರಂಥಗಳು ಹುಟ್ಟುವುವು. ಕರ್ನಾಟಕದ ವಿಜ್ಞಾನಮಯ ಕೋಶದ ವಿಕಾಸವಾಯಿತೆಂದರೆ, ನಮ್ಮಲ್ಲಿ ಕಾವ್ಯಗಳು, ನಾಟಕಗಳು, ಪದಗಳು ವಿಶೇಷವಾಗಿ ಹುಟ್ಟುವುವು. ಆನಂದ ಕೋಶವು ವಿಕಾಸವಾಯಿತೆಂದರೆ, ಶ್ರುತಿ ಸ್ಮೃತ್ಯಾದಿ ಧಾರ್ಮಿಕ ವಾಙ್ಮಯವು ವಿಶೇಷವಾಗಿ ಬೆಳೆಯುವುದು. ವಾಙ್ಮಯದಲ್ಲಿ ಯಾವ ಗ್ರಂಥಗಳು ವಿಪುಲವಾಗಿರುವುವೆಂಬುದರ ಮೇಲಿಂದ ಆ ಸಮಾಜದ ಸುಧಾರಣೆಯು ಎಷ್ಟರ ಮಟ್ಟಿಗೆ ಆಗಿರುವುದೆಂಬುದನ್ನು ತಿಳಿಯಬಹುದು. ಸಾರಾಂಶವೇನೆಂದರೆ— ವಾಙ್ಮಯವು ಸುಧಾರಣೆಯನ್ನಳೆಯುವ ಉಷ್ಣತಾ ಮಾಪಕ ಯಂತ್ರವು. ಯಾವ ಸಮಾಜದಲ್ಲಿ ಉದಾತ್ತವಾದ ವಾಙ್ಮಯವಿಲ್ಲವೋ ಆ ಸಮಾಜವು ಹೀನ ಸಮಾಜ

ವೆಂದು ತಿಳಿಯಬೇಕು; ಮತ್ತು ಅದರಲ್ಲಿರುವ ಗ್ರಂಥಗಳ ಮೇಲಿಂದ ಅದರ ಮಟ್ಟವನ್ನು ಗೊತ್ತುಪಡಿಸಬಹುದು.

### ವಾಙ್ಮಯದಲ್ಲಿ ಸಾತ್ವಿಕ, ರಾಜಸ, ತಾಮಸಗಳೆಂಬ ಭೇದ

ಇಲ್ಲಿಯ ವರೆಗೆ ನಾವು ಹೇಳಿದುದು ಶುದ್ಧ ವಾಙ್ಮಯದ ವಿಷಯವು. ಆದರೆ ಸಮಾಜದಲ್ಲಿ ಯಾವಾಗಲೂ ಶುದ್ಧ ವಾಙ್ಮಯವೇ ರಚಿತವಾಗುತ್ತಿರುವುದಿಲ್ಲ. ಏಕೆಂದರೆ, ಈ ಜಗತ್ತು ಸಾತ್ತ್ವಿಕ ರಾಜಸ ತಾಮಸರೆಂಬ ತ್ರಿವಿಧವಾದ ಜೀವರುಗಳಿಂದ ತುಂಬಿದೆ. ಆಯಾ ಜನರು ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಗ್ರಂಥ ಬರೆಯುವರು. ಆದುದರಿಂದ ಅವರವರ ಸ್ವಭಾವಕ್ಕನುಸರಿಸಿ, ವಾಙ್ಮಯದಲ್ಲಿಯೂ ಸಾತ್ವಿಕರು, ರಾಜಸರು ಮತ್ತು ತಾಮಸರುಗಳೆಂಬ ತ್ರಿವಿಧ ಭೇದಗಳುಂಟಾಗುವುವು. ತಾಮಸ ವೃತ್ತಿಯುಳ್ಳವನು ಭೂವಿವರಣೆಯನ್ನೇ ಬರೆಯಲಿ, ಇತಿಹಾಸವನ್ನೇ ಬರೆಯಲಿ, ಅಥವಾ ಮತ್ತಾವ ಗ್ರಂಥವನ್ನೇ ಬರೆಯಲಿ, ಆತನ ಗ್ರಂಥಗಳಲ್ಲಿ ಆತನ ತಾಮಸ ವೃತ್ತಿಯು ಒಡಮೂಡದೆ ಉಳಿಯುವುದಿಲ್ಲ. ನಮ್ಮ ಕನ್ನಡ ವಾಙ್ಮಯದ ಕ್ಷೇತ್ರವನ್ನವಲೋಕಿಸಿದರೆ, ಅದರಲ್ಲಿ ಈ ಬಗೆಯಾಗಿ ಮೂರೂ ವಿಧದ ವಾಙ್ಮಯವಿರುವುದು ಕಂಡು ಬರುವುದು. ತಾಮಸ ವಾಙ್ಮಯವು ನಮ್ಮನ್ನು ಯಾವಾಗಲೂ ಅಧಃಪಾತಕ್ಕೆ ಒಯ್ಯುವುದರಿಂದ, ಅದನ್ನು ಹುಡುಕಿ ತೆಗೆದು ಅದಕ್ಕೆ ನಾವು ಶಾಶ್ವತವಾದ ಸಮಾಧಿಯನ್ನು ಕಾಣಿಸಬೇಕು. ರಾಜಸ ವಾಙ್ಮಯದೊಳಗಿನ ಸಾತ್ವಿಕ ಭಾಗಕ್ಕೆ ಪ್ರೋತ್ಸಾಹನ ಕೊಡಬೇಕು. ವಾಙ್ಮಯವನ್ನು ವಿಂಗಡಿಸುವ ರೀತಿಗಳು ಅನೇಕ ವಿಧವಾಗಿವೆ: ಉದಾಹರಣಾರ್ಥವಾಗಿ—(೧) ಸ್ವತಂತ್ರ ವಾಙ್ಮಯ, ಅಸ್ವತಂತ್ರ ವಾಙ್ಮಯ, (೨) ಹಳಗನ್ನಡ, ಹೊಸಗನ್ನಡ, (೩) ಗದ್ಯ ವಾಙ್ಮಯ, ಪದ್ಯ ವಾಙ್ಮಯ, (೪) ಲಘು ವಾಙ್ಮಯ, ಉದಾತ್ತ ವಾಙ್ಮಯ, (೫) ಜನಪದ ಸಾಹಿತ್ಯ, ಮಹಾಜನ ಸಾಹಿತ್ಯ, (೬) ಜ್ಞಾನ ವಾಙ್ಮಯ, ಭಕ್ತಿ ವಾಙ್ಮಯ, ಇವೇ ಮೊದಲಾಗಿ ನಾವು ವಾಙ್ಮಯದ ಕಡೆಗೆ ಅನೇಕ ದೃಷ್ಟಿಗಳಿಂದ ನೋಡಬಹುದು. ಅನೇಕರು ಆ ದೃಷ್ಟಿಯಿಂದ ವಿಭಾಗ ಮಾಡಿ ಪ್ರತಿಯೊಂದು ಬಗೆಯ ವಾಙ್ಮಯವನ್ನೂ ವಿಸ್ತಾರಗೊಳಿಸುವುದಕ್ಕೆ ಅನೇಕ ಉಪಾಯಗಳನ್ನು ಈ ಮೊದಲೇ ಸೂಚಿಸಿರುವುದರಿಂದ, ನಾನು ಆ ವಿವರಗಳನ್ನು ಇಲ್ಲಿ ಹೇಳುವ ಕಾರಣವಿಲ್ಲ. ಆದರೆ ವಾಙ್ಮಯದಲ್ಲಿ ಇದಕ್ಕೂ ಮಹತ್ತ್ವದ ವಿಭಾಗವೆಂದರೆ ಸಾತ್ತ್ವಿಕ ರಾಜಸ ಮತ್ತು ತಾಮಸ ಎಂಬುದೇ ಎಂದು ನನ್ನ ಅಭಿಪ್ರಾಯ. ಏಕೆಂದರೆ, ಮನುಷ್ಯನ, ಅಥವಾ ಸಮಾಜದ ಶಾಶ್ವತ ಸುಖಕ್ಕೆ, ಅಥವಾ ದುಃಖಕ್ಕೆ ಕಾರಣವಾಗುವುದು ಈ ತೆರದ ವಿಭಾಗವೇ.

ಮೇಲಿನ ವಿವೇಚನೆಯಿಂದ ವಾಙ್ಮಯದ ಅಂತಃಪ್ರಭಾವವು ಬೆಳೆಯಬೇಕಾದರೆ ಯಾವ ಯಾವ ಸಂಗತಿಗಳ ಅವಶ್ಯಕತೆಯಿರುತ್ತದೆಂಬುದು ಗೊತ್ತಾಗುವುದು. ಆ ಸಂಗತಿಗಳು ಯಾವುವೆಂದರೆ:—(೧) ವಾಙ್ಮಯವನ್ನು ಹುಟ್ಟಿಸುವವರು ವಿಶ್ವಸಂಸ್ಕೃತಿಯನ್ನೊಳಕೊಂಡ ರಾಷ್ಟ್ರೀಯತ್ವವನ್ನೂ ಕರ್ನಾಟಕತ್ವವನ್ನೂ ಅನುಸಂಧಾನಮಾಡಿ ಗ್ರಂಥಗಳನ್ನು ಬರೆಯಬೇಕು. (೨) ವಿಶುದ್ಧವಾದ ಮನಸ್ಸಿನಿಂದ ಗ್ರಂಥ ಬರೆಯು

ವುದೂ ಒಂದು ಪ್ರಕಾರವಾಗಿ ಪರಮಾತ್ಮನ ಸೇವೆಯೆಂಬ ಭಾವನೆಯಿಂದ ಪ್ರೇರಿತರಾಗಿ ತಾವು ಬರೆಯುವ ಗ್ರಂಥದ ವಿಷಯವನ್ನು ಸತತವಾಗಿ ಅಭ್ಯಾಸಮಾಡಿ ಗ್ರಂಥ ಬರೆದು ಜ್ಞಾನ ಪ್ರಸಾರವನ್ನು ಮಾಡಬೇಕು. (೩) ಗ್ರಂಥಗಳನ್ನು ಬರೆಯುವವರು ಕರ್ನಾಟಕ ಪುರುಷನ ಶರೀರ, ಮನಸ್ಸು ಮತ್ತು ಆತ್ಮ, ಇವು ಚೆನ್ನಾಗಿ ವಿಕಾಸಹೊಂದಲಕ್ಕೆ ಅನುಕೂಲವಾಗುವಂಥ ಗ್ರಂಥಗಳನ್ನು ಬರೆಯಬೇಕು. (೪) ಈ ಜಗತ್ತು ತ್ರಿವಿಧವಾದ ಜೀವರುಗಳಿಂದ ತುಂಬಿರುವುದರಿಂದ, ಯಾವಾಗಲೂ ಶುದ್ಧ ವಾಙ್ಮಯವು ಹೊರಡುತ್ತಿರುವುದು ಶಕ್ಯವಿಲ್ಲವಾದುದರಿಂದ, ಸಮಾಜವು ತಾಮಸ ವಾಙ್ಮಯವನ್ನು ಹುಡುಕಿ ತೆಗೆದು ಅದನ್ನು 'ಹೋಳೀ' ಮಾಡಬೇಕು. ಹೀಗೆ ಮಾಡುವುದರಿಂದ, ವಾಙ್ಮಯದ ಅಂತಃಪ್ರಭಾವವು ಬೆಳೆಯುತ್ತದೆ.

ಇನ್ನು, ಇಂತಹ ಅಂತಃಪ್ರಭಾವವುಳ್ಳ ವಾಙ್ಮಯದಲ್ಲಿ ನಾವು ನಾಲ್ಕು ಸ್ಥೂಲ ಭಾಗಗಳನ್ನು ಮಾಡಬಹುದು. ಅವಾವುವೆಂದರೆ:—(೧) ಪ್ರಾಣವಂತ ವಾಙ್ಮಯ, (೨) ವೀರ್ಯವಂತ ವಾಙ್ಮಯ, (೩) ಓಜಸ್ವಿ ವಾಙ್ಮಯ ಮತ್ತು (೪) ಸ್ವಾನಂದ ವಾಙ್ಮಯ, ಎಂದರೆ ಸತ್ತ್ವ ರಜಸ್ತಮೋಗುಣಗಳಿಂದ ಮೀರಿದ, ತ್ರಿಗುಣಾತೀತನಿಂದ, ಅಥವಾ ಅಪರೋಕ್ಷಜ್ಞಾನಿಯಿಂದ ಹುಟ್ಟಿದ ವಾಙ್ಮಯ; ಇಂಥವನು ಕೇವಲ ವಾಙ್ಮಯ ಭಕ್ತನಿರುವುದಿಲ್ಲ; ಗ್ರಂಥಗಳನ್ನು ಬರೆಯಬೇಕೆಂದು ಆತನು ಗ್ರಂಥಗಳನ್ನು ಬರೆಯುವುದಿಲ್ಲ. ಮತ್ತನಾದವನು ಹೇಗೆ ಲೀಲೆಯಿಂದ ನೃತ್ಯ ಗಾಯನಗಳನ್ನು ಮಾಡುತ್ತಿರುತ್ತಾನೋ ಹಾಗೆ ಈ ಅಪರೋಕ್ಷ ಜ್ಞಾನಿಯು—ಈ ವಾಙ್ಮಯ ಯೋಗಿಯು—ಲೀಲೆಗೋಸ್ಕರ ಗ್ರಂಥಗಳನ್ನು ಬರೆಯುತ್ತಾನೆ. ಈ ತೆರದ ಸ್ವಾನಂದ ವಾಙ್ಮಯದಲ್ಲಿಯೂ ತಾರತಮ್ಯಗಳಿವೆ. ಅವುಗಳಲ್ಲಿ ಸ್ಥೂಲವಾಗಿ ಮೂರು ವಿಭಾಗಗಳನ್ನು ಮಾಡಬಹುದು. ಅವು ಯಾವುವೆಂದರೆ:—(೧) ಸ್ವಯಂಭು, ಎಂದರೆ ಉದ್ಭವ, ಅಥವಾ ಒಡಮೂಡಿದ ವಾಙ್ಮಯ, (೨) ಹೃದಯಾಕಾಶವಾಣಿಯಿಂದುದ್ಭವಿಸಿದ ವಾಙ್ಮಯ, ಅಥವಾ ಆತ್ಮಪ್ರೇರಿತ ವಾಙ್ಮಯ ಮತ್ತು (೩) ಅಪೌರುಷೇಯ ವಾಙ್ಮಯ, ಅಥವಾ ಪರಮಾತ್ಮಪ್ರೇರಿತ ವಾಙ್ಮಯ. ಈ ತೆರದ ಅತ್ಯಂತ ಉನ್ನತ ಶಿಖರಕ್ಕೇರಿದ ವಾಙ್ಮಯವು ಮೊದಲಿನ ಮೂರು ಕೋಶಗಳನ್ನು ದಾಟಿ ವಿಜ್ಞಾನ, ಅಥವಾ ಆನಂದಮಯ ಕೋಶಗಳಲ್ಲಿ ಸೇರಿ ಆನಂದಪಡುತ್ತಿರುವವರಿಂದಲೇ ಹೊರಬೀಳುತ್ತದೆ; ಏಕೆಂದರೆ, ಅಲ್ಲಿ ಒಣ ಬುದ್ಧಿಯ, ಅಥವಾ ತರ್ಕದ ಆಟವು ಸಾಗುವುದಿಲ್ಲ.

ಬುದ್ಧಿ ವಿದ್ಯಾ ಬಲದಿ ಶೋಳಿದ ।
ಶುದ್ಧ ಕಾವ್ಯವಿದಲ್ಲ ತತ್ತ್ವ ಸು ।
ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ॥
ಮಧ್ವವಲ್ಲಭ ತಾನೆ ಹೃದಯದೊ ।
ಳಿದ್ದು ನುಡಿಸುವ ತೆರದಿ ನುಡಿದೆನ ।
ಪದ್ಧಗಳನು......

ಎಂದು ಜಗನ್ನಾಥರಾಯರು ಉಸುರಿದ ಉಚ್ಚವಾದ ವಾತಾವರಣದಲ್ಲಿ ಸನ್ನು ಶರಣರ ದಾಸರ ಸಾಹಿತ್ಯವೂ 'ಭರತೇಶ ವೈಭವ' 'ಶೂನ್ಯ ಸಂಪಾದನೆ'ಗಳಂಥ ಗ್ರಂಥಗಳೂ ಹುಟ್ಟಿರುವುವು.

### ವಾಙ್ಮಯದಲ್ಲಿ ವಿಧಿ ಭಂಗ

ವಾಙ್ಮಯದಲ್ಲಿ ನಾವು ಪುರಾತನರು ಹಾಕಿಕೊಟ್ಟ ಕಟ್ಟುಗಳನ್ನು ಎಷ್ಟರ ಮಟ್ಟಿಗೆ ಪಾಲಿಸಬೇಕೆಂಬ ಪ್ರಶ್ನೆಯು ಪದೇ ಪದೇ ಚರ್ಚಿಸಲ್ಪಡುತ್ತದೆ. ವ್ಯಾಕರಣಾದಿಗಳ ಕಟ್ಟನ್ನು ತಿಲ ಪ್ರಾಯವೂ ಸಡಲಿಸದೆ, ಅವರು ಅಂಗೀಕರಿಸಿದ ಅಪವಾದಗಳ ಕ್ಷೇತ್ರವನ್ನು ತುಸುವಾದರೂ ವಿಸ್ತಾರಗೊಳಿಸದೆ, ಅವುಗಳನ್ನು ಅಕ್ಷರಶಃ ಪಾಲಿಸಬೇಕೆಂದು ಒಂದು ಪಕ್ಷ. ಇದಕ್ಕೆ ವಿರುದ್ಧವಾಗಿ, ವ್ಯಾಕರಣ ಛಂದಸ್ಸು ಮುಂತಾದವುಗಳ ಕಟ್ಟನ್ನು ಚಟ್ಟನೆ ಕಿತ್ತೊಗೆದು ಯಥೇಚ್ಛವಾಗಿ ಸ್ವಾತಂತ್ರ್ಯ ಸುಖವನ್ನು ಅನುಭವಿಸಬೇಕೆಂಬುದು ಮತ್ತೊಂದು ಪಕ್ಷ. ಈ ಎರಡೂ ಪಕ್ಷಗಳು ಅಂಶತಃ ನಿಜವಿರುತ್ತವೆ. ಶಾಸನ ಭಂಗ, ಅಥವಾ ವಿಧಿ ಭಂಗವನ್ನು ಮಾಡುವುದು ಪಾಪವೇನೂ ಅಲ್ಲ; ಆದರೆ, ಅದನ್ನು ಮಾಡುವವರಿಗೆ ಒಂದು ಬಗೆಯ ಅಧಿಕಾರವು ಬೇಕಾಗುತ್ತದೆ; ಅಲ್ಲದೆ, ಕೊನೆಯ ಉಪಾಯವೆಂದೇ ನಾವು ಅದನ್ನು ಸ್ವೀಕರಿಸಬೇಕು. ಆ ತೆರದ ಅಧಿಕಾರವು ಮನೋಮಯ ಕೋಶವನ್ನು ದಾಟಿ ವಿಜ್ಞಾನ, ಅಥವಾ ಆನಂದಮಯ ಕೋಶದಲ್ಲಿ ಇರುವವನಿಗೆ ಮಾತ್ರವೇ ಇರುತ್ತದೆ. ಅಂಥವರಿಗೆ ವಿಧಿ ಬಂಧನವಿಲ್ಲ; ಅಂಥವರು ಶಬ್ದಬ್ರಹ್ಮನನ್ನು ಅತಿವರ್ತಿಸಿದವರಾಗಿರುತ್ತಾರೆಂದರೆ ಸಲ್ಲುವುದು. ಸಾಮಾನ್ಯರು ಕಾರ್ಯಾಕಾರ್ಯವನ್ನು ನಿರ್ಣಯಿಸುವಾಗ ಶಾಸ್ತ್ರವನ್ನು ಪ್ರಮಾಣವಾಗಿ ಹಿಡಿದೇ ನಡೆಯಬೇಕು. ಆ ತೆರದ ಅಧಿಕಾರವಿಲ್ಲದೆ ಅಧಿಕಾರವಿರುತ್ತದೆಂದೂ ತಿಳಿಯುವುದು ಆತ್ಮ ವಂಚನೆಯು. ಸಾರಾಂಶವೇನೆಂದರೆ, ಯಾವನೂ ಬುದ್ಧಿಪೂರ್ವಕವಾಗಿ ಯಾವುದೋ ಒಂದು ಉದ್ದೇಶವನ್ನಿಟ್ಟುಕೊಂಡು ವಿಧಿ ಭಂಗವನ್ನು ಮಾಡಲಿಕ್ಕೆ ಹೊರಡಬಾರದು. ಆತನು ತನ್ನ ವಿಷಯದಲ್ಲಿ ತನ್ಮಯನಾದಾಗ ವಿಧಿ ಭಂಗವು ತಾನಾಗಿಯೇ ಆದರೆ ಅಡ್ಡಿ ಇಲ್ಲ. ಇಂಥ ವಾಙ್ಮಯವೇ ಆದರ್ಶ ವಾಙ್ಮಯವು; ಇಂಥ ಪುರುಷರೇ ಆದರ್ಶ ಪುರುಷರು.

ವಾಙ್ಮಯದ ಅಭಿವೃದ್ಧಿಯ ಮೂಲ ತತ್ತ್ವಗಳಾವುವೆಂಬುದನ್ನು ಇಲ್ಲಿಯ ವರೆಗೆ ವಿವೇಚಿಸಿದ್ದಾಯಿತು. ಈ ಮೂಲ ತತ್ತ್ವಗಳನ್ನು ನಾನು ಇಷ್ಟು ವಿಸ್ತಾರವಾಗಿ ಹೇಳುವ ಕಾರಣವೇನೆಂದರೆ, ಇವುಗಳ ಅಜ್ಞಾನದ ಮೂಲಕ ಕನ್ನಡ ವಾಙ್ಮಯದ ವಿಮರ್ಶೆಯನ್ನು ಮಾಡುವುದರಲ್ಲಿ ಅನೇಕ ತಪ್ಪುಗಳುಂಟಾಗುತ್ತವೆ. ವಾಙ್ಮಯವೆಂದರೆ ಕೇವಲ ಭಾಷೆಯೆಂದು ಹಲವರ ತಿಳಿವಳಿಕೆ. ವಿಷಯಕ್ಕೆ ಇಂಥ ಜನರು ಮಹತ್ತ್ವವನ್ನು ಕೊಡದೆ ಭಾಷೆಗೆ ಮಹತ್ತ್ವವನ್ನು ಕೊಡುತ್ತಾರೆ; ಇದು ತಪ್ಪು; ಬ್ರಹ್ಮ ಸರಸ್ವತಿಯರ ಲಗ್ನವಾಗಬೇಕು; ಎಂದರೆ, ವಿಷಯ ಮತ್ತು ಭಾಷೆ, ಇವುಗಳ ಸಮ್ಮಿಶ್ರಣವಾಗಬೇಕು.

### ಕನ್ನಡ ವಾಙ್ಮಯದ ವಿಮರ್ಶೆ

ಇನ್ನು ನಾನು ಕನ್ನಡ ವಾಙ್ಮಯದ ಭೂತ ಮತ್ತು ವರ್ತಮಾನಗಳ ಕಡೆಗೆ ಹೊರಳುತ್ತೇನೆ. ಭೂತ ಕಾಲದ ವಾಙ್ಮಯಕ್ಕೂ ವರ್ತಮಾನ ಕಾಲದ ವಾಙ್ಮಯಕ್ಕೂ, ಎಂದರೆ ಹಳಗನ್ನಡಕ್ಕೂ ಹೊಸಗನ್ನಡಕ್ಕೂ ಅತ್ಯಂತ ಭೇದವಿರುತ್ತದೆಂಬುದನ್ನು

ನಾವು ಮೊದಲು ಲಕ್ಷ್ಯದಲ್ಲಿಡಬೇಕು. ಭೂತ ಕಾಲದ ವಾಙ್ಮಯವೇ ಒಂದು ವಿಧದಿಂದ ರೂಪಾಂತರವನ್ನು ಹೊಂದುತ್ತ ಹೊಂದುತ್ತ ಈಗಿನ ಹೊಸಗನ್ನಡ ರೂಪವನ್ನು ತಾಳಿರುತ್ತದೆಂಬುದು ಅಂಶತಃ ನಿಜವೇನೋ ಅಹುದು. ಆದರೂ, ಕನ್ನಡದಲ್ಲಿ ಅವೆರಡು ತರಹದ ಭಾಷೆಗಳ ನಡುವೆ ದೊಡ್ಡದೊಂದು ಕೊಸ್ಸಾರವು ಬಿದ್ದಿರುವುದೆಂಬುದನ್ನು ನಾವು ಅಲ್ಲಗಳೆದು ಫಲವಿಲ್ಲ. ಭೂತ ಕಾಲದ ವಾಙ್ಮಯದ ಮುಖ್ಯ ಭಾಗವು ಬಹುಶಃ ಪದ್ಯ ರೂಪದಲ್ಲಿ ಇರುವುದೇ ಇದಕ್ಕೆ ಕಾರಣವಾಗಿರಬಹುದು. ಅದು ಏನೇ ಇರಲಿ, ವರ್ತಮಾನ ಕಾಲದ ಗದ್ಯ ವಾಙ್ಮಯವನ್ನು ಹುಟ್ಟಿಸುವುದಕ್ಕೆ ಹಳಗನ್ನಡವು ಬಲು ಮಟ್ಟಿಗೆ ನೆರವಾಗಲಾರದೆಂದು ನನ್ನ ಅಭಿಪ್ರಾಯ. ಇದರಿಂದ, ಹಳಗನ್ನಡವನ್ನು ನಾನು ನಿಂದಿಸುತ್ತೇನೆಂದು ತಾವು ಸರ್ವಥಾ ಭಾವಿಸಕೂಡದು. ಅದರ ಯೋಗ್ಯತೆಯನ್ನು ನಾನು ಅಲ್ಲಗಳೆಯುವುದಿಲ್ಲ. ಈಗ ನಾನು ಅದನ್ನು ಒಂದೇ ಒಂದು ದೃಷ್ಟಿಯಿಂದ ವಿಚಾರಮಾಡುತ್ತೇನೆ: ಅದಾವುದೆಂದರೆ, ಭೂತ ಕಾಲದ ವಾಙ್ಮಯವು ವರ್ತಮಾನ ಕಾಲದ ಗದ್ಯ ವಾಙ್ಮಯವನ್ನು ಎಷ್ಟು ಮಟ್ಟಿಗೆ ವಿಕಾಸಗೊಳಿಸಬಹುದೆಂಬ ದೃಷ್ಟಿಯಿಂದ ಹಾಗೆ ವಿಚಾರ ಮಾಡಿದರೆ, ಹೊಸ ಗದ್ಯ ಶೈಲಿಗೆ ಅದು ವಿಶೇಷವಾಗಿ ಪ್ರಯೋಜನಕಾರಿಯಾಗಲಾರದು. ಹೊಸ ಗದ್ಯ ಶೈಲಿಯನ್ನು ನಾವು ಹೊಸತಾಗಿ ಹುಟ್ಟಿಸಬೇಕಾಗಿದೆ. ಹಳಗನ್ನಡದಲ್ಲಿಯ ಉತ್ಕೃಷ್ಟವಾದ ಮತ್ತು ಅರ್ಥಪೂರ್ಣವಾದ ಶಬ್ದಗಳೂ, ಶಬ್ದ ಸಂಯೋಜನೆಗಳೂ ನಮಗೆ ಉಪಯೋಗವಾಗುವುವು. ಕನ್ನಡ ನುಡಿಯ ಜಾತಿ, ಕುಲ, ಗೋತ್ರಗಳನ್ನು ನಾವು ಕಂಡುಹಿಡಿಯಬಹುದು. ಅದಕ್ಕೋಸ್ಕರ ಕೆಲವು ಪಂಡಿತರು ಹಳಗನ್ನಡದೊಳಗಿರುವ ಉತ್ಕೃಷ್ಟವಾದ ಗ್ರಂಥಗಳ ಸಾರ ಸರ್ವಸ್ವವೆಲ್ಲವನ್ನೂ ಹೀರಿ ಅದರ ಸಹಾಯದಿಂದ ಆ ಗ್ರಂಥಗಳನ್ನು ರಸವತ್ತಾಗಿ ಹೊಸಗನ್ನಡಕ್ಕೆ ಮಾರ್ಪಡಿಸಬೇಕು. ಹಳಗನ್ನಡವು ಕವಿಗಳಿಗೆ ಬಲು ಮಟ್ಟಿಗೆ ಸಹಾಯಕವಾಗುವದು. ಆದರೆ ಇಲ್ಲಿಯೂ ನಾವು ಒಂದು ಗಡಚಾದ ಪ್ರಶ್ನೆಯನ್ನು ಬಿಡಿಸಬೇಕಾಗಿದೆ: ಅದಾವುದೆಂದರೆ, ದಿನದಿನಕ್ಕೆ ಹೆಚ್ಚು ಹೆಚ್ಚಿಗೆ ವಿಸ್ತಾರವಾಗುತ್ತ ನಡೆದಿರುವ ಹೊಸಗನ್ನಡದ ಶೈಲಿಗೆ ಹಳಗನ್ನಡದ ಪದ್ಯ ಶೈಲಿಯನ್ನು ಆದಷ್ಟು ಸಮೀಪಕ್ಕೆ ತರಬೇಕು. ನಾನೇನೂ ಕವಿಯಲ್ಲ. ಆದರೆ, ಇಷ್ಟು ಮಾತ್ರ ನಾನು ಹೇಳಬಲ್ಲೆ: ಏನೆಂದರೆ, ಕವಿಗಳ ಈ ಪ್ರಶ್ನೆಯನ್ನು ತೃಪ್ತಿಕರವಾಗಿ ಬಿಡಿಸದಿದ್ದರೆ, ವರ್ತಮಾನ ಕಾಲದ ಗದ್ಯ ಪದ್ಯಗಳಲ್ಲಿರುವ ಅಂತರವು ದಿನ ದಿನಕ್ಕೆ ಬೆಳೆಯುವುದು.

ವರ್ತಮಾನ ಕಾಲದ ವಾಙ್ಮಯದ ಮುಖ್ಯ ದೋಷವೇನೆಂದರೆ—ನಮ್ಮ ವಾಙ್ಮಯವು ಮುಂದೆ ಇಂಥದೊಂದು ವಿಶಿಷ್ಟವಾದ ಮಾರ್ಗವನ್ನು ಹಿಡಿದು ಸಾಗತಕ್ಕದ್ದಿರುತ್ತದೆಂಬ ವಿಷಯದಲ್ಲಿ ಐಕಮತ್ಯವಿಲ್ಲದಿರುವುದು. ಇದರ ಮೂಲಕ, ಮನಸ ಬಂದವರು ಮನಬಂದಂತೆ ಬರೆಯುತ್ತಾರೆ. ಕನ್ನಡ ನಾಡಿನಲ್ಲಿ ಜಾಗೃತಿಯುಂಟಾಗಿರುವುದೇ ಇದಕ್ಕೆ ಕಾರಣ. ಗ್ರಂಥಕರ್ತರೂ ಗ್ರಂಥಕರ್ತರಾಗತಕ್ಕವರೂ ಒಂದೆಡೆಗೆ ಸೇರಿ, ಗದ್ಯ ಪದ್ಯ ವಾಙ್ಮಯದ ಧ್ಯೇಯವನ್ನು ನಿಶ್ಚಯಿಸುವುದು ಬಹಳ ಅವಶ್ಯವಿದೆ. ಪ್ರತಿಯೊಂದು ವಿಷಯದಲ್ಲಿ ಆದರ್ಶ ಪುರುಷರು ಹುಟ್ಟಿ, ಆದರ್ಶ ಗ್ರಂಥಗಳನ್ನು ಬರೆದರೆ ಸಾಮಾನ್ಯ ಜನರು ಅವರನ್ನು ತಾವಾಗಿಯೇ ಅನುಸರಿಸುವರೆಂಬುದು ನಿಜ. ಆದರೆ

ಅಲ್ಲಿಯ ವರೆಗೆ ನಾವು ಕೆಲವು ಸಾಮಾನ್ಯ ನಿಯಮಗಳನ್ನಿಟ್ಟುಕೊಂಡು ನಡೆದರೆ ಒಳ್ಳೆಯದು.

### ವಿಚಾರ ಮಾಡತಕ್ಕ ಪ್ರಶ್ನೆಗಳು

ಕನ್ನಡ ವಾಙ್ಮಯ ಭಕ್ತರು ಒಟ್ಟುಗೂಡಿ ಬಿಡಿಸತಕ್ಕ ಪ್ರಶ್ನೆಗಳು ಅನೇಕ ವಾಗಿವೆ:—(೧) ನಾಟಕದಲ್ಲಿಯ ಭಾಷೆಯು ಎಂಥದಿರಬೇಕು? (೨) ಪುಸ್ತಕಗಳನ್ನು ಮಾತಾಡುವ ಪದ್ಧತಿಯಲ್ಲಿ ಮುದ್ರಿಸಬೇಕೋ ಹೇಗೆ? (೩) ಕವಿತೆಗಳಲ್ಲಿ ಪ್ರಾಸ, ಛಂದಸ್ಸು ಇವುಗಳ ವಿಷಯವಾಗಿ ಉದ್ಭವಿಸಿದ ಮತಭೇದದ ತೊಡಕನ್ನು ಹೇಗೆ ಬಿಡಿಸಬೇಕು? (೪) ಪ್ರೌಢ ಗ್ರಂಥಗಳಲ್ಲಿ ಸ್ತ್ರೀಯರ ಮತ್ತು ಹಳ್ಳಿವಾಡದವರ ಭಾಷೆಯನ್ನು ಹೇಗೆ ಉಪಯೋಗಿಸಬೇಕು? (೫) ಅಂಕಿತ ನಾಮಗಳನ್ನು ಬರೆಯುವುದರಲ್ಲಿ ಏಕ ರೂಪತೆ. (೬) ಸಂಸ್ಕೃತ ಅವತರಣಿಕೆಗಳನ್ನು ಯಾವ ಲಿಪಿಯಲ್ಲಿ ಬರೆಯಬೇಕು? (೭) ಶಾಸ್ತ್ರೀಯ ಪರಿಭಾಷೆಯನ್ನು ನಿಶ್ಚಯಿಸುವುದು. (೮) ವ್ಯಾಕರಣ ವಿಷಯಗಳನ್ನು ಸಿದ್ಧಪಡಿಸುವುದು; ಬರೆಹದಕ್ಕರಗಳಲ್ಲಿ ಏಕ ರೂಪತೆ. (೯) ನಾವು ಲೇಖನದಲ್ಲಿ ಏಕ ರೂಪತೆ. (೧೦) ಪಠ್ಯ ಪುಸ್ತಕಗಳ ವಿಚಾರ—ಇವೇ ಮುಂತಾದ ವಿಷಯಗಳನ್ನು ನಾವು ಸಹಜವಾಗಿ ನಿರ್ಣಯಿಸಿ ಆಚರಣೆಯಲ್ಲಿ ತರಲಿಕ್ಕೆ ಪ್ರಯತ್ನಿಸಬಹುದು. ಇವಲ್ಲದೆ, (೧) ಟಾಯಿಪ ರಾಯಟಿಂಗ ಯಂತ್ರಕ್ಕೆ ತಕ್ಕ ಲಿಪಿ, (೨) ಮುದ್ರಣಾಲಯಗಳಿಗೆ ಅನುಕೂಲವಾಗುವಂತೆ ಟಾಯಿಪುಗಳಲ್ಲಿ ಬದಲಾವಣೆ, (೩) ಬರೆಹದಕ್ಕರಗಳಲ್ಲಿ ಸುಧಾರಣೆ, (೪) ಲಘು ಲೇಖನ ಪದ್ಧತಿ, (೫) ಮಾದರಿಯ ಅಕ್ಷರಗಳ ಲೇಖನ ಪುಸ್ತಕ ಮಾಲೆ—ಇವೇ ಮುಂತಾದ ಹೊಸ ಪ್ರಶ್ನೆಗಳ ವಿಷಯವಾಗಿಯೂ ವಿಚಾರವು ಅವಶ್ಯವಿದೆ.

### ೨. ಬಹಿರ್ವ್ಯಾಪ್ತಿ

ಇದುವರೆಗೆ ಕನ್ನಡ ವಾಙ್ಮಯವನ್ನು ನಾನು ಅಂತರ್ದೃಷ್ಟಿಯಿಂದ ಯೋಚಿಸಿದೆನು. ಆದರೆ ವಾಙ್ಮಯದ ಪೂರ್ಣ ವಿಕಾಸಕ್ಕೆ ಇಷ್ಟೇ ಸಾಲದು. ಅದರ ವ್ಯಾಪಕತೆಯನ್ನು ಕುರಿತು ನಾವು ಯೋಚಿಸಲೇ ಬೇಕು. ಕರ್ನಾಟಕಕ್ಕಂತೂ ಈ ವ್ಯಾಪಕತೆಯ ಪ್ರಶ್ನೆಯ ಮಹತ್ತ್ವವು ಬಹಳವಿದೆ. ಕರ್ನಾಟಕವು ಎಲ್ಲ ಕಡೆಯಲ್ಲಿಯೂ ಕರಗುತ್ತ ನಡೆದಿದೆ. ನಾಲ್ಕೂ ದಿಕ್ಕುಗಳಲ್ಲಿ ನಮ್ಮ ಪ್ರದೇಶವು ಸಂಕುಚಿತವಾಗುತ್ತ ನಡೆದಿದೆ. ಗಡಿನಾಡಿನ ಗೋಳನ್ನು ನಾವು ಆಲಿಸಬಾರದೊ? ಕರ್ನಾಟಕವೆಂಬುದೊಂದು ಜನಾಂಗವು, ಅದಕ್ಕೆ ಒಂದೇ ಒಂದು ಶರೀರ, ಮನಸ್ಸು ಮತ್ತು ಆತ್ಮಗಳಿರುತ್ತವೆಂಬ ಭಾವನೆಯು ಎಲ್ಲಿಯ ವರೆಗೆ ನಮ್ಮಲ್ಲಿ ಉತ್ಪನ್ನವಾಗುವುದಿಲ್ಲವೋ ಅಲ್ಲಿಯ ವರೆಗೆ ನಮ್ಮ ಕನ್ನಡ ನುಡಿಯ ಅಭಿವೃದ್ಧಿಯು ಭರದಿಂದ ಸಾಗಲಾರದು. ಮನುಷ್ಯನ ಬಾಯಿಯಲ್ಲಿ ನಾಲಗೆಯಿರುವದೇನೋ ನಿಜ; ಆದರೆ ನಾಲಗೆಯು ಬಾಯಿಯ ಸೊತ್ತಲ್ಲ; ಕಾಲಿಗೂ ನಾಲಗೆಯಿರುವುದು, ಕೈಗೂ ನಾಲಗೆಯಿರುವುದು, ಕಿವಿಗೂ ನಾಲಗೆಯಿರುವುದು, ತಲೆಗೂ ನಾಲಗೆಯಿರುವುದು. ಬಾಯಿಯೊಳಗಿನ ನಾಲಗೆಯೇ ಇವುಗಳ ನಾಲಗೆ. ಆದಕಾರಣ, ಅವೆಲ್ಲ ಅವಯವಗಳಲ್ಲುಂಟಾದ ದುಃಖಗಳನ್ನು ನಾಲಗೆಯು ಉಸುರಲೇ ಬೇಕು. ಶರೀರದ ಯಾವ ಭಾಗದಲ್ಲಿಯೇ ದುಃಖವಾಗಿರಲಿ

ಅದು ನನ್ನ ದುಃಖವು ಎಂಬುವಷ್ಟು ನಮ್ಮ ಸಂವೇದನಾ ಶಕ್ತಿಯು ತೀಕ್ಷ್ಣವಾಗಬೇಕು. ಹೀಗೆ ಅದು ಈಗ ನಮ್ಮಲ್ಲಿ ಉಂಟಾಗಿರುವುದೋ? ಇಲ್ಲ. ನಾವು ಪಂಪ ರನ್ನರ ಉತ್ಸವಗಳನ್ನು ಮಾಡುತ್ತೇವೇನೋ ನಿಜ. ಆದರೆ ಪಂಪ ರನ್ನರ ವಾಸಸ್ಥಳಗಳು ಕನ್ನಡಿಗರ ಕೈಬಿಟ್ಟುಹೋಗುತ್ತವೆಂಬುದರ ಅರಿವು ನಮಗಿರುವುದಿಲ್ಲ. ಇದು, ಗೋವುಗಳನ್ನು ಅನ್ಯರು ಸೆಳೆಯುತ್ತಿರುವಾಗ, ಅವುಗಳನ್ನು ಸಂರಕ್ಷಿಸಿಕೊಳ್ಳುವುದಕ್ಕೆ ತಿಲಪ್ರಾಯವೂ ಪ್ರಯತ್ನ ಪಡದೆ, ಮನೆಯಲ್ಲಿ ಬಂಗಾರದ ಗೋವುಗಳನ್ನು ಮಾಡಿ ಪೂಜೆಯನ್ನು ಮಾಡುತ್ತ ಕುಳಿತಂತೆ ಅಲ್ಲವೆ?

ಗಡಿ ನಾಡುಗಳ ವಿಷಯವಾಗಿ ಎಂದಿಗೂ ಈ ತೆರದ ಜಗಳಗಳು ಇರತಕ್ಕವೇ. ಹಿಂದಕ್ಕೆ ತುರುಗಾಳೆಗಗಳಲ್ಲಿ ತುರುಗಳನ್ನು ಸಂರಕ್ಷಿಸುವದಕ್ಕೋಸ್ಕರ ವೀರಗಲಿಗಳ ಸಲುವಾಗಿ ವೀರಗಲ್ಲುಗಳು ನೆಡಿಸಲ್ಪಟ್ಟವೆ. ಈಗಿನ ದಿವಸಗಳಲ್ಲ, ಗಡಿನಾಡುಗಳಲ್ಲಿಯ ನಮ್ಮ ಗ್ರಾಮಗಳೆಂಬ ಗೋವುಗಳನ್ನು ಬದುಕಿಸುವ ಕಲಿಗಳು ಹುಟ್ಟಬಾರದೇ?

ಉದಾಹರಣಾರ್ಥವಾಗಿ ಅನಂತಪುರ ಜಿಲ್ಲೆಯಲ್ಲಿಯ ಗುತ್ತಿ ಮತ್ತು ಹಿಂದೂಪುರ ತಾಲ್ಲೂಕಿನಲ್ಲಿಯ (೧) ಗುತ್ತಿ (೨) ಕೊನಕೊಂಡಲ (೩) ಜಜನಾಗಪಳ್ಳಿ (೪) ಚೌಲೂರು (೫) ಚೋಳಸಮುದ್ರ (೬) ಗೊರೇಪಲ್ಲಿ (೭) ಹಿಂದೂಪುರ (೮) ಕಗ್ಗಲ್ಲು (೯) ಕಿಡಕೇರಿ (೧೦) ಕೊಡಗೇಪಲ್ಲಿ (೧೧) ಕೊಟ್ನೂರ (೧೨) ಲೇಪಾಕ್ಷಿ (೧೩) ಮೂಗೂರ (೧೪) ಮಾನೇಪಲ್ಲಿ (೧೫) ಮಾನಸಾಂದ್ರ (೧೬) ಪರಲಿ (೧೭) ಪುಲಿಗುಂಟ (೧೮) ವನವೋಳು; ಕದಿರಿ ತಾಲ್ಲೂಕಿನಲ್ಲಿಯ—(೧) ಕದಿರಿ (೨) ಎರಡುಕೇರೆ (೩) ಕಂಬದೂರು (೪) ಮಾಲಕಲ್ಲೇಡ; ಪೆನಗುಂಡ ತಾಲ್ಲೂಕಿನಲ್ಲಿಯ—(೧) ಬುಕ್ಕಪಟ್ಟಣ (೨) ಪೆನಗೊಂಡ (೩) ಮಡುಕುರ್ಲೆ; ತಾಡಪತ್ರಿ ತಾಲ್ಲೂಕಿನಲ್ಲಿಯ—ತಾಡಪತ್ರಿ; ಧರ್ಮಾವರ ತಾಲ್ಲೂಕಿನಲ್ಲಿಯ—ದಾದಲೂರು.

ಚಿತ್ತೂರ ಜಿಲ್ಲೆಯಲ್ಲಿ, ಮದನಪಲ್ಲಿ ತಾಲ್ಲೂಕಿನಲ್ಲಿ—ಚಿಪ್ಪಲಿ, ಮದನಪಲ್ಲಿ, ಮಲ್ಲೆಳ, ಪೆದ್ದತಿಪ್ಪಸಮುದ್ರ, ಆಲೇತಿಪಳ್ಳಿ ಎಂಬವೂ; ಪಲ್ಮನೇರ ತಾಲ್ಲೂಕಿನಲ್ಲಿ—ದಂಡಪಲ್ಲಿ, ಕಳಕಟ್ಟೂರು ಎಂಬವೂ; ಪುಂಗನೂರು ತಾಲ್ಲೂಕಿನಲ್ಲಿ—ಚಲಮಂಗಲ, ಬುಡಿದಪಳ್ಳಿ, ಎಂಬಾಡಿ, ಕರ್ಷಣಿಪಳ್ಳಿ, ಮುದುಗಲ್ಲಪಳ್ಳಿ, ಮೂಗವಾಡಿ, ನೆಲ್ಲಾಳ, ಪುದುಪಟ್ಲ, ಪುಂಗನೂರು ಎಂಬ ಗ್ರಾಮಗಳೂ; ಕೊಯಿಮತ್ತೂರದ ಅವನಾಸಿ ತಾಲ್ಲೂಕಿನಲ್ಲಿ—ಅವನಾಸಿ ಮುಂತಾದ ಗ್ರಾಮಗಳೂ; ಗೋಬಿಚೆಟ್ಟಿಪಾಳ್ಯದಲ್ಲಿ—ದಣ್ಣಾಯಕನ ಕೊಟ್ಟೂರು, ಶಿವಾಳ್ಯ ಮುಂತಾದವುಗಳೂ, ಕೊಳ್ಳೆಗಾಲ ತಾಲ್ಲೂಕೂ; ಕಡಪಾ ಜಿಲ್ಲೆಯಲ್ಲಿ—ಬೆಂತಲ ಪತ್ತೂರು, ಗೋಟೂರು, ಗುರಪಾಂಡ, ಪುಷ್ಪಗಿರಿ; ಜಮ್ಮಲಮಡಗು ತಾಲ್ಲೂಕಿನಲ್ಲಿ—ದಾನವುಲಪಾಡ, ದೇವಗುಡಿ, ಪೆದ್ದಮುಡಿಯೂರು; ಕಮಲಾಪುರ ತಾಲ್ಲೂಕಿನಲ್ಲಿ—ಚೌಡೂರು ಮುಂತಾದವುಗಳೂ; ಪ್ರೊದ್ದಟೂರ ತಾಲ್ಲೂಕಿನಲ್ಲಿ—ರಾಮೇಶ್ವರ, ತಂಗಟೂರು ಮುಂತಾದವುಗಳೂ; ಇವುಗಳಲ್ಲದೆ ಸೇಲಂ ಜಿಲ್ಲೆಯಲ್ಲಿಯೂ, ಕೊಲ್ಲಾಪೂರ, ಮಿರಜಿ ಮುಂತಾದ ಸಂಸ್ಥಾನಗಳಲ್ಲಿಯೂ ನೂರಾರು ಗ್ರಾಮಗಳು ಅಚ್ಚಗನ್ನಡ ಗ್ರಾಮಗಳಿದ್ದು ನಮ್ಮ ಔದಾಸೀನ್ಯದಿಂದ

ಇವುಗಳಲ್ಲಿ ಅನೇಕ ಗ್ರಾಮಗಳು ಈಗಾಗಲೇ ನಮ್ಮ ಕೈಬಿಟ್ಟಿವೆ, ಮತ್ತು ಅನೇಕ ಗ್ರಾಮಗಳು ಕೈಬಿಟ್ಟುಹೋಗುತ್ತಲಿವೆ. ಇದನ್ನು ಕೇಳಿ ಯಾವ ಕರ್ಣಾಟಕಾಭಿಮಾನಿಯ ಹೃದಯವು ಜರ್ರನೆ ಜರಕೊಳ್ಳಲಿಕ್ಕಿಲ್ಲ!

ವಾಙ್ಮಯವನ್ನು ಬೆಳೆಯಿಸುವುದೆಂದರೆ ಉತ್ಕೃಷ್ಟವಾದ ಗ್ರಂಥಗಳನ್ನು ಬರೆದರೆ ತೀರಿತೆಂದು ಕೆಲವರ ತಿಳಿವಳಿಕೆ; ಇದು ತಪ್ಪು. ಪೂಜಾರಿಯು ಪರಿವಾರ ಸಮೇತನಾಗಿಯೇ ಪೂಜೆಯನ್ನು ಸಾಂಗಗೊಳಿಸುವಂತೆ ನಾವು ನಮ್ಮ ಪರಿವಾರ ಸಮೇತರಾಗಿಯೇ ವಾಗ್ದೇವತೆಯ ಪೂಜೆಯನ್ನು ಸಾಂಗಗೊಳಿಸಬೇಕಾಗುತ್ತದೆ. ಮುದ್ರಕರು, ಪುಸ್ತಕ ಮಾರುವವರು, ಇವರೇ ಮುಂತಾದವರು ನಮ್ಮ ಪರಿವಾರ. ಲಘು ಪುಸ್ತಕ ಮಾಲೆ, ಮಧ್ಯಮ ಪುಸ್ತಕ ಮಾಲೆ, ಉದಾತ್ತ ಗ್ರಂಥ ಮಾಲೆ ಮುಂತಾದವುಗಳನ್ನು ಹೊರಡಿಸಿ ನಾವು ವಾಙ್ಮಯದ ಪ್ರಕಾಶವನ್ನು ಮಾಡಬೇಕು. ಕರ್ನಾಟಕವನ್ನೆಲ್ಲ ವಾಚನಾಲಯಗಳ ಜಾಳಿಗೆಯಿಂದ ತುಂಬಿಬಿಡಬೇಕು. ವಾಚನಾಲಯಗಳೆಂದರೆ ಕರ್ನಾಟಕತ್ವದ ವಿದ್ಯುಚ್ಛಕ್ತಿಯನ್ನೊಯ್ಯುವ ತಂತಿಗಂಬಗಳು. ಆದರೆ ಇವೆಲ್ಲ ಕಾರ್ಯಗಳು ಜರುಗಬೇಕಾದರೆ, ನಾವು ಮುಂದೆ ಅಭಿಮಾನವನ್ನು ಜಾಗ್ರತಪಡಿಸಬೇಕು. ಅದಕ್ಕೋಸ್ಕರ ಪ್ರಚಾರಕರು ಸತತವಾಗಿ ಕರ್ನಾಟಕವನ್ನು ಸುತ್ತುತ್ತಿರಬೇಕು.

ಚತುರ್ಮುಖವಾದ ಕರ್ನಾಟಕವು ಏಕಮುಖವಾಗಬೇಕಾಗಿದೆ. ಈಗ ಅದರ ನಾಲ್ಕು ಮೋರೆಗಳನ್ನು ಏಕಮುಖವಾಗಿ ಮಾಡುವುದಕ್ಕೋಸ್ಕರ ಅಖಿಲ ಕರ್ನಾಟಕ ವಿಶ್ವವಿದ್ಯಾಲಯವು ಅವಶ್ಯವಾಗಿ ಬೇಕಾಗಿದೆ. ಈಗ ನಮ್ಮ ಪ್ರಾಂತವು ನಾಲ್ಕು ವಿಶ್ವವಿದ್ಯಾಲಯಗಳಿಗೆ ಅಧೀನವಾಗಿದೆ. ನಾಲ್ಕು ಕಡೆಗೆ ನಾಲ್ಕು ತೆರದ ಪಠ್ಯ ಪುಸ್ತಕಗಳು, ನಾಲ್ಕು ತೆರದ ಶೈಲಿಗಳು. ಈ ಪರಿಸ್ಥಿತಿಯು ಎಲ್ಲಿಯ ವರೆಗೆ ದೂರವಾಗುವದಿಲ್ಲವೋ ಅಲ್ಲಿಯ ವರೆಗೆ ನಮ್ಮ ವಾಙ್ಮಯಕ್ಕೆ ಗಂಡಾಂತರವು ತಪ್ಪಿಲ್ಲ. ಈ ಗಂಡಾಂತರದ ಕಲ್ಪನೆಯು ನಮ್ಮ ವಾಙ್ಮಯ ಭಕ್ತರಲ್ಲಿ ಸಾಕಾದಷ್ಟು ಇಲ್ಲದಿರುವುದು ಶೋಚನೀಯವಾದ ಸಂಗತಿ. ಕರ್ನಾಟಕದ ಸಂಸ್ಕೃತಿಯಲ್ಲಿ ಏಕರೂಪತೆಯುಂಟಾಗಬೇಕಾದರೆ ನಾವು ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸದೆ ಗತ್ಯಂತರವಿಲ್ಲ. ಅದು ಸ್ಥಾಪಿತವಾಗುವ ವರೆಗೆ ನಮ್ಮ ಕನ್ನಡ ವಾಙ್ಮಯದ ಅಭಿವೃದ್ಧಿಯು ಕುಂಟುತ್ತಲೇ ಸಾಗುವುದು. ಆದುದರಿಂದ, ಕನ್ನಡಿಗರೇ ಏಳಿರಿ, ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕೋಸ್ಕರ ಟೊಂಕಕಟ್ಟಿರಿ. ಏಕೆಂದರೆ, ಅದೇ ನಮ್ಮ ಸಾಹಿತ್ಯದೇವತೆಯ ಮುಖ್ಯ ಪೀಠ. ಅಖಂಡ ಕರ್ನಾಟಕ ವಿಶ್ವವಿದ್ಯಾಲಯವಿಲ್ಲದ ವರೆಗೆ ನಮ್ಮ ಸಾಹಿತ್ಯದೇವತೆ ಪದಭ್ರಷ್ಟೆ; ಅದಾದ ಮೇಲೆಯೇ ಅವಳ ಪ್ರಾಣಪ್ರತಿಷ್ಠೆ.

**ಜಯ ಕರ್ನಾಟಕ ಮಾತೆ**

---

# ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನದ ಕಾರ್ಯವಿವರ

---

ಸನ್ ೧೯೩೦ನೆಯ ಇಸವಿ ಅಕ್ಟೋಬರು ತಿಂಗಳು ೭ನೆಯ ತಾರೀಖು ಮಂಗಳ ವಾರ ಪ್ರಾತಃಕಾಲ ೯ ಗಂಟೆಗೆ ಮೈಸೂರು ಅರಸು ಬೋರ್ಡಿಂಗು ಸ್ಕೂಲಿನಲ್ಲಿ ಈ ಅಧಿವೇಶನವು ನಡೆಯಿತು.

ಅಧಿವೇಶನಕ್ಕೆ ಬಂದಿದ್ದವರು—

ಮ|| ರಾ|| ಗಳಾದ:—೧. ಆಲೂರು ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ., ಧಾರವಾಡ, ೨. ಎಚ್. ಚೆನ್ನಕೇಶವಯ್ಯಂಗಾರ್ಯರು, ಧಾರವಾಡ, ೩. ನಾರಾಯಣ ಶ್ರೀನಿವಾಸ ರಾಜ ಪುರೋಹಿತರು, ಧಾರವಾಡ, ೪. ರಂಗಪ್ಪ ಭೀಮಪ್ಪ ಪೋತ್ದಾರ್, ಬಿ.ಎ., ಕಾರವಾರ, ೫. ಬಿ. ಎಸ್. ಚಿಟ್ಟಗೇರಿ, ಬೆಳಗಾಂವಿ, ೬. ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ, ಬನಹಟ್ಟಿ, ೭. ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರೀ, ಕೊಪ್ಪಳ, ೮. ಬೇಲೂರು ಕೇಶವದಾಸರು, ಮೈಸೂರು, ೯. ಎನ್. ನರಸಿಂಹಮೂರ್ತಿಗಳು, ಎಂ.ಎ., ಬಿ.ಎಲ್., ಮೈಸೂರು, ೧೦. ಎಸ್. ಜಿ. ಬಿಂದೂರಾಯರು, ಮೈಸೂರು, ೧೧. ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಮೈಸೂರು, ೧೨. ಪಂಡಿತ ಶ್ರೀನಿವಾಸರಾಘವಾಚಾರ್ಯರು, ಮೈಸೂರು, ೧೩. ಟಿ. ಅಪ್ಪೂರಾಯರು, ಬಿ.ಎ , ಬಿ.ಎಲ್ , ಬೆಂಗಳೂರು, ೧೪. ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ., ಬೆಂಗಳೂರು, ೧೫. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಬೆಂಗಳೂರು, ೧೬. ತಿರುಮಲೆ ತಾತಾಚಾರ್ಯ ಶರ್ಮರು, ಬೆಂಗಳೂರು, ೧೭. ಕಡಬದ ನಂಜುಂಡ ಶಾಸ್ತ್ರಿಗಳು, ಬೆಂಗಳೂರು, ೧೮. ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಬೆಂಗಳೂರು, ೧೯. ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ., ಬೆಂಗಳೂರು, ೨೦. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಬೆಂಗಳೂರು, ೨೧. ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ., ಬೆಂಗಳೂರು, ೨೨. ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಬೆಂಗಳೂರು, ೨೩. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಬೆಂಗಳೂರು, ೨೪. ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್., ಬೆಂಗಳೂರು, ೨೫. ವಿ. ಸೀತಾರಾಮಯ್ಯನವರು, ಎಂ.ಎ., ಬೆಂಗಳೂರು, ೨೬. ಕೆ. ಸಂಪದ್ಗಿರಿರಾಯರು, ಎಂ.ಎ., ಬೆಂಗಳೂರು, ೨೭. ಎಚ್. ಹನುಮಂತರಾಯರು, ಮಂದಗೆರೆ, ೨೮. ಚಾ. ವೆಂಕಟರಮಣಶಾಸ್ತ್ರಿಗಳು, ಚಾಮರಾಜನಗರ, ೨೯. ಎಂ. ಎನ್. ಗೋಪಾಲರಾಯರು, ಕೋಲಾರದ ಗಣಿಗಳು, ೩೦. ಡಿ. ಕೊಂಗಾಡಿಯಪ್ಪನವರು, ದೊಡ್ಡಬಳ್ಳಾಪುರ.

೧. ಈ ವಾರ್ಷಿಕಾಧಿವೇಶನಕ್ಕೆ ಸಮ್ಮೇಳನದ ಅಧ್ಯಕ್ಷರಾದ ಶ್ರೀಮಾನ್ ಆಲೂರು ವೆಂಕಟರಾಯರವರು ಅಧ್ಯಕ್ಷರಾಗಿರಬೇಕೆಂಬ ಸಲಹೆಯು ಸರ್ವಾನುಮತದಿಂದ ಅಂಗೀಕೃತವಾಯಿತು.

೨. ಶುಕ್ಲ ಸಂವತ್ಸರದ ವಾರ್ಷಿಕ ವರದಿಯನ್ನು ಓದಿದಂತೆ ಅಂಗೀಕರಿಸಲಾಯಿತು. ತರುವಾಯ, ಆ ವರುಷದ ಆಯ ವ್ಯಯದ ಲೆಕ್ಕವನ್ನು ಗೌರವ ಕೋಶಾಧ್ಯಕ್ಷರಾದ ಶ್ರೀಮಾನ್ ವೆಂಕಟನಾರಾಯಣಪ್ಪನವರು ಓದಿ ವಿವರಿಸಿ ಹೇಳಿದರು. ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

ಈ ಲೆಕ್ಕಗಳನ್ನು ಪರಿಶೋಧನೆ ಮಾಡಿಕೊಟ್ಟುದಕ್ಕಾಗಿ ಬೆಂಗಳೂರಿನ ಮ॥ ರಾ॥ ಕೆ. ಎಸ್. ಕೃಷ್ಣಯ್ಯರ್, ಬಿ.ಎ. ಅವರಿಗೆ ಪರಿಷತ್ತಿನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಅರ್ಪಿಸಬೇಕೆಂದು ಸರ್ವಾನುಮತದಿಂದ ತೀರ್ಮಾನಿಸಲಾಯಿತು.

ಆಲೋಚ್ಯ ವಿಷಯಗಳಲ್ಲಿ, "ಮುಂದಿನ ವರ್ಷಕ್ಕೆ ಆಯ ವ್ಯಯ ಶೋಧಕರನ್ನು ನಿಯಮಿಸಬೇಕು" ಎಂಬ ಶ್ರೀಮಾನ್ ಚೆನ್ನಕೇಶವಯ್ಯಂಗಾರ್ಯರವರ ಸಲಹೆಯನ್ನು ಚರ್ಚಿಸಿ, ಈಗ ಅನುಸರಿಸುತ್ತಿರುವ ಕ್ರಮವನ್ನೇ ಮುಂದೆಯೂ ಅನುಸರಿಸತಕ್ಕುದೆಂದು ತೀರ್ಮಾನಿಸಲಾಯಿತು.

೩. ಪ್ರಮೋದ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿಯನ್ನು ಗೌರವ ಕೋಶಾಧ್ಯಕ್ಷರು ಓದಿದರು. ಅದು ಸರ್ವಾನುಮತದಿಂದ ಅಂಗೀಕೃತವಾಯಿತು. (ಈ ಪಟ್ಟಿಯನ್ನು ಮುಂದೆ ಕೊಟ್ಟಿದೆ.)

೪. ದಿವಾನ್ ಸಾಹೇಬರವರಾದ ರಾಜಕಾರ್ಯಪ್ರಸಕ್ತ, ದಿವಾನ್ ಬಹಾದ್ದೂರ್ ಶ್ರೀಮಾನ್ ಎಂ. ಎನ್. ಕೃಷ್ಣರಾವ್, ಬಿ.ಎ. ಅವರು ಪರಿಷತ್ತಿಗೆ ಕಾಣಿಕೆಯಾಗಿ ಕಳುಹಿಸಿದ ಒಂದು ನೂರು ರೂಪಾಯಿಗಳನ್ನು ವಂದನಾ ಪೂರ್ವಕವಾಗಿ ಅಂಗೀಕರಿಸಬೇಕೆಂದೂ, ಆ ಮಹನೀಯರನ್ನು ಪರಿಷತ್ತಿನ **ಸಹಾಯಕ**ರನ್ನಾಗಿ ಸ್ವೀಕರಿಸಬೇಕೆಂದೂ, ಈ ವಿಷಯದಲ್ಲಿ ಅವರಿಗೆ ಉಚಿತವಾದ ಪತ್ರವನ್ನು ಬರೆಯಬೇಕೆಂದೂ ತೀರ್ಮಾನವಾಯಿತು.

೫. ಶ್ರೀಯುತ ಸಂಗಪುರಂ ವೆಂಕಟೇಶಯ್ಯಂಗಾರ್ಯರವರು ಉತ್ಸಾಹದಿಂದಲೂ ವಿಚಕ್ಷಣತೆಯಿಂದಲೂ ದಕ್ಷತೆಯಿಂದಲೂ ಪರಿಷತ್ತಿನ ಕಾರ್ಯದರ್ಶಿತ್ವವನ್ನು ನಿರ್ವಹಿಸಿದುದಕ್ಕಾಗಿ ಅವರಿಗೆ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸಬೇಕೆಂದು ಸರ್ವಾನುಮತದಿಂದ ಅಂಗೀಕರಿಸಲಾಯಿತು.

೬. ಶ್ರೀಮದ್ಯುವರಾಜರವರು ಮುಂದೆಯೂ ಈಗಿನಂತೆಯೇ ಪರಿಷತ್ತಿನ ಅಧ್ಯಕ್ಷ ಪದವಿಯನ್ನಲಂಕರಿಸುವಂತೆ ವಿಜ್ಞಾಪಿಸಿಕೊಳ್ಳತಕ್ಕುದೆಂದೂ, ಶ್ರೀಮಾನ್ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರವರನ್ನು ಈಗಿನಂತೆಯೇ ಮುಂದೆಯೂ ಉಪಾಧ್ಯಕ್ಷರನ್ನಾಗಿ ಅಂಗೀಕರಿಸತಕ್ಕುದೆಂದೂ ಸರ್ವಾನುಮತದಿಂದ ತೀರ್ಮಾನಿಸಲಾಯಿತು.

ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ಪರಿಷತ್ತಿನ ಗೌರವ ಕಾರ್ಯದರ್ಶಿಯವರಾಗಿಯೂ, ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಗೌರವ ಕೋಶಾಧ್ಯಕ್ಷರಾಗಿಯೂ 'ಬ್ಯಾಲೆಟ್' ಮೂಲಕ ಬಹು ಮತದಿಂದ ಚುನಾಯಿಸಲ್ಪಟ್ಟರು.

೭. ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಸಂಖ್ಯೆಯ ವಿಚಾರದಲ್ಲಿ ಪರಿಷತ್ತಿನ ನಿಬಂಧನೆಯನ್ನು ತಿದ್ದುಪಡಿ ಮಾಡುವ ವಿಷಯವಾಗಿ ಬಂದಿದ್ದ ಸೂಚನೆಯನ್ನೂ, ಶ್ರೀಮಾನ್ ಎಚ್. ಚೆನ್ನಕೇಶವಯ್ಯಂಗಾರ್ಯರು ಕೊಟ್ಟಿದ್ದ ಸೂಚನೆಯನ್ನೂ ಚರ್ಚೆ ಮಾಡಿ ಈ ಕೆಳಗೆ ಕೊಟ್ಟಿರುವಂತೆ ನಿರ್ಣಯಿಸಲಾಯಿತು:—

೧೦ನೆಯ ನಿಬಂಧನೆಯಲ್ಲಿ, ೩ನೆಯ ಪಙ್ಕ್ತಿಯಲ್ಲಿ, 'ಮೂವತ್ತು' ಎಂಬುದಕ್ಕೆ ಬದಲಾಗಿ 'ಇಪ್ಪತ್ತೊಂಬತ್ತು' ಎಂದೂ, ೬ನೆಯ ಪಙ್ಕ್ತಿಯಲ್ಲಿ, 'ಐವರು' ಎಂಬುದಕ್ಕೆ ಬದಲಾಗಿ 'ಮೂವರು' ಎಂದೂ,

೯ನೆಯ ನಿಬಂಧನೆಯಲ್ಲಿ, 'ಮೂವತ್ತೊಂದು ಮಂದಿ ಸಾಧಾರಣ ಸದಸ್ಯರು' ಎಂಬುದಕ್ಕೆ ಬದಲಾಗಿ 'ಇಪ್ಪತ್ತೊಂಬತ್ತು ಮಂದಿ ಸಾಧಾರಣ ಸದಸ್ಯರೂ, ಮತ್ತು ಅರಮನೆಯ ಇಲಾಖೆಯಿಂದ ಆರಿಸಿದ ಸದಸ್ಯರೊಬ್ಬರೂ' ಎಂದೂ ತಿದ್ದುಪಡಿ ಮಾಡತಕ್ಕದ್ದು.

೮. ಮೇಲಣ ವಿಷಯವು ನಿರ್ಣೀತವಾದ ಮೇಲೆ 'ಬ್ಯಾಲೆಟ್' ಮೂಲಕ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಚುನಾವಣೆಯಾಯಿತು.

ಮ|| ರಾ| ಟಿ. ಎಸ್. ವೆಂಕಣ್ಣಯ್ಯನವರನ್ನೂ ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರನ್ನೂ ಮತಗಳ (ವೋಟುಗಳ) ಎಣಿಕೆಗೆ ನಿಯಮಿಸಲಾಯಿತು. ಇವರ ಮತಗಳನ್ನೆಣಿಸಿ ಕೊಟ್ಟ ಪಟ್ಟಿಯಿಂದ ಈ ಕೆಳಗೆ ಕಂಡ ಸದಸ್ಯರು ಚುನಾವಣೆಯಾದರು :—

ಮೈಸೂರು ಪ್ರಾಂತಕ್ಕೆ—

೧. ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಬೆಂಗಳೂರು)
೨. ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. (ಬೆಂಗಳೂರು)
೩. ,, ತಿರುಮಲೆ ತಾತಾಚಾರ್ಯ ಶರ್ಮರು (ಬೆಂಗಳೂರು)
೪. ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. (ಬೆಂಗಳೂರು)
೫. ,, ಕೆ. ಸಂಪದ್ಗಿರಿರಾಯರು, ಎಂ.ಎ. (ಬೆಂಗಳೂರು)
೬. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೭. ,, ವಿ. ಸೀತಾರಾಮಯ್ಯನವರು, ಎಂ.ಎ. (ಬೆಂಗಳೂರು)
೮. ,, ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ. (ಬೆಂಗಳೂರು)
೯. ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. (ಬೆಂಗಳೂರು)
೧೦. ,, ಮಾಸ್ತಿ ವೆಂಕಟೇಶಯ್ಯಂಗಾರ್ಯರು, ಎಂ.ಎ. (ಬೆಂಗಳೂರು)
೧೧. ,, ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. (ಬೆಂಗಳೂರು)
೧೨. ,, ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ. (ಬೆಂಗಳೂರು)

ಮುಂಬಯಿ ಪ್ರಾಂತಕ್ಕೆ—

೧. ಮ|| ರಾ|| ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೨. ,, ನಾರಾಯಣ ಶ್ರೀನಿವಾಸ ರಾಜಪುರೋಹಿತರು (ಧಾರವಾಡ)

೩. ಮ|| ರಾ|| ಎಚ್. ಚೆನ್ನಕೇಶವಯ್ಯಂಗಾರ್ಯರು (ಧಾರವಾಡ)
೪. ,, ನಾರಾಯಣಸ್ವಾಮಿರಾವ್ ಲೋಕೂರ, ಬಿ.ಎ., ಎಲ್ಎಲ್.ಬಿ. (ಬೆಳಗಾಂವಿ)
೫. ,, ರಾವ್‌ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್ಎಲ್.ಬಿ. (ಬಿಜಾಪುರ)
೬. ,, ರಂಗಪ್ಪ ಭೀಮಪ್ಪ ಪೋತ್ದಾರ್, ಬಿ.ಎ. (ಕಾರವಾರ)
೭. ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. (ಬೆಳಗಾಂವಿ)
೮. ,, ಕೃಷ್ಣಾಜಿ ಗೋವಿಂದ ಗೆಜ್ಜಿ, ಬಿ.ಎ., ಎಲ್ಎಲ್.ಬಿ. (ಬೆಳಗಾಂವಿ)
೯. ,, ಬಿ. ಎಸ್. ಚೆಟ್ಟಿಗೇರಿ (ಬೆಳಗಾಂವಿ)




ಉತ್ತರ ಕರ್ಣಾಟಕಕ್ಕೆ—

೧. ಮ|| ರಾ|| ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)
೨. ,, ಕೆ. ಜಿ. ಕುಂದಣಗಾರ, ಎಂ.ಎ. (ಕೊಲ್ಹಾಪುರ)

ಹೈದರಾಬಾದು ಸಂಸ್ಥಾನಕ್ಕೆ—

೧. ಮ|| ರಾ|| ಎಂ. ಎಸ್. ಲಕ್ಷ್ಮೀನಾರಾಯಣರಾಯರು, ಬಿ.ಎ., ಎಲ್ಎಲ್.ಬಿ. (ಹೈದರಾಬಾದು)
೨. ,, ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರೀ (ಕೊಪ್ಪಳ)

ಮದರಾಸು ಮತ್ತು ಕೊಡಗು ಪ್ರಾಂತಗಳ ಸದಸ್ಯರು ಯಾರೂ ಬರಲಿಲ್ಲವಾದುದರಿಂದ ಹಿಂದಣ ವರ್ಷದ ಸದಸ್ಯರೇ ಈ ವರ್ಷವೂ ಸದಸ್ಯರಾಗಿರತಕ್ಕುದೆಂದು ತೀರ್ಮಾನಿಸಲಾಯಿತು.—

ಮದರಾಸು ಪ್ರಾಂತಕ್ಕೆ—

೧. ಮ|| ರಾ|| ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. (ಬಳ್ಳಾರಿ)
೨. ,, ಎನ್. ರಾಜಗೋಪಾಲ ಕೃಷ್ಣರಾಯರು (ಉಡಿಪಿ)
೩. ,, ಬೆನಗಲ್ ರಾಮರಾಯರು, ಎಂ.ಎ., ಎಲ್ಎಲ್.ಬಿ. (ಮದರಾಸು)

ಕೊಡಗು ಪ್ರಾಂತಕ್ಕೆ—

೧. ಮ|| ರಾ|| ಎನ್. ಆರ್. ಸುಬ್ಬಣ್ಣಯ್ಯನವರು (ನಿಡತ)

೯. ಮ|| ರಾ|| ವಿ. ಬಿ. ಆಲೂರ್, ಬಿ.ಎ., ಎಲ್ಎಲ್.ಬಿ. ಅವರ ಸೂಚನೆಗಳು.—

೧. "ಧಾರವಾಡದಲ್ಲಿ ವರ್ಷಕ್ಕೆ ಕನಿಷ್ಠಪಕ್ಷ ಎರಡಾವೃತ್ತಿ ಕಾರ್ಯಕಾರಿ ಮಂಡಲದ ಸಭೆಗಳನ್ನು ಕೂಡಿಸಬೇಕು."

ಇದಕ್ಕೆ ಶ್ರೀಮಾನ್ ತಾತಾಚಾರ್ಯ ಶರ್ಮರವರು ಸೂಚಿಸಿದ ಬದಲಾವಣೆಯು ಸರ್ವರಿಂದಲೂ ಅಂಗೀಕೃತವಾಗಿ,

**"ಧಾರವಾಡದಲ್ಲಿ ವರ್ಷಕ್ಕೆ ಕಾರ್ಯಕಾರಿ ಮಂಡಲದ ಸಭೆಯೊಂದನ್ನು ಕೂಡಿಸಬೇಕು"** ಎಂದು ತೀರ್ಮಾನವಾಯಿತು.

೨. "ಕಾರ್ಯದರ್ಶಿಗಳಲ್ಲೊಬ್ಬರು ಬೆಂಗಳೂರಿನ ಹೊರಗಿನವರು ಇರಬೇಕು ; ಧಾರವಾಡದ ಪೈಕಿ ಒಬ್ಬರಿದ್ದರೆ ಒಳಿತು."

ಈ ಸೂಚನೆಯನ್ನು ಸೂಚಕರು ಹಿಂದಕ್ಕೆ ತೆಗೆದುಕೊಂಡರು.

೩. "ಸಾಹಿತ್ಯ ಪರಿಷತ್ಪತ್ರಿಕೆಯು ಸರಿಯಾಗಿ ನಡೆಯುವ ಬಗ್ಗೆ ಧಾರವಾಡದವರಿಬ್ಬರು, ಮೈಸೂರು ಪ್ರಾಂತದವರಿಬ್ಬರು, ಮಿಕ್ಕ ಕಡೆಯವರೊಬ್ಬರು—ಹೀಗೆ ಐದು ಜನರ ಉಪಮಂಡಳವನ್ನು ನಿಯಮಿಸಬೇಕು."

ಈ ಸೂಚನೆಗೆ ಪ್ರತಿಯಾಗಿ, **"ಸಂಪಾದಕ ಮಂಡಲಿಯಲ್ಲಿ ಧಾರವಾಡದ ಪ್ರಾಂತದವರು ಇಬ್ಬರಾದರೂ ಇರಬೇಕು"** ಎಂದು ಬದಲಾಯಿಸಿದ ಸೂಚನೆಯನ್ನು ಸರ್ವರೂ ಅಂಗೀಕರಿಸಿದರು.

೪. "ಗಡಿ ನಾಡಿನಲ್ಲಿ ಪ್ರಚಾರದ ಬಗ್ಗೆ ಮೂರು ನಾಲ್ಕು ಜನರಿಗೆ ಪ್ರವಾಸದ ಖರ್ಚು ಕೊಡಲಿಕ್ಕೆ ಒಪ್ಪಿ ಪ್ರಚಾರ ಕಾರ್ಯ ಮಾಡುವುದಕ್ಕಾಗಿ ಕೆಲವು ಸದಸ್ಯರಿಗೆ ಬಿನ್ನಹ ಮಾಡಿಕೊಳ್ಳಬೇಕು."

ಈ ಸೂಚನೆಯು ಚರ್ಚೆಯಾಗಿ, **"ಈ ವರ್ಷ ಪರಿಷತ್ ಪ್ರಚಾರ ಕಾರ್ಯವನ್ನು ಮಾಡುವುದಕ್ಕೆ ನಾಲ್ಕು ಮಂದಿ ಗೌರವ ಪ್ರಚಾರಕರನ್ನು ನೇಮಕ ಮಾಡಬೇಕು"** ಎಂದು ಸರ್ವಾನುಮತದಿಂದ ಅಂಗೀಕೃತವಾಯಿತು.

ಪ್ರಚಾರ ಕಾರ್ಯಕ್ಕಾಗಿ ಆಯ ವ್ಯಯದ ಅಂದಾಜು ಪಟ್ಟಿಯಲ್ಲಿ ಕೊಟ್ಟಿರುವ ೨೫೦ ರೂಪಾಯಿಗಳನ್ನು ಈ ಪ್ರಚಾರ ಕಾರ್ಯಕ್ಕಾಗಿ ಉಪಯೋಗಿಸಬಹುದೆಂದೂ, ಪ್ರಚಾರಕರನ್ನು ನೇಮಕ ಮಾಡಬೇಕಾದ ಉದ್ದೇಶಗಳು ಮುಂದೆ ಹೇಳುವವುಗಳಾಗಿರಬೇಕೆಂದೂ ತೀರ್ಮಾನಿಸಲಾಯಿತು :—

೧. ಕರ್ಣಾಟಕ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಜನರಿಗೆ ಆದರವನ್ನುಂಟುಮಾಡುವುದು.

೨. ಸಾಹಿತ್ಯ ಪರಿಷತ್ತಿಗೆ ಸದಸ್ಯರನ್ನೂ ಪರಿಷತ್ಪತ್ರಿಕೆಗೆ ಚಂದಾದಾರರನ್ನೂ ದೊರೆಯಿಸಿ ಕೊಡುವುದು.

**ಸಿ. ಕೆ. ವೆಂಕಟರಾಮಯ್ಯ**
ಗೌ|| ಕಾರ್ಯದರ್ಶಿ.

**ಆಲೂರ ವೆಂಕಟರಾವ್**
ಸಭಾಪತಿ.

---

# ಪ್ರಮೋದ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿ

## ಆಯ

| | ಆಯ | ರೂ. ಆ. ಪೈ. |
|---|---|---|
| ೧ | ವರ್ಷಾರಂಭದ ಶಿಲ್ಕು .. | ೧೫,೭೪೭—೯—೫ |
| ೨ | ತಿಂಗಳುಗಟ್ಟಲೆ ಮೈಸೂರು ಸರಕಾರದಿಂದ ಬರುವ ಸಹಾಯ ದ್ರವ್ಯ .. | ೧,೮೦೦—೦—೦ |
| ೩ | ಚಂದಾ ಮೊಬಲಗು, ಸದಸ್ಯರಿಂದ (ಸುಮಾರು) | ೩೬೦—೦—೦ |
| ೪ | ಪರಿಷತ್ಪತ್ರಿಕೆಯ ಚಂದಾ, ವರ್ಗಣಿದಾರರಿಂದ (ಸುಮಾರು) .. | ೧೬೦—೦—೦ |
| ೫ | ಸದಸ್ಯರುಗಳಿಂದ ಬರಬೇಕಾದ ಚಂದಾ ಹಣದ ಪೈಕಿ ವಸೂಲಾಗಬಹುದಾದುದು (ಸುಮಾರು) | ೨೦೦—೦—೦ |
| ೬ | ಪುಸ್ತಕಗಳ ಮಾರಾಟದಿಂದ (ಸುಮಾರು) .. | ೧,೦೦೦—೦—೦ |
| ೭ | ಡಿಪಾಜಟ್ಟುಗಳ ಮೇಲೆ ಬರುವ ಬಡ್ಡಿ (ಸುಮಾರು) | ೭೦೦—೦—೦ |
| ೮ | ಪಂಪ ಭಾರತಕ್ಕಾಗಿ ಕೊಟ್ಟಿರುವ ಡಿಪಾಜಟ್ಟು ಹಣ | ೧೦೦—೦—೦ |
| ೯ | ಪರಿಷತ್ತಿನಲ್ಲಿರುವ ಕಾಗದದ ಬೆಲೆ (ಸುಮಾರು) | ೧೦—೦—೦ |
| | ಒಟ್ಟು .. | ೨೦,೦೭೭—೯—೫ |

## ವ್ಯಯ

| | ವ್ಯಯ | | | ರೂ. ಆ. ಪೈ. |
|---|---|---|---|---|
| ೧ | ಸಿಬ್ಬಂದಿಯ ವೆಚ್ಚಕ್ಕಾಗಿ— | | | |
| | ಸಹಾಯಕ ಕಾರ್ಯದರ್ಶಿ, ತಿಂಗಳಿಗೆ ೫೦ ರೂ. ಮೇರೆ | | | ೧,೪೦೪—೦—೦ |
| | ಪಂಡಿತರು | ,, ೩೦ | ,, | |
| | ಗುಮಾಸ್ತೆ | ,, ೨೫ | ,, | |
| | ಜವಾನ | ,, ೧೨ | ,, | |
| ೨ | ಮನೆಯ ಬಾಡಿಗೆ (೩೦ ರೂ. ಮೇರೆ) .. | | | ೩೬೦—೦—೦ |
| ೩ | ದೀಪದ ವೆಚ್ಚಕ್ಕಾಗಿ .. | | | ೪೦—೦—೦ |
| ೪ | ಬರವಣಿಗೆಯ ಸಾಮಗ್ರಿ .. | | | ೧೦೦—೦—೦ |
| ೫ | ಅಂಚೆಯ ಹಾಸಲಿಗಾಗಿ .. | | | ೨೦೦—೦—೦ |
| ೬ | ಮುದ್ರಣದ ವೆಚ್ಚ ಮತ್ತು ಕಾಗದ .. | | | ೨,೫೦೦—೦—೦ |
| ೭ | ಪಂಪಭಾರತದ ಕಾರ್ಯಕ್ಕಾಗಿ .. | | | ೫೦—೦—೦ |
| ೮ | ಪುಸ್ತಕ ಭಾಂಡಾಗಾರಕ್ಕಾಗಿ .. | | | ೩೫೦—೦—೦ |
| ೯ | ವಾಚನ ಮಂದಿರಕ್ಕಾಗಿ .. | | | ೧೦೦—೦—೦ |
| ೧೦ | ಬಹುಮಾನಗಳಿಗಾಗಿ .. | | | ೨೫೦—೦—೦ |
| ೧೧ | ಪ್ರಚಾರ ಕಾರ್ಯಕ್ಕಾಗಿ .. | | | ೨೫೦—೦—೦ |
| ೧೨ | ಸಮ್ಮೇಳನದ ವೆಚ್ಚಕ್ಕಾಗಿ .. | | | ೪೦೦—೦—೦ |
| ೧೩ | ವಿಜ್ಞಾನ ಸಂಬಂಧವಾದ ಪುಸ್ತಕಗಳ ಪ್ರಕಟನೆಗಾಗಿ | | | ೨,೦೦೦—೦—೦ |
| ೧೪ | ಪರಿಷತ್ತಿನ ಕಟ್ಟಡಕ್ಕಾಗಿ .. | | | ೧೨,೦೦೦—೦—೦ |
| ೧೫ | ಇತರ ವೆಚ್ಚಗಳಿಗಾಗಿ .. | | | ೭೩—೯—೫ |
| | ಒಟ್ಟು .. | | | ೨೦,೦೭೭—೯—೫ |

ಸಿ. ಕೆ. ವೆಂಕಟರಾಮಯ್ಯ, ಗೌ॥ ಕಾರ್ಯದರ್ಶಿ.

# ಚಾಳುಕ್ಯ ವಿಕ್ರಮನ ಪಟ್ಟಬಂಧದ ತೇದಿ



ಕಂ|| ಶ್ರೀ ವಲ್ಲಭನಸಹಿತ ಜಯ
ಶ್ರೀ ವಲ್ಲಭನುದಧಿ ಪರಿವೃತಾಖಿಳ ಧಾತ್ರೀ।
ಶ್ರೀ ವಲ್ಲಭನಮಳ ಯಶಃ
ಶ್ರೀ ವಲ್ಲಭ ಚಕ್ರವರ್ತಿ ವಿಕ್ರಮ ಭೂಪಂ||[1]

'ಜಯಕರ್ನಾಟಕ'ದ ಚೈತ್ರ ಮಾಸದ (VIII—೬) ಸಂಚಿಕೆಯಲ್ಲಿ ಪ್ರಕಟವಾದ 'ಶ್ರೀಮಚ್ಚಾಳುಕ್ಯ ವಿಕ್ರಮ ವರುಷ' ಎಂಬೊಂದು ಲೇಖದಲ್ಲಿ ಶ್ರೀಮಾನ್ ರಾಜ ಪುರೋಹಿತರವರು ಶಾ. ಶ. ೯೯೮ನೆಯ ನಳ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮೀ ಬೃಹಸ್ಪತಿ ವಾರದಂದೇ ತ್ರಿಭುವನಮಲ್ಲ ಚಾಳುಕ್ಯ ವಿಕ್ರಮಾದಿತ್ಯನಿಗೆ ಪಟ್ಟಬಂಧವಾಗಿರಬೇಕೆಂದು ನಿರ್ಣಯಿಸಿರುವರಷ್ಟೆ. ಆದರೆ, ಹಾಗೆ ನಿರ್ಧರಿಸುವಲ್ಲಿ ಅವರು ಆಧಾರಿಸಿರುವ ಆ ವಡಗೇರಿಯ ಶಾಸನದಲ್ಲಿ ತೋರುವ ಒಕ್ಕಣೆಯನ್ನು ಅವರು ಯಥಾ ಶಬ್ದವಾಗಿ ಯಥಾರ್ಥವೆಂದು ಅಂಗೀಕರಿಸಿರುವರೇ ಹೊರತು, ಅದರಲ್ಲಿ ಹೇಳಿರುವ ಕಾಲ ವಿವರವು ಸರಿಯೋ ಎಂಬುದನ್ನು ಅವರು ಕೂಲಂಕಷವಾಗಿ ಪರೀಕ್ಷಿಸಿಲ್ಲ ಎಂಬುದಿಷ್ಟು ಪ್ರತ್ಯಕ್ಷವಿದೆ; ಏಕೆಂದರೆ—

(ಅ) ಶಾ. ಶ. ೯೯೮ನೆಯ ನಳ ಸಂವತ್ಸರದ ಫಾಲ್ಗುಣ ಶುದ್ಧ ೫ ಅಶ್ವಿನೀ ನಕ್ಷತ್ರದಿಂದೊಡಗೂಡಿ ಕುಜವಾರದಂದು (31ನೆಯ ಜನವರಿ 1077) ಬಂದಿದ್ದಿತಲ್ಲದೆ ಆ ಶಾಸನದಲ್ಲಿ ಹೇಳಿದ್ದ ಮೇರೆಗೆ ಬೃಹಸ್ಪತಿವಾರ ಬಂದಿದ್ದಿಲ್ಲ; ಪಟ್ಟಬಂಧಕ್ಕೆ, "ಮಂಗಳವಾರವೊಂದು ನಿಷೇಧಿಸಲ್ಪಟ್ಟಿದೆ" ಎಂದು ಇವರೇ ತಮ್ಮ ಲೇಖದಲ್ಲಿ (ಜ. ಕ.—ಪು. ೩೪೯) ಹೇಳಿರುವರಷ್ಟೆ! ಇದಲ್ಲದೆ, ರವಿವಾರ ಕುಜವಾರಗಳು ಶುಭ ಕಾರ್ಯಗಳಿಗೆ ಸಲ್ಲವೆಂದು ಚಾಳುಕ್ಯ ವಿಕ್ರಮನ ಮಗನಾದ ಮೂರನೆಯ ಸೋಮೇಶ್ವರನಿಂದ ರಚಿತವಾದ 'ಅಭಿಲಾಷಿತಾರ್ಥ ಚಿಂತಾಮಣಿ' (III—೫) ಯಲ್ಲಿಯೂ ಹೇಳಿದೆ.—

ಆದಿತ್ಯಂ ಮಂಗಲಂ ತ್ಯಕ್ತ್ವಾ ಸರ್ವೇ ವಾರಾಶ್ಶುಭಾವಹಾಃ।

(ಆ) ಪಂಚಮಿ (ಮುಖ್ಯತಃ, ಶುಕ್ಲ ಪಂಚಮಿ)ಯ ತಿಥಿ ಮಂಗಳವಾರ ಬಂದರೆ ಅದೊಂದು 'ದಗ್ಧ ಯೋಗ' ಎಂಬ ಅನಿಷ್ಟ ಘಟನೆ.—

1. ದಾವಣಗೆರೆ ನಂ. 3 (E. C. XI).

ಬುಧ ದ್ವಿತೀಯಾ ಕುಜ ಪಂಚಮಿಾ ಚ
........ದಗ್ಧ ಯೋಗಾಃ ॥[2]

ಎಂಬುದರಿಂದ ಅಂಥ ತೇದಿ ಯಾವ ಬಗೆಯ ಶುಭ ಕಾರ್ಯಗಳಿಗಾದರೂ ಸಲ್ಲದ ದಿನವೆಂದು ಬೇರೆ ಹೇಳಬೇಕೆಂದಿಲ್ಲ.

(ಇ) ಆ ಫಾಲ್ಗುಣ ಶುದ್ಧ ೫ ಸೌರ ಕುಂಭ ಮಾಸದಲ್ಲಿ ಬಂದಿದ್ದಿತೆಂಬುದು ಪ್ರತ್ಯಕ್ಷವಿದೆ; ಕುಂಭ ಮಾಸವು ರಾಜಾಭಿಷೇಚನಕ್ಕೆ ತೀರ ತ್ಯಾಜ್ಯ.—

ಭೂಪಾನಾಮಭಿಷೇಚನೇ ಗುರು ರವೀ ಶ್ರೀನಾಥ ಮಿತ್ರೋತ್ತರಾ
ರೋಹಿಣ್ಯಶ್ವಿನಿ ಶಕ್ರ ಪೌಷ್ಣ ಶಶಿನಃ ಶ್ರೇಷ್ಠಾಃ ಪ್ರಶಸ್ತಾ ಬುಧೈಃ ।
ಭಾನುರ್ಭದ್ರ ಕೃದುತ್ತರಾಯಣ ಗತಃ ಕುಂಭಾಂಗನಾ ಕರ್ಕಿಗ
ಸ್ತ್ಯಾಜ್ಯೋನ್ಯತ್ರ ತು ಮಧ್ಯಮೋತ್ರ ಕರಣಂ ಶ್ರೇಷ್ಠಂ ಸ್ಮೃತಂ ಕೌಲವಂ ॥[3]

ಆದಕಾರಣ, ಆ ವಡಗೇರಿಯ ಶಾಸನದಲ್ಲಿ ಹೇಳಿರುವ ಕಾಲ ವಿವರವು ಎಲ್ಲಿಯೋ ತಪ್ಪಾಗಿರಬೇಕು; ಇಲ್ಲವೆ, ಇವರು ಅದರಿಂದ ಮಾಡಿಕೊಂಡ ತೇದಿ ತಪ್ಪಾಗಿರಬೇಕು ಎಂಬುದಿಷ್ಟು ವ್ಯಕ್ತವಾಗುತ್ತದೆ. ಆದರೆ, ಆ ಶಾಸನದಲ್ಲಿ ಒಕ್ಕಣಿಸಿದ ತೇದಿ ತಪ್ಪಲ್ಲ, ಸರಿಯಾಗಿಯೇ ಇದೆ ಎಂದು ಈ ಮುಂದೆ ತಿಳಿವುದರಿಂದ, ಅವರು ಅದಕ್ಕೆ ಮಾಡಿಕೊಂಡ ಅರ್ಥ ಮಾತ್ರ ಸರಿಯುಲ್ಲವೆಂದೂ, ಆದುದರಿಂದ ಆ ಒಕ್ಕಣೆಯ ಅರ್ಥವು ಅನ್ಯಥಾ ಇದೆಯೆಂದೂ ನಿಷ್ಪನ್ನವಾಗುತ್ತದೆ.

ಆ ಪಟ್ಟಬಂಧವು ಯಾವಂದು ಆಗಿರಬೇಕು, ಅಲ್ಲವೆ ಆಗಿರಬಹುದು ಎಂಬುದನ್ನು ವಿಚಾರಿಸುವ ಮುಂಚೆ ಇವರು ತಮ್ಮ ಲೇಖದಲ್ಲಿ ಆ ಬಗ್ಗೆ ನೆಮ್ಮಿರುವ ಕೆಲವು ಶಾಸನಗಳನ್ನು ಪರೀಕ್ಷಿಸಿ ನೋಡೋಣ.—

(ಅ) ಹೊನ್ನಾಳಿ ನಂ. 14 (E. C. VII).—"ಚಾಳುಕ್ಯ ವಿಕ್ರಮ ಕಾಲ ೧ನೆಯ ನಳ ಸಂವತ್ಸರದ ಚೈತ್ರ ಶುದ್ಧ ೫ ಆದಿವಾರದಂದು" ಈ ಶಿಲಾ ಲೇಖವನ್ನು ಈ ಮುಂದೆ ಯಥಾ ಸ್ಥಾನದಲ್ಲಿ ವಿವೇಚಿಸುವೆನು.

(ಆ) ಅರಳೇಶ್ವರದ ಶಾಸನ.—"ಶ್ರೀಮಚ್ಚಾಳುಕ್ಯ ವಿಕ್ರಮ ಕಾಲದ ೧ನೆಯ ನಳ ಸಂವತ್ಸರದ ಚೈತ್ರ ಬಹುಳ ಪಂಚಮಿ ಮಂಗಳವಾರ ಮೇಷ ಸಂಕ್ರಾಂತಿ ವ್ಯತೀಪಾತದಂದು." ಚಾಳುಕ್ಯ ವಿಕ್ರಮ (ಚಾ. ವಿ.) ಕಾಲದ ೧ನೆಯ ನಳ ಸಂವತ್ಸರ

2. "ವಿದ್ಯಾ ಮಾಧವೀಯ" (II-೧೮).

3. 'ವಿದ್ಯಾ ಮಾಧವೀಯ' (XI-೪) ದಲ್ಲಿ 'ಗುರು' ಎಂದರೆ ಪುಷ್ಯ ನಕ್ಷತ್ರ ('ಪುಷ್ಯಃ ..........ಗುರು ದೈವತಃ'—ಅಭಿಧಾನ ಚಿಂತಾಮಣಿ, ಶ್ಲೋ. ೧೧೧); 'ರವಿ' ಎಂದರೆ ಹಸ್ತ ನಕ್ಷತ್ರ ('ಹಸ್ತಃ ಸವಿತೃ ದೈವತಃ'—ಅಭಿ. ೧೧೨); 'ಶ್ರೀನಾಥ'=ಶ್ರವಣ ('ಶ್ರವಣಃ ಪುನಃ! ಹರಿದೇವಃ'—ಅಭಿ. ೧೧೩–೧೧೪); 'ಮಿತ್ರ'=ಅನುರಾಧಾ ('ರಾಧಾನುರಾಧಾ ತು ಮೈತ್ರೀ'—ಅಭಿ. ೧೧೩); 'ಉತ್ತರಾ' ಎಂದರೆ ಉತ್ತರಾ ಫಲ್ಗುನೀ, ಉತ್ತರಾಷಾಢಾ ಮತ್ತು ಉತ್ತರಾಭಾದ್ರಾ ಎಂಬ ಉತ್ತರಾ ತ್ರಯ; 'ಶಕ್ರ'=ಜ್ಯೇಷ್ಠಾ ('ಜ್ಯೇಷ್ಠೈಂದ್ರೀ'—ಅಭಿ. ೧೧೩); 'ಪೌಷ್ಣ'=ರೇವತಿ ('ರೇವತೀ ತು ಪೌಷ್ಣಂ'—ಅಭಿ. ೧೧೫); 'ಶಶಿ'=ಮೃಗಶಿರಾ ('ಚಾಂದ್ರಮಸಂ ಮೃಗಂ'—ಅಭಿ. ೧೦೯); 'ಅಂಗನಾ' ಎಂದರೆ ಕನ್ಯಾ ಮಾಸ ಮತ್ತು 'ಕರ್ಕಿ' ಎಂದರೆ ಕರ್ಕಾಟಕ ಮಾಸ.

ವೆಂದರೆ, ಕ್ರಿ. ಶ. 1076–1077. ಈಗ ಕ್ರಿ. ಶ. 1076ನೆಯ ನಳ ಸಂವತ್ಸರದಲ್ಲಿ ಚೈತ್ರ ಬಹುಳ ೫ ಬಂದುದು ಮಾರ್ಚಿ 27ನೆಯ ತಾರೀಕು ರವಿವಾರದಂದು; ಎಂದರೆ, ಆ ವರ್ಷದ ಮೇಷ ಸಂಕ್ರಾಂತಿ (23ನೆಯ ಮಾರ್ಚಿ) ಆಗಿಹೋದ ನಾಲ್ಕು ದಿವಸಗಳ ಬಳಿಕ ತಾನೆ ಎಂಬುದರಿಂದ ಈ ಶಾಸನದಲ್ಲಿರುವ ಕಾಲ ವಿವರವು ಚಾ. ವಿ. ೧ನೆಯ ನಳ ಸಂವತ್ಸರಕ್ಕೆ ಸರಿಹೋಗುವುದಿಲ್ಲ; ಇಷ್ಟೇ ಅಲ್ಲ, ಇದೇ ಶಾಸನವನ್ನು ಕುರಿತು ಡಾ|| ಫ್ಲೀಟರು (Dr. Fleet)—"This record is really dated not in the first, but in the sixty-first year of the Chalukya Vikrama Kala"[4] ಎಂದಿರುವುದರಿಂದ ಕೂಡ ಇದು ಚಾ. ವಿ. ೬೧ನೆಯ ನಳ ಸಂವತ್ಸರದ ಶಾಸನವೇ ವಿನಾ, ಚಾ. ವಿ. ೧ನೆಯ ನಳ ಸಂವತ್ಸರದ ಶಾಸನವಲ್ಲ. ಚಾ. ವಿ. ೬೧ನೆಯ ನಳ ಸಂವತ್ಸರವೆಂದರೆ, ಕ್ರಿ. ಶ. 1136–37 ಮತ್ತು ಆ ನಳ ಸಂವತ್ಸರದಲ್ಲಿ ಚೈತ್ರ ಬಹುಳ ಪಂಚಮಿಯ ತಿಥಿ (24ನೆಯ ಮಾರ್ಚಿ 1136) ಕುಜವಾರ ಮೇಷ ಸಂಕ್ರಾಂತಿಯಂದೇ ಬಂದಿದ್ದಿತು.

(ಇ) ಶಿಕಾರಿಪುರ ನಂ. 292 (E. C. VII)—"ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ಪ್ರಥಮ ನಳ ಸಂವತ್ಸರದ ಪುಷ್ಯ ಬಹುಳ ೩ ಸೋಮವಾರಮುತ್ತರಾಯಣ ಸಂಕ್ರಾಂತಿ ಪರ್ಬ್ಬ ನಿಮಿತ್ತದಿಂ." ಕ್ರಿ. ಶ. 1076(ಶಾ. ಶ. ೯೯೮)ನೆಯ ನಳ ಸಂವತ್ಸರದ ಪುಷ್ಯ ಬಹುಳ ೩, ಎಂದರೆ ಡಿಶಂಬರ್ 16ನೆಯ ತಾರೀಖು ಶುಕ್ರವಾರ ಎಂಬುದರಿಂದ, ಅಂದು ಈ ಶಾಸನದಲ್ಲಿರುವ ವಾರವೂ ಸರಿಬರುವುದಿಲ್ಲ; ಉತ್ತರಾಯಣ ಸಂಕ್ರಾಂತಿಗೆ ಇನ್ನೂ ಹಲವು ದಿನಗಳಿವೆ; ಆದರೆ ಈ ಶಾಸನದಲ್ಲಿರುವ 'ಪುಷ್ಯ ಬಹುಳ ೩' ಎಂಬಲ್ಲಿ ತಿಥಿಯ ಸಂಖ್ಯೆ ಅಂಕೆಯಲ್ಲಿ ತಾನೆ ಕೊರೆದಿದೆಯಲ್ಲದೆ ಅಕ್ಷರಗಳಿಂದಲ್ಲ ಎಂಬುದರಿಂದ, ಅದು ಬಹುಶಃ 'ಪುಷ್ಯ ಬಹುಳ ೧೩' ಎಂದರೆ, ಪುಷ್ಯ ಬಹುಳ ತ್ರಯೋದಶಿ ಎಂಬುದಕ್ಕೆ ಬದಲಾಗಿ ರೂವಾರಿಯಿಂದ ಆದ ಕೈತಪ್ಪಾಗಿರಬೇಕು ಎಂಬುದರಲ್ಲಿ ಸಂಶಯವಿಲ್ಲ; ಏಕೆಂದರೆ, ಆ ಪುಷ್ಯ ಬಹುಳ ೧೩ (ಡಿಶಂಬರ್ 26ನೆಯ ತಾರೀಕು) ಸೋಮವಾರದಂದು ಬಂದಿದ್ದು, ಉತ್ತರಾಯಣ ಸಂಕ್ರಾಂತಿಗೆ ಸರಿಹೋಗುತ್ತದೆ.[5]

ಹಾಗಾದರೆ, ಶಾ. ಶ. ೯೯೮ನೆಯ ನಳ ಸಂವತ್ಸರದ (1076–77) ಫಾಲ್ಗುಣ ಶುದ್ಧ ಪಂಚಮಿಯಂದು ಆ ಪಟ್ಟಬಂಧವಾಗಿರಲಾರದಾದರೆ, ಅದರ ಹಿಂದಣ ಶಾ. ಶ.

4. Fleet's 'Kanarese Dynasties' (P. 446; F.N. 5).

5. ಈ ಶಾಸನದಲ್ಲಿ ಧಾರಾ ಪೂರ್ವಕವಾಗಿ ಮಾಡಲ್ಪಟ್ಟಿತೆಂದು ಹೇಳಿದ ದತ್ತಿಯನ್ನು ಗೆಯ್ದವರು ಬಳ್ಳಿಗಾವೆಯ ಮೇಚಿಸೆಟ್ಟಿ ಮತ್ತು ಚಾವರಾಜರೆಂಬವರಲ್ಲದೆ, ಚಾಳುಕ್ಯ ವಿಕ್ರಮನಲ್ಲ; ಮತ್ತು ಆ ದತ್ತಿಯಾದರೂ ಅವರು, "ತಮ್ಮ ಪ್ರತಿಷ್ಠೆ ಮಾಡಿದ ಮಲ್ಲಿಕಾರ್ಜುನ ದೇವರ ನಿವೇದ್ಯಕ್ಕಂ ಪೂಜೆಗಂ" ಎಂದು ಬಿಟ್ಟುದಲ್ಲದೆ, ಚಾಳುಕ್ಯ ವಿಕ್ರಮನ ಪಟ್ಟಬಂಧ ನಿಮಿತ್ತವಾಗಿ ಅಲ್ಲ. ಹಾಗೆಯೇ ಶಿಕಾರಿಪುರ ನಂ. 135 (E. C. VII) ರಲ್ಲಿ ಹೇಳಿರುವ ದತ್ತಿಯನ್ನು ಅದೇ ಮಲ್ಲಿಕಾರ್ಜುನ ದೇವರಿಗೆ ಚಾಳುಕ್ಯ ವಿಕ್ರಮನ ಮಹಾ ಸೇನಾಧಿಪತಿಯೂ ಮಹಾ ಪ್ರಧಾನನೂ ಆಗಿದ್ದ ದಂಡನಾಯಕ ಬಮ್ಮದೇವರಸ ಎಂಬಾತನು ಅಂದಿನ ಮಾಘ ಪೂರ್ಣಿಮೆಯ ಚಂದ್ರ ಗ್ರಹಣ ನಿಮಿತ್ತವಾಗಿ ಮಾಡಿದನೆಂದಿದೆ ವಿನಾ ತನ್ನೊಡೆಯನ ಪಟ್ಟಬಂಧ ನಿಮಿತ್ತದಿಂದಲ್ಲ.

೯೯೭ನೆಯ ರಾಕ್ಷಸ ಸಂವತ್ಸರದ (1075–76) ಫಾಲ್ಗುಣ ಶುದ್ಧ ಪಂಚಮಿಯಂದು ಆಗಿರಬಹುದೇನೋ ಎಂದು ಆಕ್ಷೇಪಿಸಿದರೆ, ಆ ತೇದಿಯಲ್ಲೂ ಆಗಿರಲಾರದೆಂದು ಹೀಗೆ ವ್ಯಕ್ತವಾಗುತ್ತದೆ:—

(ಅ) ಶಾ. ಶ. ೯೯೭ನೆಯ ರಾಕ್ಷಸ ಸಂವತ್ಸರದ ಫಾಲ್ಗುಣ ಶುದ್ಧ ೫ (ಕ್ರಿ. ಶ. 1076ನೆಯ ಫೆಬ್ರವರಿ 12ನೆಯ ತಾರೀಕು) ಶುಕ್ರವಾರ ಬಂದಿದ್ದಿತಲ್ಲದೆ ಗುರುವಾರ ವಲ್ಲ;

(ಆ) ಅಂದಿನ ನಕ್ಷತ್ರ ಭರಣಿ—ಯಮ ದೇವತಾಕವಾದ ಭರಣೀ ನಕ್ಷತ್ರವು ಯಾವ ಶುಭ ಕಾರ್ಯಕ್ಕೂ ಸಲ್ಲ, ಅದು ಸರ್ವಥಾ ತ್ಯಾಜ್ಯವೆಂದು ಬೇರೆ ಹೇಳ ಬೇಕೆಂದಿಲ್ಲ;

(ಇ) ಆ ತಿಥಿಯೂ ಸೌರ ಕುಂಭ ಮಾಸದಲ್ಲಿಯೇ ಒದಗಿತು;

(ಈ) ಅದೇ ರಾಕ್ಷಸ ಸಂವತ್ಸರದ ಫಾಲ್ಗುಣ ಶುಕ್ಲ ಚತುರ್ದಶಿಯಂದು ಹುಟ್ಟಿದ ಸೊರಬ ನಂ. 315 (E. C. VIII) ನೆಯ ಶಾಸನದಲ್ಲಿ, ಚಾಳುಕ್ಯ ವಿಕ್ರಮನ ಅಣ್ಣನಾದ "ಭುವನೈಕಮಲ್ಲನ ವಿಜಯ ರಾಜ್ಯಂ ಸಲುತ್ತಮಿರೆ" ಎಂದಿರುವುದರಿಂದ, ಅದಕ್ಕೆ ಕೆಲವೇ ದಿನಗಳ ಹಿಂದಣ ಪಂಚಮಿಯಲ್ಲಿ ವಿಕ್ರಮನ ಪಟ್ಟಬಂಧವೆಂದಿಗೂ ಆಗಿರಲಾರದು.

ಇವೇ ಮೊದಲಾದ ಕಾರಣಗಳಿಂದ ಚಾಳುಕ್ಯ ವಿಕ್ರಮನ ಪಟ್ಟಾಭಿಷೇಕವು ಕ್ರಿ. ಶ. 1075–76ನೆಯ ರಾಕ್ಷಸ ಸಂವತ್ಸರದ ಫಾಲ್ಗುಣ ಶುಕ್ಲ ಪಂಚಮಿ ಯಂದೂ ಆಗಿರಲಾರದು.

ಈಗ ಚಾಳುಕ್ಯ ವಿಕ್ರಮನು ಪಟ್ಟಾಭಿಷಿಕ್ತನಾದ ತೇದಿಯನ್ನು ಗೊತ್ತು ಹಚ್ಚುವ ಮುಂಚೆ ಆತನ ಹಿಂದೆ ಚಾಳುಕ್ಯರ ಆ ಕರ್ಣಾಟ ಸಿಂಹಾಸನದಲ್ಲಿ ಇದ್ದ ಆತನ ಹಿರಿಯಣ್ಣ ಭುವನೈಕಮಲ್ಲನೆಂಬ ಎರಡನೆಯ ಸೋಮೇಶ್ವರನ ಆಳಿಕೆಯ ಕೊನೆಯ ಕಾಲವನ್ನು ಕುರಿತು ಕೊಂಚ ವಿವೇಚಿಸಬೇಕಾಗಿದೆ.—

ತ್ರೈಲೋಕ್ಯಮಲ್ಲ ಆಹವ ಮಲ್ಲ
I ಸೋಮೇಶ್ವರ

| | | |
|---|---|---|
| ಭುವನೈಕಮಲ್ಲ<br>II ಸೋಮೇಶ್ವರ | ತ್ರಿಭುವನಮಲ್ಲ ಪೆರ್ಮಾಡಿ<br>VI ವಿಕ್ರಮಾದಿತ್ಯ | ಜಯಸಿಂಹ |
| | ಭೂಲೋಕಮಲ್ಲ<br>III ಸೋಮೇಶ್ವರ | |

ಈ II ಸೋಮೇಶ್ವರ ಮತ್ತು ವಿಕ್ರಮಾದಿತ್ಯ, ಹಾಗೂ ಜಯಸಿಂಹರ ತಂದೆ ಯಾದ 'ತ್ರೈಲೋಕ್ಯಮಲ್ಲನಾಹವಮಲ್ಲ'ನೆಂಬ I ಸೋಮೇಶ್ವರನ ಆಳಿಕೆಯಲ್ಲಿ

ಆತನ ಎರಡನೆಯ ಮಗನಾದ ಈ "ಚಾಳುಕ್ಯ ಗಂಡ (ಗ) ಪೆರ್ಮ್ಮಾನಡಿ ವಿಕ್ರಮಾ (ದಿತ್ಯ)"ನು "ಗಂಗವಾಡಿ ೯೬ ಸಾಸಿರಮುಮಂ" ಆಳುತ್ತಿದ್ದನೆಂದು ಶಿಕಾರಿಪುರ ಸಂ. 152 (E. C. VII) ನೆಯ "ಶಾ. ಶ. ೯೮೧ನೆಯ ವಿಕಾರಿ ಸಂವತ್ಸರದ ಮಾಗ ಸು(ದ್ಧ) ೪ ಆದಿತ್ಯವಾರ" (9ನೆಯ ಜನವರಿ 1060) ಎಂದು ತೇದಿಸಲ್ಪಟ್ಟಿರುವ ಶಾಸನದಿಂದ ತಿಳಿಯುತ್ತದೆ. ಹಾಗೆಯೇ ಆ ಆಹವಮಲ್ಲನು ಶಾ. ಶ. ೯೯೦ನೆಯ ಕೀಲಕ ಸಂವತ್ಸರದ (ಕ್ರಿ. ಶ. 1068) ಚೈತ್ರ ಬಹುಳ ಅಷ್ಟಮಿಯಂದು ಜಲಸಮಾಧಿಯನ್ನು ಹೊಂದುತ್ತಲೆ, ಆತನ ಹಿರಿಯ ಮಗನಾದ II ಸೋಮೇಶ್ವರನು ಭುವನೈಕಮಲ್ಲನೆಂಬ ಬಿರುದಾಂತು ಅದೇ ಕೀಲಕ ಸಂವತ್ಸರದ ವೈಶಾಖ ಶುದ್ಧ ೭ ಶುಕ್ರವಾರ (11ನೆಯ ಏಪ್ರಿಲ್ 1068) ಆ ಚಾಳುಕ್ಯ ಸಿಂಹಾಸನವನ್ನೇರಿ ಚಕ್ರವರ್ತಿಯಾದನೆಂದು ಶಿಕಾರಿಪುರ ಸಂ. 136 (E. C. VII) ನೆಯ ಶಾಸನದಿಂದ ತಿಳಿಯುತ್ತದೆ. ಭುವನೈಕಮಲ್ಲನ ಆಳಿಕೆಯ ಕಾಲದಲ್ಲಿ ಆತನ ಕಿರಿಯ ತಮ್ಮನಾದ "ಅಣ್ಣನ ಸಿಂಹಂ ಶ್ರೀಮತ್ತ್ರೈಳೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮ್ಮಾಡಿ" ಜಯಸಿಂಹನು "ಗೊಂದವಾಡಿಯ ಪೊರವೀಡ"ನ್ನು ಆಳುತ್ತಿದ್ದನೆಂದು ಶಾ. ಶ. ೯೯೩ನೆಯ ವಿರೋಧಿಕೃತು ಫಾಲ್ಗುಣ ಬಹುಳ ೩೦ ಬುಧವಾರ (21ನೆಯ ಮಾರ್ಚಿ 1072) ಎಂದು ತೇದಿಯುಳ್ಳ ಮೊಳಕಾಲ್ಮುರು ಸಂ. 28 (E.C. XI) ನೆಯ ಶಾಸನದಲ್ಲಿ ಹೇಳಿರುವುದರಿಂದಲೂ, ಶಾ. ಶ. ೯೯೬ನೆಯ ಆನಂದ ಸಂವತ್ಸರದ ಆಶ್ವಯುಜ ಮಾಸ (1074ನೆಯ ಸೆಪ್ಟಂಬರ್–ಅಕ್ಟೋಬರ್)ದ ನೀರಲಗಿಯ ಶಾಸನದಲ್ಲಿ[6] ತನ್ನ ಮಹಾ ಮಂಡಲೇಶ್ವರ ಬನವಾಸಿ ಪನ್ನಿಚ್ಛಾಸಿರವನ್ನು ಆಳುತ್ತಿದ್ದ ತನ್ನ ತಮ್ಮ ವಿಕ್ರಮಾದಿತ್ಯನು ಬೆಸಗೆಯ್ದು ಮೇರೆಗೆ ಚಕ್ರವರ್ತಿಯಾದ ಭುವನೈಕಮಲ್ಲನು ದತ್ತಿಯನ್ನು ಬಿಟ್ಟನೆಂದಿರುವುದರಿಂದಲೂ, ಆ ಆನಂದ ಸಂವತ್ಸರದ ಹಿಂದಣದೇ ಪ್ರಮಾದೀಚ ಸಂವತ್ಸರದ ಪೌಷ್ಯ ಬಹುಳ ೮ ಸೋಮವಾರ ಉತ್ತರಾಯಣ ಸಂಕ್ರಾಂತಿ (23ನೆಯ ಡಿಶಂಬರ್ 1073) ಎಂದು ತೇದಿಸಿರುವ ಚಿತ್ರದುರ್ಗ ಸಂ. 82 (E. C. XI) ನೆಯ ಶಾಸನದಲ್ಲಿ "ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲ ದೇವರ ರಾಜ್ಯಮುತ್ತರೋತ್ತರಾಭಿವೃದ್ಧಿ ವರ್ಧಮಾನಮಾಚಂದ್ರಾರ್ಕ ತಾರಂಬರಂ ಸಲುತ್ತಮಿರೆ" ಎಂದಿರುವಲ್ಲಿ ಈ ತ್ರಿಭುವನಮಲ್ಲ ವಿಕ್ರಮಾದಿತ್ಯನು ಆಗ್ಗೆ ತನ್ನ ಅಣ್ಣನ ಕೈಕೆಳಗಣ ಮಹಾಮಂಡಲೇಶ್ವರನಾಗಿದ್ದನೇ ಹೊರತು ಆತನ ಪ್ರತಿರಾಜನಾಗಲಿ ಆತನಿಂದ ಸ್ವತಂತ್ರನಾದ ಏಕ ರಾಜನಾಗಲಿ ಆಗಿದ್ದಿಲ್ಲವೆಂದೂ, ಈ ಮೇಲಣ ಮೂರು ಶಾಸನಗಳಲ್ಲಿಯ ಕೊನೆಯದಾದ ನೀರಲಗಿಯ ಶಾಸನಾನುಸಾರವಾಗಿ ಚಕ್ರವರ್ತಿಯಾದ ಸೋಮೇಶ್ವರನಿಗೂ ಆತನ ಸೋದರರಿಗೂ ತದೇವ ಶಾಸನದ ಕಾಲವಾದ 1074ನೆಯ ಸೆಪ್ಟಂಬರ್–ಅಕ್ಟೋಬರ್ ತಿಂಗಳ ವರೆಗಾದರೂ ವೈಮನಸ್ಯ ಹುಟ್ಟಿರಲಾರದೆಂದೂ ತುಂಬ ಸ್ಪಷ್ಟವಾಗುತ್ತದೆ. ಆದಕಾರಣ, ಅವರೊಳಗೆ ಪರಸ್ಪರ ವೈಷಮ್ಯ ಹುಟ್ಟಿ ವಿಕ್ರಮಾದಿತ್ಯನು ತನ್ನ ದಂಡು ಕಟ್ಟಿಕೊಂಡು ರಾಜಧಾನಿಯಾದ ಕಲ್ಯಾಣದಿಂದ ಹೊರಟುಹೋದುದು

6. Fleet's 'Kanarese Dynasties' (P. 444).

ಕನಿಷ್ಠ ಪಕ್ಷಕ್ಕೆ ಆ ಬಳಿಕಣ ಶಾ. ಶ. ೯೯೭ನೆಯ ರಾಕ್ಷಸ ಸಂವತ್ಸರದಲ್ಲಿ, ಎಂದರೆ (ಕ್ರಿ. ಶ. 1075ರಲ್ಲಿ) ವಿನಾ ಅದಕ್ಕೆ ಮುಂಚೆ ಆಗಿರಲಾರದೆಂದು ಖಂಡಿತವಾಗಿ ಹೇಳಬಹುದು.

ಭುವನೈಕಮಲ್ಲನ ಆಳಿಕೆಯ ಕೊನೆಯ ಕಾಲದ ಈ ನಾಲ್ಕು ಶಾಸನಗಳಲ್ಲಿ ಹೀಗಿದೆ:—

| ನಂ. | ಎಲ್ಲಿದೆ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧. | S. S. I. E.[7] ನಂ. 207 | ಶಾ. ಶ. ೯(೯೬) ಆನಂದ ಸಂವತ್ಸರದ ಆಶ್ವಯುಜ ಶುದ್ಧ ೧೫ ಮಂಗಳವಾರ, ಚಂದ್ರ ಗ್ರಹಣ. | 7 ನೆಯ ಅಕ್ಟೋಬರ್ 1074. | ಭುವನೈಕಮಲ್ಲನು ಬಂಕಾಪುರದ ನೆಲೆವೀಡಿನಲ್ಲಿದ್ದನು. |
| ೨. | ಶಿಕಾರಿಪುರ ನಂ. 128, 130 (E.C. VII) | ಶಾ. ಶ. ೯೯೭ ರಾಕ್ಷಸ ಸಂವತ್ಸರದ ಪುಷ್ಯ ಶುದ್ಧ ೧ ಸೋಮವಾರ ಉತ್ತರಾಯಣ ಸಂಕ್ರಾಂತಿ. | ಈ ಪುಷ್ಯ ಶುದ್ಧ ಪಾಡ್ಯವು ಶುಕ್ರವಾರ 11 ನೆಯ ಡಿಶಂಬರ್ 1075 ಆಗುತ್ತದೆ. | ಈ ವರ್ಷದಲ್ಲಿ ಉತ್ತರಾಯಣ ಸಂಕ್ರಾಂತಿ ಪುಷ್ಯ ಬಹುಳ ಪಾಡ್ಯ ಶನಿವಾರ (26—12—1075) ಬಂದಿದ್ದಿತು. ಭುವನೈಕಮಲ್ಲನು ಬಂಕಾಪುರದಲ್ಲಿದ್ದನು. |
| ೩. | ಸೊರಬ ನಂ. 315 (E. C. VIII) | ಶಾ. ಶ. ೯೯೭ ರಾಕ್ಷಸ ಸಂವತ್ಸರದ ಫಾಲ್ಗುಣ ಶುದ್ಧ ೧೪. | ರವಿವಾರ 21ನೆಯ ಫೆಬ್ರವರಿ 1076. | |
| ೪. | S. S. I. E.[7] ನಂ. 202. | ಶಾ. ಶ. ೯೯೮ ನಳ ಸಂವತ್ಸರದ ಭಾದ್ರಪದ ಬಹುಳ ಅಮಾವಾಸ್ಯೆ ಬೃಹಸ್ಪತಿವಾರ, ಸೂರ್ಯಗ್ರಹಣ. | 1ನೆಯ ಸೆಪ್ಟಂಬರ್ 1076. | ಭುವನೈಕಮಲ್ಲನು ಅವಗೇವಾಡಿ ಎಂಬ ನೆಲೆವೀಡಿನಲ್ಲಿ ಇದ್ದಾಗ, ಆತನ ಸೋದರಿಯಾದ ಸುಗ್ಗಲದೇವಿ ಆತನ ಅನುಜ್ಞೆವಡೆದು ದತ್ತಿ ಬಿಟ್ಟಿಲೆಂದಿದೆ. |

ಇವುಗಳಲ್ಲಿ ಕಟ್ಟಕಡೆಯ, ಎಂದರೆ ಕ್ರಿ. ಶ. 1076ನೆಯ ಶಾಸನದಲ್ಲಿ ಭುವನೈಕಮಲ್ಲನ, ಹಾಗೂ ವಿಕ್ರಮಾದಿತ್ಯನ ಸೋದರಿಯಿಂದ ಕೊಡಲ್ಪಟ್ಟ ದತ್ತಿಯನ್ನು ಹೇಳಿರುವುದರಿಂದ, ಆವರೆಗೆ ಭುವನೈಕಮಲ್ಲನು ಸಿಂಹಾಸನದಲ್ಲಿದ್ದನೆಂದು ಮಾತ್ರವಲ್ಲ, ಆ ಅಣ್ಣ ತಮ್ಮಂದಿರೊಳಗಾದ ಕಾಳಗವು ಇನ್ನೂ ಆಗಿದ್ದಿಲ್ಲವೆಂದೂ ಇತ್ಯರ್ಥವಾಗುತ್ತದೆ. ಆ ಕಾಳಗವು ಬಹುಶಃ ಅದೇ ವರ್ಷದ ಅಕ್ಟೋಬರ್—ನವೆಂಬರಿನಲ್ಲಿ

7. Supplement to 'South Indian Epigraphical Report' for 1927, Bombay Karnatak.

ಜರುಗಿರಬೇಕು. ಅದರಲ್ಲಿ ವಿಜಯಿಯಾದ ವಿಕ್ರಮಾದಿತ್ಯನು ತನ್ನ ಅಣ್ಣನಾದ ಚಕ್ರವರ್ತಿ ಭುವನೈಕಮಲ್ಲನನ್ನು ಸೆರೆಹಿಡಿದ ಬಳಿಕಲೂ ಆತನನ್ನೇ ಪುನಃ ಪಟ್ಟದಲ್ಲಿ ಕುಳ್ಳಿರಿಸೋಣ ಎಂದು ಕೆಲಕಾಲ ತಳುವಿ, ಕಟ್ಟಕಡೆಗೆ ಅದು ಸಲ್ಲದೆಂದು[8] ದೃಢ ಗೊಂಡಮೇಲೆ, ತಾನೇ ಚಾಳುಕ್ಯ ಸಾಮ್ರಾಜ್ಯದ ಚಕ್ರವರ್ತಿ ಎಂದು ಸಾರಿಸಿ, ತಮ್ಮನಾದ ಜಯಸಿಂಹನನ್ನು ಬನವಾಸಿಯ ಮಹಾ ಮಂಡಲಾಧಿಪತ್ಯದಲ್ಲಿ ನೇಮಿಸಿದನೆಂದು[9] ಬಿಲ್ಹಣನ 'ವಿಕ್ರಮಾಂಕದೇವ ಚರಿತ'ವೆಂಬ ಕಾವ್ಯದಿಂದ ತಿಳಿವುದರಿಂದಲೂ, ವಿಕ್ರಮಾದಿತ್ಯನ ತಮ್ಮನಾದ 'ಶ್ರೀ ನೊಳಂಬದೇವ'ನೆಂಬ ಆ ಜಯಸಿಂಹನು ತಾಣಗುಂದೂರ ಬೀಡಿನಲ್ಲಿ ಇದ್ದಾಗ ಆತನ ಅನುಜ್ಞೆಹೊಂದಿ 'ಮೇಚಿಸೆಟ್ಟಿಯುಂ ಚಾವರಾಜನುಂ' ಮಾಡಿದ ದತ್ತಿಯನ್ನು ಹೊಗಳುವ ಶಿಕಾರಿಪುರ ನಂ. 292 (E. C. VII) ನೆಯ ಶಾಸನದಲ್ಲಿ "ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ಪ್ರಥಮ ನ(ೆ)ಯ ನಳ ಸಂವತ್ಸರದ ಪುಷ್ಯ ಬಹುಳ ೩ (೧೩) ಸೋಮವಾರಮುತ್ತರಾಯಣ ಸಂಕ್ರಾಂತಿ ಪರ್ಬ" (26ನೆಯ ಡಿಶಂಬರ್ 1076) ಎಂದಿಷ್ಟು ಸ್ಪಷ್ಟವಾಗಿ ಚಾಳುಕ್ಯ ವಿಕ್ರಮ ಶಕವನ್ನು ಹೇಳಿರುವುದರಿಂದಲೂ, ಆ ಶಕವು ಅದಕ್ಕೆ ಕೊಂಚ ಮುಂಚೆಯಾದರೂ ಸ್ಥಾಪಿಸಲ್ಪಟ್ಟಿರಬೇಕೆಂದು ತುಂಬ ವ್ಯಕ್ತವಾಗುತ್ತದೆ. ಈ ಕಾರಣದಿಂದ, ಬಿಲ್ಹಣನು ಹೇಳಿರುವ ಯುದ್ಧ ವಿಷಯಕವಾದ ಘಟನೆಗಳೆಲ್ಲವೂ ಕ್ರಿ. ಶ. 1076ನೆಯ ಅಕ್ಟೋಬರ್–ನವಂಬರ್ ತಿಂಗಳಲ್ಲಿ ಆಗಿ ಹೋಗಿರಬೇಕೆಂಬಲ್ಲಿ ಸಂದೇಹವಿಲ್ಲ.

ಈಗ ಹೊನ್ನಾಳಿ ನಂ. 14ನೆಯ (E. C. VII) ಶಾಸನದಲ್ಲಿ "ಚಾಳುಕ್ಯ ವಿಕ್ರಮ ಕಾಲ ೧ನೆಯ ನಳ ಸಂವತ್ಸರದ ಚೈತ್ರ ಸುದ್ಧ ೫ ವಿಶಾ ಆದಿವಾರ" ಎಂದಿದೆಯಷ್ಟೆ; ಇದರಿಂದ ಚಾ. ವಿ. ಶಕವು ಇದರಲ್ಲಿ ಹೇಳಿರುವ ತೇದಿಗೆ ಮುಂಚೆಯೇ, ಎಂದರೆ, ಶಾ. ಶ. ೯೯೮ (ಕ್ರಿ. ಶ. 1076) ನೆಯ ನಳ ಸಂವತ್ಸರದ ಚೈತ್ರ ಶುದ್ಧ ೫ ಗೆ ಮುಂಚೆಯೇ ಸ್ಥಾಪಿತವಾಗಿರಬೇಕೆಂದು ಆಗದೇ? ಎಂದು ಶಂಕೆಯಾಗಬಹುದು. ಅಂಥ ಶಂಕೆಯನ್ನು ನಿರಾಕರಿಸಲಿಕ್ಕೆ ಪ್ರಯತ್ನಿಸುವ ಮುಂಚೆ ಆ ಕಾಲದ ಶಾಸನಗಳಲ್ಲಿ ಕಾಣುವ ತೇದಿಗಳ ವಿವರವಾಗಲಿ, ಅವನ್ನು ಒಕ್ಕಣಿಸುವ ಕ್ರಮವಾಗಲಿ ಯಥಾ ತಥವಾಗಿಲ್ಲ; ಸಮಾಧಾನಕರವಾಗಿಲ್ಲವೆಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು.[10] ಅದಲ್ಲದೆ, ಮುಖ್ಯತಃ ಆ ಕಾಲದ ಆಯಾ ಶಾಸನಗಳಲ್ಲಿ ಇರುವ ಬರಿಯ ತೇದಿಗಳನ್ನು ಮಾತ್ರ ಲೆಕ್ಕ ಹಾಕಿದರೆ ಕಾಲವನ್ನು ಸರಿಯಾಗಿ ನಿರ್ಣಯಿಸಲಿಕ್ಕೆ ಬರುವುದಿಲ್ಲ. ಅವುಗಳಲ್ಲಿ ಹೇಳಲ್ಪಟ್ಟಿರುವ ಅರಸರಾರು? ಅವರ ಸಾಮಂತರೋ ಮಾಂಡಲಿಕರೋ ಹೇಳಲ್ಪಟ್ಟಿರುವರಾದರೆ, ಅವರಾರು? ಅಂಥಂಥವ

8. "ವಿತರಿತುಮಿದಮುಗ್ರಜಸ್ಯ ಸರ್ವಂ ಪುನರುಪಜಾತ ಮತಿಃ ಸ ರಾಜಪುತ್ರಃ।
ತುಹಿನ ಕಿರಣ ಬಿಂಬ ಮಂಡನೇನ ಸ್ಫುರದಶರೀರ ಗಿರಾ ರುಷಾ ನ್ಯಷೇಧಿ ||" (VI-೯೨)

9. "ಭ್ರಾತುರಭ್ಯುದಯು ಶಂಸಿನಾ ತ್ವಯಾ। ಪ್ರೇಷಿತಸ್ಯ ವನ ವಾಸ ಮಂಡಲೀ ||" (XIV-೪)

10. Kielhorn has also said that the results are unsatisfactory with many of the dates of this period"—Fleet's "Kanarese Dynasties" (P. 446—F. N. 6).

ರನ್ನು ಹೆಸರಿಸಿರುವ ಆಯಾ ಶಾಸನಗಳ ಆಯಾ ಕಾಲಗಳು ಒಂದಕ್ಕೊಂದು ಸರಿ ಬೀಳುತ್ತಿವೆಯೇ? ಎಂಬಿವೇ ಮೊದಲಾದ ವಿವರವನ್ನು ಆದಷ್ಟು ಮಟ್ಟಿಗೆ ವಿಚಾರಿಸದಿದ್ದರೆ, ಕೈಕೊಂಡ ವಿಚಾರದಲ್ಲಿ ಇಡಲೆತ್ತಿದ ಹೆಜ್ಜೆಗೆ ತಡಗಾಲಾಗದಿರದು. ಈ ಹೊನ್ನಾಳಿಯ ನಂ. 14ನೆಯ ಶಾಸನದಲ್ಲಿ "..........ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲ ದೇವರ ರಾಜ್ಯಂ............ಸಲುತ್ತಮಿರೆ ತತ್ಪಾದಪದ್ಮೋಪಜೀವಿ............ನನ್ನಿಯ ಗಂಗ ಜಯದುತ್ತರಂಗ ರಕ್ಕಸ ಗಂಗ ಶ್ರೀಮತ್ತ್ರಿಭುವನ ಮಲ್ಲ ಗಂಗ ಪೆರ್ಮ್ಮಾಡಿದೇವ" ಎಂದಿರುವಲ್ಲಿ, ಚಕ್ರವರ್ತಿಯಾದ ಚಾಳುಕ್ಯ ವಿಕ್ರಮನ ಹೆಸರೂ ಇದೆ, ಸಾಮಂತಾಧಿಪತಿಯಾದ ನನ್ನಿಯ ಗಂಗನ ಹೆಸರೂ ಇದೆ. ಆದರೆ, ಅದೇ ನಳ ಸಂವತ್ಸರದ ಭಾದ್ರಪದ ಬಹುಳ ೩೦ಯು, ಎಂದರೆ ಹೊನ್ನಾಳಿಯ ಈ ಶಾಸನದ ಜೈತ್ರ ಶುದ್ಧ ೫ಯಿಂದ ಆರು ತಿಂಗಳ ಮೇಲಣ ಶಾಸನದಲ್ಲಿ ಭುವನೈಕಮಲ್ಲನೇ ಚಾಳುಕ್ಯ ಚಕ್ರವರ್ತಿಯಾಗಿದ್ದನೆಂದು ಈ ಮೇಲೆ (S. S I. E. ನಂ. 202) ಕಂಡಿರುವುದರಿಂದ, ಹೊನ್ನಾಳಿಯ ಶಾಸನದ ತೇದಿ ಬರಿಯ ವಿಪರ್ಯಾಸವಲ್ಲದೆ ಯಥಾರ್ಥವಲ್ಲ ಎಂದು ಒಂದೇ ಮಾತಿನಿಂದ ಅದನ್ನು ವಿಸರ್ಜಿಸಿಬಿಡಬಹುದಾದರೂ, ಅದನ್ನಿನ್ನೂ ಕೊಂಚ ಪರಿಶೀಲಿಸೋಣ:—

ಬಮ್ಮರ್ದೇವ + ಗಂಗ ಮಹಾದೇವಿ
(ಶಿವಮೊಗ್ಗ ನಂ. 4) (ಶಿವಮೊಗ್ಗ ನಂ. 6, 57)

- ಮಾರಸಿಂಹ
- I. ನನ್ನಿಯ ಗಂಗ ಪೆರ್ಮ್ಮಾಡಿದೇವ (ಸತ್ಯ ಗಂಗ)
- ರಕ್ಕಸ ಗಂಗ
- ಭುಜಬಳ ಗಂಗ ಪೆರ್ಮ್ಮಾಡಿದೇವ
  - II. ನನ್ನಿಯ ಗಂಗ ಪೆರ್ಮ್ಮಾಡಿದೇವ (ಸತ್ಯ ಗಂಗ)

ಗಂಗ ವಂಶೀಯರಾದ ಸಾಮಂತ ರಾಜರಲ್ಲಿ ತನ್ನ ಅಜ್ಜನಾದ ಬಮ್ಮರ್ದೇವನು[11] ಶಾ. ಶ. ೯೭೬ನೆಯ (ಕ್ರಿ. ಶ. 1053–54) ವಿಜಯ ಸಂವತ್ಸರದಲ್ಲಿ ಇದ್ದನೆಂದೂ, ತನ್ನ ತಂದೆಯ ಅಣ್ಣನಾದ I ನನ್ನಿಯ ಗಂಗನು ಶಾ. ಶ. ೯೯೧ (1069–70) ನೆಯ ಸೌಮ್ಯ ಸಂವತ್ಸರದಲ್ಲಿ ಇದ್ದನೆಂದೂ, ತನ್ನ ತಂದೆ ಭುಜಬಳ ಗಂಗನು ಶಾ. ಶ. ೧೦೨೯ (?) ನೆಯ ಸರ್ವಜಿತು ಸಂವತ್ಸರದಲ್ಲಿ (1107–8) ಇದ್ದನೆಂದೂ, II ನನ್ನಿಯ ಗಂಗನ ಶಿವಮೊಗ್ಗ ನಂ. 4ನೆಯ (E. C. VII) ಶಾ. ಶ. ೧೦೪೪ನೆಯ ಶುಭಕೃತು ಸಂವತ್ಸರದ ಭಾದ್ರಪದ ಶುದ್ಧ ೫ ಬೃಹಸ್ಪತಿವಾರ (ಕ್ರಿ. ಶ. 1122ನೆಯ ಆಗಸ್ಟ್) ಎಂದು ತೇದಿಯುಳ್ಳ ಶಾಸನದಲ್ಲಿದೆ. I ನನ್ನಿಯ

11. ಗಂಗ ವಂಶೀಯನಾದ ಈ ಬಮ್ಮರ್ದೇವನು ಬೇರೆ, ಈ ಮೇಲೆ ಹೇಳಿರುವ, ಎಂದರೆ ಶಿಕಾರಿಪುರ ನಂ. 135ರಲ್ಲಿ ಹೆಸರಿಸಲ್ಪಟ್ಟಿರುವ ದಂಡನಾಯಕ ಬಮ್ಮರ್ದೇವರಸು ಎಂಬಾತನು ಬೇರೆ.

ಗಂಗನು ಕ್ರಿ. ಶ. 1085ರಲ್ಲಿ ಇದ್ದನೆಂದೂ, ಆತನದೇ ಶಿವಮೊಗ್ಗ ಸಂ. 10ನೆಯ "ಶಕವರ್ಷ ೧೦೦೧[12] ಕ್ರೋಧನ ಸಂವತ್ಸರ ಜ್ಯೇಷ್ಠ ಬಹುಳ ಚ್ಛಟ್ಟಿ ವಡ್ಡವಾರ" (ಶನಿವಾರ 17ನೆಯ ಮೇ 1085) ದ ಶಾಸನದಲ್ಲಿದೆ. ಈಗ ಆ ಬರ್ಮ್ಮದೇವನ ಮೊಮ್ಮಗನೂ I ನನ್ನಿಯ ಗಂಗನ ತಮ್ಮನ ಮಗನೂ ಆಗಿದ್ದ II ನನ್ನಿಯ ಗಂಗನು ಶಿವಮೊಗ್ಗ ಸಂ. 13ನೆಯ ಚಾಳುಕ್ಯ ವಿಕ್ರಮ ಕಾಲದ ೪೭ನೆಯ ಶುಭಕೃತು ಸಂವತ್ಸರದ ಭಾದ್ರಪದ ಶುದ್ಧ ೧೦ (ಕ್ರಿ. ಶ. 1122ನೆಯ ಆಗಸ್ಟ್) ಆದಿವಾರ ಎಂದಿರುವ ಶಾಸನದಲ್ಲಿ ತನ್ನನ್ನು "ತ್ರಿಭುವನಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ" ಎಂದೂ, ಶಾ. ಶ. ೧೦೪೪ನೆಯ ಅದೇ ಶುಭಕೃತು ಸಂವತ್ಸರದ ಅದೇ ಭಾದ್ರಪದ ಮಾಸದ ಶುದ್ಧ ೧೫ ಬೃಹಸ್ಪತಿವಾರ, ಎಂದರೆ ಮೇಲಣ ಶಾಸನಕ್ಕೆ ಐದೇ ದಿನಗಳ ಮುಂಚಿನದಾದ ಶಿವಮೊಗ್ಗ ಸಂ. 4ನೆಯ ಶಾಸನದಲ್ಲಿ ತನ್ನನ್ನು "ನನ್ನಿಯ ಗಂಗ ಪೆರ್ಮ್ಮಾಡಿ" ಎಂದೂ ಹೇಳಿಕೊಂಡಿರುವುದರಿಂದ, ನನ್ನಿಯ ಗಂಗ ಪೆರ್ಮ್ಮಾಡಿ ಎಂದರೂ ತ್ರಿಭುವನಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ ಎಂದರೂ ಒಬ್ಬನೇ ಎಂದೂ, ಆತನೇ ಬರ್ಮ್ಮದೇವ ಗಂಗನ ಮೊಮ್ಮಗನೂ ಭುಜಬಳಗಂಗನ ಮಗನೂ ಆಗಿದ್ದ II ನನ್ನಿಯ ಗಂಗನೆಂದೂ ನಿಸ್ಸಂದೇಹವಾಗಿ ದೃಢವಾಗುತ್ತದೆ. ಆದರೆ, ಈ ತ್ರಿಭುವನ ಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ ಎಂಬ ಹೆಸರು I ನನ್ನಿಯ ಗಂಗನ ಹೆಸರೂ ಆಗಿರ ಬಾರದೇ? ಎಂದು ಆಕ್ಷೇಪಿಸಿದರೆ, ಆತನಿಗೆ ನನ್ನಿಯ ಗಂಗ ಪೆರ್ಮ್ಮಾಡಿ ಎಂದು ಮಾತ್ರ ವಲ್ಲದೆ ತ್ರಿಭುವನಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ ಎಂದು ಹೆಸರಿದ್ದಂತೆ ಕಾಣುವುದಿಲ್ಲ. ಏನಂದರೆ, I ನನ್ನಿಯ ಗಂಗನಿಗೆ ತ್ರಿಭುವನಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ ಎಂದು ಹೆಸರುಳ್ಳ ಶಾಸನಗಳನ್ನು ನಾನು ಕಂಡಿಲ್ಲ. ಅದಲ್ಲದೆ, ತ್ರಿಭುವನಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ ಎಂಬ ಹೆಸರುಳ್ಳ ಶಾಸನಗಳ ಕಾಲ ವಿವರವೇ ಮೊದಲಾದುವನ್ನು ಪರಿಶೀಲಿಸುವಲ್ಲಿ, ಆ ಹೆಸರು II ನನ್ನಿಯ ಗಂಗನದೇ ಎಂದೂ, ಆ ಹೆಸರುಳ್ಳ ಶಾಸನಗಳು ಆತನ ಕಾಲದವೇ ಎಂದೂ ಕಾಣುತ್ತದೆ.

ಈಗ ಈ II ನನ್ನಿಯ ಗಂಗನು ಚಾ. ವಿ. ೬೫ನೆಯ ರೌದ್ರಿ ಸಂವತ್ಸರದಲ್ಲಿ (ಕ್ರಿ. ಶ. 1140) ಇದ್ದನೆಂದು ಆ ಸಂವತ್ಸರದ ಆಶ್ವಯುಜ ಶುದ್ಧ ಪಾಡಿವ ಆದಿವಾರ ಎಂದಿರುವ ಶಿವಮೊಗ್ಗ ಸಂ. 37ನೆಯ ಶಾಸನದಿಂದ ತಿಳಿವುದರಿಂದ, ಚಾ. ವಿ. ೬೧ನೆಯ ನಳ ಸಂವತ್ಸರದಲ್ಲಿ (ಕ್ರಿ. ಶ. 1136–37) ಇದ್ದ ಗಂಗ ಮಹಾಮಂಡಲೇಶ್ವರನೀತನೇ ಆಗಿರಬೇಕು; ಅತಏವ, ನನ್ನಿಯ ಗಂಗ ತ್ರಿಭುವನಮಲ್ಲ ಪೆರ್ಮ್ಮಾಡಿ ಎಂದು ಮಹಾಮಂಡಲೇಶ್ವರನ ಹೆಸರುಳ್ಳ ಹೊನ್ನಾಳಿ ಸಂ. 14ನೆಯ ಶಾಸನವು ಚಾ. ವಿ. ೬೧ನೆಯ ನಳ ಸಂವತ್ಸರದ (ಕ್ರಿ. ಶ. 1136) ಶಾಸನವಾಗಿರಬೇಕೇ ಹೊರತು ಚಾ. ವಿ. ೧ನೆಯ ನಳ ಸಂವತ್ಸರದ (ಕ್ರಿ. ಶ. 1076) ಶಾಸನವಾಗಿರಲಾರದೆಂದು ನನಗೆ ತೋರುತ್ತದೆ. ಆದರೆ ಈ ಹೊನ್ನಾಳಿ ಸಂ. 14ನೆಯ ಶಾಸನದಲ್ಲಿ, "ಚಾಳುಕ್ಯ ಚಕ್ರವರ್ತಿ ತ್ರಿಭುವನಮಲ್ಲನ (ಎಂದರೆ, ವಿಕ್ರಮಾದಿತ್ಯನ) ರಾಜ್ಯಂ ಸಲುತ್ತಮಿರೆ"

12. ಇದು '೧೦೦೭' ಎಂದಾಗಬೇಕು.

ಎಂದಿದೆಯಷ್ಟೆ! ಚಾಳುಕ್ಯ ವಿಕ್ರಮನ ಆಳಿಕೆ ಕ್ರಿ. ಶ. 1126ನೆಯ (ಶಾ. ಶ. ೧೦೪೮) ಪರಾಭವ ಸಂವತ್ಸರದಲ್ಲಿ ಮುಗಿದಿರಬೇಕೆಂದು ಇತಿಹಾಸಕಾರರು ಹೇಳಿರುವಂದು, ಕ್ರಿ. ಶ. 1136ನೆಯ (ಚಾ. ವಿ. ೬೧ನೆಯ) ನಳ ಸಂವತ್ಸರದ ಶಾಸನದಲ್ಲಿ ಆತನ ಹೆಸರು ಇದ್ದಿರುವ ಬಗೆ ಹೇಗೆಂದು ಶಂಕಿಸುವವರು, ಅದೇ ಒಕ್ಕಣೆಯುಳ್ಳ ಈ ಕೆಲವು ಶಾಸನಗಳನ್ನು ಪರಾಮರ್ಶಿಸಿದರೆ ಅವರಾ ಶಂಕೆ ತನಗೆ ತಾನೆ ನಿವೃತ್ತಿಯಾಗದಿರದು:—

| ನಂ. | ಎಲ್ಲಿದೆ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧. | ಹೊಳಲಕೆರೆ 68 (E. C. XI). | ಚಾ.ವಿ. ೫೧ ಪರಾಭವ ಪೌಷ್ಯ ಶುದ್ಧ ೧೦ ಸೋಮವಾರ, ಉತ್ತರಾಯಣ ಸಂಕ್ರಾಂತಿ. | ಆದಿತ್ಯವಾರ 26—12—1126 | "ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯ ರಾಜ್ಯಂ...... ಸಲುತ್ತಮಿರೆ." |
| ೨. | ದಾವಣಗೆರೆ 90 (E. C. XI). | ಚಾ.ವಿ. ೫೩ ಕೀಲಕ, ಉತ್ತರಾಯಣ ಸಂಕ್ರಾಂತಿ. | ಡಿಶಂಬರ್ 1128. | "ಚಾಳುಕ್ಯಾಭರಣ ಶ್ರೀಮತ್ತ್ರಿಭುವನಮಲ್ಲಪೆರ್ಮ್ಮಾಡಿದೇವರ ವಿಜಯ ರಾಜ್ಯಂ........ಸಲುತ್ತಮಿರೆ." |
| ೩. | ಚಿಕ್ಕಮಗಳೂರು 161(E.C.VI). | ಸಕ ವರ್ಷ ೧೦೬೦ ಪಿಂಗಳ, ಪುಷ್ಯ ಸು. ೧೦ ಆದಿವಾರ, ಉತ್ತರಾಯಣ ಸಂಕ್ರಮಣ. | ಕ್ರಿ. ಶ. 1137ನೆಯ ಪಿಂಗಳ ಸಂವತ್ಸರದಲ್ಲಿ ಪುಷ್ಯ ಶುದ್ಧ ೧೦ ಶುಕ್ರವಾರ ಡಿಶಂಬರ್ 24 ನೆಯ ತಾರೀಕು; ಪುಷ್ಯ ಶುದ್ಧ ೧೨ ರವಿವಾರ ಡಿಶಂಬರ್ 26. | "ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯ ರಾಜ್ಯಂ...... ಸಲುತ್ತಮಿರೆ." |
| ೪. | ಅರಸೀಕೆರೆ 124 (E. C. V). | ಶಕ ೧೦೬೦, ಕಾಲಯುಕ್ತ ವೈಶಾಖ ಶುದ್ಧ ೧೦ ಬೃಹಸ್ಪತಿವಾರ. | ಗುರುವಾರ 21—4—1138. | "ಚಾಳುಕ್ಯಾಭರಣ ತ್ರಿಭುವನಮಲ್ಲದೇವನ ವಿಜಯ ರಾಜ್ಯ ಸಲುತ್ತಮಿರೆ." |
| ೫. | ಹಾಸನ 114 (E. C. V). | ಶಕ ೧೦೬೧, ಸಿದ್ಧಾರ್ಥಿ ಪುಷ್ಯ ಶುದ್ಧ ೫ ಸೋಮವಾರ, ಉತ್ತರಾಯಣ ಸಂಕ್ರಾಂತಿ. | ಬುಧವಾರ 27—12—1139. | ಡಿಟೊ |

ಈ ಕಾರಣಗಳಿಂದ, ಈ ಹೊನ್ನಾಳಿ ಸಂ. 14ನೆಯ ಶಾಸನವನ್ನು ಕುರಿತು ಈ ಬಗೆಯಾಗಿ ಅನುಮಾನಿಸಬಹುದು:—

(೧) ಇದು ಈ ಮೇಲೆ ತರ್ಕಿಸಿರುವಂತೆ ಚಾ. ವಿ. ಕಾಲದ ೬೧ನೆಯ ನಳ ಸಂವತ್ಸರದ ಶಾಸನವಾಗಿರಬೇಕು; ಇದರಲ್ಲಿ ಹೇಳಿರುವ ಮಹಾ ಮಂಡಲೇಶ್ವರನು II ನನ್ನಿಯ ಗಂಗನಾಗಿರಬೇಕು.

(೨) ಇಲ್ಲವೆ, ಈ ಶಾಸನದಲ್ಲಿ ಹೇಳಲ್ಪಟ್ಟಿರುವ ದತ್ತಿ ಕ್ರಿ. ಶ. 1076ನೆಯ ನಳ ಸಂವತ್ಸರದ ಚೈತ್ರ ಶುದ್ಧ ಪಂಚಮಿಯಂದು ವಾಗ್ದತ್ತವಾಗಿಯೂ ಧಾರಾದತ್ತವಾಗಿಯೂ ಇದ್ದು, ಯಾವ ಕಾರಣದಿಂದಲೋ ಅದು ಯಥಾ ಕಾಲದಲ್ಲಿ ಶಿಲಾಲೇಖದಲ್ಲಿ ಕಂಡರಿಸಲ್ಪಡಲಾರದೆ ಕೆಲಕಾಲಕ್ಕೆ ಬಾಕಿ ಉಳಿದಿದ್ದು, ಅದೇ ನಳ ಸಂವತ್ಸರದ ಪುಷ್ಯ ಬಹುಳ ೧೩ ಉತ್ತರಾಯಣ ಸಂಕ್ರಾಂತಿಗೆ ಕೊಂಚ ಮುಂಚೆ ಚಾಳುಕ್ಯ ವಿಕ್ರಮನು ತನ್ನ ಅಣ್ಣನಾದ ಭುವನೈಕಮಲ್ಲನನ್ನು ಗೆದ್ದು ತಾನು ಚಾಳುಕ್ಯ ಸಾಮ್ರಾಜ್ಯದ ಏಕಮಾತ್ರ ಚಕ್ರವರ್ತಿಯಾಗಿ ತನ್ನ ಹೆಸರಿನಿಂದ ಹೊಸತೊಂದು ಶಕವನ್ನು ಸ್ಥಾಪಿಸಿದ ಬಳಿಕ (ಶಿಕಾರಿಪುರ ನಂ. 292– E. C. VII), ಈ ಹೊನ್ನಾಳಿ ನಂ. 14ನೆಯ ಶಾಸನವು ಕೊಟ್ಟಕೊನೆಗೆ ಆ ಸಮಯಕ್ಕೆ ಸರಿಯಾಗಿ ಕೆತ್ತಲ್ಪಡಲಿಕ್ಕೆ ಬಂದಿರಬೇಕು; ಮತ್ತು ಅದೇ ಕಾರಣದಿಂದ ಆ ದತ್ತಿಯನ್ನು ವಾಸ್ತವಿಕವಾಗಿ ವಾಗ್ದಾನ ಮಾಡಿದ ಆ ನಳ ಸಂವತ್ಸರದ ಚೈತ್ರ ಶುದ್ಧ ಪಂಚಮಿಯಂದು ಸ್ಥಾಪಿತವಾಗಿದ್ದಿಲ್ಲವಾದರೂ ಅದನ್ನು ಶಿಲಾಲೇಖದಲ್ಲಿ ಕೊರೆದಿರಿಸುವಂದು ಸ್ಥಾಪಿತವಾಗಿ ಆಗ್ಗೆ ಸರಾಗವಾಗಿ ಸಲುವಳಿಗೆ ಬಂದು ಬಳಕೆಯಲ್ಲಿದ್ದ ಈ ಚಾಳುಕ್ಯ ವಿಕ್ರಮ ಶಕವು ಈ ಶಾಸನದ ಒಕ್ಕಣೆಯಲ್ಲಿ ಸಹಜವಾಗಿ ಹೇಳಲ್ಪಟ್ಟಿರಬೇಕು. ಹೀಗೆಂದಾದರೆ, ಇದರಲ್ಲಿ ಹೆಸರಿಸಲ್ಪಟ್ಟಿರುವ ತ್ರಿಭುವನಮಲ್ಲ ನನ್ನಿಯ ಗಂಗ ಪೆರ್ಮ್ಮಾಡಿ ಎಂಬಾತನು ಮೊದಲನೆಯ ನನ್ನಿಯ ಗಂಗನಾಗಿರಬೇಕು; ಮತ್ತೀ ಶಾಸನದ ತೇದಿ ಚಾ. ವಿ. ಕಾಲದ ೧ನೆಯ ನಳ ಸಂವತ್ಸರವಾಗಿರಬೇಕು.

ಹೇಗೂ, ಈ ಹೊನ್ನಾಳಿಯ ನಂ. 14ನೆಯ ಶಾಸನವು ಚಾ. ವಿ. ೧ನೆಯ ನಳ ಸಂವತ್ಸರದ (ಕ್ರಿ. ಶ. 1076) ಚೈತ್ರ ಶುದ್ಧ ೫ಯು ಶಾಸನವೆಂದೇ ಆದರೂ, ಅದು ಚಾ.ವಿ. ಶಕವು ಮೊತ್ತಮೊದಲಾದ ತೇದಿಯನ್ನಾಗಲಿ, ಚಾಳುಕ್ಯ ವಿಕ್ರಮನಿಗೆ ಪಟ್ಟಬಂಧವಾದ ತೇದಿಯನ್ನಾಗಲಿ ಕಂಡುಹಿಡಿವುದಕ್ಕೆ ಏನೂ ಉಪಯೋಗಿಯಾಗಲಾರದು; ಏಕೆಂದರೆ, ಅದೇ ಕ್ರಿ. ಶ. 1076ನೆಯ ನಳ ಸಂವತ್ಸರದ ಭಾದ್ರಪದ ಬಹುಳ ೩೦ (1ನೆಯ ಸೆಪ್ಟಂಬರ್ 1076) ಯ ವರೆಗಾದರೂ ಭುವನೈಕಮಲ್ಲನು ಚಾಳುಕ್ಯ ಸಿಂಹಾಸನದಲ್ಲಿ ಇದ್ದನೆಂದಿಷ್ಟು ಸ್ಪಷ್ಟವಾಗಿರುವಲ್ಲಿ, ಅದಕ್ಕಿಂತ ೬ ತಿಂಗಳ ಹಿಂದಣ ಚೈತ್ರದಲ್ಲಿ ಆತನ ತಮ್ಮನಾದೀ ವಿಕ್ರಮಾದಿತ್ಯನು ಆ ಚಾಳುಕ್ಯ ರಾಜ್ಯದ ಸಮ್ರಾಜನಾಗಿರುವ ಬಗೆ ಹೇಗೆ? ಇನ್ನು, ಆಗ್ಗೆ ವಿಕ್ರಮಾದಿತ್ಯನು ತನ್ನ ಅಣ್ಣನ ಕೈ ಕೆಳಗಿನ ಮಹಾ ಮಂಡಲೇಶ್ವರನಾಗಿಯೂ ಇದ್ದಿರಲಾರನು; ಅಷ್ಟೇ ಅಲ್ಲ, ಅಣ್ಣ ತಮ್ಮಂದಿರೊಳಗೆ ಮೊದಲೇ ಜಗಳ ಬಂದಿದ್ದು ಆತನೆಲ್ಲಿ ಸುತ್ತುತ್ತಲಿದ್ದನೋ? ಅಂಥ

ಕಾಲದಲ್ಲಿ ಯಾವನಾದರೂ ತನ್ನದೆಂದು ಒಂದು ಹೊಸ ಶಕವನ್ನು ಸ್ಥಾಪಿಸುವನೆ? ತಾನು ಏಕಮಾತ್ರ ಸಮ್ರಾಜನಾಗಿ ತನ್ನ ನೆಲೆಯನ್ನು ದೃಢಗೊಳಿಸದ ಮುಂಚೆ ಯಾವನಾದರೂ ತನ್ನ ಹೆಸರ ಶಕವನ್ನು ಸ್ಥಾಪಿಸುವ ಬಗೆಯಾದರೂ ಹೇಗೆ?

ಇವೇ ಮೊದಲಾದ ಕಾರಣಗಳಿಂದ ಈ ಹೊನ್ನಾಳಿಯ ಶಾಸನವನ್ನು ಚಾ. ವಿ. ಕಾಲದ ನಮಗೀವರೆಗೆ ದೊರೆತ ಶಾಸನಗಳಲ್ಲಿ ಮೊತ್ತಮೊದಲನೆಯದೆಂದೂ, ಹಾಗಾಗಿ ಆ ಶಕ ಕಾಲದ ವಿಚಾರದಲ್ಲಿ ಗರಿಷ್ಠವಾದುದೆಂದೂ ಅಂಗೀಕರಿಸಲಾಗುವುದಿಲ್ಲ. ಅದೊಂದು ಕೃತ್ರಿಮ ಶಾಸನ ಎನ್ನಲಾಗದಿದ್ದರೂ, ಅದನ್ನು ತಾನೆ ಆಧಾರಿಸಿ ಆ ಶಕ ಕಾಲವನ್ನು ಕುರಿತು ಇತ್ಯರ್ಥಿಸಲಿಕ್ಕೆ ಪ್ರಯತ್ನಿಸಿದರೆ ಅಂಥ ವಿಚಾರವು ಹಾದಿಗೆಡದಿರದೆಂದು ತೋರುತ್ತದೆ. ಆದಕಾರಣ, ಚಾ. ವಿ. ಕಾಲದ ಮೊದಲನೆಯ ನಳ ಸಂವತ್ಸರದಲ್ಲಿ ಹುಟ್ಟಿದ ಮತ್ತು ನಮಗೀವರೆಗೆ ದೊರೆತ ಶಾಸನಗಳಲ್ಲಿ ಶಿಕಾರಿಪುರ ನಂ. 292 (E. C. VII) ನೆಯ ಪುಷ್ಯ ಬಹುಳ ೩ (೧೩) ಸೋಮವಾರ ಉತ್ತರಾಯಣ ಸಂಕ್ರಾಂತಿ ಎಂದು ತೇದಿಸಲ್ಪಟ್ಟಿರುವ (26ನೆಯ ಡಿಶಂಬರ್ 1076) ಶಾಸನವೇ ಮೊತ್ತ ಮೊದಲನೆಯದೆಂದು ಕಾಣುತ್ತದೆ. ಈ ಶಿಕಾರಿಪುರ ನಂ. 292ನೆಯ ಶಾಸನದಲ್ಲಿ ವಿಕ್ರಮಾದಿತ್ಯನೊಂದಿಗೆ ಸೇರಿ ತಮ್ಮ ಅಣ್ಣನಾದ ಚಕ್ರವರ್ತಿ ಭುವನೈಕಮಲ್ಲನಿಗೆ ಇದಿರಾಗಿ ಮಾರ್ಮಲೆತ 'ಶ್ರೀಮನ್ನೊಳಂಬದೇವ'ನೆಂಬ ಜಯಸಿಂಹನು[13] "ತಾಣಗುಂದೂರ ಜೀಡಿನೊಳ್" ಇದ್ದನೆಂದೂ, ಆತನಿಂದ ಅನುಜ್ಞೆಪಡೆದು ತಾನೆ ಈ ಶಾಸನೋಕ್ತ ದತ್ತಿಯಾಯಿತೆಂದೂ ಹೇಳಿರುವುದರಿಂದ ಆ ಸೋದರರೊಳಗಾದ ಕಾಳಗವು ಈ ಶಾಸನದ ತೇದಿಯಾದ 1076ನೆಯ ಡಿಶಂಬರ್ 26ನೆಯ ತಾರೀಕಿಗೆ ಮುಂಚೆಯೇ ತೀರ ಮುಗಿದು ವಿಕ್ರಮಾದಿತ್ಯನು ಏಕಮಾತ್ರ ಸಮ್ರಾಜನಾಗಿದ್ದಿರಬೇಕು; ಆ ಬಳಿಕ, ಕೂಡಲೆ ತನ್ನ ತಮ್ಮನಾದ ಜಯಸಿಂಹನನ್ನು ಆ ಮಹಾ ಮಂಡಲಾಧಿಪತ್ಯದಲ್ಲಿ ನೇಮಿಸಿರಬೇಕು; ಹಾಗೆಯೇ, ಅಚಿರೇಣ ತನ್ನ ಹೆಸರ ಹೊಸ ಶಕವನ್ನು ಸ್ಥಾಪಿಸಿರಬೇಕು ಎಂದು ವ್ಯಕ್ತವಾಗುವುದರಿಂದ, ಹಾಗೆ ಆತನು ಸ್ಥಾಪಿಸಿದ ಆ ಹೊಸ ಶಕವು ಈ ಶಾಸನದ ಕಾಲಕ್ಕೆ ಸಮ ಸಾಮಯಿಕವಾಗಿ ಕೆಲವೇ ದಿನಗಳ ಮುಂಚೆ ಚಾಳುಕ್ಯ ಸಾಮ್ರಾಜ್ಯದಲ್ಲಿ ಸಾರಲ್ಪಟ್ಟಿರಬೇಕು ಎಂದೂ ನಿಷ್ಪನ್ನವಾಗುತ್ತದೆ.

ಚಾಳುಕ್ಯ ವಿಕ್ರಮನ ಆಳಿಕೆಯಲ್ಲಿ ಹುಟ್ಟಿದ, ಹಾಗೂ ಆತನ ತ್ರಿಭುವನಮಲ್ಲ ಮೊದಲಾದ ಹೆಸರುಗಳುಳ್ಳ ನನಗೆ ದೊರಕಿದಷ್ಟು ಶಾಸನಗಳನ್ನು ಒಟ್ಟುಗೂಡಿಸಿರುವ ಒಂದು ಪಟ್ಟಿಯನ್ನು ಈ ಲೇಖದ ಕೊನೆಯಲ್ಲಿ ಕೊಟ್ಟಿದೆ. ಅದನ್ನು ನಿದಾನವಾಗಿ

13. ಈ ನೊಳಂಬದೇವನೆಂಬವನು ವಿಕ್ರಮನ ತಮ್ಮನಾದ ಜಯಸಿಂಹನೇ ಎಂಬುದು ಚಾ. ವಿ. ಕಾಲದ ೪ನೆಯ ಸಿದ್ಧಾರ್ಥಿ (ಕ್ರಿ. ಶ. 1079) ಸಂವತ್ಸರದಲ್ಲಿ ಹುಟ್ಟಿದ ಶಿಕಾರಿಪುರ ನಂ. 293ರಲ್ಲಿರುವ "ಯುವರಾಜಂ ಚಾಳುಕ್ಯ ಪಲ್ಲವ ಪೆರ್ಮಾನಡಿ ವೀರ ನೊಳಂಬ ಜಯಸಿಂಹದೇವ" ಎಂಬುದರಿಂದಲೂ, ಅದೇ ವರ್ಷದ ಶಿಕಾರಿಪುರ ನಂ. 297ರಲ್ಲಿರುವ "ಅಣ್ಣನಂಕಕಾರ ಶ್ರೀಮತ್ತ್ರೈಲೋಕ್ಯಮಲ್ಲ ವೀರ ನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಹದೇವ" ಎಂಬುದರಿಂದಲೂ ಸ್ಪಷ್ಟವಾಗುತ್ತದೆ.

ಸಮಿಾಕ್ಷಿಸುವಂಪ. ಚಾಳುಕ್ಯ ವಿಕ್ರಮ ಶಕವನ್ನು ಕುರಿತು ಇವಷ್ಟು ವಿಷಯ ಗಳಾದರೂ ಮನವರಿಕೆಯಾಗದಿರವು :—

(೧) ಚಾ. ವಿ. ಶಕವು ಆರಂಭಿಸಿದುದು ಶಾ. ಶ. 998ನೆಯ ನಳ ಸಂವತ್ಸರ ದಲ್ಲಿ, ಎಂದರೆ ಕ್ರಿ. ಶ. 1076ರಲ್ಲಿ.

ಉ.—ಶಾ. ಶ. ೯೯೯ನೆಯ ಪಿಂಗಳ ಸಂವತ್ಸರವು (ಕ್ರಿ. ಶ. 1077–78) ಅದರ ೨ನೆಯ ವರ್ಷ; ಶಾ. ಶ. ೧೦೦೧ನೆಯ ಸಿದ್ಧಾರ್ಥಿ ಸಂವತ್ಸರವು (ಕ್ರಿ. ಶ. 1079–80) ಅದರ ೪ನೆಯ ವರ್ಷ; ಶಾ. ಶ. ೧೦೨೪ನೆಯ ಚಿತ್ರಭಾನು (1102–03) ಅದರ ೨೭ನೆಯ ವರ್ಷ; ಶಾ. ಶ. ೧೦೩೧ನೆಯ ವಿರೋಧಿ (1109–10) ಅದರ ೩೪ ನೆಯ ವರ್ಷ; ಶಾ. ಶ. ೧೦೩೪ನೆಯ ನಂದನ ಸಂವತ್ಸರವು (1112–13) ಅದರ ೩೭ ನೆಯ ವರ್ಷ; ಶಾ. ಶ. ೧೦೪೬ನೆಯ ಕ್ರೋಧಿ ಸಂವತ್ಸರವು (1124–25) ಅದರ ೪೯ನೆಯ ವರ್ಷ, ಇತ್ಯಾದಿ.

(೨) ಅದು ಸ್ಥಾಪಿಸಲ್ಪಟ್ಟ ತೇದಿ ಯಾವುದೇ ಇರಲಿ, ಅದರ ವರ್ಷಾರಂಭವು ಚೈತ್ರ ಶುದ್ಧ ಪಾಡ್ಯದಿಂದ.

ಉ.—(ಅ) ಚಾ. ವಿ. ೨೭ನೆಯ ಚಿತ್ರಭಾನು ಸಂವತ್ಸರದ ಚೈತ್ರ ಶುದ್ಧ ೧; ಚಾ. ವಿ. ೨೭ನೆಯ ಚಿತ್ರಭಾನು ಪುಷ್ಯ ಶುದ್ಧ ೧೩; ಚಾ. ವಿ. ೨೭ನೆಯ ಚಿತ್ರಭಾನು ಮಾಘ ಶುದ್ಧ ೧೧; ಚಾ. ವಿ. ೨೭ನೆಯ ಚಿತ್ರಭಾನು ಫಾಲ್ಗುಣ ಬಹುಳ ಪಾಡಿವ; ಚಾ. ವಿ. ೨೭ನೆಯ ಚಿತ್ರಭಾನು ಫಾಲ್ಗುಣ ಬಹುಳ ೧೫ (ಅಮಾವಾಸ್ಯೆ). (ಆ) ಚಾ. ವಿ. ೧೮ನೆಯ ಶ್ರೀಮುಖ ಸಂವತ್ಸರದ ಚೈತ್ರ ಶುದ್ಧ ೫; ಚಾ. ವಿ. ೧೮ನೆಯ ಶ್ರೀಮುಖ ಫಾಲ್ಗುಣ ಬಹುಳ ೩೦, ಇತ್ಯಾದಿ.

(೩) ಇವುಗಳಲ್ಲಿಯ ಅನೇಕ ಶಾಸನಗಳಲ್ಲಿ ಕೊಟ್ಟಿರುವ ಕಾಲ ವಿವರದಲ್ಲಿ ವರ್ಷ ಸಂಖ್ಯೆಯಲ್ಲೊ, ಸಂವತ್ಸರದ ಹೆಸರಿನಲ್ಲೊ, ತಿಥಿಯಲ್ಲೊ, ವಾರದಲ್ಲೊ, ಗ್ರಹಣ ಸಂಕ್ರಾಂತಿ ಮೊದಲಾದ ವಿಶೇಷ ವಿಷಯುಗಳಲ್ಲೊ ತಪ್ಪುಗಳಿವೆ; ಮತ್ತು ಅಂದಂದು ಮಾಡಿದ ದಾನಗಳ ಶ್ರೇಯೋಭಿವೃದ್ಧಿಯ ಬಗ್ಗೆ, ಆಯಾ ಉಕ್ತ ದಿನಗಳಲ್ಲಿ ಅಂಥಂಥ ವಾರಗಳೊ (ಮುಖ್ಯವಾಗಿ ಆದಿತ್ಯವಾರ, ಸೋಮವಾರ, ಗುರುವಾರಗಳು), ತಿಥಿಗಳೊ, ವ್ಯತೀಪಾತ ಯೋಗವೊ, ಎಲ್ಲಕ್ಕೂ ಮೇಲಾಗಿ ಉತ್ತರಾಯಣ ಸಂಕ್ರಾಂತಿಯೊ ಬಂದಿದ್ದುವೆಂದು ಹೇಳಲ್ಪಟ್ಟಿರಬೇಕಲ್ಲದೆ, ಅನೇಕ ಶಾಸನಗಳಲ್ಲಿ ಹೇಳಿದ ಈ ಆಯಾ ಘಟನೆಗಳು ಅವುಗಳ ವಾಸ್ತವಿಕ ತೇದಿಯಂದು ಬಂದಿದ್ದಿಲ್ಲವೆಂದು ಗುಣಿಸಿ ನೋಡಿದರೆ ತಿಳಿಯುತ್ತದೆ.

(೪) ಚೈತ್ರಾದಿ ಚಾಂದ್ರಮಾಸದ ಮಾಸಗಳು ವಿಶೇಷತಃ ಸೌರ ಗಣನೆ ಯಿಂದಲೇ ಬಳಕೆಯಲ್ಲಿ ಇದ್ದಿರಬೇಕು; ಹೀಗಾಗಿ, ಅಧಿಕ ಮಾಸ ನಿಜ ಮಾಸಗಳೆಂಬ ಉಲ್ಲೇಖಗಳೇ ಈ ಶಾಸನಗಳಲ್ಲಿ ಕಾಣಬರುವುದಿಲ್ಲ.

೫.—(ಅ) ಚಾ. ವಿ. ೨೭ ಚಿತ್ರಭಾನು ಚೈತ್ರ ಶುದ್ಧ ೧ ರವಿವಾರ (S.S.I.E. ಸಂ. 5). ಆ ವರ್ಷದಲ್ಲಿ ಚಾಂದ್ರ ಚೈತ್ರ ಶುದ್ಧ ೧, ಎಂದರೆ ಕ್ರಿ. ಶ. 1102ನೆಯ ಮಾರ್ಚಿ 21ನೆಯ ತಾರೀಕು ಶುಕ್ರವಾರವಾಗುತ್ತದೆ; ಆದರೆ, ಸೌರ ಚೈತ್ರ ಶುದ್ಧ ೧, ಎಂದರೆ ಚಾಂದ್ರ ವೈಶಾಖ ಶುದ್ಧ ಪಾಡ್ಯವು ಏಪ್ರಿಲ್ 20ನೆಯ ತಾರೀಕು ರವಿವಾರದಂದು ಬಂದಿದ್ದಿತು. (ಆ) ಚಾ. ವಿ. ೩೫ ವಿಕೃತಿ ಫಾಲ್ಗುಣ ಶುದ್ಧ ೫ ಬೃಹವಾರ (ಶಿವಮೊಗ್ಗ ಸಂ. 89). ಆ ವರ್ಷದಲ್ಲಿ ಚಾಂದ್ರ ಫಾಲ್ಗುಣ ಶುದ್ಧ ೫ ಗುರುವಾರ ಬಂದಿದ್ದಿಲ್ಲ; ಆದರೆ ಮಾರನೆಯ ಖರ ಸಂವತ್ಸರದ ಚಾಂದ್ರ ಚೈತ್ರ ಶುದ್ಧ ೫ ಎಂದರೆ, ವಿಕೃತಿ ಸಂವತ್ಸರದ ಸೌರ ಫಾಲ್ಗುಣ ಶುದ್ಧ ೫, ಕ್ರಿ.ಶ. 1111ನೆಯ ಮಾರ್ಚಿ 16ನೆಯ ತಾರೀಕು ಗುರುವಾರ ಬಂದಿದ್ದಿತು. (ಇ) ಚಾ. ವಿ. ೩೪ನೆಯ ವಿರೋಧಿ ಆಶ್ವಯುಜ ಬಹುಳ ೫ ಬೃಹಸ್ಪತಿವಾರ (S.S.I.E. ಸಂ. 66). ಇದು ಕ್ರಿ. ಶ. 1109 ನೆಯ ಸೆಪ್ಟಂಬರ್ 16ನೆಯ ತಾರೀಕು ಗುರುವಾರದಂದು ಬಂದ ಅಧಿಕ ಆಶ್ವಯುಜ ಬಹುಳ ೫. (ಈ) ಶಕ ೯೯೯ ಪಿಂಗಳ ಸಂವತ್ಸರ ಜ್ಯೇಷ್ಠ ಶುದ್ಧ ೨ ಬೃಹಸ್ಪತಿವಾರ (ನಗರ ಸಂ. 35, E.C. VIII). ಇದು ಅಧಿಕ ಜ್ಯೇಷ್ಠ ಶುದ್ಧ ೨ ಗುರುವಾರ ತಾರೀಕು 27ನೆಯ ಏಪ್ರಿಲ್ 1077. (ಉ) ಚಾ. ವಿ. ೧೩ ವಿಭವ ಚೈತ್ರ ಶುದ್ಧ ಅಕ್ಷಯ ತದಿಗೆ ಸೋಮವಾರ ಸಂಕ್ರಾಂತಿ.[14] ಈ ವಿಭವ ಸಂವತ್ಸರನಲ್ಲಿ ಚಾಂದ್ರ ಚೈತ್ರ ಶುದ್ಧ ೩, ಕ್ರಿ. ಶ. 1088ನೆಯ ಫೆಬ್ರುವರಿ 27ನೆಯ ತಾರೀಕು, ಆದಿತ್ಯವಾರ ಬಂದಿದ್ದಿತು; ಆದರೆ ಚಾಂದ್ರ ವೈಶಾಖ ಶುದ್ಧ ೩, ಎಂದರೆ ಸೌರ ಚೈತ್ರ ಶುದ್ಧ ೩, ಮಾರ್ಚಿ 27 ನೆಯ ತಾರೀಕು ಸೋಮವಾರ ಬಂದಿದ್ದಿತು. 'ಅಕ್ಷಯ ತದಿಗೆ' ಎನ್ನುವುದು ಚಾಂದ್ರ ವೈಶಾಖ ಶುಕ್ಲ ತದಿಗೆಗೆ ವಿನಾ, ಚಾಂದ್ರ ಚೈತ್ರ ಶುಕ್ಲ ತದಿಗೆಗೆಂದೂ ಅಲ್ಲ ಎಂಬುದಿಷ್ಟು ನಿಷ್ಕರ್ಷೆಯಾಗಿರುವುದರಿಂದ, ನಾವು ಈಗ ಯಾವ ತಿಂಗಳನ್ನು ಚಾಂದ್ರ ವೈಶಾಖವೆನ್ನುವೆವೊ, ಅದನ್ನು ಅವರು ಸೌರ ಚೈತ್ರವೆಂದಿಟ್ಟುಕೊಂಡು, ಚೈತ್ರವೆಂದೇ ಅದನ್ನು ಸರಾಗವಾಗಿ ಹೆಸರಿಸುತ್ತಿದ್ದರೆಂಬುದು ಇದರಿಂದ ಅತ್ಯಂತ ಸ್ಪಷ್ಟವಾಗುತ್ತದೆ.

ಈಗ, ಆ ವಡಗೇರಿಯ ಶಾಸನವೊಂದು ವಿನಾ, ಚಾಳುಕ್ಯ ವಿಕ್ರಮನ ಪಟ್ಟಬಂಧವನ್ನು ಕುರಿತು ಹೇಳುವ ಬೇರಾವ ಶಾಸನವಾದರೂ ನಮಗೀವರೆಗೆ ದೊರೆತಿಲ್ಲವೆಂಬುದರಿಂದ, ಆ ಶಾಸನದ ಒಕ್ಕಣೆಯನ್ನು ಈ ಮೇಲೆ ಒಟ್ಟುಹಾಕಿರುವ ಅನುಭವದ ಬೆಳಕಿನಲ್ಲಿ ಪರೀಕ್ಷಿಸಿ ನೋಡೋಣ. ಅದರಲ್ಲಿ "ಶ್ರೀಮಚ್ಚಾಳುಕ್ಯ ವರ್ಷದ ಪ್ರಥಮ ನಳ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿವಾರದಂದು ಪಟ್ಟಬಂಧೋತ್ಸವ ನಿಮಿತ್ತದಿಂ ಪಲವುಂ ಮಹಾದಾನಂಗಳಂ ಮಾಡಿ" ಎಂಬದೆಯಷ್ಟೆ! ಇದರಿಂದ ಈ ಫಲಿತಾಂಶಗಳು ಉಪಲಬ್ಧವಾಗುತ್ತವೆ:—

(೧) ಇದರಲ್ಲಿ "ಪಟ್ಟಬಂಧೋತ್ಸವ ನಿಮಿತ್ತದಿಂ" ಎಂದಿಷ್ಟು ಸ್ಪಷ್ಟವಾಗಿ ಹೇಳಿರುವುದರಿಂದ, ಇದು ಪಟ್ಟಬಂಧವನ್ನು ಕುರಿತ ಉಲ್ಲೇಖವೆಂಬುದೇ ಸರಿಯಲ್ಲದೆ,

14. 'Hyderabad Archæologic Series' ನಂ. 5; ಮುನಿರಾಬಾದು ಶಿಲಾಲೇಖ.

ಕೆಲವು ವಿದ್ವಾಂಸರು ಊಹಿಸಿರುವಂತೆ ಆ ಪಟ್ಟಬಂಧವಾದ ಮಾರನೆಯ ವರ್ಷದಲ್ಲಿ ಜರುಗಿದ ಅದರ ಪ್ರಥಮ ವರ್ಷವರ್ಧಂತಿಯನ್ನು ಕುರಿತ ಹೇಳಿಕೆಯೆಂಬುದು[15] ಎಂದಿಗೂ ಸರಿಯಲ್ಲ.

(೨) ಈ ಶಾಸನದಲ್ಲಿ ಹೇಳಿರುವ ಪ್ರಧಾನ ವಿಷಯವು ಆ ಪಟ್ಟಬಂಧಕ್ಕೆ ಸಂಬಂಧಿಯಾಗಿ ಮಾಡಲ್ಪಟ್ಟ ದಾನಮಾನಗಳು ಮತ್ತು ಅಂಥ ದಾನಮಾನಗಳನ್ನು ಮಾಡಿದ ತೇದಿಯೇ ಹೊರತು, ಆ ಪಟ್ಟಬಂಧವಾದ ತೇದಿಯನ್ನೇ ಹೇಳುವುದು ಈ ಶಾಸನದ ಮುಖ್ಯೋದ್ದೇಶವೇನೂ ಅಲ್ಲ. ಆದಕಾರಣ ಆ ತೇದಿಯನ್ನು ಅಲ್ಲಿ ಹೇಳಿರಲಿಕ್ಕೆ ಕಾರಣವೂ ಇಲ್ಲ. ಆದುದರಿಂದ, ಈ ಶಾಸನದಿಂದ ಆ ಪಟ್ಟಬಂಧವಾದ ಖಾಸಾ ತೇದಿಯನ್ನು ಕುರಿತು ಮಾಡಲಾಪ ಅನುಮಾನವೇನೆಂದರೆ, ಆ ಪಟ್ಟಬಂಧವು ಈ ಶಾಸನೋಕ್ತ ತೇದಿಯಾದ ಚಾ. ವಿ. ೧ನೆಯ ನಳ ಸಂವತ್ಸರದ ಫಾಲ್ಗುಣ ಶುಕ್ಲ ಪಂಚಮಿಗೆ ಕೆಲ ದಿನಗಳಿಗೆ ಮುಂಚೆ ನೆರವೇರಿದ್ದು, ತತ್ಸಂಬಂಧಿಯಾದ ದಾನಗಳು ಇದರಲ್ಲಿ ಹೇಳಿರುವ ತೇದಿಯಂದು (ಅಲ್ಲವೆ, ಆ ತೇದಿಯಂದೂ) ನಡೆದುವೆಂದು ತಾನೆ. ಈ ಅನುಮಾನವು ಸರಿ ಎಂಬುದಕ್ಕೆ ಇದೊಂದು ದೃಷ್ಟಾಂತವನ್ನು ಕೊಡಬಹುದು:—

(ಅ) ಕಡೂರು ನಂ. 4 (E.C. VI)—"ಹೊಯ್ಸಳ ಬಲ್ಲಾಳ ದೇವರ್.... ಶಕ ವರ್ಷಂ ೧೦೯೫ನೆಯ ವಿಜಯ ಸಂವತ್ಸರದ ಶ್ರಾವಣ ಶುದ್ಧ ೧೧ ಆದಿವಾರದಂದು ಪಟ್ಟಬಂಧೋತ್ಸವದಲು ಶ್ರೀ ಸೌರಾಷ್ಟ್ರ ಸೋಮನಾಥ ದೇವರಂಗಭೋಗಕ್ಕೆ.... ಧಾರೆಯೆರೆದು ಕೊಟ್ಟರು."

(ಆ) ಕಡೂರು ನಂ. 136—"ಹೋಸಣ ವೀರಬಲ್ಲಾಳ ದೇವರು.... ಸಕ ವರುಷ ೧೦೯೫ ವಿಜಯ ಸಂವತ್ಸರದ ಶ್ರಾವಣ ಸುದ್ಧ ೧೧ ಆದಿವಾರದಂದು ತನ್ನ ಪಟ್ಟಬದ್ಧೋತ್ಸಹದಲು ಸುಖದ ವಿನೋದದಿಂ ರಾಜ್ಯಂಗೆಯುತಿರೆ....ಆ ಹಿರಿಯೂರ ಮಾಹನಾಳ್ಪ್ರಭು ಸಂಕಗಾವುಂಡ ಶ್ರೀ ಸೋಮನಾಥ ದೇವಗೆ....ಧಾರಾಪೂರ್ವಕಂ ಮಾಡಿಕೊಟ್ಟನು."

(ಇ) ಕಡೂರು ನಂ. 139—"ಹೊಯ್ಸಣ ವೀರಬಲ್ಲಾಳ ದೇವರು....ಸಕ ವರುಷದ ೧೦೯೫ ವಿಜಯ ಸಂವತ್ಸರದ ಶ್ರಾವಣ ಸುದ್ಧ ೧೦ ಆದಿವಾರದಂದು ತನ್ನ ಪಟ್ಟಬದ್ಧೋತ್ಸಾಹದಲು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯುತ್ತಿರೆ.... ಆ ನಿರ್ಗುಂದದ ಚಟ್ಟಯ ನಾಯಕನ ಹಿರಿಯೂರ ನಾಳ್ಪ್ರಭು ಸಂಕ ಗವುಡನು ಆ ಮೂಲಸ್ಥಾನದ ಕಲಿದೇವರ್ಗೆ ಕೊಟ್ಟ...."

ಈ ಮೂರು ಶಾಸನಗಳಲ್ಲಿರುವ ತೇದಿ (ಕಡೂರು ನಂ. 139ರಲ್ಲಿ ಶ್ರಾವಣ "ಸುದ್ಧ ೧೦" ಎಂದಿರುವುದು ಸರಿಯಲ್ಲ. ಅದು "ಸುದ್ಧ ೧೧" ಎಂದಾಗಬೇಕು.) ಕ್ರಿ. ಶ. 1173ನೆಯ ಜುಲೈ 22ನೆಯ ತಾರೀಕು ಆದಿತ್ಯವಾರವಾಗುತ್ತದೆ; ಆದರೆ ಆ ತೇದಿ ಪಟ್ಟಬಂಧಕ್ಕೆ ಎಂದಿಗೂ ಸಲ್ಲ; ಏಕೆಂದರೆ—

15. "The record may possibly, in a confused manner, refer to an anniversary festival"—Fleet's "Kanarese Dynasties" (p. 446, F. N 6).

(ಕ) ಅಂದಿನ ನಕ್ಷತ್ರ ಮೂಲ—ಮೂಲ ನಕ್ಷತ್ರವು ಪಟ್ಟಬಂಧಕ್ಕೆ ಪ್ರಶಸ್ತವೆಂದು ಹೇಳಿರುವ ನಕ್ಷತ್ರಗಳಲ್ಲಿ ಇಲ್ಲ;

(ಖ) ಅಂದಿನ ವಾರ ರವಿವಾರ—"ಆದಿತ್ಯಂ ಮಂಗಲಂ ತ್ಯಕ್ತ್ವಾ ಸರ್ವೇ ವಾರಾಃ ಶುಭಾವಹಾಃ" ಎಂಬುದನ್ನು ಈ ಮೊದಲೇ ಹೇಳಿದೆ;

(ಗ) ಏಕಾದಶಿಯು ತಿಥಿ ಹರಿದಿನವೆಂಬುದರಿಂದ ವಿಷ್ಣೂಪಾಸಕರಿಗೆ ಅದೊಂದು ವ್ರತದಂತೆ ಪವಿತ್ರವಾದ ಪರ್ವಕಾಲವಾಗಿರುತ್ತದೆ; ಅದುಕಾರಣ ಅಂದು ಯಾವ ಶುಭಕಾರ್ಯವನ್ನಾದರೂ ಆಚರಿಸುವ ಪದ್ಧತಿಯಿಲ್ಲ;

(ಘ) ಈ ತೇದಿ ಕರ್ಕಾಟಕ ಮಾಸದ ಕೊನೆಯಲ್ಲಿದೆ; ಸಿಂಹ ಸಂಕ್ರಾಂತಿಗೆ ಇನ್ನು ಕೆಲವೇ ದಿನಗಳಿವೆ. ಪಟ್ಟಬಂಧಕ್ಕೆ ದಕ್ಷಿಣಾಯನವು ಅಷ್ಟು ಪ್ರಶಸ್ತವಲ್ಲ; ಅಲ್ಲದೆ, ಅದರಲ್ಲಿಯು ಕರ್ಕಾಟಕ ಮತ್ತು ಕನ್ಯಾ ಮಾಸಗಳು (ಉತ್ತರಾಯಣದಲ್ಲಿಯು ಕುಂಭ ಮಾಸದಂತೆ) ಸಂಪೂರ್ಣವಾಗಿ ತ್ಯಾಜ್ಯವೆಂಬುದನ್ನು ಮೇಲೆ ಹೇಳಿದೆ ("ಕುಂಭಾಂಗನಾ ಕರ್ಕಿಗಸ್ತ್ಯಾಜ್ಯಃ").

ಹೀಗಾಗಿ, ಆ ಹೊಯ್ಸಳ ವೀರಬಲ್ಲಾಳನಿಗೆ ಪಟ್ಟಬಂಧವಾದ ತಿಥಿ ಈ ಮೂರು ಶಾಸನಗಳಲ್ಲಿ ಹೇಳಿರುವಾ ಶ್ರಾವಣ ಶುದ್ಧ ೧೧ ಎಂದಿಗೂ ಆಗಿರಲಾರದು. ಆತನು ಈ ಶಾಸನೋಕ್ತ ತಿಥಿಗೆ ಮುಂಚೆ ಮಿಥುನ ಮಾಸದಲ್ಲಿಯೇ ಪಟ್ಟಾಭಿಷಿಕ್ತನಾಗಿದ್ದು, ಆ ಸಂಸ್ಕಾರವನ್ನು ಕುರಿತ ದತ್ತಿಯನ್ನು (ಕಡೂರು ಸಂ. 4) ಆತನು ಯಥಾವಕಾಶವಾಗಿ ಕರ್ಕಾಟಕ-ಶ್ರಾವಣದ ಏಕಾದಶಿ ಪುಣ್ಯದಿನವೆಂದೇನೋ ಅಂದು ಮಾಡಿರಬೇಕು; ಹಾಗೆಯೇ, ಮಿಕ್ಕೆರಡು ಶಾಸನಗಳಲ್ಲಿ ಹೇಳಿರುವ ದತ್ತಿಗಳನ್ನು ಆತನ ನಾಳ್ಪ್ರಭುಗಳು ಆತನನ್ನು ಅನುವರ್ತಿಸಿಯೇ ಏನೋ, ಅದೇ ದಿನದಲ್ಲಿ ಮಾಡಿರಬೇಕು. ಆದಕಾರಣ, ಈ ೩ ಶಾಸನಗಳ ಮೂಲೋದ್ದೇಶವು ಆಯಾ ದತ್ತಿಯನ್ನು ಮಾಡಿದ ತೇದಿಯನ್ನು ಮಾತ್ರ ನಿರ್ದಿಷ್ಟಪಡಿಸುವುದಲ್ಲದೆ ಆ ದತ್ತಿಗಳಿಗೆ ಕಾರಣಭೂತವಾಗಿರಬಹುದಾದ ಪಟ್ಟಬಂಧದ ಖಾಸಾ ತಿಥಿಯನ್ನೇ ಹೇಳುವುದಲ್ಲ ಎಂಬುದಿಷ್ಟು ಪ್ರತ್ಯಕ್ಷವಾಗಿ ತೋರುತ್ತದೆ.

(೩) ಈ ವಡಗೇರಿಯ ಶಾಸನದ ಚಾ. ವಿ. ೧ನೆಯ (ಎಂದರೆ, ಶಾ. ಶ. ೯೯೮ನೆಯ) ನಳ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ, ಇದರಲ್ಲಿ ಹೇಳಿರುವ ಮೇರೆಗೆ, ಬೃಹಸ್ಪತಿವಾರದಂದು ಬಂದಿದ್ದಿತೆಂದೂ, ಅಂದಿನ ನಕ್ಷತ್ರವು ಅಶ್ವಿನಿಯಾಗಿದ್ದು ಅದೊಂದು ಕುಜ ಪಂಚಮಿ ಎಂಬ ದಗ್ಧಯೋಗವಾಗಿದ್ದಿತೆಂದೂ ಈ ಮೇಲೆ ಹೇಳಿದೆ. ಅಂದು ಆ ಪಟ್ಟಬಂಧವೆಂದಿಗೂ ಆಗಿರದೆಂಬ ಮಾತಂತಿರಲಿ; ವಸ್ತುತಃ, ಕುಜವಾರದಂದು ಬಂದಿದ್ದ ಆ ತೇದಿ ಈ ವಡಗೇರಿಯ ಶಾಸನದಲ್ಲಿ ಬೃಹಸ್ಪತಿವಾರದಂದು ಬಂದಿದ್ದಿತೆಂದು ಹೇಳಿರುವ ಫಾಲ್ಗುಣ ಶುಕ್ಲ ಪಂಚಮಿ ಎಂದಿಗೂ ಆಗಿರಲಾರದು. ಈಗ ಆ ಚಾ. ವಿ. ೧ನೆಯ ನಳ ಸಂವತ್ಸರದ ಫಾಲ್ಗುಣ ಮಾಸದ ಬಳಿಕದೇ ಆದ (ಪಿಂಗಳ ಸಂವತ್ಸರದ) ಚೈತ್ರ ಮಾಸದಲ್ಲಿ ಶುಕ್ಲ ಪಂಚಮಿ ಬೃಹಸ್ಪತಿವಾರದಂದೇ ಬಂದಿದ್ದಿತು. ಆ ಕಾಲದ ಶಾಸನಗಳಲ್ಲಿ ಚೈತ್ರಾದಿ ಚಾಂದ್ರಮಾನದ ಮಾಸಗಳು ಸೌರ ಗಣನೆಯಿಂದಲೂ ಬಳಕೆ

ಯಲ್ಲಿದ್ದನೆಂದು ಈ ಮೇಲೆ ಕಂಡಿರುವುದರಿಂದ, ಈ ಚಾ. ವಿ. ೨ನೆಯ ಪಿಂಗಳ (ಶಾ. ಶ. ೯೯೯) ಸಂವತ್ಸರದ ಚಾಂದ್ರ ಚೈತ್ರ ಶುಕ್ಲ ಪಂಚಮಿಯ ತಿಥಿ ಸೌರ ಗಣನೆಯಿಂದ ಚಾ. ವಿ. ೧ನೆಯ ನಳ (ಶಾ. ಶ. ೯೯೮) ಸಂವತ್ಸರದ ಫಾಲ್ಗುಣ ಶುಕ್ಲ ಪಂಚಮಿಯಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಇದು ಕ್ರಿ. ಶ. 1077ನೆಯ ಮಾರ್ಚ 2ನೆಯ ತಾರೀಕು ಬೃಹಸ್ಪತಿವಾರವಾಗುತ್ತದೆ; ಮತ್ತು ಆ ವಡಗೇರಿಯ ಶಾಸನದಲ್ಲಿ ಹೇಳಿರುವ ತೇದಿ ಸರ್ವಥಾ ಇದೇ ಆಗಿರಬೇಕೆಂದು ನನಗೆ ತೋರುತ್ತದೆ.

ಹೀಗಾದರೆ, ಈ ದೃಷ್ಟಿಯಿಂದ, ಎಂದರೆ ವಡಗೇರಿಯ ಶಾಸನೋಕ್ತ ಚಾ. ವಿ. ೧ನೆಯ ನಳ ಸಂವತ್ಸರದ ಫಾಲ್ಗುಣ ಶುಕ್ಲ ೫, ಎಂದರೆ ಆ ಸಂವತ್ಸರದ ಸೌರ ಫಾಲ್ಗುಣ (ಮತ್ತು ಮಾರನೆಯ ಪಿಂಗಳ ಸಂವತ್ಸರದ ಚಾಂದ್ರ ಚೈತ್ರ) ಶುಕ್ಲ ಪಂಚಮಿ (2-3-1077) ಗುರುವಾರ ಎಂಬೀ ಆಧಾರದಿಂದ ಚಾಳುಕ್ಯ ವಿಕ್ರಮನಿಗೆ ಪಟ್ಟಬಂಧವಾದ ತೇದಿಯನ್ನು ಹೇಗೆ ಗೊತ್ತುಹಚ್ಚಲಾಗುತ್ತದೆಯೋ ನೋಡೋಣ:

ಶಾ. ಶ. ೯೯೮ನೆಯ ನಳ ಸಂವತ್ಸರದ ಭಾದ್ರಪದ ಅಮಾವಾಸ್ಯೆ (1–9–1076) ಯಂದು ಭುವನೈಕಮಲ್ಲನು ಪಟ್ಟದಲ್ಲಿದ್ದನೆಂದೂ, ಆ ಬಳಿಕ ತಾನೆ ಆ ಚಾಳುಕ್ಯ ಸೋದರರೊಳಗೆ ನಡೆದುದೆಂಬ ಯುದ್ಧವಾಗಿರಬೇಕೆಂದೂ, ಅದೇ ಸಂವತ್ಸರದ ಪುಷ್ಯ ಬಹುಳ ೧೩ ಉತ್ತರಾಯಣ ಸಂಕ್ರಾಂತಿಗೆ ಮುಂಚೆಯೇ ಅದು ತೀರಿ ಚಾಳುಕ್ಯ ವಿಕ್ರಮನು ತಾನನ್ನು ಚಾಳುಕ್ಯ ಸಾಮ್ರಾಜ್ಯದ ಏಕರಾಜನೆಂದು ಸಾರಿ ಆ ತೇದಿಗೆ ಕೆಲ ದಿನ ಮುಂಚೆ ತಾನೆ ತನ್ನ ಹೆಸರಿನಿಂದ ಹೊಸ ಶಕವನ್ನು ಸ್ಥಾಪಿಸಿರಬೇಕೆಂದೂ ಈ ಮೇಲೆ ಕಂಡಿರುವುದರಿಂದ, ಆ ಪುಷ್ಯ ಬಹುಳ ೧೩ಯ (26–12–1076) ವರೆಗೆ ದಕ್ಷಿಣಾಯನವಿದ್ದುದರಿಂದಲೂ, ಯುದ್ಧವೇ ಮೊದಲಾದ ಅಶಾಂತಿಯ ದೆಸೆಯಿಂದಲೂ ಚಾಳುಕ್ಯ ವಿಕ್ರಮನ ಪಟ್ಟಾಭಿಷೇಕವು ಆ ಮುಂಚೆ ಆಗಿರಲಾರದೆಂದು ಹೇಳಬೇಕಾಗಿಲ್ಲ. ಅಥವಾ, ಬಿಲ್ಹಣನ ಮಾತನ್ನು ಆಧಾರಿಸುವುದಾದರೆ, ತನ್ನ ಅಣ್ಣನಾದ ಭುವನೈಕಮಲ್ಲನನ್ನು ಸೆರೆ ಹಿಡಿದ ಬಳಿಕಲೂ ಆತನನ್ನು ಪುನಃ ಪಟ್ಟದಲ್ಲಿ ಕುಳ್ಳಿರಿಸೋಣ ಎಂದು ಚಾಳುಕ್ಯ ವಿಕ್ರಮನು ತಳಮಳಿಸಿದನೆಂಬಲ್ಲಿ (ಎಂದರೆ, ಹಾಗೆ ಸೆರೆ ಹಿಡಿದ ಒಂದೆರಡಾದರೂ ತಿಂಗಳ ಬಳಿಕ)[16], ಬಿಲ್ಹಣನು ವಿಕ್ರಮನನ್ನು "ರಾಜಪುತ್ರ"[17] ಎಂದೇ ಸಂಬೋಧಿಸಿರುವುದರಿಂದ ಆತನು ಆಗ್ಗೆ ಇನ್ನೂ ಚಕ್ರವರ್ತಿಯಾಗಿದ್ದಿಲ್ಲ ಎಂದು ಸ್ಪಷ್ಟವಾಗುತ್ತದೆ.

ಆ ಪುಷ್ಯ ಬಹುಳ ೧೩ಯ ಉತ್ತರಾಯಣ ಸಂಕ್ರಾಂತಿಯಿಂದ ಮುಂದೆ ಹೆಚ್ಚು ಕಡಿಮೆ ಮಾಘ ಬಹುಳ ೧೩ಯ ವರೆಗೆ ಒಂದು ತಿಂಗಳಿಗೆ ಮಕರಮಾಸವಿದ್ದಿತು;

16. ಭುವನೈಕಮಲ್ಲನನ್ನು ಸೆರೆಹಿಡಿದ ಬಳಿಕ (VI. ೯೦), ಆತನನ್ನೊಡಗೊಂಡು ವಿಕ್ರಮನು ತುಂಗಭದ್ರೆಯ ತಟಕ್ಕೆ ಮರಳಿ ನಡೆದನೆಂದೂ (VI. ೯೨), ಅಲ್ಲಿ ಆತನಿಗೆ ಅಣ್ಣನನ್ನು ಸೆರೆಬಿಡಿಸಬೇಕೆಂದು ಮನಸ್ಸಾಯಿತೆಂದೂ (VI. ೯೩) ಬಿಲ್ಹಣನು ಹೇಳಿರುವುದರಿಂದ, ನಡುವೆ ತಕ್ಕಷ್ಟು ಸಮಯ ಕಳೆದಿರಬೇಕು.

17. "ಪುನರುಪಜಾತ ಮತಿಃ ಸ ರಾಜಪುತ್ರಃ" (VI. ೯೩).

ಅದು ಪಟ್ಟಬಂಧಕ್ಕೆ ಬಹು ಪ್ರಶಸ್ತವೂ ಆಗಿದೆ ಎಂಬುದು ನಿಶ್ಚಯವೇ. ಆದರೆ ಅದರ ಶುಕ್ಲಪಕ್ಷವು ಆರಂಭಿಸಲಿಕ್ಕೆ ಇನ್ನು ಎರಡೇ ದಿನಗಳಿವೆ, ಮುಗಿವುದಕ್ಕೆ ಹದಿನೇಳೇ ದಿನಗಳಿವೆ. ಅವಷ್ಟೇ ದಿನಗಳ ನಡುವೆ ಆಗಿಹೋಗಲಿಕ್ಕಿರುವ ಪಟ್ಟಬಂಧಕ್ಕೆ ಬೇಕಾದ ಸರ್ವ ಸನ್ನಾಹಗಳನ್ನು ರೂಢಿಸುವುದಕ್ಕೆ ಸಮಯ ಸಾಕೆ? ಅದನ್ನು ಕುರಿತು ಚಾಳುಕ್ಯ ಸಾಮ್ರಾಜ್ಯದಲ್ಲೆಲ್ಲ ಸಾರಿ ತಿಳಿಸಲಿಕ್ಕೆ ಹೊತ್ತಿದೆಯೆ? ಸಾಮಂತರೆಲ್ಲರನ್ನೂ ಬರಗೊಳಿಸಲಿಕ್ಕೆ ದಿನಗಳೆಲ್ಲಿವೆ? ಸಾಮಂತರೆಲ್ಲರೂ ತನಗೆ ಅನುಕೂಲರಾಗಿರುವರೆ? ಇನ್ನೂ ಅನುಕೂಲರಾಗದವರನ್ನು ತನ್ನ ಕಡೆಗೆ ಒಲಿಸಿಕೊಳ್ಳುವರೆ, ಅಥವಾ ಅವರಿನ್ನೂ ಪ್ರತಿಕೂಲರಾಗಿರುವವರಾದರೆ ಅಂಥವರನ್ನು ಕಿತ್ತುಹಾಕಿ ಅವರ ಜಾಗದಲ್ಲಿ ಇತರರನ್ನು ನೇಮಿಸಿಕೊಳ್ಳುವುದಕ್ಕೆ ಸಾಕಾಗುವಷ್ಟು ಅವಕಾಶ ಬೇಡವೆ? ವಿಕ್ರಮನೇನೂ ಭುವನೈಕಮಲ್ಲನ ಬಳಿಕ ಸಾಹಜಿಕವಾಗಿ ಅರಸಾದವನಲ್ಲ; ಆತನನ್ನು ಯುದ್ಧದಲ್ಲಿ ಗೆದ್ದು ಸೆರೆ ಹಿಡಿದು ಪದಚ್ಯುತನಾಗಿಸಿ ತಾನೆ ಆತನ ಸಿಂಹಾಸನವನ್ನೇರಿದವನು. ಅಂಥ ಸ್ಥಿತಿಯಲ್ಲಿ ಚಾಳುಕ್ಯ ಸಾಮ್ರಾಜ್ಯದಲ್ಲಿ ದ್ವೈಧವಿಲ್ಲದಿರುವುದೆ? ದ್ವೈಧವಿರುವಲ್ಲಿ ಅಶಾಂತಿಯಿಲ್ಲದಿರುವುದೆ? ಅಶಾಂತಿಯಿರುವಂದು ತಟಕ್ಕನೆ ಪಟ್ಟಾಭಿಷಿಕ್ತನಾಗಲಿಕ್ಕೆ ಸಾಧ್ಯವಿದೆಯೆ? ಅಥವಾ, ಪಟ್ಟಾಭಿಷೇಕವೆಲ್ಲಿ ಆಗಬೇಕು? ರಾಜಧಾನಿಯಾದ ಕಲ್ಯಾಣದ ಜನಪದದ ಮನಸ್ಸಿನ ನಾಡಿ ಯಾವ ಕಡೆಗೆ ಬಡಿಯುತ್ತದೆಂದು ತಿಳಿವತನಕ ಅಲ್ಲಿ ಆಗುವುದೆಂತು? ಅಲ್ಲಿ ಆಗದಾದರೆ ಇನ್ನೆಲ್ಲಿ ಆಗಬೇಕು? ಯಾವುದಾದರೊಂದು ಸರ್ವಾನುಕೂಲವಾಗಿರುವ ಕೇಂದ್ರವಾಗಿರುವ ನೆಲೆವೀಡಲ್ಲಿ ಆಗಬೇಡವೆ? ಇವೆಲ್ಲ ಕಾರಣಗಳಿಂದ ಆ ಮಕರ ಮಾಘದ ಶುಕ್ಲಪಕ್ಷದಲ್ಲಿಯೂ, ಕೃಷ್ಣಪಕ್ಷವಂತೂ ಮಧ್ಯಮವೆಂಬುದರಿಂದ, ಆ ಬಹುಳ ಪಕ್ಷದಲ್ಲಿಯೂ ಚಾಳುಕ್ಯ ವಿಕ್ರಮನ ಪಟ್ಟಾಭಿಷೇಕವು ಜರುಗಿರಬಹುದೆಂದು ಊಹಿಸಲಾದರೂ ಶಕ್ಯವಲ್ಲ; ಅಥವಾ, ಶಕ್ಯವೆಂದಾದರೆ ಆ ಮಾಘ ಮಾಸದಲ್ಲಿ ನೆರವೇರಿದ ಆ ಪಟ್ಟಬಂಧಕ್ಕೆ ಸಂಬಂಧಿಯಾದ ದಾನಗಳನ್ನು ಹೊಗಳುವ ಈ ವಡಗೇರಿಯ ಶಾಸನವೇಕೆ ಅಲ್ಲಿಂದ ಎರಡು ತಿಂಗಳ ಮೇಲಕ್ಕೆ (ಸೌರ) ಫಾಲ್ಗುಣ ಶುದ್ಧ ಪಂಚಮಿ (ಎಂದರೆ ಮರು ಸಂವತ್ಸರದ ಚಾಂದ್ರ ಚೈತ್ರ ಶುಕ್ಲ ಪಂಚಮಿ) ಎಂದು ತೇದಿಸಲ್ಪಟ್ಟಿರಬೇಕು?

ಆ ಮಾಘ ಬಹುಳ ೧೩ಯಿಂದ ಹೆಚ್ಚು ಕಡಿಮೆ ಫಾಲ್ಗುಣ ಬಹುಳ ೧೩ಯ ವರೆಗೆ ನಡೆವ ಕುಂಭ ಮಾಸವು ಪಟ್ಟಬಂಧಕ್ಕೆ ಅನಿಷ್ಟವೆಂದೂ, ವಡಗೇರಿಯ ಶಾಸನದಲ್ಲಿ ಬೃಹಸ್ಪತಿವಾರ ಬಂದಿತೆಂದಿರುವ ಆ ಫಾಲ್ಗುಣ ಶುಕ್ಲ ಪಂಚಮಿ ಎಂಬುದು ಚಾಂದ್ರ ಫಾಲ್ಗುಣ ಶುಕ್ಲ ೫ ಅಲ್ಲ, ಸೌರ ಫಾಲ್ಗುಣ ಶುಕ್ಲ ೫ ತಾನೆ (ಎಂದರೆ ಚಾಂದ್ರ ಚೈತ್ರ ಶುಕ್ಲ ೫) ಎಂದೂ, ಈ ಮೇಲೆ ಕಂಡಿರುವುದರಿಂದ, ಆ ಪಟ್ಟಬಂಧವೆಂದಿಗೂ ಆ ನಳ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಶುಕ್ಲ ಪಂಚಮಿಯಂದಾಗಲಿ, ಇಲ್ಲವೆ ಇನ್ನಾವ ತಿಥಿಯಂದಾಗಲಿ ಆಗಿರಲಾರದೆಂದು ನಿಷ್ಕೃಷ್ಟವಾಗುತ್ತದೆ.

ಆ ಚಾಂದ್ರ ಫಾಲ್ಗುಣ ಬಹುಳ ೧೪ಯಿಂದ ಹೆಚ್ಚು ಕಡಿಮೆ ಪಿಂಗಳ ಸಂವತ್ಸರದ ಚಾಂದ್ರ ಚೈತ್ರ ಬಹುಳ ೧೩ಯ ವರೆಗೆ ನಡೆವ ಮೀನ ಮಾಸವಾದರೂ ಪಟ್ಟಾಭಿಷೇಕಕ್ಕೆ

ತುಂಬ ಪ್ರಶಸ್ತವಿದೆ. ಚೈತ್ರಮಾಸವು ಪಟ್ಟಬಂಧೋತ್ಸವ ಕಾರ್ಯಕ್ಕೆ ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿದೆ ಎಂದು 'ಜಯಕರ್ನಾಟಕ'ದ ಲೇಖದಲ್ಲಿ (ಪು. ೩೩೯) ಇರುವ ಹೇಳಿಕೆಗೆ ಎಲ್ಲಿಯೂ ಯಾವ ಆಧಾರವೂ ನನಗೆ ದೊರೆತಿಲ್ಲ; ಅಥವಾ, ಒಂದು ವೇಳೆ ಅಂಥ ಆಕ್ಷೇಪವು ಸಾಧಾರವೇ ಎಂದಾದರೂ, ಪಡಗೇರಿಯ ಶಾಸನದಲ್ಲಿ ಚಾ. ವಿ. ವರ್ಷದ ಪ್ರಥಮ ನಳ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿಯೆಂದಿಷ್ಟು ಸ್ಪಷ್ಟವಾಗಿರುವುದರಿಂದ, ನಾವೀಗ ಯಾವ ತೇದಿಯನ್ನು ಪಿಂಗಳ ಸಂವತ್ಸರದ ಚೈತ್ರ ಶುದ್ಧ ಪಂಚಮಿಯೆನ್ನಬೇಕೋ ಅದು ಆಗಣ ಸೌರ ಗಣನದ ರೀತ್ಯಾ ಆ ವರ್ತಮಾನ ನಳ ಸಂವತ್ಸರದ (ಸೌರ) ಫಾಲ್ಗುಣ ಶುದ್ಧ ಪಂಚಮಿಯಾಗಿದ್ದಿತೆಂದು ವ್ಯಕ್ತವಾಗುವುದರಿಂದ, (ಅಲ್ಲವಾದರೆ, ಸಂವತ್ಸರವನ್ನೇಕೆ ನಳ ಎಂದೆನ್ನಬೇಕು ? ಮಾಸವನ್ನೇಕೆ ಫಾಲ್ಗುಣವೆನ್ನಬೇಕು ? ) ಚೈತ್ರಮಾಸವು ಪಟ್ಟಬಂಧ ಕಾರ್ಯಕ್ಕೆ ವರ್ಜನೀಯವೆಂಬೀ ಆಕ್ಷೇಪದಿಂದ ನಮ್ಮಾ ವಿವೇಚನಕ್ಕೇನೂ ಎಡವಟ್ಟಾಗುವಂತಿಲ್ಲ; ಏಕೆಂದರೆ, ಆ ಪಟ್ಟಬಂಧವಾದ ಮಾಸವು ಆಗಣವರ ಗಣನೆಯಲ್ಲಿ, ಒಕ್ಕಣೆಯಲ್ಲಿ, ಉಚ್ಚಾರಣೆಯಲ್ಲಿ, ಆಚರಣೆಯಲ್ಲಿ ಫಾಲ್ಗುಣಮಾಸವಲ್ಲದೆ ಚೈತ್ರಮಾಸವಲ್ಲ.

ಆ ನಳ ಸಂವತ್ಸರದ ಸೌರ ಫಾಲ್ಗುಣದ (ಎಂದರೆ, ಪಿಂಗಳ ಸಂವತ್ಸರದ ಚಾಂದ್ರ ಚೈತ್ರದ) ಶುಕ್ಲಪಕ್ಷದಲ್ಲಿಯ ಮೊದಲನೆಯ ಐದು ದಿನಗಳ ತಿಥಿ-ವಾರ-ನಕ್ಷತ್ರಗಳ ವಿವರವು ಹೀಗಿದ್ದಿತು :—

| ತಿಥಿ | ವಾರ | ನಕ್ಷತ್ರ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ಪಾಡ್ಯ | ರವಿವಾರ | ಉತ್ತರಾಭಾದ್ರ | 26—2—1077 | ರವಿವಾರವು ಪಟ್ಟಬಂಧಕ್ಕೆ ಸಲ್ಲದು. |
| ಬಿದಿಗೆ | ಸೋಮವಾರ | ರೇವತಿ | 27—2—1077 | ಸರ್ವವಿಧದಿಂದಲೂ ಪ್ರಶಸ್ತ. |
| ತದಿಗೆ | ಮಂಗಳವಾರ | ಅಶ್ವಿನಿ | 28—2—1077 | ಕುಜವಾರವು ವರ್ಜ್ಯ. |
| ಚೌತಿ | ಬುಧವಾರ | ಭರಣಿ | 1—3—1077 | ಚೌತಿ ರಿಕ್ತ ತಿಥಿ ; ಭರಣಿ ಸರ್ವಥಾ ತ್ಯಾಜ್ಯ. |
| ಪಂಚಮಿ | ಗುರುವಾರ | ಕೃತ್ತಿಕೆ | 2—3—1077 | ಅಗ್ನಿದೇವತಾಕವಾದ ಕೃತ್ತಿಕೆಯೂ ಸರ್ವಥಾ ತ್ಯಾಜ್ಯ ನಕ್ಷತ್ರ. |

ಇವುಗಳಲ್ಲಿ ಪಾಡ್ಯ, ತದಿಗೆ, ಚೌತಿ, ಪಂಚಮಿ—ಈ ೪ ತೇದಿಗಳು ಒಂದಲ್ಲ ಒಂದು ಕಾರಣದಿಂದ ಪಟ್ಟಬಂಧಕ್ಕೆ ಸಲ್ಲವು. ಈ ಶುಕ್ಲ ಬಿದಿಗೆಯಾದರೊ ಸ್ವಯಮೇವ ಭದ್ರಾ ತಿಥಿ, ಅಂದಿನ ಸೋಮವಾರವೂ ರೇವತೀ ನಕ್ಷತ್ರವೂ ಪಟ್ಟಬಂಧಕ್ಕೆ ಅತ್ಯುತ್ತಮವಾಗಿವೆ; ಮತ್ತು, ಸೋಮವಾರದಂದು ಬಂದ ಭದ್ರಾ ತಿಥಿ ಸಿದ್ಧಿಯೋಗವಾಗುತ್ತದೆ.[18]

18. " ಭದ್ರಾಸು ಚ ಬುಧೇ ವಿಧೌ ..........ಸಿದ್ಧಿ ತಿಥಿರ್ಭವೇತ್ || " (ಅಭಿಲಾಷಿತಾರ್ಥ ಚಿಂತಾಮಣಿ—II.೨೪೯).

ಇವೆಲ್ಲ ಕಾರಣಗಳಿಂದ ಚಾಳುಕ್ಯ ವಿಕ್ರಮನ ಪಟ್ಟಬಂಧದ ವಾಸ್ತವಿಕ ತೇದಿ ಶಾ. ಶ. ೯೯೯ನೆಯ ಪಿಂಗಳ ಸಂವತ್ಸರದ ಚಾಂದ್ರ ಚೈತ್ರ ಶುದ್ಧ ಬಿದಿಗೆ (ಎಂದರೆ ಶಾ. ಶ. ೯೯೮ನೆಯ ನಳ ಸಂವತ್ಸರದ ಸೌರ ಫಾಲ್ಗುಣ ಶುದ್ಧ ಬಿದಿಗೆ) ಸೋಮವಾರವೇ (27ನೆಯ ಫೆಬ್ರವರಿ 1077) ಆಗಿರಬೇಕೆಂದು ಸಿದ್ಧವಾಗುತ್ತದೆ. ಅಂದಿನ ಗ್ರಹ ಸ್ಥಿತಿ ಹೇಗಿದ್ದಿತೆಂಬುದನ್ನು ಈ ಕುಂಡಲದಲ್ಲಿ ನಿರ್ದೇಶಿಸಿರುತ್ತದೆ; ಮತ್ತು ಅಂತಹ ಗ್ರಹ ಸ್ಥಿತಿಯಲ್ಲಿ ಆ ಪಟ್ಟಾಭಿಷೇಕಕ್ಕೆ ಅಂದು ವೃಷಭ ಲಗ್ನದಷ್ಟು ಪ್ರಶಸ್ತವಾದ ಸುಮುಹೂರ್ತವು ಬೇರೊಂದಿಲ್ಲ ಎಂದು ತೋರುವುದರಿಂದ, ಅದು ಆ ವೃಷಭ ಲಗ್ನದಲ್ಲಿಯೇ ನೆರವೇರಿರಬೇಕೆಂದು ಭಾವಿಸುತ್ತೇನೆ.—

| | | | |
|---|---|---|---|
| ರವಿ<br>ಚಂದ್ರ<br>ಬುಧ<br>ಶುಕ್ರ | | ಲಗ್ನ | ಗುರು<br>ಕುಜ |
| ರಾಹು | ಚಾಳುಕ್ಯ ವಿಕ್ರಮಾದಿತ್ಯನಿಗೆ ಪಟ್ಟಬಂಧವಾದ ಮುಹೂರ್ತದ ಗ್ರಹ ಚಕ್ರ. | | |
| ಶನಿ | ಶಾ. ಶ. ೯೯೯ ಪಿಂಗಳ ಸಂವತ್ಸರ ಚೈತ್ರ ಶುದ್ಧ ೨ ಸೋಮವಾರ 27—2—1077. | | ಕೇತು |
| | | | |

ಅಭಿಷೇಚನ ಕ್ರಿಯೆಯ ವಾಸ್ತವಿಕ ತೇದಿಯ ಮುಂಚಿನ ದಿನದಲ್ಲಿ ಸರ್ವತೋಭದ್ರವೇ ಮೊದಲಾದ ನಾಂದೀ ಪೂರ್ವಕವಾದ ದೀಕ್ಷಾ ಧಾರಣೆಗೆ ಸಂಬಂಧಿಯಾದ ಅನೇಕ ಪೂರ್ವಾಂಗಗಳು ಆಗಲಿಕ್ಕಿವೆ.—

"ಅಥ ರಾಜಾಭಿಷೇಕ ವಿಧಿಃ । ಪುರೋಹಿತೋ ರಾಜ್ಞಃ ಪ್ರಜಾಪಾಲನಾಧಿಕಾರ ಸಿದ್ಧ್ಯರ್ಥಂ ಪರ ದಿನೇ ಅಭಿಷೇಕೇ ಕರ್ತವ್ಯೇ ಪೂರ್ವ ದಿನೇ ಗಣೇಶ ಮಾತೃಕಾ ಪೂಜನ ಪುಣ್ಯಾಹ ವಾಚನ ನಾಂದೀ ಪ್ರಭೃತಿ ಪೂರ್ವಾಂಗಂ ಕುರ್ಯಾತ್ । ರಾಜಾ ರಾಜ್ಞೀ ಚ ನಿಯಮಂ ಕೃತ್ವಾ ಉಪವಾಸಂ ಕುರ್ಯಾತ್" ಇತ್ಯಾದಿ.[19]

ಹೀಗಾಗಿ, ಆ ಪೂರ್ವ ದಿನವೂ ಅನಿಷ್ಟವಾಗಿರಬಾರದೆಂಬುದರಿಂದ, ಆ ಚೈತ್ರ ಶುಕ್ಲ ಪಾಡ್ಯದಂದು ಪಟ್ಟಾಭಿಷೇಕವಾಗಿದ್ದರೆ, ಅದರ ಪೂರ್ವಾಂಗಗಳು ಯಾವ ಶುಭ ಕಾರ್ಯಾರಂಭಕ್ಕೂ ಸಲ್ಲದ ಅಮಾವಾಸ್ಯೆಯಂದು ಆಗಬೇಕು; ಹಾಗಾಗುವುದು ನಿಷಿದ್ಧ

19. ಶಬ್ದಕಲ್ಪದ್ರುಮ—'ಅಭಿಷೇಕ.'

ಎಂಬೀ ಕಾರಣವಿಂದಲೂ, ಆ ಪಟ್ಟಬಂಧವು ಆ ಚೈತ್ರ ಶುದ್ಧ ಪಾಡ್ಯದಂದು ಆಗದು, ಮರು ದಿನ ಬಿದಿಗೆಯಂದೇ ಆಗಿರಬೇಕೆಂದು ದೃಢವಾಗುತ್ತದೆ. ಆ ಚೈತ್ರ ಶುದ್ಧ ಪಾಡ್ಯದಂದು ಸ್ಥಿರವೂ ಶುಭವೂ ಆದ ಉತ್ತರಾಭಾದ್ರಾ ನಕ್ಷತ್ರವಿದ್ದುದಲ್ಲದೆ ಅಂದಿನ ರವಿವಾರವು ನಾಂದೀ ಪುಣ್ಯಾಹ ಮೊದಲಾದ ದೇವ ಕಾರ್ಯಗಳಿಗೆ ಪ್ರಶಸ್ತವಾಗಿದೆ.

ಆದುದರಿಂದ, ಚಾಳುಕ್ಯ ವಿಕ್ರಮನ ಪಟ್ಟಬಂಧ ಮಹೋತ್ಸವದಲ್ಲಿ ನಾಂದಿ ಮೊದಲಾದ ಪೂರ್ವ ದಿನದ ವಿಧಿಗಳು ಶಾ. ಶ. ೯೯೯ನೆಯ ಪಿಂಗಳ ಸಂವತ್ಸರ ಚೈತ್ರ ಶುದ್ಧ ಪಾಡ್ಯ ರವಿವಾರ(26–2–1077)ದಂದು ಜರುಗಿ ಆ ಪಟ್ಟಬಂಧದ ವಾಸ್ತವಿಕ ವಿಧಾನವು ಮರು ದಿನ ಬಿದಿಗೆ ಸೋಮವಾರ (27–2–1077) ಪೂರ್ವಾಹ್ಣದಲ್ಲಿ ನೆರವೇರಿ, ತತ್ಸಂಬಂಧಿಯಾದ ಮಹಾ ದಾನಂಗಳು ಆಗಣಿಂದಲೆ ಏನೋ ತೊಡಗಿ, ಅವನ್ನು ಕುರಿತ ಆ ವಡಗೇರಿಯ ಶಾಸನವು ಅವಿಲಂಬಿತವಾಗಿ ಅದೇ ಶುಕ್ಲ ಪಂಚಮಿ ಗುರುವಾರ (2–3–1077) ದಂದು ತೇದಿಸಲ್ಪಟ್ಟಿರುವುದು ಯಥೋಚಿತವಾಗಿದೆ.

## ಪರಿಶಿಷ್ಟ

ವಿಕ್ರಮಾದಿತ್ಯನು ಪಟ್ಟಾಭಿಷಿಕ್ತನಾದ ಹಲವು ವರ್ಷಗಳ ಬಳಿಕ ತಾನೆ ಬಿಲ್ಹಣನು ಕಲ್ಯಾಣಕ್ಕೆ ಬಂದು ಆತನ ಆಸ್ಥಾನ ಕವಿಯಾದನೆಂದು 'ವಿಕ್ರಮಾಂಕದೇವ ಚರಿತ' ದಿಂದ ತಿಳಿವುದರಿಂದ, ಆ ಪಟ್ಟಬಂಧ ಮಹೋತ್ಸವವನ್ನು ಕುರಿತ ಶೋಧನೆಗೆ ಬಿಲ್ಹಣನ ಕಾವ್ಯವಷ್ಟು ಉಪಕಾರಿಯಾಗದು. ಆತನು ಅದನ್ನು ಕುರಿತು—

ಅಲಭತ ಚಿರ ಚಿತ್ತಾಚಾಂತ ಚಾಲುಕ್ಯ ಲಕ್ಷ್ಮೀ
ಕ್ಷಮಮುಷಮಭಿಷೇಕಂ ವಿಕ್ರಮಾದಿತ್ಯ ದೇವಃ ‖ (VI—೯೮)

ಎಂದೊಂದು ಮಾತಿನಲ್ಲಿ ತನ್ನ ಕಾವ್ಯದ ೬ನೆಯ ಸರ್ಗದ ಕೊನೆಯಲ್ಲಿ ಹೇಳಿ ಮುಗಿಸಿರುವನು. ಆದರೆ, ಅದರ ಮರು ಸರ್ಗದ ಎರಡನೆಯ ಶ್ಲೋಕದಲ್ಲಿಯೇ 'ಕಲ್ಯಾಣಮುಸಾವಿವೇಶ' (VII–೨) ಎಂದಿರುವಲ್ಲಿ, ಆ ಪಟ್ಟಾಭಿಷೇಕವು ರಾಜಧಾನಿಯಾದ ಕಲ್ಯಾಣದಲ್ಲಿ ನಡೆದುದಲ್ಲ ಎಂಬ ಅರ್ಥವು ಹೊರಡುತ್ತದೆ. ಆ ಪಟ್ಟಾಭಿಷೇಕವನ್ನು ಕುರಿತು ಹೇಳುವ ವಡಗೇರಿಯ ಶಾಸನದಲ್ಲಿಯೂ ವಿಕ್ರಮನು ಆಗ್ಗ "ನಡವಿಯುಪ್ಪನವೀಡು" ಎಂಬೊಂದು ನೆಲೆವೀಡಿನಲ್ಲಿ ಇದ್ದನೆಂದು ಹೇಳಿರುವುದರಿಂದ[20] ಆ ಪಟ್ಟಾಭಿಷೇಕವು ಆ ನಡವಿಯುಪ್ಪನವೀಡು ಎಂಬಲ್ಲಿಯೇ ನೆರವೇರಿರಬೇಕೆಂದು ತೋರುತ್ತದೆ. ಹೇಗೂ ಅದು ಕಲ್ಯಾಣದಲ್ಲಿ ನಡೆದಿರಲಾರದು.

ಅದು ಕಾರಣ, ಅದಾದ ಮೇಲೆ ವಿಕ್ರಮನು ಕಲ್ಯಾಣಕ್ಕೆ ಬಂದನೆಂದು ಬಿಲ್ಹಣನು ಹೇಳಿರುವುದು ಐತಿಹಾಸಿಕ ತಥ್ಯವೆಂಬಲ್ಲಿ ಸಂಶಯವಿಲ್ಲ. ಅದರ ಮರು ಶ್ಲೋಕದಲ್ಲಿಯೆ "ಅತ್ರಾಂತರೇ .... ಮಧುರಾವಿರಾಸೀತ್ ‖" (VII ೩) ಎಂದೂ, ಆ

20. Fleet's 'Kanarese Dynasties' (p. 446).

'ಮಧು'ವೆಂದರೆ ವಸಂತ ಋತುವಲ್ಲ, ಚೈತ್ರಮಾಸವೇ ಎಂಬೂ[21] ಬಿಲ್ಹಣನ ಕಾವ್ಯದಲ್ಲಿರುವ ಹೇಳಿಕೆ ಬರಿಯ ಕವಿ ಸಮಯವಷ್ಟೇ ಆಗಿರದೆ ಯಾಥಾ ತಥ್ಯಕ್ಕೂ ಸರಿಯಾಗಿದೆ ಎಂದಾದರೆ, ಆ ಪಟ್ಟಾಭಿಷೇಕವು ಚೈತ್ರದ ಮೊತ್ತಮೊದಲಲ್ಲಿ ಮುಗಿದಿದ್ದಿತೆಂದಾಗುತ್ತದೆ.

**ಗೋವಿಂದ ಪೈ.**

## ತ್ರಿಭುವನಮಲ್ಲ ಚಾಳುಕ್ಯ ವಿಕ್ರಮನ ಕಾಲದ ಶಾಸನಗಳು

(I. Supplement to the Annual Report on S. I. Epigraphy, 1927)

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧ | 5 | ಚಾ. ವಿ. ೨೭, ಚಿತ್ರಭಾನು ಚೈತ್ರ ಶುಕ್ಲ ೧ ಆದಿವಾರ. | 20—4—1102 | ಈ ವರ್ಷದಲ್ಲಿ ಚಾಂದ್ರ ಚೈತ್ರ ಶುಕ್ಲ ೧ ರವಿವಾರ ಬಂದಿದ್ದಿಲ್ಲ; ಸೌರ ಚೈತ್ರ (ಎಂದರೆ, ಚಾಂದ್ರ ವೈಶಾಖ ಶುದ್ಧ ೧) ರವಿವಾರದಂದು ಈ ತಾರೀಕಿಗೆ ಬಂದಿದ್ದಿತು. |
| ೨ | 32 | ಚಾ. ವಿ. ೨೮, ಸುಭಾನು ಮಾಘ ಬಹುಳ ೮ ಬೃಹಸ್ಪತಿವಾರ. | 21—1—1104 | |
| ೩ | 33 | ಚಾ. ವಿ. ೪೩, ವಿಳಂಬಿ ಭಾದ್ರಪದ ಶುದ್ಧ ೧೫ ಆದಿತ್ಯವಾರ. | 1—9—1118 | |
| ೪ | 42 | ಚಾ. ವಿ. ೪೫, ಶಾರ್ವರಿ ಮಾಘ ಕಾಮನ ಅಮಾವಾಸ್ಯೆ ರವಿವಾರ. | 1—2—1120 | |
| ೫ | 61 | ಚಾ. ವಿ. ೪೨, ವಿಳಂಬಿ ಜ್ಯೇಷ್ಠ ಶುದ್ಧ ೧೫, ಬೃಹಸ್ಪತಿವಾರ. | 17—5—1117 | ಇದು ಚಾ. ವಿ. ೪೨, ಹೇವಿಳಂಬಿ ಎಂದಾಗಬೇಕು. |
| ೬ | 66 | ಚಾ. ವಿ. ೩೪, ವಿರೋಧಿ ಆಶ್ವಯುಜ ಬಹುಳ ೫ ಬೃಹಸ್ಪತಿವಾರ. | 16—9—1109 | ಇದು ಅಧಿಕ ಆಶ್ವಯುಜ ಬಹುಳ ೫. |

21. "ಅಹೋಸು ಚೈತ್ರಂ" (VII. ೬); "ಅನೇನ ಚೈತ್ರಃ" (VII. ೧೨); "ಚೈತ್ರಸ್ಯ ಸರ್ವರ್ತುರ್ ವಿಶೇಷ ಚಿಹ್ನಂ" (VII. ೧೫); "ಕಿಂ ನ ಚಕಾರ ಚೈತ್ರಃ" (VII. ೩೭); "ಮತ್ತಸ್ಯ ಚೈತ್ರ ದ್ವಿರದಸ್ಯ" (VII. ೪೦); "ಚೈತ್ರಮಲ್ಲಃ" (VII. ೪೬); ಚೈತ್ರೇಣ ಚಿತ್ರೀಕೃತ ಕಾನನೇನ (VII. ೫೪), ಇತ್ಯಾದಿ.

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೭ | 68 | ಚಾ. ವಿ. ೪೬, ಪ್ಲವ ಜ್ಯೇಷ್ಠ ಶುದ್ಧ ೮, ಬೃಹಸ್ಪತಿವಾರ. | 26—5—1121 | |
| ೮ | 75 | ಚಾ. ವಿ. ೧೬, ಪ್ರಜಾಪತಿ ಪುಷ್ಯ ಶುದ್ಧ ೧೨, ಬೃಹಸ್ಪತಿವಾರ, ಉತ್ತರಾಯಣ ಸಂಕ್ರಾಂತಿ. | 25-12—1091 | |
| ೯ | 85 | ಚಾ ವಿ. ೪೮, ಶೋಭಕೃತು ಶ್ರಾವಣ ಶುದ್ಧ ೫, ಬೃಹಸ್ಪತಿ ವಾರ, ಸಂಕ್ರಾಂತಿ. | | ಈ ವರ್ಷದಲ್ಲಿ ಶ್ರಾವಣ ಶುದ್ಧ ೨ ಬೃಹಸ್ಪತಿವಾರ ಸಂಕ್ರಾಂತಿಗೆ ಸರಿಯಾಗಿದ್ದಿತು. 26—7—1123. |
| ೧೦ | 85 | ಚಾ. ವಿ. ೪೯, ಕ್ರೋಧಿ ಭಾದ್ರಪದ ಶುದ್ಧ ೫ ಸೋಮವಾರ ಸಂಕ್ರಾಂತಿ. | | ಇದು ಬಹುಶಃ ಭಾದ್ರಪದ ಶುದ್ಧ ೧೫ ಎಂದಾಗಬೇಕು; ಅಂದು ವಾರವು ಸೋಮವಾರ ಮತ್ತು ಸಂಕ್ರಾಂತಿಯೂ ಆಗಿದ್ದಿತು. 25—8—1124. |
| ೧೧ | 88 | ಚಾ ವಿ. (೩೨), ಸರ್ವಧಾರಿ ಜ್ಯೇಷ್ಠ ಬಹುಳ ಅಮಾವಾಸ್ಯೆ, ಸೋಮವಾರ, ಸೂರ್ಯಗ್ರಹಣ. | | ಚಾ. ವಿ. ೩೩ನೆಯ ಸರ್ವಧಾರಿಯಲ್ಲಿ ಜ್ಯೇಷ್ಠ ಬಹುಳ ೩೦ಯ ಗ್ರಹಣ ಬುಧವಾರ 10—6—1108, ಮತ್ತು ಚಾ. ವಿ. ೩೪ನೆಯ ವಿರೋಧಿಯಲ್ಲಿ ಜ್ಯೇಷ್ಠ ಬಹುಳ ೩೦ಯ ಗ್ರಹಣ ಸೋಮವಾರ 31—5—1109. |
| ೧೨ | 114 | ಚಾ. ವಿ. ೨೭, ಚಿತ್ರಭಾನು ಮಾಘ ಶುದ್ಧ ೧೧ ಬೃಹಸ್ಪತಿವಾರ ಸಂಕ್ರಮಣ. | | ಈ ಸಂವತ್ಸರದಲ್ಲಿ ಮಾಘ ಶುದ್ಧ ೧೨ ಗುರುವಾರ, ಎಂದರೆ 22—1—1103, ಸಂಕ್ರಮಣಕ್ಕೆ ನಿಕಟವಾಗುತ್ತದೆ. |
| ೧೩ | 118 | ಚಾ. ವಿ. ೨೯, ಪಾರ್ಥಿವ ಪೌಷ್ಯ ಶುದ್ಧ ೨ ಆದಿತ್ಯವಾರ ಸಂಕ್ರಮಣ | | ಪಾರ್ಥಿವ ಸಂವತ್ಸರವು ಚಾ. ವಿ. ೩೦ನೆಯದು; ಅದರಲ್ಲಿ ಪುಷ್ಯ ಬಹುಳ ೨ ರವಿವಾರ, ಎಂದರೆ 24—12—1105, ಉತ್ತರಾಯಣ ಸಂಕ್ರಾಂತಿಗೆ ಸರಿಯಾಗಿದ್ದಿತು. ಆದುದರಿಂದ ಇದರ ತೇದಿ ಪುಷ್ಯ ಬಹುಳ ೨ ಎಂದಾಗಬೇಕು. |
| ೧೪ | 122 | ಶಕ ೧೦೦೯ ಪ್ರಭವ ಶ್ರಾವಣ ಅಮಾವಾಸ್ಯೆ ಆದಿತ್ಯವಾರ ಸೂರ್ಯ ಗ್ರಹಣ. | | 1—8—1087 |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೫ | 123 | ಶಕ ೧೦೪೯ ಪರಾಭವ ಜ್ಯೇಷ್ಠ ಅಮಾವಾಸ್ಯೆ ಸೋಮವಾರ ಸೂರ್ಯಗ್ರಣ. | | 21–6–1126 |
| ೧೬ | 124 | ಶಕ ೧೦೧೦ ಪ್ರಭವ ಶ್ರಾವಣ ಅಮಾವಾಸ್ಯೆ ಸೂರ್ಯಗ್ರಹಣ. | 1–8–1087 | ಈ ಮೇಲಣ ನಂ. ೧೪ನೆಯ ತೇದಿಯದೇ. |
| ೧೭ | 128 | ಚಾ. ವಿ. ೭ ದುಂದುಭಿ ಪುಷ್ಯ ಶುದ್ಧ ೩ ಆದಿತ್ಯವಾರ, ಉತ್ತರಾಯಣ ಸಂಕ್ರಾಂತಿ. | 25–12–1082 | |
| ೧೮ | 130 | ಚಾ. ವಿ. ೩೭, ನಂದನ ಪುಷ್ಯ ಶುದ್ಧ ೪ ಮಂಗಳವಾರ ಉತ್ತರಾಯಣ ಸಂಕ್ರಾಂತಿ. | 24–12–1112 | |
| ೧೯ | 132 | ಚಾ. ವಿ. . . . . . . ಪುಷ್ಯ ಶುದ್ಧ ೧೧ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | | ಇದರಲ್ಲಿ ಚಾ. ವಿ ವರ್ಷ ಸಂಖ್ಯೆಯೂ ಸಂವತ್ಸರದ ಹೆಸರೂ ಸವೆದುಹೋಗಿವೆ. |
| ೨೦ | 151 | ಚಾ. ವಿ. ೩೪, ಪ್ರಮಾದಿ ಪುಷ್ಯ ಬಹುಳ ೨ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | | ಈ ಸಂವತ್ಸರದಲ್ಲಿ ಪುಷ್ಯ ಬಹುಳ ೩ ರವಿವಾರ 1–1–1110 ಆಗಿದ್ದಿತು, ಆದರೆ ಸಂಕ್ರಾಂತಿಯಾಗಿ ಕೆಲವು ದಿನಗಳು ಕಳೆದು ಹೋಗಿದ್ದುವು. |
| ೨೧ | 172 | ಶಕ ೧೦೩೩ ಖರ ಕಾರ್ತಿಕ ಪೌರ್ಣಮಾ ಬುಧವಾರ ಸೋಮಗ್ರಹಣ. | 18–10–1111 | |
| ೨೨ | 181 | ಶಕ ೧೦೨೮ ತಾರಣ ಕಾರ್ತಿಕ ಅಮಾವಾಸ್ಯೆ ಬೃಹಸ್ಪತಿವಾರ ಸೂರ್ಯಗ್ರಹಣ. | | ಆ ತಾರಣ ಸಂವತ್ಸರವು ಶಕ ೧೦೨೬ನೆಯ ವರ್ಷ; ಅದರಲ್ಲಿ ಸೂರ್ಯಗ್ರಹಣವೇ ಇದ್ದಿಲ್ಲ. ಆದರೆ ಶಕ ೧೦೨೮ನೆಯ ವ್ಯಯ ಸಂವತ್ಸರದಲ್ಲಿ ಈ ೨ ಸೂರ್ಯ ಗ್ರಹಣಗಳಿದ್ದುವು: ಶ್ರಾವಣ ಬಹುಳ ೩೦ ಬುಧವಾರ 1-8-1106, ಮತ್ತು ಪುಷ್ಯ ಬಹುಳ ೩೦ ಗುರುವಾರ 27–12–1106. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೨೩ | 190 | ಚಾ. ವಿ. ೨೫, ವಿಕ್ರಮ ಮಾರ್ಗಶಿರ ೧೫ ಆದಿತ್ಯವಾರ ಚಂದ್ರಗ್ರಹಣ. | 18–11–1100 | |
| ೨೪ | 196 | ಚಾ. ವಿ. ೪೩, ಶಾರ್ವರಿ ಕಾರ್ತಿಕ ಶುದ್ಧ ೧ ಆದಿತ್ಯವಾರ ಸೂರ್ಯಗ್ರಹಣ. | | ಇದು ಚಾ. ವಿ. ೪೫ ಶಾರ್ವರಿ ಎಂದಾಗಬೇಕು ; ಕಾರ್ತಿಕ ಶುದ್ಧ ೧ ಆದಿತ್ಯವಾರವೆಂದರೆ 24–10–1120, ಮತ್ತು ಅದರ ಮುಂಚಿನ ದಿನ ಆಶ್ವಯುಜ ಬಹುಳ ೩೦ ಯಂದಾದ ಸೂರ್ಯಗ್ರಹಣವು ಶನಿವಾರ 23–10–1120. |
| ೨೫ | 197 | ಚಾ. ವಿ. ೪೧, ಹೇವಿಳಂಬಿ .........ಸೋಮವಾರ ಉತ್ತರಾಯಣ ಸಂಕ್ರಾಂತಿ. | 24–12–1117 | ಚಾ. ವಿ. ೪೨ ಹೇವಿಳಂಬಿ ಎಂದಾಗಬೇಕು ; ಅದರಲ್ಲಿ ಉತ್ತರಾಯಣ ಸಂಕ್ರಾಂತಿ ಸೋಮವಾರ 24–12–1117 ಆಗಿದ್ದಿತು. |
| ೨೬ | 198 | ಚಾ. ವಿ. ೪೫, ಶುಭಕೃತು ಚೈತ್ರ ಶುದ್ಧ ೮ ಸೋಮವಾರ ಉತ್ತರಾಯಣ ಸಂಕ್ರಾಂತಿ. | | ಚಾ. ವಿ. ೪೫ ಎಂದರೆ ಶಾರ್ವರಿ ಸಂವತ್ಸರವು, ಚಾ. ವಿ. ೪೭ ಎಂದರೆ ಶುಭಕೃತು; ಹೀಗೆ ಈ ಶಾಸನದಲ್ಲಿ ಸಂವತ್ಸರಗಳ ರಗಳೆ ಮಾತ್ರವಲ್ಲ, ಚೈತ್ರದಲ್ಲಿ ಉತ್ತರಾಯಣ ಸಂಕ್ರಾಂತಿ ಎಂದಿಗೂ ಬಾರದೆಂಬುದರಿಂದ, ಚೈತ್ರಮಾಸವೇ ಇಲ್ಲಿ ಪ್ರಧಾನವಿದ್ದು ಅದು ಮೇಷ ಸಂಕ್ರಾಂತಿ ಎಂದಾಗಬೇಕೋ, ಅಥವಾ ಉತ್ತರಾಯಣ ಸಂಕ್ರಾಂತಿಯೇ ಪ್ರಧಾನನಾಗಿದ್ದು ಮಾಸವು ಪುಷ್ಯ ಇಲ್ಲವೆ ಮಾಘವೆಂದಾಗಬೇಕೋ ಎಂದು ತಿಳಿಯದಿರುವುದೂ ತುಂಬ ರಗಳೆಯೇ. |
| ೨೭ | 204 | ಚಾ. ವಿ. ೩೧, ವ್ಯಯ ಶ್ರಾವಣ ಶುದ್ಧ ೧೫ ಸೋಮವಾರ ಚಂದ್ರಗ್ರಹಣ. | 16–7–1106 | ಈ ಕೆಳಗೆ ನಂ. ೩೭ರಲ್ಲಿ ಇದೇ ತೇದಿಗೆ ಬುಧವಾರ ಎಂದಿದೆ. |
| ೨೮ | 216 | ಚಾ. ವಿ. ೪೨, ಹೇವಿಳಂಬಿ ಆಷಾಢ...... ಆದಿತ್ಯವಾರ ಸಂಕ್ರಮಣ. | 24–6–1117 | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೨೯ | 218 | ಚಾ. ವಿ ೫೦ ವಿಶ್ವಾವಸು ವೈಶಾಖ ಅಮಾವಾಸ್ಯೆ ಸೋಮವಾರ ಸೂರ್ಯಗ್ರಹಣ. | | ಕ್ರಿ. ಶ. 1125–26 'ವಿಶ್ವಾವಸು ಸಂವತ್ಸರದಲ್ಲಿ ಯಾವ ತಿಂಗಳಲ್ಲಿಯೂ ಸೂರ್ಯಗ್ರಹಣವಿದ್ದಿಲ್ಲ. |
| ೩೦ | 219 | ಚಾ. ವಿ. ೩೭ ನಂದನ ಫಾಲ್ಗುಣ ಅಮಾವಾಸ್ಯೆ ಆದಿತ್ಯವಾರ ಸೂರ್ಯಗ್ರಹಣ. | ಬುಧವಾರ 19–3–1113 | |
| ೩೧ | 234 | ಚಾ. ವಿ. ೩೮, ವಿಜಯ.... | | |
| ೩೨ | 235 | ಚಾ. ವಿ. ೯ ರಕ್ತಾಕ್ಷಿ.... | | |
| ೩೩ | 240 | ಚಾ. ವಿ. ೨೮ ಸುಭಾನು ಉತ್ತರಾಯಣ ಸಂಕ್ರಾಂತಿ. | | |

## II. ವಡಗೇರಿಯ ಶಾಸನ

| | | | | |
|---|---|---|---|---|
| ೩೪ | | ಚಾ. ವಿ ಪ್ರಥಮ ನಳ ಸಂವತ್ಸರ ಫಾಲ್ಗುಣ ಶುದ್ಧ ೫ ಬೃಹಸ್ಪತಿವಾರ. | | ಈ ಶಾಸನವನ್ನು ಈ ಮೇಲಣ ಲೇಖದಲ್ಲಿ ಸವಿಸ್ತರವಾಗಿ ತರ್ಕಿಸಿದೆ. |

## III. Hyderabad Archæological Series

## ನಂ. 5—ಮುನೀರಾಬಾದು ಶಿಲಾ ಲೇಖ

| | | | | |
|---|---|---|---|---|
| ೩೫ | | ಚಾ. ವಿ. ೧೩ ವಿಭವ ಚೈತ್ರ ಶುದ್ಧ ಅಕ್ಷಯ ತದಿಗೆ ಸೋಮವಾರ ಸಂಕ್ರಾಂತಿ. | ವೈಶಾಖ ಶುಕ್ಲ ತದಿಗೆ ಸೋಮವಾರ 27–3–1088 | ಈ ಚಾ. ವಿ. ೧೩ನೆಯ ವಿಭವ ಸಂವತ್ಸರದಲ್ಲಿ (1088) ಚಾಂದ್ರ ಚೈತ್ರ ಶುಕ್ಲ ೩ ಆದಿತ್ಯವಾರ 27–2–1088 ಆಗಿದ್ದಿತು. ಆದರೆ ಚಾಂದ್ರ ವೈಶಾಖ ಶುದ್ಧ ೩ (ಎಂದರೆ, ಸೌರ ಚೈತ್ರ ಶುದ್ಧ ೩) ಸೋಮವಾರ 27–3–1088 ಆಗಿದ್ದಿತು. ಅಕ್ಷಯ ತದಿಗೆ ಎನ್ನುವುದು ವೈಶಾಖ ಶುದ್ಧ ತದಿಗೆಗೇ ಹೊರತು ಚೈತ್ರ ಶುದ್ಧ ತದಿಗೆಗೆ ಎಂದಿಗೂ ಅಲ್ಲವೆಂಬುದರಿಂದಲೂ, ಆ ಚೈತ್ರ ಶುದ್ಧ ೩ ಸೋಮವಾರ ಬಂದಿಲ್ಲವೆಂಬುದರಿಂದಲೂ ಈ ಶಾಸನದ ತೇದಿ ವೈಶಾಖ ಶುದ್ಧ ತದಿಗೆಯೇ ಎಂಬುದು ಸಿದ್ಧವಾಗುತ್ತದೆ. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| | | **IV. Annual Report on Epigraphy, Madras, 1916** | | |
| ೩೬ | 396 | ಚಾ. ವಿ. ೪೬...... ಸಂಕ್ರಾಂತಿ. | | |
| ೩೭ | 505 | ಚಾ. ವಿ. ೩೧ ವ್ಯಯ ಶ್ರಾವಣ ಶುದ್ಧ ೧೫ ಬುಧವಾರ ಚಂದ್ರ ಗ್ರಹಣ. | | ಈ ಮೇಲೆ ನಂ. ೨೮ರಲ್ಲಿ ಇದೇ ತೇದಿಗೆ ಸೋಮವಾರ ಎಂದಿದೆ. |
| ೩೮ | 515 | ಚಾ. ವಿ. ೧೭ ಆಂಗೀರಸ ವೈಶಾಖ ೧೫ ಚಂದ್ರ ಗ್ರಹಣ. | 24—4—1092 | |
| ೩೯ | 516 | ಚಾ. ವಿ.. . . .ಮಾರ್ಗಶಿರ ೧೫ ಆದಿತ್ಯವಾರ ಚಂದ್ರಗ್ರಹಣ. | | |
| ೪೦ | 518 | ಚಾ. ನಿ. ೩೨ ಸರ್ವಜಿತು ಪುಷ್ಯ ೧೫ ಮಂಗಳವಾರ ಚಂದ್ರ ಗ್ರಹಣ. | 31—12—1107 | |
| ೪೧ | 519 | ಚಾ. ವಿ. ೪ ಸಿದ್ಧಾರ್ಥಿ (ಜ್ಯೇಷ್ಠ) ಶುದ್ಧ ೧೦ ಬೃಹಸ್ಪತಿ ವಾರ. | | ಚಾ. ವಿ. ೩ ಕಾಳಯುಕ್ತಿ ಸಂವತ್ಸರದಲ್ಲಿ ಜ್ಯೇಷ್ಠ ಶುದ್ಧ ೧೦ ಗುರುವಾರ 24–5—1078 ಆಗಿದ್ದಿತು. |
| ೪೨ | ಡಿ. | ಚಾ. ವಿ. ೧೧ ಕ್ಷಯ ಉತ್ತರಾಯಣ ಸಂಕ್ರಾಂತಿ. | | |
| ೪೩ | 523 | ಚಾ. ವಿ. ೪ ಸಿದ್ಧಾರ್ಥಿ ಜ್ಯೇಷ್ಠ ಶುದ್ಧ ೧೦ ಬೃಹಸ್ಪತಿ ವಾರ. | | ಈ ಮೇಲಣ ನಂ. ೪೧ರ ತೇದಿಯದೇ. |
| ೪೪ | 526 | ಚಾ. ವಿ. ೩ (೩) ಸರ್ವಧಾರಿ (ಜ್ಯೇಷ್ಠ) ೩೦ ಬೃಹಸ್ಪತಿ ವಾರ ಸೂರ್ಯ ಗ್ರಹಣ. | ಬುಧವಾರ 10—6—1108 | |
| ೪೫ | 550 | ಚಾ. ವಿ. ೩೬ ಖರ ಉತ್ತರಾಯಣ ಸಂಕ್ರಾಂತಿ. | | |
| ೪೬ | 565 | ಚಾ. ವಿ. ೬ ದುರ್ಮತಿ ಪುಷ್ಯ ಬಹುಳ (೬) ಬೃಹಸ್ಪತಿ ವಾರ ಉತ್ತರಾಯಣ ಸಂಕ್ರಾಂತಿ | 23—12—1081 | |
| ೪೭ | 566 | ಚಾ. ವಿ. ೧೨ ವಿಭವ ಉತ್ತರಾಯಣ ಸಂಕ್ರಾಂತಿ. | | ವಿಭವ ಸಂವತ್ಸರವು ಚಾ. ವಿ. ೧೩ನೆಯದು. |
| | | **V. Mysore Archæological Report, 1927** | | |
| ೪೮ | 124 | ಚಾ. ವಿ. ೧೮ ಶ್ರೀಮುಖ ಪೌಷ್ಯ ಶುದ್ಧ ೧೩ ಸೋಮವಾರ ಉತ್ತರಾಯಣ ಸಂಕ್ರಾಂತಿ. | | ಈ ಕೆಳಗಣ ನಂ. ೫೬, ೮೯, ೯೦ ರ ತೇದಿ ಮತ್ತು ವಾರಗಳನ್ನು ಹೋಲಿಸಿ ನೋಡುವುದು. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೪೯ | 133 | ಸಕ ೧೦೩೩ ನಂದನ ವೈಶಾಖ ಸುದ್ಧ ೧೧ ಬ್ರಿಹವಾರ. | | ಸಕ ೧೦೩೩, ಎಂದರೆ ನಂದನವಲ್ಲ, ಖರ ಸಂವತ್ಸರ; ಆ ಖರ ಸಂವತ್ಸರದಲ್ಲಿ ವೈಶಾಖ ಶುದ್ಧ ೧೧ ಗುರುವಾರ 20-4-1111 ಆಗಿದ್ದಿತು. |
| ೫೦ | 135 | ಸಕ ೧೦೪೫ ಶೋಭಕೃತು ಪುಷ್ಯ ಸುದ್ಧ ೧. | | |
| ೫೧ | 145 | ಚಾ. ವಿ. ೧೩ ಸುಕ್ಲ ಫಾಲ್ಗುಣ ಸುದ್ಧ ಅಮಾವಾಸ್ಯೆ. | | ಶುಕ್ಲ ಸಂವತ್ಸರವು ಚಾ. ವಿ. ೧೪ನೆಯ ವರ್ಷ. ಈ ತೇದಿ ಶುದ್ಧ ಹುಣಿಮೆಯೋ ಬಹುಳ ಅಮಾವಾಸ್ಯೆಯೋ ಎಂದು ತಿಳಿಯುವುದಿಲ್ಲ. |
| ೫೨ | 147 | ಚಾ. ವಿ. .... ಮನ್ಮಥ ಪುಷ್ಯ ಸುದ್ಧ ೧೧ ಶುಕ್ರವಾರ. | | ಚಾ. ವಿ. ೪೦ನೆಯ ಮನ್ಮಥದಲ್ಲಿ ಪುಷ್ಯ ಶುದ್ಧ ೧೪ ಶುಕ್ರವಾರ 31-12-1115 ಆಗಿದ್ದಿತು. |
| ೫೩ | 148 | ಚಾ. ವಿ. ....ನೆರಡನೆಯ ಪಿಂಗಳ ಸಂವತ್ಸರದ ಅಮಾವಾಸ್ಯೆ ಸೋಮನಾರ. | | ಇದು ಬಹುಶಃ ಚಾ. ವಿ. ಎರಡನೆಯ ಪಿಂಗಳ ಸಂವತ್ಸರದ ಶ್ರಾವಣ ಬಹುಳ ಅಮಾವಾಸ್ಯೆ ಸೋಮವಾರ ಎಂದಾಗಿರಬೇಕು; ಹಾಗಾದರೆ 21-8-1077. |
| ೫೪ | 150 | ಚಾ. ವಿ. ೩೯ ಜಯ ವೈಶಾಖದಮಾವಾಸ್ಯೆ ಬೃಹಸ್ಪತಿವಾರ. | ಬುಧವಾರ 6-5-1114 | |
| ೫೫ | 158 | ಚಾ. ವಿ. ೩೨ ಸರ್ವಜಿತು ಚೈತ್ರ ಸುದ್ಧ ತದಿಗೆ ಬೃಹಸ್ಪತಿವಾರ. | | ಇದು ಆ ಸಂವತ್ಸರದ ಸೌರ ಚೈತ್ರ ಶುದ್ಧ ತದಿಗೆ; ಎಂದರೆ, ಚಾಂದ್ರ ವೈಶಾಖ ಶು॥ (ಅಕ್ಷಯ) ತದಿಗೆ, ಗುರುವಾರ 28-3-1107. |
| ೫೬ | 167 | ಚಾ. ವಿ. ೧೧ನೆಯ ಶ್ರೀಮುಖ ಸಂವತ್ಸರದ ಪುಷ್ಯ ಸುದ್ಧ ೧೧ಯಂದಿನ ಉತ್ತರಾಯಣ ಸಂಕ್ರಾಂತಿ ಆದಿತ್ಯವಾರ. | | ಈ ಮೇಲಣ ನಂ. ೪೮ ಮತ್ತು ಈ ಕೆಳಗಣ ನಂ. ೮೯, ೯೦ ರ ತೇದಿ, ವಾರಗಳನ್ನು ಹೋಲಿಸಿ ನೋಡುವುದು. |
| ೫೭ | 172 | ಚಾ. ವಿ. ೩೧ ವ್ಯಯ ಮಾಘ ೧೫ ಶುಕ್ರವಾರ ಸೋಮ ಗ್ರಹಣ | 11-1-1107 | |

## VI. Kielhorn's List of South Indian Inscriptions

| | | | | |
|---|---|---|---|---|
| ೫೮ | 185 | ಚಾ. ವಿ. ೨ ಪಿಂಗಳ ಶ್ರಾವಣ ಶುದ್ಧ ೧೫ ಆದಿವಾರ ಸೋಮ ಗ್ರಹಣ | 6-8-1077 | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್. ತಾರೀಕು | ಷರಾ |
|---|---|---|---|---|
| ೫೯ | 186 | ಚಾ. ವಿ. ೨ ಪಿಂಗಳ ಪುಷ್ಯ ಶುದ್ಧ ೭ ಉತ್ತರಾಯಣ ಸಂಕ್ರಾಂತಿ ಆದಿತ್ಯವಾರ. | 24—12—1077 | |
| ೬೦ | 187 | ಚಾ. ವಿ. ೨ ಪಿಂಗಳ ಮಾಘ ಶುದ್ಧ ೧೫ ಸೋಮವಾರ ಸೋಮಗ್ರಹಣ. | ಮಂಗಳವಾರ 30—1—1078 | |
| ೬೧ | 189 | ಚಾ. ವಿ. ೭ ದುಂದುಭಿ ಕಾರ್ತಿಕ ಶುದ್ಧ ೧ ಆದಿತ್ಯವಾರ | ಮಂಗಳವಾರ 25—10—1082 | |
| ೬೨ | 190 | ಚಾ. ವಿ. ೯ ರಕ್ತಾಕ್ಷಿ ಚೈತ್ರ ಶುದ್ಧ ೧ ಸೋಮವಾರ. | ಆದಿತ್ಯವಾರ 10—3—1084 | |
| ೬೩ | 193 | ಚಾ. ವಿ. ೧೨ ಪ್ರಭವ ಪುಷ್ಯ ಬಹುಳ ೧೪ ವಡ್ಡವಾರ ಉತ್ತರಾಯಣ ಸಂಕ್ರಾಂತಿ. | ಶನಿವಾರ 25—12—1087 | |
| ೬೪ | 194a | ಚಾ. ವಿ. ೧೬ ಪ್ರಜಾಪತಿ ಪುಷ್ಯ ಶುದ್ಧ ೧೨ ಬೃಹಸ್ಪತಿವಾರ ಉತ್ತರಾಯಣ ಸಂಕ್ರಾಂತಿ. | 25—12—1091 | |
| ೬೫ | 194b | ಚಾ. ವಿ. ೪೬ ಕ್ರೋಧಿ ಶ್ರಾವಣ ಶುದ್ಧ ೧೫ ಆದಿತ್ಯವಾರ ಮಹಾಸಂಕ್ರಾಂತಿ. | 27—7—1124 | ಕ್ರೋಧಿ ಸಂವತ್ಸರವು ಚಾ.ವಿ. ೪೯ನೆಯ ವರ್ಷ. |
| ೬೬ | 196 | ಚಾ. ವಿ. ೧೮ ಶ್ರೀಮುಖ ಫಾಲ್ಗುಣ ಬಹುಳ ೩೦ ಆದಿತ್ಯವಾರ ಸೂರ್ಯಗ್ರಹಣ. | 19—3—1093 | |
| ೬೭ | 197 | ಚಾ. ವಿ. ೧೮ ಜ್ಯೇಷ್ಠ ಶುದ್ಧ ೫ ಸೋಮವಾರ ಸಂಕ್ರಮಣ. | | ಚಾ. ವಿ. ೧೮ನೆಯ ವರ್ಷವೆಂದರೆ ಶ್ರೀಮುಖ ಸಂವತ್ಸರ. ಆದರೆ ಚಾ. ವಿ. ೧೯ನೆಯ ಭಾವ ಸಂವತ್ಸರದಲ್ಲಿ ಜ್ಯೇಷ್ಠ ಶುದ್ಧ ೫ ಸೋಮವಾರ ಬಂದಿದ್ದು ಸಂಕ್ರಮಣಕ್ಕೆ ನಿಕಟವಾಗಿದ್ದಿತು. 22—5—1094. |
| ೬೮ | 198 | ಚಾ. ವಿ. ೧೯ ಯುವ ಮಾಘ ಶುದ್ಧ ೫ ಆದಿತ್ಯವಾರ ಉತ್ತರಾಯಣ ಸಂಕ್ರಮಣ. | | |
| ೬೯ | 199 | ಚಾ. ವಿ. ೨೧ ಧಾತು ಚೈತ್ರ ಶುದ್ಧ ೫ ಆದಿತ್ಯವಾರ. | 2—3—1096 | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೭೦ | 200 | ಚಾ. ವಿ. ೨೧ ಧಾತು ಪುಷ್ಯ ಶುದ್ಧ ೫ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | | ಇವೆರಡರ ತೇದಿಗಳನ್ನು ಹೋಲಿಸಿ ನೋಡಿದರೆ, ಇವುಗಳಲ್ಲಿ ಯಾವುದೊಂದರ, ಇಲ್ಲವೆ ಇವೆರಡರ ತೇದಿ ಅಸಂಭಾವನೀಯವೆಂದು ತೋರದಿರದು. ಚಾ. ವಿ. ೨೧ ನೆಯ ಧಾತು ಸಂವತ್ಸರದಲ್ಲಿ ಪುಷ್ಯ ಶುದ್ಧ ೫ ರವಿವಾರ 21-12-1096 ಅಪರಾಹ್ಣದಲ್ಲಿಯೂ ಸೋಮವಾರ 22-12-1096 ಪೂರ್ವಾಹ್ಣದಲ್ಲಿಯೂ ಇದ್ದಿತು; ಪುಷ್ಯ ಬಹುಳ ೧೩ ಕುಜವಾರ 13-1-1097 ಆಗಿದ್ದಿತು. ಇವುಗಳಲ್ಲಿ ಪುಷ್ಯ ಶುದ್ಧ ೫, ಉತ್ತರಾಯಣ ಸಂಕ್ರಾಂತಿಯ ನಾಲ್ಕೈದು ದಿನಗಳಷ್ಟು ಮುಂಚೆ ಇದ್ದಿತು. |
| ೭೧ | 201 | ಚಾ. ವಿ. ೨೧ ಧಾತು ಪುಷ್ಯ ಬಹುಳ ೧೩ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | | |
| ೭೨ | 202 | ಚಾ. ವಿ. ೨೩ ಬಹುಧಾನ್ಯ ಪುಷ್ಯ ಬಹುಳ ೧೫ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | ಶನಿವಾರ 25—12—1098 | ಬಹುಧಾನ್ಯವು ಚಾ. ವಿ. 23ನೆಯ ವರ್ಷ. |
| ೭೩ | 203 | ಚಾ. ವಿ. ೨೪ ಪ್ರಮಾಥಿ ಜ್ಯೇಷ್ಠ ಶುದ್ಧ ೧೫ ಆದಿತ್ಯವಾರ ಚಂದ್ರ ಗ್ರಹಣ. | 5—6—1099 | |
| ೭೪ | 204 | ಚಾ. ವಿ. ೨೭ ಚಿತ್ರಭಾನು ಪುಷ್ಯ ಶುದ್ಧ ೧೩ ಬುಧವಾರ ಉತ್ತರಾಯಣ ಸಂಕ್ರಾಂತಿ. | 24—12—1102 | |
| ೭೫ | 205 | ಚಾ. ವಿ. ೨೭ ಚಿತ್ರಭಾನು ಫಾಲ್ಗುಣ ಬಹುಳ ೧ ಸೋಮವಾರ ಸಂಕ್ರಾಂತಿ. | 23—2—1103 | |
| ೭೬ | 206 | ಚಾ. ವಿ. ೨೭ ಚಿತ್ರಭಾನು ಫಾಲ್ಗುಣ ಬಹುಳ ೧೫ ಆದಿತ್ಯವಾರ ಸಂಕ್ರಾಂತಿ. | | ಇದು ಬಹುಶಃ ಫಾಲ್ಗುಣ ಶುದ್ಧ ೧೫ ಎಂದಾಗಬೇಕು; ಹಾಗಾದರೆ ಆ ತೇದಿ ರವಿವಾರ 22-2-1103 ಎಂದಾಗಿ ಸಂಕ್ರಾಂತಿಗೆ ನಿಕಟವಾಗುತ್ತದೆ. |
| ೭೭ | 207 | ಚಾ. ವಿ. ೨೮ ಸುಭಾನು ಪುಷ್ಯ ಬಹುಳ ೧೦ ಶುಕ್ರವಾರ ಉತ್ತರಾಯಣ ಸಂಕ್ರಾಂತಿ. | 25—12—1103 | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೭೮ | 208 | ಚಾ. ವಿ. ೩೨ ಸರ್ವಜಿತು ಚೈತ್ರ ಶುದ್ಧ ೩ ಬೃಹಸ್ಪತಿ ವಾರ | 28—3—1107 | ಇದು ಸೌರ ಚೈತ್ರ, ಎಂದರೆ ಚಾಂದ್ರ ವೈಶಾಖದ ಶುಕ್ಲ (ಅಕ್ಷಯ) ತದಿಗೆ. |
| ೭೯ | 209 | ಚಾ. ವಿ. ೩೨ ಸರ್ವಜಿತು ಶ್ರಾವಣ ಬಹುಳ ೫ ವಡ್ಡವಾರ | ಶನಿವಾರ 10—8—1107 | |
| ೮೦ | 210 | ಚಾ. ವಿ. ೩೩ ಸರ್ವಧಾರಿ ಆಶ್ವಯುಜ ಶುದ್ಧ ೧೫ ಸೋಮವಾರ | 21—9—1108 | |
| ೮೧ | 211 | ಚಾ. ವಿ. ೩೩ ಸರ್ವಧಾರಿ ಪುಷ್ಯ ಶುದ್ಧ ೫ ಬ್ರುಹವಾರ ಉತ್ತರಾಯಣ ಸಂಕ್ರಾಂತಿ. | | ಇದು ಪುಷ್ಯಬಹುಳ ೫ ಎಂದಾಗ ಬೇಕು ; ಹಾಗಾದರೆ ಆ ತೇದಿ ಗುರುವಾರ 24-12-1108. |
| ೮೨ | 212 | ಚಾ. ವಿ. ೩೭ ನಂದನ ಪುಷ್ಯ ಶುದ್ಧ ೪ ಮಂಗಳವಾರ ಉತ್ತರಾಯಣ ಸಂಕ್ರಾಂತಿ. | 24—12—1112 | |
| ೮೩ | 214 | ಚಾ. ವಿ. ೩೮ ವಿಜಯ ಚೈತ್ರ ಶುದ್ಧ ೧ ಬುಧವಾರ. | 19—3—1113 | |
| ೮೪ | 216 | ಚಾ. ವಿ. ೩೯ ಜಯ ಚೈತ್ರ ಶುದ್ಧ ೧೫ ಆದಿತ್ಯವಾರ ಸೋಮ ಗ್ರಹಣ ಸಂಕ್ರಾಂತಿ. | | ಆ ಜಯ ಸಂವತ್ಸರದಲ್ಲಿ ಚೈತ್ರ ಶುದ್ಧ ೧೫ಯಂದು ಗ್ರಹಣ ವಿದ್ದಿಲ್ಲ ; ಆ ಸಂವತ್ಸರದ ಫಾಲ್ಗುಣ ಶುದ್ಧ ೧೫ಯ ಗ್ರಹಣವು ಬುಧವಾರ 10-2-1115 ಆಗಿದ್ದು ಸಂಕ್ರಾಂತಿಗೆ ಬಹು ದೂರವಿದ್ದಿತು. ಆದರೆ ಅದರ ಹಿಂದಣ ವಿಜಯ ಸಂವತ್ಸರದ ಫಾಲ್ಗುಣ ಶುದ್ಧ ೧೫ಯ (ಎಂದರೆ ಈ ಶಾಸನದಲ್ಲಿ ತೋರುವ ತೇದಿಯ ಒಂದೇ ತಿಂಗಳ ಹಿಂದಣ ಹುಣಿಮೆಯ) ಗ್ರಹಣವು ಶನಿವಾರ 21—2—1114 ಆಗಿದ್ದು ಸಂಕ್ರಾಂತಿಗೆ ಬಹಳ ಹತ್ತಿರ ವಿದ್ದಿತು. |
| ೮೫ | 218 | ಚಾ. ವಿ. ೪೭ ಶುಭಕೃತು ಸಂವತ್ಸರ ಚೈತ್ರ ಶುದ್ಧ ೮ ಸೋಮವಾರ ಉತ್ತರಾಯಣ ಸಂಕ್ರಾಂತಿ. | | ಈ ಮೇಲಣ ನಂ. ೨೬ನ್ನು ನೋಡುವುದು. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೮೬ | 219 | ಚಾ. ವಿ. ೪೬ ಪ್ಲವ ಆಶ್ವಯುಜ ಬಹುಳ ೫ ಆದಿತ್ಯವಾರ | 2—10—1121 | |

## VII. Epigraphia Carnatica, Vol. V.—ಹಾಸನ ಜಿಲ್ಲೆ

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೮೭ | ಬೇಲೂರು 200 | ಚಾ. ವಿ. ೨೨ ಪ್ರಮಾತಿ ಶ್ರಾವಣ ಪೂರ್ಣಿಮಾ ಬುಧವಾರ | 3—8—1099 | ಪ್ರಮಾತಿ ಸಂವತ್ಸರವು ಚಾ.ವಿ. ೨೪ನೆಯ ವರ್ಷ. |
| ೮೮ | ಚನ್ನರಾಯಪಟ್ಟಣ 145 | ಶಕ ೧೦೦೧ ಸಿದ್ಧಾರ್ಥಿ ಚೈತ್ರ ಶುದ್ಧ ೫ ಬೃಹವಾರ. | | ಇದು ವಾಸ್ತವಿಕವಾಗಿ ಶಕ ೧೦೦೨ನೆಯ ರೌದ್ರಿ ಸಂವತ್ಸರದ ಚೈತ್ರ ಶುದ್ಧ ೫ ಗುರುವಾರ 27—2—1080. |
| ೮೯ | 148 | ಶಕ ೧೦೧೫ ಶ್ರೀಮುಖ ಪುಷ್ಯ ಶುದ್ಧ ೧೩ ಆದಿವಾರ ಸಂಕ್ರಾಂತಿ. | } | ಈ ಮೇಲಣ ನಂ. ೪೮, ೫೬ರ ತೇದಿ ವಾರಗಳನ್ನು ಹೋಲಿಸಿ ನೋಡುವುದು. |
| ೯೦ | 228 | ಶ್ರೀಮೊಕ ಸಂವತ್ಸರದ ಪೌಶ್ಯ ಸುದ್ಧ ೩ ಆದಿವಾರ ಉತ್ತರಾಯಣ ಸಂಕ್ರಾಂತಿ. | } | |
| ೯೧ | 248 | ಶಕ ೧೦೫೬ ಪ್ರಮಾದಿ ವೈಶಾಖ ಶುದ್ಧ ೩ ಆದಿವಾರ. | | ಇದು ಶಕ ೧೦೫೫ನೆಯ ಪ್ರಮಾದೀಚ ಎಂದಾಗಬೇಕು. 9—4—1133. |
| ೯೨ | ಬೇಲೂರು 199 | ಶಕ ೧೦೨೩ ವಿಷು ವೈಶಾಖ ಬಹುಳ ೪ ಶುಕ್ರವಾರ. | 19—4—1101 | |
| ೯೩ | 116 | ಚಾ. ವಿ. ೪೧ ಹೇವಿಳಂಬಿ ಪುಷ್ಯ ಶುದ್ಧ ೧೦ ಸೋಮವಾರ ವ್ಯತೀಪಾತ ಸಂಕ್ರಮಣ. | | ಹೇವಿಳಂಬಿ ಸಂವತ್ಸರವು ಚಾ. ವಿ. ೪೨ನೆಯ ವರ್ಷ. ಅದರಲ್ಲಿ ಪುಷ್ಯ ಶುದ್ಧ ೧ ಸೋಮವಾರ ಸಂಕ್ರಾಂತಿಯಾಗಿದ್ದಿತು. 26—11—1117. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| | ಅರಸೀಕೆರೆ | | | |
| ೯೪ | 124 | ಶಕ ೧೦೬೦ ಕಾಲಯುಕ್ತ ವೈಶಾಖ ಶುದ್ಧ ೧೦ ಬೃಹಸ್ಪತಿವಾರ. | 21—4—1138 | 'ಚಾಳುಕ್ಯಾಭರಣ ತ್ರಿಭುವನಮಲ್ಲ ದೇವನ ವಿಜಯ ರಾಜ್ಯ ಸಲುತ್ತಮಿರೆ.' ಡಿ. |
| | ಹಾಸನ | | | |
| ೯೫ | 114 | ಶಕ ೧೦೬೧ ಸಿದ್ಧಾರ್ಥಿ ಪುಷ್ಯ ಶುದ್ಧ ೫ ಸೋಮವಾರ ಉತ್ತರಾಯಣ ಸಂಕ್ರಾಂತಿ. | | ಈ ಸಿದ್ಧಾರ್ಥಿಯಲ್ಲಿ ಪುಷ್ಯ ಶುದ್ಧ ೩ ಸೋಮವಾರದಂದು ಉತ್ತರಾಯಣ ಸಂಕ್ರಾಂತಿಯಾಗಿದ್ದಿತು. 25—12—1139. |

VIII. Epigraphia Carnatica, Vol. VI.—ಕಡೂರು ಜಿಲ್ಲೆ

| | | | | |
|---|---|---|---|---|
| | ಕಡೂರು | | | |
| ೯೬ | 21 | ಚಾ. ವಿ. ೧೩ ವಿಭವ ಪುಷ್ಯ ಬಹುಳ ೧೪ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | | ಚಾ. ವಿ. ೧೨ನೆಯ ಪ್ರಭವ ಸಂವತ್ಸರದ ಪುಷ್ಯ ಬಹುಳ ೧೪ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿಯಾಗಿದ್ದಿತು. |
| ೯೭ | 22 | ಚಾ. ವಿ. ೧೪ ಶುಕ್ಲ ಉತ್ತರಾಯಣಸಂಕ್ರಾಂತಿ ಆದಿತ್ಯವಾರ. | 23—12—1089 | 26-12-1087 |
| ೯೮ | 142 | ಚಾ. ವಿ. ೧೯ ಯುವ ಮಾರ್ಗಶಿರ ಬಹುಳ ೧೧ ಶುಕ್ರವಾರ. | | ಚಾ ವಿ. ೨೦ನೆಯ ವರ್ಷ ಯುವ ಸಂವತ್ಸರ ; ಅದರಲ್ಲಿ ಕಾರ್ತಿಕ ಬಹುಳ ೧೧ ಶುಕ್ರವಾರ 26—10—1095 ಆಗಿದ್ದಿತು. |
| ೯೯ | 164 | ಚಾ. ವಿ. ೨೫ ವಿಕ್ರಮ ಸಂ\|\| . . . . . . . . . , ಸೋಮವಾರ ಸಂಕ್ರಾಂತಿ. | | |
| | ಚಿಕ್ಕಮಗಳೂರು | | | |
| ೧೦೦ | 160 | ಶಕ ೧೦೨೫ ಸುಭಾನು ಕಾರ್ತಿಕ ಶುದ್ಧ ೧೦ ಬೃಹಸ್ಪತಿವಾರ. | | ಶಕ ೧೦೨೫ ಸುಭಾನು ಸಂವತ್ಸರದಲ್ಲಿ ಈ ತೇದಿ ಗುರುವಾರ ಬಂದಿದ್ದಿಲ್ಲ ; ಆದರೆ ಅದರ ಹಿಂದಣ ಚಿತ್ರಭಾನು ಸಂವತ್ಸರದಲ್ಲಿ ಗುರುವಾರ ಬಂದಿದ್ದಿತು. 23—10—1102. |
| ೧೦೧ | 161 | ಶಕ ೧೦೬೦ ಪಿಂಗಳ ಪುಷ್ಯ ಶುದ್ಧ ೧೦ ಆದಿವಾರ ಉತ್ತರಾಯಣ ಸಂಕ್ರಾಂತಿ. | | ಇದು ಪುಷ್ಯ ಶುದ್ಧ ೧೨ ಎಂದಾದರೆ ಅಂದು ರವಿ ವಾರವೂ ಸಂಕ್ರಾಂತಿಯೂ ಇದ್ದುವು. 26—12—1137. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| | | **IX. Epigraphia Carnatica, Vol. VII.—ಶಿವಮೊಗ್ಗ I** | | |
| | ಶಿವಮೊಗ್ಗ | | | |
| ೧೦೨ | 10 | ಶಕ ವರ್ಷ ೧೦೦೧ನೆಯ ಕ್ರೋಧನ ಜ್ಯೇಷ್ಠ ಬಹುಳ ಚಟ್ಠ ವಡ್ಡವಾರ. | ಶನಿವಾರ 17—5—1085 | ಶಕ ವರ್ಷ ೧೦೦೭ ಎಂದಾಗಬೇಕು. |
| ೧೦೩ | 14 | ಚಾ. ವಿ.....ಸುಭಾನು ಕಾರ್ತಿಕ ಶುದ್ಧ ೫ ಬೃಹವಾರ. | | ಚಾ. ವಿ. ೨೮ನೆಯ ವರ್ಷ ಸುಭಾನು ಸಂವತ್ಸರ; ಅದರಲ್ಲಿ ಕಾರ್ತಿಕ ಶುದ್ಧ ೫ ಬುಧವಾರ 7–10—1103 ಆಗಿದ್ದಿತು. ಅದರ ಹಿಂದಣ ಚಿತ್ರಭಾನು ಸಂವತ್ಸರದಲ್ಲಿ ಕಾರ್ತಿಕ ಶುದ್ಧ ೫ ಶನಿವಾರ (ಬೃಹವಾರ) 18-10-1102 ಆಗಿದ್ದಿತು. |
| ೧೦೪ | 15 | ಚಾ. ವಿ. ೪೭ ಸುಭಕೃ.. ..ರದ ಕಾರ್ತಿಕ ಶುದ್ಧ ೨ ಆದಿವಾರ. | ಬುಧವಾರ 4—10—1122 | |
| ೧೦೫ | 23 | ಚಾ. ವಿ. ೪೦ ಮನ್ಮಥ ಸಂವತ್ಸರದಂದು. | | |
| ೧೦೬ | 30 | ಚಾ. ವಿ. ೯....ನೆಯ ಶುಭಕೃತ್ಸಂ॥ ಉತ್ತ.... ಸಂಕ್ರಮಣ ಸೂರ್ಯ ಗ್ರಹಣ. | | ಶುಭಕೃತು ಸಂವತ್ಸರವು ಚಾ. ವಿ. ೪೭ನೆಯ ವರ್ಷ (1122—23); ಅದರಲ್ಲಿ ಸೂರ್ಯ ಗ್ರಹಣವಿರಲಿಲ್ಲ. |
| ೧೦೭ | 51 | ಚಾ. ವಿ. ೩೦ ಸರ್ವಜಿತು ಫಾಲ್ಗುಣ ೧೫ ವಡ್ಡವಾರ. | | ಸರ್ವಜಿತು ಸಂವತ್ಸರವು ಚಾ. ವಿ. ೩೨ನೆಯ ವರ್ಷ. ಅದರಲ್ಲಿ ಫಾಲ್ಗುಣ ಬಹುಳ ೧೫ (ಅಮಾವಾಸ್ಯೆ) ಶನಿವಾರ (ವಡ್ಡವಾರ) ಬಂದಿದ್ದಿತು. 14-3-1108. |
| ೧೦೮ | 56 | ಚಾ. ವಿ. ೫೦ ವಿಶ್ವಾವಸು ಮಾಘ ಶುದ್ಧ ೨ ಸೋಮವಾರ. | 28—12—1125 | |
| ೧೦೯ | 57 | ಚಾ. ವಿ. ೪೨ ಮನ್ಮಥ ಉತ್ತರಾಯಣ ಸಂಕ್ರ.... | | |
| ೧೧೦ | 64 | ಶಕ ೧೦೫೪ ನಂದನ ಚೈತ್ರ ಶುದ್ಧ ೧೫ ಆದಿವಾರ ಸೋಮಗ್ರಹಣ. | | ನಂದನ ಸಂವತ್ಸರವು ಶಕ ವರ್ಷ ೧೦೩೪ನೆಯದು; ಅದರಲ್ಲಿದ್ದ ಒಂದೇ ಚಂದ್ರಗ್ರಣವು ಫಾಲ್ಗುಣ ಶುದ್ಧ ೧೫ ಸೋಮವಾರ ಬಂದಿದ್ದಿತು; 3—3—1113. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೧೧ | 89 | ಚಾ. ವಿ. ೩೫ ವಿಕೃತಿ ಫಾಲ್ಗುಣ ಶುದ್ಧ ೫ ಬೃಹವಾರ. | | ಇದು ಸೌರ ಫಾಲ್ಗುಣ (ಎಂದರೆ ಖರ ಸಂವತ್ಸರದ ಚಾಂದ್ರ ಚೈತ್ರ) ಶುದ್ಧ ೫ ಗುರುವಾರ 16—3—1111. |
| ೧೧೨ | 97 | ಚಾ. ವಿ. ೩೭ ನಂದನ ಪೌಷ್ಯ ಶುದ್ಧ ೫ ಬೃಹವಾರ ಉತ್ತರಾಯಣ ಸಂಕ್ರಾಂತಿ. | ಬುಧವಾರ 25—12—1113 | |
| ೧೧೩ | 125 | ಚಾ. ವಿ. . . . . ಸಂವತ್ಸರ ಚೈತ್ರ ಶುದ್ಧ ೧ ಆದಿವಾರ. | | |
| | ಶಿಕಾರಿಪುರ | | | |
| ೧೧೪ | 13 | ಚಾ. ವಿ. ೨೨ ಈಶ್ವರ ಪುಷ್ಯ ಶುದ್ಧ ೧೦ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿ. | | |
| ೧೧೫ | 14 | ಚಾ. ವಿ. ೧೪ ಶುಕ್ಲ ಜ್ಯೇಷ್ಠ ೩೦ ಸೋಮವಾರ. | 10—6—1089 | ಅಂದು ಪೂರ್ಣ ಸೂರ್ಯ ಗ್ರಹಣವಿದ್ದಿತು; ಅದನ್ನೀ ಶಾಸನದಲ್ಲಿ ಹೇಳಿಲ್ಲವೆಂಬುದು ಸೋಜಿಗವೇ. |
| ೧೧೬ | 16 | ಚಾ. ವಿ. ೧೦ ಕ್ರೋಧನ ಚೈತ್ರ ಬಹುಳ ೧೧ ಆದಿತ್ಯವಾರ ಮೇಷ ಸಂಕ್ರಮಣ. | 23—3—1085 | |
| ೧೧೭ | 17 | ಚಾ. ವಿ. ೧೩ ವಿಭವ. . . . ಆ. . . .ಸೆ ಬೃಹಸ್ಪತಿ. . . . ದಿನ ಸೋಮ ಗ್ರಹಣ. | 6—7—1088 | 'ಆ. .ಸೆ' ಎಂಬುದು ಆ(ಷಾಢ ಪೌರ್ಣಿಮಾ) ಸೆ ಎಂದಾಗಿರಬೇಕು. ಏಕೆಂದರೆ, ಆ ಸಂವತ್ಸರದಲ್ಲಿ ಪೌಷ್ಯ ಹುಣ್ಣಿಮೆಯಂದು ಮಾತ್ರ ಇನ್ನೊಂದು ಚಂದ್ರ ಗ್ರಹಣವಿದ್ದಿತು. |
| ೧೧೮ | 44 | ಶಕ ೯೯೯ಯ ನಳ ಸಂವತ್ಸರದ ಶ್ರಾಹೆಯೊಳ್ . . . . ಉತ್ತರಾಯಣ ಸಂಕ್ರಾಂತಿ ವ್ಯತೀಪಾತ ಆದಿತ್ಯವಾರ. | 25—12—1076 | ಶಕ ೯೯೮ನೆಯ ನಳ ಸಂವತ್ಸರ ಎಂದಾಗಬೇಕು. ಈ ತೇದಿ ಆ ಸಂವತ್ಸರದ ಪುಷ್ಯ ಬಹುಳ ೧೨ ಯಾಗುತ್ತದೆ. |
| ೧೧೯ | 60 | ಚಾ. ವಿ. . . . . ೦ನೆಯ ಮನ್ಮಥ ಸಂವ. . . . ೫ ಮಂಗಳವಾರ. | | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೨೦ | 70 | ಚಾ. ವಿ. ೨ನೆಯ ಪ್ಲ(ವ) ಸಂ॥ ಆಸುವಿಜ ಬ ೧೦ ಬೃಹವಾರ. | | ಪ್ಲವ ಸಂ॥ ವು ಚಾ. ವಿ. ೪೬ನೆಯ ವರ್ಷ. ಅದರಲ್ಲಿ ಈ ತೇದಿ ಶನಿವಾರ 8–10–1121 ಆಗಿದ್ದಿತು. |
| ೧೨೧ | 76 | ಚಾ. ವಿ. ೩೮ ಜಯ ಚೈತ್ರ ಬ ೧ ಆದಿವಾರ. | | ಚಾ. ವಿ. ೩೮ನೆಯದು ವಿಜಯ ಸಂ॥ ಅದರಲ್ಲಿ ಫಾಲ್ಗುಣ ಬ ೧ ಆದಿತ್ಯವಾರ 22–2–1114 ಆಗಿದ್ದಿತು. ಈ ಕೆಳಗಣ ನಂ. ನ್ನು ನೋಡುವುದು. |
| ೧೨೨ | 77 | ಚಾ. ವಿ. . . . . ೩೫ ವಿಕೃತ ಸಂ. . . . . ಆದಿವಾರ. | | |
| ೧೨೩ | 94 | ಚಾ. ವಿ. ೧೮ ಶ್ರೀಮುಖ ಫಾಲ್ಗುಣ ೩೦ ಆದಿವಾರ ಸೂರ್ಯಗ್ರಹಣ. | 19–3–1094 | |
| ೧೨೪ | 98 | ಚಾ. ವಿ. ೨೭ ಚಿತ್ರಭಾನು ಪೌಷ್ಯ ಶು ೧೩ ಬುಧವಾರ ಉತ್ತರಾಯಣ ಸಂಕ್ರಾಂತಿ. | 24–12–1102 | |
| ೧೨೫ | 99 | ಚಾ. ವಿ. ೩೭ ನಂದನ ಪೌಷ್ಯ ಮಾಸ ಸಿತಪಕ್ಷ ಚತುರ್ಥಿ ಮಹೀಜವಾರದೊಳ್ಬೆರಸಿರಲುತ್ತರಾಯಣದೊಳ್. | 24–12–1112 | |
| ೧೨೬ | 106 | ಚಾ. ವಿ. ೨೨ ಬಹುಧಾನ್ಯ ಪುಷ್ಯದಮಾವಾಸ್ಯೆ ಆದಿತ್ಯ ವಾರಮುತ್ತರಾಯಣ ಸಂಕ್ರಾಂತಿ. | ಶನಿವಾರ 25–12–1098 | ಬಹುಧಾನ್ಯವು ಚಾ. ವಿ. ೨೩ನೆಯ ವರ್ಷ. |
| ೧೨೭ | 107 | 'ವಿಕ್ರಮ ಕಾಲದಾ . . . . ತದನ್ವಿತ ಪುಷ್ಯ ಮಾಸದ ಕೃಷ್ಣ ಪಂಚಮಿ . . . . ದೊಳುತ್ತರಾಯಣದಂ . . . .' | | |
| ೧೨೮ | 114 | ಚಾ. ವಿ. ೨೧ ಧಾತು ಪುಷ್ಯ ಶು ೫ ಆದಿವಾರ ಉತ್ತರಾಯಣ ಸಂಕ್ರಾಂತಿ. | ಸೋಮವಾರ 22–12–1096 | |
| ೧೨೯ | 115 | ಚಾ. ವಿ. ೧೭ನೆಯ ಚಿತ್ರಭಾನು ಫಾಲ್ಗುಣ ಬ ಪಾಡಿವ ಸೋಮವಾರ. | 23–2–1103 | ಚಿತ್ರಭಾನು ಚಾ. ವಿ. ೨೭ನೆಯ ವರ್ಷ. |
| ೧೩೦ | 124 | ಚಾ ವಿ. ೨ನೆಯ ಪಿಂಗಳ ಪುಷ್ಯ ಶು ೭ ಆದಿತ್ಯ ವಾರದಂದಿನುತ್ತರಾಯಣ ಸಂಕ್ರಾಂತಿ. | 24–12–1077 | ಚಾಳುಕ್ಯ ವಿಕ್ರಮನು 'ಏತಗಿರಿಯ ನೆಲೆವೀಡಿನೊಳ್' ಇದ್ದನೆಂದಿದೆ. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೩೧ | 131 | ಚಾ. ವಿ. ೨೮ ಸುಭಾನು ಪುಷ್ಯ ಬ ೧೦ ಸುಕ್ರವಾರದಂದಿ ನುತ್ತರಾಯಣ ಸಂಕ್ರಾಂತಿ. | 25–12–1103 | |
| ೧೩೨ | 135 | ಚಾ. ವಿ. ೨ ಪಿಂಗಳ ಮಾಘ ೧೫ ಸೋಮವಾರ ಸೋಮ ಗ್ರಹಣ | ಮಂಗಳವಾರ 30–1–1078 | ಚಾಳುಕ್ಯ ವಿಕ್ರಮನು 'ಏತಗಿರಿಯ ನೆಲೆವೀಡಿನೊಳ್' ಇದ್ದನೆಂದಿದೆ. |
| ೧೩೩ | 137 | ಚಾ. ವಿ. ೩೯ ಜಯ ಚೈತ್ರ ೧೫ ಆದಿವಾರ ಗ್ರಹಣ ವ್ಯತೀಪಾತ ಸಂಕ್ರ.... | | ಈ ಮೇಲಣ ನಂ. ೮೪ನ್ನು ನೋಡುವುದು. |
| ೧೩೪ | 149 | ಚಾ. ವಿ. ೩೮ನೆಯ ನಂದನ ಸಂವತ್ಸರದ.... | .. | ನಂದನವು ಚಾ. ವಿ. ೩೭ನೆಯ ವರ್ಷ. |
| ೧೩೫ | 166 | ಚಾ. ವಿ. ೩ನೆಯ ಆಂಗೀರಸ ವೈಶಾಖ ಬ ೧೧ ಶುಕ್ರವಾರ. | | ಆಂಗೀರಸವು ಚಾ. ವಿ. ೧೭ನೆಯ ವರ್ಷ; ಅದರ ಹಿಂದಣ ಪ್ರಜಾಪತಿ ಸಂ| ದಲ್ಲಿ ಈ ತೇದಿ ಶುಕ್ರವಾರ 16–5–1091 ಆಗಿದ್ದಿತು. |
| ೧೩೬ | 178 | ಚಾ. ವಿ. ೧೬ ಪ್ರಜಾಪತಿ ಉತ್ತರಾಯಣ ಸಂಕ್ರಾಂತಿ ಆದಿತ್ಯವಾರ. | 22–12–1091 | |
| ೧೩೭ | 192 | ಚಾ. ವಿ. ೩೨ ಸರ್ವಜಿತು ಚೈತ್ರ ಶು ೩ ಬೃಹಸ್ಪತಿವಾರ. | ... | ಇದು ಸೌರ ಚೈತ್ರ (ಎಂದರೆ, ಚಾಂದ್ರ ವೈಶಾಖ) ಶುದ್ಧ (ಅಕ್ಷಯ) ತದಿಗೆ, 28-3-1107. |
| ೧೩೮ | 204 | ಚಾ. ವಿ. ೧೫ ಪ್ರಮಾದೂತಿ ಕಾರ್ತಿಕ ಶು ೫ ಆದಿತ್ಯವಾರ. | | |
| ೧೩೯ | 207 | ಡಿ. | | |
| ೧೪೦ | 205 | ಚಾ. ವಿ. ೧೬ ಪ್ರಜಾಪತಿ ಫಾಲ್ಗುಣ ಶು ೧೦ ಬೃಹಸ್ಪತಿವಾರ. | 19–2–1092 | |
| ೧೪೧ | 246 | ಚಾ. ವಿ. ೪೮ ಸೋಭಕೃತು ವೈಶಾಖ ಬ ೧೦ ಆದಿವಾರ. | 22–4–1123 | |
| ೧೪೨ | 275 | ತ್ರಿಭುವನಮಲ್ಲದೇವ ವರ್ಷದ ೧೧ನೆಯ ವ್ಯಯ ವೈಶಾಖ ಶು ೧೪ ಸೋಮವಾರ. | | ವ್ಯಯ ಸಂ| ವು ಚಾ. ವಿ. ೩೦ನೆಯ (ಕ್ರಿ. ಶ. 1106) ವರ್ಷ. ಅದರಲ್ಲಿ ವೈಶಾಖ ಶು ೧೪ ಸೋಮವಾರ ಬಂದಿದ್ದಿಲ್ಲ ; ಅದರ ಮರು ಸಂವತ್ಸರವಾದ ಸರ್ವಜಿತುವಲ್ಲಿ (ಚಾ. ವಿ. ೩೧) ವೈಶಾಖ ಶು ೧೪ ಸೋಮವಾರ 8-4-1107 ಆಗಿದ್ದಿತು. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೪೩ | 292 | ಚಾ. ವಿ. ವರ್ಷದ ಪ್ರಥಮನಯ ನಳ ಸಂ। ಪುಷ್ಯ ಬ ೩ ಸೋಮವಾರಮುತ್ತರಾಯಣ ಸಂಕ್ರಾಂತಿ. | 26–12–1076 | ಈ ತಿಥಿ ಪುಷ್ಯ ಬ ೧೩ (ತ್ರಯೋದಶಿ) ಎಂದಾಗಬೇಕೆಂಬುದನ್ನು ಈ ಮೇಲಣ ಲೇಖದಲ್ಲಿ ವಿವರಿಸಿದೆ. |
| ೧೪೪ | 293 | ಚಾ. ವಿ. ೪ ಸಿದ್ಧಾರ್ಥಿ ಮಾಘ ಶು ೧ ಆದಿತ್ಯವಾರಮುತ್ತರಾಯಣ ಸಂಕ್ರಾಂತಿ ಸೂರ್ಯಗ್ರಹಣ. | | ಈ ಮಾಘ ಶು ೧ ಗುರುವಾರ 26–12–1079, ಮತ್ತು ಅದರ ಮುಂಚಿನ ದಿನವಾದ ಗ್ರಹಣವು ಬುಧವಾರ 25–12–1079. |
| ೧೪೫ | 294 | ಚಾ. ವಿ. ೩೨ ಸರ್ವಜಿತು ಪುಷ್ಯ ಸು ೫ ಆದಿತ್ಯವಾರಮುತ್ತರಾಯಣ ಸಂಕ್ರಾಂತಿ. | | ಪುಷ್ಯ ಶು ೬ ಆದಿತ್ಯವಾರ 22–12–1107. |
| ೧೪೬ | 297 | ಚಾ. ವಿ. ೪ ಸಿದ್ಧಾರ್ಥಿ ಪುಷ್ಯದ ಅಮಾವಾಸ್ಯೆ ಆದಿ. . . . ಸಂಕ್ರಾಂತಿ ಸೂರ್ಯಗ್ರಹಣ. | | ಈ ಮೇಲಣ ಸಂ. ೧೪೪ನ್ನು ನೋಡುವುದು. ಬುಧವಾರ 25–12–1079. |
| ೧೪೭ | 298 | ಚಾ. ವಿ. ೧೪ ಸುಕುಲ ಸಂ। ಕಾರ್ತಿಕ ಶು ೫ ಆದಿವಾರ. | | |
| ೧೪೮ | 316 | ಚಾ. ವಿ ೪೧ ಹೇವಿಳಂಬಿ ಚೈ. . . . ಸು ೧ ಆದಿವಾರದಂದಿನ ಸೋಮ ಗ್ರಹಣ. | | ಹೇವಿಳಂಬಿ ಚಾ. ವಿ. ೪೨ನೆಯ ವರ್ಷ. ಚೈತ್ರ ಶು ೧ದೊಂದಿಗೆ ಹೇಳಲ್ಪಡುವ ಗ್ರಹಣವು ಸೂರ್ಯಗ್ರಹಣವಾಗಿರಬೇಕಲ್ಲದೆ ಚಂದ್ರಗ್ರಹಣವಾಗಲಾರದು. ಚಾ. ವಿ. ೪೧ನೆಯದುರ್ಮುಖಿಯಲ್ಲಾಗಲಿ, ೪೨ನೆಯ ಹೇವಿಳಂಬಿಯಲ್ಲಾಗಲಿ ಸೂರ್ಯಗ್ರಹಣವಿದ್ದಿಲ್ಲ. ದುರ್ಮುಖಿಯಲ್ಲಿದ್ದ ಒಂದೇ ಚಂದ್ರಗ್ರಹಣ ಪೌಷ್ಯ ಹುಣ್ಣಿಮೆಯಂದು ಹೇವಿಳಂಬಿಯಲ್ಲಿ ಜ್ಯೇಷ್ಠ ಹುಣ್ಣಿಮೆಯಂದು ಮತ್ತು ಪೌಷ್ಯ ಹುಣ್ಣಿಮೆಯಂದು ಹೀಗೆ ಎರಡಾದುವು. ಮರು ವರ್ಷ ವಿಳಂಬಿ ಸಂವತ್ಸರದ ನಿಜ ಚೈತ್ರ ಶು ೧ವು ಆದಿತ್ಯವಾರ 24–3–1118 ಆಗಿದ್ದಿತು. |
| ೧೪೯ | ಹೊನ್ನಾಳಿ 10 | ಚಾ. ವಿ. ೩೬ ಖರ ವೈಶಾಖ ಶು ೧ ಸೋಮವಾರ. | 10–4– 1111 | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೫೦ | 14 | ಚಾಳುಕ್ಯ ವಿಕ್ರಮ ಕಾಲ ೧ನೆಯ ನಳ ಸಂವತ್ಸರದ ಚೈತ್ರ ಶುದ್ಧ ೫ ವಿಾ ಆದಿವಾರದಂದು. | | ಇದನ್ನು ಈ ಮೇಲಣ ಲೇಖದಲ್ಲಿ ತರ್ಕಿಸಿದೆ. |
| ೧೫೧ | 66 | ಚಾ. ವಿ. ೨೮ ಸುಭ. . . . ಸಂ॥ ಆಷಾಢ ಬ ೧ ಬೃಹವಾರ ದಕ್ಷಿಣಾಯಣ ಸಂಕ್ರಮಣ. | | ಚಾ. ವಿ. ೨೮ನೆಯದು ಸುಭಾನು ಸಂ।ವು ; ಅದರಲ್ಲಿ ದಕ್ಷಿಣಾಯನ ಸಂಕ್ರಾಂತಿ ಆಷಾಢ ಬ ೫ ಶುಕ್ರವಾರ ಬಂದಿದ್ದಿತು. 26–6–1103. |
| ೧೫೨ | 67 | ಚಾ. ವಿ. ೨ನೆಯ ಸುಭಾನು ಸಂ। ಆಷಾಢ ಬ . . . . ಬೃಹವಾರ ದಕ್ಷಿಣಾಯನ ಸಂಕ್ರಮಣ. | | ಈ ಮೇಲಣ ತೇದಿಯದೇ ಶಾಸನವಿದು. ಸುಭಾನು ಸಂ। ವು ಚಾ. ವಿ. ೨೮ನೆಯದು. |
| ೧೫೩ | ಚನ್ನಗಿರಿ 61 | ಚಾ. ವಿ. ೪೮ ಕ್ರೋಧಿ ಪೌಷ್ಯ ಪೂರ್ಣಿಮಾಸ್ಯೆ ಸೋಮವಾರ ಉತ್ತರಾಯಣ ಸಂಕ್ರಾಂತಿ. | 22–12–1124 | ಕ್ರೋಧಿ ಸಂ। ವು ಚಾ. ವಿ. ೪೯ನೆಯ ವರ್ಷ. |

## X. Epigraphia Carnatica, Vol. VIII.—ಶಿವಮೊಗ್ಗ II

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| | ಸೊರಬ | | | |
| ೧೫೪ | 45 | ಚಾ. ವಿ. ೭ ಶ್ರೀಮುಖ ಚೈತ್ರ ಶು ೫ ಆದಿವಾರ. | | ಇದು ಸೌರ ಚೈತ್ರ ಶುದ್ಧ (ಎಂದರೆ, ಚಾಂದ್ರ ವೈಶಾಖ ಶುದ್ಧ) ಪಂಚಮಿ 3–4–1093. |
| ೧೫೫ | 170 | ಚಾ. ವಿ. ೫೦ ವಿಶ್ವಾವಸು ಮಾಘದ ೧೫ ಸೋಮವಾರ ಸೂರ್ಯ ಗ್ರಹಣ ಸಂಕ್ರಾಂತಿ. | | ಚಾ. ವಿ. ೫೦ ವಿಶ್ವಾವಸು ಮಾಘ ೧೫ಯಂದಾದ ಚಂದ್ರ ಗ್ರಹಣವು ಆದಿತ್ಯವಾರ 10-1-1126 ಆಗಿದ್ದಿತು. ಅಂದು ಸಂಕ್ರಾಂತಿ ಇದ್ದಿಲ್ಲ. ಚಾ.ವಿ. ೪೯ ಕ್ರೋಧಿ ಮಾಘ ೧೫ ಯ ಗ್ರಹಣವು ಬುಧವಾರ 21–1–1125 ಸಂಕ್ರಾಂತಿಗೆ ಹತ್ತಿರವಾಗಿದ್ದಿತು. |
| ೧೫೬ | 172 | 'ಚಾಳುಕ್ಯ ಪ್ರತಾಪ ಚಕ್ರವರ್ತಿ. . . . ಮಲ್ಲದೇವ ವರ್ಷದ ೩ನೆಯ ಪಿಂಗಳ ಸಂವಚ್ಛರಂ. . . . . . . . .' | | |
| ೧೫೭ | 236 | ಚಾ. ವಿ. ೯ ರಕ್ತಾಕ್ಷಿ ಸಂವತ್ಸರ. | | |
| ೧೫೮ | 327 | ಚಾ. ವಿ. ೩೭ ನಂದನ ಕಾ . . . . ಸುದ್ಧ ೧೫ ಮಂಗಳವಾರ. | 5–10–1112 | ಇದು ಕಾರ್ತಿಕ ಶುದ್ಧ ಹುಣ್ಣಿಮೆಯೆಂಬುದರಲ್ಲಿ ಸಂಶಯವಿಲ್ಲ. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೫೯ | 336 | ಚಾ. ವಿ. ೬ನೆಯ ದುರ್ಮತಿ ಚೈತ್ರ ೩೦ ಆದಿತ್ಯವಾರ. | 1–4–1081 | |
| ೧೬೦ | 337 | ‘ಚಾಳೊಖ್ಯ ವಿಕ್ರಮ ಕೆಲದ ೪೧ನೆಯದು....ಕಿಸವತ್ಸರ. | | ಇದು ಚಾ. ವಿ. ೪೧ನೆಯ ದುರ್ಮುಖಿ ಸಂವತ್ಸರ (ಕ್ರಿ. ಶ. 1116–17). |
| ೧೬೧ | 388 | ಚಾ. ವಿ. ೧೩ ವಿಭವ ಪುಷ್ಯ ಬ ೧ ಸೋಮ ಗ್ರಹಣ ಆದಿತ್ಯವಾರ. | ಆದಿತ್ಯವಾರ 31–12–1088 | ಪುಷ್ಯ ಶುಕ್ಲ ಹುಣ್ಣಿಮೆಯ ಸೋಮ ಗ್ರಹಣವಾದುದು ಅಂದಿನ ಮುಂಚಿನ ದಿನ ಶನಿವಾರ–30–12–1083. |
| ೧೬೨ | 421 | ಚಾ. ವಿ. ೨ನೆಯ ತಾರಣ ಸಂವತ್ಸರದ ಸಾಹೆಯೊಳು. | | |
| ೧೬೩ | 434 | ಚಾ. ವಿ. ೭ ಯುವ ಸಂ....ವಾರ. | | ಯುವ ಸಂ\|ವು ಚಾ. ವಿ. ೨೦ನೆಯ ವರ್ಷ. |
| ೧೬೪ | 435 | ಚಾ. ವಿ. ೪೪ನೆಯ ವಿ.... ೧೧ ಸೋಮವಾರ. | | |
| ೧೬೫ | 549 | ಚಾ. ವಿ. ೩ ಪ್ರಜಪತ್ತಿ ಸಂ\| ಸ್ರವಣ ಸುದ್ಧ ೧೧ ಸೋಮವಾರದಂದು ಉತ್ತರಾಯಣ ಸಂಕ್ರಾಂತಿ. | | ಪ್ರಜಾಪತಿ ಸಂ\|ವು ಚಾ. ವಿ. ೧೬ನೆಯ ವರ್ಷ. ಉತ್ತರಾಯಣ ಸಂಕ್ರಾಂತಿ ಶ್ರಾವಣ ಮಾಸದಲ್ಲಿ ಎಂದೆಂದಿಗೂ ಬರಲಾರದು. ಹೀಗೆ ಈ ಶಾಸನದ ತೇದಿಯ ವಿವರವು ತೀರ ಅಶುದ್ಧವಿದೆ. |
| ೧೬೬ | ಸಾಗರ 80 | ಚಾ. ವಿ. ೧೯ ಯುವ ಮಾಘ ಶು ೫ ಆದಿತ್ಯವಾರ. | | |
| ೧೬೭ | 103 | ಚಾ. ವಿ. ೧೪ ಸುಕುಲ ಆಷಾಢ ೧೫ ಆದಿತ್ಯವಾರ ದಕ್ಷಿಣಾಯಣ ಸಂಕ್ರಾಂತಿ. | 24–6–1089 | ಅಂದು ಚಂದ್ರಗ್ರಹಣವಿದ್ದಿತು; ಆದರೆ ಅದನ್ನಿಲ್ಲಿ ಹೇಳಿಲ್ಲ. |
| ೧೬೮ | 108 | ಚಾ. ವಿ. ೩ ಸಿದ್ಧಾರ್ಥಿ ಉತ್ತರಾಯಣ ಸಂಕ್ರಾಂತಿ. | | ಸಿದ್ಧಾರ್ಥಿ ಸಂ\|ವು ಚಾ. ವಿ. ೪ನೆಯ ವರ್ಷ |
| ೧೬೯ | ನಗರ 35 | ಶಕವರ್ಷ ೯೯೯ ಪಿಂಗಳ ಸಂ\|ದ ಜ್ಯೇಷ್ಠ ಶು ೨ ಬೃಹಸ್ಪತಿವಾರ. | 27-4-1077 | ಇದು ಅಧಿಕ ಜ್ಯೇಷ್ಠ ಶುದ್ಧ ಬಿದಿಗೆ. |
| ೧೭೦ | 36 | ಡಿ. | | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| | ತೀರ್ಥ ಹಳ್ಳಿ | | | |
| ೧೭೧ | 192 | ಶಕ ೧೦೨೫ ಸುಭಾನು ಚೈತ್ರ ೧೫ ಬುಧವಾರ ಸೋಮ ಗ್ರಹಣ. | 25—3—1103 | |
| | | **XI. Epigraphia Carnatica, Vol. XI.—ಚಿತ್ರದುರ್ಗ ಜಿಲ್ಲೆ** | | |
| | ಚಿತ್ರ ದುರ್ಗ | | | |
| ೧೭೨ | 34 | ಚಾ. ವಿ. ೪೮ ಶೋಭಕೃತು ವೈಶಾಖ ಶು ೩ ಬೃಹಸ್ಪತಿವಾರ ಸಂಕ್ರಾಂತಿ. | | |
| | ದಾವಣ ಗೆರೆ | | | |
| ೧೭೩ | 1 | ೪೮ ಶೋಭಕೃತು ಕಾರ್ತಿಕ ೧೫. . . . ವಾರೇ. | ಸೋಮವಾರ 5—11—1123 | |
| ೧೭೪ | 2 | ಚಾ. ವಿ. ೪೮ ಶೋಭಕೃತು ಉತ್ತರಾಯಣ ಸಂಕ್ರಾಂತಿ. | | |
| ೧೭೫ | 3 | ಚಾ. ವಿ. ೪೬ ಪ್ಲವ ಆಶ್ವೀಜ ಬ ೫ ಆದಿವಾರ. | 2—10—1121 | |
| ೧೭೬ | 12 | ಚಾ. ವಿ. ೩೩ ಸರ್ವಧಾರಿ ಪುಷ್ಯ ಶು ೫ ಬ್ರಿಹವಾರ ಉತ್ತರಾಯಣ ಸಂಕ್ರಾಂತಿ. | | ಇದರ ತಿಥಿ ಪುಷ್ಯ ಬಹುಳ ೫ ಎಂದಾಗಬೇಕು ; ಹಾಗಾದರೆ 24—12—1108. |
| ೧೭೭ | 80 | ಚಾ. ವಿ. ೨೫ ಪ್ರಮಾದಿ ಸಂ। ಪುಷ್ಯದ ಅಮಾವಾಸ್ಯೆ ಆದಿವಾರ ಉತ್ತರಾಯಣ ಸಂಕ್ರಾಂತಿ ಸೂರ್ಯ ಗ್ರಹಣ. | | ಕ್ರಿ. ಶ. 1099—1100ನೆಯ ಪ್ರಮಾಥಿಯಲ್ಲಿ ಸೂರ್ಯ ಗ್ರಹಣವೇ ಇದ್ದಿಲ್ಲ. |
| ೧೭೮ | 90 | ಚಾ ವಿ. ೫೩ ಕೀಲಕ ಉತ್ತರಾಯಣ ಸಂಕ್ರಾಂತಿ. | | ಈ ಕೀಲಕವೆಂದರೆ ಕ್ರಿ. ಶ. 1128—29. ಈ ಶಾಸನದ ಒಕ್ಕಣೆಯಲ್ಲಿ ಹೀಗಿದೆ:— 'ಶ್ರೀಮತ್ತ್ರಿಭುವನಮಲ್ಲ ಪೆರ್ಮ್ಮಾಡಿದೇವರ ವಿಜಯ ರಾಜ್ಯಂ . . . . ಸಲುತ್ತಮಿರೆ. . . . ಶ್ರೀಮತ್ತ್ರಿಭುವನಮಲ್ಲ ದೇವ ಪಾದಾಬ್ಜ ಭೃಂಗಂ . . . . ಸೂರ್ಯ ದಂಡಾಧಿಪಂ . . . . ' |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೭೯ | 122 | ಚಾ. ವಿ. ೪೯ ಕ್ರೋಧಿ ಚೈತ್ರ ಬ ೩೦ ಸೋಮವಾರ ಸೂರ್ಯಗ್ರಹಣ. | | ಈ ಕ್ರೋಧಿ ಸಂ। ದಲ್ಲಿ ಶ್ರಾವಣ ಬ ೩೦ಯಂದು ಒಂದು ಪೂರ್ಣ ಸೂರ್ಯಗ್ರಹಣ (11–8–1124) ಇದ್ದಿತು; ಇನ್ನಾವ ತಿಂಗಳಲ್ಲೂ ಇದ್ದಿಲ್ಲ. |
| ೧೮೦ | 127 | ಚಾ. ವಿ. . . . . ಶುಭಕೃತು ಮಾಘ ಶು ೫ ಬೃಹಸ್ಪತಿ. . . . ತ್ತರಾಯಣ ಸಂಕ್ರಾಂತಿ. | | ಶುಭಕೃತು ಚಾ. ವಿ. ೪೭ ನೆಯ ವರ್ಷ, ಅದರಲ್ಲಿ ಮಾಘ ಶು ೫ ಗುರುವಾರ 4–1–1123 ಆಗಿದ್ದಿತು; ಎಂದರೆ, ಉತ್ತರಾಯಣ ಸಂಕ್ರಾಂತಿಯಾದ ಹಲವು ದಿನಗಳ ಬಳಿಕ ಬಂದಿದ್ದಿತು. |
| ೧೮೧ | 128 | ಚಾ. ವಿ ೩೨ ಸರ್ವಜಿತು ಮಾರ್ಗಶಿರ ೩೦ ಬೃಹಸ್ಪತಿವಾರ ಉತ್ತರಾಯಣ ಸಂಕ್ರಾಂತಿ. | | ಈ ಸರ್ವಜಿತು ಸಂ। ದಲ್ಲಿ ಈ ತೇದಿ ಸೋಮವಾರ 16–12–1107, ಎಂದರೆ ಉತ್ತರಾಯಣ ಸಂಕ್ರಾಂತಿಗೆ ಹಲವು ದಿನಗಳ ಮುಂಚೆ ಆಯಿತು. ಆದರೆ ಚಾ. ವಿ. ೩೪ನೆಯ ವಿರೋಧಿ ಸಂ। ದಲ್ಲಿ ಇದೇ ತೇದಿ ಗುರುವಾರ 23–12–1109 ಬಂದಿದ್ದು ಉತ್ತರಾಯಣ ಸಂಕ್ರಾಂತಿಗೆ ಬಹಳ ಹತ್ತಿರವಿದ್ದಿತು. (ಈ ಕೆಳಗಣ ಶಾಸನವನ್ನು ನೋಡುವುದು.) |
| ೧೮೨ | 135 | ಚಾ. ವಿ. ೩೪ ವಿರೋಧಿ ಸಂ। ಮಾರ್ಗಶಿರ ೩೦ ಬೃಹಸ್ಪತಿವಾರ ಉತ್ತರಾಯಣ ಸಂಕ್ರಾಂತಿ. | 23–12–1109 | ಈ ಮೇಲಣ ಶಾಸನವನ್ನು ನೋಡುವುದು. |
| ೧೮೩ | 134 | ಚಾ. ವಿ. ೮೨ ವಿಜಯ ಪುಷ್ಯ ಶು ೫ ಆದಿವಾರ ಉತ್ತರಾಯಣ ಸಂಕ್ರಾಂತಿ. | | ವಿಜಯ ಸಂ। ವು ಚಾ. ವಿ. ೩೮ನೆಯ ವರ್ಷ; ಅದರಲ್ಲಿ ಈ ತೇದಿ ಆದಿತ್ಯವಾರ 14–12-1113 ಬಂದಿದ್ದಿತಾದರೂ ಉತ್ತರಾಯಣ ಸಂಕ್ರಾಂತಿಗೆ ಹಲವು ದಿನ ಮುಂಚೆಯೇ ಆಗಿದ್ದಿತು. |
| ೧೮೪ | 139 | ಚಾ. ವಿ. ೨೫ ವಿಕ್ರಮ ಮಾರ್ಗಶಿರ ೧೫ ಆದಿವಾರ ಸೋಮ ಗ್ರಹಣ. | 18–11–1100 | |
| ೧೮೫ | ಡಿ. | ಚಾ. ವಿ. ೩೦ ಪಾರ್ಥಿವ ಉತ್ತರಾಯಣ ಸಂಕ್ರಾಂತಿ. | | |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೮೬ | 149 | ಚಾ. ವಿ. ೩೭ ನಂದನ ಫಾಲ್ಗುಣ ಬ ೩೦ ಬುಧವಾರ ಸೂರ್ಯ ಗ್ರಹಣ. | 19—3—1113 | |
| ೧೮೭ | 155 | ಚಾ. ವಿ. ೪೮ ಶೋಭಕೃತು ಫಾಲ್ಗುಣ ಶು ೩ ಬುಧವಾರ. | | ಈ ಸಂವತ್ಸರದಲ್ಲಿ ಫಾಲ್ಗುಣ ಶು ೩ ಮಂಗಳವಾರ19—2—1124; ಆದರೆ ಫಾಲ್ಗುಣ ಬ ೩ ಬುಧವಾರ 5—3—1124. |
| ೧೮೮ | 156 | ಚಾ. ವಿ. ಜಯ ಸಂ| ದ ಕಾರ್ತಿಕ ಶು ೨ ಸೋಮವಾರ. | 13—10—1114 | ಜಯ ಸಂ| ವು ಚಾ. ವಿ. ೩೯ನೆಯ ವರ್ಷ. |
| ೧೮೯ | 167 | ಚಾ. ವಿ. ೧೨ ಶ್ರೀಮುಖ ಮಾಘ ಶು ೧೧ ಬೃಹವಾರ ಉತ್ತರಾಯಣ ಸಂಕ್ರಾಂತಿ. | | ಶ್ರೀಮುಖವು ಚಾ. ವಿ. ೧೮ ನೆಯ ವರ್ಷ. ಈ ಮೇಲಣ ನಂ. ೪೮, ೫೬, ೮೯, ೯೦ ರ ತೇದಿಯ ವಿವರವನ್ನು ಹೋಲಿಸಿ ನೋಡುವುದು. |
| | ಜಗಳೂರು | | | |
| ೧೯೦ | 6 | ಚಾ. ವಿ. ೨೫ ವಿಕ್ರಮ ಪೌಷ್ಯ ಮಾಸದ. . . . | | |
| ೧೯೧ | 9 | ಚಾ. ವಿ. ೩೫ ವಿಕೃತಿ ಪುಷ್ಯ ೩೦ ಉತ್ತರಾಯಣ ಸಂಕ್ರಾಂತಿ ಸೋಮವಾರ. | | ಈ ಪುಷ್ಯ ಬ ೩೦ ಬುಧವಾರ 11—1—1111 ಆಗಿದ್ದುದರಿಂದ, ಈ ಶಾಸನದ ತೇದಿ ಪುಷ್ಯ ಹುಣ್ಣಿಮೆಯೇನೋ ಎಂದು ಶಂಕೆಯಾಗುತ್ತದೆ. ಹಾಗಾದರೆ ಆ ಹುಣ್ಣಿಮೆ ಮಂಗಳವಾರ 27—12—1110 ; ಮತ್ತು ಆ ಉತ್ತರಾಯಣ ಸಂಕ್ರಾಂತಿ ಅದರ ಹಿಂದಣ ದಿನವೇ ಸೋಮವಾರ 26—12—1110. |
| ೧೯೨ | 12 | ಚಾ. ವಿ. ೩೩ ಸರ್ವಧಾರಿ ಪುಷ್ಯದ ಅಮಾವಾಸ್ಯೆ ಬೃಹಸ್ಪತಿವಾರ ಉತ್ತರಾಯಣ ಸಂಕ್ರಾಂತಿ. | | ಇದು ಚಾ. ವಿ. ೩೧ನೆಯ ವ್ಯಯ ಸಂ| ಕ್ಕೆ ಸರಿಹೋಗುತ್ತದೆ. ಅದರಲ್ಲಿ ಈ ತೇದಿ ಗುರುವಾರ 27—12—1106 ಉತ್ತರಾಯಣ ಸಂಕ್ರಾಂತಿಯಂದು ಬಂದಿದ್ದಿತು. ಅಂದು ಸೂರ್ಯನಿಗೆ ಪಾರ್ಶ್ವ ಗ್ರಹಣವೂ ಇದ್ದಿತು. ಅದನ್ನು ಈ ಶಾಸನದಲ್ಲಿ ಹೇಳಿಲ್ಲ. |

| ಜಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| ೧೯೩ | ಮೊಳಕಾಲ್ಮುರು 41 | 'ತ್ರಿಭುವನಮಲ್ಲ ಪೆರ್ಮ್ಮಾಡಿ ರಾಯದೇವರ ರಾಜ್ಯದ ೧೦ನೆಯ ವಿಕ್ರಮ ಸಂ। ಕಾರ್ತಿಕ ಶು ೧ ಸೋಮವಾರ ಸೂರ್ಯ ಗ್ರಹಣ. | | ವಿಕ್ರಮ ಸಂ। ವು ಚಾ. ವಿ. ೨೫ನೆಯ ವರ್ಷ; ಅದರಲ್ಲಿ ಆಶ್ವೀಜ ಬ ೩೦ಯಂದು ಸೂರ್ಯಗ್ರಹಣವಿದ್ದಿಲ್ಲ. ಅದರ ಮರು ವರ್ಷ ವಿಷು ಸಂ। ದಲ್ಲಿದ್ದ ಆಶ್ವೀಜ ಬ ೩೦ಯ ಗ್ರಹಣವು ಗುರುವಾರ 24—10—1101 ಆಗಿದ್ದಿತು; ಆದುದರಿಂದ ಅದರ ಮಾರನೆಯ ಕಾರ್ತಿಕ ಶು ೧ವು ಶುಕ್ರವಾರ 25—10—1101 ಆಗುತ್ತದೆ. |
| ೧೯೪ | ಚಳ್ಳಕೆರೆ 16 | 'ಚೋಳು ವಿಕ್ರಮ ವರುಷ ೫ .... ವ್ಯಯ ಸಂವಚ್ಛರದ ಆಶಾಡಾ ಸುದ್ದ ಪಂಚಮಿ ಸೋಮವಾರ.' | | ವ್ಯಯ ಸಂ। ವು ಚಾ. ವಿ. ೩೧ನೆಯ ವರ್ಷ, ಅದರಲ್ಲಿ ಆಷಾಢ ಶು ೫ ಶುಕ್ರವಾರ ಬಂದಿದ್ದಿತು. ಆದರೆ ಅದರ ಹಿಂದಣ ಪಾರ್ಥಿವ ಸಂ। ದಲ್ಲಿ ಆ ತೇದಿ ಸೋಮವಾರ 19—6—1105 ಆಗಿದ್ದಿತು. |
| ೧೯೫ | ಹೊಳಲಕೆರೆ 3 | '.... ವಿಕ್ರಮ ವರ್ಷದ ಪದಿನೇಳ....ಮುಕ ಸಂವತ್ಸರದ ವೈಸಾಖ ಸು ....ಸೋಮವಾರದಂದು.' | | |
| ೧೯೬ | 68 | ಚಾ. ವಿ. ೫೧ ಪರಾಭವ ಪುಷ್ಯ ಸು ೧೦ ಸೋಮವಾರ ಉತ್ತರಾಯಣ ಸಂಕ್ರಾಂತಿ. | | ಇದು ಆದಿತ್ಯವಾರ 26—12—1126 ಆಗುತ್ತದೆ. ಈ ಶಾಸನದ ಒಕ್ಕಣೆಯಲ್ಲಿ ಹೀಗಿದೆ: ..'ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲ ದೇವರ .... ಸಲುತ್ತಮಿರೆ.' |

## XII. ಅರಳೇಶ್ವರದ ಶಿಲಾ ಲೇಖ

| | | | | |
|---|---|---|---|---|
| ೧೯೭ | | 'ಶ್ರೀಮಚ್ಚಾಳುಕ್ಯ ವಿಕ್ರಮ ಕಾಲದ ೧ನೆಯ ನಳ ಸಂವತ್ಸರದ ಚೈತ್ರ ಬಹುಳ ಪಂಚಮಿ ಮಂಗಳವಾರ ಮೇಷ ಸಂಕ್ರಾಂತಿ....' | | ಇದನ್ನು ಈ ಮೇಲನ ಲೇಖದಲ್ಲಿ ತರ್ಕಿಸಿದೆ. |

| ಜುಂಜರ್ ನಂಬರ್ | ಶಾಸನದ ನಂಬರ್ | ಶಾಸನದ ತೇದಿ | ಇಂಗ್ಲಿಷ್ ತಾರೀಕು | ಷರಾ |
|---|---|---|---|---|
| | | XIII. ಇತರ ಶಾಸನಗಳು | | |
| ೧೯೮ | ನೀಲಗುಂದ | 'ಚಾಲುಕ್ಯ ವಿಕ್ರಮ ವರ್ಷೇ ಅಷ್ಟಾಚಾತ್ವಾರಿಂಶೇ ಅಂಕತೋಪಿ ೪೮ ಪ್ರವರ್ತಮಾನ ಕಾಲೇ ಶೋಭಕೃತ್ಸಂವತ್ಸರೇ ಭಾದ್ರಪದ ಶುದ್ಧ ಶ್ರವಣ ದ್ವಾದಶ್ಯಾಂ ಸೋಮವಾರೇ.' | 3–9–1123 | |
| ೧೯೯ | | ಚಾಲುಕ್ಯ ವಿಕ್ರಮ ಕಾಲದ ೫೦ನೆಯ ವಿಶ್ವಾವಸು ಸಂ। ದ ಭಾದ್ರಪದ ಶುದ್ಧ ೫ ಬೃಹಸ್ಪತಿವಾರ. | 6–8–1125 | |

**ಗೋವಿಂದ ಪೈ.**

---

# ಪಂಪ ಭಾರತ *

ಭಾರತ ಕಥೆಗೆ ಒದಗಿರುವ ಮರ್‍ಯಾದೆಯಲ್ಲಿ ಜೈನ ಕವಿಯಾದ ಪಂಪನಿಂದ ಸಂದಿರುವುದು ಉತ್ಕೃಷ್ಟವೂ ವಿಶೇಷವೂ ಆದ ವಿಷಯವಾಗಿದೆ. ಕಾವ್ಯವನ್ನು ಉತ್ತಮ ರೀತಿಯಲ್ಲಿ ರಚಿಸಿ ಕಥೆಯ ಹೆಮ್ಮೆಯನ್ನು ಹೆಚ್ಚಿಸಿದ್ದಾನೆಂಬುದೇ ಅಲ್ಲ; ನಿರ್ಮಿಸಿದ ಪಾತ್ರಗಳನ್ನು ಜೀವ ಕಳೆಯಿಂದ ತುಂಬಿ ಪ್ರಶಸ್ತಗೊಳಿಸಿದ್ದಾನೆಂಬುದೇ ಅಲ್ಲ; ಪಂಪನು ಜೈನ ಮತಸ್ಥನು; ಅವನ ವಂಶಸ್ಥರು ಜೈನರಾದುದು ಒಂದೇ ಒಂದು ತಲೆಯ ಹಿಂದೆ. ಅವನ ತಂದೆ ಅಭಿರಾಮದೇವರಾಯನು ಜೈನ ಮತನೇ ಮತವೆಂದು ನಂಬಿ ಬ್ರಾಹ್ಮಣ್ಯವನ್ನು ಬಿಟ್ಟುಬಿಟ್ಟನು. ಹೊಸದಾಗಿ ಒಂದು ಮತದಲ್ಲಿ ದೀಕ್ಷೆ ಹೊಂದಿದವರಿಗೆ ಸ್ವಮತಾಭಿಮಾನವು ಅಪರಿಮಿತವಾಗಿರುವುದೂ ಕೊನೆಗೆ ಮೂಢ ವಾದುದಾಗುವುದೂ ಸಹಜ. ಅವರಾಡುವ ಮಾತಿನಲ್ಲಿಯೂ, ಮಾಡುವ ಕೆಲಸ ದಲ್ಲಿಯೂ, ಬರೆಯುವ ಲೇಖನದಲ್ಲಿಯೂ ಅಂಥ ಪ್ರೇಮದ ಉದ್ರೇಕವು ವಿಶದವಾಗಿ ಕಂಡುಬರುತ್ತದೆ. ಪಂಪನೂ ಹೀಗೆ ಮಾಡಿದ್ದರೆ ದೋಷವನ್ನು ಬೆದಕಿ ದೂರಲು ನಮಗೆ ಸಾಮರ್ಥ್ಯವಿರುತ್ತಿರಲಿಲ್ಲ. ಈಗ, ನಾಗಚಂದ್ರನು ಒಂದು ಕಾವ್ಯವನ್ನು ಬರೆದು ಅದಕ್ಕೆ "ರಾಮಚಂದ್ರ ಚರಿತ ಪುರಾಣ"ವೆಂದು ಹೆಸರನ್ನಿಟ್ಟಿಲ್ಲವೆ? ಅದು ಪಂಪ "ರಾಮಾಯಣ"ವೆಂದು ನಮ್ಮಲ್ಲಿ ಪ್ರಸಿದ್ಧಿಯನ್ನೂ ಪಡೆದಿಲ್ಲವೆ? ಆದರೆ ಪಂಪನ "ವಿಕ್ರಮಾರ್ಜುನ ವಿಜಯ"ವು ನಿಸ್ಸಂದೇಹವಾಗಿಯೂ ಭಾರತ. ಕವಿಯ ಉದ್ದೇಶವು ನಿರ್ಮಲವಾದುದು, ಕಾವ್ಯಕ್ಕನುರೂಪವಾದುದು, ಉದಾತ್ತವಾದುದು.

ಜೈನ ಮತದ ತತ್ತ್ವಗಳನ್ನಾಗಲಿ ಆಚಾರ ವ್ಯವಹಾರಗಳನ್ನಾಗಲಿ ಆ ಕಾವ್ಯದಲ್ಲಿ ಸಮರ್ಥಿಸುವ ವಿಷಮವಾದ ಹಂಬಲಿಲ್ಲ ಅವನಿಗೆ; ಕತೆಗೆ 'ತ' ಒತ್ತನ್ನು ಕೊಟ್ಟು ತನ್ನ ಸ್ವಂತ ಒಲುಮೆ, ಮಾತ್ಸರ್ಯ, ಬಯಕೆ, ಜುಗುಪ್ಸೆಗಳ ಮೂಟೆಯನ್ನು ಅದರ ಮೇಲೆ ಹೇರೋಣವೆಂಬ ಸ್ವಾರ್ಥವೂ ಇಲ್ಲ. "ಗುಣಾರ್ಣವನೊಳ್ಪು ಮನಮ್ಮನೋ ವಾಸಮನೆಯ್ದೆ ಪೇೞ್ದಪೆಂ" ಎಂದು ಉಚ್ಚರಿಸಿದ್ದರೂ ತನ್ನ ರಾಜನಾದ ಅರಿಕೇಸರಿಯ ಪ್ರಶಂಸೆಗೋಸ್ಕರಲೇ ಭಾರತ ಕಾವ್ಯವನ್ನು ಅವನು ಕಟ್ಟಿಲ್ಲ. ರಾಜನನ್ನು ಸ್ತುತಿಸಿ ಮೆಚ್ಚಿಕೆಯನ್ನು ಸಂಪಾದಿಸಬೇಕೆನ್ನುವುದು ಮೊದಲುಂಟಾದ ಪ್ರೇರಣೆ ಅಷ್ಟೆ. ಅದು ಉತ್ಸವ ಮೂರ್ತಿಯ ಮುಂದೆ ನಡೆಯುವ ದೇವ ದಾಸಿಯಂತೆ. ಏನೋ ಹಿಂದಿನ ಕಟ್ಟಳೆಯ ಅನುಕೂಲ ಪ್ರಭಾವದಿಂದ ಆ ವ್ಯಕ್ತಿ ಮುಂದೆ ಸಾಗಿದ್ದರೂ ನೋಟಕರನ್ನು ಭಕ್ತಿಯಲ್ಲಿ ಮುಳುಗಿಸಿ ಆರಾಧನೆಯನ್ನು ಹೊಂದುವುದು ಹಿಂದೆ ತೇರಿನ ಮೇಲೆ ಮಂಡಿಸಿರುವ ದೇವತೆಗೇ ಸೇರಿದ್ದಲ್ಲವೆ? ಕವಿತ್ವಕ್ಕೆ ಕೈ ಹಾಕಿದ ಮೇಲೆ ಅರಿಕೇಸರಿಯ ಸಂಬಳದ ವಂದಿಯೆಂಬ ಭಾವನೆಯು ಎಲ್ಲಾ ಕಾಲದಲ್ಲಾಗಲಿ ಬಲವತ್ತರವಾಗಾಗಲಿ

* ಹದಿನಾರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಪಂಪನ ನೆನೆಪಿನಲ್ಲಿದ್ದಿತೆಂದು ವಾದಿಸಲಾಗದು. ಕಥೆಯೇ ಅವನ ಮನಸ್ಸನ್ನು ಹೊಕ್ಕು ಅಲ್ಲಿ ತಾಂಡವವಾಡಿ ಹೇಳಬೇಕೆಂಬ ಅಭಿರುಚಿಗೆ ಉತ್ತೇಜನ, ಆಸಕ್ತಿ, ಕಾಂತಿಗಳನ್ನು ಕೊಟ್ಟಿದೆ. ಭಾರತ ವಸ್ತುವನ್ನು ಕುರಿತು ಅವನು ಮಾಡಿಕೊಂಡ ನಿರ್ಣಯವು ಎಷ್ಟು ಘನವಾದುದು ನೋಡಿರಿ :—

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ ।
ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂ ಚಾಪ ವಿದ್ಯಾ ॥
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ ।
ರ್ಮಲ ಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕ ಪೂಜ್ಯಂ ॥

ಒಳ್ಳೆಯದು ಕೆಟ್ಟುದು, ಬೇಕಾದುದು ಬೇಡವಾದುದು, ಹಿತಕರವಾದುದು ದುಃಖ ಜನಕವಾದುದು, ಮೊದಲಾದ ಮನುಷ್ಯ ಸ್ವಭಾವದ ಸಕಲ ರೂಪಗಳ ಪರಮ ಪದವನ್ನು ಕನ್ನಡಿಯಂತೆ ಪ್ರತಿಬಿಂಬಿಸುವ ಧೀರ ಪಾತ್ರಗಳು, ನಗು ಅಳು ಆಶ್ಚರ್ಯ ಭಯ ಉತ್ಸಾಹಾದಿಗಳ ತುತ್ತತುದಿಗೆ ನಮ್ಮನ್ನು ಕೊಂಡೊಯ್ಯುವ ರಾಗವತ್ತಾದ ವಿವಿಧ ಘಟನೆಗಳು, ಒಂದನ್ನೂ ಲಕ್ಷಿಸದ ಪುರುಷ ಪ್ರಯತ್ನ, ಕಾರ್ಗಾಲದ ಮೋಡದಂತುರುಳುವ ವಿಧಿ ವಿಲಾಸ—ಇವುಗಳಿಂದ ಶ್ರೇಷ್ಠವಾದ ಭಾರತ ಪ್ರಪಂಚವು ಪಂಪನ ಮನಸ್ಸನ್ನು ಸೂರೆಗೊಂಡು ಕಾವ್ಯ ರಚನೆಗೆ ಅವನನ್ನು ಬಲಾತ್ಕರಿಸಿರಬೇಕು. ಅವನ ಹೃದಯವಾದರೂ ಎಷ್ಟು ವಿಶಾಲವಾದುದು ! "ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಸಮಸ್ತ ಭಾರತಮನಪೂರ್ವಮಾಗೆ" ಸಂಗ್ರಹಿಸಿದ್ದಾನೆ. ಆದಿ ಪಂಪ ಮತ್ತು ಭಾರತ ಕಥೆ—ಈ ವಿಚಾರವು ನವ ಯೌವನದ ಠೀವಿಯಿಂದ ಮೆರೆಯುವ ಲಾವಣ್ಯವತಿಯಾದ ರಾಜಪುತ್ರಿಗೆ ಹೆಣ್ಣಲಂಕಾರದ ಗುಟ್ಟನ್ನರಿತ ದಕ್ಷ ಸೈರಂಧ್ರಿಯ ಸಮಾಗಮವಾದಂತೆ! ತಾನು ಶೃಂಗರಿಸುವ ತೊತ್ತೆಂದು ತಿಳಿದುಕೊಂಡು ಕಥೆಯ ಬೆಡಗನ್ನು ಎಲ್ಲಾ ಅಂಗಗಳಲ್ಲಿಯೂ ವೃದ್ಧಿಗೊಳಿಸಿ ನೋಡಿ ನಲಿದು ಹಿಗ್ಗುವ ಸೌಹಾರ್ದವು ಪಂಪನಲ್ಲಿದೆ: ಕಥಾಭಿಮಾನವು ಹೆಚ್ಚು, ಆತ್ಮಾಭಿಮಾನವು ಕಡಿಮೆ. ದೊಡ್ಡ ಕವಿಗಲ್ಲದೆ ಇತರರಿಗೆ ಈ ಧಾರಾಳವು ಬರಲಾರದು. ನಾಗಚಂದ್ರನು ಅನುಕರಣ ಪಂಪನೇ ಹೊರತು ಅಭಿನವ ಪಂಪನಲ್ಲ.

ಯಾವ ದೃಷ್ಟಿಯಿಂದ ನೋಡಿದರೂ ಉನ್ನತವಾಗಿಯೇ ಕಾಣುವ ಪಂಪ ಭಾರತದಲ್ಲಿ ಯಾವುದನ್ನು ಹೊಗಳೋಣ, ಯಾವುದನ್ನು ಬಿಡೋಣ? ಕಥಾ ಸಂವಿಧಾನದಲ್ಲಿ ವಿದಿತವಾಗುವ ಕೌಶಲವು ಅನನ್ಯಾದೃಶವಾದುದು. ಒಂದೇ ಗುರಿಯನ್ನಿಟ್ಟುಕೊಂಡು ಅದರ ನೇರಕ್ಕೇ ಯಾವಾಗಲೂ ಕವಿಯು ಹೋಗುತ್ತಾನೆ. ದೊಡ್ಡ ಮರವನ್ನು ಹತ್ತಲು ಹೊರಟು ಎಲೆ ಹೂಗಳಿಂದ ನಿಬಿಡವಾದ ಬಿದಿ ಕೊಂಬೆಗಳ ಚೆಲುವಿಗೆ ಸಂಪೂರ್ಣವಾಗಿ ಮನ ಸೋತು ಅಲ್ಲಿ ಕುಳಿತು ಉಯ್ಯಾಲಾಡುವವರು ಅನೇಕರಿದ್ದಾರೆ. ಪಂಪನು ಬಿದಿ ಕೊಂಬೆಗಳ ಗಾಡಿಯನ್ನು ಗಣಿಸುತ್ತಾನೆ; ಆದರೆ, ಮರದ ತಲೆಯನ್ನು ಮೆಟ್ಟಬೇಕೆಂಬ ಮುಖ್ಯಾಕಾಂಕ್ಷೆಯನ್ನು ಮರೆಯುವುದಿಲ್ಲ. ಒಂದು ಲಕ್ಷ ಶ್ಲೋಕಗಳನ್ನೊಳಕೊಂಡು ಸಾವಿರಾರು ಉಪಾಖ್ಯಾನಗಳಿಂದ

ದಟ್ಟವಾಗಿ, ಸ್ಥೂಲಾರ್ಥದಲ್ಲಿಯೂ ಮಹತ್ತಾದ ಮಹಾ ಭಾರತವನ್ನು ಹನ್ನೆರಡು ಹದಿಮೂರು ಆಶ್ವಾಸಗಳಲ್ಲಿ ಸಂಗ್ರಹಿಸುವುದು ಕಷ್ಟತರವಾದ ಕೆಲಸ. ಇಲ್ಲಿ ಹನ್ನೆರಡು ಹದಿಮೂರೆಂದು ನಾನು ತಿಳಿದೇ ಹೇಳಿದ್ದೇನೆ. ಪಂಪ ಭಾರತದಲ್ಲಿ ಹದಿನಾಲ್ಕು ಆಶ್ವಾಸಗಳಿವೆ. ಆದರೆ ಅವುಗಳಲ್ಲಿ ನಾಲ್ಕನೆಯದು, ಐದನೆಯದರಲ್ಲಿ ಅರ್ಧ ಭಾಗ—ಇವು, ಬನವಾಸಿ ವಿಷಯಕ ನಾಲ್ಕು ವೃತ್ತಗಳು ವಿನಾ ಪುರಸ್ಕಾರಕ್ಕೆ ಯೋಗ್ಯವಲ್ಲ. ಕುರುಡು ಬಯಕೆ ಮನಸ್ಸಿನಲ್ಲಿ ಬಲಿದರೆ ಮಹಾ ಕವಿಯಾದರೂ ಮುಗ್ಗರಿಸಲೇ ಬೇಕು. ಅರಿಕೇಸರಿಯನ್ನು ಮುಗಿಲಿಗೆ ಮುಟ್ಟಿಸಬೇಕೆಂಬ ಐಹಿಕಾಪೇಕ್ಷೆ ಪಂಪನಲ್ಲಿ ಉಲ್ಬಣವಾದಾಗ ನಡೆದ ಅಚಾತುರ್ಯವೇ ಆ ಭಾಗಗಳು. ಕವಿತಾ ಗುಣಾರ್ಣವನ ಈ ಅವಮಾನವನ್ನು ಅವನ ಗುಣ ಸಂದೋಹದಲ್ಲಿ ಮರೆತುಬಿಡೋಣ. ಅಷ್ಟು ದೊಡ್ಡ ಭಾರತವನ್ನು ಅಷ್ಟು ಕಿರಿದರಲ್ಲಿ ಅಡಕಮಾಡಿರುವುದು ಯಾರಲ್ಲಿ ತಾನೆ ವಿಸ್ಮಯವನ್ನುಂಟು ಮಾಡದು? ಎಂದರೆ, ಭಾರತದ ಮುಖ್ಯ ಸಂಗತಿ ಯಾವುದೂ ಕೈಬಿಟ್ಟು ಹೋಗಿಲ್ಲ; ಯಾವ ಅಂಶದಲ್ಲೂ ಅಸಮಗ್ರವೆಂಬ ಭಾವನೆ ನಮಗುಂಟಾಗುವುದಿಲ್ಲ. ಅಷ್ಟೇಕೆ! ಭಾರತ ದಲ್ಲಿಲ್ಲದ ಕನಕ ಸ್ವಾಮಿಯ ಮಾರಣ ಹೋಮವು ಇಲ್ಲಿ ಬಂದಿದೆ. ಕವಿಗೆ ಯಾವುದನ್ನು ಒಂದು ಮಾತಿನಲ್ಲಿ ಮುಗಿಸಬೇಕು, ಯಾವುದಕ್ಕೆ ಹತ್ತು ಪದ್ಯಗಳನ್ನು ಬರೆಯಬೇಕು ಎಂಬ ಯುಕ್ತಾಯುಕ್ತ ಪರಿಜ್ಞಾನವು ಬಲವಾಗಿದೆ; ಕಾವ್ಯ ಲೋಕದ ಪದಾರ್ಥ ಗಳನ್ನು ಸರಿಯಾಗಿ ತೂಗುವ ಶಕ್ತಿ ಅಧಿಕವಾಗಿದೆ. ಇನ್ನೊಂದು ಗುಣ: ಹಾಗೆಂದ ಮಾತ್ರಕ್ಕೇ ಕವಿಯು ಅತ್ತಿತ್ತ ನೋಡದೆ ವಾಯು ವೇಗದಿಂದ ಮುಂದುವರಿದು ಬರಿಯ ಪ್ರಯಾಣದ ಕಷ್ಟ ಸುಖಗಳನ್ನು ನಮಗೆ ಕೊಟ್ಟಿದ್ದಾನೆಂದು ಅರ್ಥವಲ್ಲ. ಅಲ್ಲಲ್ಲಿ ನಿಂತು ಹದ ವಿಶಾರದ ಧ್ವನಿಯುಕ್ತವಾದ ಸಂಕ್ಷೇಪ ವರ್ಣನೆಗಳನ್ನು ತಂದು ಕಾವ್ಯ ವನ್ನು ಚೆನ್ನಾಗಿ ಪುಷ್ಟಿಮಾಡಿದ್ದಾನೆ. ವಿಸ್ತಾರವಾದ ವಸ್ತುವನ್ನು ಸಂಕುಚಿಸುವ ವಿಧಾನ, ಕಥೆಯನ್ನು ಸ್ವಾರಸ್ಯವಾಗಿ ಹೇಳುವ ಕ್ರಮ—ಇವನ್ನು ಪಂಪನಿಂದ ಕಲಿತುಕೊಳ್ಳಬೇಕು. ಇಂಗ್ಲಿಷ್ ಸಾಹಿತ್ಯವನ್ನೋದಿದವರಿಗೆ ಚಾಸರನ ಜ್ಞಾಪಕ ಬರುತ್ತದೆ.

ಕಥಾ ಶರೀರವು ಹೇಗಿದ್ದರೆ ಒಪ್ಪುತ್ತದೆಂಬುದನ್ನು ಊಹಿಸಿಕೊಳ್ಳಲು ಪಂಪನಿಗೆ ಅಮೋಘವಾದ ಕಲ್ಪನಾ ಶಕ್ತಿಯಿದ್ದಿತು. ಆದುದರಿಂದಲೇ ಮಹಾ ಭಾರತದ ಗಾಂಭೀರ್ಯಕ್ಕೂ ಗೌರವಕ್ಕೂ ತರವಲ್ಲದ ಅನೇಕ ಘಟನೆಗಳನ್ನು ಅವನು ಧೈರ್ಯದಿಂದ ಬದಲಾಯಿಸಿದ್ದಾನೆ. ಆ ವ್ಯತ್ಯಾಸಗಳಿಗೆಲ್ಲ ಅವನೇ ಕಾರಣ ಕರ್ತನೋ, ಅಥವಾ ಯಾವುದಾದರೊಂದು ಪೂರ್ವದ ಆಧಾರವು ಅವನಿಗೆ ಲಭಿಸಿತೋ ಎಂಬುದರ ಚರ್ಚೆಯು ನಮಗೆ ಪ್ರಕೃತವಲ್ಲ. "ಅಸತ್ತು ತಿರಿದರಣ್ಯಾವಾಸದ ಪರಿಭವದ ಕುದಿಪಿ"ನಲ್ಲಿ ಕಂದಿ ಕುಂದಿ ಎಡರಿನಲ್ಲಿ ಜೊತೆ ಬಿಡದೆ ನಿಶ್ಚಯಾರ್ಥದಲ್ಲಿ ಸಹಚಾರಿಣಿಯಾದ ದ್ರೌಪದಿಯನ್ನು ಆಚೆಗೆ ದೂಡಿ ಅರಮನೆಯಲ್ಲಿ ಕುಡಿದ ನೀರಲ್ಲಾಡದೆ ಕುಳಿತಿದ್ದ ಸುಭದ್ರೆಗೆ "ಮಹಾ ದೇವಿಪಟ್ಟಮುಂ" ಕಟ್ಟಿದುದು ಪಂಪನಲ್ಲಿ ಅನುಚಿತ. ಇದೊಂ ದನ್ನು ಬಿಟ್ಟರೆ ಮಿಕ್ಕ ಮಾರ್ಪಾಟುಗಳು ಹಿತವಾಗಿಯೇ ಇವೆ; ಕೊನೆಗೆ ಅವು ಭಾರತದ ಅಂದವನ್ನು ಹೆಚ್ಚಿಸಿವೆಯೆಂದೂ ಹಿಂಜರಿಯದೆ ಹೇಳಬಹುದು. ಕೆಲವರು,

‘ಅರ್ಜುನನ ಪ್ರತಾಪ ಯೋಗ್ಯತೆ ಏನಾರಿ ಬೆಳೆದಿದೆ, ಕೃಷ್ಣನ ನೆರಳಿನಲ್ಲಿ ದೊಡ್ಡವನೆನಿಸಿಕೊಂಡ ಅವನಿಗೇಕೆ ಅಷ್ಟು ಮರ್ಯಾದೆ? ಹೂವಿನಿಂದ ಸ್ವರ್ಗಕ್ಕೇರಿದರೂ ನಾರು ನಾರೇ ಅಲ್ಲವೆ?’ ಎಂದು ಆಕ್ಷೇಪಿಸಬಹುದು. ಆದರೆ ಪಂಪನ ವಿಕ್ರಮಾರ್ಜುನನು ಕೇವಲ ಭಾರತದ ಅರ್ಜುನನೇ ಅಲ್ಲ; ಪಂಪನ ಅಭಿಪ್ರಾಯದಲ್ಲಿ, ನರನಾರಾಯಣರಾದುದರಿಂದ ಅವನೂ ಕೃಷ್ಣನೂ ಸಮಾನರು. ಆಂಜನೇಯ, ದೇವೇಂದ್ರ, ಪರಮೇಶ್ವರರ ಆದರವನ್ನು ಗಳಿಸಿ ಪಾಶುಪತ, ಅಂಜಲಿಕಾದಿ ದಿವ್ಯ ಬಾಣಗಳನ್ನು ತೊಡಲರ್ಹನಾಗಿ ಭೀಷ್ಮ ದ್ರೋಣ ಕರ್ಣಾದಿ ಅಂಕದ ಕಲಿಗಳನ್ನು ಸಾಹಸದಿಂದ ಕುಗ್ಗಿಸಿ ಮಹಾಭಾರತದ ಮಹಾ ಸಂಗ್ರಾಮದಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ ಧನಂಜಯನು ವಿಭೂತಿ ಪುರುಷ, ಸ್ವಯಂ ಶಕ್ತ; ಹೆಜ್ಜೆ ಹೆಜ್ಜೆಗೂ ಶ್ರೀ ಕೃಷ್ಣನ ಮುಖವನ್ನು ನೋಡುವ ಹಸುಮಗುವಲ್ಲ. ಕೌರವರಿಂದಾದ ದ್ರೌಪದೀ ಹಿಂಸೆಯಲ್ಲಿ ಮುಡಿಯನ್ನು ಎಳೆದ ದ್ರೋಹವೊಂದನ್ನು ಮಾತ್ರ ಪಂಪನು ಮುಂದಕ್ಕೆ ತರುತ್ತಾನೆ. ಅಕ್ಷಯ ವಸ್ತ್ರದ ಅಭಯವನ್ನು ಕೊಟ್ಟು ಕಾಪಾಡಿದ ಗೋವಿಂದನ ಮಹಿಮೆ ಸ್ವಲ್ಪ ಕಡಿಮೆಯಾದರೂ ಜಗಲಿ; ಸೀರೆಯನ್ನು ಸೆಳೆದ ದುರಂತ ವೃತ್ತಾಂತವು ಬಾರದಿರುವುದು ತೃಪ್ತಿಕರವಾಗಿದೆ. ಹಾಗೆಯೇ, ದ್ರೌಪದಿಯು ಅರ್ಜುನನ ಹೆಂಡತಿಯೆಂಬುದನ್ನೇ ಒತ್ತಿ ಹೇಳಿ ಪಾಂಡವರೈವರ ಪತ್ನಿಯೆಂಬುದನ್ನು ಸ್ವಲ್ಪ ಮಟ್ಟಿಗೆ ಹಿಂದಿಟ್ಟಿದ್ದಾನೆ. ದುಶ್ಶಾಸನ ವಧೆಯ ಸಂದರ್ಭದಲ್ಲಿ ಭೀಮನು ದ್ರೌಪದಿಯನ್ನು “ತ್ರಸ್ತ ತಳೋದರಿ” ಯಂತೆಯೇ ಮಾತನಾಡಿಸಿದರೂ ಅಲ್ಲಿಯೂ ಕೂಡ “ರಾಕ್ಷಸ ಕ್ರೀಡೆಯನಾಡಲ್ಬಗೆದು ಹಿಡಿಂಬೆಯಂ ನೆನೆದು ಬರಿಸಿ” ಯೆಂಬೊಂದು ನೂತನ ಸಂಗತಿಯನ್ನು ಕಲ್ಪಿಸಿ ಕವಿಯು ದ್ರೌಪದಿಯ ಪಂಚವಲ್ಲಭತ್ವವನ್ನು ತೇಲಿಸಿಕೊಂಡು ಹೋಗಿ ಅದೃಷ್ಟದ ಪುಟ ಚೆಂಪಾದ ಆ ಪಾತ್ರಕ್ಕೆ ಸನ್ಮಾನ ಮಾಡಿದ್ದಾನೆ.

ಮಹಾಭಾರತದ ಘನತೆಯು ನಮ್ಮ ಕವಿಯ ಕನಸು ನೆನೆಸಿನಲ್ಲಿಯೂ ಚೆನ್ನಾಗಿ ನಾಟಿದ್ದಿತು. ಆ ಘನತೆಗೆ ಎಲ್ಲಿಯೂ ಯಾವುದರಿಂದಲೂ ಕಳಂಕವುಂಟಾಗಬಾರದೆಂಬುದೇ ಅವನ ಕವಿತ್ವದ ಹೆದ್ದಾರಿ. ಅವನು ಸೃಷ್ಟಿಸಿರುವ ಪಾತ್ರಗಳೆಲ್ಲವೂ ಕಥೆಯ ಉಚ್ಚತೆಗೆ ತಕ್ಕುವು; ಭೂಮಿ ತೂಕದವು; ಒಂದು ಭೀಷಣ ಕಾಲನಿಯಮ, ಒಂದು ಮಹಾ ನಾಗರಿಕತೆ, ಒಂದು ಹಿಮಾಲಯ ಪ್ರಪಂಚ—ಇವುಗಳ ಹುಟ್ಟು ಬೆಳವಣಿಗೆ ಸಾವನ್ನು ಪ್ರದರ್ಶಿಸಿ ಲೋಕ ವಿಖ್ಯಾತವಾದ ಕಥಾ ವಸ್ತುಗಳಲ್ಲೊಂದಾದ ಮಹಾಭಾರತಕ್ಕೆ ಸಮಂಜಸವಾದ ಉನ್ನತ ಮೂರ್ತಿಗಳು. ವ್ಯಾಸ ಭಾರತದಲ್ಲಿ ಹೀಗಿದೆಯೆಂದು ಹೇಳಲಾಗದು. ಅದರಲ್ಲಿ ಕರ್ಣನಿಗೆ ಸಾರಥಿಯಾಗೆಂದು ಕೌರವನು ಕೇಳಿಕೊಂಡಾಗ ಶಲ್ಯನ ನಡತೆಯು ಶೀಲರಹಿತವಾಗಿದೆ. ಅವನ ಮುಖ ವಿಕಾರ, ಅಂಗ ಚೇಷ್ಟೆ, ಆಟೋಪ, ಕರ್ಕಶತೆ, ಬೈಗುಳು—ಇವು ಓದುವವರಲ್ಲಿ ಅಲಸ್ಯವನ್ನು ಹುಟ್ಟಿಸುತ್ತವೆ. ಪಂಪನಲ್ಲಿ ಅದೇ ಸಂದರ್ಭವನ್ನು ಗಮನಿಸಿರಿ:—

“ಕಿಱಿದಾನುಂ ಮಾನಸರ್ವೇರಸು ರಾಜರಾಜಂ ಮದ್ರರಾಜನ ಮನೆಗೆ ಬರ್ಪುದು
ಮಾತನತ್ಯಂತ ಸಂಭ್ರಮಾಕ್ರಾಂತ ಹೃದಯನಾಗಿ ಬೇಗಮಿದಿರೇೞ್—

ಅಂತೆ ಕುಳ್ಳಿರಿಮಪ್ಪರಿರ್ಸಿಮಗಾಣೆಯೆಂದಿರೆವೇೞ್ದೞಾ ।
ಕಾಂತನುಂ ತೊಡೆಸೋಂಕಿ ಕುಳ್ಳಿರೆ ಬಾೞ್ಕೆಯುಳ್ಳೊಡೆ ನೀನೆ ಬ ॥
ರ್ಪಂತುಟಾದುದೆ ಪೇೞಿ ನೀಂ ಬೞಿಯಟ್ಟಲಾಗದೆ ಕೆಮ್ಮನಿಂ ।
ತೆಂತುವೇಮ್ಮನೆಬಾೞ್ಕೆಯಂ ಬೆಸಸಲ್ಕೆ ಬಂದೆಯಿಳಾಧಿಪಾ ॥

ಬೆಸಸೆನೆಯಾಂ ನುಡಿಯಲ್ಕಂ ।
ಕಿಸಿದಪೆನಾನೆಂದೊಡೆಮ್ಮ ಶಂಕಿಸುವೈ ನೀಂ ॥
ಬೆಸವೇೞ್ಕೆನೆ ಜಯ ವಧು ಕೂ ।
ರ್ತೊಸೆದಿರ್ಕುಂ ಮಾವ ನಿಮ್ಮ ದಯದಿಂದೆಮ್ಮಂ ॥

ಪುಸಿಯೆನೆ ರಥಮುಂ ಹರಿ ಚೋ ।
ದಿಸುವಂತೆಪೊಲಿರ್ದೆಂತು ನರನಂ ಗೆಲಿಪಂ ॥
ವಿಸಸನದೊಳಂತೆ ನೀಮುಂ ।
ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ ॥

ಎಂಬುದುಂ ಮದ್ರರಾಜನುಮ್ಮಚ್ಚರದೊಳುಮ್ಮನೆ ಬೆಮರ್ತುರ್ಕಿನಿಸಿ ಕಿಂಕಿಱಿವೋಗಿ—

. . : . . . . . . . . . . . . . . . ನೃಪ ಚಿತ್ರವೃತ್ತಿ ಸಂ ।
ಚಲಮದಱಿಂದಮೋಲಗಿಸಿ ಬಾೞ್ವುದೆ ಕಷ್ಟಮಿಳಾಧಿನಾಥರಂ ॥

ಪಿಂದೆ ಕಡಂಗಿ ತೇರನೆಸಗೆಂಬವನಂಬಿಗನಾಜಿ ರಂಗದೊ ।
ಳ್ಮುಂದೆ ಸಮಾನನಾಗಿ ಬೆಸದಿರ್ಪವನುಂ ತುಱುಕಾಱನಾಗೆ ಮ ॥
ತ್ಸ್ಯಂದನ ಚೋದನ ಕ್ರಮಮದುಂ ಪೊಲೆಯಂಗಮರ್ದಿರ್ಕುಮಂತುಟಂ ।
ನೀಂ ದಯೆಗೆಯ್ದುವೇೞ್ದಿಯಿದನಾರ್ಪಡವರ್ಘಣಿರಾಜಕೇತನಾ ॥

ಎನಿತೊಲ್ಲದಿರ್ದೊಡಂ ಸ ।
ಜ್ಜನರುಂ ಪತಿಹಿತರುಮಱಿಯವೇೞ್ಕುಂ ನೀನಿ ॥
ನ್ನೆನಿತಂ ಕೂರದೊಡಂ ನಿ ।
ನ್ನ ನುಡಿಯ ಸಾನಾಜಿ ರಂಗದೊಳ್ಮೀಱುವೆನೇ ॥

ಅನಂತರ, ಕೌರವನು ಕರ್ಣನು ಅಂತಹ ಹೀನ ಪುರುಷನಲ್ಲವೆಂದು ವಾದ ಮೂಲಕ ತೋರಿಸಿ—

"ಶಲ್ಯನ ಹೃಚ್ಛಲ್ಯಮೆಲ್ಲಮುಂ ಕೞಿಲೆ ನುಡಿದೊಡೆ ಆತನಿಂತೆಂದಂ—
ಅಱಿಯದೆಯುಂ ವಿಚಾರಿಸದೆಯುಂ ನೃಪ ನೀಂ ನೆಗೞ್ವೆಯಲ್ಲಯಾ ।
ನಱಿವೆನದಂತೆ ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ . . . . . . ॥"

ಇಲ್ಲಿ ಶಲ್ಯನ ನಯ, ಕೌರವನ ವಿನಯಗಳು ಎಷ್ಟು ಮನೋಹರವಾಗಿ ವರ್ಣಿತವಾಗಿವೆ! ತಾನು ವಯಸ್ಸಿನಲ್ಲಿ ಹಿರಿಯನಾಗಿದ್ದರೂ, ರಕ್ತ ಸಂಬಂಧದಲ್ಲಿ ಮಾವನಾಗಿದ್ದರೂ, ಉದಧಿ ತಾಟಿತ ಧರಾ ವಲಯಕ್ಕೆ ಏಕಚ್ಛತ್ರಾಧಿಪತಿಯಾದ ದುರ್ಯೋಧನನು ತನಗೂ ಸಮ್ರಾಜನೆಂಬಂಶವನ್ನು ಹೃದಯದಲ್ಲಿ ನೆಲೆಗೊಳಿಸಿ, ತನ್ನ ಸಾಮಂತ ಸ್ಥಾನವನ್ನು

ಅರಿತು ವರ್ತಿಸುವ ಅಸ್ವಾರ್ಥಪರ ಕರ್ಮಸಂನ್ಯಾಸಿ ಈ ಶಲ್ಯ! ವ್ಯಾಸ ಭಾರತದ ಸೈಂಧವನು ಅಪಹಾಸ್ಯದುಣಿಸಿಗೆ ಪಾತ್ರ ಯೋಗ್ಯನಾದ ಅಲ್ಪ ಜಂತು; ಅರ್ಜುನನ ಶಪಥವನ್ನು ಕೇಳಿ ಎದೆಯೊಡೆದು ಕಾಳೆಗದಿಂದೋಡಿಹೋಗಿ ಬದುಕಿಕೊಳ್ಳುತ್ತೇನೆಂದು ತಾನೇ ತುಂಬಿದ ಸಭೆಯಲ್ಲಿ ಒದರಲು ನಾಚಿಕೆಪಡದ ಹೇಡಿ; ರಣರಂಗದಲ್ಲಿ ವೀರರ ಕಾಲ ಕೆಳಗೆ ಹುದುಗಿಕೊಂಡಿದ್ದು ಶನಿ ತೊಲಗಿತೆಂಬ ಸುಳ್ಳಾಶೆಯಲ್ಲಿ ತಲೆಯನ್ನೆತ್ತಿ ಹತನಾದ ಹೇಯ ಪ್ರಾಣಿ. ಧೈರ್ಯ, ಗರ್ವ, ಜಗುಮಾಸದಿಂದ ಉದ್ಧತನಾದ ದುರ್ಯೋಧನನು ತನ್ನ ಒಬ್ಬಳೇ ತಂಗಿಯನ್ನು ಅವನಿಗೆ ಮದುವೆ ಮಾಡಿಕೊಡಲು ಹೇಗೆ ಒಪ್ಪಿದನೋ? ಆ ಅಂಜುಬುರುಕನಿಗೆ ಭೀಮಾದಿ ಪುರುಷ ಸಿಂಹರನ್ನು ಗೆಲ್ಲುವ ವರವನ್ನು ಒಂದು ದಿವಸಕ್ಕಾದರೂ ಅಖಂಡ ಜ್ಞಾನಿಯಾದ ಪರಮೇಶ್ವರನು ಹೇಗೆ ಇತ್ತನೋ? ಆ "ಅಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುೞು"ವನ್ನು ಕೊಲ್ಲಲು ವಿಕ್ರಮಾರ್ಜುನನಿಗೆ ಪಾಶುಪತಾಸ್ತ್ರ ಬೇಕೆ? ಪಂಪ ಭಾರತದಲ್ಲಿ ನೋಡಿರಿ: ಅರ್ಜುನನ ಪ್ರತಿಜ್ಞೆಗೆ ಹೆದರುವುದು ಸೈಂಧವನಲ್ಲ, ಓಲೆಕಡಗದ ಮೋಹದಿಂದ ಅವನ ಹೆಂಡತಿ ದುಶ್ಯಲೆ. ದ್ರೋಣಾದಿ ಅತಿರಥರು ಅವನನ್ನು ಕಾಯ್ದು ಕೊನೆಯವರೆಗೂ ಕಾಯಲು ಸನ್ನದ್ಧರಾಗಿದ್ದರೂ,

ಎನ್ನಳವಿಂಗಂ ಎನ್ನ ದೋರ್ವಳದಳವಿಂಗಮಿಂ ಸೆಡೆದಿರಲ್ ದೊರೆಯಲ್ತಿನಗೆಂದು
ಬಂದಸುಂಗೊಳೆ ಪೊಣರ್ದಂ ಸುರರ್ ಪೊಗೞೆ ಜಗದೇಕಮಲ್ಲನೊಳ್.

ಈ ರೀತಿ ಹೋರಾಡಿ ಕೀರ್ತಿಶ್ರೀಯನ್ನೂ ವೀರಸ್ವರ್ಗವನ್ನೂ ಸೂರೆಗೊಂಡ ಗಂಡುಗಲಿ ಪಂಪನ ಜಯದ್ರಥ—

ಅದಟರ್ದೇಂ ದೊರೆವೆತ್ತುದೊ ಸಿಂಧುರಾಜನಾ

ಎಂದು ಕವಿಯು ತಾನೇ ತಡೆಯದೆ ನುತಿಗೆಯ್ಯುತ್ತಾನೆ. ಸುಯೋಧನ ಪಾತ್ರವನ್ನು ಸರಿಯಾಗಿ ಯಥಾಯೋಗ್ಯವಾಗಿ ಗೌರವಿಸಿ ಅದಕ್ಕೆ ಮಹಾನುಭಾವತ್ವವನ್ನು ಹೊಂದಿಸಿರುವುದು ಎಲ್ಲರಿಗೂ ಗೊತ್ತಾದ ವಿಚಾರ. ಪಂಪನ ಕೌರವನು ಬಲಿಷ್ಠ, ಸಮಗ್ರ ಭಾರತ ಚಕ್ರವರ್ತಿ, ದಾಯಾದರ ವಿಷಯದಲ್ಲಿ ಎಂದಿಗೂ ಕುಗ್ಗದ ಛಲಗಾರ, ತನ್ನವರ ವಿಷಯದಲ್ಲಿ ಅಳವಿಲ್ಲದಷ್ಟು ವಿಶ್ವಾಸಪರ, ಮಾನಧನ, ವಿನಯಶಾಲಿ, ಶತ್ರುವಿನ ಪರಾಕ್ರಮವನ್ನೂ ಹೊಗಳುವ ಧಾರಾಳಿ, ಏಕಾಂಗ ಸಾಹಸಿ, ಪ್ರತಿಕೂಲ ದೈವದೊಡನೆ ವಿಷಮವಾದ ಕಾಳೆಗದಲ್ಲಿ ಗುದ್ದಾಡಿ ಅಣ್ಮುಗೆಡದೆ ಅಳಿದ ಕೆಚ್ಚೆದೆಯ ಮಲ್ಲ, ಮಹಾಭಾರತ ರುದ್ರ ನಾಟಕದ ಅನುರೂಪ ನಾಯಕ. ಅವನಲ್ಲಿ ದೋಷವಿದ್ದರೇನು? ಗುಣಕ್ಕೆ ಮತ್ಸರವೇ? ಹೀಗೆ ಪಂಪನು ಪಾತ್ರಗಳಿಗೆ ಗೌರವ ಭಂಗ ಮಾಡದೆ ಅವುಗಳ ಔನ್ನತ್ಯವನ್ನು ಪರಿಪೋಷಿಸುತ್ತಾನೆ. ಗುಣಗಳ ಆರೋಪಣೆ ಯಾವ ಪಾತ್ರದಲ್ಲಿ ಯಾವ ರೀತಿ ಇರಬೇಕೆಂಬುದು ಅವನಿಗೆ ಕರತಳಾಮಲಕವಾಗಿದ್ದಿತು. ಅರವತ್ತಡಿಯ ಪ್ರತಿಮೆಯನ್ನು ಕೆತ್ತಲು ಹೊರಟು ಅರಂಗುಲದ ಮೂಗನ್ನಿಡುವ ಆಭಾಸವು ಅವನಿಂದ ಬಹು ದೂರ.

ಪಂಪನ ವರ್ಣನಾಕ್ರಮದಲ್ಲಿ ಒಂದಪೂರ್ವ ಲಕ್ಷಣವು ಕಂಡುಬರುತ್ತದೆ. ವಿಷಯವನ್ನು ಅವನಷ್ಟು ಸ್ಪಷ್ಟಗೊಳಿಸುವ ಬೇರೊಬ್ಬ ಕವಿ ಬಹುಶಃ ಕನ್ನಡದಲ್ಲಿಲ್ಲ.

ಯಾವುದಾದರೊಂದು ಸರಳ ಸೂಚನೆಯಿಂದ ವರ್ಣನೆಯ ವೃತ್ತಾಂತವನ್ನು ನಮ್ಮ ಸ್ವಭಾವ, ನಮ್ಮ ದೈನಂದಿನ ಜೀವನಗಳಿಗೆ ಸಂಬಂಧಿಸಿ ಅದು ನಮ್ಮ ಮನಸ್ಸಿನಲ್ಲಿ ಊರಿ ನಿಲ್ಲುವಂತೆ ಮಾಡುತ್ತಾನೆ. ಕರ್ಣಾರ್ಜುನರ ಯುದ್ಧ ಪ್ರಾರಂಭವಾಗಬೇಕು; ಆಕಾಶದಲ್ಲಿ ಸಕಲ ದೇವತೆಗಳೂ ನೆರೆದಿದ್ದಾರೆ; ಸೂರ್ಯನಿಗೂ ಇಂದ್ರನಿಗೂ ವಾಗ್ವಾದವು ನಡೆಯುತ್ತದೆ; ಈಶ್ವರನು ಅವರಿಬ್ಬರನ್ನೂ ಬಳಿಗೆ ಕರೆಯಿಸಿ ಅರ್ಜುನನ ಮುಂದೆ ಕರ್ಣನು ನಿಲ್ಲಲಾರನೆಂದು ಯಥಾರ್ಥ ಹೇಳಿ ಸಮಾಧಾನಪಡಿಸುತ್ತಾನೆ; ಆಮೇಲೆ—

ಅಳವಿಯೊಳಿನ್ನುಮನಿನಿಸ।
ಗ್ಗಳಿಸಿದ ಹರಿಗನೊಳಿದಿರ್ಚಿ ಕರ್ಣಂ ಗೆಲಲು॥
ಮ್ಮಳಿಪಂ ಗಡಮೆಂದೋಪಳ।
ತಳಮಂ ಪೊಯ್ದಾಶ್ವರಂ ಮುಗುಳ್ನಗೆ ನಕ್ಕಂ॥

ನಲ್ಲಳ ಅಂಗೈಯನ್ನು ತಟ್ಟಿ ಮುಗುಳ್ನಗೆ ನಕ್ಕನೆಂಬ ಮುದ್ದು ಮಾತಿನ ಜ್ಯೋತಿಯಿಂದ ಕವಿಯು ಆ ಸನ್ನಿವೇಶವನ್ನು ಎಷ್ಟು ವಿಶದಗೊಳಿಸಿದ್ದಾನೆ! ಎಷ್ಟು ಪ್ರಿಯವಾಗಿ ಮಾಡಿದ್ದಾನೆ! ನಂದನ ವನವನ್ನು ದೇವೇಂದ್ರನು ತನ್ನ ಉಗುರಿನ ಮಾಂಸದಂತೆ ಜಾಗರೂಕನಾಗಿ ಕಾಯುತ್ತಿದ್ದನಷ್ಟೆ! ಅದರೊಳಗಿನ ಒಂದು ಪರಮಾಣುವಿಗಾದರೂ ಬಾಧೆಯುಂಟಾಗಕೂಡದು—ಅದೇ ಅವನ ಕಟ್ಟಾಜ್ಞೆ. ಹೀಗಿರಲು—

ಒರ್ಮೆ ತೊಱಿಲ್ವು ನೋಡಿ ಬನಮಂ ಮಘವಂ ಶಚಿ ಪೂತಚೂತಮಂ।
ನೆರ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ॥
ಸೋರ್ಮುಡಿಯೊಳ್ತಗುಳ್ಚಿದೊಡೆ ಸೂಱಿನೆ ಬಾರಿಸಿದಂ ದಲ್......"

ಆ ವನದ ಹಣ್ಣು ಹೂ ಹೋಗಲಿ, ಒಂದು ಚಿಗುರನ್ನು ಕೊಯ್ದ ಮಾತ್ರಕ್ಕೆ ಸ್ವರ್ಗದ ರಾಣಿಯಾದ ಶಚೀದೇವಿಗೂ ಆಕ್ಷೇಪ. ಇಂದ್ರನಿಗೆ ಆ ವನದ ಮೇಲೆ ಇನ್ನೆಷ್ಟು ಗಾಢವಾದ ಅನುರಾಗ! ಹಿಡಿಂಬೆಯು ಭೀಮನ ಬಳಿಗೆ ಬಂದು, ಮಲಗಿರುವವರಾರೆಂದು ಕೇಳಿ ಅವನು, "ಎನ್ನ ತಾಯ್ವಿರುಮೊಡವುಟ್ಟಿದರ್" ಎಂದೊಡೆ, "ಹಿಡಿಂಬಂ ಬಂದ ವರಂ ತಿಂದೊಡಂ ತಿನ್ಗೆ ನೀನೆನ್ನ ಪೆಗಲನೇಱು ಗಗನತಳಕ್ಕುಯ್ವೆಂ" ಎಂದು ಹೇಳುತ್ತಾಳೆ. ಹಿಡಿಂಬೆಯು ಸರಳ ಜಾಯಮಾನದವಳು; ಪ್ರಪಂಚದ ಅನುಭವದಲ್ಲಿ ತೀರ ಮುಗ್ಧೆ; ಆದರೂ ರಾಕ್ಷಸನ ತಂಗಿಯಾದುದರಿಂದ ಸ್ವಾಭಾವಿಕವಾಗಿ ಆತ್ಮ ಸುಖ ಪರಾಯಣೆ; ಇಷ್ಟಲ್ಲದೆ, ಭೀಮನ ಮೇಲೆ ಆಗ ತಾನೆ ಉಂಟಾದ ತೀವ್ರ ಮೋಹ ಬೇರೆ. ಅವಳ ನುಡಿಯು ಪಾತ್ರಕ್ಕೆ ಹೇಗೆ ಹೊಂದಿದೆ ಭಾವಿಸಿರಿ! ಅದೊಂದು ಮೇಳಿಕೆಯಿಂದ ಹಿಡಿಂಬೆಯು ಜೀವ ಕಳೆದುಂಬಿ ನಮ್ಮ ಮುಂದೆ ನಿಲ್ಲುತ್ತಾಳೆ. ಹೀಗೆ ಸ್ವಲ್ಪ ಮಾತೆಂಬ ಮಿಂಚಿನ ತೇಜಸ್ಸಿನಿಂದ ಕಣ್ಣೆದಿರಿಗೆ ನಡೆದಷ್ಟು ಸ್ಪಷ್ಟವಾದ ಘಟನೆಯನ್ನೂ, ಸ್ವಲ್ಪ ಮಾತೆಂಬ ಮಂತ್ರದ ಮಹಿಮೆಯಿಂದ ಚಿಗುಟಿದರೆ ರಕ್ತ ಸೋರುವಷ್ಟು ನಿಜವಾದ ವ್ಯಕ್ತಿಯನ್ನೂ ಸೃಜಿಸುವ ಈ ಪ್ರತಿಭೆಯು ಪಂಪನನ್ನು ಷೇಕ್ಸ್

ಶಿಯರ್ (Shakespeare), ಗಾಲ್ಸರ್ದಿ (Galsworthy) ಮೊದಲಾದ ಕವಿ ಬ್ರಹ್ಮರ ಸಂದಣಿಗೆ ಒಯ್ಯುತ್ತದೆ.

ಪಂಪ ಭಾರತವು ಧ್ವನಿ ಕಾವ್ಯ. ಅದು ಉತ್ತಮ ಕಾವ್ಯಗಳಲ್ಲೊಂದೆಂಬುದಕ್ಕೆ ಅದರ ಇದೊಂದು ಯೋಗ್ಯತೆ ಸಾಕು. "ಎರಡು ಸ್ವರಗಳಿಂದ ಸಂಗೀತಗಾರನು ಮೂರನೆಯ ಸ್ವರವನ್ನಲ್ಲ, ಒಂದು ನಕ್ಷತ್ರವನ್ನು ಸೃಷ್ಟಿಸುತ್ತಾನೆ" ಎಂಬುದು ಬ್ರೌನಿಂಗ್ (Browning) ಕವಿಯ ಒಂದು ತತ್ವ. ಅದರಂತೆ ಪಂಪನು ಎರಡು ಪದಗಳಿಂದ ಪದಸಮುದಾಯವನ್ನಲ್ಲ, ಒಂದು ಉದಾತ್ತ ಪ್ರಪಂಚವನ್ನು ನಿರ್ಮಿಸುತ್ತಾನೆ. ವ್ಯಂಗ್ಯ ಸಮಸ್ಯೆಯನ್ನು ಬಿಡಿಸಲಾರದವರಿಗೆ ಪಂಪನನ್ನು ಓದುವುದು ಅಸಾಧ್ಯ, ವ್ಯರ್ಥ. ಕೇವಲ ಮೂಗಿನ ನೇರಕ್ಕಿರುವ ಅರ್ಥವನ್ನು ಸ್ವೀಕರಿಸಿ ಧನ್ಯರಾದೆವೆಂದೆಂದುಕೊಂಡರೆ, ಕವಿಗೆ ಮನ್ನಣೆ ಮಾಡಿದ ಹಾಗಾಗಲಿಲ್ಲ. ಕೆಲವು ವೇಳೆ ಸೂಕ್ಷ್ಮಮತಿಗಳಿಗೂ ಕವಿಯ ಸಂಪೂರ್ಣಾಶಯವು ಕ್ಷಿಪ್ರವಾಗಿ ಹೊಳೆಯದೆ ಅದನ್ನು ಕಂಡುಹಿಡಿಯಲು ವಿಶೇಷ ಶ್ರಮಪಡಬೇಕಾಗುವುದು. ಆದುದರಿಂದಲೇ ಉತ್ಕೃಷ್ಟ ಕಾವ್ಯ ಪಠನವು ಒಂದು ಬಗೆಯ ಯೋಗಾಭ್ಯಾಸವೆಂದು ಬಲ್ಲವರು ಹೇಳುವುದು. ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ:—

ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾ।
ಡುತ್ತಿರೆ ಲಂಬಣಂ ಪರಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬ॥
ಳ್ಕುತ್ತಿರೆಯೇವಮಿಲ್ಲದಿವನಾವುದೊ ತಪ್ಪದೆ ಪೇಱಿಮೆಂಬ ಭೂ।
ಪೋತ್ತಮನಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ॥

ಶ್ರೀ ಕೃಷ್ಣನು ಕರ್ಣನು ನಿಜವಾಗಿಯೂ ಯಾರೆಂಬ ತಿಳಿವಳಿಕೆಯನ್ನು ಇತ್ತು ಅವನ ಮನಸ್ಸನ್ನು ಛಿದ್ರಿಸಲು ಯತ್ನಿಸಿದಾಗ ಕರ್ಣನು ಹೇಳುವ ಪ್ರತ್ಯುತ್ತರವಿದು. ಕೌರವನ ಪಕ್ಷವನ್ನು ಬಿಡಲು ತನಗಸಾಧ್ಯವೆಂಬುದನ್ನು ಇಲ್ಲಿ ಸ್ಪಷ್ಟಪಡಿಸಿದ್ದಾನೆ. 'ಒಂದು ದಿವಸ ಭಾನುಮತಿಯೂ ಕೌರವನೂ ನೆತ್ತವಾಡಲು ರಾಣಿಯು ಸೋತಳು. ಪಣವನ್ನು ಕೊಡೆಂದು ಕೌರವನು ಹಾಸ್ಯಕ್ಕಾಗಿ ಕಾಡುವ ಸಂಭ್ರಮದಲ್ಲಿ ಆಕೆಯ ಮುತ್ತಿನ ಹಾರವು ಹರಿದು ಹೋಯಿತು: ಅದು ಯಾರ ತಪ್ಪು ನೀನು ಹೇಳೆಂದು ಕರ್ಣನನ್ನು ಕೇಳಿದನು.' ಇದೇ, ಪದ್ಯದ ವಾಚ್ಯಾರ್ಥ. ಅದರ ಒಂದು ವ್ಯಂಗ್ಯಾರ್ಥವು ಕೂಡಲೆ ತಲೆದೋರುತ್ತದೆ. ಕೌರವನು ಕರ್ಣನಿಗೆ ಬಹು ಸಲುಗೆಯನ್ನಿತ್ತಿದ್ದನು: ಹೆಂಡತಿಯೊಡನೆ ಪಗಡೆಯಾಡುವಾಗಲೂ ಅವನು ಜೊತೆಯಲ್ಲಿರಬೇಕು. ದಂಪತಿಗಳಲ್ಲಿ ಪ್ರಣಯ ಕಲಹವುಂಟಾದರೆ ಅವನೇ ಯಥಾರ್ಥವನ್ನು ನಿರ್ಣಯಿಸಬೇಕು. ಕವಿಯು ಪದ್ಯದಲ್ಲಿ ಬಚ್ಚಿಟ್ಟಿರುವ ಸ್ವಾರಸ್ಯವು ಇಷ್ಟೇ ಅಲ್ಲ, ಇನ್ನೂ ಸ್ವಲ್ಪವಿದೆ: ಭಾರತ ವೀರರಲ್ಲಿ ಮಿಕ್ಕೆಲ್ಲರಿಗಿಂತಲೂ ಹೆಚ್ಚು ಘೋರವಾಗಿ ವಿಧಿಗೆ ತುತ್ತಾದವನೆಂದರೆ ಕರ್ಣ; ಜನಿಸಿದ ಕೂಡಲೆ ಎದೆಗಪ್ಪಿಕೊಳ್ಳಬೇಕಾದ ತಾಯಿ ನೀರಿಗೆ ಬೀಸಾಡಿದಳು; ವಿದ್ಯೆಯನ್ನು ಕಲಿಸಿದ ಗುರುವು ಹರಸುವ ಬದಲು ಶಪಿಸಿದನು; ಪವಿತ್ರ ಕ್ಷತ್ರಿಯನಿಗೆ ಹೀನಕುಲಿಗನೆಂಬ ಅಪಖ್ಯಾತಿ; ಆಗರ್ಭ ಸಾರ್ವಭೌಮನಾದ

ವನು ಓಲಗದ ಭಂಟ; ಇವು ಸಾಲದೆ, ಈಗ ಕೌರವಸ್ವಾಮಿಯು ಕದನವೊದಗಿ ಚಿತ್ತಸ್ಥೈರ್ಯವು ಕಲ್ಲಿನಂತಿರಬೇಕಾದ ಕಾಲದಲ್ಲಿ ಭ್ರಾತೃಮೋಹವು ಅಕಸ್ಮಾತ್ತಾಗಿ ಧಾಳಿಸಿ ಮನಸ್ಸನ್ನು ಕವಲು ಮಾಡಿದೆ. ಅದೃಷ್ಟಕ್ಕೆ ಕರ್ಣನ ಮೇಲೆ ಇನ್ನೆಷ್ಟು ಮತ್ಸರವೋ? ಅದರ ವಿಪರೀತ ತಾಡನದಲ್ಲಿ ಅವನಿಗೆ ಸಮಾಧಾನದ ಭಾಗ್ಯವುಂಟೆ? ಅವನ ಬಾಯಿಂದ ಬರುವ ಮಾತುಗಳು ದೌರ್ಭಾಗ್ಯ ಸೂಚಕವಾದುವು. ಕೌರವನ ಅಳತೆಯಿಲ್ಲದ ಅನುಗ್ರಹವನ್ನು ಸಿದ್ಧಾಂತಪಡಿಸಲು ಅವನು ಕೊಡುವ ನಿದರ್ಶನ ವನ್ನು ನೋಡಿರಿ: ಮಹಾರಾಣಿಯ ಕೊರಳಿನ ಹಾರ ಚೂರು ಚೂರಾದ ಸಂಗತಿ ಯಲ್ಲದೆ ಬೇರೆ ಯಾವುದೂ ಇರಲಿಲ್ಲವೆ? ಅದನ್ನು ಕೇಳಿದೊಡನೆಯೇ ಒಂದು ನರವನ್ನು ಚಿವುಟಿದಂತೆ ನಮ್ಮ ಹೃದಯವು ಕಳಕ್ಕೆನ್ನುತ್ತದೆ. ತನ್ನ ವಿಷಯದಲ್ಲಿರುವ ಒಡೆಯನ ಗಾಢಾನುರಾಗವನ್ನು ಹಿತವಾಗಿ ಸ್ತುತಿಸುತ್ತಿದ್ದೇನೆಂಬುದೇ ಕರ್ಣನ ನಂಬಿಕೆ. ತನ್ನ ವಾಕ್ಯವು ಅವಶಕುನವಾಗಿದೆಯೆಂಬುದು ಅವನಿಗೆ ಗೊತ್ತಿಲ್ಲ. ಸಪ್ಪಳ ಮಾಡದೆ ಹೆಗಲ ಮೇಲೆ ಕುಳಿತಿರುವ ಮೃತ್ಯುವನ್ನು ಅವನೇನು ಬಲ್ಲ? ಪೈಶಾಚಿಕ ವಿಡಂಬನದಿಂದ ವಿಲಕ್ಷಣವಾದ ಅದರ ಮೋರೆಯು ನಮಗೆ ಮಾತ್ರ ಕಾಣಿಸುತ್ತದೆ; ಹಾಗೂ ನಮ್ಮನ್ನು ತಲ್ಲಣಗೊಳಿಸುತ್ತದೆ. ಹೀಗೆ ಕೆಲವು ಸುಕುಮಾರ ಪದಗಳಿಂದ ಹಲವು ಓಜಸ್ವಿತಾರ್ಥಗಳನ್ನೂ, ಒಂದು ಸಣ್ಣ ಸಂಗತಿಯ ಮೂಲಕ ಹಲವು ಮಹಾ ಘಟನೆ ಗಳನ್ನೂ ನಮ್ಮ ಅನುಭವಕ್ಕೆ ತರುವುದು ಪಂಪನ ಮಹಿಮೆ.

ಕಾಲ ಚಕ್ರದ ಸುತ್ತುವಿಕೆಗೆ ಪಕ್ಕಾದ ಸಕಲ ವಸ್ತುಗಳಂತೆ ಕನ್ನಡ ನುಡಿಯೂ ಪಂಪನಿಂದೀಚೆಗೆ ಬದಲಾಯಿಸಿದೆ; ಬರೆಹಕಾರರ ಪ್ರಮಾದದಿಂದ ಕೆಲವು ಪದಗಳೂ ಪಙ್ಕ್ತಿಗಳೂ ಸಡಿಲಿಹೋಗಿವೆ. ಅಂತೂ, ಪಂಪ ಭಾರತದ ಕೆಲವು ಭಾಗಗಳು ಶಿಥಿಲ ವಾಗಿ ಅರ್ಥಮಾಡಿಕೊಳ್ಳುವುದು ಅಸಾಧ್ಯವಾಗಿಬಿಟ್ಟಿದೆ. ಓದಲು ಸ್ವಾಧೀನ ವಾಗಿರುವ ಕಡೆಯಲ್ಲಿಯೂ ಮುತ್ತಿನಂತೆ ಚಿಕ್ಕವಾದ ಮಾತುಗಳೆಂದು ಬಗೆದು ಸಂತಸ ಪಟ್ಟು ಸುಲಭ ತಾತ್ಪರ್ಯಕ್ಕೆ ನಾವು ಮೋಸಹೋಗಕೂಡದು. ಹೀಗಿರುವಾಗ, ಪಂಪನನ್ನು ಕ್ರಮಪಡಿಸುವುದು ಕಷ್ಟತಮವಾದ ಕಾರ್ಯವೇ ಸರಿ. ಬೆಂಗಳೂರಿನ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಪ್ರತಿಯಲ್ಲಿ ಸಂಪಾದಕರು ತೋರಿಸಿರುವ ಧೈರ್ಯವು ನಮ್ಮನ್ನು ಆಶ್ಚರ್ಯಗೊಳಿಸಿದೆ: ಅವರ ಸ್ವಂತ ಪಾಠದ ಬೆಳೆಯು ಹುಲುಸಾಗಿರು ವುದು ಅಷ್ಟಿಷ್ಟಲ್ಲ. ಬುದ್ಧಿ ದಣಿಯಲಿ, ಅಥವಾ ತಲೆನೋವು ಬರಲಿ ಏನಾದರೂ ಪಂಪನ ಪದ್ಯಗಳೇ ನಮಗೆ ಬೇಕಾದುದು; ಪಂಪನನ್ನು ಸಮಗ್ರಗೊಳಿಸುವುದು ಹಳೆಬೀಡಿನಲ್ಲಿರುವ ಊನವಾದ ಕೇದಾರೇಶ್ವರ ದೇವಸ್ಥಾನವನ್ನು ಸರಿಪಡಿಸುವ ಪ್ರಯತ್ನದಂತೆ. ಶಿಲ್ಪದ ಇಲಾಖೆಯವರು ಹಾಸುಕಲ್ಲುಗಳನ್ನು ಕೂರಿಸಿರುವ ಹಾಗೆ ಪದ್ಯದ ಹಿತಕ್ಕಾಗಿ ಯಾವುದೋ ಒಂದು ಅರ್ಥವಾದರೆ ಸಾಕೆಂದು ಮಾತು ಗಳನ್ನು ವ್ಯತ್ಯಾಸಮಾಡಿದರೆ ವಿರಸವಾಗುವುದು. ಪಂಪನನ್ನು ಮಾರ್ಪಡಿಸತೊಡಗ ಬಾರದು. ಅದು ಅತ್ಯಾವಶ್ಯಕವೆಂದು ದೃಢವಾಗಿ ಬೋಧೆಯಾದಲ್ಲಿ ಕವಿಯ ಇಂಗಿತ ವನ್ನರಿತ "ಅಗಾಧ ಮಸರು" ಅಂಜುತಂಜುತ್ತ ಅಲ್ಲೊಂದು ಇಲ್ಲೊಂದು ಪ್ರತಿ ಪಾಠವನ್ನು ಮುಂದಿಡಬಹುದು.

ಪಂಪನ ಶೈಲಿಯ ಸರಳತೆಯನ್ನೂ ಸೌಲಭ್ಯವನ್ನೂ ಶಕ್ತಿಯನ್ನೂ ಅರ್ಥ ಪ್ರತಾಪವನ್ನೂ ಲಾಲಿತ್ಯವನ್ನೂ ಲಾವಣ್ಯವನ್ನೂ ವರ್ಣಿಸಲಸದಳ. ತಿಳಿಗನ್ನಡ ತಿರುಳುಗನ್ನಡವೆಂದರಾವುದು? ಅದರ ಲಕ್ಷಣಗಳೇನು? ಅದರಲ್ಲಡಗಿರುವ ಸತ್ತ್ವ ಶೋಭೆಗಳೆಷ್ಟು? ಮಹಾ ಕಾವ್ಯವನ್ನು ಅದರ ಬಲದಿಂದ ಕಟ್ಟಬಹುದೆ? ಏತಕ್ಕೆ ಅದನ್ನು ಕನ್ನಡಿಗರು ಆದರ್ಶವೆಂದು ಭಾವಿಸಬೇಕು? ಈ ಪ್ರಶ್ನೆಗಳಿಗೆ ಸದುತ್ತರವು ಪಂಪ ಭಾರತ. ಕವಿಯ ಕೆಲವು ಪದಗಳನ್ನು ನೆನೆದುಕೊಳ್ಳೋಣ:—

ಬಂಡಣವೊಳೆನ್ನನೋಡಿಸಿ ಕೊಂಡುಬ್ಬಂ ನಿನ್ನನಾ ಸರಿತ್ಸುತನಾನುಂ ಪೆಂಡತಿಯಾದೆ.
ನರೇಂದ್ರನೆಚ್ಚು ಘೋಂಕನೆ ಮೃಗಚಾರಿಯುಂ ತನಗೆ ಮಾಣದೆ ತಂದನದೊಂದು ಮಾರಿಯಂ

ದ್ರೋಣಂ ಗಡಮಿಷು ವಿದ್ಯೆಗೆ।
ಜಾಣಂ ಗಡಮೆಂದು ಕೇಳ್ದು ಕೌರವರ್ಗೆಲ್ಲಂ॥
ಪ್ರಾಣಂ ಬರ್ಪಾಕೃತಿಯೊಳ್।
ಬಾಣಾಸನ ಬಾಣಪಾಣಿ ಕರ್ಣಂ ಬಂದಂ॥

ದುಶ್ಶಾಸನಂ ತನಗಂ ಮೆಲ್ಲನೆ ಮೃತ್ಯುಸಾರೆ ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ.
ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಮೆನ್ನನವರಿಂ ನೋಡಿಸುವುದು
ಮಿಾಂಪಿರಡೆ ಸಂಸಾರ ಫಲಮೆಂದು

ಮತ್ತನಯನರಸನನುಜನ।
ಸತ್ತರಿಲಂ ನಿನ್ನೊಳಱಿಸಲೆಂದಿರ್ದೆಂ ಬೆ॥
ಳ್ದತ್ತಿರ್ದನಪ್ಪೊಡೇ ತೊಪ।
ಳಿತ್ತಣ ದಿನ ನಾಥನತ್ತ ಮೂಡುಗುಮತ್ತೇ॥

ಪಿಡಿದಡಸಿಯಗುರ್ವು ಪರ್ವೆ ಬೀಸಿ ಗುಣಣೆಯು ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿತಾಟಿಸಿ
ದಾಗಳ್ ಬಿಸುನೆತ್ತರಾ ನೆಣನಡಗೆಲ್ಲ ಸಮಸ್ತಂ ಸುರಿಯೆ ಕೈಗೆ ತೊವಲುಳಿಯಲಗುರ್ವಿಸಿದುದು
ತೀವಿದ ಗುಳ್ಳೆಯ ಪಸುಂಬೆಯುಂ ಸಾರ್ಚಿದಂತೆ ತನು ಕೀಚಕನಾ

ಇದು ಶ್ರೇಷ್ಠ ಕನ್ನಡ ಶೈಲಿ.

ನಮ್ಮ ಕವಿಗೆ ಆದಿ ಪಂಪನೆಂಬ ಹೆಸರು ದೊರೆತಿದೆಯಷ್ಟೆ! ನವೀನ ಪಂಪರಿದ್ದಾರೆಂಬ ಧ್ವನಿಯನ್ನು ಕೊಡುವುದರಿಂದ ಈ ಹೆಸರು ಸಮರ್ಪಕವಾಗಿಲ್ಲ. ಆದರೂ "ಆದಿ" ಎಂಬುದು ಪಂಪನ ವಿಷಯದಲ್ಲಿ ಮುದ್ದಾದ ಯೋಗ್ಯ ವಿಶೇಷಣ. ನಮ್ಮ ಪಂಪನು ಆದಿ ಪಂಪನಲ್ಲ, ಕನ್ನಡದ ಆದಿ ಕವಿ. ಲೋಕದ ಕೆಲವು ದೇಶಗಳಿಗೆ ಆದಿ ಕಾವ್ಯಗಳುಂಟು, ಆದಿ ಕವಿಗಳಿಲ್ಲ. ಫ್ರಾನ್ಸ್ ದೇಶಕ್ಕೆ ರೋಲಂಡ್ (Roland) ಮುಂತಾದ ವೀರರನ್ನು ಕುರಿತ ಸಾಮಾನ್ಯ ಜನರ ಗೀತಗಳಂತಿರುವ ಲಾವಣಿಗಳ ಸಮುದಾಯವೂ, ಜರ್ಮನ್ ಜನರಿಗೆ ಅದೇ ತೆರದ "ನೀಬ್ ಲುಂಗನ್ ಲೀಡ್" (Neeb Lungan Leed) ಎಂಬುದೂ, ಇಂಗ್ಲಿಷ್ ಜನರಿಗೆ ಕಲಾದೃಷ್ಟಿಯಿಂದ ಅವೆರಡಕ್ಕಿಂತಲೂ ಮಿಗಿಲಾದ "ಬಿಯೊವುಲ್ಫ್" (Beowulf) ಎಂಬುದೂ ಆದಿ ಕಾವ್ಯಗಳು. ಅವು ತಮ್ಮ ಸಾಹಿತ್ಯ ಸೌಂದರ್ಯಕ್ಕಿಂತಲೂ ಪ್ರಾಚೀನತೆಯಿಂದ

ಹೆಚ್ಚು ಪೂಜ್ಯವಾದುವು. ಅವನ್ನು ರಚಿಸಿದ ಕವಿಗಳಾರೋ ತಿಳಿದುಬಂದಿಲ್ಲ. ಲೋಕದ ಕೆಲವು ಜನಾಂಗಗಳಿಗೆ ಮಾತ್ರ ಅದೃಷ್ಟ ಪರಿಪಾಕದಿಂದ ಆದಿ ಕವಿಗಳನ್ನೂ ಪಡೆದಿರುವ ಪುಣ್ಯವೊದಗಿದೆ. ಪುರಾತನ ಗ್ರೀಕರಿಗೆ ಹೋಮರನೂ (Homer), ಪುರಾತನ ರೋಮನರಿಗೆ ವರ್ಜಿಲನೂ (Virgil), ಭಾರತದ ಆರ್ಯರಿಗೆ ವಾಲ್ಮೀಕಿಯೂ ಆದಿ ಕವಿಗಳು. ವಾಙ್ಮಯದ ಪ್ರಾರಂಭದಲ್ಲಿ ಕಾವ್ಯವನ್ನು ರಚಿಸಿದ ಮಾತ್ರಕ್ಕೇ ಕವಿಯು ಆದಿ ಕವಿಯಾಗಲಾರನು. ಆದಿ ಕವಿಯಾದವನು ಬರಿಯ ಒಂದು ವೀರ ಕಥೆಯನ್ನು ಬರೆಯುವುದೇ ಅಲ್ಲದೆ ಒಂದು ಸಂಘದ, ಒಂದು ಕಾಲ ಘಟ್ಟದ, ಒಂದು ಸಂಸ್ಕೃತಿ ವಿಶೇಷದ ಪ್ರತಿಬಿಂಬವನ್ನು ತನ್ನ ಕಾವ್ಯದಲ್ಲಿ ತಂದಿಡಬೇಕು; ಸಾರಸ್ವತ ಕವಿತೆಯ ಭಾಂಡಾಗಾರದ ಬೀಗದಕೈ ಅವನ ವಶದಲ್ಲಿರಬೇಕು; ವಿಧಿ ನಿಯಮ ಸಂಪ್ರದಾಯಗಳ ತೊಡಕು ಅವನಲ್ಲಿ ಕಾಣಬಾರದು; ಸ್ವಲ್ಪಮಟ್ಟಿಗೆ ಅವನ ಪ್ರಯೋಗದಿಂದಲೇ ವಿಧಿ ನಿಯಮ ಸಂಪ್ರದಾಯಗಳು ಹುಟ್ಟಬೇಕು; ಅದ್ವಿತೀಯ ಕಲೆಯಿದ್ದರೂ ಕಲೆಯೆಂದು ತೋರದ ಸಹಜ ಪ್ರತಿಭೆ (ಪಂಪನು ವರ್ಣಿಸುವ "ಪುದಿದೊಂದೋಜೆಯ ಜಲ") ಅವನಲ್ಲಿ ಸಂಚರಿಸಬೇಕು; ಅವನ ಶೈಲಿಯು ಲಲಿತವಾಗಿಯೂ, ಸುಗಮವಾಗಿಯೂ, ತಾಯ್ನುಡಿಯ ತಿರುಳಿನ ಗುಟ್ಟು ಅವನಿಗೆ ಸಿಕ್ಕಿದುದಾಗಿಯೂ ನಾಡಿನ ಸಾಹಿತ್ಯದ ಬೆಳವಣಿಗೆಗೆ ಜಾಡು ಅವನಲ್ಲಿ ಚೆನ್ನಾಗಿ ಸ್ಪಷ್ಟವಾದುದಾಗಿಯೂ ಇರಬೇಕು. ಕಡೆಯ ಮಾತು: ಅನಂತರ ಹುಟ್ಟಿದ ಕವಿಗಳಿಂದ ಅವನಿಗೆ ವಿಶೇಷ ಮನ್ನಣೆ ದೊರೆತಿರಬೇಕು. ಅವನು ಕವಿ ಕುಲ ಗುರು. ಈ ಎಲ್ಲಾ ಗುಣಗಳೂ ಪಂಪನಲ್ಲಿವೆ. ಪ್ರಶಂಸೆಯ ವಿಚಾರದಲ್ಲಿ ಎರಡು ಮಾತು ಆವಶ್ಯಕ: ನಾಗಚಂದ್ರನು ಅಭಿನವ ಪಂಪನೆಂಬ ಹೆಸರನ್ನು ಸಂತೃಪ್ತಿಯಿಂದ ಇಟ್ಟುಕೊಂಡು ಆ ಉದ್ಯೋಗದಿಂದ ತನ್ನ ಕೀರ್ತಿಯ ಪರಿಣಾಮವು ಹೇಗಾದರೂ ಪಂಪನ ಪೂಜ್ಯ ನಾಮವನ್ನು ಬೆಳಗಿದ್ದಾನೆ. ಅದಕ್ಕಿಂತಲೂ ಹೆಚ್ಚಿನ ಮರ್ಯಾದೆಯೆಂದರೆ, ಗ್ರೀಕ್ ನಾಟಕಕಾರರು ಹೋಮರನನ್ನು ಆರಾಧಿಸಿದ ರೀತಿಯಲ್ಲಿ, ರನ್ನನು "ವಿಕ್ರಮಾರ್ಜುನ ವಿಜಯ"ದ ಬೆಂಬಲದಿಂದ ತನ್ನ ಅಸದೃಶ "ಸಾಹಸ ಭೀಮ ವಿಜಯ"ವನ್ನು ರಚಿಸಿ ನಮ್ಮ ಕವಿ ಚಕ್ರವರ್ತಿಗೆ ಕಪ್ಪವನ್ನೊಪ್ಪಿಸಿದ್ದಾನೆ. ನಾಗರಾಜ ಕವಿಯು "ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪಂ" ಎಂದು ಹೇಳಿ ಜಳಿಯ ಕೊಡೆಯನ್ನೆತ್ತಿದ್ದಾನೆ. ನಾಗವರ್ಮನು "ಗುರು ಹಂಪದೇವೋಕ್ತ ಪ್ರಯೋಗಃ" ಎಂಬ ವಚಸ್ಸೀಚನದಿಂದ ಪಂಪನಿಗೆ ಆದಿ ಕವಿ ಪಟ್ಟವನ್ನು ಕಟ್ಟಿಬಿಟ್ಟಿದ್ದಾನೆ. ಕೂಲಂಕಷವಾಗಿ ವಿಮರ್ಶಿಸದೆ ಯಾವುದನ್ನೂ ಒಪ್ಪದ ಈ ನವ ಯುಗದಲ್ಲಿಯೂ ಪಂಪನಿಗೆ ಸ್ಥಾನ ಭ್ರಷ್ಟತ್ವದ ಅಂಜಿಕೆಯಿಲ್ಲ.

ಹತ್ತು ಮಾತೇಕೆ? ಪಂಪನು ಕನ್ನಡನುಡಿಯ ಹಿರಿಯ ಮಗ, ಹೆಮ್ಮೆಯ ಕಂದ.

**ಎಸ್. ವಿ. ರಂಗಣ್ಣ, ಎಂ.ಎ.**

---

# ಕನ್ನಡ ಕವಿ ಕಾವ್ಯ ಪ್ರಸಂಗ *

ನಮ್ಮ ಹಿಂದಿನ ಕನ್ನಡ ಕವಿಗಳ ಕಾವ್ಯಗಳ ಅವಲೋಕನಾವಸರದಲ್ಲಿ ನನ್ನ ಸ್ವಲ್ಪ ಬುದ್ಧಿಗೆ ತೋರಿಬಂದ ಕವಿ ಕಾವ್ಯ ವಿಷಯಾತ್ಮಕವಾದ ತತ್ತ್ವಗಳನ್ನೊಳಕೊಂಡ ಲೇಖವಿದು; ಕವಿ ಕಾವ್ಯಗಳ ವಿಚಾರಗಳ ಬಗೆಗೆ ನಮ್ಮ ಪ್ರಾಚೀನ ಕವಿಗಳ ಮತವೇನಿದ್ದುದೆಂಬುದನ್ನು ಸ್ಥೂಲವಾಗಿ ತಿಳಿಯಲು ತೊಡಗಿದ ಯತ್ನವಿದು. ಈ ಕೈಕೊಂಡ ಕೆಲಸವನ್ನು ತೃಪ್ತಿಕರವಾಗಿ ನಡೆಯಿಸಿರುವೆನೆಂಬ ಧೈರ್ಯ ನನಗಿಲ್ಲವಾದರೂ, ಬರೆದವನು ಅಲ್ಪಜ್ಞನೆಂಬುದನ್ನು ನೆನೆದು, ಲೇಖನದಲ್ಲಿಯ ಕುಂದುಗಳನ್ನು ಮರೆತು, ಮನ್ನಿಸಿ, ಸೈರಿಸಿ ಲಾಲಿಸುವಿರೆಂಬ ನಂಬುಗೆಯಿಂದ ಮುಂದಕಡಿಯಿಡುತ್ತ ಹೀಗೆ ಕೇಳಿಕೊಳ್ಳುತ್ತೇನೆ:—

ಅವಧರಿಪುದು ವಿಬುಧರ್ ದೋ ।
ಷವಿದರೊಳೇನಾನುಮುಳ್ಳೊಡಂ ಪ್ರಿಯದಿಂ ತಿ ॥
ರ್ದುವುದು ಗುಣಯುಕ್ತಮುಂ ದೋ ।
ಷ ವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ ॥ (ಕೇಶಿರಾಜ)

“ಕವಿಯೇ ಸರ್ವರೊಳುತ್ತಮಂ” ಎಂದು ಹಾಡಿದ ಕವಿಯು ತನ್ನ ನುಡಿಗಳ ಅರ್ಥವರಿತು ನುಡಿದವನು. ಕವಿರಾಜಮಾರ್ಗಾಲಂಕಾರಕಾರನು ಹೇಳುವಂತೆ,

ಕುರಿವಂತು ಪೆರರ ಬಗೆಯಂ ।
ತೆರೆದಿರೆ ಪೆರರ್ಗರಿಪಲಾರ್ಪನಂ ಮಾತರಿವಂ ॥
ಕಿರಿದರೊಳೆ ಪಿಂದುಮರ್ಥಮ ।
ನರಿಪಲ್ ನೆರೆವಾತನಾತನಿಂದಂ ನಿಪುಣಂ ॥
ನುಡಿಯಂ ಛಂದದೊಳೊಂದಿರೆ ।
ತೊಡರ್ಚಲರಿವಾತನಾತನಿಂದಂ ಜಾಣಂ ॥
ತಡೆಯದೆ ಮಹಾರ್ಘ್ಯ ಕೃತಿಗಳ ।
ನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ ॥

ಇಂತಹ ಸರ್ವೋತ್ಕೃಷ್ಟವಾದ ಪದವಿ ಪಡೆಯಲು ನೆರವಾಗುವ ಕವಿತಾ ಶಕ್ತಿಯು ದೈವದತ್ತವಾದುದು, ಪೂರ್ವಾರ್ಜಿತ ಪುಣ್ಯವಿಶೇಷದಿಂದ ಪಡೆವಂಥದು :—

ಆರಾರೇರರ್ಶಾಸ್ತ್ರ ।
ಶ್ರೀ ರೋಹಣ ಗಿರಿಯನಲ್ಲಿ ನವ ಕವಿತಾ ಚಿಂ ॥
ತಾ ರತ್ನಂ ದೊರೆಗುಮೆ ಮಾ ।
ರಾರಿಯ ಕೃಪೆಯಿಲ್ಲದಂಗೆ ಧರಣೀ ತಳದೊಳ್ ॥ (ಷಡಕ್ಷರಿ)

* ೧೬ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಶ್ರುತ ವಾರಿನಿಧಿಯ ಪಾರಮು ।
ನತಿ ಪ್ರಬಂಧಾಭಿಯೋಗರಾರೆಯ್ದೊಡಂ ॥
ಕೃತ ಪುಣ್ಯಂಗಲ್ಲದೆ ವಿ ।
ಶ್ರುತ ಕವಿತಾ ರತ್ನಮುಲ್ಲಿ ಸಂಭವಿಸುಗುಮೇ ॥ (ನಾಗವರ್ಮ)

ಜನ್ನನು "ಕವಿತಾ ಶಕ್ತಿ ಸುರೇಂದ್ರ ಧೇನುವದು ಪುಣ್ಯಾಯತ್ತಂ" ಎಂದು ಹಾಡುತ್ತಾನೆ. ಇನ್ನೊಂದೆಡೆ ಕಮಲಭವನು—

ಎನಿತಾನುಂ ಭವ ಮಾಲೆಯೊಳ್ ಬರುತುಮಿರ್ದುಂ ಕಾಕ ತಾಲೀಯದಂ ।
ತೆ ನಿಜೋದ್ಯತ್ಕೃತ ಪುಣ್ಯದಿಂ ಮನುಜ ಜನ್ಮಂ ಬೆತ್ತು ಮತ್ತಂ ಶ್ರುತ ।
ಜ್ಞನೆತಾನಾಗಿಯುಂ.........................॥

ಎಂದು ಹಾಡುತ್ತ, ಮನುಷ್ಯ ಜನ್ಮ ತಾಳಿ, ಜೊತೆಗೆ ಕವಿತಾ ಶಕ್ತಿ ಪಡೆಯುವುದು ಬಹಳ ಕಷ್ಟವೆಂದೂ ಹೀಗೆ ಕಾಕ ತಾಳೀಯವಾಗಿ ಎರಡನ್ನೂ ಒಟ್ಟಿಗೆ ಪಡೆವವರು ಬಹಳ ಅಪೂರ್ವವೆಂದೂ ಹೇಳಿದ್ದಾನೆ.—

ಮಾತರಿವರ್ ಕೆಲಬರ್ ಜಗ ।
ತೀ ತಳ ಗತ ಮನುಜರೊಳಗೆ ಮಾತರಿವವರೊಳ್ ॥
ನೀತಿ ನಿದರಮಳ ಕವಿತಾ ।
ನೀತಿ ಯುತರ್ ಕೆಲರೆ ಪರಮ ಕವಿ ವೃಷಭರ್ಕಳ್ ॥ (ನೃಪತುಂಗ)

ಇಂತಹ ಕವಿ ವೃಷಭರ "ಚತುರ್ದಶ ಭುವನಮೆ ಬೆಲೆಯೆನಿಪ ಕೃತಿಯ ಸಮುಳಾಕೃತಿಯಂ" ಪಡೆಯುವುದು ಸುಲಭ ಸಾಧ್ಯವಲ್ಲ. ನೇಮಿಚಂದ್ರನು ಹೇಳುತ್ತಾನೆ—

ಬೆಲೆಯಿಂದಕ್ಕುಮೆ ಕೃತಿ ಗಾ ।
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ ॥
ಬೆಲೆಗೊಟ್ಟು ತಾರ ಮಧುವಂ ।
ಮಲಯಾನಿಲನಂ ಮನೋಜನಂ ಕೌಮುದಿಯಂ ॥

ಹೀಗೆ ದೈವ ಕಟಾಕ್ಷಕ್ಕೆ ಪಾತ್ರರಾದವರಿಗೆ

ಪ್ರತಿಭಾವತ್ತ್ವಮುಮಕೃತಕ ।
ಚತುರತೆಯುಂ ಪರಮ ಬುಧ ಜನೋಪಾಸನಮುಂ ॥
ಕೃತಿ ಪರಿಚಯನುಮುಂ ತರ್ಕುಂ ।
ಪ್ರತೀತಿಯಂ ವಾಗ್ವಿದಗ್ಧತಾ ನಿಪುಣತೆಯೊಳ್ ॥ (ನೃಪತುಂಗ)

ನಾಗವರ್ಮನು ಇದನ್ನೇ

ಪ್ರತಿಭಾನಂ ಕಾವ್ಯ ವಿದ್ಯಾ ಪ್ರಜಯ ಪರಿಚಯಂ ವೃದ್ಧ ಸೇವಾನುರಾಗಂ ।
ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ..........॥

ಎಂದು ಹೇಳಿದ್ದಾನೆ.

ಈ ಪ್ರತಿಭೆಯೆಂಬುದು ಒಂದು ಶಕ್ತಿ; ಕಲಿಯಬಾರದ, ಕೊಳ್ಳಬಾರದ ಶಕ್ತಿ; ತಾನಾಗಿ ಸಹಜವಾಗಿ ಬರತಕ್ಕುದಿದು. ಕಾವ್ಯಕ್ಕೆ ಜೀವ ಕಳೆ ಬರಬೇಕಾದರೆ ಈ ಪ್ರತಿಭೆಯಿಂದ. ಪ್ರತಿಭೆಯಿಲ್ಲದ ಕವಿಗೆ ಮಿಕ್ಕ ಮೂರು ಲಕ್ಷಣಗಳಿದ್ದರೂ ಇಲ್ಲದ ಕೂಟಕ್ಕೆ ಸೇರಿದಂತೆ.—

ಈ "ಕಾವ್ಯ ವಿದ್ಯಾ ಪ್ರಚಯ ಪರಿಚಯ"ವನ್ನು

. . . . . . . . . . . . . . .।
. . . . . . . .ಪೂರ್ವ ಕಾವ್ಯ ರಚನೆಗಳಂ ತಾಂ ॥
ಮೊದಲೊಳ್ ಕಲ್ತಂಗಲ್ಲದೆ ।
ಪದದೊಳ್ ಜಾಣುಂ ಬೆಡಂಗುಮಕ್ಕುಮೆ ಕೃತಿಯೊಳ್ ॥ (ನೃಪತುಂಗ)

ಎಂದೂ,

ಮಿಗೆ ಪದಮಿಡಲರಿಯದ ನಾ ।
ಲಗೆವೆಳವರ್ ಸಲೆ ಸದರ್ಥಮಂ ಕಾಣದ ಪೋ ॥
ಬಗೆಗುರುಡರ್ ಬಗೆವೊಡೆ ಕ ।
ಬ್ಬಿಗರಕ್ಕುಮೆ ಓದುಗೇಳದಕ್ಕರಗಿವುಡರ್ ॥ (ನೇಮಿಚಂದ್ರ)

ವಾಚಕ ವಾಚ್ಯ ವ್ಯಂಗ್ಯ ವ್ಯಂಜನ ।
ಸೂಚಿತ ಲಕ್ಷಣ ಲಕ್ಷ್ಯ ವಿವೇಕ ರ ।
ಸೋಚಿತ ಭಾವಾಲಂಕೃತಿ ರೀತಿತ್ರಯ ಭೇದಕ ಭೇದ್ಯ ॥
ಆಚರಿತೋಭಯ ಸಂಧಿ ಸಮಾಸ ವಿ ।
ವೇಚನೆಗಳ ಭೇದಮನಿನಿಸರಿಯದೆ ।
ವಾಚಾಲತೆಯಿಂದುಸುರಿದ ಕೃತಿ ದುಷ್ಕೃತಿ. . . . . . . . ॥ (ಮಂಗರಸ)

ಎಂದೂ ನಮ್ಮ ಕವಿಗಳು ಒತ್ತಿ ಒತ್ತಿ ಹೇಳಿರುತ್ತಾರೆ.

ಆದರೂ, ಶಾಸ್ತ್ರಾನ್ವಿತನಾದ ಜ್ಞಾನವೃದ್ಧನ ಸೇವಾನುರಾಗವಿಲ್ಲದೆ ಬರಿಯ ಪೂರ್ವ ಕಾವ್ಯ ಪರಿಚಯವು ಸಾಲದು. ಏಕೆಂದರೆ—

ಜಡಜನಮುಮೆಲ್ಲಮೋದಂ ।
ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ ॥
ನುಡಿವಲ್ಮೆಯಲ್ತದೇಂ ಕ ।
ಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ ॥ (ನೃಪತುಂಗ)

ಆದುದರಿಂದ,

ಶ್ರೀಯನೊಲಿಸುವೊಡೆ ತಾಂ ಕವಿ ।
ನಾಯಕನೆನಿಸುವೊಡೆ ತನ್ನ ಕೃತಿ ಕಲ್ಪಾಂತ ॥
ಸ್ಥಾಯಿಯೆನಿಸುವೊಡೆ ಬಲ್ಲರ ।
ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮುಮಂ ॥ (ನೇಮಿಚಂದ್ರ)

ಇದರ ಮೇಲೆ ಕವಿಯು ಅಲಸಿಕೆಯುಳಿದು ಎಷ್ಟೆಷ್ಟು ಅಭ್ಯಾಸ ಮಾಡುತ್ತಾನೆಯೊ ಅಷ್ಟಷ್ಟು ಅವನ ಕವಿತಾ ಶಕ್ತಿಯೂ ಕುದುರುತ್ತದೆ.

ಇನ್ನು ಕಾವ್ಯದ ಕಡೆ ದೃಷ್ಟಿಗೊಟ್ಟರೆ, ಕಾವ್ಯದ ಗುಣ ಲಕ್ಷಣ ನಿರೂಪಣೆಯನ್ನು ನಾಗವರ್ಮನು ಹೀಗೆಂದು ಹೇಳಿದ್ದಾನೆ:—

ಇರೆ ಶಬ್ದಾರ್ಥಂಗಳ್ ತ ।
ತ್ಪರತೆಯಿನದು ಕಾವ್ಯಮದರೊಳುಚಿತೈಕಾರ್ಥಾಂ ॥
ತರ ವಾಚಿ ಶಬ್ದಮನಭಾ ।
ಸ ರೂಪನಾಹ್ಲಾದಕಾರಿಯಪ್ಪುದದರ್ಥಂ ॥

ಕಾವ್ಯಗಳಲ್ಲಿ ದೃಶ್ಯ ಕಾವ್ಯ, ಶ್ರವ್ಯ ಕಾವ್ಯಗಳೆಂಬೂ; ಶ್ರವ್ಯ ಕಾವ್ಯಗಳಲ್ಲಿ ಗದ್ಯ ಪದ್ಯ ಕಾವ್ಯಗಳೆಂದೂ; ಪದ್ಯ ಕಾವ್ಯಗಳಲ್ಲಿ ಓದುಗಬ್ಬ, ಹಾಡುಗಬ್ಬಗಳೆಂದೂ, ಎಂದರೆ ವಸ್ತುಕ ವರ್ಣಕಗಳೆಂದೂ ಅವಾಂತರ ಭೇದಗಳುಂಟು. ನಮ್ಮಲ್ಲಿ ದೃಶ್ಯ ಕಾವ್ಯಗಳಿಲ್ಲ, ಗದ್ಯ ಕಾವ್ಯಗಳಿದ್ದರೂ ಲೆಕ್ಕಕ್ಕೆ ಬಾರವು; ಎಣಿಕೆಗೆ ಸಿಕ್ಕತಕ್ಕವು ಪದ್ಯ ಕಾವ್ಯಗಳು ಮಾತ್ರ.

ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು ।
ವಿಕಳವಾದರು ದೋಷವಿಲ್ಲ ॥ (ರತ್ನಾಕರ)

ಎಂದು ಹೇಳಿದರೂ, ನಮ್ಮ ವರ್ಣಕ ಕಾವ್ಯಕಾರರು ತಮ್ಮ ನುಡಿಗಳಂತೆ ನಡೆಯಿಸದೆ, ವಸ್ತುಕ ಕಾವ್ಯಕಾರರ ದಾರಿಯನ್ನು ಬಿಡಲು ಮನಸ್ಸಿಲ್ಲದಿರುವುದನ್ನು ನೋಡಿದರೆ, ಪ್ರಕೃತಕ್ಕೆ ಈ ವಸ್ತುಕ ವರ್ಣಕ ಭೇದಗಳನ್ನು ಮರೆಯಬಹುದೆನಿಸುವುದು. ಈ ಪದ್ಯ ಕಾವ್ಯಗಳಿಗೆ ಹಲವು ಗುಣಗಳೂ ಲಕ್ಷಣಗಳೂ ಇರಬೇಕಂತೆ. ಇವುಗಳಲ್ಲಿ ಆಶ್ವಾಸ, ಸಂಧಿ ಮುಂತಾದ ವಿಭಾಗಗಳಿರಬೇಕಂತೆ. ಅಲ್ಲದೆ—

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ ।
ಭೋರುಹ ವೈರಿ ಮಿತ್ರರುದಯಂ ಋತು ನಂದನಮಂಬು ಸೀಧು ಕಾಂ ॥
ತಾ ರತಿ ಚಿಂತೆ ಮಂತ್ರ ಚರ ಯಾನ ವಿರೋಧಿ ಜಯಂಗಳೆಂಬಿವಂ ।
ಸೂರಿಗಳಂಗನೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ ॥

ಎಂದು ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವದಲ್ಲಿ ಹೇಳುತ್ತಾನೆ. ಅಲ್ಲದೆ,

ಅಸಗನ ದೇಸೆ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ ।
ದಸದೃಶಮಪ್ಪಪೂರ್ವ ರಸ ಭಾವ ಗಜಾಂಕುಶನೊಳ್ಪುವೆತ್ತು ರಂ ॥
ಜಿಸುವ ಸದರ್ಥ ದೃಷ್ಟಿ ಗುಣವರ್ಮನ ಜಾಣ್ ಕವಿರತ್ನನೋಜೆ ಶೋ
ಭಿಸಿ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ನಿರಂತರಂ ॥

ಎಂದು ನಯಸೇನನೂ

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ ।
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ ॥
ದ್ರನ ರಸ ಭಾವಮುಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ ।
ಣನ ಮೃದು ಬಂಧಮ್.................. ॥

ಎಂದು ಜನ್ನನೂ,

ಜನ್ನನ ಜಾಣ್ ಮಧುರನ ಮಾಧುರ್ಯಂ ।
ರನ್ನನ ರಸಿಕತ್ವಂ ಗುಣವರ್ಮನ ।
ಬಿನ್ನಣಮಾ ಶ್ರೀವಿಜಯನ ಬಗೆ ಸುಜನೋತ್ತಂಸನ ರೀತಿ ॥
ಹೊನ್ನನ ಹೊಸ ದೇಸೆಯ ನುಡಿ ನೇಮಿಯ ।
ಕನ್ನಡದೊಳ್ಪಭಿನವಪಂಪನ ಬಗೆ ।
ಯೆನ್ನೀ ಪೇಳ್ದ ಕೃತಿಗೆ ಪಿರಿದುಂ ಸೇರುಗೆ ನಿರ್ವಿಘ್ನತೆಯಿಂ ॥

ಎಂದು ಮಂಗರಸನೂ, ಇನ್ನೂ ಹೀಗೆಯೇ ಇತರ ಕವಿಗಳೂ ಬಯಸಿರುವುದನ್ನು ನೋಡಿದರೆ,

ಸಮ ಸಂಶ್ಲಿಷ್ಟಾರ್ಥ ವ್ಯ ।
ಕ್ತಿ ಮಧುರ ಕಾಂತ ಪ್ರಸನ್ನ ಸುಕುಮಾರೋಜ ॥
ಸ್ಸಮಭಿಮತೋದಾರಾಹ್ವಯ ।
ಸಮಾಧಿಗಳ್ ಕೃತಿಗುಣಂಗಳೀರಯ್ದಕ್ಕುಂ ॥ (ನಾಗವರ್ಮ)

ಎಂದು ಹೇಳುವ ಕಾವ್ಯ ಗುಣಗಳು ಹತ್ತೂ ಕಾವ್ಯದಲ್ಲಿ ನೆಲಸಿರಬೇಕೆಂದು ನಮ್ಮ ಕವಿಗಳ ಮತವಿದ್ದಂತೆ ತೋರುತ್ತದೆ. ಆದರೆ ಕವಿಯು ಈ ಕಾವ್ಯ ಗುಣಲಕ್ಷಣ ವಿಶೇಷ ಪಂಕದಲ್ಲಿ ಬಿದ್ದು ಒದ್ದಾಡುತ್ತ, "ಸಕಲ ಲಕ್ಷಣಕಾಗಿ ಬಿರುಸು ಮಾಡಿದರೆ" ಕಾವ್ಯವಾಗ ಬಯಸಿದುದು ಕಾವ್ಯವಾಗದು, "ಪುಸ್ತಕದ ಬದನೆಯ ಕಾಯಾಗ ಬಹುದು."

ಅನಂತರ, ಕೃತಿ ದೋಷಗಳ ಬಗೆಗೆ—

ಕೃತಿಸತಿಯ ಮೆಯ್ಯೊಳೆಳ್ಳನಿ ।
ತುಂ ತಾನೊಂದರಿಯೆ ದೋಷಮಾಗೆ ತದಾವ ॥
ರ್ಜಿತಮಪ್ಪ ಕೀರ್ತಿಯುಂ ನಿಂ ।
ದಿತಮಕ್ಕುಂ ದರ್ಪಣಾರ್ಪಿತಚ್ಛಾಯೆಯವೋಲ್ ॥
ಅದರಿಂದುಪೇಕ್ಷೆಗೆಯ್ಯದೆ ।
ಸದಭಿಮತೋದಾತ್ತ ಕೀರ್ತಿಯಂ ಬಯಸುವವಂ ॥
ಪದ ವಾಕ್ಯಾರ್ಥಂಗಳೊಳೊಂ ।
ದದಂತು ಪಿಂಗಿಸುಗೆ ದೋಷಮಂ ಕೃತಿಯಿಂದಂ ॥ (ನಾಗವರ್ಮ)

ಎಂಬ ಖಂಡಿತ ವಾದಿಗೆ,

ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು ।
ಕಂದಿ ಕುಂದಿಹುದೊ ನಿರ್ಮಲವೊ ॥
ಸಂಧಿಸಿ ಶಬ್ದ ದೋಷಗಳೊಮ್ಮೆ ಸುಕಥೆಗೆ ।
ಬಂದರೆ ಧರ್ಮ ಮಾಸುವುದೇ ॥ (ರತ್ನಾಕರ)

ಎಂದು ಉತ್ತರ ಹೇಳಬಹುದು.

ಒಟ್ಟಿನಲ್ಲಿ, ಏನಿರಲಿ, ಏನಿಲ್ಲದಿರಲಿ, ಕವಿಯು ತನ್ನ ಕೃತಿಯ ನಿಚಿತ ಪ್ರಯೋಜನವನ್ನು ಮರೆಯದೆ, ಕೈಕೊಂಡ ವಿಷಯವನ್ನು ಸರಿಯಾಗಿ ಪ್ರತಿಪಾದಿಸಿದ್ದರೆ, ಬೇರಾವ ದೋಷವಿದ್ದರೂ ಮರೆಯಬಹುದು.

ಕೃತಿಯು ಸರ್ವ ಜನ ಪರಿಗ್ರಾಹ್ಯವಾಗಿ, ಕವಿಯು, "ಆಕಲ್ಪಾಂತ ಸ್ಥಾಯಿ ಶ್ರೀ ಕೀರ್ತಿ ವಧೂ ಪ್ರಧಾನ ವಲ್ಲಭ"ನಾಗಬೇಕಾದರೆ, ಆ ಕೃತಿಗೆ ಕೆಲವು ವಿಶೇಷ ಗುಣಗಳಿರಬೇಕು.—

ಮೊಟ್ಟಮೊದಲು, ಕಾವ್ಯವು ಉದಾತ್ತವಾದ ವಿಷಯಕ್ಕೆ ಸಂಬಂಧಿಸಿದುದಾಗಿರಬೇಕು.

ಗುರು ದೇವೇಂದ್ರ ಮುನೀಂದ್ರನಿಂದ್ರನಮಿತಂ ದೇವಂ ಕಥಾ ನಾಯಕಂ ।
ಪುರುದೇವಂ ಕಥೆಯುಂ ತದಾದಿ ಪುರುಷ ಪ್ರಸ್ತುತ್ಯ ಜನ್ಮಾಳಿ ಬಂ ॥
ಧುರಮೆಂದಂದೆ. . . . . . . . . . . . . . . . . . . . . . . . . . . ।
. . . . . . . . . . . . . . . . . ಅದನಂತಿಂತುಂತೆನಲ್ಬರ್ಕುಮೇ ॥ (ಪಂಪ)

ಕಥೆ ಜಿನ ಚರಿತಮೆ ಕವಿ ಜಿನ ।
ಕಥೆಯಂ ಪೇಳ್ದವನೆ ರಾಜ ವಿಟ ಚೋರ ಕಥಾ ॥
ಕಥೆ ಕಥೆಯೆ ಕವಿ ಕವಿಯೆ ತ ।
ತ್ಕಥೆಯಂ ಪೇಳ್ವಪ್ರಶಸ್ತಮುಂ ಪುಟ್ಟಿಸುಗುಂ ॥ (ನಾಗಚಂದ್ರ)

ಎಂದು ಜಿನನೇ ಶ್ರೇಷ್ಠನೆಂದು ಜೈನ ಕವಿಗಳೂ,

ಧರ್ಮ ಸ್ವರೂಪನಾನತ ।
ಶರ್ಮ ಪ್ರದನೆನಿಪ ಬಸವ ರಾಯನ ಕೃತಿಯಂ ॥
ಕೂರ್ಮೆಯಿನುಸಿರ್ದೊಡೆ ಕೇಳದ ।
ರಾರ್ಮೆಚ್ಚ ದರಾರ್ಮಹೋತ್ಸವಂಬಡೆಯದರಾರ್ ॥ (ಷಡಕ್ಷರಿ)

ಕವಿತಾ ಪ್ರೌಢಿ ತನಗೆ ಸಂ ।
ಭವಿಸೆ ಶಿವ ಸ್ತವದೆ ಮುಕ್ತಿವಡೆಯದಜಸ್ರಂ ॥
ಭವಿ ಜನಮಂ ಕೀರ್ತಿಸುವಾ।
ಕವಿತೆಯೆ ದುಷ್ಕರ್ಮವಲ್ತೆ ವಸುಧಾ ತಳದೊಳ್॥ (ಸೋಮರಾಜ)



ಎಂದು ಶಿವ ಸಂಬಂಧವಾದುದೇ ಸರ್ವೋತ್ತಮವೆಂಬ ಶೈವ ಕವಿಗಳೂ,

ಕಥೆ ವಿಷ್ಣು ಪುರಾಣಂ . . . . . . ।
. . . . . . . . . . . . . . . . . . . . . . . ಕಥಾ ॥
ಪತಿ ಕೃಷ್ಣಂ ಕೃತಿಯುಂ ಭೂ ।
ನುತಮೆ ಜಗನ್ನಾಥ ವಿಜಯಮೆನೆ ಮೆಚ್ಚದರಾರ್ ॥ (ರುದ್ರಭಟ್ಟ)

ಎಂದು ಹರಿಯುಳಿದು ಹೊರತಿಲ್ಲವೆಂದು ವೈಷ್ಣವ ಕವಿಗಳೂ ಹೇಳಿದರೂ, ಎಲ್ಲರೂ ಹೇಳುವುದು ಒಟ್ಟಿನಲ್ಲಿ ಕಥಾ ವಸ್ತುವಿನ ಮತ್ತು ಕಥಾ ನಾಯಕನ ಉದಾತ್ತತೆ. ಅಭಿನವ ಪಂಪನು ತನ್ನ ರಾಮಚಂದ್ರ ಚರಿತ ಪುರಾಣದಲ್ಲಿ ಹೇಳುತ್ತಾನೆ—

ನಾಯಕನನ್ಯನಾಗೆ ಕೃತಿ ವಿಶ್ರುತವಾಗದುದಾತ್ತ ರಾಘವಂ ।
ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು ಕಾ ॥
ಛಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನ ಮಾಲೆಯಂತುಪಾ ।
ದೇಯಮೆನಿಕ್ಕುಮೇ ವಿಷಯಮೊಪ್ಪದೊಡಾವುದುಮೊಪ್ಪಲಾರ್ಕುಮೇ ॥

ಆದರೆ ವಿಷಯವು ಉದಾತ್ತವಾದ ಮಾತ್ರಕ್ಕೇ ಸಾಲದು; ಆ ವಿಷಯಕ್ಕೆ ತಕ್ಕ, ಅದರೊಡನೆ ಸರಿಯಾದ ಸಂಬಂಧ ಬೆಳೆಯಿಸಲು ಯೋಗ್ಯನಾದ ಅಧಿಕಾರಿಯೊಬ್ಬನು ಸಿಕ್ಕಬೇಕು. ಏಕೆಂದರೆ—

ಪರಿಣತ ಕವೀಂದ್ರ ವದನಾ ।
ಜಿರದೊಳ್ ಮೃದು ಪದ ವಿಲಾಸ ವಿನ್ಯಾಸಾಲಂ ॥
ಕರಣಂ ರಂಜಿಸೆ ನರ್ತಿಪ ।
ಸರಸ್ವತೀ ಲಾಸ್ಯ ಭೇದಮಂ ಜಡನರಿಯಂ ॥
ಶಿಲಾ ಪ್ರತಿಮೆಯನುರ್ಚುಗುಮೆ ಮದನ ಮೋಹನ ಬಾಣಂ ।
ರಸಮಂ ನಾಲಗೆ ಕವಿತಾ ।
ರಸಮಂ ಕವಿ ಕುಸುಮ ರಸಮನಳಿ ಮಾಳೆ ಸುಧಾ ॥
ರಸಮಂ ಸುರರಕ್ಷ್ಣಿಯ ಸುಖ ।
ರಸಮಂ ಪರಮಾತ್ಮನರಿವನುಳಿದವರರಿಯರ್ ॥ (ನಾಗಚಂದ್ರ)

ಆದುದರಿಂದ,

ಎನಿತನೊರಲ್ದು ಪೇಳ್ದ ಕನಿಯೇವನದಂ ಪೆಸರಿಟ್ಟು ಮೆಚ್ಚಬಲ್ಲ ।
ನನರಸಲ್ಕೆವೇಳ್ಪುದವನಂ ಜಗದೊಳ್ಪಳಿಯಲ್ಕೆ ಬಾರದಾ ॥
ತನ ಮುಖದಿಂದಲಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ ।
ರನ ಪೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ॥ (ಜನ್ನ)

ಮುಂದಿನದು ಶೈಲಿಯ ವಿಚಾರ. ಕವಿಯಾದವನು—

ಪಂಡಿತರುಂ ವಿವಿಧ ಕಳಾ ।
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ॥
ಕಂಡರ್ ಕೇಳ್ವೊಡೆ ಗೊರವರ ।
ಡುಂಡುಚಿಯೇ ಬೀದಿವರೆಯೆ ಬೀರನ ಕತೆಯೇ ॥ (ಮಧುರ)

ಎಂದು ಜನಸಾಮಾನ್ಯವನ್ನು ಮೂಲೆಗೊತ್ತರಿಸದೆ—

ಅಕ್ಕರಿಗರ ಬಗೆಗಂ ಬೆ ।
ಳ್ಕಕ್ಕರಿಗರ ಬುದ್ಧಿಗಂ ಪ್ರಭಾವಾರ್ಥತೆಯಿಂ ॥
ಸಕ್ಕದಮುಂ ಕನ್ನಡಮುಂ ।
ಸಕ್ಕಸಮಂ ಕೇಳ್ವೊಡೆನಿಸಿ ಪೇಳ್ವುದು ಕೃತಿಯಂ ॥ (ನೇಮಿಚಂದ್ರ)

ಅಲ್ಲದೆಯೂ,

........................ಕೇಳ್ದಂ ಬಹು ।
ಶ್ರುತನಲ್ಪಶ್ರುತನೆನ್ನದಾರ ಕಿವಿಗಂ ನುಣ್ಪಿಂಪಿನೊಳ್ ಕೂಡೆ ಪಂ ॥
ಡಿತರುಂ ಮೂರ್ಖರುಮೆಕ್ಕೆಯಿಂ ಪೊಗಳೆ......। (ಪೊನ್ನ)

ಹೇಳಬೇಕು. ಮತ್ತೆಯೂ ಹೇಗಿರಬೇಕೆಂದರೆ—

ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ।
ರಯ್ಯಾ ಮಂಚಿದಿಯೆನೆ ತೆಲುಗಾ ॥
ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು ।
ಮೆಯ್ಯುಬ್ಬಿ ಕೇಳಬೇಕಣ್ಣಾ ॥ (ರತ್ನಾಕರ)

ಕವಿತೆಯು, "ಅಸಾರ ಸಾರ ಗುಣ ವೃಂದದ" "ರುಚಿರ ಪ್ರಬಂಧ"ವಾಗಬೇಕಾದರೆ, ಕೃತಿಯು ಸ್ವೇದ ಸೇಚನೆಯಿಂದೊಗೆದುದಾಗಿರದೆ, ಪ್ರತಿಭೆಯ ಫಲವಾಗಿರಬೇಕು. ಈ ಪ್ರತಿಭೆಗೆ ಶಕ್ತಿ, ಸಹಜ, ಇತ್ಯಾದಿ ನಾಮಾಂತರಗಳಿದ್ದಂತೆ ಕಾಣುತ್ತದೆ.—

ಮಳೆಯಿಲ್ಲದೆ ಪೊಯ್ನೀರಿಂ ।
ಬೆಳೆಗುಮೆ ಧರೆ ಮರುಗಿ ಕುದಿದು ಶಾಸ್ತ್ರದ ಬಲದಿಂ ॥
ದಳಿಪಿಂ ಪೇಳ್ದೊಡಮದು ಕೋ ।
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ॥ (ನಯಸೇನ)

ಬರೆ ಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ ।
ಸರಸ ಪದಾರ್ಥಮಂ ತಡಕಿ ಕಾಣದೆ ಕಳ್ದು ಪರೋಕ್ತಯುಕ್ತಿಯಂ ॥
ವಿರಚಿಸುತಂತುಮಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾ ।
ಲುರಿಚರ ತೋರ್ಪ ದುಷ್ಕವಿ ಮಹಾ ಕವಿ ಮಧ್ಯದೊಳೊಪ್ಪಲಾರ್ಪನೇ ॥ (ಷಡಕ್ಷರಿ)

ಮುಖ್ಯವಾಗಿ, "ಸಹಜಂ ತನಗಿನಿಸಪ್ಪೊಡಮಿಲ್ಲದನ ಕವಿತೆ", "ಉಪ್ಪಿಲ್ಲದೆ ಕೇಳೊಕ್ಕಳ ತುಪ್ಪವನೆರೆದುಣ್ಬೆಂ" ಎಂಬವನ ಉಣಿಸು.

ಮತ್ತೆಯೂ, ಕವಿಯು ಸ್ವೋಪಜ್ಞನಾಗಿರಬೇಕು. ಹಾಗಿಲ್ಲದೆ, "ಅಲ್ಲಲ್ಲಿ ಕಲ್ತ ಪಳವಾತೆಲ್ಲಮನಂತಿಂತು ಕೋದು" ಕಬ್ಬಂಬೇಳ್ದರೆ, ಅವನು ಕ್ಷುಲ್ಲಕಕವಿಯೆನಿಸಿಕೊಳ್ಳುತ್ತಾನೆ—

ಪೆರರ ನುಡಿ ಪೆರರ ಮಾರ್ಗಂ ।
ಪೆರರರ್ಥಂ ಪೆರರ ದೇಸಿ ಪೆರರೋಜೆಯೆನಲ್ ॥
ಪೆರರ ಬಳಿಸಂದು ತನ್ನಂ ।
ಮೆರೆವಂ ಕವಿಯಲ್ಲವಾಟಕಾರರ ಜೋಹಂ ॥ (ನಾಗಚಂದ್ರ)

ಇಂತಹ

ಹರಿಗವಿಗಳ ಕಬ್ಬಂಗಳ ।
ಹೊರಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ॥
ಬರಿ ತಾರಿಗ ಬೀರಿಗ ವೆ ।
ತ್ತರ ತತ್ತರ ವೆಕ್ಕಸಕ್ಕಮಸ್ತವ್ಯಸ್ತಂ ॥ (ಹರಿಹರ)

ಕವಿಗೆ

ನೋಡಿರೆ ಪೇಳ್ವ ಮೂರುವರೆ ಭಾಷೆಗಳಂ ಪೆರರರ್ಥಮಂ ಪೆರರ್ ।
ಮಾಡಿದ ದೇಸೆಯಂ ಪೆರರ ಬಿನ್ನಣಮುಂ ಪೆರರೋಜೆಯಂ ಕಡಂ ॥
ಮಾಡುವ ಕಳ್ವ ಕೊಳ್ವ ಖಳರಿರ್ಕೆಮ ಕಬ್ಬಿಗಗಳ್ಳರೆಂದು ಕೂ ।
ಸಾಡಿಸಬಾರದಕ್ಕರದ ರಾಜ್ಯದೊಳೀ ಕವಿಚಕ್ರವರ್ತಿಯಾ ॥ (ಪೊನ್ನ)

ಎಂದು ಎದೆ ತಟ್ಟಿ ಹೇಳಿಕೊಳ್ಳುವ ಸತ್ತ್ವ ವಿಶಿಷ್ಟವಾದ ಕೆಚ್ಚಿರಬೇಕು. ಹಾಗಿರಲು—

ಕಿರಿಯ ಕೃತಿ ಪಿರಿದೆನಿಕ್ಕುಂ ।
ಪೆರರರ್ಥಕೆ ಕೈ ದುಡುಂಕದಿರೆ ಸತ್ಕವಿಗಂ ॥ (ಷಡಕ್ಷರಿ)

ಕಾವ್ಯಾಂಗನೆಯ ಬಳಿಸಲಲು ಬಯಸುವ ಕವಿಯಿಡುವ ಪದಗಳು—

ಪಳುಕಿನ ಕರ್ಪುರವಳುಕಿನ ।
ಮಳಯಜದಿಂಗಡಲ ಪೊಳೆವ ಮುತ್ತಿನ ಬೆಳ್ಪಿಂ ॥
ಗಳ ಸಿರಿಗೆ. . . . . . . . । (ಜನ್ನ)

ಸರಿಬರಬೇಕು.

ಮನನೊಲ್ದೋದುವೆನೆಂಬರ ಬಾಯ್ದೆರೆ ।
ಗಿನಿಯಳ್ತುಂಬಿದ ನವ ರಸದಂಬುಲ ।
ಮೆನೆ ಲಾಲಿಸಿ ಕೇಳ್ವರ ಕಿವಿಗೋಪಳಾಡಿದ ಲಲ್ಲೆಯೆನೆ (ಮಂಗರಸ)

ಆಗಬೇಕು ಸತ್ಕವಿತೆಯ ಸವಿವಾತು. ಹಾಗಿಲ್ಲದೆ,

ಸರಸತಿಯನಬಲೆಯಂ ಗೋ ।
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ ॥
ಕ್ಕರಿಗನೆ ಪಾತಕನಾತನೆ ।
ಸರಸ್ವತೀ ದ್ರೋಹನವನನಾರ್ ಮುಟ್ಟುವರೋ ॥ (ರನ್ನ)

ಇಂತಹ "ಅಕ್ಕರಮಂ ಸೆರೆಗೆಯ್ವ ಕರ್ಕಶರಿಗೆ" ಎಲ್ಲೆಲ್ಲಿಯೂ ಮನ್ನಣೆಯಿಲ್ಲ.

ಮೇಲಾಗಿ, ಕಾವ್ಯಕ್ಕೆ ಜೀವವಾದ ರಸಕ್ಕೆ ನಮ್ಮವರು ಹೆಚ್ಚು ಪ್ರಾಧಾನ್ಯ ಕೊಟ್ಟಿರುತ್ತಾರೆ—

ರೀತಿ ವಿನೂತ ವಸ್ತು ಕೃತಿಗೊಪ್ಪುವ ಮೆಯ್ ರಸ ಭಾವ ವೃತ್ತಿ ನಿ ।
ರ್ಣೀತಿಯೆ ಜೀವಮುಂತದರಿನನ್ವಿತನಪ್ಪ ಕವೀಶ್ವರಂ ಬುಧ ॥
ವ್ರಾತಮೊರಲ್ದು ಬಿಚ್ಚಳಿಸಿ ನಚ್ಚುವಳಂಕೃತಿ ಕೂಡದಿರ್ದೊಡಂ ।
ರೀತಿಯೊಳೊಂದೆ ಪೇಳ್ವುದು ರಸಂ ಬಿಡೆ ಬಂಧುರ ಕಾವ್ಯ ಬಂಧಮಂ ॥ (ನಾಗವರ್ಮ)

ಕವಿ ಮಾರ್ಗದೊಳೊಳಪೊಕ್ಕುಂ ।
ನವ ರಸಮಂ ತೆರೆಯೆ ನುಡಿದನೆನಿಸಿದ ಕವಿ ಸ ॥
ತ್ಕವಿಯೆನಿಕುಂ. . . . . . . . . . ।
ರಸಾಂತರಂಗಳಂ ಮುಟ್ಟೆ ನುಡಿದು ರಂಜಿಸನೇಡಾ ॥

ಎಂದು ರನ್ನನೂ,

ಚಂದನ ಪಂಕದೊಳ್ಪರಿಮಳಂ ಮೆರೆವಂತಿರೆ ಬಂಧದೊಳ್ ರಸ ।
ಸ್ಯಂದಿಗಳಾದ ಮಾತು ಮನಮಂ ಸಲೆ ಸೋಲಿಸೆ...... ॥

ಹೇಳಬೇಕೆಂದು ಜನ್ನನೂ—

ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ ।
ಕಬ್ಬ ಹೇಳಲಿ ಸರಸ್ವತಿಯೆ ॥

ಎಂದು ರತ್ನಾಕರನೂ ಹೇಳುವಂತೆಯೇ, ನೇಮಿಚಂದ್ರನೂ ಹೇಳುತ್ತಾನೆ.—

ರಸಿಕರ ಪೊಸ ಬಗೆಗಿಂಪಂ ।
ಪೊಸತಂ ಪೊಸಯಿಸುತುಮೊಂದೆ ಪೊರೆಯೆತ್ತಲೊಡಂ ॥
ರಸಮೊಸರದೊಡೇಂ ಬಸನವೆ ।
ಬಿಸುಡುವುದಾ ಪುಳಿತ ಕಬ್ಬುಮಂ ಕಬ್ಬಮುಮಂ ॥

ಈ ರಸಕ್ಕೆ ಪ್ರಾಧಾನ್ಯ ಕೊಟ್ಟಿರುವಂತೆಯೇ, ಕಾವ್ಯದಲ್ಲಿ ವಾಚ್ಯಕ್ಕಿಂತ ವ್ಯಂಗ್ಯವನ್ನು ಮೇಲೆಂದೆಣಿಸುತ್ತಾರೆ.—

ಲಲಿತಂ ಪ್ರತೀಯಮಾನೋ ।
ಪಲಕ್ಷಿತಂ ವಾಚ್ಯಮಾದೊಡೊಪ್ಪದು ಕೃತಿ.... ॥ (ನೇಮಿಚಂದ್ರ)

ಕೊರ್ವಿ ಪೊರಪೊಣ್ಮೆ ತನಿರಸ ।
ಮುರ್ವೆ ಕರಂ ಕೊಂಕು ಕಿವಿವರಂ ನವ್ಯ ಗುಣಂ ॥
ಪರ್ವೆ ತೆಗೆದಿಸುವ ಕಾವನ ।
ಕರ್ವಿನ ಬಿಲ್ಲಂತೆ ಕಾವ್ಯವೇಂ ಮೋಹಿಸದೇ ॥ (ಮಧುರ)

ಅಲ್ಲದೆ, ಸತ್ಕವಿಯಾಗಲೆಳಸುವವನು ಕೃತಿ ಬರೆದರೆ—

ಮೃದು ಪದ ಗತಿಯಿಂ ರಸ ಭಾ ।
ವದ ಪೆರ್ಚಿಂ ಪುಣ್ಯ ವನಿತೆವೋಲ್ ಕೃತಿ ಸೌಂದ ॥
ರ್ಯದ ಚಾತುರ್ಯದ ಕಣಿಯೆನೆ ।
ವಿದಗ್ಧ ಬುಧ ಜನದ ಮನಮನಲೆಯಲವೇಡಾ ॥ (ಪಂಪ)

ಕಿವಿಯಂ ಜಕ್ಕುಲಿಪಂತೆ ಸುಣ್ಪುದರ್ದ ಶಬ್ದಂ ಶಬ್ದ ಸಂದರ್ಭದೊಳ್ ।
ಸವಿಯಂ ಮುಂದಿಡುವರ್ಥಮರ್ಥದೊಳೊಡಂಬಟ್ಟೊಪ್ಪನೋರಂತೆ ಬೀ ॥
ರುವ ಭಾವಂ ಸಲೆ ಭಾವದಿಂದೊದವಿ ಚಿತ್ರಂ ಕೂಡೆ ತೇಂಕಾಡೆ ಪೊ ।
ಣ್ಮುವ ನಾನಾ ರಸಮಿರ್ಪ.................... ॥

ಅಗ್ಗಳ ಕೃತಿಯನ್ನು ಹೇಳಿದರೆ ಕೇಳಿದವರು ಮೆಚ್ಚುವರು. ಮತ್ತು

ವಿಧೃತಾಲಂಕಾರದಿಂದಂ ನವ ಯುವತಿಯವೋಲ್ ಲಕ್ಷಣ ಸ್ಫೂರ್ತಿಯಿಂದಂ ।
ವಿಧು ಜೃಂಭದ್ಬಿಂಬದಂತುಜ್ಜ್ವಳ ರಸಮಯದಿಂದಂ ಮನೋಜ್ಞೇಕ್ಷುವಂತು ॥
ದ್ಬುಧ ತತ್ಯಾನಂದದಿಂದಂ ತ್ರಿದಶ ಕುಜದವೋಲ್ ಧಾತ್ರಿಯೊಳ್ಮೋಭಿಕುಂ ಸ ।
ನ್ಮಧುರಂ ಚಿತ್ರಾರ್ಪ ಕಾವ್ಯಂ ಸುಜನ ನಿಕರ ಸೇವ್ಯಂ ವಿಭಾವ್ಯಂ ಸುನವ್ಯಂ ॥ (ಸೋಮರಾಜ)

ಇಂತಹ

.............................ಕಾವ್ಯ ಬಂಧಮೊ ||
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊರೆಯಿಂ ಬಳಲ್ದು ತುಂ |
ಬಿಗಳನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ ||     (ಪಂಪ)

ಕಡೆಗೆ, ಕಾವ್ಯಗಳು ಉಪಾದೇಯವಾಗಬೇಕಾದರೆ, ಅವುಗಳಿಂದ ಓದುಗರಿಗೆ ಏನಾದರೂ ಪ್ರಯೋಜನವಾಗಬೇಕು. ಸತ್ಕಾವ್ಯಾವಲೋಕನದಿಂದ ಆಗುವ ಪ್ರಯೋಜನಗಳು ಹಲವುಂಟು.—

ಪಾಪಮಿದು ಪುಣ್ಯಮಿದು ಹಿತ |
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ ||
ಖೋಪಾತ್ತಮಿದೆಂದರಿಪುಗು |
ಮಾ ಪರಮ ಕವಿ ಪ್ರಧಾನರಾ ಕಾವ್ಯಂಗಳ್ ||

ಲೌಕಿಕ ಸಾಮಯಿಕೋರು ವಿ |
ವೇಕಮುಮಭ್ಯುದಯ ಪರಮ ನಿಃಶ್ರೇಯಸಮುಂ ||
ಪ್ರಾಕಟಮಕ್ಕುಂ ವಿದಿತಾ |
ನೇಕ ಕವೀಶ ಪ್ರಯೋಗ ಪದ ಪದ್ಧತಿಯೊಳ್ ||

ಅಧಿಕೃತ ಸತ್ಪುರುಷಾರ್ಥ |
ಪ್ರಧಾನ ಧರ್ಮಾರ್ಥ ಕಾಮ ಮೋಕ್ಷಂಗಳವಾ ||
ಬುಧ ಜನ ವಿವಿಕ್ತ ಕಾವ್ಯ |
ಪ್ರಧಾರಿತಾರ್ಥಂಗಳಖಿಳ ಭುವನ ಹಿತಂಗಳ್ ||     (ನೃಪತುಂಗ)

ಇನ್ನು, ನಮ್ಮ ಕಾವ್ಯ ಕೂಪಾರದಲ್ಲಿ ಸತ್ಕಾವ್ಯವಿದೆಂದು ಪತ್ತೆ ಹಚ್ಚಿ ಬೆಲೆ ಕಟ್ಟಲು ಅನುಕೂಲಿಸುವಂತೆ ನಮ್ಮ ಕವಿಗಳೇ ಕೆಲವು ಕಾವ್ಯ ನಿಕಷಗಳನ್ನು ಕೊಟ್ಟಿರುತ್ತಾರೆ. ಈ ನಿಕಷಗಳು ಫಲಕಾರಿಯಾಗಬೇಕಾದರೆ ಕವಿ ವಾಚಕ ಸೌಹಾರ್ದ ವಿರಬೇಕು. ವಾಚಕನು ಸರಿಯಾದವನಿರಬೇಕು.—

ಮಾನಿತ ಪದಮುಂ ಪದ ಸಂ |
ಧಾನಮುನರ್ಥ ಪ್ರತೀತಿಯುಂ ಕವಿ ಹೃದಯ ||
ಸ್ಥಾನಮುಮರಿದೋದದೆ ಕ |
ಣ್ಬೇನೆಯ ಕರಡಿಯವೊಲೂಳ್ದಪಂ ವಾಚಕನೇ ||     (ನಯಸೇನ)

ಅಕ್ಷರ ದರಿದ್ರರಳಿಕ ವಿ |
ಚಕ್ಷಣರೋದಿದೊಡಮಪ್ಪುದೇಂ ಕಾವ್ಯ ಕಳಾ ||
ಶಿಕ್ಷಕರೊಸೆದು ಪರೀಕ್ಷಕ |
ರೀಕ್ಷಿಸೆ ಕೃತಿಯುಂ ಕೃತಾರ್ಥರಲ್ಲರೆ ಕವಿಗಳ್ ||     (ಹರಿಹರ)

ಇಲ್ಲದಿದ್ದರೆ,

ಬರೆದಾಹ ಬರೆದೆ ಭಾಪುರೆ ।
ಬರೆದಕ್ಕಟ ಬರೆದೆ ಲೇಸು ಬರೆದೆಯೆನುತ್ತುಂ ॥
ಬರಿದೆ ತಲೆದೂಗುವುದರಿಂ ।
ಬರಿದಪ್ಪುದು ಕಾವ್ಯಮರಿಯದರ ಜಾಣಿಂದಂ ॥ (ಹರಿಹರ)

ಇನ್ನು ನಿಕಷಗಳ ಕಡೆ ನೋಡಹೊರಟರೆ—

ಕಡಿವಡೆದುದೊ ನಂಜಿನ ಮು ।
ಳ್ಳುಡಿದುದೊ ಕರ್ಬೊನ್ನ ಸರಳೆ ಕೀಲಿಸಿದುದೊ ಪೇ ॥
ಱಡರ್ದುದೊ ಮೂಕ ಗ್ರಹಮೆನೆ ।
ಮಿಡುಕದು ಖಳ ರಸನೆ ಸುಕವಿ ಕಾವ್ಯ ಸ್ರವದೊಳ್ ॥

ಎಂದು ಷಡಕ್ಷರಿಯೂ,

ಕುಕವಿಯನಲೆದಂಜಿಪ ಜಾಣ್ ।
ಸುಕವಿಯೊಳೊಳೇನುಂಟೆ ದುರ್ಜನಾಳಿಗೆ ಶಕುಳ ॥
ಪ್ರಕರಮನೆರ್ದೆಗಿಡಿಪುಗ್ರತೆ ।
ಬಕ ನಿಕರಕ್ಕುಂಟೆ ತಿಮಿ ತಿಮಿಂಗಿಲಗಿಲನೊಳ್ ॥

ಎಂದು ಅಗ್ಗಳನೂ ಹೇಳಿರುವರು. ಇದಕ್ಕೂ ಹೆಚ್ಚಿನ ನಿಕಷವಿನ್ನೊಂದುಂಟು :—

ಚತುರ ಕವಿ ಪೇಳೆ ರಸವ ।
ತ್ಕೃತಿಯಂ ರಸ ಮಗ್ನನಾಗಿ ದುರ್ಜನನುಮದಂ ॥
ಸ್ತುತಿಯಿಸವೇಳ್ಪುದು ತಣ್ಪಂ ।
ಹುತಾಶನಂ ಮಂತ್ರ ಶಕ್ತಿಯಿಂ ತಾಳ್ದುವವೋಲ್ ॥ (ನಾಗಚಂದ್ರ)

ಕಾವ್ಯದ ಬೆಲೆಯು ಅವರಿವರು ಕೊಡುವ ಬಿರುದು ಬಹುಮಾನಗಳ ಮೇಲೆ ಹೋಗುವುದಿಲ್ಲ. ಮಧುರನು ಹೇಳುತ್ತಾನೆ:—

ನೆರೆಯರಿಯದ ಪೊರೆಯರಿಯದ ।
ಬಿರುದುಗಳೇಕೆಮಗೆ ಕೃತಿಯನೀಕ್ಷಿಸಿ ಮಿಗೆ ಮ ॥
ಚ್ಚರಿಸುವ ಕವಿಯೆರ್ದೆ ಬಿಕ್ಕನೆ ।
ಬಿರಿದಿರ್ದುದೆ ಬಿರುದು ಮಿಕ್ಕ ಬಿರುದುಂ ಬಿರುದೇ ॥

ಕೊನೆಯ ಮಾತು: ಇಲ್ಲಿಗೆ ಕವಿಯ ಮಹತ್ತ್ವವನ್ನು ತಿಳಿಸಿ, ಈ ಲೇಖನವನ್ನು ಕೊನೆಗಾಣಿಸುತ್ತೇನೆ.—

ತೊಳತೊಳಗೆ ದಿಗಂಬರಮಂ ।
ಬೆಳಗುವ ರುಚಿಯಿರ್ದುಮೇನೊ ಸಕಲ ಜನಾಂತ ॥
ಸ್ಥಳ ತನುಮಂ ತಮ್ಮುದಯದೊ ।
ಳಳರಿಸಿದರೆ ರವಿಗಳೆಮಗೆ ಕವಿಗಳೆ ವಂದ್ಯರ್ ॥ (ಮಧುರ)

ಕುವಳಯದಲರಂ ಕೌಮುದಿ ।
ಯ ವಿಭವಮುಂ ಕಂಡು ಕೊಂಡು ಕೊನೆವಂ ಕವಿಯೋ ॥

ರವಿಯೋ ರವಿ ಕಾಣದುದಂ।
ಕವಿ ಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ॥

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿ ಸಂತತಿ ವಾಮನ ಕ್ರಮಂ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನಿಕ್ಕಿ ಗಂಟಲಂ॥
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿ ಬಂಧದೊಳಲ್ತೆ ಕಟ್ಟಿದರ್।
ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳವೋ ಕವೀಂದ್ರರಾ॥

ಕಿವಿಯಿಂದೀಂಟಿಸುವರ್ ಸಮಸ್ತ ರಸಮಂ ತೋರ್ಪರ್ ಸರೋಜಾತಮಂ।
ಯುವತೀ ಪ್ರೌಢ ಲತಾಗ್ರದೊಳ್ ಕುಮುದಮೊಂದೊಂದಲ್ಲಿಯಾ ಬಾಲ ಪ॥
ಲ್ಲವಮಂ ಪುಟ್ಟಿಪರಾರ್ಯ ಮೋಹನಮುಮಂ ಮಾಳ್ಪೀ ಚಮತ್ಕಾರಮಂ।
ಕವಿಗಳ್ ಬಲ್ಲವೊಲನ್ಯರೆತ್ತರಿವರಂತಾ ಬ್ರಹ್ಮನುಂ ಬಲ್ಲನೇ॥

ಮರನೀಗುಂ ಮಣಿಯಾಗುಮೊಂದು ಪಶುವೀಗುಂ ಕೇಳಿಮೆಂದೋಳಿಯೊಳ್।
ಪುರುಡಂ ಪುಟ್ಟಿಸಿ ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್॥
ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು।
ರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆರರ್ ಬಲ್ಲರೇ॥

ಪಾಪ ಶುಭೋದಯಮುಮಂ ವಾ।
ಗ್ವ್ಯಾಪಾರದಿನನತ ನತರ್ಗೆ ಮಾಳ್ಕುಂ ಸಹಜಂ॥
ಕೋಪ ಪ್ರಸಾದಮೆಂದೊಡೆ।
ಶಾಪಾನುಗ್ರಹ ಸಮರ್ಥರಲ್ಲರೆ ಕವಿಗಳ್॥

ಕಡುಗರಿದಯುಶಂ ಪೆಸರಿಡೆ।
ಕಡುವಿಳಿದಾಯಿತ್ತು ಕೀರ್ತಿ ಕವಿಗಳ್ ಕರಿದೆಂ॥
ದೊಡೆ ಕರಿದವರ್ಗಳ್ ಬಿಳಿದೆಂ।
ದೊಡೆ ಬಿಳಿದೇಕವರನುರದೆ ಕಿಡುವರ್ ಕೆಲಬರ್॥

ಸುಭಗ ಕವಿ ವೃಷಭ ಶುಭದ।
ಸ್ವಭಾವ ಸರಸ ಪ್ರಬಂಧ ಬಂಧುರ ಗುಣ ಸೌ॥
ರಭಮಂ ಪೊತ್ತೆಸಗುವ ವಾ।
ಗ್ವಿಭವಮುಮುಂಟಾದೊಡವನೆ ಸೇವ್ಯಂ ಜಗದೊಳ್॥

ಅದರಿಂ ಜಸಮಂ ಪಡೆವೊಡೆ।
ವಿದಗ್ಧ ಕವಿ ವೃಷಭನೆನಿಪ್ಪುದೇಗೆಯ್ದುಮುದಾ॥
ಗದೊಡೆ ಗುಣಿಯಪ್ಪುದದುಮಾ।
ಗದೊಡೊಪ್ಪುವ ಚಾಗಿಯಪ್ಪುದಪ್ಪೊಡೆ ಪುರುಷಂ॥　　(ನೇಮಿಚಂದ್ರ)

ಜಿ. ಪಿ. ರಾಜರತ್ನಂ, ಬಿ.ಎ.

# *ರನ್ನ ಮಹಾಕವಿಯ ಅಜಿತ ತೀರ್ಥಂಕರ ಪುರಾಣ ತಿಲಕಂ

ಕವಿ ರನ್ನನ 'ಗದಾಯುದ್ಧ'ವನ್ನು ಓದುವುದಕ್ಕಿಂತ ಮುಂಚೆ 'ಅಜಿತ ಪುರಾಣ' ವನ್ನು ಓದಿ ಆಮೇಲೆ 'ಗದಾಯುದ್ಧ'ವನ್ನು ಓದಬೇಕೆಂದು ನಿರ್ಧರಿಸಿ ಅಜಿತ ಪುರಾಣ ವನ್ನು ಓದತೊಡಗಿ ಅದನ್ನು ಮುಗಿಸುವದರೊಳಗಾಗಿ ಗದಾಯುದ್ಧವನ್ನು ಓದ ಬೇಕೆಂಬ ನಮ್ಮ ಆಶೆಯು ಖಂಡಿತವಾಗಿಯೂ ಅಳಿದುಹೋಗುವುದು. ಈ ಆಶಾ ಭಂಗವು ಈ ಪುರಾಣ ಪಠನದಿಂದ ಪ್ರಾಪ್ತಿಯಾದ ಹೃದಯದ ಆಪ್ಯಾಯನದಿಂದಲ್ಲ; ಆಕಳಿಸುತ್ತ ತೂಕಡಿಸುತ್ತ ಇರುವ ಸ್ಥಿತಿಯಲ್ಲಿ ಹೇಳುವ ಮಾತು. ಆದುದರಿಂದಲೇ, ಪಂಡಿತ ಪ್ರಮುಖರಾದ, 'ರನ್ನ ಕವಿ ಪ್ರಶಸ್ತಿ'ಯನ್ನು ಲೋಕದಲ್ಲಿ ಬೆಳಗಿದ, ಮಹಾ ಶಯರು ಅಜಿತಪುರಾಣದ ಗೋಜಿಗೆ ಅಷ್ಟೊಂದು ಹೋಗಿಲ್ಲ. ಎಂದರೇನು? ಅದು ಮತಸಂಬಂಧವಾದುದು, ಆದುದರಿಂದ ಅದರ ವಿಷಯವಾಗಿ ಹೆಚ್ಚು ಪ್ರಸ್ತಾವ ಮಾಡಲಿಲ್ಲ ಎನ್ನಬಹುದು. ಅಹುದು, ಇದನ್ನೂ ಪುರಾಣವೆಂದೇ ಒಪ್ಪಿಕೊಳ್ಳೋಣ; ಪಂಪನೂ ಪೊನ್ನನೂ ಇನ್ನೂ ಇತರರೂ ಇದೇ ತೆರನಾದ ಪುರಾಣಗಳನ್ನು ರಚಿಸಿ ದ್ದಾರೆ. ಆದರೆ ಇವರಂತೆ ರನ್ನನು ಪುರಾಣ ಕಥಾ ನಿರೂಪಣೆಯಲ್ಲಿ ಎಷ್ಟರ ಮಟ್ಟಿಗೆ ಕೃತಕಾರಿಯಾಗಿದ್ದಾನೆ ಎಂಬುದನ್ನು ಪರ್ಯಾಲೋಚಿಸಬೇಕು. ಯಾವ ಕವಿಯು ಗದಾಯುದ್ಧವನ್ನು ಬರೆದು ಆರಾತೀಯ ಕವೀಶ್ವರರ ತಲೆಯನ್ನು ಮೆಟ್ಟಿ ಕವಿ ಕುಲ ಪಿತಾಮಹನಾದ ಪಂಪನನ್ನೂ ಲಕ್ಷಿಸದೆ ಅವನ ಮೇಲೆಯೂ ಹಾರಿಹೋಗಿದ್ದಾನೆಯೋ ಅದೇ ಕವಿಯು ಈ ಪುರಾಣ ಪ್ರಪಂಚದಲ್ಲಿ ಎಲ್ಲಿ ಮಂಡಿತನಾಗಿರುವನು? ಗದಾಯುದ್ಧ ಪಂಪ ಭಾರತಗಳನ್ನು ಹೋಲಿಸಿದರೆ ರನ್ನನು ಪಂಪನಿಗೆ ಋಣಿಯಾಗಿರುವನೆಂದು ತೋರಿದರೂ, ತನ್ನ ಕುಶಲತೆಯಿಂದ ಆ ಋಣ ಭಾರವನ್ನು ಕೊನೆಗಾಣಿಸಿ ಪಂಪ ನನ್ನೂ ಕೆಲವೆಡೆಯಲ್ಲಿ ಮೀರಿಸಿದ್ದಾನೆ. ಆದರೆ, ಪಂಪನನ್ನು ಮಾತ್ರ ಯಾರೂ ಅವನ ಸ್ಥಾನದಿಂದ ತಳ್ಳುವ ಹಾಗಿಲ್ಲ. ಅವನ ಗಾಂಭೀರ್ಯವೂ ಗೌರವವೂ ಅಚಲವಾಗಿ, ಇದ್ದಲ್ಲಿಯೇ ಉಳಿದು, ಅವನು ನಮ್ಮಿಂದ ವಂದನೀಯನಾಗಿಯೇ ಇದ್ದಾನೆ. 'ಸಾಹಸ ಭೀಮ ವಿಜಯ'ವನ್ನು ಓದಿದಮೇಲೆಯೂ 'ವಿಕ್ರಮಾರ್ಜುನ ವಿಜಯ'ವನ್ನು ಓದಿ ನಾವು ಮೊದಲಿನ ಹಾಗೆಯೇ ಆನಂದವನ್ನು ಪಡೆಯಬಹುದು; ನಮ್ಮ ಸಂತೋಷಕ್ಕೆ ಕಿಂಚಿತ್ತಾದರೂ ನ್ಯೂನತೆಯುಂಟಾಗುವುದಿಲ್ಲ. ಆದರೆ 'ಅಜಿತ ಪುರಾಣ' 'ಆದಿ ಪುರಾಣ'ಗಳು ಹೀಗೆಯೇ? ಪಂಪನ ಸ್ಥಾನವೆಲ್ಲಿ? ರನ್ನನ ಸ್ಥಾನವೆಲ್ಲಿ? ಗದಾ ಯುದ್ಧವನ್ನು ಬರೆದು ಯಾವ ರನ್ನನು ಪಂಪನ ಮುಂದೆ ಹಾರಿಹೋಗಿರುವನೋ ಅವನೇ ಅಜಿತಪುರಾಣದಿಂದ ಪಂಪನ ಮುಂದೆ ಅಧಃಪಾತಾಳಕ್ಕೆ ಬಿದ್ದಿದ್ದಾನೆ. ತಾನೇನೋ ಧಾರ್ಷ್ಟ್ಯದಿಂದ 'ಶಾಂತಿ ಪುರಾಣ'ದ ಜೊತೆಗೆ, ತನ್ನದಾದ 'ಅಜಿತ

* ೧೬ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಪುರಾಣ'ವೂ ಪಂಪನ 'ಆದಿಪುರಾಣ'ದ ಸಮಕ್ಕೆ ಬರಲರ್ಹವೆಂದು ಕೊಚ್ಚಿಕೊಂಡು, ಪಂಪನ ಸಮ ಸ್ಥಾನವನ್ನು ಪಡೆಯಲು ಹೆಣಗಿದ್ದಾನೆ; ಅಷ್ಟೇ ಅಲ್ಲ, ಕಂಠೋಕ್ತ ವಾಗಿ—

ಕವಿಗಳವರಿರ್ವರೇ ಪು
ಣ್ಯವಂತರಿರ್ವರೇ ಕೃತಾರ್ಥರಿರ್ವರೆ ಸುಭಗರ್ ।
ಕವಿತಾಗುಣಾರ್ಣವಂ ಮೇಣ್
ಕವಿರತ್ನಂ ಮೇಣ್ ಗುಣಕ್ಕೆ ಮಚ್ಚರಮುಂಟೇ ॥

ಎಂದು ಹೀಗೆ ಹೇಳಿಕೊಳ್ಳುವುದರಿಂದ ಪಂಪನನ್ನು ಕೇವಲ ಅನುಗ್ರಹ ದೃಷ್ಟಿಯಿಂದ ಉದ್ಧರಿಸುವ ಹಾಗೆ ಗುಣಕ್ಕೆ ಮಚ್ಚರಮುಂಟೇ? ಎಂದು ಬಹಳ ಉದಾರ ಬುದ್ಧಿ ಯಿಂದ, 'ಪಂಪನೂ ಬಾಧಕವಿಲ್ಲ' ಎಂದು ಒಪ್ಪಿಕೊಂಡಂತೆ ತೋರಿಸಿಕೊಂಡಿದ್ದಾನೆ. ತನ್ನಷ್ಟಕ್ಕೆ ಹೀಗೆ ಹೇಳಿಕೊಂಡುದಲ್ಲದೆ—

. . . . . . . . . . . . . . . . . ।
. . . . . . . . . . .ಫಣಿ ತತಿಯ ಫಣಾ ॥
ರತ್ನಮುಮಂ ರನ್ನನ ಕೃತಿ ।
ರತ್ನಮುಮಂ ಪೇಳ್ ಪರೀಕ್ಷಿಸಂಗೆಂಟೆರ್ದೆಯೇ ॥

ಎಂದು ಓದುವವರನ್ನು ಮೊದಲೇ ಹೆದರಿಸಿದ್ದಾನೆ. ಈ ಬೆದರಿಕೆಯ ಬಂಡವಳವು ಅಜಿತಪುರಾಣವನ್ನು ಓದಿದಮೇಲೆ ಪೂರ್ತಿಯಾಗಿ ಬಯಲಿಗೆ ಬರುವುದು. ಸಾಧು ಗಳೂ ಪಂಡಿತರೂ ಆದ ಹಿರಿಯರನ್ನು ಬೆದರಿಸಿದ ಈತನು ಸಾಮಾನ್ಯ ಕವಿಯೇ?

ಕವಿಚಕ್ರವರ್ತಿಯಾದ ರನ್ನನನ್ನು ಹೀಗೆಲ್ಲ ಹೇಳಬಹುದೇ? ಇದು ಕೇವಲ ಅಸೂಯೆಯಿಂದಲೋ, ಇಲ್ಲವೆ ಅವನ ಗ್ರಂಥವನ್ನು ಓದಿ ಸರಿಯಾಗಿ ಅರ್ಥ ಮಾಡಿ ಕೊಳ್ಳಲು ಸಾಧ್ಯವಿಲ್ಲದೆಯೋ ಹೀಗೆ ಹೇಳಿರಬೇಕೆಂದು ಊಹಿಸಲು ಅವಕಾಶವಿದೆ. ಏಕೆಂದರೆ, ರನ್ನನು ಗದಾಯುದ್ಧವನ್ನು ಬರೆದು ಅಷ್ಟೊಂದು ಖ್ಯಾತಿಯನ್ನು ಪಡೆ ದಿದ್ದಾನೆ; ಅದು ಅವನಿಗೆ ಸರಿಯಾದ ಸ್ಥಾನವನ್ನೂ ಕೊಟ್ಟಿದೆ; ಅಲ್ಲಿರುವ ಅವನನ್ನು ಯಾರೂ ಯಾವ ಆಕ್ಷೇಪಣೆಗಳೂ ಕೆಳಕ್ಕಿಳಿಸಲಾರವು. ಇಂತಹವನ ವಿಷಯವಾಗಿ ಚರ್ಚಿಸಬೇಕಾದರೆ ನಿಜವಾಗಿಯೂ 'ಎಂಟೆರ್ದೆ'ಯೇ ಬೇಕು. ರನ್ನನ ಗದಾಯುದ್ಧ ವನ್ನು ಓದಿದಮೇಲೆ ಎಂತಹವನಿಗೂ ಅಸೂಯೆಯುಂಟಾಗುವುದು. ಈ ಅಸೂಯೆಯು ಉದ್ಗಾರವನ್ನು ಹುಟ್ಟಿಸತಕ್ಕುದಲ್ಲ; ಅಲ್ಲಿಯ ಅಸೂಯೆಯು ಪವಿತ್ರವಾದುದು. ಇನ್ನು, ಅರ್ಥಮಾಡಿಕೊಳ್ಳುವ ವಿಚಾರ—ಅರ್ಥವಾಗದಹಾಗೆ ಜಗಿಕಟ್ಟಾಗಿ ಬರೆದು ಪಾಂಡಿತ್ಯ ಪ್ರದರ್ಶನಕ್ಕೆ ಹೊರಡುವುದು ತಪ್ಪು. ಆದರೆ ರನ್ನನು ಅಜಿತಪುರಾಣ ವನ್ನು ಅರ್ಥವಾಗದಂತೆ ಬರೆದಿಲ್ಲ; ರನ್ನನಿಗೆ ಕ್ಲಿಷ್ಟವಾಗಿ ಬರೆಯುವುದಕ್ಕೆ ಬಾರದೆಂದೇ ನಮ್ಮ ಅಭಿಪ್ರಾಯ. ಆದರೆ, ಇಲ್ಲಿ ಕ್ಲಿಷ್ಟವಾಗಿಯೇ ಬರೆಯಬೇಕೆಂದು ಪ್ರಯತ್ನ ಪಟ್ಟಂತೆ ತೋರುತ್ತದೆ. ಹಾಗಿಲ್ಲದಿದ್ದರೆ ಕೊನೆಯಲ್ಲಿ ಅವನು ಹೀಗೆ ಹೇಳುತ್ತಿರ ಲಿಲ್ಲ.—

ಇನಿತುಪಪತ್ತಿಯಿಲ್ಲಿನಿತು ಬಿನ್ನಣಮಿಲ್ಲಿನಿತರ್ಥ ದೃಷ್ಟಿಯಿ ।
ಲ್ಲಿನಿತುಚಿತೋಕ್ತಿಯಿಲ್ಲಿನಿತಳಂಕೃತಿಯಿಲ್ಲಿನಿತಾಗಮಾರ್ಥಮಿ ॥
ಲ್ಲಿನಿತುವರಂ ಪ್ರಬೋಧಮುಣಮಿಲ್ಲ ಪೆಱರ್ಗಿದು ಕಾವ್ಯ ರತ್ನಮಂ ।
ಘನಮೆನೆ ಮೆಚ್ಚಿ ಬಣ್ಣಿಸಿದರಾರ್ ಕವಿರತ್ನನ ಕಾವ್ಯ ರತ್ನಮಂ ॥

ಹೀಗೆ ಹೇಳಿಕೊಂಡಿರುವನಾದರೂ ನೈಜ ಗುಣವು ಎಂದಿಗೂ ಮರೆಯಾಗದು. ಅವನು ಸ್ವಭಾವತಃ ಸರಳತಾ ಪ್ರಿಯನು. ಲಲಿತವಾಗಿ ಸುಲಭವಾಗಿ ಬರೆಯುವುದು ಅವನ ರಕ್ತದಲ್ಲಿ ಸೇರಿಬಿಟ್ಟಿರುವುದು. ಆದರೆ ಕಲಿತ ಗುಣ ಕಲ್ಲುಹಾಕಿದರೂ ಹೋಗದು ; ಅದು ನೈಜವಾದ ಸರಳತೆಯೊಡನೆ ಬೆನ್ನು ಹತ್ತಿ ಬರುತ್ತಲೇ ಇರುವುದು. ಇದರಿಂದ, ಇವನ ಈ ಗ್ರಂಥವು ಒಟ್ಟಿನಲ್ಲಿ, 'ಕೂಸಿನ ತಲೆಯಲ್ಲಿ ಬಿಣ್ಪೊಱೆಯನ್ನು ಇಟ್ಟವೊಲ್' ಆಗಿದೆ. ಅದು ಕ್ಲಿಷ್ಟವಾಗಿಲ್ಲ, ಭಾರವಾಗಿದೆ; ಅರ್ಥವಾಗದಂತಿಲ್ಲ, ಅಸಮರ್ಪಕವಾಗಿದೆ.

ಅಜಿತ ಪುರಾಣವು ಕೇವಲ ಪುರಾಣವೆಂದೇ ಗ್ರಹಿಸೋಣ. ಪುರಾಣದಲ್ಲಿ ಕಾವ್ಯದ ರಮ್ಯತೆಯನ್ನು ಇಚ್ಛಿಸುವುದು, 'ಮೊರಡಿಯೊಳ್ ಮಾದುಫಳಮನರಸಿದವೊಲ್' ಎಂದು ಇಟ್ಟುಕೊಳ್ಳೋಣ. ಆದರೆ, ಕಾವ್ಯವಾಗಲಿ ಪುರಾಣವಾಗಲಿ ಹೇಳುವುದನ್ನು ಮಾತ್ರ ಮನದಟ್ಟಾಗುವಂತೆ, ಸರ್ವಸಮ್ಮತವಾಗುವಂತೆ ಹೇಳಬೇಕಾದುದು ಆವಶ್ಯಕವಲ್ಲವೇ? ಎರಡನೆಯ ತೀರ್ಥಂಕರರಾದ ಅಜಿತ ಮಹಾಮುನಿಗಳ ಚರಿತ್ರೆಯು ಪರಮ ಪವಿತ್ರವಾದುದು. ತೀರ್ಥಂಕರರ ಅವತಾರವಾಗುವುದಾದರೋ ಲೋಕದ ಅಧರ್ಮವನ್ನು ನಿರ್ಮೂಲ ಮಾಡಿ, ಧರ್ಮಸಂಸ್ಥಾಪನೆಯನ್ನು ಮಾಡುವುದಕ್ಕಾಗಿ. ತಾವು ಆದರ್ಶಕಪ್ರಾಯರಾಗಿ, ಸಕಲ ಜೀವಿಗಳೂ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಉಪದೇಶ ಮಾಡಿ ಅವರನ್ನು ಕರ್ಮಶೃಂಖಲೆಯಿಂದ ಪಾರುಗಾಣಿಸಿ ಮೋಕ್ಷಲಾಭವನ್ನೂ ಪರಮಪದ ಪ್ರಾಪ್ತಿಯನ್ನೂ ಉಂಟುಮಾಡುವುದೇ ಆ ಮಹಾ ಪುರುಷರ ಅವತಾರದ ಮೂಲ ತತ್ತ್ವ. ಅಂತಹ ಪಾವನಾತ್ಮರ ಜೀವನವನ್ನೂ, ಅವರ ಕಾರ್ಯಕಲಾಪಗಳನ್ನೂ, ಅವರು ಕಂಡ ಸುಖ ದುಃಖಗಳನ್ನೂ, ಸತ್ಕಾರ್ಯದಲ್ಲಿ ಅಡ್ಡಿಯಾಗಿ ಬಂದ ಎಡರುಗಳನ್ನೂ ಅವರು ಹೇಗೆ ನಿವಾರಣೆ ಮಾಡಿ ಧರ್ಮಸಂಸ್ಥಾಪನೆಯನ್ನು ಮಾಡಿದರೆಂಬುದನ್ನೂ, ಪಂಡಿತ ಪಾಮರರ, ಆಸ್ತಿಕ ನಾಸ್ತಿಕರ ಹೃದಯದಲ್ಲಿ ಅಚ್ಚೊತ್ತಿದ ಹಾಗೆ ನಿರೂಪಿಸುವುದೇ ಅಂತಹ ಮಹಾತ್ಮರ ಜೀವನ ಚರಿತ್ರೆಯನ್ನು ಬರೆಯುವವನ ಮುಖ್ಯ ಕರ್ತವ್ಯ. ಈ ಮಾದರಿಯ ಪುರಾಣಗಳು ವೀರಶೈವ ಗ್ರಂಥ ರಾಶಿಯಲ್ಲಿ ಹೇರಳವಾಗಿ ಕಂಡು ಬರುವುವು. ಆದುದರಿಂದಲೇ ಅವುಗಳಲ್ಲಿ ಕೆಲವು ಸರ್ವರಿಂದಲೂ ಶ್ಲಾಘನೀಯವಾಗಿರುವುವು; ಆದರೆ ರನ್ನನ ಅಜಿತಪುರಾಣವು ಇಂತಹ ಉಪಕಾರವನ್ನುಂಟುಮಾಡುವುದಿಲ್ಲ.

ಎರಡನೆಯ ಆಶ್ವಾಸದಿಂದ ಪುರಾಣ ನಿರೂಪಣೆಯು ಆರಂಭವಾಗುವುದು. ಆರಂಭವೇನೋ ಎಲ್ಲಾ ಪುರಾಣಗಳ ಹಾಗೆ; ಸಂಸ್ಕೃತವಾದರೆ, "ಅಥ ಕಥಾ ಪ್ರಾರಂಭೇ", ಕನ್ನಡವಾದರೆ "ಅದೆಂತೆಂದೊಡೆ" ಎಂದು ಪ್ರಾರಂಭವಾಗುವುದು. ಆದರೆ, ಇತರ ಪುರಾಣಗಳಲ್ಲಿದ್ದ ಹಾಗೆ ಲೋಕ, ಸಮುದ್ರ ಇತ್ಯಾದಿ ವರ್ಣನೆಯನ್ನು ವಿಸ್ತರಿಸದೆ ಒಂದೆರಡು ಮಾತಿನಲ್ಲಿ ಮುಗಿಸಿಬಿಡುವುದು ಶುಭ ಸೂಚಕವಾಗಿ, ಓದು

ವವರಿಗೆ ಆನಂದವನ್ನು ಹುಟ್ಟಿಸುವುದು. ಹೀಗೆ ಮಾಡುವುದು ಆದಿ ಪಂಪನ ಮತವನ್ನು ಅನುಸರಿಸದೆ, ಪುರಾಣ ಸಮಯಕ್ಕೆ ಭಂಗವನ್ನು ತಂದಹಾಗೇನೋ ಆಗಬಹುದು; ಆದರೆ ಇದು ಬಾಧಕವಲ್ಲ. ಮುಂದೆ ಅಯೋಧ್ಯಾಪುರ ವರ್ಣನೆ ಬರುವುದು. ಮೊದಲು ವರ್ಣಿಸದೆ ಬಿಟ್ಟುದನ್ನೆಲ್ಲ ರನ್ನನು ಪುರವರ್ಣನೆಯಲ್ಲಿ ನೆರವೇರಿಸಿಕೊಂಡಿದ್ದಾನೆ. ಭೋಗವತಿಯನ್ನು ಕೊಚ್ಚಿಕೊಂಡುಹೋಗುವಂತೆ ಇರುವ ಅಟ್ಟಳೆ, ಪ್ರಾಕಾರ ಮೊದಲಾದ ಆ ಪುರದ ವರ್ಣನೆಯು ಹದಿನಾರು ಪದ್ಯವಾಗಿ ಹರಿಯುವುದು. ಅದನಾಳ್ವ ಪ್ರಭು ಜಿತಶತ್ರು, ಅವನ ಹೆಂಡತಿ ವಿಜಯಸೇನೆ. ಜಿತಶತ್ರುವಿನ ಹೆಸರು ಅನ್ವರ್ಥವಾಗುವಂತೆ ವರ್ಣಿಸಬೇಕೆಂದು ಕವಿಯು ಪ್ರಯತ್ನಪಟ್ಟಿರುತ್ತಾನೆ. ಇನ್ನು ವಿಜಯಸೇನೆ—ರಾಜಪತ್ನಿ—ಮುಂದೆ ಅಜಿತ ತೀರ್ಥಂಕರನು ಉದಯಿಸುವ ಪವಿತ್ರವಾದ ಗರ್ಭವನ್ನುಳ್ಳವಳು. ಅವಳ ವರ್ಣನೆಗೆ ೨೦–೨೫ ಪದ್ಯಗಳೂ ಬೇಡವೇ? ಅವಳ ಸೌಂದರ್ಯವನ್ನು ರನ್ನನು ವಿಸ್ತಾರವಾಗಿ ವರ್ಣಿಸಿರುವನು. ಅದೇನು ಶೃಂಗಾರವೋ! ಅದೇನು ವಿಲಾಸವೋ! ಅಜಿತತೀರ್ಥಂಕರನ ತಾಯಿಯಲ್ಲಿ ರನ್ನನ ಚಿತ್ರದಿಂದ ಭಕ್ತಿಯು ಹುಟ್ಟುವುದಕ್ಕೆ ಬದಲಾಗಿ ಅದಕ್ಕೆ ವ್ಯತ್ಯಾಸವಾದ ಆಭಾಸವುಂಟಾಗುವುದು. ಅವಳ 'ಅಂಗನಾ ಭಂಗಿಯಂ ಚಿತ್ರಿಸಿ ಚಿತ್ರಕ್ಕಾಯುವೊಯ್ದಂ ಮದನಂ'—ಈ ಉತ್ಪ್ರೇಕ್ಷೆ ಇಲ್ಲಿಯೇಕೆ? ಸಂದರ್ಭವಿಲ್ಲವೇ? ಯಾವ ಮನ್ಮಥನು ಅಜಿತ ತೀರ್ಥಂಕರನ ಪಾದದಲ್ಲಿ ಘರ್ಷಿಸಲ್ಪಡಬೇಕೋ ಆ ಮನ್ಮಥನೇ ಸ್ವಲ್ಪ ಮೊದಲು ಎಷ್ಟು ಅಟ್ಟಹಾಸದಿಂದಿರುವನು ನೋಡಿರಿ! ಹೋಗಲಿ; ಈ ವರ್ಣನೆಯಿಂದ ಮನಸ್ಸಿಗೆ ಏನಾದರೂ ಚಿತ್ರವುಂಟಾಗುತ್ತದೆಯೇ? ಇಲ್ಲವೇ ಇಲ್ಲ. ಪರಮ ವೈರಾಗ್ಯ ಶಿರೋಮಣಿಯಾದ ಅತ್ತಿಮಬ್ಬೆ ತಾನೆ ಇದನ್ನು ಹೇಗೆ ಮೆಚ್ಚಿದಳೋ ತಿಳಿಯದು. ಈ ಲಾವಣ್ಯಕ್ಕೆ ತಕ್ಕ ಪತಿ, ಪತಿಗೆ ತಕ್ಕ ಪತ್ನಿ, ಕೇಳಬೇಕೇನು! ಅನ್ಯೋನ್ಯ ಸಮತೆಯು ಆನಂದ ಭಾಜನವಷ್ಟೆ! ಒಂದೇ ಒಂದು ಕೊರತೆಯಿದ್ದಿತು, ಅದು ನಿವಾರಣೆಯಾಗಬೇಕಾಗಿದೆ. ಅದುವರೆಗೆ ಸುಖ ಲೋಲುಪತೆಯೇ ಉಭಯರಿಗೂ ಮುಖ್ಯ ಕರ್ತವ್ಯ!

ಜಿತಶತ್ರು ವಿಜಯಸೇನಾದೇವಿಯರನ್ನು ಹೀಗೆ ಸುಖ ಸಾಗರದಲ್ಲಿ ಲೋಲಾಡುತ್ತಿರುವಂತೆ ಬಿಟ್ಟು, ಕವಿಯು ಮುಂದೆ ಪಾಠಕರನ್ನು ಇನ್ನೊಂದು ದೇಶದ ಕಡೆಗೆ ಕರೆದುಕೊಂಡು ಹೋಗುತ್ತಾನೆ. ಮೊದಲಿನ ಹಾಗೆ ಇಲ್ಲಿ ದೇಶ ಕೋಶಗಳ ವರ್ಣನೆಯು ಬೇಕಾಗಿಲ್ಲ. ಆ ದೇಶದ ದೊರೆಯನ್ನು ಮಾತ್ರ ನಾವು ತಿಳಿದುಕೊಳ್ಳುವುದಾವಶ್ಯಕ. ಆ ದೊರೆಯನ್ನು ಮೊದಲು ನಾವು ನೋಡುತ್ತಲೆ ಅವನ ಬಾಯಿಯಿಂದ

ಆರಯೆ ಮೂತ್ರ ಪುರೀಷಾ
ಗಾರಂ ಸಂಪ್ರಾಪ್ತ ಸಪ್ತ ಧಾತು ವಿಕಾರಂ ।
ಚಾರು ಗುಣ ದೂರಮತಿನಿಷ
ದಾರು ಶರೀರಂ ದುರಂತ ದುಃಖಾಧಾರಂ ॥

ಎಂಬ ದೇಹದ ಅವಹೇಳನೆಯ ಪರಾಕಾಷ್ಠದಶೆಯ ಹಾಡನ್ನು ಕೇಳುವೆವು. ಅಲ್ಲಿಂದ ಮುಂದೆ ದೇಹದ ಕೊಳೆಯೂ ಅಸ್ಥಿರತೆಯೂ ಮಾನವನ ದುಃಖಪರಂಪರೆಗಳೂ ಬಹಳ ಹೃದಯಂಗಮವಾಗಿ ವರ್ಣಿತವಾಗಿವೆ; ವೈರಾಗ್ಯ, ದೇಹದ ಅನಾದರಣೆ, ಮೋಕ್ಷ,

ಹೆಣ್ಣು, ಮಣ್ಣು ಇವುಗಳ ಮೇಲಣ ಮೋಹ—ಇವುಗಳನ್ನು ಇವನಷ್ಟು ಲಲಿತವಾಗಿ ಮತ್ತಾರೂ ವರ್ಣಿಸಿಲ್ಲವೆಂದು ಹೇಳಬಹುದು. ರನ್ನನು ಒಂದು ಆಶ್ವಾಸವನ್ನು ಪೂರ್ಣವಾಗಿ ಇದಕ್ಕಾಗಿಯೇ ಉಪಯೋಗಿಸಿರುವನು. ಇಲ್ಲಿ ಇವನು ರಸ ಭರಿತವಾಗಿ ಅಚ್ಚಗನ್ನಡ ಶಬ್ದಗಳಲ್ಲಿ ವೈರಾಗ್ಯ ಪ್ರತಿಪಾದನೆ ಮಾಡಿರುವ ರೀತಿಯು ಬಹಳ ಆಶ್ಚರ್ಯಾವಹವಾಗಿದೆ. ಇದನ್ನು ಇಷ್ಟು ದೀರ್ಘವಾಗಿ ಬೆಳಸದೆ ಸಂಕ್ಷೇಪವಾಗಿ ಮುಗಿಸಿದ್ದರೆ ಇನ್ನೂ ಫಲಕಾರಿಯಾಗುತ್ತಿದ್ದಿತು ; ಹೇಳಿದ್ದನ್ನೇ ಹೇಳುತ್ತ ಬಹಳ ಲಂಪಿಸಿರುವನು. ಇವೆಲ್ಲವನ್ನೂ ನಾವು ಆ ದೊರೆಯ ಬಾಯಲ್ಲಿಯೇ ಕೇಳುತ್ತೇವೆ. ಈತನು ನಿರ್ವೇಗ ಪರನಾಗಿ ಸಂಸಾರ ತ್ಯಾಗ ಮಾಡಬೇಕು. ಅದರಂತೆಯೇ ಅವನು ಸಂಸಾರವನ್ನು ತ್ಯಾಗ ಮಾಡಿ ಈ ಲೋಕವನ್ನು ಬಿಟ್ಟು ಅಹಮಿಂದ್ರನಾಗಿ ಭೂಲೋಕದಲ್ಲಿ ಅಜಿತ ತೀರ್ಥಂಕರನಾಗಿ ಹುಟ್ಟಲು ಕಾಲ ನಿರೀಕ್ಷಣೆ ಮಾಡುತ್ತಿದ್ದು ಕೊನೆಗೆ ಅಪ್ಸರಸ್ತ್ರೀಯರಿಂದ ಶೋಧಿತವಾದ ವಿಜಯಸೇನೆಯ ಗರ್ಭದಲ್ಲಿ ಉದಯಿಸುವನು. ಈತನೇ ವಿಮಲವಾಹನನು.

ಇನ್ನು ಮುಂದೆ, ರನ್ನನು ಮೊದಲೇ ತನ್ನ ಗ್ರಂಥದಲ್ಲಿ ಹೇಳಿರುವಂತೆ, ಪಂಚ ಮಹಾ ಕಲ್ಯಾಣಗಳನ್ನೂ, 'ಸವಿಸ್ತರದಿಂ' ಜೈನ ಶಾಸ್ತ್ರ ರೀತಿಯ ಪ್ರಕಾರ ವರ್ಣಿಸಿ, ಕೊನೆಯಲ್ಲಿ ಸಗರ ಚಕ್ರವರ್ತಿಯ ಕಥೆಯನ್ನು ತಿಳಿಸಿ ಗ್ರಂಥವನ್ನು ಮುಗಿಸುವನು.

ಒಟ್ಟಿನಲ್ಲಿ, ಅಜಿತ ಪುರಾಣವು ಕಥಾ ಸೃಷ್ಟಿಯಲ್ಲಾಗಲಿ, ಪಾತ್ರ ರಚನೆಯಲ್ಲಾಗಲಿ, ರಸ ನಿರೂಪಣದಲ್ಲಾಗಲಿ, ಶೈಲಿಯಲ್ಲಾಗಲಿ ಗದಾಯುದ್ಧದ ಸಮದಂಡಿಗೆ ಬರಲಾರದು. ಅಜಿತ ಪುರಾಣದಲ್ಲಿ ಜೈನ ಪೌರಾಣಿಕ ಭಾಗಗಳನ್ನೂ ಆಗಮಿಕ ಭಾಗಗಳನ್ನೂ ಬಿಟ್ಟರೆ ಕಾವ್ಯ ಭಾಗವು ಸುಮಾರು ಗ್ರಂಥದ ನಾಲ್ಕನೆಯ ಒಂದು ಭಾಗದಷ್ಟು ಸಿಕ್ಕುವುದು. ಇದರಲ್ಲಿಯೂ ವರ್ಣನಾ ರೀತಿಯಲ್ಲಿ ಹೊಸ ಮಾದರಿಯೇನೂ ತೋರುವುದಿಲ್ಲ. ಅಲಂಕಾರಗಳೆಲ್ಲವೂ ಕವಿ ಸಮಯವನ್ನನುಸರಿಸುತ್ತವೆ. ಮಹಾ ಕಾವ್ಯವನ್ನು ಮಾಡುವುದಕ್ಕಾಗಿ ಅಷ್ಟಾದಶ ವರ್ಣನೆಗಳು ಅಲ್ಲಲ್ಲಿ ಕಥೆಯ ಮಧ್ಯದಲ್ಲಿ ಸೇರಿಸಲ್ಪಟ್ಟಿವೆಯೇ ವಿನಾ, ಆಯಾ ವರ್ಣನೆಗಳು ಆ ಸ್ಥಳಗಳಲ್ಲಿ ಉಚಿತವೇ ಅನುಚಿತವೇ ಎಂಬುದನ್ನು ಕೂಡ ಅನೇಕ ಕಡೆಗಳಲ್ಲಿ ಪರ್ಯಾಲೋಚಿಸಿಲ್ಲ. ಗದಾಯುದ್ಧದಲ್ಲಿ ರನ್ನನು ಕಥಾ ನಿರೂಪಣೆಗೆ ಹೆಚ್ಚು ಗಮನಕೊಟ್ಟು, ವರ್ಣನಾ ಭಾಗವನ್ನು ತಗ್ಗಿಸಿ, ಕಥಾ ಸನ್ನಿವೇಶಗಳಿಂದಲೇ ರಸೋತ್ಪಾದನೆಯನ್ನು ಮಾಡಿರುವನು. ಆದರೆ, ಅಜಿತ ಪುರಾಣದಲ್ಲಿ ವರ್ಣನಾ ಭಾಗಕ್ಕೆ ಹೆಚ್ಚು ಗಮನಕೊಟ್ಟಿರುವುದರಿಂದ ಕಾವ್ಯ ಭಾಗದ ಮಧ್ಯದಲ್ಲಿ ಅಕಾವ್ಯ ಭಾಗವು ಕೃತಕವಾಗಿ ಸೇರಿ ನೀರಸವಾಗಿರುವುದು.

ಅಲ್ಲದೆ, ರನ್ನನ ಅಜಿತ ಪುರಾಣದಲ್ಲಿ ಬರುವ ವರ್ಣನೆಗಳಲ್ಲನೇಕವು ಪಂಪನಿಂದಲೂ ಪೊನ್ನನಿಂದಲೂ ಸಂಗ್ರಹಿಸಿದುವು. ಪೊನ್ನನು ಬರೆದಿರುವ ಶಾಂತಿಯ ದಿಗ್ವಿಜಯವನ್ನು ರನ್ನನು ಯಥಾವತ್ತಾಗಿ ಅನುಸರಿಸಿ ಸಂಗ್ರಹ ಮಾಡಿ ವಚನರೂಪದಲ್ಲಿ ಬರೆದಿರುವನು. ಪೊನ್ನನ ಎಷ್ಟೋ ಪದಗಳೂ ವಾಕ್ಯಗಳೂ ಅಜಿತ ಪುರಾಣದಲ್ಲಿ ಕಂಡು ಬರುವುವು. ಷೋಡಶ ಸ್ವಪ್ನ, ಅವುಗಳ ಫಲ, ದ್ವಾದಶಾನುಪ್ರೇಕ್ಷೆ ಮೊದಲಾದ ಜೈನ ಧಾರ್ಮಿಕ ವಿಷಯಗಳು ಆದಿ ಪುರಾಣ ಮತ್ತು ಶಾಂತಿ ಪುರಾಣಗಳಿಂದ ಸಂಗ್ರಹೀತವಾದುವು. ಈ ಅಜಿತ ಪುರಾಣಕ್ಕೆ ಚಾವುಂಡರಾಯ ಪುರಾಣದ ಅಜಿತನಾಥನ ಕಥೆಯು

ಬಹು ಮಟ್ಟಿಗೆ ಆಧಾರವಾಗಿದೆಯೆಂದು ಹೇಳಬಹುದು. ಅಲ್ಲಿ ಇದೇ ಕಥೆಯು ಮೂರೇ ಮೂರು ಪುಟಗಳಲ್ಲಿ ವರ್ಣಿತವಾಗಿದೆ. ಅಜಿತಪುರಾಣದ ಕಥಾ ಭಾಗವನ್ನು ಮಾತ್ರ ಆರಿಸಿಕೊಂಡು ಜೋಡಿಸಿದರೆ ಇದಕ್ಕಿಂತ ಹೆಚ್ಚಾಗಿ ಆಗಲಾರದು. ಹಾಗೆ ಜೋಡಿಸಿದ ಕಥಾ ಭಾಗಗಳಲ್ಲಿ ಅನೇಕಗಳು ಅಕ್ಷರಶಃ ಚಾವುಂಡರಾಯನದೇ ಆಗಿರುತ್ತವೆ.

ಇನ್ನು, ರನ್ನನ ಅಜಿತಪುರಾಣದ ಪಾತ್ರಗಳ ಮತ್ತು ಶೈಲಿಯ ವಿಚಾರ: ಅಜಿತ ಪುರಾಣದ ಪಾತ್ರಗಳೆಲ್ಲವೂ ನೀರಸವಾದ ಪೌರಾಣಿಕ ವ್ಯಕ್ತಿಗಳು; ಒಂದಾದರೂ ಸಜೀವವಾಗಿಲ್ಲ. ಪಾತ್ರಗಳಲ್ಲಿ ಸಂಭಾಷಣೆಯಿಲ್ಲ; ಪಾತ್ರಗಳ ಭಾವಗಳನ್ನೂ ಆವೇಶಗಳನ್ನೂ ಪಾಠಕನು ಗ್ರಹಿಸುವಂತಿಲ್ಲ. ಆದರೆ ಪಂಪನ ಆದಿಪುರಾಣದಲ್ಲಿ ಹೀಗಿಲ್ಲ: ಪಂಪನು ಕಥಾಂಶವನ್ನು ವಿಸ್ತರಿಸಿ ಕಥಾ ಶರೀರದಲ್ಲಿ ಆಯಾ ಪಾತ್ರಗಳೂ ಆಯಾ ಸಂದರ್ಭಗಳಲ್ಲಿ ಅನುಭವಿಸುವ ರಸಗಳನ್ನು ಕನ್ನಡಿಸಿರುವುದರಿಂದ ವಾಚಕನಿಗೆ ಪಾತ್ರಗಳ ಸ್ವರೂಪವನ್ನು ತಿಳಿದುಕೊಳ್ಳಲು ಅನುಕೂಲವಾಗುವುದು. ಗ್ರಂಥವು ಲಂಬಿಸುವುದೆಂಬ ಭಯದಿಂದಲೋ ಏನೋ ರನ್ನನು ಕಥಾ ಭಾಗವನ್ನು ಸಂಗ್ರಹಿಸುವುದಕ್ಕೆ ಹೋಗಿರುವುದರಿಂದ ಅವನ ಪಾತ್ರಗಳು ತಮ್ಮ ಸ್ವರೂಪವನ್ನು ವ್ಯಕ್ತಪಡಿಸಿಕೊಳ್ಳಲಾರದೆ ನೀರಸಗಳಾಗಿರುವುವು.

ರನ್ನನು ತನ್ನ ವರ್ಣನೆಗಳಲ್ಲೆಲ್ಲ ಸಂಸ್ಕೃತ ಶಬ್ದಮಯವಾದ ಗದ್ಯವನ್ನು ತುಂಬಿ ಬರೆದಿರುತ್ತಾನೆ. ಕೆಲವೆಡೆಯಲ್ಲಂತೂ ಗದ್ಯವು ಬಹಳ ದೊಡ್ಡದಾಗಿ, ಒಟ್ಟಿಗೆ ಏಳು ಪುಟದಷ್ಟು ಕೂಡ ಆಗುವುದು. ಈ ಗದ್ಯಗಳಿಂದ ವಾಚಕನಿಗೆ ಸ್ವಲ್ಪವೂ ಪ್ರಯೋಜನವಿಲ್ಲ, ಮನಸ್ಸಿಗೆ ಯಾವ ವಿಧವಾದ ಚಿತ್ರವೂ ಭಾಸವಾಗುವುದಿಲ್ಲ, ತತ್ತ್ವನಿರೂಪಣವೂ ಸರ್ವರಿಗೂ ಬೋಧವಾಗುವ ರೀತಿಯೂ ಮೊದಲೇ ಇಲ್ಲ; ಅಲ್ಲಿರುವುದೆಲ್ಲ ಒಂದು ದೊಡ್ಡ ಜೈನ ಪ್ರಕ್ರಿಯೆಗಳ ಪಟ್ಟಿ; ಜೈನರೇ ಆದರೂ ಬೇರೆ ಗ್ರಂಥಗಳಿಂದ ಈ ಪ್ರಕ್ರಿಯೆಗಳನ್ನು ತಿಳಿದುಕೊಂಡಿಲ್ಲದ ಪಕ್ಷದಲ್ಲಿ, ಅಜಿತಪುರಾಣದ ಪ್ರಕ್ರಿಯೆಗಳು ಏನೂ ಅರ್ಥವಾಗುವಂತಿಲ್ಲ; ಎಂದಮೇಲೆ, ಇತರ ಪಾಮರರಿಗೆ ಜೈನ ಮತದ ತತ್ತ್ವಗಳನ್ನು ಅಜಿತ ಪುರಾಣದಿಂದ ತಿಳಿದುಕೊಳ್ಳುವುದು ಹೇಗೆ ತಾನೆ ಸಾಧ್ಯ?

ಒಟ್ಟಿನಲ್ಲಿ, ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಅಜಿತ ಪುರಾಣವು ಉತ್ತಮ ಕಾವ್ಯವೆನಿಸಿಕೊಳ್ಳಲು ಅರ್ಹವಾಗಿಲ್ಲ. ಇದನ್ನು ಓದಿದಮೇಲೆ ಒಮ್ಮೊಮ್ಮೆ, ರನ್ನನು ಗದಾಯುದ್ಧವನ್ನು ಬರೆಯದಿದ್ದರೆ ಇಷ್ಟರಿಂದಲೇ ಕವಿಚಕ್ರವರ್ತಿಯೆಂದೆನ್ನಿಸಿಕೊಳ್ಳಲು ಅರ್ಹನಾಗುತ್ತಿದ್ದನೇ ಎಂಬ ಸಂಶಯವು ಹುಟ್ಟುವುದು. ಆದರೆ, ಅಜಿತಪುರಾಣವು ಅಷ್ಟು ನೀರಸವಾಗುವುದಕ್ಕೆ ಕಥಾ ವಿಷಯವೂ ಆ ಕಾಲದ ಪಂಡಿತರ ಮನೋಭಾವವೂ ಸ್ವಲ್ಪ ಕಾರಣವಾಗಿದೆಯೆಂದು ಹೇಳಬಹುದು. ಆದರೂ ರನ್ನನು ಗದಾಯುದ್ಧದಂತಹ ಇನ್ನೊಂದು ವಿಷಯವನ್ನು ತೆಗೆದುಕೊಂಡು ಅಜಿತಪುರಾಣಕ್ಕೆ ಪಟ್ಟಶ್ರಮವನ್ನೆಲ್ಲ ಅದಕ್ಕೆ ವ್ಯಯ ಮಾಡಿದ್ದರೆ ಅವನ ಕೀರ್ತಿಯು ಇತೋಪ್ಯತಿಶಯವಾಗಿ ಬೆಳಗುತ್ತಿದ್ದಿತೆಂದು ಹೇಳುವುದರಲ್ಲಿ ಏನೂ ಸಂಶಯವಿಲ್ಲ.

ಎಸ್. ಅನಂತರಂಗಾಚಾರ್, ಎಂ.ಎ.

# ಗ್ರಂಥ ವಿಮರ್ಶೆ

## ೧. ಮಾರ್ದನಿ

ಬರೆದವರು.—ಶ್ರೀನಿವಾಸ ವೆಂಕಟೇಶ ಗಲಗಲಿ, ವಿಜಾಪುರ.

ಕ್ರೌನ್ ಅಷ್ಟಪತ್ರ ಪುಟಗಳು ೪+೩೯ ; ವೈಭವ ಮುದ್ರಣಾಲಯ, ವಿಜಾಪುರ ; ೧೯೩೦ ; ಬೆಲೆ ೬ ಆಣೆ.

ಈ ಸಣ್ಣ ಪುಸ್ತಕದಲ್ಲಿ ಹದಿನೇಳು ಕವಿತೆಗಳಿವೆ. ಷಟ್ಪದಿ ಶೈಲಿಯಲ್ಲಿ ರಚಿತವಾಗಿರುವ 'ಹೂವಿನ ಗೊಂಚಲು', 'ಕರ್ಮ ಫಲ', 'ಗಂಧರ್ವ ಮೇಲು' ಮತ್ತು 'ನೋಟ' ಎಂಬ ಕವಿತೆಗಳನ್ನು ಬಿಟ್ಟರೆ ಉಳಿದುವೆಲ್ಲ ನೂತನ ಶೈಲಿಯಲ್ಲಿ ರಚಿತವಾದುವು. ಶ್ರೀಯುತ ಗಲಗಲಿಯವರು ನೂತನ ಶೈಲಿಯ ಗೀತೆಗಳ ಧಾಟಿಯನ್ನು ಚೆನ್ನಾಗಿ ತಿಳಿದಿರುವರೆಂದು ಧಾರಾಳವಾಗಿ ಹೇಳಬಹುದು. 'ತಾಳೀಕೋಟಿಯ ಕಾಳಗದಬ್ಬರ' ಮತ್ತು 'ನನ್ನ ಬೇಡಿಕೆ' ಚೆನ್ನಾಗಿವೆ. 'ಬೇಟೆ' ಮತ್ತು 'ಬಂಧು ಪ್ರೇಮ' ಎಂಬ ಗೀತೆಗಳಲ್ಲಿ ಬಿಡಿ ವೃತ್ತದ ಓಟವು ಮನೋಹರವಾಗಿರುವುದು.—

ನಿನ್ನನು ಕಾಣೆನು ; ಕಾಣುವೆ ನಿನ್ನಯ
ಚಿತ್ರವಿಚಿತ್ರದ ಕೃತಿಗಳನು ॥
ಕೇಳೆನು ನಿನ್ನಯ ನುಡಿಗಳಾ, ಕೇಳುವೆ
ನುಡಿಗಳ ಮಾರ್ದನಿ ಸೊಬಗನನು ॥ (ಕಾಲನೇ !)

ಮನುಜನಾಗಲು ಯೋಗ್ಯ ನಾನಿಲ್ಲದಿರೆ ತಂದೆ
ಕರಿನಾಡ ದೇಶದಲ್ಲಿ ॥
ಜನಿಸೆನ್ನ ಮರನಾಗಿ ! ಕಲ್ಲಾಗಿ !! ಮಣ್ಣಾಗಿ !!!
ನನ್ನ ತಾಯ್ನಾಡಿನಲ್ಲಿ ॥ (ನನ್ನ ಬೇಡಿಕೆ)

ಎಂಬ ಪದಗಳಲ್ಲಿ ಪ್ರಾಚೀನ ಮತ್ತು ಅರ್ವಾಚೀನ ಕವಿಗಳ ಭಾವಾನುಕರಣವನ್ನು ಕಾಣಬಹುದಾಗಿದೆ. ಒಂದು ವೇಳೆ ಶ್ರೀಯುತ ಗಲಗಲಿಯವರಿಗೆ ಈ ಭಾವಗಳು ಸಹಜವಾಗಿಯೇ ತಲೆದೋರಿರಬಹುದು.

ನೂತನ ಶೈಲಿಯು ತಲೆಯೆತ್ತುತ್ತಿರುವ ಈ ಕಾಲದಲ್ಲಿ, ಆ ನೂತನ ಶೈಲಿಯ ಆಕ್ಷೇಪಕರು ಇಷ್ಟು ಹೆಚ್ಚಾಗಿರುವ ಈ ಕಾಲದಲ್ಲಿ, ನಿವಾರಣೀಯವಾದ ದೋಷಗಳನ್ನು ಸಾಧ್ಯವಾದ ಮಟ್ಟಿಗೆ ತೆಗೆದುಹಾಕುವುದು ಒಳ್ಳೆಯದು.— "ಮಮ ಮನೆ", "ಹಕ್ಕಿಜ್ಜಿ", "ಬಾಲುಮೆಯೆತ್ತಣ", "ಸತಾ ಶ್ರದ್ಧೆಯಲಿ" ಎಂಬ ಮುಂತಾದ ಪ್ರಯೋಗಗಳನ್ನು ಮಾಡಬಾರದಾಗಿತ್ತೆಂದು ನಾವು ಅಭಿಪ್ರಾಯ ಪಡುತ್ತೇವೆ.

ಎಂ. ಆರ್. ಶ್ರೀ.

## ೨. ಬಸವೇಶ್ವರನ ವಚನಗಳು

( ಶಿವಾನುಭವ ಗ್ರಂಥಮಾಲಾ, ಸಂ. ೧ )

ಸಂಪಾದಕರು.—ರಾವ್‌ಸಾಹೇಬ್ ಫ. ಗು. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ., ವಕೀಲ, ವಿಜಾಪುರ.

ಡೆಮ್ಮೈ ಅಷ್ಟಪತ್ರ ಪುಟಗಳು ೯+೨೧೭ ; ಹಿತಚಿಂತಕ ಪ್ರಿಂಟಿಂಗ್ ಪ್ರೆಸ್, ವಿಜಾಪುರ ; ಎರಡನೆಯ ಆವೃತ್ತಿ; ೧೯೩೦; ಬೆಲೆ ರೂ. ೧-೪-೦.

ಶ್ರೀಯುತ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. ಅವರು ವಚನ ಶಾಸ್ತ್ರದ ಮತ್ತು ವಚನ ಸಾಹಿತ್ಯದ ಮಹತ್ತ್ವವನ್ನು ಚಿಕ್ಕಮಗಳೂರಿನಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡಿಗರಿಗೆ ಮೊದಲು ಪರಿಚಯ ಮಾಡಿಕೊಟ್ಟರು. ಅದು ಈಗ್ಗೆ ಎಂಟು ವರ್ಷಗಳ ಮಾತು. ಕ್ರಿ. ಶ. ೧೯೨೩ರಲ್ಲಿ "ವಚನ ಶಾಸ್ತ್ರ ಸಾರ" ಎಂಬ ಗ್ರಂಥವನ್ನು ಅವರು ಪ್ರಕಟಿಸಿದಾಗ ಕರ್ಣಾಟಕ ಸಾಹಿತ್ಯಾಭಿಮಾನಿಗಳಿಗೆ ಒಂದು ಅಪೂರ್ವ ನಿಕ್ಷೇಪವು ದೊರೆತಂತಾಯಿತು. ಬಸವೇಶ್ವರಾದಿ ಮಹಿಮ ಪುರುಷರ ಚರಿತ್ರೆಗಳು ಪುರಾಣಗಳಲ್ಲಿ ರಚಿತವಾಗಿರುವುವಷ್ಟೆ! ಆ ಪುರಾಣಗಳಲ್ಲಿ ಪವಾಡಗಳೂ, ಪುರಾತನರ ಕಥೆಗಳೂ, ಉಪ ಕಥೆಗಳೂ ತುಂಬಿಹೋಗಿರುವುದರಿಂದ ಆ ಕಥಾ ನಾಯಕರ ಅಥವಾ, ಆ ಪುರಾಣ ನಾಯಕರ ಮೂರ್ತಿ ಸ್ವರೂಪವು ಸ್ಪಷ್ಟವಾಗಿ ಕಾಣುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಮತಾಭಿಮಾನದಿಂದ ಬರೆಯುವ ಕವಿಗಳು ಮಹಿಮ ನಿರೂಪಣೆ ಎಂದು ಉದ್ದೇಶಪಟ್ಟವು ಅನ್ಯಥಾ ಪರಿಣಾಮವಾಗಿರುವುದೂ ಉಂಟು. ಆದುದರಿಂದ, ಕೆಲ ಕೆಲವು ದುರಭಿಪ್ರಾಯಗಳಿಗೆ ಪುರಾಣಗಳು ಎಷ್ಟರಮಟ್ಟಿಗೆ ಕಾರಣಗಳಾಗಿವೆಯೆಂಬುದನ್ನು 'ಬಸವ ಪುರಾಣ'ದ ಒಂದು ದೃಷ್ಟಾಂತದಿಂದಲೇ ಹೇಳ ಬಹುದು. 'ವಚನ ಶಾಸ್ತ್ರ ಸಾರ'ವು ಪ್ರಕಟವಾಗಿ, ಆ ಮಹಿಮ ಪುರುಷರು ಸಾಕ್ಷಾತ್ತಾಗಿ ಆಡಿದ ವಚನಗಳೇ ನಮಗೆ ಲಭಿಸಿದಾಗ ನಿಜವಾದ ತಿಳಿವಳಿಕೆಯುಂಟಾಗಲು ಅವಕಾಶವಾಯಿತು; ಅದರಿಂದ ಅನೇಕ ದುರಭಿಪ್ರಾಯಗಳು ದೂರವಾದುವು.

ಕ್ರಿ. ಶ. ೧೯೨೬ರಲ್ಲಿ 'ಬಸವೇಶ್ವರನ ವಚನಗಳು' 'ಶಿವಾನುಭವ' ತ್ರೈಮಾಸಿಕ ಪತ್ರಿಕೆಯಲ್ಲಿ ಮೊದಲು ಪ್ರಕಟವಾಗಿ, ಹಾಗೆಯೇ ಪುಸ್ತಕ ರೂಪಕ್ಕೆ ಬಂದಿತು. ಆ ಪ್ರತಿಗಳೆಲ್ಲ ಮುಗಿದುಹೋಗಿ ಈಗ ಎರಡನೆಯ ಆವೃತ್ತಿಯು ಹೊರಬೀಳುವ ಸುಯೋಗವು ಒದಗಿದ್ದರಿಂದ ಶ್ರೀಯುತ ಹಳಕಟ್ಟಿಯವರನ್ನು ನಾವು ಅಭಿನಂದಿಸುತ್ತೇವೆ. ಈ ವಚನ ಗ್ರಂಥದ ಅನುಕೂಲ್ಯತೆಯೂ ಆವಶ್ಯಕತೆಯೂ ಇದರಿಂದಲೇ ವ್ಯಕ್ತವಾಗುವುದು. ಈ ಎರಡನೆಯ ಆವೃತ್ತಿಯನ್ನು ಮೂರು ಪ್ರತಿಗಳ ಸಹಾಯದಿಂದ ಮುದ್ರಿಸಿದೆವೆಂದು ಅವರು ಬರೆದಿದ್ದಾರೆ. ಆದುದರಿಂದ, ಒಂದೇ ಪ್ರತಿಯ ಸಹಾಯದಿಂದ ಮುದ್ರಿತವಾದ ಮೊದಲನೆಯ ಆವೃತ್ತಿಗಿಂತ ಇದು ಉತ್ತಮವಾಗಿದೆ.

ಹಿಂದಿನ ಗ್ರಂಥಗಳನ್ನು ಸರಿಯಾಗಿ ಪರಿಷ್ಕರಿಸಿ, ಪಾಠಾಂತರಗಳನ್ನು ವಿಮರ್ಶಿಸಿ, ಉಚಿತ ಪಾಠವನ್ನು ಮುದ್ರಿಸುವುದು ಬಹಳ ಕಷ್ಟತರವಾದ ಕೆಲಸ; ಅದು

ಸಮರ್ಪಕವಾಗಿ ನಡೆಯುವುದೂ ದುಸ್ತರ. ಈ ವಿಚಾರಗಳು ಶ್ರೀಯುತ ಹಳಕಟ್ಟಿಯವರಿಗೂ ತಿಳಿದಿವೆ.

"ಆದರೆ ಇದು ಸಂಪೂರ್ಣ ಶುದ್ಧವಾಗಿದೆಯೆಂದು ನಾವು ಇನ್ನೂ ಹೇಳಲು ಧೈರ್ಯ ಮಾಡಲಾರೆವು. ಯಾಕೆಂದರೆ ಅನೇಕ ವಚನಗಳು ವಿಶೇಷಾರ್ಥವುಳ್ಳವಾಗಿ ಬೆಡಗಿನಿಂದ ತುಂಬಿಕೊಂಡಿರುವುದರಿಂದಲೂ, ಅನೇಕ ಕಡೆಗೆ ಶಬ್ದರೂಪಗಳು ಈ ಕಾಲಕ್ಕೆ ಅಪರಿಚಿತವಾದವುಗಳಿರುವುದರಿಂದಲೂ ಅವುಗಳ ನಿಜವಾದ ಪಾಠಗಳನ್ನು ಕಂಡುಹಿಡಿಯುವುದು ಇನ್ನೂ ದುಸ್ತರವಾಗಿರುತ್ತದೆ. ಈ ಕಾರ್ಯವನ್ನು ಇನ್ನುಮೇಲೆ ಕನ್ನಡ ಭಾಷಾ ಶಾಸ್ತ್ರಜ್ಞರೂ ಶಿವಾನುಭವ ವಿದ್ಯಾಸಂಪನ್ನರೂ ಕೈಕೊಂಡು ಶುದ್ಧ ಪಾಠಗಳಾವುವೆಂಬುದನ್ನು ನಮಗೆ ತಿಳಿಸಿದಲ್ಲಿ ನಾವು ಅವರಿಗೆ ಉಪಕೃತರಾಗುವೆವು; ಮತ್ತು ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಸೇರಿಸುವೆವು."

ಎಂದು ಅವರು ಹೇಳಿದ್ದಾರೆ. ಆದುದರಿಂದ, ಮೈಸೂರು ಮತ್ತು ಮದ್ರಾಸ್ ಓರಿಯಂಟಲ್ ಲೈಬ್ರರಿಗಳಲ್ಲಿ ದೊರೆಯುವ ಓಲೇಗರಿಯ ಪ್ರತಿಗಳನ್ನೂ, ವಚನಗಳು ಉದಾಹೃತವಾಗಿರುವ 'ಶೂನ್ಯ ಸಂಪಾದನೆ', 'ಲಿಂಗ ಲೀಲಾವಿಳಾಸಚರಿತ್ರ' ಮುಂತಾದ ಗ್ರಂಥಗಳನ್ನೂ ಪರಿಶೀಲಿಸಿ ಸರಿಯಾದ ಪಾಠವಾವುದೆಂಬುದನ್ನು ವಿಮರ್ಶಿಸಿ ಮುದ್ರಿಸಬೇಕಾದ ಕೆಲಸವು ಇನ್ನೂ ಉಳಿದಿದೆ. ಹೀಗೆ ಮಾಡುವಾಗ ಪಾಠಾಂತರಗಳನ್ನು ಅಡಿ ಟಿಪ್ಪಣಿಗಳಲ್ಲಿ ಕೊಡಬೇಕು; ಇದರಿಂದ, ಸಾಹಿತ್ಯಜ್ಞರಿಗೆ ಹೆಚ್ಚು ಉಪಯೋಗವುಂಟು. ವಚನಗಳಲ್ಲಿ ಉಲ್ಲೇಖಿತರಾಗಿರುವ ಮಹಿಮ ಪುರುಷರ ಸಂಕ್ಷಿಪ್ತ ಚರಿತ್ರೆಗಳನ್ನು ಕೊನೆಯಲ್ಲಿ ಸೇರಿಸಿದರೆ ವಾಚಕರಿಗೆ ಉಪಯೋಗವಾಗುತ್ತದೆ.

ಒಟ್ಟಿನಲ್ಲಿ, ಶ್ರೀಯುತ ಹಳಕಟ್ಟಿಯವರು ವಚನ ಸಾಹಿತ್ಯವನ್ನು ಮುದ್ರಣ ಮಾಡಿಸಿ ಕನ್ನಡಿಗರಿಗೆ ಬಹಳ ಉಪಕಾರಮಾಡಿದ್ದಾರೆ. ಕನ್ನಡಿಗರು ಅವರಿಗೆ ಚಿರ ಋಣಿಗಳಾಗಿರುವರೆಂದು ನಾವು ಹೇಳುತ್ತೇವೆ.

---

## ೩. ಪೈಗಂಬರ ಮಹಮ್ಮದನು

ಲೇಖಕರು.—ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ., ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟಗಳು ೧೭೧ ; ಬೆಂಗಳೂರು ಪ್ರೆಸ್; ೧೯೩೦ ; ಬೆಲೆ ೧ ರೂಪಾಯಿ.

"ಮಹಮ್ಮದೀಯರ ಮತಧರ್ಮಗಳ ಸಾರವನ್ನು ಹಿಂದುಗಳೂ, ಸನಾತನ ಧರ್ಮದ ಸಾರವನ್ನು ಮಹಮ್ಮದೀಯರೂ ಅರಿತು," ಇರ್ವರೂ "ಸೌಹಾರ್ದ ಭಾವದಿಂದಿರುವುದಕ್ಕೆ ಸಾಧಕವಾಗುವಂತೆ"ಯೂ, ಇರ್ವರಲ್ಲೂ "ಅನೇಕರ ಹೃದಯಗಳು ವೀಣಾ ನಾದದಂತೆ ಶ್ರುತಿಗೊಂಡು ಸ್ನೇಹದ ಮಧುರ ತಾನಕ್ಕೆ" ಸಿದ್ಧವಾಗಲೆಂದೂ, "ಪೈಗಂಬರ ಮಹಮ್ಮದನು ಮತ ಸ್ಥಾಪಕರಾದ ಮಹಾ ಪುರುಷ

ರಲ್ಲೊಬ್ಬನು" ಎಂದೂ, "ಆ ಮಹಸೀಯನಲ್ಲಿ ಪೂಜ್ಯಭಾವನೆಯನ್ನಿಟ್ಟು" ಏರಚಿಸಿರುವ ಈ ಪ್ರಯತ್ನವು ಸಂಪೂರ್ಣವಾಗಿ ಯಶಸ್ವಿಯಾಗಿದೆ.

ವ್ಯಕ್ತಿಗಳ ಚರಿತ್ರೆಯನ್ನು ಬರೆಯುವುದರಲ್ಲಿ ಹಲವು ಮಾರ್ಗಗಳುಂಟು : ವ್ಯಕ್ತಿಯಲ್ಲಿ ಅಭಿಮಾನವಿಟ್ಟು, ನಾಯಕನನ್ನು ಆದಷ್ಟು ಮಟ್ಟಿಗೆ ಉತ್ತಮ ಗುಣ ಭೂಯಿಷ್ಠನನ್ನಾಗಿ ಚಿತ್ರಿಸುವುದು ಒಂದು. ವ್ಯಕ್ತಿಗೂ ಸನ್ನಿವೇಶ ಸಂದರ್ಭಗಳಿಗೂ ಆದ ಯುದ್ಧವನ್ನು ಚಿತ್ರಿಸಿ, ಆ ಅಂತರಂಗದ ಘೋರ ಯುದ್ಧದಲ್ಲಿ ಗೆದ್ದು ವ್ಯಕ್ತಿಯು ಗಂತವ್ಯ ಸ್ಥಾನವನ್ನು ಸೇರಿ ವಿಜಯ ದುಂದುಭಿಯನ್ನು ಮೊಳಗಿಸಿದನೆಂಬುದನ್ನು ತೋರಿಸಿಕೊಡುವುದು ಇನ್ನೊಂದು. ಇವೆರಡರ ಜೊತೆಗೆ, ವಿಭೂತಿವಂತ ವ್ಯಕ್ತಿಯೆಂದರೆ ಅಪೂರ್ವವಾದ ದೈವಾನುಗ್ರಹವು ಮನುಷ್ಯತೆಯ ಉದ್ಧಾರಕ್ಕಾಗಿ ಹರಿದು ಬರುವ ಕಾಲುವೆಯೆಂದು ಭಾವಿಸುವ ಪೂರ್ವಿಕರ ಘನ ಮಾರ್ಗವೊಂದು. ಹೀಗೆ ಮೂರನ್ನಂತೂ ಗುರುತಿಟ್ಟು ತೋರಿಸಲು ಸಾಧ್ಯ. ಈ ಗ್ರಂಥದಲ್ಲಿ ಈ ಮೂರೂ ಮಾರ್ಗಗಳ ಹದವರಿತ ಬೆರಕೆಯು ಬಹು ಹಿತವಾಗಿರುವುದು. ಪರೀಕ್ಷಾ ಪ್ರಧಾನವೂ ಪ್ರತ್ಯಕ್ಷ ಪ್ರಮಾಣದಲ್ಲಿ ಬಹು ವಿಶ್ವಾಸವುಳ್ಳದೂ ಆಗಿರುವ ಈಗಿನ ಯುಗಕ್ಕೆ ಸಾಮಾನ್ಯ ಪ್ರಮಾಣ ಪರೀಕ್ಷೆಗಳಿಗೆ ಒಳಪಡದ ಮೂರನೆಯ ಮಾರ್ಗವು ಒಪ್ಪದೆಂದು ತಿಳಿದು ಅದಕ್ಕೆ ಮೊದಲನೆಯ ಸ್ಥಾನವನ್ನು ಕೊಡದೆ, ಪ್ರಜಾ ಸಾಮಾನ್ಯಕ್ಕೆಂದು ಬರೆದ ಈ ಗ್ರಂಥದಲ್ಲಿ ಕೃತವಿದ್ಯರಾದವರಿಗೆ ಮಾತ್ರ ಸೊಗಯಿಸುವ ಎರಡನೆಯ ಮಾರ್ಗವೂ ಸರಿಯಾಗದೆಂದು, ಮೊದಲನೆಯ ಮಾರ್ಗವನ್ನೇ ಪ್ರಧಾನವಾಗಿಟ್ಟುಕೊಂಡು ಈ ಗ್ರಂಥವು ರಚಿತವಾಗಿದೆ.

ಲೇಖಕರ ಭಾವ ಪೂರ್ಣವೂ ಸರಳ ಸುಂದರ ಲಲಿತವೂ ಆಗಿ ಓಜಸ್ವಿಯಾದ ಶೈಲಿಯ ಸೊಗಸೊಂದು; ಪರಕೀಯನಾದರೂ ಪರಮೇಶ್ವರನ ಅನುಗ್ರಹಕ್ಕೆ ಪಾತ್ರನಾದ ವಿಶೇಷ ವ್ಯಕ್ತಿಯೆಂದು ಗೌರವವನ್ನಿಟ್ಟಿರುವ ಉದಾರ ಭಾವವೊಂದು; ಇರುವ ಹಲವಾರು ವಿಷಯಗಳಲ್ಲಿ ಉತ್ತಮವಾದುವನ್ನು ಮಾತ್ರ ಆರಿಸಿ, ಅವನ್ನೆಲ್ಲ ಹವಣರಿತು ಸೇರಿಸಿ, ಬಗೆಯೊಪ್ಪುವಂತೆ ಹೇಳುವ ಕಾವ್ಯ ಕಲ್ಪನಾ ಸಾಮರ್ಥ್ಯವೊಂದು; ಈ ಮೂರೂ ಸೇರಿ ಈ ಕೃತಿಯಲ್ಲೊಂದು ಹೊಸ ತೆರದ ಸೊಬಗು ಮೆರೆದಿದೆ.

ಕನ್ನಡದಲ್ಲಿ ಇದುವರೆಗೆ ಇಂತಹ ಗ್ರಂಥಗಳು ಹಲವಾಗಿದ್ದು, ಜನರಲ್ಲಿ ಈ ವಿಷಯಕವಾದ ಸಾಮಾನ್ಯ ಜ್ಞಾನವಾದರೂ ಹರಡಿದ್ದರೆ, ಪ್ರಜಾ ವರ್ಗದಲ್ಲಿ ಮಹಮ್ಮದನ ವಿಚಾರವಾಗಿ, 'ಈಗ ನಮ್ಮ ದೇಶದಲ್ಲಿರುವ ತುರುಕರ ಗುರು' ಎಂಬುದಕ್ಕಿಂತಲೂ ಹೆಚ್ಚಿನ ತಿಳಿವಳಿಕೆಯಿದ್ದರೆ, ಗ್ರಂಥಕರ್ತರ ಪಕ್ಷಪಾತವನ್ನು ದೋಷವೆಂದು ಗಣಿಸಬಹುದಾಗಿದ್ದಿತು. ಆದರೆ, ಈಗಿನ ಸಂದರ್ಭದಲ್ಲಿ ಇದು ಸರಿಯೆಂದೇ ನಮ್ಮ ಭಾವನೆ.

ಕನ್ನಡದಲ್ಲಿ ಜೀವನ ಚರಿತ್ರೆಗಳು ಬಹು ವಿರಳ; ಅವರಲ್ಲಿಯೂ, ಇತರ ದೇಶಗಳ, ಇತರ ಮತಗಳ ಪ್ರಖ್ಯಾತ ಪುರುಷರ ಜೀವನ ಚರಿತ್ರೆಗಳು ಇನ್ನೂ ಅಪೂರ್ವ. ಸಮಾಜವು ಸರ್ವತೋಮುಖವಾಗಿ ಬೆಳೆಯಬೇಕಾದರೆ, ಸಂಸ್ಕೃತಿಯ ವೃಕ್ಷವು ಅಭಿವೃದ್ಧಿ

ಯಾಗಬೇಕಾದರೆ, ಬೇರೆ ಬೇರೆ ದೇಶಗಳ ಸಮಾಜ ಸಂಸ್ಕೃತಿಗಳ ವಿಜಯದ ಒಳ ಗುಟ್ಟನ್ನು ಬೆಳಕು ಹಿಡಿದು ತೋರಿಸಿಕೊಡುವ ಉತ್ತಮ ಗ್ರಂಥಗಳು ಹಲವು ಹುಟ್ಟ ಬೇಕು. ಪ್ರಜಾ ವರ್ಗದ ಜ್ಞಾನ ಭಂಡಾರವು ಬೆಳೆಯಲು ಉತ್ತಮ ಶೈಲಿಯಿಂದ ಕೂಡಿ, ಕಾದಂಬರಿಗಿಂತಲೂ ಸೊಗಸಾಗಿದ್ದು ಮೊದಲಿಂದ ಕೊನೆಯ ವರೆಗೂ ಓದಿಯೇ ಬಿಡಬೇಕೆಂಬ ಆಶೆಯನ್ನು ಹುಟ್ಟಿಸುವಂತಹ ಗ್ರಂಥಗಳು ನೂರಾರು ಹುಟ್ಟಬೇಕು. ಈ ಜಾತಿಯ ಗ್ರಂಥಗಳಿಗೆ 'ಮಹಮ್ಮದನು' ಮೊದಲಿಗನಾಗಿರುವನೆಂದು ನಮ್ಮ ನಂಬಿಕೆ.

ಕನ್ನಡಿಗರು ಈ ಉತ್ತಮ ಗ್ರಂಥಕ್ಕೆ ಯೋಗ್ಯ ಪ್ರೋತ್ಸಾಹವನ್ನು ಕೊಟ್ಟು, ಲೇಖಕರಿಂದ ಇನ್ನೂ ಇಂತಹ ಅನೇಕ ಗ್ರಂಥಗಳನ್ನು ಬರೆಯಿಸಬೇಕೆಂದು ನಮ್ಮ ಹಾರೈಕೆ.

ಈ ಗ್ರಂಥದಲ್ಲಿ ಹೇಳಿರುವ ಅನೇಕ ಕುಲಗಳ ಹೆಸರುಗಳೂ, ಅರೇಬಿಯದ ಬೇರೆ ಬೇರೆ ಪ್ರಾಂತಗಳೂ ವಾಚಕ ವರ್ಗದಲ್ಲಿ ಅನೇಕರಿಗೆ ಹೊಸವು. ಅದರಿಂದ, ಆಯಾ ಕುಲದವರು, ಅವರಿದ್ದ ಪ್ರಾಂತಗಳು, ಅವರು ಮಹಮ್ಮದೀಯರಾದ ಕಾಲ—ಇವು ಗಳನ್ನು ಗುರುತಿಸಿರುವ ಅರೇಬಿಯದ ನಕ್ಷೆಯೊಂದು ಪುಸ್ತಕದಲ್ಲಿದ್ದಿದ್ದರೆ ಉತ್ತಮ ವಾಗುತ್ತಿದ್ದಿತು. ಎರಡನೆಯ ಮುದ್ರಣದಲ್ಲಿ ಗ್ರಂಥಕರ್ತರು ಈ ವಿಷಯವನ್ನು ಗಮನಿಸುವರೆಂದು ನಂಬುತ್ತೇವೆ. **ದೇವುಡು.**

---

## 4. Oriental Tit Bits in Engineering

*Author.*—M. G. SINGARIYENGAR, A.M., Tech.I. (Gr. Br.), *Lecturer, College of Engineering, Bangalore.*

Cr. 8vo. pp. 6+45 ; The Indian Press, Bangalore City, 1930 ; Price 8 as.

ಈ ಗ್ರಂಥದಲ್ಲಿ, ಗ್ರಂಥಕರ್ತರಾದ ಎಂಜಿನಿಯರ್ ಮ॥ ರಾ॥ ಎಂ. ಜಿ. ಶಿಂಗಾ ರಯ್ಯಂಗಾರ್ಯರು ಮರಾಮತ್ತು ಇಲಾಖೆಗೆ ಸಂಬಂಧಪಟ್ಟ ಶಾಸ್ತ್ರ ಜ್ಞಾನವು ನಮ್ಮ ದೇಶದಲ್ಲಿ ಹಿಂದಕ್ಕೆ ಎಷ್ಟು ನಿಷ್ಕೃಷ್ಟವಾಗಿದ್ದಿತೆಂಬುದನ್ನು ಉದಾಹರಣೆಗಳ ಮೂಲಕ ಈಗಿನ ಶಾಸ್ತ್ರ ನಿಯಮಗಳಿಗೆ ಹೋಲಿಸಿ ವಿಶದಪಡಿಸಿರುತ್ತಾರೆ. ಇವರು ಕೊಟ್ಟಿರುವ ಉದಾಹರಣೆಗಳು: ಕೆರೆಗಳು, ಸೇತುವೆಗಳು, ಅಣ್ಣೆಕಟ್ಟುಗಳು; ಮರ, ಕಲ್ಲು, ಕಬ್ಬಿಣ —ಇವುಗಳ ಪರೀಕ್ಷೆ—ಈ ಸಂಬಂಧವಾಗಿರುವುವು. ಇವರು ಸಂಸ್ಕೃತ, ಕನ್ನಡ, ಅಥವಾ ತಮಿಳು ಉದಾಹರಣೆಗಳನ್ನು ಕೊಟ್ಟು, ವಿಷಯವನ್ನು ಇಂಗ್ಲಿಷಿನಲ್ಲಿ ವಿವರಿ ಸಿರುವರು. ಎಲ್ಲರಿಗೂ ಉಪಕಾರವಾಗುವ ಒಂದು ಉದಾಹರಣೆಯನ್ನು ಕೊಡು ವೆವು: **ಗೆದ್ದಲಿಗೆ ತಡೆ—"ಹೊಂಗೆ ಹಿಂಡಿ ಗಂಜಳದ ಲೇಪ."** ಸರ್ವಜ್ಞ ಪದಗಳು, ವಿಶ್ವರೂಪ ಶಿಲ್ಪ, ಶಿಲ್ಪ ತತ್ತ್ವ ರಹಸ್ಯ, ಸಮರಾಂಗಣ ಸೂತ್ರಧಾರ, ಪದ್ಮ ಸಂಹಿತ, ವಿವೇಕ ವಿಲಾಸ, ಭೃಗು ಸಂಹಿತ, ವಸ್ತು ಶಾಸ್ತ್ರ ಸಾರ ಸಂಗ್ರಹ— ಇವೇ, ವಿಷಯಗಳನ್ನೆತ್ತಿಕೊಂಡಿರುವ ಗ್ರಂಥಗಳ ಹೆಸರುಗಳು.

ಇಂತಹ ವಿಷಯಗಳನ್ನೂ ನಮ್ಮ ಪೂರ್ವಿಕರು ನಿಷ್ಕೃಷ್ಟವಾಗಿ ತಿಳಿದಿದ್ದರೆಂಬು ದನ್ನು ಪೂರ್ವ ಗ್ರಂಥಗಳಿಂದ ಶೋಧನೆ ಮಾಡಿ, ಆಧುನಿಕ ನಿಯಮಗಳೊಡನೆ ಹೋಲಿಸಿ

ತೋರಿಸಿರುವುದು ನಮಗೆಲ್ಲರಿಗೂ ಹೆಮ್ಮೆಯನ್ನುಂಟುಮಾಡತಕ್ಕ ವಿಚಾರವಾಗಿದೆ. ಗ್ರಂಥಕರ್ತರು 'ವೈದ್ಯ ವಲ್ಲಭ' ಮೊದಲಾದ ಬಿರುದುಗಳನ್ನು ಪಡೆದು, 'ಹೋಮಿಯೋಪತಿ' ಎಂಬ ವೈದ್ಯ ಕ್ರಮದಲ್ಲಿ ಪದವೀ ಧರರಾಗಿಯೂ, 'ಇಂಡಿಯನ್ ಮೆಡಿಕಲ್ ಅಸೋಸಿಯೇಷನ' ಎಂಬ ಪ್ರಸಿದ್ಧ ವೈದ್ಯ ಸಂಸ್ಥೆಯಲ್ಲಿ ಸದಸ್ಯರಾಗಿಯೂ ಇರುವುದನ್ನು ನೋಡಿದರೆ, ಇವರು ಸಾಮಾನ್ಯವಾಗಿ ಇತರರಂತೆ ಸ್ವಾರ್ಥತೆಗಾಗಿಯೇ ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸದೆ, ಅಷ್ಟು ಲಾಭವಿಲ್ಲದ ಶೋಧನ ಕಾರ್ಯದಲ್ಲಿ ಪ್ರವರ್ತಿಸುವ ಉತ್ಸಾಹವುಳ್ಳವರಾಗಿರುವರೆಂದು ತೋರುವುದು. ಇವರಿಗೆ ಭಗವಂತನು ತಕ್ಕಷ್ಟು ಶಕ್ತ್ಯುತ್ಸಾಹಗಳನ್ನು ಕೊಟ್ಟು ದೇಶಕ್ಕೆ ಉಪಕಾರಮಾಡುವಂತೆ ಪ್ರೇರಿಸಲಿ.

ಬಿ. ವೆಂ.

---

## ೫. ಪ್ರಬೋಧಕ

(ಮಾಸಪತ್ರಿಕೆ: ಸಂಪುಟ ೧, ಸಂಚಿಕೆ ೧, ಜೂಲೈ ೧೯೩೦.)

ಪ್ರಕಾಶಕರು.—ಕನ್ನಡ ಮಿತ್ರ ಮಂಡಲಿ, ಬೊಂಬಾಯಿ.

ಜಿ. ಟಿ. ಎ. ಪ್ರೆಸ್, ಮೈಸೂರು ; ವಾರ್ಷಿಕ ಚಂದಾ (ಅಂಚೆ ವೆಚ್ಚ ಸೇರಿ) ೫ ರೂಪಾಯಿ.

ಮುಂಬಯಿಯಲ್ಲಿರುವ ಕನ್ನಡಿಗರಲ್ಲಿ ಪ್ರಮುಖರಾದವರು ತಮ್ಮ ತಾಯ್ನುಡಿಯ ಸೇವೆಯನ್ನು ಮಾಡಲು ಈ ಮಾಸಪತ್ರಿಕೆಯನ್ನು ಹೊರಡಿಸಿರುವರು. "ಮುಂಬಯಿ ನಗರದಲ್ಲಿ ಕನ್ನಡ ಮಾತಾಡುವವರು ಮೂವತ್ತು ಸಾವಿರ ಮಂದಿ ಎಂದು ಹಿಂದಿನ ಸೆನ್‌ಸಸ್ ಪ್ರಕಾರ ತಿಳಿದುದಾಗಿ ಒಬ್ಬ ಇನ್‌ಸ್ಪೆಕ್ಟರು ಹೇಳಿದರಂತೆ." "ಇಲ್ಲಿರುವ ಕನ್ನಡಿಗರ ಅಂತರಂಗದಲ್ಲಿ ತಾವು ಒಂದು ಜನವೆಂಬ ಭಾವನೆಯು ಮೂಡುವಂತೆ ಮಾಡುವುದು" ಮತ್ತು "ನಮ್ಮ ಜನರ ಜೀವನವನ್ನು ನಮ್ಮ ಕೈಲಾದ ಮಟ್ಟಿಗೆ ತಿದ್ದಿ, ಜನರಲ್ಲಿ ಹೊಸದೊಂದು ಸ್ಫೂರ್ತಿಯನ್ನುಂಟುಮಾಡಬೇಕೆಂ"ಬುದೂ ಈ ಪತ್ರಿಕೆಯ ಮುಖ್ಯೋದ್ದೇಶಗಳು. ಇವು ಶ್ಲಾಘ್ಯವಾದುವೇ ಸರಿ.

ನಾವು ನೋಡಿರುವ ಈ ಪತ್ರಿಕೆಯ ಮೂರು ಸಂಚಿಕೆಗಳಲ್ಲಿ ಸಣ್ಣ ಕಥೆಗಳಿಗೆ ಹೆಚ್ಚು ಸ್ಥಳ ಕೊಟ್ಟಿರುವಂತಿದೆ. ಸಾಮಾನ್ಯ ಜನರಿಗೆ ಓದಬೇಕೆಂಬ ಅಭಿಲಾಷೆಯನ್ನು ಹುಟ್ಟಿಸಲೆಂದು ಈ ಉಪಾಯವನ್ನು ಹೂಡಿರಬೇಕು. ಇದು ಸಾಧುವಾದುದೇ ಸರಿ. ಪ್ರತಿ ಸಂಚಿಕೆಯಲ್ಲಿಯೂ ವಿಜ್ಞಾನ ವಿಷಯಗಳಿಗಾಗಿ ಒಂದು ಭಾಗವನ್ನು ಗೊತ್ತು ಮಾಡಿರುತ್ತಾರೆ. ಕಡೆಯಲ್ಲಿ ಕೊಟ್ಟಿರುವ "ಇಲ್ಲಿ ಅಲ್ಲಿನ ಸುದ್ದಿಗಳು" ಎಂಬ ಭಾಗದಲ್ಲಿ ಅನೇಕ ಉಪಯುಕ್ತವಾದ ಮತ್ತು ಆಶ್ಚರ್ಯಕರವಾದ ವಿಷಯಗಳನ್ನು ಸಂಗ್ರಹಿಸಿ ತಿಳಿಸುತ್ತಾರೆ. ಮೊದಲೆರಡು ಸಂಚಿಕೆಗಳಲ್ಲಿ ಸಲಕ್ಷಣವಾದ ಚಿತ್ರಪಟಗಳಿವೆ. ಅಗ್ರ ಲೇಖನಗಳೂ ಪ್ರೌಢವಾದವುಗಳಾಗಿಯೇ ಇವೆ. ಪತ್ರಿಕೆಯ ಚಂದಾ ಮೊಬಲಗು ಮಾತ್ರ ನಮ್ಮವರಿಗೆ ಹೆಚ್ಚೆಂದು ಹೇಳಬೇಕು.

ಈ ಪತ್ರಿಕೆಯು ತನ್ನ ಉದ್ದೇಶಗಳನ್ನು ಸಾರ್ಥಕಗೊಳಿಸಿ ಚಿರ ಕಾಲ ಉತ್ತಮ ರೀತಿಯಲ್ಲಿ ನಡೆಯಲೆಂದು ನಾವು ಹಾರೈಸುತ್ತೇವೆ.

ಬಿ. ವೆಂ.

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೫]　　ಪ್ರಮೋದ ಸಂ॥ ಪುಷ್ಯ ಮಾಸ　　[ಸಂಚಿಕೆ ೪

## ಎರಡಱುನೂಱು ನಾಡು ಯಾವುದು ?*

ಕರ್ಣಾಟಕ ಕಾವ್ಯ ಕಲಾನಿಧಿಯ ಪ್ರವರ್ತಕರಾದ ಶ್ರೀಮಾನ್ ಎಂ. ಎ. ರಾಮಾನುಜೈಯಂಗಾರ್ಯರವರೂ, ಕರ್ಣಾಟಕ ಕವಿಚರಿತೆಕಾರರಾದ ಶ್ರೀಮಾನ್ ಆರ್. ನರಸಿಂಹಾಚಾರ್ಯರವರೂ ಮತ್ತು ಲಂಡನ್ ಪಟ್ಟಣದಲ್ಲಿರುವ ಬ್ರಿಟಿಷ್ ಮ್ಯೂಜಿಯಮ್ಮಿನ ಕ್ಯೂರೇಟರರಾದ ಮಿ॥ ಡಾಕ್ಟರ್ ಎಲ್. ಡಿ. ಬಾರ್ನೆಟ್ ಸಾಹೇಬರವರೂ ನನಗೆ ಪರಮ ಪೂಜ್ಯರಾಗಿದ್ದಾರೆ. ಆದರೂ, ಈ ಮೂವರು ಪಂಡಿತರು ಎರಡಱುನೂಱಱ ವಿಷಯವಾಗಿ ಮಾಡಿದ ತಪ್ಪುಗಳನ್ನು ಕರ್ತವ್ಯ ದೃಷ್ಟಿಯಿಂದ ಈ ಪ್ರಬಂಧದಲ್ಲಿ ನಿರ್ದಾಕ್ಷಿಣ್ಯದಿಂದ ಖಂಡಿಸುವವನಿದ್ದೇನೆ.

ಮೇಲೆ ಹೇಳಿದ ಈ ಮೂವರು ಸಂಶೋಧಕರು ಮಾಡಿದ ತಪ್ಪಿನಿಂದ ಮಲಿನ ವಾದ ಕನ್ನಡ ಪಂಡಿತರ ದೃಷ್ಟಿಯನ್ನು ಸಪ್ರಮಾಣವಾದ, ಹಾಗೂ, ಸೋಪಪತ್ತಿಕ ವಾದ ಸತ್ಯ ನಿರ್ಣಯವೆಂಬ ಔಷಧದ ನೀರಿನಿಂದ ತೊಳೆದು ಸ್ವಚ್ಛಮಾಡುವುದೇ ಈ ಲೇಖನದ ಮುಖ್ಯವಾದ ಉದ್ದೇಶವಾಗಿದೆ.

ಈ ಉಪನ್ಯಾಸದಲ್ಲಿ ಪ್ರಮಾಣಗಳೆಂದು ಸ್ವೀಕರಿಸಿರುವ ಶಿಲಾ ಶಾಸನಗಳನ್ನು ಕಳಸ, ಗಾವರವಾಡ, ಲಕ್ಷ್ಮೇಶ್ವರ, ದೇವಗೇರಿ, ಕಲ್ಲೂರು ಮುಂತಾದ ಗ್ರಾಮ ಗಳಿಗೆ ಹೋಗಿ ಪ್ರತ್ಯಕ್ಷ ನೋಡಿ, ಅವುಗಳನ್ನು ಕಾಗದದ ಮೇಲೆ ಪ್ರತಿಬಿಂಬಿಸಿ ಕೊಂಡು, ಅಲ್ಲಲ್ಲಿಯ ಪರಿಸ್ಥಿತಿಯನ್ನು ತಿಳಿದುಕೊಂಡು ಬಂದು, ಈ ಲೇಖವನ್ನು ಬರೆದಿದ್ದೇನೆ.

ಇಂದಿನ ನನ್ನ ಈ ಪ್ರತಿಜ್ಞಾತ ವಿಷಯವನ್ನು ಐತಿಹಾಸಿಕ ದೃಷ್ಟಿಯಿಂದ ವಿವೇಚಿಸುವವನಿದ್ದೇನೆ. ಆದುದರಿಂದ, ಮೊದಲು ಪ್ರಮಾಣಾರ್ಹವಾದ ಲೇಖನ ಗಳನ್ನು ಕಾಲಾನುಕ್ರಮದಿಂದ ಹೇಳುತ್ತೇನೆ:—

* ಮೈಸೂರು ಪಟ್ಟಣದಲ್ಲಿ ನೆರವೇರಿದ ಹದಿನಾರನೆಯ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು. ಈ ಲೇಖನವನ್ನು ಪುನಃ ಮುದ್ರಣಗೊಳಿಸುವ, ಭಾಷಾಂತರ ಮಾಡುವ ಮತ್ತು ಇತರ ಎಲ್ಲ ಬಗೆಯ ಅಧಿಕಾರವನ್ನೂ ಲೇಖಕರೇ ಉಳಿಸಿಕೊಂಡಿರುವರು.

ಭರತ ಮಹೀಮಂಡಳಕಾ ।
ಭರಣಂ ಕುಂತಳ ಧರಾತಳಂ ತದ್ವಿಷಯ ॥
ಕ್ಕೆರಡಱುನೂಱು ಲಲಾಮಂ ।
ಪುರಿಕರ ಜನಪದನುದಕ್ಕೆ ನವ ಪವಿ ಮುಕುರಂ ॥

([1] ಕಳಸ ಗ್ರಾಮದ ಶಿಲಾ ಶಾಸನ, ಕ್ರಿ. ಶ. ೯೭೦)

ಕನ್ನಡಮೆರಡಱುನೂಱು ।
ಕನ್ನಡಮಾ ತಿರುಳ ಕನ್ನಡಂ................|| ೧—೪೨ ||

(ಕವಿ ರನ್ನ ಕೃತ ಗದಾ ಯುದ್ಧಂ, ಕ್ರಿ. ಶ. ೯೮೨)

"ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರು ಬೆಳ್ವೊಲ ಮೂನೂಱುಮಂ ಪುಲಿಗೆಱೆ ಮೂನೂರುಮನ್ನೆರಡಱುನೂಱುಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನೆಯಿಂ ಪ್ರತಿಪಾಳಿಸುತ್ತಮಿರೆ।"

([2] ಗಾವರವಾಡ ಗ್ರಾಮದ ತಿಲಾ ಶಾಸನ, ಕ್ರಿ. ಶ. ೧೦೭೨)

"ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ ಪುರಿಗೆಱೆ ಮೂನೂಱುಂ ಬೆಳ್ವೊಲ ಮೂನೂಱುಮನ್ನೆರಡಱುನೂಱುಮಂ ಸುಖದಿನಾಳುತ್ತಮಿರೆ।"

([3] ಲಕ್ಷ್ಮೇಶ್ವರ ಗ್ರಾಮದ ಶಿಲಾ ಶಾಸನ, ಕ್ರಿ. ಶ. ೧೦೭೪)

"ಜಯಸಿಂಘದೇವರ್ ಬನವಾಸೆ ಪನ್ನಿಚ್ಚಾಸಿರಮುಮಂ ಸಾಂತಳಿಗೆ ಸಾಸಿರಮುಮಂ ಎರಡಱುನೂಱುಮ ಕಂದುರ ಸಾಸಿರಮುಮಂನಾಳ್ವ ಸುಖಸಂಕಥಾ ವಿನೋದದಿಂ ರಾಜ್ಯಂ ಗೆಯ್ಯುತ್ತಮಿರೆ।"

([4] ಸಾಗರ ತಾಲೂಕಿನ ೧೮೯ನೆಯ ಶಾಸನ, ಕ್ರಿ. ಶ. ೧೦೭೯)

"ಯುವರಾಜಂ ಜಯಸಿಂಹದೇವರು ಬನವಾಸೆ ಪಂನಿಚ್ಚಾಸಿರಮುಂ ಸಾಂತಳಿಗೆ ಸಾಸಿರಮುಮನೆರಡಱುನೂಱುಮಂ ಸುಖ ಸಂಕಥಾ ವಿನೋದದಿಂದಾಳುತ್ತಮಿರೆ।"

([5] ಶಿಕಾರಿಪುರ ತಾಲೂಕಿನ ೨೯೩ನೆಯ ಶಾಸನ, ಕ್ರಿ. ಶ. ೧೦೮೦)

"ಶ್ರೀಮದನನ್ತಪಾಳ ದಣ್ಡನಾಯಕನೆರಡಱುನೂಱುಮಂ ಬನವಸೆ ಪನ್ನಿಚ್ಚಾಸಿರಮುಂ ವಡ್ಡರಾವುಳಮುಂ ಪೆರ್ಜ್ಜುಂಕಮುಮಂ ಪಡೆದು ಸುಖ ಸಂಕಥಾ ವಿನೋದದಿಂ ಪ್ರತಿಪಾಳಿಸುತ್ತಮಿರೆ।"

([6] ಶಿಕಾರಿಪುರ ತಾಲೂಕಿನ ೯೮ನೆಯ ಶಾಸನ, ಕ್ರಿ. ಶ. ೧೧೦೭)

1. ಎಪಿಗ್ರಾಫಿಯಾ ಇಂಡಿಕ, ೧೩ನೆಯ ಸಂಪುಟ, ೩೩೧ನೆಯ ಪುಟ.
2. ಎಪಿಗ್ರಾಫಿಯಾ ಇಂಡಿಕ, ೧೫ನೆಯ ಸಂಪುಟ, ೩೩೯ನೆಯ ಪುಟ.
3. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ. ೧೪ನೆಯ ಸಂಪುಟ, ೨೭೭ನೆಯ ಪುಟ. ಈ ಶಿಲಾ ಲೇಖದಲ್ಲಿ ೧೧ನೆಯ ಸಾಲಿನಲ್ಲಿ, "ಪುರಿಗೆಱೆಮೂನೂಱುಂ" ಎಂದು ಇದೆ. ಆದರೆ ಶ್ರೀ. ಕೊಪ್ಪಳ ವೀರಭದ್ರಪ್ಪನವರು ಅದನ್ನು "ಪುರಿಗೆಱೆಮೂನೂಱು" ಎಂದು ತಪ್ಪಿ ಓದಿದ್ದಾರೆ.
4, 5, 6. ಎಪಿಗ್ರಾಫಿಯಾ ಕರ್ಣಾಟಿಕ, ೭ನೆಯ ಸಂಪುಟ.

"ದಂಡನಾಯಕನನನ್ತಪಾಳನೆರಡಱುನೂಱು ಬನವಾಸಿ ಪನ್ನಿಚ್ಛಾರ್ಸಿರಮುಂ ಸುಖದಿನಾಳುತ್ತಮಿರೆ।"

([1] ಶಿಕಾರಿಪುರ ತಾಲೂಕಿನ ೧೯೨ನೆಯ ಶಾಸನ, ಕ್ರಿ. ಶ. ೧೧೧೬)

"ಶ್ರೀಮನ್ಮಹಾ ಪ್ರಧಾನಂ ಮನೆವೆರ್ಗ್ಗಡೆ ದಣ್ಡನಾಯಕಂ ಗೋವಿಂದಮಯ್ಯಂ ಬನವಸೆ ಪನ್ನಿಚ್ಛಾರ್ಸಿರಮುಂ ಸಾಂತಳಿಗೆ ಸಾಯಿರಮುಮೆರಡಱುನೂಱುಂ ನಡ್ಡರಾವುಳಮುಂ ಪಂನಾಯ............ತ್ತಮಿರ್ದ್ದು"

([2] ಶಿಕಾರಿಪುರ ತಾಲೂಕಿನ ೧೬೬ನೆಯ ಶಾಸನ, ಕ್ರಿ. ಶ. ೧೧೧೪)

"ಮನೆವೆರ್ಗ್ಗಡೆಯೀಶ್ವರಯ್ಯದಂಡನಾಯಕಂ ಬನವಾಸೆ ಪನ್ನಿಚ್ಛಾರ್ಸಿರಮುಮಂ ಬೆಳ್ವಲವೆರಡಱುನೂಱುಮಂ ಸುಖ ಸಂಕಥಾ ವಿನೋದದಿಂದಾಳುತ್ತಮಿರೆ।"

([3] ದೇವಗೇರಿ ಗ್ರಾಮದ ಶಿಲಾ ಶಾಸನ, ಕ್ರಿ. ಶ. ೧೧೨೧)

"....ಸ್ವಸ್ತಿ ಶ್ರೀಮತು ಚಾಳುಕ್ಯ ಭೂಲೋಕಮಲ್ಲ ವರಿಶದ ೬ನೆಯ ಸರಿಧಾವಿ ಸಂವತ್ಸರದ ಪುಸ್ಯ ಬಹುಳ ೧೨ ಸಿ ಉತ್ತರಾಯಣ ಸಂಕ್ರಮಣ ವ್ಯತಿಪಾತದಂದು ಶ್ರೀಮತು ವೆರಡಱುನೂಱು ಸುಂಕವೆಗ್ಗಡೆ ಮಹೇಶ್ವರಯ್ಯಂಗಳು ಶ್ರೀಮತು ಬೆಳ್ವೊಲನಾಡ ಬಳಿಯ ಕುಕ್ಕನೂರ ಮೂವತ್ತರೊಳಗಣ ಕಲ್ಲೂರ.......... ಕಲ್ಲಿದೇವ ಸ್ವಾಮಿಯ ಅಂಗಭೋಗ ನಿವೇದ್ಯ........ಗ್ರಹಾರದ....... ಕಾಲಂ ಕರ್ಚ್ಚಿ ಧಾರಾಪೂರ್ವ್ವಕನಾ......"

([4] ಕಲ್ಲೂರ ಗ್ರಾಮದ ಶಿಲಾ ಶಾಸನ, ಕ್ರಿ. ಶ. ೧೧೩೨)

ಮೇಲೆ ಹೇಳಿದ ಈ ಶಾಸನಗಳಿಂದ, ಮಹಾ ಮಂಡಳೇಶ್ವರರ, ಯುವರಾಜರ, ದಂಡನಾಯಕರ, ವೆಗ್ಗಡೆಯರ ಅಧಿಕಾರ ಸ್ಥಾನಗಳು ಮೇಲಿಂದ ಮೇಲೆ ಬದಲಾಗುತ್ತಿದ್ದವೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. **"ಎರಡಱುನೂಱು"** ಎಂಬ ನಾಡನ್ನು ಮಹಾ ಮಂಡಳೇಶ್ವರರಾದ ಲಕ್ಷ್ಮರಸರು, ಆ ಬಳಿಕ ಚಾಳುಕ್ಯ ಚಕ್ರವರ್ತಿ ತ್ರಿಭುವನಮಲ್ಲ ದೇವರ ತಮ್ಮಂದಿರಾದ, ಅತಏವ, ಯುವರಾಜರಾದ ಜಯಸಿಂಹ ದೇವರು, ತರುವಾಯ ದಂಡನಾಯಕರಾದ ಅನಂತಪಾಳ, ಗೋವಿಂದಮಯ್ಯ, ಈಶ್ವರಯ್ಯ, ಮಹೇಶ್ವರಯ್ಯ ಪ್ರಭೃತಿಗಳು ಅನುಕ್ರಮವಾಗಿ ಆಳಿದರು; ಇರಲಿ.

ಈ ಶಾಸನಗಳಲ್ಲಿ ಈ ನಾಡನ್ನು "ಎರಡಱುನೂಱು" ಎಂಬ ನಿರುಪಪದ ಶಬ್ದದಿಂದ, ಎಂದರೆ, ನಿರ್ವಿಶೇಷಣ ಶಬ್ದದಿಂದ ಸಂಬೋಧಿಸಿದ್ದಾರೆ; ಆದರೆ ಮಿಕ್ಕ ನಾಡುಗಳನ್ನು "ಪುಲಿಗೆಱೆ ಮೂನೂರು, ಬೆಳ್ವೊಲ ಮೂನೂಱು, ಬನವಾಸಿ

1, 2. ಎಪಿಗ್ರಾಫಿಯಾ ಕಾರ್ಣಾಟಿಕ, ೭ನೆಯ ಸಂಪುಟ.

3. ಎಪಿಗ್ರಾಫಿಯಾ ಇಂಡಿಕ, ೧೯ನೆಯ ಸಂಪುಟ, ೧೯೨ನೆಯ ಪುಟ.

4. ಕೊಪ್ಪಳ ಜಹಗೀರಿನ ಎಲಬುರ್ಗಿ ತಾಲೂಕಿನಲ್ಲಿ ಕುಕನೂರಿನ ಈಶಾನ್ಯಕ್ಕೆ ೫ ಮೈಲು ದೂರದಲ್ಲಿರುವ ಕಲ್ಲೂರು ಗ್ರಾಮದ ಕಲ್ಲಿನಾಥೇಶ್ವರ ದೇವಾಲಯದಲ್ಲಿರುವ ಶಿಲಾ ಶಾಸನ. ಈ ಕಲ್ಲೂರಿಗೆ ಹೋಗಿ ನಾನು ಈ ಶಾಸನವನ್ನು ಸಂಪೂರ್ಣವಾಗಿ ಬರೆದುಕೊಂಡು ಬಂದಿದ್ದೇನೆ. ಈ ಶಾಸನದ ಕೊನೆಯ ಭಾಗವನ್ನು ಇಲ್ಲಿ ಹೇಳಿದ್ದೇನೆ —ಲೇಖಕ.

ಪನ್ನಿಚ್ಛಾಸಿರ, ಸಾಂತಳಿಗೆ ಸಾಸಿರ" ಎಂಬ ಸವಿಶೇಷಣ ಶಬ್ದಗಳಿಂದ ಸಂಬೋಧಿ ಸಿದ್ದಾರೆ. ಹೀಗಾಗುವುದಕ್ಕೆ ಕಾರಣವೇನೆಂಬುದನ್ನು ಮೊದಲು ವಿಚಾರಿಸುವ.

ನಿರ್ವಿಶೇಷಣ, ಸವಿಶೇಷಣ ಶಬ್ದಗಳ ವಿಷಯವಾಗಿ ಶ್ರೀಮದಾನಂದತೀರ್ಥರು ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆಯುವಾಗ್ಗೆ ಪ್ರಾರಂಭದಲ್ಲಿ ಸಪ್ರಮಾಣವಾ ವಿವೇಚಿಸಿದ್ದಾರೆ. ಅದು ಹೇಗೆಂದರೆ:—

ಮೊಟ್ಟಮೊದಲು, "ಸೂತ್ರಾರ್ಥ ಉಚ್ಯತೇ।" ಎಂದು ಬರೆದು, ಬಳಿಕ "ಈ ಸ್ಥಳದಲ್ಲಿ ನಿರುಪಪದವಾದ 'ಸೂತ್ರ' ಶಬ್ದದಿಂದ 'ಬ್ರಹ್ಮಸೂತ್ರ' ಎಂಬರ್ಥವು ವ್ಯಕ್ತವಾಗುತ್ತದೆಯೇ ಹೊರತು, ಜೈಮಿನಿ ಸೂತ್ರ, ಅಥವಾ ಪಾಣಿನಿ ಸೂತ್ರ ಎಂದು ಅರ್ಥವಾಗುವುದಿಲ್ಲ; ಏಕೆಂದರೆ, ಎಲ್ಲ ಸೂತ್ರ ಗ್ರಂಥಗಳಲ್ಲಿ ಬ್ರಹ್ಮಸೂತ್ರ ಗ್ರಂಥವೇ ಶ್ರೇಷ್ಠವಾಗಿದೆ; ಎಂದರೆ, ಮುಖ್ಯವಾಗಿದೆ" ಎಂಬ ಆಶಯವನ್ನು ವ್ಯಕ್ತಪಡಿಸಿ ಕೊನೆಗೆ ಶಬ್ದ ಶಾಸ್ತ್ರಜ್ಞರ ನಿಯಮವನ್ನು ಹೀಗೆ ಹೇಳಿದ್ದಾರೆ:—

ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋಽನ್ಯೇಷಾಂ ವಿಶೇಷತಃ ।
ಇತಿ ವೇದವಿದಃ ಪ್ರಾಹುಃ ಶಬ್ದ ತತ್ತ್ವಾರ್ಥವೇದಿನಃ ॥

(ಅರ್ಥ :—'ಯಾವುದು ಮುಖ್ಯವಾದುದು ಎಂದರೆ, ವಿಖ್ಯಾತವಾದುದೋ, ಅದರ ಹಿಂದೆ ವಿಶೇಷಣವಿರುವುದಿಲ್ಲ; ಆದರೆ ಇತರ ಅಮುಖ್ಯವಾದವುಗಳ ಹಿಂದೆ ವಿಶೇಷಣ ವಿರುತ್ತದೆ' ಎಂದು ವೇದವನ್ನೂ ಶಬ್ದ ತತ್ತ್ವಾರ್ಥವನ್ನೂ ಬಲ್ಲವರು ಹೇಳುತ್ತಾರೆ.)

ಆದುದರಿಂದ, "ಎರಡಱುನೂಱು" ಎಂಬ ನಿರ್ವಿಶೇಷಣ ಶಬ್ದದಿಂದ ಸಂಬೋಧಿ ಸಲ್ಪಡುವ ನಾಡು, ಮುಖ್ಯವಾದುದು, ಅತಏವ, ವಿಖ್ಯಾತವಾದುದು ಇದ್ದಿತೆಂಬುದು ಸಿದ್ಧ. ಇಷ್ಟಕ್ಕೂ, ಕಳಸ ಗ್ರಾಮದ ಶಿಲಾ ಶಾಸನದಲ್ಲಿ, "ಕುಂತಳ ಧರಾತಳಂ ತದ್ವಿಷಯಕ್ಕೆ ಎರಡಱುನೂಱು ಲಲಾಮಂ" ಎಂದರೆ, ಕುಂತಳ ದೇಶದಲ್ಲಿ ಎರಡಱು ನೂಱು ನಾಡು ಶ್ರೇಷ್ಠವಾದದ್ದೆಂದು ಕಂಠೋಕ್ತವಾಗಿ ಹೇಳಿಯೂ ಇದೆ.

ಕವಿ ರನ್ನನು (ಕ್ರಿ. ಶ. ೯೮೨) ತನ್ನ 'ಗದಾಯುದ್ಧ'ವೆಂಬ ಗ್ರಂಥದಲ್ಲಿ, "ಎರಡಱುನೂಱಱ ಕನ್ನಡಂ ಆ ತಿರುಳ ಕನ್ನಡಂ" ಎಂದು ಸ್ಪಷ್ಟವಾಗಿ ಹೇಳಿದ್ದರಿಂದ ಈ ಎರಡಱುನೂಱಱ ನಾಡು ತಿರುಳಕನ್ನಡ ನಾಡೆಂಬುದೂ ನಿಸ್ಸಂದೇಹವಾಗಿದೆ.

ಈ ರನ್ನನ ಕಾಲದಿಂದ ಒಂದು ಶತಮಾನದ ಹಿಂದೆಯೇ ನೃಪತುಂಗನು (ಕ್ರಿ. ಶ. ೮೧೪–೮೭೭) ತನ್ನ ಕವಿರಾಜಮಾರ್ಗ ಗ್ರಂಥದಲ್ಲಿ, ತಿರುಳ ಕನ್ನಡ ನಾಡುಗಳು ಯಾವುವೆಂಬುದನ್ನು ಹೀಗೆ ನಿರ್ಣಯಿಸಿದ್ದಾನೆ:—

ಅದಱೊಳಗಂ ಕಿಸುವೊೞಲಾ ।
ವಿದಿತ ಮಹಾ ಕೊಪಣನಗರದಾ ಪುಲಿಗೆಱೆಯಾ ॥
ಸದಭಿಸ್ತುತಮಪ್ಪೊಂಕುಂ ।
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ ೧–೩೭ ॥

ಈ ಪದ್ಯದಲ್ಲಿ ನೃಪತುಂಗನು, ಅಖಿಲ ಕರ್ಣಾಟಕದಲ್ಲಿ ಕಿಸುವೊಳಲ ನಾಡು, ಕೊಪಣನಗರದ ನಾಡು, ಪುಲಿಗೆರೆಯ ನಾಡು, ಒಂಕುಂದದ ನಾಡು ಎಂಬ ಈ ನಾಲ್ಕು ನಾಡುಗಳು ಸೇರಿ ಆದಂಥ ನಡುವಣ ನಾಡು ತಿರುಳ ಕನ್ನಡ ನಾಡೆಂದು ಚೆನ್ನಾಗಿ ವ್ಯಕ್ತಪಡಿಸಿದ್ದಾನೆ. ಈ ನಾಲ್ಕು ತಿರುಳ ಕನ್ನಡ ನಾಡುಗಳಲ್ಲಿ ಕೊಪಣ ನಗರದ ನಾಡು, ಮಿಕ್ಕ ಮೂರು ನಾಡುಗಳಿಗಿಂತ ಬಹು ವಿಖ್ಯಾತವಾಗಿಯೂ ವಿಶಾಲವಾಗಿಯೂ ಇದ್ದಿತೆಂಬುದು ಅದಕ್ಕಿರುವ "ಆ, ವಿದಿತ, ಮಹಾ" ಎಂಬ ವಿಶೇಷಣಗಳಿಂದ ಸ್ಪಷ್ಟವಾಗುತ್ತದೆ. ಇದಲ್ಲದೆ, ಈ ಕೊಪಣನಗರದ ನಾಡು ಕುಂತಳ ದೇಶದಲ್ಲಿಯೇ ಇದೆ. ಮಥಿತಾರ್ಥವೇನೆಂದರೆ, ಕುಂತಳ ಧರಾತಳಕ್ಕೆ ಲಲಾಮ ವಾದಂಥ, ತಿರುಳ್ಗನ್ನಡ ನಾಡಾದಂಥ, ಮತ್ತು "ಎರಡಱುನೂಱು" ಎಂಬ ಸಿರ್ವಿಶೇಷಣ ಶಬ್ದದಿಂದ ಸಂಬೋಧಿಸಲ್ಪಡುವಷ್ಟು ಸುಪ್ರಸಿದ್ಧವಾದಂಥ ನಾಡೆಂದರೆ ಕೊಪಣನಗರದ ನಾಡೆಂಬುದು ಸಿದ್ಧ.

ಈ ಸಿದ್ಧಾಂತಕ್ಕೆ ಪೋಷಕವಾದ ಪ್ರಮಾಣಗಳನ್ನು ಹೇಳುವ.—

೧. ದೇವಗೇರಿ ಗ್ರಾಮದ ಶಿಲಾ ಶಾಸನವು, ನಮ್ಮ ಸಿದ್ಧಾಂತಕ್ಕೆ ಪೋಷಕ ಪ್ರಮಾಣವಾಗಿದೆ. ಇದನ್ನು ವಿವರಿಸುವುದಕ್ಕಿಂತ ಮೊದಲು, ಶಿಲಾ ಶಾಸನಗಳಲ್ಲಿಯ ಲೇಖನ ಪದ್ಧತಿಯ ಒಂದು ಅಂಶವನ್ನು ತಿಳಿಸುವುದು ಅತ್ಯವಶ್ಯವಾಗಿದೆ. ಅದೇನೆಂದರೆ, ದಂಡನಾಯಕರು, ಅಥವಾ ಮಂಡಳೇಶ್ವರರು, ಇಲ್ಲವೆ, ಅರಸರು ಆಳುವ ನಾಡು ಗಳನ್ನು ಹೇಳುವಾಗ್ಗೆ, ಪೂರ್ವ ದಿಕ್ಕಿನಿಂದ ಪಶ್ಚಿಮ ದಿಕ್ಕಿನ ಕಡೆಗೆ ಅಥವಾ, ಪಶ್ಚಿಮ ದಿಕ್ಕಿನಿಂದ ಪೂರ್ವ ದಿಕ್ಕಿನ ಕಡೆಗೆ, ಇಲ್ಲವೆ, ಉತ್ತರ ದಿಕ್ಕಿನಿಂದ ದಕ್ಷಿಣ ದಿಕ್ಕಿನ ಕಡೆಗಾಗಲಿ, ದಕ್ಷಿಣ ದಿಕ್ಕಿನಿಂದ ಉತ್ತರ ದಿಕ್ಕಿನ ಕಡೆಗಾಗಲಿ ಕ್ರಮದಿಂದ ಹೇಳುತ್ತ ಸಾಗಿದ್ದಾರೆ.—

ದೇವಗೇರಿ ಗ್ರಾಮದ ಶಾಸನದ ಲೇಖಕನು, ಈಶ್ವರಯ್ಯ ದಂಡನಾಯಕನ ನಾಡುಗಳನ್ನು ಹೇಳುವಾಗ್ಗೆ, ಪಶ್ಚಿಮ ದಿಕ್ಕಿನ ನಾಡನ್ನು ಮೊದಲು ಹೇಳಿ ತದ ನಂತರ ಅನುಕ್ರಮವಾಗಿ ಪೂರ್ವ ದಿಕ್ಕಿನ ನಾಡುಗಳನ್ನು ಹೇಳುತ್ತ ಸಾಗಿದ್ದಾನೆ. ಅದು ಹೇಗೆಂದರೆ—

> "ಈಶ್ವರಯ್ಯ ದಂಡನಾಯಕಂ ಬನವಾಸೆ ಪನ್ನಿಚ್ಛಾಸಿರಮುಮಂ ಬೆಳ್ವಲ
> ವೆರಡಱುನೂಱುಮಂ ಸುಖ ಸಂಕಥಾ ವಿನೋದದಿಂದಾಳುತ್ತಮಿರೆ।"

ಎಂದು ಶಾಸನವಿದೆ. ಮೊದಲು ಈ ಶಿಲಾ ಶಾಸನದಲ್ಲಿಯ **"ಬೆಳ್ವಲವೆರಡಱು ನೂಱುಮಂ"** ಎಂಬ ಪದ ಸಮುಚ್ಚಯವನ್ನು ವ್ಯಾಕರಣ ಶಾಸ್ತ್ರದ ದೃಷ್ಟಿಯಿಂದ ಪದಚ್ಛೇದ ಮಾಡಿ, ಆ ಪದಗಳಿಗೆ ಸರಿಯಾದ ಅರ್ಥವನ್ನು ಹೇಳಿದರೆ, ಮುಂದಿನ ವಿವೇಚನೆಯು ಸುಲಭವಾಗಿ ತಿಳಿಯುವುದು.—

ಬೆಳ್ವಲಂ + ಎರಡಱುನೂಱುಮಂ=ಬೆಳ್ವಲವೆರಡಱುನೂಱುಮಂ ಎಂದು ಪದ ಸಮುಚ್ಚಯವಾಗಿದೆ. ಇದರಲ್ಲಿ ಬಿಂದುವಿಗೆ ಸ್ವರವು ಪರವಾಗಿರುವುದರಿಂದ ಶಬ್ದ ಮಣಿದರ್ಪಣದ ೧೦೪ನೆಯ ಸೂತ್ರದ ಪ್ರಕಾರ "ಬೆಳ್ವಲ**ವೆ**ರಡಱುನೂಱುಮಂ"

ಎಂಬ ಆಗತಕ್ಕದ್ದಿದ್ದರೂ, ಅದೇ 'ಸೂತ್ರದೊಳಗಿನ "ಅ ಮತ್ತಕ್ಕೆ ಅರೆಬರ್ ವತ್ವಮಂ ಉಚ್ಚರಿಪರ್" ಎಂಬ ನಿಯಮಕ್ಕನುಸರಿಸಿ, ಅದು "ಬೆಳ್ವಲವೆರಡಱುನೂಱುಮಂ" ಎಂದು ಆಗಿದೆ. ಇನ್ನು, ಈ ಎರಡು ಪದಗಳಲ್ಲಿ 'ಬೆಳ್ವಲಂ' ಎಂಬ ಪ್ರಥಮಾ ವಿಭಕ್ತಿಯು, ಶಬ್ದಮಣಿದರ್ಪಣದ ೧೩೬ನೆಯ ಸೂತ್ರದಲ್ಲಿ ಹೇಳಿದ "ಪ್ರಥಮೆಯುಂ ದ್ವಿತೀಯೆಯೊಳಕ್ಕುಂ" ಎಂಬ ನಿಯಮಕ್ಕನುಸರಿಸಿ, ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿದೆ. ಸಾರಾಂಶ, ಈಶ್ವರಯ್ಯ ದಂಡನಾಯಕನು ಬನವಾಸಿ ಪನ್ನಿಚ್ಛಾಸಿರ ನಾಡನ್ನೂ [2]ಬೆಳ್ವಲ ನಾಡನ್ನೂ ಎರಡಱುನೂಱು ನಾಡನ್ನೂ ಆಳುತ್ತಿದ್ದನೆಂಬುದೇ ಈ ಶಿಲಾಲೇಖದ ಅರ್ಥವಾಗಿದೆ.

ಈ ಶಿಲಾಶಾಸನದಲ್ಲಿ ಮೊದಲು ಪಶ್ಚಿಮ ದಿಕ್ಕಿನಲ್ಲಿದ್ದ ಬನವಾಸಿ ನಾಡನ್ನು ಹೇಳಿ, ಆ ಬಳಿಕ ಪೂರ್ವ ದಿಕ್ಕಿನ ಕಡೆಗೆ ಕ್ರಮದಿಂದ ಹೇಳುತ್ತ ಹೊರಟಿದ್ದಾನೆ; ಎಂದರೆ, ಬೆಳ್ವಲ ನಾಡನ್ನೂ ತದನಂತರ ಅನರಾಜೆಯಲ್ಲಿದ್ದ ಎರಡಱುನೂಱು ನಾಡನ್ನೂ ಹೇಳಿದ್ದಾನೆ. ಇದರಿಂದ ಬೆಳ್ವಲ ನಾಡಿನ ಪೂರ್ವಕ್ಕೆ ಎರಡಱುನೂಱು ನಾಡು ಇರುತ್ತದೆಂಬುದು ಸ್ಪಷ್ಟವಾಯಿತು. ಇದಲ್ಲದೆ, ಬೆಳ್ವಲ ನಾಡು ಬೇರೆ, ಎರಡಱುನೂಱು ನಾಡು ಬೇರೆ ಎಂಬುದೂ ನಿಸ್ಸಂದೇಹವಾಯಿತು.

ಬೆಳ್ವಲ ನಾಡಿನ ಪೂರ್ವಕ್ಕೆ ಕೊಪಣನಗರದ ನಾಡು ಇರುತ್ತದೆ; ಎಂದರೆ, ಕೊಪ್ಪಳ ನಾಡು ಇರುತ್ತದೆ. ಅತಏವ, ಕೊಪಣನಗರದ (ಎಂದರೆ ಕೊಪ್ಪಳದ) ನಾಡೆಂದರೆ ಎರಡಱುನೂಱು ನಾಡೆಂಬುದು ಸಿದ್ಧ.

೨. ಇದೇ ಮೇರೆಗೆ ಕಲ್ಲೂರು ಗ್ರಾಮದ ಶಿಲಾಶಾಸನವೂ ನಮ್ಮ ಸಿದ್ಧಾಂತಕ್ಕೆ ಪೋಷಕ ಪ್ರಮಾಣವಾಗಿದೆ. ಈ ಶಾಸನದಲ್ಲಿ—

> ಶ್ರೀಮತು ಎರಡಱುನೂಱು ಸುಂಕವೆಗ್ಗಡೆ ಮಹೇಶ್ವರಯ್ಯಂ
> ಗಳು, ಶ್ರೀಮತು ಬೆಳ್ವೊಲ ನಾಡ ಬಳಿಯ ಕುಕ್ಕನೂರ ಮೂವತ್ತರೊಳ
> ಗಣ ಕಲ್ಲೂರ ಕಲ್ಲಿನಾಥ ದೇವರಿಗೆ ಅಂಗಭೋಗ, ನೈವೇದ್ಯಕ್ಕೆ

ದಾನಕೊಟ್ಟರೆಂದು ಹೇಳಿದೆ. ಇದರಲ್ಲಿ ಬೆಳ್ವೊಲ ನಾಡಿನ ಬಳಿಯ (ಎಂದರೆ, ಕೊನೆಯ) ಕುಕ್ಕನೂರ ಮೂವತ್ತರೊಳಗಣ ಕಲ್ಲೂರು ಎಂದು ಹೇಳಿದ್ದರಿಂದ ಬೆಳ್ವೊಲ ನಾಡಿನ ಪೂರ್ವ ಮೇರೆಯ ಕೊನೆಯ ಭಾಗವೆಂದರೆ ಕುಕ್ಕನೂರು ಮೂವತ್ತು; ಅದರಲ್ಲಿಯೂ ಕಲ್ಲೂರೆಂದರೆ, ಬೆಳ್ವೊಲ ನಾಡಿನ ಪೂರ್ವ ಮೇರೆಯ ಕಟ್ಟಕಡೆಯ ಜಾಂಡು ಕಲ್ಲು ಎಂದು ವ್ಯಕ್ತವಾಗುತ್ತದೆ. ಈ ಪ್ರಕಾರ ಬೆಳ್ವೊಲ ನಾಡಿನ ಪೂರ್ವ ದಿಕ್ಕಿನ ಕೊನೆಯ

---

1. ಪರದೊಳ್ ಸ್ವರವಿರೆ ಬಿಂದುಗೆ|
ದೊರೆಕೊಳ್ಗುಂ ನತ್ವ ಮತ್ವಮಾ ಮತ್ವಕ್ಕು ||
ಚ್ಚರಿಪರ್ ವತ್ವಮನರೆಬರ್ |
ನಿರವದ್ಯಂ ನಿಜ ಮಕಾರದೆಡೆಗಂ ವತ್ವಂ ||೧೦೪||
(ಶಬ್ದಮಣಿದರ್ಪಣ)

2. ಈ ಶಾಸನದಲ್ಲಿ "ಬೆಳ್ವಲನೂನರೂಱುಮಂ" ಎಂದು ಇರತಕ್ಕದ್ದಿದ್ದು, ಗ್ರಾಮ ಸಂಖ್ಯೆಯನ್ನು ಹೇಳದೆ ಇದರಲ್ಲಿ ಕೇವಲ 'ಬೆಳ್ವಲಂ' ಎಂದು ನಾಡಿನ ಹೆಸರನ್ನಷ್ಟೇ ಹೇಳಿದ್ದಾನೆ. ಈ ಪದ್ಧತಿಯು ಈ ಶಾಸನಕ್ಕಿಂತ ಮೊದಲಿನ ಶಾಸನದಲ್ಲಿಯೂ ಕಾಣಬರುತ್ತದೆ. "ಬೆಳ್ವಲ ಬನವಾಸಿ ಪನ್ನಿಚ್ಛಾಸಿರಮುಂ ಸಾನ್ತಳಿಗೆ ಸಾಯಿರಮುಂ ಸುಖದಿಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನೆಯಿಂ ರಾಜ್ಯಂಗೆಯ್ಯುತ್ತಮಿರೆ|"
(ಶಿಕಾರಿಪುರ ತಾಲೂಕಿನ ೧೯೭ನೆಯ ಶಾಸನ, ಕ್ರಿ. ಶ. ೧೦೬೮)

ಗ್ರಾಮವಾದ ಕಲ್ಲೂರಿನ ಕಲ್ಲಿನಾಥ ದೇವರಿಗೆ, ಎರಡಱುನೂಱು ಸುಂಕದ ಅಧಿಕಾರಿಯಾದ ಮಹೇಶ್ವರಯ್ಯನು ದಾನವಮಾಡಿದನೆಂದು ಈ ಶಾಸನದಲ್ಲಿ ಹೇಳಿದ್ದರಿಂದ ಈ ಎರಡಱುನೂಱು ನಾಡು ಬೇರೆ, ಬೆಳ್ವೊಲ ನಾಡು ಬೇರೆ ಎಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಯಿತು. ಇಷ್ಟೇ ಅಲ್ಲ, ಎರಡಱುನೂಱು ನಾಡು ಬೆಳ್ವೊಲ ನಾಡಿನ ಪೂರ್ವಕ್ಕೆ ಇದ್ದಿತೆಂಬುದೂ ವ್ಯಕ್ತವಾಯಿತು ; ಏಕೆಂದರೆ, ಬೆಳ್ವೊಲ ನಾಡಿನ **ಪೂರ್ವ ಮೇರೆಯಲ್ಲಿದ್ದ** ಕಲ್ಲೂರಿನ ದೇವರಿಗೆ ಎರಡಱುನೂಱು ನಾಡಿನವನು [1] ದಾನ ಕೊಟ್ಟಿದ್ದಾನೆ. ಈ ಬೆಳ್ವೊಲ ನಾಡಿನ ಪೂರ್ವಕ್ಕೆ ಕೊಪಣನಗರದ (ಕೊಪ್ಪಳದ) ನಾಡು ಇರುತ್ತದೆಂಬುದು ಪ್ರಸಿದ್ಧವಾಗಿಯೇ ಇದೆ. ಅತಏವ, ಕೊಪಣನಗರದ ನಾಡೆಂದರೆ ಎರಡಱುನೂಱು ನಾಡೆಂಬ ಸಿದ್ಧಾಂತವನ್ನು ಈ ಕಲ್ಲೂರ ಶಾಸನವೂ ಸ್ಥಿರಪಡಿಸುತ್ತದೆ.

೩. ಇನ್ನು, ಕಳಸ ಗ್ರಾಮದ ಶಿಲಾ ಶಾಸನವನ್ನು ಕುರಿತು ವಿಚಾರ ಮಾಡುವ. ಕಳಸ ಗ್ರಾಮವು, ಪುಲಿಗೆರೆ ಪಟ್ಟಣದ (ಎಂದರೆ, ಲಕ್ಷ್ಮೇಶ್ವರ ಗ್ರಾಮದ) ಪಶ್ಚಿಮಕ್ಕೆ ಐದೇ ಮೈಲು ದೂರದಲ್ಲಿರುವುದರಿಂದ ಈ ಕಳಸ ಗ್ರಾಮದ ಶಿಲಾ ಶಾಸನವನ್ನು ಬರೆದವನು, ಪುಲಿಗೆರೆ ನಾಡಿನವನೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಶಾಸನದ ಲೇಖಕನು, ಶ್ರೇಷ್ಠವಾದ ಎರಡಱುನೂಱು ನಾಡಿನ ಪ್ರತಿಬಿಂಬವೇ ತನ್ನ ಪುಲಿಗೆರೆ ನಾಡು ಇರುತ್ತದೆಂಬುದನ್ನೂ ಆ ಸುಪ್ರಸಿದ್ಧವಾದ ನಾಡಿಗೆ ತನ್ನ ನಾಡು ಸಮೀಪದಲ್ಲಿರುತ್ತದೆಂಬುದನ್ನೂ ತೋರಿಸುವುದಕ್ಕೋಸ್ಕರ ಈ ಶಾಸನದಲ್ಲಿ—

"ಕುಂತಳ ಧರಾತಳಕ್ಕೆ ಎರಡಱುನೂಱು ಲಲಾಮಂ ಪುರಿಕರ ಜನಪದಂ ಅದಕ್ಕೆ
ನವ ಪವಿ ಮುಕುರಂ ॥"

ಎಂದು ಹೇಳಿದ್ದಾನೆ. ಎಂದರೆ, ಕುಂತಳ ರಾಷ್ಟ್ರದಲ್ಲಿ ಶ್ರೇಷ್ಠವಾದ ಎರಡಱುನೂಱು ನಾಡಿಗೆ ಪುಲಿಗೆರೆ ನಾಡು ನವರನ್ನ**ಗನ್ನಡಿ**ಯಾಗಿರುತ್ತದೆಂದು ಹೇಳಿದ್ದಾನೆ.

ಚೌಂಡರಸ ಕವಿಯು, ತನ್ನ ಅಭಿನವ ದಶಕುಮಾರ ಚರಿತ್ರ ಗ್ರಂಥದಲ್ಲಿ (೧೪–೭)

"...............ಸತ್ಪಾಂಡುರಂಗಕ್ಕೆ ಭೀ ।
ಮರಥೀದೇವಿ ಸುದರ್ಶಣಂ ಗಡಮೆನಲ್ ಚೆಲ್ವಾಗಿ ಕಣ್ಗೊಪ್ಪುಗುಂ ॥"

ಎಂದು ಹೇಳಿದ್ದಾನೆ. ಎಂದರೆ, ಈತನು ಪಾಂಡುರಂಗ ಕ್ಷೇತ್ರಕ್ಕೆ **ಸಮೀಪದಲ್ಲಿದ್ದ** ಭೀಮರಥೀ ನದಿಯನ್ನು **ಕನ್ನ**ಡಿಯನ್ನಾಗಿ ಹೇಗೆ ರೂಪಿಸಿದ್ದಾನೆಯೋ, ಹಾಗೆಯೇ ಈ ಶಿಲಾ ಶಾಸನದಲ್ಲಿ ಎರಡಱುನೂಱು ನಾಡಿಗೆ ಪುಲಿಗೆರೆ ನಾಡನ್ನು ಕನ್ನಡಿಯನ್ನಾಗಿ ರೂಪಿಸಿರುವುದರಿಂದ ಎರಡಱುನೂಱು ನಾಡಿಗೆ ಪುಲಿಗೆರೆ ನಾಡು **ಸಮೀಪದಲ್ಲಿರು**

1. ಕಲ್ಲೂರ ಗ್ರಾಮದ ಕೇವಲ ಪೂರ್ವಕ್ಕೆ ೧೦ ಮೈಲುಗಳ ಮೇಲೆ ಇರುವ ವಣಗೇರಿ, ಮುಂಗಳೂರು ಗ್ರಾಮಗಳ ದಾನಭೋಗರ ಮನೆತನದವನು, ಈ ಕಲ್ಲೂರಿನ ಕಲ್ಲಿನಾಥ ದೇವರಿಗೆ ಭೂದಾನವನ್ನು ಕೊಟ್ಟಿದ್ದಾರೆ. ಆ ಮನೆತನದವರಿಗೆ ಈ ಕಲ್ಲಿನಾಥೇಶ್ವರನು ಕುಲದೇವರಾಗಿದ್ದಾನೆ. ಈ ದೇವರ ಒಕ್ಕಲು ಎಂದರೆ, ಭಕ್ತರು, ಕಲ್ಲೂರಿನ ಪೂರ್ವಕ್ಕಿರುವ ನಾಡಿನಲ್ಲಿಯೇ ಇದ್ದಾರೆ; ಹೊರತು, ಇತ್ತ ಬೆಳ್ವೊಲನಾಡಿನಲ್ಲಿಲ್ಲ. ಬೆಳ್ವೊಲನಾಡಿನಲ್ಲಿ ಕಲ್ಲೂರಿಗಿಂತ ಶ್ರೇಷ್ಠವಾದ ಕುಕ್ಕನೂರು, ಇಟಗಿ, ಗದಗು ಮುಂತಾದ ಶೈವ ಕ್ಷೇತ್ರಗಳಿವೆ.

ತ್ತದೆಂಬುದು ಸ್ಪಷ್ಟವಾಗುತ್ತದೆ; ಮತ್ತು ಪುಲಿಗೆರೆ ನಾಡು ಬೇರೆ, ಎರಡಱುನೂಱು ನಾಡು ಬೇರೆ ಎಂಬುದೂ ವ್ಯಕ್ತವಾಗುತ್ತದೆ.

ಪುಲಿಗೆರೆ ನಾಡಿನ (ಎಂದರೆ, ಲಕ್ಷ್ಮೇಶ್ವರ ನಾಡಿನ) ಸಮೀಪದಲ್ಲಿಯೇ ಕೊಪಣ ನಗರದ ನಾಡು (ಎಂದರೆ, ಕೊಪ್ಪಳ ನಾಡು) ಇರುತ್ತದೆ. ಅತಏವ, ಕೊಪಣನಗರದ ನಾಡೆಂದರೆ, ಎರಡಱುನೂಱು ನಾಡೆಂಬ ಸಿದ್ಧಾಂತವನ್ನು ಈ ಶಾಸನವೂ ಸಹ ಪುಷ್ಟೀಕರಿಸುತ್ತದೆ.

೪. ಈ ವಿಷಯವಾಗಿ ಗಾವರವಾಡ ಗ್ರಾಮದ ಶಿಲಾ ಶಾಸನವೂ ಲಕ್ಷ್ಮೇಶ್ವರ ಗ್ರಾಮದ ಶಿಲಾ ಶಾಸನವೂ ಏನನ್ನು ಹೇಳುತ್ತವೆ ನೋಡೋಣ. ಈ ಎರಡು ಶಾಸನಗಳನ್ನು ಹೋಲುವ ಇತರ ಶಾಸನಗಳೆಂದರೆ, ಜಯಸಿಂಹದೇವರ ಎರಡು ಶಾಸನಗಳು (ಸಾಗರ ೧೮೯, ಶಿಕಾರಿಪುರ ೨೯೩) ಮತ್ತು ಗೋವಿಂದ್ರಮಯ್ಯನ ಶಾಸನವು (ಶಿಕಾರಿಪುರ ೧೩೭)—ಇವು ಮೂರೇ ಸರಿ. ಇವು ಮೂರೂ ಒಂದೇ ರೀತಿಯಾಗಿದ್ದುದರಿಂದ, ಇವುಗಳಲ್ಲಿ ಒಂದನ್ನು ತುಲನಾತ್ಮಕವಾದ ಅಭ್ಯಾಸಕ್ಕೋಸ್ಕರ ತೆಗೆದುಕೊಳ್ಳುತ್ತೇನೆ.—

"ಯುವರಾಜಂ ಜಯಸಿಂಹದೇವರು ಬನವಾಸಿ ಪನ್ನಿಚ್ಛಾಸಿರಮುಂ, ಸಾಂತಳಿಗೆ ಸಾಸಿರಮುಮಂ+ಎರಡಱುನೂಱುಮಂ ಸುಖ ಸಂಕಥಾ ವಿನೋದದಿಂದಾಳುತ್ತಮಿರೆ।"

(ಶಿಕಾರಿಪುರ ತಾಲೂಕಿನ ೨೯೩ನೆಯ ಶಾಸನ, ಕ್ರಿ. ಶ. ೧೦೮೦)

"ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರು ಬೆಳ್ವೊಲ ಮೂನೂಱುಮಂ ಪುಲಿಗೆಱೆ ಮೂನೂರು+ಉಂ+ಅನ್ತು+ಎರಡಱುನೂಱುಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನೆಯಿಂ ಪ್ರತಿಪಾಳಿಸುತ್ತಮಿರೆ।"

(ಗಾವರವಾಡ ಗ್ರಾಮದ ಶಿಲಾ ಶಾಸನ, ಕ್ರಿ. ಶ. ೧೦೭೨)

"ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ ಪುಲಿಗೆಱೆ ಮೂನೂಱು+ಉಂ ಬೆಳ್ವೊಲ ಮೂನೂಱು+ಉಂ+ಅನ್ತು+ಎರಡಱುನೂಱುಮಂ ಸುಖದಿನಾಳುತ್ತಮಿರೆ।"

(ಲಕ್ಷ್ಮೇಶ್ವರ ಗ್ರಾಮದ ಶಿಲಾ ಶಾಸನ, ಕ್ರಿ. ಶ. ೧೦೭೪)

ಈ ಮೂರೂ ಶಾಸನಗಳನ್ನು ತುಲನಾತ್ಮಕವಾದ ದೃಷ್ಟಿಯಿಂದ ನೋಡುವ. **"ಎರಡಱುನೂಱು"** ಎಂಬ ವಿರ್ಶಿಷ್ಟ ಶಬ್ದದಿಂದ ಸಂಬೋಧಿಸಲ್ಪಡುವ ಸುಪ್ರಸಿದ್ಧವಾದ ಈ ನಾಡಿನ ಹೆಸರು ಪ್ರತಿಯೊಂದು ಶಾಸನದಲ್ಲಿಯೂ ಕೊನೆಯಲ್ಲಿಯೇ ಇದೆ. ಹಾಗೆಯೇ, ಮೂರೂ ಶಾಸನಗಳಲ್ಲಿ ಸಮುಚ್ಚಯಾರ್ಥದ **'ಉಂ'** ಎಂಬ ಅವ್ಯಯವಿದೆ. ಇದೇ ಮೇರೆಗೆ ಈ ಎಲ್ಲ ಶಾಸನಗಳಲ್ಲಿಯೂ ಕೆಲವು ಪದಗಳು ದ್ವಿತೀಯಾ ವಿಭಕ್ತಿಯಲ್ಲಿವೆ; ಕೆಲವು ಪದಗಳು ದ್ವಿತೀಯಾ ವಿಭಕ್ತಿಯ ಅರ್ಥದ [1] ಪ್ರಥಮಾ ವಿಭಕ್ತಿಯಲ್ಲಿವೆ. ಸಾರಾಂಶವೇನೆಂದರೆ, ಜಯಸಿಂಹದೇವರು, ಬನವಾಸಿ ಪನ್ನಿಚ್ಛಾಸಿರ ನಾಡನ್ನೂ ಸಾಂತಳಿಗೆ ಸಾಸಿರ ನಾಡನ್ನೂ ಎರಡಱುನೂಱು ನಾಡನ್ನೂ ಆಳುತ್ತಿದ್ದಂತೆಯೇ ಲಕ್ಷ್ಮರಸರು ಬೆಳ್ವೊಲ ಮೂನೂಱು ನಾಡನ್ನೂ

1. ಶಬ್ದಮಣಿದರ್ಪಣದ ೧೩೭ನೆಯ ಸೂತ್ರ.

ಪುಲಿಗೆರೆ ಮೂನೂಱು ನಾಡನ್ನೂ ಎರಡಱುನೂಱು ನಾಡನ್ನೂ ಆಳುತ್ತಿದ್ದರೆಂಬುದೇ ಗಾವರವಾಡ, ಲಕ್ಷ್ಮೇಶ್ವರ ಶಾಸನಗಳ ಅರ್ಥವು. ಆದುದರಿಂದಲೇ ಗಾವರವಾಡ ಗ್ರಾಮದ ಶಾಸನದಲ್ಲಿಯೂ ಲಕ್ಷ್ಮೇಶ್ವರ ಗ್ರಾಮದ ಶಾಸನದಲ್ಲಿಯೂ ಇರುವ 'ಅನ್ತು' ಎಂಬ[1] ಅವ್ಯಯಕ್ಕೆ 'ಮತ್ತು' ಎಂದು ಅರ್ಥಮಾಡುವುದು ಯಥಾನ್ಯಾಯವಾಗಿದೆ; ಇಷ್ಟೇ ಅಲ್ಲ, ಕ್ರಮ ಪ್ರಾಪ್ತವಾಗಿದೆ.

ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ, ಈ ಎರಡು ಶಾಸನಗಳಿಂದ ಬೆಳ್ವೊಲ ನಾಡು ಬೇರೆ, ಪುಲಿಗೆರೆ ನಾಡು ಬೇರೆ, ಎರಡಱುನೂಱು ನಾಡು ಬೇರೆ ಎಂಬುದು ಮತ್ತಿಷ್ಟು ದೃಢವಾಯಿತು. ಇದೂ ಅಲ್ಲದೆ, ಜಯಸಿಂಹದೇವರ ಶಾಸನದಲ್ಲಿ ದಕ್ಷಿಣೋತ್ತರವಾಗಿರುವ ಬನವಾಸಿ ನಾಡನ್ನೂ ಸಾಂತಳಿಗೆ ನಾಡನ್ನೂ ಮೊದಲು ಹೇಳಿ, ತದನಂತರ ಪೂರ್ವ ದಿಕ್ಕಿನ ನಾಡಾದ ಎರಡಱುನೂಱು ನಾಡನ್ನು ಹೇಳಿದಂತೆಯೇ ಗಾವರವಾಡದ, ಹಾಗೂ, ಲಕ್ಷ್ಮೇಶ್ವರದ ಶಾಸನಗಳಲ್ಲಿ ದಕ್ಷಿಣೋತ್ತರ ನಾಡುಗಳಾದ ಪುಲಿಗೆರೆ ನಾಡನ್ನೂ ಬೆಳ್ವೊಲ ನಾಡನ್ನೂ ಮೊದಲು ಹೇಳಿ, ಆಮೇಲೆ ಪೂರ್ವ ದಿಕ್ಕಿನ ನಾಡಾದ ಎರಡಱುನೂಱು ನಾಡನ್ನು ಹೇಳಿದ್ದಾರೆಂಬುದು ಅತಿ ಸ್ಪಷ್ಟವಾಯಿತು.

ಪುಲಿಗೆರೆ ನಾಡಿನ, ಹಾಗೂ, ಬೆಳ್ವೊಲ ನಾಡಿನ ಪೂರ್ವಕ್ಕೆ ಕೊಪಣನಗರದ (ಎಂದರೆ, ಕೊಪ್ಪಳದ) ನಾಡು ಇರುತ್ತದೆ. ಇತ್ಯರ್ಥವೇನೆಂದರೆ, ಎರಡಱುನೂಱು ನಾಡೆಂದರೆ ಕೊಪಣನಗರದ ನಾಡೆಂಬ ಸಿದ್ಧಾಂತಕ್ಕೆ ಈ ಎರಡು ಶಾಸನಗಳೂ ಪೋಷಕ ಪ್ರಮಾಣಗಳಾಗಿವೆ.

ಇನ್ನು, ಈ ಪ್ರಬಂಧದ ಆರಂಭದಲ್ಲಿ ಹೇಳಿದಂತೆ, ಎರಡಱುನೂಱು ವಿಷಯವಾಗಿ ಮೂವರು ಪಂಡಿತರು ಮಾಡಿದ ತಪ್ಪುಗಳನ್ನು ತಿಂಡಿಸುವುದಕ್ಕೆ ಕಾಲಾನುಕ್ರಮವಾಗಿ ಹೊರಡುವ.—

ಕ್ರಿ. ಶ. ೧೯೨೫ರಲ್ಲಿ ಶ್ರೀಮಾನ್ ಎಂ. ಎ. ರಾಮಾನುಜೈಯಂಗಾರ್ಯರವರು, ಕವಿ ರನ್ನ ಪ್ರಣೀತವಾದ **'ಗದಾ ಯುದ್ಧಂ'** ಎಂಬ ಗ್ರಂಥಕ್ಕೆ ಪೀಠಿಕಾ ರೂಪವಾಗಿ ಕವಿ ರನ್ನನ ಜೀವನ ಚರಿತ್ರವನ್ನು ಬರೆಯುವಾಗ್ಗೆ ಅದರಲ್ಲಿ (ಪುಟ ೨೯) ಹೀಗೆ ಹೇಳಿದ್ದಾರೆ:—"ಕವಿ ರನ್ನನು, ತನ್ನ ಕನ್ನಡ ಭಾಷೆಯು 'ಎರಡಱುನೂಱುಱ ಕನ್ನಡಂ'—ಎಂದರೆ, "ಪುಲಿಗೆರೆ ಮೂನೂಱು, ಬೆಳ್ವೊಲ ಮೂನೂಱು ಎಂಬ ಎರಡು ದೇಶಗಳ ಆರುನೂರು ಗ್ರಾಮಗಳಲ್ಲಿ ವಾಡಿಕೆಯಾಗಿ ಮಾತನಾಡುವ ಕನ್ನಡವು, ಅದೇ ತಿರುಳ ಕನ್ನಡವು ಎಂದು ಹೇಳಿಕೊಳ್ಳುತ್ತಾನೆ." ಅಯ್ಯಂಗಾರ್ಯರವರು "ಎರಡಱುನೂಱುಱ ಕನ್ನಡ" ಎಂಬುದಕ್ಕೆ ಹೀಗೆ ಅರ್ಥಮಾಡಿ, ಭಾಷೆಯ ದೃಷ್ಟಿಯಿಂದ ದೊಡ್ಡ ಪ್ರಮಾದವನ್ನು ಮಾಡಿದ್ದಾರೆ. ಅದು ಹೇಗೆಂದರೆ, ಪುಲಗೆರೆ

1. ಅವ್ಯಯಾನಾಂ ಅನೇಕಾರ್ಥತ್ವ ಸ್ವಾಭಾವ್ಯಾತ್ ।
—(ಕರ್ಣಾಟಕ ಶಬ್ದಾನುಶಾಸನಂ, ಪುಟ ೫೮)

೩೦೦ | ಬೆಳ್ವೊಲ ೩೦೦—ಈ ಎರಡು ನಾಡುಗಳ ಗ್ರಾಮಗಳ ಸಂಖ್ಯೆಯನ್ನು ಸಂಕಲನ ಮಾಡಿ, ಆ ಆರುನೂರು ಗ್ರಾಮಗಳಲ್ಲಿ ವಾಡಿಕೆಯಾಗಿ ಮಾತನಾಡುವ ಕನ್ನಡವು ತನ್ನ ಕನ್ನಡ ಭಾಷೆಯೆಂದು ಹೇಳಿಕೊಳ್ಳುವುದು ಕವಿ ರನ್ನನ ಆಶಯವಿದ್ದಿದ್ದರೆ, ಆತನು, "ಎರಡು ಮೂನೂಱಱ ಕನ್ನಡಂ" ಅಥವಾ, "ಆಱು ನೂಱಱ ಕನ್ನಡಂ" ಎಂದು ಹೇಳಿಕೊಳ್ಳುತ್ತಿದ್ದನು; ಆದರೆ ಅವನು ಹೀಗೆ ಹೇಳಿಕೊಳ್ಳದೆ, "ಎರಡಱು ನೂಱಱ ಕನ್ನಡಂ" ಎಂದು ಹೇಳಿಕೊಂಡಿದ್ದಾನೆ. "ಎರಡಱುನೂಱು" ಎಂದರೆ ಹನ್ನೆರಡು ನೂರೆಂಬುದನ್ನು ಕನ್ನಡ ಶಬ್ದಶಾಸ್ತ್ರಜ್ಞರಿಗೆ ಬೇರೆ ಹೇಳಬೇಕಾದುದಿಲ್ಲ. ಶಬ್ದಮಣಿದರ್ಪಣದ ೧೮೮ನೆಯ ಸೂತ್ರದ ಕೆಳಗಿರುವ "ಚಲದಿಂ **ಮುಯ್ಯೇೞು ಸೂೞ್** ಕ್ಷತ್ರಿಯರನಱಸಿ ಕೊಂದಿಕ್ಕಿದಂ ಜಾಮದಗ್ನ್ಯಂ" ಎಂಬ ಪ್ರಯೋಗ ವಾಕ್ಯದಲ್ಲಿ "ಮುಯ್ಯೇೞು ಸೂೞ್" ಎಂದರೆ ೩×೭=೨೧ ಸಾರೆ ಎಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇದೇ ಮೇರೆಗೆ "ಮುಯ್ಯಾರಡಿ" ಎಂದರೆ ೩×೨=೬ ಅಡಿ (ಅರ್ಥಾತ್, ಆರು ಕಾಲುಗಳುಳ್ಳದ್ದು, ಭ್ರಮರ), "ಮುಯ್ಯಿರ್ಮೊಗ" ಎಂದರೆ ೩×೨=೬ ಮುಖ (ಅರ್ಥಾತ್, ಆರು ಮುಖವುಳ್ಳವನು, ಷಣ್ಮುಖ), "ಎರಡಯಿದು ಶಿರದ ಅಸುರ ಪತಿಗೆ" ಎಂದರೆ ೨×೫=೧೦ ಮುಖದ ಅಸುರ ಪತಿಗೆ (ಅರ್ಥಾತ್, ದಶಮುಖ ರಾವಣನಿಗೆ), "ಈರೇೞು ಲೋಕ" ಎಂದರೆ ೨×೭=೧೪ ಲೋಕಗಳು, "ಈರಾರ್ವತ್ಸರಂಗಳ್" ಎಂದರೆ ೨×೬=೧೨ ವರ್ಷಗಳು; ಇವೆಲ್ಲವುಗಳಂತೆಯೇ ಎರಡಱುನೂಱು" ಎಂದರೆ, ೨×೬೦೦=೧,೨೦೦ (ಹನ್ನೆರಡು ನೂರು) ಎಂಬುದು ಸಿದ್ಧ.

ಮೇಲೆ ಹೇಳಿದ ಈ ಪ್ರತಿಯೊಂದು ಸಮಾಸ ಘಟಿತ ಪದದಲ್ಲಿ ಸಂಖ್ಯಾವಾಚಕ ಶಬ್ದಗಳು ಎರಡು ಇವೆ. ಈ ಸಂಖ್ಯಾವಾಚಕಗಳು ಪರಸ್ಪರ ಗುಣ್ಯ ಗುಣಕಗಳಾಗಿರುತ್ತವೆ. ಹೀಗಿದ್ದೂ, "ಎರಡಱುನೂಱು" ಎಂದರೆ ಎರಡೂ ಸೇರಿ ಆರುನೂರು ಎಂದು ಅರ್ಥಮಾಡುವುದೆಂದರೆ, ಕನ್ನಡ ಶಬ್ದ ಶಾಸ್ತ್ರ ಪ್ರಾಂತದಲ್ಲಿ ಅಕ್ಷಮ್ಯವಾದ ಅಪರಾಧವೇ ಸರಿ!

ಕ್ರಿ. ಶ. ೧೯೨೭ರಲ್ಲಿ ಏ|| ಡಾಕ್ಟರ್ ಎಲ್. ಡಿ. ಬಾರ್ನೆಟ್ ಸಾಹೇಬರವರು "ಎಪಿಗ್ರಾಫಿಯಾ ಇಂಡಿಕ" ದ ೧೯೨೭ನೆಯ ಇಸ್ವಿಯ ಅಕ್ಟೋಬರ ತಿಂಗಳ ಸಂಚಿಕೆಯಲ್ಲಿ (ಎಂದರೆ, ಸಂಪುಟ ೧೯, ಪುಟ ೧೯೧-೧೯೨) ದೇವಗೇರಿ ಗ್ರಾಮದ ಶಿಲಾ ಶಾಸನವನ್ನು ಪ್ರಸಿದ್ಧಮಾಡಿದ್ದಾರೆ. ಈ ಶಾಸನದಲ್ಲಿಯ—

> "ಈಶ್ವರಯ್ಯ ದಂಡನಾಯಕಂ ಬನವಾಸಿ ಪನ್ನಿಚ್ಚಾಸಿರಮುಮಂ ಬೆಳ್ವಲವೆರಡಱುನೂಱುಮಂ ಸುಖ ಸಂಕಥಾ ವಿನೋದದಿಂದಾಳುತ್ತಮಿರೆ।"

ಎಂಬ ವಾಕ್ಯವನ್ನು ನಾನು ಈ ಮೊದಲೇ ವಾಚಕರ ಮುಂದೆ ಇಟ್ಟಿದ್ದೇನೆ. ಇಷ್ಟು ಮಾತ್ರವೇ ಅಲ್ಲ; ಈ ವಾಕ್ಯದಲ್ಲಿಯ "ಬೆಳ್ವಲನೆರಡಱುನೂಱುಮಂ" ಎಂಬ ಪದ ಸಮುಚ್ಚಯವನ್ನು "ಬೆಳ್ವಲಂ+ಎರಡಱುನೂಱುಮಂ" ಎಂದು ಪದಚ್ಛೇದ ಮಾಡಿ, ಇದಕ್ಕೆ ಕಾರ್ಯ ಕಾರಣ ಭಾವವನ್ನು ಹೀಗೆ ಹೇಳಿದ್ದೇನೆ:—"ಇದರಲ್ಲಿ

ಬಿಂದುವಿಗೆ ಸ್ವರವು ಪರವಾಗಿರುವುದರಿಂದ ಶಬ್ದಮಣಿದರ್ಪಣದ ೧೦೪ನೆಯ ಸೂತ್ರದ ಪ್ರಕಾರ "ಬೆಳ್ವಲ**ಮೆ**ರಡಱುನೂಱುಮುಂ" ಎಂದು ಆಗತಕ್ಕದ್ದಿದ್ದೂ, ಅದೇ ಸೂತ್ರದೊಳಗಿನ "ಆ ಮತ್ವಕ್ಕೆ ಅರೆಬರ್ ವತ್ವಮುಂ ಉಚ್ಚರಿಪರ್" ಎಂಬ ನಿಯಮಕ್ಕನುಸರಿಸಿ, ಅದು "ಬೆಳ್ವಲವೆರಡಱುನೂಱುಮುಂ" ಎಂದು ಆಗಿದೆ. ಇನ್ನು ಈ ಎರಡು ಪದಗಳಲ್ಲಿ 'ಬೆಳ್ವಲಂ' ಎಂಬ ಪ್ರಥಮಾವಿಭಕ್ತಿಯು, ಶಬ್ದಮಣಿದರ್ಪಣದ ೧೩೬ನೆಯ ಸೂತ್ರದಲ್ಲಿ ಹೇಳಿದ "ಪ್ರಥಮೆಯುಂ ದ್ವಿತೀಯೆಯೊಳಕ್ಕುಂ" ಎಂಬ ನಿಯಮಕ್ಕನುಸರಿಸಿ, ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿದೆ. ಸಾರಾಂಶ, ಈಶ್ವರಯ್ಯ ದಂಡನಾಯಕನು, ಬನವಾಸಿ ಪನ್ನಿಚ್ಛಾಸಿರ ನಾಡನ್ನೂ ಬೆಳ್ವಲ ನಾಡನ್ನೂ ಎರಡಱುನೂಱು ನಾಡನ್ನೂ ಆಳುತ್ತಿದ್ದನೆಂಬುದೇ ಈ ಶಿಲಾಲೇಖದ ಅರ್ಥವಾಗಿದೆ."

ಆದರೆ, ನಮ್ಮ ಮಿ॥ ಬಾರ್ನೆಟ್ ಸಾಹೇಬರವರು, ಈ ಶಾಸನದಲ್ಲಿಯ "ಬೆಳ್ವಲವೆರಡಱುನೂಱುಮುಂ" ಎಂಬ ಪದಸಮುಚ್ಚಯವನ್ನು "ಬೆಳ್ವಲವೆರಡು+ಅಱುನೂಱುಮುಂ" ಎಂದು ಪದಚ್ಛೇದ ಮಾಡಿ, ಎರಡು ಬೆಳ್ವಲಗಳು (ಅವು ಯಾವುವೆಂದರೆ, ಬೆಳ್ವಲ ಮತ್ತು ಪುಲಿಗೆರೆ) ಎಂದು ಅರ್ಥಮಾಡಿದ್ದಾರೆ !!! ಹೀಗೆ ಪದಚ್ಛೇದ ಮಾಡುವುದೂ ಹೀಗೆ ಅರ್ಥ ಮಾಡುವುದೂ ಸರ್ವಥೈವ ಅಸಾಧುವಾಗಿದೆ.

ಮುಂದೆ ಕ್ರಿ. ಶ. ೧೯೧೯ರಲ್ಲಿ ಶ್ರೀಮಾನ್ ಆರ್. ನರಸಿಂಹಾಚಾರ್ಯರವರೂ ಸಹ ಅಂಧ ಪರಂಪರಾ ನ್ಯಾಯದಂತೆ ಇದೇ ತಪ್ಪನ್ನೇ ಮಾಡಿದ್ದಾರೆ. ಈ ಮಹನೀಯರು, ಕರ್ಣಾಟಕ ಕವಿಚರಿತೆಯ ೨ನೆಯ ಸಂಪುಟದ ಅವತರಣಿಕೆಯಲ್ಲಿ (ಪುಟ ೨೧–೨೨) ಅಪ್ಪಣೆಕೊಡಿಸಿರುವುದೇನೆಂದರೆ:—"ರನ್ನನು ಎರಡೂ ಸೇರಿ ಆರುನೂರಾಗುವ ಪ್ರದೇಶದ ಕನ್ನಡವು ತಿರುಳ್ಗನ್ನಡವೆಂದು ಹೇಳುತ್ತಾನೆ. ರನ್ನನು ಹೇಳುವ ಎರಡು ಎಂಬುದು ಬೆಳ್ವೊಲ ಮುನ್ನೂರಿಗೂ ಪುಲಿಗೆರೆ ಮುನ್ನೂರಿಗೂ ಅನ್ವಯಿಸುತ್ತದೆ." "ಎರಡಱುನೂಱಱ ಕನ್ನಡ" ಎಂಬುದಕ್ಕೆ ಇದೇ ರೀತಿಯಾಗಿ ಶ್ರೀಮಾನ್ ಎಂ. ಎ. ರಾಮಾನುಜೈಯಂಗಾರ್ಯರವರೂ ಅಪಾರ್ಥವನ್ನು ಮಾಡಿದ್ದಾರೆ. ಈ ಅಸಂಬದ್ಧ ಪ್ರಲಾಪವನ್ನು ಈ ಮೊದಲೇ ಸಪ್ರಮಾಣವಾಗಿ ಖಂಡಿಸಿದ್ದೇನೆ.

**ನಾರಾಯಣ ಶ್ರೀನಿವಾಸ ರಾಜಪುರೋಹಿತ.**

---

# ಜನ್ನನೂ ವಾದಿರಾಜನೂ*

---

ಕನ್ನಡದಲ್ಲಿ 'ಯಶೋಧರ ಚರಿತ್ರೆ'ಯನ್ನು ಬರೆದಿರುವ ಕವಿ ಚಕ್ರವರ್ತಿಯಾದ ಜನ್ನನು ತನಗಿಂತಲೂ ಹಿಂದೆ ಪ್ರಚಾರದಲ್ಲಿದ್ದ ಯಶೋಧರನ ಕಥೆಗಳನ್ನು ನೋಡಿ ತನ್ನ ಗ್ರಂಥವನ್ನು ಬರೆದನೆಂದು

ಕ್ಷಿತಿಯೊಳ್ ಸಂಸ್ಕೃತದಿಂ ಪ್ರಾ।
ಕೃತದಿಂ ಕನ್ನಡದಿನಾದ್ಯರಾರ್ಃ ಕೃತಿಯಂ॥
ಕೃತಿ ಮಾಡಿದರವರ್ಗಳ ಸ।
ನ್ಮತಿ ಕೆಯ್ಗುಡುಗೆಮಗೆ ಸರಸ ಪದ ಪದ್ಧತಿಯೊಳ್॥ (ಅವತಾರ, ೧, ಪ. ೪)

ಎಂಬ ಪದ್ಯದಿಂದ ತಿಳಿದುಬರುತ್ತದೆ. ಪ್ರಾಕೃತ ಭಾಷೆಯಲ್ಲಿರುವ ಯಶೋಧರನ ಚರಿತ್ರೆಯ ವಿಚಾರವಾಗಿ ನಮಗೆ ಏನೂ ತಿಳಿಯದು. ಕನ್ನಡದಲ್ಲಿಯೂ ಜನ್ನನಿಗಿಂತ ಹಿಂದೆ ಯಶೋಧರನ ಚರಿತ್ರೆಗಳಿದ್ದುವೊ ಇಲ್ಲವೊ ತಿಳಿಯದು. ಜನ್ನನು ಒಂದು ವಿಧವಾದ ಧೋರಣೆಯಿಂದ ಕನ್ನಡದಲ್ಲಿಯೂ ಆ ಕಥೆಯು ಇದ್ದಿತೆಂದು ಹೇಳಿರಬಹುದು. ಇನ್ನು, ಸಂಸ್ಕೃತದಲ್ಲಿರುವ ಯಶೋಧರನ ಕಥೆಯನ್ನು ಕುರಿತು ಹುಟ್ಟಿರುವ ಗ್ರಂಥಗಳ ವಿಚಾರವಾಗಿ ಕೆಲವು ವಿಷಯಗಳನ್ನು ಇಲ್ಲಿ ಹೇಳಬಹುದು. ಡಾ॥ ಬ್ಯಾರಿಡೇಲ್ ಕೀತ್ ಅವರು ಈ ವಿಷಯವಾಗಿ ಹೀಗೆ ಬರೆದಿರುತ್ತಾರೆ:—

"The Jainas naturally enough aimed at vying with the classical epic; and we have in the Yacodhara Charitra of Kanakasena Vadiraja, a resident in the Dravida Country whose pupil Srivijaya flourished about A.D. 950, a Kavya in four cantos with 296 verses. Its contents agree with the Yacastilaka of the slightly later Somadeva, showing that the tale must have been then current. The two versions differ slightly in content but not in spirit. Another version of the legend is that of Manikyasuri whose Yacodhara Charitra belongs probably to the 11th century at the latest. It represents the work of a Cwetambara Jain of Gujerat as opposed to the Digambara version of Vadiraja; but the two accounts are independent."

(*Sanscrit Literature*, page 142)

ಡಾ॥ ಕೀತ್ ಅವರು ಮೇಲೆ ಹೇಳಿರುವ ಯಶೋಧರ ಚರಿತ್ರೆಗಳಲ್ಲಿ, ವಾದಿರಾಜ ಪ್ರಣೀತವಾದ ಯಶೋಧರ ಕಾವ್ಯವೇ ಜನ್ನನಿಗೆ ಆಧಾರವಾದ ಗ್ರಂಥ. ಇದನ್ನು ಬರೆದ ವಾದಿರಾಜನ ವಿಷಯವಾಗಿ ದಿವಂಗತ ಲ್ಯೂಯಿಸ್ ರೈಸ್ ಅವರು ಹೀಗೆ ಬರೆದಿದ್ದಾರೆ:—

---

* ಹಸಿನಾರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಬರೆದುಬಂದುದು.

"Vadiraja was the author of Yasodhara Charitra in 4 sargas. He is there styled Shaṭtarka Shanmukha." He may have written besides, the Ekibhava Stotra and Parswanatha Kakustha Charitra.[1] A verse in his praise is quoted by Nagavarma in his Kavyavalokana, as follows :—

ಅದ್ವೈತ ವಾದಿ ನಿವಹ ಮು ।
ದ ದ್ವಿರದ ಘಟಾ ವಿಘಾಟನೈಕ ಪಟಿಷ್ಠಂ ॥
ಸ್ಯಾದ್ವಾದಾಚಲ ಸಿಂಹಂ ।
ವಿದ್ವಾಂಸರ್ ಪೊಗಳೆ ವಾದಿರಾಜಂ ನೆಗಳ್ದಿಂ ॥

But the principal information regarding him is contained in the inscription, No. 54, at Sravaṇa Belgola.

ತ್ರೈಲೋಕ್ಯ ದೀಪಿಕಾ ವಾಣೀ ದ್ವಾಭ್ಯಾಮೇವೋದಗಾದಿಹ ।
ಜಿನರಾಜತ ಏಕಸ್ಮಾದ್ ಏಕಸ್ಮಾದ್ ವಾದಿರಾಜತಃ ॥

ಆರುದ್ಧಾಂಬರಮಿಂದು ಬಿಂಬ ರಚಿತೌತ್ಸುಕ್ಯಂ ಸದಾಯದ್ಯಶ ।
ಶ್ಛತ್ರಂ ವಾಕ್ಚಮರೀಜ ರಾಜಿ ರುಚಿ ಯೋಽಭ್ಯರ್ಣಂ ಚ ಯತ್ ಕರ್ಣಯೋಃ ॥
ಸೇವ್ಯಸ್ಸಿಂಹ ಸಮರ್ಚ್ಯ ಪೀಠ ವಿಭವಸ್ಸರ್ವಪ್ರವಾದಿ ಪ್ರಜಾ ।
ದತ್ತೋಚ್ಚೈಃ ಜಯಕಾರ ಸಾರ ಮಹಿಮಾ ಶ್ರೀ ವಾದಿರಾಜೋ ವಿದಾಂ ॥

ಯದೀಯ ಗುಣ ಗೋಚರೋಽಯಂ ವಚನ ವಿಲಾಸ ಪ್ರಸರಃ ಕವೀನಾಂ ।

ಶ್ರೀಮಚ್ಚಾಳುಕ್ಯ ಚಕ್ರೇಶ್ವರ ಜಯ ಕಟಕೇ ವಾಗ್ವಧೂ ಜನ್ಮಭೂಮೌ ।
ನಿಷ್ಕಾಂಡಂ ಡಿಂಡಿಮಃ ಪರ್ಯಟತಿ ಪಟುರತೋ ವಾದಿರಾಜಸ್ಯ ಜಿಷ್ಣೋಃ ॥
ಜಹ್ಯುದ್ಯದ್ವಾದ ದರ್ಪೋ ಜಹಿಹಿ ಗ್ರಮಕಟಾ ಗರ್ವಭೂಮಾ ಜಹಾಹಿ ।
ವ್ಯಾಹಾರೇಷ್ಯೋ ಜಹೀಹಿ ಸ್ಫುಟ ಮೃದು ಮಧುರ ಶ್ರಾವ್ಯ ಕಾವ್ಯಾವಲೇಪಃ ॥

"Circumstantial as these various statements are, owing to the names of Kings referred to not being mentioned, it is difficult to identify the courts or periods at which Srivijaya, Hemasena and Vadiraja flourished."

(*Introduction to Sabdanusasana*, page 21)

ಕಾವ್ಯಾವಲೋಕನದಲ್ಲಿರುವ ವಾದಿರಾಜ ವಿಷಯಕವಾದ ಪದ್ಯದ (188ನೆಯ) ವಿಚಾರವನ್ನು ಬರೆಯುವಾಗ ರಾವ್ ಬಹಾದೂರ್ ಶ್ರೀಮಾನ್ ಆರ್. ನರಸಿಂಹಾಚಾರ್ಯರವರು ತಮ್ಮ ಕಾವ್ಯಾವಲೋಕನದ ಪೀಠಿಕೆಯಲ್ಲಿ ಹೀಗೆ ಬರೆದಿರುತ್ತಾರೆ:—

"Vadiraja is the celebrated controversialist who was, according to Belur 17, Guru to the Chalukya King Jayasimha

1. ಈ ವಿಷಯವು ಯಶೋಧರ ಕಾವ್ಯದಲ್ಲಿಯ ಈ ಪದ್ಯದಿಂದ ತಿಳಿದುಬರುತ್ತದೆ:—

..........ಕಾಕುತ್ಸ್ಥ ಚರಿತಂ ಯೇನ ಕೀರ್ತಿತಂ ।
ತೇನ ಶ್ರೀ ವಾದಿರಾಜೇನ ದೃಬ್ಧಾ ಯಾಶೋಧರೀ ಕಥಾ ॥

(ಸಂ. ೧, ಪ. ೬)

(1018–1042) and was known as Jagadekamalla Vadiraja (Arsikere 141). The Chalukya Chakreswara Kataka mentioned in connection with him in S. B. 54 must therefore be Jayasimha's.''

ವಾದಿರಾಜನು ಸು. ೯೫೦ರಲ್ಲಿದ್ದನೆಂದೂ ಅವನಿಗೆ ಕನಕಸೇನ ಎಂಬ ವಿಶೇಷಣ ವಿದ್ದಿತೆಂದೂ ಡಾ॥ ಕೀತ್ ಅವರು ಹೇಳಿರುವರಷ್ಟೆ! ರೈಸ್ ಅವರು ಇವನ ಕಾಲದ ವಿಚಾರದಲ್ಲಿ ಏನೂ ಬರೆದಿಲ್ಲವೆಂಬುದನ್ನೂ ನೋಡಿದ್ದೇವೆ. ಶ್ರೀನಿವಾಸ್ ಆರ್. ನರಸಿಂಹಾಚಾರ್ಯರು ವಾದಿರಾಜನು ಚಾಲುಕ್ಯರಾಜ ಜಯಸಿಂಹನ ಸಮಕಾಲೀನ ನೆಂದು ಹೇಳಿರುವರಷ್ಟೆ! ಇವರ ಈ ಹೇಳಿಕೆಯೇ ನಿಶ್ಚಯವಾದುದು ; ಏಕೆಂದರೆ, ವಾದಿರಾಜನ ಗ್ರಂಥದಲ್ಲಿರುವ ಈ ಎರಡು ಶ್ಲೋಕಗಳಿಂದ ಜಯಸಿಂಹನೆಂಬ ಒಬ್ಬ ರಾಜನ ಆಸ್ಥಾನದಲ್ಲಿ ವಾದಿರಾಜನಿದ್ದಿರಬೇಕೆಂದು ಗೊತ್ತಾಗುತ್ತದೆ:—

ಕುರ್ವನ್ನಾರ್ಯ ಬೃಹಸ್ಪತಿ ಪ್ರಭೃತಿಭಿಃ ಸಂದರ್ಶಿತಂ ಮಂತ್ರಿಭಿಃ ।
ಸಂತೃಪ್ಯನ್ನಮೃತೇನ ಕ್ಲೃಪ್ತ ವಿಧಿನಾ ಶ್ರೀ ವೈದ್ಯವಿದ್ಯಾರ್ಣವೈಃ ॥
ವ್ಯಾತನ್ವನ್ ಜಯಸಿಂಹತಾರಣ ಮುಖೇ ದೀರ್ಘಂ ದಧೌ ಧಾರಿಣೀಂ ।
ರಾಜಾ ಸೋಪಿ ಯಶೋಮತಿಃ ಪ್ರವಿಲಸತ್ಸಾಮ್ರಾಜ್ಯ ಲಕ್ಷ್ಮೀಪತಿಃ ॥ (ಸ. ೩, ಪ. ೮೩)

ಗುರುಷು ವಿನಯ ವೃತ್ತಿಂ ಬಂಧುಷು ಪ್ರೇಮ ಬಂಧಂ ।
ರಿಪುಷು ಕರ ಕೃಪಾಣಂ ದರ್ಶಯನ್ನಾಹವೇಷು ॥
ಅಧಿಗತ ನಯಸಿಂಧುಸ್ಸತ್ಯಸಂಧಸ್ಸ ರಾಜಾ ।
ರಣಮುಖ ಜಯಸಿಂಹೋ ರಾಜ್ಯಲಕ್ಷ್ಮೀಂ ಬಭಾರ ॥ (ಸ. ೪, ಪ. ೭೩)

ಈ ಎರಡು ಪದ್ಯಗಳಲ್ಲಿರುವ ''ಜಯಸಿಂಹ'' ಎಂಬ ಪದವು ಕಥಾನಾಯಕನಿಗೆ ಅನ್ವಯಿಸುವುವಾದರೂ ವಾದಿರಾಜನು ಈ ಪದ ಪ್ರಯೋಗದಿಂದ ತನ್ನ ರಾಜನನ್ನೂ ನಿರ್ದೇಶಿಸಿದ್ದಂತೆ ನಮಗೆ ತೋರುತ್ತದೆ. ಆದುದರಿಂದ, ಡಾ॥ ಕೀತ್ ಅವರು ಹೇಳುವಂತೆ, ಇವನ ಕಾಲ ಸು. ೯೫೦ ಅಲ್ಲ; ಸು. ೧೦೪೦ ಆಗುತ್ತದೆ. ಇವನಿಗೆ ''ಕನಕಸೇನ'' ಎಂಬ ವಿಶೇಷಣವಿದ್ದಂತೆ ತೋರುವುದಿಲ್ಲ; ಕನಕಸೇನ ವಾದಿರಾಜನೇ ಬೇರೆ ವ್ಯಕ್ತಿಯಾಗಿರಬೇಕು; ಯಶೋಧರ ಕಾವ್ಯ ಕರ್ತೃವಿಗೂ ಅವನಿಗೂ ಏನೂ ಸಂಬಂಧವಿಲ್ಲ. ಇವನಿಗೆ ''ಷಟ್ತರ್ಕ ಷಣ್ಮುಖ'' ಎಂಬ ಬಿರುದಿದ್ದಂತೆ ತಿಳಿಯಬರುವುದರಿಂದ, ನಾಗವರ್ಮನ ಕಾವ್ಯಾವಲೋಕನದಲ್ಲಿ ಉಕ್ತನಾದ ವಾದಿರಾಜನು ಇವನೇ ಆಗಿರಬೇಕು. ರೈಸ್ ಅವರು ಹೇಳುವ ಶ್ರೀವಿಜಯನೂ, ಹೇಮಸೇನ ಮುನಿಯೂ ಯಾವ ವಾದಿರಾಜನ ಸಮಕಾಲೀನರೋ ಹೇಳಲಾಗುವುದಿಲ್ಲ. ನೃಪತುಂಗನು (814–877) ಹೇಳುವ ಶ್ರೀವಿಜಯನು ಈ ಶ್ರೀವಿಜಯನೇ ಆಗಿದ್ದಲ್ಲಿ ಅವನ ಸಮಕಾಲೀನನಾದ ವಾದಿರಾಜನು ಒಂದು ವೇಳೆ ಡಾ॥ ಕೀತ್ ಅವರು ಹೇಳುವ ಕನಕಸೇನ ವಾದಿರಾಜನಾಗಿರಬಹುದು. ಅಂತು, ಯಶೋಧರ ಚರಿತ್ರೆಯ ಕರ್ತೃವು ಕನಕಸೇನ ವಾದಿರಾಜನಲ್ಲ; ಜಗದೇಕಮಲ್ಲ ವಾದಿರಾಜನು. ಡಾ॥ ಕೀತ್ ಅವರ ಸಿದ್ಧಾಂತವು ಭ್ರಮಮೂಲವಾದುದು.

ವಾದಿರಾಜನ ಈ ಯಶೋಧರಕಾವ್ಯವನ್ನನುಸರಿಸಿಯೇ ಜನ್ನನು ತನ್ನ ಯಶೋಧರ ಚರಿತ್ರೆಯನ್ನು ಬರೆದಿದ್ದಾನೆ. ಯಶೋಧರ ಕಾವ್ಯದಲ್ಲಿ ೪ ಸರ್ಗಗಳಿದ್ದು ಒಟ್ಟು ೨೯೪ ಪದ್ಯಗಳಿವೆ. ಕನ್ನಡ ಯಶೋಧರ ಚರಿತ್ರೆಯಲ್ಲಿ ೪ ಅವತಾರಗಳಿದ್ದು ಒಟ್ಟು ೩೧೦ ಪದ್ಯಗಳಿವೆ. ಆದುದರಿಂದ ಕನ್ನಡ ಗ್ರಂಥದಲ್ಲಿ ಸಂಸ್ಕೃತ ಗ್ರಂಥದಲ್ಲಿರುವುದಕ್ಕಿಂತ ೧೬ ಪದ್ಯಗಳು ಹೆಚ್ಚಾಗಿವೆ. ಜನ್ನನು ಹೊಯ್ಸಳ ರಾಜರ ವಂಶ ಪರಂಪರೆಯನ್ನು ಹೇಳಿರುವುದರಿಂದಲೂ, ಅಲ್ಲಲ್ಲಿಯೇ ಕೆಲವು ಸ್ವೋಪಜ್ಞವಾದ ವರ್ಣನೆಗಳನ್ನು ಸೇರಿಸಿರುವುದರಿಂದಲೂ ಇಷ್ಟು ಪದ್ಯಗಳು ಹೆಚ್ಚಾಗಿರುವುದು ಏನೂ ಆಶ್ಚರ್ಯವಲ್ಲ.

ಜನ್ನನ ಯಶೋಧರ ಚರಿತ್ರೆಯ ರಚನೆಯು ಸ್ವಲ್ಪ ವಿಚಾರಾರ್ಹವಾದುದು. ನೃಪತುಂಗನು "ಬೆದಂಡೆ" ಗಬ್ಬದ ಲಕ್ಷಣವನ್ನು ಹೀಗೆ ಹೇಳಿರುವನು:—

ಕಂದಮುಮಮಳಿನ ವೃತ್ತಮು।
ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ॥
ಗೊಂದಿವರ್ಪೊಳಮರೆ ಪೇೞಿಲ್।
ಸುಂದರ ರೂಪಿಂ ಬೆದಂಡೆಗಬ್ಬಮದಕ್ಕುಂ॥ (ಕವಿರಾಜಮಾರ್ಗ, I. ೩೪)

ನಾಗವರ್ಮನು "ಮೆಲ್ಪಾಡು" ಎಂಬುದರ ಲಕ್ಷಣವನ್ನು ಹೀಗೆ ಹೇಳಿರುತ್ತಾನೆ:—

ಸಂದಿಸಿರೆ ಕಂದಮುಂ ಪೆಱ।
ತೊಂದಱಿಕೆಯ ವೃತ್ತ ಜಾತಿಯುಂ ಪದಮವು ತ॥
ಳ್ತೊಂದಿರೆ ಪನ್ನೆರಡುವರಂ।
ಸಂದುದು ಮೆಲ್ಪಾಡೆನಿಕ್ಕುಮದು ಕನ್ನಡದೊಳ್॥

(ಕಾವ್ಯಾವಲೋಕನ, ಪುಟ ೧೬೧, ಪ. ೯೫೨)

ನೃಪತುಂಗನ "ಬೆದಂಡೆ"ಯ ಲಕ್ಷಣವನ್ನೂ, ನಾಗವರ್ಮನ "ಮೆಲ್ಪಾಡಿ"ನ ಲಕ್ಷಣವನ್ನೂ ಹೋಲಿಸಿ ನೋಡಿದರೆ ಅವೆರಡೂ ಅಭಿನ್ನವೆಂದು ತೋರದಿರಲಾರದು.[1] ಈ "ಬೆದಂಡೆ" ಎಂಬ ಪದವು ಸಂಸ್ಕೃತದ "ವೈದಂಡಿಕ" ಎಂಬುದರ ರೂಪಾಂತರ ವಿರಬಹುದೆ? ಸಂಸ್ಕೃತದಲ್ಲಿ "ವೈದಂಡಿಕಾ" ಎಂಬ ಕಾವ್ಯ ಜಾತಿಯು ಇದೆಯೋ ಇಲ್ಲವೋ ನನಗೆ ತಿಳಿಯದು. ಅಂತಹ ಒಂದು ಕಾವ್ಯ ಜಾತಿಯು ಇದ್ದರೆ ಅದರ ಲಕ್ಷಣ ವೇನು? ನೃಪತುಂಗಾದಿಗಳು ಕೊಟ್ಟಿರುವ ಲಕ್ಷಣಕ್ಕೂ ಈ ಲಕ್ಷಣಕ್ಕೂ ಏನಾದರೂ ಹೋಲಿಕೆಯಿದೆಯೆ? ಈ ವಿಷಯವನ್ನು ಬಲ್ಲವರು ವಿಚಾರಿಸಬೇಕೆಂಬುದಾಗಿ ನನ್ನ ಸವಿನಯ ವಿನಂತಿ. ಜನ್ನನ ಯಶೋಧರ ಚರಿತ್ರೆಯ ವಿಷಯವಾಗಿ ಶ್ರೀಮಾನ್ ಆರ್. ನರಸಿಂಹಾಚಾರ್ಯರು ಹೀಗೆ ಹೇಳುತ್ತಾರೆ:—

1. ಇದೇ ರೀತಿಯಲ್ಲಿಯೇ ನಾಗವರ್ಮನು "ಚಾಜನೆಗಬ್ಬ"ಕ್ಕೆ ಕೊಟ್ಟಿರುವ ಲಕ್ಷಣವನ್ನೂ ನೃಪತುಂಗನು "ಚತ್ತಾಣ"ಕ್ಕೆ ಕೊಟ್ಟಿರುವ ಲಕ್ಷಣವನ್ನೂ ಹೋಲಿಸಿದರೆ, ಇವೆರಡೂ ಒಂದೇ ಎಂದು ತೋರದಿರಲಾರದು.

"Among the extant Kannada works, Janna's Yasodhara Charite written in 1209 A.D. is perhaps the only one that seems to answer to the description of Melvadu."

(*Introduction to Kavyavalokana*, page 37)

ಆದುದರಿಂದ, ಯಶೋಧರ ಚರಿತ್ರೆಯು "ಬೆದಂಡೆ" ಗಬ್ಬವೆ? ಎಂಬ ಶಂಕೆಯು ಸಹಜವಾಗಿ ಹುಟ್ಟುವುದು. ಇದಕ್ಕೆ ಸಮರ್ಪಕವಾದ ಉತ್ತರವನ್ನು ಕೊಡಲು ಸಾಧ್ಯವೆ? ಒಂದು ವೇಳೆ ಸಂಸ್ಕೃತದಲ್ಲಿ "ವೈದಂಡಿಕಾ" ಎಂಬ ಕಾವ್ಯ ಪ್ರಭೇದವಿದ್ದರೆ ವಾದಿರಾಜನ ಯಶೋಧರ ಕಾವ್ಯವು ಆ ಜಾತಿಗೆ ಸೇರಿದುದೆ? ಕನ್ನಡದಲ್ಲಿರುವ "ಬೆದಂಡೆ"ಯ ಲಕ್ಷಣವನ್ನು ಈ ಕಾವ್ಯಕ್ಕೆ ಹಚ್ಚಿ ನೋಡಿದರೆ ಇದು "ವೈದಂಡಿಕ" ಎಂಬ ಪ್ರಭೇದವಲ್ಲವೆನ್ನಬೇಕಾಗುವುದು. ಏಕೆಂದರೆ, ಇದರಲ್ಲಿರುವ ನಾಲ್ಕು ಸರ್ಗಗಳಲ್ಲಿಯೂ ಬೇರೆ ಬೇರೆ ಜಾತಿಯ ವೃತ್ತಗಳು ಪ್ರಯುಕ್ತವಾಗಿವೆ. ಕಂದದಂತೆ ಏಕ ಜಾತೀಯವಾದ ಯಾವುದಾದರೂ ಒಂದು ವೃತ್ತದಲ್ಲಿ ಈ ನಾಲ್ಕು ಸರ್ಗಗಳೂ ರಚಿತವಾಗಿದ್ದರೆ ಒಂದು ವೇಳೆ ಇದನ್ನು "ಬೆದಂಡೆ" ಗಬ್ಬನೆಂದು ಕನ್ನಡದ ಲಕ್ಷಣದ ರೀತಿಯಿಂದ ಕರೆಯಬಹುದಾಗಿದ್ದಿತು. ಆದರೆ ವಸ್ತುತಃ ವಾದಿರಾಜನ ಕಾವ್ಯವು ಹೀಗಿಲ್ಲವಾದುದರಿಂದ ಅದು "ವೈದಂಡಿಕಾ" ಎಂಬ ಪ್ರಭೇದವಲ್ಲ. ಇದರಿಂದ ಸಂಸ್ಕೃತದಲ್ಲಿರಬಹುದಾದ ವೈದಂಡಿಕಾ ಲಕ್ಷಣದ ರೀತ್ಯಾ ವಾದಿರಾಜನ ಕಾವ್ಯವು "ವೈದಂಡಿಕೆ" ಎಂಬ ಪ್ರಭೇದವೆಂಬುದು ನಿಶ್ಚಿತವಾದರೆ, ಕನ್ನಡದ ಬೆದಂಡೆಯ ಲಕ್ಷಣಕ್ಕೂ ಸಂಸ್ಕೃತದ ವೈದಂಡಿಕೆಯ ಲಕ್ಷಣಕ್ಕೂ ಭೇದವಿರಬೇಕೆಂದು ಭಾಸವಾಗುವುದಿಲ್ಲವೆ? ಸಂಸ್ಕೃತದಲ್ಲಿ "ವೈದಂಡಿಕಾ" ಪ್ರಭೇದವಿಲ್ಲವೆನ್ನುವುದು ಸುನಿಶ್ಚಿತವಾದರೆ ಸಂಸ್ಕೃತಜ್ಞರು ಕನ್ನಡದ "ಬೆದಂಡೆ" ಎಂಬ ಪದವನ್ನೇ ತೆಗೆದುಕೊಂಡು "ವೈದಂಡಿಕಾ" ಎಂದು ಹೇಳಿರುವರೆಂದು ಗೊತ್ತಾಗುವುದಿಲ್ಲವೆ? "ವೈದಂಡಿಕಾ" ಎಂಬ ಪದವೊಂದಿದೆಯೆಂದು (ಶಬ್ದಮಣಿದರ್ಪಣ, ಪುಟ ೪೦೫) ಶ್ರೀಮಾನ್ ಆರ್. ನರಸಿಂಹಾಚಾರ್ಯರು ಕಂಡುಹಿಡಿದಿದ್ದಾರೆ. ನನ್ನ ಈ ತರ್ಕವು ಸರಿಯೆಂದು ಹೇಳಬಹುದಾದರೆ "ಬೆದಂಡೆ"ಗಬ್ಬವು ಶುದ್ಧವಾದ ಕನ್ನಡ ಸಂಸ್ಕೃತಿಯಿಂದ ಹುಟ್ಟಿರಬೇಕೆಂದು ಹೇಳಬೇಕಾಗುತ್ತದೆ.

ಯಶೋಧರನ ಕಥೆಯು ಹುಟ್ಟಿದುದು "ಅಹಿಂಸಾ ಪರಮೋ ಧರ್ಮಃ" ಎಂಬ ಸೂತ್ರಾರ್ಥವನ್ನು ವಿಶದವಾಗಿ ಮನಸ್ಸಿಗೆ ಹಿಡಿಯುವಂತೆ ತಿಳಿಯಪಡಿಸುವುದಕ್ಕಾಗಿ. ಕಾರ್ಯತಃ ಜೀವ ಹಿಂಸೆಯನ್ನು ಮಾಡದಿದ್ದರೂ ಸಂಕಲ್ಪದ ಹಿಂಸೆಯೊಂದರಿಂದಲೇ ಜೀವನು ಪಾಪ ಬದ್ಧನಾಗಿ ಭವಾಟವಿಯಲ್ಲಿ ತೊಳಲಿ ಬಳಲುತ್ತಾನೆಂಬ ಧರ್ಮ ಸೂಕ್ಷ್ಮವನ್ನು ಜನರಿಗೆ ಲಲಿತವಾಗಿ, ಹಿತವುಂಟಾಗುವಂತೆ, ಪ್ರೇಯಸಿಯ ಜೋಕೆಯಂತೆ, ಯಶೋಧರನ ಚರಿತ್ರೆಯು ರಚಿತವಾಗಿದೆ. ಉಜ್ಜಯಿನಿಗೆ ಅರಸನಾದ ಯಶೋಧರನೆಂಬ ರಾಜನು ತನ್ನಲ್ಲಿಯೇ ಅನುರಕ್ತಳಾಗಿದ್ದ ಮಡದಿಯಾದ ಅಮೃತಮತಿಯು ಸ್ವೇಚ್ಛಾಚಾರಿಣಿಯಾದುದನ್ನು ನೋಡಿ ವ್ಯಥೆಯನ್ನು ತಾಳಿ ತನ್ನ ತಾಯಾದ ಚಂದ್ರಮತಿಯ ಮಾತಿಗೆ ಕಟ್ಟುಬಿದ್ದು ತನ್ನ ಹೆಂಡತಿಯ ದೋಷ ಶಮನಾರ್ಥವಾಗಿ

ಒಂದು ಹಿಟ್ಟಿನ ಕೋಳಿಯನ್ನು ಮಾರಿಗೆ ಬಲಿ ಕೊಡುತ್ತಾನೆ. ಆ ಹಿಟ್ಟಿನ ಕೋಳಿಯ ಚಿತ್ರ ಪರಿಶೋಭೆಗೆ ಮೋಹಿತವಾದ ಒಂದು ದೆವ್ವವು ಕೂಗಿಕೊಳ್ಳಲು, ಯಶೋಧರನು ನಿಜವಾಗಿಯೂ ತಾನು ಬದುಕಿದ ಕೋಳಿಯನ್ನು ಕೊಂದೆನೆಂದು ಚಿಂತಾಕುಲನಾಗಿ ರಾಜ್ಯವನ್ನು ತೊರೆದು ಪ್ರಾಣಿಹಿಂಸೆಯಿಂದ ತಾನೂ ತನ್ನ ತಾಯಾದ ಚಂದ್ರಮತಿಯೂ ಗಳಿಸಿದ ಪಾಪ ಪರಿಹಾರಾರ್ಥವಾಗಿ ಇಬ್ಬರೂ ಅನೇಕಾವೃತ್ತಿ ತಿರ್ಯಗ್ಯೋನಿಯಲ್ಲಿ ಜನಿಸಿ ಸುದತ್ತಾಚಾರ್ಯರೆಂಬ ಯತಿವರರ ಧರ್ಮಬೋಧೆಯನ್ನು ಕೇಳಿ ತಿರುಗಿ ಮನುಷ್ಯಜನ್ಮದಲ್ಲಿ ಹುಟ್ಟುತ್ತಾರೆ. ಹೀಗೆ ಹುಟ್ಟಿದವರು ಅಭಯರುಚಿ, ಅಭಯಮತಿ ಎಂಬ ಅಣ್ಣ ತಂಗಿಯರಾಗಿ ಬಾಲ್ಯದಲ್ಲಿಯೇ ಸಂಸಾರವನ್ನು ತ್ಯಜಿಸಿ ಭಿಕ್ಷಾವೃತ್ತಿಯಲ್ಲಿ, ಸುದತ್ತಾಚಾರ್ಯರ ಶಿಷ್ಯರಾಗಿ ರಾಜಪುರವನ್ನು ಆಳುವ ಮಾರಿದತ್ತನೆಂಬ ರಾಜನ ನಗರಿಗೆ ಬರುತ್ತಾರೆ. ಆಗ ಆ ಪುರದ ಚಂಡಮಾರಿ ದೇವತೆಯ ತುಷ್ಟಿಗಾಗಿ ನರಬಲಿಯನ್ನು ಕೊಡಬೇಕೆಂದು ಮಾರಿದತ್ತರಾಜನು "ಕಿಱಿವರೆಯದ ಶುಭಲಕ್ಷಣದಱೀಕೆಯ ಸತ್ಕುಲದ ಮರ್ತ್ಯಯುಗಲಕ"ವನ್ನು ಹುಡುಕಿಕೊಂಡು ಬರುವಂತೆ ತನ್ನ ತಳವಾರನಾದ ಚಂಡಕರ್ಮನಿಗೆ ಅಪ್ಪಣೆಯನ್ನು ಕೊಡುತ್ತಾನೆ. ಆ ತಳಾರನು "ತರುಣ ವನ ಹರಿಣ ಯುಗಮಂ ತರಕ್ಷು ಪಿಡಿವಂತೆ" ಅಭಯರುಚಿ ಅಭಯಮತಿಯರನ್ನು ಹಿಡಿದುಕೊಂಡು ಬಂದು ತನ್ನ ರಾಜನಿಗೆ ಒಪ್ಪಿಸುತ್ತಾನೆ. ಮಾರಿದತ್ತನು ಈ ಬಾಲಕರ ಚಿತ್ತಸ್ಥೈರ್ಯವನ್ನು ನೋಡಿ ಆಶ್ಚರ್ಯಪಟ್ಟು ಅವರನ್ನು, "ಆವ ಕುಲವಾರ ತನಯರಿದಾವೆಡೆಯಿಂ ಬಂದಿರೇಕೆ ಬಾಲ್ಯದೊಳೀ ಭಿಕ್ಷಾವೃತ್ತಿ" ಯೆಂದು ಬೆಸಗೊಳೆ, ಆ ಹುಡುಗರು ಹೇಳಿದ ಉತ್ತರದಿಂದ ರಾಜನು ತನ್ನ ಮನವನ್ನು ದಯೆಯಲ್ಲಿ ನೆಲೆಗೊಳಿಸಿದನು. ಆ ಬಾಲಕರು ತಾವು ಹಿಂದೆ ಪ್ರಾಣಿಹಿಂಸೆಯನ್ನು ಮಾಡಿದುದರಿಂದ ಜನ್ಮ ಜಲಧಿಯಲ್ಲಿ ಓಲಾಡಿ ಕ್ಲೇಶಪಡಬೇಕಾಯಿತೆಂಬ ಕಥೆಯನ್ನು ಮಾರಿದತ್ತನಿಗೆ ಹೇಳುತ್ತಾರೆ. ಈ ಶುಭ ಕಥನವು "ಮಾರಿದತ್ತಂಗೆ ಹಿಂಸಾ ರಭಸಮತಿಗೆ ಸೈಪಂ ಪೇೞ್ದು ಧರ್ಮಕ್ಕೆ" ತಂದಿತು.

ಈ ಕಥಾವಸ್ತುವನ್ನೇ ಆಧಾರವಾಗಿಟ್ಟುಕೊಂಡು ವಾದಿರಾಜನು ಸಂಸ್ಕೃತದಲ್ಲಿ ಒಂದು ಸೊಗಸಾದ ಕಾವ್ಯವನ್ನು ಬರೆದಿರುವನು. ಜನ್ನನು ಇದನ್ನೇ ಅನುಸರಿಸಿ ಈ ಕಾವ್ಯಕ್ಕಿಂತಲೂ ಇಮ್ಮಡಿ ಸೊಗಸಾದ ಒಂದು ಕಾವ್ಯರತ್ನವನ್ನು ನಿರ್ಮಿಸಿರುವನು. ಜನ್ನನ ಕವಿತಾ ಪ್ರಜ್ಞೆಯು ವಾದಿರಾಜನ ಕವಿತಾ ಪ್ರಜ್ಞೆಗಿಂತ ಎಷ್ಟೋ ಮೇಲಾದುದು. ಜನ್ನನು ಆ ಕಥೆಯ ಜೀವವನ್ನು ಕಂಡುಕೊಂಡು ಅದನ್ನೇ ತನ್ನ ಮನಸ್ಸಿನಲ್ಲಿ ಆಗಾಗ ನೆನೆಸಿಕೊಳ್ಳುತ್ತ ಪಾಠಕರಿಗೂ—

ಅಭಯರುಚಿ ಕುಮಾರಂ ಮಾರಿದತ್ತಂಗೆ ಹಿಂಸಾ ।
ರಭಸಮತಿಗೆ ಸೈಪಂ ಪೇೞ್ದು ಧರ್ಮಕ್ಕೆ ತಂದೀ ॥
ಶುಭ ಕಥನಮನತ್ಯಾನಂದದಿಂ ಕೇಳ್ವ ಭವ್ಯ ।
ಪ್ರಭು ಸಭೆಗೆಸೆದಿರ್ಕುಂ ಮಂಗಲ ಶ್ರೀ ವಿಲಾಸಂ ॥

ಎಂದು ಆಗಾಗ ಅದನ್ನು ಸ್ಮರಣೆಗೆ ತರುತ್ತಾನೆ. ವಾದಿರಾಜನ ಗ್ರಂಥದಲ್ಲಿ ಜನ್ನನ ಕಾವ್ಯದಲ್ಲಿರುವಷ್ಟು ಸರಳತೆಯಿಲ್ಲ; ಹೃದಯವನ್ನು ಸೇರುವ, ಕರಗಿಸುವ, ಒಲಿಸುವ,

ತಿದ್ದುವ ಗುಣವಿಲ್ಲ. ಜನ್ನನು ತನ್ನ ಕಾವ್ಯದ ಪ್ರತಿಯೊಂದು ಪದ್ಯವನ್ನೂ ವಾದಿರಾಜನ ಕಾವ್ಯದ ಪದ್ಯಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು ಬರೆದಿದ್ದರೂ ತಾನು ಮುಟ್ಟಿದುದೆಲ್ಲವನ್ನೂ ಚಿನ್ನವನ್ನಾಗಿ ಮಾಡಿರುವನು. ಕಥೆಯ ಕೆಲವು ಸನ್ನಿವೇಶಗಳನ್ನು ತೆಗೆದುಕೊಂಡು ಈ ವಿಷಯವನ್ನು ಸ್ಪಷ್ಟಪಡಿಸಬಹುದು.—

(೧) ಕಾವ್ಯವು ಮೊದಲಾಗುವುದು ಚೈತ್ರ ಮಾಸದಲ್ಲಿ. ರಾಜಪುರದಲ್ಲಿ ಚಂಡಮಾರಿಯ ಜಾತ್ರೆಗಾಗಿ ನಾನಾ ದಿಕ್ಕುಗಳಿಂದ ಜನರು ಬಂದು ನೆರೆದಿದ್ದಾರೆ. ರಾಜನಾದ ಮಾರಿದತ್ತನೂ ಪುರಜನರೂ "ಚಂಡಮಾರಿಗೆ ಸಂತಸಮಂ ಮಾಡಲೆಂದು" ಜಾತ್ರೆಗೆ ಬಂದು ತಳವಾರನಾದ ಚಂಡಕರ್ಮನಿಗೆ 'ನೀಂ ಬರಿಸು ಮನುಜ ಯುಗಮಂ' ಎಂಬ ಅಪ್ಪಣೆಯನ್ನೀಯಲು, ಅಭಯರುಚಿ ಅಭಯಮತಿಯರನ್ನು ಆ ಪಾಪಕರ್ಮನಾದ ತಳವಾರನು ಹಿಡಿದನು. ಈಗ ಈ ಅಣ್ಣ ತಂಗಿಯರು ಆಡಿಕೊಳ್ಳುವ ಮಾತುಗಳನ್ನು ಕೇಳಬಹುದು, ಜನ್ನನ ಶ್ರೇಷ್ಠತೆಯನ್ನು ಅಳೆಯಬಹುದು.—

| | | |
|---|---|---|
| ತದಾಭಯ ರುಚಿರ್ವಾಚ ।<br>ಮನುಜಾಮಿತ್ಯವೋಚತ ॥<br>ಮಾತಶ್ಚೇತಸ್ಸಮಾಧೇಹಿ ।<br>ಮಾಸ್ಮ ಮೃತ್ಯೋರ್ಭಯಂಕೃಥಾಃ ॥ | ೧—೩೭ | ಅಭಯರುಚಿಯಭಯಮತಿಯಿಂ ।<br>ಬುಭಯಮನಾ ಪಾಪಕರ್ಮನುಯ್ವೆಡೆಯೊಳ್ಮ ॥<br>ತ್ತಭಯರುಚಿ ತಂಗೆಗೆಂದಪ ।<br>ನಭೀತೆಯಾಗೆಲಗೆ ತಾಯೆ ಮರಣದ ದೆಸೆಯೊಳ್ ॥ ೧—೪೮ |
| ಕಿಂ ನವೇತ್ಸಿ ಜರಾಭ್ಯಾಸ ।<br>ಸುಸಹಂ ದುಃಖಮಾವಯೋಃ ॥<br>ಕಥಂ ವಾ ದುಃಖನಿರ್ಮುಕ್ತಿಃ ।<br>ಕಾಂಯೇ ತತ್ಕಾರಣೈರ್ನೃಣಾಂ ॥ | ೧—೩೭ | ನಿಯತಿಯನಾರ್ ಮೀಱಿದಪರ್ ।<br>ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ ಕೇಳ್ ॥<br>ನಯವಿದೆ ಪೆತ್ತ ಪರೀಷಹ ।<br>ಜಯಮೆ ತಪಂ ತಪಕೆ ಬೇಱಿತೆ ಕೋಡೆರಡೊಳವೇ ॥ ೧—೪೯ |
| ತಸ್ಮಾದವಶ್ಯ ಭೋಕ್ತವ್ಯೇ ।<br>ಕಿಮುದ್ವೇಗಂ ಕರಿಷ್ಯತೇ ॥<br>ಕಿಂ ಚ ತೀವ್ರಂ ತಪಃ ಪ್ರಾಹುಃ ।<br>ಪರೀಷಹ ಜಯಂ ಬುಧಾಃ ॥ | ೧—೩೮ | |
| ಅಗ್ರಜಸ್ಯ ನಿಶಮ್ಯೋಕ್ತಿ ।<br>ಮುವಾಚಾಭಯಮತ್ಯಪಿ ॥<br>ಆವಯೋರಸ್ತಿ ಕಿಂ ಭೀತಿಃ ।<br>ಜಾತ ಪೂರ್ವಾಪರಾಂತಯೋಃ ॥ | ೧—೩೯ | ಅಣ್ಣನ ಮಾತಂ ಮನದೊಳ್ ।<br>ತಿಣ್ಣಂ ತಳೆದೆಂದಳನುಜೆ ಮಾಡಿದುದಂ ನಾ ॥<br>ವುಣ್ಣದೆ ಪೋಕುಮೆ ಭಯಮೇ ।<br>ಕಣ್ಣ ಭವ ಪ್ರಕೃತಿ ವಿಕೃತಿ ನಾವಱಿಯದುದೇ ॥ ೧—೫೦ |
| ಇದನೇವಹಿ ವಿದ್ವತ್ತ್ವಂ ।<br>ಇದಮೇವಹಿ ತತ್ಫಲಂ ॥<br>ಯನ್ಮನೋ ವಿದುಷಾಮುಚ್ಚೈಃ ।<br>ಮಾಧ್ಯಸ್ಥಂ ಸುಖ ದುಃಖಯೋಃ ॥ | ೧—೪೦ | |

ಮೇಲೆ ಕೊಟ್ಟಿರುವ ಪಡಿಯಚ್ಚುಗಳಂತೆ ತೋರುವ ಪದ್ಯಗಳನ್ನು ವಿಮರ್ಶಿಸಿದರೆ ಜನ್ನನ ಕುಶಲತೆಯು ವ್ಯಕ್ತವಾಗದಿರದು. ವಾದಿರಾಜನು ಎರಡೆರಡು ಪದ್ಯಗಳಲ್ಲಿ

ಹೇಳಿರುವ ಭಾವಗಳನ್ನು ಜನ್ನನು ಒಂದೇ ಒಂದು ಕಂದದಲ್ಲಿ ಹೆಚ್ಚು ವಿಶದವಾಗಿ ಹೆಚ್ಚು ಅಡಕವಾಗಿ ಹೇಳಿರುವುದನ್ನು ನೋಡಬಹುದು. ವಾದಿರಾಜನು ಅಣ್ಣ ತಂಗಿಯರ ಸಂಭಾಷಣೆಯನ್ನು ನಾಲ್ಕು ಶ್ಲೋಕಗಳಲ್ಲಿ ಮುಗಿಸಿದ್ದರೆ ಜನ್ನನು ಆ ಸಂಭಾಷಣೆಯನ್ನು ಎರಡೇ ಪದ್ಯಗಳಲ್ಲಿ ತಿರುಳು ಹೊರಹೊಮ್ಮುವಂತೆ ಸಂಗ್ರಹಿಸಿ ಇನ್ನುಮುಂದೆ ಅಭಯಮತಿಯ ಬಾಯಿಂದ ಈ ಮಾತುಗಳನ್ನು ಹೇಳಿಸಿರುವನು :—

ಎನಿತೊಳವಪಾಯಕೋಟಿಗ ।
ಳನಿತರ್ಕಂ ಗೇಹಮಲ್ತೆ ದೇಹಮಿದಂ ನೆ ॥
ಟ್ಟನೆ ಪೊತ್ತು ಸುಖಮನಱಿಸುವ ।
ಮನುಜಂ ಮೊರಡಿಯೊಳೆ ಮಾದುಪಳಮಱಿಸದಿರಂ ॥ ೧–೫೧

ಬೇಡಿದ ಕಾಡೊಳ್ ಮಱಿತೆಯಾ ।
ಯ್ತಾಡುವಮಿದಱಿ ಪೊಱಿತೆಯನೆಮಗಂ ನಿಮಗಂ ॥
ಮೂಡುವ ಮುೞುಗುವ ದಂದುಗ ।
ಮಾಡಿದ ಹೊಲನುಂಡ ಮರ್ದು ಕಂಡ ವಿಚಾರಂ ॥ ೧–೫೨

ಎಲ್ಲಿ ವಿಸ್ತರಿಸಬೇಕೊ ಎಲ್ಲಿ ಸಂಗ್ರಹಿಸಬೇಕೊ ಎಲ್ಲಿ ಭಾವೋತ್ಕರ್ಷವನ್ನುಂಟು ಮಾಡಬೇಕೊ ಅಲ್ಲಿ ಜನ್ನನು ತನ್ನ ಕೈವಾಡವನ್ನು ತೋರಿಸಿರುವನು. ಈ ಪದ್ಯಗಳನ್ನು ನೋಡಿದ ಕೂಡಲೆ ಜನ್ನನ ಶಕ್ತಿಯೂ ಶಕ್ತಿಗನುಗುಣವಾದ ಶೈಲಿಯೂ ಭಾವ ಪರಿಪುಷ್ಟಿಯೂ ಪಾಠಕರಿಗೆ ಗೋಚರವಾಗದಿರಲಾರವು.

(೨) ಯಶೋಧರ ಚರಿತ್ರೆಯಲ್ಲಿ ಚಿತ್ರಿತವಾಗಿರುವ ಪಾತ್ರಗಳಲ್ಲಿ ಅಮೃತ ಮತಿಯ ಪಾತ್ರವು ಬಹು ಮುಖ್ಯವಾದುದು. ಅಮೃತಮತಿಯು ಸ್ವಭಾವದಿಂದ ದುಷ್ಟಳೂ ನೀಚಳೂ ಆಗಿರಬಹುದು. ತನ್ನ ಪತಿಯಾದ ಯಶೋಧರನ ಪ್ರೀತಿ ಯನ್ನೂ ಸಲ್ಮೆಯನ್ನೂ ಇವಳು ಮರೆತು ವಿಕಟಾಂಗನಾದ ಅಷ್ಟಾವಕ್ರನನ್ನು ಮೋಹಿಸಿ ಇವಳು ಪಾಪಕರ್ಮವನ್ನು ಮಾಡಿರಬಹುದು. ತನ್ನ ಗುಟ್ಟೆಲ್ಲವೂ ಬಯಲಾಗಲಾಗಿ, ಕೊನೆಗೆ ತನ್ನ ಪತಿಯಾದ ಯಶೋಧರನಿಗೆ ವಿಷವನ್ನೂಡಿ ಕೊಂದಿರ ಬಹುದು; ಇದೆಲ್ಲವೂ ಆದಮೇಲೆ ಆ ಪಾತಕಿಯು ಒಂದು ವೇಳೆ 'ಪುೞೀತು' ಧೂಮಪ್ರಭೆಯೆಂಬ ನರಕದಲ್ಲಿ ನರಳಿರಬಹುದು. ಆದರೆ ಕಾವ್ಯದಲ್ಲಿ ನಾವು ಎಲ್ಲಿ ತರಬೇಕು ಇಂತಹ ಪಾತ್ರ ರಚನೆಯನ್ನು! ಅಮೃತಮತಿಯು ಇಷ್ಟು ನೀಚಳಾದರೂ ಸಂಪೂರ್ಣ ನಿಂದೆಗೆ ಪಾತ್ರಳಲ್ಲ. ಅವಳ ವರ್ತನೆಯು ನಮಗೆ ಅಸಹ್ಯವನ್ನುಂಟು ಮಾಡಿದರೂ, "ಅಯ್ಯೋ ಪಾಪ! ಎಂಥವಳು ಹೇಗಾದಳು! ಇವಳಿಗೆ ಏಕೆ ಇಂಥ ದುರ್ಬುದ್ಧಿ ಬಂದಿತು? ಮಾನವನಿಗೆ ಸ್ವಾಭಾವಿಕವಾದ ಯಾವುದೋ ಒಂದು ದೌರ್ಬಲ್ಯದ ದೆಸೆಯಿಂದ ಅವನ ಅಧೋಗತಿಯಾದರೆ ಅದಕ್ಕೆ ಅವನು ಕಾರಣಕರ್ತನೆ?" ಎಂದು ಮೊದಲಾಗಿ ಪಾಠಕರ ಮನಸ್ಸಿನಲ್ಲಿ ಕರುಣೆಯನ್ನುಂಟುಮಾಡುವುದು; ಅವರ ಮನಸ್ಸನ್ನು ಒಲಿಸಿ ಸೆಳೆದುಕೊಳ್ಳುವುದು. ಇಂತಹ ಅಮೃತಮತಿಯ ಪಾತ್ರವನ್ನು

ವಾದಿರಾಜನೂ ಜನ್ನನೂ ಹೇಗೆ ಜೀವ ಕಳೆಯಿಂದ ತುಂಬಿರುವರೆಂಬುದನ್ನು ನೋಡ ಬಹುದು.

ಒಂದು ದಿವಸ, ಹೃದಯ ಪ್ರಿಯರಾದ ಯಶೋಧರನೂ ಅಮೃತಮತಿಯೂ ಪ್ರಾಸಾದ ತಲದಲ್ಲಿ ಸುಖ ನಿದ್ರೆಯಿಂದಿರಲು, ವಿನೋದಕ್ಕಾಗಿ ಪಟ್ಟದಾನೆಯ ಮಾವಟಿಗನು ಹಾಡುತ್ತಿರಲು, ಆ ಸುಣ್ದನಿಯು ಅಮೃತಮತಿಯನ್ನು ಎಚ್ಚರಗೊಳಿಸಿತು. ಆ ಮಾವಟಿಗನು 'ಮಾಳವ ಸಿರಿಯೆಂಬ ರಾಗಮಂ ಚಾಳಿಸ'ಲು ಅಮೃತಮತಿಯು ಮೆಚ್ಚಿ—

ಆಕರ್ಣಯಾಮಾಸ ಸುಖಾವಹಂ ತತ್ ।
ಚಕಾರ ತೃಷ್ಣಾಮಪಿ ರಕ್ತಕಂಠೀ ॥

ಹೀಗೆ ಅಮೃತಮತಿಯು "ಮುಟ್ಟಿದ ಮನಮಂ ತೊಟ್ಟನೆ ಪಸಾಯ ದಾನಮಂ" ಕೊಡಲು, ಬೆಳಗಾಗುವಷ್ಟು ಹೊತ್ತಿಗೆ "ಆ ವಿಕಲಸ್ವಾಂತೆಗೆ ನೋಡುವ ಕೂಡುವ ಚಿಂತೆ ಕಡಲ್ವರಿದುದು"; ತನ್ನ ಮನದನ್ನಳಪ್ಪ ಕೆಳದಿಯನ್ನು ಕರೆದು ತನ್ನ ಕಾದಲನಾದ ಮಾವಟಿಗನ ಬಳಿಗೆ ಕಳುಹಿಸಿದಳು. ಅವಳು ಆ ಅಷ್ಟಾವಕ್ರನ ರೂಪವನ್ನು ನೋಡಿ ಮನದಲ್ಲಿ ಹೇಸಿ ಬೇಗನೆ ಬಂದು ಅಮೃತಮತಿಗೆ ಹೀಗೆ ಹೇಳುತ್ತಾಳೆ:—

| | |
|---|---|
| ಅಸೌ ಕಥಂ ನಾಮ ನರೇಂದ್ರ ಪತ್ನ್ಯೈ । | ಅಮೃತಮತಿಯೆತ್ತ ರೂಪಾ । |
| ರೋಚೇತ ರುಚ್ಯಾಕೃತಿಮುದ್ವಹನ್ತ್ಯೈ ॥ | ಧಮನಷ್ಟಾವಂಕನೆತ್ತ ಚಿತ್ರಮಪಾತ್ರೇ ॥ |
| ಯದ್ವಾ ಕಿಮೇವಂ ಪರಿಚಿಂತಯಾ ಮೇ । | ರಮತೇ ನಾರೀ ಎಂಬುದು । |
| ಸ್ತ್ರೀಣಾಮಪಾತ್ರೇಭಿರತಿಃ ಸ್ವಭಾವಃ ॥ | ಸಮನಿಸಿದುದು ಚೆಂದ ಬಿದಿಗೆ ಕಣ್ಣಿಲ್ಲಕ್ಕುಂ ॥ |
| ೨—೪೧ | ೨—೩೪ |

ಇದಕ್ಕೆ ಅಮೃತಮತಿಯು 'ಪುಳಿಂದನ ಕಣೆಗಟ್ಟಿನಿಂದ ವನ ಹರಿಣಿಯಹಾಗೆ' ಹೀಗೆ ಹೇಳುತ್ತಾಳೆ:—

| | |
|---|---|
| ವಯೋ ನವಂ ರೂಪಮತೀವ ರಮ್ಯಂ । | ಕರಿದಾದೊಡೆ ಕಸ್ತುರಿಯಂ । |
| ಕುಲೋನ್ನತಿಶ್ಚೇತಿ ಕುಬುದ್ಧಿರೇಷಾ ॥ | ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ॥ |
| ಯತ್ರ ಪ್ರಸನ್ನೋ ಭಗವಾನ್ ಮನೋಭೂಃ । | ಸ್ಮರಚಾಪಮನಿರ್ಱಿಕೆಯ್ವರೆ । |
| ಸಏವದೇವಃ ಸಖಿ ಸುಂದರೀಣಾಂ ॥ ೨-೪೩ | ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ॥ ೨—೮೨ |
| ಸತೋಪಿ ರೂಪಾತಿಶಯಶ್ಚ ಸಾಧ್ಯಂ । | ಒಲವಾದೊಡೆ ರೂಪಿನ ಕೋ । |
| ನಿತಂಬಿನೀ ಮಾನಸ ರತ್ನ ಲಾಭಃ ॥ | ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ ॥ |
| ತಸ್ಯಾಸ್ತಿ ತಚ್ಚೇತ್ಕಿಮತೋ ವಿಚಾರಾತ್ । | ಫಲವೇನಿನ್ನೆನಗಾತನೆ । |
| ಕಾರ್ಯೇಣ ಸಿದ್ಧೇನ ಹಿ ಕಾರಣೇಚ್ಛಾ ॥ | ಕುಲದೈವಂ ಕಾಮದೇವನಿಂದ್ರಂ ಚಂದ್ರಂ ॥ |
| ೨-೪೪ | ೨—೪೩ |

ಹೀಗೆ ಅಷ್ಟಾವಂಕನಲ್ಲಿ ಅಮೃತಮತಿಯು ಅನುರಕ್ತಳಾಗಲು, ರಾಜನಲ್ಲಿ ಅವಳಿಗೆ ಮೊದಲಿದ್ದ ಗಾಢವಾದ ಅನುರಾಗವು ದಿನ ದಿನಕ್ಕೆ ಕಡಿಮೆಯಾಯಿತು.

"ಬೇವಂ ಮೆಚ್ಚಿದ ಕಾಗೆಗೆ ಮಾವಿನ್ಲಿದಪ್ಪಂತೆ ಪತಿಯೊಳಿನ್ಲಿದಾಯ್ತು ಮನಂ"
ಯಶೋಧರನಿಗೆ ಇವಳ ನಡತೆಯ ವಿಚಾರವಾಗಿ ಸಂಶಯವು ತಲೆದೋರಿತು; ಪರೀಕ್ಷಿಸಬೇಕೆಂದು, ಒಂದು ದಿವಸ ನಿದ್ದೆ ಹೋಗುತ್ತಿದ್ದವನಂತೆ ನಟಿಸುತ್ತ ಮಲಗಿರಲು—

ನಿದ್ರಾಯತಸ್ತಸ್ಯ ಭುಜೋಪಗೂಢಾ ।
ಮಾಕೃಷ್ಯ ದೇವೀ ನಿಜ ದೇಹ ಯಷ್ಟಿಂ ॥
ಗೃಹೀತ ತಾಂಬೂಲ ಸುಗಂಧ ಮಾಲ್ಯಾ ।
ಜಗಾಮ ತಸ್ಯೋಪಪತೇಸ್ಸಮೀಪಂ ॥　　　೨-೫೦

ಯಶೋಧರನು ಅವಳ ಬೆನ್ನ ಹಿಂದೆಯೇ ನಡೆದನು. ಅಮೃತಮತಿಯು ಅಷ್ಟಾವಂಕನ ಸಮೀಪಕ್ಕೆ ಬಂದಳು. ಆ ಬದಿಗನು ಮುಳಿದು ಆಕೆಯು ತಂದ 'ಮಾಲಾ ಮಲಯಜ ತಾಂಬೂಲ ಜಾಲವನ್ನು' ಎರಚಿ ಕೆದರಿ ಆಕೆಯನ್ನು 'ಕಳಹಂಸೆಗೆ ಗಿಡುಗನೆಱಗಿದಂತಿರೆ ಬಡಿದಂ". ಅಮೃತಮತಿಯ ಈ ಅವಸ್ಥೆಯನ್ನು ನೋಡಿ ಯಾರು ತಾನೆ ಕನಿಕರ ಪಡರು! ಇಷ್ಟು ಹಿಂಸೆಯಾದರೂ ಅಷ್ಟಾವಕ್ರನಲ್ಲಿಯ ಇವಳ ಅನುರಾಗವು ಕುಗ್ಗದೆ ಇದ್ದುದನ್ನು ನೋಡಿ ನೋಡಿ ಯಾರು ತಾನೆ ಆಕೆಯನ್ನು ನಿಂದಿಸಲು ಬಯಸುವರು!

ಅಷ್ಟಾವಕ್ರನು ಇವಳಿಗೆ ಮಾಡಿದ ಹಿಂಸೆಯನ್ನು ಕೇಳಿ—

ವಿಲಂಬ್ಯ ಕಾಲಂ ನರನಾಥ ಪತ್ನೀಂ ।
ಉಪಸ್ಥಿತಾಂ ಪ್ರತ್ಯುದಿತ ಪ್ರಕೋಪಃ ॥
ಆಕೃಷ್ಯ ಕೇಶಗ್ರಹಣೇನ ಘೋರಂ ।
ಜಘಾನ ಜಾರಃ ಸ ವರತ್ರಮುಷ್ಟ್ಯಾ ॥ ೨-೫೧

ತೋರ ಮುಡಿವಿಡಿದು ಕುಡಿಯಂ ।
ನಾರಂ ಸದೆವಂತೆ ತದೆದು ಬೀಟೆಯ ಕಾಲಿಂ ॥
ಚಾರೇಱಿತೆ ಬದಿಯನೊದೆದೊಡೆ ।
ಕೇರು ಪೊರಳ್ವಂತೆ ಕಾಲಮೇಲೆ ಪೊರಳ್ದಳ್ ॥
೨-೫೦

ಇಷ್ಟು ದಂಡಿಸಿದರೂ ಅಮೃತಮತಿಯು ಹೇಳುವ ಮಾತುಗಳನ್ನು ಕೇಳಿರಿ:—

ರೂಪಾದಿಭಿಸ್ತ್ವಯ್ಯವಸಾಯಿಭಿರ್ಮೇ ।
ತೃಪ್ಯಂತಿ ಸರ್ವಾಣ್ಯಪಿ ಚೇಂದ್ರಿಯಾಣಿ ॥
ತ್ವಂ ಜೀವಿತವ್ಯಂ ಮಮ ಯಾವದಾಯುಃ ।
ಅನಾದರಸ್ತ್ವಯ್ಯಥ ಕಿಂ ಮಮ ಸ್ಯಾತ್ ॥
೨-೫೬

ಕಿವಿ ಸವಿ ದನಿ ಕಣ್ಣವಿ ರೂ ।
ಪವಧರಿಸೆಲೆ ಗಜವೆಡಂಗನಿನ್ನುನ್ಲಿದೊಡೆ ಸಾ ॥
ವವಳೆನಗೆ ಮಿಕ್ಕ ಗಂಡರ್ ।
ಸವ ಸೋದರರೆಂದು ತಿಳಿಪಿದಳ್ ನಂಬುಗೆಯಿಂ ॥
೨-೫೧

ಇದೆಲ್ಲವನ್ನೂ ಕಣ್ಣಾರೆ ನೋಡುತ್ತಿದ್ದ ರಾಜನ ಮನಸ್ಸು ಹೇಗಾಗಿರಬೇಕು! ರಾಜನು,

'ಆಂದೋಲಯನ್ ಖಡ್ಗಮುಭೌ ಜಿಘಾಂಸಂ ಪುನರ್ವಿತರ್ಕಂ ಧೃತಿಮಾನಕಾರ್ಷೀತ್.'

ಜನ್ನನು ರಾಜನ ಈ ಮನೋಭಾವವನ್ನು ಎಷ್ಟು ಚೆನ್ನಾಗಿ ಚಿತ್ರಿಸಿರುವನು!

ಆಗಳ್ವಾಳ್ವಿಮಿರ್ದುದು ತೋ ।
ಳ್ತೂಗಿದುದು ಮನಂ ಕನಲ್ದುದಿರ್ವರುಮನೆರ ॥

ಪ್ರಿಬ್ಬಾಗಂ ಮಾಡಲ್ ಧೃತಿ ಬಂ ।
ದಾಗಳೆ ಮಾಣೆಂಬ ತೆಱದೆ ಪೇಸಿದನರಸಂ ॥ ೨–೫೩

ಹೀಗೆ ಜನ್ನನು ಮೊದಲೇ ಜೀವ ಪರಿಪೂರ್ಣವಾಗಿರುವ ಅಮೃತಮತಿಯ ಪಾತ್ರವನ್ನು ತೆಗೆದುಕೊಂಡು ತನ್ನ ಮೇಲ್ತರದ ಪ್ರತಿಭಾ ಶಕ್ತಿಯಿಂದ ಆ ಪಾತ್ರಕ್ಕೆ ಹೆಚ್ಚು ವ್ಯಕ್ತಿತ್ವವನ್ನು ಕೊಟ್ಟು ಹೆಚ್ಚು ಸಹಜವಾಗಿಯೂ, ಹೆಚ್ಚು ನಯವಾಗಿಯೂ ತನ್ನದೇ ಆದ ಒಂದು ವರ್ಣಮೇಳನದಿಂದ ಆ ಪಾತ್ರವನ್ನು ಚಿತ್ರಿಸಿದ್ದಾನೆ.

ಈ ರೀತಿಯಿಂದ ನೋಡುತ್ತ ಹೋದರೆ ಸನ್ನಿವೇಶ ರಚನೆಯಲ್ಲಾಗಲಿ, ಸಮಯೋಚಿತವಾದ ಪ್ರಕೃತಿ ವರ್ಣನೆಯಲ್ಲಾಗಲಿ ಜನ್ನನು ವಾದಿರಾಜನಿಗಿಂತ ಹೆಚ್ಚು ಶಕ್ತನು; ಹೆಚ್ಚು ಕುಸುರಿಗೆಲಸವನ್ನು ಮಾಡಬಲ್ಲವನು. ಯಶೋಧರನು ಹಿಟ್ಟಿನ ಕೋಳಿಯನ್ನು ಕೊಂದ ಕೂಡಲೆ ಆದ ಪರಿಣಾಮವನ್ನು ವಾದಿರಾಜನು—

ಕಿಂ ಚಿದಂತರಮುದೀರಿತ ನಾದಂ ।
ಲೂನ ಮಸ್ತಕಮವೇಕ್ಷ್ಯ ಪತಂತಂ ॥
ಖಡ್ಗಮುಷ್ಟಿಮವಮುಚ್ಯ ಶುಶೋಚ ।
ಕ್ಲೇಶಕೃತ್ಖಲು ಸತಾಮವಿವೇಕಃ ॥ ೩-೨೫

ಜನ್ನನು ಇದನ್ನೇ ಎಷ್ಟು ಸೊಗಸಾಗಿ ಹೇಳಿರುವನು ನೋಡಿರಿ!—

ತಲೆಯಿಂ ಕುಕ್ಕೂಕೂ ಎಂ ।
ಬುಲಿ ನೆಗೆದುದು ಕೂಗಿ ಕರೆವ ದುರಿತಂಗಳ ಬ ॥
ಲ್ಲುಲಿಯೆನೆ ಪಿಟ್ಟಿನ ಕೋಳಿಯ ।
ತಲೆವಿಡಿವಂತಾಗಿ ರಟ್ಟೆಪಾಱಿದುದಿನಿಸಂ ॥ ೩-೨೫

ಜನ್ನನು ಸ್ವೋಪಜ್ಞವಾದ ಕೆಲವು ವರ್ಣನೆಗಳನ್ನು ಅಲ್ಲಲ್ಲಿ ಸಮಯವರಿತು ಸೇರಿಸಿರುವನೆಂದು ಒಂದು ಸಲ ಹಿಂದೆಯೇ ಹೇಳಿದೆ. ಎರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡಬಹುದು. ಈ ಸಮಸ್ತ ರೂಪಕದ ಸೊಗಸನ್ನು ನೋಡಿರಿ—

ಅಮೃತಮತಿಯೆಂಬ ಪಾತಕಿ ।
ಯ ಮಾಯೆ ಬನಮಾಯ್ತು ಚಂದ್ರಮತಿ ಮಾತೆಯ ಮಾ ॥
ತೆಮಗೆ ಬಲೆಯಾಯ್ತು ಹಿಂಸನ ।
ಮಮೋಘ ಶರಮಾಯ್ತು ಕೆಡೆದುದಾತ್ಮ ಕುರಂಗಂ ॥ ೩-೨೮

ಇದನ್ನು ಷೇಕ್ಸ್ಪಿಯರ್ ಕವಿಯು "Julius Cæsar" ಎಂಬ ನಾಟಕದಲ್ಲಿ ಸೀಸರನ ಕೊಲೆಯಾದನಂತರ ಅವನ ಸ್ನೇಹಿತನಾದ ಆಂಟೊನಿ ಎಂಬಾತನು ಮಾಡಿರುವ ಶ್ರಾದ್ಧ ಭಾಷಣದಲ್ಲಿಯ (Funeral oration)

'O world! thou art the forest of this heart'

ಎಂದು ಮೊದಲಾಗುವ ನಾಲ್ಕೈದು ಚರಣಗಳೊಡನೆ ಹೋಲಿಸಿ ನೋಡಿರಿ.

ಜನ್ನನ ಈ ಸವಿಲಿಸ ವರ್ಣನೆಯನ್ನು ನೋಡಿರಿ:—

ನವ ರತ್ನದ ಪಂಜರದೊಳ್ ।
ದಿವಿಜ ಶರಾಸನಮಱಿಯನಿಱಿಸಿದವೊಲ್ ಸು ॥
ತ್ತುವ ಸೋಗೆಯ ಸುತ್ತಿನೊಳಾ ।
ಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ ॥ ೩-೩೭

ಇದನ್ನು ಮೀರಿಸಿರುವ ವರ್ಣನೆಯೊಂದಿರುವುದೇ ಎಂದು ನಮ್ಮ ಹೃದಯವು ಕೇಳದೆ ಇರಲಾರದು.

ಜನ್ನನಲ್ಲಿ ಇನ್ನೊಂದು ಅಪೂರ್ವವಾದ ಶಕ್ತಿಯುಂಟು: ಮಾತುಗಳನ್ನು ಮಿತವಾಗಿ ಉಪಯೋಗಿಸುವನು; ಹೆಚ್ಚು ಅಲಂಕಾರಗಳಿಲ್ಲ; ಯಮಕಗಳಿಲ್ಲ. ಯಶೋಧರನ ವರ್ಣನೆಯನ್ನು ಎಂಟು ಶ್ಲೋಕಗಳಲ್ಲಿ ಮಾಡಿರುವನು. ಜನ್ನನು ವಾದಿರಾಜನ ವರ್ಣನೆಯನ್ನು ಬದಿಗೊತ್ತಿ ಒಂದೇ ಒಂದು ಕಂದದಲ್ಲಿ ಒಂದು ಸೌಂದರ್ಯ ಸಾಗರವು ತೆರೆಯುಬ್ಬಿ ಬರುವಂತೆ ಬರೆದಿರುತ್ತಾನೆ:—

ನೋಡುವ ಕಣ್ಗಳ ಸಿರಿ ಮಾ ।
ತಾಡುವ ಬಾಯ್ಗಳ ರಸಾಯನಂ ಸಂತಸದಿಂ ॥
ಕೂಡುವ ತೋಳ್ಗಳ ಪುಣ್ಯಂ ।
ನಾಡಾಡಿಯೆ ರೂಪು ಕುವರ ವಿದ್ಯಾಧರನಾ ॥ ೨-೬

ಹೀಗೆ ಜನ್ನನು ವಾದಿರಾಜನಿಗಿಂತ ಉತ್ತಮನಾದ ಕವಿಯೆಂದು ಸಿದ್ಧವಾಗುವುದು. ಆದರೆ, ವಾದಿರಾಜನು ಸಾಮಾನ್ಯ ಕವಿ; ಅವನಿಗಿಂತ ಜನ್ನನು ಉತ್ತಮನಾದರೆ ಅವನನ್ನು ಮಹಾಕವಿಯೆಂದು ಕರೆಯಬಹುದೆ? ಎಂದು ಕೆಲವರು ಆಕ್ಷೇಪಿಸಬಹುದು. ಇದಕ್ಕೆ ಉತ್ತರವು ಒಂದೇ ಒಂದು ಮಾತಿನಲ್ಲಿದೆ: ವಾದಿರಾಜನು ಅಸಾಧಾರಣ ಕವಿಯು. ಇವನ ಕಾವ್ಯವು ರಾಮಾಯಣ ಮಹಾಭಾರತಗಳಿಗೆ ಸ್ಪರ್ಧಿಷ್ಣುವಾಗಿದ್ದಿತೆಂದು ಪ್ರಾ॥ ಕೀತ್ ಅವರು ಹೇಳಿದ್ದಾರೆ. ಅಲ್ಲದೆ, ಶ್ರವಣ ಬೆಳ್ಗೊಳದ ಶಾಸನ (ನಂ. ೫೪)ದಲ್ಲಿ, "ಸ್ಫುಟ ಮೃದು ಮಧುರ ಶ್ರಾವ್ಯ ಕಾವ್ಯಾವಲೇಪಃ" ಎಂದು ವಾದಿರಾಜನ ಕವಿತೆಯ ಮೇಲ್ಮೆಯು ಕೀರ್ತಿತವಾಗಿದೆ. ಇಷ್ಟೇಕೆ! ಅವನ ಕಾವ್ಯವನ್ನು ಒಂದು ಸಲ ಓದಿದರೆ ಸಾಕು; ಅದರ ರುಚಿಯು ತಲೆಗೇರುವುದು. ಕೆಲವು ವೇಳೆ ಕಾಳಿದಾಸನನ್ನು ಮರೆಮಾಡುವ ಯೋಗ್ಯತೆಯು ವಾದಿರಾಜನಲ್ಲುಂಟು[1]. ಇಂತಹ ಮಹಾಕವಿಯನ್ನು ಮೀರಿಸಿರುವ ಕನ್ನಡ ಜನ್ನನು, ಮಧುರನು ಹೇಳುವಂತೆ, "ಕರ್ಣಾಟ ಕೃತಿಗೆ ಸೀಮಾ ಪುರುಷನು."

ಡಿ. ಎಲ್. ನರಸಿಂಹಾಚಾರ್, ಎಂ.ಎ.

---

1. ಇವನು ಇಷ್ಟು ಪ್ರಸಿದ್ಧನಾದ ಕವಿಯಾದುದರಿಂದಲೇ ಇವನ ಗ್ರಂಥವು ೧೯೧೦ನೆಯ ಇಸವಿಯಲ್ಲಿಯೇ ಹರ್ಟೆಲ್ ಎಂಬ ವಿದ್ವಾಂಸನಿಂದ ಮುದ್ರಿಸಲ್ಪಟ್ಟು ಪ್ರಚಾರವಾಯಿತು.

# ಕರ್ಣಾಟಕ ಕವಿಕುಲಾಗ್ರಣಿಯಾದ ಪಂಪ ಮಹಾಕವಿ

ಕನ್ನಡ ಸಾಹಿತ್ಯ ದೃಷ್ಟಿಯಿಂದ ೯–೧೦ನೆಯ ಶತಮಾನಗಳು ಬಹು ಪ್ರಶಂಸನೀಯವಾದುವುಗಳು. ಈ ಶತಮಾನಗಳ ಹಿಂದೆ ಕನ್ನಡ ಸಾಹಿತ್ಯವು ಯಾವುದೋ ಒಂದು ತೆರನಾಗಿದ್ದಿತು. ರಾಜ್ಯದ ಆಡಳಿತಗಳ ಸಂಘಟ್ಟನೆಯಿಂದಲೂ ಸಾಮಾಜಿಕ ಜೀವನದ ಚಳವಳಿಗಳಿಂದಲೂ ಸಾಹಿತ್ಯದಲ್ಲಿ ಕ್ರಮೇಣ ಬದಲಾವಣೆಗಳು ತೋರಿ ಬರತೊಡಗಿದುವು. ಒಂದು ಕಾಲವು ಇನ್ನೊಂದು ಕಾಲವಾಗಿ ಪರಿವರ್ತನೆಯಾಗುವಾಗ ಇವೆರಡು ಕಾಲಗಳ ಸಂಘಟ್ಟನೆಯಿಂದಲೂ, ಪರಸ್ಪರ ಸಮಾಗಮನದಿಂದಲೂ ಸಮಾಜದಲ್ಲಿ ಅನೇಕ ಹೊಸ ವಿಚಾರಗಳು ತಲೆದೋರಿ ತತ್ಫಲವಾಗಿ ಕೃತಿಗಳು ಹೊರಬಿದ್ದು ವ್ಯವಹಾರದಲ್ಲಿ ಬರುವುವು. ಆದರೆ ಈ ಎರಡು ಕಾಲಗಳ ಸಂಧಿ ಸಮಯದಲ್ಲಿ ಸಿಕ್ಕಿಕೊಂಡಿರುವ ಕಾಲದ ಪರಿಸ್ಥಿತಿಯು ಬಹು ವಿಲಕ್ಷಣವಾಗಿರುವುದು: ಜನಾಂಗವು ಪೂರ್ವ ಕಾಲದ ನಡೆವಳಿಕೆಗಳನ್ನು ಒಂದೇ ಸಲ ಬಿಟ್ಟುಬಿಡುವುದಿಲ್ಲ; ಇದಕ್ಕೆ ಹೆಚ್ಚು ಅವಧಿ ಬೇಕಾಗುವುದು. ಈ ಮಧ್ಯೇ ಪೂರ್ವದ ನಡತೆಗಳನ್ನು ಬಿಡದಂತೆಯೂ ಹೊಸ ಚಳವಳಿಗಳನ್ನು ಸಂಪೂರ್ಣವಾಗಿ ನಿರಾಕರಿಸದಂತೆಯೂ ಹಾಗೂ ಹೀಗೂ ಇರತಕ್ಕುದು ಸ್ವಭಾವ. ಕ್ರಮೇಣ, ಹಳೆಯ ಚಾಳಿಗಳೆಲ್ಲವೂ ಯಾರಿಗೂ ತಿಳಿಯದಂತೆ ಮರೆಯಾಗುತ್ತಬಂದು ಮಾಯವಾಗಿ ನವೀನ ಪದ್ಧತಿಗಳು ಸಮಾಜದಲ್ಲಿ ಊರಿಕೊಳ್ಳುವುವು; ಆಮೇಲೆ ಇವುಗಳಿಗೇ ಸಂಪೂರ್ಣ ಆಶ್ರಯವು ದೊರೆತು ಸರ್ವತೋಮುಖವಾಗಿ ತತ್ಕಾಲದ ಪ್ರಚಲಿತ ಪದ್ಧತಿಗಳಾಗಿ ಪರಿಣಮಿಸುವುವು; ಆಗ ಅವುಗಳನ್ನು ತಳ್ಳುವುದು ಕಷ್ಟವಾಗುವುದು. ಕರ್ಣಾಟಕದ ಹತ್ತನೆಯ ಶತಮಾನದ ಸ್ಥಿತಿಯೂ ಹೀಗೆಯೇ. ೯–೧೦ನೆಯ ಶತಮಾನಗಳ ಹಿಂದೆ ಕರ್ಣಾಟಕ ಸಾಹಿತ್ಯವೂ ರಾಜ್ಯವೂ ಹೇಗಿದ್ದಿತೆಂಬುದನ್ನು ಖಂಡಿತವಾಗಿ ನಿರ್ಧರಿಸಲು ಸಾಕಾದ ಸಲಕರಣೆಗಳು ಇನ್ನೂ ದೊರೆತಿಲ್ಲ. ಲಬ್ಧವಾದ ಕೆಲವು ಗ್ರಂಥಗಳ ಸಹಾಯದಿಂದಲೂ ಶಾಸನಗಳ ಸಹಾಯದಿಂದಲೂ ಹೇಗಿದ್ದಿತೆಂಬುದನ್ನು ಊಹಿಸಲು ಅವಕಾಶವಿದೆ. ಜೈನರು ದಕ್ಷಿಣಕ್ಕೆ ಬರುವ ಮೊದಲು ಕರ್ಣಾಟಕದಲ್ಲಿ ದ್ರಾವಿಡ ಸಂಸ್ಕೃತಿಯು ನೆಲೆಗೊಂಡಿದ್ದು ಕರ್ಣಾಟಕಕ್ಕೆ ಸಾಹಿತ್ಯವೊಂದಿದ್ದಿರಬೇಕು. ಆದರೆ ಆಗಿನ ಸಾಹಿತ್ಯ ರೀತಿಯಲ್ಲಿ ರಚಿತವಾದ ಗ್ರಂಥಗಳು ಯಾವುವೂ ಉಪಲಬ್ಧವಾಗಿಲ್ಲ. ಜೈನರು ಕರ್ಣಾಟಕದಲ್ಲಿ ಕಾಲೂರಿದ ಮೇಲೆ ಅವರ ಪ್ರಾಬಲ್ಯವು ಕ್ರಮವಾಗಿ ಹೆಚ್ಚುತ್ತಹೋಗಿ ಕೊನೆಗೆ ಕರ್ಣಾಟಕವು ಅವರ ಒತ್ತಂಬಕ್ಕೊಳಪಟ್ಟು ತನ್ನ ನಿಜವಾದ ದ್ರಾವಿಡ ಸಂಸ್ಕೃತಿಯನ್ನು ತ್ಯಜಿಸಿರಬೇಕೆಂದು ಹೇಳಬಹುದು. ಮತಾಭಿಮಾನಿಗಳಾದ ಜೈನರು ಕರ್ಣಾಟಕದಲ್ಲಿ ತಮಗಿಂತ ಮುಂಚೆ ಇದ್ದ ಗ್ರಂಥಗಳನ್ನು ಇಲ್ಲದ ಹಾಗೆ ಮಾಡಿದುದರಿಂದಲೋ ಅಥವಾ, ಸರಿಯಾಗಿ ರಕ್ಷಿಸದೆ ಇದ್ದುದರಿಂದಲೋ ಆಗಿನ ಗ್ರಂಥಗಳೆಲ್ಲವೂ ನಾಶವಾಗಿರಬೇಕು. ಆದರೆ ಒಂದು ವಿಷಯವನ್ನು ಮಾತ್ರ ನಾವು

ಚೆನ್ನಾಗಿ ಗಮನದಲ್ಲಿಟ್ಟಿರಬೇಕು: ಅದುವರೆಗಿದ್ದ ಗ್ರಂಥಗಳಲ್ಲಿ ಅನಾದರಣೆಯನ್ನು ತೋರಿಸಿದರೂ ಜೈನರು ಕನ್ನಡ ಸಾಹಿತ್ಯದಲ್ಲಿ ಅನಾದರಣೆಯನ್ನು ತೋರಿಸಲಿಲ್ಲ. ಕನ್ನಡ ಸಾಹಿತ್ಯವನ್ನು ಅವರು ಮೆಚ್ಚಿ, ಅದನ್ನು ಚೆನ್ನಾಗಿ ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಪಡೆದು ತನ್ಮೂಲಕವಾಗಿ ತಮ್ಮ ಮತ ತತ್ತ್ವಗಳನ್ನು ಜನಗಳಲ್ಲಿ ಬೋಧಿಸತೊಡಗಿದರು; ಕರ್ಣಾಟಕ ದ್ರಾವಿಡ ಸಂಸ್ಕೃತಿಯನ್ನು ಮಾರ್ಪಡಿಸಿ ತತ್ಸ್ಥಾನದಲ್ಲಿ ತಮ್ಮದನ್ನು ಊರಿದರು. ಹೀಗೆ ಮಾಡುವಾಗ ಪ್ರಾರಂಭದಲ್ಲಿ ಅವರಿಗೆ ಕೆಲವು ತೊಂದರೆಗಳು ತೋರಿಬಂದಿರಬೇಕು. ಅದಕ್ಕಾಗಿ ಮೊದಲು ಅವರು ಸಂಸ್ಕೃತ ಭಾಷೆಯೇ ಸರಿಯಾದುದೆಂದು ಬಗೆದು, ಆ ಮೂಲಕವಾಗಿಯೇ ಮತ ತತ್ತ್ವಗಳನ್ನು ಪಂಡಿತ ಸಮಾಜದಲ್ಲಿ ಹರಡುತ್ತ, ಕೊನೆಗೆ ಕನ್ನಡ ಭಾಷೆಯನ್ನು ಜನಸಾಮಾನ್ಯಕ್ಕಾಗಿ ಉಪಯೋಗಿಸಿಕೊಂಡಿರಬೇಕು. ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ ಮೊದಲಾದವರು ಸಂಸ್ಕೃತ ಭಾಷೆಯಲ್ಲಿಯೇ ಗ್ರಂಥಗಳನ್ನು ರಚಿಸಿ ತಮ್ಮ ಪ್ರಭಾವವನ್ನು ನೆಲೆಗೊಳಿಸಿದಂತೆ ಕಾಣುತ್ತದೆ. ಅವರಿಂದ ಮುಂದಿನ ಕವಿಗಳು ಸಂಸ್ಕೃತ ಕನ್ನಡ ಎರಡು ಭಾಷೆಗಳನ್ನೂ ಮತ ಪ್ರಚಾರಕ್ಕಾಗಿ ಉಪಯೋಗಿಸಿಕೊಂಡು ಕರ್ಣಾಟಕವನ್ನು ಸ್ವಾಧೀನಪಡಿಸಿಕೊಂಡರು. ಒಂಬತ್ತನೆಯ ಶತಮಾನದಲ್ಲಿದ್ದ ನೃಪತುಂಗನು ಕನ್ನಡದಲ್ಲಿ ಅನೇಕ ಗದ್ಯ ಪದ್ಯಾತ್ಮಕ ಕಾವ್ಯಗಳು ತನ್ನ ಕಾಲದಲ್ಲಿದ್ದಿತೆಂದು ಹೇಳಿ, ಕೆಲವು ಕವಿಗಳ ಹೆಸರನ್ನೂ ಸೂಚಿಸಿರುವನು. ಆದರೆ ಆ ಕವಿಗಳ ಕಾವ್ಯಗಳಲ್ಲಿ ಯಾವುವೂ ಇನ್ನೂ ನಮಗೆ ದೊರೆತಿಲ್ಲ.

ನೃಪತುಂಗನ ಕಾಲಕ್ಕೆ ಕನ್ನಡ ಭಾಷೆಯಲ್ಲಿ ಒಂದು ಹೊಸ ಪರಿವರ್ತನೆಯು ತಲೆದೋರುತ್ತಿದ್ದಿತು: ಕಾವ್ಯಗಳಾದರೋ ಹೊಸ ರೀತಿಯಲ್ಲಿಯೇ ರಚಿತವಾಗುತ್ತಿದ್ದುವು. ಕನ್ನಡದಲ್ಲಿ ಕಾವ್ಯಗಳನ್ನು ಬರೆಯುವ ಕವಿಗಳು ಸಂಸ್ಕೃತ ಭಾಷೆಯಲ್ಲಿ ತಮಗಿದ್ದ ಹೆಚ್ಚಾದ ಪಾಂಡಿತ್ಯದಿಂದ ಕನ್ನಡ ಭಾಷೆಯಲ್ಲಿ ಸಂಸ್ಕೃತ ಸಾಹಿತ್ಯವನ್ನು ತುಂಬತೊಡಗಿದರು. ಈ ಭರದಲ್ಲಿ ಕನ್ನಡ ನುಡಿಯ ಮರ್ಯಾದೆಯ ಗಡಿಯು ಮೀರಿ ಕನ್ನಡ ಕಾವ್ಯಗಳೆಲ್ಲ ಬರಿ ಸಂಸ್ಕೃತಮಯವಾಗುವುದಕ್ಕೆ ಪ್ರಾರಂಭವಾದುವು. ಇದನ್ನು ನೋಡಿ ನೃಪತುಂಗನು ಬಹಳ ವ್ಯಸನಪಟ್ಟು ಅದನ್ನು ಸರಿಪಡಿಸುವುದಕ್ಕಾಗಿ ಕನ್ನಡದಲ್ಲಿ ಸಂಸ್ಕೃತವನ್ನು ಎಷ್ಟರ ಮಟ್ಟಿಗೆ ಸೇರಿಸಬಹುದು ಮತ್ತು ಬೆರಸುವಾಗ ಯಾವ ನಿಯಮಗಳನ್ನನುಸರಿಸಬೇಕು—ಇವೇ ಮೊದಲಾದ ನಿಯಮಗಳನ್ನುಳ್ಳ 'ಕವಿರಾಜಮಾರ್ಗ'ವೆಂಬ ಲಕ್ಷಣ ಗ್ರಂಥವೊಂದನ್ನು ರಚಿಸಿದನು. ಕನ್ನಡ ಲಕ್ಷಣ ಗ್ರಂಥಗಳಲ್ಲಿ ಕವಿರಾಜಮಾರ್ಗವೇ ಮೊದಲನೆಯದೆಂದು ಹೇಳಬಹುದು.

ಅಲ್ಲದೆ, ನೃಪತುಂಗನ ಕಾಲಕ್ಕೆ ಕನ್ನಡ ಭಾಷೆಯೇ ಬಹಳ ಮಟ್ಟಿಗೆ ಬದಲಾಯಿಸಿದ್ದಿತು. ಹಳಗನ್ನಡದ ಬಿಗಿಯು ಸಡಿಲುತ್ತಬಂದು ಭಾಷೆಯಲ್ಲಿ ಒಂದು ಬಗೆಯ ಮಾರ್ದವವೂ ಸೌಲಭ್ಯವೂ ಲಾಲಿತ್ಯವೂ ತಲೆದೋರುತ್ತಿದ್ದುವು. ನೃಪತುಂಗನು ತನ್ನ ಗ್ರಂಥವನ್ನು ರಚಿಸಿರುವುದೂ ಮೃದುವಾದ, ಸರಳವಾದ ಈ 'ತಿರುಳ್ಗನ್ನಡ' ಭಾಷೆಯಲ್ಲಿಯೇ.

ಹಿಂದಿನ ಗ್ರಂಥಗಳ ಆಧಾರದ ಮೇಲೆ ನೃಪತುಂಗನು ಬರೆದ ಲಕ್ಷಣ ಗ್ರಂಥ ವನ್ನನುಸರಿಸಿ ಆ ಕಾಲದಲ್ಲಿ ಹೊಸ ಮಾದರಿಯ ಕಾವ್ಯಗಳು ಹೊರಬೀಳತೊಡಗಿರ ಬೇಕು. ಕರ್ಣಾಟಕದಲ್ಲಿ ಎಲ್ಲೆಲ್ಲಿಯೂ ಸಾಹಿತ್ಯಾಭಿಮಾನವು ತಲೆದೋರಿ ಅನೇಕ ರಾಜರು ಕವಿಗಳಿಗೆ ಪೋಷಕರಾದುದಲ್ಲದೆ ಸ್ವಯಂ ಗ್ರಂಥಕರ್ತೃಗಳೂ ಆದರು. ಉದಾಹರಣೆಗೆ, ಒಂದನೆಯ ಗುಣವರ್ಮನನ್ನು ನೋಡಬಹುದು. ರಾಜಾಶ್ರಯವು ದೊರೆತುದನ್ನು ಕವಿಗಳು ಸದುಪಯೋಗಪಡಿಸಿಕೊಂಡು ಅವರ ಆಶ್ರಯದಲ್ಲಿ ಕಾವ್ಯ ಗಳನ್ನು ರಚಿಸಿ ಪೋಷಕರ ಹೆಸರನ್ನು ಚಿರಸ್ಥಾಯಿಯಾಗಿ ಮಾಡತೊಡಗಿದರು. ಹೀಗೆ ಮಾಡಿದವರಲ್ಲಿ, ತಮ್ಮ ಕಾವ್ಯಗಳ ಮೂಲಕ ನಮಗೆ ಪರಿಚಿತರಾದವರಲ್ಲಿ, ಪಂಪನೇ ಮೊದಲನೆಯವನು.

ಸಂಸ್ಕೃತ ಸಾಹಿತ್ಯದಲ್ಲಿ ಕಾಳಿದಾಸನು ಹೇಗೋ ಕನ್ನಡ ಸಾಹಿತ್ಯದಲ್ಲಿ ಪಂಪನು ಹಾಗೆ. ಈಗ ನಮಗೆ ತಿಳಿದಿರುವ ಕನ್ನಡ ಕವಿಗಳಲ್ಲೆಲ್ಲ ಪಂಪನೇ ಮೊದಲನೆಯವನು ಮತ್ತು ಉತ್ತಮನು. ಇವನು ಆಗ ಪ್ರಸಿದ್ಧವಾಗಿ ಬಳಕೆಯಲ್ಲಿದ್ದ ಚಂಪೂ ರೂಪದಲ್ಲಿ ಎರಡು ಗ್ರಂಥಗಳನ್ನು ರಚಿಸಿದನು: ಒಂದು ಧಾರ್ಮಿಕ ಗ್ರಂಥ, ಇನ್ನೊಂದು ಲೌಕಿಕ ಗ್ರಂಥ. ತನ್ನ ಧಾರ್ಮಿಕ ಗ್ರಂಥದಲ್ಲಿಯೂ ಕೂಡ ಇವನು ತನ್ನ ತರುವಾಯ ಬಂದವರಂತೆ ವಿಶೇಷವಾದ ಮತ ತತ್ತ್ವಗಳ ಗೊಂದಲದಲ್ಲಿ ಸಿಕ್ಕುಬಿಟ್ಟಿಲ್ಲ; ಆವಶ್ಯಕ ವಾದಷ್ಟನ್ನು ಮಾತ್ರ ತಿಳಿಸಿ ಆ ಧಾರ್ಮಿಕ ಗ್ರಂಥದಲ್ಲಿಯೂ "ಆದಿ ಪುರಾಣದೊಳೞ ವುದು ಕಾವ್ಯ ಧರ್ಮಮಂ ಧರ್ಮಮುಮಂ" ಎಂದು ತಾನೇ ಹೇಳಿರುವಂತೆ, ಕಾವ್ಯದ ರಸಾಸ್ವಾದನೆಗೆ ಅವಕಾಶಮಾಡಿಕೊಟ್ಟಿರುವನು. ಜೈನನಲ್ಲದವನೂ ಕೂಡ ಈ ಗ್ರಂಥವನ್ನು ಓದಿದರೆ, ಕೆಲವೆಡೆಗಳಲ್ಲಿ ವಿನಾ, ಉಳಿದ ಕಡೆಗಳಲ್ಲಿ ಕಾವ್ಯದ ಸ್ವಾರಸ್ಯ ವನ್ನು ಸವಿಯಬಹುದು. ಇಂತಹ ಧಾರ್ಮಿಕ ಗ್ರಂಥದಲ್ಲೂ ಈ ಬಗೆಯಾದ ರಸವನ್ನು ತುಂಬುವುದು ಪಂಪನಂತಹ ಕವಿಗಲ್ಲದೆ ಇತರರಿಗೆ ಸಾಧ್ಯವಿಲ್ಲ. ಇದಕ್ಕಿಂತಲೂ ಹೆಚ್ಚಿನ ಪ್ರತಿಭೆಯನ್ನೂ ಪ್ರೌಢಿಮೆಯನ್ನೂ ಪಂಪನು ತೋರಿಸಿರುವುದು ಇವನು ರಚಿಸಿರುವ ಭಾರತದಲ್ಲಿ. ಅಲ್ಲಿ ಅವನು ಎಲ್ಲರನ್ನೂ ಮೋಹಗೊಳಿಸಿ ತನ್ನ ತರುವಾಯ ಬಂದ ಕವಿಗಳೆಲ್ಲರೂ ತನ್ನ ಮಾರ್ಗವನ್ನೇ ಅನುಸರಿಸುವಂತೆ ಯಾವುದೋ ಒಂದು ವ್ಯಾಮೋಹಾಸ್ತ್ರವನ್ನು ಹೂಡಿರುವುದು ಬಹಳ ಶ್ಲಾಘನೀಯವಾಗಿದೆ. ಆದುದರಿಂದ ಇವನ ಧಾರ್ಮಿಕ ಗ್ರಂಥವಾದ ಆದಿ ಪುರಾಣವನ್ನು ವಿಮರ್ಶೆ ಮಾಡುವ ಮೊದಲು ಭಾರತದ ಕಡೆ ಸ್ವಲ್ಪ ಗಮನಿಸೋಣ.

ಪಂಪನ ಭಾರತಕ್ಕೆ ವ್ಯಾಸ ಮುನಿಯ ಸಂಸ್ಕೃತ ಮಹಾಭಾರತವೇ ಮೂಲ ವೆಂಬುದು ಅವನೇ ಹೇಳಿಕೊಂಡಿರುವ "ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ" ಎಂಬ ವಾಕ್ಯದಿಂದಲೇ ಪ್ರತಿಪಾದಿತವಾದರೂ ಪಂಪನ ಕಾಲಕ್ಕೆ ಹಿಂದೆ ಕೆಲವು ಕನ್ನಡ ಭಾರತಗಳಿದ್ದಂತೆ ಊಹಿಸಬಹುದಾಗಿದೆ. ನಾಗ ವರ್ಮನ 'ಕಾವ್ಯಾವಲೋಕನ'ದಲ್ಲಿ ಲಕ್ಷ್ಯವಾಗಿ ಕೊಟ್ಟಿರುವ ಕೆಲವು ಪದ್ಯಗಳು ಯಾವುದೋ ಕನ್ನಡ ಭಾರತದಿಂದ ಉದ್ಧರಿಸಲ್ಪಟ್ಟುವಾಗಿ ಕಾಣುತ್ತವೆ. ಅಲ್ಲದೆ, ಪಂಪನೇ ತನ್ನ ಭಾರತದಲ್ಲಿ "ಮುಂ ಸಮಸ್ತ ಭಾರತಮನಪೂರ್ವಮಾಗೆ ಪೇೞ್ದ

ಕವೀಶ್ವರರಿಲ್ಲ'' ಎಂದು ಹೇಳಿ ತನ್ನ ಭಾರತವನ್ನು ''ಸಮಸ್ತ ಭಾರತಂ'' ಎಂದು ಹೇಳಿಕೊಂಡಿರುವುದರಿಂದ ಇವನಿಗೆ ಹಿಂದೆ ಕೆಲವರು ಭಾರತದ ಕೆಲ ಕೆಲ ಭಾಗಗಳನ್ನು ಕನ್ನಡದಲ್ಲಿ ರಚಿಸಿದ್ದರೆಂದೂ, ಸಂಪೂರ್ಣವಾಗಿ ಭಾರತವನ್ನು ಬರೆದವರಲ್ಲಿ ಇವನೇ ಮೊದಲಿಗನೆಂದೂ ಊಹಿಸಬಹುದಾಗಿದೆ. ''ಕವಿ ವ್ಯಾಸನೆನೆಂಬ ಗರ್ವಮೆನಗಿಲ್ಲ'' ಎಂದು ಪಂಪನು ಹೇಳುವುದರಿಂದ ಇವನಿಗೆ ಹಿಂದೆ ಕವಿ ವ್ಯಾಸನೆಂಬವನೊಬ್ಬನಿದ್ದು ಭಾರತವನ್ನು ರಚಿಸಿರಬಹುದು. ಆದರೂ, ನಮಗೆ ದೊರೆತಿರುವ ಪುರಾತನ ಸಮಗ್ರ ಕನ್ನಡ ಭಾರತವು 'ವಿಕ್ರಮಾರ್ಜುನ ವಿಜಯ'ವೊಂದೇ.

ಕನ್ನಡ ಕವಿ ಪಿತಾಮಹನಾದ ಪಂಪನು ತನ್ನ ಪೋಷಕನಾದ ಅರಿಕೇಸರಿಯ ಕೀರ್ತಿಯನ್ನು ಸ್ಥಿರಪಡಿಸುವುದಕ್ಕಾಗಿಯೂ, ''ಸಮಸ್ತ ಭಾರತಮನಪೂರ್ವಮಾಗೆ ......ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ದೊಡೆ ಪಂಪನೆ ಪೇೞ್ಗುಂ'' ಎಂದು ಒತ್ತಾಯ ಮಾಡಿದ ಪಂಡಿತರನ್ನು ಸಂತೋಷಪಡಿಸುವುದಕ್ಕಾಗಿಯೂ ಭಾರತ ಕಥಾ ವಸ್ತುವನ್ನು ಆ ಕಾಲದ ವಾತಾವರಣಕ್ಕೆ ಒಪ್ಪುವಂತೆ ವೀರ ರಸದಲ್ಲಿ ಎರಕ ಹೊಯ್ದು ಕಾವ್ಯಕ್ಕೆ ತಕ್ಕಂತೆ ಕಥೆಯನ್ನು ಮಾರ್ಪಡಿಸಿ ಕನ್ನಡ ಸಾಹಿತ್ಯ ದೇವಿಗೆ ''ವಿಕ್ರಮಾರ್ಜುನ ವಿಜಯ''ವೆಂಬ ಒಂದು ರತ್ನ ಕಂಠಿಯನ್ನು ನಿರ್ಮಿಸಿದನು. ಹೀಗೆ ಅರಿಕೇಸರಿಯ ಕೀರ್ತಿಯನ್ನು ಬೆಳಗುವುದಕ್ಕೆ ಹೊರಟಿದ್ದುದರಿಂದಲೂ, ''ಬೆಳಗುವೆನಿಲ್ಲಿ ಲೌಕಿಕಮಂ'' ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದುದರಿಂದಲೂ ಪಂಪನು ತನ್ನ ಭಾರತವನ್ನು ಮೂಲ ಭಾರತದ ಕಥೆಯಂತೆಯೇ ನಡೆಯಿಸಲು ಸಾಧ್ಯವಿಲ್ಲದೆ ತನ್ನ ಪ್ರತಿಭಾ ಶಕ್ತಿಯಿಂದ ಕಥೆಯನ್ನು ತಗ್ಗಿಸಿಯೂ ಹಿಗ್ಗಿಸಿಯೂ ಕೆಲವೆಡೆಯಲ್ಲಿ ಅಜ್ಞಾತ ವಾಗಿ ಜೈನ ಸಂಪ್ರದಾಯಕ್ಕೆಳೆದೂ ಇರುವನು. ಹೀಗೆ ಮಾಡುವುದರಲ್ಲಿ ವಿಸ್ಮರಣೆ ಯಿಂದ ಕೆಲವೆಡೆಗಳಲ್ಲಿ ತೊಡಕಿಗೆ ಸಿಕ್ಕಿ ಮುಗ್ಗರಿಸಿರುವನು ; ಮತ್ತೆ ಕೆಲವೆಡೆಗಳಲ್ಲಿ ಮೂಲ ಭಾರತದ ಕಥೆಗೆ ಮತ್ತಷ್ಟು ಮೆರುಗು ಕೊಟ್ಟು ಹೊಳೆಯುವಂತೆ ಮಾಡಿರು ವನು. ಅವುಗಳಲ್ಲಿ ಕೆಲವನ್ನು ಮುಂದೆ ನೋಡಬಹುದು.

ಪಂಪನ ಪ್ರಕಾರ ಭಾರತದ ಕಥಾನಾಯಕನು ಅರ್ಜುನನು. ಇವನು ಚಾಳುಕ್ಯ ಚಕ್ರವರ್ತಿಯಾದ ಅರಿಕೇಸರಿಗೆ ಹೋಲಿಸಲ್ಪಟ್ಟಿರುವನು. ಇವನ ಸಾಹಸ ಗಳೆಲ್ಲ ಅರಿಕೇಸರಿಯವೇ. ಈ ಸಮಯದಲ್ಲಿ ಪಂಪನು ಅರಿಕೇಸರಿಯನ್ನು ಅರ್ಜುನನ ಅಪರಾವತಾರವೆಂದು ಎಣಿಸಿರುವನೆಂದು ಹೇಳಬಹುದು. ಭಾರತ ಯುದ್ಧದಲ್ಲಿ ಯಮ ನಂದನನು ಕರ್ಣನಿಂದ ತಾಡಿತನಾಗಿ ಸೋತು ತನ್ನ ಪಾಳೆಯಕ್ಕೆ ಹಿಂದಿರುಗಿ ಬಂದು ತನಗಾದ ಪರಾಭವಕ್ಕೇವಯಿಸಿ ಅರ್ಜುನನ ಮೇಲೆ ಕೋಪಿಸಿಕೊಳ್ಳುವನು. ಆಗ ಅರ್ಜುನನು:—

ನರಸಿಂಗಂಗಂ ಜಾಕ ।
ಬ್ಬರಸಿಗಮುಳವೊದವೆ ಪುಟ್ಟಿ ಪುಟ್ಟಿಯುಮರಿಕೇ ॥
ಸರಿಯೆನೆ ನೆಗೞ್ದಿಪ್ಪಿಮರಾತಿಯ ।
ಸರಿ ದೊರೆಗಂ ಬಂದೆನಪ್ಪೊಡಾಗಳ್ ನಗಿರೇ ॥

ಎಂದು ಹೇಳುವುದನ್ನು ನೋಡಿದರೆ, ಪಂಪನು ಅರ್ಜುನನಿಗೂ ಅರಿಕೇಸರಿಗೂ ಅಭೇದವನ್ನು ಕಲ್ಪಿಸಿರುವುದು ವಿಶದವಾಗುವುದು. ಅಲ್ಲದೆ, ಕುಂತಿಯೂ ಪಾಂಡುವೂ ಅರ್ಜುನನಿಗೆ ನಾಮಕರಣೋತ್ಸವವನ್ನು ಬೆಳಸುವಾಗ ಅವನ ಅಷ್ಟೋತ್ತರ ಶತ ನಾಮಗಳಲ್ಲಿ 'ಚಾಳುಕ್ಯ ವಂಶೋದ್ಭವಂ', 'ರಿಪು ಕುರಂಗ ಕಂಠೀರವಂ', 'ಅನ್ಯಾಸ ಗಂಧವಾರಣಂ', 'ಸಾಮಂತ ಚೂಡಾಮಣಿ' ಮೊದಲಾದ ಅರಿಕೇಸರಿಯ ನಾಮಾವಳಿಗಳನ್ನೇ ಇಟ್ಟು ಆಶೀರ್ವದಿಸುವರು. ಪ್ರಪಂಚವನ್ನೆಲ್ಲ ಏಕಚ್ಛತ್ರಾಧಿಪತ್ಯ ಮಾಡಿದ ಮೂರು ಲೋಕದ ಗಂಡನಾದ ಸವ್ಯಸಾಚಿಯು ಒಮ್ಮೊಮ್ಮೆ ಸಾಮಂತ ಚೂಡಾಮಣಿಯಾಗುವನು. ಇದು ಕೆಲವೆಡೆಗಳಲ್ಲಿ ಆಭಾಸವಾಗಿ ತೋರುವುದು. ಅರ್ಜುನನು ದೇಶಾಟನೆಗೆ ಹೊರಟು, ದ್ವಾರಕಾ ಪಟ್ಟಣದಲ್ಲಿ ಕೃಷ್ಣನ ಅನುಮತಿಯಂತೆ ಸುಭದ್ರೆಯನ್ನು ಅಪಹರಿಸಿಕೊಂಡು ಹೋಗುವನಷ್ಟೆ! ಈ ಸಂದರ್ಭದಲ್ಲಿ ಪಂಪನು ಸುಭದ್ರೆಯನ್ನು ಅರ್ಜುನನು ಕೊಂಡುಹೋದನೆಂದು ಹೇಳದೆ ಸಾಮಂತ ಚೂಡಾಮಣಿಯು ಕೊಂಡುಯ್ದನೆಂದು ಹೇಳುವುದು ಮನಸ್ಸಿಗೆ ಅಷ್ಟು ಸಮರ್ಪಕವಾಗಿಲ್ಲ. ಪಂಪನು ಅರಿಕೇಸರಿಯನ್ನು ಕಿರೀಟಿಯಲ್ಲಿ ಹೋಲಿಸಿರುವುದು ಕೇವಲ ಮನದೊಲವಿನಿಂದಲ್ಲವೆಂದೂ ಅವನಲ್ಲಿ ನಿಜವಾಗಿಯೂ 'ವಿಪುಳ ಯಶೋ ವಿತಾನ' ಗುಣಗಳಿದ್ದುವೆಂದೂ ಹೇಳುವನಾದರೂ ಮೂರು ಲೋಕದ ಗಂಡನು ಸಾಮಂತ ಚೂಡಾಮಣಿಯಾದುದೇಕೆ ಎಂದು ಯೋಚಿಸಬೇಕಾಗುವುದು. ಅರಿಕೇಸರಿಯಾದ ಅರ್ಜುನನು ಸೋಲುವ ಪ್ರಸಂಗ ಬಂದಾಗಲೂ, ಪ್ರತಿಪಕ್ಷದ ಇದುರಿನಲ್ಲಿ ಇವನ ಸಾಹಸವು ಸಾಗದ ಸಮಯದಲ್ಲೂ, ಪಂಪನು ಬಹಳ ಕಾಲ ವಿಳಂಬಮಾಡದೆ ಅಲ್ಲಿಂದ ಬಹು ಬೇಗ ನುಸುಳಿಹೋಗುವನು. ಆಗ 'ವೈರಿ ಗಜ ಘಟಾ ವಿಘಟನಂ', 'ವಿದ್ವಿಷ್ಟ ವಿದ್ರಾವಣಂ, ' 'ಅರಾತಿ ಕಾಳಾನಲಂ', 'ರಿಪು ಕುರಂಗ ಕಂಠೀರವಂ' ಎಂಬ ಬಿರುದುಗಳು ಮಾಯವಾಗುವುವು. ಅಷ್ಟಮಾಶ್ವಾಸದಲ್ಲಿ ಯಕ್ಷನ ಮಾಯೆಯಿಂದ ಕೊಳದ ತಡಿಯಲ್ಲಿ ನೀರು ಕುಡಿದು ಆರೂಢ ಸರ್ವಜ್ಞನು ನಿಶ್ಚೇಷ್ಟಿತನಾಗಿ ನೆಲದಲ್ಲೊರಗುವನು. ಪಂಪನು ಇಲ್ಲಿ ಹೇಳುವುದು ಬಹು ಚಮತ್ಕಾರವಾಗಿದೆ:—

> ಆ ಕಮಳಾಕರಮಂ ಪೊ।
> ಕ್ಕಾಕಾಶ ಧ್ವನಿಯನುಱಿದೆ ಕುಡಿದರಿ ಭೂಪಾ॥
> ನೀಕ ಭಯಂಕರನುಂ ಗಡ।
> ಮೇಕೆಂದಱಿಯಿಂ ಬಱಿಲ್ದು ಜೋಲ್ದಂ ಧರೆಯೊಳ್॥

ಎಂದು ಹೇಳುವನು. ಹಾಗೆಯೇ ಅರ್ಜುನನ ಸಾಹಸ ಕಾರ್ಯಗಳನ್ನು ವರ್ಣಿಸುವಾಗ ನೋಡಿರಿ, ಪಂಪನನ್ನು ಹಿಡಿದು ನಿಲ್ಲಿಸುವರೇ ಇಲ್ಲ; ಅವನ ವಾಗ್ವೈಖರಿಯನ್ನು ಆಗ ನೋಡಬೇಕು: ಹೃದಯವು ಬಾಯ್ಗೇ ಬಂದುಬಿಡುವುದು; ಬಾಯಿ ಬಿಚ್ಚಿ ಮನಸ್ಸಾರೆ ವರ್ಣಿಸುವುದರಲ್ಲಿ ತನ್ನ ಸಾಮರ್ಥ್ಯವನ್ನೆಲ್ಲ ಉಪಯೋಗಿಸುವನು; ಒಮ್ಮೊಮ್ಮೆ ಒಂದೆರಡು ಪದ್ಯಗಳಲ್ಲಿಯೇ ಗಾಂಡಿವಿಯ ಸಾಹಸ ಶೌರ್ಯಗಳನ್ನು ಬಹು ಹೃದಯಂಗಮವಾಗಿ ನಿರೂಪಿಸುವನು. ಇದು ಇವನ ಕೌಶಲ; ಎಲ್ಲರಿಗೂ

ಬಾರದು. ವಿದ್ವಿಷ್ಟವಿದ್ರಾವಣನು ಮತ್ಸ್ಯಯಂತ್ರ ಭೇದನ ಮಾಡಿದುದೂ, ಅಂಗಾರ ವರ್ಮನನ್ನೂ ಅಂಗದಪರ್ಣನನ್ನೂ ಸೋಲಿಸಿದುದೂ, ದುರ್ಯೋಧನನನ್ನು ಕೋಡಗ ಗಟ್ಟುಗಟ್ಟಿ ಎಳೆದೊಯ್ಯುತ್ತಿದ್ದ ಚಿತ್ರಸೇನನನ್ನು ಪರಾಭವಿಸಿದುದೂ ಸ್ವಲ್ಪಮಾತಿ ನಲ್ಲಿ ವರ್ಣಿತವಾದರೂ ಅವನ ಪೂರ್ಣವಾದ ಸಾಹಸವು ವ್ಯಕ್ತವಾಗುವಂತಿದೆ. ಭಾರತ ಯುದ್ಧದಲ್ಲಿ ಅರ್ಜುನನು ಭೀಷ್ಮ ದ್ರೋಣ ಕರ್ಣಾದಿಗಳೊಡನೆ ತೋರಿಸಿದ ಸಾಮರ್ಥ್ಯವನ್ನಂತೂ ಪಂಪನು ತನ್ನ ಕವಿತಾ ಶಕ್ತಿಯನ್ನೆಲ್ಲ ವೆಚ್ಚಮಾಡಿ ಬಹಳ ಚೆನ್ನಾಗಿ ವರ್ಣಿಸಿರುವನು. ಕೊನೆಗೆ, ತಾನು ಮಾಡಿದ ವರ್ಣನೆಯಿಂದ ತೃಪ್ತಿಹೊಂದದೆ ಸಾಹಸಾಭರಣನ ಅದ್ಭುತವಾದ ಸಾಹಸವನ್ನು ಪಶುಪತಿಯ ಬಾಯಿಂದಲೇ ಹೊರಡಿ ಸಿರುವನು. ಕರ್ಣಾರ್ಜುನರು ಯುದ್ಧ ಮಾಡುತ್ತಿದ್ದುದನ್ನು ನೋಡುತ್ತಿದ್ದ ದೇವೇಂದ್ರನಿಗೂ ದಿವಸೇಂದ್ರನಿಗೂ ತಮ್ಮ ತಮ್ಮ ತನಯರ ಶೌರ್ಯದ ವಿಷಯ ದಲ್ಲಿ ನಡೆಯುತ್ತಿದ್ದ ಜಗಳವು ಹರನ ಕಿವಿಗೆ ಬೀಳಲು, ಈಶ್ವರನು ಹೀಗೆನ್ನುವನು :—

ಜಗಳಮಿದೇಂ ದಿನಕರ ಪೊಣ !
ರ್ದು ಗೆಲ್ವನೇ ನಿಜ ತನೂಭವಂ ಹರಿಗನೊಳೇಂ ॥
ಬಗೆಗೆಟ್ಟೆಯೊ ಧುರದೊಳವಂ !
ಮಿಗಿಲೆನಗೆನೆ ನಿನಗೆ ಪಗಲೊಳೇಂ ಕಬಿತ್ತಲೆಯೇ ॥

ಕೊನೆಗೆ ಯುದ್ಧದಲ್ಲಿ ಅರಿನೃಪರನ್ನೆಲ್ಲ ನಿರ್ಮೂಲ ಮಾಡಿದ ಮೇಲೆ ಯಥಾ ವತ್ತಾಗಿ ವಿಕ್ರಮಾರ್ಜುನನಿಗೇ ಪಟ್ಟಾಭಿಷೇಕವಾಗುವುದು. ಅದರೊಡನೆ ಸುಭದ್ರೆಗೆ ಮಹಾದೇವೀ ಪಟ್ಟವನ್ನು ಕಟ್ಟುವರು. ಇದು ಅಷ್ಟು ಉಚಿತವಾಗಿ ಕಾಣುವುದಿಲ್ಲ. ಮೊದಲಿನಿಂದಲೂ ವಿಕ್ರಮಾರ್ಜುನನ ಪ್ರೀತಿಗೆ ಪಾತ್ರಳಾಗಿ ಸರ್ವದಾ ಅವನೊಡ ನಿದ್ದೂ, ವಸ್ತ್ರಾಪಹರಣ ಕೇಶಾಕರ್ಷಣಗಳಿಗೆ ಸಿಕ್ಕಿ, ಕಾಡು ಮೇಡುಗಳಲ್ಲಿ ಅಲೆದು, ಅಜ್ಞಾತ ವಾಸದಲ್ಲಿ ಪರರ ಸೇವೆಯಲ್ಲಿದ್ದು ಪಡಬಾರದ ಕಷ್ಟಪಟ್ಟು, ಮಹಾಭಾರತಕ್ಕೆ ಆದಿ ಶಕ್ತಿಯೂ, ಕುರು ಕುಲ ಜೀವಾಕರ್ಷಣ ಮಂತ್ರವೂ ಆಗಿದ್ದ ದ್ರೌಪದಿಯನ್ನು ಬಿಟ್ಟು, ಸುಖವಾಗಿ ಅರಮನೆಯ ಅಂತಃಪುರದಲ್ಲಿದ್ದ ಸುಭದ್ರೆಗೆ ಮಹಾದೇವಿಯ ಪಟ್ಟವನ್ನು ಕಟ್ಟಬಹುದೇ? ದ್ರೌಪದಿಯೇ ಇದನ್ನು ಕೇಳುತ್ತಿದ್ದರೆ ಒಪ್ಪುತ್ತಿದ್ದಳೇ? ಪಂಪನು ಮೊದಲು ಸ್ವಲ್ಪದೂರ ದ್ರೌಪದಿಯ ವಿಷಯವನ್ನು ಹೇಳಿ ಮುಂದೆ ಅವಳ ಹೆಸರನ್ನೇ ಎತ್ತದೆ ಸುಭದ್ರೆಗೆ ಪಟ್ಟಾಭಿಷೇಕ ಮಾಡಿಸುವನು. ಅರ್ಜುನನನ್ನು ಕಥಾ ನಾಯಕನನ್ನಾಗಿ ಮಾಡಿಕೊಂಡಾಗ ಕಥಾ ನಾಯಿಕೆಯ ವಿಷಯದಲ್ಲಿ ಅವನಿಗೆ ಸ್ವಲ್ಪ ತೊಂದರೆಯಾಗಿರಬೇಕು. ವೀರಾವೇಶವುಳ್ಳವಳೂ ಪಂಚ ಪತಿತ್ವವನ್ನುಳ್ಳವಳೂ, ಕೇಶಾಕರ್ಷಣಾದಿ ಅವಮಾನಗಳಿಗೆ ಸಿಕ್ಕಿದವಳೂ ಆದ ದ್ರೌಪದಿಯು ಅವನ ದೃಷ್ಟಿ ಯಿಂದ ಕಥಾ ನಾಯಿಕೆಯಾಗುವುದಕ್ಕೆ ಅರ್ಹಳಲ್ಲವೆಂದು ತೋರಿರಬಹುದು. ಆದುದ ರಿಂದ ಅವನು ದ್ರೌಪದಿಯನ್ನು ಕಥಾ ನಾಯಿಕೆಯನ್ನಾಗಿ ಮಾಡದೆ ಸುಭದ್ರೆಯನ್ನೇ ನಾಯಿಕೆಯನ್ನಾಗಿ ಮಾಡಿರುವನು. ಈ ವಿಷಯವನ್ನು ವಾಚಕರಿಗೆ ಸ್ಪಷ್ಟಪಡಿಸು ವುದಕ್ಕಾಗಿಯೇ ಪಂಪನು ದ್ರೌಪದಿಯ ವಿವಾಹವನ್ನು ಒಂದೆರಡು ಪದ್ಯಗಳಲ್ಲಿ

ಮುಗಿಸಿ ಸುಭದ್ರಾ ಪರಿಣಯವನ್ನು ಒಂದು ಆಶ್ವಾಸವನ್ನಾಗಿ ಮಾಡಿರುವನು. ಹೀಗೆ ಪಂಪನು ಸುಭದ್ರೆಗೆ ರಾಜ್ಞೀ ಪದವಿಯನ್ನು ಕೊಟ್ಟರೂ ಸಮಗೇನೋ ದ್ರೌಪದಿಯೇ ಆ ಸ್ಥಾನಕ್ಕೆ ಅರ್ಹಳೆನ್ನಿಸುತ್ತದೆ.

ಮತ್ತೊಂದು ವಿಷಯ: ದ್ರೌಪದಿಯ ಪಂಚ ಪತಿತ್ವವು ಲೌಕಿಕ ದೃಷ್ಟಿಯಿಂದ ಅಷ್ಟು ಸಮಂಜಸವಲ್ಲವೆಂದೋ ಏನೋ ಪಂಪನು ಅದನ್ನು ಮಾರ್ಪಡಿಸಿರುವನು. ಅವನ ಅಭಿಪ್ರಾಯದಂತೆ ದ್ರೌಪದಿಯನ್ನು ಮದುವೆಯಾಗುವವನು ಅರ್ಜುನ ನೊಬ್ಬನೆ; ಐವರಲ್ಲ. ವಿದ್ವಿಷ್ಟವಿದ್ರಾವಣನು ಕೈಹಿಡಿದ ಸ್ತ್ರೀಯ ಭೋಗದಲ್ಲಿ ಇತರರು ಭಾಗಿಗಳಾಗುವುದು ಹಾಸ್ಯಾಸ್ಪದವೆಂಬುದಾಗಿ ಅವನಿಗೆ ತೋರಿರಬೇಕು. ಆದುದರಿಂದ ಅದನ್ನು ತಪ್ಪಿಸುವುದಕ್ಕೆ ಯತ್ನಪಟ್ಟು ಹಾಗೆ ಮಾಡುವುದರಲ್ಲಿ ಅನೇಕ ಕಡೆ ತೊಡಕಿಗೆ ಸಿಕ್ಕಿ ಪೂರ್ವ ವಾಸನಾ ಬಲದಿಂದ ತನ್ನನ್ನೇ ತಾನು ಮರೆತಿರುವನು.

ಪಾಂಚಾಲಿಗೆ ಬಂದೊದಗುವ ಆಪತ್ಕಾಲಗಳಲ್ಲೆಲ್ಲ ಆಕೆಯನ್ನು ಕಾಪಾಡುವುದ ರಲ್ಲಿ ಆಕೆಯ ಪತಿಯಾದ ಅರ್ಜುನನಿಗಿಂತಲೂ ಭೀಮಸೇನನೇ ಹೆಚ್ಚು. ಕಪಟ ದ್ಯೂತ ದಲ್ಲಿ ಧರ್ಮರಾಯನು ಎಲ್ಲವನ್ನೂ ಸೋತ ಮೇಲೆ ದ್ರೌಪದಿಯ ವಿಡಂಬನವಾಗುವ ಕಾಲದಲ್ಲಿ ಆ ಅನ್ಯಾಯವನ್ನು ನೋಡಿದಾಗ ಪ್ರೇಕ್ಷಕರಿಗೂ ಕೂಡ ಸಹಿಸಲಸಾಧ್ಯ ವಾಗಿ ದುಶ್ಶಾಸನನನ್ನು ಸೀಳಿಬಿಡಬೇಕೆಂಬ ಆಕ್ರೋಶವು ಹುಟ್ಟುವುದು. ಆಗ ಪಾಂಡವರು ಅಣ್ಣನ ಸನ್ನಿಗೆ ಕಟ್ಟುಬಿದ್ದು ಸುಮ್ಮನೆ ಕುಳಿತುಕೊಳ್ಳುವರು. ಆ ಸಂದರ್ಭದಲ್ಲಿ ದ್ರೌಪದಿಯು ತನಗಾದ ಅವಮಾನದ ಸಿಗ್ಗಿನಿಂದ—

ಮುಡಿಯಂ ಪಿಡಿದೆೞೆದವನಂ ।
ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ॥
ಮುಡಿಯಿಸುಗಾ ಮುಡಿಯಂ ದಲ್ ।
ಮುಡಿಯೆಂ ಗಳಮಾಗಳಂತೆಯೆನ್ನಯ ಮುಡಿಯಂ ॥

ಎಂದು ಹೇಳಿದುದನ್ನು ಭೀಮಸೇನನು ಕೇಳಿ ಕೋಪೋದ್ರೇಕವನ್ನು ತಡೆಯಲಾರದೆ ನವ ಮೇಘ ನಾದದಿಂದ ಹೀಗೆಂದು ಪ್ರತಿಜ್ಞೆಮಾಡುವನು :—

ಮುಳಿಸಿಂದಂ ನುಡಿದೊಂದು ನಿನ್ನ ನುಡಿ ಸಲ್ಗಾರಾಗದೆಂಬರ್ ಮಹಾ ।
ಪ್ರಳಯೋಲ್ಕೋಪಮ ಮದ್ಗದಾ ಹತಿಯಿನತ್ಯುಗ್ರಾಜಿಯೊಳ್ ಮುನ್ನಮಾ ॥
ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋಳ್ದಿಕ್ಕಿ ಬಂಬಲ್ಗರು ।
ಳ್ಗಳಿಸಾನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜ ಪತ್ರೇಕ್ಷಣೇ ॥
ಕುಡಿವೆಂ ದುಶ್ಶಾಸನೋರಸ್ಥಳಮನಗಲೆ ಪೋೞ್ದಾರ್ದು ಕೆನ್ನೆತ್ತರಂ ಪೊ ।
ಕ್ಕುಡಿವೆಂ ಪಿಂಗಾಕ್ಷನೂರು ದ್ವಯಮನುರು ಗದಾ ಘಾತದಿಂ ನುಚ್ಚು ನೂಱಾ ॥
ಗೊಡೆವೆಂ ತದ್ರತ್ನ ರಶ್ಮಿ ಪ್ರಕಟ ಮಕುಟಮಂ ನಂಬು ನಂಬೆನ್ನ ಕಣ್ಣಿಂ ।
ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜ ವಕ್ತ್ರೇ ॥

ಎಂದು ಗರ್ಜಿಸಿ ದಿಕ್ಪಾಲಕರ ಸಾಕ್ಷಿಯಾಗಿ ಪ್ರತಿಜ್ಞೆ ಮಾಡಿ 'ಪ್ರಳಯ ಕಾಳ ಜಳಧರ ನಿನಾದದಿಂ'ದ ಮೊಳಗುವನು. ಈ ಕೋಪಾಟೋಪದ ಮಧ್ಯದಲ್ಲಿ, ಪಂಪನ ಪ್ರಕಾರ,

ಪತಿಯಾದ ಅರ್ಜುನನು ಒಂದು ಮಾತನ್ನೂ ಆಡದೆ ಕುಳಿತುಕೊಂಡಿರುವನು. ಇದು ಸ್ವಲ್ಪ ಆಭಾಸವಾಗಿ ಕಾಣುವುದಿಲ್ಲವೇ? ಈ ಸಂದರ್ಭದಲ್ಲಿ ಭೀಮಸೇನನು ಹೇಳುವ ಮಾತನ್ನು ಅರ್ಜುನನೇ ಹೇಳಿದ್ದರೆ ಇನ್ನೂ ಸಮಂಜಸವಾಗುತ್ತಿದ್ದಿತಲ್ಲವೇ? ಆದರೆ ಇದು ಹೇಗೆ ಸಾಧ್ಯ? ಈ ಸಮಯದಲ್ಲಿ ಪಂಪನು ದ್ರೌಪದಿಯ ಪತಿಯು ಅರ್ಜುನನೊಬ್ಬನೇ ಎಂಬುದನ್ನು ಮರೆತು ಮೂಲ ಭಾರತದಲ್ಲಿರುವುದನ್ನು ಇದ್ದುದಿದ್ದ ಹಾಗೆಯೇ ಹೇಳಿಬಿಟ್ಟಿರುವನು.

ಮುಂದೆ ಇನ್ನೆರಡು ಸ್ಥಳಗಳಲ್ಲಿ ಪಂಪನು ಹೀಗೆಯೇ ಮುಗ್ಗರಿಸಿರುವನು. ಪಾಂಡವರು ಅಜ್ಞಾತ ವಾಸದಲ್ಲಿದ್ದಾಗ ಕೀಚಕನು ದ್ರೌಪದಿಯಲ್ಲಿ ಅತ್ಯಾಚಾರವನ್ನು ನಡೆಯಿಸುವುದಕ್ಕೆ ಪ್ರಯತ್ನಪಡಲು ದ್ರೌಪದಿಯು ರಾತ್ರಿ ವೇಳೆಯಲ್ಲಿ, ಅದೂ ಕಟ್ಟೇಕಾಂತದಲ್ಲಿ, ದುರುಳನ ದಮನಕ್ಕೆ ಮೊರೆಯಿಟ್ಟುದು ಭೀಮನಲ್ಲಿ, ಅರ್ಜುನನಲ್ಲಿಲ್ಲ. ಇದು ಮೊದಲಿಗಿಂತಲೂ ಹೆಚ್ಚಾಗಿ ಪಂಪನ ವಿಸ್ಮರಣೆಯನ್ನು ವ್ಯಕ್ತಗೊಳಿಸುವುದು. ಅರ್ಜುನನು ಬೃಹನ್ನಳೆಯಾಗಿದ್ದು ಈ ಕೆಲಸವು ಅವನ ಕೈಯಲ್ಲಿ ಸಾಧ್ಯವಾಗಿರಲಿಲ್ಲವಾದುದರಿಂದ ದ್ರೌಪದಿಯು ಹೀಗೆ ಮಾಡಿದಳೆಂದು ಹೇಳಲಾಗುವುದಿಲ್ಲ. ಇದೇ ರೂಪದಲ್ಲಿದ್ದಾಗಲೇ ಅರ್ಜುನನು ಉತ್ತರ ಗೋಗ್ರಹಣ ಕಾಲದಲ್ಲಿ ಯುದ್ಧ ಮಾಡಿ ಎಲ್ಲರನ್ನೂ ಸೋಲಿಸಲಿಲ್ಲವೇ? ಅಥವಾ, ತನ್ನ ಗುಟ್ಟು ರಟ್ಟಾಗುವುದೆಂದಿದ್ದರೂ ಅದಕ್ಕೂ ಅರ್ಜುನನೇ ಈ ಕೆಲಸವನ್ನು ಮಾಡಿದ್ದರೆ ಹೆಚ್ಚು ಸಮಂಜಸವಾಗುತ್ತಿದ್ದಿತು.

ಕೊನೆಗೆ, ಭೀಮಸೇನನು ದುಶ್ಶಾಸನನನ್ನು ಸಂಹರಿಸಿ ತನ್ನ ಪ್ರತಿಜ್ಞೆಯನ್ನು ಪೂರೈಸಿದ ಮೇಲೆ "ದ್ರುಪದಾತ್ಮಜೆಗೆ ಬೞಿಯನಟ್ಟಿ ಬಯಸಿತೆ ಬರ್ಪಂತೆ ಬಂದ **ತನ್ನ ತಳೋದರಿಯಂ** ಕೆಲದೊಳ್ ಕುಳ್ಳಿರಿಸಿ ಪೊಸದು ಜಡೆಗೊಂಡಿರ್ದ ಕೇಶಮಂ ಪಸರಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ದುಶ್ಶಾಸನನ ಕರುಳ್ಗಳೆ ಪೊಸ ಬಾಸಿಗಮಾಗೆ ಕೃಷ್ಣೆಯಂ ಮುಡಿಯಿಸಿ ಅವಳ ಮೊಗಮಂ ನೋಡಿ ಮುಗುಳ್ನಗೆ ನಕ್ಕು" ಅವಳಲ್ಲಿ ಪ್ರಣಯ ಮೋಹವನ್ನು ತೋರಿ ಮಾತನಾಡುವನು. ದ್ರೌಪದಿಯಾದರೋ ಭೀಮನಲ್ಲಿ ಅನುರಾಗವನ್ನು ವ್ಯಕ್ತಗೊಳಿಸುವಳು.

ಈ ಸಂದರ್ಭಗಳಲ್ಲೆಲ್ಲ ಅರ್ಜುನನು ಪ್ರೇಕ್ಷಕನಾಗಿರುವನು. ಸಾಕ್ಷಾತ್ ಪತಿಯು ಇದಿರಿನಲ್ಲಿರುವಾಗ, ಅದರಲ್ಲಿಯೂ ಅವನು ಮೂರು ಲೋಕದ ಗಂಡನಾಗಿರುವಾಗ, ದ್ರೌಪದಿಯನ್ನು ರಕ್ಷಿಸಲು ಭೀಮಸೇನನು ಇಷ್ಟು ಪ್ರಯತ್ನಪಟ್ಟುದು ವಿಸ್ಮಯ ಜನಕವಲ್ಲವೇ? ಈ ಸಮಯಗಳಲ್ಲೆಲ್ಲ ಭೀಮನು ದ್ರೌಪದಿಯ ಭಾವನೆಂಬುದನ್ನು ಪಂಪನು ಮರೆಯುವನು; ಪತಿಯೆಂಬ ಭಾವನೇ ಮನಸ್ಸಿನಲ್ಲುಂಟಾಗಿ ಇಂತಹ ತೊಡಕಿಗೆ ಸಿಕ್ಕುಬಿದ್ದಿರುವನು. ಇಲ್ಲವಾದರೆ, ಅವನು ಬೇರೆ ಸಂವಿಧಾನಗಳಿಂದ ಇದನ್ನು ತಪ್ಪಿಸಿಕೊಳ್ಳಬಹುದಾಗಿದ್ದಿತು.

ಇನ್ನು ಕೆಲವೆಡೆಗಳಲ್ಲಿ ಪಂಪನ ಬದಲಾವಣೆಗಳು ಕಥಾ ಸಂವಿಧಾನಕ್ಕೆ ಬಹಳ ಪೋಷವನ್ನು ತರುವುವು: ವ್ಯಾಸ ಭಾರತದ ದ್ರೌಪದೀ ವಸ್ತ್ರಾಪಹರಣ ಕಥೆಯು

ಲೌಕಿಕ ದೃಷ್ಟಿಯಿಂದ ಅನುಚಿತವಾದುದೆಂದು ಭಾವಿಸಿ ಪಂಪನು ಅದನ್ನು ಬಿಟ್ಟು ಕೇಶಾಕರ್ಷಣದ ವಿಚಾರವನ್ನು ಮಾತ್ರ ಹೇಳಿ ಕೊನೆಯಲ್ಲಿ ದುಶ್ಶಾಸನ ವಧಾನಂತರ—

ಇದಱೊಳ್ ಶ್ವೇತಾತಪತ್ರ ಸ್ಥಗಿತ ದಶ ದಿಶಾ ಮಂಡಲಂ ರಾಜ ಚಕ್ರಂ ।
ಪುದಿದಿರ್ಪ್ಪಿಕ್ಕಡಿತ್ತಡಂಗಿತ್ತಿದಱೊಳೆ ಕುರು ರಾಜಾನ್ವಯಂ ಮತ್ತತಾಪ ||
ಕ್ಕಿದಱಿಂದಂ ನೋಡಗುರ್ವಿದುದಿದುವೆ ಮಹಾ ಭಾರತಕ್ಕಾದಿಯಾಯ್ತು ।
ಬ್ಜದಳಾಕ್ಷೀ ಪೇೞಿ ಸಾಮಾನ್ಯಮೆ ಬಗೆಯೆ ಭವತ್ಕೇಶ ಪಾಶ ಪ್ರಪಂಚಂ ||

ಎಂದು ಹೇಳಿ ವೇಣೀ ಸಂಹಾರವನ್ನು ಮುಗಿಸುವುದು ಬಹಳ ಸ್ವಾರಸ್ಯವಾಗಿದೆ.

ಹಾಗೆಯೇ, ದ್ರೌಪದಿಯು ದುಶ್ಶಾಸನನಿಂದ ಸಭೆಗೆ ಎಳೆತರಲ್ಪಟ್ಟಾಗ ಕರ್ಣನು ನೋಡಿ ನಕ್ಕನೆಂದೂ ಸಲ್ಲದ ಮಾತುಗಳನ್ನಾಡಿದನೆಂದೂ ವ್ಯಾಸ ಭಾರತದಲ್ಲಿರುವುದನ್ನು ಬಿಟ್ಟಿರುವುದೂ, ಕರ್ಣನನ್ನು ರಾಜ್ಯಲಕ್ಷ್ಮಿಯು ಬಿಡಲಾರಳೆನ್ನುವುದೂ "ಕರ್ಣನ ಪಡೆಮಾತಿನೊಳ್ ಪುದಿದು ಕರ್ಣ ರಸಾಯನಮಲ್ತೆ ಭಾರತಂ" ಎಂದು ಹೇಳುವುದೂ ಕರ್ಣನ ಪಾತ್ರಕ್ಕೆ ಬಹಳ ಗೌರವವನ್ನೂ ಮಹಿಮೆಯನ್ನೂ ಕೊಡುವುದಲ್ಲದೆ, ಒಟ್ಟಿನಲ್ಲಿ ಬಹಳ ಗಂಭೀರವಾಗಿಯೂ ಇರುವುದು.

ಇವಲ್ಲದೆ, ಪಂಪ ಭಾರತದಲ್ಲಿ ಇನ್ನೂ ಕೆಲವು ವ್ಯತ್ಯಾಸಗಳು ಕಾಣುವುವು: ಯುಧಿಷ್ಠಿರನ ಆಜ್ಞಾನುಸಾರವಾಗಿ ಯಕ್ಷನ ವಿಷ ಸರೋವರಕ್ಕೆ ನೀರು ತರಲು ಹೋದ ಭೀಮಾರ್ಜುನ ನಕುಲ ಸಹದೇವರು ಯಕ್ಷನ ಪ್ರಶ್ನೆಗೆ ಉತ್ತರಕೊಡದೆ ನೀರು ಕುಡಿದು ಮೈಮರೆತು ಬೀಳಲು, ದುರ್ಯೋಧನನ ಪುರೋಹಿತನಾದ ಕನಕ ಸ್ವಾಮಿಯು ಪಾಂಡವರನ್ನು ಸಂಹರಿಸಲು ಕಳುಹಿಸಿದ ಕೀರ್ತಿಗೆಯು ಬಂದು ಕೊಳದ ತಡಿಯಲ್ಲಿ ಬಿದ್ದಿದ್ದ ನಾಲ್ವರನ್ನೂ ತಿಂದು ಮುಗಿಸುವೆನೆಂದೆಣಿಸಿ ಕೈಹಾಕುವಾಗ, ಅವರನ್ನು ಆ ಅವಸ್ಥೆಗೆ ತಂದ ದೈವನು ಪ್ರತ್ಯಕ್ಷವಾಗಿ ಆ ಉಗ್ರದೇವತೆಯನ್ನು, 'ನೀನು ದೂರಹೋಗು' ಎನ್ನಲು, 'ನಾನು ನನ್ನ ಮಾತಿನಂತೆ ನಡೆದುಕೊಳ್ಳಬೇಕು; ಯಾರನ್ನು ಭಕ್ಷಿಸಲಿ?' ಎಂದು ಕೇಳಲು, ಆ ಯಕ್ಷನು, 'ಎಲೈ ಪಿಶಾಚಿಯೇ! ನಿನ್ನನ್ನು ಯಾವನು ಹುಟ್ಟಿಸಿದನೋ ಅವನನ್ನೇ ತಿನ್ನು' ಎಂದು ಹೇಳಲು, ಆ ದೇವತೆಯು ಹಾಗೆಯೇ ಹಿಂದಿರುಗಿ, 'ಕನಕನ ಬೇಳ್ವಿಯು ಕನಕನಿಗೇ ತಟ್ಟಿತು' ಎಂದು ಜನರಾಡಿಕೊಳ್ಳುವಂತೆ ಅವನನ್ನೇ ತಿಂದುಬಿಟ್ಟಿತು. ಈ ಕಥೆಯು ಪಂಪನ ಭಾರತದಲ್ಲಿದೆ, ಮೂಲ ಭಾರತದಲ್ಲಿಲ್ಲ. ಅರ್ಜುನನಿಗೆ ಕಿರೀಟಿಯೆಂಬ ಹೆಸರು ಬರಲು ಪಂಪನು ಕೊಟ್ಟಿರುವ ಕಾರಣವು ವ್ಯಾಸ ಭಾರತದಲ್ಲಿಲ್ಲ. ಕೃಷ್ಣಪರಮಾತ್ಮನು ಸಂಧಾನಕ್ಕೆ ಬಂದ ಕಾಲದಲ್ಲಿ ದುರ್ಯೋಧನನು ವಿದುರನನ್ನು ಹೀಯಾಳಿಸಿ ಮಾತನಾಡಿದುದಕ್ಕಾಗಿ ವಿದುರನು—

ಕಡು ಮುಳಿದು ನಿನ್ನ ತೊಡೆಗಳ ।
ನುಡಿವೆಡೆಯೊಳ್ ಭೀಮಸೇನನಾ ಪದದೊಳ್ ||
ಪಿಡಿಯಲ್ಕೆಂದಿರ್ದೆನಿದಂ ।
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ ||



ಎಂದು ಹೇಳುವುದು ಪಂಪನದೇ. ಕರ್ಣನು ಕುಂತಿಯ ಮಗನೆಂದು ದುರ್ಯೋಧನನು ತಿಳಿದುಕೊಂಡುದು ಸತ್ಯಂತಪರೆಂಬ ದಿವ್ಯ ಜ್ಞಾನಿಗಳಿಂದ ಎಂದು ಕೃಷ್ಣನು ಹೇಳುವ ಮಾತುಗಳು ಪಂಪನದೇ ವಿನಾ ಮೂಲಭಾರತದಲ್ಲಿಲ್ಲ. ಈ ಬದಲಾವಣೆಗಳಿಗೆಲ್ಲ ಸರಿಯಾದ ಕಾರಣವನ್ನು ತಿಳಿಸಲು ಸಾಧ್ಯವಿಲ್ಲ. ಇವುಗಳನ್ನು ನೋಡಿದರೆ ಪಂಪನೇ ಮೂಲಭಾರತದಿಂದ ಈ ಬದಲಾವಣೆಗಳನ್ನು ಮಾಡಿಕೊಂಡನೊ ಅಥವಾ, ಹೀಗೆ ಕಥಾ ಶರೀರದಲ್ಲಿ ಬದಲಾವಣೆಯನ್ನು ಹೊಂದಿದ್ದ, ಬಹುಶಃ ಜೈನ ಸಂಬಂಧವಾದ ಇನ್ನೊಂದು ಭಾರತವೇ ಪಂಪನ ಕಾಲದಲ್ಲಿದ್ದಿತೋ ಎಂಬ ಸಂಶಯವು ಹುಟ್ಟುವುದು. ಆದರೆ ಸರಿಯಾದ ಆಧಾರಗಳು ಸಿಕ್ಕುವವರೆಗೂ ಹೀಗೆ ನಿರ್ಧರಿಸಲೂ ಸಾಧ್ಯವಿಲ್ಲ.

ಪಂಪನು ಮೇಲೆ ಹೇಳಿದಂತೆ ಮೂಲಭಾರತದ ಕಥೆಯಲ್ಲಿ ಹಲವು ವ್ಯತ್ಯಾಸಗಳನ್ನು ಮಾಡಿರುವುದಲ್ಲದೆ ಕನ್ನಡದ ಸಂಪತ್ತೂ ಸ್ವಾರಸ್ಯವೂ ಸ್ಫುಟವಾಗುವ ಹಾಗೆ ಸಂಸ್ಕೃತದಲ್ಲಿ ಶ್ರೇಷ್ಠ ಕವಿಗಳಾದ ಶ್ರೀಹರ್ಷ, ಕಾಳಿದಾಸ, ಭಾರವಿ ಮುಂತಾದವರ ಕೃತಿಗಳಿಂದ ಕೆಲವು ಭಾವಗಳನ್ನು ತೆಗೆದುಕೊಂಡು ತನ್ನ ಕಾವ್ಯದಲ್ಲಿ ಪ್ರಯೋಗಿಸಿರುವನು. ನಾಲ್ಕನೆಯ ಆಶ್ವಾಸದಲ್ಲಿ ಬರುವ ಮಲಯ ಪರ್ವತದ ವರ್ಣನೆಯು ನಾಗಾನಂದದ ಮಲಯ ಪರ್ವತದ ವರ್ಣನೆಯ ಅನುವಾದವಿರಬೇಕು. ಪಂಚಮಾಶ್ವಾಸದಲ್ಲಿ ವಿರಹ ಜ್ವಾಲೆಯಿಂದ ತಪ್ತಳಾದ ಸುಭದ್ರೆಯನ್ನು ಅರ್ಜುನನು ಮರೆಯಾಗಿ ನಿಂತು ನೋಡುತ್ತ ಅವಳ ಸರಸ ಸಲ್ಲಾಪಗಳನ್ನು ಕೇಳುವ ಸನ್ನಿವೇಶವನ್ನು ಕಾಳಿದಾಸನ ಶಾಕುಂತಳದಿಂದ ತೆಗೆದುಕೊಂಡಿರಬೇಕು. ಸಪ್ತಮಾಶ್ವಾಸದ ಇಂದ್ರಕೀಲ ಪ್ರಕರಣವು ಭಾರವಿಯ ಕಿರಾತಾರ್ಜುನೀಯದ ಸಾರಾಂಶವೆಂದು ಹೇಳಬಹುದು. ಹೀಗೆ ಪಂಪನು ಸಮಯೋಚಿತವಾಗಿ ಸಂಸ್ಕೃತದ ಉದ್ದಾಮ ಕವಿಗಳ ಉದಾತ್ತವಾದ ಪ್ರತಿಭೆಯನ್ನು ತನ್ನ ಕಾವ್ಯದಲ್ಲಿ ಪ್ರತಿಬಿಂಬಿಸಿ ಕನ್ನಡಿಗರ ಮುಂದೆ ಇಟ್ಟಿರುವನು ; ಭಾವವನ್ನು ಇತರರಿಂದ ತೆಗೆದುಕೊಂಡಿದ್ದರೂ ನಿರೂಪಣ ರೀತಿಯನ್ನು ತನ್ನದನ್ನಾಗಿಯೇ ಮಾಡಿಕೊಂಡಿರುವನು.

**ಪಂಪ ಭಾರತದ ಕಥಾ ಸರಣಿ.**—ಪಂಪನಿಗೆ ಸಮಗ್ರ ಭಾರತವನ್ನು ಬರೆಯುವ ಭರದಲ್ಲಿ ಹೆಚ್ಚು ವಿವರಗಳನ್ನು ತುಂಬುವುದಕ್ಕೆ ಅವಕಾಶವಿಲ್ಲ. "ಪೆಱವುಮುಪಾಖ್ಯಾನ ಕಥೆಗಳೊಳವೊಂದುಂ ಕುಂದಲೀಯದೆ ಪೇೞ್ದಿಂ" ಎಂದು ಹೇಳುವನಾದರೂ ಎಷ್ಟೋ ವಿಷಯಗಳನ್ನು ಬಹು ಕೌಶಲದಿಂದ ಕ್ರೋಡೀಕರಿಸಿ ಒಂದೆರಡು ಮಾತುಗಳಲ್ಲಿ ಕಾವ್ಯಕ್ಕೆ ಸರಿಹೋಗುವಂತೆಯೂ, ಆಯಾ ಸನ್ನಿವೇಶಗಳ ಮಹತ್ತ್ವವೂ ಪಾತ್ರಗಳ ವ್ಯಕ್ತಿ ಸ್ವರೂಪವೂ ಚೆನ್ನಾಗಿ ಸ್ಫುರಿಸುವಂತೆಯೂ, ಮೂಲ ಗ್ರಂಥದ ಆಶಯವು ಕೆಡದಂತೆಯೂ, ಮೂಲರೇಖೆಗಳನ್ನು ಮಾತ್ರ ಎಳೆದಿರುವನು. ಮೊದಲು ಪಾಂಡವ ಕೌರವ ಜನ್ಮದಿಂದ ಹೊರಟು ಅವರ ಬಾಲ ಕೇಳಿ, ಭೀಮ ದುರ್ಯೋಧನರ ದ್ವೇಷಕ್ಕೆ ಕಾರಣ, ಲಾಕ್ಷಾಗೃಹ ದಹನ, ಹಿಡಿಂಬಾಸುರ ವಧೆ, ದ್ರೌಪದೀ ಪರಿಣಯ, ಇಂದ್ರಪ್ರಸ್ಥ ಗಮನ—ಇವುಗಳ ವರೆಗೆ ಕಥಾ ಸರಣಿಯಲ್ಲಿ ಎಲ್ಲಿಯೂ ಎಡರು

ಬಾರದಂತೆ ಸರಿಪಡಿಸಿಕೊಂಡು ನಿರೂಪಿಸುತ್ತ ಹೋಗಿರುವನು. ಇಲ್ಲಿಂದ ಮುಂದೆ ಮೂಲ ಭಾರತದ ಪ್ರಕಾರ ನಾರದಾದೇಶದಂತೆ ಅರ್ಜುನನನ್ನು ಭೂ ಪ್ರದಕ್ಷಿಣೆಗೆ ಹೊರಡಿಸಬೇಕು. ಹಾಗೆ ಇಲ್ಲಿ ಮಾಡಲು ಸಾಧ್ಯವಿಲ್ಲ: ದ್ರೌಪದಿಯ ಪತಿಯು ಅರ್ಜುನನೊಬ್ಬನೇ ಎಂಬ ವಿಷಯದಲ್ಲಿ ಪಂಪನು ಬಹಳ ಜಾಗರೂಕನಾಗಿರುವನು. ಅಲ್ಲದೆ, "ವರ್ಣಕಂ ಕತೆಯೊಳೊಡಂಬಡಂ ಪಡೆಯೆ" ಹೇಳಬೇಕು ತಾನೆ! ಇದೂ ಜ್ಞಾಪಕಕ್ಕೆ ಬರುವುದು. ಆದುದರಿಂದ ಅರ್ಜುನನ ಪ್ರಯಾಣಕ್ಕೆ ಪಂಪನು ಬೇರೆ ಕಾರಣವನ್ನು ಕಲ್ಪಿಸಿರುವನು: ಅದು ದಿಗ್ವಿಜಯಾರ್ಥವಾಗಿ. ಅರ್ಜುನನು ಹೊರಟು ಸಮಸ್ತ ರಾಷ್ಟ್ರಗಳನ್ನೂ 'ಆತ್ಮೀಯ ಶಾಸನಾಯತ್ತಂ' ಮಾಡುತ್ತ ಬರುವನು. ಇಲ್ಲಿ ಪಂಪನಿಗೆ ಅನೇಕ ದೇಶಗಳನ್ನು ವರ್ಣಿಸುವುದಕ್ಕೆ ಅವಕಾಶ ದೊರೆಯುವುದು. ಅರ್ಜುನನು ಮುಂದೆ ಹೊರಟು ಗೋಕರ್ಣ, ಬನವಾಸಿ ಮೊದಲಾದುವುಗಳನ್ನು ದಾಟಿ ದ್ವಾರಕಾಪುರವನ್ನು ಸೇರಿ ಅಲ್ಲಿ 'ತನ್ನ ಪಲವು ಜನ್ಮಗಳ ಕೆಳೆಯ'ನಾದ ಕೃಷ್ಣಪರಮಾತ್ಮನು ತನ್ನನ್ನಿದಿರ್ಗೊಳ್ಳಲು, ಪುರ ಪ್ರವೇಶ ಮಾಡುವನು; ಪುರ ಸ್ತ್ರೀಯರು ಫಲ್ಗುಣನನ್ನು 'ಗುಣಾರ್ಣವನೀತನೇ' ಎಂದು ಬೆರಗುಗೊಂಡು ನೋಡುವರು. ಇಲ್ಲಿಂದ ಮುಂದಕ್ಕೆ ಸುಭದ್ರಾರ್ಜುನರ ಅನುರಾಗ, ಸೂರ್ಯಾಸ್ತಮಯ, ರಾತ್ರಿ, ಚಂದ್ರೋದಯ, ಅರ್ಜುನ ಚಂದ್ರಿಕಾ ವಿಹಾರ, ವೇಶ್ಯಾ ವಾಟಿಕೆ, ಮಧು ಪಾನ, ಸುಭದ್ರೆಯ ವಿರಹ, ಸುಭದ್ರಾ ಪರಿಣಯ—ಇವುಗಳೆಲ್ಲವೂ ವರ್ಣಕ ಕಾವ್ಯದ ಲಕ್ಷಣಗಳನ್ನು ಪೂರ್ತಿಗೊಳಿಸುವುದಕ್ಕೆ ಬಹಳ ಅನುಕೂಲಗಳಾಗುವುವು. ಇವುಗಳ ವರ್ಣನೆಯಿಂದ ಆಶ್ವಾಸವು ತುಂಬಿ ತುಳುಕಾಡುವುದು. ಇವನ್ನು ಓದುವಾಗ ಭಾರತವನ್ನು ಓದುವ ಹಾಗೆಯೇ ತೋರುವುದಿಲ್ಲ: ಚಿತ್ರದ ಮೇಲೆ ಚಿತ್ರ; ಎಲ್ಲಿ ನೋಡಿದರೂ ಕಣ್ಣಿಗೂ ಮನಸ್ಸಿಗೂ ಆನಂದವುಂಟಾಗಿ ನಮ್ಮನ್ನೇ ನಾವು ಮರೆಯುವೆವು. ಮುಂದೆ, ಅರ್ಜುನನೂ ಸುಭದ್ರೆಯೂ ಇಂದ್ರಪ್ರಸ್ಥವನ್ನು ಪ್ರವೇಶಿಸುವುದು, ಅಭಿಮನ್ಯುವಿನ ಜನನ, ಮೃಗಯಾ ವಿಹಾರ—ಇವೇ ಮೊದಲಾದುವು ಬಹು ರಸ ಭರಿತವಾಗಿಯೂ ಮಿತಿಯರಿದೂ ವರ್ಣಿತವಾಗಿವೆ.

ಮುಂದೆ, ಅರ್ಜುನನ ಅನ್ಯಾದೃಶವಾದ ಪೌರುಷವನ್ನು ವ್ಯಕ್ತಗೊಳಿಸುವ ಖಾಂಡವ ದಹನದ ದೃಶ್ಯವು ಕಣ್ಣಿಗೆ ಬೀಳುವುದು. ಇಲ್ಲಿ ಕವಿಯು ಪ್ರಸ್ತುತ ವಿಷಯವನ್ನು ಮನದಟ್ಟಾಗುವಂತೆ ವರ್ಣಿಸುವ ವೈಚಿತ್ರ್ಯವೂ, ಪ್ರತ್ಯಕ್ಷಾನುಭವದಿಂದಲೂ ಗ್ರಹಿಸಲಸಾಧ್ಯವಾದುದನ್ನು ಶಬ್ದಗಳ ಸಂವಿಧಾನದಿಂದ ಚಿತ್ರಿಸುವ ನೈಪುಣ್ಯವೂ ಬಹು ಶ್ಲಾಘನೀಯವಾಗಿವೆ.

ಇನ್ನು ಮೇಲೆ ಕಥೆಯು ಹೆಚ್ಚು ವ್ಯತ್ಯಾಸವಾಗದೆ ಯಥಾ ಕ್ರಮವಾಗಿ ರಾಜಸೂಯಾರಂಭದಿಂದ ಪಾಂಡವರ ಅರಣ್ಯ ಪ್ರವೇಶದ ವರೆಗೆ ಬಹು ಜಾಗ್ರತೆಯಿಂದ ಜಾರುವುದು. ಮೂಲ ಭಾರತದ ಪ್ರಕಾರ ಧರ್ಮನಂದನನು ಅರಣ್ಯ ಪ್ರವೇಶಮಾಡಿದೊಡನೆಯೇ ಋಷಿಗಳು ಬಂದು ಧರ್ಮೋಪದೇಶ ಮಾಡಬೇಕು. ಪಂಪನು ಈ ರಗಳೆಯನ್ನು ಬಿಟ್ಟಿರುವನು. ಹೇಗೋ ಹನ್ನೆರಡು ವರ್ಷಗಳು ಕಳೆಯಬೇಕು.

ಅದಕ್ಕಾಗಿ ಕೆಲವು ಆಖ್ಯಾನಗಳನ್ನು ಮಾತ್ರ ನಿರೂಪಿಸುವನು. ಇಷ್ಟರಲ್ಲಿ ಅರ್ಜುನನು ಇಂದ್ರಕೀಲದಲ್ಲಿ ಈಶ್ವರನಿಂದ ಪಾಶುಪತಾಸ್ತ್ರವನ್ನು ಸಂಪಾದಿಸಿ ಕೊಂಡು ಬರುವನು. ಮುಂದೆ ಅಜ್ಞಾತವಾಸ, ಗೋಗ್ರಹಣ, ಕೃಷ್ಣ ದೌತ್ಯ, ಯುದ್ಧ ನಿರ್ಣಯ ಮೊದಲಾದುವುಗಳೆಲ್ಲ ಬಹಳ ಸಂಕ್ಷೇಪವಾಗಿಯೂ ಲಲಿತ ವಾಗಿಯೂ ನಿರೂಪಿತವಾಗಿವೆ.

ಇವೆಲ್ಲವೂ ಹತ್ತು ಆಶ್ವಾಸಗಳಲ್ಲಿ ಮುಗಿಯುವುವು. ಪಂಪನು ಮುಂದಿನ ನಾಲ್ಕು ಆಶ್ವಾಸಗಳನ್ನು ಪೂರ್ಣವಾಗಿ ಯುದ್ಧಕ್ಕಾಗಿಯೇ ವಿನಿಯೋಗಿಸಿಕೊಂಡಿರು ವನು. ಪಂಪನು ಮನಸ್ಸು ಮಾಡಿದ್ದರೆ ಇದನ್ನು ಇನ್ನೂ ಕಡಿಮೆ ಮಾಡಬಹುದಾ ಗಿದ್ದಿತು. ಆದರೆ ಸಾಹಸಾಭರಣನ ಯುದ್ಧಕೌಶಲವನ್ನು ವಿಸ್ತಾರವಾಗಿ ವರ್ಣಿಸ ಬೇಕೆಂದೋ ಅಥವಾ, ಸಮಸ್ತ ಭಾರತವನ್ನೂ ತಪ್ಪದೆ ಹೇಳಬೇಕೆಂದೋ ಹೀಗೆ ಮಾಡಿರುವನು. ಕೊನೆಗೆ ಪಾಂಡವರಿಗೆ ಜಯವಾಗಿ ವಿಕ್ರಮಾರ್ಜುನನಿಗೆ ಪಟ್ಟಾಭಿ ಷೇಕವಾಗುವುದು.

**ಪಂಪನ ಶೈಲಿ.**—ಒಬ್ಬ ಕವಿಯ ಮಹತ್ತ್ವವನ್ನು ಅವನು ಬರೆಯುವ ಗ್ರಂಥದ ಶೈಲಿಯಿಂದ ಕಂಡುಹಿಡಿಯಬಹುದು. ಅವನ ಆವೇಶ, ಅವನ ಮನೋಭಾವ, ಅವನ ಜ್ಞಾನ, ಅವನ ವ್ಯಕ್ತಿತ್ವ—ಪ್ರತಿಯೊಂದೂ ಶೈಲಿಯಲ್ಲಿ ಕಾಣುವುದು. ಕವಿಯು ಸಾಮಾನ್ಯನಾದ ಹುಲುಗವಿಯಾದರೆ ಹಿಂದಿನ ಕಾವ್ಯಗಳನ್ನೇ ಮಾದರಿಯನ್ನಾಗಿಟ್ಟು ಕೊಂಡು ಅವುಗಳ ಸಾರವನ್ನು ಗ್ರಹಿಸದೆ ನಿರ್ಜೀವವಾದ ಕಟ್ಟಡವನ್ನು ತೆಗೆದು ಕೊಂಡು ಶಬ್ದಗಳ ಜೋಡಣೆಯಿಂದ ಒಂದು ಪಡಿಯಚ್ಚನ್ನು ನಿರ್ಮಿಸುವನು. ಇದರಲ್ಲಿ ಸತ್ವವಿರುವುದಿಲ್ಲ, ಜೀವವಿರುವುದಿಲ್ಲ, ಮನುಷ್ಯನ ಭಾವ ನಾಡಿಗಳನ್ನು ಮಿಾಟುವ ಆವೇಶವಿರುವುದಿಲ್ಲ. ಕವಿಯು ಅರ್ಥವಿಲ್ಲದ ಕವಿ ಸಮಯಗಳನ್ನು ಒಂದರ ಮೇಲೊಂದನ್ನು ಮೂಟೆ ಮೂಟೆಯಾಗಿ ತುಂಬಿ ಜುಗುಪ್ಸೆಯನ್ನುಂಟುಮಾಡುವನು. ಹಾಗಲ್ಲದೆ, ಕವಿಯು ಪ್ರಜ್ಞಾಶಾಲಿಯೂ ಕಲ್ಪನಾ ಚತುರನೂ ಆದ ಪಕ್ಷದಲ್ಲಿ ಕಾವ್ಯ ದಲ್ಲಿ ಒಂದು ವಿಧವಾದ ಆವೇಶವನ್ನು ತುಂಬಿ ವಾಚಕನನ್ನು ತನ್ನವನನ್ನಾಗಿ ಮಾಡಿ ಕೊಳ್ಳುವನು. ಸಾಧಾರಣವಾಗಿ ಕನ್ನಡ ಕವಿಗಳಲ್ಲನೇಕರಿಗೆ ಕಾವ್ಯ ಮರ್ಮವು ತಿಳಿಯ ದೆಂದೂ ವಾಚಕರ ಹೃದಯವನ್ನು ಹೊಗುವ ಶಕ್ತಿಯಿಲ್ಲವೆಂದೂ ಒಂದು ದೂರು ಇದೆ. ಆದರೆ ಕವಿತಾಗುಣಾರ್ಣವನಾದ ಪಂಪನ ವಿಷಯವೇ ಬೇರೆ; ಅವನು ಉತ್ತಮ ಕವಿಗಳ ತರಗತಿಗೆ ಸೇರಿದವನು. ಇವನ ಶೈಲಿಯಲ್ಲಿ ಒಂದು ವೈಯಕ್ತಿಕತೆ ಇರುವುದು. ಇವನು ಯಾವುದನ್ನು ವರ್ಣಿಸಿದರೂ ಮನದಟ್ಟಾಗುವಂತೆ ವರ್ಣಿಸು ತ್ತಾನೆ. ಇವನ ವರ್ಣನೆಯನ್ನು ಓದುತ್ತ ಓದುತ್ತ ನಾವು ಮುಗ್ಧರಾಗಿ ಪಾತ್ರಗಳ ಜೊತೆಯಲ್ಲಿ ಐಕ್ಯವಾಗುವೆವು; ಕಥಾ ಶರೀರದಲ್ಲಿ ನಾವೂ ಭೂಮಿಕೆಗಳಾಗಿಬಿಡುವೆವು. ಪಂಪನ ಯಾವ ವರ್ಣನೆಯನ್ನು ತೆಗೆದುಕೊಂಡರೂ ಹೀಗೆಯೇ. ಬನವಾಸಿಯ ವರ್ಣನೆಯನ್ನು ನೋಡಿರಿ: ಅದನ್ನು ಓದಿದ ಕೂಡಲೆ ವಾಚಕನೂ ಸಹ ಬನವಾಸಿಯಲ್ಲಿ ಮರಿದುಂಬಿಯಾಗಿಯಾದರೂ ಹುಟ್ಟಬೇಕೆಂದುಕೊಳ್ಳುವನು. ಸುಭದ್ರಾ ಪರಿಣಯಕ್ಕೆ

ಪುುಂಚಿಸ ವೇಶ್ಯಾವಾಟಿಕೆಯ ವರ್ಣನೆಯನ್ನು ಓದುವಾಗ ನಾವೇ ಆ ಬೀದಿಯಲ್ಲಿ ಹೋಗುತ್ತಿರುವೆವೋ ಎಂದುಕೊಳ್ಳುವೆವು. ದುಶ್ಶಾಸನನು ದ್ರೌಪದಿಯ ಕೇಶ ಗ್ರಹಣವನ್ನು ಮಾಡಿ ಎಳೆತರುವುದನ್ನು ಓದುವಾಗ ಪಾಪಿ ದುಶ್ಶಾಸನನ್ನು ಸೀಳಿ ಬಿಡೋಣವೇ ಎನ್ನಿಸುವುದು. ಭೀಮಸೇನನು ಕಾಲಮೇಘದಂತೆ ಗರ್ಜಿಸಿ ಪ್ರತಿಜ್ಞೆ ಮಾಡುವುದನ್ನು ಓದುತ್ತಿದ್ದರೆ ನಮ್ಮ ಹೃದಯದಲ್ಲಿ ನಡುಕ ಹತ್ತಿ ಸ್ತಬ್ಧರಾಗುವೆವು. ಹಾಗೆಯೇ, ಬಿದ್ದಿ ಚಕ್ರವರ್ತಿಯ ಮುಡಿಯನ್ನು ಭೀಮನು ಒದೆಯುತ್ತಿದ್ದರೆ, 'ಛೀ ಭೀಮ! ನಿನಗೆಷ್ಟು ದುರಹಂಕಾರ! ನೀನು ಮೂರ್ಛಿತನಾಗಿ ಬಿದ್ದಿದ್ದಾಗ ದುರ್ಯೋಧನನು ನಿನ್ನಲ್ಲಿ ಕರುಣವನ್ನು ತೋರಿಸದಿದ್ದಿದ್ದರೆ ನೀನೇನಾಗುತ್ತಿದ್ದೆ? ಅವನು ನಿನ್ನಲ್ಲಿ ತೋರಿಸಿದ ಕರುಣೆಗೆ ಇದೇ ಪ್ರತಿ ಫಲ?' ಎಂದು ಹೇಳಲುದ್ಯುಕ್ತರಾಗುವೆವು. ಗದಾ ಯುದ್ಧ ಪ್ರಾರಂಭದಲ್ಲಿ ಹಲಾಯುಧನು ದುರ್ಯೋಧನನನ್ನು 'ನೀಂ ಮರುಳ್ತನಮನೇಕೆ ಮಾಡಿದಯ್' ಎಂದುದಕ್ಕೆ ದುರ್ಯೋಧನನು 'ಪಾಂಡು ತನಯರ್ ನಿರ್ದೋಷಿಗಳ್; ಮದ್ಬಂಧು ಶೋಕಾಗ್ನಿಯಿಂದುರಿದಪ್ಪೆಂ' ಎನ್ನುತ್ತಿದ್ದರೆ, 'ದುರ್ಯೋಧನ! ನೀನು ನಿಜವಾಗಿಯೂ ಮಹಾನುಭಾವನೇ ಅಹುದು' ಎನ್ನುವೆವು. ಕೊನೆಯಲ್ಲಿ ಪಂಪನು ವಿಕ್ರಮಾರ್ಜುನನ ಪಟ್ಟಾಭಿಷೇಕ ಮಹೋತ್ಸವವನ್ನು ವರ್ಣಿಸುತ್ತಿರುವಾಗ ನಾವೂ ಅದರಲ್ಲಿ ಭಾಗಿಗಳಾಗಿ, ಪಾಂಡವರು ಹಸ್ತಿನಪುರವನ್ನು ಪ್ರವೇಶಿಸುವಾಗ ಅವರಿಗೆ ಸ್ವಾಗತವನ್ನು ಬಯಸುವ ಪಲ್ಲವಿತವಾದ ಆಮ್ರವನವನ್ನು ಕಣ್ಣಾರೆ ನೋಡುವೆವು, ಗುಡಿ ತೋರಣಗಳಿಂದ ವಿರಾಜಿಸುತ್ತಿರುವ ಬೀದಿಗಳಲ್ಲಿ ಓಡಾಡುವೆವು. ಸಂಸಾರ ಸಾರೋದಯನ ಒಡ್ಡೋಲಗದಲ್ಲಿ ವೈತಾಳಿಕರೂ ಪುಂಗಳ ಪಾಠಕರೂ ಒಂದೇ ಕೊರಳಿನಲ್ಲಿ ಮಂಗಳ ವೃತ್ತವನ್ನೋದುತ್ತ, "ಅರಿಗಂಗೀಗೆ ಮಂಗಳ ಮಹಾ ಶ್ರೀಯುಂ ಜಯ ಶ್ರೀಯುಮಂ" ಎಂದು ಹೇಳುತ್ತಿದ್ದರೆ ನಾವೂ ಅವರೊಡನೆ 'ಅರಿಕೇಸರಿಗೆ ಜಯ' ಎನ್ನುತ್ತೇವೆ. ಇದೆಲ್ಲ ಏತರಿಂದ? ಪಂಪನ ಅಸ್ವಾದೃಶ ಶಕ್ತಿಯಿಂದಲ್ಲವೇ? ಅವನು ಯಾವುದನ್ನು ವರ್ಣಿಸಬೇಕಾದರೂ ತಾನು ಅದನ್ನು ಮೊದಲು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಅದರ ಪ್ರತಿಬಿಂಬವೇ ವಾಚಕರಿಗೆ ತೋರುವಂತೆ ಅದನ್ನು ಸಹಜವಾದ, ಸ್ವಾಭಾವಿಕವಾದ ಮಾತಿನಿಂದ ಹೇಳುತ್ತಹೋಗುವುದರಿಂದ ಅವನ ಆಯಾ ವರ್ಣನೆಗಳನ್ನು ಓದುವಾಗ ಆಯಾ ಚಿತ್ರಗಳೇ ವಾಚಕರೆದುರಿಗೆ ಜೀವದುಂಬಿ ನಟಿಸಿದಂತೆ ಭಾಸವಾಗುವುದು.

ಕವಿತಾ ಗುಣಾರ್ಣವನು ಉಭಯ ಭಾಷಾ ಪಂಡಿತನು. ಪಂಪ ಭಾರತವನ್ನು ಬರೆದುದು ಪಂಡಿತರನ್ನು ಮೆಚ್ಚಿಸುವುದಕ್ಕಾಗಿಯೂ ಅಹುದು. ಅಚ್ಚಗನ್ನಡ ಶೈಲಿಯಲ್ಲಿ ಬರೆಯುವುದು ಅವನ ಕಾಲಕ್ಕೆ ಇನ್ನೂ ರೂಢಿಯಾಗಿರಲಿಲ್ಲ. ಅಷ್ಟೇ ಅಲ್ಲದೆ ಸಂಸ್ಕೃತ ಪಂಡಿತರಾದ ಕನ್ನಡ ಕವಿಗಳು ತಮ್ಮ ಕನ್ನಡ ಕಾವ್ಯಗಳಲ್ಲಿಯೂ ಸಂಸ್ಕೃತವನ್ನೇ ತುಂಬಿ ಅದನ್ನೇ ಒಂದು ಗುಣವನ್ನಾಗಿ ಎಣಿಸಿದ್ದರು. ಹೀಗಿರುವಾಗ ಪಂಪನ ಭಾರತವು ಸಂಸ್ಕೃತ ಶಬ್ದ ಮಯವಾಗಿರುವುದಷ್ಟೇನೂ ಆಶ್ಚರ್ಯವಲ್ಲ; ಎಂದರೆ, ಸಂಸ್ಕೃತ ಶಬ್ದಗಳನ್ನೇ ಉಪಯೋಗಿಸಕೂಡದೆಂಬುದು ನಮ್ಮ ಅಭಿಪ್ರಾಯವಲ್ಲ. ಕನ್ನಡ ಭಾಷೆಯ ಮರ್ಯಾದೆಯು ನಾಶವಾಗದಷ್ಟು ಮಾತ್ರ ಉಪಯೋಗಿಸುವುದು

ಸೂಕ್ತವಾಗಿ ಕಾಣುತ್ತದೆ. ಈ ದೃಷ್ಟಿಯನ್ನು ಪಂಪನೂ ಇಟ್ಟುಕೊಂಡಿದ್ದನೆಂದು ತೋರುವುದು. ಅದಕ್ಕಾಗಿಯೇ ಅವನು ಪುರಾಣವಾದ ಆದಿ ಪುರಾಣದಲ್ಲಿ ತುಂಬಿರುವಷ್ಟು ಸಂಸ್ಕೃತ ಶಬ್ದಗಳನ್ನು ಲೌಕಿಕ ಕಾವ್ಯವಾದ ವಿಕ್ರಮಾರ್ಜುನ ವಿಜಯದಲ್ಲಿ ತುಂಬಿಲ್ಲ. ಸಂಸ್ಕೃತಶಬ್ದಗಳಿಂದ ಒಂದು ವಿಧವಾದ ಘೋಷವೂ, ಆರ್ಭಟವೂ, ಘಣಘಣತ್ಕಾರವೂ ಬರುವುದೆಂಬುದು ಅವನಿಗೆ ಗೊತ್ತು. ಆದುದರಿಂದ ವೀರ ರಸ ಪ್ರಧಾನಗಳಾದ ಭೇರಿಯ ನಾದ, ಧೀರಪ್ರತಿಜ್ಞೆ, ಘೋರ ಯುದ್ಧ, ಜಯ ಘೋಷಣ—ಈ ಸಂದರ್ಭಗಳಲ್ಲಿ ಮಾತ್ರ ವಿಶೇಷವಾಗಿ ಸಂಸ್ಕೃತವನ್ನು ಉಪಯೋಗಿಸಿಕೊಂಡು ಮಿಕ್ಕೆಡೆಗಳಲ್ಲೆಲ್ಲ ಕನ್ನಡ ಪದಗಳನ್ನೇ ಉಪಯೋಗಿಸಿ ಉತ್ಕೃಷ್ಟ ಭಾಷಾ ಸರಣಿಯಲ್ಲಿ ತನ್ನ ಕಾವ್ಯವನ್ನು ರಚಿಸಿರುವನು. ಇವನ ಈ ಗ್ರಂಥದಲ್ಲಿ ಸಿಕ್ಕುವಷ್ಟು ಅಪೂರ್ವವಾದ ಅಚ್ಚಗನ್ನಡ ಪದಗಳು ಇನ್ನಾವ ಕಾವ್ಯದಲ್ಲಿಯೂ ಸಿಕ್ಕುವುದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರೂ ಇವನು ಬಹಳ ಉದ್ದವಾದ ಸಂಸ್ಕೃತ ಸಮಾಸಗಳನ್ನು ಅನೇಕ ಕಡೆ ಉಪಯೋಗಿಸುವುದರಿಂದ ಪದಗಳು ಒಂದರೊಡನೊಂದು ಸೇರಿಕೊಂಡು ಅರ್ಥಕ್ಕೆ ಬಹಳ ತೊಡಕನ್ನುಂಟುಮಾಡುವುದಲ್ಲದೆ ಉಚ್ಚಾರಣೆಗೂ ಬಹು ಕಷ್ಟವಾಗುವುದು. ಈ ಸಂಸ್ಕೃತ ಸಮಾಸಗಳಿರುವುದನ್ನು ಬಿಟ್ಟರೆ ಉಳಿದ ಕಡೆಗಳಲ್ಲೆಲ್ಲ ಶೈಲಿಯು ಸುಶ್ರಾವ್ಯವಾಗಿಯೂ ಮನೋಹರವಾಗಿಯೂ ಇರುವುದು.

ಪಂಪನ ಕಾವ್ಯವು ಸರ್ವರಿಗೂ ಆನಂದವನ್ನುಂಟುಮಾಡುವುದಕ್ಕೂ ಅವನ ತರುವಾಯ ಬಂದ ಕವಿಗಳು ಜಾತಿಮತ ಪಕ್ಷಪಾತವಿಲ್ಲದೆ “ಸುಭಗ ಕವಿ ಪಂಪನಿಂ ವಾಗ್ವಿಭವೋನ್ನತಿ ನೆಗೞ್ದುದು”, ‘ರಸಿಕಾಗ್ರಣಿ ಹಂಪದೇವಂ’, ‘ಸತ್ಕವಿ ಹಂಪನ ಕೃತಿಸೌಂದರೀ ಸುಭಗಂ’, ‘ಪಂಪನ ರೀತಿ’, ‘ಪಂಪನಿಂಪು’, ‘ಪಂಪನ ಗುಣಂ’, ‘ಪಂಪನೊಂದಸದೃಶಮುಪ್ಪಪೂರ್ವ ರಸ ಭಾವಂ’ ಎಂಬುದಾಗಿ ಪಂಪನ ಅಸಾಧಾರಣ ಶಕ್ತಿಯನ್ನು ತಮ್ಮ ತಮ್ಮ ಅನುಭವಾನುಸಾರವಾಗಿ ಸ್ತೋತ್ರ ಮಾಡುವುದಕ್ಕೂ ಅವನಲ್ಲಿದ್ದ ಕವಿತಾ ಶಕ್ತಿಯೂ ಅವನ ಶೈಲಿಯಲ್ಲಿದ್ದ ಕೆಲವು ಅಪೂರ್ವವಾದ ಗುಣಗಳೂ ಕಾರಣವೆಂದು ತೋರುತ್ತದೆ. ಅವುಗಳಲ್ಲಿ ಕೆಲವನ್ನು ಮುಂದೆ ನೋಡಬಹುದು:—

ಹಿಂದೆ ಹೇಳಿದಂತೆ ವ್ಯಕ್ತಿಯ ಚಿತ್ರವನ್ನು ಕೊಡುವುದರಲ್ಲಿಯೂ, ಸನ್ನಿವೇಶದ ಚಿತ್ರವನ್ನು ಕೊಡುವುದರಲ್ಲಿಯೂ ಪಂಪನ ಸಮದಂಡಿಗೆ ಬರುವ ಕವಿಗಳು ಅತಿ ವಿರಳರೆಂದು ಹೇಳಬಹುದು. ಮಯನನ್ನು ಸನ್ಮಾನಿಸಿ ಕಳುಹಿಸಿದ ತರುವಾಯ ಧರ್ಮಪುತ್ರನು ತನ್ನ ನಾಲ್ಕು ಜನ ತಮ್ಮಂದಿರೊಡಗೂಡಿ ಓಲಗಗೊಡುತ್ತಿರುವಾಗ ಇಂದ್ರ ಲೋಕದಿಂದ ಬಂದ ನಾರದನ ಚಿತ್ರವನ್ನು ನೋಡಿರಿ:—

ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನ ಮುಂಜ ತೊಳಪ್ಪ ಕ ।
ರ್ಪುರದ ಭಸ್ಮ ರಜಸ್ತ್ರಿಪುಂಡ್ರಕವೊಪ್ಪೆ ಪಿಂಗ ಜಟಾಳಿ ತಾ ॥
ವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ।
ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ ॥

ಹಾಗೆಯೇ ಪಾಶುಪತಾಸ್ತ್ರವನ್ನು ಪಡೆಯುವುದಕ್ಕಾಗಿ ತಪಸ್ಸು ಮಾಡುತ್ತಿರುವ ಸೌಮ್ಯ ಭಯಂಕರನಾದ ಅರ್ಜುನನನ್ನು ನೋಡಿರಿ:—

ಅದಿರದ ಚಿತ್ತಮುಳ್ಕದ ಮನಂ ಬಗೆಗೊಳ್ಳದ ಮೋಹಮೆತ್ತಿ ಕ |
ಟ್ಟಿದ ಜಡೆ ತೊಟ್ಟ ರತ್ನ ಕವಚಂ ಕೊರಲೊಳ್ ಸಲೆ ಕೋದ ಬಿಲ್ ಪ್ರಯ ||
ತ್ನದೆ ಬಿಗಿದಿರ್ದೆರಱ್ದೊಣೆ ಮಿಸುಪ್ಪಸಿ ಖೇಟಕಮಿಂತಿವೊಂದುಗುಂ |
ದದೆ ನಿಲೆ ನೋಱ್ಪ ನೋಟಕರ್ಗೆ ಸೌಮ್ಯ ಭಯಂಕರನಾದನರ್ಜುನಂ ||

ಪಂಪನು ಸನ್ನಿವೇಶಗಳ ಚಿತ್ರವನ್ನು ಕೊಡುವುದರಲ್ಲಿಯೂ ಹೀಗೆಯೇ: ಸನ್ನಿವೇಶಗಳು ನಮ್ಮೆದುರಿಗೆ ಬಂದು ನಿಲ್ಲುವುವು. ಏಕಚಕ್ರಪುರದಲ್ಲಿ ಬಕಾಸುರನಿಗೆ ಆಹಾರವನ್ನು ಕಳುಹಿಸುವುದಕ್ಕೆ ಜನಗಳಿಲ್ಲದೆ ವ್ಯಸನಪಡುತ್ತಿದ್ದ ಬ್ರಾಹ್ಮಣನ ಮನೆಯ ದೃಶ್ಯದ ಕಡೆ ಗಮನಿಸಿರಿ:—

ಅಱಿ ಕುಡಲಾದ ಕೂಸು ನೆಲದೊಳ್ ಪೊರಳುತ್ತಿರೆ ಧರ್ಮಪತ್ನಿ ಬಾ |
ಯಱಿದು ಕೊರಲ್ಗೆ ಪಾಯ್ಪ ಪರಿದಾಡುವ ಬಾಲಕನಾದ ಶೋಕದಿಂ ||
ಗಱಿಗಱಿ ಕಣ್ಣ ನೀರ್ ಸುರಿಯೆ ಚಿಂತಿಪ ಪಾರ್ವನ ಶೋಕದೊಂದು ಪೊಂ |
ಪುಱಿಯನೆ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ ||

ಪಂಪನ ಶೈಲಿಯು ದಿಣ್ಣೆಯಿಂದ ತಡೆಯಿಲ್ಲದೆ ಹರಿದುಬರುವ ನದಿಯಂತೆ ಅದೆಲ್ಲಿಯೂ ನಿಲ್ಲುವುದಿಲ್ಲ. ಮಿತವಾದ ಭಾಷೆಯಿಂದ ಪೂರ್ಣವಾದ ಕಥಾ ಭಾಗವು ಒಂದರ ಹಿಂದೆ ಒಂದು ಓಡುವುದು. ಈ ವಚನದ ಕಡೆ ಸ್ವಲ್ಪ ಲಕ್ಷಿಸಿರಿ:—

"ನಿಮ್ಮ ಮನಕ್ಕೆ ಕೊಕ್ಕರಿಕೆಯಾಗಿಯುಂ ಪಾಱಿಗೆ ಗೆಂಟಾಗಿಯುಂ ನೆಗಱ್ವೆ ಮಲ್ಲೆಂದು ಪೊಡವಟ್ಟು ಕೊಂತಿಯುಂ ವಿದುರನ ಮನೆಯೊಳಿರಲ್ವೇಱ್ದು ಸುಭದ್ರೆಯ ನಭಿಮನ್ಯುವೆರಸು ನಾರಾಯಣನಲ್ಲಿಗೆ ದ್ವಾರಾವತಿಗೆ ಕಳುಪಿ ನಿಜ ಜನಂಬೆರಸು ಗಂಗೆಯಂ ಪಾಯ್ದುದಱಿ ಪಡುವಣ ದೆಸೆಯ ಕಾಮ್ಯಕ ವನದ ಬಟ್ಟೆಯಂ ತಗುಳ್ದು ಪೋಗೆವೋಗೆ."

ಇಲ್ಲಿ ಎಷ್ಟು ವಿಷಯಗಳು ಅಡಕವಾಗಿವೆ! ಇದನ್ನೇ ಬೇರೆ ಕವಿಯಾದರೆ ಹದಿನೈದು ಇಪ್ಪತ್ತು ಪದ್ಯಗಳಾಗಿ ನೇಯುತ್ತಿದ್ದನು.

ಭಾರತದ ಅನೇಕ ಪದ್ಯಗಳು ಛಂದೋಬದ್ಧವಾದ ಗದ್ಯದಂತೆ ಸರಳವಾಗಿ ಹರಿಯುವುದು ಪಂಪನ ಶೈಲಿಯು ಶ್ಲಾಘನೀಯವಾಗುವುದಕ್ಕೆ ಮತ್ತೊಂದು ಕಾರಣ. ಇವನ ಪದ್ಯಗಳು ಒಂದರ ಮುಂದೊಂದು ಬರುವ ವಾಕ್ಯಮಾಲೆಗಳಾಗಿರುವುವಲ್ಲದೆ ಅನೇಕ ಕಡೆಗಳಲ್ಲಿ ಪದ್ಯದಲ್ಲಿಯ ವಾಕ್ಯವು ಆ ಪದ್ಯದಲ್ಲಿಯೇ ಮುಗಿಯದೆ ಮುಂದೆ ಬರುತ್ತಿರುವ ಗದ್ಯ ಪ್ರಾಂತದಲ್ಲವತರಿಸಿ ಪರಿಸಮಾಪ್ತವಾಗುವುದು. ಘೋಷಣೆಯನ್ನುಂಟುಮಾಡಬೇಕೆಂದು ಪ್ರಯತ್ನಪೂರ್ವಕವಾಗಿ ಶ್ರಮಪಟ್ಟ ಸ್ಥಳಗಳಲ್ಲಿ ವಿನಾ ಮಿಕ್ಕೆಡೆಗಳಲ್ಲಿ ಪದ್ಯಗಳು ಸ್ವಲ್ಪವೂ ತೊಡಕಿಲ್ಲದೆ ಹರಿಯುವುವು. ಈ ಎರಡು ಪದ್ಯಗಳನ್ನು ಓದಿ ನೋಡಿರಿ:—

ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾ ।
ತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ ॥
ಚಲದಿಂ ಸೀಳ್ದವನಾವನಬ್ಧಿ ಮಥನ ಪ್ರಾರಂಭದೊಳ್ ಮಂದರಾ ।
ಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ ॥

ದಿವಿಜೇಂದ್ರಂ ಸುಖಮಿರ್ದನೇ ದಿತಿ ಸುತವ್ಯಾಬಾಧೆಗಳ್ ದೇವರ್ಗಿ ।
ಲ್ಲವಲಾ ಷೋಡಶ ರಾಜರಿರ್ಪ ತೆಱನೇನೆಮ್ಮನ್ವಯಕ್ಷ್ಮಾಪರಾ ॥
ವ ವಿಳಾಸಂಗಳೊಳಿರ್ಪರೇದೊರೆತು ತಾನೆಮ್ಮಯ್ಯನೈಶ್ವರ್ಯಮಿಂ ।
ತಿವನೆಲ್ಲಂ ತಿಳಿವಂತುಟಾಗಿ ಬೆಸಸಿಂ ಪಂಕೇಜ ಗರ್ಭಾತ್ಮಜಾ ॥

ಎಷ್ಟು ಸುಲಭವಾಗಿದೆ! ಎಷ್ಟು ಸರಳವಾಗಿದೆ! ಅರ್ಥಕ್ಕೇನಾದರೂ ತಿಣುಕಬೇಕೇ? ಕನ್ನಡ ಗ್ರಂಥಗಳೆಲ್ಲ ಹೀಗೆಯೇ ಇದ್ದರೆ ಎಷ್ಟು ಚೆನ್ನಾಗಿರುತ್ತಿದ್ದಿತು!

ಪಂಪನು ಕಥಾ ಶರೀರದಲ್ಲಿ ಆದಷ್ಟು ಭಾಗವನ್ನು ಸಂವಾದ ರೂಪದಲ್ಲಿ ಬರೆದಿರುವನು. ಪಾತ್ರಗಳು ಮಾತನಾಡುವ ಭಾಷೆಯು ಸರಳವಾಗಿರುವುದು. ಅದು ಸರಳವಾಗಿ ಸಂಭಾಷಣೆಯ ರೂಪದಲ್ಲಿದ್ದರೂ ಅದರಲ್ಲಿ ಪೂರ್ಣವಾದ ತೂಕವಿರುವುದು. ಅವರ ಸಂಭಾಷಣೆಗಳು ಕೊಡತಿಯ ಪೆಟ್ಟಿನಂತೆ ನಮ್ಮ ಹೃದಯದಲ್ಲಿ ನಾಟುವುವು. ಶಿಶುಪಾಲನು ಹೇಳುವ ಈ ಎರಡು ಪದ್ಯಗಳನ್ನು ನೋಡಿರಿ:—




ಮನದೊಲವರಮುಳ್ಳೊಡೆ ಕುಡು ।
ಮನೆಯೊಳ್ ಹರಿಗಗ್ರ ಪೂಜೆಯಂ ಯಜ್ಞದೊಳೀ ॥
ಮನುಜಾಧೀಶ್ವರ ಸಭೆಯೊಳ್ ।
ನೆನೆಯಲುಮಾಗದು ದುರಾತ್ಮನಂ ಬೆಸಗೊಳ್ವಾ ॥

ಕುಡವೇೞ್ಪನ ಕುಡುವನ ಕುಡೆ!
ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಪೇೞ್ವಿಂ ॥
ಕುಡವೇೞ್ಗೆನು ಕುಡುವಣ್ಣಂ।
ಕುಡುಗೆಮ ಕುಡೆ ಕೊಳ್ವ ಕಲಿಯನಱಿಯಲ್ಕಕ್ಕುಂ ॥

ಸೂರ್ಯೋದಯ, ಸೂರ್ಯಾಸ್ತಮಾನ, ಚಂದ್ರೋದಯ, ಚಂದ್ರಾಸ್ತಮಾನ— ಇವುಗಳನ್ನು ಕಂಡರೆ ಪಂಪನಿಗೆ ಬಹಳ ಇಷ್ಟ. ಇವುಗಳನ್ನು ಇವನು ಕಥಾ ಸಂವಿಧಾನದಲ್ಲಿ ಸೇರಿಸಿ ಉತ್ಪ್ರೇಕ್ಷಿಸಿ ಹೇಳುವನು. ಇವುಗಳಲ್ಲಿ ಅನೇಕವು ಕಥಾ ಶರೀರದಲ್ಲಿ ಸೇರಿ ಉತ್ಪ್ರೇಕ್ಷೆಯೆಂಬ ಭಾವವನ್ನೇ ಮರೆಮಾಡುವುದು. ಈ ವಿಷಯವನ್ನು ಕೆಳಗಿನ ಪದ್ಯಗಳಲ್ಲಿ ಪರಿಶೀಲಿಸಿರಿ:—

ಅದಟಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾ ।
ಱದೆ ಬೆಂಬೞ್ಕೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣನಂ ॥
ತದುವಂ ನೋಡುವೆನೆಂದು ಕಣ್ ತಣಿವಿನಂ ನೋಡಲ್ಕೆ ಬರ್ಪಂತೆ ಬಂ ।
ದುದಯಾದ್ರೀಂದ್ರಮನೇಱ ಭಾನು ಪೊಱಮಟ್ಟೊಡ್ಡಿತ್ತನೀಕಾರ್ಣವಂ ॥

ಎಂಬ ಸೂರ್ಯೋದಯ ವರ್ಣನೆಯೂ, ಕರ್ಣ ವಧಾನಂತರ—

ಪಱಿಯಿಸಿಗೆಯನುಡುಗಿ ರಥಮಂ ।
ಪೆಱಿವನನೆಸಗಲ್ಕೆ ವೇಱಿದ್ದು ಸುತ ಶೋಕದ ಪೊಂ ॥
ಪುಱಿಯೊಳ್ ಮೆಯ್ಯಱಿಯದೆ ನೀ ।
ರಱಿವಂತೆವೊಲಿಱಿದನಪರ ಜಳಧಿಗೆ ದಿನಪಂ ॥

ಎಂಬ ಸೂರ್ಯಾಸ್ತಮಯ ವರ್ಣನೆಯೂ,

ಎಸೆವ ನಿಜ ವಂಶಮುಂ ಪೆ ।
ರ್ಚಿಸುವ ಗುಣಾರ್ಣವನೊಳುಂತೆ ಸೆಣಸಲ್ಕೆಂದಿ ॥
ರ್ಪ ಸುಯೋಧನಂಗೆ ಮುಳಿಸಿಂ ।
ಕಿಸುಗಣ್ಣಿದ ತೆಱದಿನಮೃತಕರನುದಯಿಸಿದಂ ॥

ಎಂಬ ಪದ್ಯವೂ ಎಷ್ಟು ಸುಸಂಗತವಾಗಿರುವುವು! ಈ ಸಂದರ್ಭಗಳಲ್ಲಿ ಉತ್ಪ್ರೇಕ್ಷೆ ಯೆಂಬ ಭಾವವೇ ತೋರದೆ ಕವಿಯು ಕೊಟ್ಟಿರುವ ಕಾರಣವೇ ನಿಶ್ಚಯವಾದುದೋ ಎಂಬಂತೆ ಭಾಸವಾಗುವುದು.

ಸಹಜವಾಗಿ ನೀರು ಕುಡಿದಂತೆ ಮಾತನಾಡುವುದು ಪಂಪನ ಪದ್ಧತಿಯಾದುದ ರಿಂದ ಅವನು ಜನಸಾಮಾನ್ಯದಲ್ಲಿ ರೂಢಿಯಲ್ಲಿರುವ ಪದಗಳನ್ನೂ ವಾಕ್ಯಗಳನ್ನೂ ವಿಶೇಷವಾಗಿ ತನ್ನ ಕಾವ್ಯದಲ್ಲಿ ಉಪಯೋಗಿಸಿರುವನು:—

'ರಾಜಹಂಸಿ ಮಾನಸ ಸರೋವರಮನಲ್ಲದೆ ಪೆಱತನೇಕೆ ಬಯಸುಗುಂ।'
'ಕಃ ಕೇನಾರ್ಥೀ ಕೋ ದರಿದ್ರಃ'
'ನಿಯತಿಃ ಕೇನ ಲಂಘ್ಯತೇ'
'ಏನಾಗದೊ ಪಾಪದ ಫಳಂ ಎಯ್ದಿವಂದ ದಿವಸದೊಳಾರ್ಗಂ'
'ಆನೆಯ ಕೋಡು ಬಾಗದು'
'ಪಗೆಯಱಿಯ ಬಂದರ ಮೂಗನರಿದರೆಂಬಂತೆ'
'ಬೇರೊಳ್ ಬೆನ್ನೀರನೆರೆಯದಿರ್'
'ಸೆಟ್ಟಿಯ ಬಳ್ಳಂ ಕಿಱಿದು.'

ಇವುಗಳಲ್ಲಿ ಅನೇಕವು ಪ್ರತ್ಯೇಕವಾದ ನಾಣ್ಣುಡಿಯಾಗಿ ರಂಜಿಸುವುವು. ಇವುಗಳನ್ನು ಉಪಯೋಗಿಸಿರುವುದರಿಂದ ಕಾವ್ಯಕ್ಕೆ ಒಂದು ಸ್ವಾಭಾವಿಕತೆಯು ದೊರೆತಿರುವುದು. ಅದರ ಫಲವಾಗಿ ವಾಚಕನು ಕವಿಯ ಭಾವವನ್ನೂ ಕಾವ್ಯದ ಸೊಬಗನ್ನೂ ಸುಲಭವಾಗಿ ಸವಿಯಬಹುದು.

ಪಂಪನು 'ರೂಪಕ ರಾಜ್ಯದ ಚಕ್ರವರ್ತಿ.' ಇವನ ರೂಪಕಗಳು ಹಲವು ಕಡೆಯಿಂದ ಆಯ್ದುವು. ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಜೀವವಿದೆ, ವೈವಿಧ್ಯವಿದೆ. ಉಪಮಾನಗಳೆಲ್ಲವೂ ಮನುಷ್ಯನ ನಡೆನುಡಿಗಳಿಂದ ಆರಿಸಿದವು. ವಾಚಕನು

ಪ್ರತಿಯೊಂದನ್ನೂ ಕಣ್ಣಾರೆ ಕಂಡು ಅದರ ನಿಜವಾದ ಭಾವವನ್ನು ಅನುಭವಿಸಬಹುದು :—

'ಪಂದೆಯಂ ಪಾವಡರ್ದಂತೆ'
'ಪೊಳ್ಳು ಮರನಂ ಕಿರ್ಚಳುರ್ವಂತೆ'
'ಉರಿಮುಟ್ಟಿದರಳೆಯಂತೆ'
'ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್'
'ಡೊಂಬರ ಕೋಡಗದಂತೆ'
'ಕೀಲೋಳ್ ಕಿಚ್ಚು ಪುಟ್ಟಿ ಭೋರ್ಗರೆದುರಿದಂತೆ'
'ಆಡದಿರ್ದ ಮಡುವಂ ಪೋಲ್ತಂ'
'ಬಾಳೆಯ ಬನಮುಂ ಕಾಡಾನೆ ಪೊಯ್ದಂತೆ'
'ದೇಗುಲಕೆ ಪೆರ್ಮರನಂ ಕಡಿವಂತೆ'
'ಕುರುಡಂ ಕಣ್ಬೆತ್ತವೊಲ್'
'ಮಹಾ ಸಮುದ್ರಂಗಳೊಳ್ ಮಹಾ ನದಿಗಳ್ ಕೂಡುವಂತೆ'
'ಕೆಯ್ಯ ಕೂಸನಿಕ್ಕಿದವೊಲ್'
'ಆನೆ ಮೆಟ್ಟಿದ ಕುಳುಂಪೆಯ ನೀರಂತೆ'
'ಪಲಿ೨ಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ'
'ಕರಿಕಳಭ ಗರ್ಜನೆಗೇಳ್ವ ಮೃಗರಾಜನಂತೆ'



ಇವುಗಳಲ್ಲಿ ಪ್ರತಿಯೊಂದರ ನಿಜವಾದ ಸ್ವಾರಸ್ಯವನ್ನೂ ವಾಚಕನು ಗ್ರಹಿಸಬಹುದು. ಈ ಉಪಮಾನಗಳೆಲ್ಲವೂ ಈ ಲೋಕಕ್ಕೆ ಸಂಬಂಧಪಟ್ಟವು. ಆದುದರಿಂದಲೇ ಈ ಕಾವ್ಯವನ್ನು ನಾವು ಓದುವಾಗ ಯಾವುದೋ ಆಕಾಶ ಪುರಾಣವನ್ನು ಓದುತ್ತಿರುವಂತೆ ತೋರದೆ ನಮಗೆ ಸಂಬಂಧಪಟ್ಟ, ನಮ್ಮ ಸುತ್ತಮುತ್ತಲಿರುವ ವಿಷಯುವನ್ನು ಓದುತ್ತಿರುವಂತೆ ಭಾಸವಾಗಿ ಕಾವ್ಯದಲ್ಲಿ ನಮಗೆ ಆದರವುಂಟಾಗುವುದು.

ಇನ್ನು **ಅಲಂಕಾರ**ದ ವಿಚಾರ : ಕನ್ನಡ ಕವಿಗಳಿಗೆ ಅಲಂಕಾರವೆಂದರೆ ಬಹಳ ಪ್ರೀತಿ. ಅರ್ಥಾಲಂಕಾರ ಶಬ್ದಾಲಂಕಾರಗಳಿಲ್ಲದಿದ್ದರೆ ಅದು ಕಾವ್ಯವೇ ಅಲ್ಲ; ಅದರಲ್ಲಿಯೂ ಶ್ಲೇಷೆ, ವಿರೋಧಾಭಾಸಗಳು ಕೊನೆಯ ಪಕ್ಷ ಇಪ್ಪತ್ತು ಇಪ್ಪತ್ತೈದಾದರೂ ಇರಬೇಕೆಂಬುದು ಅವರ ಅಭಿಪ್ರಾಯ. ಆದರೆ ಪಂಪನು ಈ ದೂರಿಗೆ ಈಡಾಗಿಲ್ಲ. ಅವನಲ್ಲಿ ಶ್ಲೇಷೆ, ವಿರೋಧಾಭಾಸ, ಇವು ಇಲ್ಲವೆಂದೇ ಹೇಳಬಹುದು. ಶಬ್ದಾಲಂಕಾರದಲ್ಲಿ ಅನುಪ್ರಾಸ ಯಮಕಾದಿಗಳು ಪ್ರಾಸಂಗಿಕವಾಗಿ ಮಿತಿಯರಿದು ಬರುವುವು. ಒಟ್ಟಿನಲ್ಲಿ, ಇವನು ಉಪಯೋಗಿಸುವ ಅಲಂಕಾರಗಳಿಂದ ಕಾವ್ಯದ ರಸಾಸ್ವಾದನೆಗೇನೂ ತೊಂದರೆಯಿಲ್ಲ.

ಪಂಪ ಭಾರತವು ಅರಿಕೇಸರಿಯ ಶೌರ್ಯ ವೀರ್ಯಾದಿಗಳನ್ನು ವರ್ಣಿಸುವುದಕ್ಕಾಗಿ ಬರೆದ ಗ್ರಂಥವಾದುದರಿಂದ ಇದರಲ್ಲಿ ವೀರ ರಸವೇ ಪ್ರಧಾನವಾದುದು ; ಉಳಿದ ರಸಗಳೆಲ್ಲ ಇದಕ್ಕೆ ಉಪಷ್ಟಂಭಕವಾಗಿರುವುವು. ವೀರ ರಸವನ್ನೇ ಮುಖ್ಯವಾಗಿಟ್ಟು

ಕೊಂಡಿದ್ದರೂ ಪಂಪನು ಸಮಗ್ರ ಭಾರತವನ್ನು ಬರೆಯುತ್ತಿರುವುದರಿಂದ ಭಾರತದಲ್ಲಿರುವ ನವ ರಸವನ್ನೂ ತನ್ನ ಗ್ರಂಥದಲ್ಲಿ ತುಂಬಿರುವನು. ವೇಶ್ಯಾ ವಾಟಿಕೆಯ ವರ್ಣನೆಯಲ್ಲಿಯೂ, ರಂಭೆ, ತಿಲೋತ್ತಮೆ ಮೊದಲಾದ ಇಂದ್ರ ಲೋಕದ ಸ್ತ್ರೀಯರ ವರ್ಣನೆಯಲ್ಲಿಯೂ, ಸುಭದ್ರಾ ಪರಿಣಯದ ಸಂದರ್ಭದಲ್ಲಿಯೂ ಶೃಂಗಾರ ರಸವನ್ನೂ, ಯುದ್ಧಗಳಲ್ಲಿ ವೀರ, ಅದ್ಭುತ, ಭಯಾನಕ ರಸಗಳನ್ನೂ, ಭೀಮ ದುರ್ಯೋಧನರ ವೀರ ಪ್ರತಿಜ್ಞೆ ಮತ್ತು ಆಡಂಬರ, ಭೇರೀ ತಾಡನ ಮುಂತಾದುವುಗಳಲ್ಲಿ ರೌದ್ರ ರಸವನ್ನೂ, ಭೀಷ್ಮ ದುರ್ಯೋಧನರ ಸಂವಾದದಲ್ಲಿ ಕರುಣ ರಸವನ್ನೂ, ಶವಗಳ ವರ್ಣನೆಯಲ್ಲಿ ಬೀಭತ್ಸ ರಸವನ್ನೂ ನೋಡಬಹುದು. ಪಂಪನ ರಸ ನಿರೂಪಣ ಕ್ರಮವೂ ಅವನ ಇತರ ವಿಷಯಗಳಂತೆ ಬಹು ಲಲಿತವಾದುದು. ವಾಚಕನು ಕಾವ್ಯವನ್ನು ಓದುವಾಗಲೇ ರಸಗಳು ತಾವಾಗಿಯೇ ಸ್ಫುರಿಸುವುವು.

ಕೊನೆಯಲ್ಲಿ, ಪಂಪನ ಪಾತ್ರಗಳ ಕಡೆ ಸ್ವಲ್ಪ ಗಮನಿಸುವುದು ಅವಶ್ಯಕ. ಪಂಪನ ಪಾತ್ರಗಳು ನೀರಸವಾದುವುಗಳಲ್ಲ. ಪ್ರತಿಯೊಂದರಲ್ಲಿಯೂ ಪೂರ್ಣವಾದ ವೈಯಕ್ತಿಕತೆಯಿರುವುದು, ಜೀವವಿರುವುದು, ಬೆಳವಣಿಗೆಯಿರುವುದು. ಒಂದೊಂದು ಪಾತ್ರವೂ ತನ್ನ ತನ್ನ ಗುಣಗಳನ್ನು ವ್ಯಕ್ತಪಡಿಸಿಕೊಂಡು ಆ ಗುಣಗಳಿಂದಲೇ ಮನೋಹರವಾಗಿರುವುದು. ಒಂದು ಕಡೆ ಜಗದ್ರಕ್ಷಕನಾದ ಕೃಷ್ಣ ಪರಮಾತ್ಮ, ಮತ್ತೊಂದು ಕಡೆ ಧರ್ಮವೇ ಮೂರ್ತಿವೆತ್ತಂತಿರುವ ಧರ್ಮರಾಯ, ಅಚಲಿತ ಪ್ರತಿಜ್ಞಾರೂಢನಾದ ಗಾಂಗೇಯ, ಧನುರ್ಧರಾಗ್ರಗಣ್ಯನಾದ ದ್ರೋಣ, ಭಾರತದ ಯುದ್ಧಕ್ಕೇ ಆದಿ ಶಕ್ತಿಯೆನಿಸಿದ ದ್ರೌಪದಿ; ಪ್ರತಿಯೊಬ್ಬರೂ ತಮ್ಮ ಒಂದೊಂದು ಗುಣದಿಂದಲೇ ಪ್ರಪಂಚದಲ್ಲಿ ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆದಿರುವರು. ಇವರೆಲ್ಲರೂ ತಮಗೆ ಮೂಲ ಭಾರತದಲ್ಲಿ ತೋರಿಬರುವ ಅಲ್ಪ ಸ್ವಲ್ಪ ಕುಂದುಗಳನ್ನು ಕಳೆದುಕೊಂಡು ಪಂಪ ಭಾರತದಲ್ಲಿ ಮೆರುಗಿಟ್ಟ ಸುವರ್ಣದ ಪುತ್ಥಳಿಗಳಂತೆ ಜ್ವಲಿಸುತ್ತಿರುವರು.

ಇವರೆಲ್ಲರಿಗಿಂತಲೂ ಅರ್ಜುನ, ಭೀಮ, ದುರ್ಯೋಧನ ಮತ್ತು ಕರ್ಣ, ಈ ನಾಲ್ವರ ಪಾತ್ರಗಳು ಪಂಪ ಭಾರತದಲ್ಲಿ ಮುಖ್ಯವಾಗಿ ಗಮನಿಸತಕ್ಕವು. ಈ ಪಾತ್ರಗಳ ರಚನೆಯಲ್ಲಿ ಪಂಪನು ತನ್ನ ಕೌಶಲವನ್ನೆಲ್ಲ ಉಪಯೋಗಿಸಿರುವನು; ಪಾತ್ರಗಳ ಗುಣಗಳನ್ನು ಚೆನ್ನಾಗಿ ವ್ಯಕ್ತಪಡಿಸುವುದಕ್ಕಾಗಿ ಮೂಲ ಭಾರತದಲ್ಲಿಲ್ಲದ ಅನೇಕ ಸಂದರ್ಭಗಳನ್ನು ಹೊಸದಾಗಿ ಸೇರಿಸಿರುವನು; ಇರುವುದನ್ನು ಬಿಟ್ಟಿರುವನು. ಆದರೂ ಭೀಮಾರ್ಜುನರ ಪಾತ್ರ ರಚನೆಯಲ್ಲಿ ಪಂಪನು ಅಷ್ಟು ಶ್ರಮಪಟ್ಟಂತೆ ಕಾಣುವುದಿಲ್ಲ; ಏಕೆಂದರೆ, ಆ ಪಾತ್ರಗಳ ವಿಷಯದಲ್ಲಿ ಮೂಲ ಭಾರತದಲ್ಲಿಯೇ ಸರಿಯಾದ ಸೌಷ್ಠವ ಇದೆ. ದೈವ ಬಲವು ಅವರ ಕಡೆ ಇರುವುದು; ಧರ್ಮವೂ ಅವರನ್ನೇ ಆಶ್ರಯಿಸುವುದು. ಅಲ್ಲದೆ, ಅರ್ಜುನನಿಗೆ ಹೋಲಿಸತಕ್ಕ ಅರಿಕೇಸರಿ ರಾಜನು ವೀರನೇ ಅಹುದು. ಅದುದರಿಂದ, ಈ ಪಾತ್ರ ರಚನೆಯಲ್ಲಿ ಪಂಪನಿಗೆ ಅಷ್ಟು ಕಷ್ಟ ತೋರಿಬಂದಿಲ್ಲ. ಪಂಪ ಭಾರತದ ಭೀಮ ದುರ್ಯೋಧನರು ಮೂಲ ಭಾರತದ ವ್ಯಕ್ತಿಗಳಂತೆಯೇ ವೀರ ಕ್ಷತ್ರಿಯರೂ ಅಹುದು. ಆದರೆ, ಇವರೂ ಆ ವ್ಯಕ್ತಿಗಳಂತೆಯೇ ಅಡಿಗಡಿಗೂ ಕೃಷ್ಣನ

ಬೆಂಬಲಕ್ಕೆ ಕಾಯುತ್ತ ಧರ್ಮದ ಹೆಸರಿನಿಂದ ಅನೇಕ ಅಧರ್ಮಗಳಲ್ಲಿ ಸೇರುವರು; ಆಗ ಈ ವ್ಯಕ್ತಿಗಳು ನಮ್ಮ ಅಸಮ್ಮತಿಗೂ ಪಾತ್ರರಾಗುವರು; ಆದುದರಿಂದ, ಅವರಲ್ಲಿ ನಮ್ಮ ಪೂರ್ಣವಾದ ಸಹಾನುಭೂತಿಯಿರುವುದಿಲ್ಲ.

ಈ ದೃಷ್ಟಿಯಿಂದ ನೋಡಿದರೆ, ಪಂಪನು ತನ್ನ ದುರ್ಯೋಧನ ಮತ್ತು ಕರ್ಣ– ಇವರುಗಳ ಪಾತ್ರರಚನೆಯಲ್ಲಿ ತನ್ನ ಸರ್ವಸ್ವವನ್ನೂ ವ್ಯಯಮಾಡಿರುವನೆಂದು ಹೇಳಬಹುದು. ದುರ್ಯೋಧನನನ್ನು ಮಹಾನುಭಾವನನ್ನಾಗಿ ಮಾಡಿರುವುದೂ, ಕರ್ಣನನ್ನು ಪರಮ ಭಾಗ್ಯಶಾಲಿಯನ್ನಾಗಿ ಮಾಡಿರುವುದೂ ಪಂಪನ ಕೌಶಲ. ಮೂಲ ಭಾರತದಲ್ಲಿ ಇವರು ನಮ್ಮ ಕಣ್ಣಿಗೆ ನೃಶಂಸರಂತೆಯೂ ಪಾಪಿಗಳಂತೆಯೂ ಕಾಣುತ್ತಾರೆ. ಆದರೆ ಪಂಪ ಭಾರತದಲ್ಲಿ ನಾವು ಅವರೊಡನೆ ಸೇರಿ ಅವರ ಕಷ್ಟ ಸುಖಗಳಲ್ಲಿ ಕಣ್ಣೀರನ್ನು ಸುರಿಸುವೆವು. ಆದುದರಿಂದ ಈ ಪಾತ್ರಗಳನ್ನು ಸ್ವಲ್ಪ ವಿಸ್ತಾರವಾಗಿ ವಿಮರ್ಶಿಸುವುದು ಉತ್ತಮ.

ಪಂಪನ ದುರ್ಯೋಧನನು ವೀರಾಗ್ರೇಸರ, ಅತ್ಯಂತಾಭಿಮಾನಿ. ಅವನಲ್ಲಿ ಸತ್ಪುರುಷನಿಗಿರಬೇಕಾದ ಅನೇಕ ಗುಣಗಳಿದ್ದುವು. ಆದರೂ ಅವನ ಛಲವೂ ಪಾಂಡವರಲ್ಲಿ ಅವನಿಗಿದ್ದ ದ್ವೇಷ ಮಾತ್ಸರ್ಯಗಳೂ ಅವನ ನಾಶಕ್ಕೆ ಕಾರಣವಾದುವು. ಇಷ್ಟಾದರೂ ಅವನಲ್ಲಿ ನಮಗೆ ಪೂರ್ಣವಾದ ಸಹಾನುಭೂತಿಯಿರುವುದು. ಈ ಸಹಾನುಭೂತಿಗೆ ಅವನಲ್ಲಿರುವ ಅನ್ಯಾದೃಶವಾದ ಮಿತ್ರ ಪ್ರೇಮ, ಗುರುಜನ ವಿಧೇಯತೆ, ಸೋದರ ಪ್ರೇಮ ಮೊದಲಾದ ಅಭಿಜಾತ್ಯ ಗುಣಗಳೇ ಕಾರಣ. ಈ ಗುಣಗಳೆಲ್ಲವೂ ಅವನ ನಡೆ ನುಡಿಯಲ್ಲಿ ಚೆನ್ನಾಗಿ ತೋರಿಬರುವುವು.

ಪ್ರಾರಂಭದಿಂದ ಭಾರತದ ಯುದ್ಧದ ವರೆಗೆ ಪಂಪನ ದುರ್ಯೋಧನನು ಹೆಚ್ಚು ಕಡಿಮೆ ಮೂಲ ಭಾರತದ ದುರ್ಯೋಧನನಂತೆಯೇ ಇರುವನು. ದುರ್ಯೋಧನನ ದುರ್ಗುಣಗಳನ್ನು ಪಂಪನು ಆದಷ್ಟು ಮುಚ್ಚಿದ್ದರೂ ಮೂಲ ಭಾರತದಂತೆಯೇ ಇಲ್ಲಿಯೂ ದುರ್ಯೋಧನನಲ್ಲಿ ಒಂದು ವಿಧವಾದ ದ್ವೇಷ, ಮಾತ್ಸರ್ಯ, ಕುಯುಕ್ತಿ, ಅಧರ್ಮ ಪ್ರವರ್ತನೆ—ಇವುಗಳೆಲ್ಲವೂ ಕಂಡುಬರುವುವು. ಭಾರತ ಯುದ್ಧದಲ್ಲಿ ಅನೇಕ ವೀರರು ಮಡಿದ ಮೇಲೆ ಪಂಪನ ದುರ್ಯೋಧನನ ಪಾತ್ರವು ವ್ಯತ್ಯಸ್ತವಾಗುವುದು, ಆ ಪಾತ್ರದ ವ್ಯಕ್ತಿತ್ವವು ಹೊರಸೇರುವುದು. ಭಾರತ ಯುದ್ಧದಲ್ಲಿ ದುಶ್ಶಾಸನ, ಕರ್ಣ, ದ್ರೋಣ—ಇವರುಗಳ ವಧೆಯಾದ ಮೇಲೆ ಪಂಪನ ದುರ್ಯೋಧನನು ಸಂಜಯನೊಡನೆ ಯುದ್ಧರಂಗಕ್ಕೆ ಹೊರಡುವನು. ಆಗ ಮೊದಲು ಕರ್ಣನ ಮರಣ ವಾರ್ತೆಯನ್ನು ಕೇಳಿ ಮೂರ್ಛಿತನಾಗಿ ಎಚ್ಚತ್ತು ಅವನಿಗಾಗಿ ದುಃಖ ಪಡುವನು. ಈ ಸಂದರ್ಭದಲ್ಲಿ ಇವನ ಸ್ನೇಹದ ಉತ್ಕಟಾವಸ್ಥೆಯನ್ನು ನೋಡಿರಿ:—

ನೀನುಮಗಲ್ದೆಯಿನ್ನೆನಗೆ ಪೇೞ್ವರ್ ಪೆಱರಾರೆಸಗಾಸೆ ನಿನ್ನನಿ।
ನ್ನಾನುಮಗಲ್ದೆನೇ ಕೆಳೆಯ ಬೆನ್ನನೆ ಬಂದಪೆನಾಂತರಂ ಯಮ॥
ಸ್ಥಾನಮನೆಯ್ದುಸುತ್ತಿರ್ದುವೆ ದಂಡುಗಮೆಂತೆರ್ದೆ ಮುಟ್ಟೆ ಕೂರ್ತು ಪೇೞ್ವರ್।
ಮಾನಸವಾೞ್ತಿನಂಗ ವಿಷಯಾಧಿಪ ನೀಂ ಪೊಱಗಾಗೆ ಬಾೞ್ವೆನೇ॥

ಒಡಲೆರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕಮಿಾಗಳಾ ।
ನುಡಿ ಪುಸಿಯಾಯ್ತು ನಿನ್ನಸು ಕಿರೀಟಿಯ ಶಾತ ಶರಂಗಳಿಂದೆ ಪೋ ॥
ಪೊಡಮೆನಗಿನ್ನುಮಿಾಯೊಡಲೊಳಿರ್ದುದು ನಾಣಿಲಿ ಜೀವಮೆಂದೊಡಾ ।
ವೆಡೆಯೊಳೆ ನಿನ್ನೊಳೆನ್ನ ಕಡುಗೂರ್ಮೆಯುಮಱಿಕ್ಕೆಱಿಮುಂಗವಲ್ಲಭಾ ॥

ಅಱಿಯೆಂ ಸೋದರನೆಂದು ಧರ್ಮತನಯಂ ನಿರ್ವ್ಯಾಜದಿಂ ನಿನ್ನ ನಾ ।
ನಱಿವೆಂ ಮುನ್ನಱಿದಿರ್ದುಮೆನ್ನರಸ ನಾನೇಕಿತ್ತೆನಿಲ್ಲೇಕೆ ಪೇ ॥
ಱಿಱಿಪಲ್ಕೊಲ್ವೆನುಮಿಲ್ಲ ಕಾರ್ಯ ವಶದಿಂ ಕೂರ್ಪಂತೆವೋಲ್ ನಿನ್ನನಾಂ ।
ನೆಱಿ ಕೊಂದೆಂ ಮುಳಿಸಿಂದಮುಂಗನೃಪತೀ ಕೌಂತೇಯರೇಂ ಕೊಂದರೇ ॥

ಎಂದು ಕರ್ಣನ ಮರಣಕ್ಕಾಗಿ "ಬಾಯಱಿದು ಪಳಯಿಸುವನು".

ಅಷ್ಟರಲ್ಲಿ, ದುಃಖ ತಪ್ತನಾದ ಮಗನನ್ನು ನೋಡುವುದಕ್ಕಾಗಿ ಮಾತಾ ಪಿತೃಗಳಾದ ಧೃತರಾಷ್ಟ್ರ, ಗಾಂಧಾರಿಯರು ಬರುವುದನ್ನು ಕೇಳಿ ಅವರ ಮುಖವನ್ನು ನೋಡುವುದಕ್ಕೆ ನಾಚಿ, "ಸಂಧಿಯನೊಲ್ಲುದೆ ಕಜ್ಜವಿಾಗಳೆಂಬವರ್ಗಳ ಮಾತು ಗೇಳ್ವನಿತನಿನ್ನೆನಗಂ ಬಿದಿ ಮಾಡಿತಾಗದೇ" ಎಂದು ಹಲುಬುತ್ತಿರುವಷ್ಟರಲ್ಲಿಯೇ ಅಲ್ಲಿಗೆ ಬಂದ ತಾಯಿ ತಂದೆಗಳಿಗೆ ದುರ್ಯೋಧನನು ವಿನಯ ಪೂರ್ವಕವಾಗಿ ನಮಸ್ಕಾರ ಮಾಡುವನು. ತಾಯಿ ತಂದೆಗಳು ಅವನನ್ನು ಹರಸಿ, 'ನೀನಿದ್ದರೆ ಉಳಿದವರೆಲ್ಲ ಇದ್ದ ಹಾಗೆಯೇ; ಆದುದರಿಂದ ದಯವಿಟ್ಟು ಪಾಂಡವರಲ್ಲಿ ಸಂಧಿಮಾಡಿಕೊಂಡು ಸುಖವಾಗಿ ಬಾಳು' ಎಂದು ಹೇಳುವರು. ಅದನ್ನು ಕೇಳಿ ದುರ್ಯೋಧನನು, 'ನನ್ನ ನೂರು ಜನ ತಮ್ಮಂದಿರನ್ನು ಕಳೆದುಕೊಂಡು ನಾನು ಯಾರಿಗಾಗಿ ಸಂಧಿ ಮಾಡಿಕೊಳ್ಳಬೇಕು? ಹಣೆಯಲ್ಲಿ ಬರೆದುದಾಗಲಿ' ಎಂದು ಹೇಳುವ ಈ ಪದ್ಯಗಳನ್ನು ಓದಿ ನೋಡಿರಿ:—

ತಲೆದೋಱಿಲ್ಕಣಮುಳ್ಕಿ ವೈರಿ ನೆಲನಂ ಪೋ ಪೊಕ್ಕನೆಂಬನ್ನೆಗಂ ।
ಚಲದಿಂದೆಯ್ದುವ ಕರ್ಣನುಗ್ರ ರಥಮುಂ ಮುಂ ನುಂಗಿದೀ ದ್ರೋಹಿಯೊಳ್ ॥
ನೆಲದೊಳ್ ಪಂಬಲೆ ಮತ್ತಮೆನ್ನ ಮುಳಿಸಿಂಗಾಂ ಕಾದುವೆಂ ಪೇಸಿದೆಂ ।
ನೆಲೆಗಂಡಂತೆ ನೆಲಕ್ಕೆ ಗೆಲ್ದೊಡಮದಂ ಚೀಃ ಮತ್ತಮಾನಾಳ್ವೆನೇ ॥

ತೊಡರದೆ ನೀಮುಮಾ ನೆಗೞ್ದ ಪಾಂಡುವುಮೊಂದಿಯೆ ಬೞ್ದಿರೊಂದೊಡಂ ।
ಬಡು ನಿಮಗಿಲ್ಲ ಜೂದೆ ನೆವಮಾಗಿರೆ ಮೂಲಿಗನಾದೆನಾನೆ ಪೂ ॥
ಣ್ದಿಡುವಗೆನ್ನೊಳಾದ ಕಿಸುರೆನ್ನೊಡವೋಪುದಿದೊಳ್ಳಿತೆನ್ನ ಪಿಂ ।
ಬಡಿನೊಳೆ ನಣ್ಪಿನಯ್ಯ ನಿಮಗಂ ಮಗನಲ್ಲನೆ ಧರ್ಮನಂದನಂ ॥

ತಪ್ಪದು ಕರ್ಣನಿಂ ಬೞಿಕೆ ಸಂಧಿಯ ಮಾತೆನಗಾತನಿಲ್ಲದೆಂ ।
ತಪ್ಪದೊ ರಾಜ್ಯಮಿಾ ಗದೆಯುಮಿಾ ಭುಜದಂಡಮುಮುಳ್ಳಿನಂ ಕೊನ ॥
ರ್ತಪ್ಪುದೆ ಪೇೞಿಮೆನ್ನ ಪಗೆ ನೋವಱಿದಂಜುವುದೇಕೆ ನಿಂದರೇಂ ।
ತಪ್ಪುದೊ ಪೇೞಿಮಯ್ಯ ನೊಸಲೊಳ್ ಬರೆದಕ್ಕರಮಾ ವಿಧಾತ್ರನಾ ॥

ಎಂದು ತಂದೆ ತಾಯಿಗಳಿಗೆ ಹೇಳಿ ನಮಸ್ಕರಿಸಿ ಸಮಾಧಾನ ಮಾಡಿ ಅವರನ್ನು ಕಳುಹಿಸಿ, ತಾನು ಮಹಾ ಸತ್ತ್ವನಾದುದರಿಂದ ಮನಸ್ಸಿಗೆ ಶಾಂತಿಯನ್ನು ತಂದುಕೊಂಡು ಶಲ್ಯನಿಗೆ ಸೇನಾಧಿಪತ್ಯಾಭಿಷೇಕವನ್ನು ಮಾಡಿ ಯುದ್ಧಕ್ಕೆ ಕಳುಹಿಸುವನು. ಶಲ್ಯನು ಯುದ್ಧದಲ್ಲಿ ಮಡಿಯುವನು. ಈ ಸಂದರ್ಭದಲ್ಲಿ ವ್ಯಾಸ ಭಾರತದ ದುರ್ಯೋಧನನು ಪಲಾಯನದಲ್ಲಿ ಮನಸ್ಸು ಮಾಡಿ ಮಡುವನ್ನು ಕುರಿತು ಓಡುವನು; ಆದರೆ ಪಂಪನ ದುರ್ಯೋಧನನು, ಮದ್ರನಾಥನು ಭಸ್ಮೀಭೂತನಾದುದನ್ನು ಕೇಳಿ:—

ಆ ದೊರೆಯರ್ ನದೀಜ ಘಟಸಂಭವ ಸೂರ್ಯ ತನೂಜ ಮದ್ರ ರಾ ।
ಜಾದಿ ಮಹೀಭುಜರ್ ಧುರದೊಳೆನ್ನಯ ದೂಸಱಿನಱಿಗ್ಗಿ ಮಱಿಗ್ಗಿದಂ ।
ತಾದರಿದೊಂದೆ ಮೆಯ್ಯುೞಿದುದಿನ್ನೆನಗಾವುದೊ ಮೆಳ್ಪಡೆಯ್ದೆ ಮುಂ ॥
ದಾದ ವಿರೋಧಿ ಸಾಧನಮನೆನ್ನ ಗದಾಶನಿಯಿಂದುರುಳ್ಚುವೆಂ ॥

ಎಂದು 'ನಿಜ ಭುಜ ವಿಕ್ರಮೈಕ ಸಹಾಯಕನಾಗಿ ಗದೆಯಂ ಕೊಂಡು ಸಂಗ್ರಾಮಕ್ಕೆ ಹೊರಟು ಏಕಾಕಿಯೆಂದೇಳಿಸಿದ ಸಂಜಯನಂ ನೋಡಿ ಮುನಿದು' ನೆಣದ ಪಳ್ಳಂಗಳಂ ಪಾಯ್ದು ನೆತ್ತರ ತೊಱೆಗಳಂ ದಾಂಟಿ ಯುದ್ಧರಂಗದಲ್ಲಿ ಹೋಗುತ್ತಿರಲಾಗಿ, ಮರುಳುಗಳು ತನ್ನನ್ನು ಮರುಳೆಂದು ಕರೆಯಲು, ಅದಕ್ಕೆ ಮುಗುಳ್ನಗೆ ನಕ್ಕು, 'ಎನ್ನಂ ವಿಧಾತ್ರಂ ಮರುಳ್ಮಾಡಿದ ಕಾರಣದಿಂದಂ ಈ ಮರುಳ ಕಣ್ಗಾಂ ಮರುಳಾಗಿ ತೋಱಿದೆನೆಂದು' ನೊಂದುಕೊಂಡು, ಮುಂದೆ, "ಧೃಷ್ಟದ್ಯುಮ್ನ ಕಚ ಗ್ರಹ ವಿಲುಳಿತ ಮೌಳಿಯುಂ ತದೀಯ ಕೌಕ್ಷೇಯಕ ಧಾರಾ ವಿದಾರಿತ ಶರೀರನುಮಾಗಿ ಬಿೞ್ದಿರ್ದ ಶರಾಚಾರ್ಯರಂ" ಕಾಣುವನು. ತತ್ಕ್ಷಣವೇ ಇವನ ಗುರು ಭಕ್ತಿಯ ಎಲ್ಲೆಯು ಮಿತಿಮೀರಿ:—

ನೆಗೞ್ದುದು ಬಿಲ್ಲ ಬಿನ್ನಣಮಿಳಾ ವಳಯಕ್ಕೆ ಸಮಸ್ತ ಧಾತ್ರಿ ಕೆ ।
ಯ್ಮುಗಿವುದು ನಿಮ್ಮದೊಂದೆ ಪೆಸರ್ಗೇಳ್ವೊಡೆ ನಿಮ್ಮ ಸರಲ್ಗೆ ದೇವರುಂ ॥
ಸುಗಿವರಯೋನಿ ಸಂಭವರಿರೆನ್ನಯ ದೂಸಱಿನೆನ್ನ ಕರ್ಮದಿಂ ।
ಪಗೆವರಿನಕ್ಕಟಾ ನಿಮಗಮಾಯಿರವಾದುದೆ ಕುಂಭಸಂಭವಾ ॥

ಎಂದು ಅವರ ಪರಾಕ್ರಮವನ್ನು ಕೊಂಡಾಡಿ, ತನ್ನ ನೈಜವಾದ ಗುರು ಭಕ್ತಿಯನ್ನು ತೋರಿಸಿ ಅಂತಹ ಪರಾಕ್ರಮಿಗಳ ನಾಶಕ್ಕೆ ತನ್ನ ದುರ್ನಯ, ಕೆಟ್ಟ ನಡತೆ—ಇವೇ ಕಾರಣವೆಂದು ತನ್ನನ್ನೇ ಹಳಿದುಕೊಂಡು, ಗುರುವಿನ ಪಾದ ಕಮಲಗಳ ಮೇಲೆ ತಲೆಯನ್ನಿಟ್ಟು ನಮಸ್ಕರಿಸುವನು.

ಮುಂದೆ, "ವೃಕೋದರನಿಂ ನಿಶ್ಶೇಷ ಪೀತ ರುಧಿರನಪ್ಪ ದುಶ್ಶಾಸನನಂ ಕಂಡು", "ಸೋದರನಱಿಲೊಳ್ ಕಣ್ಣ ನೀರ್ಗಳಂ ಸುರಿದು"—

ನಿನ್ನಂ ಕೊಂದನ ಬಸಿಱಿಂ ।
ನಿನ್ನಂ ತೆಗೆಯದೆಯುಮವನ ಕರುಳಂ ಪರ್ದಿಂ ॥
ಮುನ್ನುಂಗಿಸಿ ನೋಡದೆಯುಂ ।
ಮುನ್ನಮೆ ಯುವರಾಜ ನಿನ್ನನಾಂ ನೋಡಿದೆನೇ ॥

ಎಂದು ದುಶ್ಶಾಸನನ ಸಾವಿಗಾಗಿ ಮರುಗುವನು. ಇಂತಹ ಭ್ರಾತೃ ಪ್ರೇಮವುಳ್ಳ ದುರ್ಯೋಧನನನ್ನು ಮಹಾನುಭಾವನೆನ್ನುವುದರಲ್ಲಿ ಕುಂದೇನು!

ಹೀಗೆಯೇ, ಮುಂದೆ ಹೋಗುತ್ತ ರಣ ರಂಗದಲ್ಲಿ ವೃಷಸೇನನ ದೇಹವನ್ನು ಕಂಡು ಕರ್ಣನನ್ನು ನೆನೆದು, ಅವನ ಶರೀರವನ್ನು ಹುಡುಕಿ ಆ ಕಳೇಬರಮಂ ನೋಡಿ ಸೈರಿಸಲಾರದೆ ಮೂರ್ಛೆ ಹೋಗಿ ಪುನಃ ಚೇತರಿಸಿಕೊಂಡು :—

ನೆಲನಂ ಕೊಟ್ಟನಿನಾತ್ಮಜಾತನೆನಗಾಂ ತಕ್ಕೂರ್ಮೆಯಿಂದಂ ಜಳಾಂ ।
ಜಲಿಯುಂ ಕೊಟ್ಟೆನುಮಿಲ್ಲ ಸೂರ್ಯತನಯುಂ ತೇಜೋಗ್ನಿಯಿಂದಂ ದ್ವಿಷ ॥
ದ್ಬಲಮಂ ಸುಟ್ಟನುದಾತ್ತ ಪುಣ್ಯನವನಂ ಚೈತಾಗ್ನಿಯಿಂ ಸುಟ್ಟೆನಿ ।
ಲ್ಲೊಲವಿಂದಿಂತೆರ್ದೆ ಮುಟ್ಟಿ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ ॥

ಎಂದು ಎದೆದೆರೆದು ದುಃಖಿಸಿ, ಬಹಳ ಕಷ್ಟದಿಂದ, ಶರ ಶಯ್ಯಾಗತರಾಗಿದ್ದ ಭೀಷ್ಮರಲ್ಲಿಗೆ ಹೋಗಲು, ಅವರು ದುರ್ಯೋಧನನು ಬಂದ ಇರವಿನಿಂದಲೇ ಸಮರ ವೃತ್ತಾಂತವನ್ನು ತಿಳಿದುಕೊಂಡು, "ನಿನಗಮೀಯಿರವಾದುದೆ" ಎಂದು ದುಃಖಿಸಿ, "ನಿನ್ನ ಗೆಯ್ಪ ನಿಯೋಗಮಾವುದೇಗೆಯ್ಯಲ್ ಬಗೆದಪೆಯೆನೆ" ಅರಿನೃಪರನ್ನು ತರಿದೊಟ್ಟುವುದಲ್ಲದೆ ಮತ್ತೇನು? "ಭವತ್ಪದ ಸರೋಜಮನಾಂ ಬಲಗೊಂಡು ಮತ್ತಮಾಜಿಗೆ ನಡೆಯಲ್ಕೆ ಬಂದೆಂ" ಎಂದು ಹೇಳಿದ ದುರ್ಯೋಧನನ "ಕಲಿತನದಳವಿಂಗೆ ಮನಂಗೊಂಡು, ಮಗನೆ! ನಿನಗಪ್ಪೊಡೆ ದೈವಂ ಪ್ರತಿಕೂಲಂ, ಮೈತ್ರೇಯರ್ ಕೊಟ್ಟೂರು ಭಂಗ ಶಾಪಮನಿವಾರಿತಮೆನ್ನೀ ಪ್ರಾಣಮುಳ್ಳಂತೆ ಸಂಧಿಯಂ ಮಾಡಿ ವಸುಂಧರೆಯಂ ಕೊಂಡು ಕಾಲಮಂ ಕಜ್ಜಮುಮನಱಿದು ಬೞಿಯಂ ನಿನ್ನ ನೆಗೞ್ವುದಂ ನೆಗೞ್ವುದೆಂದು" ನುಡಿದ ಪಿತಾಮಹನ ನುಡಿಗಳಿಗೆ ಕುರುರಾಜನು ಹೀಗೆನ್ನುವನು :—

ಶರ ಶಯ್ಯಾಗ್ರದೊಳಿಂತು ನೀಮಿರೆ ಘಟಪ್ರೋದ್ಭೂತನಂತಾಗೆ ವಾ ।
ಸರನಾಥಾತ್ಮಜನಂತು ಸಾಯೆ ರಣದೊಳ್ ದುಶ್ಶಾಸನಂ ತದ್ವೃಕೋ: ॥
ದರನಿಂದಂತೞಿದಳ್ಕಿ ಸೈರಿಸಿಯುಮಾಂ ಸಂಧಾನಮಂ ವೈರಿ ಭೂಪ ।
ರೊಳಿಂ ಸಂಧಿಸಿ ಪೇೞಿಮಾರ್ಗೆ ಮೆಱೆವೆಂ ಸಂಪತ್ತುಮಂ ಶ್ರೀಯುಮಂ ॥

ಇದನ್ನು ಕೇಳಿ ಭೀಷ್ಮರು, "ನೀನುಮೆಂತುಂ ಕಾದಿಯಲ್ಲದಿರೆಯಪ್ಪೊಡಿಂದಿನೊಂದು ದಿವಸಮನೆನ್ನ ಪೇೞ್ವ ಜಳಮಂತ್ರೋಪದೇಶಮಂ ಕೆಯ್ಕೊಂಡು ವೈಶಂಪಾಯನ ಸರೋವರದೊಳ್ ಮುೞುಗಿ ನಿನ್ನವಸರಕ್ಕೆ ಬಂದು ಕೂಡುವ ಬಲದೇವನುಮಂ ನಿನ್ನಿರ್ದೆಡೆಯನಱಿಯದೞಿಸುವಶ್ವತ್ಥಾಮ ಕೃಪ ಕೃತವರ್ಮರುಮಂ ಕೂಡಿಕೊಂಡು ಪಗೆವರಂ ನಾಳೆ ಕಾದಿ ಗೆಲ್ವುದೆಂದು ಹಿತೋಪದೇಶಂ ಬೆರಸು ಜಳಮಂತ್ರೋಪದೇಶಮಂ" ಮಾಡಲು, ಅವರ ಮಾತಿಗಾಗಿ ಬಹಳ ಕಷ್ಟದಿಂದ ವೈಶಂಪಾಯನ ಸರೋವರದಲ್ಲಿ ಹೋಗಿ ಮುಳುಗಿಕೊಳ್ಳುವನು. ಪಾಂಡವರ ಗರ್ಜನೆಯನ್ನು ಕೇಳಿ ಹೆದರಿ ಪಲಾಯನ ಮಾಡಲು ಯತ್ನಿಸಿದ ವ್ಯಾಸ ಭಾರತದ ದುರ್ಯೋಧನನಿಗೂ ಪಂಪನ ದುರ್ಯೋಧನನಿಗೂ ಎಷ್ಟು ಅಂತರವಿರುವುದು ನೋಡಿರಿ!

ಇಷ್ಟರಲ್ಲಿ ದುರ್ಯೋಧನನನ್ನು ಅರಸುತ್ತ ಭೀಮನು ಬರುವನು. ಕಿರಾತರು ದುರ್ಯೋಧನನ ಹಜ್ಜೆಯ ಗುರುತನ್ನು ತೋರಿಸಲು, ಪಾಂಡವರು ಅಲ್ಲಿಗೆ ಹೋಗಿ ದುರ್ಯೋಧನನನ್ನು ಕೊಳದಿಂದ ಹೊರಗೆ ಹೊರಡಿಸುವುದಕ್ಕಾಗಿ ಮರ್ಮೋದ್ಘಾಟಕವಾಗಿ ಮಾತನಾಡುವರು. ಭೀಮನು, "ಎನ್ನ ಸರಂಗೇಳ್ದಲ್ಲದೆ ಈ ಬೂತು ಪೊಱಮಡುವನಲ್ಲಂ, ಈತಂಗಾನೆ ಜಲ್ಲೆನುಸಿರದಿರಿಮೆಂದು ಸಕಳ ದಿಗ್ವಳಯ ಭರಿತ ಮಹಾ ಸಿಂಹನಾದದಿಂದೆ"—

ಕಿಱಿಯಂದಿಂದಿತ್ತ ದುರ್ಯೋಧನನೆನಿಸಿದ ವಿಕ್ರಾಂತಮೇನಾದುದೆಱ್ತಂ ।
ದಿಱಿವುರ್ಕೆಲ್ಲಿತ್ತೊ ಪಾಂಚಾಳಿಯನೆಱಿತಿವದಟೇನಾದುದೋ ಗಂಡ ಪೇಱಿರ್ ಪೊ ।
ಚ್ಚಱಿನಂತಾ ಮಾತುನಿಂತೀಯಿರವೆನೆ ನಗೆಯಂ ಮಾಡಿದೈ ಬಂದನೀತಂ ।
ಪೆಱಿನಲ್ಲಂ ದುರ್ಜಯಂ ಕೌರವ ಕುಳನಳಿನೀ ಕುಂಜರಂ ಭೀಮಸೇನಂ ॥

ಕುಡಿದೆಂ ದುಶ್ಶಾಸನೋರಸ್ಥಳ ವಿಗಳದಸೃಗ್ವಾರಿಯಂ ಕಂಡದಂ ಮು ।
ನ್ನಡೆ ನೋಡುತ್ತಳ್ಕಿ ಮಾಣ್ದೈ ನಿನಗಿಱಿವದಟಂ ಕೊಟ್ಟರಾರಿಂದು ಮಾಣ ॥
ಲ್ಕಿಡೆಯುಂಟೇ ಸಿಲ್ಕಿದೈ ಪೋ ಪೊಱಮಡು ಕೊಳದಿಂ ಸತ್ತೊಡಂ ಪುಟ್ಟ ನೀನೀ ।
ಗಡೆ ದಲ್ ಕೊಂದಪ್ಪೆನೆನ್ನಂ ಮುಳಿಯಿಸಿ ನಿನಗಿಂ ದ್ರೋಹ ಬಾಱ್ವಾಸೆಯುಂಟೇ ॥

ಎಂದು ಗಜಱೀ ಗರ್ಜಿಸಿದ ಭೀಮಸೇನನ ಆರ್ಭಟವನ್ನು ಕೇಳಿ ಸೈರಿಸಲಾರದೆ 'ಕಿಡುಗುಂ ಮಚ್ಚೌರ್ಯ್ಯಂ ಎಂದು ಉದ್ಧತಂ ರೌದ್ರ ಗದಾದಂಡಮುಂ ಪ್ರಚಂಡಮುಂ ಆಗಿ ಸೆರಗಿಲ್ಲದೆ ಕೊಳದಿಂ ಪೊರಮಟ್ಟು' ಬರುವನು. ಅವನನ್ನು ನೋಡಿ ಧರ್ಮನಂದನನು, 'ಈಗಲೂ ಈ ಭೂಮಿಯನ್ನು ಭಾಗಮಾಡಿಕೊಂಡು ಸ್ನೇಹದಿಂದಿರೋಣ' ಎನ್ನುವನು. ಛಲದಂಕಮಲ್ಲನಾದ, ಅಚಲಿತ ಮನಸ್ಕನಾದ ದುರ್ಯೋಧನನು ಇದಕ್ಕೊಪ್ಪುವನೇ? ತತ್‌ಕ್ಷಣವೇ ರಾಜರಾಜನು, 'ದುಶ್ಶಾಸನನನ್ನು ಕೊಂದ ಭೀಮನು ಇನ್ನೂ ಜೀವದಿಂದಿರುವಾಗ ಸಂಧಿಮಾಡಲಾದೀತೇ? ಯುದ್ಧವನ್ನೇ ಕೈಗೆತ್ತಿಕೊಂಡಿರುವೆನು' ಎಂದು ಹೇಳುವನು. ಅಷ್ಟರಲ್ಲಿ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಬಲದೇವನು ಬಂದು, ತನಗೆ ನಮಸ್ಕಾರ ಮಾಡಿದ ದುರ್ಯೋಧನನನ್ನಾಶೀರ್ವದಿಸಿ ಕೌರವನನ್ನು ಈ ಸ್ಥಿತಿಗೆ ತಂದ ಮುರಾಂತಕನನ್ನೂ ಪಾಂಡವರನ್ನೂ ನೋಡಿ ಕೋಪಿಸಿಕೊಂಡು, ದುರ್ಯೋಧನನನ್ನು ಕುರಿತು, "ನೀಂ ಮರುಳ್ತನಮನೇಕೆ ಮಾಡಿದೆ?" ಎಂದು ಕೇಳಲು ಅವನು ಹೀಗೆಂದು ಉತ್ತರಗೊಡುವನು:—

ಹರಿಯೆಂದಂದಮದಂತೆ ಪಾಂಡುತನಯರ್ ನಿರ್ದೋಷಿಗಳ್ ತಥ್ಯಮಿಂ ।
ತು ರಣಸ್ಥಾನದೊಳಿನ್ನೆರಱ್ನುಡಿವೆನೇ ಮದ್ಬಂಧು ಶೋಕಾಗ್ನಿಯಿಂ ॥
ದುರಿದಪ್ಪಿಂ ತೊಡರ್ದೆನ್ನನಿಂ ಬಿಡು ವಿರೋಧಿಕ್ಷ್ಮಾಪರೆನ್ನೀ ಗದಾ ।
ಪರಿಘಾ ಘಾತದಿನಱ್ಗಿ ತಱ್ಗಿ ಮಡಿದಿನ್ನಱ್ಕಾಡದೇಂ ಪೋಪರೇ ॥

ಇದು ಎಂತಹ ಮಾತು! ಮಾನಮಾನ್ಯರ ಬಾಯಲ್ಲಿ ಬರತಕ್ಕವುಗಳೇ?

ಮುಂದೆ ಗದಾಯುದ್ಧಕ್ಕೆ ಪ್ರಾರಂಭವಾಗುವುದು: ಭೀಮ ದುರ್ಯೋಧನರಿಬ್ಬರೂ ಸಿಡಿಲೆರಗುವಂತೆ ಎರಗಿ ಯುದ್ಧಮಾಡುವರು. ಭೀಮನು ದುರ್ಯೋಧನನ ಗದಾ ಪ್ರಹಾರದಿಂದ ಅಚೇತನನಾಗಿ ಬೀಳುವನು. ಈ ಸಮಯದಲ್ಲಿ ದುರ್ಯೋಧನನು ಅವನನ್ನು ಹೊಡೆದು ಕೊಂದುಹಾಕಬಹುದಾಗಿದ್ದಿತು. ಆದರೆ ಪಂಪನ ಕೌರವನು ಧರ್ಮಿಷ್ಠ, ಅಧರ್ಮಯುದ್ಧದಲ್ಲಿ ಕೈಹಾಕಲು ಅವನಿಗೆ ಮನಸ್ಸು ಬಾರದು. ಆದುದರಿಂದ, 'ಬಿದ್ದಿನನೆರೆಯೆನೆಂದು ಪವಮಾನ ಮಾರ್ಗದೊಳ್ ಅಲ್ಪಾಂತರದೊಳ್ ಗದೆಯಂ ಬೀಸುವನು.' ಗದೆಯ ಗಾಳಿಯಿಂದ ಎಚ್ಚತ್ತ ಭೀಮನು ಪುನಃ ಯುದ್ಧಕ್ಕೆ ಪ್ರಾರಂಭ ಮಾಡಿ ಕುರು ರಾಜನ ಊರುಗಳೆರಡನ್ನೂ ಒಡೆಯುವನು; ಧಾರ್ತರಾಷ್ಟ್ರನು ಇಳಾತಳದಲ್ಲಿ ಕೆಡೆಯುವನು. ಈ ತೆರನಾದ ಸೋಲು ಸೋಲಲ್ಲ; ನಿಜವಾಗಿಯೂ ಒಂದು ವಿಧವಾದ ಜಯವೇ. ಈ ಮರಣವು ಅವಮಾನಕರವಾದುದಲ್ಲ, ಕೀರ್ತಿಕರ. ಹೇಡಿಯಂತೆ ಸಂಧಿಮಾಡಿಕೊಂಡು ತನುಜಾನುಜರ ಸಾವಿನ ಮನಃಕ್ಷತದಿಂದ ಸದಾ ಕೊರಗುತ್ತ ಜೀವಿಸುವುದಕ್ಕಿಂತ ವೀರ ಕ್ಷತ್ರಿಯನಂತೆ ಅಭಿಮಾನವನ್ನೇ, ಛಲವನ್ನೇ, ಹಗೆಯನ್ನೇ ಮುಂದಿಟ್ಟುಕೊಂಡು ಧೈರ್ಯದಿಂದ ಕಾದಿ ಸಾಯುವುದು ಎಷ್ಟೋ ಮೇಲು. ಹೀಗೆ ಸತ್ತವನು ಸರ್ವರಿಂದಲೂ ಶ್ಲಾಘಿಸಿಕೊಳ್ಳುವುದಕ್ಕೆ ಅರ್ಹನು. ಅದಕ್ಕಾಗಿಯೇ ಪಂಪನು ಅಸಹಾಯ ಶೂರನಾದ ರಾಜರಾಜನ ಮಹತ್ತ್ವವನ್ನು ಹೀಗೆಂದು ವರ್ಣಿಸಿರುವನು:—

ನುಡಿದುದನೆಯ್ದೆ ತುತ್ತ ತುದಿಯೆಯ್ದುವಿನಂ ನುಡಿದಂ ವಲಂ ಚಲಂ ।
ಬಿಡಿದುದನೆಯ್ದೆ ಮುಂ ಪಿಡಿದುದಂ ಪಿಡಿದಂ ಸಲೆ ಪೂಣ್ದು ಪೂಣ್ಕೆ ನೇ ॥
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ ।
ಲ್ಪಡುವಿನಮುಣ್ಮುಗುಂದನೆ ದಲೇನಭಿಮಾನ ಧನಂ ಸುಯೋಧನಂ ॥

ಮೇಲಿನ ದುರ್ಯೋಧನನ ಪಾತ್ರ ವಿವರಣೆಯಿಂದಲೇ ಪಂಪನ ಅನ್ಯಾದೃಶವಾದ ಪಾತ್ರ ರಚನಾ ಕೌಶಲವು ಸ್ಪಷ್ಟವಾಗುವುದು. ಅವನ ದುರ್ಯೋಧನನ ಪಾತ್ರವೊಂದಲ್ಲ; ಎಲ್ಲವೂ ಹೀಗೆಯೇ ಬಹಳ ತೇಜಸ್ಸಿನಿಂದ ತುಂಬಿರುವುದು. ಕರ್ಣನ ಪಾತ್ರವೂ ಬಹಳ ಸ್ವಾರಸ್ಯವಾಗಿದೆ. ಶಿಶುಪಾಲನ ಪಾತ್ರದಲ್ಲಿ ಪೂರ್ಣವಾದ ವ್ಯಕ್ತಿತ್ವವು ಕಾಣುವುದು. ರಾಜಸೂಯ ಯಾಗದ ಮಧ್ಯದಲ್ಲಿ ಅವನು ಕೃಷ್ಣನನ್ನೂ ಭೀಷ್ಮನನ್ನೂ ಹೀಯಾಳಿಸುತ್ತಿದ್ದರೆ ಎಲ್ಲರೂ ಸ್ತಬ್ಧರಾಗುವರು.

ಹೀಗೆ ಎಲ್ಲಾ ದೃಷ್ಟಿಯಿಂದಲೂ ಪಂಪನು ಪ್ರತಿಭಾಶಾಲಿಯಾಗಿದ್ದುದರಿಂದಲೇ ಅವನ ತರುವಾಯ ಬಂದ ಕವಿಗಳಿಗೆ ಅವನು ಪ್ರೇರಕನಾದುದು. ಪಂಪನ ಗ್ರಂಥವನ್ನು ಹೆಚ್ಚಾಗಿ ಪಠನ ಮಾಡಿ ಅದರ ಆಧಾರದ ಮೇಲೆಯೇ ಗ್ರಂಥವನ್ನು ರಚಿಸಿದವನು ರನ್ನ ಮಹಾಕವಿ. ಇವನ 'ಕವಿಚಕ್ರವರ್ತಿ' ಎಂಬ ಬಿರುದಿಗೆ ಪಂಪನೂ ಬಹುಮಟ್ಟಿಗೆ ಕಾರಣನಾಗಿರುವನು. ಕವಿ ರನ್ನನಿಗೆ ಸಲ್ಲತಕ್ಕ ಕೀರ್ತಿಯಲ್ಲಿ ಬಹಳ ಭಾಗ ಪಂಪನಿಗೆ ಸಲ್ಲತಕ್ಕದ್ದು. ರನ್ನನ 'ಗದಾಯುದ್ಧ'ವು ಪಂಪ ಭಾರತದ ಹದಿಮೂರನೆಯ ಆಶ್ವಾಸದ ೧೦೮ ಪದ್ಯಗಳಲ್ಲಿ ಶಲ್ಯವಧೆಯ ವಿಚಾರವಾದ ೨೮ ಪದ್ಯಗಳನ್ನು ಬಿಟ್ಟು

ಉಳಿದ ಲಂ ಪದ್ಯಗಳ ಆಲಂಬನೆಯಿಂದಾಗಿದೆ. ಗದಾ ಯುದ್ಧದ ಕಥಾ ವಿಷಯ, ವರ್ಣನೆ, ಶೈಲಿ—ಇವುಗಳಲ್ಲಿ ಅನೇಕ ಭಾಗವು ಪಂಪ ಭಾರತದ್ದಾಗಿರುತ್ತದೆ. ಪಂಪನು ಒಂದೆರಡು ಪದ್ಯಗಳಲ್ಲಿ ವರ್ಣಿಸುವುದನ್ನು ರನ್ನನು ೧೦–೧೨ ಪದ್ಯಗಳಲ್ಲಿ ವರ್ಣಿಸುತ್ತಾನೆ; ಇಲ್ಲವೆ, ವಿಸ್ತಾರವಾಗಿರುವುದನ್ನು ಸಂದರ್ಭಾನುಸಾರ ಕಡಿಮೆಮಾಡುತ್ತಾನೆ. ಉದಾಹರಣೆಗಾಗಿ ಕೆಲವು ವಿಷಯಗಳನ್ನು ನೋಡಬಹುದು: ಗದಾಯುದ್ಧದಲ್ಲಿ ೩೨ನೆಯ ಪುಟದಿಂದ ನವಮಾಶ್ವಾಸಾಂತದ ವರೆಗೆ ೧೧೭ನೆಯ ಪುಟದ ವರೆಗಿರುವ ಭಾಗವು ಅಕ್ಷರಶಃ ಪಂಪ ಭಾರತದ ೧೩ನೆಯ ಆಶ್ವಾಸದ ಅನುವಾದವಾಗಿದೆ. ಗದಾ ಯುದ್ಧದ ದಶಮಾಶ್ವಾಸವು ಪಂಪ ಭಾರತದ ೧೪ನೆಯ ಆಶ್ವಾಸದ ೯ ಪದ್ಯಗಳ ಅನುವಾದವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ, ರನ್ನನು ತನ್ನ ಪೋಷಕನಾದ ಚಾಳುಕ್ಯ ಚಕ್ರವರ್ತಿಯನ್ನು ಕೊಂಡಾಡುವುದಕ್ಕಾಗಿ ಯಾವುದೋ ಒಂದು ಕಾಲದಲ್ಲಿ ಪಂಪ ಭಾರತದ ೧೩–೧೪ನೆಯ ಆಶ್ವಾಸಗಳನ್ನು ತೆಗೆದುಕೊಂಡು ಅದಕ್ಕೆ ಬೇರೆ ಹೆಸರು ಕೊಟ್ಟು, ಅಲ್ಲಲ್ಲಿ ಮಾರ್ಪಡಿಸಿ ಬಹು ಭಾಗ ಪಂಪ ಭಾರತದ ಮಾತುಗಳನ್ನೇ ಉಪಯೋಗಿಸಿಕೊಂಡು ಗದಾಯುದ್ಧವನ್ನು ಬರೆದಿರುವನೆಂದು ಹೇಳಬಹುದು. ಆದುದರಿಂದ ರನ್ನನು ಪಂಪನಿಗೆ ಚಿರ ಋಣಿಯಾಗಿರುವನು.

ಕೊನೆಯಲ್ಲಿ, ಈ ಪ್ರಬಂಧವನ್ನು ಮುಗಿಸುವುದಕ್ಕೆ ಮೊದಲು, ಪಂಪನ ದೇಶಾಭಿಮಾನದ ವಿಷಯವಾಗಿ ಒಂದು ಮಾತನ್ನು ಹೇಳುವುದಾವಶ್ಯಕ. ಆಂಗ್ಲ ಭಾಷೆಯ ಗದ್ಯ ಗ್ರಂಥಕಾರರಲ್ಲಿ ಉದ್ದಾಮನಾದ 'ಮಯರ್ಸ್' ಎಂಬವನು 'ವರ್ಡ್ಸ್‌ವರ್ತ್' ಎಂಬ ಕವಿಯ ಜೀವನ ಚರಿತ್ರೆಯನ್ನು ಬರೆಯುತ್ತ, ಅವನ ದೇಶಾಭಿಮಾನವನ್ನು ಕುರಿತು ಚರ್ಚಿಸುವಾಗ ಹೇಳುವುದೇನೆಂದರೆ—'ಸ್ವದೇಶದ ಹಿತಕ್ಕಾಗಿಯೂ ಏಳ್ಗೆಗಾಗಿಯೂ ಆತ್ಮವನ್ನರ್ಪಿಸಿ ಹೋರಾಡುವ ವೀರರು ಹೇಗೆ ದೇಶಾಭಿಮಾನಿಗಳೋ ಹಾಗೆಯೇ ಕವಿಯೂ ಕೂಡ ಅಂತಹ ದೇಶಾಭಿಮಾನಿಯೆಂದು ಕರೆಯಿಸಿಕೊಳ್ಳಲರ್ಹನು. ಇವನು ಕವಚವನ್ನು ಧರಿಸಿ ಬಿಲ್ಲು ಬಾಣಗಳನ್ನು ಹಿಡಿದು ರಥವನ್ನೇರಿ ಯುದ್ಧಾಂಗಣದಲ್ಲಿ ವೈರಿಗಳೊಡನೆ ಯುದ್ಧ ಮಾಡುವ ಆವಶ್ಯಕವಿಲ್ಲ. ಕವಿಯಾದವನು, ದೇಶಕ್ಕಾಗಿ ಹೊಡೆದಾಡಿ ಮಡಿದ ದೇಶಭಕ್ತರ ಸಾಹಸ ಕಾರ್ಯಗಳನ್ನು ತನ್ನಲ್ಲಿರುವ ಶಕ್ತಿಯಿಂದ ಗ್ರಂಥ ರೂಪವಾಗಿ ಚಿರ ಸ್ಥಾಯಿಯಾಗಿ ಮಾಡುವುದರಲ್ಲಿ ನಿಯತನಾಗುವುದು ತನ್ನ ದೇಶಾಭಿಮಾನದ ಹೆಗ್ಗುರುತು. ಯಾವ ಕವಿಯಲ್ಲಿ ಈ ತೆರನಾದ ದೇಶಾಭಿಮಾನವು ಇರುವುದಿಲ್ಲವೋ ಅಂತಹವನು ಇಂಥ ಕಾವ್ಯವನ್ನು ಬರೆಯಲಾರನು; ರಚಿಸಿದರೂ ಅದರಲ್ಲಿ ಜೀವಕಳೆಯಿರುವುದಿಲ್ಲ' ಎಂದು ಹೇಳಿ ದೇಶಾಭಿಮಾನಿಗಳ ಗುಂಪಿನಲ್ಲಿ ವರ್ಡ್ಸ್‌ವರ್ತ್ ಕವಿಯನ್ನು ಸೇರಿಸಿರುವನು. ವಿಚಾರ ಮಾಡಿದರೆ, ಇದು ಸತ್ಯವಾದ ವಿಷಯ. ಇಂತಹವರು ಯಾವಾಗಲೂ ಸ್ವದೇಶಕ್ಕಾಗಿ ಮಡಿಯಲು ಸಿದ್ಧರಾಗಿರುವರು. ಇದು ಸ್ವಾಭಾವಿಕವಾಗಿ ಬರಬೇಕಾದ ಗುಣ. ಇಂತಹ ದೇಶಾಭಿಮಾನವು ಪಂಪನಲ್ಲಿದ್ದಿತೆಂಬುದು 'ವಿಕ್ರಮಾರ್ಜುನ ವಿಜಯ'ದಿಂದ ವಿಶದವಾಗುವುದು.

ಪಂಪನ ಪವಿತ್ರವಾದ ದೇಶವಾತ್ಸಲ್ಯವನ್ನು ವ್ಯಕ್ತಗೊಳಿಸುವ ಪದ್ಯಗಳು ಅಲ್ಲಿ ನಮಗೆ ಕಂಡುಬರುವುವು. ಅರ್ಜುನನು ದಿಗ್ವಿಜಯಾರ್ಥವಾಗಿ ಹೊರಟು ಬನವಾಸಿ ದೇಶವನ್ನು ಸೇರುವನು. ಈ ದೇಶವನ್ನು ನೋಡಿ ಇವನ ಹೃದಯವು ಆನಂದ ಭರಿತ ವಾಗುವುದು. ದೇಶದಲ್ಲಿ ನೆಲೆಗೊಂಡಿದ್ದ ಬಗೆ ಬಗೆಯ ಸಂಪತ್ತು, ಪುಷ್ಪವಾಟಿ, ಕಾಸಾರ, ಲತಾಗೃಹ, ನಂದನ ವನ—ಇವುಗಳು ಯಾವ ದಾರಿಗನಿಗಾದರೂ ಆನಂದ ವನ್ನುಂಟುಮಾಡದಿರವು. ಅಲ್ಲಿಯ ನಿವಾಸಿಗಳು ಸ್ವರ್ಗಸುಖವನ್ನು ಅನುಭವಿಸು ತ್ತಿರುವರು. ಇಂತಹ ನಾಡಿನಲ್ಲಿ ಒಂದು ಸಲ ಜನ್ಮವೆತ್ತುವುದೂ ಪುಣ್ಯ ಫಲದಿಂದಲೇ. ಇದಕ್ಕಾಗಿ ಮನುಷ್ಯನು ಎಷ್ಟು ಪ್ರಯತ್ನಪಟ್ಟರೂ ಪಡಬಹುದು: 'ತುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ಬನವಾಸಿ ದೇಶದೊಳ್'; ಇದೇ ಅಲ್ಲವೆ ಹುಟ್ಟಿದುದಕ್ಕೆ ಸಾರ್ಥಕ! ಎಂತಹವನಾದರೂ ಇದನ್ನು ನೋಡಿದೊಡನೆ ಇಲ್ಲಿಯೇ ನೆಲಸಬೇಕೆಂದು ಆಶೆಪಡುವನು. ಹೀಗಿರುವಲ್ಲಿ, ಬನವಾಸಿಯವನೇ ಆದ ಪಂಪನು ಆ ವಿಷಯವನ್ನು ಹೇಗೆ ಹೇಳಬೇಕು! ಬನವಾಸಿಯನ್ನು ನೋಡಿದೊಡನೆಯೇ ಪಂಪ ನಿಗೆ ಆನಂದ ಪ್ರವಾಹವು ಹರಿಯುವುದು. ಅಷ್ಟೇಕೆ? ಇನ್ನೆಲ್ಲಿಯಾದರೂ ಇದ್ದರೂ ಬನವಾಸಿಗೆ ಬರಬೇಕೆಂಬ ಬಯಕೆಯು ಮನಸ್ಸಿನಲ್ಲಿ ತೊಂದರೆಪಡಿಸುತ್ತಿರುವುದು. ಅದನ್ನೇ ಅವನು ಹೀಗೆ ಹೇಳಿರುವನು :—

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ।
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ॥
ಪಂ ಗೆಡೆಗೊಂಡೊಡಂ ಮಧು ಮಹೋತ್ಸವಮಾದೊಡಮೇನನೆಂಬೆನಾ।
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ॥

ಈ ಮಾತು ಅರ್ಜುನನ ಬಾಯಿಂದ ಬರಬೇಕು. ಅರ್ಜುನನಿದ್ದುದು ಇಂದ್ರಪ್ರಸ್ಥ ಪುರದಲ್ಲಿ; ದೇಶಾಟನಕ್ಕಾಗಿ ಇಲ್ಲಿಗೆ ಬಂದನು. ಇವನಿಗೆ ವಸ್ತುತಃ ತನ್ನ ನಾಡು ಜ್ಞಾಪಕಕ್ಕೆ ಬರುವುದಲ್ಲದೆ ಬನವಾಸಿ ನೆನಪಿಗೆ ಬರಲು ಕಾರಣವಿಲ್ಲ. ಆದರೆ ದೇಶಾಭಿ ಮಾನಿಯಾದ ಪಂಪನು ಇದನ್ನು ಮರೆತುಬಿಡುವನು. ದೇಶವಾತ್ಸಲ್ಯದ ಪರಾಕಾಷ್ಠ ತೆಯು ಅವನನ್ನು ವಿಾರುವುದು. ತಡೆಯಿಲ್ಲದೆ ಹರಿಯುತ್ತಿರುವ ಹೊಳೆಗೆ ಮರಳು ಕಟ್ಟೆ ಏನನ್ನು ಮಾಡಬಹುದು! ಪಂಪನ ದೇಶವಾತ್ಸಲ್ಯದ ಮುಂದೆ ನಿರ್ಬಂಧಗಳು ನಿಲ್ಲವು.

ಪಂಪನು ಅರಿಕೇಸರಿಯನ್ನು ಕಥಾ ನಾಯಕನನ್ನಾಗಿ ಮಾಡಿದುದು ದೇಶಾಭಿ ಮಾನದಿಂದಲೇ. ಕನ್ನಡ ನಾಡಿನ ವೀರರ ಕೀರ್ತಿಯನ್ನು ಚಿರಸ್ಥಾಯಿಯಾಗಿ ಮಾಡು ವುದಕ್ಕೆ ಖಾಂಡವ ದಹನ ಪ್ರಕರಣದಲ್ಲಿ ಪಂಪನು ಅರಿಕೇಸರಿಯ ಸತ್ಯಸಂಧತೆಯನ್ನು ವ್ಯಕ್ತಗೊಳಿಸುವ ಈ ಎರಡು ಪದ್ಯಗಳನ್ನು ನೋಡಿರಿ :—

ಎರೆದನ ಪೆಂಪು ಪೇೞಿಸಿಕ್ಕೊಡನಲಂ ಪೊಣರ್ವಾತನ ಪೆಂಪುವೇೞಿಸಿಕ್ಕೊಡಾ।
ಸುರಪತಿ ಕೊಟ್ಟ ತಾಣದೆಡೆವೇೞಿಸಿಕ್ಕೊಡಮಾ ಯಮುನಾ ನದೀ ತಟಾಂ॥
ತರವೊಸೆದಿತ್ತನಾನೆರೆಯೆ ಕೇಳ್ದೆನಿಳಾಧರ ನೀನದರ್ಕೆ ಮಾ।
ತೆರಡಣಮಾಡಲಾಗದಿದು ಸೈಪಿನೊಳಲ್ಲದೆ ಕೂಡಿ ಬರ್ಕುಮೇ॥

ಒತ್ತಿ ತಱಿಂಬಿ ನಿಂದ ರಿಪು ಭೂಜ ಸಮಾಜದ ಬೇರ್ಗಳಂ ನಭ ।
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ ॥
ಚ್ಚೊತ್ತದೆ ಮಾಣ್ದು ಬಾೞ್ವ ಪುೞುವಾನಸನೆಂಬನಜಾಂಡವೆಂಬುದೊಂ ।
ದತ್ತಿಯ ಸಣ್ಣೊಳಿರ್ಪ ಪುೞುವಲ್ಲದೆ ಮಾನಸನೇ ಮುರಾಂತಕಾ ॥

ಈ ಪದ್ಯಗಳನ್ನು ಬರೆಯುವಾಗ ಅವನ ಹೃದಯವು ಹೇಗಿದ್ದಿರಬೇಕು!

ಇಂತಹ ಉದ್ದಾಮ ದೇಶವತ್ಸಲನಾದ ಪಂಪನ ವಿಷಯವನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳುವುದು ಆವಶ್ಯಕ; ಅವನ ಗ್ರಂಥವನ್ನು ಪಠಿಸಿ ಅದರ ಫಲವನ್ನುಣ್ಣತಕ್ಕುದು ಎಲ್ಲ ಕನ್ನಡಿಗರ ಕರ್ತವ್ಯ. ಈ ಕವಿಕುಲಾಗ್ರಣಿಯಾದ ಪಂಪನನ್ನು ಪಡೆದ ಕರ್ಣಾಟಕ ಮಾತೆಯು ನಿಜವಾಗಿ ಧನ್ಯಳೇ ಸರಿ.

**ಎನ್. ಅನಂತರಂಗಾಚಾರ್, ಎಂ.ಎ.**



---

# ಕನ್ನಡದಲ್ಲಿ ಹೊಸ ಮಟ್ಟುಗಳಿಗಿರುವ ಆವಶ್ಯಕತೆ*

ಕನ್ನಡದಲ್ಲಿ ಕಾವ್ಯರಚನೆಗೆ ಇದುವರೆಗಿದ್ದ ಮಟ್ಟುಗಳೇ (Metres) ಸಾಲುತ್ತಿರ ಲ್ಲಿಲ್ಲವೆ? ಸಂಸ್ಕೃತದ ಅಸಂಖ್ಯಾತ ವೃತ್ತಗಳಿವೆ, ಕಂದ ಪದ್ಯವಿದೆ, ಷಟ್ಪದಿಗಳಿವೆ; ಇನ್ನೂ ವೈವಿಧ್ಯವನ್ನು ಬಯಸತಕ್ಕವರಿಗೆ ಅಕ್ಕರ, ಸಾಂಗತ್ಯ ಮೊದಲಾದುವುಗಳಿವೆ. ಇವುಗಳಲ್ಲಿ ಹಿಂದಿನವರು ಸಾಧಿಸದ ಯಾವ ಹೊಸ ಫಲಸಿದ್ಧಿಗಳನ್ನು ಈಗ ಪ್ರಚುರ ವಾಗುತ್ತಿರುವ ಹೊಸ ಛಂದಸ್ಸು—ಅದಕ್ಕೆ ಈ ಗೌರವದ ಹೆಸರನ್ನು ಕೊಟ್ಟರೂ ಕೊಡೋಣ—ಸಾಧಿಸಬಹುದು? "ಪಿಂಡ ಖರ್ಜೂರದಲ್ಲಿ ಬೇಸರಪಟ್ಟು ಹುಣಿಸೆಯ ಹಣ್ಣನ್ನು ತಿನ್ನಲು ಬಯಸಿ"ದಂತಲ್ಲವೆ ಇದು? ಮೂವತ್ತುಮೂರು ಕೋಟಿ ದೇವತೆಗಳಿಗೆ ಹರಕೆ ಹೊರುವ ಭಾರತೀಯರ ವ್ಯರ್ಥ ಚಾಪಲ್ಯವಲ್ಲವೆ ಇದು?—ಎಂದು ಅವಿಶ್ವಾಸದ ಮುಗುಳು ನಗೆಯಿಂದ ಕೇಳತಕ್ಕವರುಂಟು. ಇವರಿಗೆ ಉತ್ತರವನ್ನು ಹೇಳುವುದು ಸಾಧ್ಯವೆ?

ಮತ್ತೆ ಕೆಲವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗುತ್ತಾರೆ: ಅವರ ದೃಷ್ಟಿಯಲ್ಲಿ 'ಹೊಸ **ಛಂದಸ್ಸು**' ಎನ್ನುವುದು ಸರಸ್ವತೀ ದ್ರೋಹ. "ಹೊಸ ಕವಿತೆಗೆ ನಿಯಮವೂ ಇಲ್ಲ, ನಾಯಕರೂ ಇಲ್ಲ; ಬರೆದದ್ದೇ ಛಂದಸ್ಸು, ಕಟ್ಟಿದ್ದೇ ಕಾವ್ಯ" ಎಂದು ಅವರ ಅಭಿಪ್ರಾಯ. ಅವರನ್ನು ಉದ್ದೇಶಿಸಿ, 'ಹೊಸ ಕವನಗಳಲ್ಲಿ ಕೂಡ ಸ್ಪಷ್ಟವಾದ, ಅರ್ಥವತ್ತಾದ ಛಂದೋನಿಯಮಗಳುಂಟು; ಅವುಗಳಲ್ಲಿಯೂ ಇಂಪುಂಟು, ಹಿತವುಂಟು' ಎನ್ನುವುದನ್ನು ವಿಶದಪಡಿಸುವುದು ಅಗತ್ಯವಾದರೂ ಅದಕ್ಕೆ ಇಲ್ಲಿ ಅವಕಾಶವಿಲ್ಲ. ಆ ಕೆಲಸಕ್ಕೆ ಈ ಲೇಖನವು ಮಂಗಳಾಚರಣೆ ಮಾತ್ರ.

ಮೊದಲಿನ ಆಕ್ಷೇಪಣೆಯ ಕಡೆಗೆ ಇನ್ನು ಗಮನಕೊಡೋಣ: ಆಕ್ಷೇಪಕರ ಪಟ್ಟಿಯಲ್ಲಿರುವ ಮಟ್ಟುಗಳೆಲ್ಲವೂ ಕನ್ನಡದಲ್ಲಿ ಅನಾದಿಯಿಂದಲೂ ಇರಲಿಲ್ಲ. ಕನ್ನಡದ ಛಂದಸ್ಸು ನೀರು ನಿಂತ ಒಂದು ಕೊಳದಂತೆ ಅಲ್ಲ; ಅದು ಒಂದು ನದಿಯಂತೆ: ಅಲ್ಲಲ್ಲಿ ಉಪನದಿಗಳನ್ನು ಸೇರಿಸಿಕೊಳ್ಳುತ್ತ, ಒಂದು ಕ್ಷೀಣಿಸಿ ಮತ್ತೊಂದು ಪ್ರಬಲಿಸುವ ಶಾಖೆಗಳಾಗಿ ಒಡೆಯುತ್ತ, ಮುಂದು ಮುಂದಕ್ಕೆ ಹರಿಯುವ ನದಿಯಂತೆ. ಈ ಛಂದಸ್ಸು ಬಲು ಹಿಂದಿನಿಂದ ಬೆಳೆಯುತ್ತಲೇ ಇದೆ; ಹೊಸ ಹೊಸ ಸಂಬಂಧಗಳನ್ನು ಗ್ರಹಿಸುತ್ತಲೇ ಇದೆ; ತನ್ನ ಜಾಯಮಾನಕ್ಕೂ ಬೆಳವಣಿಗೆಗೂ ಸರಿಬೀಳದ ಮಟ್ಟುಗಳನ್ನು ಕೈ ಬಿಡುತ್ತಲೇ ಇದೆ. ಕನ್ನಡದಲ್ಲಿ ಆದಿಯಿಂದ ಬಂದ ದ್ರಾವಿಡ ಛಂದಸ್ಸಿನ ತಳಹದಿಯೇ ಬೇರೆ; ಅಲ್ಲಿಂದೀಚೆಗೆ

* ಹದಿನಾರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಬಂದು ಬೇರೂರಿ ಕನ್ನಡದ ಚಂಪೂ ಕಾವ್ಯಗಳಲ್ಲೆಲ್ಲ ಉದ್ಘೋಷಿಸಿದ ಸಂಸ್ಕೃತದ ವೃತ್ತಗಳು, ಪ್ರಾಕೃತದ ಕಂದಗಳು, ಇವುಗಳ ತಳಹದಿಯೇ ಬೇರೆ ಬೇರೆ; ಇನ್ನೂ ಈಚೆಗೆ ಪ್ರಬಲಿಸಿ ನಮಗೆಲ್ಲ ಸುಪರಿಚಿತವಾಗಿರುವ ಷಟ್ಪದಿಗಳ ತಳಹದಿಯೇ ಬೇರೆ. ಇವೆಲ್ಲವೂ ಬೇರೆ ಬೇರೆಯ ಕಾಲಗಳಲ್ಲಿ ಕನ್ನಡಕ್ಕೆ ಬಂದುವು, ಬೇರೆ ಬೇರೆಯ ನಿಯಮಗಳನ್ನು ಅನುಸರಿಸತಕ್ಕವು, ಒಂದನ್ನೊಂದು ಹಿಮ್ಮೆಟ್ಟಿಸಿರತಕ್ಕವು.* ಈ ಕ್ರಮಕ್ಕೆ ಅನುಗುಣವಾಗಿ ಪ್ರಮುಖ ಸ್ಥಾನವು ಈಗ ಹೊಸ ಮಟ್ಟುಗಳಿಗೆ ದೊರೆತಿದೆ.

ಮೊದಲು ದ್ರಾವಿಡ ಛಂದಸ್ಸನ್ನು ತೆಗೆದುಕೊಳ್ಳೋಣ. ಅದು ಒಂದಾನೊಂದು ಕಾಲದಲ್ಲಿ ಬಹು ಪ್ರಚುರವಾಗಿದ್ದಿರಬೇಕು; ಜನಪದ ಸಾಹಿತ್ಯವು ಅದರಲ್ಲಿ ತುಂಬಿ ತುಳುಕುತ್ತಿದ್ದಿರಬೇಕು. ಆದರೆ ಅದರ ರಹಸ್ಯವು ಈಗ ನಮ್ಮ ಜನಕ್ಕೆ ಹಿಡಿಯುವಂತೆ ಕಾಣಿಸಲಿಲ್ಲ. ಚಂಪೂ ಕಾವ್ಯಗಳಲ್ಲಿ ಅಲ್ಲಲ್ಲಿ ಬರುವ ಪಿರಿಯಕ್ಕರ ಮೊದಲಾದುವುಗಳನ್ನು ಸುಶ್ರಾವ್ಯವಾಗಿ ಓದುವ ಥಾಟಿಯನ್ನು ಕಂಡುಕೊಳ್ಳುವುದೇ ಈಗಿನವರಿಗೆ ಕಷ್ಟವಾಗಿದೆ; ಅವನ್ನು ಉಪಯೋಗಿಸುವ ಕವಿಗಳಂತೂ ಈಗ ಇಲ್ಲವೇ ಇಲ್ಲ. ಈ ದ್ರಾವಿಡ ಛಂದಸ್ಸಿನ ಆಧಾರದಿಂದ ಹುಟ್ಟಿದ ತ್ರಿಪದಿ, ಸಾಂಗತ್ಯ, ಹೆಂಗಸರ ಹಾಡು, ಇವುಗಳ ಗತಿ ಕೊಂಚ ವಾಸಿ. ಆದರೆ ಅವುಗಳನ್ನೂ ಶುದ್ಧ ದ್ರಾವಿಡ ರೀತಿಯಲ್ಲಿ ಹೇಳುವವರು ಕಡಿಮೆ. ಈ ಮಟ್ಟುಗಳು ವಾಚನ(Recitation)ಕ್ಕೆ ಅನುಕೂಲಿಸುವುದಿಲ್ಲ; ಅವುಗಳಲ್ಲಿ ಹಾಡಿನ ಛಾಯೆಯನ್ನು ತಂದು ಹೇಳಬೇಕು. ಇದರಿಂದ ಈಗಿನ ಕವಿಗಳಿಗೆ ಅವುಗಳಲ್ಲಿ ಉತ್ಸಾಹವು ಕಡಿಮೆಯಾದರೂ ಅವು ಪೂರ್ಣವಾಗಿ ಲುಪ್ತವಾಗಿಲ್ಲ; ಹೊಸ ಕವಿಗಳಲ್ಲಿ ಕೆಲವರು ಈ ಮಟ್ಟುಗಳಲ್ಲಿ ಕವನಗಳನ್ನು ರಚಿಸಿದ್ದಾರೆ.

ದ್ರಾವಿಡ ಛಂದಸ್ಸು ಮರೆಗೊಂಡದ್ದು ಆರ್ಯರ ಛಂದಸ್ಸಿನ ಪ್ರಾಬಲ್ಯದಿಂದ. ಪ್ರೌಢ ಕಾವ್ಯಗಳನ್ನೆಲ್ಲ ನಮ್ಮ ಕವಿಗಳು ಚಂಪೂ ಶೈಲಿಯಲ್ಲಿ ವೃತ್ತ ಕಂದಗಳನ್ನು ತುಂಬಿ ಬರೆದರು. ಕಂದವಂತೂ ಕನ್ನಡಕ್ಕೆ ಹಾಗೂ ಹೀಗೂ ತಕ್ಕ ಮಟ್ಟಿಗೆ ಒಗ್ಗಿಹೋಯಿತು. (ಷಟ್ಪದಿಗಳಂತೆ ಅದೂ ಮಾತ್ರಾಗಣಕ್ಕೆ ಸೇರಿರುವುದೇ ಇದರ ಕಾರಣವಾಗಿರಬೇಕು.) ವೃತ್ತಗಳು ಮಾತ್ರ ತಮ್ಮ ಪರಕೀಯತೆಯನ್ನು ಮರೆಯಲಿಲ್ಲ. ನಮ್ಮ ಪ್ರಾಚೀನರು ಮೊದಮೊದಲು ಶ್ಲೋಕ (ಅನುಷ್ಟುಭ್), ಇಂದ್ರವಜ್ರಾ ಮೊದಲಾದ ವಿಧ ವಿಧದ ವೃತ್ತಗಳನ್ನೆಲ್ಲ ಕನ್ನಡಕ್ಕೆ ಒದಗಿಸಲು ಪ್ರಯತ್ನಪಟ್ಟು—

ಶ್ಲೋಕ॥ ಪೆಱ[ನಾ]ವಂ ಧರಾಚಕ್ರಕ್ಕೆಱೆಯಂ ಕೆಳೆಯಪ್ಪವಂ ।
ನೆಱೆಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮಂ ॥ (ಕವಿರಾಜಮಾರ್ಗ, II. ೧೨೫)

* ಕನ್ನಡದ ಛಂದಸ್ಸಿನ ಚರಿತ್ರೆಯನ್ನು ಇದುವರೆಗೆ ಯಾರೂ ನಿರೂಪಿಸಿಲ್ಲ. ಈ ವಿಷಯವನ್ನು ಕುರಿತು ಈ ಲೇಖನದಲ್ಲಿ ಹೇಳಿರುವ ಅಂಶಗಳಲ್ಲಿ ಹಲವನ್ನು ನಾನು ಗ್ರಹಿಸಿದ್ದು ನನ್ನ ಗುರುಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರ ಉಪನ್ಯಾಸ ಪ್ರವಚನಗಳಿಂದ. ಅವರಿಗೆ ನನ್ನ ಕೃತಜ್ಞತೆಯನ್ನು ಈ ಮೂಲಕ ಸಲ್ಲಿಸುತ್ತೇನೆ.

ಎಂಬೀ ಬಗೆಯ ಪ್ರಯೋಗಗಳನ್ನೆಲ್ಲ ನಡೆಯಿಸಿ ಸರಿಹೋಗದೆ ಕೈ ಬಿಟ್ಟರು. ಕೊನೆಗೆ, “ಖ್ಯಾತ ಕರ್ಣಾಟಕಂ” ಎಂದು ಹೊಗಳಿಸಿಕೊಳ್ಳುವ ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ಧರೆ, ಮಹಾಸ್ರಗ್ಧರೆ— ಎಂಬ ಆರು ವೃತ್ತಗಳೇ ಕರ್ಣಾಟಕ ಕಾವ್ಯರಂಗದಲ್ಲೆಲ್ಲ ನರ್ತಿಸಲು ನಿಂತ ಸಂಸ್ಕೃತ ಜನ್ಯ ವೃತ್ತಗಳು. ಇವುಗಳಲ್ಲೂ ಕನ್ನಡಕ್ಕೆ ಹೆಚ್ಚಾಗಿ ಹೊಂದಿರತಕ್ಕುವು ಉತ್ಪಲಮಾಲೆ, ಚಂಪಕಮಾಲೆ, ಇವೆರಡೇ; ಮಿಕ್ಕವುಗಳಲ್ಲಿ ಸಂಸ್ಕೃತದ ಧ್ವನಿಯೇ ಹೆಚ್ಚು*. ಹೀಗೆ, ಸಂಸ್ಕೃತ ಲಕ್ಷಣಗ್ರಂಥಗಳಲ್ಲಿ ಕೋಟ್ಯಂತರ ವೃತ್ತಗಳು ಹುಟ್ಟುವುದಕ್ಕೆ ಅವಕಾಶ ಕೊಟ್ಟಿದ್ದರೂ, ನೂರಾರು ವೃತ್ತಗಳನ್ನು ಉದಾಹರಿಸಿದ್ದರೂ, ಕನ್ನಡದಲ್ಲಿ ನಿಜವಾಗಿ ಬಳಕೆಗೆ ಬಂದವು ಬೆರಳಲ್ಲಿ ಎಣಿಸುವುದಕ್ಕೆ ಕೂಡ ಸಾಲುವುದಿಲ್ಲ.

ಈ ಕೆಲವನ್ನಾದರೂ ಉಪಯೋಗಿಸುವುದಕ್ಕೂ ಅಡಚಣೆಯೊಂದಿದೆ: ಈ ಸಂಸ್ಕೃತದ ವೃತ್ತಗಳು ಕರ್ಮಣಿ ಪ್ರಯೋಗದ ಹಾಗೆ; ಇಷ್ಟು ದಿನಗಳು ಬಳಕೆಯಲ್ಲಿದ್ದರೂ ಕನ್ನಡಕ್ಕೆ ಒಗ್ಗಿದಂತೆ ತೋರುವುದಿಲ್ಲ. ಅವುಗಳ ಧಾಟಿಗೂ ಕನ್ನಡ ಭಾಷೆಯ ಗತಿಗೂ ಹೊಂದಿಕೆ ಸಾಲದು. ಇದರ ಸತ್ಯವನ್ನರಿಯಬೇಕಾದರೆ ಹಳಗನ್ನಡದಿಂದ ದೇಶ್ಯ ಶಬ್ದಗಳೇ ಹೆಚ್ಚಾಗಿರುವ ಒಂದು ವೃತ್ತವನ್ನು ತೆಗೆದುಕೊಳ್ಳಬಹುದು. ಪಂಪನ ಈ ಮತ್ತೇಭವಿಕ್ರೀಡಿತವೊಂದು ಸಾಕು:

ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದೞಲ್ ನಿನ್ನುರಃ ।
ಸ್ಥಲಮಂ ಪೋೞ್ದಿದೆ ಪೋಪುದಲ್ತೆನಗದೇಕಳ್ಕಿರ್ದಪೈ ಬಾೞ್ವಿಪಂ ॥
ಬಲದೇನಿಂ ನಿನಗುಂಟೆ ನಿನ್ನನುಜರಂ ಕಂಡೆಂತುಮೇನೆನ್ನ ತೋ ।
ಳ್ವಲೆಯೊಳ್ ಸಿಲ್ಕಿದೆಯೆಂದು ಮೂದಲಿಪುದುಂ ದುಶ್ಶಾಸನಂ ತಾಗಿದಂ ॥

(ಪಂಪ ಭಾರತ, xii. ೧೪೬)

ಈ ಪದ್ಯವನ್ನು ಅದರ ಧಾಟಿಗಾಗಿ ಓದಿದರೆ ಮೊದಲ ಮೂರು ಚರಣಗಳ ಭಾಷೆಯೂ ಅರ್ಥವೂ ನಮ್ಮ ಹಿಡಿತಕ್ಕೆ ಸಿಕ್ಕುವುದಿಲ್ಲ. ಅರ್ಥಕ್ಕಾಗಿ ಓದಿದರೆ ವೃತ್ತದ ಧಾಟಿ ಮರೆಯಾಗುತ್ತದೆ. ಕನ್ನಡ ಕವಿಗಳು ಬೇಕೆಂದೇ ಹೀಗೆ ಒಂದಕ್ಕೊಂದಕ್ಕೆ ವೈಷಮ್ಯವನ್ನು ಕಲ್ಪಿಸುವಂತೆ ತೋರುತ್ತದೆ. ಯತಿಸ್ಥಾನದಲ್ಲಿಯೂ ಪ್ರತಿ ಪಾದದ ಅಂತ್ಯದಲ್ಲಿಯೂ ಅರ್ಥವು ಸಹಜವಾಗಿ ತಡೆದು ಮುಂದುವರಿಯುವಂಥ ವೃತ್ತಗಳನ್ನೇನಾದರೂ ಕನ್ನಡದಲ್ಲಿ ಬರೆದರೆ ಅವು ಕಿವಿಗೆ ಇಂಪಾಗಿ ಕೇಳಿಸುವುದಿಲ್ಲ. ಅಲ್ಲದೆ, ಕನ್ನಡದ ಕೋಮಲವಾದ ಚಿಕ್ಕ ಮಾತುಗಳಲ್ಲಿ ಧೀರ ಗಮನದ ಸಂಸ್ಕೃತ ವೃತ್ತಗಳ ಘೋಷಕ್ಕೆ ಜೋಡಿಯಾಗತಕ್ಕ ನಾದವಿಲ್ಲ. ಹೀಗೆ ಭಾಷೆಯ ಗತಿಗೆ ವಿರುದ್ಧ ಮಾರ್ಗದಲ್ಲಿ ನಡೆಯುವ ಛಂದಸ್ಸು ಎಷ್ಟರ ಮಟ್ಟಿಗೆ ಬೇರೂರಿ ನಿಲ್ಲಬಹುದು? ನಮ್ಮ

* ಉತ್ಪಲಮಾಲೆ, ಚಂಪಕಮಾಲೆಗಳಲ್ಲಿ ದೇಶ್ಯ ಶಬ್ದಗಳೂ ಮಿಕ್ಕವುಗಳಲ್ಲಿ ಸಂಸ್ಕೃತ ಶಬ್ದ ಸಮಾಸಗಳೂ ಸಾಮಾನ್ಯವಾಗಿ ಹೆಚ್ಚಾಗಿರುವುದನ್ನು ಗಮನಿಸಬಹುದು.

ಪೂರ್ವ ಕವಿಗಳೇನೋ ಈ ವೃತ್ತಗಳಲ್ಲಿ ಬಹಳ ಕೃಷಿ ಮಾಡಿದರು; ಆದರೂ ಅದು ಒಟ್ಟಿನಲ್ಲಿ ಸಫಲವಾದಂತೆ ತೋರುವುದಿಲ್ಲ.

ಹಳಗನ್ನಡದ ಮಾತೇ ಹೀಗಾಯಿತು. ಈಗ ಪೂರ್ಣ ಪ್ರಚಾರದಲ್ಲಿರುವ, ಕಾವ್ಯದ ಕೋಟೆಯ ಮೇಲೆ ಕೂಡ ತನ್ನ ಧ್ವಜವನ್ನು ನಟ್ಟಿರುವ, ಹೊಸಗನ್ನಡದ ವಿಷಯದಲ್ಲಿ ಹೇಳತಕ್ಕದ್ದೇನು! ಇನ್ನುಮುಂದೆ ಕಾವ್ಯಗಳಲ್ಲಿ ಹೊಸಗನ್ನಡವು ಇನ್ನೂ ಪ್ರಬಲಿಸುವ ಚಿಹ್ನೆಗಳಿವೆಯೇ ಹೊರತು, ಅದು ಹಿಮ್ಮೆಟ್ಟುವ ಸೂಚನೆಯೇ ಇಲ್ಲ. ಇದು ಸಹಜವಾಗಿದೆ. ಕಾವ್ಯರಮಣಿ ಪಾಂಡಿತ್ಯದ ಸಿಂಹಾಸನದಿಂದ ಇಳಿದು ಜನ ಮಧ್ಯದಲ್ಲಿ ವಿಹರಿಸಬೇಕಾದರೆ ಅವಳು ಹೊಸಗನ್ನಡದ ಉಡಿಗೆಯನ್ನೇ ಧರಿಸಬೇಕು. ಹೊಸಗನ್ನಡದಲ್ಲಿ ಕ್ಲಿಷ್ಟವಾದ ಸಂಸ್ಕೃತ ಪದಗಳಿಗೂ ಆಡಂಬರದ ಸಮಾಸಗಳಿಗೂ ಅವಕಾಶವಿಲ್ಲ. ಇವು ಇಲ್ಲವಾದರೆ ವೃತ್ತಗಳ ಜಗಿಯೇ ಅರ್ಧ ತಪ್ಪುತ್ತದೆ. ಅಲ್ಲದೆ, ಹೊಸಗನ್ನಡದಲ್ಲಿ ಪದಗಳೆಲ್ಲ ಹ್ರಸ್ವ ಸ್ವರಾಂತವಾಗಿ ನಿಲ್ಲುವುದೇ ರೂಢಿ. ಪ್ರತಿ ಪಾದದ ಕೊನೆಯಲ್ಲೂ ಗುರುವಿರಬೇಕಾದ ಸಂಸ್ಕೃತ ವೃತ್ತಗಳಲ್ಲಿ ಹೊಸ ಗನ್ನಡವನ್ನು ಅಡುಕುವುದು ಹೇಗೆ? ಅವೆರಡಕ್ಕೂ ಹೊಂದಿಕೆ ತರುವುದು ಹೇಗೆ? ಹೊಸಗನ್ನಡವನ್ನುಪಯೋಗಿಸಿ ಕೆಲವರು ಬರೆದಿರುವ ವೃತ್ತಗಳು ಬಹು ವಿಲಕ್ಷಣ ವಾಗಿ ಕಿವಿಗೆ ಕೇಳಿಸುತ್ತವೆ.

ಕಂದ ಪದ್ಯಗಳು ನಮಗೆ ಇನ್ನೂ ಹತ್ತಿರವಾಗಿದ್ದರೂ, ಅವೂ ಹಳಗನ್ನಡದ ಮರ್ಯಾದೆಯನ್ನೇ ಹೆಚ್ಚಾಗಿ ನಿರೀಕ್ಷಿಸತಕ್ಕವು; ಅವುಗಳಲ್ಲಿ ಕೂಡ ಎರಡನೆಯ ಮತ್ತು ನಾಲ್ಕನೆಯ ಪಾದಗಳ ಕೊನೆಯ ಅಕ್ಷರವು ಗುರುವೇ ಆಗಬೇಕು. ಈ ಪಾದಗಳನ್ನೂ ಲಘುವಿನಲ್ಲೇ ನಿಲ್ಲಿಸುವ ಪ್ರಯತ್ನವು ಈಚೆಯ ಹಳಗನ್ನಡದಲ್ಲಿ ಅಲ್ಲಲ್ಲೇ ತಲೆದೋರುತ್ತಿದ್ದಿತು. (ಉದಾ:—ವೀರಭದ್ರವಿಜಯ, IX, ೨೦, ೨೧) ಆದರೆ ಪದ್ಯವು ಅದರಿಂದ ಬಹಳ ಶಿಥಿಲವಾಗುವುದರಿಂದ ಈ ಪದ್ಧತಿಗೆ ಪುರಸ್ಕಾರವು ದೊರೆಯದೆಹೋಗಿರಬೇಕು. ಹೊಸಗನ್ನಡವನ್ನುಪಯೋಗಿಸಿ ಕಂದವನ್ನು ಬರೆ ಯಲು ಹೊರಟ ಪ್ರಯತ್ನಗಳೂ ಸಮರ್ಪಕವಾಗಿಲ್ಲ.

ಹಾಗಾದರೆ, ವೃತ್ತ ಕಂದಗಳ ಸೊಲ್ಲೇ ಇನ್ನು ಅಡಗಿಹೋಗುತ್ತದೆಯೆ? ವೃತ್ತಗಳ ಗಂಭೀರ ಗಾನವನ್ನೂ ಕಂದ ಪದ್ಯಗಳ ಸ್ಪಷ್ಟ ಮಾಧುರ್ಯವನ್ನೂ ನಾವು ಇನ್ನು ಕೈಬಿಡಬೇಕೆ?—ಎಂದು ಅವುಗಳ ಸ್ವಾರಸ್ಯಕ್ಕೆ ಮನ ಸೋತವರು ಮರುಗ ಬಹುದು. ಹೊಸಗನ್ನಡದಲ್ಲೇನೋ ಅವುಗಳಿಗೆ ಸ್ಥಾನವಿಲ್ಲವೆಂದೇ ತೋರುತ್ತದೆ. ಈ ವಿಷಯವನ್ನು ಕುರಿತು ಹಲುಬುವುದು ವ್ಯರ್ಥ. ನಮಗೆ ಪರಮ ಪ್ರಿಯವಾದ ವಸ್ತುಗಳು ಕೂಡ ತಮ್ಮ ಕಾಲವು ಕಳೆದ ಬಳಿಕ ಗತಿಸಲೇ ಬೇಕು. ಸಂಸ್ಕೃತ ಭಾಷೆ ಯಲ್ಲಿಯೇ, ವೈದಿಕ ಛಂದಸ್ಸಿನ ಧೀರೋದಾತ್ತವಾದ ವಿವಿಧ ಘೋಷವೆಷ್ಟು ದಿನ ಉಳಿಯಿತು? ಅದರ ಸ್ಥಾನವನ್ನು ಸ್ಫಟಿಕದಂತೆ ತಳ ತಳಿಸುವ ಚಚ್ಚೌಕದ ವೃತ್ತಗಳು ಆಕ್ರಮಿಸಲಿಲ್ಲವೆ? ಸೃಷ್ಟಿಯ ನಿಯಮವೇ ಇದು. ಹಣ್ಣೆಲೆ ಉದುರುತ್ತದೆ, ಹೊಸ ತಳಿರು ಚಿಗುರುತ್ತದೆ.

ಇನ್ನು, ಷಟ್ಪದಿಗಳ ವಿಚಾರ: ಇದುವರೆಗೆ ಗೊತ್ತಾಗಿರುವ ಮಟ್ಟಿಗೆ,* ಅವು ಹೆರರಿಂದ ಸ್ವೀಕರಿಸಿದ ದತ್ತಪುತ್ರರಲ್ಲ; ಕನ್ನಡಕ್ಕೆ ಮನೆಯ ಮಕ್ಕಳು. ಷಟ್ಪದಿಗಳ ತಳಹದಿ ಕನ್ನಡ ಭಾಷೆಯ ಸಹಜ ಗತಿಯ ಅಡಿಗಲ್ಲಿನ ಮೇಲೆ ಭದ್ರವಾಗಿ ಕುಳಿತಿದೆ. ಹೊಸಗನ್ನಡದ ರೂಪಗಳೂ ಷಟ್ಪದಿಗಳೂ ಕಾವ್ಯದಲ್ಲಿ ಹೆಚ್ಚುಕಡಿಮೆ ಒಟ್ಟಿಗೆ ಬಳಕೆಗೆ ಬಂದದ್ದು ಅಪರಿಚಿತವಾದ ವಿಷಯವಲ್ಲ; ಷಟ್ಪದಿಗಳ ಛಂದಸ್ಸಿಗೂ ಹೊಸಗನ್ನಡಕ್ಕೂ ಇರುವ ಸಾಮರಸ್ಯವೇ ಇದಕ್ಕೆ ಕಾರಣ. ಷಟ್ಪದಿಗಳಲ್ಲಿ ಶ್ರಾವ್ಯವಾದ ಹಲವು ಕನ್ನಡ ಕಾವ್ಯಗಳು ಹುಟ್ಟಿವೆ. ಸಂಸ್ಕೃತ ವೃತ್ತಗಳನ್ನೂ ಕಂದ ಪದ್ಯಗಳನ್ನೂ ಇಂಪಾಗಿ ಓದಲು ಹಿಂಜರಿಯುವ ಅನೇಕರು ಷಟ್ಪದಿಗಳನ್ನು ಸರಾಗವಾಗಿ ಓದುತ್ತಾರೆ: ಭಾರತವಾಚನವು ಒಂದು ಜನಪ್ರಿಯವಾದ ಕಲೆಯಾಗಿ ಪರಿಣಮಿಸಿದೆ. ಇದೆಲ್ಲವೂ, ಷಟ್ಪದಿಗಳ ಮೂಲವು ಕನ್ನಡಕ್ಕೆ ಸಹಜವಾದ ಛಂದಸ್ಸೆಂಬುದನ್ನು ಸಾರಿ ಹೇಳುತ್ತದೆ.

ಆದರೆ ಬರಿಯ ಷಟ್ಪದಿಗಳನ್ನಿಟ್ಟುಕೊಂಡೇ ನಾವು ತೃಪ್ತರಾಗುವುದು ಸಾಧ್ಯವಲ್ಲ. ಷಟ್ಪದಿಗಳ ಸಂಖ್ಯೆ ಬಹು ಮಿತ; ಇರುವುದು ಆರೇ ಷಟ್ಪದಿ. ಅವುಗಳಲ್ಲಿಯೂ ಹಿಂದಿನವರು ಹೆಚ್ಚಾಗಿ ಬಳಸುತ್ತಿದ್ದುವು ಎರಡೇ: ಭಾಮಿನಿ ವಾರ್ಧಕಗಳು. ಬಂಧದಲ್ಲಿಯೋ, ಈ ಷಟ್ಪದಿಗಳು ಒಂದರ ಪಡಿಯಚ್ಚು ಇನ್ನೊಂದು. ಇಷ್ಟು ಇಕ್ಕಟ್ಟಾದ ಗರಡಿಯಲ್ಲಿ ಜಟ್ಟಿ ತನ್ನ ಪಟ್ಟುಗಳನ್ನೆಲ್ಲ ತೋರಿಸುವುದು ಹೇಗೆ? ಮಾಡಿದ್ದನ್ನೇ ಚಾಚು ತಪ್ಪದಂತೆ ಮತ್ತೆ ಮತ್ತೆ ಮಾಡುವುದರಲ್ಲಿ ಸುಖವಿಲ್ಲ. ಆದುದರಿಂದ, ಷಟ್ಪದಿಗಳ ಮೂಲವು ಕನ್ನಡಕ್ಕೆ ತಕ್ಕದ್ದಾದರೂ, ಈಗ ಇರುವ ಷಟ್ಪದಿಗಳನ್ನೇ ಪೂರ್ಣವಾಗಿ ನೆಚ್ಚಿಬಿಡದೆ, ಅವುಗಳ ಮೂಲ ಸೂತ್ರವನ್ನು ವಿಸ್ತರಿಸಿ

* ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ ಅವರು "ಕನ್ನಡ ಷಟ್ಪದಿಗಳು" ಎಂಬ ಲೇಖನದಲ್ಲಿ (ಜಯಕರ್ಣಾಟಕ, ix. ೨: ಪು. ೧೩೪, ೧೩೬) ಈ ರೀತಿ ಪ್ರತಿಪಾದಿಸಿದ್ದಾರೆ :—

"....ಪ್ರಾಯಶಃ ಷಟ್ಪದಿಗಳೆಲ್ಲವೂ ಒಂದಲ್ಲ ಒಂದು ವರ್ಣವೃತ್ತದಿಂದ ತಾನೆ ಹುಟ್ಟಿರಬೇಕಲ್ಲದೆ ಅವು ಸಂಸ್ಕೃತ ಛಂದಸ್ಸಿನ ಸಂಘಟನವು ಕನ್ನಡ ಛಂದಸ್ಸಿಗೆ ಒದಗಿರದ ಮುಂಚೆ ಹುಟ್ಟಿರಲಾರವು, ಎಂದರೆ ಅವು ಸ್ವತಂತ್ರವಾದ ಕನ್ನಡ ಛಂದಸ್ಸಿನಿಂದ ಹುಟ್ಟಿರಲಾರವು."...."ಹೇಗೂ ಅವುಗಳ (ಷಟ್ಪದಿಗಳ) ಹುಟ್ಟಿಗೆ ಆಯಾ ವೃತ್ತಗಳೂ ಆಯಾ ತಾಳಗಳೂ (ಎಂದರೆ, ಆಯಾ ತಾಳಗಳಲ್ಲಿರುವ ಆಯಾ ವೃತ್ತಗಳು) ಕಾರಣವಾಗಿರಬೇಕಲ್ಲದೆ, ಅವು ಸ್ವತಂತ್ರವಾದ ಕನ್ನಡ ಛಂದಸ್ಸಲ್ಲವೆಂದೂ, ಸಂಗೀತದ, ಮುಖ್ಯತಃ ತಾಳಗಳ ಅನುಸಂಧಾನವು ಛಂದಸ್ಸಿಗೆ ಒದಗಿರದ ಮುಂಚೆ ಷಟ್ಪದಿಗಳು ಒಗೆದಿರಲಾರವೆಂದೂ ನನ್ನ ದೃಢವಾದ ನಂಬಿಕೆ."

ಇದು ವಿಚಾರಣೀಯವಾದ ವಿಷಯ. ಇದರ ಚರ್ಚೆಗೆ ಇಲ್ಲಿ ಸ್ಥಲವಿಲ್ಲದಿದ್ದರೂ ಎರಡು ಅಂಶಗಳನ್ನು ಸೂಚಿಸಬಹುದು: (೧) ಸಂಸ್ಕೃತದ ವರ್ಣವೃತ್ತಗಳಿಂದ ಷಟ್ಪದಿಗಳು ಹುಟ್ಟಿದ್ದರೆ ಷಟ್ಪದಿಯೊಂದರ ಪ್ರತಿ ಗಣದಲ್ಲಿಯೂ ಗುರು ಲಘು ವಿನ್ಯಾಸವು ನಿಯತವಾಗಿರಬೇಕಷ್ಟೆ! ಆದರೆ ಯಾವ ಷಟ್ಪದಿಯಲ್ಲೂ ಹಾಗಿಲ್ಲ; ಗುರು ಲಘುಗಳು ಹೇಗಾದರೂ ಬರಬಹುದು. ಮಾತ್ರೆಗಳ ಸಂಖ್ಯೆ ಮಾತ್ರ ನಿಯತವಾಗಿರಬೇಕು. ಈ ವ್ಯತ್ಯಾಸಕ್ಕೆ ಸಮಾಧಾನವೇನು? (೨) ನಾಗವರ್ಮನು ಕೊಟ್ಟಿರುವ "ಸುಂದರಭರಗಾ...." (ಛಂದೋಂಬುಧಿ, v.) ಎಂಬ (ಶರ)ಷಟ್ಪದಿಯೇ ನಮಗೆ ಸಿಕ್ಕಿರುವ ಉದಾಹರಣೆಗಳಲ್ಲಿ ಅತಿ ಪ್ರಾಚೀನವಷ್ಟೆ! ಅದನ್ನು ಅವನು ದ್ರಾವಿಡ ಛಂದಸ್ಸನ್ನು ಹೇಳುವ 'ಅಧಿಕಾರ'ದಲ್ಲಿ ಕೊಟ್ಟು, ಅದು ವಿಷ್ಣು ಗಣ ರುದ್ರ ಗಣಗಳಿಂದ ಏರ್ಪಟ್ಟಿದೆಯೆಂದು ಹೇಳುತ್ತಾನೆ. ಚಂದ್ರರಾಜನ 'ಮದನತಿಲಕ'ದಲ್ಲಿ ನೇರನಾಗಿ ಸ್ಥಾನಗೊಳ್ಳುವುದೂ ಇದೊಂದೇ ಷಟ್ಪದಿ. ಈ ಅಂಶಗಳಿಗೆ ಗಮನ ಕೊಡಬೇಡವೆ? ನಮ್ಮ ಷಟ್ಪದಿಗಳ ಮೂಲನಾದ ಮಾತ್ರಾ ಗಣಗಳು ದ್ರಾವಿಡ ಛಂದಸ್ಸಿನ ಬ್ರಹ್ಮ ವಿಷ್ಣು ರುದ್ರ ಗಣಗಳಿಂದಲೇ, (ಬಹುಶಃ ಪ್ರಾಕೃತ ಛಂದಸ್ಸಿನ ಸಂಪರ್ಕದ ಫಲವಾಗಿ,) ಪರಿಣಮಿಸಿರಬಹುದು. ದ್ರಾವಿಡ ಛಂದಸ್ಸಿನ ತ್ರಿಪದಿ ಈಗ ಐದು ಮಾತ್ರೆಯ ಗಣದ ಧಾಟಿಗೆ ತಿರುಗಿರುವುದು ಈ ಊಹೆಯನ್ನು ಬಲಪಡಿಸುತ್ತದೆ.

ಅವಕ್ಕಿಂತಲೂ ವಿಶಾಲವಾದ, ವಿವಿಧವಾದ ಮಟ್ಟುಗಳನ್ನು ಕಲ್ಪಿಸಿಕೊಳ್ಳುವುದು ಹೊಸ ಕವಿಗಳಿಗೆ ಅಗತ್ಯವಾಯಿತು.

ಕವಿ ತನ್ನ ಭಾವಗಳಿಗೆಲ್ಲ ಮೊದಲು ಪಾತಿಸ ರೂಪವನ್ನು ಕೊಟ್ಟು ಬಳಿಕ ಆ ಪಾಕವನ್ನು, ಪಾತ್ರೆಗಳಲ್ಲಿ ನೀರನ್ನು ತುಂಬಿದಂತೆ, ಕೆಲವು ವೃತ್ತ(Stanza)ಗಳಲ್ಲಿ ತುಂಬಿಡುವುದಿಲ್ಲ. ಕವಚ ಧಾರಿಯಾಗಿ ಕರ್ಣನು ಜನಿಸಿದಂತೆ, ಭಾವಗಳು ಕವಿಯ ಹೃದಯದಿಂದ ಛಂದೋಬದ್ಧವಾಗಿಯೇ ರೂಪುದಳೆದು ಹೊರಬೀಳುತ್ತವೆ. ಒಂದು ವೃತ್ತಕ್ಕೂ ಅದರಲ್ಲಿ ವ್ಯಕ್ತವಾಗುವ ಭಾವಗಳಿಗೂ ಬಲು ಹತ್ತಿರದ ಸಂಬಂಧವಿದೆ. ಪದ್ಯದ ಓಟ, ತಡೆ, ತಿರುವುಗಳನ್ನೇ ಭಾವದ ಓಟ, ತಡೆ, ತಿರುವುಗಳು ಅನುಸರಿಸುತ್ತವೆ. ಆದುದರಿಂದ ಕವಿ ಆಯ್ದುಕೊಳ್ಳುವ ವೃತ್ತವು ಅನುಚಿತವಾಗಿದ್ದರೆ ಅವನ ಕವನವು ಹದಗೆಡುವುದರಲ್ಲಿ ಸಂಶಯವಿಲ್ಲ. ವೃತ್ತದ ಬಂಧವು (Structure) ಚೀನಾ ದೇಶದಲ್ಲಿ ಹೆಣ್ಣುಮಕ್ಕಳ ಕಾಲಿಗೆ ತೊಡಿಸುತ್ತಿದ್ದ ಕಬ್ಬಿಣದ ಜೋಡಿನಂತೆ: ಅದರ ಪರಿಮಿತಿಯೆಷ್ಟೋ ಭಾವವೂ ಅಷ್ಟೇ ಬೆಳೆಯಬೇಕು; ಅದರ ಆಕಾರವು ಹೇಗೋ ಇದೂ ಹಾಗೆಯೇ ಆಕಾರ ತಳೆಯಬೇಕು. ಉಚಿತವಾದ ಮತ್ತೊಂದು ಹೋಲಿಕೆಯನ್ನು ಕೊಡಬಹುದಾದರೆ, ವೃತ್ತದ ಬಂಧವು ಗ್ರೀಕ್ ಪುರಾಣದ ಪ್ರೊಕ್ರಸ್ಟೀಸನ ಹಾಸಿಗೆಯಂತೆ: ಭಾವವು ಚಿಕ್ಕದಾಗಿದ್ದರೆ ಅದನ್ನು ವೃತ್ತವು ತನ್ನುದ್ದಕ್ಕೆ ಎಳೆದು ಎಳೆದು ಹಿಗ್ಗಲಿಸುತ್ತದೆ; ಭಾವವು ದೊಡ್ಡದಾಗಿದ್ದರೆ ಅದರ ತಲೆಯನ್ನೋ ಕಾಲನ್ನೋ ಕತ್ತರಿಸಿಹಾಕುತ್ತದೆ. ಇದಕ್ಕೆ ಹಲವು ನಿದರ್ಶನಗಳನ್ನು ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಕಾಣಬಹುದು. ಸಂಸ್ಕೃತ ವೃತ್ತಗಳಲ್ಲಿ, ಅನಾವಶ್ಯಕವಾದ ಅನೇಕ ಆಡಂಬರದ ಶಬ್ದಗಳನ್ನು ಕವಿಗಳು ತುಂಬುವುದು ಇದರಿಂದಲೇ. ಲಕ್ಷ್ಮೀಶನಂಥ ಔಚಿತ್ಯ ಜ್ಞಾನವುಳ್ಳ ಕವಿ ಕೂಡ 'ಜೈಮಿನಿ ಭಾರತ'ದಲ್ಲಿ, ಒಂದು ವಾರ್ಧಕ ಷಟ್ಪದಿಯ ತುಂಬ ಒಂದು ಭಾವವನ್ನು ವಿಸ್ತರಿಸಲಾರದೆ ಒಂದೊಂದು ಕಡೆ ಕ್ಲೇಶಪಟ್ಟಿರುವುದು ಇದರಿಂದಲೇ.

ಹೀಗಿರುವುದರಿಂದ, ಕಂದ, ಸಂಸ್ಕೃತ ವೃತ್ತಗಳಲ್ಲಿ ನಾಲ್ಕು ಚರಣಗಳು, ಷಟ್ಪದಿಗಳಲ್ಲಿ ಆರು ಚರಣಗಳು—ಈ ರೀತಿಯ ಅತಿ ನಿಯತವಾದ ಚರಣ ಸಂಖ್ಯೆಯೂ ಅವುಗಳ ಅತಿ ಬದ್ಧವಾದ ಗತಿಯೂ ಕವಿಯ ಹೃದಯದಲ್ಲಿ ಜನಿಸುವ ಅನಂತ ಭಾವಗಳಲ್ಲಿ ಎಲ್ಲವನ್ನೂ ಉತ್ಕೃಷ್ಟವಾಗಿ ನಿರೂಪಿಸಲಾರವು. ವೃತ್ತದ ಧಾಟಿಯೂ ಸಾಧ್ಯವಾದ ಮಟ್ಟಿಗೆ ಭಾವದ ಸ್ಥಿತಿ ಗತಿಗಳನ್ನು ಪ್ರತಿಬಿಂಬಿಸಬೇಕು. ಆದಕಾರಣ, ಭಾವದ ಗತಿಗೆ ತಕ್ಕಂತೆ ಬಳುಕುವ, ಬೇಕೆಂದಾಗ ಹಿಗ್ಗುವ, ತುಂಬು ಹೊಳೆಯಂತೆ ಮೊರೆಯುವ, ಸಣ್ಣ ಕಾಲುವೆಯಂತೆ ಅಲ್ಲಲ್ಲಿ ನುಸುಳುವ, ಓಡುವ ಕುದುರೆ ನಿಲ್ಲುವಂತೆ ಥಟ್ಟನೆ ನಿಲ್ಲುವ ವಿವಿಧ ಗತಿಯ ಮಟ್ಟುಗಳು ಕನ್ನಡಕ್ಕೆ ಬೇಕಾದುವು: ಹೊಸ ಮಾದರಿಗಳನ್ನು ಕಂಡುಹಿಡಿಯಬೇಕಾಯಿತು. ಈ ಕಾರ್ಯದಲ್ಲಿ ಆಧುನಿಕ ಕವಿಗಳು ಸಂಪೂರ್ಣವಾಗಿ ಹೊಸ ಜಾಡನ್ನೇ ಹುಡುಕುವುದು ಆವಶ್ಯಕವಾಗಲಿಲ್ಲ. ಇವರು ಬಯಸುತ್ತಿದ್ದ ಸ್ವಾತಂತ್ರ್ಯವನ್ನೇ ಹಿಂದಿನವರೂ ಬಯಸಿ ಅಲ್ಲಲ್ಲಿ ಹೊಸ ಮಟ್ಟುಗಳನ್ನು ನಿರ್ಮಿಸಿಕೊಂಡಿರುವುದು ಪ್ರಾಚೀನ ಸಾಹಿತ್ಯದಲ್ಲೇ ನಮಗೆ ಗೋಚರಿಸುತ್ತದೆ.

ಇಂಥ ಮಟ್ಟುಗಳಲ್ಲಿ ರಗಳೆ ಮುಖ್ಯವಾದದ್ದು. ಅದನ್ನು ನಾಗವರ್ಮನು ಸ್ಮರಿಸಿದ್ದರೂ ಅದರ ನಿಯಮ ಪ್ರಭೇದಗಳ ನಿರೂಪಣೆಯ ಕಡೆಗೆ ಅವನು ಹೆಚ್ಚು ಗಮನವನ್ನು ಕೊಡಲಿಲ್ಲ. "ಮಾತ್ರೆ ಸಮನಾಗಿ" "ತಾಳದ ಗಣನೆಗೊಡಂಬಟ್ಟರೆ" ರಗಳೆಯಾಗುವುದೆಂದು ಒಂದು ಕಂದ ಪದ್ಯದಲ್ಲಿ (ಛಂದೋಂಬುಧಿ, iii) ಸೂತ್ರಿಸಿ ಅವನು ಮುಂದೆ ಸಾಗುತ್ತಾನೆ. ಆದಿ ಪಂಪ ಮೊದಲಾದವರು ಬಗೆ ಬಗೆಯ ರಗಳೆಗಳನ್ನು ಪಯೋಗಿಸಿದ್ದರೂ ಅವುಗಳನ್ನು ಕುರಿತು ಅವನು ಪ್ರಸಂಗಿಸಲಿಲ್ಲ. ಪಂಪನ ರಗಳೆಗಳಲ್ಲಿ ಹೊಸ ಮಾರ್ಗದ ಹಲವು ಲಕ್ಷಣಗಳು ಕಾಣಬರುತ್ತವೆ. ಆ ರಗಳೆಗಳಲ್ಲಿ ಒಂದು ಪ್ರಭೇದದ ಕೆಲವು ಚರಣಗಳನ್ನು ಇಲ್ಲಿ ಉದಾಹರಿಸಬಹುದು:

ಅಲ್ಲಿ ಸೊಗಯಿಸುವ ಕೃತಕ ಗಿರಿಗಳಿಂ ಕಲ್ಪತರುಗಳನೆ ಪೋಲ್ವ ಮರಗಳಿಂ ।
ನಂದನಂಗಳೊಳೆ ಸುೞಿವ ಬಿರಯಿಯಿಂ ಕಂಪು [ಕ]ಣ್ಮಲಿಯೆ ಪೂತ ಸುರಯಿಯಿಂ ।
ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸ ನವಿಲ್ಗಳಿಂ ॥

(ಪಂಪ ಭಾರತ, iii, ೨೨)

ಇದರಲ್ಲಿ ವಿಚಾರಾರ್ಹವಾದ ಹಲವು ಅಂಶಗಳಿವೆ: ಮೊದಲನೆಯದೆಂದರೆ, ಕನ್ನಡಕ್ಕೆ ಅತಿ ಮುಖ್ಯವಾದ ಆದಿ ಪ್ರಾಸದ ನಿರಾಕರಣೆ. (ಆದರೆ ಪಂಪನು ಮತ್ತೊಂದು ಬಗೆಯ ಪ್ರಾಸವನ್ನು ಇಲ್ಲಿ ಇಟ್ಟಿದ್ದಾನೆ: ಚರಣಗಳನ್ನು ಇಲ್ಲಿ ಅಚ್ಚಾಗಿರುವಂತೆಯೇ ಇಟ್ಟುಕೊಂಡರೆ ಅದನ್ನು ಮಧ್ಯ ಪ್ರಾಸವೆನ್ನಬಹುದು; ಇಲ್ಲವಾದರೆ, ಪ್ರತಿಯೊಂದು ಚರಣವನ್ನೂ ಎರಡೆರಡು ಭಾಗಗಳಾಗಿ ವಿಭಾಗಿಸಿ, ಅಂತ್ಯ ಪ್ರಾಸವೆನ್ನಬಹುದು.) ಚರಣಗಳ ಸಂಖ್ಯೆ ಇಷ್ಟೇ ಆಗಬೇಕೆಂಬ ನಿರ್ಬಂಧವೂ ಇಲ್ಲಿಲ್ಲ. ಇವಕ್ಕಿಂತಲೂ ಸ್ವಾರಸ್ಯಕರವಾದ ವಿಷಯವೇನೆಂದರೆ, ಪಂಪನು ಇಲ್ಲಿ ಹೊಸ ಬಗೆಯ ಸಂಕೀರ್ಣ ಗಣದ (೩ ಮಾತ್ರೆಯ ಗಣ + ೫ ಮಾತ್ರೆಯ ಗಣ) ಮಟ್ಟೊಂದನ್ನು ಪ್ರಯೋಗಿಸಿದ್ದಾನೆ. ಅದು ಮತ್ತೆ ತಲೆಯೆತ್ತಿರುವುದು ಈ ಆಧುನಿಕ ಕಾಲದಲ್ಲೇ. ಈ ಕೆಳಗೆ ಕೊಟ್ಟಿರುವ ಚರಣಗಳನ್ನು ಹೋಲಿಸಿ ನೋಡಬಹುದು :—

ನೋಟ ಸಿಂಗರದ ತೋಟದೊತ್ತಿನಲಿ
ಮುಸುಕು ಕೊಂಬೆಗಳ ನೆರಳಲಿ,
ಮೇಳದೊರಗಿರುವರೇಳು ಕನ್ನೆಯರು
ಮಿಸುನಿ ಜಿಂಕೆಗಳ ತೆರದಲಿ.
ಆಳ ಬೊಬ್ಬೆಯನು ಕೇಳಿ ಬೆಚ್ಚುತಲಿ,
ಬೀಳುತೇಳುತಲಿ ಹರಿವರು;. . . .

(ಇಂಗ್ಲಿಷ್ ಗೀತಗಳು—ಜೋಳ ಕನ್ನೆಯರು)

ಎರಡರ ಧಾಟಿಯೂ ಒಂದೇ; ಗಣಗಳ ಸಂಖ್ಯೆ ಮಾತ್ರ ಸ್ವಲ್ಪ ಹೆಚ್ಚು ಕಡಿಮೆಯಾಗಿದೆ.—ಹೀಗೆ ಪಂಪನು ಆಧುನಿಕರಿಗೆ ಹಲವು ವಿಧಗಳಲ್ಲಿ ಮಾರ್ಗದರ್ಶಿಯಾಗಿದ್ದಾನೆ. ಅವನಿಂದೀಚೆಗೆ ರಗಳೆಗಳನ್ನು ಹೇರಳವಾಗಿ ಉಪಯೋಗಿಸಿದವನು ಹರಿಹರ ಕವಿ. ಆದರೆ ಅವುಗಳ ಪ್ರಾಬಲ್ಯವು ಅವನ ತಲೆಗೇ ನಿಂತುಹೋಯಿತು. ಕಥಾಕಾವ್ಯಕ್ಕೆ ಇಷ್ಟು ಉಚಿತವಾದ ಮಟ್ಟುಗಳನ್ನು ಹಿಂದಿನ ಕವಿಗಳು ಏಕೆ ನಿರಾಕರಿಸಿದರೋ! ಆಧುನಿಕ ಕಾಲದಲ್ಲಿ ಮಾತ್ರ ರಗಳೆಗೆ ಮತ್ತೆ ಪ್ರಾಶಸ್ತ್ಯವು ದೊರೆತಿದೆ.

ಲಲಿತ ರಗಳೆಯ ಪ್ರಾಸಗಳನ್ನು ಕಿತ್ತುಹಾಕಿ ಸರಳ ಮಾಡಿ ಚರಣಗಳನ್ನು ತಡೆಯಿಲ್ಲದೆ ಹರಿಯಬಿಡುವುದರಿಂದ ಹುಟ್ಟಿರುವ 'ಸರಳ ರಗಳೆ' ಈಗಾಗಲೆ ಕವಿ ಪ್ರಿಯವಾಗಿದೆ. ಇಂಗ್ಲಿಷಿನ 'Blank Verse' ಎಂಬ ಮಟ್ಟಿನಂತೆ ನಾಟಕಗಳನ್ನೂ ಕಥಾ ಕಾವ್ಯಗಳನ್ನೂ ಬರೆಯುವುದಕ್ಕೆ ಇದನ್ನು ಉಪಯೋಗಿಸುವ ಪ್ರಯತ್ನವು ಆಶಾ ಜನಕವಾಗಿ ನಡೆಯುತ್ತಿದೆ.

ದ್ವಿಪದಿ ಚೌಪದಿಗಳ ಕಥೆಯೂ ರಗಳೆಯ ಕಥೆಯೇ. ನಮ್ಮ ಪ್ರಾಚೀನ ಕವಿಗಳಿಗೆ ಅವು ಅಷ್ಟು ಗಂಭೀರವಾಗಿ ತೋರಲಿಲ್ಲವೇನೊ! ಆದಕ್ಕೇ ಅವರು ಕೊರವಂಜಿಯ ಹಾಡುಗಳಿಗೂ ಮಾನೌವಿಯ ಪದ್ಯಗಳಿಗೂ ಅವನ್ನು ಮೀಸಲಾಗಿಟ್ಟಿದ್ದಂತೆ ಕಾಣಿಸುತ್ತದೆ. ಜೊತೆಗೆ ಇನ್ನೊಂದು ಮಟ್ಟನ್ನು ಇಲ್ಲಿ ಹೆಸರಿಸುವುದು ಉಚಿತ: 'ಗೋವಿನ ಕಥೆ'ಯನ್ನು ಕನ್ನಡ ನಾಡಿನಲ್ಲಿ ಅರಿಯದವರು ಯಾರು? ಮೆಚ್ಚದವರು ಯಾರು? ಅದರ ಸ್ವಾರಸ್ಯಕ್ಕೆ ಆದರ ಮಟ್ಟೂ ಬಲು ಮಟ್ಟಿಗೆ ಕಾರಣವೆಂದು ತೋರುತ್ತದೆ. ಹೊಸ ಕವಿಗಳು ಅದರ ಸ್ವಾರಸ್ಯವನ್ನು ಕಂಡುಕೊಳ್ಳದೆಬಿಟ್ಟಿಲ್ಲ. ಅವರು ಆದರಲ್ಲಿ ಮಕ್ಕಳಿಗೆ ಕಥೆಗಳನ್ನು ಹೇಳಬಲ್ಲರು, ಹಾಸ್ಯವನ್ನು ಸೂಸಬಲ್ಲರು; ಗಹನವಾದ, ಗಂಭೀರವಾದ ಭಾವಗಳನ್ನು ಕೂಡ ರಮ್ಯವಾಗಿ ನಿರೂಪಿಸಬಲ್ಲರು.

ಹೀಗೆಯೇ, ದಾಸರ ಪದಗಳು, ಯಕ್ಷಗಾನಗಳು, ಹಾಡುಗಳು—ಇವುಗಳಲ್ಲೆಲ್ಲ ಛಂದಶ್ಶಾಸ್ತ್ರದ ಅತಿ ನಿಯಮದ ಕಟ್ಟುಗಳನ್ನು ಕಳಚಿ ಹೊಸ ಹೊಸ ಸಿದ್ಧಿಗಳನ್ನು ಪಡೆಯುವ ಪ್ರಯತ್ನವು ಹಿಂದೆಯೇ ನಡೆದಿರುವುದನ್ನು ನಾವು ಕಾಣಬಹುದು. ಆದರೆ, ಆಗಿನ ಪ್ರಯತ್ನಗಳಿಗೂ ಈಗಿನವಕ್ಕೂ ಪದವಿಯಲ್ಲಿ ಭೇದವಿದೆ. ಜನಸಾಮಾನ್ಯವನ್ನು ಉದ್ದೇಶಿಸಿ ಬರೆದ, ಜನಸಾಮಾನ್ಯಕ್ಕೇ ಸೇರಿದ ಕವಿಗಳು ಮಾತ್ರ ಇಂಥ ಶಾಸ್ತ್ರಪ್ರಣೀತವಲ್ಲದ ಮಟ್ಟುಗಳನ್ನು ಹಿಂದೆ ಉಪಯೋಗಿಸುತ್ತಿದ್ದರು. ಕಾವ್ಯವು ಲಕ್ಷಣ ಬದ್ಧವಾಗಬೇಕೆಂದು ಬಯಸಿದವರೆಲ್ಲರೂ ಸಂಸ್ಕೃತ ವೃತ್ತ ಕಂದಗಳನ್ನೋ ಷಟ್ಪದಿಯನ್ನೋ ಆರಿಸಿಕೊಳ್ಳುತ್ತಿದ್ದರು. (ಷಟ್ಪದಿಗೆ ಕೂಡ ಮನ್ನಣೆಯನ್ನು ಸಲ್ಲಿಸದ ವೀರ ವಿದ್ವಾಂಸರು ನಮ್ಮಲ್ಲಿ ಇನ್ನೂ ಇದ್ದಾರೆ.) ಈಗಲಾದರೆ ಕವಿಗಳು ಈ ಜನಪದ ಛಂದಸ್ಸಿನಲ್ಲಿ ಹೊಸವನ್ನೂ ಇಂಪನ್ನೂ ಕಂಡು ಅದನ್ನು ತಮ್ಮ ಅತ್ಯುತ್ತಮ ಕಾವ್ಯಗಳಲ್ಲೆಲ್ಲ ಉಪಯೋಗಿಸುತ್ತಿದ್ದಾರೆ. ಹೀಗೆ ಬಹಿಷ್ಕೃತರನ್ನು ಉದ್ಧರಿಸುವ ಕಾರ್ಯವು ನಮ್ಮ ಛಂದಸ್ಸಿನಲ್ಲಿ ಈಗ ನಡೆಯುತ್ತಿದೆ.

ಹಿಂದೆ ಇಂಥ ಮಟ್ಟುಗಳು ತಲೆದೋರುತ್ತಿದ್ದ ಬಗೆಗೂ ಈಗ ನಡೆಯುತ್ತಿರುವ ಪ್ರಯೋಗಕ್ಕೂ ಒಂದು ಮುಖ್ಯ ವ್ಯತ್ಯಾಸವುಂಟು: ಹಿಂದಿನವರು ಒಂದು ಕ್ರಮವರಿತು ಹೊಸ ಮಟ್ಟುಗಳನ್ನು ನಿರ್ಮಿಸಿಕೊಳ್ಳಲಿಲ್ಲ; ಹೊಸ ಮಟ್ಟುಗಳಲ್ಲಿ ಎಷ್ಟು ವೈವಿಧ್ಯವಿರಬಹುದೆಂಬುದರ ಕಲ್ಪನೆಯೂ ಅವರಿಗೆ ಬಂದಿರಲಾರದು. ಇದುವರೆಗೂ ನಮ್ಮ ಛಂದಸ್ಸಿನ ಹಡಗು ಪ್ರಾಚೀನ ಸೂತ್ರಗಳ ಇಕ್ಕಟ್ಟಿನ ಹೊಳೆಯೊಳಗೇ ಹೋಗುತ್ತಿದ್ದಿತು; ಒಂದೊಂದು ಸಲ ಸಮುದ್ರದೊಳಕ್ಕೆ ನುಗ್ಗಿದರೂ ಹೆಚ್ಚು ದೂರ ಹೋಗಲಂಜಿ ಹಿಂದಿರುಗುತ್ತಿದ್ದಿತು; ಈಗ ಅದು ಧೈರ್ಯದೊಡನೆ ನಿರ್ಭಯವಾಗಿ

ಸಮುದ್ರದ ಮೇಲೆಲ್ಲ ಸಂಚರಿಸಲು ಅಭ್ಯಾಸ ಮಾಡುತ್ತಿದೆ; ತನ್ನ ಸಾಮರ್ಥ್ಯವನ್ನು ಕಂಡುಕೊಳ್ಳಲು ನಿರಂತರ ಪ್ರಯತ್ನಮಾಡುತ್ತಿದೆ. ಹೊಸ ಹುರುಪಿನಲ್ಲಿ ಅದು ಎತ್ತಲೋ ನುಗ್ಗಿ ಸುಳಿಗಳಿಗೆ ಸಿಕ್ಕುವುದೂ ಉಂಟು; ದಿಕ್ಕುತಪ್ಪಿ ಎಲ್ಲೆಲ್ಲೋ ಅಲೆಯುವುದೂ ಉಂಟು. ಆದರೆ, ಆ ಸುಳಿಗಳಿಂದ ತಪ್ಪಿಸಿಕೊಳ್ಳುವುದಕ್ಕೂ ಸರಿಯಾದ ದಾರಿಗೆ ತಿರುಗಿಕೊಳ್ಳುವುದಕ್ಕೂ ಅದಕ್ಕೆ ಸ್ವಸಾಮರ್ಥ್ಯವೂ ವಿವೇಚನೆಯೂ ಉಂಟೆಂದು ನಾವು ನಂಬಬಹುದು.

ಕನ್ನಡ ಛಂದಸ್ಸು ಈ ರೀತಿ ಸುಖಸಂಚಾರಕ್ಕೆ ಉದ್ದೇಶಪೂರ್ವಕವಾಗಿ ಹೊರಟದ್ದು ಇಂಗ್ಲಿಷ್ ಸಾಹಿತ್ಯದ ಸಂಪರ್ಕದಿಂದಲೇ ಎಂದು ಒಪ್ಪಿಕೊಳ್ಳಬೇಕು. ಇದಕ್ಕಾಗಿ ಕೆಲವರು ಈಗಿನ ಕವಿಗಳನ್ನು ಅನುಕರಣಶೀಲರೆಂದು ಕರೆದು ಹಾಸ್ಯಮಾಡಬಹುದು. ಆದರೆ, ಇಂಗ್ಲಿಷ್ ಛಂದಸ್ಸಿನ ವಿಶಾಲ ಮಾರ್ಗವನ್ನೂ ವೈವಿಧ್ಯವನ್ನೂ ನೋಡಿದ ಯಾರಿಗೆ ತಾನೆ ಕನ್ನಡದಲ್ಲೂ ಆ ಸೌಂದರ್ಯವನ್ನು ಪಡೆದು ಅನುಭವಿಸಬೇಕೆಂಬ ಆಕಾಂಕ್ಷೆ ಹುಟ್ಟುವುದಿಲ್ಲ! ಅದಕ್ಕೆ ಅನುಕೂಲವಾಗಿ, ನಮ್ಮ ರಗಳೆ ಷಟ್ಪದಿಗಳ ಮೂಲವಾದ ಮಾತ್ರಾ ಛಂದಸ್ಸು ಅಂಥ ಹಿಗ್ಗಲಿಕೆಯನ್ನು ಸುಲಭವಾಗಿ ತಡೆಯಬಲ್ಲದೆಂದೂ, ಅತಿ ರಮ್ಯವಾದ ರೂಪಗಳನ್ನು ತಾಳಬಲ್ಲದೆಂದೂ ಗೊತ್ತಾದರೆ ಯಾರ ಹೃದಯವು ತಾನೆ ಉಬ್ಬುವುದಿಲ್ಲ! ಇಂಗ್ಲಿಷ್ ಛಂದಸ್ಸಿನಲ್ಲಿ ಯಾವ ಯಾವ ಪ್ರಯೋಗಗಳೂ ಫಲಗಳೂ ಸಾಧ್ಯವಾಗಿವೆಯೋ ಅವೆಲ್ಲವೂ ಹೆಚ್ಚುಕಡಿಮೆ ಕನ್ನಡಕ್ಕೂ ಸಾಧ್ಯವೆಂದು 'ಇಂಗ್ಲಿಷ್ ಗೀತಗಳ'ನ್ನು ಓದಿದವರು ಹೇಳಬಲ್ಲರು. ಈ ಸಾಧನೆಗಾಗಿ ನಾವು ನಮ್ಮ ತಾಯಿಬೇರನ್ನು ಛೇದಿಸಿ ಬೇರೊಂದು ಸಸಿಯನ್ನು ಪರದೇಶದಿಂದ ತಂದು ನಟ್ಟು ಬೆಳಸಬೇಕಾಗಿಲ್ಲ; ನಮ್ಮ ಸಸಿಯನ್ನೇ ಕಸಿಮಾಡಿ ಬೆಳಸಿದರಾಯಿತು. ನಮ್ಮ ಬಳಿ ಚಿನ್ನವಿದ್ದಿತು; ಅದು ನಮಗೆ ಗೊತ್ತಿರಲಿಲ್ಲ. ಇಂಗ್ಲಿಷ್ ಛಂದಸ್ಸಿನ ಒರೆಗಲ್ಲಿಗೆ ಉಜ್ಜಿ ಅದನ್ನು ಚಿನ್ನವೆಂದು ಕಂಡುಕೊಂಡಿದ್ದೇವೆ; ಅದರಿಂದ ಆಭರಣಗಳನ್ನು ಮಾಡಿ, ನಮ್ಮ ಕಾವ್ಯದೇವಿಯನ್ನು ಸಿಂಗರಿಸೋಣ.

'ಹೊಸ' ಛಂದಸ್ಸು ಜನಗಳಿಗೆ ಎಷ್ಟು ಪ್ರಿಯವಾಗಿದೆಯೆನ್ನುವುದು ಅದಕ್ಕೆ ಎಲ್ಲೆಲ್ಲೂ ದೊರೆಯುತ್ತಿರುವ ಆದರದಿಂದಲೇ ಸ್ಪಷ್ಟವಾಗುತ್ತದೆ. ಈಗ ಮಾಸಪತ್ರಿಕೆ ಮೊದಲಾದುವುಗಳಲ್ಲಿ ಅಚ್ಚಾಗುತ್ತಿರುವ ಕವನಗಳನ್ನು ನೋಡಿರಿ; ಪ್ರಕಟವಾಗುತ್ತಿರುವ ಹೊಸ ಕಾವ್ಯಗಳನ್ನು ನೋಡಿರಿ: ಹೆಚ್ಚುಕಡಿಮೆ ಎಲ್ಲವೂ ಹೊಸ ಮಟ್ಟುಗಳಲ್ಲಿಯೇ ಇವೆ. ಹೊಸ ರೀತಿಯ ಬೆಳಕು ಹರಿದ ಕೂಡಲೆ ಅದುವರೆಗೂ ನಿದ್ರಿಸುತ್ತಿದ್ದ ಎಷ್ಟೋ ಕವಿಪಕ್ಷಿಗಳು ಎಚ್ಚತ್ತು ಸುಖವಾಗಿ ಗಾನಮಾಡಲು ಆರಂಭಿಸಿದುವು. ಕನ್ನಡ ಕವಿತೆಯಲ್ಲಿ ಒಂದು ಹೊಸ ಕಳೆಯುಕ್ಕಿತು. ಮನಸ್ಸಿನ ಭಾವಗಳನ್ನು ನೇರವಾಗಿ, ಗುರಿ ತಪ್ಪದೆ, ಬಳಸಿಲ್ಲದೆ ನಿರೂಪಿಸುವ ಶಕ್ತಿಯನ್ನು ಕವಿಗೆ ಹೊಸ ಮಟ್ಟುಗಳು ಕೊಟ್ಟುವು. ಈ ಮಟ್ಟುಗಳ ಸ್ವರೂಪವೇನು, ಮೂಲವೇನು, ನಿಯಮಗಳೇನು ಎಂಬುದರ ವಿಚಾರವು ಇನ್ನು ನಡೆಯಬೇಕಾಗಿದೆ.

ತೀ. ನಂ. ಶ್ರೀಕಂಠಯ್ಯ, ಎಂ.ಎ.

## ಭಾಸ ಮಹಾಕವಿಯ

# *ಅಭಿಷೇಕ ನಾಟಕ

### (ಕನ್ನಡದ ಪರಿವರ್ತನೆ)

### ಚತುರ್ಥಾಂಕ

(ಆಮೇಲೆ ವಾನರ ಕಂಚುಕಿಯು ಬರುವನು)

ಕಂಚುಕಿ.—ಎಲೈ ಸೇನಾಧಿಪತಿಯೆ! ವಾನರ ಸೇನೆಗೆ ಸನ್ನಾಹವಾಗಿರುವಂತೆ ಅಪ್ಪಣೆಮಾಡು.

ಸೇನಾಪತಿ.—(ಪ್ರವೇಶಿಸಿ) ಆರ್ಯನೆ! ಈ ಸನ್ನಾಹ ಕಾರ್ಯವು ಯಾವುದರ ಸಲವಾಗಿ?

ಕಂಚುಕಿ.—ಈಗಲೇ ನಮ್ಮ ಹನುಮಂತನು ಆರ್ಯ ರಾಮನ ಸತಿಯಾದ ಸೀತಾದೇವಿಯ ಸಮಾಚಾರವನ್ನು ತಂದಿರುವನಷ್ಟೆ!

ಸೇನಾಪತಿ.—ಹೇಗೆ ಹೇಗೆ?

ಕಂಚುಕಿ.—ಆಲಿಸು—

ಚಂ॥ ಅರವಳಿಯಂ ಬಿಸುಟ್ಟ ದಶಕಂಧರನಿಂ ಬಹು ಬಾಧೆದಾಳ್ದು ಮೇಣ್।
ಕೊರಗುತಮೇಗಳುಂ ನೃಪತಿಯಾತ್ಮಜೆ ಲಂಕೆಯೊಳಿರ್ಪಳಲ್ತೆ ಆ॥
ಪರಿಯನೆ ಕೇಳುತುಂ ಮರುಗುವಾ ರಘುರಾಮನ ಕಜ್ಜಕಾಗಿಯೆ।
ವ್ಮರಸನುಸಿರ್ದಪಂ ಭರದೆ ಸಜ್ಜುಗೆಯಲ್ಕರಿ ಭೀಕರಮೆಮ್ಮ ಸೈನ್ಯಮಂ ॥೧॥

ಸೇನಾಪತಿ.—ಓಹೊ! ಹೀಗೆಯೊ! ಮಹಾರಾಜನಪ್ಪಣೆಯಂತೆಯೇ ಆಗಲಿ.

ಕಂಚುಕಿ.—ವಾನರ ಸೇನೆಯು ಸಿದ್ಧವಾಗಿರುವುದೆಂದು ಮಹಾರಾಜನಿಗೆ ಅರಿಕೆ ಮಾಡಲು ನಾನೂ ಹೋಗುವೆನು. (ಹೋಗುವನು).

(ಇದು ವಿಷ್ಕಂಭಕವು)

(ಆಮೇಲೆ ರಾಮ ಲಕ್ಷ್ಮಣ ಸುಗ್ರೀವ ಹನುಮಂತರು ಪ್ರವೇಶಿಸುವರು)

ರಾಮ.—

ಮ॥ ಸ್ರ॥ ಬಳಸಿರ್ದಾ ಸಾನು ಕುಂಜಂ ವಿಪಿನ ತತಿ ಯುತಂ ಮೇಘ ಸಾಮ್ಯಂ ಮಹೀಧ್ರಂ।
ಗಳುಮಂ ಸಿಂಹಂ ತರಕ್ಷು ದ್ವಿಪ ತತಿ ಸಮಿದಂಬಿಂ ಕರಂ ತೋರ್ಪ ನದ್ಯಂ॥
ಗಳುಮಂ ಪೂಗಾದ್ಯಗಳಿಂದಂ ಮೆರೆವ ಪುರಗಳಿಂ ರಮ್ಯಮಾಗಿರ್ಪರಣ್ಯಂ।
ಗಳುಮಂ ದಾಂಟುತ್ತೆ ಬಂದೆಂ ಕಪಿಪನ ಪಡೆಗೂಡಾಂ ಕಡಲ್ತೀರಕೀಗಳ್॥೨॥

* ಕ. ಸಾ. ಪ. ಪತ್ರಿಕೆಯ ೧೫ನೆಯ ಸಂಪುಟದ ೧ನೆಯ ಸಂಚಿಕೆಯ ಪುಟ ೨೭ರಿಂದ ಮುಂದುವರಿದುದು.

ಲಕ್ಷ್ಮಣ.—ಇವನು ಈ ಭಗವಂತನಾದ ವರುಣನು—

ಮ|| ಜಲಯುಕ್ತಾಭ್ರದೊಳಿಂದ್ರ ನೀಲ ಮಣಿವೊಲ್ ತೋರ್ದಪ್ಪ ನೀರಂ ಕರಂ।
ಲುಲಿತಂ ಫೇನ ತರಂಗ ಚಾರು ಸುಮನೋಹಾರಂ ಸಮಂತಚ್ಛ್ರಿಯಿಂ॥
ಸಲಿಯುತ್ತೈವ ನದೀ ಸಹಸ್ರ ಕರನೀ ಸ್ರೋತಸ್ವಿನೀ ವಲ್ಲಭಂ।
ಸಲೆ ಸಂಕಾಶಿಸುತಿರ್ದಪಂ ಶಯನಗೊಂಡಿರ್ಪಾ ರಮಾನಾಥನೋಲ್ ॥ ೩ ॥

ರಾಮ.—ಹೇಗೆ? ಹೇಗೆನ್ನುತ್ತಿರುವೆ?

ಕಂ|| ಪಗೆಯಂ ಕೊಲ್ಲಲ್ಕೆಯೆ ಈ।
ವಗೆ ಕಣೆಯುಂ ಕೆಯ್ಯೊಳಾಂತು ನಿಂದಿರ್ಪೆನ್ನಂ॥
ಪುಗಲಿಸದೆಯುಮಲ್ಲದವಂ।
ಮಿಗೆ ಬರ್ದುಕಿರ್ಪಂತೆಯುಂ ನಿರೋಧಿಪುದು ಕಡಲ್ ॥ ೪ ॥

ಸುಗ್ರೀವ.—ಓಹೊ! ಆಗಸದಲ್ಲಿ—

ಕಂ|| ನೀರಾಂತ ಮುಗಿಲ ವರ್ಣಂ।
ದೋರುತೆ ಸಲೆ ಮಿಸುನಿಯೊಡವೆದಳೆದೊಡಲಿಂ॥
ದೀ ರಕ್ಕಸನಾವೆಡೆಯಿಂ।
ಸಾರುವನುರಿಗೆಳಸಿ ಬರ್ಪ ಶಲಭನ ತೆರದಿಂ ॥ ೫ ॥

ಹನೂಮಾನ್.—ಓಹೊ! ವಾನರ ವೀರರಿರಾ! ನೀವೆಲ್ಲರೂ ಜಾಗರೂಕತೆಯಿಂದಿರಬೇಕು.

ಕಂ|| ಗಿರಿ ತರು ಪಿಡಿ ಪಲ್ ನಖಮುಡಿ।
ಯುರು ನಾದಮಿವರ್ಕಳಿಂದೆಯೀ ರಕ್ಕಸನಂ॥
ಹರಿಸುಗೆ ಮೊನೆಯೊಳ್ ಮೇಣ್ ವಾ।
ನರಪತಿಗಳ್ ಪೊರೆಗುಗೆಮ್ಮ ಮನುಜಾಧಿಪನಂ ॥ ೬ ॥

ರಾಮ.—ರಕ್ಕಸನೆ! ಹನೂಮಾನ್! ಸಾಕು ಸಾಕು? ತ್ವರೆಪಡದಿರು.

ಹನೂಮಾನ್.— ದೇವಾ! ಅಪ್ಪಣೆ.

(ಬಳಿಕ ವಿಭೀಷಣನು ಬರುವನು)

ವಿಭೀಷಣ.—ಓಹೊ! ರಾಘವನ ಶಿಬಿರದ ಬಳಿಗೆ ಬಂದವನಾದೆನು. (ಚಿಂತಿಸಿ) ದೂತನನ್ನು ಕಳುಹಿಸಿ, ಬರುವಿಕೆಯನ್ನು ತಿಳಿಯಿಸದಿರುವ ಹಗೆಯ ಕಡೆಯವನಾದ ನನ್ನನ್ನು ರಾಘವನು ಹೇಗೆ ತಿಳಿದುಕೊಳ್ಳುವನೊ? ಏಕೆಂದರೆ—

ಉ|| ಕೋಪಮನೊಂದಿದಾವನಿದಿರೊಳ್ ಮೊನೆಗೆಂದು ನಿಲಲ್ ನಿಳಿಂಪರಿಂ।
ವ್ಯಾಪಿಸಿ ಬಂದ ವಜ್ರಿಯುಮಶಕ್ತನೊ ಆ ಸುರವೈರಿಯಾನುಜಂ॥
ಕಾಪನಪೇಕ್ಷಿಸೀಗಳಿರದೈದಿದನೆಂದೊಡೆ ರಾಮನೆನ್ನನಿ।
ಸ್ನೇಪರಿಯಿಂದೆ ಭಾವಿಪನೊ ಎಂದೆನುತೆನ್ನೆರ್ದೆ ತಾಂ ಮಿಡುಂಕುಗುಂ ॥ ೭ ॥

ಅಥವಾ—

ಕಂ॥ ಅರದೊಳ್ ನೇರಿದನುಂ ಶರ ।
ಣರೊಳೆರಕಂಗೂಡಿದಾತನುಂ ಸಜ್ಜನನುಂ ॥
ಸರಿಯೆನಿಸಿದ ರಘುವರನಂ ।
ಪರಿಕಿಪೆನೆಂತುಟು ವಿಶುದ್ಧಮನನಾನೀಗಳ್ ॥ ೮ ॥

(ಕೆಳಗೆ ನೋಡಿ) ಓಹೊ! ಇದೇ ರಘು ಕುಲ ಪ್ರವರನಾದ ರಾಮನ ಶಿಬಿರವು; ಇಲ್ಲಿ ಇಳಿಯುವೆನು. (ಇಳಿದು) ಸರಿ, ಇಲ್ಲಿಯೇ ಇದ್ದುಕೊಂಡು ನನ್ನ ಬರುವಿಕೆಯನ್ನು ಸ್ವಾಮಿಗೆ ತಿಳಿಸುವೆನು.

ಹನೂಮಾನ್.—(ಮೇಲೆ ನೋಡಿ) ಓಹೊ! ಇದೇನಿದು! ಪೂಜ್ಯನಾದ ವಿಭೀಷಣನು!

ವಿಭೀಷಣ.—ಓಹೊ! ಹನೂಮಂತನು. ಹನೂಮಾನ್! ನಾನು ಬಂದಿರುವುದನ್ನು ಸ್ವಾಮಿಗೆ ಅರಿಕೆ ಮಾಡು.

ಹನೂಮಾನ್.—ಸರಿ, ಆಗಲಿ (ರಾಮನ ಬಳಿಗೆ ಹೋಗಿ) ಆರ್ಯನಿಗೆ ಜಯವಾಗಲಿ.

ಕಂ॥ ಒಡೆಯನೆ ಕೇಳ್ ನಿನಗಾಗಿಯೆ ।
ಒಡವುಟ್ಟಿದನಿಂದೆ ಕಡೆಯನೆಣಿಸೀಯೆರವಾಂ ॥
ತೊಡಲಂ ವಿಭೀಷಣಂ ನಿ ।
ನ್ನಡಿಮರೆಯಂ ಬೇಡೆ ಬಂದು ಬಾಗಿಲೊಳಿರ್ಪಂ ॥ ೯ ॥

ರಾಮ.—ಏನು! ಮರೆಯನ್ನು ಬೇಡಲು ಬಂದಿರುವನೆ? ವತ್ಸ! ಲಕ್ಷ್ಮಣ! ಹೋಗು, ಉಪಚರಿಸಿ ವಿಭೀಷಣನನ್ನು ಒಳಪುಗಿಸು.

ಲಕ್ಷ್ಮಣ.—ಆರ್ಯನಾಜ್ಞೆ.

ರಾಮ.—ಸುಗ್ರೀವ! ಏನೋ ಹೇಳಲು ಬಯಸುವವನಂತೆ ತೋರುತ್ತಿರುವೆ.

ಸುಗ್ರೀವ —ದೇವ! ರಾಕ್ಷಸರು ಮಾಯಾವಿಗಳು; ಕಪಟ ಯುದ್ಧವನ್ನು ಮಾಡುವವರು. ಆದಕಾರಣ ಚೆನ್ನಾಗಿ ತಿಳಿದು ವಿಭೀಷಣನನ್ನು ಇಲ್ಲಿಗೆ ಬರಮಾಡಿಸಬೇಕು.

ಹನೂಮಾನ್.—ಮಹಾರಾಜನೆ! ಹಾಗಲ್ಲ.

ಉ॥ ದೇವನೊಳಾವದೆಂತು ಪದ ಕಿಂಕರರಾಗಿಯೆ ಬಾಳ್ವೆವೋ ಸಮಂ ।
ತಾವಗವಿನಾ ವಿಭೀಷಣನುಮೆಂದುರೆ ಭಾವಿಪನೇಕೆನಲ್ಕೆ ಪಿಂ ॥
ದಾವೊಡವುಟ್ಟಿದಣ್ಣನೊಳಿವಂ ಮಿಗೆ ವಾದಿಸುತಿರ್ದುದಂ ಕರಂ ।
ರಾವಣ ರಾಜಧಾನಿಯೊಳೆ ಎನ್ನಯ ಕಣ್ಗಳಿನೀಕ್ಷಿಸಿರ್ದಪೆಂ ॥ ೧೦ ॥

ರಾಮ.—ಸರಿ. ಹಾಗಾದರೆ ಹೋಗು; ವಿಭೀಷಣನನ್ನು ಉಪಚರಿಸಿ ಕರೆದುಕೊಂಡು ಬಾ.

ಲಕ್ಷ್ಮಣ.—ಆರ್ಯನಾಜ್ಞೆ. (ನಡೆದು ಬಂದು) ಓಹೊ ವಿಭೀಷಣನು! ವಿಭೀಷಣ! ಕುಶಲವೆ?

ವಿಭೀಷಣ.—ಓಹೋ ಕುಮಾರ ಲಕ್ಷ್ಮಣನು! ಕುಮಾರ! ಈಗ ಕುಶಲಿಯಾದೆನು.

ಲಕ್ಷ್ಮಣ.—ವಿಭೀಷಣ! ಆರ್ಯನ ಬಳಿಗೆ ತೆರಳುವ.

ವಿಭೀಷಣ.—ಸರಿ (ತೆರಳುವರು).

ಲಕ್ಷ್ಮಣ.—ಆರ್ಯನಿಗೆ ಜಯವಾಗಲಿ.

ವಿಭೀಷಣ.—ಪೂಜ್ಯನು ಪ್ರಸನ್ನನಾಗಲಿ, ಸ್ವಾಮಿಯು ವಿಜಯನಾಗಲಿ.

ರಾಮ.—ಓಹೋ ವಿಭೀಷಣನು! ವಿಭೀಷಣ, ಕ್ಷೇಮವಷ್ಟೆ!

ವಿಭೀಷಣ.—ದೇವ! ಈಗ ಕ್ಷೇಮಿಯಾದೆನು.

ಕಂ॥ ಅರವಿಂದೇಕ್ಷಣನುಂ ಶರ।
ಣರಸುರೆ ಪಾಲಿಪನುಮೆನಿಪ ನಿನ್ನಯ ಪಾರ್ವಿಂ॥
ದರಸಾ ಲಾಲಿಸು ಕಲ್ಮಷ।
ವಿರಹಿತನುಂ ಕುಶಲಿಯುಂ ಕಣಾ ನಾನೀಗಳ್ ॥ ೧೧ ॥

ರಾಮ.—ಇಂದು ಮೊದಲು ನನ್ನ ಮಾತಿನಿಂದ ನೀನು ಲಂಕೇಶ್ವರನಾಗು.

ವಿಭೀಷಣ.—ಅನುಗೃಹೀತನಾದೆನು.

ರಾಮ.—ವಿಭೀಷಣ! ನಿನ್ನ ಬರುವಿಕೆಯಿಂದಲೇ ನಮ್ಮ ಕೆಲಸವು ಕೈಗೂಡಿತು. ಈಗ ಕಡಲನ್ನು ದಾಟುವುದಕ್ಕೆ ಉಪಾಯವಾವುದೆಂಬುದು ತಿಳಿಯದಿರುವುದಿಲ್ಲ.

ವಿಭೀಷಣ.—ದೇವ! ಇಲ್ಲಿ ತಿಳಿಯಬೇಕಾದುದಾವುದು? ದಾರಿಯನ್ನು ಕೊಡದಿದ್ದರೆ ಆರ್ಯನು ಸಾಗರನ ಮೇಲೆ ದಿವ್ಯಾಸ್ತ್ರವನ್ನು ಬಿಡಬಹುದಲ್ಲವೆ?

ರಾಮ.—ಸಾಧು ಸಾಧು! ವಿಭೀಷಣ! ಆಗಲಿ, ಹಾಗೆಯೇ ಮಾಡುವೆನು.

(ಎಂದು ಥಟ್ಟನೆದ್ದು, ಸಿಟ್ಟಿನಿಂದ)

ಕಂ॥ ಬಳಿಗುಡದಿರಲೆನಗೆ ಕಡಲ್।
ಜಳಮುಂ ಕಣೆಯಿಂದೆ ಕುಡಿಯಿಸೊಣಗಿಸಿ ಕೆಸರಂ॥
ಜಳಚರಮುಂ ತವಿಸುತ್ತಲೆ।
ಗಳ ದನಿ ಸಲೆಯಣಗುವಂತೆ ಬೇಗನೆ ಮಾಳ್ಪೆಂ ॥ ೧೨ ॥

ವರುಣ.—(ಪ್ರವೇಶಿಸಿ, ಸಂಭ್ರಮದಿಂದ)

ವೃ॥ ತಾರಗೆವಟ್ಟೆನಾಡುಗರ ಕಜ್ಜಕೆ ಮಾನವ ರೂಪನಾಂತ ಪಂ।
ಕೇರುಹ ನಾಭನಲ್ಲಿಯ ಪರಾಧವು ನಾಗಿಸಿಯಾಗಳಾತನಾ॥
ಕೂರಿದ ಸಿರ್ಜರಾರಿ ಹರ ಬಾಣದೆ ಭೀತಿಯನೊಂದಿದೆಂ ದಲಿ।
ನ್ನಾ ರಘುವಂಶ ದೀಪನಡಿದಾವರೆಯೇ ಮರೆ ಪೋಪೆನಲ್ಲಿಗಾಂ ॥ ೧೩ ॥

(ನೋಡಿ) ಓಹೋ ಭಗವಂತನು! ಇವನು—

ಕಂ॥ ಧೃತ ಶಾರ್ಙ್ಗ ಗದಾ ಚಕ್ರಂ।
ಕ್ಷಿತಿಗೆಲ್ಲಂ ತಾನೆ ಕಾರಣನೆನುತ್ತಿರಲುಂ॥
ಪತಿಕರಿಸುತೆ ಮಾನವನಾ।
ಕೃತಿಯಂ ಕಾರ್ಯಾರ್ಥಮಾಗಿ ಬಂದಿರ್ಪನಲೇ ॥ ೧೪ ॥

ತ್ರೈಲೋಕ್ಯಕಾರಣನೂ ಭಗವಂತನೂ ಎನಿಸಿದ ನಾರಾಯಣನಿಗೆ ನಮಸ್ಕರಿಸುವೆನು.

ಲಕ್ಷ್ಮಣ.—(ನೋಡಿ) ಆಃ! ಇವನಾರು?

ಮ ॥ ಮಣಿಯಿಂದೊಪ್ಪುವ ಮೌಳಿಯಿಂ ಮಿಸುಗುತುಂ ಕೆಂಪಾಂತ ಪೆರ್ಗಣ್ಗಳಿಂ।
ದೆಸೆಸಲ್ವೈದಿಲ ನೀಲ ವರ್ಣ ರುಚಿಯಿಂ ಮತ್ತೇಭ ಸಲ್ಲೀಲೆಯಿಂ॥
ದಣಿಯಾಂತೀ ಜಲರಾಶಿ ಮಧ್ಯದೊಳಗಿಂದೆಳ್ತಂದಪಂ ಬೇಗದಿಂ।
ಚಣದೊಳ್ ತೇಜದೆ ಜೀವ ಲೋಕಮನತೀವಂ ತಳ್ಗಿ ಪೋಲ್ ಗೆಯ್ದಪಂ॥ ೧೫॥

ವಿಭೀಷಣ.—ದೇವ, ಇದೊ! ಈತನೆ ಭಗವಂತನಾದ ವರುಣನು.

ರಾಮ.—ಏನು? ಈತನು ವರುಣನೆ? ಭಗವನಾ, ವರುಣ! ನಿನಗೆ ನಮಸ್ಕಾರವು.

ವರುಣ.—ದೇವೇಶನು ನನಗೆ ನಮಸ್ಕಾರವನ್ನು ಮಾಡುವುದು ಸರಿಯಲ್ಲ. ಅಥವಾ—

ಕಂ ॥ ಅರಗುವರ ಮುನಿಸಿದೇಕೈ।
ಸರಿ ಸಮನೇಂ ಪೇಳ ನಿನಗೆ ರೋಷದೊಳಾನಿಂ॥
ನರವರ ಬೇಗನೆ ಸೊಲ್ಲಿವು।
ದಿರದೀಗಳ್ ಗೆಯ್ಯಲಿರ್ಪ ಕಜ್ಜಮಿದೆನುತುಂ ॥ ೧೬ ॥

ರಾಮ.—ಲಂಕೆಗೆ ಹೋಗಲು ಪೂಜ್ಯನು ದಾರಿಯನ್ನು ತೋರಿಸಿಕೊಡಬೇಕು.

ವರುಣ.—ಇದೋ ದಾರಿಯು, ನೀನು ತೆರಳಬಹುದು. (ಮಾಯವಾಗುವನು)

ರಾಮ.—ಏನಿದು! ಭಗವಂತನಾದ ವರುಣನು ಕಣ್ಮರೆಯಾದನು. ವಿಭೀಷಣ! ಭಗವತ್ಪ್ರಸಾದದಿಂದ ಸಲಿಲಾಧಿಪನು ಅಲುಗದಿರುವುದನ್ನು ನೋಡು!

ವಿಭೀಷಣ.—ದೇವ! ಜಲನಿಧಿಯು ಈಗ ಎರಡು ಭಾಗವಾದಂತೆ ಕಾಣಿಸುತ್ತಿರುವುದು.

ರಾಮ.—ಹನೂಮಂತನೆಲ್ಲಿ?

ಹನೂಮಾನ್—ಸ್ವಾಮಿಗೆ ವಿಜಯವಾಗಲಿ!

ರಾಮ.—ಹನೂಮನ್! ಮುಂದೆ ನಡೆ.

ಹನೂಮಾನ್.—ಸ್ವಾಮಿಯಾಜ್ಞೆ! (ಎಲ್ಲರೂ ನಡೆದು ಬರುತ್ತ)

ರಾಮ.—(ನೋಡಿ, ವಿಸ್ಮಯದಿಂದ) ವತ್ಸ ಲಕ್ಷ್ಮಣ! ವಯಸ್ಯ ವಿಭೀಷಣ! ಮಹಾರಾಜ ಸುಗ್ರೀವ! ಸಖೇ ಹನೂಮನ್! ನೋಡಿ ನೋಡಿ! ಆಃ ಆಶ್ಚರ್ಯವು ಸಾಗರದ ಚೆಲ್ವು! ಇಲ್ಲಿಯಾದರೋ—

ಚಂ ॥ ಕೆಲವೆಡೆ ಫೇನದುರ್ಬು ಕೆಲದಾಣದೊಳೈದೆ ಝಷಾಕುಲಾಂಬು ಮೇಣ್।
ಕೆಲದಳದಲ್ಲಿ ಶಂಖ ತತಿ ಕರ್ಮುಗಿಲೋಲ್ ಕೆಲವು ಪ್ರದೇಶಮಿಂ॥
ತಲೆಗಳ ಮಾಲೆಯೊರ್ದೆಸ ನೆಗಳ್ಗಳ ಭೀತಿಯದೊಂದು ಠಾವಿನೊಳ್।
ಪುಲಿ ಸುಳಿ ಸಾಲ್ಗಳೊರ್ಕಡೆಯಲುಂಗದ ವಾರಿ ದಲೊಂದು ಭಾಗದೊಳ್॥ ೧೭॥

ಭಗವತ್ಪ್ರಸಾದದಿಂದ ಸಮುದ್ರವನ್ನು ದಾಂಟಿದೆವು.

ಹನೂಮಾನ್.—ದೇವ ಇದೊ! ಇದೇ ಲಂಕೆಯು.

ರಾಮ.—(ಹೆಚ್ಚು ಹೊತ್ತು ನೋಡಿ) ಅಯ್ಯೋ! ರಕ್ಕಸರೂರ ಸಿರಿಯು ಬೇಗನೆ ಹಾಳಾಗುತ್ತದೆಯಲ್ಲ!

ಕಂ॥ ತೊಡುವೆನ್ನ ಶರಾನಿಲನಿಂ।
　ದೊಡೆದುಂ ಕಪಿ ಸೈನ್ಯ ವೀಚಿಯಿಂದಂಡಲೆದುಂ॥
　ಫಡ ರಾವಣ ನಾವಿಕನಿಂ।
　ಬಿಡದುರುಳ್ವುದು ಕಡಲೊಳಳ್ದ ಹಡಗಿನ ತೆರದಿಂ　　॥ ೧೮ ॥

ಸುಗ್ರೀವ! ಈ ಸುವೇಲ ಪರ್ವತದಲ್ಲಿ ಸೇನಾ ನಿವೇಶವನ್ನು ಮಾಡಿಸು. (ಕುಳಿತುಕೊಳ್ಳುವನು)

ಸುಗ್ರೀವ.—ಸ್ವಾಮಿಯಪ್ಪಣೆಯಂತೆಯೆ. ನೀಲ? ಹೀಗೆ ಮಾಡು.

ನೀಲ.—ಮಹಾರಾಜನಾಜ್ಞೆ! (ಹೋಗಿ, ಬಂದು) ಜೀಯ! ಲಾಲಿಪುದು: ಸರಿಯಾಗಿ ಬಂದು ನಿಂತ ಸೇನೆಯಲ್ಲಿ, ಗುಂಪು ಗುಂಪಾಗಿ ಆರಿಸಲು ಪರೀಕ್ಷಿಸುತ್ತಿರುವಲ್ಲಿ, ಯಾವುದೊಂದು ಪುಸ್ತಕದಲ್ಲಿಯೂ ಗುರುತಿಸದಿರುವ ಇಬ್ಬರು ವಾನರರು ಸಿಕ್ಕಿರುವರು. ಈಗ ಮಾಡತಕ್ಕುದೇನೆಂಬುದನ್ನು ನಾವರಿಯೆವು. ಈ ವಿಷಯದಲ್ಲಿ ಸ್ವಾಮಿಯೇ ಆಜ್ಞಾಪಿಸಬೇಕು.

ರಾಮ.—ಅವರಿರ್ವರನ್ನೂ ಬೇಗನೆ ಬರಮಾಡು.

ನೀಲ.—ಸ್ವಾಮಿಯಾಜ್ಞೆ! (ಹೋಗುವನು)

(ಬಳಿಕ ನೀಲನು ವಾನರ ರೂಪಿಗಳಾದ ಶುಕ ಸಾರಣರನ್ನು ಹಿಡಿದುಕೊಂಡಿರುವ ವಾನರರೊಡನೆ ಬರುವನು.)

ವಾನರರು.—ಎಲವೋ! ಹೇಳಿರಿ, ನೀವಿಬ್ಬರೂ ಯಾರು ಹೇಳಿರಿ.

ಇಬ್ಬರೂ.—ಜೀಯ! ನಾವಿಬ್ಬರೂ ಆರ್ಯ ಕುಮುದಕನ ಸೇವಕರು.

ವಾನರರು.—ಜೀಯ! ಆರ್ಯ ಕುಮುದಕನ ಸೇವಕರೆಂದು ತಮ್ಮನ್ನು ಮರೆಮಾಚಿಕೊಳ್ಳುವರು.

ವಿಭೀಷಣ.—(ನಿಧಾನವಾಗಿ ಶುಕ ಸಾರಣರನ್ನು ನೋಡಿ)

ಕಂ॥ ಇವರಲ್ತೆಮ್ಮಯ ಪಡೆವಳ।
　ರಿವರಲ್ತು ವನೌಕಸರ್ಕಳುಂ ರಾವಣನಿಂ॥
　ತವೆ ಚೋದಿತರಾಗೈತಂ।
　ದವರಾ ಶುಕ ಸಾರಣರ್ಕಳೆಂಬುವ ದೈತ್ಯರ್　　॥ ೧೯ ॥

ಇಬ್ಬರೂ.—(ಒಳಗೆ) ಅಯ್ಯೋ! ಕುಮಾರನಿಂದ ನಮ್ಮ ಗುರುತು ಬಯಲಾಯಿತು. (ಹೊರಗೆ) ಆರ್ಯ! ನಾವಾದರೋ ರಾಕ್ಷಸ ರಾಜನ ವಿಪ್ರಪತ್ತಿಯಿಂದ ನಾಶವಾಗುವ ರಾಕ್ಷಸ ಕುಲವನ್ನು ಕಂಡು ಆಶ್ರಯನೆಲ್ಲಿಯೂ ಸಿಕ್ಕದಿರಲು ಆರ್ಯನನ್ನು ಸೇರಬೇಕೆಂದು ವಾನರ ರೂಪದಿಂದ ಬಂದೆವು.

ರಾಮ.—ವಯಸ್ಯ ವಿಭೀಷಣ! ನೀನು ಹೇಗೆ ತಿಳಿಯುವೆ?

ವಿಭೀಷಣ.—ದೇವ!

ಕಂ ॥ ಇವರಾ ರಕ್ಕಸರಾಯಂ ।
ಗೆ ವಿಶೇಷ ಹಿತರ್ ಸಮಂತು ಮಂತುಗಳರಸಾ ॥
ಬುವಿಯೊಳಸು ಪೋಪಳಲ್ ಸಂ ।
ಭವಿಸಿದೊಡಂ ಲಂಕೆಯರಸನಂ ಬಿಟ್ಟುಳಿಯರ್ ॥ ೨೦ ॥

ಆದಕಾರಣ ಯೋಗ್ಯವಾದ ದಂಡನೆಯನ್ನು ಸ್ವಾಮಿಯು ವಿಧಿಸಬೇಕು.

ರಾಮ.—ವಿಭೀಷಣ! ಹಾಗಲ್ಲ.

ಕಂ ॥ ಇವರಂ ದಂಡಿಪುದರಿನೆನ ।
ಗೆ ವಲಂ ಪೆರ್ಚುಗೆ ನೆಗಳ್ಪುದಿಲ್ಲಂ ಮೇಣ್ ದಾ ॥
ನವ ಪತಿಗೆ ಕುಂದುಮಿಲ್ಲಂ ।
ಪವಣೆಂತದರಿಂದೆ ಪೋಕೆ ಬಿಡಿರಿರ್ಪರುಮಂ ॥ ೨೧ ॥

ಲಕ್ಷ್ಮಣ.—ಬಿಟ್ಟುಬಿಡುವುದೇ ಆದರೆ ಶಿಬಿರವನ್ನೆಲ್ಲ ಹೊಕ್ಕು ಪರೀಕ್ಷಿಸಿ, ಆಮೇಲೆ ಬಿಡುಗಡೆಗೆ ಆರ್ಯನು ಆಜ್ಞಾಪಿಸಬೇಕು.

ರಾಮ.—ಲಕ್ಷ್ಮಣನು ಹೇಳಿದುದು ಉಚಿತವಾಗಿರುವುದು. ನೀಲ! ಹೀಗೆ ಮಾಡಬಹುದು.

ನೀಲ.—ಸ್ವಾಮಿಯಾಜ್ಞೆ! (ಎಂದು ಅವರನ್ನು ಹೊರಡಿಸುವನು)

ರಾಮ.—ಅಥವಾ, ಅವರಿಲ್ಲಿ ಬರಲಿ.

ಇರ್ವರೂ.—ಇದೊ! ಬಂದಿರುವೆವು.

ರಾಮ.—ಆ ರಾಕ್ಷಸೇಂದ್ರನಿಗೆ ಈ ನನ್ನ ಮಾತನ್ನು ಹೇಳಿ:

ಕಂ ॥ ಮಡದಿಯನೆನ್ನವಳಂ ನೀಂ ।
ಮಿಡುಕದೆಯಪಹರಿಸಿ ಜಗಳಮಂ ಕೊಂಡುದರಿಂ ॥
ದೊಡನೆ ರಣಾತಿಥಿಯಾಗೀ ।
ಕಡೆಗೈದಿದೆನಲ್ಲದಲ್ತು ನಿನ್ನಂ ನೋಡಲ್ ॥ ೨೨ ॥

ಎಂದು.

ಇರ್ವರೂ.—ಸ್ವಾಮಿಯಾಜ್ಞೆ! (ಹೋಗುವರು)

ರಾಮ.—ವಿಭೀಷಣ! ನಾವೂ ಸಹ ಸೈನ್ಯವನ್ನು ಪರೀಕ್ಷಿಸುವ.

ವಿಭೀಷಣ.—ಸ್ವಾಮಿಯಾಜ್ಞೆ!

ರಾಮ.—(ನಡೆದು, ನೋಡಿ) ಓಹೊ! ಸೂರ್ಯನು ಮುಳುಗುತ್ತಿರುವನು. ಈಗಲಾದರೊ—

ಚಂ ॥ ಪಡುವಲೆ ಕೋಪಸೇರಿ ನಿಜ ರಶ್ಮಿಗಳಿಂದೆ ಕಡಂಗಿ ಸಂಜೆಯಿಂ ।
ಕಡುಚೆಲುವಾಂತ ಮೆಯ್ಯನುರೆ ಪಿಂಜುತಲಿರ್ದಪನಲ್ತೆ ಭಾನು ಕೆಂ ॥
ಪಡಸಿದ ಬಟ್ಟೆಯುಂ ಪೊದಿಸಿದಾಸೆಯ ಕುಂಭದೊಳಂದಕಾಗಿಯೆಂ ।
ಬಿಡೆ ಪರ ಹೇಸುದಿಂದೆ ಸಮೆದಿರ್ಪ ಸುರಂಜಿತ ಪಚ್ಚದಂಪದಿಂ ॥ ೨೩ ॥

**ಪಂಡಿತ ಬಿ. ನಂಜುಂಡಸ್ವಾಮಿ.**

(ಮುಂದುವರಿಯುವುದು)

# ನೈಷಧೀಯ ಚರಿತಂ

(ಪರಿಷತ್ಪತ್ರಿಕೆ, ಸಂಪುಟ ೧೫, ಸಂಚಿಕೆ ೨, ಪುಟ ೧೩೪ರಿಂದ ಮುಂದುವರಿದುದು)

## ದ್ವಾದಶ ಸರ್ಗವು

ತರುವಾಯ, ಇನ್ನೂ ಬಾರದ ಎಷ್ಟೋ ಮಂದಿ ರಾಜರು ತಮ್ಮ ಪತ್ನಿಯರಲ್ಲಿದ್ದ ದಾಕ್ಷಿಣ್ಯದಿಂದ ವಿಲಂಬಿಸುವವರಾಗಿ, ದಮಯಂತಿಯ ಸ್ವಯಂವರದಿಂದ ಆಕುಲ ಗೊಂಡವರಾಗಿ ಉತ್ತಮ ರಥಗಳನ್ನೇರಿ ಕುಂಡಿನಪುರಕ್ಕೆ ಅಲಂಕಾರಭೂತವಾದ ರಾಜ ಸಮಾಜವನ್ನು ಬಂದು ಸೇರಿದರು. ಹೀಗೆ ಹೊಸದಾಗಿ ರಾಜ ಸಮೂಹವು ಬರಲಾಗಿ ಪೂರ್ವದಲ್ಲಿ ಬಂದು ಕುಳಿತಿದ್ದ ರಾಜರೆಲ್ಲ ದಮಯಂತಿಯ ವೈರಾಗ್ಯದಿಂದ ಬೇಸತ್ತು ನಿಟ್ಟುಸಿರು ಬಿಡುತ್ತಿರುವಾಗ ನೂತನವಾಗಿ ಬಂದ ರಾಜರು ದಮಯಂತಿಯ ಪ್ರಾಪ್ತ್ಯಾಶೆ ಯಿಂದ ಸಂತೋಷಗೊಳ್ಳುತ್ತಿರುವಾಗ ಮುಂದಿನ ಕಾರ್ಯವು ನಡೆಯತೊಡಗಿತು. ಆಗ ದಮಯಂತಿಯ ಯಾನ ವಾಹಕರು ಆಕೆಯ ಪಾದ ಯಂತ್ರಣದಿಂದ ಅವಳಾಶೆ ಯನ್ನರಿತು, ಈ ದಮಯಂತಿಯು ವಾಹನವನ್ನೇರಿ ಬರುತ್ತಿದ್ದರೂ ಬಲು ದಣಿದಳು ಎಂದು ನೆವಮಾಡಿಕೊಂಡು ಅವಳು ಏರಿದ್ದ ದಂಡಿಗೆಯನ್ನು ಅಲ್ಲಿಯೇ ರಾಜ ಸಭಾ ಮಧ್ಯದಲ್ಲಿ ಒಂದೆಡೆ ಇಳಿಸಿ ಕುಳಿತುಕೊಂಡರು. ಆಗ ಸನಾತನೆಯಾದ ಆ ಸರಸ್ವತಿಯು ಮುಂದೆ ಸಾಲಾಗಿ ಕುಳಿತಿರುವ ರಾಜರನ್ನು ಲಕ್ಷಿಸಿ ಅಮೃತ ಸರೋವರದಲ್ಲಿ ಮುಳುಗಿ ಎದ್ದಂತಿರುವ ಮಾತುಗಳನ್ನು ಹೊರಡಿಸತೊಡಗಿದಳು. "ದಮಯಂತಿ! ಈ ಮುಂದೆ ಕುಳಿತಿರುವ ಸುವರ್ಣ ಕೇತಕೀ ದಳದಂತೆ ಮೈಬಣ್ಣವುಳ್ಳ ಅಯೋಧ್ಯಾ ನಾಥನಾದ ಈ ಋತುಪರ್ಣನನ್ನು ವರಿಸುವೆಯಾದರೆ ವರಿಸು: ಈತನು ನಿನ್ನಲ್ಲಿಟ್ಟಿರುವ ಮನಸ್ಸಿನಿಂದ ತನ್ನ ಪವಿತ್ರವಾದ ಅಯೋಧ್ಯಾ ನಗರಿಯನ್ನು ಕೂಡ ಎಣಿಸುವುದಿಲ್ಲ. ಈತನ ಮುಖಚಂದ್ರ ಚಂದ್ರಿಕೆಯು ಯಾವಾಗಲೂ ಚಕೋರದಿಂದ ಪಾನಮಾಡಲ್ಪಡಲಿಲ್ಲ. ಆದರೂ ನಿನ್ನ ನೇತ್ರ ಚಕೋರಗಳು ಈ ರಾಜನ ಮುಖ ಚಂದ್ರಮನ ಕಾಂತಿಯನ್ನು ಕುಡಿಯಲು ಇಚ್ಛಿಸುವುದಿಲ್ಲವೇ ಏನು? ನೀನು ಈ ರಾಜನೊಂದಿಗೆ ಸರಯೂ ನದಿಯಲ್ಲಿ ಜಲಕ್ರೀಡಾ ವಿನೋದದಿಂದಿರುವಾಗ ನಿನ್ನ ಕೊರಳಲ್ಲಿ ಹರಿದುಹೋಗಲು ಸಿದ್ಧವಾದ ಮುತ್ತಿನ ಸರಗಳು, ಸ್ಥೂಲವಾದ ನಿನ್ನ ಕುಚ ತಟದಲ್ಲಿ ಆ ಸರಯೂ ನದಿಯ ತೆರೆಗಳಿಂದ ಸಿಡಿದ ಹನಿಗಳ ಮಾಲೆಯಂತೆ ಶೋಭಿಸಿ ವಿನೋದವನ್ನುಂಟುಮಾಡುವುವು. ಈ ಋತುಪರ್ಣರಾಯನ ಕುಲಸ್ಥ ರಾದ ಪೂರ್ವಿಕರು ಸಮುದ್ರವನ್ನು ಅಗೆದು ಆಳವಾಗಿ ಮಾಡಿದರು. ಅಷ್ಟಲ್ಲದೆ, ಇವನ ಕುಲದ ಪೂರ್ವಿಕನಾದ ಭಗೀರಥನಿಂದ ತರಲ್ಪಟ್ಟ ಗಂಗಾ ಪ್ರವಾಹದಿಂದ ಸಮುದ್ರವು ತುಂಬಿತು. ಅಲ್ಲದೆ, ಇವನ ಕುಲದಲ್ಲಿಯೇ ಮುಂದೆ ಹುಟ್ಟುವ ರಾಮನಿಂದ ಆ ಸಮುದ್ರವು ಕಟ್ಟಲ್ಪಡುವುದು. ಇಂತಹ ಕಾರ್ಯಗಳಿಂದ ಈ ಋತು

ಪರ್ಣನ ಕೀರ್ತಿಯು ಶತಮುಖವಾಗಿ ಹರಿಯುತ್ತಿರುವುದು. ಈ ಋತುಪರ್ಣನ ಕೀರ್ತಿಯೆಂಬ ಕ್ಷೀರ ಸಾಗರವನ್ನು ವರ್ಣಿಸುವುದಕ್ಕಾಗಿ ಅದರಲ್ಲಿ ಪ್ರವೇಶಿಸಿದ ಕವಿಗಳ ವಚನವು ಅದನ್ನು ಉತ್ತರಿಸಲಾರದೆ ಅಗಾಧವಾದ ಆ ಸಾಗರದಲ್ಲಿ ಮುಣುಗಿರುವುದು. ಅಲ್ಲದೆ, ಈ ರಾಜನ ಗುಣಗಣವನ್ನು ಲೆಕ್ಕ ಮಾಡುವುದಕ್ಕಾಗಿ ತೊಡಗಿದ ಶತ್ರುರಾಜರ ಕೀರ್ತಿಯೆಂಬ ಲೆಕ್ಕಣಿಕೆಯು ಆ ಕೆಲಸವನ್ನು ಪೂರಯಿಸ ಲಾರದೆ ದುರ್ಬಲವಾಗಿ ಹೋಗಿರುವುದು. ಸೂರ್ಯವಂಶಾಂಕುರನಾದ ಈ ಮಹಾರಾಯನು ವರ್ಣನಾತೀತನಾದವನು. ಈ ಮಹಾರಾಯನಿಗೆ ಯುದ್ಧ ಪ್ರಸಕ್ತಿಯು ಒದಗಿದಾಗ ಇವನ ಮೈಮೇಲೆ ವೀರ ರಸದ ಅಂಕುರಗಳೋ ಎಂಬಂತೆ ಉತ್ಸಾಹ ಸೂಚಕವಾದ ರೋಮಾಂಚವಾಗುತ್ತಿರುವುದು. ಅದೂ ಅಲ್ಲದೆ, ಯುದ್ಧ ಕಾಲದಲ್ಲಿ ವಂದಿ ಜನರು ಮಾಡುತ್ತಿರುವ ಇವನ ಸ್ತುತಿಪಾಠಗಳೆಂಬ ಮಂತ್ರಗಳನ್ನು ಕೇಳಿದಾಗ ಶತ್ರುರಾಜರ ಭುಜಗಳೆಂಬ ಸರ್ಪಗಳು ಸ್ತಂಭಿಸಿ ಹೋಗುವುವು. ಚತುರ್ಯುಗ ಸಹಸ್ರ ಪರ್ಯಂತವಾಗಿರತಕ್ಕ ಬ್ರಹ್ಮನ ಒಂದು ಹಗಲಿನ ಅಂತರದ ವರೆಗೂ ಈ ರಾಜನ ಪ್ರತಾಪ ಸೂರ್ಯನು ದಿಗಂತದಲ್ಲಿ ಪ್ರಕಾಶಿಸುತ್ತಿರುವನು. ಸಮುದ್ರ ಗರ್ಭದಲ್ಲಿ ಪ್ರಜ್ವಲಿಸುವ ಬಾಡಬಾಗ್ನಿಯು ಈ ರಾಜನ ಯಶಸ್ಸೂರ್ಯನ ಪ್ರತಿ ಬಿಂಬವೆಂಬಂತೆ ಪ್ರಜ್ವಲಿಸುತ್ತಿರುವುದು. ಈ ರಾಜನ ಭುಜ ಯುಗ ಯಶಃ ಪರಂಪರಾ ರೂಪವಾದ ಭಾಗೀರಥಿಯು ಯುದ್ಧ ಭೂಮಿಯಲ್ಲಿ ಶತ್ರುಗಳ ಅಕೀರ್ತಿ ರೂಪವಾದ ಯಮುನೆಯೊಡನೆ ಸಂಗಮವನ್ನು ಹೊಂದಿದಳು. ಆ ಗಂಗಾ ಯಮುನಾ ಸಂಗಮದಲ್ಲಿ ಮುಳುಗಿದ ಕ್ಷತ್ರಿಯ ವೀರರು ರಂಭೆಯೆಂಬ ಅಪ್ಸರಸ್ತ್ರೀಯ ಆಲಿಂಗನ ಸುಖಕ್ಕೆ ಸ್ಥಾನವಾದ ನಂದನ ವನದಲ್ಲಿ ವಿಹಾರೇಚ್ಛೆಯನ್ನು ಆರಂಭಿಸುವರು ".

ಭೀಮ ಪುತ್ರಿಯಾದ ಆ ಭೈಮಿಯು ಈ ಪ್ರಕಾರ ಹೇಳಿದ ಶ್ರುತಿ ಮನೋಹರ ವಾದ ಆ ಋತುಪರ್ಣ ರಾಜನನ್ನು ಸ್ತೋತ್ರ ಮಾಡುತ್ತಿರುವ ಸರಸ್ವತೀ ದೇವಿಯ ವಾಕ್ಯಗಳಿಂದ ಆಶ್ಚರ್ಯ ಹೊಂದಿದವಳಾದರೂ ಮನು ವಂಶದಲ್ಲಿ ಹುಟ್ಟಿದವನಾದ ಆ ಋತುಪರ್ಣನ ವಿಷಯದಲ್ಲಿ ತನಗುಂಟಾದ ನಿಷೇಧವನ್ನು ಶಿರಃಕಂಪನದಿಂದ ಸೂಚಿಸಿದಳು. ಮುಂದೆ, ಕೋಕಿಲ ವಾಣಿಯಾದ ವಾಗ್ದೇವತೆಯು ಬೇರೊಬ್ಬ ಯುವಾ ಪುರುಷನನ್ನು ಕೈಯಿಂದ ತೋರಿಸುವವಳಾಗಿ ಚಂದ್ರಮುಖಿಯಾದ ಆ ದಮಯಂತಿಗೆ ಆ ರಾಯನನ್ನು ವಿವರಿಸತೊಡಗಿದಳು.

"ಕುರಂಗಾಕ್ಷಿ! ಇವನು ಪಾಂಡ್ಯರಾಜರಲ್ಲಿ ಅತ್ಯುತ್ತಮನು. ಚಂದ್ರನಂತೆ ಸುಂದರನಾದ ಈ ರಾಯನನ್ನು ಕಡೆಗಣ್ಣಿನಿಂದಾದರೂ ಒಮ್ಮೆ ನೋಡು. ಕೀರ್ತಿ ಯೆಂಬ ನರ್ತಕಿಯು ಭೂಮಿಯಲ್ಲಿ ನುತ್ತಾಡಿ ಕೊನೆಗೆ ನಿರಾಲಂಬವಾದ ಆಕಾಶದಲ್ಲಿ ಕೂಡ ನರ್ತಿಸುವುದಕ್ಕೆ ಕಲಿತು, ಕೊನೆಗೆ ಮಹಾ ವಂಶ ಸಂಭೂತನಾದ ಈ ಪಾಂಡ್ಯರಾಯನನ್ನು ಆಶ್ರಯಿಸಿ ಕುತೂಹಲದಿಂದ ನರ್ತಿಸುತ್ತಿದ್ದಾಳೆ. ಈ ರಾಜನ ಭಯದಿಂದ ಶತ್ರು ರಾಜರೆಲ್ಲ ತಂತಮ್ಮ ರಾಜ್ಯವನ್ನು ಬಿಟ್ಟು ಅರಣ್ಯದ ಪಾಲಾಗಲು, ಅವರ ಸಂಚಾರದಿಂದ ಮುಂದೆ ಕ್ರಮವಾಗಿ ಅರಣ್ಯಗಳಿಗೆಲ್ಲ ಅಟವಿಯೆಂಬ ಹೆಸ

ರಾಯಿತು. ಆ ರಾಜನ ಕೀರ್ತಿಯು ಕೂಡ ತಿರುಗಿ ಅರಣ್ಯವನ್ನೇ ಸೇರಿ ಅಲ್ಲಿ ತನ್ನ ವಿಲಾಸ ಮಂದಿರವನ್ನು ನೆಲೆಗೊಳಿಸಿತು. ಈ ವೀರನಾದ ಪಾಂಡ್ಯರಾಜನನ್ನು ಬಿಟ್ಟು ಇನ್ನೊಬ್ಬ ವೀರನು ಯಾವನಿರುವನು? ಇವನ ದಿಗಂತ ವಿಶ್ರಾಂತವಾದ ಕೀರ್ತಿಯು ಭೂದೇವಿಯು ಲೇಪಿಸಿಕೊಂಡ ಚಂದನ ಗಂಧದಂತೆ ಭೂಮಿಯನ್ನೆಲ್ಲ ವ್ಯಾಪಿಸಿ ಸಪ್ತ ಸಮುದ್ರಗಳ ಆಚೆಯ ದಡವನ್ನು ಸೇರಿ ಅಲ್ಲಿಯ ಜನರಿಂದ ಹಾಡಲ್ಪಡುತ್ತಿರುವುದು. ಅಲ್ಲದೆ, ಈ ರಾಜನ ಪಾದ ಯುಗಳದಲ್ಲಿ ಸದಾ ಬೀಳುತ್ತಿರುವ ರಾಜರ ಚೂಡಾ ರತ್ನಗಳ ಕಾಂತಿಯಿಂದ ಉಲ್ಲಾಸಗೊಳ್ಳುತ್ತಿರುವ ನಖ ಚಂದ್ರರುಳ್ಳ ಈ ಮಹಾರಾಯನ ಸೌಭಾಗ್ಯವನ್ನೇನು ಹೇಳಲಿ! ಈ ಮಹಾರಾಯನ ಪ್ರತಾಪಾಗ್ನಿಯಿಂದ ಉಂಟಾದ ಪರಾಜಯವೆಂಬ ಮಸಿಯಿಂದ ಮಲಿನತೆಯನ್ನು ಹೊಂದಿದ ಶತ್ರು ಸೇನಾ ಭಟರೆಂಬ ತಿಂದುಕಾರಣ್ಯಗಳಲ್ಲಿ ಆ ಅಗ್ನಿಯು ಪ್ರಜ್ವಲಿಸಲಾಗಿ ಸಿಡಿದ ಕಿಡಿಗಳೇ ಶಿವನ ಫಾಲಾಕ್ಷಿಯಾಗಿಯೂ, ಸೂರ್ಯನಾಗಿಯೂ, ಅಗ್ನಿಯಾಗಿಯೂ, ಇಂದ್ರನ ವಜ್ರಾಯುಧವಾಗಿಯೂ ಮಾರ್ಪಟ್ಟು ಮೇಲೆ ಪ್ರಕಾಶಿಸುತ್ತಿರುವುವು. ಅಲ್ಲದೆ, ಈ ಪಾಂಡ್ಯರಾಜನ ಭಯಂಕರವಾದ ಸಮರವನ್ನು ಕಾಣುವುದಕ್ಕಾಗಿ ಬಂದ ದೇವತೆಗಳೊಡನೆ ಬಂದಿದ್ದ ಪೃಥುರಾಜನು ರಣ ಭೂಮಿಯಲ್ಲಿ ಸಂಚರಿಸುತ್ತಿರುವ ಗಿರಿಗಳಂತೆ ತೋರುತ್ತಿರುವ ಇವನ ಮದ ಗಜಗಳನ್ನು ಕಂಡು ತಿರುಗಿ ಇನ್ನೊಮ್ಮೆ ಪರ್ವತಗಳನ್ನು ಕಿತ್ತೆಸೆಯಲಿಕ್ಕಾಗಿ ಹವಣಿಸುತ್ತಿರುವನು".

ಆಗ ಇಂಗಿತಜ್ಞಳಾದ ಒಬ್ಬ ದಾಸಿಯು ಭೈಮಿಯನ್ನು ಕುರಿತು :—"ಸ್ವಾಮಿನಿ! ಇಗೋ ಈ ಕಡೆ ಆ ವಿನೋದವನ್ನು ನೋಡು. ಸೌಧಾಗ್ರದಲ್ಲಿ ನರ್ತಿಸುತ್ತಿರುವ ಆ ಧ್ವಜ ಪಟಾಗ್ರದಲ್ಲಿ ಆ ಕಾಗೆಯು ಹೇಗೆ ಕುಳಿತಿರುವುದು!" ಹೀಗೆಂದು ದಾಸಿಯು ಅಪ್ರಸ್ತುತವಾಗಿ ಮಾತಾಡಲು, ಕುಳಿತಿರುವ ಸಭಾಸದರೆಲ್ಲ ತಮ್ಮ ನಗೆಯಿಂದ ಸಭೆಯನ್ನು ಬಿಳುಪಾಗಿ ಮಾಡಿದರು. ಈ ಬಿಳುಪಿನ ದೆಸೆಯಿಂದ ಪಾಂಡ್ಯರಾಜನ ವಿವರ್ಣತ್ವವು ಸ್ಪಷ್ಟವಾಗಿ ತೋರತೊಡಗಿತು. ಲೋಕ ಪದ್ಧತಿಯೇ ಹೀಗೆ: ಎಲ್ಲಿ ಶ್ವೇತ ವರ್ಣವು ಧಾರಾಳವಾಗಿ ಪ್ರಕಾಶಿಸುವುದೋ ಅಲ್ಲಿ ಕೃಷ್ಣವರ್ಣವೂ ಸ್ಪಷ್ಟವಾಗಿ ಕಂಡುಬರುವುದು. ತರುವಾಯ, ಮಹೇಂದ್ರ ಪರ್ವತಾಧೀಶ್ವರನಾದ ಮಹೇಂದ್ರ ರಾಜನನ್ನು ತೋರಿಸಿ ವಾಗ್ದೇವಿಯು, "ಎಲೆ ದಮಯಂತಿ! ನಿನ್ನ ಸ್ವಯಂವರದ ಉದ್ದೇಶದಿಂದ ಇಲ್ಲಿಗೆ ಬಂದ ಈ ಮಹೇಂದ್ರ ಶೈಲಾಧೀಶ್ವರನನ್ನಾದರೂ ವರಿಸು. ಆ ಮಹೇಂದ್ರ ಪರ್ವತದಲ್ಲಿ ಕಳಿಂಗ ದೇಶೋದ್ಭವಗಳಾದ ಆನೆಗಳ ಕುಂಭಗಳೊಂದಿಗೆ ನಿನ್ನ ಕುಚ ದ್ವಯಗಳ ಸಾಮ್ಯವನ್ನು ಪರೀಕ್ಷಿಸಬಹುದು. ಅದಲ್ಲದೆ, ಈ ಮಹೇಂದ್ರನಾಥನು ಬಂದನೆಂದು ಜನರಾಡಿಕೊಳ್ಳುವ ಮಾತಿನಿಂದಲೇ ಭಯಪಟ್ಟ ಶತ್ರುಗಳು ದೇಶ ಕೋಶಗಳನ್ನು ಬಿಟ್ಟು ಅರಣ್ಯದ ಪಾಲಾದರೂ, ಅಲ್ಲಿಯೂ ಅವರಿಗೆ ಸುಖವುಂಟಾಗಲಿಲ್ಲ. ಮಹೇಂದ್ರನಾಥನು ಬಂದನೆಂದು ಜನರಾಡಿಕೊಳ್ಳುವ ಮಾತುಗಳನ್ನು ಕೇಳಿ ಅಭ್ಯಾಸವಾದ ಗಿಳಿಗಳು ಅರಣ್ಯದಲ್ಲಿಯೂ ಆಗಾಗ ಈ ಮಾತನ್ನು ನುಡಿದು ಸದಾ ಶತ್ರುಗಳಿಗೆ ಭಯವನ್ನುಂಟುಮಾಡುತ್ತಿರುವುವು. ಈ ಮಹೇಂದ್ರ

ನಾಥನಿಂದ ಭಯಗೊಂಡು ಓಡಿಹೋದ ಶತ್ರುರಾಜರಿಂದ ಅರಣ್ಯದಲ್ಲಿ ಬಿಡಲ್ಪಟ್ಟ ಅವರ ಪತ್ನಿಯರನ್ನು ಅಲ್ಲಿರುವ ಕಿರಾತ ಸ್ತ್ರೀಯರು ಕಂಡು, ನಿಮ್ಮ ದೇಶದಲ್ಲಿ ವಿಶೇಷ ವಿಷಯವೇನೆಂದು ಕೇಳಲು ಆ ರಾಜ ಪತ್ನಿಯರು, ಚಂದ್ರ ಕಿರಣವು ನಮ್ಮ ದೇಶದಲ್ಲಿ ತಂಪಾಗಿದ್ದುದು ಇಲ್ಲಿ ಬಿಸಿಯಾಗಿ ತೋರುತ್ತಿದೆ, ಇದೇ ವಿಶೇಷವೆಂದು ನುಡಿದರು. ದಮಯಂತಿ! ಈ ಭೂಲೋಕದ ಊರ್ವಶಿಯಾದ ನೀನು ನಿನ್ನ ಸೌಂದರ್ಯಾದಿ ಗುಣಗಳಿಂದ ಈ ಮಹೇಂದ್ರನಾಥನನ್ನು ನಿನ್ನ ವಶವರ್ತಿಯನ್ನಾಗಿ ಮಾಡಿಕೊಂಡು ಮುಂದೆ ಧನುಸ್ಸು, ಬಾಣ, ಗುಣಗಳೆಂಬ ಈ ಮೂರರಿಂದ ರಾಜರನ್ನೆಲ್ಲ ವಿಧೇಯರನ್ನಾಗಿ ಮಾಡಿಕೊಂಡು ಪರಾಕ್ರಮವನ್ನು ತೋರಿಸುವುದಿಲ್ಲವೇ ಏನು? ಈ ಮಹೇಂದ್ರನಾಥನಿಂದ ಭಯಗೊಂಡ ಶತ್ರು ಪತ್ನಿಯರು ಸೇರಿ ಗುಹೆಗಳಲ್ಲಿ ಹಗಲನ್ನು ಕಳೆಯುವವರಾಗಿ ಸಾಯಂಕಾಲವಾಗುತ್ತಿರಲು, ಆ ಗುಹೆಯಿಂದ ಹೊರಹೊರಟು, ಮೂಡಿ ಬರುತ್ತಿರುವ ಚಂದ್ರನನ್ನು ಕಂಡು ಕ್ರೀಡಾ ಹಂಸವೆಂಬ ಭ್ರಾಂತಿಯಿಂದ ಅದನ್ನು ತಂದುಕೊಡಬೇಕೆಂದು ಪೀಡಿಸುತ್ತಿರುವ ಮಗುವನ್ನು ಕಂಡು ಅಳುತ್ತಿರುವ ತಾಯಿಯ ಕಣ್ಣೀರಲ್ಲಿ ಪ್ರತಿಬಿಂಬಿಸುವ ಚಂದ್ರಮಂಡಲವನ್ನು ಕಂಡು ಹಂಸವು ಕೈಸೇರಿತೆಂದು ಎಣಿಸಿ ನಗುತ್ತಿರುವ ಮಗುವನ್ನು ಕಂಡು ಸಮಾಧಾನಗೊಳ್ಳುತ್ತಿರುವರು. ಈ ಮಹೇಂದ್ರನಾಥನು ದಿಗ್ವಿಜಯಕ್ಕಾಗಿ ಹೊರಡಲು, ಶತ್ರು ರಾಜರ ಪತ್ನೀಭೂತವಾದ ಭೂಮಿಯು, ಈ ಮಹೇಂದ್ರನಾಥನೇ ನನ್ನ ಪತಿಯಾಗಲಿ ಎಂದು ಸಂಕಲ್ಪಿಸಿ, ಕಂಪನೆಂಬ ಸಾತ್ತ್ವಿಕ ಭಾವವನ್ನು ಹೊಂದುತ್ತಿರುವಳು. ರಣಭೂಮಿಯಲ್ಲಿ ಈತನಿಗಿದಿರಾಗಿ ಹೋರಾಡಿ ಊರ್ಧ್ವಲೋಕವನ್ನು ಕುರಿತು ಮುಂದೆ ಹೋಗುತ್ತಿರುವ ರಾಜರಿಂದ ಸೂರ್ಯಮಂಡಲದಲ್ಲಿ ಬಿಲಮಯವಾಗಿ, ಶತ್ರುಗಳು ತಾವು ಹೋಗುವ ದಾರಿಗಳನ್ನು ಕಾಣುತ್ತಿರುವರು. ಸಮಸ್ತ ಶತ್ರುಗಣವೂ ರಣಭೂಮಿಯಿಂದ ಪಲಾಯನವಾಗಲಾಗಿ, ಕೀರ್ತಿಯಿಂದ ಜಗತ್ತಿನಲ್ಲಿ ಪ್ರಸಿದ್ಧನಾದ ಯಾವ ವೀರನಾದರೂ ಕೋಪದಿಂದ ಹಿಂದಿರುಗಿ ಈತನಿಗೆ ಇದಿರಾದಲ್ಲಿ, ಇವನ ಕೈಯಲ್ಲಿರುವ ಛುರಿಕೆಯೆಂಬ ಈ ಶಸ್ತ್ರವಿಶೇಷದಿಂದ ಕಣ್ಣೊಂದು ತಲೆ ಕಡಿಸಿಕೊಂಡು ವಿಮುಖತ್ವವನ್ನು ಹೊಂದುವುದು ನಿಶ್ಚಯವು."

ಈ ಪ್ರಕಾರ ವಿವರಿಸುತ್ತಿರುವ ಮಹೇಂದ್ರನಾಥನ ವರ್ಣನಾನಂತರ ಆ ರಾಜನ ಗುಣಗಳಲ್ಲುಂಟಾದ ಅನಾದರದಿಂದಲೋ ಎಂಬಂತೆ ಕೈಬೆರಳನ್ನು ಮುಖ ಪದ್ಮದ ನಾಳವೆಂಬಂತೆ ಅದಕ್ಕೆ ಹೊಂದಿಸಿ ಆ ದಮಯಂತಿಯು ವೈದಗ್ಧ್ಯಮಯವಾದ ತನ್ನ ಮುಖ ಮುದ್ರೆಯಿಂದಲೇ ಸರಸ್ವತಿಗೆ ಆ ವರ್ಣನೆಯನ್ನು ಸಾಕುಮಾಡೆಂದು ಸೂಚಿಸಿದಳು. ವಿದಗ್ಧರ ಲಕ್ಷಣವೇ ಹೀಗೆ: ತಮ್ಮ ಇಂಗಿತದಿಂದಲೇ ಪರರನ್ನು ಬೋಧಿಸುತ್ತಿರುವರು.

ಅನಂತರ, ಸರಸ್ವತೀ ದೇವಿಯು ತನ್ನ ದೃಷ್ಟಿ ಸಂಜ್ಞೆಯಿಂದ ಸೌಂದರ್ಯದಲ್ಲಿ ಮನ್ಮಥನನ್ನು ಕೂಡ ತಿರಸ್ಕರಿಸುತ್ತಿರುವ ಬೇರೊಬ್ಬ ರಾಜನನ್ನು ತೋರಿಸಿ ಹೇಳತೊಡಗಿದಳು: "ಭೈಮಿ! ಈತನು ಕಾಂಚೀ ನಗರೇಂದ್ರನು; ಈ ರಾಜನು ದೂತ ಮುಖ

ದಿಂದ ನಿನ್ನನ್ನು ಇಚ್ಛಿಸಿದನೆಂದಾದಮೇಲೆ ಇವನ ಇಚ್ಛೆಯನ್ನು ಸಲ್ಲಿಸುವುದು ನಿನ್ನ ಕರ್ತವ್ಯವಲ್ಲವೇ? ಇವನ ಇಚ್ಛೆಯನ್ನು ಸಲ್ಲಿಸುವುದರಿಂದ ನಿನಗೆ ಹಾನಿಯಿದೆಯೇ? ಆದಕಾರಣ, ಇವನ ಮೇಲಾದರೂ ಪ್ರಸನ್ನ ಭಾವವನ್ನು ತೋರಿಸು. ಈ ಕಾಂಚೀ ನಾಥನು ಚಾಪವನ್ನು ಕೈಯಲ್ಲಿ ಹಿಡಿದು ಬಾಣವನ್ನು ಎಸೆಯಲಿಕ್ಕೆ ತೊಡಗಿದೊಡ ನೆಯೇ ಶತ್ರುಗಳಿಗೆ, ಈತನ ವಿಚಾರದಲ್ಲಿ ನಮ್ರತೆಯನ್ನು ತೋರುವುದರಿಂದ ಮಾತ್ರ, ಸ್ವದೇಶ ಸ್ಥಿತಿಯು ದೊರೆಯುವುದು. ಆದರೆ, ಹಾಗೆ ಶತ್ರುಗಳು ನಮ್ರತೆ ಯನ್ನು ತೋರದೆ ಹೋದಲ್ಲಿ ಅವರೆಲ್ಲ ದಿಕ್ಕುಗಳನ್ನು ತೊರೆದು ಓಡಬೇಕಾಗುವುದು ಎಂಬ ನೀತಿಯನ್ನು ಬಾಣಗಳ ದೃಷ್ಟಾಂತದಿಂದ ಶತ್ರುಗಳಿಗೆ ಉಪದೇಶಮಾಡುತ್ತಿರು ವನು. ಈ ಕಾಂಚೀನಾಥನ ಕೀರ್ತಿ ಹಂಸಗಳು ಈ ರಾಜನಿಗೆ ಯುದ್ಧದಲ್ಲಿ ಇದಿರಾದ ವೀರರ ಹೆಂಡಿರು ಧರಿಸಿರುವ ಶಂಖ ವಲಯಗಳೆಂಬ ಮೃಣಾಳಗಳನ್ನು ಕತ್ತರಿಸುತ್ತ ಅವರ ನೇತ್ರೋದಕ ಪ್ರವಾಹದಲ್ಲಿ ಕ್ರೀಡಿಸುತ್ತಿರುವುವು! ತಲೆಯಲ್ಲಿ ಸಿಂದೂರವನ್ನೂ ಆಮೇಲೆ ಹೆಗಲಿನ ವರೆಗೆ ಶ್ಯಾಮಲ ವರ್ಣವನ್ನೂ ಧರಿಸಿ ವ್ಯೋಮಾಂತ ಸ್ಪರ್ಶಿಯಾದ ಈ ಕಾಂಚೀನಾಥನ ಮದ ಗಜವು ರಣ ಭೂಮಿಯಲ್ಲಿ ಧಾವಿಸಿ ಬರಲು ಸಮಸ್ತ ಕ್ಷತ್ರಿಯ ರಾಜರ ಭುಜ ಪ್ರತಾಪಗಳೆಂಬ ಸಹಸ್ರಾಂಶುವು ಪ್ರದೋಷ ಕಾಲದ ಕತ್ತಲೆಯಿಂದ ಮಿಶ್ರವಾದ ಸಂಧ್ಯಾ ಕಾಲದ ಭ್ರಾಂತಿಯಿಂದ ಅಸ್ತವನ್ನು ಹೊಂದುತ್ತಿರುವನು. ಲಕ್ಷ್ಮಿಯು, ಸ್ವ ಭವನವಾದ ವಿಷ್ಣುವಿನ ಎದೆಯು ಶೂನ್ಯವಾದ ಕಾರಣ, ಅಲ್ಲ ಸಿತಚ್ಛತ್ರಾಕಾರವಾಗಿ ಜೇಡರ ಹುಳುಗಳು ಬಲೆಕಟ್ಟುವಂತೆ ಬಿಟ್ಟು ಈ ಬಲೆಯೇ ಕೌಸ್ತುಭ ರತ್ನವೆಂದು ಭ್ರಾಂತಿಗೊಳ್ಳುವಂತೆ ಮಾಡಿ, ತನ್ನ ನಿತ್ಯವಾದ ನಿವಾಸ ಭವನ ವಾದ ಪದ್ಮವನ್ನು ಕೂಡ ಜೇಡನು ಬಲೆ ಕಟ್ಟುವಂತೆ ತ್ಯಜಿಸಿ, ಈಗ ಈ ಮಹಾರಾಜನ ಉಭಯ ಭುಜಗಳಲ್ಲ ವಿಶ್ರಾಂತಿಗೊಳ್ಳುತ್ತಿದ್ದಾಳೆ. ಅದಲ್ಲದೆ, ಈ ಕಾಂಚೀನಾಥನು ಸಮುದ್ರವನ್ನು ಕೂಡ ಮೀರಿಸುವ, ಪವಿತ್ರವಾಗಿಯೂ ಪ್ರಸಿದ್ಧವಾಗಿಯೂ ಇರುವ ತನ್ನ ಕೀರ್ತಿಯೆಂಬ ಪೂರ್ತ ಕರ್ಮವನ್ನು ಅದ್ಭುತವಾಗಿ ಉಂಟುಮಾಡಿದನು. ಈ ಪೂರ್ತದಲ್ಲಿಯೇ ಜಗತ್ತು ಈ ಹೊತ್ತು ವಿಹಾಯುತ್ತಿರುವುದು. ಯಾವ ರಾಜನ ವಿಷಯದಲ್ಲಿ ಕವಿಗಳು ಮೌನ ವ್ರತವನ್ನು ತಾಳುವರೋ, ಚಂದ್ರನು ಕೂಡ ಯಾವ ರಾಯನ ಕೀರ್ತಿ ಪೂರ್ತದ ಬಿಂದುವನ್ನು ಹೊಂದುವನೋ, ಯಾವನು ಈ ರಾಜನ ಕೀರ್ತಿ ಪೂರ್ತವನ್ನು ಹೊಕ್ಕು ಸಾವರ್ಣ್ಯದ ದೆಸೆಯಿಂದ ಅದೃಶ್ಯನಾಗುವನೋ, ಜಲ ದೇವತೆಯೂ ಕೂಡ ಇವನ ಕೀರ್ತಿ ಪೂರ್ತದಲ್ಲಿ ಅಶರೀರೆಯಾಗಿ ಆಗುವಳೋ, ಅಂತಹ ಕೀರ್ತಿ ಸಂಪನ್ನನಾದ ಈ ಮಹಾರಾಯನ ಕೀರ್ತಿಯು ಸ್ಫಟಿಕೋದ್ಧವವಾದ ಯೋಗೇಶ್ವರ ಲಿಂಗವಾಗಿಯೂ ಕಾಣಿಸಿಕೊಳ್ಳುತ್ತಿರುವುದು. ಈ ಮಹಾರಾಜನ ಕೀರ್ತಿಯನ್ನು ಕೇಳಿ ಉರಗ ಪತಿಯಾದ ಆದಿಶೇಷನು ದೃಷ್ಟಿಗಳಿಂದ ಚೆನ್ನಾಗಿ ಕೇಳುವ ಇಷ್ಟವುಳ್ಳವನಾಗಿ ಕೇಳುತ್ತಿದ್ದರೂ, ಅವನ ಕಣ್ಣುಗಳನ್ನು ಆನಂದ ಬಾಷ್ಪವು ಮುಚ್ಚಿ ಶಬ್ದ ಗ್ರಹಣಕ್ಕೆ ತೊಂದರೆಯನ್ನುಂಟುಮಾಡುವುದಿಲ್ಲ, ಅವನ ಮೈಯಲ್ಲಿ ರೋಮಗಳೇ ಇಲ್ಲದ ಕಾರಣ ರೋಮಾಂಚವಾಗುವುದಿಲ್ಲ, ಸಂತೋಷದಿಂದ ತಲೆ ಯಲ್ಲಾಡಿಸುವ ಇಷ್ಟವುಳ್ಳವನಾದರೂ ತಾನು ಹೊತ್ತಿರುವ ಭೂಮಿಗೆ ಅಪಾಯ

ವಾದೀತೆಂಬ ಭಯದಿಂದ ಆ ಕಾರ್ಯವನ್ನೂ ಮಾಡುವುದಿಲ್ಲ. ಹೀಗಾದಮೇಲೆ, ಆ ಶೇಷನು ತನಗುಂಟಾದ ಆನಂದವನ್ನು ಹೇಗೆ ಪ್ರಕಟಗೊಳಿಸುವನೋ ತಿಳಿಯುವುದಿಲ್ಲ. ಶತ್ರು ರಾಜರ ಆನೆಗಳ ಕುಂಭಸ್ಥಳಗಳು ನಿನ್ನ ಕುಚ ಕುಂಭಗಳೊಡನೆ ಮತ್ಸರಗೊಳ್ಳುತ್ತಿರುವ ಕಾರಣ ಅಪರಾಧಿಗಳಾದ ಆ ಗಜ ಕುಂಭಗಳಿಗೆ ಜಯಶಾಲಿಯಾದ ಈ ರಾಜನು ಯುದ್ಧದಲ್ಲಿ ನಿಶ್ಚಲಗಳಾಗಿರುವ ಶರ ಕಾಂಡಗಳನ್ನು ಪುಂಖ ಪರ್ಯಂತವೂ ನಾಟಿಸುವ ಪ್ರಚಂಡ ಶಾಸನವನ್ನು ಮಾಡುತ್ತಿದ್ದರೂ, ಈ ರಾಜನ ಮಹತ್ತರವಾದ ಸೇವೆಯಿಂದ ಈ ರಾಜನ ವಿಷಯದಲ್ಲಿ ಅನುಗ್ರಹವನ್ನು ತೋರುವುದಿಲ್ಲವೇ?''

ಈ ಪ್ರಕಾರ ಸರಸ್ವತಿಯು ಕಾಂಚೀನಾಥನನ್ನು ಹೊಗಳುತ್ತಿರುವಾಗ ಆ ಭೀಮ ಕುಮಾರಿಯು ಆ ಕಾಂಚೀನಾಥನ ಮೇಲಿನ ಅನಾದರದಿಂದ ತನ್ನ ಅಧರದ ತುದಿಯಲ್ಲಿ ಮಾತ್ರ ತುಸು ತುಸು ಕಾಣಿಸುವ ಮಂದಹಾಸದ ಪ್ರಭೆಯಿಂದ, ಆ ಕಾಂಚೀನಾಥನನ್ನು ಉಪಹಾಸ ಮಾಡಿ ನಿಷಧೇಂದ್ರನಾದ ಆ ನಳನ ಮಾಹಾತ್ಮ್ಯ ವಾದರೋ ವಾಚಾಮಗೋಚರವಾದುದು ಎಂದು ಸೂಚಿಸಿದಳು.

ಆಗ ವಾಗ್ದೇವಿಯು, ಸಭೆಗಳಲ್ಲಿ ಪೂಜ್ಯನಾಗಿಯೂ, ಪರಂತಪನಾಗಿಯೂ ಇರುವ ಬೇರೊಬ್ಬ ರಾಜನನ್ನು ತೋರಿಸಿ, ತನ್ನ ದೃಷ್ಟಿ ಸೌಂದರ್ಯದಲ್ಲಿ ಮೃಗಾಕ್ಷಿಯನ್ನು ಕೂಡ ನಿಂದಿಸುತ್ತಿರುವ ಭೀಮ ಕುಮಾರಿಯೊಡನೆ ಹೇಳತೊಡಗಿದಳು.—

"ಎಲೆ ದಮಯಂತಿ! ಲಜ್ಜೆಯಿಂದ ತಲೆಯೆತ್ತಿ ನೋಡಲಾರದೆ ಕೆಳಗೇ ನೋಡುತ್ತಿರುವ ಈ ರಾಜರ ಮೇಲೆ ನಿನಗೆ ಸ್ವಲ್ಪವೂ ದಯೆಯಿಲ್ಲವೇ? ಆಗಲಿ, ಈಗ ಈ ಮುಂದೆ ಕುಳಿತಿರುವ ನೇಪಾಳ ರಾಜನ ಕಡೆಗೆ ಕಟಾಕ್ಷವನ್ನು ಬೀರು. ಈ ರಾಜನ ಋಜುತ್ವವೂ ಮೌನವೂ ವೇದ ಪಾರಗತ್ವವೂ—ಈ ಮೊದಲಾದ ಸುಗುಣಗಳು ಇತರರಿಗೆ ವಿಶ್ವಾಸವನ್ನುಂಟುಮಾಡತಕ್ಕುವು. ಇವನ ಬಳಿಯಿರುವ ಬಾಣಗಳು ಕೇವಲ ದಂಭವನ್ನು ತೋರಿಸುವುದಕ್ಕೆ ಮಾತ್ರವೇ. ಸಕಲ ಜನರನ್ನೂ ರಂಜಿಸುವುದೆಂಬ ವ್ರತವನ್ನು ಹಿಡಿದಿರುವ ಈ ನೇಪಾಳ ರಾಜನು ಶತ್ರುಗಳನ್ನು ರಣ ಭೂಮಿಯಲ್ಲಿ ಇದಿರಿಸಿ ಅವಕೀರ್ಣಿತವೆಂಬ ವ್ರತ ಭಂಗವನ್ನುಂಟುಮಾಡಿಕೊಳ್ಳುವುದಿಲ್ಲ; ಎಂದರೆ, ತನ್ನಲ್ಲಿ ವಿರಕ್ತರಾದ ಶತ್ರುಗಳನ್ನು ಯುದ್ಧದಲ್ಲಿ ಕತ್ತರಿಸಿ ಅವರ ರಕ್ತದಿಂದ ಸರಕ್ತರನ್ನಾಗಿ ಮಾಡಿ, ಈ ಪ್ರಕಾರ ಶತ್ರುಗಳನ್ನು ರಂಜಿಸಿ ವ್ರತವನ್ನು ಕಾಪಾಡಿಕೊಳ್ಳುತ್ತಿದ್ದಾನೆ. ಸೂರ್ಯನು ಕೂಡ ಈ ರಾಜನ ಪ್ರತಾಪಾಗ್ನಿಯಲ್ಲಿ ಎಂದಾದರೂ ಬಿದ್ದನಾದರೆ ಆತನು ಅಗ್ನಿಯಲ್ಲಿ ಬಿದ್ದ ಶಲಭದಂತೆ ಭಸ್ಮವಾಗುವುದರಲ್ಲಿ ಸಂದೇಹವಿಲ್ಲ. ಈ ರಾಜನ ಕೀರ್ತಿಯಂತಿರುವ ಕೀರ್ತಿಯನ್ನು ಸಂಪಾದಿಸುವುದಕ್ಕಾಗಿ ಬ್ರಹ್ಮನು ಎಷ್ಟು ಪ್ರಯಾಸಪಟ್ಟರೂ ಸಾಧ್ಯವಾಗದಿರಲು, ಆ ಕೀರ್ತಿಗೆ ಪ್ರತಿನಿಧಿಯಾಗಿ ಕ್ಷೀರಸಾಗರವನ್ನು ನಿರ್ಮಿಸಿದನು. ಈ ಮಹಾ ರಾಜನ ಕೀರ್ತಿಯು ದಕ್ಷಿಣೋತ್ತರ ದಿಕ್ಕುಗಳಲ್ಲಿ ವಿಭೀಷಣ ಕುಬೇರರ ಮನೆಗಳ ವರೆಗೂ ವಿಸ್ತರಿಸಿರುವುದು; ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಇಂದ್ರ ವರುಣರ ನಗರದ ಬಳಿ ಅವುಗಳ ಆಲಂಘ ಸ್ತಂಭದಂತಿರುವ ಉದಯಾಚಲ ಅಸ್ತಾಚಲದ ವರೆಗೂ ವಿಸ್ತರಿಸಿರುವುದು. ಈ ಮಹಾರಾಜನು ರಣ ಭೂಮಿಯಲ್ಲಿ ತನ್ನ ಮತ್ತು ಶತ್ರುಗಳ ತಾರ

ತಮ್ಮವನ್ನು ತಿಳಿದು ಬಾಣಗಳನ್ನು ಎಸೆಯುತ್ತಿರುವಾಗ ಆ ಶತ್ರುಗಳಿಗೆ ಇವನ ಪಾದ ಮೂಲವನ್ನು ಸೇರಿ ಇವನಿಗೆ ಅವನತರಾಗುವುದು ಅಥವಾ, ಇವನ ಬಾಣಗಳಿಂದ ಮರಣ ಹೊಂದುವುದು, ಇವೆರಡೇ ಮಾರ್ಗಗಳಲ್ಲದೆ ಮೂರನೆಯ ದಾರಿಯಿರದು. ಈತನು ಯುದ್ಧ ಕಾಲದಲ್ಲಿ ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವುದೂ ಬಿಲ್ಲಿಗೆ ಜೋಡಿಸುವುದೂ ಲಕ್ಷ್ಯವನ್ನು ಭೇದಿಸುವುದೂ ಯಾರಿಗೂ ಗೋಚರವಾಗದು. ಆದರೆ, ಶತ್ರುಗಳು ಬಿದ್ದಾಗ ಅವರ ಎದೆಯಲ್ಲುಂಟಾಗಿದ್ದ ಬಿಲದಿಂದ, ಇವನ ಬಾಣಗಳು ತಗಲಿರಬೇಕೆಂದು ತೋರುವುದು.''

ಆಗ ವಿಲಾಸ ಪ್ರಿಯೆಯಾದ ದಮಯಂತಿಯ ಸಖಿಯರಲ್ಲೊಬ್ಬಳು ದೇವಿಯಾದ ಸರಸ್ವತಿಯನ್ನು ನೋಡಿ ''ದೇವೀ! ಈ ರಾಜನನ್ನು ಎಷ್ಟೆಂದು ಹೊಗಳುವೆ? ಈ ಪ್ರಪಂಚದಲ್ಲಿರುವ ಸಕಲ ಸದ್ಗುಣಗಳೂ ಈತನಲ್ಲಿ ಸೇರಿರುವುದರಿಂದ ಸ್ಥಳ ಸಂಕೋಚ ವಾಗಿ ಎಷ್ಟೆಂದು ಯಾತನೆಯನ್ನು ಅನುಭವಿಸುತ್ತಿವೆ! ಈತನು ಸರ್ವ ಗುಣಾಕರ ನಾದರೂ ದಮಯಂತಿಯು ಈತನನ್ನು ವರಿಸುವ ಸಂಭವವಿಲ್ಲ'' ಎಂದು ನುಡಿದಳು.

ಆಗ ಆ ರಾಜನ ಅನುಚರರು, ದಾಸಿಯಾದ ಈಕೆಯು ಎಷ್ಟೆಂದು ತುಚ್ಛವಾದ ಮಾತಾಡಿದಳು! ಈಕೆಯು ನೀಚೆಯು; ''ದೇವಿಯಾದ ಸರಸ್ವತಿಗಿಂತಲೂ ತಾನು ಪಂಡಿತೆಯೆಂಬಂತೆ ಈ ಮಹಾ ಸಭೆಯಲ್ಲಿ ಉಚ್ಛೃಂಖಲವಾಗಿ ಮಾತಾಡು ತ್ತಿದ್ದಾಳೆ'' ಎಂದು ಕೋಪದಿಂದ ನುಡಿದು ಅವಳ ಮಾತನ್ನು ತಡೆದರು.

ಆಗ ದಯಾಮಯಿಯಾದ ಆ ವಾಗ್ದೇವಿಯು, ಸೌಂದರ್ಯದಲ್ಲಿ ಮದನನನ್ನು ಧಿಕ್ಕರಿಸುವವನಾಗಿಯೂ ಇತರ ಗುಣಗಳಲ್ಲಿ ಪುರೂರವ ಮಹಾರಾಜನಿಗೆ ಸಮಾನ ನಾಗಿಯೂ ಇರುವ ಬೇರೊಬ್ಬ ರಾಜನನ್ನು ತೋರಿಸಿ ಹೇಳತೊಡಗಿದಳು.—

''ದಮಯಂತಿ! ಈ ಮುಂದೆ ಕುಳಿತ, ಇಂದೀವರವನ್ನು ಹೋಲುವ ನೇತ್ರಗಳುಳ್ಳ ವನಾಗಿ ಶುಭ್ರವಾದ ಕಟಾಕ್ಷಗಳಿಂದ ಚಂದ್ರ ಕಿರಣವನ್ನು ವಿಸ್ತರಿಸುತ್ತಿರುವ, ಈ ರಾಜನು ಮಲಯ ದೇಶಾಧೀಶ್ವರನು. ಈ ರಾಜನ ಶತ್ರುಗಳು ಯುದ್ಧದಲ್ಲಿ ಸೋತು ಈತನನ್ನು ಬಿಟ್ಟು ಬೇರೊಂದು ಶರಣ್ಯವನ್ನು ಆಶ್ರಯಿಸುವುದೆಂದರೆ, ತನ್ನ ಮನೆಯನ್ನೇ ತಿರುಗಿ ಹೊಕ್ಕಂತೆ ವ್ಯರ್ಥವು. ಏಕೆಂದರೆ, ಆ ಶತ್ರುವು ತಾನು ಗಿರಿ ದುರ್ಗವನ್ನು ಆಶ್ರಯಿಸಿರುವೆನೆಂದು ಹೆಮ್ಮೆಗೊಳ್ಳಲಿ ಅಥವಾ, ಗಿರಿಪುತ್ರಿಯಾದ ದುರ್ಗಾದೇವಿಯನ್ನು ಆಶ್ರಯಿಸಿರುವೆನೆಂದು ಭಾವಿಸಿರಲಿ, ಎಲ್ಲವೂ ವ್ಯರ್ಥವೆ. ಈ ರಾಯನ ಶತ್ರುಗಳನ್ನು ಇವನೇ ರಕ್ಷಿಸಬೇಕಲ್ಲದೆ ಗಿರಿ ದುರ್ಗವಾಗಲಿ ದುರ್ಗಾದೇವಿಯಾಗಲಿ ಸರ್ವಥಾ ರಕ್ಷಿಸಲಾರರು. ಈ ಮಹಾರಾಯನು ಅರ್ಥಿಗಳಿಗೆ ಎಷ್ಟು ಕೊಟ್ಟರೂ ಅಲ್ಪವೆಂದೇ ತಿಳಿಯುವನು. ಈ ಪ್ರಕಾರ ಅರ್ಥಿಗಳಿಗೆ ಔದಾರ್ಯವನ್ನು ತೋರಿಸುತ್ತಿದ್ದರೂ ಇವನಲ್ಲಿರುವ ಧನ ಕನಕಾದಿಗಳು ಕಡಿಮೆಯಾಗುವ ಸಂಭವವಿಲ್ಲ; ಏಕೆಂದರೆ, ನೂತನ ವಾದ ಗುಡುಗಿನ ಶಬ್ದವನ್ನು ಕೇಳಿದ ಮಾತ್ರಕ್ಕೆ ಇವನ ಭಂಡಾರವು ತಿರುಗಿ ತುಂಬುವುದು. ಅದಲ್ಲದೆ, ಇವನ ನಗರಕ್ಕೆ ವೈಡೂರ್ಯಾಚಲವು ಸಮೀಪದಲ್ಲಿದ್ದು ನಿನ್ನ ಕ್ರೀಡಾ ಶೈಲವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಎಲಾಕ್ಷಿ! ನಮ್ರರಾದ

ಶತ್ರುರಾಜರ ಮುಖಕಮಲಗಳಲ್ಲಿ ತೋರುವ ಮ್ಲಾನತೆಯೆಂಬ ಭೃಂಗಚ್ಛಾಯೆಯಿಂದ ಕಲಂಕ ಸಹಿತನಾದ ಚಂದ್ರನನ್ನು ಹೋಲುತ್ತಿದ್ದು, ಅಂತಹ ಚಂದ್ರಮಂಡಲಗಳಿಂದ ಆಶ್ರಯಿಸಲ್ಪಡುವ ಪಾದ ನಖ ಶ್ರೇಣಿಯುಳ್ಳ ಭೂಲೋಕದೊಡೆಯನಾದ ಈ ರಾಜನು ಸೊಕ್ಕಿದ ಶತ್ರುಗಳ ಪ್ರಾಣ ವಾತವೆಂಬ ಅಮೃತ ಲಹರಿಯನ್ನು ವಿಶೇಷವಾಗಿ ಪಾನ ಮಾಡಿದುದರಿಂದ ಮಾಂಸಲವಾಗಿ ಬೆಳೆದು ಯುದ್ಧಕಾಲಕ್ಕೆ ಉಪಯುಕ್ತಗಳಾದ ಭುಜ ಯುಗಳವನ್ನು ಈ ರಾಜನು ಪಡೆದಿರುವನು. ಸ್ಮರಹರನಾದ ಪರಮೇಶ್ವರನ ತಲೆಯಲ್ಲಿರುವ ಚಂದ್ರಖಂಡದ ಶೇಷ ಪೂರಕವಾಗಿಯೂ ಮಹಾಶೇಷನ ಹಲವು ಹೆಡೆಗಳಿಗೆ ತಕ್ಕಂಥ ಕಾಯ ಸಮೂಹವಾಗಿಯೂ ಕ್ಷೀರ ಸಾಗರಕ್ಕೆ ಮುನಿಯಾದ ಅಗಸ್ತ್ಯನ ಚುಳಕದಿಂದ ಉಂಟಾದ ಭಯದ ವಿರಾಮಕವಾಗಿಯೂ ಇರುವ ಈ ಮಹಾರಾಜನ ಕೀರ್ತಿ ಪ್ರವಾಹವು ಮೂರು ಲೋಕದಲ್ಲಿಯೂ ಶುಭ್ರವಾಗಿ ಹರಿಯುತ್ತಿರುವುದು. ದಮಯಂತಿ! ಶತಘ್ನಿಗೆ ಸಮಾನರಾಗಿ ನೂರಾರು ಮಂದಿಯನ್ನು ಕೊಲ್ಲಬಲ್ಲ ಈ ರಾಜರು ಎಷ್ಟರವರು! ಈ ಮಹಾತ್ಮನು ಲಕ್ಷಗಳಿಂದ ಲಕ್ಷಭೇದಿಯಾಗಿಯೂ ಪದ್ಮಗಳಿಂದ ಪದ್ಮಗಳನ್ನು ಜಯಿಸತಕ್ಕವನಾಗಿಯೂ ಇರಲು, ಪರಾರ್ಥವಾದ ಶತ್ರುಗಳಿಂದ ಇವನನ್ನು ವಶ ಮಾಡಲು ಸಾಧ್ಯವೇ?"

ಈ ಪ್ರಕಾರ ವಾಗ್ದೇವಿಯಾದ ಸರಸ್ವತಿಯು ವರ್ಣಿಸುತ್ತಿರುವಾಗ, ಇಂಗಿತಜ್ಞಳಾದ ಆ ದಮಯಂತಿಯ ಸಖಿಯೊಬ್ಬಳು ಮುಗುಳುನಗೆಯೊಡನೆ ಹೀಗೆಂದಳು: "ದೇವಿ! ರಾಜಕುಮಾರಿಯು ಈತನಂತೆಯೇ ಇನ್ನೂ ಉಳಿದಿರುವ ರಾಯರ ವೃತ್ತಾಂತಗಳನ್ನು ನಿನ್ನ ಮುಖದಿಂದ ತಿಳಿಯುವ ಆಶೆಯುಳ್ಳವಳಾದಂತೆ ತೋರುತ್ತದೆ". ಹೀಗೆಂದು ನುಡಿಯಲು, ಆ ರಾಜನ ಬಳಿಯಿದ್ದ ಅವನ ಪರಿವಾರದವರು ಎದ್ದು ಕೋಪದಿಂದ, "ಎಲೆ ದಾಸಿ! ಈ ಸ್ವಯಂವರದಲ್ಲಿ ಪೂಜ್ಯಳಾದ ಈ ವಾಗ್ದೇವಿಗೆ ಮಾತ್ರವೇ ರಾಜ ಕಥನದಲ್ಲಿ ಅಧಿಕಾರವಿರುವುದೇ ಹೊರತು ನಿನಗೆ ಯಾರು ಅಧಿಕಾರವನ್ನು ಕೊಟ್ಟರು? ಏಕೆ ಮಾತಾಡುತ್ತಿದ್ದೀಯೆ?" ಎಂದು ಗದರಿಸಲು, ಆ ರಾಜನ ಹುಬ್ಬು ಸನ್ನೆಯಿಂದ ಮುಂದೆ ಅವರು ಸುಮ್ಮನಾದರು.

ಆಗ ಭಾರತೀ ದೇವಿಯು ಕುಲದಲ್ಲಿಯೂ ಸದ್ವೃತ್ತಿಯಲ್ಲಿಯೂ ರಾಜ ಸಮೂಹದಲ್ಲಿಯೇ ಬಲವತ್ತರನಾಗಿ ದಮಯಂತಿಯ ಇದಿರಿಗೆ ಸ್ವಲ್ಪ ವಕ್ರವಾಗಿ ಕುಳಿತಿರುವ ರಾಜನೊಬ್ಬನನ್ನು ದಮಯಂತಿಗೆ ವಿವರಿಸಿ ಹೇಳತೊಡಗಿದಳು.—

"ಭೈಮಿ! ನಿನ್ನ ವಿವಾಹಾರ್ಥವಾಗಿ ಬಂದಿರುವ ಈ ಹೊಸ ಜನವನ್ನು ಕಣ್ಣಿಂದ ಕೂಡ ನೋಡೆನೆಂದು ಪ್ರತಿಜ್ಞೆಮಾಡಿರುವೆಯಾ ಏನು? ಈ ರಾಜನು ಮಿಥಿಲೆಯ ಅಧಿಪತಿಯು. ಇವನನ್ನಾದರೂ ಲಕ್ಷ್ಯವಿಟ್ಟು ನೋಡು. ನೋಡದಿರುವುದಕ್ಕಿಂತ ನೋಡಿ ಬಿಡುವುದಾದರೂ ಉತ್ತಮವಲ್ಲವೇ? ಎಲೆ ತುಟಿಯೇ! ದುರಭಿಮಾನದಿಂದ ಈ ರಾಜನನ್ನು ಕುರಿತು ಪಾಪಿ ಪಾಪಿ ಎಂದು ನುಡಿಯಬೇಡ. ಏಕೆಂದರೆ, ಈ ರಾಜನು ರಣ ಭೂಮಿಯಲ್ಲಿ ಕೋಪದಿಂದ ತುಟಿ ಕಚ್ಚಿಕೊಂಡು ನಿಂತು ಶತ್ರು ಶಿರಗಳಿಂದ ರಣ ಭೂಮಿಯನ್ನು ಆಚ್ಛಾದಿಸುತ್ತಿರುವನು. ಈ ಮಹಾರಾಜನ ಕೀರ್ತಿಯ ಶುಭ್ರತ್ವವನ್ನು

ವಿಚಾರಿಸಲಾಗಿ ದ್ವಿತೀಯ ಚಂದ್ರನಂತೆಯೂ, ಸರ್ವಾಂಗದಲ್ಲಿಯೂ ಉಜ್ಜ್ವಲವಾದ ಕೈಲಾಸ ಪರ್ವತದ ಗರ್ವವನ್ನು ಹಿಂದಿಡತಕ್ಕದಾಗಿಯೂ, ಶಂಖದ ಪ್ರತಿಬಿಂಬದಂತೆಯೂ, ಶರತ್ಕಾಲದ ಮೇಘ ಶೋಭೆಯಂತೆಯೂ, ಕ್ಷೀರ ಸಾಗರದ ಪುನರುಕ್ತಿಯಂತೆಯೂ ತೋರುವುದು. ಈತನ ಖಡ್ಗದಿಂದ ಸೀಳಲ್ಪಟ್ಟ ಶತ್ರುಗಳ ಗಜ ಘಟೆಯ ಕುಂಭಸ್ಥಳದೊಳಗಿನ ಮುತ್ತುಗಳನ್ನು, ಕುದುರೆಗಳ ಗೊರಸುಗಳಿಂದ ಪುಡಿಯಾದ ಸಮರ ಭೂಮಿಯಲ್ಲಿ, ಈ ಮಹಾರಾಯನು ತನ್ನ ಕೀರ್ತಿ ವೃಕ್ಷಗಳಿಗೆ ಬೀಜವನ್ನು ಬಿತ್ತುವಂತೆ ಚಲ್ಲುತ್ತಿರುವನು. ಈ ಮಹಾರಾಜನು ಅತಿ ದಾನಶೌಂಡನಾಗಿ ಶೋಭಿಸುತ್ತಿರಲು, ಅತ್ತ ಸ್ವರ್ಗದೊಳಗಿನ ಕಲ್ಪವೃಕ್ಷವು ತನ್ನ ಬಳಿಗೆ ಬರುವ ಅರ್ಥಿಗಳಿಲ್ಲದ ಕಾರಣ ಫಲ ಸಮೃದ್ಧಿಯಿಂದ ಬಾಗಿ ಲಜ್ಜೆಯಿಂದ ತಲೆಬಗ್ಗಿಸಿರುವಂತೆ ಇರುವುದು. ಅದಲ್ಲದೆ, ರತ್ನಗಳ ಉತ್ಪತ್ತಿ ಸ್ಥಾನವಾದ ರೋಹಣ ಪರ್ವತವು ಕೂಡ ಅರ್ಥಿಗಳ ಅಭಾವದಿಂದುಂಟಾದ ಲಜ್ಜೆಯನ್ನು ತಾಳಲಾರದೆ ಪ್ರಯಾಸದಿಂದ ಕಾಲ ಕಳೆಯುತ್ತಿರುವುದು.''

''ಈ ಮುಂದೆ ತೋರುವ ಕಾಮರೂಪ ದೇಶಾಧೀಶ್ವರನನ್ನು ನೋಡು. ಈತನು ಕಾಮನಿಗಿಂತ ರೂಪದಲ್ಲಿ ಅಧಿಕನಾಗಿ ತೋರುವುದಿಲ್ಲವೇ? ಇವನೇ ನಿನಗೆ ಅನುರೂಪನಾದ ಪತಿಯು. ಇವನನ್ನು ಬಿಟ್ಟರೆ ಇವನಿಗಿಂತ ಅಧಿಕನು ಇನ್ನೊಬ್ಬನು ದೊರೆಯನು. ಈತನಿಗೆ ಸಮರ ಭೂಮಿಯಲ್ಲಿ ಇದಿರಾದ ಶತ್ರುಗಳು, ಕರ್ಣಧಾರನಿಲ್ಲದ ನಾವೆಯಂತೆ, ಇವನ ಬಾಣಗಳಿಂದ ಮುಳುಗಿ ಸೂರ್ಯಮಂಡಲವನ್ನು ಭೇದಿಸಿ ಹೋಗಿ ಈ ಭವಾಬ್ಧಿಯನ್ನು ದಾಟುತ್ತಿರುವರು. ಈ ಮಹಾರಾಜನು ತನ್ನ ಭುಜೋಷ್ಮದಿಂದ ಶತ್ರುಗಳ ನಿವಾಸಕ್ಕೆ ಗ್ರೀಷ್ಮರ್ತುವನ್ನುಂಟುಮಾಡುತ್ತಿದ್ದಾನೆ. ಇದರಿಂದ ಅಲ್ಲಿ ನಿವಾಸಮಾಡುತ್ತಿದ್ದ ದುಃಖಿತರಾದ ಶತ್ರು ಪತ್ನಿಯರು ತಮ್ಮ ನೇತ್ರೋತ್ಪಲಗಳಿಂದ ವಾಸಿತವಾದ ಜಲದಿಂದ ಪಾನೀಯ ಶಾಲೆಯನ್ನು ರಚಿಸುತ್ತಿದ್ದಾರೆ. ರಣ ಭೂಮಿಯಲ್ಲಿ ಈ ರಾಜನ ಸೇನಾ ಮುಖದಲ್ಲಿರುವ ಕುದುರೆಗಳ ಖುರಗಳಿಂದ ಎದ್ದ ರಜೋರಾಜಿಯು ಇವನ ಜೈತ್ರಯಾತ್ರೆಯಲ್ಲಿ ಇವನು ನಡೆಯಿಸಿದ ಯುದ್ಧಗಳಲ್ಲಿ ಈತನ ಖಡ್ಗಘಾತದಿಂದ ಆದ ಗಾಯಗಳಿಂದ ಹೊರಡುತ್ತಿರುವ ರಕ್ತದಿಂದ ನೆನೆದ ಶತ್ರುಗಳೆಂಬ ಹಸಿಕಟ್ಟಿಗೆಯನ್ನು ಸುಡುತ್ತಿರುವ ಇವನ ಗಂಭೀರವಾದ ಪ್ರತಾಪಾಗ್ನಿಯು ಉರಿಯುವ ಮೊದಲು ಹುಟ್ಟಿದ ಧೂಮಪಙ್ಕ್ತಿಯನ್ನು ಹೋಲುತ್ತಿರುವುದು. ಈ ಮಹಾರಾಜನ ಕೀರ್ತಿ ಪ್ರಶಸ್ತಿಯನ್ನು ಭರ್ತೃವಿನ ಮರಣ ವಾರ್ತೆಯನ್ನು ಕೇಳಿದ ಶತ್ರು ಪತ್ನಿಯರು ದುಃಖಾತಿರೇಕದಿಂದ ತಮ್ಮ ಎದೆಗೆ ಹೊಡೆದುಕೊಳ್ಳುವಾಗ ಅವರ ತೀಕ್ಷ್ಣವಾದ ಉಗುರುಗಳೆಂಬ ಟಂಕಗಳಿಂದ ಎದೆಯೆಂಬ ಶಿಲೆಯ ಮೇಲೆ ಕೆತ್ತುತ್ತಿದ್ದಾರೆ.''

ಆಗ ದಮಯಂತಿಯ ಹಡಪದವಳು ರಾಜಕುಮಾರಿಯ ಭಾವವನ್ನರಿತು ತಾಂಬೂಲ ಪತ್ರವನ್ನು ಮಡಿಸಿ ವೀಟಿಕೆಯನ್ನು ಸಿದ್ಧಮಾಡಿ ಸರಸ್ವತಿಯ ಕೈಗೆ ಕೊಟ್ಟು, ''ದೇವಿ! ಬಹು ಸಮಯದಿಂದ ಮಾತಾಡುತ್ತ ಕಂಠ ಶೋಷವನ್ನು ಮಾಡಿ

ಕೊಂಡಿರುವೆ. ಆದಕಾರಣ ಈ ವೀಟಿಕೆಯನ್ನು ತಿಂದು ಸ್ವಲ್ಪ ವಿಶ್ರಾಂತಿಯನ್ನು ಹೊಂದು. ಈಕೆಗೆ ನಿನ್ನ ಮಾತಿನಲ್ಲೇನೂ ಸೊಗಸಾದಂತೆ ತೋರುವುದಿಲ್ಲ. ವೃಥಾ ಏಕೆ ಶ್ರಮಪಡುವೆ?'' ಎಂದು ನುಡಿದಳು.

ಆಗ ವಾಗ್ದೇವಿಯು ಆ ರಾಜನ ವರ್ಣನೆಯನ್ನು ಅಲ್ಲಿಗೇ ಬಿಟ್ಟು ಮುಂದೆ ಕುಳಿತಿರುವ ಮನ್ಮಥ ಸದೃಶನಾದ ಬೇರೊಬ್ಬ ರಾಜನ ಕಡೆಗೆ ಕೈಯೆತ್ತಿ ತೋರಿಸಿ ಸಭಾರಂಜಕವಾದ ಮೃದು ನುಡಿಗಳಿಂದ ಹೇಳತೊಡಗಿದಳು.—

''ಬಾಲೆ! ಈ ಮುಂದೆ ತೋರುವ ರಾಜನು ತನ್ನ ಗುಣಗಳಿಂದ ಉತ್ಕಲದೇಶವನ್ನು ಅನುರಜ್ಯವನ್ನಾಗಿ ಮಾಡಿದ ಉತ್ಕಲ ದೇಶಾಧೀಶನು. ಈ ಮಹಾನುಭಾವನು ನಿನ್ನನ್ನು ಕಾಣುವುದರಲ್ಲಿ ಆತುರವುಳ್ಳವನಾಗಿರುವನು. ನೀನೂ ಇವನಂತೆಯೇ ನಿನ್ನ ನೇತ್ರ ತಾರೆಗಳ ವೀಚೀ ವಿಲಾಸಗಳಿಂದ ಇವನನ್ನು ಸ್ಪರ್ಶಿಸುವವಳಾಗು. ತನ್ನ ಸರ್ವಾರ್ಥಿಗಳನ್ನೂ ಪೂರ್ಣ ಕಾಮರನ್ನಾಗಿ ಮಾಡಿದ ಈ ರಾಜನಿಂದ ಅರ್ಥಿ ರಹಿತಗಳಾದ ಕಾಮಧೇನುವೂ ಕಲ್ಪವೃಕ್ಷವೂ ಪರಸ್ಪರ ಕ್ಷೀರ ಸೇಕವನ್ನೂ ಪಲ್ಲವಾಶನವನ್ನೂ ಕೊಟ್ಟು ತಮಗಿರುವ ದಾನಾಸಕ್ತಿಯನ್ನು ಪೂರ್ಣಮಾಡುತ್ತಿರುವುವು. ಅದಲ್ಲದೆ, ಈ ರಾಯನು ತನ್ನ ಪಾದ ತಳದಲ್ಲಿ ಬಿದ್ದ ಅರಸರ ಕಿರೀಟಗಳನ್ನು ಹಿಡಿದೆತ್ತುವ ಸಂದರ್ಭದಲ್ಲಿ ಅವರ ಕಿರೀಟದಲ್ಲಿರುವ ಪದ್ಮರಾಗ ಮಣಿಗಳ ಕಾಂತಿಯಿಂದ ಇವನ ಕರ ಪಾದಗಳಿಗುಂಟಾದ ಕೆಂಬಣ್ಣವೂ ಸ್ವಾಭಾವಿಕವಾದ ಕಾಂತಿಯಂತೆ ಶೋಭಿಸುತ್ತಿರುವುದು. ಇವನ ಭುಜಪ್ರತಾಪಕ್ಕಂಜಿದ ಸೂರ್ಯನು ಯಾವ ಕಡೆಯಲ್ಲಿಯೂ ಸ್ಥಿರವಾಗಿ ನಿಲ್ಲದೆ ಉತ್ತರದಿಂದ ದಕ್ಷಿಣಕ್ಕೂ ದಕ್ಷಿಣದಿಂದ ಉತ್ತರಕ್ಕೂ ಸುತ್ತುತ್ತಿದ್ದಾನೆ; ಅಗ್ನಿಯು ಅಂಜಿ ಅರಣ್ಯವನ್ನು ಹೊಕ್ಕು ದಾವಾಗ್ನಿಯಾದನು ; ಲಜ್ಜೆಗೆಟ್ಟ ಬಾಡಬಾಗ್ನಿಯು ಮಾತ್ರ ಶತ್ರುವೆಂದು ಅಸಹ್ಯಪಡದೆ ನೀರನ್ನು ಹೊಕ್ಕಿತು. ಈ ರಾಜನ ರಣ ಗಜಗಳು ತಮ್ಮ ಹಸ್ತಗಳಿಂದ ಕಾರುತ್ತಿರುವ ತುಂತುರುಗಳಿಂದ ನೀಹಾರ ಕಾಲವು ಪ್ರಾರಂಭಿಸಲು, ಶತ್ರು ರಾಜರ ಅಂತಃಕರಣಗಳು ಕಂಪಿಸದಿರುವುವೇ? ಅವರ ಸ್ತ್ರೀಯರ ಮುಖ ಕಮಲಗಳು ಬಾಡದಿರುವುದಾದರೂ ಹೇಗೆ? ಆ ಶತ್ರುಗಳಿಗೆ ದುರ್ದಿನವಾಗದಿರುವುದಕ್ಕೆ ಎಡೆಯಿದೆಯೇ? ಇಂತಹ ಗುಣ ಸಮೂಹವು ಈ ರಾಜನಿಗೆ ಉಚಿತವೇ. ಇವನು ಯುದ್ಧ ಕಾಲದಲ್ಲಿ ಅಮೋಘವಾದ ಬಾಣ ವರ್ಷವನ್ನು ಸುರಿಸತಕ್ಕವನು ; ಅಹಂಕಾರಿಗಳಾದ ಶತ್ರುಗಳ ಭುಜಶಿರಸ್ಸನ್ನು ಮಾತ್ರ ಬಗ್ಗಿಸಿದುದಲ್ಲದೆ ಅವರ ಮರ್ಮವನ್ನು ದಳ ದಳವಾಗಿ ಸೀಳಿ ಅವರ ಮೂಲ ಘಾತವನ್ನೇ ಮಾಡುತ್ತಿದ್ದಾನೆ. ಈ ರಾಜನ ಭುಜ ಕೀರ್ತಿಯು ಬಿಳುಪಾಗಿದ್ದು ಬಹಳ ದೂರದ ವರೆಗೆ ವಿಸ್ತರಿಸಿ ಕುಮುದ ಮೊದಲಾದ ಧವಳ ವಸ್ತುಗಳ ಅಹಂಕಾರವನ್ನು ಖಂಡಿಸುತ್ತ ತಿರುಗುತ್ತಿರುವುದು. ಕುಮುದಗಳು ರಾತ್ರಿ ಭಯದಿಂದ ಮುಚ್ಚಿಕೊಳ್ಳುವುದಿಲ್ಲ. ಮಲ್ಲಿಗೆಯ ಮಾಲೆಯು ಭಯದಿಂದ ನಿನ್ನ ತುರುಬಿನಲ್ಲಿ ಅಡಗಿರುವುದು ; ಚಂದ್ರನೂ ಕೂಡ ಭಯಗೊಂಡು ಅಮೃತವನ್ನು ಸುರಿಸುವ ವ್ಯಾಜದಿಂದ ಬೆವರುತ್ತಿದ್ದಾನೆ.''

ಈ ಪ್ರಕಾರ ಸರಸ್ವತಿಯು ಹೊಗಳುತ್ತಿರುವ ಸಮಯದಲ್ಲಿ ದಮಯಂತಿಯು ವರಣಾರ್ಥವಾಗಿ ಕೈಯಲ್ಲಿ ಹಿಡಿದಿರುವ ಬಂಧೂಕ ಪುಷ್ಪಮಾಲೆಯನ್ನೇ ಅಕ್ಷಮಾಲೆಯಾಗಿ ಎಣಿಸಿ ನಳ ನಾಮವನ್ನು ಜಪಿಸುತ್ತಿರುವ ಆಕೆಗೆ ಜಪದ ಮಹಿಮೆಯಿಂದ ನಳನೇ ಕಣ್ಣ ಮುಂದೆ ಪ್ರತ್ಯಕ್ಷವಾದಂತೆ ತೋರಿ ಈ ಉತ್ಕಲಾಧಿಪತಿಯ ಸಂಬಂಧವಾದ ಆಶ್ಚರ್ಯ ರಸವನ್ನು ಹೃದಯದಲ್ಲಿ ಸವಿನೋಡುತ್ತಿರುವಳೆಂದೆಣಿಸುವಂತೆ ಕಣ್ಮುಚ್ಚಿದಳು. ಇದನ್ನು ಕಂಡು ಸಂಧ್ಯಾ ಕಾಲದ ದೇವತೆಯಾದ ಆ ಸರಸ್ವತಿಯು ಸೌಂದರ್ಯದಲ್ಲಿ ಜಿನನನ್ನು ಜಯಿಸುತ್ತಿರುವ ಬೇರೊಬ್ಬ ಪೃಥ್ವೀಪತಿಯನ್ನು ಪೂರ್ವದಂತೆಯೇ ವರ್ಣಿಸತೊಡಗಿದಳು.

"ಸುಂದರಿ, ಈತನು ಕೀಕಟದೇಶದ ಮಗಧ ರಾಜನು. ನಿನ್ನ ಕಟಾಕ್ಷವನ್ನು ಒಮ್ಮೆ ಈ ಕಡೆಗೆ ತಿರುಗಿಸು. ಸಮಸ್ತ ಲೋಕಗಳನ್ನೂ ತಿರುಗಿರುವ ಈ ಮಗಧೇಶ್ವರನ ಕೀರ್ತಿಗೆ ಬೆದರಿದ ತಮೋ ಮಾಲಿನ್ಯಕ್ಕೆ ಎಲ್ಲಿಯೂ ನಿಲ್ಲಲವಕಾಶವಾಗದೆ ಅದು ಚಂದ್ರನಲ್ಲಿರುವ ಕಲೆಯ ಬಳಿಗೆ ಹೋಗಿರಬೇಕೆಂದು ತೋರುತ್ತದೆ; ಇಲ್ಲವೆ, ಇವನ ಶತ್ರುಗಳ ಮುಖವನ್ನು ಹೊಕ್ಕಿದ್ದರೂ ಇರಬಹುದು; ಇಲ್ಲವಾದರೆ ಇವೆರಡು ಸ್ಥಳಗಳಲ್ಲಿ ಸದಾ ಮಾಲಿನ್ಯವಿರಲು ಕಾರಣವಿಲ್ಲ. ಸಕಲ ಯಾಚಕರೂ ಉದಾರಿಯಾದ ಈ ರಾಜನನ್ನೇ ಪ್ರಾರ್ಥಿಸತೊಡಗಿದುದರಿಂದ ಮಣಿಪ್ರರೋಹವುಳ್ಳ ರೋಹಣಾಚಲದ ಬಳಿಗೆ ಯಾರೂ ಹೋಗದ ಕಾರಣ ಅದು ರತ್ನಾಂಕುರಗಳಿಂದ ವೃದ್ಧಿಗೊಳ್ಳುತ್ತ ಇನ್ನು ಸ್ವಲ್ಪ ಕಾಲದಲ್ಲಿಯೇ ಆಕಾಶವನ್ನು ಆವರಿಸಿಕೊಳ್ಳುವಂತೆ ತೋರುತ್ತಿದೆ. ಮುನಿಯಾದ ಅಗಸ್ತ್ಯನು ವ್ಯರ್ಥವಾಗಿ ವಿಂಧ್ಯವನ್ನು ಸ್ತಂಭಿಸಿದನು. ಭೂಲೋಕದ ದೇವೇಂದ್ರನಂತಿದ್ದ ಈ ರಾಜನು ಪರಾಕ್ರಮಾತಿಶಯದಿಂದ ಸಂಪಾದಿಸಲ್ಪಟ್ಟ ಆನೆಯ ದಂತಕ್ಕೆ ಸಮಾನವಾದ ಕೀರ್ತಿ ಪುಂಜವನ್ನು ಯಾರು ವಾಕ್ಯಗಳಿಂದ ಹೊಗಳಬಲ್ಲರು! ರಂಜಿಸುತ್ತಿರುವ ಶತ್ರು ರಾಜರ ಕೀರ್ತಿಯೆಂಬ ಪಾದರಸದಿಂದ ಸ್ವರ್ಣಾಚಲವು ರಜತಾಚಲವೆಂಬಂತೆ ಮಾಡಲ್ಪಟ್ಟಿದ್ದರೂ ಈ ರಾಯನ ಪ್ರತಾಪಾಗ್ನಿಯಿಂದ ಅದು ತಿರುಗಿ ಸ್ವರ್ಣಾಚಲವಾಗಿಯೇ ಆಯಿತು. ಭೂ ಶಕ್ರನಾದ ಈ ರಾಜನು ಒಬ್ಬಾನೊಬ್ಬ ರಾಜನ ಮೇಲೆ ದಂಡೆತ್ತಿ ಹೊರಡಲು, ಶಿವನ ಅಷ್ಟಮೂರ್ತಿಗಳಲ್ಲಿ ಒಂದಾದ ಈ ಭೂಮಿಯು ಔತ್ಪಾತಿಕ ರಕ್ತವೃಷ್ಟಿಯಿಂದ ಸಾಯಂಕಾಲದಂತೆ ಕಾಣಿಸಲು, ಅದನ್ನು ಸಂಜೆಯೆಂದು ನಂಬಿ ನಟಮೂರ್ತಿಯಾದ ಪರಮೇಶ್ವರನು ನಾಟ್ಯಕ್ಕೆ ತೊಡಗದಿರನು; ಈ ಇಂದ್ರನು ಸೃಜಿಸಿದ ದಿಗ್ದಾಹದಿಂದುಂಟಾದ ಭಸ್ಮದಂತೆ ತೋರುತ್ತಿರುವ ಭಸ್ಮದಿಂದ ಉದ್ಧೂಳಿತನಾಗಿ ತನ್ನ ತಾಂಡವಕ್ಕೆ ಪ್ರಾರಂಭಿಸದಿರನು. ಸೃಷ್ಟಿಕರ್ತನಾದ ಬ್ರಹ್ಮನು ಈ ರಾಜನ ದೇಹವನ್ನು ಮುಖದ ವರೆಗೆ ಸೃಜಿಸುವಷ್ಟಕ್ಕೆ ಅವನ ಬಳಿಯಲ್ಲಿರುವ ತೇಜೋರಾಶಿಯು ಒರಿದಾಗಲು, ತೇಜೋರಾಶಿಯ ನಾಶದಿಂದುಂಟಾದ ತಮಸ್ಸಿನಿಂದ ಈತನ ಕೇಶಪಾಶಾತ್ಮಕವಾದ ಉಳಿದ ದೇಹ ಭಾಗವು ನಿರ್ಮಿಸಲ್ಪಟ್ಟಂತೆ ತೋರುತ್ತದೆ. ಈ ರಾಜನ ಜೈತ್ರ ಯಾತ್ರೆಯಲ್ಲಿ ಉಚ್ಛೃಂಖಲವಾಗಿ ಹೊರಟ ಕುದುರೆಗಳ ಖುರಾಗ್ರದಿಂದೆದ್ದ ಧೂಳು ಶತ್ರುಗಳ ಪ್ರತಾಪಾಗ್ನಿಯನ್ನು ಶಾಂತ ಮಾಡಿ ಅಂಧಕಾರವನ್ನುಂಟುಮಾಡುತ್ತಿರುವುದು. ಚಂದ್ರ ಶತ್ರುವಾದ ರಾಹುವು ಇವನ ಕೀರ್ತಿ ಪಟಲ

ಗಳೆಂಬ ಚಂದ್ರಗಳಿಂದ ಯುದ್ಧಕ್ಕಾಗಿ ಕರೆಯಲ್ಪಟ್ಟು ಬೆದರಿ ಭೂಛಾಯೆಯ ರೂಪದಿಂದ ಮರೆಯಾಗಿ ಗಣಿತ ಶಾಸ್ತ್ರಗಳಿಗೆ ಮಾತ್ರವೇ ಗೋಚರವಾಗುತ್ತಿರುವನು. ಮಹಾ ವಿಷ್ಣುವಿನ ಜಠರ ಕುಹರವನ್ನು ತುಂಬಿರುವ ಮೂರು ಲೋಕಗಳನ್ನೂ ಈ ಮಹಾರಾಜನ ಗಜದಂತದಂತೆ ಶುಭ್ರವಾದ ಯಶವು ತುಂಬಿ ಹಿಡಿಯದ ಕಾರಣ ಅದೇ ಕೀರ್ತಿಯೇ ವಿಷ್ಣುವಿನ ನಾಭಿಯಲ್ಲಿ ಕಮಲ ರೂಪದಿಂದ ಹೊರಹೊರಟಿರುವುದು. ಈ ರಾಜನ ಖಡ್ಗಕೋಶವೆಂಬ ಬಿಲದಿಂದ ಹೊರಗೆ ಸೆಳೆಯಲ್ಪಟ್ಟು ಕೃಷ್ಣವರ್ಣವುಳ್ಳುದಾಗಿ ಕಂಪನವೆಂಬ ಕುಟಿಲ ಗತಿಯುಳ್ಳ ಖಡ್ಗವೆಂಬ ಸರ್ಪವನ್ನು ಕಂಡಾಗ ಹೆದರದ ರಾಜರೇ ಇಲ್ಲವು. ಯಾರು ಯುದ್ಧದಲ್ಲಿ ತಮ್ಮ ಅಂಗುಲಿ ಗ್ರಂಥಿಗಳೆಂಬ ಓಷಧಿ ಲತಾ ಗ್ರಂಥಿಗಳನ್ನು ಬಾಯಲ್ಲಿಟ್ಟುಕೊಳ್ಳುವರೋ ಅವರಿಗೆ ಮಾತ್ರ ಆ ಸರ್ಪದ ಭಯವಿಲ್ಲವು. ಯಾವ ಮಗಧೇಶ್ವರನ ಚಾಪವು ಯುದ್ಧಕಾಲದಲ್ಲಿ ಶತ್ರುಗಳಿಗೆ ಬೆನ್ನು ತೋರಿಸುವಂತೆ ಮಾಡುವುದೋ, ಯಾವ ಚಾಪವು ತನ್ನ ಸ್ವಾಮಿಯ ಕೈಯಲ್ಲಿ ಸದಾ ವಕ್ರತ್ವವನ್ನೇ ಅವಲಂಬಿಸಿರುವುದೋ, ಅಲ್ಲದೆ, ಸದಾ ನಿಷ್ಠುರ ಧ್ವನಿಯನ್ನು ಹರಡುತ್ತಿರುವುದೋ ಆ ಚಾಪವು ಈ ರಾಜನ ಭುಜವನ್ನೇ ಆಶ್ರಯಿಸಿ ಅಡಕ್ಕಿರುವ ಒಂದೇ ಗುಣದಿಂದ ಈ ರಾಜನು ಗುಣಗ್ರಾಹಿಗಳ ಸೀಮೆ ಎಂಬುದನ್ನು ವ್ಯಕ್ತಮಾಡುತ್ತಿರುವುದು. ಈತನ ಕುದುರೆಯು ಯುದ್ಧಕಾಲದಲ್ಲಿ ಖುರಗಳಿಂದೆದ್ದ ಧೂಳಿಯಿಂದ ಅಂತರಿಕ್ಷ ಚಾರಿಗಳ ದೃಷ್ಟಿಯನ್ನು ಬಂಧಿಸುವುದಾಗಿಯೂ, ಗೊರಸುಗಳ ಧ್ವನಿಯಿಂದ ದಿಕ್ಕುಗಳಲ್ಲಿರುವ ಪ್ರಾಣಿಗಳ ಕಿವಿಗಳನ್ನು ಕಿವುಡುಗಟ್ಟಿಸುವುದಾಗಿಯೂ ವೇಗಾತಿಶಯದಿಂದ ವಾಯುವನ್ನು ಕೂಡ ಹಿಮ್ಮೆಟ್ಟಿಸುವುದಾಗಿಯೂ ಗುಣವನ್ನು ಹೊಗಳಲು ತೊಡಗಿದಲ್ಲಿ ಸ್ತುತಿಪಾಠಕರನ್ನು ಮೂಗರನ್ನಾಗಿ ಮಾಡುವುದಾಗಿಯೂ ಇದ್ದು, ಜಗತ್ತನ್ನು ಧರ್ಮದಲ್ಲಿ ನಡೆಯಿಸುವುದಕ್ಕೆ ಕಾರಣಭೂತನಾದ ಈ ರಾಜನಿಂದ ಏರಲ್ಪಟ್ಟ ಆ ಕುದುರೆಯು ಕೂಡ ತನ್ನ ಗತಿ ವೇಗದಿಂದ ಭೂಮಿಯನ್ನು ಸ್ಪರ್ಶಿಸುವುದಿಲ್ಲ. ಇವನ ಕುದುರೆಯ ದಳದ ಸಂಚಾರದಿಂದ ಎದ್ದ ಧೂಳಿನಿಂದುಂಟಾದ ಅಂಧಕಾರದಲ್ಲಿ ಇವನ ಬಾಣಗಳಿಂದ ಛಿನ್ನಶಿರಸ್ಕರಾಗಿ ರಣ ಭೂಮಿಯಲ್ಲಿ ಕುಣಿಯುತ್ತಿರುವ ಪ್ರತಿಭಟರ ಕಬಂಧ ನರ್ತನವನ್ನು ಕಾಣುವುದೂ ಇವನಿಗೆ ಅಸಾಧ್ಯವಾಗುವುದು. ತರಂಗಗಳೆಂಬ ವಳಿಗಳುಳ್ಳವನಾಗಿಯೂ, ಹಂಸಗಳೆಂಬ ಪಲಿತವುಳ್ಳವನಾಗಿಯೂ ಇದ್ದು ಶುಭ್ರವರ್ಣವಾಗಿ ಕಾಣುವ, ಪಕ್ಷಿ ಜಾಹುಳ್ಳಗಳೆಂಬ ವಯೋಧಿಕ್ಯವುಳ್ಳವನಾಗಿಯೂ, ಜಲಧಾರಿಯಾಗಿದ್ದು ಸ್ನಾನಾದ್ಯನುಷ್ಠಾನಗಳನ್ನು ಮಾಡತಕ್ಕವರಿಗೆ ನಿತ್ಯವೂ ಆದರವನ್ನುಂಟುಮಾಡತಕ್ಕ ವಾರ್ಧಿಯೊಂದನ್ನು ವೃದ್ಧನೆನ್ನುವುದು ಯುಕ್ತವೇ? ಎಲೆ ದಮಯಂತಿ! ಆ ತಟಾಕದ ತೀರದಲ್ಲಿ ಈ ಯೌವನಸ್ಥನಾದ ರಾಜನೊಡನೆ ವಿಹರಿಸುವವಳಾಗು. ಜಲಕ್ರೀಡೆಯ ವೇಳೆ ಆ ತಟಾಕದಲ್ಲಿ ಬೆಳೆದ ನೀಲೋತ್ಪಲಗಳು ಅವುಗಳ ನಾಳಗಳಿಂದ ಮಾತ್ರವೇ ನಿನ್ನ ಕಣ್ಣಿಗೆ ವ್ಯತ್ಯಾಸವಾಗುತ್ತಲಿರುವುವು. ನಿನ್ನ ಪ್ರತಿಬಿಂಬವು ಆ ನೀರಲ್ಲಿ ಸೇರಿ ಜಲ ದೇವತೆಯ ಕಾರ್ಯವನ್ನು ನಡೆಯಿಸಲಿ. ನಿನ್ನ ವದನ ಮಂಡಲಕ್ಕೆ ಆ ಅರಳಿದ ಕಮಲಗಳ ರಾಜ್ಯದಲ್ಲಿ ಪಟ್ಟಾಭಿಷೇಕವಾಗಲಿ. ಈ ರಾಜನ ಯಶೋವಿಲಾಸಗಳಿಂದ ತೊಳೆದು ಚೆಲ್ಲಿದ ಮೂರು ಲೋಕಗಳ ಮಲಿನತೆಯು ಕಥಾ ಮಾತ್ರ ಶೇಷವಾಗಿ

ಉಳಿಯಿತು. ಅಕೀರ್ತಿಯೆಂಬುದು ಈತನಿಗೆ ಹೆದರಿ ಕಥಾ ಪಥದಲ್ಲಿಯೂ ಇರದೆ ಎಲ್ಲಿಗೆ ಹೊರಟುಹೋಯಿತೋ ತಿಳಿಯುವುದು ಸಾಧ್ಯವಲ್ಲ.''

ಈ ರೀತಿ ವಾಗ್ದೇವಿಯು ಕೀಕಟ ರಾಜನನ್ನು ಹೊಗಳುತ್ತಿರುವಾಗ ದಮಯಂತಿಯ ಸಖಿಯೊಬ್ಬಳು ಇಂಗಿತ ಜ್ಞಾನದಿಂದ ಹೀಗೆ ನುಡಿದಳು—''ಈತನ ಅಕೀರ್ತಿಯನ್ನು ಜನರು ವಹಿಸದೆ ಹೋದರೆ ಹೋಗಲಿ, ನಾನು ಅದನ್ನು ಈ ಸಭ್ಯರ ಕರ್ಣಾವತಂಸವನ್ನಾಗಿ ಮಾಡುತ್ತೇನೆ: ಈತನ ಅಪಕೀರ್ತಿಯನ್ನು ಪ್ರಜ್ಞಾ ಚಕ್ಷು ಗಳಾದ ಕುರುಡರಿಗೆ ಲಕ್ಷ್ಯವಾದ ಕತ್ತಲೆಯಲ್ಲಿ, ಬಂಜೆಯ ಮಕ್ಕಳಾದ ಮೂಗರು ಕೂರ್ಮಸ್ತ್ರೀಯರ ಹಾಲಿನಿಂದ ಹುಟ್ಟಿದ ಕ್ಷೀರ ಸಾಗರದ ತೀರದಲ್ಲಿ ಕುಳಿತು ಅಷ್ಟಮ ಸ್ವರದಿಂದ ಹಾಡುತ್ತಿರುವರು''.

ಈ ಪ್ರಕಾರವಾಗಿ ನುಡಿದ ಸಖಿಯ ವಿನೋದದ ಮಾತನ್ನು ಕೇಳಿ ದಮ ಯಂತಿಯು ನಕ್ಕು ಈ ಮಾತಿಗೆ ಕೀಕಟ ರಾಜನು ಕೂಡ ನಗುವನೋ ಏನೋ ಎಂದು ತಿಳಿಯುವುದಕ್ಕಾಗಿ ಸಭೆಯ ಕಡೆಗೆ ನೋಡಿದಳು; ಆ ದಮಯಂತಿಯ ನೀಲ ವರ್ಣದ ಕನೀನಿಕೆಯು ನಳನನ್ನು ಬಿಟ್ಟು ಉಳಿದವರನ್ನು ನೋಡುವುದೆಂಬ ಅಪರಾಧವನ್ನು ಕಟ್ಟಿಕೊಂಡಿತು. ಮಲಿನರು ಮಲಿನಾಚಾರದಲ್ಲಿ ನಡೆಯುವುದು ಸ್ವಾಭಾವಿಕ ವಾದುದೇ. ಆದರೆ ಅವಳ ಕಡೆಗಣ್ಣು ಮಾತ್ರ ಅಲ್ಲಿಯೇ ಸಮಿಾಪವಿದ್ದ ಅಳೀಕ ನಳನಲ್ಲಿ ಆಸಕ್ತಿಯನ್ನು ತೋರಿ ಶ್ವೇತ ರಕ್ತವಾಗಿ ಆಯಿತು. ಆ ನಳನೂ ಕೂಡ ಆಕೆಯನ್ನು ಅನುರಾಗದಿಂದ ಕಂಡನು. ಆ ಕಾಲದಲ್ಲಿ ಅಂಗ ರಹಿತನಾದ ಮನ್ಮಥನು ನಳನ ದೃಷ್ಟಿ ಯೆಂಬ ಕರ್ಣಾಂತಾಕೃಷ್ಟವಾದ ಬಾಣದಿಂದ ನಳನ ಕೈಯಲ್ಲಿರುವ ಚಕ್ರ ರೇಖೆಯೆಂಬ ಕುಟಿಲ ಕೋದಂಡವುಳ್ಳವನಾಗಿ ಆ ದಮಯಂತಿಯನ್ನು ಹೊಡೆದನು. ದಮಯಂತಿಯು ಅಳೀಕ ನಳ ದರ್ಶನ ಮಾತ್ರದಿಂದಲೇ ರೋಮಾಂಚಗೊಂಡು ಹರ್ಷಿತಳಾದಳು. ಈ ಪ್ರಕಾರ ಕಂಟಕಿತಳಾಗಿಯೂ ಉಜ್ಜ್ವಲವಾದ ಪತ್ರ ರಚನೆಯುಳ್ಳವಳಾಗಿಯೂ ಇದ್ದ ಆ ದಮಯಂತಿಯು ರುದ್ರ ಶತ್ರುವಾದ ಮನ್ಮಥನೇ ಬಂದಿರುವನೆಂಬ ಭ್ರಾಂತಿಯಿಂದ ಬಂದ ಸ್ವರ್ಣ ಕೇತಕಿಯಂತೆ ಕಾಣಿಸಿಕೊಂಡಳು.

ಆ ದಮಂತಿಯು ಪ್ರವೀಣಳಾಗಿದ್ದರೂ ಆ ಕಪಟ ನಳನನ್ನು ಕಂಡು ಇವನು ಕಪಟಿಯೆಂದು ತಿಳಿಯಲಾರದೆ ನಿಜವಾದ ನಳನೆಂದೇ ತಿಳಿದು ಆನಂದಾಂಬುಧಿಯ ತಳ ವನ್ನು ಸೇರಿದಳು. ಆ ಅಳೀಕ ನಳ ರೂಪಿಯಾದ ಇಂದ್ರನು ಕೂಡ ತನ್ನ ಹೃದಯದ ಸರ್ವ ಧನ ಭೂತವಾದ ಹೃದಯದಲ್ಲಿ ಸದಾ ವಾಸವಾಗಿರುವ ದಮಯಂತಿಯನ್ನು ಕಣ್ಣುಗಳಿಗೆ ಸಾಕ್ಷಾತ್ಕರಿಸಿಕೊಂಡು ದೇವತೆಗಳಿಗೆ ಕೂಡ ದೊರೆಯಲಸಾಧ್ಯವಾದ ಅಪಾಂಗ ವೀಕ್ಷಣವೆಂಬ ಪ್ರಿಯ ಬಂಧುವನ್ನು ಪಡೆದನು. ಅನಂತರ ಆ ಅಳೀಕ ನಳನನ್ನು ರತಿ ಪತಿಯಾದ ಕಾಮನು ಅಮೃತ ಧಾರಾ ಲಿಪ್ತವಾದ ಆಕೆಯ ದೃಷ್ಟಿ ರೂಪ ವಾದ ಬಾಣದಿಂದ ಹೊಡೆಯಲಾಗಿ ಆತನು ಆನಂದಾತಿಶಯದಿಂದ ಮೈಮರೆತನು; ಇದರಿಂದ ಮುಂದಿನ ದೃಷ್ಟಿಪಾತಗಳೆಲ್ಲ ವ್ಯರ್ಥವಾಗಿಹೋದುವು.

[ಮುಂದುವರಿಯುವುದು]

---

# ಪತ್ರ ವ್ಯವಹಾರ

[ಸೂಚನೆ.—ಲೇಖಕರ ಅಭಿಪ್ರಾಯಗಳಿಗೆ ಪರಿಷತ್ಪತ್ರಿಕೆಯ ಸಂಪಾದಕರು ಉತ್ತರವಾದಿಗಳಲ್ಲ]

## ‘ಇದೆ’, ‘ಇವೆ’ ಮೊದಲಾದ ಕೆಲವು ಕ್ರಿಯಾ ರೂಪಗಳ ವಿಚಾರ

ಹೊಸಗನ್ನಡದಲ್ಲಿ ‘ಇರ್’ ಧಾತುವಿಗೆ ವರ್ತಮಾನ ಕಾಲದಲ್ಲಿ ‘ಇರುತ್ತದೆ’, ‘ಇರುತ್ತವೆ’ ಎಂಬ ಪ್ರಥಮ ಪುರುಷ ನಪುಂಸಕ ರೂಪಗಳುಂಟಷ್ಟೆ! ಹೆಚ್ಚು ಕಡಿಮೆ ಅದೇ ಅರ್ಥದಲ್ಲಿ ‘ಇದೆ’, ‘ಇವೆ’ ಎಂಬ ರೂಪಗಳೂ ಆಡುವ ಮಾತಿನಲ್ಲಿ ತುಂಬ ಬಳಕೆಯಲ್ಲಿವೆ; ಬರೆವಣಿಗೆಯಲ್ಲೂ ಅವುಗಳನ್ನು ಸಾಮಾನ್ಯವಾಗಿ ಎಲ್ಲರೂ ಉಪಯೋಗಿಸುತ್ತಾರೆ. ಈ ಪರ್ಯಾಯ ರೂಪಗಳ ಮೂಲವು ಯಾವುದು?

‘ಇದೆ’, ‘ಇವೆ’ ಎಂಬುವು ನೋಡುವುದಕ್ಕೆ ಹೊಸ ರೂಪಗಳಂತೆ ತೋರುತ್ತವೆ. ಆದರೆ ಅವಕ್ಕೆ ವಯಸ್ಸು ಬಹಳವಾಗಿದೆ. ಈ ರೂಪಗಳು ‘ಹರಿಶ್ಚಂದ್ರ ಕಾವ್ಯ’ (IX. ೧೧) ‘ಬಸವ ಪುರಾಣ’ (XV. ೨೨) ‘ಜೈಮಿನಿ ಭಾರತ’ (III. ೨೦, ೨೭) ಮೊದಲಾದ ಷಟ್ಪದೀ ಕಾವ್ಯಗಳಲ್ಲಿ ಸಿಕ್ಕುವುದು ಹಾಗಿರಲಿ; ಹಳಗನ್ನಡದಲ್ಲಿಯೇ, ಪ್ರಸಿದ್ಧ ಚಂಪೂ ಕಾವ್ಯಗಳಲ್ಲಿಯೇ ದೊರೆಯುತ್ತವೆ. ಉದಾಹರಣೆಗೆ, ‘ಕಬ್ಬಿಗರ ಕಾವ’ದಲ್ಲಿ ಈ ಪದ್ಯವಿದೆ:—

**ಮಲ್ಲಿಗೆಯಲ್ಲಿ ತುಂಬಿ ಮೊರೆಯುತ್ತಿದೆ ಕಂಪಿನೊಳೊಂದಿ ತೆಂಕಣಿಂ ।**
**ಮೆಲ್ಲನೆ ಗಾಳಿ ತೀಡುತಿದೆ ಕೋಗಿಲೆಗಳ್ ಪೊಸ ಮಾಮರಂಗಳೊಳ್ ॥**
**ಬಲ್ಲುಲಿಯಿಂದೆ ಬಗ್ಗಿಸುತಮಿಂತಿದೆ ಬಂದುದು ಸುಗ್ಗಿ ತಳ್ವಿದಂ ।**
**ನಲ್ಲನೆನುತ್ತದೊರ್ವಳೆಳವೆಣ್ ಸುರಿದಳ್ ಮಿಗೆ ಕಣ್ಣ ನೀರ್ಗಳಂ ॥** (೬೩)

‘ಗಿರಿಜಾ ಕಲ್ಯಾಣ’ದಲ್ಲಿ ಈ ಪದ್ಯವು ದೊರೆಯುತ್ತದೆ:—

**ಒತ್ತುವ ಪದ್ಮ ಪತ್ರ ಕದಳೀದಳ ಸಂಕುಳಮೆಯ್ದೆ ಬೆಂದು ಸೀ ।**
**ಯುತ್ತಿವೆ ದೂರದಿಂದೆ ಸಖಿಯರ್ ತವೆ ಚೆಲ್ಲುವ ಶೀತ ವಾರಿಯು ॥**
**ಕುರ್ತ್ತಿವೆ ಬೀಸುತಿರ್ಪ ಕುಸುಮೋಜ್ಜ್ವಳ ವೀಜನ ವೃಂದಮೋವೊ ಪೊ ।**
**ತ್ತುತ್ತಿವೆ ತನ್ವಿಯೋ ವಿರಹ ವಹ್ನಿಗೆ ಪುಟ್ಟದದೊಂದು ಮೂರ್ತಿಯೋ ॥** (iv. ೧೧೫)

ಈ ಎರಡು ಪದ್ಯಗಳಲ್ಲಿ ‘ಇದೆ’, ‘ಇವೆ’ ಎಂಬ ರೂಪಗಳು ಬಂದೊಂದರಲ್ಲಿ ಒಂದೊಂದು ತೆಕ್ಕೆ ತೆಕ್ಕೆಯಾಗಿ ಬರುತ್ತವೆ. ಆದರೆ ಇಲ್ಲಿ ಅವುಗಳಿಗೆ ಸ್ವತಂತ್ರ ಪ್ರಯೋಗವಿಲ್ಲವೆಂದೂ, ‘ಮೊರೆಯುತ್ತಿದೆ’ (ಮೊರೆಯುತ್ತೆ ಇದೆ), ‘ಸೀಯುತ್ತಿವೆ’ (ಸೀಯುತ್ತೆ ಇವೆ) ಎಂಬ ರೀತಿಯಲ್ಲಿ ಇವು ಕೃದಂತದೊಡನೆಯೇ ಬಂದಿವೆಯೆಂದೂ

ಯಾರಾದರೂ ಆಕ್ಷೇಪಿಸಿದರೆ, ಮೇಲಿನ ಎರಡು ಕಾವ್ಯಗಳಿಗಿಂತಲೂ ಪ್ರಾಚೀನವಾದ ನಾಗವರ್ಮನ 'ಕರ್ನಾಟಕ ಕಾದಂಬರಿ'ಯಲ್ಲಿ ಬರುವ ಈ ಪದ್ಯಕ್ಕೆ ಏನು ಹೇಳಲಾದೀತು?:—

ಆವಿರ್ಪವು ತನುವಿದೆ ಮೇಣ್ ।
ಜೀವಿತಮಿರ್ದಪ್ಪುದವಯವಂಗಳುವಿವೆ ಮೆ ॥
ಚ್ಚಾವುದನಾತ್ಮೀಕರಿಪರೊ ।
ದೇವಿಯರಿಂದೀಗಳಿವರಿಕೊಳದುವೆ ಕೃತಾರ್ಥಂ ॥ (II. ೧೫೬)

ಇಲ್ಲಿ 'ಇದೆ', 'ಇವೆ' ಎಂಬ ಎರಡು ಕ್ರಿಯೆಗಳೂ, 'ಇರ್ದಪುದು', 'ಇರ್ದಪುವು' ಎಂಬ ಅರ್ಥದಲ್ಲಿ ಸ್ವತಂತ್ರವಾಗಿ ಬಂದಿವೆ. ಇದನ್ನು ನೋಡಿದರೆ 'ಇರುತ್ತದೆ', 'ಇರುತ್ತವೆ' ಎಂಬ ಹೊಸಗನ್ನಡದ ರೂಪಗಳಿಗಿಂತಲೂ ಇವೇ ಪ್ರಾಚೀನವೆಂದು ಧೈರ್ಯವಾಗಿ ಹೇಳಬಹುದು.

ಇವು ಯಾವ ಧಾತುವಿನ ರೂಪಗಳು? 'ಇರ್' ಧಾತುವಿನಿಂದಲೇ ಬಂದಿರಬಹುದೆ? ಹಾಗಾದರೆ ರೂಪ ನಿಷ್ಪತ್ತಿ ಹೇಗೆ? ಹಳಗನ್ನಡದ 'ಇರ್ದಪುದು' ಎನ್ನುವುದೆ 'ಇದೆ' ಎಂಬ ರೂಪಕ್ಕೆ ಕುಗ್ಗಿತೆಂದು ಹೇಳಲಾಗುತ್ತದೆಯೆ? 'ಇರುತ್ತದೆ' ಎಂಬ ಹೊಸ ರೂಪದಿಂದಲಂತೂ ಇದು ಎಂದಿಗೂ ಹೊರಟಿರಲಾರದು.

ಇಲ್ಲಿ ಗಮನಿಸತಕ್ಕ ಅಂಶವೊಂದುಂಟು: 'ಇದೆ', 'ಇವೆ' ಎಂಬ ರೂಪಗಳು ರೂಢಿಯಲ್ಲಿರುವಂತೆಯೇ, ಅವುಗಳ ಅರ್ಥವನ್ನೇ ಕೊಡುವ 'ಅದೆ', 'ಅವೆ' ಎಂಬ ರೂಪಗಳೂ, ಆಡುವ ಮಾತಿನಲ್ಲಿ, ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ, ಪ್ರಚುರವಾಗಿವೆ. ಆದರೆ ಅವುಗಳಿಗೆ 'ಇದೆ, ಇವೆ'ಗಳ ಅದೃಷ್ಟವಿಲ್ಲದೆ ಹೋದುದರಿಂದ ಗ್ರಂಥಗಳಲ್ಲಿ ಅವು ನೆಲೆಗೊಳ್ಳಲಿಲ್ಲ. ಆದರೂ ನಮ್ಮ ಕವಿಗಳು ಅವನ್ನು ಪೂರ್ಣವಾಗಿ ಕೈಬಿಟ್ಟಿಲ್ಲ. 'ಹರಿಶ್ಚಂದ್ರ ಕಾವ್ಯ'ದಲ್ಲಿ ಈ ಪದ್ಯವುಂಟು:—

ಕಡೆಗಣಿಸಿ ನಗಲೇಕೆ ತಂದೆಯೆನೆ ಧಾರೆಯಂ ।
ಕೊಡುವಾಗ ದಕ್ಷಿಣೆಯ ಧನವದರಿತೊ[1]ಳಿ[1]ದೆಯೆಂದು ।
ನುಡಿದುದುಂಟೇಯೆನಲು ಹೇಳಿನೊಪ್ಪಿಸಿದವಂಗೆಲ್ಲಿಯದು ಸುಂಕವೆನಲು ॥
ಒಡಲಳಿದಡಂ ಸಾಲವಳಿಯದೆನಲೀ ಧರಣಿ ।
ಯೊಡೆತನಂ ಹೋದಡೇಂ ಸಾಲ ಹೋಹುದೆ ಮುನ್ನಿ ।
ನೊಡವೆಯಂ ಕೊಡು ಕೊಡದಡೆಲ್ಲವಂ ಮರಳಿ ಕೈಕೊಳು ಬಿಡದೆ ಬಿಡೆನೆಂದನು ॥*

* ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಲಿರುವ 'ಹರಿಶ್ಚಂದ್ರ ಕಾವ್ಯ ಸಂಗ್ರಹ', V. ೨೯. ಈ ಪದ್ಯದ ಪಾಠವನ್ನು ಉಪಯೋಗಿಸಿಕೊಳ್ಳಲು ಅವಕಾಶಕೊಟ್ಟದ್ದಕ್ಕಾಗಿ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರಿಗೆ ನಾನು ಕೃತಜ್ಞನಾಗಿದ್ದೇನೆ. (ಶ್ರೀಮಾನ್ ಎಂ. ಆ. ರಾಮಾನುಜಯ್ಯಂಗಾರ್ಯರು ಅಚ್ಚುಹಾಕಿಸಿರುವ 'ಹರಿಶ್ಚಂದ್ರ ಕಾವ್ಯ'ದಲ್ಲಿ ಈ ಪದ್ಯದ ಸಂಖ್ಯೆ VIII. ೨೪; ಪಾಠಭೇದಗಳುಂಟು.) 1. ಳ (ಕ.ಖ.ಗ.ಘ.)

ಇದರಲ್ಲಿ ಅಚ್ಚಿನ ಪ್ರತಿಯ ಪಾಠವು 'ಇದೆ' ಎಂದಿದ್ದರೂ ಅದಕ್ಕೆ ಆಧಾರವಾದ ನಾಲ್ಕು ಓಲೆಯ ಪ್ರತಿಗಳಲ್ಲಿಯೂ (ಕ. ಖ. ಗ. ಘ.) 'ಅದೆ' ಎಂಬ ಪಾಠವೇ ಉಂಟು. ಈ ಪಾಠವು ತಪ್ಪೆಂದು ಹೇಳಲು ನಮಗೆ ಯಾವ ಕಾರಣವೂ ಇಲ್ಲ. ಇಷ್ಟೇ ಅಲ್ಲ, 'ಬಸವ ಪುರಾಣ' ದಲ್ಲಿಯೂ 'ಅದೆ' ಎಂಬ ರೂಪದ ಪ್ರಯೋಗವು ದೊರೆಯುತ್ತದೆ. (ಉದಾ.–XIV ೧೧, ೧೩). 'ಇದೆ' ಎಂಬ ರೂಪವು ಎಷ್ಟು ಗ್ರಾಹ್ಯವೋ 'ಅದೆ' ಎಂಬುದೂ ಆ ಕಾಲದಲ್ಲಿ ಅಷ್ಟೇ ಗ್ರಾಹ್ಯವಾಗಿರಬಹುದು.

ಗ್ರಾಮ್ಯ ಭಾಷೆಯಲ್ಲಿ ಇನ್ನು ಕೆಲವು ಸ್ವಾರಸ್ಯವುಳ್ಳ ರೂಪಗಳು ದೊರೆಯುತ್ತವೆ:—

ಅವನು "**ಬರ್ ತವ್ ನೆ**", "**ಬಂದವ್ ನೆ**"
ಅವಳು "**ಬರ್ ತವ್ ಳೆ**", "**ಬಂದವ್ ಳೆ**"
ಅದು "**ಬರ್ ತದೆ**" "**ಬಂದದೆ**"
"ಅವ ಆವೂರಾಗೇ **ಅವ್ ನೆ**"
"ನಿಮ್ಮ್ ಮನೆಯೋರೆಲ್ಲಾ ಎಲ್ಲ**ವ್ ರೆ**"
"ಕುರಿ ರೊಪ್ಪದೊಳಗೇ **ಅವೆ**"

ಮೊದಲಿನ ಮೂರು ಉದಾಹರಣೆಗಳಲ್ಲಿ 'ಅವನೆ', 'ಅವಳೆ', 'ಅದೆ' ಎಂಬ ಪದಗಳು ಕೃದಂತಗಳೊಡನೆ ಕ್ರಿಯಾಪದಗಳಂತೆ ಸೇರಿಕೊಂಡಿವೆ. ಕೊನೆಯ ಮೂರು ಉದಾಹರಣೆಗಳಲ್ಲಿ 'ಅವನೆ', 'ಅವರೆ', 'ಅವೆ' ಎಂಬುವು ಸ್ವತಂತ್ರ ಕ್ರಿಯಾಪದಗಳಾಗಿಯೇ ನಿಂತಿವೆ.

ಹೀಗೆ, 'ಇದೆ', 'ಇವೆ', 'ಅದೆ', 'ಅವೆ', 'ಅವನೆ', 'ಅವಳೆ', 'ಅವರೆ'—ಎಂಬೀ ರೂಪಗಳೆಲ್ಲವೂ 'ಇರಾ' ಧಾತುವಿನ ಅರ್ಥದಲ್ಲಿ ಸ್ವತಂತ್ರ ಕ್ರಿಯಾಪದಗಳಂತೆ ಪ್ರಯೋಗ ಹೊಂದುವುದನ್ನು ನೋಡಿದರೆ ಇವುಗಳ ಮೂಲವನ್ನು ಹುಡುಕುವುದು ಕಷ್ಟವಲ್ಲವೆಂದು ತೋರುತ್ತದೆ. 'ಇದು', 'ಇವು', 'ಅದು', 'ಅವು', 'ಅವನು', 'ಅವಳು', 'ಅವರು',–ಇವೆಲ್ಲವೂ ನಿರ್ದೇಶಕ ಸರ್ವನಾಮಗಳು (Demonstrative Pronouns). ಇವಕ್ಕೆ 'ಎ' ಎಂಬ ನಿರ್ಧಾರಣೆಯ ಪ್ರತ್ಯಯವು ಹತ್ತಿ ಮೇಲಿನ ರೂಪಗಳು ಸಿದ್ಧಿಸಿರಬೇಕು. ಈ ರೂಪಗಳು ಯಾವ ಧಾತುವಿನಿಂದಲೂ ಹುಟ್ಟಿರಲಾರವು.

ದ್ರಾವಿಡ ಭಾಷೆಗಳಲ್ಲಿ ಸರ್ವನಾಮಗಳೇ ಆಖ್ಯಾತ ಪ್ರತ್ಯಯಗಳಾಗುವವೆಂಬುದು ವಿದ್ವತ್ಸಮ್ಮತವಾದ ವಿಷಯ. ಉದಾಹರಣೆಗೆ, 'ಬಂದೆನ್', 'ಬಂದುದು'—ಈ ಎರಡು ಕಡೆಗಳಲ್ಲೂ ಅನುಕ್ರಮವಾಗಿ 'ಎನ್', 'ಉದು' ಎಂಬ ಉತ್ತಮ ಪುರುಷ ಪ್ರಥಮ ಪುರುಷದ ಸರ್ವನಾಮಗಳೇ ಆಖ್ಯಾತ ಪ್ರತ್ಯಯಗಳಾಗಿ ಪರಿಣಮಿಸಿವೆ. ಹೀಗಿರುವಾಗ, 'ಇದು', 'ಇವು', 'ಅದು', ಅವು', 'ಅವನು', 'ಅವರು' ಮೊದಲಾದ ಸರ್ವನಾಮಗಳು 'ಎ' ಎಂಬ ಪ್ರತ್ಯಯದ ಮುಸುಕನ್ನು ಹಾಕಿ

ಕೊಂಡು ಕ್ರಿಯಾರ್ಥವನ್ನು ಕೊಡುವುದೇನೂ ಆಶ್ಚರ್ಯಕರವಲ್ಲ*. ಇಲ್ಲಿ ನಿಜವಾದ ಆಶ್ಚರ್ಯವೇನೆಂದರೆ, ಇವು ಸ್ವತಂತ್ರ ಕ್ರಿಯಾಪದಗಳಾಗಿಬಿಟ್ಟಿರುವುದು. ಮಿಕ್ಕ ಕಡೆಗಳಲ್ಲಿ ಸರ್ವನಾಮಗಳು ಎಷ್ಟೋ ವಿಕಾರ ಹೊಂದಿ ಕೂಡ (ಉತ್ತಮ ಪುರುಷ ಬಹುವಚನದ 'ಅಂ' ಎಂಬ ಸರ್ವನಾಮವನ್ನೂ, 'ಎವು' ಎಂಬ ಆಖ್ಯಾತ ಪ್ರತ್ಯಯವನ್ನೂ ಹೋಲಿಸಿ.) ಪ್ರತ್ಯಯವಾಗಿಯೇ ಮುಗಿಯುತ್ತವೆ. ಇಲ್ಲಿ ಮಾತ್ರ ಸ್ವಸ್ವರೂಪದಲ್ಲಿಯೇ ಧಾತುವಿನ ಹಂಗಿಲ್ಲದೆ ಸ್ವತಂತ್ರ ಕ್ರಿಯಾಪದಗಳ ಪದವಿಯನ್ನು ಗಳಿಸಿಕೊಂಡಿವೆ.

ಈ ಅಭಿಪ್ರಾಯವನ್ನು ಅಂಗೀಕರಿಸಿದರೆ, ಹೊಸಗನ್ನಡದಲ್ಲಿ ವರ್ತಮಾನ ಕಾಲದ ರೂಪಗಳು ಬಂದ ಬಗೆಯನ್ನು ನಿರ್ಧರಿಸುವುದೂ ಸುಲಭವಾಗಬಹುದು. 'ಬರುತ್ತಾನೆ', 'ಬರುತ್ತಾರೆ' ಎಂಬ ಗ್ರಾಂಥಿಕ ರೂಪಗಳಿಗೂ, 'ಬರ್‌ತವ್‌ನೆ, 'ಬರ್‌ತವ್‌ರೆ' ಎಂಬ ಗ್ರಾಮ್ಯ ರೂಪಗಳಿಗೂ ಅತ್ಯಂತ ಸಾಮ್ಯವಿದೆ. 'ಬರುತ್ತೆ' ಎಂಬ ವರ್ತಮಾನ ಕೃದಂತಕ್ಕೆ 'ಅವನೆ' ಎಂಬ ಸರ್ವನಾಮ ಕ್ರಿಯೆ ಸೇರಿ, ಬರುತ್ತೆ+ಅವನೆ= ಬರುತ್ತವನೆ, ಬರುತ್ತಾನೆ—ಎಂದು ಈ ರೀತಿ ಪರಿಣಮಿಸಿರಬಹುದೆ? "ನಾನ್ ಬರ್‌ತಿವ್‌ನಿ," "ನೀವ್ ಬಂದಿವ್‌ರಿ" ಎಂಬ ಪ್ರಯೋಗಗಳೂ ಗ್ರಾಮ್ಯ ಭಾಷೆಯಲ್ಲಿ ಉಂಟು. 'ಬರ್‌ತಿವ್‌ನಿ' ಎನ್ನುವುದು ನಮ್ಮ 'ಬರ್‌ತೀನಿ' (=ಬರುತ್ತೇನೆ) ಎಂಬುದರ ಮೂಲ ರೂಪವಾಗಿರಬಹುದು. ಇದರಲ್ಲಿ '**ಇವನ್**+ಇ' ಎಂಬ ಪ್ರತ್ಯಯ(?)ವು ಸಿಕ್ಕುತ್ತದೆ. ಮಿಕ್ಕ ಕಡೆಗಳಲ್ಲಿರುವ ಅಂತ್ಯದ 'ಎ'ಗೆ ಬದಲಾಗಿ ಇಲ್ಲಿ ಸ್ವರ ಸಾಮ್ಯ ವಿಧಿಯಿಂದ 'ಇ' ಬಂದಂತೆ ತೋರುತ್ತದೆ. 'ಬಂದಿವ್‌ರಿ' ಎಂಬಲ್ಲಿಯೂ '**ಇವರ್**+ಇ' ಎಂಬ ಪ್ರತ್ಯಯವಿದೆ. ಆದ್ದರಿಂದ, 'ಬರುತ್ತೀರಿ' ಎಂಬುದರ ಮೂಲ ರೂಪವು 'ಬರ್‌ತಿವ್‌ರಿ' ಎಂದು ಇರಬಹುದು. ಈ 'ಇವನ್', 'ಇವರ್' ಎಂಬುವೂ ಸರ್ವನಾಮ ಕ್ರಿಯೆಗಳೇ ಸರಿ.

ಈ ದೃಷ್ಟಿಯಿಂದ ಉತ್ತಮ ಪುರುಷ ಮಧ್ಯಮ ಪುರುಷಗಳ ಎಲ್ಲ ವರ್ತಮಾನ ರೂಪಗಳಿಗೂ ನಿಷ್ಪತ್ತಿಯನ್ನು ತೊಡಕಿಲ್ಲದೆ ಹೇಳುವುದು ಕಷ್ಟ. ಆದರೆ ಹೊಸಗನ್ನಡದಲ್ಲಿ ವರ್ತಮಾನ ಕಾಲ ರೂಪದ ಬೆಳವಣಿಗೆಗೆ ಒಂದೇ ಸಾಧನವಿದ್ದಿರಲಾರದು. ಸಾಮ್ಯ (Analogy), ಸ್ವರ ಸಾಮ್ಯ (Vocalic Harmony) ಗಳ ಪ್ರಭಾವವು ಅದರಲ್ಲಿ ಬಹಳ ಮಟ್ಟಿಗೆ ತೋರಿರಬೇಕು. ಆದರೆ ಈ ಚರ್ಚೆ ಇಲ್ಲಿ ಅಪ್ರಕೃತ.

ಇಲ್ಲಿ ನಮ್ಮ ಚರ್ಚೆಗೆ ವಿಷಯವಾದ 'ಇದೆ', 'ಇವೆ', 'ಅದೆ', 'ಅವೆ', 'ಅವನೆ', 'ಅವಳೆ', 'ಅವರೆ' (*'ಇವನೆ' *'ಇವಳೆ' *'ಇವರೆ')—ಎಂಬೀ ಸರ್ವನಾಮ

* "ತನುವಿದೆ" ಎಂಬ ವಾಕ್ಯವೇ ಬಿಡಿಯಾಗಿ ಸಿಕ್ಕಿದ್ದಲ್ಲಿ, ಅದರಲ್ಲಿರುವ 'ಇದೆ' ಎಂಬ ಪದವನ್ನು ನಿರ್ದೇಶಕ ಸರ್ವನಾಮವೆಂದು ಭಾವಿಸಿ ಅದಕ್ಕೆ '[illegible]' ಎಂಬ ಹಚ್ಚಿ ಹೇಳಬಹುದಷ್ಟೆ! (ತನು + ಇದೆ = ಶರೀರವು ಇದೇ ಸರಿ.) ಎಂಬ ನಿರ್ಧಾರಣೆಯು ಪ್ರತ್ಯಯವು ಹೀಗೆಯೇ ಪ್ರಯೋಗಹೊಂದುತ್ತಿದ್ದು ಬಳಿಕ ನಿರ್ಧಾರಣೆಯ ಭಾವವು ಲುಪ್ತವಾಗಿ [illegible] ಈ ಸರ್ವನಾಮಗಳು ಮೊದಲು ವನ್ನು ಹೇಳುವ ಸ್ಥಿತಿಗೆ ಅವು ಇಳಿದಿರಬಹುದು. ಆ ಬಳಿಕ, ಅವುಗಳನ್ನು ಕ್ರಿಯಾಪದಗಳಂತೆ ಪ್ರಯೋಗಿಸುವ ಪದ್ಧತಿ ತಲೆದೋರಿರಬಹುದು.

ಕ್ರಿಯೆಗಳಲ್ಲಿ ಎಲ್ಲವೂ ಮೊದಮೊದಲು ಬಳಕೆಯಲ್ಲಿದ್ದಿರಬಹುದು. ಇವುಗಳಲ್ಲಿ 'ಇದೆ', 'ಇವೆ'—ಈ ಎರಡು ಮಾತ್ರ ಗ್ರಂಥಗಳಲ್ಲೂ ಪ್ರಚುರವಾಗಿ ಮಿಕ್ಕವು ಆಡುವ ಮಾತಿನಲ್ಲೇ ಅಲ್ಲಲ್ಲಿ ಉಳಿದುಹೋಗಿರಬೇಕು.

ಈ 'ಇದೆ', 'ಇವೆ' ಎಂಬುವು ಸ್ವತಂತ್ರವಾಗಿ ಬಂದಾಗ 'ಉಂಟು' ಎಂಬ ಅರ್ಥವನ್ನು ಕೊಡುತ್ತವೆ. ವರ್ತಮಾನ ಕೃದಂತ, ಭೂತ ಕೃದಂತಗಳೊಡನೆ, 'ಬರುತ್ತಿದೆ', 'ಬಂದಿವೆ'—ಈ ರೀತಿಯಾಗಿ ಬಂದಾಗ ಅನುಕ್ರಮವಾಗಿ ಇಂಗ್ಲಿಷಿನ Present Imperfect(="Is coming"), Present Perfect (=" Have come ") ಎಂಬ ಕಾಲಗಳ ಅರ್ಥವನ್ನು ಕೊಡುತ್ತವೆ.

**ತೀ. ನಂ. ಶ್ರೀಕಂಠಯ್ಯ, ಎಂ.ಎ.**

# ಗ್ರಂಥ ವಿಮರ್ಶೆ

## ೧. ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ

ಗ್ರಂಥಕರ್ತರು.—ವಿದ್ವಾನ್ ಹೆಚ್. ಎನ್. ರಾಘವೇಂದ್ರಾಚಾರ್ಯರು, ಎಂ.ಎ., ಮೈಸೂರು.

ಡೆಮ್ಮೆ ಅಷ್ಟಪತ್ರ ಪುಟ ೨೨+೭೪೦ ; ಕೌರ್ಟ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು, ೧೯೩೦ ; ಬೆಲೆ ರೂ. ೬-೦-೦.

ಮತಕ್ಕೆ ಭಾರತೀಯರು ಕಟ್ಟುಬಿದ್ದಿರುವಷ್ಟು ಇತರರಾರೂ ಬಿದ್ದಿಲ್ಲವೆನ್ನಬಹುದು. ನಮ್ಮಲ್ಲಿ, ಮತ ಮತ್ತು ತತ್ತ್ವಶಾಸ್ತ್ರ—ಇವು ಬೇರೆ ಬೇರೆ ಅಲ್ಲ. ಇತರ ಕಾರ್ಯರಂಗಗಳಲ್ಲಿ ಭಾರತೀಯರಿಗೆ ಪ್ರತಿಷ್ಠೆ ಬಂದಿರಲಿ, ಇಲ್ಲದಿರಲಿ; ತತ್ತ್ವಜ್ಞತೆಯಲ್ಲಿ ಅಗ್ರತಾಂಬೂಲ ದೊರೆತಿದೆ. ನಾಲ್ಕಾರು ಸಾವಿರ ವರ್ಷಗಳ ಸಂಪ್ರದಾಯವು ನಮ್ಮ ಜನರಲ್ಲಿ ಬೇರೂರಿ ಅವರ ರಕ್ತದ ರಕ್ತವಾಗಿ ಹರಿಯುತ್ತಿದೆ. ಈ ಸಂಪ್ರದಾಯವೇನು? ಇದರಲ್ಲಿ ಯಾವ ಯಾವ ಅಂಶಗಳು ಹೇಗೆ ಸೇರಿಕೊಂಡಿವೆ? ನಮ್ಮ ಮತತತ್ತ್ವಗಳು ಯಾವುವು? ಪರಸ್ಪರ ವ್ಯತ್ಯಾಸಗಳಾವುವು? ಅವು ಏಕೆ ಮತ್ತು ಹೇಗೆ ಆದುವು? ಅವುಗಳಲ್ಲಿ ಸಾಂಗತ್ಯ ಸಾಮಂಜಸ್ಯಗಳು ಎಷ್ಟು ಮಾತ್ರವಿವೆ? ಕೇವಲ ತತ್ತ್ವಭಾಗಕ್ಕೂ ಮತೀಯರಲ್ಲಿಯ ಭೇದಭಾವ ಪ್ರತ್ಯೇಕತೆಗಳಿಗೂ ಆಧಾರವೆಷ್ಟುಮಟ್ಟಿಗೆ ಇದೆ? ಸಮಾಜ ದೃಷ್ಟಿಯಿಂದ ಅವುಗಳ ಪ್ರಯೋಜನವೇನು?—ಎಂಬುವನ್ನು ತಿಳಿಯುವುದು ಆವಶ್ಯಕವಾಗಿದ್ದರೂ, ಆಯಾ ಮತದ ಅನುಯಾಯಿಗಳಿಗೇ ಮತಗಳ ಸಾಮಾನ್ಯವಾದ ತಿಳಿವಳಿಕೆ ಕೂಡ ಅಪೂರ್ವ; ಪಂಡಿತರಿಗೆ, ಶಾಸ್ತ್ರಪಾಠ ಮಾಡಿರುವವರಿಗೆ, ವಿನಾ ಸಾಮಾನ್ಯರಿಗೆ ತಿಳಿಯುವ ಅನುಕೂಲಗಳೂ ಕಡಿಮೆ. ನಾವು ಒಂದು ಜನಾಂಗದವರೆಂಬ ತಿಳಿವಳಿಕೆಯನ್ನೂ ನಮ್ಮ ಪ್ರೌಢಗ್ರಂಥಗಳ ಪರಿಚಯವನ್ನೂ ಮೊದಲು ಬಹುಜನರಿಗೆ ಸುಲಭವಾಗಿ ಮಾಡಿಕೊಟ್ಟವರು ಪಾಶ್ಚಾತ್ತ್ಯ ವಿದ್ವಾಂಸರು. ಅವರು ನಮ್ಮ ತತ್ತ್ವಗ್ರಂಥಗಳನ್ನು ಪರಿವರ್ತಿಸಿ ನಮಗೆ ಬಹಳ ಉಪಕಾರವನ್ನು ಮಾಡಿದ್ದಾರೆ. ಈಚೆಗೆ ನಮ್ಮ ವಿದ್ವಚ್ಛಿರೋಮಣಿಗಳೂ ಮುಂದಕ್ಕೆ ಬಂದು ಆರ್ಷೇಯವಾಗಿ ಬಂದಿರುವುದನ್ನು ಚಾರಿತ್ರಕ ದೃಷ್ಟಿಯಿಂದಲೂ, ವಿಮರ್ಶಾಪೂರ್ವಕವಾಗಿಯೂ, ತುಲನಕ್ರಮದಿಂದಲೂ ವಿಚಾರಮಾಡಿ, ಜನರಿಗೆ ವಿವರಿಸಿ ಹೇಳಲು ಆರಂಭ ಮಾಡಿರುವುದು ಒಂದು ಶುಭೋದಯವೆನ್ನಬೇಕು.

ಈ ವರೆಗೆ ಕನ್ನಡದಲ್ಲಿ ಇಂತಹ ಗ್ರಂಥಗಳು ಹೆಚ್ಚಾಗಿ ಪ್ರಕಟವಾಗಲಿಲ್ಲ. ಈಗ ವಿದ್ವಾನ್ ಎಚ್. ಎನ್. ರಾಘವೇಂದ್ರಾಚಾರ್ಯರ್, ಎಂ.ಎ. ಅವರು 'ಭಾರತೀಯ ತತ್ತ್ವಶಾಸ್ತ್ರ ಸಂಗ್ರಹ'ವೆಂಬ ಈ ಗ್ರಂಥವನ್ನು ಬರೆದು ಕನ್ನಡಿಗರಿಗೆ ದೊಡ್ಡ ಸಹಾಯವನ್ನು ಮಾಡಿದ್ದಾರೆ. ಅವರು ಮೊದಲು ಸಂಸ್ಕೃತದ ವಿದ್ವತ್ಪರೀಕ್ಷೆಯಲ್ಲಿ

ತೇರ್ಗಡೆಹೊಂದಿ, ಆಮೇಲೆ ಎಂ.ಎ. ಪರೀಕ್ಷೆ ಕೊಟ್ಟು, ನಮ್ಮ ವಿಶ್ವವಿದ್ಯಾನಿಲಯದಲ್ಲಿಯೇ ಭಾರತೀಯ ತತ್ತ್ವಶಾಸ್ತ್ರದ ಅಧ್ಯಾಪಕರಾಗಿರುತ್ತಾರೆ. ಆದುದರಿಂದ ಅವರ ವಾಣಿ ಅಧಿಕಾರ ವಾಣಿ; ೭೩೨ ಪುಟಗಳ ಕನ್ನಡ ಪುಸ್ತಕವೆಂದರೆ, ಅದನ್ನು ಬರೆಯುವುದೆಂದರೆ, ಎದೆ ಒಡೆಯುವ ಸಂಗತಿ. ಅದರಲ್ಲಿಯೂ ಇಷ್ಟು ಅಡಕವಾಗಿ, ವಿಷಯ ಗರ್ಭಿತವಾಗಿ, ಇಷ್ಟು ಸಾಕಲ್ಯದಿಂದ—ವಿಷಯವನ್ನು ನೆನೆದರೆ ಇಷ್ಟು ಸುಲಭವಾಗಿ—ಬರೆಯುವುದೆಂದರೆ ದೊಡ್ಡ ಸಾಧನೆಯೆಂದೇ ಹೇಳಬೇಕು.

ಕೇವಲ ನಮ್ಮ ಸಂಪ್ರದಾಯದಲ್ಲಿಯೇ ವೇದವೇದಾಂತಗಳನ್ನೂ ಇತರ ದರ್ಶನಗಳನ್ನೂ ಪಾಠ ಮಾಡಿದವರಲ್ಲಿ ಸ್ವಮತ ವಿಚಾರವಾಗಿ ಆಳವಾದ, ಅನ್ಯಾದೃಶವಾದ ಪಾಂಡಿತ್ಯವಿರುತ್ತದೆ. ಆದರೆ ಪರಮತ ಖಂಡನೆ ಮಾಡುವ ಅವರ ವಾದಗಳಲ್ಲಿ ಸಂಕುಚಿತ ಭಾವವೂ, ಅಸಹನೆಯೂ, ದೋಷ ದೃಷ್ಟಿಯೂ ಇರುವುದು ಸಾಮಾನ್ಯ. ಖಂಡನೆಗಾಗಿಯೇ ಪ್ರತಿಪಾದಿತವಾಗುವ ಅನ್ಯಮತೀಯ ತತ್ತ್ವಭಾಗವು ಎಷ್ಟು ಸಂಪೂರ್ಣವಾಗಿದ್ದೀತು? ಅದರ ಸತ್ತ್ವವೆಲ್ಲ ಇವರ ಬರೆವಣಿಗೆಯಲ್ಲಿ ಪ್ರಕಾಶಕ್ಕೆ ಬರುವುದೆಂದಾಗಲಿ, ಅವುಗಳ ಯೋಗ್ಯತೆಗೆ ತಕ್ಕ ಮನ್ನಣೆಯೆಲ್ಲ ದೊರೆಯುವುದೆಂದಾಗಲಿ ಹೇಳಲಾಗುವುದಿಲ್ಲ. ಆಗ ಈಗ ಮಾಧವಾಚಾರ್ಯರ ಸರ್ವದರ್ಶನ ಸಂಗ್ರಹ, ಶಿಖಾಮಣಿಯ ತತ್ತ್ವಶಾಸ್ತ್ರಸಂಗ್ರಹದಂಥ ಗ್ರಂಥಗಳು ಪ್ರಕಟಿತವಾಗಿರುವುವಾದರೂ, ಅಂಥವು ಹೆಚ್ಚಾಗಿಲ್ಲ. ಅಲ್ಲಿಯೂ ಬೇರೆ ಬೇರೆ ಸಂಪ್ರದಾಯಗಳ ಸೂಕ್ಷ್ಮಾಂಶಗಳಾಗಲಿ, ಜೀವ ಗುಣಗಳಾಗಲಿ ಹೊರಕ್ಕೆ ಬಾರವು. ನಮ್ಮಲ್ಲಿ ತತ್ತ್ವಶಾಸ್ತ್ರದ ಚರಿತ್ರೆಯನ್ನು ಬರೆಯುವುದಕ್ಕೆ ತೊಡಗಿದವರು ಕಡಿಮೆ, ಅದಕ್ಕೆ ಅನುಕೂಲಗಳೂ ಕಡಿಮೆ. ಎಲ್ಲ ಸಂಪ್ರದಾಯಗಳೂ ಜೀವನದ ಮರ್ಮವನ್ನೂ, ಒಂದೇ ಪ್ರಪಂಚದ ಮೂಲ ಸ್ವರೂಪವನ್ನೂ, ಪ್ರಯತ್ನಗಳ ನೆಲೆ ಮತ್ತು ಗುರಿಗಳನ್ನೂ ಹುಡುಕ ಹೋಗಿ, ಕಂಡು, ತೋರಿಸಲು ಪ್ರಯತ್ನಪಟ್ಟಿರುವುವೆಂಬುದನ್ನು ತಿಳಿಸುವ ದೃಷ್ಟಿಯೂ ಅಪೂರ್ವ. ಆ ದೃಷ್ಟಿಯು ಅಮೂಲ್ಯವಾದುದು. ಅದರಲ್ಲಿ ಸಹನೆಯಿರುತ್ತದೆ, ಔದಾರ್ಯವಿರುತ್ತದೆ, ನಿಷ್ಪಕ್ಷಪಾತತೆ ಇರುತ್ತದೆ, ಶಾಸ್ತ್ರ ದೃಷ್ಟಿಯೂ ಧರ್ಮ ಬುದ್ಧಿಯೂ ಇರುತ್ತದೆ. ಆಚಾರ್ಯರು ಇದನ್ನು ಬಲ್ಲರು. (ಇದು ಪಾಶ್ಚಾತ್ಯ ಮತ್ತು ಪೌರಸ್ತ್ಯ ದರ್ಶನಗಳೆರಡನ್ನೂ ತೂಕ ಮಾಡಿ ಓದಿರುವುದರ ಫಲವೆಂದು ಬೇರೆ ಹೇಳಬೇಕಾಗಿಲ್ಲ.) ತಮ್ಮ ಪುಸ್ತಕದ ಕೊನೆಯ ಭಾಗಗಳಲ್ಲಿ ಈ ನೋಟವನ್ನೇ ಮುಂದೆ ಮೆರೆಯಿಸಿ, ಈ ಸಂಪ್ರದಾಯಗಳೂ ದರ್ಶನಗಳೂ ಒಂದಕ್ಕೊಂದು ಹೇಗೆ ಪೂರಣವಾಗಿರುವುವೆಂಬುದನ್ನೂ, ಅವುಗಳ ಒಳ ಸಾಮಂಜಸ್ಯವನ್ನು ಹೇಗೆ ಮಾಡಬೇಕೆಂಬುದನ್ನೂ—ಅವರು ಹೇಳಿರುವುದನ್ನೆಲ್ಲ ಎಲ್ಲರೂ ಒಪ್ಪುವುದೂ ಬಿಡುವುದೂ ಬೇರೆ ವಿಚಾರ—ತಿಳಿಸಿ ಕನ್ನಡಿಗರ ಕಣ್ಣಿಗೆ ಒಂದು ಹೊಸ ಬೆಳಕನ್ನು ಹಾಯಿಸಿದ್ದಾರೆನ್ನಬಹುದು.

ನಮ್ಮ ದೇಶದಲ್ಲಿ ಚರಿತ್ರೆಗೆ ಸಂಬಂಧಪಟ್ಟ ಸಂಗತಿಗಳೂ—ಕೆಲವು ವೇಳೆ ಕಾಲದ ಹಿಂದು ಮುಂದುಗಳು ಕೂಡ—ತಿಳಿಯುವುದು ಕಷ್ಟ. ಯಾವುದು ಮೊದಲು,

ಯಾವುದು ಅನಂತರ; ಯಾವ ಸಂದರ್ಭದಲ್ಲಿ ಯಾವ ಸನ್ನಿವೇಶಗಳ ಪರಿಪಾಕವಾಗಿ, ಯಾವ ಸಾಮಾಜಿಕ-ಧಾರ್ಮಿಕಾವರಣದ ಮಧ್ಯದಲ್ಲಿ, ಯಾವ ಶಕ್ತಿ ಸಂತಾಪಗಳ ಸಂಘರ್ಷಣೆಯ ಸಮಯದಲ್ಲಿ ಹೊರಕ್ಕೆ ಬಂದುವು ಎಂಬುದನ್ನು ತಿಳಿಯುವುದು ಸುಲಭವಲ್ಲ. ಆದುದರಿಂದ ತತ್ತ್ವದ ಸ್ವರೂಪವು ಹೇಗೆ ಬೆಳೆಯಿತೆಂಬುದನ್ನೂ, ಜೀವನ ರೀತಿ, ಜೀವನ ಮುಖಗಳಿಗೂ ಅದಕ್ಕೂ ಇರಲೇಬೇಕಾದ ಕಾರ್ಯ ಕಾರಣ ಸಂಬಂಧವು ಹೀಗೆಯೇ ಎಂಬುದನ್ನೂ ತಿಳಿಯುವುದು ಕಷ್ಟವಾಗಿದೆ. ದೇಶದ ಚರಿತ್ರೆಯನ್ನು ಶೋಧಿಸುತ್ತಿರುವ ಮಹನೀಯರೆಲ್ಲರ ಪ್ರಯತ್ನವೂ ಫಲಿಸಿ ಅವರು ಸಮಾಜದ ಮತ್ತು ಆಯಾ ಕಾಲದ ಸಂಪೂರ್ಣ ಚಿತ್ರಗಳನ್ನು ರಚಿಸಿಕೊಟ್ಟಲ್ಲದೆ ನಮಗೆ ಈ ಅನುಕೂಲವುಂಟಾಗದು.

ಒಟ್ಟಿಗೆ, ಇಷ್ಟು ಮಾತ್ರ ಹೇಳಬಹುದೆನ್ನಿಸುತ್ತದೆ: ಋಗ್ವೇದ ಕಾಲದಲ್ಲಿದ್ದ ಜೀವನದ ತುಂಬೂ, ವೈವಿಧ್ಯವೂ, ಸಂತೋಷದಿಂದ, ಉತ್ಕರ್ಷೆಯಿಂದ ಬಾಳಬೇಕೆಂಬ ಆಸೆಯೂ ಮುಂದೆ ಯಾವ ತತ್ತ್ವ ಸಂಪ್ರದಾಯದಲ್ಲಿಯೂ ಕಂಡುಬರುವುದಿಲ್ಲ. ಉಪನಿಷತ್ತುಗಳಲ್ಲಿ ಸಗುಣ ನಿರ್ಗುಣ ಬ್ರಹ್ಮವಾದಗಳೆರಡೂ ಅಕ್ಕಪಕ್ಕದಲ್ಲಿ ಕಂಡುಬಂದರೂ, ಅಲ್ಲಿಯ ರೀತಿಯಲ್ಲಿ ಆಗಲೇ ಪ್ರಾಪಂಚಿಕ ಜೀವನದಿಂದ ಪ್ರಯತ್ನವು ವಿಮುಖವಾಗಬೇಕೆಂಬ ಭಾವನೆಗೆ ಪ್ರಶಸ್ತಿ ಹೆಚ್ಚು ದೊರೆಯುತ್ತದೆ. ಮುಂದೆ ಪ್ರಖ್ಯಾತವಾದ ಎಲ್ಲ ಮತ ತತ್ತ್ವ ಸಿದ್ಧಾಂತಗಳಿಗೂ ವೇದಗಳಲ್ಲಿ ಬೀಜಮಂತ್ರಗಳಿವೆ; ಕೇವಲ ಅಭಿಲಾಷಾ ಪೂರ್ಣವಾದ ಬಾಳಿನಿಂದ ಹಿಡಿದು ಜ್ಞಾನ ಮಾರ್ಗದ ಕೊನೆಯ ಮೆಟ್ಟಿಲಿನ ವರೆಗೂ ಅಂತಸ್ತಿದೆ. ಆದರೆ ಶುದ್ಧ ತತ್ತ್ವಾನ್ವೇಷಣೆಯು ಪ್ರಬಲವಾಗುತ್ತ ಆಗುತ್ತ ಆರಣ್ಯಕದ ಋಷಿಗಳು ಯಾವೊಂದನ್ನು ಅರಿತರೆ ಎಲ್ಲವನ್ನೂ ಅರಿತಂತಾಗುವುದೊ, ಯಾವೊಂದರ ಸ್ವರೂಪವನ್ನು ಅರಿಯದಾದರೆ ಉಳಿದುದಾವುದನ್ನು ಅರಿತರೂ ಪ್ರಯೋಜನವಿಲ್ಲವೊ, ಯಾವುದು ಸತ್ಯದ ಸತ್ಯವೊ, ಯಾವುದರ ಅರಿವಿನಿಂದ ಮೋಕ್ಷ ದೊರೆಯುವುದೊ, ಆವೊಂದರ ಅನ್ವೇಷಣೆಯನ್ನೇ ಮಾಡುತ್ತ ಹೋಗಿ, ಬುದ್ಧಿ ತರ್ಕಗಳ ಕಲ್ಪನಾ ಮಂದಿರಗಳನ್ನು ಮನೋಹರವಾಗಿ ರಚಿಸಿದರು. ಅವುಗಳ ಮೋಹಕತೆಯು ಮುಂದೆ ಏಕದಲ್ಲಿ ಅಡಗಿರುವ ಅನೇಕತ್ವಕ್ಕೆ ಬೆಲೆ ಕಡಿಮೆಯಾಗಿ ಗಮನ ಪಥದಿಂದ ಅದು ಜಾರಿಬಿದ್ದುಹೋಯಿತು. ಜನಾಂಗದ ಬಾಲ್ಯ ಕಾಲ ಮುಗಿದ ಕ್ಷಣವೇ ವಾರ್ಧಕ್ಯ ಬಂದಿತು; ನಮ್ಮವರಿಗೆ—ಈಗ ನಮ್ಮ ಕಾಲದವರಿಗೆ ಯೌವನ ಬಾರದ ಮುಂಚೆ ವಾರ್ಧಕ್ಯ ಬಂದಿರುವಂತೆ—ಜ್ಞಾನವೂ ವೈರಾಗ್ಯವೂ ಬಹಳ ಮುಂಚೆ ಬಂದು, ಎಲ್ಲ ಪ್ರವೃತ್ತಿಗಳನ್ನೂ ಪೋಷಿಸಿ ಸಮತೋಲವಾಗಿ ಬೆಳೆಯಿಸುತ್ತ ಸುಖ ಪೂರ್ಣವಾದ ಇಹ ಜೀವನವನ್ನು ಸಾಧಿಸಬೇಕೆಂಬ ಅಭಿಲಾಷೆಯಾಗಲಿ ಪ್ರಯತ್ನಗಳಾಗಲಿ ಮೆರೆಯುವ ಇಚ್ಛೆಯೂ ಶಕ್ತಿಯೂ ಇಲ್ಲದಂತಾಯಿತು. ಅವರಿಗೆ ಜೀವನವು ಸುಲಭವಾಗಿದ್ದಿತು; ವಾಂಛೆ ಆಕಾಂಕ್ಷೆಗಳು ಕೇವಲ ಸಾಮಾನ್ಯವಾದುವಾಗಿದ್ದುವು; ಹೊರಗಿನ ಆರ್ಥಿಕ ಮಂಡಲದಲ್ಲಿಯೂ ಯಾವ ತೊಡಕುಗಳೂ ಇರಲಿಲ್ಲ. ಇಹದಲ್ಲಿ ಸುತ್ತಲೂ ತೃಪ್ತಿಯಿದ್ದುದರಿಂದ ಪರ ಸಾಧನೆಯೊಂದೇ ಕಣ್ಣಿಗೆ ಕಟ್ಟಿದ್ದಿತು. ಬಯಸಿದರೆ ಆ ಸ್ಥಿತಿಯು ಈಗ ಬರುವ ಹಾಗಿಲ್ಲ; ಬಂದರೂ ಕೆಲವರಿಗೆ ಆ ಸ್ಥಿತಿಯಲ್ಲಿ ಶಾಂತಿ ತೃಪ್ತಿಗಳು ಒದಗುವ ಹಾಗೂ

ಇಲ್ಲ. ಉಪನಿಷತ್ತುಗಳ ಕಾಲವು ಮುಗಿಯುವ ಹೊತ್ತಿಗೇ ತತ್ತ್ವ ಪ್ರಪಂಚದಲ್ಲಿ ಹೊಸ ನಿರ್ಮಾಣವೂ ನಿಂತುಹೋದ ಹಾಗೆ ಕಾಣುತ್ತದೆ. ಮುಂದೆ, ಭಾರತ ಭಗವದ್ಗೀತೆಗಳ ಕಾಲ, ಬೌದ್ಧ ಜೈನ ಮತ ಕಾಲಗಳಲ್ಲಿ ಕೇವಲ ನೀತಿಗೆ ಗೌರವ ಸ್ಥಾನವು ದೊರೆತು, ನಡೆವಳಿಕೆಯ ಕಡೆಗೆ—ಸಾಧನೆಯ ಕಡೆಗೆ—ಗಮನವು ಹೆಚ್ಚು ಹೋದಂತೆಯೂ, ಒಣ ವಾದದಲ್ಲಿ ಜೀವವನ್ನು ಬಾಡಿಸಿ ವ್ಯರ್ಥ ಮಾಡುವುದಕ್ಕಿಂತ ನಿಷ್ಕಾಮ ಕರ್ಮದಲ್ಲಿಯೋ, ಭಕ್ತಿಯಲ್ಲಿಯೋ, ಜಿತೇಂದ್ರಿಯತೆಯಲ್ಲಿಯೋ, ಅಹಿಂಸೆ ಕರುಣೆಗಳಲ್ಲಿಯೋ ಜೀವನವನ್ನು ಸಾರ್ಥಕಗೊಳಿಸುವುದು ಮೇಲೆಂಬ ಹಿರಿಯ ವಚನಗಳು ಮುಂದಕ್ಕೆ ಬಂದುವು. ದರ್ಶನಗಳ ಕಾಲದಲ್ಲಿ ಹಿಂದೆ ಸೂಚಿತವಾಗಿದ್ದ ಸಂಗತಿಗಳ ಆಧಾರದ ಮೇಲೆ ಸೌಧಗಳೂ ಉಪ್ಪರಿಗೆಗಳೂ ಎದ್ದುವು; ವಾದಗಳಿಗೂ ಸಿದ್ಧಾಂತಗಳಿಗೂ ಅಂಗೋಪಾಂಗ ರಚನೆಯಾಗಿ ಅವು ಅವಯವಿಗಳಾದುವು. ಇದ್ದುದರ ಖಂಡನ, ಮಂಡನ, ಪರಿಷ್ಕಾರ, ಪ್ರತಿಪಾದನ, ವ್ಯಾಖ್ಯಾನ—ಇಷ್ಟಕ್ಕೇ ಬಹುಶಃ ತತ್ತ್ವಸಂಗ್ರಹ ಕಾರ್ಯವು ಮುಗಿಯಿತೆನ್ನಬಹುದು; ಎಂದರೆ, ಹಿಂದೆ ಸೂಕ್ಷ್ಮವಾಗಿದ್ದ ವಿಷಯಗಳ ಆಧಾರದ ಮೇಲೆ ಎಷ್ಟು ಮುಂಬರಿದು ಆಯಾ ಮತಗಳನ್ನು ಬೆಳೆಯಿಸಿ ಸ್ವತಂತ್ರವಾಗಿ ಮಾಡಬಹುದೊ ಅಷ್ಟನ್ನೂ ಮಾಡಲಾಯಿತು: ಕಡೆಗೆ ಎಷ್ಟರ ವರೆಗೆಂದರೆ, ಹಿಂದೆ ಆಧಾರವಿಲ್ಲದಿದ್ದರೆ ಹೊಸದಾಗಿ ಬಂದ ತತ್ತ್ವಸ್ಫೂರ್ತಿಯನ್ನು ಕೂಡ ಹಿಂದಕ್ಕೆ ತಳ್ಳಬೇಕಾಗುವಷ್ಟು; ಪರಸ್ಪರ ವಿರೋಧವಾದ ಹಿಂದಿನವಕ್ಕೆ ಸಾಮಂಜಸ್ಯವನ್ನು ತರಬೇಕಾಗುವಷ್ಟು; ಹೊಸ ಸ್ಫೂರ್ತಿಯಲ್ಲಿ ತೋರಿದ ಅರ್ಥವೇ ಅವುಗಳಲ್ಲೆಲ್ಲ ಅಡಗಿದ್ದಿತೆಂದು ಹೇಳಿ ಅವುಗಳನ್ನು ಹಿಸುಕಿ, ಎಳೆದು, ಕೋಡಗಗಟ್ಟು ಕಟ್ಟಿ ತೋರಿಸಬೇಕಾಗುವಷ್ಟು. ಪಾಪ! ಹಾಗೆ ಮಾಡದಿದ್ದರೆ ಹಿಂದೂ ಧರ್ಮಕ್ಕೇ ಕೆಲವು ಸಮಯಗಳಲ್ಲಿ ನಿಸ್ತಾರವಿಲ್ಲವಾಗುತ್ತಿದ್ದಿತೆಂದು ಕಾಣುತ್ತದೆ. ಅದನ್ನು ಉಳಿಸಬೇಕಾಗಿ ಬಂದು, 'ಸರ್ಕಸ್' ಮಂದಿರದಲ್ಲಿ ಮೃಗಶಿಕ್ಷಕನು ಜಾತಿವೈರಿಗಳಾದ ಪ್ರಾಣಿಗಳನ್ನು ಒಂದು ಕಡೆ ಕಲೆಹಾಕಿ—ಪ್ರತಿಯೊಂದು ನಿಮಿಷವೂ ತಾನೇ ಜೀವಕ್ಕೆ ಹೆದರುತ್ತಿದ್ದರೂ—ಒಂದು ಸಾಹಸ ಚಾಲನವನ್ನೂ ಸಾಧನೆಯನ್ನೂ ತೋರಿಸುವಂತೆ, ದರ್ಶನಗಳನ್ನು ರಚಿಸಿ ಪ್ರಕಾಶಪಡಿಸಿದರು. ಸಂಪ್ರದಾಯ ಶರಣರಾಗಬೇಕಾಗಿ ಒಂದು ನವ ಸ್ಫೂರ್ತಿಯ ಸ್ವತಂತ್ರ ಪ್ರಕಾಶಕ್ಕೆ ಅವಕಾಶವಿಲ್ಲವಾಯಿತು.

ಆತ್ಮ–ಮೋಕ್ಷಗಳ ಸ್ವರೂಪವನ್ನು ವೇದ ಕಾಲದಿಂದ ಹಿಡಿದು ವೇದಾಂತ ಕಾಲದ ವರೆಗೆ ಹೇಗೆ ಮತ ಮತಾಂತರಗಳವರು ವರ್ಣಿಸುತ್ತಹೋದರು ಎಂಬುದನ್ನಾಗಲಿ, "ಕರ್ಮ"ದ ಚರಿತ್ರೆಯನ್ನಾಗಲಿ ತಿಳಿಯಲು ಯತ್ನಿಸುವವರಿಗೆ ಈ ಪರಿವಿಡಿಯು ತಿಳಿದುಬರುತ್ತದೆ. "ಕರ್ಮ"ದ ಅರ್ಥವು ಮೊದಲು ಸಾಮಾನ್ಯವಾಗಿ ಸಣ್ಣದಾಗಿದ್ದು, ಸ್ವರ್ಗ ನರಕಗಳ ಕಲ್ಪನೆಗೆ ಅಂಟಿಕೊಂಡು, ಅದು ಪೂರ್ವಾರ್ಜಿತ, ಅದನ್ನು ಮೀರಲು ಯಾರಿಗೂ ಸಾಧ್ಯವಿಲ್ಲವೆಂಬ ವಿಧಿಯಂತಿರುವ ಅರ್ಥವು ನಮ್ಮ ಕಾಲದಲ್ಲಿ ಅದಕ್ಕೆ ಬರಬೇಕಾಗಿದ್ದರೆ, ಮೊದಲಿನ ಆಸ್ತಿಕರ ಧೀರ ಕಲ್ಪನೆಗೆ ಬೌದ್ಧ ಕಾಲದಿಂದೀಚೆಗೆ ಬಂದ ಅಧೀರ ನ್ಯಸ್ತತೆಯ ಸಂಪರ್ಕವೇ ಕಾರಣವೆಂದು ತಿಳಿದುಬರುವುದು.

ಪ್ರಪಂಚ, ಆತ್ಮ, ಪರಮಾತ್ಮ, ಇಹ, ಪರ, ಮೋಕ್ಷ, ಕರ್ಮ, ಜನ್ಮಾಂತರ, ಪ್ರಕೃತಿ–ಪುರುಷ ಸಂಬಂಧ, ಆತ್ಮ–ಪರಮಾತ್ಮ ಸಂಬಂಧ, ಕರ್ಮ–ಮೋಕ್ಷ ಸಂಬಂಧ, ಮೋಕ್ಷ ಸ್ವರೂಪ, ಜನ್ಮಾಂತರ ವಿಚಾರ — ಇವುಗಳೆಲ್ಲದರ ಪ್ರತಿಪಾದನೆಗಾಗಿ ಜ್ಞಾನ ಭಾಗ, ಪ್ರಮಾಣ ಭಾಗ, ಸಾಧನ ಭಾಗ ಮುಂತಾಗಿ ಎಲ್ಲ ದರ್ಶನಗಳಲ್ಲಿಯೂ ಜಿಜ್ಞಾಸೆಯು ಪರ್ಯಟ್ಟು ತಿಳಿವಳಿಕೆಯು ಹರಡಿತು. ಆದರೆ, ಮೊದಲಿನಿಂದ ಕಡೆಯ ವರೆಗೂ ತತ್ತ್ವ ಶುದ್ಧಿಯ ಕಾರ್ಯವು ಹೇಗೆ ನಡೆಯಿತು? ಎಷ್ಟು ನಿರ್ಭಯವಾಗಿ ನಡೆಯಿತು? ಅನ್ವೇಷಕರು ತಮ್ಮ ಮನಸ್ಸಿನ ಸ್ವಾತಂತ್ರ್ಯವನ್ನು ಯಾವ ರೀತಿಯಲ್ಲಿಯೇ ಹೊರ ತೋರಿಸಲಿ, ಕಾಪಾಡಿಕೊಳ್ಳಲು ಹೇಗೆ ಪ್ರಯತ್ನಿಸಿದರು? ಎಂಬುದು ನಮ್ಮ ದೇಶಕ್ಕೇ ವಿಶೇಷವಾದ ಸಂಗತಿ. ಪ್ರಕೃತಿಯಲ್ಲಿ ಕಂಡ ಕಂಡ ಶಕ್ತಿಗೆಲ್ಲ ಕೈಮುಗಿದು, ಇಂದ್ರ, ವರುಣ, ಪೂಷ ಮುಂತಾದ ದೇವತೆಗಳನ್ನು ಪೂಜಿಸಿ, ಆ ಪೂಜೆಯ ಸಮಯದಲ್ಲಿ ಅವಕ್ಕಿಂತ ಮೀರಿದ ದೇವರಿಲ್ಲವೆನ್ನುತ್ತಿದ್ದವರು ತಮ್ಮ ತತ್ತ್ವ ಕಲ್ಪನೆಯನ್ನು ಶುದ್ಧಿಮಾಡಿಕೊಳ್ಳುತ್ತ ಹೋದಂತೆಲ್ಲ ಈ ದೇವತೆಗಳ ದೇವತ್ವದಲ್ಲಿ ಅತೃಪ್ತಿಯುಂಟಾಗಿ ಎಲ್ಲರಿಗೂ ಶ್ರೇಷ್ಠನು ವರುಣನು, ಋತ ಮಂಡಲದ ಒಡೆಯನು ಎನ್ನುತ್ತಿದ್ದು, ಆತನಲ್ಲಿಯ ಭಕ್ತಿಯನ್ನೂ ಮೀರಿ, ಪರಾತ್ಪರ ವಸ್ತುವನ್ನು ಹಿರಣ್ಯಗರ್ಭ, ವಿಶ್ವಕರ್ಮ, ಪ್ರಜಾಪತಿ ಎಂಬ ಹೆಸರುಗಳಿಂದ ಕರೆದು, (ವಿಶ್ವವನ್ನು ಮಾಡಿರುವವನು, ಜನರೊಡೆಯ—ತಂದೆ, ಎಂಬ ಭಾವಗಳಿಂದ ಅವನನ್ನು ಪೂಜಿಸಿ,) ಕಟ್ಟಕಡೆಗೆ ಅದಕ್ಕೆ ಮೂರ್ತಿತ್ವವಿಲ್ಲ, ಸರ್ವ ಗುಣಾತೀತವಾದ ವಸ್ತುವನ್ನು ನಾವು ರೂಪ ಗುಣಗಳಿಂದ ವರ್ಣಿಸಿ ನಿರ್ದೇಶಿಸುವುದು ಹೇಗೆ ಎಂದು ಎಲ್ಲಕ್ಕೂ ಮೂಲವಾದ ಶಕ್ತಿಗೆ ಬ್ರಹ್ಮ–ತತ್, ಎಂದು ಹೇಳಿ ಜ್ಞಾನ ಕಲ್ಪನೆಯ ಪರಮಾವಧಿಯ ಮಟ್ಟಕ್ಕೆ ಏರಿಬಿಟ್ಟರು ನಮ್ಮವರು. ತರ್ಕವು ಹೇಗೆ ನಡೆದರೆ ಹಾಗೆ ನಿರ್ಭಯವಾಗಿ ತಮಗೆ ತೋರಿದಂತೆ ಈಶ್ವರ ವಾದವನ್ನೊ, ನಿರೀಶ್ವರ ವಾದವನ್ನೋ; ಚಾರ್ವಾಕರಂತೆ ನಾಸ್ತಿಕವನ್ನೊ, ಭೋಗಾಭಿಲಾಷೆಯನ್ನೋ; ಬೌದ್ಧರಲ್ಲಿ ಕೆಲವರಂತೆ ವಿಜ್ಞಾನ ವಾದವನ್ನೊ, ಶೂನ್ಯ ವಾದವನ್ನೋ; ನೈಯಾಯಿಕರಂತೆ ಅಣು ಪರಮಾಣು ವಾದವನ್ನೋ; ಸಾಂಖ್ಯರಂತೆ ಪರಿಣಾಮವಾದವನ್ನೋ; ವೇದಾಂತಿಗಳಂತೆ ದ್ವೈತಾದ್ವೈತ ವಿಶಿಷ್ಟಾದ್ವೈತಗಳನ್ನೋ ವಿಸ್ತರಿಸಿ ಹೇಳಿದರು; ಅವುಗಳನ್ನು ಸಾಧಿಸುವಂತೆ ಪ್ರಚಂಡವಾದ ತರ್ಕ ವ್ಯೂಹಗಳನ್ನು ಮೆರೆಯಿಸಿದರು. ಇದನ್ನೆಲ್ಲ ನೋಡಿದರೆ ಜ್ಞಾನ ಪ್ರಪಂಚದಲ್ಲಿ ಎಷ್ಟೆಷ್ಟು ಮತಾಂತರಗಳಾಗಬಹುದೊ ಅಷ್ಟಷ್ಟನ್ನೂ ಸ್ಥೂಲವಾಗಿ ನಮ್ಮವರು ಸ್ಥಾಪಿಸಿಬಿಟ್ಟರೆಂಬುದನ್ನು ಇಲ್ಲಿ ಹೇಳಬಹುದು.

ಅನೇಕ ಅಂಶಗಳನ್ನು ಶೇಖರಿಸಿ ಆಯಾ ಪ್ರಕರಣಗಳಲ್ಲಿ ಆಚಾರ್ಯರು ಕನ್ನಡಿಗರಿಗೆ ತತ್ತ್ವ ಪರಿಚಯ ಮಾಡಿಕೊಟ್ಟಿದ್ದಾರೆ. ಮನುಷ್ಯ ಸ್ವಭಾವಕ್ಕೆ ಸ್ವಮತ ಪಕ್ಷಪಾತವು ಪ್ರಿಯ. ಅಲ್ಲಿ ಇಲ್ಲಿ ಇವರ ದ್ವೈತ ನಿಷ್ಠೆಯ ಪ್ರಕಾಶವು ನುಳಿದು ದೃಷ್ಟಿಗೆ ಭ್ರಾಂತಿಯನ್ನು ಕಲ್ಪಿಸಿದರೂ, ಒಟ್ಟಿನಲ್ಲಿ ಆಯಾ ಮತಗಳ ತತ್ತ್ವವನ್ನು ಪ್ರತಿಪಾದಿಸುವಾಗ ಸತ್ಯ ಭಕ್ತಿಯೇ ವಿಶೇಷವಾಗಿ ಈ ಪುಸ್ತಕದಲ್ಲಿ

ಕಂಡುಬರುತ್ತದೆ. ಆಯಾ ಮತಗಳ ಸಿಂಹಗಳಂತಿರುವ ಹಿರಿಯ ಪಂಡಿತರೇ, ತಮ ತಮಗೆ ಸಂಬಂಧಿಸಿದ ಭಾಗಗಳು ಸರ್ವೋತ್ಕೃಷ್ಟವಾಗಿದೆಯೆಂದು ಮೆಚ್ಚಿ ಪ್ರಶಸ್ತಿ ಪತ್ರಿಕೆ ಕೊಟ್ಟಮೇಲೆ, 'ಇಲ್ಲಿ ಅದು ಇರಬೇಕಿದ್ದಿತು; ಇದು ಹಾಗಲ್ಲ, ಹೀಗೆ' ಎಂದು ವಾದಿಸುವುದಕ್ಕೆ ಮೈಯೊಡ್ಡುವುದು ಮಡ್ಡಿತನವಾದೀತು. ಆದರೂ, ಅಲ್ಲಲ್ಲಿ ದರ್ಶನಗಳಿಗೆ ಸಂಬಂಧಪಡುವ ಪ್ರಮಾಣ ಭಾಗದಲ್ಲಿ ಇನ್ನಷ್ಟು ಸ್ಪಷ್ಟವಾಗಿ, ಇನ್ನಷ್ಟು ಶುದ್ಧವಾಗಿ ವಿವರಣೆ ಮಾಡಿದ್ದರೆ ಚೆನ್ನಾಗಿರುತ್ತಿದ್ದಿತೆನ್ನಿಸುತ್ತದೆ. ಜೈನರಲ್ಲಿಯ ಪ್ರತ್ಯಕ್ಷ ಪರೋಕ್ಷ ಭಾಗಗಳನ್ನು ವಿವರಿಸುವಲ್ಲಿ, ಒಂದು ಕಡೆಗೂ ಇನ್ನೊಂದು ಕಡೆಗೂ ಸ್ವಲ್ಪ ವಿರೋಧ ಬರುತ್ತದೆಯೆನ್ನಬಹುದು. "ದಿವ್ಯ ಜ್ಞಾನ ದಿಂದ ಅನುಭವಿಸಿ ಸಾಕ್ಷಾತ್ತಾಗಿ ಪರಮಾರ್ಥವನ್ನೇ ಬೋಧಿಸುವ ಗ್ರಂಥಗಳೇ ಪ್ರಮಾಣತಮ"ವಾಗಿರುವಾಗ, 'ಮತಾಂತರ ಖಂಡನ ಪೂರ್ವಕ ಸ್ವಮತ ನಿರ್ದೋಷತ್ವವನ್ನು ಸ್ಥಾಪಿಸುವ' ಶ್ರೀಭಾಷ್ಯವನ್ನು ಪ್ರಮಾಣತಮವೆಂದು ಹೇಳುವರೇನೋ ನಮಗೆ ತಿಳಿಯದು. ದ್ರಾವಿಡ ವೇದವೆಂದು ಪ್ರಖ್ಯಾತವಾಗಿರುವ ಗ್ರಂಥವನ್ನು ಬರೆದವರು ನಮ್ಮಾಳ್ವಾರ್ ಎಂಬುವರೆಂದು ಕಾಣುತ್ತದೆ. ಅಥವಾ, ಬ(ವ?)ಕುಳ ಭೂಷಣವೆಂಬ ಗ್ರಂಥವು ಬೇರೆ ಇದೆಯೊ?....ಸಾಮಾನ್ಯರಿಗೆ ಇಲ್ಲಿಯ ಚರ್ಚಾ ಪದ್ಧತಿಗಳಲ್ಲಿ ಒಂದೊಂದು ವೇಳೆ ದಿಕ್ಕು ತೋರದಾಗುವುದು; ವಿವರಣಾ ರೀತಿಯಲ್ಲಿ ತತ್ತ್ವದ ಸ್ಪಷ್ಟ ಮೂರ್ತಿಯು ಕಾಣಿಸದಂತಾಗುವುದು. ಮೊದಲೇ ತರ್ಕದ ಮೆಳೆಯು ಸುತ್ತಲೂ ಬೆಳೆದು ಮುಚ್ಚಿಹೋದಂತಿರುವ ತತ್ತ್ವ ಮಂದಿರಗಳನ್ನು ಸೇರಲು ನೇರವಾದ ದಾರಿ ಬಿಡಿಸಿದ್ದರೆ ಮೇಲಾಗುತ್ತಿದ್ದಿತೆನಿಸುತ್ತದೆ; ಅವಯವಕ್ಕೆ ಸೇರಿದ ಚರ್ಚೆಗಳಲ್ಲಿ, ವಾದಗಳಲ್ಲಿ, ಅವಯವಿಯ ಸಂಪೂರ್ಣ ಪರಿಚಯವೂ ಮಂಕಾಗುವುದು. ಆದರೂ, ಪ್ರಕರಣ ಪ್ರಕರಣದ ಮೊದಲಲ್ಲಿ ಆಯಾ ತತ್ತ್ವ ಸಂಪ್ರದಾಯದ ಸ್ಥೂಲ ಸ್ವರೂಪವನ್ನು ಸೂಚಿಕೆಯಂತೆ ಸರಳವಾಗಿ ಎಲ್ಲರಿಗೂ ಅರ್ಥವಾಗುವಂತೆ ತಿಳಿಯಹೇಳಿ ಉಪಕಾರಮಾಡಿದ್ದಾರೆಂದು ತಿಳಿದು ಸಾಮಾನ್ಯರು ಸಮಾಧಾನಮಾಡಿಕೊಳ್ಳಬಹುದು.

ಸಂಸ್ಕೃತರು ಬರೆದ ತತ್ತ್ವ ಶಾಸ್ತ್ರದಂತಹ ಗ್ರಂಥದಲ್ಲಿ—ಪ್ರಮಾದದಿಂದಿರಬಹುದು—'ಶಕ್ತ್ಯ, ಮಹಾತ್ಮೆ, ಶ್ರದ್ಧೆ, ಋತ್ವಿಕ್ಕರು' ಎಂಬ ಶಬ್ದರೂಪಗಳಿಲ್ಲದಿದ್ದರೆ ಚೆನ್ನಾಗಿರುತ್ತಿದ್ದಿತೆನ್ನಬಹುದು. ಕ್ಯಾಂಟ್ ಹೇಳಿದ 'Ding an sich' ಅಥವಾ, 'Thing in Itself' ಎಂಬುದನ್ನು "ತಮ್ಮ ಮಟ್ಟಿಗೆ ತಾವಿರುವ ವಸ್ತುಗಳು" ಎಂದು ಭಾಷಾಂತರ ಮಾಡಿರುವುದರಿಂದ ಅದರ ಸ್ವರೂಪವನ್ನು ಸೂಚಿಸಲಾಯಿತೆ ಎಂಬ ಅಂಶದಲ್ಲಿ ಸಂದೇಹ ತೋರಬಹುದು.

ಇವೆಲ್ಲ ಅಲ್ಪ ವಿಷಯಗಳು; ಕೃತಿಯ ಗೌರವಕ್ಕೆ ಯಾವ ಕುಂದನ್ನೂ ತಾರವು. ಒಟ್ಟದಲ್ಲಿ ಪುಸ್ತಕವು ಬಹಳ ಚೆನ್ನಾಗಿದೆ; ವಿಷಯದ ಯೋಗ್ಯತೆಗೆ ತಕ್ಕಂತೆ ಅಚ್ಚಾಗಿ ಪ್ರಕಟಿತವಾಗಿದೆ. ನಮ್ಮ ವಿಶ್ವವಿದ್ಯಾನಿಲಯದವರು ಇಂತಹ ಗ್ರಂಥಕ್ಕೆ ಉತ್ತೇಜನವನ್ನು ಕೊಟ್ಟು ಇದನ್ನು ತಮ್ಮ ಪ್ರಕಟನೆಯಂತೆ ಪ್ರಚಾರ ಮಾಡಿ ಇದಕ್ಕೆ

ಸಲ್ಲಬೇಕಾದ ಗೌರವವನ್ನು ಸಲ್ಲಿಸಿದ್ದಾರೆ. ಎಲ್ಲ ಕನ್ನಡಿಗರೂ ಶ್ರದ್ಧೆಯಿಂದ ಇದನ್ನು ಕೊಂಡು ಓದಿ ನಮ್ಮ ತತ್ತ್ವಸಂಪ್ರದಾಯವನ್ನರಿತು, ಪೂರ್ವಿಕರು ನಮಗಾಗಿ ಗಳಿಸಿಟ್ಟಿರುವ ಆಸ್ತಿಯು ಎಷ್ಟು ಅಮೂಲ್ಯವಾದುದು ಎಂಬುದನ್ನು ತಿಳಿದು ಕೊಳ್ಳುವರೆಂದು ನಂಬಿದ್ದೇವೆ.

ವಿ. ಸೀ.

---

## ೨. ಗೋಪಾಲನು

(ಗೋಪಾಲನ ಲೀಲೆಗಳು)

ಪ್ರಕಾಶಕರು.—ಸಿ. ಕುಮಾರಸ್ವಾಮಿ ನಾಯುಡು ಅಂಡ್ ಸನ್ಸ್, ಮದರಾಸು ಮತ್ತು ಬೆಂಗಳೂರು ಸಿಟಿ.

ಕ್ರೌನ್ ಅಷ್ಟಪತ್ರ ಪುಟಗಳು ೪+೮೮; ಒಂದು ಬಣ್ಣದ ಚಿತ್ರಪಟವೂ, ೪೦ ಕೃಷ್ಣಲೀಲೆಯ ಚಿತ್ರಗಳೂ ಇವೆ; ಯೂನಿವರ್ಸಲ್ ಪವರ್ ಪ್ರೆಸ್, ಬೆಂಗಳೂರು ಸಿಟಿ, ೧೯೩೦; ಬೆಲೆ ೬ ಆಣೆ.

ಈ ಪುಸ್ತಕವು ಮನೋಹರವಾಗಿದೆ; ಹೊದಿಕೆಯ ಮೇಲ್ಪದಿಯಲ್ಲಿರುವ ಜಳಿಯ ವಲಯದಲ್ಲಿ ಕೊಳಲನೂದುತ ಕುಳಿತಿರುವ ಕೃಷ್ಣನ ಚಿತ್ರವೂ, ಮೊದಲನೆಯ ಪುಟದ ಎದುರಿನಲ್ಲಿರುವ ದ್ವಾರಕಾ ನಗರಿಯ ಬಣ್ಣ ಬಣ್ಣಗಳ ಚಿತ್ರವೂ ಸಲಕ್ಷಣವಾಗಿವೆ. ಆದರೆ ಕೆಲವು ಚಿತ್ರಗಳಲ್ಲಿಯ ಸ್ತ್ರೀ ಪುರುಷರ ವೇಷವು ದಕ್ಷಿಣ ದೇಶದವರ ವೇಷ ದಂತೆ ಚಿತ್ರಿಸಲ್ಪಟ್ಟಿರುವುದು ಉಚಿತವಾಗಿಲ್ಲ. ಕಾಗದವು ದಪ್ಪವಾಗಿಯೂ ನುಣ್ಣಗೂ ಇದೆ, ಅಚ್ಚು ಮೆಚ್ಚಾಗಿದೆ. ಹಲವು ಮಾತೇನು? ಪುಸ್ತಕವು ಮಾಟವಾಗಿದೆ, ಬೆಲೆಯೂ ಯೋಗ್ಯವಾಗಿದೆ.

ಕೃಷ್ಣನ ಕಥೆಯು ತಡೆಯಿಲ್ಲದೆಯೂ, ಬಗೆ ಹರಿಯುವಂತೆಯೂ ಹೇಳಲ್ಪಟ್ಟಿದೆ. ಆದರೆ, ಶೈಲಿಯ ಬಹು ಭಾಗವು ಪ್ರೌಢವಾದ ಸಂಸ್ಕೃತ ಶಬ್ದಗಳಿಂದಲೂ ಸಮಾಸ ಗಳಿಂದಲೂ ತುಂಬಿದೆ. ಹಲವೆಡೆಯಲ್ಲಿಯ ವಾಕ್ಯಗಳು ಕನ್ನಡದ ಪ್ರತ್ಯಯಗಳಿಂದ ಕೂಡಿರುವ ಸಂಸ್ಕೃತ ವಾಕ್ಯಗಳೇ ಆಗಿವೆ. ಉದಾಹರಣೆಗಾಗಿ—

ಪುಟ ೨೪—"ಖಡ್ಗ ಮೊದಲಾದ ಆಯುಧಗಳಿಂದಲೂ ಧಗಧಗಾಯಮಾನವಾದ ದಿವ್ಯಾಭರಣಗಳಿಂದಲೂ ಕೂಡಿ ಕಾಳಿಕಾದೇವಿಯಾಗಿ ಪ್ರತ್ಯಕ್ಷವಾಯಿತು."

"ದರ್ಶಿಸು, ಸಂಹರಿಸು, ಜನಿಸು, ಪರಿಣಮಿಸು, ಪರಿಪಾಲಿಸು, ಪ್ರಣಮಿಸು" ಮುಂತಾದ ಕ್ರಿಯಾಪದಗಳನ್ನುಳಿದು ಕನ್ನಡದಲ್ಲಿರುವ ಕ್ರಿಯಾಪದಗಳಿಂದ ಆ ಆ ಅರ್ಥ ವನ್ನು ಹೇಳಿದರೆ ಒಳಿತಾಗುವುದು. ಹೀಗಿದ್ದರೂ, ಗೋಪಾಲನ ಬಾಲ ಲೀಲೆಗಳನ್ನು ವಿವರಿಸಿರುವ ಭಾಗವು (ಪುಟ ೨೭–೭೭) ರಮ್ಯವಾಗಿದೆ.

ಅಚ್ಚಿನ ದೋಷಗಳು ಹೆಚ್ಚಾಗಿಲ್ಲವಾದರೂ ಸಮಾಸಗಳಲ್ಲಿಯ ಪದಗಳನ್ನು ವಿಂಗಡಿಸಿ ಮುದ್ರಿಸಿದ ಉದಾಹರಣೆಗಳು ಹೇರಳವಾಗಿವೆ. ಮುದ್ರಣದ ಪ್ರಮಾದ ದಿಂದ ೩೨ನೆಯ ಪುಟದಲ್ಲಿಯ ಕೊನೆಯ ಸಾಲಿಗೂ ೩೩ನೆಯ ಪುಟದ ಮೊದಲ ನೆಯ ಸಾಲಿಗೂ ಸಂಬಂಧವಿಲ್ಲದಂತಾಗಿದೆ.

೭೫ನೆಯ ಪುಟದಲ್ಲಿ 'ಎತ್ನಿಸು' ಎಂಬುದು ತಪ್ಪು; 'ಯತ್ನಿಸು' ಎಂದಿರಬೇಕು.

ರಂಗನಾಥ.

---